# ಪರಿಪೂರ್ಣಚಂದ್ರಿಕಾ

## ಭಾಗ - 8

ಸೂತ್ರ-ಭಾಷ್ಯ-ಟೀಕಾ-ಟಿಪ್ಪಣಿ-ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ







ದೇವತಾಧಿಕರಣ, ಅಪಶೂದ್ರಾಧಿಕರಣ
ಕಂಪನಾಧಿಕರಣ, ಜ್ಯೋತಿರಧಿಕರಣ
ಆಕಾಶಾಧಿಕರಣ, ಸುಷುಪ್ತ್ಯಧಿಕರಣ
ಬ್ರಾಹ್ಮಣಾಧಿಕರಣ.

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾವ್ ॥

ಭಾಗ -೮

# ಪರಿಪೂರ್ಣಚಂದ್ರಿಕಾ

## ತೃತೀಯ ಪಾದ

### ದೇವತಾಧಿಕರಣ, ಅಪಶೂದ್ರಾಧಿಕರಣ, ಕಂಪನಾಧಿಕರಣ, ಜ್ಯೋತಿರಧಿಕರಣ, ಆಕಾಶಾಧಿಕರಣ, ಸುಷುಪ್ತ್ಯಧಿಕರಣ, ಬ್ರಾಹ್ಮಣಾಧಿಕರಣ

ಬ್ರಹ್ಮಸೂತ್ರ
ಸೂತ್ರದೀಪಿಕಾ
ತಂತ್ರದೀಪಿಕಾ
ನ್ಯಾಯಮುಕ್ತಾವಳಿ

ಬ್ರಹ್ಮಸೂತ್ರಭಾಷ್ಯ
ಭಾಷ್ಯದೀಪಿಕಾ
ಸತ್ತರ್ಕದೀಪಾವಳಿ
ತತ್ತ್ವಪ್ರಕಾಶಿಕಾ
ಭಾವದೀಪ

ತಾತ್ಪರ್ಯಚಂದ್ರಿಕಾ
ಪ್ರಕಾಶ
ಗುರುರಾಜೀಯ

ಅಣುಭಾಷ್ಯ
ತತ್ತ್ವಮಂಜರೀ
ವಾಕ್ಯಾರ್ಥಮಂಜರೀ

(ಶಂಕರಭಾಷ್ಯ, ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

\- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

'ಪರಿಪೂರ್ಣಚಂದ್ರಿಕಾ' ಖರನಾಮಸಂವತ್ಸರಫಾಲ್ಗುಣಬಹುಳಚತುರ್ಥಿವ್ಯಾಸರಾಜರಆರಾಧನಾ(ದಿನಾಂಕ:12-03-2012) ಶುಭಸಂದರ್ಭದಲ್ಲಿ ಮುಳಬಾಗಿಲುಮಠದಲ್ಲಿ ಶ್ರೀಶ್ರೀಶ್ರೀ ಕೇಶವನಿಧಿಶ್ರೀಪಾದಂಗಳವರಿಂದ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀಪಾದರಾಜಮಠ, ಮುಳುಬಾಗಿಲು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2012

ಬೆಲೆ : 1000 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ನಾಗಲತಾ(ಸುಧಾ)ಗಿರಿ,
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು.
ದೂರವಾಣಿ : 9141197485

ಮುದ್ರಣ
ದರ್ಶನ್ ಪ್ರಿಂಟರ್ಸ್, ರಾಘವೇಂದ್ರಕಾಲೋನಿ, ಬೆಂಗಳೂರು.

# ಶ್ರೀಪಾದರಾಜರಾಜರಿಗೆ ನಿರಂತರ ಅನಂತ ಕೃತಜ್ಞತೆಗಳು, ನಮಸ್ಕಾರಗಳು

ಊರು - ಕೊಯಮತ್ತೂರು ..... ಭಾಷೆ - ತಮಿಳು ..... ದೇಹದ ಬಣ್ಣ ಕಪ್ಪು.... ಗುರುಗಳ ಬಳಿ ಸೇರಿದ ವಯಸ್ಸು ಎಂಟು .... ಸೇವೆಗೈದ ವರುಷಗಳು ಅರವತ್ತೆರಡು ..... ಹೆಸರು - ಗುಂಡ.

ಕೆಲಸ-ಅಡಿಗೆ ..... ಕಂಠ ಅತ್ಯಂತ ಸುಶ್ರಾವ್ಯ..... ಗೊಜ್ಜು-ಬೋಂಡ ಮಾಡುವುದರಲ್ಲಿ ಪ್ರವೀಣ..... ವಿದ್ವಾಂಸರಿಂದ ಈತ ಬಹುದೂರ..... ಅಡಿಗೆಯವನೆಂಬ ಕಾರಣದಿಂದ ವಿದ್ವಾಂಸರೂ ಇವನಿಂದ ದೂರ....... ಪುರುಸೊತ್ತು ಇದ್ದಾಗ ದೂರದಲ್ಲಿ ಕುಳಿತು ಪಾಠ ಕೇಳುವ ಹವ್ಯಾಸ...... ಈ ಗುಂಡನ ಗುರುಗಳು ಬೇರಾರೂ ಅಲ್ಲ - ಸಾಕ್ಷಾತ್ ಶ್ರೀಪಾದರಾಜರು.

ಇವರ ಮುಖಕಮಲದಿಂದ ಸುಮಾರು ನಲವತ್ತು ಬಾರಿ ಶ್ರೀಮನ್ನ್ಯಾಯಸುಧಾ ಪಾಠವನ್ನೇ ಕೇಳಿದ್ದನು.... ನಲವತ್ತು ವಿವಿಧ ಅರ್ಥಗಳು ಇವನಿಗೆ ಕರಗತವಾಗಿದ್ದವು..... ಆದರೂ ಕೂಡ ಜೀವನ ಪೂರ್ತಿ ಗುರುಗಳ ಬ್ರಾಹ್ಮಣರ ಸೇವೆಯಲ್ಲೇ ಕಾಲಕಳೆದನು.

ಒಮ್ಮೆ ಸುಧಾಪಾಠಕ್ಕೆ ಇವನೂ ಸಹ ಎಲ್ಲರ ಜೊತೆಗೆ ಕುಳಿತಿದ್ದನು. ಒಬ್ಬ ವಿದ್ವಾಂಸರು, ಈ ಗುಂಡನನ್ನು ಸಾಮಾನ್ಯ ಅಡಿಗೆಯವನೆಂದು ತಿಳಿದು, ತಮಾಷೆ ಮಾಡಿದರು -

''ನಾವು ಅಡಿಗೆ ಮಾಡಲು ಇಲ್ಲಿ ಕುಳಿತಿಲ್ಲ. ಕುಟ್ಟಲು ಹಿಟ್ಟನ್ನು ಇಟ್ಟುಕೊಂಡಿಲ್ಲ. ನಿನಗೇನು ಕೆಲಸ?'' ಎಂದು ಅವಹೇಳನ ಮಾಡಿದರು.

ಇದರಿಂದ ಬಹಳಷ್ಟು ನೊಂದುಕೊಂಡ ಗುಂಡ ಮೂರ್ನಾಲ್ಕು ದಿನ ಪಾಠಕ್ಕೆ ಬರಲೇ ಇಲ್ಲ. ದೂರದಲ್ಲೇ ಉಳಿದು ಪರಿತಪಿಸುತ್ತಿದ್ದ. ಸೂಕ್ಷ್ಮಗ್ರಾಹಿಗಳಾದ ಶ್ರೀಪಾದರಾಜರಿಗೆ ವಿಷಯ ತಿಳಿಯಿತು. ಗುಂಡನನ್ನು ಹತ್ತಿರಕ್ಕೆ ಕರೆಸಿ, ಅಂದಿನಿಂದ ತಮ್ಮ ಪಕ್ಕದಲ್ಲೇ ಪಾಠಕ್ಕೆ ಕುಳ್ಳಿರಿಸಿಕೊಂಡರು.

ಒಮ್ಮೆ ಸುಧಾಪಾಠ ಪ್ರಾರಂಭವಾಯಿತು. ವಿದ್ವಾಂಸರ ಬಳಿ ಯಾವುದೋ ಪಂಕ್ತಿಗೆ ಅರ್ಥವೇನೆಂದು ಪ್ರಶ್ನಿಸಿದರು. ಸರಿಯಾಗಿ ಉತ್ತರ ನೀಡದ ಸಮಯದಲ್ಲಿ ''ಗುಂಡ ನೀನೇ ಈ ಸುಧಾಮಾತಿಗೆ ಉತ್ತರವನ್ನು ಹೇಳು'' ಎಂದರು. ಆವಾಗ - ''ಗುರುಗಳೇ ನನಗೇನು ಗೊತ್ತು? ನಾನೊಬ್ಬ ಅಡುಗೆ ಭಟ್ಟ. ಗೊಜ್ಜು ಮಾಡಲು ಚೆನ್ನಾಗಿ ತಿಳಿದಿದ್ದೇನೆ. ನ್ಯಾಯಸುಧಾಗ್ರಂಥದ ಹೆಸರನ್ನು ಹೇಳುವ ಯೋಗ್ಯತೆಯೂ ನನಗಿಲ್ಲ'' ಎಂದು ಕಣ್ಣೀರಿಟ್ಟನು.

ಗುಂಡನ ದೈನ್ಯಸ್ಥಿತಿಯನ್ನು ಗಮನಿಸಿದ ಶ್ರೀಪಾದರಾಜರು ಕ್ಷಣಮಾತ್ರದಲ್ಲಿ ಪರಮಾನುಗ್ರಹ ಮಾಡಿಬಿಟ್ಟರು. ಮರುಕ್ಷಣದಲ್ಲಿ ಗುಂಡನು ಅತ್ಯದ್ಭುತವಾದ ವಾಗ್ವೈಖರಿಯಿಂದ ನ್ಯಾಯಸುಧಾಪಂಕ್ತಿಗೆ ವಿವರಣೆ ನೀಡಿದನು. ಶ್ರೀಪಾದರಾಜರು ಮಾಡಿದ ಪೂರ್ವಪಕ್ಷಗಳಿಗೆಲ್ಲಾ ಲೀಲಾಜಾಲವಾಗಿ ಉತ್ತರಿಸಿದನು. ಇನ್ನೂ ಆಶ್ಚರ್ಯವೇನೆಂದರೆ

ಗುಂಡ ಶ್ರೀಪಾದರಾಜರ ಬಳಿ ನಲವತ್ತು ಬಾರಿ ಪಾಠ ಕೇಳಿದ್ದನು. ಪ್ರತಿಪಾಠದಲ್ಲಿಯೂ ಹೇಳಿದ ಬೇರೆ ಬೇರೆ ವಿಚಾರಗಳನ್ನು ವಿವರಿಸುತ್ತಾ, ನಲವತ್ತು ಅರ್ಥಗಳನ್ನೇ ಹೇಳಿಬಿಟ್ಟನು.

ಅಡುಗೆಭಟ್ಟ ಗುಂಡಣ್ಣನನ್ನು ನೋಡಿ, ವಿದ್ವಾಂಸರೆಲ್ಲರೂ ನಾಚಿ ನೀರಾದರು. ''ಇವನೊಬ್ಬ ಪುರುಷಸರಸ್ವತಿ ಹೊರತು, ಅಡುಗೆಭಟ್ಟನಲ್ಲ'' ಎಂದರು. ಗುರುಗಳ ಸೇವೆಯ ಫಲವನ್ನು ಪ್ರತ್ಯಕ್ಷವಾಗಿ ಅನುಭವಿಸಿದರು.

ತಪಸ್ವಿಗುರುಗಳು ದೊರೆತಾಗ ಕೇವಲ ವಿದ್ಯೆಯನ್ನು ಸಂಪಾದನೆ ಮಾಡಿದರೆ, ಪರಮಾನುಗ್ರಹವಾಗುವುದಿಲ್ಲ. ಆತ್ಮಾರ್ಪಣೆ ಮಾಡಿಕೊಂಡು ಅವರನ್ನು ಸೇವಿಸಬೇಕು. ಅವರಿಗೆ ಬೇಕಾದ ಅನುಕೂಲಗಳನ್ನೆಲ್ಲಾ ಮಾಡಿಕೊಡುವುದಕ್ಕಿಂತ ಹೆಚ್ಚಿನ ಸಾಧನೆ ಮತ್ತೇನು !!

ಈ ಘಟನೆ ನಡೆದ ಕೆಲವೇ ದಿನಗಳಲ್ಲಿ ''ಗುಂಡ'' ಪ್ರಾಣವನ್ನೇ ಬಿಟ್ಟ. ಅವನ ಜೀವನದ ಹೆಜ್ಜೆಗಳನ್ನು ಗಮನಿಸಿದ ವಿದ್ವಾಂಸರ ಭಾವನೆ, ವ್ಯತ್ಯಾಸವಾಯಿತು -

''ಗುರುಗಳ ಅನುಗ್ರಹಕ್ಕೆ ಪಾತ್ರರಾದರೆ, ಕ್ಷಣದಲ್ಲೇ ಹತ್ತಾರು ಜನ್ಮಗಳ ಸಾಧನೆ, ನಡೆದುಬಿಡುತ್ತದೆ. ಕೇವಲ ವಿದ್ಯೆಸಂಪಾದನೆಯಲ್ಲೇ ಮುಳುಗಿದಾಗ, ಅಹಂಕಾರ-ಮಮಕಾರಾದಿಗಳಿಗೂ ಅವಕಾಶವಿದೆ. ಜ್ಞಾನಸಂಪಾದನೆ ಮಾಡುವುದೇ ಸರಳಜೀವನವನ್ನು ನಡೆಸುವುದಕ್ಕಾಗಿ ಮತ್ತು ಸಣ್ಣ-ಪುಟ್ಟ ವಿಚಾರಗಳನ್ನು ಉಪೇಕ್ಷೆ ಮಾಡದೇ ವಿನಯಾದಿಗುಣಗಳನ್ನು ಹೊಂದುವುದಕ್ಕಾಗಿ, ಪಾಂಡಿತ್ಯ ಸಂಪಾದನೆ ಮಾಡುವುದೇ ಮುಖ್ಯಉದ್ದೇಶವಾದಲ್ಲಿ, ಜೀವನವೇ ಬೇರೆ, ಪಾಂಡಿತ್ಯವೇ ಬೇರೆಯಾಗುತ್ತದೆ. ಅಂತಹ ಪಾಂಡಿತ್ಯದ ಫಲ ತನ್ನ ಜೀವನದಲ್ಲೇ ಶೂನ್ಯವಾದಾಗ ಮತ್ತೊಬ್ಬರಿಗೆ ಉಪದೇಶಿಸುವ ಹಕ್ಕು ಬರಲು ಹೇಗೆ ಸಾಧ್ಯ .....?''

* * * * *

# ಪ್ರಾರ್ಥನೆ

ಪರಿಪೂರ್ಣಚಂದ್ರಿಕಾ ಗ್ರಂಥವನ್ನು ಓದುವವರಲ್ಲಿ ಲೇಖಕನಾದ ನಾನು ವಿನಯದಿಂದಲೇ ನಾಲ್ಕು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ -

'ತಾತ್ಪರ್ಯಚಂದ್ರಿಕಾ' ಗ್ರಂಥ ಒಂದು ದೊಡ್ಡ ಸಮುದ್ರ. ಸಮುದ್ರದ ದಡದಲ್ಲಿ ಗುಬ್ಬಚ್ಚಿಯಂತೆ ಮುಳುಗಿ, ಸಮುದ್ರಸ್ನಾನವನ್ನು ಮಾಡಿದೆನೆಂದು ಹೇಳಿಕೊಳ್ಳುವಂತೆ, 'ತಾತ್ಪರ್ಯಚಂದ್ರಿಕಾ' ಗ್ರಂಥವನ್ನು ಕನ್ನಡ ಭಾಷೆಯಲ್ಲಿ ಅನುವಾದ ಮಾಡಿದ್ದೇನೆಂದು ಹೇಳುವುದೂ ಕೂಡ ಸಮುದ್ರಸ್ನಾನ ಮಾಡಿದಂತೆ. ಹೇಗೆ ಸಂಪೂರ್ಣ ಸಮುದ್ರವನ್ನು ಸ್ನಾನಮಾಡಲಾಗದಿದ್ದರೂ ನಾಲ್ಕಾರು ತಂಬಿಗೆಗಳಷ್ಟು ನೀರನ್ನು ಸ್ನಾನ ಮಾಡಿದ ಮಾತ್ರದಿಂದ ಸಮುದ್ರ ಸ್ನಾನ ಮಾಡಿದೆವೆಂದು ಹೇಳಿಕೊಳ್ಳುತ್ತೇವೋ? ಅದರಂತೆ ನನ್ನ ಸ್ಥಿತಿಯೂ ಆಗಿದೆ. 'ತಾತ್ಪರ್ಯಚಂದ್ರಿಕಾ' ಗ್ರಂಥದ ವೈಶಾಲ್ಯವನ್ನು ಸಂಪೂರ್ಣ ತಿಳಿಯಲು ನನ್ನಿಂದ ಸಾಧ್ಯವೇ ಇಲ್ಲ. ಅಲ್ಪಮಾತ್ರ ತಿಳಿದ ವಿಷಯವನ್ನು ಯಥಾಶಕ್ತಿಯಿಂದ

ಅನುವಾದ ಮಾಡಿದ್ದೇನೆ. ಆದ್ದರಿಂದ ಪ್ರತಿಯೊಬ್ಬ ಜಿಜ್ಞಾಸು ಗಮನಿಸ ಬೇಕಾದ ಅಂಶವೆಂದರೆ - 'ತಾತ್ಪರ್ಯಚಂದ್ರಿಕಾ' ಗ್ರಂಥವು ಪರಿಪೂರ್ಣವಾದ ಕೃತಿ ಹೊರತು ಆದರೆ ನಾನು ಬರೆದ ಕನ್ನಡ ಅನುವಾದವು ಖಂಡಿತವಾಗಿಯೂ ಪರಿಪೂರ್ಣ ಕೃತಿಯಲ್ಲ.

ಅಥವಾ ಚಂದ್ರಿಕಾ ಗ್ರಂಥ ದೊಡ್ಡ ಸಮುದ್ರ. ಒಂದು ಸಣ್ಣ ದೋಣಿಯಿಂದ ಸಮುದ್ರವನ್ನು ದಾಟಲು ಸಾಧ್ಯವೇ? ಅದರಂತೆ ಕೇವಲ ಅಲ್ಪಮತಿಯಿಂದ ಬರೆಯಲ್ಪಟ್ಟ ಈ ಕನ್ನಡಾನುವಾದ ಗ್ರಂಥವನ್ನು ಓದಿದ ಮಾತ್ರಕ್ಕೆ 'ತಾತ್ಪರ್ಯಚಂದ್ರಿಕಾ' ಗ್ರಂಥವನ್ನು ಅರ್ಥಮಾಡಿಕೊಳ್ಳಲು ಸಾಧ್ಯವೇ?

ಅಥವಾ 'ತಾತ್ಪರ್ಯಚಂದ್ರಿಕಾ' ಗ್ರಂಥ ಮೇರುಪರ್ವತ. ಅದನ್ನು ಹತ್ತಬೇಕೆಂಬ ಇಚ್ಛೆ ನನ್ನದು. ಆದರೆ, ಚಂದ್ರಿಕಾಗ್ರಂಥದ ಮುಂದೆ ನಾನು ಇರುವೆಗೂ ಸಮಾನನಲ್ಲ. ಇರುವೆ ಮೇರುಪರ್ವತವನ್ನು ಹತ್ತುತ್ತೇನೆಂದು ಬೀಗಿದರೆ ಹಾಸ್ಯಸ್ಪದವಲ್ಲವೇ?

ಅಥವಾ ಮರದ ತುದಿಯಲ್ಲಿರುವ ಹಣ್ಣನ್ನು ಕುಳ್ಳನು ಹಾರಿ, ಹಾರಿ ಕಿತ್ತಲು ಪ್ರಯತ್ನಿಸಿದಾಗ, ಸುತ್ತಲಿರುವ ಜನರು ನೋಡಿ ನಗುವುದಿಲ್ಲವೇ? ಅದರಂತೆ ದೊಡ್ಡ-ದೊಡ್ಡ ಯತಿಪುಂಗವರಿಂದ ಹಾಗೂ ವಿದ್ವದ್‌ವರೇಣ್ಯರಿಂದ ಪ್ರಯತ್ನದಿಂದಷ್ಟೇ ಅರ್ಥಮಾಡಿಕೊಳ್ಳಲು ಸಾಧ್ಯವಿರುವ ಕಬ್ಬಿಣದ ಕಡಲೆಯಂತಿರುವ 'ತಾತ್ಪರ್ಯಚಂದ್ರಿಕಾ' ಗ್ರಂಥವನ್ನು ಈ ಅಲ್ಪಮತಿಯು ಅರ್ಥಮಾಡಿಕೊಂಡು ಕನ್ನಡದಲ್ಲಿ ಅನುವಾದ ಮಾಡಲು ಸಾಧ್ಯವೇ?

ನನ್ನ ಆಸೆ ಬಹಳ ಇದೆ. ಆದರೆ ಸಾಮರ್ಥ್ಯ ಮಾತ್ರವಿಲ್ಲ. ಎಂಟು ಸಂಪುಟಗಳಿಂದ ಚಂದ್ರಿಕಾಗ್ರಂಥವನ್ನು ಅನುವಾದ ಮಾಡಿ ಪ್ರಕಟಣೆ ಮಾಡಬೇಕೆಂಬ ಸಂಕಲ್ಪ ಮಾತ್ರ ಮಾಡಿಬಿಟ್ಟಿದ್ದೆ. ಸಂಕಲ್ಪ ಮಾಡಿದ ದಿನದಂದು ಮುಂದಿನ ದಾರಿಯೇ ತಿಳಿದಿರಲಿಲ್ಲ. ದಾರಿಯಲ್ಲಿ ನಡೆಯಲು ಪ್ರಾರಂಭಿಸಿದ, ಕೆಲವೇ ಹೆಜ್ಜೆಗಳಲ್ಲಿ ಸಾಮರ್ಥ್ಯ ಕುಂದಿತು. ಆ ಕಷ್ಟಸಮಯದಲ್ಲಿ ಕೈಹಿಡಿದು, ಶಕ್ತಿ ತುಂಬಿದವರೇ, ಶ್ರೀಪಾದರಾಜರು.

ಇಲ್ಲಿಯ ತನಕ ಕರೆದುಕೊಂಡು ಬಂದವರೂ ಸಹ ಅವರೇ. ಗುಂಡಣ್ಣನ ಜೀವನದಲ್ಲಿ ಶ್ರೀಪಾದರಾಜರು ಕಾರುಣ್ಯಬೀರಿದಂತೆ, ನನ್ನ ಜೀವನದಲ್ಲಿಯೂ ಕಾರುಣ್ಯದ ಮಳೆಯನ್ನೇ ಹರಿಸಿದ್ದಾರೆ -

'ವರ್ಷತಿ ಸಕಲಮಭೀಷ್ಟಂ ದರ್ಶನಮಾತ್ರಾತ್ ಶ್ರೀಪಾದಾರಾಣ್ಮುನಿಃ'

''ದರ್ಶನಮಾತ್ರದಿಂದ ಶ್ರೀಪಾದರಾಜರು ಮನಸ್ಸಿನ ಎಲ್ಲ ಅಭೀಷ್ಟಗಳನ್ನು ಪೂರೈಸುತ್ತಾರೆ'' ಎಂಬುದು ಪ್ರಸಿದ್ಧವಾದ ನಾಣ್ಣುಡಿ.

ಆದರೆ ನನ್ನ ಅನುಭವ -

'ವರ್ಷತಿ ಸಕಲಮಭೀಷ್ಟಂ ಸ್ಮರಣಮಾತ್ರಾತ್ ಶ್ರೀಪಾದರಾಣ್ಮುನಿಃ'

''ಮನಸ್ಸಿನಲ್ಲಿ ಸ್ಮರಣೆ ಮಾಡಿದರೆ ಸಾಕು ಮನಸ್ಸಿನ ಎಲ್ಲಾ ಅಭೀಷ್ಟಗಳನ್ನು ಈಡೇರಿಸುತ್ತಾರೆ'' ಎಂದು.

ಅಂದುಕೊಂಡ ಯೋಜನೆಯನ್ನು ಪರಿಪೂರ್ಣವಾಗುವಂತೆ ಸಂಪೂರ್ಣ ಪ್ರೋತ್ಸಾಹಿಸಿದ ಶ್ರೀಪಾದರಾಜಮಠದ ಶ್ರೀಕೇಶವನಿಧಿತೀರ್ಥಶ್ರೀಪಾದಂಗಳವರಿಗೆ ಅನೇಕ ನಮಸ್ಕಾರಗಳು, ಮತ್ತು ಶ್ರೀಶ್ರೀವಿಜ್ಞಾನನಿಧಿತೀರ್ಥಶ್ರೀಪಾದಂಗಳವರ ಪೂರ್ವಾಶ್ರಮದ ಸುಪುತ್ರರಾದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರಿಗೆ ಎಷ್ಟು ಕೃತಜ್ಞತೆಗಳನ್ನು ಹೇಳಿದರೂ ನನಗೆ ತೃಪ್ತಿಯಿಲ್ಲ. ಇವರ ಉಪಕಾರವನ್ನು ಎಂದಿಗೂ ಮರೆಯಲಾರೆ. ಮುಂದೆಯೂ ಕೂಡ ಹೀಗೆಯೇ ಜ್ಞಾನಕಾರ್ಯಕ್ಕೆ ನನ್ನನ್ನು ಪ್ರೋತ್ಸಾಹಿಸಬೇಕೆಂದು ಶ್ರೀ ಲಕ್ಷ್ಮೀನಾರಾಯಣಾಚಾರ್ಯರಲ್ಲಿ ಕೇಳಿಕೊಳ್ಳುತ್ತೇನೆ.

*ಪರಿಪೂರ್ಣಚಂದ್ರಿಕಾ*

ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ, ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ ಇವರು ಪ್ರತಿಸಂಪುಟದಂತೆ ಈ ಸಂಪುಟಕ್ಕೂ ಉದಾರವಾಗಿ ಧನಸಹಾಯ ಮಾಡಿದ್ದಾರೆ. ಅಂದುಕೊಂಡ ಯೋಜನೆ ಪೂರ್ಣವಾಗುವಂತೆ ಸಂಪೂರ್ಣ ಬೆಂಬಲ ನೀಡಿದ ಇವರಿಗೆ ಚಿರಋಣಿಯಾಗಿದ್ದೇನೆ.

ಶ್ರೀ ಕೆ.ವಿ. ಜಯತೀರ್ಥ ಮತ್ತು ಶ್ರೀಮತಿ ಸಾವಿತ್ರಿ ದಂಪತಿಗಳು ಹನ್ನೆರಡು ಸಾವಿರ ರೂ.ಗಳನ್ನು ಈ ಕೃತಿಗಾಗಿ ದೇಣಿಗೆಯನ್ನಾಗಿ ನೀಡಿದ್ದಾರೆ.

ಹರಿಪ್ರೇರಣೆಯಿಂದ 'ಪರಿಪೂರ್ಣಚಂದ್ರಿಕಾ' ಎಂಬ ಹೆಸರನ್ನು ಈ ಕೃತಿಗೆ ಇಡಲಾಗಿದೆ. ಆದರೆ ಚಂದ್ರಿಕೆಯಲ್ಲಿ ಮೂರುಪಾದಗಳ ಅನುವಾದವಷ್ಟೇ ಇಲ್ಲಿಯತನಕ ಮುಗಿದಿದೆ. ಇನ್ನೂ ಐದುಪಾದಗಳ ಅನುವಾದ ಕಾರ್ಯವು ನಡೆಯಬೇಕು. ಮತ್ತು ಉಳಿದೆರಡು ಅಧ್ಯಾಯಗಳ 'ಶೇಷಚಂದ್ರಿಕಾ' ಗ್ರಂಥದ ಕನ್ನಡಾನುವಾದ ಕಾರ್ಯವು ನಡೆಯಬೇಕೆಂಬ ಹೆಬ್ಬಯಕೆಯಿದೆ. ಈಗ ಎಷ್ಟು ಸಂಪುಟಗಳಿಂದ ಅನುವಾದ ಕಾರ್ಯವು ನಡೆದಿದೆಯೋ, ಮುಂದೆಯೂ ಅಷ್ಟೇ ಸಂಪುಟಗಳು ಪ್ರಕಟವಾಗಬೇಕು. ಆವಾಗ ಮಾತ್ರ ಚಂದ್ರಿಕಾಗ್ರಂಥದ ಅನುವಾದವು ಪರಿಪೂರ್ಣವಾಗಲು ಸಾಧ್ಯ. ಶ್ರೀಪಾದರಾಜರೇ ಇದನ್ನು ನಡೆಸುತ್ತಾರೆ.

*ಲೇಖಕ*

ವಿ. ಬೆಮ್ಮತ್ತಿ ವೇಂಕಟೇಶಾಚಾರ್ಯ

# ಮುನ್ನುಡಿ

## ದೇವತಾಧಿಕರಣ

*ದೇವತೆಗಳ ಜ್ಞಾನಾಧಿಕಾರ ವಿಚಾರವು ಅಸಂಗತವಲ್ಲ*

ದೇವತಾಧಿಕರಣದಲ್ಲಿ ಯಾವುದೇ ಶಬ್ದಗಳನ್ನು ಸಮನ್ವಯ ಮಾಡುತ್ತಿಲ್ಲ. ಮುಂದಿನ ಅಪಶೂದ್ರಾಧಿಕರಣದಲ್ಲಿಯೂ ಯಾವುದೇ ಶಬ್ದವನ್ನು ಸಮನ್ವಯ ಮಾಡುತ್ತಿಲ್ಲ. ಆದ್ದರಿಂದ ಸಮನ್ವಯಾಧ್ಯಾಯದಲ್ಲಿ ಈ ಎರಡು ಅಧಿಕರಣಗಳ ಕೃತ್ಯವೇನು? ಎಂದು ಸಾಮಾನ್ಯವಾಗಿ ಬರುವಂತಹ ಪ್ರಶ್ನೆ. ಆದರೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬ ದೊಡ್ಡ ಶಂಕಾಪಿಶಾಚಿಯು ಪ್ರಾಪ್ತವಾದಾಗ ಅದನ್ನು ನಿರಾಕರಿಸುವುದಕ್ಕಾಗಿ ಈ ಅಧಿಕರಣವನ್ನು ಇಲ್ಲಿ ಉಲ್ಲೇಖಿಸುವುದು ಅತ್ಯಂತ ಅನಿವಾರ್ಯ.

ಹಿಂದಿನ ಅಧಿಕರಣದಲ್ಲಿ ಮನುಷ್ಯರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಸಮರ್ಥಿಸಿದರು. ಮನುಷ್ಯರಿಗೆ ಅಧಿಕಾರವಿದೆಯೆಂದು ಹೇಳಿದಾಗ, ದೇವತೆಗಳಿಗೆ ಅಧಿಕಾರವಿಲ್ಲವೇನು? ಎಂಬ ಪ್ರಶ್ನೆಯು ಹುಟ್ಟುತ್ತದೆ. ಅದಕ್ಕೆ ಉತ್ತರಿಸುವುದಕ್ಕಾಗಿ ದೇವತೆಗಳಿಗೆ, ಋಷಿಗಳಿಗೆ, ಗಂಧರ್ವ ಮೊದಲಾದವರೆಲ್ಲರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಆದರೆ ತಿರ್ಯಕ್ಪ್ರಾಣಿಗಳಿಗೆ ಅಧಿಕಾರವಿಲ್ಲದಕಾರಣ ಮನುಷ್ಯರಿಗೆ ಅಧಿಕಾರವಿದೆಯೆಂದು ಸೂತ್ರಕಾರರು ಹೇಳಿರುತ್ತಾರೆ. ಮನುಷ್ಯಪದವನ್ನು ಪ್ರಯೋಗಿಸಿದ್ದರಿಂದ ದೇವತೆಗಳಿಗೆ ಅಧಿಕಾರವಿಲ್ಲವೆಂದು ಸೂತ್ರಕಾರರ ಅಭಿಪ್ರಾಯವಲ್ಲ. ಬ್ರಹ್ಮವಿದ್ಯೆಯನ್ನು ಸಂಪಾದಿಸಲು ಯಾವ ವಿಶಿಷ್ಟಬುದ್ಧಿಯು ಆವಶ್ಯಕವೋ, ಅಂತಹ ವಿಶಿಷ್ಟಬುದ್ಧಿಯು ತಿರ್ಯಕ್ಪ್ರಾಣಿಗಳಿಲ್ಲದ ಕಾರಣ ಅವುಗಳಿಗೆ ಅಧಿಕಾರವಿಲ್ಲವೆಂಬುದು ಸೂತ್ರಕಾರರ ಹೃದಯ.

ಈ ವಿಷಯವನ್ನು ಪ್ರಾಸಂಗಿಕವಾದ್ದರಿಂದ ಇಲ್ಲಿಯೇ ಸಮರ್ಥಿಸಬೇಕು. ಆದ್ದರಿಂದ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಜ್ಞಾನಾಧಿಕಾರವು ಯಾರಿಗೆಲ್ಲಾ ಇರುತ್ತದೆಂದು ವಿಚಾರ ಮಾಡಿದ್ದರಿಂದ ಅಲ್ಲಿಯೇ ಈ ಅಧಿಕರಣದ ಪ್ರಮೇಯವನ್ನು ವಿಚಾರಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಿದಂತಾಗುತ್ತದೆ. ಕೇವಲ ಜ್ಞಾನಾಧಿಕಾರದ ವಿಚಾರವಷ್ಟೇ ಇಲ್ಲಿ ಪ್ರಸಕ್ತವಾಗಿಲ್ಲ. ಮನುಷ್ಯಪದದಿಂದ ವ್ಯಾವರ್ತ್ಯವಾದ ವಿಷಯ ಯಾವುದು ಎಂಬುದನ್ನು ಇಲ್ಲಿ ವಿಮರ್ಶಿಸಬೇಕಾಗಿದೆ. ಆದ್ದರಿಂದ ಮೂರನೇ ಅಧ್ಯಾಯದಲ್ಲಿ ಈ ಅಧಿಕರಣವನ್ನು ಹೇಳಬೇಕಾಗಿದ್ದರೂ ಪ್ರಾಸಂಗಿಕವಾದ್ದರಿಂದ ಇಲ್ಲಿಯೇ ಹೇಳಿರುತ್ತಾರೆ.

*ಪರಿಪೂರ್ಣಚಂದ್ರಿಕಾ*

ಉದಾಹರಣೆ : ಭೋಕ್ತ್ರಧಿಕರಣದಲ್ಲಿ ಮುಕ್ತರಿಗೂ, ಪರಮಾತ್ಮನಿಗೂ ಭೇದವನ್ನು ಸಮರ್ಥನೆ ಮಾಡಿರುವುದರಿಂದ ನಾಲ್ಕನೆಯ ಅಧ್ಯಾಯದಲ್ಲಿ ಸಂಗತವಾಗುತ್ತದೆ. ಆದರೂ ಜೀವಾಭೇದವಿರುವುದರಿಂದ ಎಂಬ ಯುಕ್ತಿವಿರೋಧ ಪರಿಹಾರ ಮಾಡುತ್ತದೆಂಬ ಕಾರಣದಿಂದ ಎರಡನೆಯ ಅಧ್ಯಾಯದಲ್ಲೇ ಹೇಗೆ ಭೋಕ್ತ್ರಧಿಕರಣವನ್ನು ಸೇರಿಸಿದ್ದಾರೋ, ಅದರಂತೆ ಈ ದೇವತಾಧಿಕರಣವೂ ಸಹ ಇಲ್ಲಿಯೇ ಸಂಗತವಾಗುತ್ತದೆ ಹೊರತು, ಮೂರನೆಯ ಅಧ್ಯಾಯದಲ್ಲಲ್ಲ.

ವಿಚಾರ ಮಾಡಿದರೆ ಮೂರನೆಯ ಅಧ್ಯಾಯದಲ್ಲೂ ಸಹ ಇದು ಸಂಗತವಾಗುವುದಿಲ್ಲ. ಏಕೆಂದರೆ ಸಾಧನೆಯ ಬಗ್ಗೆ ಮಾತ್ರ ಮೂರನೆಯ ಅಧ್ಯಾಯವು ವಿಚಾರವನ್ನು ಪ್ರತಿಪಾದನೆ ಮಾಡಬೇಕು. ದೇವತೆಗಳ ಜ್ಞಾನಾಧಿಕಾರವು ಸಾಧನೆಯಲ್ಲಿ ಸೇರದಿದ್ದಾಗ ಅಲ್ಲಿಯೂ ಸಹ ಹೇಗೆ ಸಂಗತವಾಗುತ್ತದೆ? ಅಂತೂ ಯಾವುದೇ ಅಧ್ಯಾಯದಲ್ಲೂ ಈ ವಿಚಾರವೂ ಅಸಂಗತವೆಂದು ತಿಳಿಯುತ್ತಿರುವಾಗ ಪ್ರಸಕ್ತವಾದಾಗ ಪ್ರಾರಂಭದಲ್ಲೇ ಇದನ್ನು ಉಲ್ಲೇಖ ಮಾಡುವುದು ಹೆಚ್ಚು ಸ್ವರಸ. ಆದ್ದರಿಂದ ಸಮನ್ವಯಾಧ್ಯಾಯದಲ್ಲಿ ದೇವತಾಧಿಕರಣಕ್ಕೆ ಅಸಾಂಗತ್ಯದೋಷವಿಲ್ಲವೆಂದು ತಿಳಿಯಬೇಕು.

*ದೇವತೆಗಳ ಹಾಗೂ ಮನುಷ್ಯರ ಪ್ರವೃತ್ತಿಗಾಗಿ ಅಧಿಕರಣ ಸಾರ್ಥಕ*

ದೇವತಾ ಪದವಿಯು ನಿತ್ಯವಾದ್ದರಿಂದ ದೇವತೆಗಳಿಗೆ ಮೋಕ್ಷವೇ ಇರುವುದಿಲ್ಲ. ಆದ್ದರಿಂದಲೇ ಮುಮುಕ್ಷಾವೂ ಸಹ ಕೂಡುವುದಿಲ್ಲ. ಅಧಿಕಾರಿವಿಶೇಷಣವಾದ ಮುಮುಕ್ಷಾ ಎಂಬುದು ಇಲ್ಲದ ಕಾರಣ, ದೇವತೆಗಳು ಬ್ರಹ್ಮವಿದ್ಯೆಯಲ್ಲಿ ಅಧಿಕಾರಿಗಳಾಗುವುದಿಲ್ಲವೆಂದು ಸಂಶಯ ಬರುತ್ತದೆ. ಇದರ ಪರಿಹಾರಕ್ಕಾಗಿ ದೇವತಾಧಿಕರಣವು ಹೊರಟಿದೆ. ಅಂದರೆ ದೇವತೆಗಳ ಪದವು ನಿತ್ಯವಲ್ಲ. ಆದ್ದರಿಂದಲೇ ದೇವತೆಗಳು ಮೋಕ್ಷವನ್ನು ಬಯಸಲು ಬ್ರಹ್ಮಜ್ಞಾನವನ್ನು ಪಡೆಯಲೇ ಬೇಕು ಎಂದು ಈ ಅಧಿಕರಣವು ಸಮರ್ಥಿಸುತ್ತಿದೆ. ಈ ಅಧಿಕರಣವನ್ನು ಅಧ್ಯಯನ ಮಾಡಿದಾಗ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಆದ್ದರಿಂದ ದೇವತೆಗಳ ದೃಷ್ಟಿಯಿಂದ ಈ ಅಧಿಕರಣವು ಸಾರ್ಥಕ.

ನಮಗೂ ಸಹ ಈ ಅಧಿಕರಣವು ಸಾರ್ಥಕ. ಪರಮಾತ್ಮನು ಸರ್ವದೇವೋಪಾಸ್ಯನಾಗಿದ್ದಾನೆಂದು ಅವಶ್ಯವಾಗಿ ತಿಳಿಯಬೇಕು. ದೇವತೆಗಳಿಗೆ ಮೋಕ್ಷವೇ ಇಲ್ಲವೆಂದಾದರೆ, ಪರಮಾತ್ಮನನ್ನು ಉಪಾಸನೆ ಮಾಡಲಾರರು. ಆದ್ದರಿಂದ ದೇವತಾ ಪದವಿಯು ಅನಿತ್ಯವಾದ್ದರಿಂದ ಅವರಿಗೂ ಮೋಕ್ಷವಿರುತ್ತದೆಂದು ಈ ಅಧಿಕರಣದಲ್ಲಿ ಸಮರ್ಥಿಸಿದಾಗ, ದೇವತೆಗಳಿಂದ ಪರಮಾತ್ಮನು ಉಪಾಸ್ಯನೆಂದು ಸಿದ್ಧವಾಗುತ್ತದೆ. ಆವಾಗ 'ಸರ್ವದೇವೋಪಾಸ್ಯತ್ವ' ಎಂಬ ಧರ್ಮವನ್ನು ಪರಮಾತ್ಮನಲ್ಲಿ ತಿಳಿದಂತಾಗುತ್ತದೆ. ಈ ಜ್ಞಾನದ ಸಂಪಾದನೆಗಾಗಿ ದೇವತಾಧಿಕರಣವು ನಮಗೂ ಸಹ ಸಾರ್ಥಕವಾಗಿದೆ. ಮತ್ತು 'ವಿಶ್ವೇದೇವಾ ಉಪಾಸತೇ' ಇತ್ಯಾದಿ ಶ್ರುತಿಗಳ ಪ್ರಾಮಾಣ್ಯದ ಸಮರ್ಥನೆಯೂ ಸಹ ಈ ಅಧಿಕರಣದ ಮತ್ತೊಂದು ಉದ್ದೇಶ.

ಈ ಅಧಿಕರಣದಲ್ಲಿ ಶ್ರುತಿಗೆ ಯುಕ್ತಿಯಿಂದ ಅಪ್ರಾಮಾಣ್ಯದೋಷವು ಪ್ರಾಪ್ತವಾದರೆ, ಅದರ ಪರಿಹಾರವನ್ನೂ ಸಹ ಮಾಡುತ್ತಿದ್ದಾರೆಂದು ಹೇಳಿದಂತಾಯಿತು. ಆವಾಗ ಈ ಅಧಿಕರಣವು ಎರಡನೆಯ ಅಧ್ಯಾಯದಲ್ಲಿ ಸೇರಬೇಕಲ್ಲವೇ ಎಂಬ ಪ್ರಶ್ನೆ ಬರುತ್ತದೆ. ಆದರೆ ಹಿಂದಿನ ಅಧಿಕರಣದಿಂದ ಅವಾಂತರಸಂಗತಿಯಿರುವ ಪ್ರಯುಕ್ತ ಇದನ್ನು ಇಲ್ಲಿಯೇ ಸೇರಿಸಿದ್ದಾರೆ. ಹೊರತು, ಎರಡನೆಯ ಅಧ್ಯಾಯದಲ್ಲಿ ಇದನ್ನು ಸೇರಿಸಿಲ್ಲ. ಪೂರ್ವಮೀಮಾಂಸಕರು ವಿಶ್ವಜಿದಧಿಕರಣವನ್ನು ಪ್ರಥಮಾಧ್ಯಾಯದಲ್ಲಿ ಸೇರಿಸದೇ, ನಾಲ್ಕನೇ ಅಧ್ಯಾಯದಲ್ಲಿ ಸೇರಿಸಿದ್ದಾರೆ. ವಾಸ್ತವಿಕವಾಗಿ ಶ್ರುತಿಯ ಅಪ್ರಾಮಾಣ್ಯದೋಷವನ್ನು ಪರಿಹರಿಸುತ್ತಿರುವುದರಿಂದ ಪ್ರಥಮಾಧ್ಯಾಯದಲ್ಲೇ ಅದನ್ನು ಸೇರಿಸಬೇಕು. ಆದರೂ ಅವಾಂತರಸಂಗತಿಯಿದೆ ಎಂಬ ಕಾರಣಕ್ಕೋಸ್ಕರ ನಾಲ್ಕನೆಯ ಅಧ್ಯಾಯದಲ್ಲಿ ಹೇಗೆ ಸೇರಿಸಿದ್ದಾರೋ, ಆದರಂತೆ

ದೇವತಾಧಿಕರಣದಲ್ಲಿಯೂ ಅವಾಂತರಸಂಗತಿಯಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಸೇರಿಸದೇ ಪ್ರಥಮಾಧ್ಯಾಯದಲ್ಲೇ ಸೇರಿಸಿರುತ್ತಾರೆ.

*ಸಂಶಯ ಪರಂಪರೆ*

ಪೂರ್ವಪಕ್ಷದ ಫಲ ಹೀಗಿದೆ - ಮುಂದೆ ಹೇಳುವಂತೆ ಕರ್ಮ ಹಾಗೂ ಶಬ್ದಗಳು ವಿರುದ್ಧವಾಗುವುದಾದರೆ, ಈ ವಿರೋಧ ಪರಿಹಾರಕ್ಕೋಸ್ಕರ ದೇವತೆಗಳು ಅನಾದಿನಿಶ್ಯರೆಂದೇ ಒಪ್ಪಬೇಕು. ಅಂತಹ ದೇವತೆಗಳಿಗೆ ಮುಂದೆ ಹೇಳುವ ಪ್ರಕಾರ ಮೋಕ್ಷದಲ್ಲಿ ಅಪೇಕ್ಷೆಯೂ ಉಪಪನ್ನವಾಗುವುದಿಲ್ಲ. ಆದ್ದರಿಂದಲೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೂ ಸಹ ಕೂಡುವುದಿಲ್ಲ.

ಸಿದ್ಧಾಂತದ ಫಲ - ಒಂದು ವೇಳೆ ಇಂದ್ರಾದಿ ದೇವತೆಗಳಿಗೆ ಉತ್ಪತ್ತಿನಾಶಗಳು ಇರುವುದಾದರೆ, ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಕರ್ಮ ಹಾಗೂ ಶಬ್ದಗಳ ವಿರೋಧಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದಲೇ ಬಾಧಕವಿಲ್ಲದ ಕಾರಣ, ಉತ್ಪತ್ತಿನಾಶಗಳನ್ನು ದೇವತೆಗಳಿಗೆ ಹೇಳಬಹುದು. ಇಂತಹ ದೇವತೆಗಳಿಗೆ ನಿತ್ಯವಾದ ಮೋಕ್ಷ ಎಂಬ ಫಲದಲ್ಲಿ ಅಪೇಕ್ಷೆಯು ಉಪಪನ್ನವಾಗುತ್ತದೆ. ಆದ್ದರಿಂದಲೇ ಮೋಕ್ಷಫಲಕವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಯುಕ್ತವಾಗುತ್ತದೆಂಬುದು ಸಿದ್ಧಾಂತದ ಫಲ.

*ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಪೂರ್ವಪಕ್ಷ*

ಪೂರ್ವಪಕ್ಷ ಹೀಗಿದೆ - ದೇವತೆಗಳಿಗೆ ಬ್ರಹ್ಮೋಪಾಸನೆಯಲ್ಲಿ ಅಧಿಕಾರವಿಲ್ಲ. ಏಕೆಂದರೆ ಇಂದ್ರಾದಿಪದವಿಗಳನ್ನು ಹೊಂದಿರುವಂತಹ ದೇವತೆಗಳಿಗೆ ಉತ್ಪತ್ತಿನಾಶಗಳು ಇದೆಯೋ, ಇಲ್ಲವೋ ಎಂಬ ಪ್ರಶ್ನೆಗೆ ಉತ್ತರಿಸಬೇಕು. ಒಂದು ವೇಳೆ ಉತ್ಪತ್ತಿವಿನಾಶವಿದೆಯೆಂದು ಉತ್ತರಿಸಿದರೆ, ಇಂದ್ರಾದಿಪದವಿಗಳು ದೊರೆಯುವುದಕ್ಕಿಂತ ಮೊದಲು ಆಯಾ ಪದವಿಗಳಲ್ಲಿ ಯಾರೂ ಇರುವುದಿಲ್ಲ. ಆ ಸಮಯದಲ್ಲಿ ಮಾಡುವಂತಹ ಯಾಗಾದಿ ಕ್ರಿಯೆಗಳು ವ್ಯರ್ಥವಾಗುವ ಪ್ರಸಂಗ ಬರುತ್ತವೆ. ಇನ್ನು ಪದವಿಯಲ್ಲಿ ದೇವತೆಗಳಿಲ್ಲದ್ದರೂ ಆ ಚೇತನರು ನಿತ್ಯರಾದ್ದರಿಂದ ಅಂತಹ ಚೇತನನ್ನು ವಿವಕ್ಷಿಸಿ ಯಾಗವನ್ನು ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಮನುಷ್ಯ ಮೊದಲಾದ ಶರೀರಗಳಲ್ಲಿದ್ದು ಸಾಧನೆಯನ್ನು ಮಾಡಿಕೊಂಡ ಮೇಲಷ್ಟೇ ದೇವತೆಗಳಿಗೆ ಪದವಿಯು ಪ್ರಾಪ್ತವಾಗುತ್ತದೆ. ಮನುಷ್ಯ ಮೊದಲಾದ ಶರೀರದಲ್ಲಿರುವ ವ್ಯಕ್ತಿಯನ್ನು ಕುರಿತು, ಯಾಗಮಾಡುವುದು ಸರ್ವಥಾ ಯುಕ್ತವಾಗುವುದಿಲ್ಲ. ಮತ್ತು ವೇದಮಂತ್ರಗಳಲ್ಲಿ ಆಯಾಪದವಿಗಳಿಂದ ವಿಶಿಷ್ಟರಾದ ದೇವತಾಶರೀರವುಳ್ಳ ವ್ಯಕ್ತಿಯನ್ನೇ ಉದ್ದೇಶಿಸಿ, ಯಾಗವನ್ನು ಮಾಡಬೇಕೆಂದು ಹೇಳಲಾಗಿದೆ.

ಪೂರ್ವಮೀಮಾಂಸಕರು ಹೇಳುವಂತೆ 'ಸೂರ್ಯಾಯ', 'ಇಂದ್ರಾಯ' ಮೊದಲಾದ ಚತುರ್ಥೀವಿಭಕ್ತ್ಯಂತವಾದ ಶಬ್ದವನ್ನೇ ದೇವತೆಯೆಂದು ಹೇಳಬೇಕು. ಶಬ್ದಗಳು ನಿತ್ಯವಾದ್ದರಿಂದ, ದೇವತೆಗಳೂ ಸಹ ನಿತ್ಯರಾಗುತ್ತಾರಲ್ಲವೇ? ಎಂಬ ಶಂಕೆಯೂ ಸಹ ತಪ್ಪಾಗುತ್ತದೆ. ಏಕೆಂದರೆ ಇತಿಹಾಸಪುರಾಣಾದಿಗಳಲ್ಲಿ ದೇವತೆಗಳ ಶರೀರವನ್ನು ಸ್ಪಷ್ಟವಾಗಿ ವರ್ಣಿಸಿರುತ್ತಾರೆ. ಅಭಿಮಾನ್ಯಧಿಕರಣದಲ್ಲಿಯೂ ದೇವತೆಗಳಿಗೆ ಶರೀರಾದಿಗಳಿವೆಯೆಂದು ಸಮರ್ಥಿಸಲಾಗಿದೆ. ಹೀಗಿರುವಾಗ ಶರೀರಾದಿಗಳಿಲ್ಲದ ಜಡಭೂತವಾದ ಶಬ್ದವನ್ನೇ ದೇವತೆಗಳೆಂದು ಹೇಳುವುದು ತಪ್ಪಾಗುತ್ತದೆ. ಇನ್ನು ಬ್ರಹ್ಮನನ್ನು ಉದ್ದೇಶಿಸಿ, ಯಾಗವನ್ನು ಮಾಡುವುದರಿಂದ ಅನಾದಿನಿತ್ಯನಾದ ಬ್ರಹ್ಮೋದ್ದೇಶಕವಾದ ಯಾಗಾದಿಗಳಿಗೆ ವೈಯರ್ಥ್ಯವಿಲ್ಲವೆಂದು ಹೇಳಬಹುದು. ಆದರೆ, ಸಕಲಕರ್ಮಗಳು ವೈಷ್ಣವಕರ್ಮಗಳೆಂದು ಹೇಳಿದರೆ,

ಐಂದ್ರಕರ್ಮಕಯಾಗ, ಸೂರ್ಯಕರ್ಮಕಯಾಗವೆಂಬ ವಿಭಾಗವೇ ತಪ್ಪುತ್ತದೆ. ಆದ್ದರಿಂದ ದೇವತಾಪದವಿಗಳು ಅನಿತ್ಯವಾದಾಗ ಕರ್ಮವಿರೋಧ ದೋಷ ಬರುವುದಷ್ಟೇ ಅಲ್ಲದೇ, ಶಬ್ದವಿರೋಧದೋಷವೂ ಸಹ ಬರುತ್ತದೆ. ಅಂದರೆ ಅನಿತ್ಯರಾದ ದೇವತೆಗಳನ್ನು ನಿತ್ಯವಾದ ಶಬ್ದವು ಪ್ರತಿಪಾದಿಸಲು ಸಾಧ್ಯವಿಲ್ಲ.

### *ದೇವತೆಗಳು ಅನಿತ್ಯರಾದಲ್ಲಿ ಕರ್ಮವಿರೋಧ ಹಾಗೂ ಶಬ್ದವಿರೋಧ*

ದೇವತೆಗಳು ಅನಿತ್ಯರಾದ್ದರಿಂದ ಮೋಕ್ಷವನ್ನು ಹೊಂದುತ್ತಾರೆ. ಮೋಕ್ಷಕ್ಕಾಗಿ ಅಧಿಕಾರಿವಿಶೇಷಣವಾದ 'ಮುಮುಕ್ಷಾ' ಎಂಬ ಧರ್ಮವು ದೇವತೆಗಳಲ್ಲಿ ಉಪಪನ್ನವಾಗುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳೂ ಸಹ ಅಧಿಕಾರಿಗಳಾಗಿದ್ದಾರೆಂದು ಸಿದ್ಧಾಂತಿಗಳು ಸಮರ್ಥಿಸಬೇಕು. ಆದರೆ ದೇವತೆಗಳು ಅನಿತ್ಯರಾದಲ್ಲಿ ಕರ್ಮವಿರೋಧ ಹಾಗೂ ಶಬ್ದವಿರೋಧ ಎಂಬೆರಡು ಪ್ರಧಾನ ದೋಷಗಳು ಬರುತ್ತವೆ. ಅನಿತ್ಯರಾದ ದೇವತೆಗಳು ಯಾವಾಗ ತಮ್ಮ ಪದವಿಯಲ್ಲಿ ಇರುವುದಿಲ್ಲವೋ, ಆ ಸಂದರ್ಭದಲ್ಲಿ ಮಾಡುವಂತಹ ಯಾಗಗಳಿಗೆ ವೈಯರ್ಥ್ಯದೋಷ ಬರುತ್ತದೆ. ಮತ್ತು ದೇವತೆಗಳಿಲ್ಲದಾಗ ತದ್‌ವಾಚಕಪದಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ.

ಕರ್ಮವಿರೋಧ ದೋಷವನ್ನು ಎರಡನೆಯ ಸೂತ್ರವು ಹೇಳುತ್ತಿದೆ. ಶಬ್ದವಿರೋಧ ದೋಷವನ್ನು ಮೂರನೆಯ ಸೂತ್ರವು ಹೇಳುತ್ತಿದೆ. ಎರಡನೆಯ ಸೂತ್ರದಲ್ಲಿ ದೇವತಾಪ್ರವಾಹವು ನಿತ್ಯವಾದ್ದರಿಂದ ಕರ್ಮವಿರೋಧಕ್ಕೆ ಅವಕಾಶವಿಲ್ಲವೆಂದು ಪರಿಹಾರವನ್ನು ನೀಡುತ್ತದೆ. ಇದರಿಂದಲೇ ಶಬ್ದವಿರೋಧ ಪರಿಹಾರವನ್ನೂ ಸಹ ಮಾಡಿದಂತಾಗುತ್ತದೆ. ಏಕೆಂದರೆ ದೇವತಾಪ್ರವಾಹವು ನಿತ್ಯವಾದ್ದರಿಂದ, ನಿರಂತರವಾಗಿ ದೇವತೆಗಳು ತಮ್ಮ ಪದವಿಯಲ್ಲಿ ಇದ್ದೇ ಇರುತ್ತಾರೆಂದಂತಾಯಿತು. ಆವಾಗ ಶಬ್ದಕ್ಕೆ ಅಪ್ರಾಮಾಣ್ಯದೋಷಕ್ಕೂ ಸಹ ಅವಕಾಶ ಬರುವುದಿಲ್ಲ. ಹೀಗಿರುವಾಗ ಮೂರನೆಯ ಸೂತ್ರಕ್ಕೆ ಏನು ಸಾರ್ಥಕ್ಯ ? ಎಂಬುದು ಇಲ್ಲಿ ಪ್ರಾಸಂಗಿಕವಾಗಿ ಮಾಡಬೇಕಾದ ವಿಚಾರ.

ಎರಡನೆಯ ಸೂತ್ರವು ಕೇವಲ ದೇವತೆಗಳಿಗೆ ಉತ್ಪತ್ತಿಯಿಲ್ಲವೆಂದಷ್ಟೇ ಹೇಳುತ್ತಿದೆ. ಮೂರನೆಯ ಸೂತ್ರವು ನಾಶವಿಲ್ಲವೆಂದು ಹೇಳುತ್ತಿರುವುದರಿಂದ ಸಾರ್ಥಕವೆಂದು ಉತ್ತರಿಸಬೇಕು. ಹಾಗಾದಲ್ಲಿ ಎರಡು ಹಾಗೂ ಮೂರನೆಯ ಸೂತ್ರಗಳು ಒಟ್ಟಿಗೆ ಸೇರಿ, ಕರ್ಮವಿರೋಧ ಹಾಗೂ ಶಬ್ದವಿರೋಧಗಳೆರಡನ್ನೂ ಪರಿಹರಿಸುತ್ತಿವೆ ಎಂದೇ ಉತ್ತರಿಸಬೇಕಾಗುತ್ತದೆ. ಆವಾಗ ಎರಡನೆಯ ಸೂತ್ರದಲ್ಲಿ 'ಕರ್ಮ' ಎಂಬ ಪದವು ಮೂರನೆಯ ಸೂತ್ರದಲ್ಲಿ 'ಶಬ್ದ' ಎಂಬ ಪದವು ವ್ಯರ್ಥವಾಗುತ್ತದೆ. ಈ ಶಂಕೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ವಾಸ್ತವಿಕವಾಗಿ ಎರಡೂ ಸೂತ್ರಗಳಲ್ಲಿಯೂ ಎರಡು ಬಗೆಯ ಸಮಾಧಾನಗಳನ್ನು ಹೇಳುತ್ತಿದ್ದಾರೆ. ಆದರೆ ಪ್ರಥಮ ಸೂತ್ರದಲ್ಲಿ ಮನುಷ್ಯರು ಸತ್ಕರ್ಮಗಳಿಂದ ದೇವತಾಪದವಿಯನ್ನು ಪಡೆಯುತ್ತಾರೆಂದು ಹೇಳಿದರು. ಆವಾಗ ಮನುಷ್ಯರಾಗಿರುವ ಸಂದರ್ಭದಲ್ಲಿ ದೇವತಾಪದವಿಯಲ್ಲಿ ಯಾರೂ ಇಲ್ಲವೆಂದಂತಾಯಿತು. ಆ ಸಂದರ್ಭದಲ್ಲಿ ಮಾಡುವಂತಹ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವಲ್ಲವೇ? ಎಂಬ ಕರ್ಮವಿರೋಧಾಶಂಕೆಗೆ ಎರಡನೆಯ ಸೂತ್ರವು ಉತ್ತರಿಸಿತು. ಇದರ ಮೇಲೆ ಉಪಜೀವ್ಯವಾದ ಶಬ್ದದವಿರೋಧವೂ ಪ್ರಾಪ್ತವಾಗುತ್ತದೆ. ಅಂದರೆ ದೇವತೆಗಳೇ ಇಲ್ಲದಿದ್ದಾಗ ಶಬ್ದವಾದರೂ ಸಹ ದೇವತೆಯನ್ನು ಹೇಗೆ ಪ್ರತಿಪಾದಿಸಲು ಸಾಧ್ಯ ? ಎಂಬ ಅಭ್ಯಧಿಕಾಶಂಕೆಗೆ ಮೂರನೆಯ ಸೂತ್ರವು ಹೊರಟಿದೆ. ಆದ್ದರಿಂದ ಆಕಾಂಕ್ಷಾಕ್ರಮದಿಂದ ಎರಡನೆಯ ಹಾಗೂ ಮೂರನೆಯ ಸೂತ್ರಗಳು ಉತ್ತರಿಸುತ್ತಿರುವುದರಿಂದ, ಎರಡೂ ಸೂತ್ರಗಳು ಸಾರ್ಥಕವಾಗಿವೆ. ಮತ್ತು ಎರಡನೆಯ ಸೂತ್ರದಲ್ಲಿರುವ 'ಕರ್ಮ' ಎಂಬ ಪದವು ಮೂರನೆಯ ಸೂತ್ರದಲ್ಲಿರುವ 'ಶಬ್ದ' ಎಂಬ ಪದವೂ ಸಹ ಸಾರ್ಥಕವಾಗಿದೆ.

*ಪರಿಪೂರ್ಣಚಂದ್ರಿಕಾ*

## *ಅರ್ಥಿತ್ವವಿಲ್ಲದ ದೇವತೆಗಳು ಬ್ರಹ್ಮವಿದ್ಯೆಗೆ ಅನಧಿಕಾರಿಗಳು*

'ವಿರೋಧಃ ಕರ್ಮಣಿ ಇತಿ ಚೇನ್ನ ಅನೇಕಪ್ರತಿಪತ್ಯದರ್ಶನಾತ್' ಎಂಬುದು ಎರಡನೆಯ ಸೂತ್ರ . ಈ ಸೂತ್ರದಲ್ಲಿ ದೇವತೆಗಳು ತಮ್ಮ ಸ್ಥಾನಕ್ಕೆ ಬರುವ ಮೊದಲು ಆಯಾ ಪದವಿಯು ಶೂನ್ಯವಾಗಿರುವುದಿಲ್ಲ. ಮತ್ತೊಬ್ಬ ದೇವತೆ ಅಲ್ಲಿರುತ್ತಾನೆ. ಹೀಗೆ ದೇವತಾಪ್ರವಾಹವು ಅನಾದಿಯಾದ್ದರಿಂದ, ತದುದ್ದೇಶಕವಾದ ಕರ್ಮಗಳು ಎಂದೂ ಸಹ ನಿಷ್ಫಲಗಳಲ್ಲ ಎಂದು ಸಮರ್ಥಿಸಲಾಯಿತು. ಹೀಗೆ ಕರ್ಮವಿರೋಧವನ್ನಷ್ಟೇ ಎರಡನೆಯ ಸೂತ್ರವು ಪರಿಹಾರ ಮಾಡಿದೆ ಹೊರತು, ಶಬ್ದವಿರೋಧವನ್ನು ಪರಿಹಾರ ಮಾಡಿಲ್ಲ. ಶಬ್ದವಿರೋಧವನ್ನೂ ಸಹ ಕರ್ಮವಿರೋಧಪರಿಹಾರದಿಂದಲೇ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ದೇವತೆಗಳಿಗೆ ತಮ್ಮ ಸ್ಥಾನವು ಹೇಗೆ ಅನಿತ್ಯವಾಗಿದೆಯೋ, ಅದರಂತೆ ಕರ್ಮಗಳೂ ಸಹ ಸ್ವರೂಪತಃ ಅನಿತ್ಯವಾಗಿವೆ. ಆದರೆ ದೇವತಾಪ್ರವಾಹವು ಅನಾದಿನಿತ್ಯವಾಗಿದೆ. ಅದರಂತೆ ಕರ್ಮಪ್ರವಾಹವೂ ಸಹ ಅನಾದಿನಿತ್ಯವಾಗಿದೆ. ಇದರಂತೆ ಶಬ್ದದಲ್ಲಿ ಹೇಳಲಾಗದು. ವೇದರೂಪವಾದ ಶಬ್ದವು ಸ್ವರೂಪತಃ ನಿತ್ಯವಾಗಿದೆ. ಪ್ರವಾಹತಃ ನಿತ್ಯತ್ವವನ್ನು ಕರ್ಮದ ವಿಷಯದಲ್ಲಿ ಹೇಳಬಹುದೇ ಹೊರತು, ಶಬ್ದದ ವಿಷಯದಲ್ಲಿ ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಹೇಳಿದಲ್ಲಿ ಪುರಾಣಾದಿಗಳಿಗೂ ವೇದಕ್ಕೂ ಪೌರುಷೇಯತ್ವ , ಅಪೌರುಷೇಯತ್ವ ಎಂಬ ವ್ಯತ್ಯಾಸವನ್ನೇ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವರೂಪತಃ ನಿತ್ಯವಾದ ಇಂದ್ರಾದಿಸೂಕ್ತಗಳು ಒಬ್ಬನೇ ಇಂದ್ರನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನು ಇರುವುದಿಲ್ಲವೆಂದು ಸಿದ್ಧವಾಗಿದೆ. ಹಾಗಾಗಿ ಕರ್ಮವಿರೋಧವು ಪರಿಹಾರವಾದರೂ ಶಬ್ದವಿರೋಧವು ಹಾಗೆಯೇ ಉಳಿಯುತ್ತದೆ.

ಇದರ ಪರಿಹಾರಕ್ಕಾಗಿ 'ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬ ಮೂರನೆಯ ಸೂತ್ರವು ಹೊರಟಿದೆ. ಇಂದ್ರಾದಿಸೂಕ್ತಗಳಿಗೆ ಇಂದ್ರಾದಿ ಪದವಿಯಲ್ಲಿರುವ ವ್ಯಕ್ತಿಯಲ್ಲಷ್ಟೇ ತಾತ್ಪರ್ಯವಿರುತ್ತದೆ. ಯಾವರೀತಿಯಾಗಿ ಮಂತ್ರಿ ಎಂಬ ಒಂದೇ ಪದವು ಬೇರೆ ಬೇರೆ ಕಾಲದಲ್ಲಿ ಆ ಮಂತ್ರಿಸ್ಥಾನವನ್ನು ಹೊಂದುವ ಎಲ್ಲಾ ವ್ಯಕ್ತಿಗಳನ್ನು ಪ್ರತಿಪಾದನೆ ಮಾಡುತ್ತವೋ, ಅದರಂತೆ ಇಂದ್ರಾದಿಸೂಕ್ತಗಳು ಆಯಾ ಪದವಿಯಲ್ಲಿ ಬರುವ ಇಂದ್ರಾದಿದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆ. ಹಾಗಾಗಿ ಮೂರನೆಯ ಸೂತ್ರ ಹೊರಟಿದ್ದು ಸಾರ್ಥಕ. ಎರಡನೆಯ ಸೂತ್ರದಿಂದಲೇ ಇದು ಗತಾರ್ಥವಾಗುವುದಿಲ್ಲ.

ದೇವತೆಗಳಿಗೆ ನಿತ್ಯತ್ವವನ್ನು ಹೇಳುವುದು ಅನಿವಾರ್ಯ. ಏಕೆಂದರೆ ವೇದದಲ್ಲಿ ಒಂದೇ ಬಗೆಯ ನಾಮರೂಪಗಳಿಂದ ಇಂದ್ರಾದಿಸೂಕ್ತಗಳು, ಇಂದ್ರಾದಿದೇವತೆಗಳನ್ನು ಪ್ರತಿಪಾದಿಸುತ್ತಿವೆ. ಬೇರೆ ಬೇರೆ ಕಲ್ಪದಲ್ಲಿರುವ ಆಯಾದೇವತೆಗಳಿಗೆ ಒಂದೇ ರೂಪ ಹಾಗೂ ನಾಮಗಳು ಬರಲು ಸಾಧ್ಯವಿಲ್ಲ. ಆದ್ದರಿಂದ ದೇವತೆಗಳಿಗೆ ತಮ್ಮ ಪದವಿಯು ನಿತ್ಯವೆಂದು ಹೇಳಬೇಕು. ಸೂರ್ಯಾದಿ ದೇವತೆಗಳು ಪರಮಾತ್ಮನಿಂದ ಹುಟ್ಟಿದ್ದಾರೆ ಇತ್ಯಾದಿಯಾಗಿ ಕೆಲವು ಶ್ರುತಿಗಳು ಪ್ರತಿಪಾದನೆ ಮಾಡುತ್ತಿರಬಹುದು. ಆದರೆ ಪ್ರಳಯಕಾಲದಲ್ಲಿ ತಮ್ಮ ವ್ಯಾಪಾರದಿಂದ ವಿಶ್ರಮಿಸಿದ ಸೂರ್ಯಾದಿದೇವತೆಗಳಿಗೆ ಪುನಃ ಪರಮಾತ್ಮನು ಸೃಷ್ಟಿಕಾಲದಲ್ಲಿ ಆಯಾವ್ಯಾಪಾರದಲ್ಲಿ ತೊಡಗುವಂತೆ ಪ್ರೇರಣೆ ಮಾಡಿದನೆಂದಷ್ಟೇ ಆ ಶ್ರುತಿಯ ಅಭಿಪ್ರಾಯವಾಗಿರುತ್ತದೆ. ಆದ್ದರಿಂದ ಸಕಲ ದೇವತೆಗಳೂ ಆಯಾ ಪದವಿಗಳಿಂದ ವಿಶಿಷ್ಟರಾಗಿ ಅನಾದಿನಿತ್ಯರಾಗಿದ್ದಾರೆಂದು ಅನಿವಾರ್ಯವಾಗಿ ಒಪ್ಪಬೇಕು. ದೇವತಾಪದವಿಯು ನಿತ್ಯವಾದ್ದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರಬೇಕಾಗಿರುವುದಿಲ್ಲ. ತಮ್ಮ ಪದವಿಯು ನಿತ್ಯವಾದ ಮೇಲೆ ಮೋಕ್ಷವು ದೊರೆಯುವುದಿಲ್ಲವೆಂದು ಖಚಿತವಾಗಿರುತ್ತದೆ. ಹೀಗಿರುವಾಗ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ದೇವತೆಗಳು ಹೊಂದುವುದಿಲ್ಲ.

ಮತ್ತು ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವೂ ಸಹ ಇಲ್ಲ. ಏಕೆಂದರೆ 'ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾ' ಎಂಬುದಾಗಿ ಯಾರು ಬ್ರಹ್ಮವಿದ್ಯೆಯನ್ನು ಅಭ್ಯಾಸ ಮಾಡುತ್ತಾರೋ ಅವರಿಗೆ ವಸು ಮೊದಲಾದ ಪದವಿಗಳು ದೊರೆಯುತ್ತವೆಂದು ಫಲವನ್ನು ಶ್ರುತಿಯು ಹೇಳಿದೆ. ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ದೊರೆತದ್ದರಿಂದ ಪುನಃ ಅದೇ ಫಲಕ್ಕೋಸ್ಕರ ಅವರು ಆಯಾವಿದ್ಯೆಗಳನ್ನು ಅಭ್ಯಾಸ ಮಾಡುವುದು ಕೂಡುವುದಿಲ್ಲ. ಇನ್ನು ಮೋಕ್ಷಫಲಕ್ಕೋಸ್ಕರ ಮಧುವಿದ್ಯಾದಿಗಳನ್ನು ಅಭ್ಯಾಸ ಮಾಡಬೇಕು. ಆದರೆ 'ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ' ಇತ್ಯಾದಿ ವಾಕ್ಯಗಳಿಂದ ದೇವತೆಗಳು ಈಗಾಗಲೇ ಬ್ರಹ್ಮಜ್ಞಾನಿಗಳಾಗಿರುತ್ತಾರೆ. ಹೀಗಿರುವಾಗ ಪುನಃ ಬ್ರಹ್ಮಜ್ಞಾನಕ್ಕೋಸ್ಕರ ಬ್ರಹ್ಮವಿದ್ಯೆಯಲ್ಲಿ ತೊಡಗುವುದು ಸರ್ವಥಾ ಕೂಡುವುದಿಲ್ಲ.

ಅನುಮಾನಸ್ವರೂಪಗಳನ್ನು ಹೀಗೆ ತಿಳಿಯಬೇಕು. ೧. ದೇವಾಃ ವೇದವಿದ್ಯಾದಿಷು ಅನಧಿಕಾರಿಣಃ ತತ್ ಫಲೇ ಮೋಕ್ಷೇ ಅರ್ಥಿತಾಶೂನ್ಯತ್ವಾತ್.

೨. ದೇವಾಃ ಅರ್ಥಿತಾಶೂನ್ಯಾಃ ಮೋಕ್ಷಾಭಾವನಿಶ್ಚಯವತ್ವಾತ್.

೩. ದೇವಾಃ ಮೋಕ್ಷಾಭಾವನಿಶ್ಚಯವಂತಃ ಪದವೀವಿಶಿಷ್ಟಾನಾಂ ತೇಷಾಂ ಅನಾದಿನಿತ್ಯತ್ವಾತ್.

ಇತ್ಯಾದಿ ಅನುಮಾನಗಳಿಂದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು. ಏಕೆಂದರೆ ಬ್ರಹ್ಮವಿದ್ಯೆಯ ಫಲವಾದ ಮೋಕ್ಷದಲ್ಲಿ ಅರ್ಥಿತ್ವವಿಲ್ಲವೆಂದು, ಮೋಕ್ಷವಿಲ್ಲವೆಂದು ನಿಶ್ಚಯವಾಗಿರುವುದರಿಂದ ಅರ್ಥಿತ್ವವಿಲ್ಲವೆಂದು ತಮ್ಮ ಪದವಿಗಳು ಅನಾದಿನಿತ್ಯವಾದ್ದರಿಂದ ಮೋಕ್ಷವಿಲ್ಲವೆಂದು ನಿರ್ಣಯವಾಗುತ್ತದೆ.

*ಸಿದ್ಧಾಂತ - ದೇವತೆಗಳಿಗೆ ವೇದವಿದ್ಯಾಧಿಕಾರವಿದೆ*

ಈಗಿರುವ ಅನೇಕ ಪಶುಪಕ್ಷಿಗಳಲ್ಲಿ ವೇದವನ್ನು ಓದುವಂತಹ ಸಾಮರ್ಥ್ಯವಿರುವುದಿಲ್ಲ. ಅದರಂತೆ ದೇವತೆಗಳಿಗೆ ಸಾಮರ್ಥ್ಯವಿಲ್ಲವೆಂದು ಹೇಳಲಾಗದು. ವೇದವಿದ್ಯೆಯನ್ನು ಅಭ್ಯಾಸ ಮಾಡಲು ದೇವತೆಗಳು ಸಮರ್ಥರೇ ಆಗಿದ್ದಾರೆ. ಮತ್ತು ಶೂದ್ರರು, ಸ್ತ್ರೀಯರು, ಬ್ರಹ್ಮಬಂಧುಗಳು ವೇದವನ್ನು ಓದಬಾರದೆಂದು ಹೇಗೆ ನಿಷೇಧವಚನವಿದೆಯೋ, ಅದರಂತೆ ದೇವತೆಗಳು ವೇದವನ್ನು ಓದಬಾರದೆನ್ನಲು ಯಾವುದೇ ನಿಷೇಧವಾಕ್ಯಗಳಿರುವುದಿಲ್ಲ.

ತಮ್ಮ ಪದವಿಗಳೆಲ್ಲವೂ ಅನಿತ್ಯವಾದುದು. ಮುಂದೆ ಮೋಕ್ಷವನ್ನು ದೇವತೆಗಳು ಪಡೆಯಲೇ ಬೇಕು. ಆದ್ದರಿಂದ ಮುಕ್ತಿಯ ವಿಷಯದಲ್ಲಿ ಅರ್ಥಿತ್ವವೂ ಸಹ ದೇವತೆಗಳಿಗೆ ಇದ್ದೇ ಇರುತ್ತದೆ. ಹಾಗಾದರೆ ದೇವತೆಗಳು ಅನಿತ್ಯರಾದರೆ, ಶಬ್ದವಿರೋಧ ಹಾಗೂ ಕರ್ಮವಿರೋಧಗಳು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಹಿಂದಿನ- ಮುಂದಿನ ಕಲ್ಪಗಳಲ್ಲಿರುವ ಎಲ್ಲ ದೇವತೆಗಳ ನಾಮ ಹಾಗೂ ರೂಪಗಳು ಒಂದೇ ರೀತಿಯಾಗಿರುವುದರಿಂದ ಶಬ್ದವಿರೋಧ ಮತ್ತು ಕರ್ಮವಿರೋಧಗಳಿಗೆ ಅವಕಾಶವಿಲ್ಲ.

ಹೀಗೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆನ್ನಲು ಯಾವುದೇ ಬಾಧಕಗಳಿರುವುದಿಲ್ಲ. ಮತ್ತು ಶ್ರುತಿಗಳಲ್ಲಿ ಸ್ಪಷ್ಟವಾಗಿ ಅಧಿಕಾರವಿದೆಯೆಂಬ ಮಾತೇ ಹೆಚ್ಚಾಗಿ ಕೇಳಿಸುತ್ತದೆ.

ಆದ್ದರಿಂದ ವೇದವಿದ್ಯೆಯ ಅಧಿಕಾರಕ್ಕೆ ಉಪಯೋಗಿಯಾದ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಎಂಬ ಮೂರೂ ಧರ್ಮಗಳು ದೇವತೆಗಳಲ್ಲಿದೆಯೆಂದಷ್ಟೇ ಅಲ್ಲ. ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂಬ ವಿಧಿ

ವಾಕ್ಯಗಳೂ ಸಹ ಅನೇಕ ಇರುತ್ತವೆ. 'ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ' ನೂರೊಂದು ವರ್ಷಗಳ ಕಾಲ ಇಂದ್ರದೇವರು ಬ್ರಹ್ಮದೇವರ ಬಳಿ ವಿದ್ಯೆಗಾಗಿ ಬ್ರಹ್ಮಚರ್ಯ ವ್ರತದಿಂದ ಉಪಸತ್ತಿ ಮಾಡಿದರು ಎಂದು. ಆದ್ದರಿಂದ ಮನುಷ್ಯರು ಹೇಗೆ ವೇದವಿದ್ಯೆಗೆ ಅಧಿಕಾರಿಗಳೋ, ಅದರಂತೆ ದೇವತೆಗಳೂ ಕೂಡ ಅಧಿಕಾರಿಗಳಾಗಿರುತ್ತಾರೆ.

ಮಧುವಿದ್ಯೆ ಮೊದಲಾದವನ್ನು ಅಧ್ಯಯನ ಮಾಡಿದರೆ ವಸುಪದವಿ ಮೊದಲಾದವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಇನ್ನು ಕೆಲವು ವಿದ್ಯೆಗಳಿಂದ ಬ್ರಹ್ಮಜ್ಞಾನವು ಬರುತ್ತದೆಂದು ಶ್ರುತಿ ಹೇಳುತ್ತಿದೆ. ಆದರೆ ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ಮತ್ತು ಬ್ರಹ್ಮಜ್ಞಾನವು ದೊರೆತದ್ದರಿಂದ ಪುನಃ ಅದೇ ಫಲಕ್ಕಾಗಿ ಏಕೆ ವೇದಾಧ್ಯಯನದಲ್ಲಿ ತೊಡಗಬೇಕು.

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಬ್ರಹ್ಮಜ್ಞಾನದಲ್ಲಿ ಇನ್ನು ಹೆಚ್ಚಿನ ತತ್ತ್ವವನ್ನು ತಿಳಿಯುವುದಕ್ಕಾಗಿ ಮತ್ತು ಮೋಕ್ಷದಲ್ಲಿ ಅತಿಶಯವಾದ ಫಲವನ್ನು ಪಡೆಯುವುದಕ್ಕಾಗಿ ದೇವತೆಗಳು ಪುನಃ ಪುನಃ ವೇದಾಧ್ಯಯನವನ್ನು ಮಾಡುತ್ತಾರೆ.

### *ಸೂತ್ರಗಳ ವಿನ್ಯಾಸ ಶೈಲಿ*

ಸೂತ್ರಕಾರರ ಸೂತ್ರಗಳ ಜೋಡಣೆಯು ಅತ್ಯಂತ ಸ್ವರಸವಾಗಿದೆ. ಮೊದಲು 'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬ ಸೂತ್ರವನ್ನೇ ಉಲ್ಲೇಖಮಾಡಲು ಕಾರಣ ಹೀಗಿದೆ - ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ಮಾತ್ರ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಹೇಳಲಾಯಿತು. ಮನುಷ್ಯರು ಅಧಿಕಾರಿಗಳು ಎಂದು ಹೇಳಿದರೆ ದೇವತೆಗಳು ಅಧಿಕಾರಿಗಳಲ್ಲ ಎಂದರ್ಥವಲ್ಲ. ಹೊರತು, ಪ್ರಾಣಿಗಳಿಗೆ ಅಧಿಕಾರವಿಲ್ಲ ಎಂದಷ್ಟೇ ಅರ್ಥ. ಈ ವಿಷಯವನ್ನು ಸೂತ್ರಕಾರರೇ ಸ್ವತಃ 'ತದುಪರ್ಯಪಿ' ಇತ್ಯಾದಿ ಸೂತ್ರಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ.

'ತದುಪರಿ' ಎಂದರೆ ಮೊದಲು ಮನುಷ್ಯರಾಗಿದ್ದು, ಅನಂತರ ದೇವತಾ ಪದವಿಯು ಪ್ರಾಪ್ತವಾದ ಮೇಲೂ ಸಹ ಬೌದ್ಧಿಕಸಾಮರ್ಥ್ಯವು ವಿಶಿಷ್ಟವಾಗಿರುವುದರಿಂದ ಆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. 'ಬಾದರಾಯಣರು ಈ ವಿಷಯವನ್ನು ಸಮರ್ಥಿಸಿದ್ದಾರೆ. ಆದ್ದರಿಂದ 'ವಿಶಿಷ್ಟ ಬುದ್ಧ್ಯಾದಿಮತ್ತ್ವ' ಎಂಬ ಪ್ರಧಾನಹೇತುವಿನಿಂದ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವನ್ನು ಮೊದಲು ಸಮರ್ಥಿಸಿದ್ದಾರೆ.

ಹಿಂದಿನ ಸೂತ್ರದಲ್ಲಿ 'ತದುಪರಿ' ಎಂಬ ಪದದಿಂದ ಮನುಷ್ಯರೇ ಮುಂದೆ ದೇವತೆಗಳಾಗುತ್ತಾರೆಂದು ಹೇಳಲಾಗಿದೆ. ಮೊದಲು ಮನುಷ್ಯರಾಗಿದ್ದವರು ಅನಂತರ ದೇವತೆಗಳಾಗುವುದಾದರೆ, ದೇವತೆಗಳಾಗುವ ಮೊದಲು ದೇವತಾಪದವಿಯಲ್ಲಿ ಯಾರೂ ಇರುವುದಿಲ್ಲವೆಂದಂತಾಯಿತು. ಆವಾಗ ದೇವತೋದ್ದೇಶ್ಯಕವಾದ ಕರ್ಮ ಮತ್ತು ತದ್ವಾಚಕವಾದ ಶಬ್ದ ಎಲ್ಲವೂ ಕೂಡ ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಎರಡನೆಯ ಸೂತ್ರವು ಉತ್ತರಿಸುತ್ತಿದೆ. ದೇವತಾಪದವಿಯಲ್ಲಿ ಒಬ್ಬರೇ ದೇವತೆಗಳು ಶಾಶ್ವತವಾಗಿರುವುದಿಲ್ಲ. ಯಾವ ದೇವತೆಯು ಮನುಷ್ಯಾವಸ್ಥೆಯಲ್ಲಿದ್ದು ಕರ್ಮಾನುಷ್ಠಾನ ಮಾಡುತ್ತಿರುತ್ತಾನೋ, ಆ ಸಮಯದಲ್ಲಿ ಮತ್ತೊಬ್ಬ ದೇವತೆಯು ಆ ಪದವಿಯಲ್ಲಿ ಇದ್ದೇ ಇರುತ್ತಾನೆ. ಹೀಗೆ ದೇವತಾ ಪ್ರವಾಹವು ಅನಾದಿಯಾಗಿರುವುದರಿಂದ, ಕರ್ಮಗಳು ಎಂದೂ ಸಹ ವ್ಯರ್ಥವಾಗುವುದಿಲ್ಲ ಎಂದು ಸಮರ್ಥಿಸಲಾಗಿದೆ.

ದೇವತೆಗಳು ಅನಿತ್ಯರಾದರೆ, ವೇದವು ಅಪ್ರಾಮಾಣವಾಗಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಮೂರನೆಯ ಸೂತ್ರವು ಉತ್ತರಿಸಿದೆ. ಪರಮಾತ್ಮನು ಸೂರ್ಯ-ಚಂದ್ರರನ್ನು ಹಿಂದಿನ ಕಲ್ಪದಂತೆ, ಈ ಕಲ್ಪದಲ್ಲಿಯೂ ಸೃಷ್ಟಿಮಾಡಿದನು.

ಆದ್ದರಿಂದ ದೇವತೆಗಳ ಪ್ರವಾಹವು ನಿತ್ಯವೇ ಆಗಿರುತ್ತದೆ. ಇವೇ ಮೊದಲಾದ ಶಬ್ದರೂಪಪ್ರಮಾಣಗಳಿಂದ ಮತ್ತು ಮಹಾತ್ಮರ ಪ್ರತ್ಯಕ್ಷದಿಂದ ನಮಗೆ ಬರುವ ಅನುಮಾನದಿಂದಲೂ ದೇವತೆಗಳ ಪ್ರವಾಹವು ನಿತ್ಯವೆಂದು ಸಿದ್ಧವಾಗುತ್ತದೆ.

ವೇದಗಳು ನಿತ್ಯವೆಂದು ಸಿದ್ಧವಾದ್ದರಿಂದಲೇ ಅವುಗಳು ಅಪ್ರಮಾಣವಲ್ಲ. ಒಂದು ವೇಳೆ ವಾಚ್ಯವಾದ ದೇವತೆಗಳು ಅನಿತ್ಯರಾದರೆ, ವಾಚಕವಾದ ವೇದವೂ ಕೂಡ ಅನಿತ್ಯವೇ ಆಗಬೇಕಾಗುತ್ತದೆ. ಹೀಗೆ ವಾಚಕನಿತ್ಯತ್ವದ ಅನ್ಯಥಾನುಪಪತ್ತಿಯಿಂದ ವಾಚ್ಯದ ನಿತ್ಯತ್ವವು ಸಿದ್ಧವಾಗುತ್ತದೆಂದು ನಾಲ್ಕನೆಯ ಸೂತ್ರವು ಸಮರ್ಥಿಸಿದ. ಹೀಗೆ ನಾಲ್ಕು ಸೂತ್ರಗಳಲ್ಲಿ ದೇವತೆಗಳ ಪ್ರವಾಹವು ನಿತ್ಯವೆಂದು ಸಮರ್ಥಿಸಿದ್ದಾರೆ.

*ಅನ್ಯಥಾನುಪಪತ್ತಿ ಪ್ರಮಾಣದಿಂದ ದೇವತಾಪ್ರವಾಹಕ್ಕೆ ನಿತ್ಯತ್ವ ಸಮರ್ಥನೆ*

ದೇವತೆಗಳನ್ನು ಪ್ರತಿಪಾದಿಸುವ ವೇದವು ಪ್ರತಿಕಲ್ಪಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಅಂತಹ ವೇದವನ್ನು ನೋಡಿಯೇ ಅದಕ್ಕನುಸಾರಿಯಾಗಿ ಪರಮಾತ್ಮನು ದೇವತೆಗಳನ್ನು ಸೃಷ್ಟಿಮಾಡುತ್ತಾನೆ. ವಾಚಕವಾದ ವೇದವು ನಿತ್ಯವಾದ್ದರಿಂದ ಆ ವೇದದಿಂದ ಪ್ರತಿಪಾದ್ಯರಾದ ದೇವತೆಗಳೂ ಕೂಡ ಪ್ರತಿಕಲ್ಪದಲ್ಲಿಯೂ ಒಂದೇರೀತಿಯಾಗಿ ಇರುತ್ತಾರೆ. ಇದರಿಂದ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಹೇಳಿದಂತಾಗುತ್ತದೆ.

ಪ್ರತಿಕಲ್ಪದಲ್ಲಿಯೂ ವೇದೋಕ್ತವಾದ ಕರ್ಮವನ್ನು ಅನುಷ್ಠಾನ ಮಾಡಲೇ ಬೇಕು. ಅನುಷ್ಠಾನ ಮಾಡುವಾಗ ಇಂದ್ರಾದಿಗಳನ್ನು ಆಹ್ವಾನ ಮಾಡಬೇಕು. ಆದ್ದರಿಂದ ಪ್ರತಿಕಲ್ಪಗಳಲ್ಲಿಯೂ ಇಂದ್ರಾದಿದೇವತೆಗಳು ಇದ್ದೇ ಇರುತ್ತಾರೆಂದು ನಿಶ್ಚಯವಾಗುತ್ತದೆ. ಕೇವಲ ಯಾವುದಾದರೂ ಒಂದೇ ಕಲ್ಪದಲ್ಲಿ ಇಂದ್ರಾದಿದೇವತೆಗಳನ್ನು ಒಪ್ಪಿ, ಮಹಾಭಾರತಾದಿ ಗ್ರಂಥಗಳಂತೆ ವೇದವೂ ಸಹ ಅತೀತವಿಷಯಕವಾಗಿದೆಯೆಂದು ಹೇಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ದೇವತೆಗಳ ಪ್ರವಾಹವನ್ನು ಅನಾದಿನಿತ್ಯವೆಂದು ಒಪ್ಪಲೇಬೇಕು

*ಐದರಿಂದ ಎಂಟುಸೂತ್ರಗಳ ವಿನ್ಯಾಸ ಶೈಲಿ*

ಪ್ರಥಮ ಸೂತ್ರದಲ್ಲಿ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಹೇಳಲಾಯಿತು. ಮತ್ತು ದೇವತೆಗಳು ಉತ್ಪತ್ತಿವುಳ್ಳವರೆಂದೂ ಕೂಡ ಹೇಳಿದರು. ದೇವತೆಗಳಿಗೆ ಉತ್ಪತ್ತಿಯಿರುವುದಾದರೆ, ಕರ್ಮವಿರೋಧದ ಆಶಂಕೆಯು ಪ್ರಾಪ್ತವಾದರೆ, ಅದನ್ನು ಎರಡನೆಯ ಸೂತ್ರವು ಶಬ್ದದ ಮೂಲಕ ಪರಿಹರಿಸಿತು. ಪುನಃ ದೇವತೆಗಳು ಉತ್ಪತ್ತಿವುಳ್ಳವರಾದರೆ ಶಬ್ದಕ್ಕೆ ಅಪ್ರಾಮಾಣ್ಯದೋಷ ಬರುತ್ತದೆಂಬ ಶಬ್ದವಿರೋಧದೋಷವು ಪ್ರಾಪ್ತವಾದರೆ, ಮೂರನೆಯ ಸೂತ್ರವು ಅದನ್ನು ಪರಿಹಾರ ಮಾಡುತ್ತದೆ. ಅದೇ ಶಬ್ದವಿರೋಧದ ಪರಿಹಾರವಿಷಯದಲ್ಲಿ ನಾಲ್ಕನೆಯ ಸೂತ್ರವು ಅನ್ಯಥಾನುಪಪತ್ತಿಪ್ರಮಾಣವನ್ನು ಸಮರ್ಥನೆ ಮಾಡಿದೆ. ಹೀಗೆ ಮೊದಲ ನಾಲ್ಕು ಸೂತ್ರಗಳು ಧರ್ಮೀಭೂತರಾದ ದೇವತೆಗಳ ಅನಿತ್ಯತ್ವ ಪ್ರಯುಕ್ತವಾದ ವಿರೋಧ ಪರಿಹಾರದಲ್ಲಿ ಏಕಾಭಿಪ್ರಾಯವುಳ್ಳವುಗಳಾಗಿವೆ. ಆದರೆ ಪ್ರಕೃತ ಐದನೆಯ ಸೂತ್ರವು ಧರ್ಮವೆನಿಸಿದ ದೇವತೆಗಳ ರೂಪ, ಆಕಾರ, ಕಾರ್ಯ ಇವುಗಳ ವಿಷಯದಲ್ಲಿ ಬರುವಂತಹ ವಿರೋಧಗಳನ್ನು ಪರಿಹಾರ ಮಾಡುತ್ತಿದೆ. ಮೊದಲು ಧರ್ಮಿಯಲ್ಲಿ ಬರುವಂತಹ ವಿರೋಧವನ್ನು ಪರಿಹಾರ ಮಾಡಿ, ಅನಂತರ ಧರ್ಮದಲ್ಲಿ ಬರುವಂತಹ ವಿರೋಧವನ್ನು ಪರಿಹಾರ ಮಾಡುವುದು ಅತ್ಯಂತ ಸೂಕ್ತವಾಗಿದೆ. ಆದ್ದರಿಂದ 'ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ' ಎಂಬ ಸೂತ್ರವು ಐದನೆಯ ಸ್ಥಾನವನ್ನು ಪಡೆದಿದೆ.

ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಪ್ರಥಮಸೂತ್ರದಲ್ಲಿ ಹೇಳಲಾಯಿತು. ಮಧುವಿದ್ಯೆ ಮೊದಲಾದ ವಿದ್ಯೋಪಾಸನೆಯಿಂದ ಸಿಗುವಂತಹ ಫಲಗಳು ಈಗಾಗಲೇ ದೇವತೆಗಳಿಗೆ ದೊರೆತಿದೆ. ಅಂತಹ

ಫಲವನ್ನು ಪಡೆದಿರುವ ದೇವತೆಗಳಿಗೆ ಪುನಃ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಜೈಮಿನಿ ಋಷಿಗಳು ಹೇಳುತ್ತಾರೆ. ಈ ಆಶಂಕೆಯನ್ನು ಆರನೆಯ ಸೂತ್ರದಲ್ಲಿ ಮಾಡಿದ್ದಾರೆ. ಮತ್ತು ದೇವತೆಗಳ ಜ್ಞಾನದಲ್ಲಿ ಸಕಲವಸ್ತುಗಳು ವಿಷಯವಾಗಿರುವುದರಿಂದ ತತ್ವಜ್ಞಾನವೆಂಬ ಫಲಕ್ಕೋಸ್ಕರವೂ ದೇವತೆಗಳು ವೇದವನ್ನು ಓದಬೇಕಾಗಿಲ್ಲ ಎಂದು ಏಳನೆಯ ಸೂತ್ರದಲ್ಲಿ ಆಶಂಕಿಸಲಾಗಿದೆ. ಈ ಎರಡೂ ಆಶಂಕೆಗಳನ್ನು 'ಭಾವಂ ತು ಬಾದರಾಯಣೋಽಸ್ತಿ ಹಿ' ಎಂಬ ಎಂಟನೆಯ ಸೂತ್ರದಲ್ಲಿ ಪರಿಹಾರ ಮಾಡಿದ್ದಾರೆ. ಅಂದರೆ ವಿದ್ಯೆಯ ಫಲವಾದ ಪದವಿ ಹಾಗೂ ಜ್ಞಾನವನ್ನು ದೇವತೆಗಳು ಹೊಂದಿರಬಹುದು. ಆದರೂ ಸಹ ಫಲವಿಶೇಷತೆಗೋಸ್ಕರ ಮಧ್ವಾದಿವಿದ್ಯೆಗಳಲ್ಲಿ ಅವರಿಗೆ ಅಧಿಕಾರವಿದ್ದೇ ಇರುತ್ತದೆಂಬುದು. ಶ್ರೀ ವೇದವ್ಯಾಸದೇವರ ಅಭಿಪ್ರಾಯ. ಸ್ಕಾಂದ ಪುರಾಣದಲ್ಲಿ ಪರತತ್ವದ ಸೇವೆಯನ್ನು ಶ್ರವಣಾದಿ ಉಪಾಸನೆಗಳನ್ನು ಮಾಡಿದಷ್ಟು ದೇವತೆಗಳಿಗೆ ಸುಖವಿಶೇಷಿತಲಾಭವಿದೆ ಮತ್ತು ಶ್ರೀಹರಿಯನ್ನು ಬಿಟ್ಟು ಉಳಿದೆಲ್ಲರಿಗೂ ಜ್ಞಾನವಿಶೇಷತ ಪ್ರಾಪ್ತಿಯು ಇದ್ದೇ ಇರುತ್ತದೆ ಎಂದು ಹೇಳಲಾಗಿದೆ. ಆದ್ದರಿಂದ ದೇವತೆಗಳಿಗೂ ಸಹ ಫಲ ಮತ್ತು ಯೋಗ್ಯತೆಗಳು ಇರುವುದರಿಂದ ವೇದಗಳ ಉಪಾಸನೆ ಅತ್ಯಂತ ಅನಿವಾರ್ಯವಾಗಿದೆ. ಆದ್ದರಿಂದ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸರ್ವಥಾ ಹೇಳಬಾರದೆಂದು ಸಿದ್ಧವಾಯಿತು.

### *ಶಾಂಕರ ಹಾಗೂ ರಾಮಾನುಜಭಾಷ್ಯದ ಅಧಿಕರಣ ವಿಮರ್ಶೆ*

ಶಾಂಕರಭಾಷ್ಯ ಹಾಗೂ ರಾಮಾನುಜಭಾಷ್ಯ ಎರಡರಲ್ಲಿಯೂ ಒಂದೇ ಬಗೆಯ ಅಧಿಕರಣ ಶರೀರವಿದೆ - ವೇದವು ಮಂತ್ರ, ಅರ್ಥವಾದ, ವಿಧಿ ಎಂದು ಮೂರುಬಗೆಯಲ್ಲಿದೆ. ಮಂತ್ರಭಾಗವು ಅನುಷ್ಠೇಯವಾದ ದ್ರವ್ಯಾದಿಗಳನ್ನು ಪ್ರತಿಪಾದನೆ ಮಾಡಿದರೆ, ಅರ್ಥವಾದವು ಶ್ರುತಿಪರವಾಗಿದೆ. ವಿಧಿಭಾಗವು ಕರ್ಮಪರವಾಗಿದೆ. ಒಟ್ಟಾರೆ ವೇದದಲ್ಲೆಲ್ಲೂ ದೇವತೆಗಳ ಚಿದ್ರೂಪ ಶರೀರದ ವರ್ಣನೆಯಿರುವುದಿಲ್ಲ. ಹಾಗಾಗಿ ದೇವತೆಗಳಿಗೆ ಚಿದ್ರೂಪಶರೀರವೇ ಇರುವುದಿಲ್ಲ. ಮತ್ತೆ ಅರ್ಥವಿಶಿಷ್ಟವಾದ ಶಬ್ದವೇ ದೇವತೆಯೆನ್ನಬೇಕು. ಅಥವಾ ಶಬ್ದವಿಶಿಷ್ಟವಾದ ಅರ್ಥವನ್ನೇ ದೇವತೆಯೆನ್ನಬೇಕು. ಇವೆರಡೂ ಜಡವಾದ್ದರಿಂದ ಜಡವಾದ ದೇವತೆಗೆ ವೇದವನ್ನು ಓದುವಂತಹ ಸಾಮರ್ಥ್ಯವನ್ನು ಹೇಳಲು ಹೇಗೆ ಸಾಧ್ಯ ? ಹಾಗಾಗಿ ಮನುಷ್ಯರು ಮಾತ್ರ ಅಧಿಕಾರಿಗಳು. ಜಡವಾದ ದೇವತೆಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಪೂರ್ವಪಕ್ಷ.

ಮಂತ್ರ ಮೊದಲಾದ ವೇದಭಾಗಗಳಿಂದಲೇ ದೇವತೆಗಳಿಗೆ ಶರೀರವಿದೆಯೆಂದು ತಿಳಿಯುತ್ತಿದೆ. ಅಂತಹ ಚಿದ್ರೂಪರಾದ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವನ್ನು ಹೇಳಬಹುದು ಎಂದು ಸಿದ್ಧಾಂತ.

ಇವರ ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ ಹಿಂದಿನ ಸೂತ್ರದಲ್ಲಿ ಮನಷ್ಯ ಪದವಿದೆ. ಮನುಷ್ಯರಿಗೆ ಸಜಾತೀಯರಾದ ಮತ್ತೊಬ್ಬ ಚೇತನರಿಗೆ ಅಧಿಕಾರವಿದೆಯೋ ಇಲ್ಲವೋ? ಎಂಬ ಸಂಶಯವೇ ಬರುತ್ತದೆ. ಹೊರತು, ಜಡವಾದ ಪದಾರ್ಥಕ್ಕೆ ವೇದವಿದ್ಯಾಧಿಕಾರದ ಸಂಶಯ ಬರುವುದೇ ಇಲ್ಲ. ಆದ್ದರಿಂದ ಜಡಕ್ಕೆ ಅಧಿಕಾರವಿಲ್ಲವೆಂಬ ಪೂರ್ವಪಕ್ಷವು ಅತ್ಯಂತ ಅಸಂಗತವಾಗಿದೆ. ಮತ್ತು ನಾವು ಹೇಳುವಂತೆ ಮಂತ್ರಾದಿಗಳಿಗೆ ಸ್ವಾರ್ಥಪರತ್ವವನ್ನು ಒಪ್ಪಿ, ದೇವತೆಗಳಿಗೆ ಶರೀರಾದಿಗಳನ್ನು ಒಪ್ಪಿಯೇ ಪೂರ್ವಪಕ್ಷ ಮಾಡಲು ಬರುವಾಗ ಸ್ವಾರ್ಥಪರತ್ವಾದಿಗಳನ್ನು ಒಪ್ಪದೇ ಗೌಣಾರ್ಥವನ್ನು ಮಾಡುವ ಮೂಲಕ, ಪೂರ್ವಪಕ್ಷ ಮಾಡುವುದು ಅತ್ಯಂತ ಜಘನ್ಯವಾಗಿದೆ. ಮತ್ತು ಉಪನಿಷತ್ತುಗಳಿಗೆ ಸ್ವಾರ್ಥದಲ್ಲಿ ಪ್ರಾಮಾಣ್ಯವೇ ಇಲ್ಲವೆಂದಾದರೆ, ಬ್ರಹ್ಮನಲ್ಲಿಯೂ ಕೂಡ ಪ್ರಾಮಾಣ್ಯವಿಲ್ಲವೆಂದಂತಾಗುತ್ತದೆ. ಬ್ರಹ್ಮನವಿಷಯದಲ್ಲಿ ಪ್ರಾಮಾಣ್ಯವನ್ನು ಒಪ್ಪುವುದಾದರೆ, ಅದೇ ಉಪನಿಷತ್ತುಗಳಿಂದಲೇ ದೇವತೆಗಳ ಶರೀರವಿದೆಯೆಂಬ ವಿಷಯವೂ ಸಹ ಸಿದ್ಧವಾಗುತ್ತದೆ.

ದೇವತಾದಿಗಳ ಶರೀರವು ಶ್ರುತಿತಾತ್ಪರ್ಯಕ್ಕೆ ವಿಷಯವಾಗದಿದ್ದರೆ, ಬಾಧ್ಯವಾಗದೇ ಪಾರಮಾರ್ಥಿಕವಾಗಬೇಕಾದೀತು. ಒಂದು ವೇಳೆ ಶ್ರುತಿತಾತ್ಪರ್ಯಗೋಚರವಲ್ಲದಿದ್ದರೆ, ವ್ಯಾವಹಾರಿಕ ಸತ್ವವನ್ನೂ ಸಹ ಹೇಳದೇ, ಪ್ರಾತಿಭಾಸಿಕಸತ್ವವನ್ನೇ ಹೇಳಬೇಕಾದೀತು.

ಒಂದು ವೇಳೆ ಶ್ರುತಿ ತಾತ್ಪರ್ಯ ಗೋಚರವಾದರೂ ಸಹ ಪಾರಮಾರ್ಥಿಕವಾಗದಿದ್ದರೆ ಚಿನ್ಮಾತ್ರವೂ ಕೂಡ ಪಾರಮಾರ್ಥಿಕವಾಗದೇ ಬಾಧ್ಯವಾಗಬೇಕಾದೀತು. ಮತ್ತು ಶ್ರುತಿ ತಾತ್ಪರ್ಯಗೋಚರವಾಗದಿದ್ದಾಗ ವ್ಯಾವಹಾರಿಕವಾಗುವುದಾದರೆ, ಯಜಮಾನಕ್ಕೆ ಪ್ರಸ್ತರತ್ವವೂ ಸಹ ಪ್ರಾತಿಭಾಸಿಕವೆಂದಾಗದೇ, ವ್ಯಾವಹಾರಿಕವೆಂದಾಗಬೇಕಾದೀತು.

*ದೇವತೆಗಳಿಗೆ ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂಬ ಅದ್ವೈತಮತ ತಪ್ಪು*

ದೇವತೆಗಳಿಗೆ ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಏಕೆಂದರೆ ಸ್ವತಃ ತಾವೇ ದೇವತೆಗಳಾದ್ದರಿಂದ, ದೇವತೋದ್ದೇಶಕವಾದ ಕರ್ಮದಲ್ಲಿ ಅಧಿಕಾರವನ್ನು ಹೇಳಲು ಹೇಗೆ ಸಾಧ್ಯ ? ಋಷಿಗಳಿಗೂ ಸಹ ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿಲ್ಲ. ಋಷಿಗಳ ವರಣವು ಯಜ್ಞಾದಿಕರ್ಮದಲ್ಲಿ ವಿಹಿತವಾಗಿದೆ. ಸ್ವತಃ ತಾವೇ ಋಷಿಗಳಾದ್ದರಿಂದ ಮತ್ತೊಬ್ಬ ಋಷಿಯ ವರಣವನ್ನು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ದೇವತೆಗಳಾಗಲೀ, ಋಷಿಗಳಿಗಾಗಲೀ, ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಆದರೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳಬಹುದೆಂದು ಅದ್ವೈತಿಗಳ ಎರಡನೆಯ ಸೂತ್ರ ವ್ಯಾಖ್ಯಾನ.

ಇದು ತಪ್ಪು. ಏಕೆಂದರೆ 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂಬ ಪುರುಷಸೂಕ್ತದಲ್ಲಿ ದೇವತೆಗಳು ಯಜ್ಞವನ್ನು ಮಾಡಿದರೆಂಬ ದಾಖಲೆಯಿದೆ. ತೈತ್ತಿರಿಯೋಪನಿಷತ್ತಿನಲ್ಲಿಯೂ 'ದೇವಾ ವೈ ಸತ್ರಮಾಸತ' ಇತ್ಯಾದಿ ಅನೇಕ ವಾಕ್ಯಗಳು ಆಧಾರಗಳಾಗಿವೆ. ಮಹಾಭಾರತದಲ್ಲಿಯೂ ಸಹ ಎಲ್ಲ ದೇವತೆಗಳು ವಿಷ್ಣುವನ್ನು ಕುರಿತು ಹೋಮ ಮಾಡಿದರೆಂಬ ಉಲ್ಲೇಖವಿದೆ. ಮತ್ತು ಶೂದ್ರಾದಿಗಳಿಗೆ ಅಧಿಕಾರದ ನಿಷೇಧವಿದ್ದಂತೆ ದೇವತೆಗಳಿಗೆ ಯಜ್ಞಾದಿಕರ್ಮಗಳ ಅಧಿಕಾರವನ್ನು ಎಲ್ಲಿಯೂ ನಿಷೇಧಿಸಿಲ್ಲ. ಆದ್ದರಿಂದ ದೇವತೆಗಳು ಮಾಡುವ ಯಜ್ಞಾದಿಕರ್ಮಗಳಿಗೆ ವಿಷ್ಣುವೇ ಉದ್ದೇಶ್ಯನಾಗಿರುತ್ತಾನೆ. 'ಮಾಮೇವ ಯಜತಾಂ ಶಕ್ರಃ ಪ್ರಾಪಯಿಷ್ಯಾಮಿ ವಜ್ರಿಣಮ್' ಎಂದು ಮಹಾಭಾರತದಲ್ಲಿ ಹಾಗೆ ಹೇಳಲಾಗಿದೆ. ಮತ್ತು ಅನಾದಿಯಾದ ಸಂಸಾರದಲ್ಲಿ ಮುಂದಿನ-ಮುಂದಿನ ಋಷಿಗಳನ್ನು ಹಿಂದಿನ ಋಷಿಗಳು ವರಣವನ್ನು ಮಾಡಬಹುದು. ಆದ್ದರಿಂದ ಋಷಿಗಳಿಗೂ ಅಧಿಕಾರವನ್ನು ಹೇಳಬಹುದು. ಆದ್ದರಿಂದ ಅದ್ವೈತಿಗಳ ನಿಲುವು ಸರಿಯಿಲ್ಲ.

*ದೇವತೆಗಳಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿದೆ*

ದೇವತೆಗಳಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಒಪ್ಪಬೇಕೋ, ಇಲ್ಲವೋ ಎಂದು ಸಂಶಯ ಬರುತ್ತದೆ. ಏಕೆಂದರೆ ಕರ್ಮದಲ್ಲಿ ಅಧಿಕಾರವನ್ನು ಹೇಳಬೇಕಾದರೆ, ಅಗ್ನಿಯನ್ನು ಆಧಾನ ಮಾಡಬೇಕು. ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಒಪ್ಪಬೇಕೆಂದರೆ ಉಪನಯನಸಂಸ್ಕಾರವಾಗಬೇಕು. ದೇವತೆಗಳಿಗೆ ಯಾವುದೇ ಶ್ರುತಿವಾಕ್ಯಗಳೂ ಕೂಡ ಅಗ್ನ್ಯಾಧಾನವನ್ನು ವಿಧಾನ ಮಾಡಿಲ್ಲ. ಉಪನಯನಸಂಸ್ಕಾರವನ್ನೂ ಕೂಡ ಹೇಳಿಲ್ಲ. ತ್ರೈವರ್ಣಿಕರಿಗಷ್ಟೇ ಅಗ್ನ್ಯಾಧಾನ ಮತ್ತು ಉಪನಯನಸಂಸ್ಕಾರಗಳು ವಿಹಿತವಾಗಿವೆ. ದೇವತೆಗಳು ತ್ರೈವರ್ಣಿಕರಲ್ಲಿ ಸೇರುವುದಿಲ್ಲ. ಆದ್ದರಿಂದ ಇವರಿಗೆ ಯಾಗಾದಿ ಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಆಕ್ಷೇಪ.

ಇದು ಸರಿಯಲ್ಲ. ಏಕೆಂದರೆ 'ದೇವಾ ವಾ ಅಗ್ನಿಮಾದಧತ' ಇತ್ಯಾದಿ ಶ್ರುತಿಯಲ್ಲಿ ಸ್ಪಷ್ಟವಾಗಿ ದೇವತೆಗಳಿಗೂ ಕೂಡ ಅಗ್ನಿಯ ಆಧಾನವನ್ನು ವಿಧಾನ ಮಾಡಲಾಗಿದೆ. ಮತ್ತು 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂಬ ವಾಕ್ಯದಲ್ಲಿ 'ಋಗ್ವೇದಂ ಭಗವೋಽಧ್ಯೇಮಿ' ಇತ್ಯಾದಿ ವಾಕ್ಯದಲ್ಲಿ ಸ್ಪಷ್ಟವಾಗಿ ದೇವತೆಗಳಿಗೂ ಕೂಡ ವೇದಾಧ್ಯಯನವನ್ನು ಹೇಳಲಾಗಿದೆ. ಅಷ್ಟೇ ಅಲ್ಲದೆ 'ಸರ್ವವರ್ಣಾಃ ಸರ್ವಾಶ್ರಮಿಣಃ ಸರ್ವಂ ಹ್ಯೇತೇ ಕರ್ಮ ಕುರ್ವಂತಿ' ಇತ್ಯಾದಿ ಮಾತುಗಳನ್ನು ಗಮನಿಸಿದಾಗ ಸಕಲವರ್ಣಗಳೂ ಸಕಲ ಆಶ್ರಮಗಳು ಎಲ್ಲಾ ದೇವತೆಗಳಿಗೂ ಇರುತ್ತವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ತ್ರೈವರ್ಣಿಕರಲ್ಲವೆಂದು ಹೇಳಲೂ ಕೂಡ ಸಾಧ್ಯವಿಲ್ಲ. ಆದ್ದರಿಂದ ದೇವತೆಗಳಿಗೆ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿದೆ. ಬ್ರಹ್ಮವಿದ್ಯೆಯಲ್ಲೂ ಕೂಡ ಅಧಿಕಾರವಿರುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಮಾತ್ರ ಅಧಿಕಾರವಿದೆ. ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂಬ ಅದ್ವೈತಿಗಳ ಅಭಿಪ್ರಾಯವು ಅತ್ಯಂತ ಅಸಾಧುವಾಗಿದೆ.

### *ಕೆಲವು ಪ್ರಾಣಿಗಳಿಗೂ ವೇದವಿದ್ಯಾಧಿಕಾರವಿದೆ*

ಅದ್ವೈತಿಗಳು ಹಾಗೂ ರಾಮಾನುಜರು ತಿರ್ಯಕ್ಪ್ರಾಣಿಗಳಿಗೆ ಸಾಮರ್ಥ್ಯವಿಲ್ಲದ ಕಾರಣ ವೇದವಿದ್ಯೆಯಲ್ಲಿ ಮತ್ತು ಯಾಗಾದಿಕರ್ಮದಲ್ಲಿ ಅಧಿಕಾರವಿಲ್ಲವೆಂದು ಹೇಳಿದ್ದಾರೆ. ಇದೂ ಸಹ ತಪ್ಪು. ಮಹಾಭಾರತದಲ್ಲಿ

'ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಮ್ ।
ತುಷ್ಟಾವ ಪ್ರಾಂಜಲಿರ್ಭೂತ್ವಾ ಯತ್ತಚ್ಛೃಣು ನರಾಧಿಪ ॥

ಎಲೈ ! ನರಶ್ರೇಷ್ಠನೇ ಪಕ್ಷಿಗಳ ಪವಾಡವನ್ನು ಕೇಳು. ದ್ರೋಣ ಮೊದಲಾದ ಸಹೋದರ ಪಕ್ಷಿಗಳು ಜರಿತಾರಿ ಪಕ್ಷಿಯನ್ನು ಕುರಿತು ಹೇಳಿದ ಮೇಲೆ, ಜರಿತಾರಿ ಪಕ್ಷಿಯು ಅಗ್ನಿಯನ್ನು ಸೂಕ್ತದ ಮೂಲಕ ಕೈಮುಗಿದು ಸ್ತೋತ್ರ ಮಾಡುತ್ತದೆ.

ಈ ಶ್ಲೋಕದಿಂದ ಜರಿತಾರಿ, ಸಾರಿಸೃಕ್ವ, ಸ್ತಂಬಮಿತ್ರ, ದ್ರೋಣ ಎಂಬ ನಾಲ್ಕು ಬಗೆಯ ಪಕ್ಷಿಗಳು 'ಅಯಮಗ್ನೇ ಜರಿತಾ' ಎಂಬ ಆಗ್ನೇಯಸೂಕ್ತದಿಂದ, ಅಗ್ನಿಯನ್ನು ಸ್ತೋತ್ರಮಾಡುತ್ತವೆಂಬುದಾಗಿ ತಿರ್ಯಗ್ಪ್ರಾಣಿಗಳಿಗೂ ಕೂಡ ವೇದವಿದ್ಯಾಧಿಕಾರವನ್ನು ಸಮರ್ಥಿಸಲಾಗಿದೆ. ಈ ಹಕ್ಕಿಗಳನ್ನು ಋಷಿಗಳೆಂದು ಹೇಳಿದ್ದರಿಂದ ಮಂತ್ರದ್ರಷ್ಟಾರರಾಗಿವೆ. ಮತ್ತು ರಾಮಾಯಣದಲ್ಲಿ ಹನುಮಂತ ಮೊದಲಾದ ಕಪಿಗಳಿಗೆ ವೇದಜ್ಞಾನವಿದೆಯೆಂದು ವರ್ಣಿಸಲಾಗಿದೆ. ಆದ್ದರಿಂದ ಕೆಲವು ವಿಶಿಷ್ಟ ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಒಪ್ಪಬೇಕು. ಶೂದ್ರಾದಿಗಳಿಗೆ ಹೇಗೆ ನಿಷೇಧ ವಾಕ್ಯವಿದೆಯೋ, ಅದರಂತೆ ತಿರ್ಯಕ್ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದು ನಿಷೇಧವಾಕ್ಯವಿರುವುದಿಲ್ಲ. ಆದ್ದರಿಂದ ತಿರ್ಯಕ್ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂಬ ಅದ್ವೈತಿಗಳ ನಿಲುವು ಸರಿಯಿಲ್ಲ. ವೇದವಿದ್ಯಾಧಿಕಾರವಿರುವುದರಿಂದ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿದೆಯೆಂದು ಸ್ವತಃಸಿದ್ಧವಾಗುತ್ತದೆ.

### *ಅದ್ವೈತಿಗಳ ಮತ್ತು ರಾಮಾನುಜರ ಎರಡನೆಯ ಸೂತ್ರ ವಿಮರ್ಶೆ*

ದೇವತೆಗಳು ಯಜ್ಞದಲ್ಲಿ ನೀಡುವಂತಹ ಹವಿಸ್ಸನ್ನು ಸ್ವೀಕರಿಸುತ್ತಾರೆ. ಅವರಿಗೆ ಶರೀರವಿರುವುದಾದರೆ, ಒಂದೇ ಸಮಯದಲ್ಲಿ ಅನೇಕರು ಮಾಡುವಂತಹ ಯಾಗಗಳಲ್ಲಿ ಅವರ ಉಪಸ್ಥಿತಿಯನ್ನು ಹೇಳಲು ಸಾಧ್ಯವಿರುವುದಿಲ್ಲ. ಆದ್ದರಿಂದ ಕರ್ಮದಲ್ಲಿ ದೇವತೆಗಳ ಉಪಸ್ಥಿತಿಯು ವಿರುದ್ಧವಾಗುತ್ತದಲ್ಲವೇ? ಎಂದು ಪ್ರಶ್ನಿಸಿಕೊಂಡು ದೇವತೆಯೊಬ್ಬನೇ ಆಗಿದ್ದರೂ ಅನೇಕ ರೂಪಗಳನ್ನು ತಾಳುವ ಸಾಮರ್ಥ್ಯವಿರುತ್ತದೆಂದು ಶ್ರುತಿ-ಸ್ಮೃತಿಗಳಲ್ಲಿ ಹೇಳಲಾಗಿದೆ. ಅಂದರೆ ಒಬ್ಬನೇ ಇಂದ್ರನನ್ನು ಉದ್ದೇಶಿಸಿ, ಅನೇಕರು ಹವಿಸ್ಸನ್ನು ನೀಡಬಹುದೆಂದು ವ್ಯಾಖ್ಯಾನ ಮಾಡುತ್ತಾರೆ.

ಇದು ತಪ್ಪು. ಏಕೆಂದರೆ ದೇವತೆಗಳಿಗೆ ಶರೀರವಿದ್ದರೆ ಅನೇಕ ಯಜ್ಞಗಳಲ್ಲಿ ಉಪಸ್ಥಿತಿಯು ಸಾಧ್ಯವಾಗುವುದಿಲ್ಲವೆಂಬ ಪೂರ್ವಪಕ್ಷವೇ ತಪ್ಪು. ದೇವತೆಗಳಿಗೆ ಶರೀರವಿದ್ದರೂ ಕೂಡ ಯಜ್ಞಮಂಟಪವನ್ನು ಕುರಿತು ಅವರು ಹೋಗಬೇಕಾಗಿಲ್ಲ. ತಮ್ಮ ಸ್ಥಾನದಲ್ಲೇ ಕುಳಿತು ಹವಿಸ್ಸಿನ ಭಾಗವನ್ನು ಸ್ವೀಕರಿಸಲು ಸಮರ್ಥರಾಗಿರುತ್ತಾರೆ. ಇನ್ನು 'ಇಂದ್ರಾಗಚ್ಛ' ಎಂಬ ಮಂತ್ರದಲ್ಲಿ ದೇವತೆಗಳ ಆಹ್ವಾನವಿರುವುದರಿಂದ, ಯಜ್ಞಮಂಟಪಕ್ಕೆ ಅವರು ಹೋಗಬೇಕಲ್ಲವೇ? ಎಂದರೆ ಇದರಿಂದಲೇ ಅವರಿಗೆ ಶರೀರವು ಸಿದ್ಧವಾಗುತ್ತದೆ. ಹೀಗಿರುವಾಗ ಪೂರ್ವಪಕ್ಷಕ್ಕೆ ಅವಕಾಶವಿಲ್ಲದಂತಾಯಿತು. ಇದರಂತೆ ಅದ್ವೈತಿಗಳ ಹಾಗೂ ಉಳಿದ ಸೂತ್ರಗಳ ವ್ಯಾಖ್ಯಾನವನ್ನು ಸ್ವತಃ ಶಿಷ್ಯಂದಿರೇ ವಿಮರ್ಶಿಸಬೇಕು.

# ಅಪಶೂದ್ರಾಧಿಕರಣ

### *ಸಂಗತಿ ಮತ್ತು ಫಲವಿಚಾರ*

ಹಿಂದಿನ ಅಧಿಕರಣದಲ್ಲಿ ಅರ್ಥಿತ್ವ, ಸಾಮರ್ಥ್ಯ, ವಿದ್ವತ್ವ ಎಂಬ ಅಧಿಕಾರ ಪ್ರಯೋಜಕವಾದ ಧರ್ಮಗಳು ದೇವತೆಗಳಲ್ಲಿರುವುದರಿಂದ, ವೇದವಿದ್ಯಾಧಿಕಾರವನ್ನು ಅವರು ಹೊಂದಿರುತ್ತಾರೆಂದು ಸಿದ್ಧಾಂತ ಮಾಡಲಾಯಿತು. ಹಾಗಾದರೆ ಈ ಮೂರು ಧರ್ಮಗಳು ಶೂದ್ರರು ಮತ್ತು ಸ್ತ್ರೀಯರಲ್ಲಿಯೂ ಸಹ ಇರುವುದರಿಂದ, ಅವರೂ ಸಹ ವೇದವಿದ್ಯೆಯಲ್ಲಿ ಅಧಿಕಾರಿಗಳಾಗುತ್ತಾರಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಈ ಅಧಿಕರಣವು ಹೊರಟಿದೆ. ಆದ್ದರಿಂದ ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಬರುವಂತಹ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಿರುವುದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು.

'ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್' ಎಂಬ ವಾಮನಾಧಿಕರಣದ ಕೊನೆಯ ಸೂತ್ರದಲ್ಲಿ ಮನುಷ್ಯರಿಗೆ ವೇದಾಧಿಕಾರವಿದೆಯೆಂದು ಸಮರ್ಥಿಸಲಾಯಿತು. ಶೂದ್ರರೂ ಕೂಡ ಮನುಷ್ಯರೇ ಆಗಿರುವುದರಿಂದ, ಅವರಿಗೂ ಕೂಡ ವೇದಾಧಿಕಾರವನ್ನು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಶೂದ್ರರಿಗೆ ಅಧಿಕಾರವಿದೆಯೆನ್ನಲು ಪೌತ್ರಾಯಣ ಶ್ರುತಿಯನ್ನು ಆಧಾರವನ್ನಾಗಿ ನೀಡಬೇಕು. ಆದರೆ ಶ್ರುತಿಯ ಬಲದಿಂದ ಶೂದ್ರರಿಗೆ ಅಧಿಕಾರವಿಲ್ಲವೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ, 'ಮನುಷ್ಯಾಧಿಕಾರತ್ವಾತ್' ಎಂಬ ಪದಕ್ಕೆ ಶೂದ್ರರನ್ನು ಬಿಟ್ಟು ಉಳಿದ ಮನುಷ್ಯರು ಮಾತ್ರ ವೇದವಿದ್ಯೆಯಲ್ಲಿ ಅಧಿಕಾರವನ್ನು ಪಡೆದಿರುತ್ತಾರೆ ಎಂದರ್ಥ. ಹೀಗೆ ವಾಮನಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವುದೇ ಈ ಅಧಿಕರಣದ ಫಲ.

ವಾಸ್ತವಿಕವಾಗಿ ಜಿಜ್ಞಾಸಾಧಿಕರಣದ 'ಅಥ' ಶಬ್ದದಿಂದ ತ್ರೈವರ್ಣಿಕರಿಗೆ ಮಾತ್ರ ವೇದಾಧಿಕಾರವಿದೆಯೆಂದು ಸೂಚಿತವಾಗಿದೆ. ಅದನ್ನೂ ಕೂಡ ನೇರವಾಗಿಯೇ ಆಕ್ಷೇಪ ಮಾಡಬಹುದು. ಆದರೆ ಹತ್ತಿರದಲ್ಲೇ ಇರುವ 'ಮನುಷ್ಯಾಧಿ ಕಾರತ್ವಾತ್' ಎಂಬುದನ್ನೇ ಆಕ್ಷೇಪ ಮಾಡಲು ಬರುವಾಗ ದೂರದಲ್ಲಿರುವ ಬುದ್ಧಿಯಲ್ಲಿ ಉಪಸ್ಥಿತವಾಗದ, ಜಿಜ್ಞಾಸಾಧಿ ಕರಣದಲ್ಲಿ 'ಅಥ' ಶಬ್ದದಿಂದ ಸೂಚಿತವಾದ ಅಧಿಕಾರವನ್ನು ಆಕ್ಷೇಪ ಮಾಡುವುದು ಯುಕ್ತವಾಗುವುದಿಲ್ಲ. ಹಾಗಾಗಿ ವಾಮನಾಧಿಕರಣದ ಸಿದ್ಧಾಂತದ ಆಕ್ಷೇಪವೇ ಈ ಅಧಿಕರಣದ ಫಲವಾಗಿದೆ.

*ಪರಿಪೂರ್ಣಚಂದ್ರಿಕಾ*

*ಸಂಶಯ ಕೋಟಿಗಳು*

ಛಾಂದೋಗ್ಯದ ನಾಲ್ಕನೇ ಅಧ್ಯಾಯದ ಸಂವರ್ಗ ಪ್ರಕರಣದಲ್ಲಿ ಹೀಗೊಂದು ಕಥೆಯಿದೆ - ಪೌತ್ರಾಯಣನೆಂಬ ಒಬ್ಬ ರಾಜನಿದ್ದನು, ಮಂಚದ ಮೇಲೆ ಮಲಗಿದ್ದಾಗ ಒಂದು ರಾತ್ರಿ ತನ್ನ ಪ್ರಾಸಾದದ ಮೇಲ್ಭಾಗದ ಬಯಲಿನಲ್ಲಿ ಮಂಚದ ಮೇಲೆ ಮಲಗಿದ್ದನು. ಅವನ ಮೇಲೆ ಆಕಾಶದಲ್ಲಿ ಹಂಸಪಕ್ಷಿಗಳು ಹಾರಿಹೋದವು. ಎರಡು ಹಂಸಪಕ್ಷಿಗಳಲ್ಲಿ ಹಿಂದಿರುವ ಹಂಸಪಕ್ಷಿಯು ಮುಂದಿರುವ ಹಂಸ ಪಕ್ಷಿಯನ್ನು ಉದ್ದೇಶಿಸಿ, ಹೀಗೆ ಮಾತನಾಡಿತು - 'ಎಲೈ ! ಮಂದನೇ ಪೌತ್ರಾಯಣನ ಬ್ರಹ್ಮವರ್ಚಸ್ಸು ಅತ್ಯದ್ಭುತವಾಗಿದೆ. ಅದು ತಗಲುವಂತೆ ಅವನ ಮೇಲೆ ಹಾರಬೇಡ, ಸುಟ್ಟುಹೋಗುತ್ತಿ' ಎಂದು ಎಚ್ಚರಿಸಿತು. ಅದಕ್ಕೆ ಪ್ರತ್ಯುತ್ತರವಾಗಿ ಮುಂದಿರುವ ಹಂಸ ಪಕ್ಷಿಯು ಹೇಳಿತು. ' ಎಲೈ ! ಹಂಸವೇ? ಗಾಡಿಯ ಕೆಳಗಿರುವ ಅವಧೂತ ರೈಕ್ವಮುನಿಯ ಬಗ್ಗೆ ಹೇಳುವಂತೆ ಯಾರನ್ನೂ ಕುರಿತು ಮಾತನಾಡುತ್ತಿದ್ದೀಯಾ? ಅವನ ಬ್ರಹ್ಮವರ್ಚಸ್ಸಿನ ಮುಂದೆ ಇವನದ್ದೇನು?' ಎಂದು ಪೌತ್ರಾಯಣನ ಬಗ್ಗೆ ಅನಾದರವನ್ನು ತೋರ್ಪಡಿಸಿತು.

ಈ ತಿರಸ್ಕಾರದ ಮಾತನ್ನು ಕೇಳಿದ ರಾಜನು ಎದ್ದಕೂಡಲೇ ಬಹಳ ದುಃಖದಿಂದ ತನ್ನ ಸಾರಥಿಯನ್ನು ಕರೆದು 'ರೈಕ್ವಮುನಿಯನ್ನು ಹುಡುಕಿಕೊಂಡು ಬಾ' ಎಂದು ಆದೇಶ ಮಾಡಿದನು. ರೈಕ್ವಮುನಿಯನ್ನು ಹುಡುಕಲು ಸಾರಥಿಯು ಹೊರಟನು. ಎಲ್ಲೆಡೆ ಹುಡುಕಿ ಅವನು ಸಿಗಲಿಲ್ಲವೆಂದು ರಾಜನ ಬಳಿ ಹೇಳಿದನು. ಪುನಃ ರಾಜನು ರೈಕ್ವನ ಗುರುತನ್ನು ಹೇಳಿ ಕಳುಹಿಸಿದನು. ಅನಂತರ ಸಾರಥಿಯು ರೈಕ್ವಮುನಿಯನ್ನು ಹುಡುಕಿಕೊಂಡು ಬಂದು, ರೈಕ್ವನಿರುವ ಸ್ಥಳವನ್ನು ತಿಳಿಸಿದನು. ಕೂಡಲೇ ರಾಜನು ಆರುನೂರು ಗೋವುಗಳನ್ನು, ಮುತ್ತಿನಹಾರವನ್ನು, ರಥವನ್ನು ತೆಗೆದುಕೊಂಡು ರೈಕ್ವನ ಮುಂದೆ ನಡೆದನು. ಗುರುದಕ್ಷಿಣೆಯಾಗಿ ಅವುಗಳನ್ನು ತಾವು ಸ್ವೀಕರಿಸಿ, ನನಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿದನು. ರೈಕ್ವಮುನಿಯು ರಾಜನನ್ನು ಕುರಿತು, 'ಎಲೈ ! ಶೂದ್ರನೇ ಈ ಹಾರ, ರಥ, ಗೋವುಗಳು ಎಲ್ಲವೂ ನಿನಗೇ ಇರಲಿ. ನನಗೆ ಅದರಿಂದೇನು ಉಪಯೋಗ?' ಎಂದು ಹೇಳಿದನು. ಮತ್ತಷ್ಟು ಗುರುಕಾಣಿಕೆಯನ್ನು ರಾಜನು ವಿನಯದಿಂದ ಸಮರ್ಪಿಸಿ, ಸಾಂತ್ವನಗೊಳಿಸಿದನು. ರೈಕ್ವಮುನಿಯು ರಾಜನ ಮೇಲೆ ಕರುಣೆದೋರಿ, ಸಂವರ್ಗವಿದ್ಯೆಯನ್ನು ಉಪದೇಶ ಮಾಡಿದನು.

ಈ ಆಖ್ಯಾಯಿಕೆಯಲ್ಲಿ 'ಅಹಹಾರೇತ್ವ ಶೂದ್ರ' ಎಂಬ ಮಾತು ಕೇಳಿಸುತ್ತಿದೆ. 'ಶೂದ್ರ' ಎಂದು ಸಂಬೋಧನೆ ಮಾಡಿದ್ದರಿಂದ ಪೌತ್ರಾಯಣನು ಶೂದ್ರನೇ ಆಗಿದ್ದಾನೆ. ಅಂತಹ ಪೌತ್ರಾಯಣನಿಗೆ ಸಂವರ್ಗ ವಿದ್ಯೆಯನ್ನು ಉಪದೇಶ ಮಾಡಿದ ಕಾರಣ ಶೂದ್ರರಿಗೂ ವೇದವಿದ್ಯಾಧಿಕಾರವಿದೆಯೆಂದು ಪೂರ್ವಪಕ್ಷದಲ್ಲಿ ಹೇಳಲಾಗುತ್ತದೆ.

ತ್ರೈವರ್ಣಿಕರಿಗಿಂತ ಬೇರೆಯವರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಪೌತ್ರಾಯಣನು ಕ್ಷತ್ರಿಯನೇ ಹೊರತು, ಶೂದ್ರನಲ್ಲ. ರೈಕ್ವನು ಶೂದ್ರನೆಂಬ ಜಾತಿನಿಮಿತ್ತವೆಂಬ ಶೂದ್ರನೆಂದು ಕರೆದಿಲ್ಲ ಹೊರತಾಗಿ, 'ಶುಚಾದ್ರವಣಂ' ಶೋಕದಿಂದ ಓಡಿಬಂದಿದ್ದೀಯಾ ಎಂಬರ್ಥದಲ್ಲಿ ಶೂದ್ರನೆಂದು ಸಂಬೋಧನೆ ಮಾಡಿದ್ದಾನೆ ಆದ್ದರಿಂದ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಿದ್ಧಾಂತ.

ಪೂರ್ವಪಕ್ಷದ ಫಲ - ಮುಂದೆ ಪೂರ್ವಪಕ್ಷದಲ್ಲಿ ಹೇಳುವ ಪ್ರಕಾರ ಶೂದ್ರನಿಗೂ ವೇದಾಧ್ಯಯನವು ಇರುವುದಾದರೆ, 'ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ' ಎಂಬ ಸ್ಮೃತಿಯು ಹೇಳಿದ ವೇದದಿಂದ ಅವಿನಾಭೂತವಾದ ರಥವು ಶೂದ್ರನಿಗೆ ಯುಕ್ತವಾಗುತ್ತದೆ. ಅಂದರೆ ವೇದವಿದ್ದಲ್ಲಿ ರಥವಿರುತ್ತದೆ. ವೇದವಿಲ್ಲದಿದ್ದರೆ ರಥವು ಇರುವುದಿಲ್ಲವೆಂದು ಸ್ಮೃತಿಯು ಹೇಳುತ್ತಿದೆ. ಶೂದ್ರನಿಗೆ ವಿಶಿಷ್ಟಬುದ್ಧ್ಯಾದಿಗಳಿರುವ ಕಾರಣ ವೇದವಿದೆಯೆಂದಂತಾಯಿತು. ಆದ್ದರಿಂದ ರಥಸಂಬಂಧವೂ ಕೂಡ ಶೂದ್ರನಿಗೆ ಯುಕ್ತವಾಗುತ್ತದೆ. ಆವಾಗ

ರಥಸಂಬಂಧವೆಂಬ ಬಾಧಕವಿಲ್ಲದ ಕಾರಣ ತ್ರೈವರ್ಣಿಕನಲ್ಲವೆಂದು ಹೇಳಲಾಗದು. ಆದ್ದರಿಂದ ರೂಢಿಯ ಬಲದಿಂದ ಶೂದ್ರಶಬ್ದವು ಜಾತಿಪರವೇ ಆಗುತ್ತದೆ. ಆದ್ದರಿಂದ ಶೂದ್ರಾದಿಗಳಿಗೂ ವೇದಾಧಿಕಾರವಿದೆಯೆಂದು ಸಿದ್ಧವಾಗುತ್ತದೆ. .

ಸಿದ್ಧಾಂತದ ಫಲ – ಒಂದು ವೇಳೆ ಸಿದ್ಧಾಂತದಲ್ಲಿ ಹೇಳುವಂತೆ ಶೂದ್ರನಿಗೆ ವೇದಾಧಿ- ಕಾರವಿಲ್ಲವೆಂದಾದರೆ, ವೇದದಿಂದ ಅವಿನಾಭೂತವಾದ ರಥದ ಸಂಬಂಧವೂ ಕೂಡ ಯುಕ್ತವಾಗುವುದಿಲ್ಲ. ಆವಾಗ ರಥಸಂಬಂಧವೆಂಬ ಬಾಧಕವಿರುವ ಕಾರಣದಿಂದಲೇ ರೂಢಿಯನ್ನು ತ್ಯಾಗ ಮಾಡಬೇಕು, ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಆವಾಗ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ಫಲಫಲಿಭಾವವು ಸ್ಪಷ್ಟವಾಗಿದೆ.

### *ಸ್ತ್ರೀ, ಶೂದ್ರ, ಬ್ರಹ್ಮಬಂಧುಗಳಿಗೂ ಸಹ ವೇದವಿದ್ಯಾಧಿಕಾರವಿದೆಯೆಂದು ಪೂರ್ವಪಕ್ಷ*

ವೇದವನ್ನು ಅಧ್ಯಯನ ಮಾಡಲು ಅರ್ಥಿತ್ವ, ಸಾಮರ್ಥ್ಯ, ವೈದುಷ್ಯಗಳಿರಬೇಕು. ತ್ರೈವರ್ಣಿಕರಲ್ಲಿ ಈ ಧರ್ಮವಿರುವಂತೆ, ಶೂದ್ರರಲ್ಲೂ ಇರುತ್ತದೆ. ಆದ್ದರಿಂದ ಸ್ತ್ರೀಯರು ಶೂದ್ರರು ಬ್ರಹ್ಮಬಂಧುಗಳು ಇವರಿಗೂ ಕೂಡ ವೇದವಿದ್ಯಾಧಿಕಾರವನ್ನು ಹೇಳಬಹುದು.

ಇವರಿಗೆ ಉಪನಯನ ಸಂಸ್ಕಾರವಿಲ್ಲದ ಕಾರಣ ವೇದಾಧ್ಯಯನವನ್ನು ಹೇಗೆ ಹೇಳುವುದು? ಎಂಬ ಗೊಂದಲಕ್ಕೆ ಅವಕಾಶವಿಲ್ಲ. ಏಕೆಂದರೆ ಸಂವರ್ಗವಿದ್ಯಾ ಪ್ರಕರಣದಲ್ಲಿ ಶೂದ್ರನಾದ ಪೌತ್ರಾಯಣನಿಗೆ ರೈಕ್ವಮುನಿಗಳು 'ಅಹಹಾರೇತ್ವ ಶೂದ್ರ' ಎಲೈ ! ಶೂದ್ರನೇ ಎಂದು ಸಂಬೋಧನೆ ಮಾಡಿ, ಸಂವರ್ಗ ವಿದ್ಯೆಯನ್ನು ಉಪದೇಶ ಮಾಡಿರುತ್ತಾರೆ. ಅಷ್ಟೇ ಅಲ್ಲದೆ, ಮಹಾಭಾರತಾದಿಗಳಲ್ಲಿ ಹೇಳುವಂತೆ ಶೂದ್ರನಾದ ವಿದುರನಿಗೆ, ಮಾಂಸ ಮಾರಾಟ ಮಾಡುವ ಧರ್ಮವ್ಯಾಧನಿಗೆ ವೇದಾರ್ಥ ತತ್ವಜ್ಞಾನವಿರುವುದನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಹೀಗೆ ಕೆಲವು ಮಂದಿ ಶೂದ್ರರಿಗೆ ವೇದಾರ್ಥ ತತ್ವಜ್ಞಾನವಿರುವುದರಿಂದ ಅದಕ್ಕೆ ಕಾರಣವಾದ ಉಪನಯನ ಸಂಸ್ಕಾರವೂ ಸಹ ಅವರಿಗೆ ಆಗಿರುತ್ತದೆಂದು ಅನ್ಯಥಾನುಪಪತ್ತಿ ಪ್ರಮಾಣದಿಂದ ಸಾಧಿಸಬಹುದು.

ಅಥವಾ ಶೂದ್ರಾದಿಗಳಿಗೆ ಉಪನಯನಸಂಸ್ಕಾರವೂ ಬೇಡ, ವೇದಾಧ್ಯಯನವೂ ಬೇಡ? ಆದರೂ ವೇದಾರ್ಥ ತತ್ವಜ್ಞಾನವು ಮತ್ತೊಬ್ಬರ ಅಧ್ಯಯದಿಂದ ಅಥವಾ ಲಿಖಿತವಾದ ಪುಸ್ತಕಗಳ ಅಧ್ಯಯನದಿಂದ ಹೊಂದಬಹುದು. ಹಾಗಾಗಿ ಸ್ತ್ರೀ ಶೂದ್ರ, ಬ್ರಹ್ಮಬಂಧುಗಳಿಗೂ ವೇದಾಧಿಕಾರವಿರುತ್ತದೆ. ಪೌತ್ರಾಯಣರಾಜನು ಸಂಬೋಧನೆ ಮಾಡಿರುವ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸುವ ಅವಶ್ಯಕತೆಯಿಲ್ಲ. ಪ್ರಬಲವಾದ ರೂಢ್ಯರ್ಥವನ್ನೇ ಸ್ವೀಕರಿಸಲು ಬರುವಾಗ ಯೌಗಿಕಾರ್ಥವನ್ನು ಸ್ವೀಕರಿಸಬಾರದೆಂದು ಪೂರ್ವಮೀಮಾಂಸೆಯ ರಥಕಾರಾಧಿಕರಣವು ಸಾಧಿಸಿದೆ. ಇಷ್ಟು ಪೂರ್ವಪಕ್ಷ.

### *ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಿದ್ಧಾಂತ*

'ಅಹಹಾರೇತ್ವಶೂದ್ರ' ಎಂಬ ಸಂವರ್ಗ ಪ್ರಕರಣದಲ್ಲಿ ಬರುವಂತಹ 'ಶೂದ್ರ' ಶಬ್ದಕ್ಕೆ ಶೂದ್ರಜಾತಿಯವನು ಎಂಬರ್ಥವೇ ಅಲ್ಲ. ಹಾಗಾಗಿದ್ದಲ್ಲಿ, ಶೂದ್ರನಿಗೂ ವೇದಾಧಿಕಾರವನ್ನು ಊಹಿಸಬಹುದಿತ್ತು ಹೊರತಾಗಿ ದುಃಖದಿಂದ ಓಡಿಬಂದವನು ಎಂಬ ಕಾರಣದಿಂದ ಪೌತ್ರಾಯಣನನ್ನು ಕುರಿತು, ಮುನಿಗಳಾದ ರೈಕ್ವರು 'ಎಲೈ ! ಶೂದ್ರನೇ' ಎಂದು ಸಂಬೋಧನೆ ಮಾಡಿದ್ದಾರೆ. 'ಶೂದ್ರ' ಎಂದು ಸಂಬೋಧನೆ ಮಾಡಿದ ಮಾತ್ರಕ್ಕೆ ಶೂದ್ರಜಾತಿಯವನೇ ಆಗಿರಬೇಕೆಂದೇನು ನಿಯಮವಿಲ್ಲ.

'ಶೂದ್ರ' ಶಬ್ದಕ್ಕೆ ಶೂದ್ರಜಾತಿಯೆಂಬ ರೂಢ್ಯರ್ಥವನ್ನು ವಿವಕ್ಷಿಸಬೇಕು. ಏಕೆಂದರೆ ಯೋಗಕ್ಕಿಂತಲೂ ರೂಢಿಯು ಪ್ರಬಲವಾಗಿರುತ್ತದೆಂದು ಹಿಂದೆ ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದನು. ಇದು ಸರಿಯಲ್ಲ.

ಬಾಧಕವಿಲ್ಲದಿದ್ದಾಗ ಮಾತ್ರ ರೂಢ್ಯರ್ಥವನ್ನು ಸ್ವೀಕರಿಸಬೇಕು. ಆದ್ದರಿಂದಲೇ ಪೂರ್ವಮೀಮಾಂಸೆಯಲ್ಲಿ 'ರಥಕಾರ' ಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಲಾಗಿದೆ. ಆದರೆ ಪ್ರಕೃತ ರೂಢ್ಯರ್ಥವನ್ನು ಸ್ವೀಕರಿಸಲು ರಥ ಸಂಬಂಧ ಮೊದಲಾದ ಬಾಧಕಗಳು ಇರುತ್ತವೆ. ಹಾಗಾಗಿ ಅನಿವಾರ್ಯವಾಗಿ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನೇ ಸ್ವೀಕರಿಸುವುದು ಉಚಿತ.

ಮತ್ತು 'ಹಾರೇತ್ವಾ ತವೈವ' ಎಂಬ ಶ್ರುತಿಯು ಕ್ಷತ್ರಿಯತ್ವವನ್ನು ಸಾಧಿಸುವ ವಿಷಯದಲ್ಲಿ ಲಿಂಗರೂಪವಾಗಿದೆ. ಆದರೆ ರಥಸಂಬಂಧ ಎಂಬರ್ಥದಲ್ಲಿ ಶ್ರುತಿರೂಪಪ್ರಮಾಣವೇ ಆಗಿದೆ. ಹಾಗಾಗಿ ಶೂದ್ರಶಬ್ದವು ಮಾತ್ರ ಶೂದ್ರಜಾತಿಯೆಂಬರ್ಥದಲ್ಲಿ ಶ್ರುತಿರೂಪವಾದ ಪ್ರಮಾಣವಾಗಿದೆಯೆಂದು ವಾದಿಸಲು ಪೂರ್ವಪಕ್ಷಿಗೆ ಸಾಧ್ಯವಿಲ್ಲ. ಮತ್ತು 'ಹಾರೇತ್ವಾ ತವೈವ' ಎಂಬ ಶ್ರುತಿಯ ಹಿಂದಿನ-ಮುಂದಿನ ಪ್ರಕರಣಗಳನ್ನು ಗಮನಿಸಿದಾಗ ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದು ಸ್ಪಷ್ಟವಾಗುತ್ತದೆ. ರೈಕ್ವಮುನಿಗಳು ವಾಸ ಮಾಡುವ ಗ್ರಾಮವನ್ನೇ ದಾನ ಮಾಡುತ್ತೇನೆಂದು ಪೌತ್ರಾಯಣನು ಹೇಳುತ್ತಾನೆ. ಬರುವವರಿಗೆಲ್ಲಾ ಅನ್ನದಾನವನ್ನು ಮಾಡುತ್ತೇನೆಂದೆಲ್ಲಾ ಪೌತ್ರಾಯಣನು ರೈಕ್ವಮುನಿಗಳ ಬಳಿ ವಿನಂತಿಸಿದ್ದಾನೆ. ಇವುಗಳನ್ನು ಗಮನಿಸಿದಾಗ ಶೂದ್ರನಾಗಲು ಸಾಧ್ಯವೇ ಇರುವುದಿಲ್ಲ.

ಬೇಡಜಾತಿಯವನಿಗೆ ವೇದಾಧಿಕಾರವಿಲ್ಲದಿದ್ದರೂ 'ಸ್ಥಪತೀಷ್ಟಿ' ಎಂಬ ಯಾಗವಿಶೇಷದಲ್ಲಿ ಮಾತ್ರ ಅಧಿಕಾರವನ್ನು ಹೇಳುವಂತೆ ಪೌತ್ರಾಯಣನು ಶೂದ್ರನಾದ್ದರಿಂದ ಸಮಗ್ರ ವೇದಾಧ್ಯಯನದಲ್ಲಿ ಅಧಿಕಾರವಿಲ್ಲದಿದ್ದರೂ ಸಂವರ್ಗಪ್ರಕರಣದಲ್ಲಿ ಮಾತ್ರ ಅಧಿಕಾರವನ್ನು ಹೇಳಬಹುದಲ್ಲವೇ? ಎಂದು ಪೂರ್ವಪಕ್ಷಿಯು ಆಶಂಕಿಸಬಹುದು. ಆದರೆ ಯಾವುದೇ ವೇದವಿದ್ಯೆಯನ್ನು ಓದಬೇಕಾದರೂ ರಥಸಂಬಂಧವು ಇರಲೇಬೇಕು. ರಥಸಂಬಂಧವಿರುವವನಿಗೆ ಮಾತ್ರ ವೇದಾಧಿಕಾರವನ್ನು ಶ್ರುತಿಯು ಹೇಳಿದೆ. ಪ್ರಕೃತ ಪೌತ್ರಾಯಣನಿಗೆ ರಥದ ಸಂಬಂಧವಿರುವ ಪ್ರಯುಕ್ತ ವೇದಾಧಿಕಾರವಿರುವುದು ನಿಶ್ಚಿತವಾಗಿದೆ. ವೇದಾಧಿಕಾರವು ಯಾರಿಗೆ ಇರುತ್ತದೋ, ಅವರಿಗೆ ಮಾತ್ರ ರಥದಲ್ಲಿ ಕುಳಿತುಕೊಳ್ಳುವ ಅರ್ಹತೆಯಿರುತ್ತದೆ. ಆದ್ದರಿಂದಲೇ ಒಂದು ವೇಳೆ ಶೂದ್ರಾದಿಗಳು ಯುದ್ಧದಲ್ಲಿ ಪಾಲ್ಗೊಂಡರೂ ಅವರು ಕೇವಲ ಕಾಲಾಳುಗಳಾಗಿ ಯುದ್ಧ ಮಾಡಬೇಕೇ ಹೊರತು, ರಥಾರೂಢರಾಗಲು ಅವರಿಗೆ ಅಧಿಕಾರವನ್ನು ನೀಡಿರುವುದಿಲ್ಲ. ಪ್ರಕೃತ ರಥಾರೂಢನಾಗಿ ಬಂದಿರುವಂತಹ ಪೌತ್ರಾಯಣನು ವೇದಾಧಿಕಾರವನ್ನು ಹೊಂದಿರುವಂತಹ ಕ್ಷತ್ರಿಯನೇ ಆಗಿದ್ದಾನೆಂದು ಇದರಿಂದ ಸ್ಪಷ್ಟವಾಗುತ್ತದೆ. ಮತ್ತೊಬ್ಬರ ರಥದಲ್ಲಿ ಕುಳಿತುಕೊಂಡು ಬಂದಿದ್ದಾನೆಂದೂ ಸಹ ಹೇಳಬಾರದು. ಮುಂದೆ ಅವುಗಳೆಲ್ಲವನ್ನು ದಾನ ಮಾಡುತ್ತಾನೆ. ತನ್ನ ಪ್ರಭುತ್ವವಿಲ್ಲದ ವಸ್ತುಗಳನ್ನು ದಾನ ಮಾಡಲು ಹೇಗೆ ಸಾಧ್ಯ ? ರೈಕ್ವಮುನಿಗಳೂ ಸಹ ಈ ಹಸು, ರಥ ಮೊದಲಾದವುಗಳೆಲ್ಲವೂ ನಿನ್ನದಾಗಿವೆ ಎಂದು ಹೇಳಿರುತ್ತಾರೆ. ಇದರಿಂದ ಪೌತ್ರಯಣನು ತನ್ನದೇ ಆದ ರಥದಲ್ಲಿ ಬಂದಿರುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ವಿವಕ್ಷಿಸಲು ಬಾಧಕವಿರುವ ಕಾರಣ ದುಃಖದಿಂದ ಓಡಿಬಂದಿದ್ದಾನೆಂಬ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು.

### *ಅದ್ವೈತಿಗಳ ಶೂದ್ರಶಬ್ದವ್ಯಾಖ್ಯಾನ ವಿಮರ್ಶೆ*

ಅದ್ವೈತಿಗಳು ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಯೌಗಿಕಾರ್ಥವನ್ನೇ ಸ್ವೀಕರಿಸಬೇಕೆನ್ನಲು ಬೇರೆ ಕಾರಣವನ್ನೇ ನೀಡುತ್ತಾರೆ. ಸಂವರ್ಗವಿದ್ಯೆಯು ಆಖ್ಯಾಯಿಕೆ ಎನಿಸಿದ್ದರಿಂದ ಅರ್ಥವಾದ ರೂಪವಾಗಿದೆ. ಪೂರ್ವಮೀಮಾಂಸೆಯ ರಥಕಾರಪ್ರಕರಣದಲ್ಲಿರುವ ರಥಕಾರಶಬ್ದವು ಇಷ್ಟಿವಿಶೇಷವನ್ನು ವಿಧಾನ ಮಾಡಲು ಹೊರಟಿದ್ದರಿಂದ ವಿಧಿರೂಪವಾಗಿದೆ. ಅರ್ಥವಾದ ವಾಕ್ಯದಲ್ಲಿ ರೂಢ್ಯರ್ಥವನ್ನು ಬಿಡಬಹುದು. ಆದರೆ ವಿಧಿವಾಕ್ಯದಲ್ಲಿ ರೂಢ್ಯರ್ಥವನ್ನು ಬಿಟ್ಟು ಗೌಣಾರ್ಥವನ್ನು ಮಾಡಬಾರದು. ಹಾಗಾಗಿ ರಥಕಾರಾದಿ ಶಬ್ದಗಳಲ್ಲಿ ರೂಢ್ಯರ್ಥವನ್ನು ಬಿಡದಿರಲು

ಕಾರಣವಿರುವಂತೆ ಪ್ರಕೃತ ಅಂತಹ ಕಾರಣಗಳಿರುವುದಿಲ್ಲ. ಆದ್ದರಿಂದ ರೂಢ್ಯರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಶೂದ್ರಶಬ್ದಕ್ಕೆ ಹೇಳಬಹುದು ಎಂದು ಅದ್ವೈತಿಗಳ ವಾದ.

ಇದು ಸರಿಯಲ್ಲ. ಮೀಮಾಂಸಕರು ಹೀಗೆ ಉತ್ತರಿಸಬಹುದೇ ಹೊರತು, ಅದ್ವೈತಿಗಳು ಉತ್ತರಿಸಬಾರದು. ಏಕೆಂದರೆ ಮೀಮಾಂಸಕರ ಮತದಲ್ಲಿ ಅರ್ಥವಾದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರೆ ಅದ್ವೈತಮತದಲ್ಲಿ ಸ್ವಾರ್ಥದಲ್ಲಿಯೂ ತಾತ್ಪರ್ಯವನ್ನು ಒಪ್ಪಲಾಗಿದೆ. ಆದ್ದರಿಂದ ಬಾಧಕವಿರುವುದು, ಇಲ್ಲದಿರುವುದೇ ರೂಢ್ಯರ್ಥತ್ಯಾಗ ಹಾಗೂ ಅತ್ಯಾಗಕ್ಕೆ ಕಾರಣಗಳು ಹೊರತು, ಅರ್ಥವಾದವಾಗಿರುವಿಕೆ, ಆಗದಿರುವಿಕೆ ಎಂಬುದಲ್ಲ. ಆದ್ದರಿಂದ ಅದ್ವೈತಿಗಳ ನಿಲುವು ಸರಿಯಿಲ್ಲ.

### *ಉಪನಯನವಿಲ್ಲದ ಶೂದ್ರನಿಗೆ ವೇದಾಧ್ಯಯನದ ನಿಷೇಧವಿದೆ*

ಶೂದ್ರರಿಗೆ ಉಪನಯನಸಂಸ್ಕಾರವೇ ಇರುವುದಿಲ್ಲ. ಆದ್ದರಿಂದ ವೇದಾಧ್ಯಯನದಲ್ಲೂ ಅಧಿಕಾರವಿರುವುದಿಲ್ಲ.

'ಅಷ್ಟವರ್ಷಂ ಬ್ರಾಹ್ಮಣಮ್ ಉಪನಯೀತ' ಎಂಬ ವಾಕ್ಯದಲ್ಲಿ ಬ್ರಾಹ್ಮಣನಾಗಿದ್ದರೆ ಮಾತ್ರ ಉಪನಯನ ಮಾಡಬೇಕು. ಬೇರೆ ಜಾತಿಯವರಾಗಿದ್ದರೆ ಉಪನಯನ ಮಾಡದಿದ್ದರೂ ವೇದಾಧ್ಯಯನವನ್ನು ಮಾಡಿಸಬಹುದೆಂದು ಹೇಳಲಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ತಮಧ್ಯಾಯಪಯೀತ' ಎಂಬ ಮುಂದಿನ ವಾಕ್ಯದಲ್ಲಿ 'ತತ್' ಶಬ್ದದಿಂದ ಉಪನೀತನಾದವನನ್ನೇ ಪರಾಮರ್ಶ ಮಾಡಬೇಕು. ಆದ್ದರಿಂದ ಉಪನೀತನಾದವನಿಗೆ ಮಾತ್ರ, ಅಧ್ಯಯನವನ್ನು ಮಾಡಿಸಬೇಕಾದ ಕಾರಣ ಉಪನಯನಸಂಸ್ಕಾರವಿಲ್ಲದ ಶೂದ್ರಾದಿಗಳಿಗೆ ವೇದಾಧ್ಯಯನದಲ್ಲಿ ಅಧಿಕಾರ ಬರಲು ಸಾಧ್ಯವೇ ಇಲ್ಲ. ಮತ್ತು 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯವು ಯಾವ ಕರ್ತೃವನ್ನೂ ಕೂಡ ಹೇಳಿಲ್ಲ. ಇದರಿಂದ ಹಿಂದೆ ಪ್ರಕೃತನಾದ ಉಪನೀತನನ್ನೇ ಕರ್ತೃತ್ವೇನ ವಿವಕ್ಷಿಸಬೇಕು. 'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮಾ' ಎಂಬ ಶ್ರುತಿಯೂ ಸಹ ಉಪನಯನವೆಂಬ ಎರಡನೆಯ ಜನ್ಮವನ್ನು ಹೊಂದಿದವನಿಗೆ ಮಾತ್ರ ವೇದಾಧಿಕಾರವನ್ನು ಘೋಷಣೆ ಮಾಡುತ್ತಿದೆ.

'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' ಎಂಬ ವಾಕ್ಯವು ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳುತ್ತಿದೆ ಹೊರತು, ಸಂಸ್ಕಾರ ಮಾಡಬಾರದೆಂದೇನೂ ಹೇಳುತ್ತಿಲ್ಲವಲ್ಲ ಎಂದೂ ಸಹ ಪ್ರಶ್ನಿಸಬಾರದು. ಸಂಸ್ಕಾರವಿಲ್ಲವೆಂದರೆ ಸಂಸ್ಕಾರವನ್ನು ಮಾಡಬಾರದೆಂದೇ ಅಭಿಪ್ರಾಯ. ಸಾಮಾನ್ಯವಿಧಿಯಿಂದ ಪ್ರಾಪ್ತವಾದ ಯಜ್ಞಾದಿಗಳನ್ನು ಶೂದ್ರಾದಿಗಳಿಗೆ ಇಲ್ಲವೆಂದು ಹೇಳಿದರೆ ಶೂದ್ರಾದಿಗಳು ಯಜ್ಞಾದಿಗಳನ್ನು ಮಾಡಲು ಅರ್ಹರಲ್ಲ ಎಂದೇ ಅಭಿಪ್ರಾಯವಾಗುತ್ತದೆ. ಇನ್ನು ಅಧ್ಯಯನ ಮಾಡದಿದ್ದರೂ ಪುಸ್ತಕ ಮೊದಲಾದವುಗಳನ್ನು ಓದಿಕೊಂಡು ವೇದಾರ್ಥತತ್ವಜ್ಞಾನವನ್ನು ಶೂದ್ರರು ಪಡೆಯಬಹುದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಶ್ರುತಿಯು ಸ್ಪಷ್ಟವಾಗಿ ಶೂದ್ರನಿಗೆ ವೇದಾಧ್ಯಯನವಿಲ್ಲವೆಂದಷ್ಟೇ ಹೇಳಿಲ್ಲ. ವೇದವನ್ನು ಕಿವಿಯಿಂದ ಕೇಳಲೂ ಬಾರದು. ಅದರ ಅರ್ಥವನ್ನೂ ಸಹ ತಿಳಿದುಕೊಳ್ಳಬಾರದೆಂದು ಸ್ಪಷ್ಟವಾಗಿ ನಿಷೇಧ ಮಾಡುತ್ತಿದೆ. ವಿದುರ, ಧರ್ಮವ್ಯಾಧ ಮೊದಲಾದವರು ವೇದಾರ್ಥತತ್ವಜ್ಞಾನವನ್ನು ತಿಳಿದಿರುವುದು ಮಹಾಭಾರತಾದಿಗಳಲ್ಲಿ ಉಲ್ಲೇಖವಿರಬಹುದು. ಆದರೆ ಅವರು ಈ ಶೂದ್ರರಿಗಿಂತ ಅತ್ಯಂತ ವಿಲಕ್ಷಣರಾಗಿದ್ದಾರೆ ಜಾತಾಪರೋಕ್ಷಿಗಳಾದ್ದರಿಂದ ಜನ್ಮಾಂತರ ಸಂಸ್ಕಾರಗಳಿಂದ ಅವರಿಗೆ ಹಾಗೇ ತಿಳಿದುಕೊಳ್ಳುವಂತಹ, ಈ ಜನ್ಮದಲ್ಲಿ ತಿಳಿದುಕೊಳ್ಳದಿದ್ದರೂ ಹಿಂದಿನ ಜನ್ಮದ ಸಂಸ್ಕಾರದಿಂದ ವೇದಾರ್ಥತತ್ವಜ್ಞಾನವನ್ನು ಅವರು ಪಡೆದಿರುತ್ತಾರೆ

### *ಉತ್ತಮ ಸ್ತ್ರೀಯರು ವೇದವನ್ನು ಓದಬಹುದು*

ಉಪನಯನ ಸಂಸ್ಕಾರವಿದ್ದವರಿಗೆ ಮಾತ್ರ ವೇದಾಧ್ಯಯನ. ಯಾರಿಗೆ ಉಪನಯನ ಸಂಸ್ಕಾರವಿಲ್ಲವೋ ಅವರಿಗೆ ವೇದಾಧ್ಯಯನವಿಲ್ಲ. ಆದ್ದರಿಂದಲೇ ಸ್ತ್ರೀಯರಿಗೂ ವೇದಾಧಿಕಾರವು ಇರುವುದಿಲ್ಲ. ಆದರೆ ಉತ್ತಮ ಸ್ತ್ರೀಯರಿಗೆ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಪರಮತದವರು ಯಾವುದೇ ಸ್ತ್ರೀಯರಿಗೂ ಸಹ ವೇದಾಧಿಕಾರವಿಲ್ಲವೆನ್ನುತ್ತಾರೆ. ಇದು ತಪ್ಪು. ಶಚೀದೇವಿಯೇ ಸಾಕ್ಷಾತ್ತಾಗಿ 'ಸಪತ್ನೀಂ ಮೇ ಪರಾಧಮ' ಇತ್ಯಾದಿ ವೇದಗಳನ್ನು ಸಾಕ್ಷಾತ್ಕಾರ ಮಾಡಿಕೊಂಡಿರುತ್ತಾಳೆ. ಇದರಿಂದ ಊರ್ವಶೀ, ಶಚೀ ಮೊದಲಾದ ಉತ್ತಮ ಸ್ತ್ರೀಯರಿಗೆ ವೇದವಿದ್ಯಾಧಿಕಾರವಿರುತ್ತದೆಂದು ಸ್ಪಷ್ಟವಾಗುತ್ತದೆ. ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಯಾಜ್ಞವಲ್ಕ್ಯರು ಗಾರ್ಗಿಯನ್ನು ಕುರಿತು ಸಂಬೋಧನೆ ಮಾಡಿ ಅಕ್ಷರವಿದ್ಯೆಯನ್ನು ಉಪದೇಶ ಮಾಡಿದ್ದಾರೆ. ಮೈತ್ರೇಯಿಗೆ ಆತ್ಮೋಪದೇಶವನ್ನು ಮಾಡಿದ್ದಾರೆ. ಮತ್ತು 'ಭವತಿ ತೇ ವ್ಯಾಖ್ಯಾಸ್ಯಾಮಿ' ಎಂದು ಮೈತ್ರೇಯಿಯನ್ನು ಸಂಬೋಧನೆ ಮಾಡಿ, 'ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವ' 'ನಾನು ವ್ಯಾಖ್ಯಾನ ಮಾಡಿದ್ದನ್ನು ನೀನು ನಿದಿಧ್ಯಾಸನ ಮಾಡು' ಎಂದು ಉಪದೇಶ ಮಾಡಿದ್ದಾರೆ. ಆದ್ದರಿಂದ ಉತ್ತಮ ಸ್ತ್ರೀಯರಿಗೆ ವೇದಾಧ್ಯಯನದಲ್ಲಿ ಮಾತ್ರ ಅಧಿಕಾರವಲ್ಲ. ಅದರ ಅನುಷ್ಠಾನದ ವಿಷಯದಲ್ಲಿಯೂ ಅಧಿಕಾರವಿದ್ದೇ ಇರುತ್ತದೆ. 'ವಿವಾಹ' ಎಂಬ ಸಂಸ್ಕಾರವೇ ಉಪನಯನ ಪ್ರತಿನಿಧಿಯಾಗಿರುತ್ತದೆ. ಆದ್ದರಿಂದ ಅವರಿಗೂ ವಿವಾಹವೆಂಬ ಸಂಸ್ಕಾರವಿರುವ ಕಾರಣ ವೇದಾಧ್ಯಯನದಲ್ಲಿ ಅಧಿಕಾರವನ್ನು ಹೇಳಬೇಕು. ಆದರೆ ಸಾಮಾನ್ಯ ಸ್ತ್ರೀಯರಿಗೆ ವೇದದ ಶ್ರವಣ-ಪಠಣ(ನ) ಮೊದಲಾದವುಗಳವುಗಳಲ್ಲಿ ಸರ್ವಥಾ ಅಧಿಕಾರವಿರುವುದಿಲ್ಲ.

### *ಶೂದ್ರರಿಗೆ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿಲ್ಲ*

'ನಾಗ್ನಿರ್ನಯಜ್ಞಃ' ಎಂಬ ಶ್ರುತಿಯು ಯಾಗಾದಿಕರ್ಮಗಳಲ್ಲಿಯೂ ಶೂದ್ರರಿಗೆ ಅಧಿಕಾರವಿಲ್ಲವೆಂದು ನಿಷೇಧ ಮಾಡುತ್ತಿದೆ. ಹೀಗೆ ನಿಷೇಧವಿರುವ ಕಾರಣದಿಂದಲೇ ಶೂದ್ರರಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಬೇಕು ಆದರೆ ಮೀಮಾಂಸಕರು ತ್ರೈವರ್ಣಿಕರಿಗೆ ಮಾತ್ರ ಅಗ್ನ್ಯಾಧಾನ ಸಂಸ್ಕಾರವನ್ನು ವಿಧಾನ ಮಾಡಿದ್ದರಿಂದ ಶೂದ್ರರಿಗೆ ಅಧಿಕಾರವಿಲ್ಲವೆಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಅಗ್ನ್ಯಾಧಾನ ಸಂಸ್ಕಾರವಿಲ್ಲದಿದ್ದರೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳುವುದೇ ತಪ್ಪು. ರಥಕಾರನು ತ್ರೈವರ್ಣಿಕರಲ್ಲಿ ಸೇರಿಲ್ಲ. ಆದರೂ ಯಾಗಕರ್ಮದಲ್ಲಿ ಅಧಿಕಾರವನ್ನು ಪಡೆದಿರುತ್ತಾನೆ. ಮತ್ತು 'ವಸಂತೇ ಬ್ರಾಹ್ಮಣಮುಪನಯೀತ ಗ್ರೀಷ್ಮೇ ರಾಜನ್ಯಂ ಶರದಿ ವೈಶ್ಯಮ್' ಎಂಬ ವಾಕ್ಯವು ಬ್ರಾಹ್ಮಣಾದಿಗಳಿಗೆ ವಸಂತ ಮೊದಲಾದ ಕಾಲಗಳಲ್ಲಿ ಉಪನಯನ ಸಂಸ್ಕಾರವನ್ನು ವಿಧಾನ ಮಾಡುತ್ತಿದೆ. ಶೂದ್ರರಿಗೆ ಹಾಗೇ ವಿಧಾನ ಮಾಡದ ಕಾರಣ ಉಪನಯನಸಂಸ್ಕಾರವಿಲ್ಲವೆಂದು ಹೇಳಲಾಗದು. ಏಕೆಂದರೆ ಬ್ರಾಹ್ಮಣಾದಿಗಳಿಗೆ ಉಪನಯನವಾಗಲು ಕಾಲದ ನಿಯಮವಿದೆ. ಶೂದ್ರಾದಿಗಳಿಗೆ ಉಪನಯನ ಮಾಡಲು ಕಾಲನಿಯಮವಿಲ್ಲವೆಂದೂ ಸಹ ಕೂಡಿಸಲು ಬರುತ್ತದೆ.

### *ಶೂದ್ರರಿಗೆ ಅಧಿಕಾರವಿಲ್ಲವೆಂದು ಸಮರ್ಥಿಸುವ ಮೀಮಾಂಸಕಮತ ತಪ್ಪು*

ತ್ರೈವರ್ಣಿಕರಿಗಿಂತ ಭಿನ್ನರಾದವರಿಗೆ ಯಾಗದಲ್ಲಿ ಅಧಿಕಾರವಿಲ್ಲವೆಂದು ಪೂರ್ವಮೀಮಾಂಸಕರು ಹೇಳಿದರು. ಆದರೆ ರಥಕಾರರಿಗೆ ಯಾಗಾಧಿಕಾರವನ್ನು ಮೀಮಾಂಸಕರೇ ಒಪ್ಪಿದ್ದರಿಂದ 'ಅಂಶೇ ಬಾಧ' ಮತ್ತು 'ಭಾಗಾಸಿದ್ಧಿ' ಎಂಬೆರಡು ದೋಷಗಳು ಬರುತ್ತವೆಂದು ಸಮರ್ಥಿಸಲಾಯಿತು. ಮತ್ತು ಶೂದ್ರರಿಗೂ ಕೂಡ ಸಂಸ್ಕೃತವಾದ

ಅಗ್ನಿಯಲ್ಲಿಯೇ ಯಾಗಾಧಿಕಾರವನ್ನು ಹೇಳಬಹುದು. ವಸಂತಾದಿ ವಾಕ್ಯಗಳು ಕೇವಲ ಕಾಲವನ್ನಷ್ಟೇ ವಿಧಾನ ಮಾಡುತ್ತಿದೆ ಹೊರತು, ತ್ರೈವರ್ಣಿಕರಿಗೆ ಮಾತ್ರ ಅಗ್ನ್ಯಾಧಾನ ಬೇರೆಯವರಿಗೆ ಇಲ್ಲವೆಂದೇನೂ ಹೇಳುತ್ತಿಲ್ಲ. ಬೇರೆ ವಾಕ್ಯದಿಂದ ಶೂದ್ರರಿಗೂ ಅಗ್ನ್ಯಾದಾನದ ವಿಧಿಯಿದೆ. ಆದ್ದರಿಂದ ಬ್ರಾಹ್ಮಣಾದಿಗಳಾದಲ್ಲಿ ವಸಂತಾದಿಕಾಲಗಳಲ್ಲೇ ಅಗ್ನ್ಯಾಧಾನದ ವಿಧಾನವಿದೆ. ಶೂದ್ರನಾದರೆ ಋತುವಿನ ನಿಯಮವಿಲ್ಲದೇ ಬೇರೆ ಋತುಗಳಲ್ಲಿ ಆಧಾನ ಮಾಡಬೇಕೆಂದು ತಿಳಿಯುತ್ತದೆ. ಹಾಗಾಗಿ ಶೂದ್ರನಿಗೆ ಸಂಸ್ಕೃತವಾದ ಅಗ್ನಿಯಲ್ಲಿ ಅಧಿಕಾರವನ್ನು ಹೇಳಬಹುದು.

ಅಥವಾ ಸಂಸ್ಕೃತವಾದ ಅಗ್ನಿಯಲ್ಲಿ ಯಾಗಾಧಿಕಾರವನ್ನು ಒಪ್ಪದಿದ್ದರೂ ಲೌಕಿಕಾಗ್ನಿಯಲ್ಲಿ ಯಾಗಾಧಿಕಾರವನ್ನು ಹೇಳಬಹುದು. ಉದಾಹರಣೆ : ಉಪಯನ ಮಾಡುವ ಮೊದಲು ಮಾಣವಕನು ಹೋಮವನ್ನು ಆಚರಿಸಬೇಕು. ಮತ್ತು ಬೇಡಜಾತಿಯವನು ಸ್ಥಪತೀಷ್ಟಿಯನ್ನು ಆಚರಿಸುತ್ತಾನೆ. ಚರಮಧಾತು ವಿಸರ್ಗಮಾಡಿದ ಬ್ರಹ್ಮಚಾರಿಗೂ ಪ್ರಾಯಶ್ಚಿತ್ತಹೋಮವನ್ನು ವಿಧಿಸಲಾಗಿದೆ. ಇವೆಲ್ಲವೂ ಲೌಕಿಕಾಗ್ನಿಯಲ್ಲಿಯೇ ಮಾಡಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಅದರಂತೆ ಶೂದ್ರನೂ ಕೂಡ ಲೌಕಿಕಾಗ್ನಿಯಲ್ಲಿ ಹೋಮವನ್ನು ಮಾಡಬಹುದು. ಅಥವಾ ಶೂದ್ರನಿಗೆ ಅಗ್ನಿಯೂ ಬೇಡ, ಅಗ್ನ್ಯಾಧಾನವೂ ಬೇಡ, ಲೌಕಿಕಾಗ್ನಿಯಲ್ಲಿ ಅಧಿಕಾರವೂ ಬೇಡ. ಆದರೆ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವಿರಬಹುದು. ಉಪನಯನ ಮಾಡಿಕೊಂಡ ನಂತರ ಉಪಾಕರ್ಮದ ತನಕ ಗುರುಕುಲವಾಸವನ್ನು ಮಾಡಬಾರದೆಂಬ ನಿಯಮವಿದೆ. ಆದರೂ ಅಲ್ಲಿಯ ತನಕ ಸಂಧ್ಯಾವಂದನಾದಿಗಳಲ್ಲಿ ಬ್ರಾಹ್ಮಣನು ಅಧಿಕಾರವು ಪಡೆಯುವಂತೆ ಶೂದ್ರನೂ ಸಹ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವನ್ನು ಪಡೆಯಬಹುದಲ್ಲವೇ? ಆದ್ದರಿಂದ ಮೀಮಾಂಸಕರಿಗೆ ಶೂದ್ರಾದಿಗಳು ವೇದಾಧ್ಯಯನದಲ್ಲಿ ಅಧಿಕಾರವನ್ನು ಹೊಂದಲಾರರೆಂದು ಸಮರ್ಥಿಸಲಾಗದು.

### *ಶೂದ್ರಾದಿಗಳಿಗೆ ಕರ್ಮಾಧಿಕಾರವಿಲ್ಲವೆನ್ನಲು ಅವಿದ್ವತ್ವವೂ ಸಹ ಕಾರಣವಲ್ಲ*

ಮೀಮಾಂಸಕರು ಶೂದ್ರರಿಗೆ ಕರ್ಮಾಧಿಕಾರವಿಲ್ಲವೆನ್ನಲು ಅವಿದ್ವತ್ವವು ಕಾರಣವೆನ್ನುತ್ತಾರೆ. ಇದೂ ಸಹ ತಪ್ಪು. ವೇದಗಳಲ್ಲಿ ಹೇಳಿದ ಕರ್ಮವಿಚಾರವು ಯಾರಿಗೆ ತಿಳಿದಿರುತ್ತದೋ ಅವನು ಮಾತ್ರ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಪಡೆಯುತ್ತಾನೆ. ಆದರೆ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವೇ ಇಲ್ಲದ ಕಾರಣ ಅದರಲ್ಲಿ ಹೇಳಿರುವ ಕರ್ಮಗಳ ಜ್ಞಾನವೂ ಸಹ ಅವನಿಗಿರುವುದಿಲ್ಲವೆಂಬುದು ಮೀಮಾಂಸಕರ ಅಭಿಪ್ರಾಯ. ಆದರೆ ನೀಚಜಾತಿಯಲ್ಲಿ ಹುಟ್ಟಿದ ರಥಕಾರನಿಗೆ ಇದೇ ಮೀಮಾಂಸಕರು ಅಗ್ನ್ಯಾಧಾನವನ್ನು ಹೇಳಿರುತ್ತಾರೆ. ಮತ್ತು ಬ್ರಾಹ್ಮಣಾದಿಗಳು ಕೇವಲ ತಮ್ಮ ಶಾಖೆಯನ್ನಷ್ಟೇ ಅಧ್ಯಯನ ಮಾಡಬೇಕು. ಬೇರೆ ಶಾಖೆಗಳನ್ನು ಅಧ್ಯಯನ ಮಾಡಬಾರದೆನ್ನುತ್ತಾರೆ. ಬೇರೆ ಶಾಖೆಗಳಲ್ಲಿ ಹೇಳಿದ, ಕರ್ಮಾಂಗಗಳ ಜ್ಞಾನವು ಬ್ರಾಹ್ಮಣನಿಗೆ ಹೇಗೆ ಬರುತ್ತದೆ? ರಥಕಾರನಿಗೂ ಸಹ ಅಗ್ನ್ಯಾಧಾನ ಮಾಡಬೇಕೆಂಬ ಜ್ಞಾನವು ಹೇಗೆ ಬರುತ್ತದೆ ? ಅಷ್ಟೇ ಅಲ್ಲದೇ ಶೂದ್ರನು 'ಬ್ರಾಹ್ಮಣೋ ನ ಹಂತವ್ಯಃ' ಎಂಬ ನಿಷೇಧವನ್ನು ಅರಿತಿರುತ್ತಾನೆ. ವೇದಾಧ್ಯಯನ ಮಾಡದ ಶೂದ್ರನಿಗೆ ಈ ನಿಷೇಧವಾಕ್ಯಾರ್ಥಜ್ಞಾನವೂ ಸಹ ಹೇಗೆ ಬಂದಿರುತ್ತದೆ? ಆದ್ದರಿಂದ ಮತ್ತೊಬ್ಬರ ಉಪದೇಶದಿಂದ ಆಯಾ ಸಂದರ್ಭಕ್ಕನುಗುಣವಾಗಿ ಅಂಗಕರ್ಮಗಳನ್ನು ತಿಳಿಯುತ್ತಾರೆಂದೇ ಹೇಳಬೇಕು. ಅದರಂತೆ ಶೂದ್ರನಿಗೂ ಸಹ ಜ್ಯೋತಿಷ್ಟೋಮಾದಿ ಯಾಗಗಳನ್ನು ಹೇಗೆ ಅನುಷ್ಠಾನ ಮಾಡಬೇಕೆಂಬ ಅರಿವು ಮತ್ತೊಬ್ಬರ ಉಪದೇಶದಿಂದ ಬರಬಹುದಲ್ಲವೇ?

ಶೂದ್ರನಿಗೆ ಅಗ್ನಿವಿದ್ಯೆಯಾಗಲೀ, ಅಗ್ನ್ಯಾಧಾನವಾಗಲೀ ವಿಹಿತವಲ್ಲ. ಆದ್ದರಿಂದ ನಿತ್ಯಕರ್ಮದಲ್ಲಿ ಅನುಷ್ಠಾನವು ಯುಕ್ತವಾಗುವುದಿಲ್ಲವೆಂದು ಹೇಳಬಾರದು. ಏಕೆಂದರೆ ಸ್ವತಃ ಮೀಮಾಂಸಕರೇ ಸರ್ವಶಕ್ತ್ಯಧಿಕರಣದಲ್ಲಿ ಅಂಧರಿಗೂ ಕೂಡ ನಿತ್ಯಕರ್ಮವನ್ನು ಹೇಳಿರುತ್ತಾರೆ. ಅಂದರೆ ನಿತ್ಯಕರ್ಮಕ್ಕೆ ಅಧಿಕಾರಿಗಳೆನಿಸಿದ ಬ್ರಾಹ್ಮಣರು

ಕುರುಡರಾಗಿದ್ದಲ್ಲಿ ಯಜ್ಞದ ಸಂದರ್ಭದಲ್ಲಿ ಆಜ್ಯಾವೇಕ್ಷಣವನ್ನು ನೋಡಲು ಸಾಧ್ಯವಾಗುವುದಿಲ್ಲ. ಆದರೂ ಸಹ ಆ ಆಜ್ಯಾವೇಕ್ಷಣೆಯೆಂಬ ಕರ್ಮವನ್ನು ಬಿಟ್ಟು ಉಳಿದ ಕರ್ಮಗಳನ್ನು ಅನುಷ್ಠಾನ ಮಾಡಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಅದರಂತೆ ಶೂದ್ರನಿಗೂ ಸಹ ಅಗ್ನಿವಿದ್ಯೆಯೆಂಬ ಒಂದು ಕರ್ಮದಲ್ಲಿ ಅಧಿಕಾರವಿಲ್ಲದಿದ್ದರೂ ಉಳಿದ ಅಂಗಕರ್ಮಗಳನ್ನು ಅನುಷ್ಠಾನ ಮಾಡುವ ಮೂಲಕ ನಿತ್ಯಕರ್ಮಗಳಲ್ಲಿ ಅಧಿಕಾರವನ್ನು ಪಡೆಯಬಹುದು.

ಶೂದ್ರನಿಗೆ ಅಗ್ನಿವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ 'ಯಾವಜ್ಜೀವಂ ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಿ ಹೇಳಿದ ನಿತ್ಯಕರ್ಮವನ್ನು ಅನುಷ್ಠಾಸ ಮಾಡಬಹುದು. ಹಾಗಾಗಿ ಶೂದ್ರಾದಿಗಳಿಗೆ ವೈದುಷ್ಯಾದಿಗಳಿಲ್ಲದ ಕಾರಣ ಕರ್ಮಾಧಿಕಾರವಿಲ್ಲವೆಂಬ ಮೀಮಾಂಸಕರ ಧೋರಣೆ ಅತ್ಯಂತ ಅಸಾಧುವಾಗಿದೆ ಹೊರತಾಗಿ, 'ನಾಗ್ನಿರ್ನ ಯಜ್ಞಃ' ಎಂಬ ನಿಷೇಧವಾಕ್ಯವಿರುವ ಪ್ರಯುಕ್ತವಾಗಷ್ಟೇ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಹೇಳಬೇಕು.

### *ಸೂತ್ರಗಳ ವಿನ್ಯಾಸ ಶೈಲಿ*

ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಸಾಮಾನ್ಯವಾಗಿ ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿ ಸ್ವಪಕ್ಷಸಾಧಕಪ್ರಮಾಣಗಳನ್ನು ಹೇಳಿ, ಅನಂತರ ಪರಪಕ್ಷ ನಿರಾಕರಣೆಯನ್ನು ಮಾಡುತ್ತಾರೆ. ಆದರೆ ಈ ಅಧಿಕರಣದಲ್ಲಿ ಪರಪಕ್ಷನಿರಾಸವನ್ನು ಪ್ರಥಮಸೂತ್ರದಲ್ಲಿ ಮಾಡಿ, ಮುಂದಿನ ಸೂತ್ರಗಳಲ್ಲಿ ಸ್ವಪಕ್ಷ ಸಾಧಕಪ್ರಮಾಣಗಳನ್ನು ಹೇಳಿರುತ್ತಾರೆ. ಏಕೆಂದರೆ 'ಶೂದ್ರ' ಶಬ್ದವು ರೂಢವಾಗಿ ಬಿಟ್ಟರೆ ಸಿದ್ಧಾಂತ ಹೇತುಗಳೆಲ್ಲವೂ ಅಸಿದ್ಧವಾಗುತ್ತವೆ. ಹಾಗಾಗಿ ಪೂರ್ವಪಕ್ಷಕಾರನು ಹೇಳುವಂತೆ ಶೂದ್ರಶಬ್ದವು ರೂಢವಲ್ಲ. ಯೌಗಿಕವೇ ಆಗಿವೆಯೆಂದು ಮೊದಲು ಪರಪಕ್ಷವನ್ನು ನಿರಾಕರಣೆ ಮಾಡುವುದು ಅತ್ಯಂತ ಅನಿವಾರ್ಯವಾಗಿದೆ. ಮತ್ತು ಪರಪಕ್ಷ ನಿರಾಕರಣೆಯಲ್ಲಿ ಹೆಚ್ಚು ಪ್ರಯತ್ನ ಬೇಕು. ಆದ್ದರಿಂದ ಮೊದಲು ಪರಪಕ್ಷವನ್ನು ನಿರಾಕರಣೆ ಮಾಡಿ ಅನಂತರ ಸುಲಭವಾದ ಸ್ವಪಕ್ಷಸಾಧಕಪ್ರಮಾಣಗಳನ್ನು ಮುಂದಿನ ಸೂತ್ರಗಳಲ್ಲಿ ಸಮರ್ಥನೆ ಮಾಡಿದ್ದಾರೆ.

'ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ' ಎಂಬ ಮೊದಲನೆಯ ಸೂತ್ರದಲ್ಲಿ ಶೂದ್ರಶಬ್ದವನ್ನು ಯೌಗಿಕಾರ್ಥವೆಂದೇ ವಿವಕ್ಷಿಸಲು ಕಾರಣವನ್ನು ನಿರೂಪಣೆ ಮಾಡಿದ್ದಾರೆ. ಉಪನಿಷತ್ತಿನಲ್ಲಿರುವ ಶೂದ್ರಶಬ್ದವು ರೂಢಿಯಿಂದ ಶೂದ್ರಜಾತಿಯಲ್ಲಿ ಹುಟ್ಟಿದವನನ್ನು ಏಕೆ ಹೇಳಬಾರದು? ಎಂಬ ಆಶಂಕೆಗೆ 'ಓಂ ಕ್ಷತ್ರಿಯತ್ವಾಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ' ಎಂಬ ಎರಡನೆಯ ಸೂತ್ರವು ಉತ್ತರಿಸುತ್ತಿದೆ. ಸ್ವಾಭಾವಿಕವಾದ ರಥದ ಸಂಬಂಧವು ಕ್ಷತ್ರಿಯರಲ್ಲಿ ಮಾತ್ರ ಯುಕ್ತವಾಗುತ್ತದೆ. ಶ್ರುತಿಯು ಸ್ವಾಭಾವಿಕರಥಸಂಬಂಧವನ್ನು ಪೌತ್ರಾಯಣನಿಗೆ ಹೇಳಿರುವ ಕಾರಣ ಶೂದ್ರ ಶಬ್ದವು ರೂಢಿಯಿಂದ ಪೌತ್ರಾಯಣನಿಗೆ ಶೂದ್ರತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ಈ ಸೂತ್ರವು ಸಮರ್ಥನೆ ಮಾಡಿದೆ. ಮತ್ತೊಂದು ಕಾರಣದಿಂದಲೂ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಮರ್ಥಿಸಲು 'ಓಂ ಸಂಸ್ಕಾರ- ಪರಮರ್ಶಾತ್ತದಭಾವಾಭಿಲಾಪಾಚ್ಚ ಓಂ' ಎಂಬ ಮೂರನೆಯ ಸೂತ್ರವು ಹೊರಟಿದೆ. 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ' ಎಂಬಲ್ಲಿ 'ತಮ್' ಎಂಬ ಪದದಿಂದ ಅಧ್ಯಯನಕ್ಕೆ ಅಂಗವಾದ ಉಪನಯನಸಂಸ್ಕಾರವನ್ನು ಪರಾಮರ್ಶ ಮಾಡಬೇಕು. ಶೂದ್ರನಿಗೆ 'ನಾಗ್ನಿರ್ನ ಯಜ್ಞಃ ನ ಸಂಸ್ಕಾರಃ' ಎಂಬ ಪೈಂಗಿಶ್ರುತಿಯಿಂದ ಸಂಸ್ಕಾರದ ನಿಷೇಧವೂ ಶ್ರುತವಾಗಿದೆ. ಆದ್ದರಿಂದ ವೇದಾಧಿಕಾರವಿಲ್ಲವೆಂದು ಇದರ ಅಭಿಪ್ರಾಯ. ಇದೇ ವಿಷಯದಲ್ಲಿ ಮತ್ತೊಂದು ಕಾರಣವನ್ನು ಹೇಳಲು 'ಓಂ ತದಭಾವನಿರ್ಧಾರಣೇ ಚ ಪ್ರವೃತ್ತೇಃ' ಎಂಬುದು ನಾಲ್ಕನೆಯ ಸೂತ್ರವು ಹೊರಟಿದೆ. ಗೌತಮರ ಬಳಿ ಸತ್ಯಕಾಮನು ವೇದಾಧ್ಯಯನಕ್ಕಾಗಿ ಬಂದಾಗ 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಬ್ರಾಹ್ಮಣನಲ್ಲದವನು ಇಂತಹ ಸತ್ಯ ವಚನವನ್ನು ಸರ್ವಥಾ

ಹೇಳಲಾರ ಎಂದು ಸತ್ಯಕಾಮನು ಶೂದ್ರನಲ್ಲವೆಂದು ನಿರ್ಧಾರ ಮಾಡಿ, ಅನಂತರವೇ ಅವನ ಉಪನಯನದಲ್ಲಿ ಪ್ರವೃತ್ತಿ ಮಾಡಿದ್ದಾರೆ. ಇದರಿಂದಲೂ ಶೂದ್ರನಿಗೆ ಉಪನಯನಸಂಸ್ಕಾರವಿಲ್ಲವೆಂದು ಸ್ಪಷ್ಟವಾಗುತ್ತದೆ. ಶೂದ್ರಾದಿಗಳಿಗೆ ಸಂಸ್ಕಾರವಿಲ್ಲದಿದ್ದರೂ ವಿಶಿಷ್ಟಬುದ್ಧ್ಯಾದಿಗಳಿರುವ ಕಾರಣ ವೇದಾಧಿ- ಕಾರವನ್ನು ಹೇಳಬಹುದಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಮುಂದಿನ 'ಓಂ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ಓಂ' ಎಂಬ ಕೊನೆಯ ಸೂತ್ರವು ಹೊರಟಿದೆ. 'ಶ್ರವಣೇತ್ರಪುಜ್ಯತುಭ್ಯಾಂ' ಇತ್ಯಾದಿ ವಾಕ್ಯದಿಂದ ಶೂದ್ರನಾದವನು ವೇದಶ್ರವಣ, ವೇದಾಧ್ಯಯನ, ವೇದಾರ್ಥನಿರ್ಣಯ ಇವುಗಳನ್ನು ಮಾಡಲು ಅರ್ಹನಲ್ಲ. ಮತ್ತು 'ನಾಗ್ನಿರ್ನ: ಯಜ್ಞ: ಶೂದ್ರಸ್ಯ' ಎಂಬ ಸ್ಮೃತಿಯ ಆಧಾರದಿಂದಲೂ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಶೂದ್ರನಿಗೆ ಉಪನಯನಾದಿಸಂಸ್ಕಾರಗಳಿಲ್ಲದಿದ್ದರೂ ವೇದಾಧ್ಯಯನಾದಿಗಳನ್ನು ಹೇಳಬಹುದಲ್ಲವೇ? ಎಂಬ ಆಶಂಕೆಯು ನಿರಾಕೃತವಾಯಿತು. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆ.

*ಅದ್ವೈತಭಾಷ್ಯದ ಅಧಿಕರಣಶರೀರ*

ಅದ್ವೈತಭಾಷ್ಯದಲ್ಲಿ ಅಪಶೂದ್ರಾಧಿಕರಣದ ರಚನೆ ಹೀಗಿದೆ - ಶೂದ್ರರಿಗೂ ಕೂಡ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆಂದು ಪೂರ್ವಪಕ್ಷ. ಏಕೆಂದರೆ ಅಧ್ಯಯನವು ಸಂಸ್ಕಾರರೂಪವಾಗಿದ್ದಲ್ಲಿ, ಅತೀತವಾದ ಸ್ವಾಧ್ಯಾಯದಿಂದ ಯಾವ ಬ್ರಹ್ಮಜ್ಞಾನ ಹುಟ್ಟುತ್ತದೋ ಅದು ಮೋಕ್ಷಜನಕವೆಂದು ಹೇಳಬಹುದಿತ್ತು. ಆದರೆ ಅಧ್ಯಯನವು ಸಂಸ್ಕಾರರೂಪವಾಗದೇ ಪಿಂಡಪಿತೃಯಜ್ಞದಂತೆ ಸ್ವರ್ಗಫಲಕವಾಗಿದೆ. ಆದ್ದರಿಂದ ಶೂದ್ರರಿಗೆ ಉಪನಯನವಿಲ್ಲದಿದ್ದರೂ ಪುಸ್ತಕಾದಿಗಳನ್ನು ಓದಿಕೊಂಡು ಅಧ್ಯಯನದಿಂದ ಬ್ರಹ್ಮಜ್ಞಾನವನ್ನು ಪಡೆಯಬಹುದು. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಶೂದ್ರರಿಗೂ ಸಹ ಅಧಿಕಾರವಿರುತ್ತದೆ.

ಸಿದ್ಧಾಂತ - ದೃಷ್ಟಫಲವನ್ನು ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪನೆ ಮಾಡಬಾರದು. ಅಧ್ಯಯನಕ್ಕೆ ಸ್ವಾಧ್ಯಾಯದ ಸಂಸ್ಕಾರಪರತ್ವವನ್ನೇ ಹೇಳಲು ಬರುವಾಗ ಪುಸ್ತಕಾದಿಗಳನ್ನು ಓದಿ ಅದರಿಂದ ಬರುವ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳುವುದು ತಪ್ಪಾಗುತ್ತದೆ. ಅಧ್ಯಯನವು ಸಂಸ್ಕಾರರೂಪವಾದ್ದರಿಂದ ಶೂದ್ರರಿಗೂ ಸಹ ಉಪನಯನಸಂಸ್ಕಾರ ಬೇಕಾಗುತ್ತದೆ. ಆದ್ದರಿಂದ ವೇದವಿದ್ಯೆಯಲ್ಲಿ ಶೂದ್ರರಿಗೆ ಅಧಿಕಾರವಿರುವುದಿಲ್ಲ. ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಲ್ಲಿ ಅಗ್ನಿಯಿಲ್ಲದ ಶೂದ್ರನಿಗೆ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸಿದ್ದಾರೆ. ಆದರೆ ಬ್ರಹ್ಮಮೀಮಾಂಸೆಯ ಈ ಅಪಶೂದ್ರಾಧಿಕರಣದಲ್ಲಿ ಶೂದ್ರನಿಗೆ ವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸಿದ್ದಾರೆ. ಹಾಗಾಗಿ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ

*ಅದ್ವೈತಿಗಳ ಅಧಿಕರಣಶರೀರ ನಿರಾಕರಣೆ*

ಅದ್ವೈತಿಗಳು ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಪುನರುಕ್ತಿದೋಷವನ್ನು ಪರಿಹರಿಸಿದ್ದೇ ತಪ್ಪು. ಏಕೆಂದರೆ 'ಅವೈದ್ಯತ್ವಾದಭಾವಃ ಕರ್ಮಣಿ ಸ್ಯಾತ್' ಎಂಬ ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣ-ದಲ್ಲಿಯೂ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲವೆಂದು 'ಅವೈದ್ಯತ್ವ' ಶಬ್ದದಿಂದ ಸಮರ್ಥನೆ ಮಾಡಲಾಗಿದೆ. ಪುನಃ ಇಲ್ಲಿಯೂ ಕೂಡ ಹೇಳಿದರೆ ಪುನರುಕ್ತಿಯು ಬಂದೇ ಬರುತ್ತದೆ. ಅಧ್ಯಯನವು ಪ್ರಧಾನಕರ್ಮವಾದರೆ, ಸಂಸ್ಕಾರಕರ್ಮವೆನಿಸುವುದಿಲ್ಲ. ಆವಾಗ ಜ್ಞಾನವನ್ನು ಹೇಗಾದರೂ ಸಂಪಾದನೆ ಮಾಡಬಹುದೆಂದಾಗುತ್ತದೆ. ಶೂದ್ರಾದಿಗಳೂ ಕೂಡ ಅಧ್ಯಯನವನ್ನು ಮಾಡಬಹುದೆಂದಾಗುತ್ತದೆ. ಆದರೆ ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರದ ರೂಪವೆಂದು ಹೇಳಿದಾಗ, ಶೂದ್ರನಿಗೆ ಅಧ್ಯಯನ ಮಾಡಲು ಅಧಿಕಾರವು ದೊರೆಯುವುದಿಲ್ಲ.

ಹಾಗಾದಲ್ಲಿ ವೇದದಿಂದ ಪಡೆಯುವ ಜ್ಞಾನವು ಅಸಂಸ್ಕೃತ ವೇದಜನ್ಯಜ್ಞಾನರೂಪವಾಗುತ್ತದೆ. ಇದರಿಂದ ಅಪೂರ್ವದ ಉತ್ಪತ್ತಿಯು ಉಂಟಾಗುವುದಿಲ್ಲ. ಈ ವಿಷಯವನ್ನು ಬ್ರಹ್ಮಮೀಮಾಂಸೆಯಲ್ಲಿ ಮಾತ್ರ ಸಮರ್ಥನೆ ಮಾಡಲಾಗಿದೆ. ಆದರೆ ಪೂರ್ವಮೀಮಾಂಸೆಯಲ್ಲಿ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದಷ್ಟೇ ಹೇಳಿದ್ದಾರೆ. ಆದ್ದರಿಂದ ಪುನರುಕ್ತಿಯನ್ನು ಹೇಳಲು ಹೇಗೆ ಸಾಧ್ಯ ? ಎಂಬುದು ಅದ್ವೈತಿಗಳ ಆಕ್ಷೇಪ. ಆದರೆ ಪೂರ್ವಮೀಮಾಂಸೆಯಲ್ಲಿ ಅಧ್ಯಯನವು ಸಂಸ್ಕಾರರೂಪವೆಂದು ಹೇಗೆ ಸಮರ್ಥನೆ ಮಾಡಿಲ್ಲವೋ, ಅದರಂತೆ ಬ್ರಹ್ಮಮೀಮಾಂಸೆಯಲ್ಲಿಯೂ ಸಹ ಬಾದರಾಯಣರು ಸಂಸ್ಕಾರರೂಪವೆಂದು ಸಮರ್ಥನೆ ಮಾಡಿಲ್ಲ. ಅದ್ವೈತಿಗಳೂ ಸಹ 'ಸಂಸ್ಕಾರಪರಾಮರ್ಶಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ, ಉಪನಯನರೂಪ ಸಂಸ್ಕಾರವಿಲ್ಲವೆಂದಷ್ಟೇ ಹೇಳಿದ್ದಾರೆ. ಹೊರತಾಗಿ ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರರೂಪವೆಂದು ಹೇಳಿಲ್ಲ.

ಮತ್ತು ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಪುನರುಕ್ತಿಯನ್ನು ನೀವು ಪರಿಹರಿಸಿಕೊಂಡರೂ ಪೂರ್ವಮೀಮಾಂಸೆಯ ಮೊದಲಿನ ಧರ್ಮಜಿಜ್ಞಾಸಾಧಿಕರಣದಿಂದ ಪುನರುಕ್ತಿಯು ಬಂದೇ ಬರುತ್ತದೆ. ಏಕೆಂದರೆ ಅಲ್ಲಿ ದೃಷ್ಟಫಲವನ್ನೇ ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪಿಸಬಾರದು. ವೇದಕ್ಕೆ ವೇದಾರ್ಥತತ್ವಜ್ಞಾನವೆಂಬ ದೃಷ್ಟಫಲವನ್ನೇ ಫಲವನ್ನಾಗಿ ಹೇಳಬೇಕೆಂದು ಸಮರ್ಥನೆ ಮಾಡಿದ್ದಾರೆ.

ಅದ್ವೈತಿಗಳ ಪೂರ್ವಪಕ್ಷವೂ ಸಹ ಸರಿಯಲ್ಲ. ಏಕೆಂದರೆ ಸಿದ್ಧಾಂತ ಮಾಡುವ ಸೂತ್ರಗಳಲ್ಲಿ ಶೂದ್ರನಿಗೆ ಉಪನಯನಸಂಸ್ಕಾರವಿಲ್ಲ. ಮತ್ತು ಅಧ್ಯಯನ ಮಾಡುವ ಅಧಿಕಾರವೂ ಸಹ ಇರುವುದಿಲ್ಲವೆಂದು ಸಮರ್ಥಿಸಲಾಗಿದೆ. ಆದಕ್ಕನುಗುಣವಾಗಿ ಶೂದ್ರನಿಗೆ ಅಧ್ಯಯನವನ್ನು ಹೇಳಬಹುದಲ್ಲವೇ? ಉಪನಯನಸಂಸ್ಕಾರವನ್ನೂ ಕೂಡ ಹೇಳಬಹುದಲ್ಲವೇ? ಎಂದೇ ಪೂರ್ವಪಕ್ಷ ಮಾಡಬೇಕು. ಅದನ್ನು ಬಿಟ್ಟು ಅಧ್ಯಯನವು ಪ್ರಧಾನಕರ್ಮವಾಗಿದೆಯೆಂದು ಪೂರ್ವಪಕ್ಷ ಮಾಡುವುದು ಯುಕ್ತವಲ್ಲ.

ಮತ್ತು 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಹೇಗೆ ಶಾಬ್ದಾಪರೋಕ್ಷವು ಬರುತ್ತದೋ, ಅದರಂತೆ 'ತತ್ವಮಸಿ' ಎಂಬ ವಾಕ್ಯದಿಂದ ಶಾಬ್ದಾಪರೋಕ್ಷವು ಬರುತ್ತದೆಂಬುದು ಅದ್ವೈತಿಗಳ ನಿಲುವು. ಬ್ರಾಹ್ಮಣರಿಗೆ 'ತತ್ವಮಸಿ' ಎಂಬ ವಾಕ್ಯವನ್ನು ಕೇಳಿದಾಗ ಬ್ರಹ್ಮಾಪರೋಕ್ಷವು ಬರುವಂತೆ ಶೂದ್ರರಿಗೂ ಬರಬಹುದಲ್ಲವೇ? ಅಪರೋಕ್ಷೇಕರಸನಾದ ಬ್ರಹ್ಮನಲ್ಲಿ ಅಪರೋಕ್ಷವಾಗುವಿಕೆಯೆಂಬ ಗುಣವಿರುವಾಗ ವಾಕ್ಯವನ್ನು ಕೇಳಿದ ವ್ಯಕ್ತಿಯು ಬ್ರಾಹ್ಮಣನಾದರೇನು ? ಶೂದ್ರನಾದರೇನು? ವಿಪರೀತಜ್ಞಾನ ಮೊದಲಾದ ಪ್ರತಿಬಂಧಕಗಳ ಪರಿಹಾರಕ್ಕಾಗಿ ಬ್ರಾಹ್ಮಣಾದಿಗಳು ಮನನನಿಧಿ ಧ್ಯಾಸಗಳಲ್ಲಿ ತೊಡಗುವಂತೆ ಶೂದ್ರನೂ ಸಹ ತೊಡಗಬಹುದಲ್ಲವೇ? ಹಾಗಾಗಿ ಶೂದ್ರನಿಗೂ ಕೂಡ 'ತತ್ವಮಸಿ' ಎಂಬ ವಾಕ್ಯವನ್ನು ಕೇಳಿದಾಗ ಮೋಕ್ಷವು ಬರಬೇಕಾದೀತು. 'ಇಯಂ ಶುಕ್ತಿಃ' ಎಂಬ ಬಾಧಜ್ಞಾನವು ಬಂದಾಗ ಶುಕ್ತಿಯ ಬಗ್ಗೆ ಇರುವ ಅಜ್ಞಾನವು ಬ್ರಾಹ್ಮಣನಿಗೆ ಹೇಗೆ ಪರಿಹಾರವಾಗುತ್ತದೋ, ಅದರಂತೆ ಶೂದ್ರನಿಗೂ ಸಹ ಪರಿಹಾರವಾಗುತ್ತದೆ. ಅದರಂತೆ 'ತತ್ವಮಸಿ' ಎಂಬ ವಾಕ್ಯದಿಂದ ಬ್ರಾಹ್ಮಣನಿಗೆ ಮೋಕ್ಷವೆಂಬ ಫಲವು ಹೇಗೆ ದೊರೆಯುತ್ತದೋ, ಅದರಂತೆ ಶೂದ್ರನಿಗೂ ಕೂಡ ಫಲವು ದೊರೆಯಲೇ ಬೇಕು. ನಮ್ಮಲ್ಲಿ ಈ ದೋಷವಿಲ್ಲ. ಏಕೆಂದರೆ ನಾವು ಜ್ಞಾನದಿಂದ ನೇರವಾಗಿ ಮೋಕ್ಷವಾಗುತ್ತದೆಂದು ಒಪ್ಪಿಲ್ಲ. ಹೊರತಾಗಿ ಅದೃಷ್ಟದ ಮೂಲಕ, ಅಥವಾ ಈಶ್ವರನ ಪ್ರಸಾದದ ಮೂಲಕ ಜ್ಞಾನವು ಬಂಧನಿವರ್ತಕವಾಗುತ್ತದೆಂದು ಒಪ್ಪಿದ್ದೇವೆ. ಆದರೆ ಅದ್ವೈತಿಗಳು ಹೀಗೊಪ್ಪದ ಕಾರಣ, ಶೂದ್ರನಿಗೆ ಈಶ್ವರನ ಪ್ರಸಾದವಿಲ್ಲವೆಂಬ ಕಾರಣದಿಂದ ಮೋಕ್ಷವಾಗುವುದಿಲ್ಲವೆಂದು ಉತ್ತರಿಸಲಾಗದು.

ಇನ್ನು ಶೂದ್ರನು ವೇದಾಧ್ಯಯನ ಮಾಡಬಾರದೆಂಬ ವಿಧಿಯಿದ್ದರೂ ಕೂಡ ಅಧ್ಯಯನವನ್ನು ಮಾಡಿದ್ದಾನೆ. ಆದ್ದರಿಂದ ಪ್ರತ್ಯವಾಯವು ಬಂದಿದೆ. ಪ್ರತ್ಯವಾಯವೆಂಬ ಪ್ರತಿಬಂಧಕವಿರುವ ಕಾರಣ ಅವನಿಗೆ ಮೋಕ್ಷವಾಗಿಲ್ಲವೆಂಬ

ಉತ್ತರವನ್ನು ಅದ್ವೈತಿಗಳಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ತತ್ವಮಸಿ ಎಂಬ ವಾಕ್ಯವನ್ನು ಕೇಳಿದಾಗ ಶೂದ್ರನಿಗೆ ಮೋಕ್ಷವುಂಟಾಗಿ ಸಮಗ್ರ ಪ್ರಪಂಚವೇ ನಿವೃತ್ತವಾಗಿದೆ. ಆವಾಗ ಪ್ರಪಂಚದಲ್ಲಿ ಸೇರಿರುವ ಪ್ರತ್ಯವಾಯವೂ ಸಹ ಪರಿಹಾರವಾಗುತ್ತದೆ. ಆದ್ದರಿಂದ ಅದ್ವೈತಿಗಳ ಪೂರ್ವಪಕ್ಷವಾಗಲೀ, ಸಿದ್ಧಾಂತವಾಗಲೀ ಅತ್ಯಂತ ಅಸಾಧುವಾಗಿದೆ.

*ತತ್ವಜ್ಞಾನ ಪಡೆಯಲು ಅದ್ವೈತಿಗಳಿಗೆ ವೇದವೇ ಬೇಡ*

ತ್ರೈವರ್ಣಿಕರನ್ನು ಬಿಟ್ಟು ಉಳಿದವರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸುವ ಅದ್ವೈತಿಗಳಿಗೆ ಸನ್ನ್ಯಾಯವಿರೋಧ ಬರುತ್ತದೆ. ತಮ್ಮ ಅಧ್ಯಾಸಭಾಷ್ಯದಲ್ಲಿ ಅದ್ವೈತಿಗಳು ಬ್ರಾಹ್ಮಣ್ಯಾದಿಗಳೆಲ್ಲವನ್ನೂ ಅಧಸ್ತವಾಗಿವೆಯೆಂದು ಸಮರ್ಥಿಸಿದ್ದಾರೆ. ಅಂದರೆ ಕ್ಷತ್ರಿಯತ್ವ, ಬ್ರಾಹ್ಮಣ್ಯ ಮೊದಲಾದವುಗಳು ಶರೀರದ ಧರ್ಮಗಳು. ಶರೀರದ ಅಭೇದವು ಆತ್ಮನಲ್ಲಿ ಅಧ್ಯಸ್ತವಾಗಿದೆ. ಇಂತಹ ವ್ಯಕ್ತಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಅದ್ವೈತಿಗಳು ಒಪ್ಪಿರುತ್ತಾರೆ. ಹಾಗಾದರೆ ಬ್ರಾಹ್ಮಣೀ ಸ್ತ್ರೀಯಲ್ಲಿ ಶೂದ್ರನಿಂದ ಒಬ್ಬ ವ್ಯಕ್ತಿಯು ಹುಟ್ಟುತ್ತಾನೆ. ವಸ್ತುತಃ ಇವನು ಚಂಡಾಲ ಆದರೂ ತನ್ನ ತಾಯಿ, ಬ್ರಾಹ್ಮಣಿಯಾಗಿದ್ದಾಳೆಂಬ ಕಾರಣದಿಂದ ತನ್ನಲ್ಲಿಯೂ ಬ್ರಾಹ್ಮಣ್ಯವನ್ನು ಅಧ್ಯಾಸ ಮಾಡಿಕೊಳ್ಳುತ್ತಾನೆ. ಇಂತಹ ವ್ಯಕ್ತಿಗೂ ಯಾಗಾದಿಕಾರವನ್ನು ಹೇಳಬೇಕಾದೀತು.

ಮತ್ತು ಅಧ್ಯಯನದಿಂದ ತತ್ವಜ್ಞಾನವನ್ನು ಅದ್ವೈತಿಗಳಿಗೆ ಹೊಂದುವ ಅವಶ್ಯಕತೆಯೇ ಇಲ್ಲ. ಸುಲಭವಾಗಿ ತರ್ಕಗಳಿಂದಲೇ ತತ್ವಜ್ಞಾನವನ್ನು ಪಡೆಯಬಹುದು. ಹೀಗಿರುವಾಗ ಬಹಳ ಕಠಿಣಶ್ರಮವಾದ ವೇದಾಂತಾಧ್ಯಯನದಲ್ಲಿ ತೊಡಗುವುದು ವ್ಯರ್ಥ. ಏಕೆಂದರೆ ಚಿನ್ಮಾತ್ರವು ಸತ್ಯವಾಗಿದೆ. ಉಳಿದದೆಲ್ಲವೂ ಆರೋಪಿತವಾಗಿದೆ ಎಂಬ ಜ್ಞಾನವೇ ಮೋಕ್ಷಸಾಧನವೆಂದು ಅದ್ವೈತಿಗಳು ನಿರೂಪಣೆ ಮಾಡುತ್ತಾರೆ. ಇದನ್ನು ತಿಳಿಯಲು ಖಂಡನಕಾರನಾದ ಶ್ರೀಹರ್ಷನು ಪ್ರಯೋಗಿಸಿದ ತರ್ಕಗಳಿಂದಲೇ ತಿಳಿಯಬಹುದು. ಪ್ರಮಾಣ, ಪ್ರಮೇಯ ಮೊದಲಾದವುಗಳೆಲ್ಲವೂ ಮಿಥ್ಯಾಭೂತವಾಗಿವೆಯೆಂದು ಅವನು ತನ್ನ ತರ್ಕಗಳಲ್ಲಿ ಸಮರ್ಥನೆ ಮಾಡಿದ್ದಾನೆ. ಅಥವಾ ಸ್ವತಃ ಅದ್ವೈತಿಗಳೂ ಕೂಡ 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನವನ್ನು ಪ್ರಯೋಗ ಮಾಡುತ್ತಾರೆ. ಇದರಿಂದಲೇ ಸಮಗ್ರ ಜಗತ್ತು ಮಿಥ್ಯಾಭೂತವಾಗಿದೆಯೆಂದು ತತ್ವಜ್ಞಾನವು ದೊರೆಯುತ್ತದೆ. ಹೀಗಿರುವಾಗ ವೇದಾಂತಾಧ್ಯಯನವನ್ನೇಕೆ ಮಾಡಬೇಕು. ವೇದಾಂತಗಳಿಂದ ಮೊದಲು ಬ್ರಹ್ಮನು ಸರ್ವಜ್ಞನಾಗಿದ್ದಾನೆ. ಸರ್ವಕರ್ತೃವಾಗಿದ್ದಾನೆ ಇತ್ಯಾದಿಯಾಗಿ ತಿಳಿದು, ಅನಂತರ 'ನೇಹನಾನಾಸ್ತಿಕಿಂಚನ' ಎಂಬ ಶ್ರುತಿಯಿಂದ ತಿಳಿದಿದ್ದೆಲ್ಲವೂ ಕೂಡ ಮಿಥ್ಯಾಭೂತವಾಗಿದೆಯೆಂಬ ಅರಿವನ್ನು ಪಡೆದು ಬಹಳ ಶ್ರಮದಿಂದ ಅಧ್ಯಯನ ಶಮದಮಾದಿಗಳನ್ನು ಮಾಡಿ ಕಷ್ಟದಿಂದ ವೇದಾಂತವಿಚಾರವನ್ನು ಮಾಡುವ ಅವಶ್ಯಕತೆಯಿಲ್ಲ.

*ರಾಮಾನುಜರ ಅಧಿಕರಣ ವಿಮರ್ಶೆ*

ರಾಮಾನುಜರು ಅಪಶೂದ್ರಾಧಿಕರಣದ ರಚನೆಯನ್ನು ಹೀಗೆ ಮಾಡಿದ್ದಾರೆ -

**ಪೂರ್ವಪಕ್ಷ** - ಶೂದ್ರಾದಿಗಳಿಗೆ ಉಪನಯನಾದಿ ಸಂಸ್ಕಾರಗಳಿಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಮತ್ತು ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರ ರೂಪವಾದ್ದರಿಂದ ಅದರಲ್ಲೂ ಅಧಿಕಾರವಿಲ್ಲ. ಭಾಷಾ ಪ್ರಬಂಧಾದಿಗಳಿಂದ ಪಡೆಯುವ ಜ್ಞಾನವು ಶ್ರೇಯಸ್ಸಾಧನವಾಗುವುದಿಲ್ಲ. ಆದ್ದರಿಂದ ಮಹಾಭಾರತಾದಿ ಗ್ರಂಥಗಳನ್ನು ಕೇಳಿ ತಿಳಿದು, ಅದರಿಂದ ಬ್ರಹ್ಮಜ್ಞಾನವನ್ನು ಪಡೆದು ಬ್ರಹ್ಮೋಪಾಸನೆಯಲ್ಲಿ ತೊಡಗಬೇಕು.

ಸಿದ್ಧಾಂತ - 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್' ಎಂಬ ಮಾತಿನಂತೆ ಇತಿಹಾಸ ಪುರಾಣಾದಿಗಳ ಪ್ರವೃತ್ತಿಯೇ ವೇದವನ್ನು ಅಧ್ಯಯನ ಮಾಡುವುದಕ್ಕಾಗಿ; ಇವುಗಳಲ್ಲಿ ಹೇಳಿದ ಅಭಿಪ್ರಾಯವನ್ನು

ಮನಸ್ಸಿನಲ್ಲಿಟ್ಟುಕೊಂಡು ವೇದಾಧ್ಯಯನ ಮಾಡಿ, ತನ್ಮೂಲಕ ಭಗವಂತನನ್ನು ಅರಿಯಬೇಕು ಹೊರತಾಗಿ, ಇತಿಹಾಸಪುರಾಣಾದಿಗಳನ್ನು ಸ್ವತಂತ್ರವಾಗಿ ಅಧ್ಯಯನ ಮಾಡಿ ಬ್ರಹ್ಮನನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಶೂದ್ರನಿಗೆ ಮಹಾಭಾರತಾದಿ ಗ್ರಂಥಗಳ ಅಧ್ಯಯನದಲ್ಲೂ ಅಧಿಕಾರವಿರುವುದಿಲ್ಲ.

ರಾಮಾನುಜರ ಈ ಅಧಿಕರಣಶರೀರವು ಅಸಾಧುವಾಗಿದೆ. ಮೊದಲು ಪೂರ್ವಪಕ್ಷ ಮಾಡುವಾಗ ವೇದದಲ್ಲಿ ಅಧಿಕಾರವಿಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಿದರು. ಆದರೆ ಅನೇಕ ಸ್ಮೃತಿಗಳನ್ನು ಓದಿ ಯಾಗಾದಿಕರ್ಮಗಳ ಜ್ಞಾನವನ್ನು ಸಂಪಾದನೆ ಮಾಡಬಹುದು. ಮತ್ತು ಸಂವರ್ಗವಿದ್ಯೆಯ ಪ್ರಕರಣವನ್ನು ನೋಡಿದಾಗ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದಷ್ಟೇ ತಿಳಿಯುತ್ತದೆ. ಇತಿಹಾಸಾದಿಗಳಲ್ಲಿ ಅಧಿಕಾರವಿಲ್ಲವೆಂದು ಅಲ್ಲಿ ಹೇಳಿಲ್ಲ. ಮತ್ತು ಇತಿಹಾಸಾದಿಗಳಿಂದ ಬ್ರಹ್ಮಜ್ಞಾನವನ್ನು ಪಡೆಯಬಾರದೆನ್ನಲು ಯಾವುದೇ ನಿಷೇಧವಾಕ್ಯಗಳು ಕಾಣಸುತ್ತಿಲ್ಲ. 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ವಾಕ್ಯವು ವೇದಗಳ ತಾತ್ಪರ್ಯವನ್ನು ಇತಿಹಾಸಾದಿಗಳಿಗೆ ಅನುಸಾರಿಯಾಗಿ ಅರಿಯಬೇಕೆನ್ನಲು ಹೊರಟಿದೆ ಹೊರತು, ವೇದವನ್ನು ಅಪೇಕ್ಷೆ ಪಡದೆ ಸ್ವತಂತ್ರವಾಗಿ ಇತಿಹಾಸಾದಿಗಳಿಂದ ತತ್ವಜ್ಞಾನವನ್ನು ಪಡೆಯಲೇಬಾರದೆಂದು ಹೇಳುವುದಕ್ಕಾಗಿ ಹೊರಟಿಲ್ಲ. ಆದ್ದರಿಂದ ಶೂದ್ರಾದಿಗಳು ಮಹಾಭಾರತಾದಿಗಳಿಂದ ಬ್ರಹ್ಮಜ್ಞಾನವನ್ನು ಪಡೆದು ಅದನ್ನು ಉಪಾಸನೆ ಮಾಡಬಹುದು. ಹೀಗೆ ಶೂದ್ರಾದಿಗಳು ತತ್ತ್ವಜ್ಞಾನವನ್ನು ಸಂಪಾದನೆ ಮಾಡಬೇಕೆಂದು ಹೇಳಲು ಆಧಾರವಿದೆ. ಮತ್ತು ಹಾಗೇ ಅವರು ಮಾಡುವುದರಿಂದ ಫಲವೂ ಸಹ ದೊರೆಯುತ್ತದೆಂದು 'ಶೂದ್ರಃಸುಖಮವಾಪ್ನುಯಾತ್' ಇತ್ಯಾದಿಗಳು ಹೇಳುತ್ತಿವೆ. ಮಹಾಭಾರತಾದಿ ಗ್ರಂಥಗಳ ಶ್ರವಣದಿಂದ ಶೂದ್ರಾದಿಗಳಿಗೆ ತತ್ತ್ವಜ್ಞಾನವು ದೊರೆತು ಅದರಿಂದ ಉಪಾಸನೆಯಲ್ಲಿ ತೊಡಗಬಹುದು. ಕೇವಲ ಪಾಪಕ್ಷಯಕ್ಕಾಗಿ ಈ ವಾಕ್ಯವು ಶೂದ್ರಾದಿಗಳಿಗೆ ಮಹಾಭಾರತಾದಿ ಗ್ರಂಥಗಳ ಪಠನವನ್ನು ಹೇಳುತ್ತಿಲ್ಲ.

ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥

ಇತ್ಯಾದಿ ಸ್ಮೃತಿಯಿಂದಲೂ ಮಹಾಭಾರತಾದಿ ಗ್ರಂಥಗಳ ನಿರ್ಮಾಣವಾಗಿದ್ದೇ ಶೂದ್ರರಿಗೋಸ್ಕರ ಎಂದು ತಿಳಿಯುತ್ತದೆ. ಆದ್ದರಿಂದ ವೇದದಿಂದ ಬ್ರಹ್ಮಜ್ಞಾನವನ್ನು ಪಡೆಯಲು ಶೂದ್ರಾದಿಗಳಿಗೆ ಅಧಿಕಾರವಿಲ್ಲದಿದ್ದರೂ ಇತಿಹಾಸಾದಿಗಳಿಂದ ಬ್ರಹ್ಮಜ್ಞಾನವನ್ನು ಪಡೆಯಲು ಅಧಿಕಾರವನ್ನು ಹೊಂದಿದ್ದಾರೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಸ್ಪಷ್ಟವಾಗಿ -

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ।
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ'

ಎಲೈ ! ಪಾರ್ಥನೇ ಪಾಪ ಯೋನಿಯಲ್ಲಿ ಹುಟ್ಟಿದ್ದರೂ ಸ್ತ್ರೀಯರು, ವೈಶ್ಯರು, ಶೂದ್ರರು, ನನ್ನನ್ನು ತಿಳಿದು, ನನ್ನನ್ನೇ ಪಡೆಯುತ್ತಾರೆ. ಹೀಗಿರುವಾಗ ಪುಣ್ಯಾತ್ಮನಾದ ಬ್ರಾಹ್ಮಣರು ಭಕ್ತರಾದ ರಾಜರ್ಷಿಗಳು ನನ್ನನ್ನು ಹೊಂದದೇ ಇರುತ್ತಾರೇನು? ಎಂದು ಸ್ತ್ರೀ-ಶೂದ್ರಾದಿಗಳೂ ಸಹ ತನ್ನನ್ನು ತಿಳಿಯುತ್ತಾರೆಂದು ಹೇಳಿರುತ್ತಾನೆ. ಆದ್ದರಿಂದ ಸ್ತ್ರೀಯರಿಗೆ ಇತಿಹಾಸಾದಿ ಗ್ರಂಥಗಳಿಂದ ಭಗವತ್ತತ್ತ್ವವನ್ನು ಅರಿಯಲು ಅಧಿಕಾರವಿಲ್ಲವೆಂಬ ರಾಮಾನುಜರ ಸಿದ್ಧಾಂತವು ಅಸಾಧುವಾಗಿದೆ.

### *ಅದ್ವೈತ ಹಾಗೂ ವಿಶಿಷ್ಟಾದ್ವೈತ ಮತದ ಪ್ರಥಮಸೂತ್ರಾರ್ಥ ವಿಮರ್ಶೆ*

ಅದ್ವೈತಿಗಳ ಪ್ರಥಮ ಸೂತ್ರ ವ್ಯಾಖ್ಯಾನ ಹೀಗಿದೆ - ರೈಕ್ವ ಋಷಿಯು ಪೌತ್ರಾಯಣನನ್ನು 'ಅಹ ಹಾರೇತ್ವ ಶೂದ್ರ' ಎಂದು ಸಂಬೋಧನೆ ಮಾಡಿರುವುದರಿಂದ ಪೌತ್ರಾಯಣನು ಶೂದ್ರನೇ ಆಗಿದ್ದಾನೆ. ಆದ್ದರಿಂದ ಶೂದ್ರನಿಗೂ ಕೂಡ ವೇದವಿದ್ಯಾಧಿಕಾರವಿದೆ. ಯಜ್ಞಾದಿಕರ್ಮಗಳಲ್ಲಿ ನಿಷೇಧವಿರುವಂತೆ ವೇದವಿದ್ಯೆಯಲ್ಲಿ ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂಬ ನಿಷೇಧವಿರುವುದಿಲ್ಲವೆಂದು ಪೂರ್ವಪಕ್ಷ.

ಶೂದ್ರನಿಗೆ ವೇದವಿದ್ಯಾಧಿಕಾರವನ್ನು ಹೇಳಲು ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಈ ಮೂರು ಆವಶ್ಯಕವಾಗಿವೆ. ಅರ್ಥಿತ್ವವಿದ್ದರೂ ಸಾಮರ್ಥ್ಯವಿಲ್ಲದ ಕಾರಣ ವೇದವಿದ್ಯೆಯಲ್ಲಿ ಅಧಿಕಾರವನ್ನು ಹೊಂದಲಾರನು. ಅಂದರೆ ಶೂದ್ರನಿಗೆ ಉಪನಯನವಿಲ್ಲದ ಕಾರಣ, ವೇದಾಧ್ಯಯನವನ್ನು ಮಾಡಲು ಅರ್ಹತೆಯನ್ನು ಹೊಂದಿಲ್ಲ. ಪೌತ್ರಾಯಣನನ್ನು ರೈಕ್ವ ಋಷಿಯು 'ಶೂದ್ರ' ಎಂದು ಸಂಬೋಧನೆ ಮಾಡಿದ್ದಾರೆ. ಕಾರಣವೇನೆಂದರೆ ಹಂಸಗಳ ಅನಾದರದಿಂದ ದುಃಖಗೊಂಡಿದ್ದಾನೆ. ಈ ದೃಷ್ಟಿಯಿಂದ 'ಶೂದ್ರ' ಶಬ್ದವು ರೈಕ್ವನಲ್ಲಿರುವ ಶೋಕವನ್ನು ಸೂಚನೆ ಮಾಡುತ್ತಿದೆ ಎಂದು.

ರಾಮಾನುಜಭಾಷ್ಯದಲ್ಲಿ ಪ್ರಥಮಸೂತ್ರವ್ಯಾಖ್ಯಾನ ಹೀಗಿದೆ - ಸೂತ್ರದಲ್ಲಿರುವ 'ಶೂದ್ರ' ಶಬ್ದವು 'ಶುಚೇರ್ದಶ್ಚ' ಎಂಬ ಸೂತ್ರದಲ್ಲಿ 'ರ' ಪ್ರತ್ಯಯಬಂದು 'ಶುಚ್' ಧಾತುವಿನ 'ಚ'ಕಾರಕ್ಕೆ 'ದ'ಕಾರ ಬಂದು 'ಶೂದ್ರ' ಎಂದಾಗಿದೆ. ಶೋಕದ ಆಳವನ್ನು ಸೂಚಿಸಲು 'ಶೂ' ಎಂದು ದೀರ್ಘಬಂದಿದೆ. ಇದರಿಂದ ಶೋಚಿತೃತ್ವವು ಶೂದ್ರಶಬ್ದದ ಅರ್ಥವಾಗಿದೆ ಹೊರತು, ಶೋಕದಿಂದ ಬಂದಿದ್ದಾನೆ ಎಂದರ್ಥವಲ್ಲ. ಈ ವಿಷಯದಲ್ಲಿ 'ತದಾದ್ರವಣಾತ್' ಮತ್ತು 'ಅನಾದರಶ್ರವಣಾತ್' ಎಂಬೆರಡು ಹೇತುಗಳನ್ನು ಸೂತ್ರವು ಹೇಳಿದೆ. ಅನಾದರಶ್ರವಣವು ಕಾರಣರೂಪವಾಗಿ ಲಿಂಗವಾಗಿದೆ. ಆದ್ರವಣವು ಕಾರ್ಯರೂಪವಾಗಿ ಲಿಂಗವಾಗಿದೆ.

ಇದು ತಪ್ಪು. ಅನಾದರಶ್ರವಣದಂತೆ ಆದ್ರವಣವು ಲಿಂಗವಾಗುವುದಾದಲ್ಲಿ, 'ಚ' ಶಬ್ದವನ್ನು ಸೂತ್ರಕಾರರು ಹೇಳಬೇಕಿತ್ತು. ಮತ್ತು ಒಂದೇ ಹೇತುವಿನಿಂದಲೇ ಸಾಧ್ಯವು ಸಿದ್ಧವಾಗುತ್ತಿರುವಾಗ ಮತ್ತೊಂದು ಹೇತುವು ಯಾವುದೇ ಅತಿಶಯವನ್ನು ಉಂಟುಮಾಡುತ್ತಿಲ್ಲ. ಪ್ರಧಾನವಾದ ಸಾಧ್ಯದಲ್ಲಿ ಆದ್ರವಣರೂಪ ಹೇತು ಅನ್ವಯವನ್ನೂ ಕೂಡ ಹೊಂದುವುದಿಲ್ಲ. ಆದ್ದರಿಂದ ಆದ್ರವಣವು ಹೇತುವೆಂದು ಹೇಳಬಾರದು. ಮತ್ತು ಶೂದ್ರಶಬ್ದವನ್ನು ಉಣಾದಿಸೂತ್ರದಿಂದ ನಿಷ್ಪತ್ತಿಮಾಡುವುದಾದರೆ ಜಾತ್ಯರ್ಥವಲ್ಲವೆಂದು ನಿರಾಕರಿಸುವುದು ಕಷ್ಟವಾಗುತ್ತದೆ. ಜಾತಿವಾಚಿಯಾದ ಶೂದ್ರಶಬ್ದವೂ ಸಹ 'ರ' ಪ್ರತ್ಯಯಾಂತವೇ ಆಗಿರುತ್ತದೆ. ಹಾಗಾಗಿ ರುದ್ರ ಮೊದಲಾದ ಶಬ್ದಗಳಂತೆ ಶೂದ್ರಶಬ್ದವನ್ನೂ ಕೂಡ ನಿರುಕ್ತದ ಪ್ರಕಾರ ನಿಷ್ಪತ್ತಿ ಮಾಡಬೇಕು.

### *ಪರಮತೀಯರ ಎರಡನೆಯ ಸೂತ್ರಾರ್ಥ ವಿಮರ್ಶೆ*

ಅದ್ವೈತಿಗಳು 'ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್' ಎಂಬ ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಸಂವರ್ಗವಿದ್ಯಾ ಪ್ರಕರಣದಲ್ಲಿ 'ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಣಂ ಚ ಕಾರ್ಕ್ಷಸೇನಿಮ್' ಎಂದು ಪ್ರಸಕ್ತವಾಗಿದೆ. ಈ ವಾಕ್ಯವನ್ನು ನೋಡಿದಾಗ ಕಾಪೇಯಗೋತ್ರದಲ್ಲಿ ಹುಟ್ಟಿದ ಶೌನಕರ ಜೊತೆ ಕಾರ್ಕ್ಷಸೇನಿ ಮಗನಾದ ಅಭಿಪ್ರತಾರಿಗೆ ಸಂಬಂಧವು ತಿಳಿಯುತ್ತದೆ. ಈ ಅಭಿಪ್ರತಾರಿಯು ಚಿತ್ರರಥನ ವಂಶದಲ್ಲಿ ಬಂದವನೆಂದು ಹೇಳಬೇಕು. ಏಕೆಂದರೆ ಶೌನಕರು ಕಾಪೇಯ ಗೋತ್ರದಲ್ಲಿ ಬಂದಿರುತ್ತಾರೆ. ಅವರ ಸಂಬಂಧವನ್ನು ಅಭಿಪ್ರತಾರಿಗೆ ಹೇಳಲಾಗಿದೆ. ಚಿತ್ರರಥನೆಂಬ ಕ್ಷತ್ರಿಯನು ಹಿಂದೆ ಕಾಪೇಯರ ಮೂಲಕ ಯಾಗ ಮಾಡಿಸುತ್ತಿದ್ದಾನೆಂಬ ಉಲ್ಲೇಖವಿದೆ. 'ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್' ಎಂದು ಚಿತ್ರರಥನಿಗೆ ಕಾಪೇಯರೇ ಪುರೋಹಿತರಾಗಿದ್ದಾರೆಂದು ಹೇಳಲಾಗಿದೆ. ಚಿತ್ರರಥನಾದರೂ ಕೂಡ 'ತಸ್ಮಾತ್ ಚಿತ್ರರಥನಾಮೈಕಃ

ಕ್ಷತ್ರಪತಿರಜಾಯತ' ಎಂಬ ವಾಕ್ಯದಿಂದ ಕ್ಷತ್ರಿಯನಾಗಿದ್ದಾನೆಂದು ಸ್ಪಷ್ಟವಾಗಿದೆ. ಕ್ಷತ್ರಿಯನಾದ ಚಿತ್ರರಥನಿಗೆ ಶೌನಕರು ಪುರೋಹಿತರಾದ ಮೇಲೆ ಚಿತ್ರರಥನ ವಂಶದಲ್ಲಿ ಬಂದಿರುವ ಅಭಿಪ್ರತಾರಿಯೂ ಕೂಡ ಕ್ಷತ್ರಿಯನೇ ಆಗಬೇಕು. ಈ ಅಭಿಪ್ರತಾರಿಗೆ ಸಂವರ್ಗವಿದ್ಯಾಸಂಬಂಧವನ್ನು ಹೇಳಲಾಗಿದೆ. ಅದೇ ವಿದ್ಯೆಯನ್ನು ಪೌತ್ರಾಯಣನಿಗೆ ಉಪದೇಶ ಮಾಡಿದ್ದರಿಂದ, ಪೌತ್ರಾಯಣನೂ ಕೂಡ ಕ್ಷತ್ರಿಯನೇ ಆಗುತ್ತಾನೆ. ಹೀಗೆ ಪೌತ್ರಾಯಣನು ಕ್ಷತ್ರಿಯನಾಗಿದ್ದಾನ್ನೆನ್ನಲು ಲಿಂಗವನ್ನು ಎರಡನೆಯ ಸೂತ್ರವು ಸಮರ್ಥನೆ ಮಾಡಿದೆ. ರಾಮಾನುಜರೂ ಸಹ ಇದೇ ಕ್ರಮದಲ್ಲೇ ಎರಡನೆಯ ಸೂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ.

ಇದು ತಪ್ಪು. ಏಕೆಂದರೆ ಸೂತ್ರದಲ್ಲಿ 'ಸಮಭಿವ್ಯಾಹಾರಾತ್' ಎಂಬುದನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ಮತ್ತು ಪೌತ್ರಾಯಣನಿಗೆ ಕ್ಷತ್ರಿಯತ್ವವನ್ನು ಸಮರ್ಥನೆ ಮಾಡಬೇಕೆಂದರೆ ಅಭಿಪ್ರತಾರಿಯ ಸಮಭಿವ್ಯಾಹಾರವು ನಿಶ್ಚಯವಾಗಬೇಕು. ಅಭಿಪ್ರತಾರಿಯು ಕ್ಷತ್ರಿಯನಾಗಿದ್ದರೆ ಮಾತ್ರ ಇವನ ಜೊತೆ ಸಹಪಠಿತನಾದ ಕಾರಣದಿಂದ ಪೌತ್ರಾಯಣನು ಕ್ಷತ್ರಿಯನಾಗಿದ್ದಾನೆಂದು ನಿರ್ಧಾರ ಮಾಡಬಹುದು. ಆದರೆ ಅಭಿಪ್ರತಾರಿಯು ಕ್ಷತ್ರಿಯನಾಗಿದ್ದಾನೆಂದು ನಿರ್ಧಾರವಾಗಬೇಕಾದರೆ ಚಿತ್ರರಥನ ವಂಶದಲ್ಲಿ ಹುಟ್ಟಿದ್ದಾನೆಂಬುದು ಮೊದಲು ನಿಶ್ಚಯವಾಗಬೇಕು. ಇದು ನಿಶ್ಚಯವಾಗಬೇಕಾದರೆ, ಚಿತ್ರರಥನಿಗೂ ಕಾಪೇಯರಿಗೂ ಯಾಜಕತ್ವೇನ ಸಂಬಂಧವಿದೆಯೆಂಬುದು ನಿರ್ಧಾರವಾಗಬೇಕು. ಆದರೆ ಶ್ರುತಿವಾಕ್ಯವನ್ನು ನೋಡಿದಾಗ ಕಾಪೇಯರಿಗೂ ಅಭಿಪ್ರತಾರಿಗೂ ಸಂಬಂಧವು ತಿಳಿಯುತ್ತಿದೆ ಹೊರತು, ಯಾಜಕತ್ವೇನ ಸಂಬಂಧವು ತಿಳಿಯುತ್ತಿಲ್ಲ. ಒಂದು ವೇಳೆ ಯಾಜಕತ್ವೇನ ಸಂಬಂಧವು ತಿಳಿದರೂ ಕೂಡ ಅಭಿಪ್ರತಾರಿಯು ಚಿತ್ರರಥನ ವಂಶದಲ್ಲೇ ಬಂದಿದ್ದಾನೆಂಬುದು ಸಿದ್ಧವಾಗುವುದಿಲ್ಲ.

ಏಕೆಂದರೆ ಚಿತ್ರರಥನ ವಂಶದಲ್ಲಿ ಬಾರದಿದ್ದರೂ ಕೂಡ ಅಂತಹವರಿಗೂ ಕಾಪೇಯರು ಪುರೋಹಿತರಾಗಬಹುದು. ಆದ್ದರಿಂದ ಕಾಪೇಯರು ಪುರೋಹಿತರಾಗಿದ್ದಾರೆಂಬ ಅಂಶದಿಂದಷ್ಟೇ ಅಭಿಪ್ರತಾರಿಯು ಕ್ಷತ್ರಿಯನಾಗಿದ್ದಾನೆಂದು ನಿರ್ಧಾರ ಮಾಡಲಾಗದು.

ಒಂದು ವೇಳೆ. ಅಭಿಪ್ರತಾರಿಯು ಕ್ಷತ್ರಿಯನೆಂದು ನಿರ್ಧಾರವಾದರೂ ಕೂಡ ಅವನ ಸಂಬಂಧವಿರುವ ಮಾತ್ರದಿಂದ ಪೌತ್ರಾಯಣನು ಕ್ಷತ್ರಿಯನಾಗಬೇಕೆಂದೇನೂ ನಿಯಮವಿಲ್ಲ. ಏಕೆಂದರೆ ಅಭಿಪ್ರತಾರಿಯ ಜೊತೆ ಪೌತ್ರಾಯಣನು ಹೇಗೆ ಸಹಪಠಿತನಾಗಿದ್ದಾನೋ, ಅದರಂತೆ ಕಾಪೇಯರೂ ಕೂಡ ಸಹಪಠಿತರಾಗಿದ್ದಾರೆ. ಸಹಪಠಿತವಾದ ಮಾತ್ರದಿಂದ ಕ್ಷತ್ರಿಯನಾಗುವುದಾದರೆ, ಕಾಪೇಯರೂ ಕೂಡ ಕ್ಷತ್ರಿಯರಾಗಬೇಕಾದೀತು.

ಅಥವಾ ನಿಶ್ಚಿತಬ್ರಾಹ್ಮಣ್ಯವುಳ್ಳ ಕಾಪೇಯರ ಸಂಬಂಧವನ್ನು ಪೌತ್ರಾಯಣನಿಗೆ ಹೇಳಿರುವುದರಿಂದ ಪೌತ್ರಾಯಣನೇ ಬ್ರಾಹ್ಮಣನಾಗಬೇಕಾದೀತು. ಏಕೆಂದರೆ 'ವಿಶಯೇ ಪ್ರಾಯದರ್ಶನಾತ್' ಎಂದು ಹೇಳಿದ್ದರಿಂದ ಕಾಪೇಯರಲ್ಲಿ ಬ್ರಾಹ್ಮಣ್ಯದ ನಿಶ್ಚಯವಿದೆ. ಪೌತ್ರಾಯಣನಲ್ಲಿ ಮಾತ್ರ ಕ್ಷತ್ರಿಯತ್ವದ ಸಂದೇಹವಿದೆ. ಹೀಗೆ ನಿಶ್ಚಿತ ಬ್ರಾಹ್ಮಣ್ಯವುಳ್ಳ ಕಾಪೇಯರ ಜೊತೆ ಸಹಪಠಿತನಾದ್ದರಿಂದ ಪೌತ್ರಾಯಣನು ಬ್ರಾಹ್ಮಣನೇ ಆಗಬೇಕಾದೀತು. ಗ್ರಾಮೇಶತ್ವ ಮೊದಲಾದ ಬಾಧಕಲಿಂಗಗಳಿರುವುದರಿಂದ ನಿಶ್ಚಿತ- ಬ್ರಾಹ್ಮಣ್ಯವುಳ್ಳ ಕಾಪೇಯರ ಜೊತೆ ಸಹಪಠಿತನಾಗಿದ್ದರೂ ಪೌತ್ರಾಯಣನು ಬ್ರಾಹ್ಮಣನಾಗುವುದಿಲ್ಲವೆನ್ನುವುದಾದರೆ, ನೇರವಾಗಿ ಗ್ರಾಮೇಶತ್ವಲಿಂಗದಿಂದ ಪೌತ್ರಾಯಣನಿಗೆ ಕ್ಷತ್ರಿಯತ್ವವನ್ನು ಸಾಧಿಸಬಹುದಲ್ಲವೇ? ಇಷ್ಟೆಲ್ಲಾ ಶ್ರಮಪಟ್ಟು ವಕ್ರಮಾರ್ಗವನ್ನೇಕೆ ಅನುಸರಿಸುತ್ತೀರಿ.

ಮತ್ತು ಬ್ರಾಹ್ಮಣರ ಸಮಭಿವ್ಯಾಹಾರವಿರುವ ಕಾರಣ ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದು ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಸೂತ್ರಕಾರರು ರೈಕ್ವ ಶಬ್ದದ ಸಮಭಿವ್ಯಾಹಾರವನ್ನೇ ಲಿಂಗವನ್ನಾಗಿ ಹೇಳುತ್ತಿದ್ದರು. ಚಿತ್ರರಥ ಶಬ್ದದ ಸಮಭಿವ್ಯಾಹಾರವನ್ನು ಲಿಂಗವನ್ನಾಗಿ ಹೇಳಿದ್ದು ತಪ್ಪಾಗುತ್ತದೆ

*ಉಳಿದ ಮೂರು ಸೂತ್ರಾರ್ಥಗಳ ವಿಮರ್ಶೆ*

'ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ' ಎಂಬ ಮೂರನೆಯ ಸೂತ್ರಕ್ಕೆ ಪರಮತೀಯರು ಹೀಗೆ ವ್ಯಾಖ್ಯಾನ ಮಾಡುತ್ತಾರೆ. 'ತಂ ಹೋಪನಿನ್ಯೇ' ಎಂಬುದು ವಿಷಯವಾಕ್ಯ. ಇದರಲ್ಲಿ ಉಪನಯನಸಂಸ್ಕಾರವನ್ನು ಬ್ರಾಹ್ಮಣನಿಗೆ ಹೇಳಿರುವುದರಿಂದ, ಶೂದ್ರರಿಗೆ ಉಪನಯನಸಂಸ್ಕಾರವಿಲ್ಲವೆಂದು ತಿಳಿಯುತ್ತದೆ. ಮತ್ತು 'ನಶೂದ್ರೇ ಪಾತಕಂ ಕಿಂಚಿತ್' ಎಂಬ ವಾಕ್ಯದಿಂದಲೂ ಶೂದ್ರನಿಗೆ ವೇದಾದಿವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಹೇಳಲಾಗಿದೆ.

ಇದು ತಪ್ಪು. ನಾವು ಹೇಳುವಂತೆ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ' ಎಂಬುದನ್ನೇ ವಿಷಯವಾಕ್ಯವೆಂದು ಪರಿಗಣಿಸಿ, 'ತತ್' ಶಬ್ದದಿಂದ ಸಂಸ್ಕಾರದ ಪರಾಮರ್ಶವನ್ನು ನೇರವಾಗಿ ಹೇಳುವಂತೆ 'ತಂ ಹೋಪನಿನ್ಯೇ' ಎಂಬ ವಾಕ್ಯದಿಂದ ಸಂಸ್ಕಾರವನ್ನು ಪರಾಮರ್ಶ ಮಾಡಲಾಗದು. ಏಕೆಂದರೆ ನೇರವಾಗಿ ಉಪನಯನವನ್ನೇ ಹೇಳಿರುವಾಗ, ಪರಾಮರ್ಶ ಮಾಡಲು ಹೇಗೆ ಸಾಧ್ಯ? ಆದ್ದರಿಂದ ಸೂತ್ರದಲ್ಲಿರುವ ಪರಾಮರ್ಶ ಶಬ್ದವು ಇವರ ಮತದಲ್ಲಿ ಅಸ್ವರಸವಾಗುತ್ತದೆ.

'ತದಭಾವನಿರ್ಧಾರಣೇ ಚ ಪ್ರವೃತ್ತೇಃ' ಎಂಬುದು ನಾಲ್ಕನೆಯ ಸೂತ್ರ. ಜಾಬಾಲನು ಹೇಳಿದ ಸತ್ಯವಚನವನ್ನು ಕೇಳಿದ ಗೌತಮರು ಶೂದ್ರನಲ್ಲವೆಂದು ನಿಶ್ಚಯ ಮಾಡಿ, ಉಪನಯನದಲ್ಲಿ ಪ್ರವೃತ್ತಿ ಮಾಡುತ್ತಾರೆ. ಇದರಿಂದಲೂ ಶೂದ್ರರಿಗೆ ಉಪನಯನ ಸಂಸ್ಕಾರವಿಲ್ಲವೆಂದು ನಿಶ್ಚಯವಾಗುತ್ತದೆ.

ಇದೂ ಕೂಡ ತಪ್ಪು. 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಾಹರೋಪತ್ವಾನೇಷ್ಯೇ' ಎಂದು ನೀನು ಉದಾಹರಿಸುವ ವಾಕ್ಯದಲ್ಲಿಯೂ ಉಪನಯನದಲ್ಲೇ ಪ್ರವೃತ್ತಿಮಾಡಿದ್ದಾರೆಂದು ತಿಳಿಯುತ್ತದೆ ಹೊರತು, ಬ್ರಹ್ಮೋಪದೇಶದಲ್ಲಿ ಪ್ರವೃತ್ತಿ ಮಾಡಿದ್ದಾರೆಂದು ತಿಳಿದು, ತನ್ಮೂಲಕ ಉಪನಯನದಲ್ಲಿ ಅಧಿಕಾರವಿದೆಯೆಂದು ಸಾಧಿಸುವುದು ತಪ್ಪಾಗುತ್ತದೆ.

'ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ' - ಎಂಬುದು ಐದನೆಯ ಸೂತ್ರ. ಶೂದ್ರನು ವೇದವನ್ನು ಶ್ರವಣಮಾಡಬಾರದೆಂದು 'ಅಥಹಾಸ್ಯ ವೇದಂ ಶೃಣ್ವತಃ' ಎಂಬ ಶ್ರುತಿಯು ನಿಷೇಧ ಮಾಡುತ್ತಿದೆ. ಶ್ರವಣವೇ ನಿಷಿದ್ಧವಾದ ಮೇಲೆ ಅದರ ಅರ್ಥಜ್ಞಾನಗಳು ಸರ್ವಥಾ ನಿಷಿದ್ಧವಾಗಿವೆ. ಆದ್ದರಿಂದಲೂ ಶೂದ್ರರಿಗೆ ವೇದವಿದ್ಯಾಧಿ-ಕಾರವಿರುವುದಿಲ್ಲ.

ಇದೂ ಕೂಡ ತಪ್ಪು. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಿಂದಲೇ ಶೂದ್ರರಿಗೆ ವೇದಾಧಿಕಾರವಿಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತಿರುವಾಗ ಸ್ಮೃತಿಯ ಆಧಾರದಿಂದ ನಿಷೇಧ ಮಾಡುವುದು ತಪ್ಪಾಗುತ್ತದೆ. ಮತ್ತು ಸೂತ್ರದಲ್ಲಿರುವ 'ಚ' ಶಬ್ದವು ಭಿನ್ನಕ್ರಮದಿಂದ ಅನ್ವಯಮಾಡುವ ಪ್ರಸಂಗ ಬರುತ್ತದೆ. ಆದ್ದರಿಂದ ಪರಮತೀಯರ ಸೂತ್ರಾರ್ಥಗಳೆಲ್ಲವೂ ಅತ್ಯಂತ ಅಸಾಧುವಾಗಿವೆ.

# ಕಂಪನಾಧಿಕರಣ

*ವಜ್ರಶಬ್ದದ ಸಮನ್ವಯವು ಅಸಂಗತವಲ್ಲ*

ಕಂಪನಾಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. ಮುಂದಿನ ಸುಷುಪ್ತ್ಯಧಿಕರಣದಲ್ಲಿ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಾರೆ. ಪ್ರಥಮ ಪಾದದಲ್ಲಿ 'ವಜ್ರ' ಎಂಬ ಶಬ್ದದ ಸಮನ್ವಯವು ಅಲ್ಲಿರುವ ಸಮಾನನ್ಯಾಯಗಳಿಂದ ಮಹಾವಿಷ್ಣುವಿನಲ್ಲಿ ಒಮ್ಮೆ ಸಮನ್ವಯಗೊಂಡಿದೆ. ಸ್ವಪ್ನಾದಿದ್ರಷ್ಟೃತ್ವಲಿಂಗವೂ ಸಹ ದ್ವಿತೀಯಪಾದದ ಸಮಾನನ್ಯಾಯದಿಂದ ವಿಷ್ಣುವಿನಲ್ಲಿ ಸಮನ್ವಯಗೊಂಡಿದೆ. ಆದರೆ ಇಂದ್ರದೇವರ ವಜ್ರಾಯುಧದಲ್ಲಿಯೂ ಸಹ 'ವಜ್ರ' ಶಬ್ದದ ಪ್ರಯೋಗವಿದೆ. ಜೀವನಲ್ಲಿಯೂ ಸ್ವಪ್ನದ್ರಷ್ಟೃತ್ವಲಿಂಗವು ಪ್ರಸಿದ್ಧವಾಗಿವೆ. ಆ ಕಾರಣದಿಂದ ಈ 'ವಜ್ರ' ಶಬ್ದ ಹಾಗೂ ಸ್ವಪ್ನದ್ರಷ್ಟೃತ್ವ ಲಿಂಗಗಳೆರಡೂ ಉಭಯತ್ರಪ್ರಸಿದ್ಧವೆನಿಸುತ್ತವೆ. ಈ ಪಾದದಲ್ಲಿ ಕೆಲವು ಸ್ವತಃಸಿದ್ಧವಾದ ಉಭಯತ್ರಶಬ್ದಗಳಾಗಿರುತ್ತದೆ. ಇನ್ನು ಕೆಲವು ಪಾದದ್ವಯಾಪಾದಿತವಾಗಿ ಉಭಯತ್ರಪ್ರಸಿದ್ಧವಾಗಿರುತ್ತವೆ. ಅಂತು ಯಾವುದೇ ಒಂದು ವಸ್ತುವನ್ನು ನಿರ್ಧಾರವಾಗಿ ಪ್ರತಿಪಾದನೆ ಮಾಡಲು ಆ ಶಬ್ದಗಳಿಗೆ ಸಾಮರ್ಥ್ಯವಿರುವುದಿಲ್ಲ. ಅಂತಹ ಶಬ್ದಗಳು ಬ್ರಹ್ಮನನ್ನು ಮಾತ್ರ ಪ್ರತಿಪಾದಿಸುತ್ತವೆಂದು ಸಮರ್ಥನೆ ಮಾಡಲು ತೃತೀಯಪಾದವು ಹೊರಟಿದೆ. ಹೀಗೆ ಹೇಳಿದ್ದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಿರುವ ಆಕಾಶಾದಿಶಬ್ದಗಳೂ ಕೂಡ ಉಭಯತ್ರಪ್ರಸಿದ್ಧವಾಗಲಿ ಎಂಬ ಆಶಂಕೆಗೆ ಅವಕಾಶವಿಲ್ಲ.

'ವಜ್ರ' ಶಬ್ದವು 'ಉದ್ಯತತ್ವ' ಎಂಬ ಲಿಂಗದಿಂದ ಇಂದ್ರಾಯುಧದಲ್ಲಿ ಪ್ರಸಿದ್ಧವಾಗಿದೆ. ಹಾಗಾಗಿ ಅನ್ಯತ್ರಪ್ರಸಿದ್ಧವಾಗಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಈಗಾಗಲೇ ಹಿಂದಿನ ಲಿಂಗಪಾದದಲ್ಲಿ 'ಉದ್ಯತತ್ವ' ಎಂಬ ಲಿಂಗವೂ ಕೂಡ ಸಮಾನನ್ಯಾಯದಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಗಿದೆ. ಇಂತಹ ಲಿಂಗವು ವಿಷ್ಣುವನ್ನು ಬಿಟ್ಟು ಬೇರೆಕಡೆ ಬರುವುದಿಲ್ಲ. ಇದರ ಬಲದಿಂದ ವಜ್ರಾದಿಶಬ್ದಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಜ್ರಶಬ್ದವು ಲಿಂಗದ ಬಲದಿಂದಲೂ ಅನ್ಯತ್ರಪ್ರಸಿದ್ಧವೆಂದು ಸಿದ್ಧವಾಗುವುದಿಲ್ಲ. ಆದರೆ ಹಿಂದಿನ ಪಾದದಲ್ಲಿ ಸಮನ್ವಯ ಮಾಡಿದ ಆದಿತ್ಯಾದಿಶಬ್ದಗಳು ಅನ್ಯತ್ರಪ್ರಸಿದ್ಧವಾಗುತ್ತವೆ. ಏಕೆಂದರೆ ಅದಕ್ಕಿಂತ ಹಿಂದಿನ ಪಾದದಲ್ಲಿ ಲಿಂಗಸಮನ್ವಯವನ್ನು ಮಾಡದ ಕಾರಣ ಸರ್ವಪುರುಷಾಭಿಮುಖ್ಯ ಮೊದಲಾದ ಲಿಂಗಗಳೇ ಅನ್ಯತ್ರಪ್ರಸಿದ್ಧವಾಗಿವೆ. ಆದರ ಬಲದಿಂದ ಆದಿತ್ಯಾದಿಶಬ್ದಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತದೆ. ಹೀಗೆ ಅನ್ಯತ್ರಪ್ರಸಿದ್ಧವಾದ ಆದಿತ್ಯಾದಿಶಬ್ದಗಳ ಬಲದಿಂದ ಸರ್ವಗತತ್ವಾದಿಲಿಂಗಗಳು ಅನ್ಯತ್ರಪ್ರಸಿದ್ಧವೇ ಆಗುತ್ತವೆ ಹೊರತು, ವಜ್ರಶಬ್ದದಂತೆ ಉಭಯತ್ರಪ್ರಸಿದ್ಧವಾಗಲಿ ಎಂದು ಆಕ್ಷೇಪ ಮಾಡಲಾಗದು.

ಅಥವಾ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ವಜ್ರ' ಶಬ್ದವಾಗಲೀ, ಸುಷುಪ್ತ್ಯಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವಾಗಲಿ ಅನ್ಯತ್ರಪ್ರಸಿದ್ಧವೆಂದೇ ವಿವಕ್ಷಿಸೋಣ. ಆದರೂ ಕೂಡ ಉಭಯತ್ರಪ್ರಸಿದ್ಧವಾದ ಪಾದದಲ್ಲಿ ಸಮನ್ವಯ ಮಾಡುವುದು ಅಸಂಗತವಲ್ಲ. ಶ್ರೀಮದಾಚಾರ್ಯರು ನಾಲ್ಕನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಪ್ರಾಯಿಕತ್ವಾಚ್ಚ ಅಧ್ಯಾಯಾನಾಂ ಪಾದಾನಾಂಚ ನ ವಿರೋಧಃ' ಪ್ರತಿಯೊಂದು ಅಧ್ಯಾಯಗಳು ಹಾಗೂ ಪಾದಗಳಲ್ಲಿ ಆಯಾ ವಿಷಯಗಳನ್ನು ಹೆಚ್ಚಾಗಿ ಸಮನ್ವಯ ಮಾಡುವುದರಿಂದಷ್ಟೇ ಅಧ್ಯಾಯವ್ಯವಸ್ಥೆ ಹಾಗೂ ಪಾದವ್ಯವಸ್ಥೆಗಳಿರುತ್ತವೆಂದು ಹೇಳಿರುತ್ತಾರೆ. ಅದರಂತೆ ಮೂರನೆಯ ಪಾದದಲ್ಲಿಯೂ ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳನ್ನು ಹೆಚ್ಚಾಗಿ ಸಮನ್ವಯ ಮಾಡುವ ಕಾರಣದಿಂದ, ನಾಮಲಿಂಗಪಾದ ಎಂದು ಕರೆಸಿಕೊಳ್ಳುತ್ತದೆ. ತನ್ಮಾತ್ರದಿಂದ ಅನ್ಯತ್ರಪ್ರಸಿದ್ಧವಾದ ಶಬ್ದವನ್ನು

ಸಮನ್ವಯ ಮಾಡಲೇಬಾರದೆಂಬ ನಿಯಮವೇನೂ ಇರುವುದಿಲ್ಲ. ಅಥವಾ ಅನ್ಯತ್ರಪ್ರಸಿದ್ಧವಾದ ಶಬ್ದವನ್ನು ಇಲ್ಲಿ ಸಮನ್ವಯ ಮಾಡಿದ್ದರಿಂದ ಹೊಸದೊಂದು ಸಮನ್ವಯವನ್ನು ತಿಳಿಸಿದ್ದಾರೆ -- ಹಿಂದಿನೆರಡು ಪಾದಗಳಲ್ಲಿ ಕೆಲವು ನಾಮಾತ್ಮಕವಾದ ಹಾಗೂ ಲಿಂಗಾತ್ಮಕವಾದ ಶಬ್ದಗಳನ್ನಷ್ಟೇ ಸಮನ್ವಯ ಮಾಡಿದ್ದಾರೆ. ಎಲ್ಲವನ್ನೂ ಕೂಡ ಕಂಠತಃ ಹೇಳಿಲ್ಲ. ಹೇಳದ ನಾಮಲಿಂಗಶಬ್ದಗಳೂ ಕೂಡ ಸಮಾನನ್ಯಾಯದಿಂದ ಮಹಾವಿಷ್ಣುವಿನಲ್ಲಿ ಸಮನ್ವಯಗೊಂಡಿವೆ. ಆದ್ದರಿಂದಲೇ ವಜ್ರಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಮಹಾವಿಷ್ಣುವಿನಲ್ಲಿ ಸಮಾನನ್ಯಾಯದಿಂದ ವಜ್ರಶಬ್ದವು ಸಮನ್ವಯವಾಗದಿದ್ದಲ್ಲಿ, ಉಭಯತ್ರಪ್ರಸಿದ್ಧವೆಂದು ಹೇಳಲು ಹೇಗೆ ತಾನೆ ಸಾಧ್ಯವಾಗುತ್ತಿತ್ತು. ಈ ಎಲ್ಲಾ ಕಾರಣಗಳಿಂದ 'ವಜ್ರ' ಶಬ್ದದ ಸಮನ್ವಯವನ್ನು ತೃತೀಯಪಾದದಲ್ಲೇ ಮಾಡುತ್ತಿರುವುದು ಅತ್ಯಂತ ಸಂಗತವಾಗಿರುತ್ತದೆ. ಅದರಂತೆ ಸುಷುಪ್ತ್ಯಧಿಕರಣದ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗಸಮನ್ವಯವೂ ಕೂಡ ಸುಸಂಗತವಾಗಿದೆ.

*ವಜ್ರಶಬ್ದವು ಅನ್ಯತ್ರಪ್ರಸಿದ್ಧವೋ, ಅಥವಾ ಉಭಯತ್ರಪ್ರಸಿದ್ಧವೋ ಎಂಬುದರ ಬಗ್ಗೆ ಹಲವು ಊಹೆಗಳು*

'ಮಹದ್ಭಯಂ ವಜ್ರಮುದ್ಯತಮ್' ಎಂಬ ಶ್ರುತಿಯಲ್ಲಿ ಉದ್ಯತತ್ವ, ಭಯಂಕರತ್ವ ಮೊದಲಾದ ಲಿಂಗಗಳು ಶ್ರುತವಾಗಿವೆ. ಇವುಗಳು ಉಭಯತ್ರಪ್ರಸಿದ್ಧವಾದ ಕಾರಣ, ಇದರ ಸಾಹಚರ್ಯದಿಂದ ಜೊತೆಗಿರುವ ವಜ್ರಶಬ್ದವೂ ಕೂಡ ಉಭಯತ್ರಪ್ರಸಿದ್ಧವೇ ಆಗುತ್ತದೆ. ಇದು ಟೀಕೆಯಲ್ಲಿ ಹೇಳಿದ ಪಕ್ಷ. ಆದರೆ ಕೆಲವರು ಅನ್ಯತ್ರಪ್ರಸಿದ್ಧವಾದ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳುವಂತೆ ಉಭಯತ್ರಪ್ರಸಿದ್ಧಿಯ ಸಾಹಚರ್ಯದಿಂದ ಉಭಯತ್ರಪ್ರಸಿದ್ಧವಾದ ಶಬ್ದವನ್ನು ಸಮನ್ವಯ ಮಾಡಲಾಗದು. ಸರ್ವಗತತ್ವಾದಿಗಳೆಲ್ಲವೂ ಅನ್ಯತ್ರಪ್ರಸಿದ್ಧವಾದ ಸರ್ವಪುರುಷಾಭಿಮುಖ್ಯಾದಿಲಿಂಗಗಳ ಸಾಹಚರ್ಯದಿಂದಷ್ಟೇ ಅನ್ಯತ್ರಪ್ರಸಿದ್ಧವೆನಿಸುತ್ತದೆ ಎನ್ನುತ್ತಾರೆ. ಈ ಪಕ್ಷವು ಟೀಕೆಗೆ ವಿರುದ್ಧವಾಗಿದೆ.

ಇನ್ನು ಕೆಲವರು 'ಮಹದ್ಭಯಂ ವಜ್ರಮುದ್ಯತ್ಯಮ್' ಎಂಬಲ್ಲಿ ಶ್ರುತವಾದ ಲಿಂಗವು ಭಯಂಕರತ್ವ, ಉದ್ಯತತ್ವ ಮೊದಲಾದ ಅನೇಕ ಲಿಂಗಗಳ ಸಮನ್ವಯವು ಈ ಅಧಿಕರಣದ ಉದ್ದೇಶವಾಗಿದೆ. ಆದಕ್ಕಾಗಿ ಅನ್ಯತ್ರಪ್ರಸಿದ್ಧವಾದ 'ವಜ್ರ' ಎಂಬ ಒಂದು ನಾಮಾತ್ಮಕಶಬ್ದವನ್ನು ಸಮನ್ವಯ ಮಾಡಲಾಗಿದೆ. ಅಂತಸ್ಥತ್ವಾಧಿಕರಣಕ್ಕೆ ಪ್ರಥಮಪಾದದಲ್ಲಿ ಸಂಗತಿಯಿರುವಂತೆ ಈ ಅಧಿಕರಣಕ್ಕೂ ಕೂಡ ಸಂಗತಿಯಿರುತ್ತದೆ.

ಅಥವಾ ಉಭಯತ್ರಪ್ರಸಿದ್ಧವಾದ ಭಯಂಕರತ್ವ ಎಂಬ ಲಿಂಗದ ಸಾಹಚರ್ಯದಿಂದ ವಜ್ರಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಅಥವಾ ವಜ್ರಶಬ್ದವು ಅನ್ಯತ್ರಪ್ರಸಿದ್ಧವಾಗಿದ್ದರೂ ಕೂಡ ಅದನ್ನು ಪರಿಗಣಿಸದೆ ಉಭಯತ್ರಪ್ರಸಿದ್ಧವೆಂದಷ್ಟೇ ಪರಿಗಣಿಸಿ ಇಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಅಥವಾ ಪ್ರಾಣಶಬ್ದವು ಉಭಯತ್ರ-ಪ್ರಸಿದ್ದವಾದ್ದರಿಂದ ಅದರ ಸಾಹಚರ್ಯದಿಂದ ವಜ್ರಶಬ್ದವೂ ಕೂಡ ಉಭಯತ್ರಪ್ರಸಿದ್ಧವಾಗಿದೆಯೆಂದು ಹೇಳುತ್ತಾರೆ.

*ಸಂಶಯಕೋಟಿಗಳು*

'ಯದಿದಂ ಕಿಂಚ ಜಗತ್‌ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ।' ಎಂಬ ಕಾಠಕೋಪನಿಷತ್ತಿನ ಶ್ರುತಿವಾಕ್ಯವು ಈ ಅಧಿಕರಣಕ್ಕೆ ವಿಷಯವಾಗಿದೆ. ಸಮಸ್ತ ಜಗತ್ತು ಪ್ರಾಣಶಬ್ದವಾಚ್ಯನಾದ ಯಾವ ಭಗವಂತನನ್ನು ಆಶ್ರಯಿಸಿದೆಯೋ, ಯಾರಿಂದ ಹುಟ್ಟಿದೆಯೋ, ಮತ್ತು ಕ್ರಿಯಾಶೀಲವಾಗಿದೆಯೋ, ಅಂತಹ ಶ್ರೇಷ್ಠನಾದ, ದುಷ್ಟಭಯಂಕರನಾದ, ದೋಷವರ್ಜಿತನಾದ ಸರ್ವಪ್ರೇರಕನಾದ ಭಗವಂತನನ್ನು ಯಾರೂ ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೋ, ಅವರು ಮೋಕ್ಷವನ್ನೇ ಪಡೆಯುತ್ತಾರೆ ಎಂದು ಈ

ಶ್ರುತಿಗೆ ಸಿದ್ಧಾಂತಪರವಾದ ಅರ್ಥ. ಇಲ್ಲಿ 'ಉದ್ಯತವಜ್ರ' ಎಂದರೆ ಎತ್ತಲ್ಪಟ್ಟಿರುವ ವಜ್ರವೆಂದು ಅದರ ಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆಂದು ಪೂರ್ವಪಕ್ಷ. 'ಯ ಏಜತಿ' ಎಂಬುದಾಗಿ ವಜ್ರಶಬ್ದವನ್ನು ಸರ್ವಜಗಚ್ಚೇಷ್ಟಕನೆಂದು ಹೇಳಿರುವುದರಿಂದ ಬ್ರಹ್ಮನೇ ವಜ್ರಶಬ್ದ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧಾಂತ.

ಸ್ಮೃತಿಗೆ ಅನುಸಾರಿಯಾಗಿ ಶ್ರುತಿಯನ್ನು ಅರ್ಥೈಸಿ ವ್ಯಾಖ್ಯಾನ ಮಾಡುವುದು ಸರಿಯಲ್ಲ. ಆದ್ದರಿಂದ ವಜ್ರಶಬ್ದಕ್ಕೆ ಇಂದ್ರಾಯುಧವೆಂಬ ರೂಢ್ಯರ್ಥವನ್ನು ಬಿಡಬಾರದು. ವಜ್ರಶ್ರುತಿಯ ಆಧಾರದಿಂದ ಭಗವಂತನಲ್ಲಿ ಪ್ರಸಿದ್ಧವಾದ ಕಂಪಕತ್ವಾದಿಲಿಂಗಗಳನ್ನೇ ಸಾವಕಾಶ ಮಾಡಬೇಕು ಎಂಬುದು ಪೂರ್ವಪಕ್ಷಕಾರರ ಧೋರಣೆ.

ಸ್ಮೃತಿಗೆ ಅನುಸಾರಿಯಾಗಿ ಶ್ರುತಿಯನ್ನು ಅರ್ಥೈಸಬೇಕಾದ್ದರಿಂದ ರೂಢ್ಯರ್ಥವನ್ನು ಬಿಟ್ಟು, ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಆವಾಗ ವಜ್ರಶಬ್ದಕ್ಕೆ ವಿಷ್ಣುವೆಂಬರ್ಥವೇ ಸಿದ್ಧವಾಗುತ್ತದೆಂಬುದು ಸಿದ್ಧಾಂತಿಗಳ ಧೋರಣೆ.

## *ವಜ್ರಾಯುಧವೇ ವಜ್ರಶ್ರುತಿ ಪ್ರತಿಪಾದ್ಯವೆಂದು ಪೂರ್ವಪಕ್ಷ*

'ಮಹದ್ಭಯಂ ವಜ್ರಮುದ್ಯತಂ' ಎಂಬ ಕಾಠಕೋಪನಿಷತ್ತಿನಲ್ಲಿ ಭಯಂಕರವಾದ ಎತ್ತಲ್ಪಟ್ಟ ವಜ್ರಾಯುಧವನ್ನು ವರ್ಣಿಸಲಾಗಿದೆ. ಶ್ರುತಿಯಲ್ಲಿರುವ 'ವಜ್ರ' ಎಂಬ ನಾಮಾತ್ಮಕ ಶಬ್ದವು ಇಂದ್ರನ ವಜ್ರಾಯುಧವನ್ನೇ ಪ್ರತಿಪಾದನೆ ಮಾಡುತ್ತದೆ. ವಜ್ರಶಬ್ದವು ವಜ್ರಾಯುಧದಲ್ಲಿ ರೂಢವಾದ ನಾಮ. ರೂಢವಾದ ಪದಗಳಿಗೆಲ್ಲಾ ಯೌಗಿಕಾರ್ಥವನ್ನು ಸ್ವೀಕರಿಸಿ, ವಿಷ್ಣುವಿನಲ್ಲಿ ಸಮನ್ವಯ ಮಾಡುವುದಾದರೆ, ಜಗತ್ತಿನಲ್ಲಿ ಈ ಶಬ್ದವು ಈ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆಂಬ ವ್ಯವಸ್ಥೆ ಹಾಳಾಗುತ್ತದೆ. ವಾಸ್ತವಿಕವಾಗಿ 'ವಜ್ರಮುದ್ಯತಮ್' ಎಂಬ ಶ್ರುತಿಯ ಹಿಂದಿನ-ಮುಂದಿನ ಪ್ರಕರಣಗಳಲ್ಲಿ ಕಂಪಕತ್ವವೇ ಮೊದಲಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರಬಹುದು. ಆದರೆ ರೂಢವಾದ ಶ್ರುತಿಯ ಬಲದಿಂದ 'ಉದ್ಯತತ್ವ' ಎಂಬ ಲಿಂಗದ ಬಲದಿಂದ ಆ ಎಲ್ಲಾ ಬ್ರಹ್ಮನ ಲಿಂಗಗಳನ್ನು ಇಂದ್ರಾಯುಧದಲ್ಲೇ ಸಾವಕಾಶ ಮಾಡಬೇಕು. ಕಾರಣವಿಲ್ಲದೇ ರೂಢಾರ್ಥವನ್ನು ಬಿಡಬಾರದು.

ಹಿಂದಿನ ಅಧಿಕರಣದಲ್ಲಿ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಿದ್ದು ತಪ್ಪಲ್ಲ. ಏಕೆಂದರೆ ಶ್ರುತಿಯೇ ಸ್ವತಃ ವಾಕ್ಯಶೇಷದಲ್ಲಿ ಯೋಗಾರ್ಥವನ್ನು ಶೂದ್ರಶಬ್ದಕ್ಕೆ ಹೇಳಿದೆ. ಅದರಂತೆ ಇಲ್ಲಿ ವಜ್ರಶಬ್ದಕ್ಕೆ ಶ್ರುತಿಯು ಯೋಗಾರ್ಥವನ್ನೇನೂ ಹೇಳುತ್ತಿಲ್ಲ. ಹಾಗಾದರೆ ಜ್ಯೋತಿರುಪಾದಿಕ್ರಮದ ನ್ಯಾಯದಂತೆ 'ಜ್ಯೋತಿಃ' ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಿದಂತೆ ಇಲ್ಲಿಯೂ ಸಹ ವಾಕ್ಯಶೇಷದ ಆಧಾರವಿಲ್ಲದಿದ್ದರೂ ವಿಷ್ಣುವಿನಲ್ಲಿ ವಜ್ರಶಬ್ದವನ್ನು ಸಮನ್ವಯ ಮಾಡಬಹುದಲ್ಲವೇ? ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಆದರೆ ಜ್ಯೋತಿರುಪಕ್ರಮಾಧಿಕರಣದಲ್ಲಿ ಪದಸಮನ್ವಯವೇ ಮುಖ್ಯಉದ್ದೇಶ. ಈ ಅಧಿಕರಣದಲ್ಲಿ ವಾಕ್ಯಸಮನ್ವಯವು ಉದ್ದೇಶವಾಗಿದೆ. ಅಲ್ಲಿ ವಾಕ್ಯಕ್ಕೆ ಅನ್ಯಪರತ್ವವನ್ನು ಒಪ್ಪಿ ಪದಗಳನ್ನು ಮಾತ್ರ ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ ಇಲ್ಲೇನೂ ಹಾಗೇ ಮಾಡುತ್ತಿಲ್ಲ. ಆಕಾಶಾದ್ಯಧಿಕರಣದಲ್ಲಿ ನಿರವಕಾಶವಾದ ಲಿಂಗಗಳಿಲ್ಲದ ಕಾರಣ ಭೂತಾಕಾಶವೆಂಬರ್ಥವನ್ನು ಬಿಡಬೇಕಾಯಿತು. ಆದರೆ ಇಲ್ಲಿ ಉದ್ಯತತ್ವವೆಂಬ ಲಿಂಗವು ವಜ್ರಾಯುಧದಲ್ಲೇ ಪ್ರಸಿದ್ಧವಾದ್ದರಿಂದ ಶ್ರುತಿಗೆ ರೂಢಾರ್ಥವನ್ನೇನೂ ಬಿಡಬೇಕಾಗಿಲ್ಲ. ಆದ್ದರಿಂದ ನಿರವಕಾಶವಾದ ಉದ್ಯತತ್ವವೆಂಬ ಲಿಂಗದ ಸಹಕಾರದಿಂದ ವಜ್ರಶ್ರುತಿಯೂ ಕೂಡ ನಿರವಕಾಶವಾಗುತ್ತದೆ. ವಿಷ್ಣುವಿನಲ್ಲಿರುವ ಲಿಂಗಗಳೆಲ್ಲವೂ ವಜ್ರಾಯುಧದಲ್ಲೇ ಸಾವಕಾಶವಾಗುತ್ತವೆ.

ಅಥವಾ ವಿಷ್ಣುಲಿಂಗಗಳನ್ನು ವಜ್ರಾಯುಧದಲ್ಲಿ ಸಾವಕಾಶ ಮಾಡುವುದೇ ಬೇಡ. ಅಂದರೆ ಕಾಠಕದ ಹಿಂದಿನ-ಮುಂದಿನವಾಕ್ಯಗಳೆಲ್ಲವೂ ವಿಷ್ಣುಪರವೇ ಆಗಲಿ. 'ಮಹದ್ಭಯಂ ವಜ್ರಮುದ್ಯತಮ್' ಎಂಬ ವಾಕ್ಯವಷ್ಟೇ ವಜ್ರಾಯುಧವನ್ನು ಪ್ರತಿಪಾದನೆ ಮಾಡುತ್ತದೆ. ಅಂದರೆ ವಜ್ರಶ್ರುತಿಯು ಉದ್ಯತತ್ವವೆಂಬ ಲಿಂಗವನ್ನೂ ಕೂಡ ಅಪೇಕ್ಷೆ

ಪಡದೆ ಸ್ವತಃ ನಿರವಕಾಶವಾಗಿ ವಜ್ರಾಯುಧವನ್ನು ಪ್ರತಿಪಾದನೆ ಮಾಡುತ್ತದೆ. ಶ್ರುತಿಯಲ್ಲಿರುವ ಮೋಕ್ಷಹೇತುಜ್ಞಾನ-ವಿಷಯತ್ವವನ್ನು ಇದರ ಬಲದಿಂದ ವಜ್ರಾಯುಧದಲ್ಲೇ ಕೂಡಿಸಬೇಕು. ಏಕೆಂದರೆ ನಿರಕವಾಶವಾದ ಶ್ರುತಿಗೆ ಬಾಧ ಹೇಳುವುದು ತಪ್ಪಾಗುತ್ತದೆ. ಕಂಪಕತ್ವವೂ ಕೂಡ ಭಯಕಾರಣವಾದ ವಜ್ರಾಯುಧದಲ್ಲಿ ಯುಕ್ತವಾಗುತ್ತದೆ. ಹಾಗಾಗಿ ವಜ್ರಾಯುಧದ ಜ್ಞಾನದಿಂದ ಮೋಕ್ಷವಾಗುವಾಗ ಹಿಂದಿನ ಅಧಿಕರಣದಲ್ಲಿ ತ್ರೈವರ್ಣಿಕರಿಗೆ ಬ್ರಹ್ಮಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಿದ್ದು ಅಯುಕ್ತವಾಗಿದೆಯೆಂದು ಈ ಅಧಿಕರಣದ ಎರಡನೆಯ ಪೂರ್ವಪಕ್ಷ.

### *'ಸರ್ವಚೇಷ್ಟಕತ್ವ' ಲಿಂಗದಿಂದ ವಿಷ್ಣುವೇ ವಜ್ರಶಬ್ದ ಪ್ರತಿಪಾದ್ಯನೆಂದು ಸಿದ್ಧಾಂತ*

'ಪ್ರಾಣ ಏಜತಿ ನಿಃಸೃತಮ್' ಎಂಬ ವಿಷಯವಾಕ್ಯದಲ್ಲಿ ಸರ್ವಚೇಷ್ಟಕತ್ವ ಲಿಂಗವು ಸ್ಪಷ್ಟವಾಗಿ ಕೇಳಿಸುತ್ತಿದೆ. ಈಗಾಗಲೇ ಆನಂದಮಯಾಧಿಕರಣದಲ್ಲಿ ಸರ್ವಚೇಷ್ಟಕತ್ವವನ್ನು ವಿಷ್ಣುವಿನ ಅಸಾಧಾರಣ ಧರ್ಮವೆಂದು ಸಮರ್ಥಿಸಿದ್ದಾಗಿದೆ. ಅದರ ಆಧಾರದಿಂದ ವಜ್ರಶಬ್ದವು ಈಗ ವಿಷ್ಣುಪರವೆಂದು ಸಿದ್ಧವಾಗುತ್ತದೆ. ಇನ್ನು 'ಉದ್ಯತತ್ವ' ಎಂಬ ಲಿಂಗದ ಆಧಾರದಿಂದ ವಜ್ರಶ್ರುತಿಯು ವಜ್ರಾಯುಧ ಪರವಾಗಿದೆಯೆಂದು ಹಿಂದೆ ಮಾಡಿದ ಪೂರ್ವಪಕ್ಷಕ್ಕೆ ಈಗ ಆಸ್ಪದವಿಲ್ಲ. ಏಕೆಂದರೆ 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಯು ವಜ್ರಶಬ್ದದ ನಿರುಕ್ತಿಯನ್ನು ವಿಷ್ಣುವಿನಲ್ಲಿ ಹೇಳಿದಂತೆ ಪೂರ್ವಪಕ್ಷಕಾರರು ಉದ್ಯತಶಬ್ದದ ನಿರುಕ್ತಿಯನ್ನು ಆಯುಧದಲ್ಲಿ ತೋರಿಸಿಲ್ಲ. ಮತ್ತು ಸರ್ವಚೇಷ್ಟಕತ್ವವು ಬೇರೆಯವರಲ್ಲಿ ಬರುವುದಿಲ್ಲವೆಂದು 'ಕೋಹ್ಯೇವಾನ್ಯಾತ್ಕಃ' ಇತ್ಯಾದಿ ಶ್ರುತಿಯು ಸಾಧನೆ ಮಾಡುವಂತೆ ಉದ್ಯತತ್ವಲಿಂಗವು ಬೇರೆಯವರಲ್ಲಿ ಬರುವುದಿಲ್ಲವೆಂದು ಸಾಧಿಸಲು ಪೂರ್ವಪಕ್ಷಕಾರರು ಯಾವುದೇ ಶ್ರುತಿಗಳನ್ನು ಆಧಾರವನ್ನಾಗಿ ತೋರಿಸಿಲ್ಲ.

ಸ್ಮೃತಿಗಳೆಲ್ಲವೂ ಶ್ರುತ್ಯರ್ಥದ ನಿರ್ಣಯಕ್ಕೋಸ್ಕರ ಹೊರಟಿದೆ. ಆದ್ದರಿಂದ ಸ್ಮೃತಿಗೆ ಅನುಸಾರಿಯಾಗಿಯೇ ಶ್ರುತಿಯನ್ನು ಅರ್ಥೈಸಬೇಕು ಹೊರತು, ಅದಕ್ಕೆ ವಿರುದ್ಧವಾಗಿ ಅರ್ಥೈಸುವುದು ತಪ್ಪಾಗುತ್ತದೆ. ಆದ್ದರಿಂದ ಪ್ರಕೃತ 'ವರ್ಜನಾದ್ವಜ್ರಮುಚ್ಯತೇ' ಎಂಬ ಶ್ರುತಿಯು ವಜ್ರಶಬ್ದದ ನಿರುಕ್ತಿಯನ್ನು ಹೇಳುತ್ತಿರುವಾಗ ಅದರ ಆಧಾರದಿಂದ ಶ್ರುತಿಯಲ್ಲಿರುವ ವಜ್ರಶಬ್ದಕ್ಕೆ ವಿಷ್ಣುಪರತ್ವವನ್ನೇ ಹೇಳಬೇಕು. ಆಸಮಂತಾತ್ ಕಾಶತೇ ಯದಾಕಾಶಃ' ಎಂಬ ಸ್ಮೃತಿಯು ಆಕಾಶಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಿದೆ. 'ಪ್ರಾಣಃ ಪ್ರಣಯನಾದೇಷಃ' ಎಂಬ ಶ್ರುತಿಯು ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಿದೆ. ಅದರಂತೆ ಇಲ್ಲಿಯೂ ಕೂಡ 'ವರ್ಜನಾದ್ವಜ್ರಮ್' ಎಂಬ ಸ್ಮೃತಿಯು ವಜ್ರಶಬ್ದದ ನಿರ್ವಚನವನ್ನು ವಿಷ್ಣುವಿನಲ್ಲಿ ಮಾಡುತ್ತಿರುವುದರಿಂದ ಅದಕ್ಕನುಸಾರಿಯಾಗಿಯೇ ಶ್ರುತ್ಯರ್ಥವನ್ನು ಸ್ವೀಕರಿಸಬೇಕು. ಆದ್ದರಿಂದ ಸ್ಮೃತಿಯು ಶ್ರುತಿಗಿಂತ ದುರ್ಬಲವಾಗಿದೆ ಎಂಬ ಪೂರ್ವಪಕ್ಷವಾಗಲೀ, ಅಥವಾ ಯೋಗಕ್ಕಿಂತಲೂ ರೂಢಿಯು ಪ್ರಬಲವಾಗಿದೆಯೆಂಬ ಪೂರ್ವಪಕ್ಷವಾಗಲೀ, ಯುಕ್ತವಾಗುವುದಿಲ್ಲವೆಂದು ಸಮರ್ಥನೆ ಮಾಡಿದಂತಾಯಿತು.

### *ಪೂರ್ವಪಕ್ಷದಲ್ಲಿ ಹೇಳಿದ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳು ಸಾವಕಾಶವಾಗಿವೆ*

'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಗೆ ಅನುಸಾರಿಯಾಗಿ 'ಮಹದ್ಭಯಂ ವಜ್ರಮುಚ್ಯತಮ್' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂದು ಸಿದ್ಧಾಂತ ಮಾಡಲಾಗಿದೆ. ಆದರೆ ಸ್ಮೃತಿಯ ಸಂದರ್ಭವೇ ಬೇರೆ, ಶ್ರುತಿಯ ಸಂದರ್ಭವೇ ಬೇರೆ, ಎಲ್ಲೋ ಸ್ಮೃತಿಯಲ್ಲಿ ಹೇಳಿದ ನಿರ್ವಚನವನ್ನು ಶ್ರುತಿಯಲ್ಲಿ ವಿವಕ್ಷಿಸಲು ಹೇಗೆ ಸಾಧ್ಯ ? 'ಯದಾಜಿಮೀಯುಃ ತದಾಜ್ಯಾನಾಂ ಆಜ್ಯತ್ವಂ' ಎಂಬುದಾಗಿ ಶ್ರುತಿಯು ಆಜ್ಯಶಬ್ದವನ್ನು ಯುದ್ಧದ ಮಂತ್ರಗಳೆಂದು ನಿರ್ವಚನ ಮಾಡುತ್ತಿದೆ. ಈ ನಿರ್ವಚನವು ಅದೇ ಪ್ರಕರಣದಲ್ಲಿರುವ 'ಆಜ್ಯೈಃ ಸ್ತುವತೇ' ಎಂಬಲ್ಲಿ ಅನ್ವಯವನ್ನು

ಹೊಂದುತ್ತದೆ. ಹೊರತು, ಎಲ್ಲೋ ಇರುವ ಆಜ್ಯಶಬ್ದದಲ್ಲಿ ಅನ್ವಯವನ್ನು ಹೊಂದುವುದಿಲ್ಲ. ಹೀಗಿರುವಾಗ ಸ್ಮೃತಿಯ ಆಧಾರದಿಂದ ಶ್ರುತಿಯನ್ನು ಹೇಗೆ ವ್ಯಾಖ್ಯಾನ ಮಾಡುವುದು ಹೇಗೆ ಸರಿ? ಎಂಬ ಗೊಂದಲವು ಬರುತ್ತದೆ. ಇದಕ್ಕೆ ಉತ್ತರವಿಷ್ಟು. 'ಆರಭ್ಯಾಧೀತ' 'ಅನರಾಭ್ಯಾಧೀತ' ಎಂಬುದಾಗಿ ಎರಡು ಬಗೆಯ ನಿರ್ವಚನಗಳಿವೆ. ಯಾವುದಾದರೂ ಕರ್ಮವನ್ನು ಅಥವಾ ವಾಕ್ಯವಿಶೇಷವನ್ನು ಉದ್ದೇಶಿಸಿ, ನಿರ್ವಚನ ಮಾಡಿದರೆ, ಅದು ಆರಭ್ಯಾಧೀತವೆನಿಸುತ್ತದೆ. ಯಾವುದೇ ಕರ್ಮವಿಶೇಷವನ್ನು ಅಥವಾ ವಾಕ್ಯವಿಶೇಷವನ್ನು ಉದ್ದೇಶಿಸದೆ ಸಾಮಾನ್ಯವಾಗಿ ಮಾಡುವ ನಿರ್ವಚನವು ಅನಾರಭ್ಯಾಧೀತವೆನಿಸುತ್ತದೆ. ಆ ಪ್ರಕರಣ ಬಿಟ್ಟು ಎಲ್ಲಾಕಡೆಯೂ ಕೂಡ ಅನ್ವಯವನ್ನು ಹೊಂದಬಹುದು. ಪ್ರಕೃತ ಸ್ಮೃತಿಯಲ್ಲಿ ಹೇಳಿದ ವಜ್ರಶಬ್ದದ ನಿರ್ವಚನವು ಅನಾರಭ್ಯಾಧೀತ ಎನಿಸುವುದರಿಂದ ಆ ಸ್ಮೃತಿ ಪ್ರಕರಣದಲ್ಲಷ್ಟೇ ಅಲ್ಲದೇ, ಬೇರೆ ಶ್ರುತ್ಯಾದಿಗಳಲ್ಲಿಯೂ ಅನ್ವಯವನ್ನು ಹೊಂದುತ್ತದೆ. 'ಯದಾಜಿಮೀಯುಃ ತದಾಜ್ಯಾನಾಂ ಆಜ್ಯತ್ವಂ' ಎಂಬ ನಿರ್ವಚನವು 'ಆಜ್ಯೈಃ ಸ್ತುವತೇ' ಎಂಬಲ್ಲಿರುವ ಆಜ್ಯಶಬ್ದವನ್ನು ಉದ್ದೇಶಿಸಿ, ಹೊರಟಿದ್ದರಿಂದ ಆರಭ್ಯಾಧೀತವಾಗಿದೆ. ಬೇರೆ ಕಡೆ ಇದಕ್ಕೆ ಅನ್ವಯ ಮಾಡಲು ಬರುವುದಿಲ್ಲ. ಈ ವ್ಯತ್ಯಾಸವನ್ನು ಗಮನಿಸಬೇಕು.

ಶ್ರುತಿಗಿಂತಲೂ ಸ್ಮೃತಿಯು ದುರ್ಬಲ. ಹೀಗಿರುವಾಗ ಸ್ಮೃತಿಯ ಆಧಾರದಿಂದ ಶ್ರುತಿಯನ್ನು ಅರ್ಥೈಸುವುದು ಹೇಗೆ ಸರಿ? ಎಂಬುದು ಮುಂದಿನ ಪ್ರಶ್ನೆ. ಆದರೆ ಮೂರು ಕಾರಣಗಳಿಂದ ಇಲ್ಲಿ ಸ್ಮೃತಿಗೆ ಅನುಗುಣವಾಗಿ ಸ್ಮೃತಿಯನ್ನು ವ್ಯಾಖ್ಯಾನಿಸಬಹುದೆಂದು ತಿಳಿಯುತ್ತದೆ. ಶ್ರುತಿವಿರುದ್ಧವಾದ ವಿಷಯದಲ್ಲಿ ಸ್ಮೃತಿಯು ಪ್ರವೃತ್ತಿ ಮಾಡುತ್ತಿಲ್ಲ. ಮತ್ತು ಶ್ರುತ್ಯರ್ಥನಿರ್ಣಾಯಕವಾಗಿ ಸ್ಮೃತಿಗಳು ಶ್ರುತಿಗೆ ಅನುಗ್ರಾಹಕವಾಗಿವೆ. ಅಷ್ಟೇ ಅಲ್ಲದೇ ಮುಂದಿನ ಜ್ಯೋತಿರಧಿ-ಕರಣದಲ್ಲಿ ಉದಾಹರಿಸುವ ಶ್ರುತ್ಯಂತರ ಮೂಲಕವೂ ಆಗಿದೆ. ಆದ್ದರಿಂದ 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಗೆ ಅನುಗುಣವಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬಹುದು.

ಪೂರ್ವಪಕ್ಷಕಾರರು ಹೇಳಿದ ಉದ್ಯತತ್ವಲಿಂಗವೂ ಕೂಡ ಸಾವಕಾಶವಾಗಿದೆ. ಉತ್ಪೂರ್ವಕವಾದ 'ಯತೀ ಪ್ರಯತ್ನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಉದ್ಯತಶಬ್ದಕ್ಕೆ ಪ್ರಯತ್ನಶೀಲನೆಂದರ್ಥ. ಪರಮಾತ್ಮನು ನಿರಂತರ ಪ್ರಯತ್ನಶೀಲನಾದ ಕಾರಣ ಉದ್ಯತತ್ವವು ಮುಖ್ಯವಾಗಿ ಅವನಲ್ಲೇ ಬರುತ್ತದೆ. ಹಾಗಾಗಿ ಪೂರ್ವಪಕ್ಷಕಾರರು ಹೇಳಿದ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳೆರಡೂ ಸಾವಕಾಶವಾದವು. ಮಹಾವಿಷ್ಣುನಲ್ಲಿಯೇ ಉದ್ಯತತ್ವ, ಕಂಪಕತ್ವ ಮೊದಲಾದ ಲಿಂಗಗಳು ಬರುವುದರಿಂದ ಅವನೇ ವಜ್ರಶಬ್ದಪ್ರತಿಪಾದ್ಯನೆಂದು ಸಿದ್ಧವಾಯಿತು.

*ಶಾಂಕರಭಾಷ್ಯ ವಿಮರ್ಶೆ*

ಕಾಠಕೋಪನಿಷತ್ತಿನ 'ಯದಿದಂ ಕಿಂಚ ಜಗತ್‌ಸರ್ವಂ ಪ್ರಾಣ ಏಜತಿ ನಿಃಸೃತಮ್' ಎಂಬ ವಾಕ್ಯವನ್ನು ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಶರೀರದ ಒಳಗಿರುವ ಪ್ರಾಣಾಪಾನಾದಿ ಹೆಸರುಗಳನ್ನು ಹೊಂದಿರುವ ಪ್ರಾಣವಾಯುವೇ ಈ ವಾಕ್ಯದಿಂದ ಪ್ರತಿಪಾದ್ಯವಾಗಿದೆ. ಪ್ರಾಣವಾಯು ಐದುರೂಪಗಳಿಂದ ಜಗತ್ತಿನ ಚೇತನವರ್ಗವನ್ನು ಕ್ರಿಯಾಶೀಲಗೊಳಿಸುತ್ತದೆ. ಅಥವಾ ಧೂಮ, ಜ್ಯೋತಿ, ಸಲಿಲ ಇವುಗಳ ಸನ್ನಿಪಾತದಿಂದ ಬಾಹ್ಯವಾಯುವೇ ಮಿಂಚಿನ ರೂಪವನ್ನು ತಾಳಿ, ವಜ್ರಾಯುಧದಂತೆ ಜಗತ್ತಿಗೆ ಭಯವನ್ನು ನೀಡುತ್ತದೆ. ಆದ್ದರಿಂದ 'ಮಹದ್ಭಯಂ ವಜ್ರಮುದ್ಯತಮ್' ಎಂಬ ಉಪನಿಷತ್ತು ಬಾಹ್ಯವಾಯುವನ್ನು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಆಧ್ಯಾತ್ಮಿಕವಾದ ವಾಯುವಾಗಲೀ, ಬಾಹ್ಯವಾಯುವಾಗಲೀ ಮಂತ್ರಪ್ರತಿಪಾದ್ಯವೆಂದು ಪೂರ್ವಪಕ್ಷ.

ಸಿದ್ಧಾಂತ - 'ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ' ಎಂಬ ವಾಕ್ಯವು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆ. ಮುಂದಿನ ಮಂತ್ರದಲ್ಲಿಯೂ 'ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ' ಎಂಬುದಾಗಿ

ಬ್ರಹ್ಮನಲಿಂಗವೇ ಶ್ರುತವಾಗಿದೆ. ಹಿಂದಿನ-ಮುಂದಿನ ಈ ಎರಡು ಮಂತ್ರಗಳ ಮಧ್ಯದಲ್ಲಿ 'ಪ್ರಾಣ ಏಜತಿ' ಎಂಬ ಮಂತ್ರವಿದೆ. ಇದೂ ಸಹ ಬ್ರಹ್ಮನನ್ನೇ ಪ್ರತಿಪಾದನೆ ಮಾಡಬೇಕು. ಸೂತ್ರದಲ್ಲಿರುವ ಹೇಳಿರುವ ಕಂಪಕತ್ವವು ಬ್ರಹ್ಮನ ಧರ್ಮವಾಗಿದೆ. 'ಪ್ರಾಣಸ್ಯ ಪ್ರಾಣಂ' ಎಂಬ ಇದೇ ಉಪನಿಷತ್ತು ಬ್ರಹ್ಮನಿಗೆ ಸರ್ವಜಗಚೇಷ್ಟಕತ್ವವನ್ನು ಹೇಳುತ್ತಿದೆ. ವಜ್ರಾಯುಧಕ್ಕೆ ಎಲ್ಲರೂ ಹೆದರುವಂತೆ, ಇಂತಹ ಬ್ರಹ್ಮನನ್ನು ನೋಡಿ ಎಲ್ಲರೂ ಹೆದರುತ್ತಾರೆ. ಆದ್ದರಿಂದ ಅವನೇ ಶಬ್ದವಾಚ್ಯನು. 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಿಂದ 'ಶಬ್ದಾದೇವ ಮತ್ತು ಪ್ರಮಿತಃ' ಎಂಬೆರಡು ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅಂದರೆ ಸರ್ವಶಬ್ದದ ಬಲದಿಂದ ಮತ್ತು ಕಂಪಕತ್ವಲಿಂಗದಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನೆಂದು ಸೂತ್ರದ ಅರ್ಥ.

ಅದ್ವೈತಿಗಳ ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ ಸೂತ್ರದಲ್ಲಿ 'ಕಂಪನಾತ್' ಎಂದು ಹೇಳಿದ್ದರಿಂದ ಭಯಕ್ಕೆ ಕಾರಣವಾದುದು ವಜ್ರವೆಂದು ಶ್ರುತಿಯು 'ಮಹದ್ಭಯಂ ವಜ್ರಮುದ್ಯತಮ್' ಎಂದು ಹೇಳುತ್ತಿದೆ. ಆದ್ದರಿಂದ ಸೂತ್ರದಲ್ಲಿ ಹೇಳಿದ ಸಿದ್ಧಾಂತ ಯುಕ್ತಿಯು ವಜ್ರನಲ್ಲೇ ಅನ್ವಯವಾಗುತ್ತದೆ ಹೊರತು, ಪ್ರಾಣನಲ್ಲಿ ಅನ್ವಯವಾಗುವುದಿಲ್ಲ. ಆದ್ದರಿಂದ ವಜ್ರಶಬ್ದದ ಸಮನ್ವಯವೇ ಅತ್ಯಂತ ಸ್ವರಸ. ಮತ್ತು ಪ್ರಾಣಶಬ್ದದ ಸಮನ್ವಯವನ್ನು ಈಗಾಗಲೇ ಮಾಡಿದ್ದರಿಂದ ಪುನಃ ಅದನ್ನೇ ಸಮನ್ವಯ ಮಾಡುವುದರಲ್ಲಿ ಅರ್ಥವಿಲ್ಲ. ಅಷ್ಟೇ ಅಲ್ಲದೇ ಉದ್ಯತತ್ವ ಎಂಬ ಪೂರ್ವಪಕ್ಷ ಬೀಜವು ವಜ್ರನಲ್ಲೇ ಯುಕ್ತವಾಗುತ್ತದೆ ಹೊರತು, ಪ್ರಾಣನಲ್ಲಿ ಯುಕ್ತವಾಗುವುದಿಲ್ಲ. 'ಅಮೃತತ್ವಹೇತುವೇದನತ್ವ' ಎಂಬ ಸಿದ್ಧಾಂತಲಿಂಗವೂ ಕೂಡ ವಜ್ರದಲ್ಲೇ ಯುಕ್ತವಾಗುತ್ತದೆ. ಆದ್ದರಿಂದ ವಜ್ರಶಬ್ದದ ಸಮನ್ವಯವನ್ನು ಬಿಟ್ಟು ಪ್ರಾಣಶಬ್ದ ಸಮನ್ವಯವನ್ನು ಮಾಡುವುದು ಅಸಾಧುವಾಗಿದೆ.

*ರಾಮಾನುಜಭಾಷ್ಯದ ಅಧಿಕರಣವಿಮರ್ಶೆ*

ರಾಮಾನುಜ ಭಾಷ್ಯದಲ್ಲಿ 'ಕಂಪನಾತ್' ಮತ್ತು 'ಜ್ಯೋತಿರ್ದರ್ಶನಾತ್' ಎಂಬೆರಡು ಸೂತ್ರಗಳು 'ಶಬ್ದಾದೇವ ಪ್ರಮಿತಃ' ಎಂಬ ಪ್ರಮಿತಾಧಿಕರಣಕ್ಕೆ ಶೇಷವಾಗಿದೆ ಎನ್ನುತ್ತಾರೆ. ಪ್ರಾಸಂಗಿಕವಾಗಿ ವೇದವಿದ್ಯಾಧಿಕಾರವನ್ನು ದೇವತೆಗಳಿಗೆ ಸಮರ್ಥನೆ ಮಾಡಿ, ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದೂ ಕೂಡ ಸಮರ್ಥನೆ ಮಾಡಿರುತ್ತಾರೆ. ಪುನಃ ಅಂಗುಷ್ಠಮಾತ್ರನಾದ ಪುರುಷನು ಬ್ರಹ್ಮನೇ ಆಗಿದ್ದಾನೆನ್ನಲು 'ಕಂಪನಾತ್' ಎಂಬ ಸೂತ್ರವು ಹೊರಟಿದೆ. 'ಯದಿದಂ ಕಿಂಚ' ಎಂಬ ವಾಕ್ಯವೇ ಈ ಅಧಿಕರಣಕ್ಕೆ ವಿಷಯವಾಗಿದೆ. 'ಅಂಗುಷ್ಠಮಾತ್ರಃ ಪುರುಷಃ' ಎಂಬ ವಾಕ್ಯ ಹಾಗೂ 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮ' ಎಂಬ ವಾಕ್ಯಗಳ ನಡುವೆ 'ಯದಿದಂ ಕಿಂಚ' ಎಂಬ ವಾಕ್ಯವಿದೆ. ಈ ವಾಕ್ಯದಲ್ಲಿ ಅಂಗುಷ್ಠಪರಿಮಾಣನಾದ ಪುರುಷನನ್ನು 'ಪ್ರಾಣ' ಎಂದು ಕರೆದು, ಅಂತಹ ಪ್ರಾಣನಿಂದ ಭಯಗೊಂಡು ಜಗತ್ತು ಕಂಪಿಸುತ್ತದೆಂದು ಹೇಳಲಾಗಿದೆ. ಇದು ಬ್ರಹ್ಮನ ಧರ್ಮವಾದ್ದರಿಂದ ಅಂಗುಷ್ಠಪರಿಮಾಣವುಳ್ಳ ಪುರುಷನು ಬ್ರಹ್ಮನೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

ಇವರ ಅಭಿಪ್ರಾಯ ಸರಿಯಿಲ್ಲ. ಏಕೆಂದರೆ ಒಂದು ವೇಳೆ ಇದು ವಾಮನಾಧಿಕರಣದ ಶೇಷವಾಗಿದ್ದಲ್ಲಿ ಅದರ ಜೊತೆ ಹೇಳಬೇಕಿತ್ತು. ಮತ್ತು ಅಂಗುಷ್ಠಪರಿಮಾಣವುಳ್ಳ ಪುರುಷನನ್ನು ಉಲ್ಲೇಖ ಮಾಡುವ ಎರಡು ವಾಕ್ಯಗಳಲ್ಲಿ 'ಊರ್ಧ್ವಮೂಲೋಽವಾಕ್‌ಶಾಖ ಏಷೋಽಶ್ವತ್ಥಃ ಸನಾತನ' ಎಂಬ ವಾಕ್ಯವಿದೆ. ಇದು ಪ್ರಪಂಚವನ್ನೇ ಪ್ರತಿಪಾದನೆ ಮಾಡುತ್ತದೆ. ಅದರಂತೆ 'ಮಹದ್ಭಯಂ ವಜ್ರಮುದ್ಯತಮ್' ಎಂಬ ವಾಕ್ಯವೂ ಕೂಡ ವಜ್ರನನ್ನು ಏಕೆ ಪ್ರತಿಪಾದನೆ ಮಾಡಬಾರದು? ಮತ್ತು 'ಶಬ್ದಾದೇವ' ಎಂಬ ಸೂತ್ರಕ್ಕೆ ಇದು ಶೇಷವಾದಲ್ಲಿ, 'ಚ' ಶಬ್ದವನ್ನು ಸೂತ್ರಕಾರರು ಹೇಳಬೇಕಿತ್ತು. ಮತ್ತು ಸೂತ್ರದಲ್ಲಿ ಹೇತುವನ್ನಷ್ಟೇ ಹೇಳಿದ್ದರೂ ಕೂಡ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಇತ್ಯಾದಿ ಸೂತ್ರಗಳಲ್ಲಿ ನೀವು ಹೇಗೆ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳುತ್ತಿರೋ ಅದರಂತೆ ಇಲ್ಲೂ ಕೂಡ 'ವಜ್ರ' ಶಬ್ದಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂಬ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

# ಜ್ಯೋತಿರಧಿಕರಣ

*ಪಾದಸಂಗತಿ ಹಾಗೂ ಅಧಿಕರಣ ಸಂಗತಿ ವಿಚಾರ*

ಈ ಅಧಿಕರಣದಲ್ಲಿ 'ಜ್ಯೋತಿಃ' ಎಂಬ ನಾಮಾತ್ಮಕ ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಪ್ರಕಾಶತ್ವವು 'ಜ್ಯೋತಿಃ' ಶಬ್ದದ ಪ್ರವೃತ್ತಿನಿಮಿತ್ತ. ಜ್ಞಾನರೂಪವಾಗಿರುವಿಕೆಯೆಂದು ಇದರರ್ಥ. ಇದು ಕೇವಲ ಜೀವ ಹಾಗೂ ಈಶ್ವರರಲ್ಲಿ ಮಾತ್ರವಿರುತ್ತದೆ. ಆ ಕಾರಣದಿಂದಲೇ 'ಜ್ಯೋತಿಃ' ಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಅಗ್ನಿ, ಆದಿತ್ಯ ಮೊದಲಾದವರಲ್ಲಿ ಜ್ಞಾನಸ್ವರೂಪವಾಗಿರುವಿಕೆ ಎಂಬ ಪ್ರವೃತ್ತಿನಿಮಿತ್ತವು ಬರುವುದಿಲ್ಲವಾದ್ದರಿಂದ ಅವರನ್ನು ಇಲ್ಲಿ 'ಜ್ಯೋತಿ' ಎಂದು ಪರಿಗಣಿಸಲಾಗದು.

ಬೃಹದಾರಣ್ಯಕೋಪನಿಷತ್ತಿನಲ್ಲಿ ಇರುವ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ ಹೊರತು, ಅದೇ ಪ್ರಕರಣದ ಹಿಂದಿನ 'ಆದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿ ವಾಕ್ಯಗಳು ಈ ಅಧಿಕರಣದ ವಿಷಯಗಳಲ್ಲ. ಏಕೆಂದರೆ ಆದಿತ್ಯಾದಿಗಳ ಜ್ಯೋತಿಗೆ ಅಸ್ತಮಯವಾಗುವಿಕೆಯನ್ನು ಹೇಳಿ ಕೊನೆಯಲ್ಲಿ ಆತ್ಮನ ಜ್ಯೋತಿಯು ಅಸ್ತಮಯವಾಗುವುದಿಲ್ಲವೆಂದು ಹೇಳಿದ್ದಾರೆ. ಆದ್ದರಿಂದ ಹಿಂದಿನ ಜ್ಯೋತಿಶಬ್ದಗಳ ವಿಚಾರವನ್ನು ಮಾಡಬೇಕಾಗಿಲ್ಲ. ಕೊನೆಯಲ್ಲಿರುವ ಆತ್ಮಜ್ಯೋತಿಯ ಬಗ್ಗೆ ವಿಚಾರ ಮಾಡುವುದು ಅನಿವಾರ್ಯವಾಗಿದೆ. ಆತ್ಮಜ್ಯೋತಿಯು ವಿಚಾರಕ್ಕೆ ವಿಷಯವಾದ್ದರಿಂದಲೇ, ಜ್ಞಾನರೂಪತ್ವವೇ 'ಜ್ಯೋತಿಃ' ಶಬ್ದದ ಪ್ರವೃತ್ತಿನಿಮಿತ್ತವಾಗುತ್ತದೆ ಹೊರತು, ಜ್ಞಾನಸಾಧನತ್ವವು ಪ್ರವೃತ್ತಿನಿಮಿತ್ತವಾಗುವುದಿಲ್ಲ. ಒಂದು ವೇಳೆ ಜ್ಞಾನಸಾಧನತ್ವವು ಪ್ರವೃತ್ತಿನಿಮಿತ್ತವಾಗಿದ್ದಲ್ಲಿ, ಆದಿತ್ಯಾದಿಗಳಲ್ಲಿಯೂ ಜ್ಯೋತಿಶ್ಶಬ್ದವು ಪ್ರಸಿದ್ಧವಾದ ಕಾರಣ, ಅನ್ಯತ್ರಪ್ರಸಿದ್ಧವಾಗುತ್ತಿತ್ತು. ಪ್ರಥಮಪಾದದಲ್ಲಿ ಈ ಅಧಿಕರಣವನ್ನು ಸೇರಿಸಬೇಕಾದ ಪ್ರಸಂಗ ಬರುತ್ತಿತ್ತು.

ಈ ಅಧಿಕರಣವು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಹೊರಟಿದೆ. ಅಂದರೆ ನಿರವಕಾಶವಾದ ಲಿಂಗಗಳ ಬಲದಿಂದ ವಿಷ್ಣುವು ಜ್ಯೋತಿಯಾಗುವುದಿಲ್ಲವೆಂದು ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು. ಅಥವಾ ಹಿಂದೆ ವಾಮನಾಧಿಕರಣದಲ್ಲಿ ಕೇವಲ ಪ್ರಾಣವ್ಯವಸ್ಥಾಪಕತ್ವವೆಂಬ ಲಿಂಗದಿಂದ ಪೂರ್ವಪಕ್ಷ ಮಾಡಿದರೂ, ಕಂಪನಾಧಿಕರಣದಲ್ಲಿ ವಜ್ರಶ್ರುತಿ ಸಹಿತವಾದ ಉದ್ಯತತ್ವಲಿಂಗದಿಂದ ಪೂರ್ವಪಕ್ಷ ಮಾಡಿದರು. ಈಗ ನಿರವಕಾಶವಾದ ಅನೇಕ ಲಿಂಗಗಳಿಂದ ಪೂರ್ವಪಕ್ಷ ಮಾಡುತ್ತಿದ್ದಾರೆ. ಹಿಂದಿನ ಅಧಿಕರಣಗಳ ಪೂರ್ವಪಕ್ಷಕ್ಕಿಂತ ಈ ಅಧಿಕರಣದ ಪೂರ್ವಪಕ್ಷವು ಹೆಚ್ಚು ಬಲಿಷ್ಠವಾದ್ದರಿಂದ ಸೋಪಾನಾರೋಹಣ ಕ್ರಮದಿಂದ ಆನಂತರ್ಯಸಂಗತಿಯು ಇರುತ್ತದೆ.

*ಸಂಶಯ ಪರಂಪರೆ*

'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂಬ ಬೃಹದಾರಣ್ಯಕದಲ್ಲಿರುವ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಜನಕಮಹಾರಾಜರು ಯಾಜ್ಞವಲ್ಕ್ಯಮಹರ್ಷಿಗಳನ್ನು ಕುರಿತು ಪ್ರಶ್ನಿಸುತ್ತಾರೆ. ಜೀವನಿಗೆ ಜ್ಞಾನಸಾಧನವಾದದ್ದು ಯಾವುದು ಎಂದು? ಅದಕ್ಕೆ ಯಾಜ್ಞವಲ್ಕ್ಯರು ಉತ್ತರಿಸುವಾಗ ಆದಿತ್ಯ, ಚಂದ್ರ ಅಗ್ನಿ ಮತ್ತು ಮಾತು ಇವುಗಳಲ್ಲಿ ಹಿಂದಿನದ್ದು ಅಸ್ತಮಯವಾದಾಗ ಮುಂದಿನವುಗಳು ಜಾಗ್ರತ್ಕಾಲದಲ್ಲಿ ಜೀವನಿಗೆ

ಜ್ಞಾನಸಾಧನಗಳಾಗುತ್ತವೆ ಎನ್ನುತ್ತಾರೆ. ಆದರೆ ಸುಷುಪ್ತಿ ಮತ್ತು ಸ್ವಪ್ನಾವಸ್ಥೆಗಳಲ್ಲಿ ಆದಿತ್ಯ, ಚಂದ್ರ, ಅಗ್ನಿ, ವಾಕ್ ನಾಲ್ಕೂ ಕೂಡ ಅಸ್ತವಾಗುವುದರಿಂದ ಆ ಸಂದರ್ಭದಲ್ಲಿ ಜೀವನಿಗೆ ಜ್ಞಾನಸಾಧನವಾದದ್ದು ಯಾವುದು? ಎಂದು ಪುನಃ ಜನಕರಾಜರು ಯಾಜ್ಞವಲ್ಕ್ಯಮಹರ್ಷಿಗಳನ್ನು ಪ್ರಶ್ನಿಸುತ್ತಾರೆ. ಆವಾಗ ಯಾಜ್ಞವಲ್ಕ್ಯರು ಆತ್ಮನೇ ಜ್ಞಾನಸಾಧನನೆಂದು ಉತ್ತರಿಸುತ್ತಾರೆ. ಪುನಃ ಜನಕರಾಜರು ಆತ್ಮನೆಂದರೆ ಯಾರು? ಎಂದು ಪ್ರಶ್ನಿಸಿದಾಗ ಯಾಜ್ಞವಲ್ಕ್ಯರು 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಉತ್ತರಿಸುತ್ತಾರೆ. ಅಂದರೆ ಯಾವ ಆತ್ಮನಿದ್ದಾನೋ, ಅವನು ವಿಜ್ಞಾನಮಯನಾಗಿದ್ದಾನೆ. ಇಂದ್ರಿಯ ಹಾಗೂ ಮನಸ್ಸುಗಳಿಗೆ ನಿಯಾಮಕನಾಗಿದ್ದಾನೆ. ಹೃದಯಗುಹೆಯಲ್ಲಿ ಸ್ಥಿತನಾಗಿದ್ದಾನೆ. ಇವನು ಪೂರ್ಣಷಡ್ಗುಣನಾದ ಚೇತನನಾಗಿದ್ದಾನೆಂದು ಹೇಳುತ್ತಾರೆ. ಈ ವಾಕ್ಯವೇ ಅಧಿಕರಣದ ವಿಷಯವಾಗಿದೆ.

ಇಲ್ಲಿರುವ ಆತ್ಮಶಬ್ದಕ್ಕೆ ಜೀವನೆಂದರ್ಥವೋ, ಅಥವಾ ಬ್ರಹ್ಮನೆಂದರ್ಥವೋ? ಉಪಕ್ರಮ ಹಾಗೂ ಉಪಸಂಹಾರಗಳಲ್ಲಿ ಜೀವನ ಬಗ್ಗೆ ವಿಚಾರ ಬಂದಿರುವುದರಿಂದ ಆತ್ಮಶಬ್ದವು ಜೀವಪರವೇ ಆಗುತ್ತದೆ. ಜಾಯಮಾನತ್ವ ಮೊದಲಾದ ಲಿಂಗಗಳು ಕೇಳಿಸುತ್ತಿರುವುದರಿಂದ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಶಬ್ದದಿಂದಲೂ ಜೀವನೇ ಪ್ರತಿಪಾದ್ಯನಾಗುತ್ತಾನೆಂಬುದು ಈ ಅಧಿಕರಣದ ಪೂರ್ವಪಕ್ಷ.

ಆತ್ಮಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನು. ಏಕೆಂದರೆ ಉಪಸಂಹಾರದಲ್ಲಿ ಪರಮಾತ್ಮನ ಬಗ್ಗೆ ಪ್ರಸಕ್ತಿಯಿರುವುದರಿಂದ ಆತ್ಮಶಬ್ದಕ್ಕೆ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನೆಂದು ಈಗಾಗಲೇ ಸಿದ್ಧವಾಗಿರುವುದರಿಂದ ಬ್ರಹ್ಮಪರವಾದ ವಾಕ್ಯಗಳ ಮಧ್ಯದಲ್ಲಿರುವ 'ಜಾಯಮಾನತ್ವ' ಎಂಬ ಲಿಂಗವನ್ನು ಪರಮಾತ್ಮನಲ್ಲಿ ಸಾವಕಾಶಮಾಡಬಹುದಾದ್ದರಿಂದ 'ಹೃದ್ಯಂತರ್ಜ್ಯೋತಿಃ' ಎಂಬ ಲ್ಲಿರುವ ಜ್ಯೋತಿಶಬ್ದದಿಂದ ಮುಖ್ಯವಾಗಿ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆಂಬುದು ಈ ಅಧಿಕರಣದ ಸಿದ್ಧಾಂತ.

*ಜೀವನು ಜ್ಯೋತಿಯೆಂದು ಪೂರ್ವಪಕ್ಷ*

'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿರುವ ಜ್ಯೋತಿಯು ಜೀವನೇ ಆಗಿದ್ದಾನೆಂಬುದು ಪೂರ್ವಪಕ್ಷ. ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದ ಜ್ಯೋತಿಯು ವಿಷ್ಣುವಲ್ಲ. ಏಕೆಂದರೆ ಉಭಯಲೋಕಸಂಚಾರವನ್ನು ಕರ್ಮಾಧೀನವಾಗಿ ಮಾಡುತ್ತಾನೆ. ಹುಟ್ಟು-ಸಾವು ಮೊದಲಾದ ಧರ್ಮಗಳಿಂದ ಕೂಡಿದ್ದಾನೆ ಇತ್ಯಾದಿಯಾಗಿ ಅವನ ವರ್ಣನೆಯಿದೆ. ಪರಮಾತ್ಮನಲ್ಲಿ ಜಾಯಮಾನತ್ವ, ಮ್ರಿಯಮಾಣತ್ವ, ಉಭಯಲೋಕಸಂಚಾರ ಈ ಯಾವ ಲಿಂಗಗಳೂ ಕೂಡ ಉಪಪನ್ನವಾಗುವುದಿಲ್ಲ. ಈಗಾಗಲೇ ಹಿಂದಿನ ದ್ಯುಭ್ವಾದ್ಯಧಿಕರಣದಲ್ಲಿ ಜಾಯಮಾನತ್ವಲಿಂಗವನ್ನು ಭೂಮಾಧಿಕರಣದಲ್ಲಿ ಉತ್ಕ್ರಮಣಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿರಬಹುದು. ಆದರೆ ಮ್ರಿಯಮಾಣತ್ವವನ್ನಂತೂ ಎಲ್ಲಿಯೂ ಸಮನ್ವಯ ಮಾಡಿಲ್ಲ. ಈ ಮ್ರಿಯಮಾಣತ್ವ ಲಿಂಗದ ಆಧಾರದಿಂದ ಜಾಯಮಾನತ್ವಾದಿಲಿಂಗಗಳಗೂ ಕೂಡ ಜೀವನಲ್ಲಿ ನಿರವಕಾಶವಾಗುತ್ತದೆ.

ಮತ್ತು 'ಕಿಂ ಜ್ಯೋತಿರಯಂ ಪುರುಷಃ' ಎಂದು ಜನಕರಾಜರು ಪ್ರಶ್ನಿಸಿದಾಗ 'ಆದಿತ್ಯಜ್ಯೋತಿರಾದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿಯಾಗಿ ಯಾಜ್ಞವಲ್ಕ್ಯರು ಉತ್ತರಿಸಿದ್ದಾರೆ. ಅಂದರೆ ಆದಿತ್ಯಾದಿಗಳು ಯಾರಿಗೆ ಪ್ರಕಾಶಕರಾಗಿದ್ದಾರೋ, ಅವನನ್ನೇ 'ಜ್ಯೋತಿ' ಎಂದು ತಿಳಿ ಎಂದಿದ್ದಾರೆ. 'ನ ತತ್ರ ಸೂರ್ಯೋಭಾತಿ' ಎಂಬ ಶ್ರುತಿಯು ಸೂರ್ಯಾದಿಗಳು ಪರಮಾತ್ಮನಿಗೆ ಪ್ರಕಾಶಕರಲ್ಲ ಎಂದು ಹೇಳುತ್ತಿರುವಾಗ ಪ್ರಕೃತ 'ಆದಿತ್ಯಜ್ಯೋತಿಃ' ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ಆದಿತ್ಯಾದಿಗಳು ಪ್ರಕಾಶಕರಾಗಿದ್ದಾರೆಂದು ಹೇಳಲು ಹೇಗೆ ಸಾಧ್ಯ? ಹಾಗಾಗಿ ಜೀವನೇ

ಇಲ್ಲಿ ಪ್ರತಿಪಾದ್ಯನಾಗಬೇಕು. ಮತ್ತು ಅಂತಹ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿಃ' ಎಂಬುದಾಗಿ ಸ್ವಪ್ನ, ಸುಷುಪ್ತಿ, ಪ್ರಳಯಕಾಲದಲ್ಲಿ ಸ್ವಪ್ರಕಾಶತ್ವವನ್ನು ಹೇಳಲಾಗಿದೆ. 'ಅಸ್ಯ' ಎಂಬುದಾಗಿ ಜೀವನು ಪ್ರಕೃತನಾದ ಕಾರಣ, ಆತ್ಮಶಬ್ದಕ್ಕೆ ಕೇವಲ ಸ್ವರೂಪನೆಂದಷ್ಟೇ ಅರ್ಥೈಸಬೇಕು. 'ಜ್ಯೋತಿಃ' ಎಂಬ ಶಬ್ದಕ್ಕೆ ಜ್ಞಾನವೆಂದು ಅರ್ಥೈಸಬೇಕು. ಇಂತಹ ಸ್ವಪ್ರಕಾಶನಾದ ಆತ್ಮನು ಪ್ರಸಕ್ತನಾದಾಗ ಜನಕರಾಜರು 'ಕತಮ ಆತ್ಮಾ' ಎಂದು ಪ್ರಶ್ನಿಸಿದ್ದಾರೆ. ಅದಕ್ಕನುಗುಣವಾಗಿ ಯಾಜ್ಞವಲ್ಕ್ಯರು ಜೀವನ ಬಗ್ಗೆಯೇ ಉತ್ತರಿಸಿದ್ದಾರೆ ಹೊರತು, ಪರಮಾತ್ಮನ ಬಗ್ಗೆ ಉತ್ತರಿಸುವುದು ವ್ಯಧಿಕರಣವಾಗುತ್ತದೆ.

'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಇದಂ' ಶಬ್ದವು ಜೀವಪರವೇ ಆಗಲಿ. ಆದರೆ ಆತ್ಮಶಬ್ದವು 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಸೂತ್ರದಂತೆ ಪರಮಾತ್ಮ ಪರವಾಗಬಹುದು. ಆದ್ದರಿಂದ ಪರಮಾತ್ಮನು ಪ್ರಸಕ್ತನಾದ ಕಾರಣ ಅವನ ಬಗ್ಗೆ ಯಾಜ್ಞವಲ್ಕ್ಯರು ಉತ್ತರಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಾರಂಭದಲ್ಲಿ 'ಕಿಂ ಜ್ಯೋತಿರಯಂ ಪುರುಷಃ' ಎಂದು ಜ್ಞಾನಸಾಧನನಾದ ಜೀವನೇ ಪ್ರಕೃತನಾಗಿದ್ದಾನೆ. ಕೊನೆಯಲ್ಲಿ 'ಅಯಂ ಪುರುಷಸ್ವಯಂ ಜ್ಯೋತಿಃ' ಎಂದು ಪುರುಷಾದಿಶಬ್ದಗಳಿಂದ ಪ್ರಾರಂಭದಲ್ಲಿ ಪ್ರಕೃತನಾದ ಜೀವನೇ ಪ್ರತ್ಯಭಿಜ್ಞಾಯಮಾನನಾಗಿದ್ದಾನೆ. ಹೀಗೆ ಉಪಕ್ರಮ ಹಾಗೂ ಉಪಸಂಹಾರಗಳೆರಡರಲ್ಲಿಯೂ ಜೀವನೇ ಪ್ರತಿಪಾದ್ಯನಾಗಿರವಾಗ ಮಧ್ಯದಲ್ಲಿರುವ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯವೂ ಕೂಡ ಜೀವಪರವೇ ಆಗುತ್ತದೆ. ಹೀಗೆ ಪುರುಷಾದಿಶಬ್ದಗಳಿಂದ ಪ್ರಕೃತನಾದ ಜೀವನನ್ನು ಬಿಟ್ಟು, ಪುರುಷಾದಿ ಶಬ್ದಗಳಿಂದ ಅಪ್ರಕೃತನಾದ ಬ್ರಹ್ಮಪರತ್ವವನ್ನು ಒಪ್ಪುವುದು ತಪ್ಪಾಗುತ್ತದೆಂದು ಪೂರ್ವಪಕ್ಷ.

*'ಜ್ಯೋತಿಃ' ಶಬ್ದದಿಂದ ನಾರಾಯಣನೇ ಮುಖ್ಯಪ್ರತಿಪಾದ್ಯನೆಂದು ಸಿದ್ಧಾಂತ*

ಉಪನಿಷತ್ತು 'ವಿಷ್ಣುರೇವ ಜ್ಯೋತಿಃ' ವಿಷ್ಣು ಒಬ್ಬನೇ ಜ್ಯೋತಿಯೆನಿಸಿದ್ದಾನೆಂದು ಬೇರೆಯವರನ್ನು ನಿರಾಕರಣೆ ಮಾಡಿ, ಅವಧಾರಣಪೂರಕವಾಗಿ ವಿಷ್ಣುವನ್ನು ಜ್ಯೋತಿಯೆಂದು ಹೇಳುತ್ತಿದೆ. ಮತ್ತು 'ನಾರಾಯಣ ಪರಂಜ್ಯೋತಿಃ ಪರಂಜ್ಯೋತಿರುಪಸಂಪದ್ಯ' ಇತ್ಯಾದಿ ಶ್ರುತಿಗಳಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಿರುವ ಕಾರಣ, ವಿಷ್ಣುವೇ 'ಜ್ಯೋತಿಃ' ಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಬೃಹದಾರಣ್ಯಕದಲ್ಲಿರುವ 'ಹೃದ್ಯಂತರ್ಜ್ಯೋತಿಃ' ಎಂಬ ಉಪಕ್ರಮ 'ಸ್ವಯಂ ಜ್ಯೋತಿಃ' ಎಂಬ ಉಪಸಂಹಾರ ವಾಕ್ಯ 'ಸ್ವಪಿತಿ ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಮಧ್ಯದಲ್ಲಿರುವ ವಾಕ್ಯ, ಇವುಗಳಲ್ಲಿಯೂ ಇರುವಂತಹ 'ಜ್ಯೋತಿಃ' ಶಬ್ದವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ. ಮೊದಲು ಕೊನೆಯಲ್ಲಿ, ಮಧ್ಯದಲ್ಲಿ ಎಲ್ಲೆಡೆಯು ಪರಮಾತ್ಮನೇ ಪ್ರತಿಪಾದ್ಯನಾಗಿರುವಾಗ ಮಧ್ಯದಲ್ಲಿರುವ ಲಿಂಗಗಳನ್ನು ಪರಮಾತ್ಮನಲ್ಲಿ ಸಾವಕಾಶ ಮಾಡಬೇಕು.

ಶ್ರುತಿಯಲ್ಲಿರುವ 'ಮ್ರಿಯಮಾಣ' ಎಂಬ ಪದಕ್ಕೆ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಿ, ಸಾಯಿಸುವವನು ಎಂಬರ್ಥವನ್ನು ಹೇಳಬೇಕು. ಇದರಂತೆ ಜಾಯಮಾನ ಶಬ್ದಕ್ಕೆ ಹುಟ್ಟಿಸುವವನು ಎಂದು ಅರ್ಥೈಸಿ, ಎಲ್ಲ ಲಿಂಗಗಳನ್ನು ಪರಮಾತ್ಮನಲ್ಲಿಯೇ ಕೂಡಿಸಬೇಕು. 'ಲೋಕಾವನುಸಂಚರತಿ' ಎಂಬಲ್ಲಿ ಹೇಳಿದ ಉಭಯಲೋಕಸಂಚಾರವನ್ನು ಮಾತ್ರ, ಅಂತರ್ಭಾವಿತಣಿಜರ್ಥತ್ವವನ್ನು ಹೇಳಿ, ಸಮನ್ವಯ ಮಾಡಬೇಕಾಗಿಲ್ಲ. ಹೊರತಾಗಿ, ಸ್ವತಃ ಪರಮಾತ್ಮನೇ ಜೀವನನ್ನು ತೆಗೆದುಕೊಂಡು, ಉಭಯಲೋಕದ ಸಂಚಾರವನ್ನು ಮಾಡುತ್ತಾನೆ. ಆದರೆ ಸ್ವಾತಂತ್ರ್ಯವಿರುವ ಕಾರಣ, ಅವನಿಗೆ ಯಾವುದೇ ದುಃಖಾದಿಗಳ ಲೇಪವು ಉಂಟಾಗುವುದಿಲ್ಲ. ಇದರಂತೆ 'ಪಾಪ್ಮಭಿಃ ಸಂಸೃಜ್ಯತೇ' ಎಂಬ ಶ್ರುತಿಗೂ ಕೂಡ ಪರಮಾತ್ಮನು ಜೀವನಿಗೆ ಪುಣ್ಯ-ಪಾಪಾದಿಗಳನ್ನು ಫಲೋನ್ಮುಖವಾಗುವಂತೆ ಮಾಡುತ್ತಾನೆ ಹೊರತು, ಆ ಪುಣ್ಯಪಾಪಗಳ ಸಂಪರ್ಕದಿಂದ ತನ್ನಲ್ಲೇನೂ ಉಚ್ಚತ್ವ-ನೀಚತ್ವಗಳು ಉಂಟಾಗುವುದಿಲ್ಲ. ಆದ್ದರಿಂದ ಸಮಗ್ರ 'ಜ್ಯೋತಿರ್ಬ್ರಾಹ್ಮಣ' ಪ್ರಕರಣವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆಂದು ಸಿದ್ಧವಾಗುತ್ತದೆ.

## ವಿಷ್ಣುಪಕ್ಷದಲ್ಲಿ ಸಾಧಕ ಪ್ರಮಾಣ. ಜೀವಪಕ್ಷದಲ್ಲಿ ಬಾಧಕ ಪ್ರಮಾಣ

.ಶ್ರುತಿಯಲ್ಲಿರುವ ಪುರುಷಶಬ್ದವು ಪುರುಷೋತ್ತಮನಾದ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆಂಬ ವಿಚಾರವನ್ನು ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಲಾಗಿದೆ. ಮತ್ತು ಉಪಕ್ರಮದಲ್ಲಿ ಜೀವನು ಪ್ರಕೃತನಾದ್ದರಿಂದ ಉಪಸಂಹಾರದಲ್ಲಿಯೂ ಅವನನ್ನೇ ಪರಾಮರ್ಶ ಮಾಡಬೇಕೆಂದು ಪೂರ್ವಪಕ್ಷದಲ್ಲಿ ಹೇಳಲಾಗಿತ್ತು. ಇದೂ ಸಹ ತಪ್ಪು. ಪ್ರಕೃತ ಪರತ್ವವನ್ನು ಆಶ್ರಯಿಸುವುದಕ್ಕಿಂತ ಮುಖ್ಯಪರತ್ವವನ್ನು ಆಶ್ರಯಿಸುವುದೇ ಶ್ರೇಷ್ಠ. ಅಂದರೆ ಜ್ಯೋತಿ ಹಾಗೂ ಪುರುಷ ಶಬ್ದಗಳಿಗೆ ಪರಮಾತ್ಮ ಎಂಬ ಅರ್ಥವನ್ನು ಹೇಳಿದಾಗ ಮುಖ್ಯಾರ್ಥತ್ವವನ್ನು ಇಟ್ಟುಕೊಂಡಂತಾಗುತ್ತದೆ. ಆದರೆ ಜೀವನೆಂಬರ್ಥವನ್ನು ವಿವಕ್ಷಿಸಿದಾಗ, ಕೇವಲ ಪ್ರಕೃತಪರತ್ವವನ್ನು ಇಟ್ಟುಕೊಂಡಂತಾಗುತ್ತದೆ ಹೊರತು, ಮುಖ್ಯಾರ್ಥತ್ವವನ್ನು ಇಟ್ಟುಕೊಂಡಂತಾಗುವುದಿಲ್ಲ. ಮತ್ತು ಬ್ರಹ್ಮನೂ ಸಹ 'ಹಿರಣ್ಮಯಃಪುರುಷಃ' ಎಂಬಲ್ಲಿ ಹಿಂದೆ ಪ್ರಕೃತನಾಗಿದ್ದಾನೆ. ವಿಚಾರ ಮಾಡಿದರೆ ಜೀವನು ಉಪಕ್ರಮದಲ್ಲಿ ಪ್ರಕೃತನಾಗಿರಬಹುದು. ಆದರೆ ಬ್ರಹ್ಮನು ಉಪಕ್ರಮವಾಕ್ಯಕ್ಕಿಂತ ಅತ್ಯಂತ ಸಮೀಪದಲ್ಲೇ ಪ್ರಕೃತನಾಗಿದ್ದಾನೆ. ಪರಾಮರ್ಶ ಮಾಡುವಂತಹ 'ಇದಂ' ಮೊದಲಾದ ಶಬ್ದಗಳು ಬುದ್ಧಿಯಲ್ಲಿ ಸನ್ನಿಹಿತವಾದದ್ದನ್ನೇ ಪರಾಮರ್ಶ ಮಾಡುತ್ತವೆ ಹೊರತು, ದೂರದಲ್ಲಿರುವುದನ್ನು ಪರಾಮರ್ಶ ಮಾಡುವುದಿಲ್ಲ. ಪ್ರಕೃತ 'ಸ್ವಪ್ನೇನ ಶಾರೀರಮಭಿಪ್ರಹೃತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಎಂಬ ಹಿಂದಿನ ವಾಕ್ಯದಲ್ಲಿ ಪರಮಾತ್ಮನೇ ಸನ್ನಿಹಿತನಾದ್ದರಿಂದ, ಅವನನ್ನೇ ಪರಾಮರ್ಶ ಮಾಡಬೇಕು.

'ಅಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕಾಗಿಲ್ಲ. ಸ್ವಪ್ನಾದ್ಯವಸ್ಥೆಗಳಲ್ಲಿ ಜೀವನಿಗೆ ಪರಮಾತ್ಮನೇ ಜ್ಞಾನಕಾರಣನಾದ್ದರಿಂದ, 'ಆತ್ಮೈವಾಸ್ಯಜ್ಯೋತಿಃ' ಎಂಬಲ್ಲಿ ಅವಧಾರಣವನ್ನು ಶ್ರುತಿಯು ಹೇಳಿದೆ. ಇಂತಹ ಆತ್ಮನ ಬಗ್ಗೆ ಪ್ರಶ್ನೋತ್ತರಗಳನ್ನು ಮಾಡಿದ ಮೇಲೆ 'ಜ್ಯೋತಿಃ' ಶಬ್ದದಿಂದ ಜ್ಞಾನಸಾಧನತ್ವವನ್ನು ಹೇಳಿ, ಹೇಗೆ ಜ್ಞಾನಸಾಧನನಾಗಿದ್ದಾನೆ? ಎಂಬ ಪ್ರಶ್ನೆಗೆ 'ಸ್ವಯಂ ವಿಹೃತ್ಯ' ಇತ್ಯಾದಿ ವಾಕ್ಯದಿಂದ ಸ್ವಪ್ನಪದಾರ್ಥಗಳನ್ನು ಸೃಷ್ಟಿಸುವ ಮೂಲಕ ಜ್ಞಾನಸಾಧನನಾಗಿದ್ದಾನೆಂದು ಉತ್ತರಿಸಲಾಗಿದೆ. ಆದ್ದರಿಂದ 'ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ ಎಂಬಲ್ಲಿ 'ಅಸ್ಯ' ಎಂಬ ಪದದಿಂದ ಜೀವನೇ ಅನ್ವಿತನಾಗುತ್ತಾನೆ. ಮತ್ತು 'ಆತ್ಮೈವಾಸ್ಯಜ್ಯೋತಿಃ' ಎಂಬ ವಾಕ್ಯದಲ್ಲಿರುವ ಆತ್ಮಶಬ್ದದ ಅರ್ಥವನ್ನು 'ಅತ್ರಾಯಂ ಪುರುಷ ಸ್ವಯಂ' ಎಂಬಲ್ಲಿ ಪುರುಷ ಶಬ್ದವು ಹೇಳುತ್ತಿದೆ. ಅವಧಾರಣದ ಅರ್ಥವನ್ನು 'ಸ್ವಯಂ' ಶಬ್ದವು ಹೇಳುತ್ತಿರುವುದರಿಂದ, ಪರಮಾತ್ಮ ಪರತ್ವ ಪಕ್ಷದಲ್ಲಿಯೇ ಐಕಾರ್ಥ್ಯವು ಇರುತ್ತದೆ.

ವಿಚಾರ ಮಾಡಿದರೆ ಜೀವಪಕ್ಷದಲ್ಲಿ ಪ್ರಶ್ನೆಯೇ ಕೂಡುವುದಿಲ್ಲ. ಜೀವನು ಹುಟ್ಟು-ಸಾವು ಮೊದಲಾದವುಗಳಿಂದ ಯುಕ್ತನಾಗಿದ್ದಾನೆಂಬುದು ಪ್ರತ್ಯಕ್ಷದಿಂದಲೇ ಸಿದ್ಧವಾಗುವಾಗ ಅದನ್ನೇ ಶ್ರುತಿಯು ಪುನಃ ಹೇಳುವುದರಲ್ಲಿ ಅರ್ಥವಿಲ್ಲ. ಮತ್ತು ಜೀವಪಕ್ಷದಲ್ಲಿ ಸುಖ-ದುಃಖಗಳಿಗೆ ಆಶ್ರಯನಾದ ಕಾರಣ ಸಮಾನತ್ವವಾಗಲೀ, 'ಸ್ವಯಂವಿಹೃತ್ಯ' ಎಂಬಲ್ಲಿ ಹೇಳಲ್ಪಟ್ಟ ಸ್ವಾತಂತ್ರ್ಯವಾಗಲೀ, 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂಬಲ್ಲಿ ಹೇಳಲ್ಪಟ್ಟ ಸ್ವಾಪ್ನಪದಾರ್ಥಸ್ರಷ್ಟೃತ್ವವಾಗಲೀ ಕೂಡುವುದಿಲ್ಲ. ಆದ್ದರಿಂದ ಬೃಹದಾರಣ್ಯಕೋಪನಿಷತ್ತಿನ ಜ್ಯೋತಿರ್ಬ್ರಾಹ್ಮಣದಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು ಜೀವನಲ್ಲ.

## ಅದ್ವೈತಭಾಷ್ಯದ ಅಧಿಕರಣವಿಮರ್ಶೆ

ಛಾಂದೋಗ್ಯೋಪನಿಷತ್ತಿನಲ್ಲಿರುವ 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪ-ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯವನ್ನು ವಿಷಯವನ್ನಾಗಿ ಅದ್ವೈತಿಗಳು ಹೇಳುತ್ತಾರೆ. ಇಲ್ಲಿರುವ

'ಜ್ಯೋತಿಃ' ಶಬ್ದದಿಂದ ಪ್ರಸಿದ್ಧನಾದ ಸೂರ್ಯಜ್ಯೋತಿಯೇ ಪ್ರತಿಪಾದ್ಯನು. ಏಕೆಂದರೆ ಮರಣದ ಅನಂತರ ಪ್ರತಿಯೊಬ್ಬ ಜೀವರೂ ಸೂರ್ಯರಶ್ಮಿಯ ಮೂಲಕ ಸೂರ್ಯನನ್ನು ಹೊಂದುತ್ತಾರೆಂದು ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದ, ಸೂರ್ಯನೇ ಇಲ್ಲಿ ಪ್ರತಿಪಾದ್ಯನು ಎಂದು ಪೂರ್ವಪಕ್ಷ.

ಈ ಪ್ರಕರಣದಲ್ಲಿ ಪ್ರತಿಪಾದ್ಯನಾಗಿ ಪ್ರಸ್ತುತನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಯ ಆತ್ಮಾಪಹತಪಾಪ್ಮ' ಇತ್ಯಾದಿಯಾಗಿ ನಿರ್ಗುಣಬ್ರಹ್ಮನನ್ನು ಹೇಳಿ, ಆ ನಿರ್ಗುಣ ಬ್ರಹ್ಮನ ಜ್ಞಾನವನ್ನು ಹೊಂದುವುದರಿಂದ, ಬ್ರಹ್ಮಭಾವವನ್ನು ಹೊಂದುತ್ತಾನೆಂಬ ಫಲವು ಹೇಳಲ್ಪಟ್ಟಿದೆ. ಸೂರ್ಯನನ್ನು ಹೊಂದುವಿಕೆಯು ಆತ್ಯಂತಿಕ ಮೋಕ್ಷವಾಗವುದಿಲ್ಲ. ಗತಿ ಹಾಗೂ ಉತ್ಕ್ರಾಂತಿಗಳಿಂದ ಸೂರ್ಯನ ಲೋಕವು ದೊರೆಯುತ್ತದೆ. ಇದು ಗೌಣವಾದ ಮೋಕ್ಷವೇ ಹೊರತು, ಪಾರಮಾರ್ಥಿಕ ಮೋಕ್ಷವಲ್ಲ. ಪ್ರಕೃತ ಜ್ಯೋತಿಯ ರೂಪವನ್ನು ಪಡೆದವರಿಗೆ 'ಅಶರೀರವಾವಸಂತಂ' ಎಂದು ಬ್ರಹ್ಮಭಾವವನ್ನು ಹೇಳಿದ್ದರಿಂದ, ಪರಂಜ್ಯೋತಿಶಬ್ದದಿಂದ ಪ್ರತಿಪಾದ್ಯನಾದವನು ಪರಬ್ರಹ್ಮನೇ ಆಗಿದ್ದಾನೆಂದು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಈ ವಾಕ್ಯದಲ್ಲಿ ನಿರ್ಗುಣ ಬ್ರಹ್ಮಭಾವವು ಪ್ರತಿಪಾದ್ಯವೇ ಆಗಿಲ್ಲ. ಇದರ ಹಿಂದೆ 'ಯ ಆತ್ಮಾಪಹತಪಾಪ್ಮ' ಎಂದು ಪ್ರಾರಂಭ ಮಾಡಿ, 'ಸತ್ಯಕಾಮಃ ಸತ್ಯಸಂಕಲ್ಪಃ' ಮೊದಲಾದ ವಾಕ್ಯಗಳಿಂದ ಸಗುಣಬ್ರಹ್ಮನ ನಿರೂಪಣೆಯೇ ಶ್ರುತವಾಗಿದೆ. ಅನಂತರವೂ ಸಹ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂದು ಸಗುಣಮೋಕ್ಷದ ಪ್ರಸ್ತಾಪವೇ ಇದೆ. ಹೀಗಿರುವಾಗ ನಿರ್ಗುಣಮೋಕ್ಷವು ಇಲ್ಲಿ ಪ್ರತಿಪಾದ್ಯನಾಗಲು ಸಾಧ್ಯವೇ ಇಲ್ಲ

# ಆಕಾಶಾಧಿಕರಣ

*ಪಾದಸಂಗತಿ ಹಾಗೂ ಅಧಿಕರಣ ಸಂಗತಿಗಳ ಸಮರ್ಥನೆ*

ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ. ಪ್ರಥಮಪಾದದಲ್ಲಿ ಒಮ್ಮೆ ಆಕಾಶಾಧಿಕರಣವು ಪ್ರಸಕ್ತವಾಗಿ ಬ್ರಹ್ಮನಲ್ಲಿ ಆಕಾಶಶಬ್ದವನ್ನು ಸಮನ್ವಯಮಾಡಿದ್ದಾಗಿದೆ. ಪುನಃ ಮೂರನೆಯ ಪಾದದಲ್ಲಿಯೂ ಕೂಡ ಆಕಾಶಾಧಿಕರಣವೇ ಪ್ರಾಪ್ತವಾಗುತ್ತಿದೆ. ಆದರೆ ಪ್ರಥಮಪಾದದಲ್ಲಿ ಭೂತಾಕಾಶದಲ್ಲಿ ಪ್ರಸಿದ್ಧವಾದ ಆಕಾಶಶಬ್ದವನ್ನು ಸಮನ್ವಯ ಮಾಡಿದರು. ಈ ಪಾದದಲ್ಲಿ ಅವ್ಯಾಕೃತಾಕಾಶದಲ್ಲಿ ಪ್ರಸಿದ್ಧವಾದ ಆಕಾಶಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ. ಮತ್ತು ಪ್ರಥಮಪಾದದ ಆಕಾಶಾಧಿಕರಣಕ್ಕೆ 'ಅಸ್ಯ ಲೋಕಸ್ಯ ಕಾಗತಿಃ' ಎಂಬ ಛಾಂದೋಗ್ಯದ ವಾಕ್ಯವು ವಿಷಯವಾಗಿದೆ. ಈ ಅಧಿಕರಣದಲ್ಲಿ 'ಆಕಾಶೋ ವೈ ನಾಮರೂಪಯೋರ್ನಿರ್ವಹಿತ' ಎಂಬ ಮತ್ತೊಂದು ಛಾಂದೋಗ್ಯದ ವಾಕ್ಯವು ವಿಷಯವಾಗಿದೆ. ಹೀಗೆ ಸಮನ್ವಯ ಮಾಡುತ್ತಿರುವ ವಿಷಯವಾಕ್ಯಗಳ ಭೇದದಿಂದಲೂ ಅಧಿಕರಣಭೇದವು ಯುಕ್ತವಾಗಿದೆ.

'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದ ಅಧಿಕರಣದಿಂದ ಶ್ರುತಿಯಲ್ಲಿರುವ ಆಕಾಶಬ್ದಗಳೆಲ್ಲವೂ ಭಗವತ್ಪರವಾಗಿವೆಯೆಂದು ಸಮರ್ಥನೆಮಾಡಿದ್ದಾರೆ. ಆದರಿಂದ ಪ್ರಕೃತ 'ಆಕಾಶೋ ವೈ ನಾಮ' ಇತ್ಯಾದಿ ಶ್ರುತಿಯಲ್ಲಿರುವ ಆಕಾಶಶಬ್ದವೂ ಕೂಡ ಭಗವತ್ಪರವೆಂದಂತಾಯಿತು. ಆದರೆ ಅವ್ಯಾಕೃತಾಕಾಶದಲ್ಲಿಯೂ ಆಕಾಶಶಬ್ದದ ಪ್ರಯೋಗವಿದೆ.

ಹಾಗಾಗಿ ಪ್ರಥಮಪಾದದ ನ್ಯಾಯದಿಂದ ಹಾಗೂ ಲೋಕಪ್ರಸಿದ್ಧಿಯಿಂದ ಇಲ್ಲಿ ಸಮನ್ವಯ ಮಾಡುತ್ತಿರುವ ಆಕಾಶಶಬ್ದವು ಉಭಯತ್ರಪ್ರಸಿದ್ಧವೆನಿಸುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಪಾದಸಂಗತಿಯಿರುತ್ತದೆಂದು ತಿಳಿಯಬೇಕು.

ಹಿಂದಿನ ಜ್ಯೋತಿರಧಿಕರಣದಲ್ಲಿ ಅಮೃತತ್ವಾದಿ ಧರ್ಮಗಳಿಂದ ಯುಕ್ತನಾದವನೇ ಜ್ಯೋತಿಯೆಂದು ಶ್ರುತಿಯು ಹೇಳುತ್ತಿರುವುದರಿಂದ ಮಹಾವಿಷ್ಣುವಿನಲ್ಲಿ 'ಜ್ಯೋತಿ' ಎಂಬ ಶಬ್ದವನ್ನು ಸಮನ್ವಯ ಮಾಡಲಾಯಿತು. ಆದರೆ ಆಕಾಶಶ್ರುತಿಯಲ್ಲಿ ಅದೇ ಅಮೃತತ್ವಲಿಂಗವನ್ನು ಆಕಾಶವನ್ನಲ್ಲಿ ಶ್ರುತಿಯು ಹೇಳುತ್ತಿದೆ. ಒಂದು ವೇಳೆ ಆಕಾಶಶಬ್ದವಾಚ್ಯವಾದ ಪದಾರ್ಥವು ಬೇರೆಯಾದಲ್ಲಿ, ಹಿಂದಿನ ಅಧಿಕರಣದ ಜ್ಯೋತಿಯೂ ಕೂಡ ಬೇರೆ ಪದಾರ್ಥವೇ ಆಗುತ್ತದೆ. ಹಾಗಾಗಿ ಹಿಂದಿನ ಜ್ಯೋತಿರಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯಿರುತ್ತದೆಂದೂ ಭಾವಿಸಬೇಕು

*ಅಧಿಕರಣದ ಸಂಶಯ ಪರಂಪರೆ*

'ಆಕಾಶೋ ವೈನಾಮ ನಾಮರೂಪಯೋರ್ನಿರ್ವಹಿತ' ಎಂಬ ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. 'ವೈ ನಾಮ' ಎಂಬ ಪದಗಳು ಆಕಾಶವು ಪ್ರಸಿದ್ಧವಾದುದೆಂದು ಹೇಳುತ್ತಿವೆ. ನಾಮರೂಪಾತ್ಮಕವಾದ ಪ್ರಪಂಚಕ್ಕೆ ಅಂತಹ ಆಕಾಶವು ಆಶ್ರಯವಾಗಿದೆಯೆಂದೂ ಕೂಡ ಹೇಳುತ್ತಿದೆ. ಪ್ರತ್ಯಕ್ಷಾನುಭವದಂತೆ ಅವ್ಯಾಕೃತಾಕಾಶವೇ ನಾಮರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯವಾದ ಕಾರಣ ಮತ್ತು ಆಕಾಶಶಬ್ದದ ಪ್ರಸಿದ್ಧಿಯೂ ಕೂಡ ಅವ್ಯಾಕೃತಾಕಾಶದಲ್ಲೇ ಇರುವ ಕಾರಣದಿಂದಲೂ ಅವ್ಯಾಕೃತಾಕಾಶವೇ 'ಆಕಾಶೋ ವೈ ನಾಮ' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ. 'ತೇ ಯದಂತರ ತದ್ಬ್ರಹ್ಮ' ಎಂಬ ಮುಂದಿನ ವಾಕ್ಯದಲ್ಲಿ ಶ್ರುತವಾದ ಆಕಾಶವನ್ನು ನಾಮರೂಪಾತ್ಮಕವಾದ ಪ್ರಪಂಚಕ್ಕಿಂತಲೂ ಭಿನ್ನವೆಂದು ಅಥವಾ ಪ್ರಾಕೃತನಾಮರಹಿತರೆಂದು ಹೇಳಿರುವ ಕಾರಣ ಬ್ರಹ್ಮಶಬ್ದವಿರುವುದರಿಂದಲೂ ಆಕಾಶವು ಬ್ರಹ್ಮನೇ ಆಗುತ್ತಾನೆಂಬುದು ಈ ಅಧಿಕರಣದ ಸಿದ್ಧಾಂತ.

*ಅವ್ಯಾಕೃತಾಕಾಶವೇ ಪ್ರತಿಪಾದ್ಯವೆಂದು ಪೂರ್ವಪಕ್ಷ*

'ಆಕಾಶೋ ವೈನಾಮ ನಾಮರೂಪಯೋ ನಿರ್ವಹಿತ ತೇ ಯದಂತ ತದ್ಬ್ರಹ್ಮ ತದಮೃತಂ' ಎಂಬ ವಾಕ್ಯದಿಂದ ಪ್ರಸಿದ್ಧವಾದದ್ದು ಅವ್ಯಾಕೃತಾಕಾಶವೇ ಆಗಿದೆ. ಏಕೆಂದರೆ 'ವೈ ನಾಮ' ಎಂಬೆರಡು ಅವ್ಯಯಗಳು 'ಪ್ರಸಿದ್ಧ' ಎಂಬರ್ಥವನ್ನು ಹೇಳುತ್ತವೆ. ಅವ್ಯಾಕೃತಾಕಾಶವು ಆಕಾಶಶಬ್ದದಿಂದ ಪ್ರತಿಪಾದ್ಯವಾಗಿದೆಯೆಂಬುದು ಲೋಕಪ್ರಸಿದ್ಧವಾದ ವಿಚಾರ. ಮತ್ತು ನಾಮರೂಪವಾದ ಪ್ರಪಂಚಕ್ಕೂ ಆಶ್ರಯವಾಗಿರುವಿಕೆಯು ಅವ್ಯಾಕೃತಾಕಾಶದಲ್ಲಿ ಪ್ರತ್ಯಕ್ಷಸಿದ್ಧವಾದ ವಿಚಾರವೇ ಆಗಿದೆ. ಹೀಗೆ ಲೋಕಪ್ರಸಿದ್ಧಿ ಮತ್ತು ನಾಮರೂಪ ಪ್ರಪಂಚಕ್ಕೆ ಆಶ್ರಯವಾಗಿರುವಿಕೆ ಎಂಬೆರಡು ನಿರವಕಾಶಲಿಂಗಗಳಿಂದ ಆಕಾಶಪದದಿಂದ ಅವ್ಯಾಕೃತಾಕಾಶವೇ ಪ್ರತಿಪಾದ್ಯವಾಗುತ್ತದೆ. 'ವೈ ನಾಮ' ಎಂಬೆರಡು ನಿಪಾತಗಳೇ ಪೂರ್ವಪಕ್ಷಕ್ಕೆ ಪ್ರಧಾನವಾದ ಲಿಂಗ. ವಿಷಯವಾಕ್ಯದಲ್ಲಿ ಬ್ರಹ್ಮಶ್ರುತಿ, ಆತ್ಮಶ್ರುತಿ ಮೊದಲಾದ ಶ್ರುತಿಗಳು, ಅಮೃತತ್ವ, ನಾಮರೂಪರಾಹಿತ್ಯ ಮೊದಲಾದ ಲಿಂಗಗಳು ವಿಷ್ಣುವಿಷಯಕವಾಗಿ ಶ್ರುತವಾಗಿವೆ. ಆದರೂ ಸಹ ಪ್ರಸಿದ್ಧಿದ್ಯೋತಕವಾದ 'ವೈ ನಾಮ' ಎಂಬೆರಡು ನಿಪಾತಗಳು ಆ ಎಲ್ಲಾ ಶ್ರುತಿ ಹಾಗೂ ಲಿಂಗಗಳನ್ನು ಬಾಧಿಸುತ್ತವೆ. ನಿಪಾತದಿಂದ ದ್ಯೋತಿತವಾದ ಪ್ರಸಿದ್ಧಿಯೆಂದರೆ ಲೌಕಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಒಂದುವೇಳೆ ವೈದಿಕಪ್ರಸಿದ್ಧಿಯನ್ನು ಇಟ್ಟುಕೊಂಡರೆ, ವ್ಯಾವರ್ತ್ಯವಾದ ಅಪ್ರಸಿದ್ಧವಾದ ಆಕಾಶವೇ ಇರುವುದಿಲ್ಲ. ಏಕೆಂದರೆ ಗಗನವೂ ಸಹ ವೇದಪ್ರಸಿದ್ಧವೇ ಆಗಿದೆ.

ಮತ್ತು ಅಸಂಕುಚಿತ ಪ್ರವೃತ್ತಿಯು ವಿಷ್ಣುವಿಗಿಂತ ಗಗನದಲ್ಲೇ ಇರುತ್ತದೆ. ಏಕೆಂದರೆ ಸ್ವರೂಪೇಣ ಮತ್ತು ನಾಮರೂಪನಿರ್ವಾಹಕತ್ವೇನ ಲೋಕದಿಂದಲೂ, ವೇದದಿಂದಲೂ ಪ್ರಸಿದ್ಧವಾಗಿದೆ. ಆದರೆ ಬ್ರಹ್ಮನು ಸ್ವರೂಪದಿಂದಷ್ಟೇ ವೇದದಲ್ಲಿ ಪ್ರಸಿದ್ಧವಾಗಿದ್ದಾನೆ. ನಾಮರೂಪನಿರ್ವಾಹಕತ್ವೇನ ಪ್ರಸಿದ್ಧಿಯನ್ನಂತೂ ಬ್ರಹ್ಮನಲ್ಲಿ ಲೋಕದಿಂದಾಗಲೀ, ವೇದದಿಂದಾಗಲೀ ಹೇಳಲು ಸಾಧ್ಯವಿಲ್ಲ. ಹಾಗಾಗಿ ಬ್ರಹ್ಮಪಕ್ಷದಲ್ಲಿರುವ ಪ್ರವೃತ್ತಿಯು ಸಂಕುಚಿತವಾಗಿವೆ. ಗಗನಪಕ್ಷದಲ್ಲಿರುವ ಪ್ರವೃತ್ತಿಯು ಅಸಂಕುಚಿತವಾಗಿದೆ. ಅಸಂಕುಚಿತ ಪ್ರವೃತ್ತಿಯನ್ನೇ ವಿವಕ್ಷಿಸಲು ಬರುವಾಗ, ಸಂಕುಚಿತಪ್ರವೃತ್ತಿಯನ್ನು ವಿವಕ್ಷಿಸಬೇಕಾಗಿಲ್ಲ. ಹೀಗೆ 'ವೈ ನಾಮ' ಎಂಬ ನಿಪಾತಗಳನ್ನು 'ಆಕಾಶಃ' ಎಂಬ ಉದ್ದೇಶದಲ್ಲಾಗಲೀ, 'ನಾಮರೂಪನಿರ್ವಹಿತ' ಎಂಬ ವಿಧೇಯದಲ್ಲಾಗಲೀ ಅನ್ವಯ ಮಾಡಿದರೂ ಗಗನವೇ ಆಕಾಶಶಬ್ದ ಪ್ರತಿಪಾದ್ಯವಾಗುತ್ತದೆ.

### *'ವೈ ನಾಮ' ಎಂಬ ನಿಪಾತಗಳಿಗೆ ವಿಧೇಯದಲ್ಲಿ ಅನ್ವಯವಲ್ಲ*

'ವೈ ನಾಮ' ಎಂಬೆರಡು ನಿಪಾತಗಳು ಲೋಕಪ್ರಸಿದ್ಧಿಯನ್ನು ಹೇಳುತ್ತಿವೆ. ಆದ್ದರಿಂದ ಗಗನವನ್ನೇ ಆಕಾಶಶಬ್ದ ಪ್ರತಿಪಾದ್ಯವೆಂದು ವಿವಕ್ಷಿಸಬೇಕು. ನಾಮರೂಪನಿರ್ವಾಹಕತ್ವವು ಗಗನದಲ್ಲಿ ಅಪ್ರಸಿದ್ಧವಾಗಿರಬಹುದು. ಆದರೆ ಸ್ವರೂಪತಃ ಪ್ರಸಿದ್ಧಿಯನ್ನಷ್ಟೇ ವಿವಕ್ಷಿಸಿ, ಆಕಾಶಶಬ್ದ ಪ್ರತಿಪಾದ್ಯವನ್ನು ನಿರ್ವಹಿಸಬಹುದು. ಅಂದರೆ 'ವೈ ನಾಮ' ಎಂಬ ನಿಪಾತವನ್ನು ಉದ್ದೇಶ್ಯದಲ್ಲಿ ಮಾತ್ರ ಅನ್ವಯ ಮಾಡಿ ವಿಧೇಯವಾದ ನಾಮರೂಪನಿರ್ವಾಹಕತ್ವದಲ್ಲಿ ಅನ್ವಯ ಮಾಡದೇ ಅರ್ಥವನ್ನು ತಿಳಿಯಬೇಕು.

ಬ್ರಹ್ಮನನ್ನು ವಿಧೇಯನೆಂದು ಒಪ್ಪಿದರೂ ಸಹ ಯಾವುದೇ ಬಗೆಯ ಪ್ರಸಿದ್ಧಿಯನ್ನು ಅವನಲ್ಲಿ ತೋರಿಸಲಾಗದು. ಏಕೆಂದರೆ ಈಕ್ಷತ್ಯಧಿಕರಣದಲ್ಲಿ 'ಅಪ್ರಸಿದ್ಧೇರವಾಚ್ಯಂ ತತ್' ಎಂಬುದಾಗಿ ಹೇಳಿದಂತೆ ಪ್ರಸಿದ್ಧಿಶಬ್ದಕ್ಕೆ ಲೋಕಪ್ರಸಿದ್ಧಿಯೆಂದೇ ಸ್ವಾಭಾವಿಕವಾದ ಅರ್ಥ. ಬ್ರಹ್ಮನಲ್ಲಿ ಇಂತಹ ಲೋಕಪ್ರಸಿದ್ಧಿಯನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಗಗನದಲ್ಲಿರುವ ಪ್ರಸಿದ್ಧಿಯನ್ನೇ 'ವೈ ನಾಮ' ಎಂಬೆರಡು ನಿಪಾತಗಳು ಹೇಳುತ್ತಿವೆ.

### *ಸಿದ್ಧಾಂತ ನಾಮರಾಹಿತ್ಯ-ರೂಪರಾಹಿತ್ಯಗಳೆರಡೂ ವಿಷ್ಣುವಿನ ನಿರವಕಾಶಲಿಂಗಗಳು*

'ಆಕಾಶೋ ವೈನಾಮ ನಾಮರೂಪಯೋಃ ನಿರ್ವಹಿತ' ಎಂಬ ಛಾಂದೋಗ್ಯದ ವಾಕ್ಯದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಈ ವಾಕ್ಯದಲ್ಲಿರುವ ನಾಮರಾಹಿತ್ಯ-ರೂಪರಾಹಿತ್ಯಗಳೆರಡೂ ವಿಷ್ಣುವಿನ ಅಸಾಧಾರಣ ನಿರವಕಾಶಲಿಂಗಗಳೇ ಆಗಿವೆ ಹೊರತು, ಅವ್ಯಾಕೃತಾಕಾಶದ್ದಲ್ಲ. 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಗಳು ಪರಮಾತ್ಮನು ಸಾಕಲ್ಯೇನ ಶಬ್ದಗೋಚರನಲ್ಲವೆಂದು ಸಮರ್ಥನೆ ಮಾಡುತ್ತಿವೆ. ಆದ್ದರಿಂದ ಅವನನ್ನು ನಾಮರಹಿತನೆಂದು ಶ್ರುತಿಯು ಕರೆದಿದೆ.

ಇದರಂತೆ 'ತೇ ಯದಂತರಾ' ಎಂಬ ಶ್ರುತಿಯಲ್ಲಿ ರೂಪರಾಹಿತ್ಯವನ್ನೂ ಕೂಡ ತಿಳಿಯಬೇಕು. ಅಂದರೆ ಬ್ರಹ್ಮನಲ್ಲಿ 'ಯದಾಪಶ್ಯಃ ಪಶ್ಯತೇ ರುಗ್ಮವರ್ಣಮ್' ಇತ್ಯಾದಿ ಶ್ರುತಿಗಳ ಆಧಾರದಿಂದ ಪ್ರಾಕೃತರೂಪವಿರಬಹುದೆಂಬ ಸಂಶಯವೂ ಉಂಟಾಗುತ್ತದೆ. ಅದನ್ನು 'ಅಶಬ್ದಸ್ಪರ್ಶಮರೂಪವ್ಯಯಮ್' ಎಂಬ ಶ್ರುತಿಯು ಪ್ರಾಕೃತರೂಪವಿಲ್ಲವೆಂದು ವ್ಯಾಖ್ಯಾನ ಮಾಡುವ ಮೂಲಕ, ಅಪ್ರಾಕೃತರೂಪವನ್ನಷ್ಟೇ ಅಂತಹ ಶ್ರುತಿಗಳು ಹೇಳುತ್ತಿವೆಯೆಂದು ಸ್ಪಷ್ಟಪಡಿಸುತ್ತದೆ. ಪರಮಾತ್ಮನಲ್ಲಿ ಪ್ರಾಕೃತರೂಪವಿಲ್ಲದ ಕಾರಣ, ರೂಪರಾಹಿತ್ಯವನ್ನು ಶ್ರುತಿಯು ಹೇಳುತ್ತಿದೆ. ಆದ್ದರಿಂದ ನಾಮರಾಹಿತ್ಯ-ರೂಪರಾಹಿತ್ಯಗಳೆರಡೂ ಪರಮಾತ್ಮನ ನಿರವಕಾಶಲಿಂಗಗಳಾಗಿವೆ. ಏಕೆಂದರೆ ಗಗನದಲ್ಲಿ ಶಬ್ದಗಳಿಂದ ಸಂಪೂರ್ಣವಾಗಿ

ತಿಳಿಯಲು ಸಾಧ್ಯವಿಲ್ಲವೆಂಬ ಅನಾಮತ್ವವನ್ನಾಗಲೀ, ರೂಪವೇ ಇಲ್ಲವೆಂಬ ಅರೂಪವತ್ವವನ್ನಾಗಲೀ, ಹೇಳಲು ಸಾಧ್ಯವಿಲ್ಲ. ಗಗನದಲ್ಲಿ ಶಬ್ದಪ್ರತಿಪಾದ್ಯತ್ವವೂ ಇರುತ್ತದೆ. ಮತ್ತು ನೈಲ್ಯಾದಿರೂಪಗಳೂ ಕೂಡ ಇರುತ್ತದೆ.

*ವಿಷ್ಣು ಆಕಾಶವೆನ್ನಲು ನಿಪಾತಗಳೇ ಆಧಾರ*

'ವಾಗಿವೆಯೆಂದು ಸಮರ್ಥಿಸಿದ್ದರು. ವಿಚಾರಮಾಡಿದರೆ, ಈ ಎರಡು ನಿಪಾತಗಳೇ ವಿಷ್ಣುಆಕಾಶಶಬ್ದವಾಚ್ಯವೆನ್ನಲು ಮುಖ್ಯವಾದ ಆಧಾರಗಳಾಗಿವೆ. ಏಕೆಂದರೆ -

ವೈದಿಕೇಷು ಪ್ರಯೋಗೇಷು ವೈದಿಕ್ಯೇವ ಪ್ರಸಿದ್ಧತಾ ।
ಗ್ರಾಹ್ಯಾಂತರಂಗಭೂತತ್ವಾತ್ತದಯೋಗೇ ತ್ವವೈದಿಕೀ ॥೧॥

ವೈದಿಕಪ್ರಯೋಗದಲ್ಲಿ ವೈದಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಏಕೆಂದರೆ ಅಂತರಂಗ ಬಹಿರಂಗಗಳಲ್ಲಿ ಅಂತರಂಗವನ್ನೇ ಸ್ವೀಕರಿಸುವುದು ಶ್ರೇಷ್ಠವಾದ್ದರಿಂದ, ವೈದಿಕಪ್ರಸಿದ್ಧಿಯೆಂಬ ಅಂತರಂಗವನ್ನು ಬಿಟ್ಟು, ಬಹಿರಂಗವೆನಿಸಿದ ಲೌಕಿಕಪ್ರಸಿದ್ಧಿಯನ್ನು ವಿವಕ್ಷಿಸಬಾರದು. ಆದ್ದರಿಂದ ಪರಮಾತ್ಮನು ವೇದಗಳಲ್ಲಿ ಸ್ವರೂಪತಃ ಪ್ರಸಿದ್ಧನಾಗಿದ್ದಷ್ಟೇ ಅಲ್ಲದೇ ಆಕಾಶಶಬ್ದದಿಂದಲೂ ಕೂಡ ಪ್ರಸಿದ್ಧನಾಗಿದ್ದಾನೆ.

ಮತ್ತು 'ವೈ ನಾಮ' ಎಂಬೆರಡು ನಿಪಾತಗಳು ವಿಧೇಯದಲ್ಲೇ ಅನ್ವಯವನ್ನು ಹೊಂದುತ್ತವೆ. ಏಕೆಂದರೆ ಶ್ರುತಿಗಳಲ್ಲಿ ಪರಮಾತ್ಮನು ನಾಮರೂಪ ಪ್ರಪಂಚಕ್ಕೆ ಆಧಾರನಾಗಿದ್ದಾನೆಂದು ಪ್ರಸಿದ್ಧವಾಗಿದೆ. 'ಏಕೋ ದಾಧಾರ ಭುವನಾನಿ ವಿಶ್ವಾ' ಎಂಬ ಶ್ರುತಿಯು ಸಮಸ್ತಪ್ರಪಂಚಕ್ಕೆ ಪರಮಾತ್ಮನೇ ಆಧಾರನೆಂದು ಹೇಳಿದರೆ 'ನಾಮರೂಪೇ ವ್ಯಾಕರೋತ್' ಎಂಬ ಶ್ರುತಿಯು ಸಮಸ್ತಜಗತ್ತಿಗೆ ಪರಮಾತ್ಮನೇ ಕಾರಣನಾಗಿದ್ದಾನೆಂದು ಹೇಳುತ್ತಿದೆ. ಹೀಗೆ ನಾಮಾತ್ಮಕವಾದ ಹಾಗೂ ರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯನಾದವನು ಪರಮಾತ್ಮನೇ ಆಗಿದ್ದಾನೆ. ಇದನ್ನೇ ಪ್ರಕೃತ ಆಕಾಶಶ್ರುತಿಯು ನಾಮರೂಪನಿರ್ವಹಿತೃತ್ವವನ್ನು ಪರಮಾತ್ಮನಲ್ಲಿ ಹೇಳುತ್ತಿದೆ. ಸ್ವತಂತ್ರವಾದ ನಾಮರೂಪಗಳಿಗೆ ಆಧಾರವಾಗಿರುವಿಕೆ ಪರಮಾತ್ಮನಲ್ಲಿ ಮಾತ್ರ ಇರುತ್ತದೆ ಹೊರತು, ಅವ್ಯಾಕೃತಾಕಾಶದಲ್ಲಿ ಇರುವುದಿಲ್ಲ. ಅವಕಾಶಾದಿಗಳನ್ನು ಅವ್ಯಾಕೃತಾಕಾಶವು ನೀಡಿದರೂ ಸಹ ಪರಮಾತ್ಮನ ಅಧೀನವಾಗಿ ಮಾತ್ರ ನೀಡಲು ಸಾಧ್ಯ. ಆದ್ದರಿಂದ ನಾಮರೂಪ- ನಿರ್ವಾಹಕತ್ವವು ಪರಮಾತ್ಮನಲ್ಲೇ ಬರುತ್ತದ

*ಸೂತ್ರವ್ಯಾಖ್ಯಾನ*

ಸೂತ್ರದಲ್ಲಿರುವ 'ಅರ್ಥಾಂತರತ್ವಾದಿವ್ಯಪದೇಶಾತ್' ಎಂಬ ಹೇತುವಿನ ಅಭಿಪ್ರಾಯವು ಹೀಗಿದೆ - ಅರ್ಥಾಂತರ ಶಬ್ದವು ವೈಲಕ್ಷಣ್ಯವನ್ನಷ್ಟೇ ಹೇಳಿದರೂ 'ತೇ ಯದಂತರಾ' ಎಂಬ ವಿಷಯವಾಕ್ಯದ ಸನ್ನಿಧಾನದಿಂದ ನಾಮರೂಪರಾಹಿತ್ಯವೆಂಬ ವೈಲಕ್ಷಣ್ಯವನ್ನು ತಿಳಿಸುತ್ತಿದೆ. ಜಗತ್ತಿನಲ್ಲಿರುವ ಯಾವುದೇ ಪದಾರ್ಥಗಳಾದರೂ ಶಬ್ದದಿಂದ ತಿಳಿಯಲು ಸಾಧ್ಯವಾಗುತ್ತವೆ. ಮತ್ತು ಪ್ರಾಕೃತರೂಪಗಳನ್ನು ಹೊಂದಿರುತ್ತವೆ. ಆದರೆ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಸುವ ಶಬ್ದಗಳು ಜಗತ್ತಿನಲ್ಲಿ ಇಲ್ಲವೇ ಇಲ್ಲ. ಈ ಕಾರಣದಿಂದ ನಾಮರಾಹಿತ್ಯವೆಂಬ ವೈಲಕ್ಷಣ್ಯವು ಅವನಲ್ಲಿದೆ. ಮತ್ತು ಪ್ರಾಕೃತರೂಪವಿಲ್ಲದ ಕಾರಣ ರೂಪರಾಹಿತ್ಯವೆಂಬ ವೈಲಕ್ಷಣ್ಯವೂ ಕೂಡ ಅವನಲ್ಲಿದೆ. ಅಷ್ಟೇ ಅಲ್ಲದೇ ಬ್ರಹ್ಮತ್ವ, ಅಮೃತತ್ವ ಮೊದಲಾದ ಬ್ರಹ್ಮನ ಅಸಾಧಾರಣ ಲಿಂಗಗಳನ್ನು ಶ್ರುತಿ ಹೇಳುತ್ತಿರುವುದರಿಂದಲೂ ಆಕಾಶಶಬ್ದದಿಂದ ಪ್ರತಿಪಾದ್ಯನಾದವನು ಪರಮಾತ್ಮನೇ ಆಗುತ್ತಾನೆಂದು ಶ್ರುತಿಯಲ್ಲಿರುವ ಲಿಂಗಗಳಿಂದಲೇ ಸ್ಪಷ್ಟವಾಗಿ ತಿಳಿಯುತ್ತದೆ. ಅಥವಾ ನಾಮರೂಪ- ರಾಹಿತ್ಯವೆಂಬುದನ್ನು ಒಟ್ಟಿಗೆ ವಿವಕ್ಷಿಸದೇ ಪ್ರತ್ಯೇಕವಾಗಿಯೇ ನಾಮರಾಹಿತ್ಯ ರೂಪರಾಹಿತ್ಯಗಳು ಬ್ರಹ್ಮತ್ವಕ್ಕೆ ಸಾಧಕವಾಗಿವೆ. ಅಂದರೆ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆನ್ನಲು ಕೇವಲ

ನಾಮರಾಹಿತ್ಯವೆಂಬ ವೈಲಕ್ಷಣ್ಯವನ್ನು ಹೇಳಿದರೆ ಸಾಕು. ಅಥವಾ ರೂಪರಾಹಿತ್ಯವೆಂಬ ವೈಲಕ್ಷಣ್ಯವನ್ನು ಹೇಳಿದರೆ ಸಾಕು. ಎರಡೂ ಹೇತುಗಳು ಯಾವುದೇ ದೋಷವನ್ನು ಹೊಂದದೇ ಬ್ರಹ್ಮತ್ವಕ್ಕೆ ಸಾಧಕವಾಗಿವೆ. ಆದ್ದರಿಂದ ಸೂತ್ರದಲ್ಲಿರುವ ಅರ್ಥಾಂತರ ಶಬ್ದವು ಕೇವಲ ರೂಪರಾಹಿತ್ಯವೆಂಬ ವೈಲಕ್ಷಣ್ಯವನ್ನು ಹೇಳುತ್ತಿದೆ. ನಾಮರಾಹಿತ್ಯವನ್ನು ಆದಿಪದವು ಹೇಳುತ್ತಿದೆಯೆಂದು ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ಆದಿಪದದಿಂದ ಬ್ರಹ್ಮತ್ವಾದಿಗಳನ್ನು ವಿವಕ್ಷಿಸಲಾಗಿತ್ತು. ಈ ಪಕ್ಷದಲ್ಲಿ ಆದಿಪದದಿಂದ ನಾಮರಾಹಿತ್ಯವನ್ನು ವಿವಕ್ಷಿಸಿ, ಬ್ರಹ್ಮತ್ವಾದಿಗಳನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬಹುದೆಂದು ತಿಳಿಯಬೇಕು. ಇಷ್ಟು ಸೂತ್ರಾರ್ಥ.

*ಅದ್ವೈತಿಗಳ ಅಧಿಕರಣವಿಮರ್ಶೆ*

ಶಾಂಕರಭಾಷ್ಯದಲ್ಲಿಯೂ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬ ಛಾಂದ್ಯೋಗ್ಯದ ವಾಕ್ಯವನ್ನೇ ವಿಷಯವೆಂದಿದ್ದಾರೆ. ಈ ಶ್ರುತಿವಾಕ್ಯದಲ್ಲಿ ಆಕಾಶಶಬ್ದವನ್ನು ಕೇಳಿದಾಗ ಭೂತಾಕಾಶವನ್ನು ಹೇಳುತ್ತಿದೆಯೋ, ಅಥವಾ ಪರಮಾತ್ಮನನ್ನೋ ಎಂಬ ಸಂದೇಹವು ಪ್ರಾಪ್ತವಾಗುತ್ತದೆ. ಭೂತಾಕಾಶದಲ್ಲೇ ಆಕಾಶಶಬ್ದವು ರೂಢವಾದ ಕಾರಣ ಭೂತಾಕಾಶವೇ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ. ನಾಮರೂಪನಿರ್ವಾಹಕತ್ವ ಮೊದಲಾದ ಬ್ರಹ್ಮನ ಲಿಂಗವಿರುವುದರಿಂದ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ ಮಾಡಿದ್ದಾರೆ. ಈ ಅಧಿಕರಣಕ್ಕೆ ಪ್ರಥಮಪಾದದ ಆಕಾಶಾಧಿಕರಣದಿಂದ ವೈಯರ್ಥ್ಯವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ಪ್ರಥಮಪಾದದ ಆಕಾಶಾಧಿಕರಣಕ್ಕೆ ಯಾವುದು ವಿಷಯವಾಗಿದೆಯೋ, ಅದರಲ್ಲಿ ಸರ್ವಭೂತಕಾರಣತ್ವವೆಂಬ ಬ್ರಹ್ಮನ ಲಿಂಗವು ಶ್ರುತವಾಗಿದೆ. ಪ್ರಕೃತ 'ಆಕಾಶೋ ವೈ ನಾಮ' ಎಂಬಲ್ಲಿ ಯಾವುದೇ ಬ್ರಹ್ಮಲಿಂಗಗಳಿರುವುದಿಲ್ಲ. ಹಾಗಾಗಿ ಇದಕ್ಕೆ ಆರಂಭಣೀಯತ್ವವು ಇರುತ್ತದೆನ್ನುತ್ತಾರೆ.

ಇದು ತಪ್ಪು. ಈ ಅಧಿಕರಣದ ಶ್ರುತಿಯಲ್ಲಿಯೂ ನಾಮರೂಪನಿರ್ವಾಹಕತ್ವವೆಂಬ ಸ್ಪಷ್ಟ- ಬ್ರಹ್ಮಲಿಂಗವಿರುವ ಕಾರಣ ಹಿಂದಿನ ಆಕಾಶಾಧಿಕರಣದಿಂದ ಗತಾರ್ಥತ್ವವು ಬಂದೇ ಬರುತ್ತದೆ. ಒಂದು ವೇಳೆ ಇಲ್ಲಿರುವ ನಾಮರೂಪ ನಿರ್ವಾಹಕತ್ವಾದಿಲಿಂಗಗಳನ್ನು ಆಕಾಶದಲ್ಲಿ ಕಷ್ಟದಿಂದ ಕೂಡಿಸುವುದಾದರೆ, ಪ್ರಥಮಪಾದದಲ್ಲಿಯೂ ಕೂಡ ಸರ್ವಭೂತಕಾರಣತ್ವವನ್ನು ಆಕಾಶದಲ್ಲಿ ಕೂಡಿಸಲು ಬರುತ್ತದೆ. ಹೀಗೆ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಚಿಂತನೆ ಮಾಡಲು ಹೋಗಿ, ಪ್ರಥಮಪಾದದ ಆಕಾಶಾಧಿಕರಣಕ್ಕೆ ವೈಯರ್ಥ್ಯವನ್ನು ಒಪ್ಪಿಕೊಂಡಂತಾಗುತ್ತದೆ. ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಹುರುಳಿಲ್ಲದ್ದು.

*ರಾಮಾನುಜ ಭಾಷ್ಯದ ಅಧಿಕರಣ ವಿಮರ್ಶೆ*

ರಾಮಾನುಜರೂ ಕೂಡ ಛಾಂದೋಗ್ಯದ ಈ ವಾಕ್ಯವನ್ನೇ ವಿಷಯವೆನ್ನುತ್ತಾರೆ. ಆದರೆ 'ಆಕಾಶೋ ವೈ ನಾಮ' ಎಂಬ ವಾಕ್ಯದಿಂದ ಮುಕ್ತಜೀವನು ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ ಮಾಡುತ್ತಾರೆ. ಇಲ್ಲಿರುವ ನಾಮರೂಪನಿರ್ವಾಹಕಶಬ್ದಕ್ಕೆ ನಾಮ ಹಾಗೂ ರೂಪಗಳನ್ನು ಧರಿಸಿರುತ್ತಾನೆಂದು ಅರ್ಥ. ಸಂಸಾರಾವಸ್ಥೆಯಲ್ಲಿ ಜೀವನು ನಾಮ ಹಾಗೂ ರೂಪಗಳನ್ನು ಧರಿಸಿರುತ್ತಾನೆ. ಆದ್ದರಿಂದ ಮುಕ್ತಜೀವನೇ ಆಕಾಶಪದವಾಚ್ಯನಾಗುತ್ತಾನೆಂದು ಪೂರ್ವಪಕ್ಷ. ಬ್ರಹ್ಮನೇ ಆಕಾಶನು. ಏಕೆಂದರೆ ನಾಮರೂಪನಿರ್ವಾಹಕತ್ವವೆಂದರೆ ನಾಮರೂಪಕರ್ತೃತ್ವವೆಂದರ್ಥ. ಜೀವನು ಸ್ವತಃ ನಾಮರೂಪವುಳ್ಳವನಾದ್ದರಿಂದ ಅವನು ಕರ್ತೃ ಆಗಲಾರ. ಹೊರತಾಗಿ ಸಕಲನಿರ್ಮಾಣ ಧುರಂಧರನಾದ ಈಶ್ವರನೇ ನಾಮರೂಪಗಳಿಗೆ ಕಾರಣನಾಗುತ್ತಾನೆ. ಆದ್ದರಿಂದ ಬ್ರಹ್ಮನೇ ಆಕಾಶನೆಂದು ಸಿದ್ಧಾಂತ ಮಾಡಿದ್ದಾರೆ.

ಇವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಈ ವಿಷಯವಾಕ್ಯದಲ್ಲಿ ಬ್ರಹ್ಮನ ಲಿಂಗಗಳು ಅಸ್ಪಷ್ಟವಾಗಿದ್ದಲ್ಲಿ, ಭೂತಾಕಾಶವನ್ನೇ ಆಕಾಶಶಬ್ದಪ್ರತಿಪಾದ್ಯವೆಂದು ಪೂರ್ವಪಕ್ಷ ಮಾಡಬಹುದು. ಸ್ಪಷ್ಟವಾಗಿದ್ದಲ್ಲಿ. ಸಂಸಾರಿ ಜೀವನೂ ಕೂಡ ಪೂರ್ವಪಕ್ಷಕ್ಕೆ ವಿಷಯನಾಗಲಾರ. ಮತ್ತು ಮುಕ್ತಜೀವ- ಪ್ರಾಪಕವಾದ ಯಾವುದೇ ಲಿಂಗಗಳು ಇಲ್ಲಿ ಶ್ರುತವಾಗಿಲ್ಲ. ಆಕಾಶಶಬ್ದವು ಮುಕ್ತಜೀವನಲ್ಲಿ ಪ್ರಸಿದ್ಧವೂ ಆಗಿಲ್ಲ. ಆದ್ದರಿಂದ 'ವೈ ನಾಮ' ಎಂಬ ನಿಪಾತಗಳಿಗೆ ಸಾರ್ಥಕ್ಯವೇ ಇಲ್ಲದಂತಾಗುತ್ತದೆ. 'ಜಗದ್ವ್ಯಾಪಾರವರ್ಜಮ್' ಎಂಬಲ್ಲಿ ಹೇಳುವಂತೆ ಮುಕ್ತನಿಗೆ ನಾಮರೂಪನಿರ್ವಾಹಕತ್ವವನ್ನೂ ಕೂಡ ಹೇಳಲು ಬರುವುದಿಲ್ಲ. ಹಿಂದಿನ ವಾಕ್ಯದಲ್ಲಿ 'ಬ್ರಹ್ಮಲೋಕಮಭಿಸಂಭವಾಮಿ' ಎಂದು ಮುಕ್ತಜೀವನು ಸನ್ನಿಹಿತವಾಗಿದ್ದರೂ ಸನ್ನಿಧಿರೂಪವಾದ ಸ್ಥಾನಪ್ರಮಾಣವು ಶ್ರುತಿಯನ್ನು ಬಾಧಿಸಲು ಸಾಧ್ಯವಿಲ್ಲ. ಏಕೆಂದರೆ ಸ್ಥಾನ ಪ್ರಮಾಣಕ್ಕಿಂತಲೂ ಶ್ರುತಿಪ್ರಮಾಣವೇ ಪ್ರಬಲವಾಗಿವೆ. ಅಷ್ಟೇ ಅಲ್ಲದೇ ಬ್ರಹ್ಮಲೋಕಶಬ್ದದಿಂದ ಬ್ರಹ್ಮನೇ ಹಿಂದೆ ಪ್ರಧಾನವಾಗಿ ಪ್ರಕೃತನಾಗಿದ್ದಾನೆ. ಈ ಎಲ್ಲ ಕಾರಣಗಳಿಂದ ರಾಮಾನುಜರ ಅಧಿಕರಣಶರೀರ ಅಸಾಧುವಾಗಿದೆ.

# ಸುಷುಪ್ತ್ಯಧಿಕರಣ

*ಸ್ವಪ್ನದ್ರಷ್ಟೃತ್ವಲಿಂಗಕ್ಕೆ ಸಮನ್ವಯದ ಸಂಗತಿ*

ಸುಷುಪ್ತ್ಯಧಿಕರಣದಲ್ಲಿ ಸ್ವಪ್ನದ್ರಷ್ಟೃತ್ವವೆಂಬ ಲಿಂಗವನ್ನು ಭಗವಂತನಲ್ಲಿ ಸಮನ್ವಯ ಮಾಡಲಾಗಿದೆ. ಲಿಂಗಪಾದದ ನ್ಯಾಯದಿಂದ ಈ ಲಿಂಗವು ಭಗವತ್ಪರವಾಗಿದೆಯೆಂದು ತಿಳಿಯುತ್ತದೆ. ಆದರೆ ಲೋಕದಲ್ಲಿ ಹೆಚ್ಚಾಗಿ ಜೀವನಲ್ಲೇ ಇದು ಪ್ರಸಿದ್ಧವಾದ ಕಾರಣ ಉಭಯತ್ರಪ್ರಸಿದ್ಧವಾಗಿದೆ.

ಹಿಂದಿನ ಆಕಾಶಾಧಿಕರಣದಲ್ಲಿ ಶ್ರುತಿಪ್ರಸಿದ್ಧವಾದ ಕಾರಣ, ಆಕಾಶಶಬ್ದವು ಬ್ರಹ್ಮನಲ್ಲಿ ಸಮನ್ವಯವಾಗುತ್ತದೆಂದು ಸಮರ್ಥಿಸಲಾಯಿತು. ಆದರೆ ಇಲ್ಲಿ ಸಮನ್ವಯ ಮಾಡುತ್ತಿರುವ ಸ್ವಪ್ನದ್ರಷ್ಟೃತ್ವಲಿಂಗವು ಶ್ರುತಿಪ್ರಸಿದ್ಧವೇ ಆಗಿಲ್ಲ. ಆದ್ದರಿಂದ ಇದನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಲು ಹೇಗೆ ಸಾಧ್ಯ ? ಅಥವಾ ಅವ್ಯಾಕೃತಾಕಾಶವು ಜಡವಾದ್ದರಿಂದ ಪರಮಾತ್ಮನಿಂದ ಅಭೇದವನ್ನು ಹೇಳಲು ಬರುವುದಿಲ್ಲ. ಆದರೆ ಜೀವನು ಪರಮಾತ್ಮನಿಗಿಂತ ಅಭಿನ್ನನಾದ ಕಾರಣ, ಪರಮಾತ್ಮನಲಿಂಗವನ್ನು ಜೀವನಲ್ಲಿ ಹೇಳಬಹುದೆಂದು ಪೂರ್ವವೈಷಮ್ಯದಿಂದ ಸಂಗತಿಯನ್ನು ತಿಳಿಯಬೇಕು. ಅಥವಾ ಅವ್ಯಾಕೃತಾಕಾಶವು ರೂಪರಹಿತವಾಗಿದ್ದರೂ ರೂಪರಹಿತನೆಂದು ಪ್ರಸಿದ್ಧನಾದ ಕಾರಣದಿಂದಲೇ ಬ್ರಹ್ಮನು ಆಕಾಶಶಬ್ದ ಪ್ರತಿಪಾದ್ಯನೆಂದು ಹೇಗೆ ಸಿದ್ಧಾಂತ ಮಾಡಿದಿರೋ, ಅದರಂತೆ ಇಲ್ಲಿ ಸ್ವಪ್ನದ್ರಷ್ಟೃತ್ವವು ಜೀವನಲ್ಲೇ ಪ್ರಸಿದ್ಧವಾದ ಕಾರಣ ಜೀವನನ್ನೇ ವಿವಕ್ಷಿಸಬೇಕೆಂದು ಪೂರ್ವಸಿದ್ಧಾಂತ ನ್ಯಾಯದಿಂದಲೇ ಸಂಗತಿಯನ್ನು ತೋರಿಸಬೇಕು. ಭಾಷ್ಯದಲ್ಲಿ ಅಕ್ಷರಾಧಿಕರಣದ ಜೊತೆ ಸಂಗತಿ ಹೇಳಿದ್ದಲ್ಲ, ಹೊರತಾಗಿ ಅಕ್ಷರಾಧಿಕರಣದಲ್ಲಿ ಹೇಳಲ್ಪಟ್ಟ ಅಸಂಗತ್ವವನ್ನು ಸ್ವಪ್ನದ್ರಷ್ಟೃವಾದ ಜೀವನಲ್ಲಿ ಶ್ರುತಿ ಹೇಳಿದ್ದರಿಂದ, ಅಕ್ಷರಾಧಿಕರಣದ ವಿಷಯವನ್ನು ಕೇವಲ ಆಕ್ಷೇಪ ಮಾಡಿದ್ದಾರೆಂದು ತಿಳಿಯಬೇಕು. ಆದ್ದರಿಂದ ಅದು ಕೇವಲ ಫಲಪರವಾಗಿದೆ.

*ಪರಿಪೂರ್ಣಚಂದ್ರಿಕಾ*

*ಸಂದೇಹ ಕೋಟಿಗಳು*

ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದ ಮೂರನೆಯ ಬ್ರಾಹ್ಮಣದಲ್ಲಿ 'ಸವಾ ಏಷ ಏತಸ್ಮಿನ್ ಸಂಪ್ರಸಾದೇ' ಇತ್ಯಾದಿ ವಾಕ್ಯವು ಶ್ರುತವಾಗಿದೆ. 'ಸ ಯತ್ತತ್ರ ಕಿಂಚಿತ್‌ಪಶ್ಯತ್ಯನನ್ವಾಗತಸ್ತೇನ ಭವತಿ' ಎಂಬುದೇ ಈ ಅಧಿಕರಣದ ವಿಷಯವಾಕ್ಯ. ಸ್ವಪ್ನಾವಸ್ಥೆಯಲ್ಲಿ ಯಾವ ಅನಿಷ್ಟವನ್ನು ನೋಡಿದರೂ ಅದರಿಂದ ದುಃಖದ ಸ್ಪರ್ಶವು ಅವನಿಗೆ ಉಂಟಾಗುವುದಿಲ್ಲ ಎಂದು ಶ್ರುತಿಯ ಅರ್ಥ. ಇಲ್ಲಿ ಹೇಳಿರುವ ಸ್ವಪ್ನದ್ರಷ್ಟೃವು ಜೀವನೇ ಆಗಿದ್ದಾನೆಂದು ಪೂರ್ವಪಕ್ಷ. 'ಅಸಂಗೋ ಹ್ಯಯಂ ಪುರುಷ' ಎಂಬ ಮುಂದಿನ ವಾಕ್ಯದಲ್ಲಿ ಸ್ವಪ್ನಾದಿದ್ರಷ್ಟೃವಿಗೆ ದುಃಖಸ್ಪರ್ಶವು ಆಗದಿರುವುದು ಬ್ರಹ್ಮನ ಅಸಾಧಾರಣಧರ್ಮವಾದ ಅಸಂಗತ್ವವನ್ನು ಕಾರಣವನ್ನಾಗಿ ಹೇಳಿರುವುದರಿಂದ ಸ್ವಪ್ನಾದಿದ್ರಷ್ಟೃವು ಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ.

ಪೂರ್ವಪಕ್ಷದ ಫಲ – ಒಂದು ವೇಳೆ ಜೀವಬ್ರಹ್ಮರಿಗಿರುವ ಭೇದವು ಮಿಥ್ಯಾಭೂತವಾದಲ್ಲಿ, ಬ್ರಹ್ಮನಲ್ಲಿರುವ ಅಸಂಗತ್ವವು ಜೀವನಲ್ಲೂ ಬರುತ್ತದೆ. ಜೀವನಲ್ಲಿ ಇರುವ ಸ್ವಪ್ನದ್ರಷ್ಟೃತ್ವದ ಪ್ರಸಿದ್ಧಿಗೆ ಬಾಧವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವಪ್ನದ್ರಷ್ಟೃತ್ವಾದಿಲಿಂಗಗಳು ಜೀವನದ್ದೇ ಆಗುತ್ತದೆ.

ಸಿದ್ಧಾಂತದ ಫಲ – ಒಂದುವೇಳೆ ಜೀವಬ್ರಹ್ಮರ ಭೇದವು ಸತ್ಯವಾದಲ್ಲಿ, ಅಸಂಗತ್ವವು ಬ್ರಹ್ಮನ ಧರ್ಮವೇ ಆಗುತ್ತದೆ. ಆವಾಗ ಲೋಕಪ್ರಸಿದ್ಧಿಯನ್ನು ಬಾಧಿಸಿ, ಬ್ರಹ್ಮನಲ್ಲೇ ಸ್ವಪ್ನದ್ರಷ್ಟೃತ್ವಲಿಂಗವು ಬರುತ್ತದೆ.

*ಸ್ವಪ್ನಾದಿದ್ರಷ್ಟಾ ಜೀವನೆಂದು ಪೂರ್ವಪಕ್ಷ*

'ದ್ರವತಿ ಸ್ವಪ್ನಾಯ್ಯೆವ ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋಹ್ಯಯಂ ಪುರುಷಃ' ಎಂಬ ಶ್ರುತಿಯು ಸ್ವಪ್ನಾವಸ್ಥೆಯಲ್ಲಿ ಯಾವಾತನು ಪದಾರ್ಥಗಳನ್ನೆಲ್ಲಾ ನೋಡುತ್ತಾನೋ, ಅವನು ಅಸಂಗನಾಗಿದ್ದಾನೆಂದು ಹೇಳುತ್ತಿದೆ. ಇಂತಹ ವ್ಯಕ್ತಿ ಜೀವನೇ ಹೊರತು, ಪರಮಾತ್ಮನಲ್ಲ. ಪ್ರತಿಯೊಬ್ಬರೂ ಕೂಡ ಲೋಕದಲ್ಲಿ ಜೀವನೇ 'ಸ್ವಪ್ನದ್ರಷ್ಟೃ' ಎಂದು ವ್ಯವಹರಿಸುತ್ತಾರೆ. ಮತ್ತು ವೇದದಲ್ಲಿ ಎಲ್ಲಿಯೂ ಕೂಡ ಪರಮಾತ್ಮನು 'ಸ್ವಪ್ನದ್ರಷ್ಟೃ' ಎಂಬ ಪ್ರಸಿದ್ಧಿಯಿಲ್ಲ. ಹೀಗೆ ಲೋಕದಲ್ಲಾಗಲೀ, ವೇದದಲ್ಲಾಗಲೀ, ಪರಮಾತ್ಮನಲ್ಲಿ ಸ್ವಪ್ನದ್ರಷ್ಟೃತ್ವವು ಪ್ರಸಿದ್ಧವೇ ಆಗಿರುವುದಿಲ್ಲ. ಆದ್ದರಿಂದ ಲೋಕಪ್ರಸಿದ್ಧಿಯಿರುವ ಜೀವನನ್ನೇ ಸ್ವಪ್ನದ್ರಷ್ಟೃ ಎನ್ನಬೇಕು. ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ ಆಕಾಶಶಬ್ದದಲ್ಲಾದರೆ ಪರಮಾತ್ಮನಲ್ಲಿ ವೇದಪ್ರಸಿದ್ಧಿಯಾದರೂ ಇತ್ತು. ಪ್ರಕೃತ ಹಾಗೇ ವೇದಪ್ರಸಿದ್ಧಿಯೂ ಕೂಡ ಇರುವುದಿಲ್ಲ.

ಇನ್ನು ವಜ್ರ, ಆಕಾಶ ಮೊದಲಾದ ಶಬ್ದಗಳಲ್ಲಿ ಯೌಗಿಕಾರ್ಥವನ್ನು ಸ್ವೀಕರಿಸಿ, ಪರಮಾತ್ಮನಲ್ಲಿ ಸಮನ್ವಯ ಮಾಡಿದಂತೆ ಇಲ್ಲಿಯೂ ಕೂಡ 'ಪಶ್ಯತಿ' ಮೊದಲಾದ ಪದಗಳನ್ನು ವಿಭಾಗ ಮಾಡಿ, ಯೋಗದಿಂದ ಬ್ರಹ್ಮಪರತ್ವವನ್ನು ಸಮರ್ಥನೆ ಮಾಡಬೇಕು. ಆದರೆ ಇದನ್ನು ಸಿದ್ಧಾಂತಿಗಳೇ ಒಪ್ಪುವುದಿಲ್ಲ. ನಾಲ್ಕನೆಯ ಪಾದದಲ್ಲಿ ಪ್ರತಿಯೊಂದು ಪದಗಳಿಗೂ ಯೌಗಾರ್ಥವನ್ನು ಹೇಳುವ ಮೂಲಕ ಸಮನ್ವಯ ಮಾಡಬೇಕೆಂಬುದೇ ಸಿದ್ಧಾಂತಿಗಳ ಅಭಿಪ್ರಾಯ. ಇಲ್ಲಿ ಅದರ ಸಮನ್ವಯವು ಅನುಪಯುಕ್ತ. ಮತ್ತು ಸರ್ವಜ್ಞನಾದ ಬ್ರಹ್ಮನು ಎಲ್ಲವನ್ನೂ ನೋಡುತ್ತಾನಾದ್ದರಿಂದ, ಸ್ವಾಪ್ನಪದಾಥಗಳನ್ನೂ ಕೂಡ ನೋಡುತ್ತಾನೆಂದು ಹೇಳಬಹುದು. ಆದರೆ ಹಿಂದಿನ ಅಧಿಕರಣದಲ್ಲಿ ಅವ್ಯಾಕೃತಾಕಾಶಕ್ಕೆ ರೂಪಸಾಮಾನ್ಯವಿಲ್ಲದಿದ್ದರೂ ಪ್ರಾಕೃತರೂಪವಿಲ್ಲದ ಕಾರಣ. ಬ್ರಹ್ಮನನ್ನೇ ರೂಪರಹಿತನೆಂದು ಹೇಗೆ ಸ್ವೀಕರಿಸಿದರೋ, ಅದರಂತೆ ಇಲ್ಲಿಯೂ ಕೂಡ ಸಕಲ ವಸ್ತುಗಳನ್ನು ಪರಮಾತ್ಮನು ನೋಡುವವನಾದರೂ, ಸ್ವಪ್ನಾದಿದ್ರಷ್ಟೃತ್ವೇನ ಪ್ರಸಿದ್ಧನಾದ ಜೀವನನ್ನೇ ವಿವಕ್ಷಿಸುವುದು ಸೂಕ್ತ.

'ಅಸಂಗೋಹ್ಯಯಂ ಪುರುಷಃ' ಎಂಬುದಾಗಿ ಶ್ರುತಿಯು ಅಸಂಗತ್ವಧರ್ಮವನ್ನು ಹೇಳುತ್ತಿದೆ. ಈ ಅಸಂಗತ್ವವು ಬ್ರಹ್ಮನ ಧರ್ಮವಾದ್ದರಿಂದ, ಸ್ವಪ್ನಾದಿದ್ರಷ್ಟೃತ್ವವನ್ನು ಅವನಲ್ಲಿ ನಿಜರ್ಥತ್ವವನ್ನು ಕಲ್ಪನೆ ಮಾಡುವ ಮೂಲಕ ಕೂಡಿಸಬೇಕು. ಅಂದರೆ ಜೀವರುಗಳಿಗೆ ಸ್ವಾಪ್ನಪದಾರ್ಥಗಳನ್ನು ತೋರಿಸುತ್ತಾನಾದ್ದರಿಂದ ಶ್ರುತಿಯು ಪರಮಾತ್ಮನನ್ನು ಸ್ವಪ್ನಾದಿದ್ರಷ್ಟೃವೆನ್ನುತ್ತಿದೆ ಎನ್ನಬೇಕು. ಆದರೆ ಇದೂ ಕೂಡ ಸರಿಯಲ್ಲ. ಅಸಂಗತ್ವವು ಪ್ರಾಪ್ತವಾದದ್ದೇ ಸ್ವಪ್ನಾದಿದ್ರಷ್ಟೃತ್ವದಿಂದ. ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆ ಎಂದು ಹೇಳಿದಾಗ, ಆಯಾ ಪದಾರ್ಥಗಳ ಸಂಪರ್ಕವನ್ನು ನೋಡುವ ವ್ಯಕ್ತಿಯಲ್ಲಿ ಹೇಳಿದಂತಾಗುತ್ತದೆ. ಆವಾಗ ಶ್ರುತಿಯು ಅಸಂಗತ್ವಧರ್ಮವನ್ನು ಹೇಳುವ ಮೂಲಕ ನೋಡುವ ವ್ಯಕ್ತಿಗೆ ಯಾವುದೇ ಸಂಗವಿರುವುದಿಲ್ಲವೆಂದು ನಿಷೇಧ ಮಾಡುತ್ತಿದೆ. ಹೀಗೆ ಅಸಂಗತ್ವಧರ್ಮಕ್ಕೆ ಸ್ವಪ್ನಾದಿದ್ರಷ್ಟೃತ್ವವೇ ಉಪಜೀವ್ಯವೆಂದಂತಾಯಿತು. ಉಪಜೀವ್ಯವಾದ ದ್ರಷ್ಟೃತ್ವವನ್ನು ಅದೇ ಅಸಂಗತ್ವಧರ್ಮವು ನಿಷೇಧಿಸಲು ಸಾಧ್ಯವಿಲ್ಲ. 'ಸನ್ನಿಪಾತಲಕ್ಷಣೋ ವಿಧಿಃ ಅನಿಮಿತ್ತಂ ತದ್ವಿಘಾತಸ್ಯ' ಎಂಬ ವ್ಯಾಕರಣ ನಿಯಮವು ಉಪಜೀವ್ಯಕ್ಕೆ ಉಪಜೀವಕವು ಮಾರಕವಾಗುವುದಿಲ್ಲ ಎಂದು ಸಿದ್ಧಾಂತ ಮಾಡಿದೆ. ಆದ್ದರಿಂದ ಉಪಜೀವಕವಾದ ಅಸಂಗತ್ವಧರ್ಮವು ತನಗೆ ಉಪಜೀವ್ಯವಾದ ಸ್ವಪ್ನಾದಿದ್ರಷ್ಟೃತ್ವವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಆದ್ದರಿಂದ ಜೀವನಿಗೆ ಬ್ರಹ್ಮನಿಂದ ಅಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿರುವ ಅಸಂಗತ್ವಧರ್ಮವನ್ನು ಜೀವನಲ್ಲಿ ಶ್ರುತಿಯು ಗೌಣವಾಗಿ ಹೇಳುತ್ತಿದೆಯೆಂದೇ ಅರ್ಥೈಸಬೇಕು. ಹಾಗಾಗಿ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲೇ ಬರುತ್ತದೆ.

ಪೂರ್ವಪಕ್ಷಿಯು ಅಭೇದವಾದಿಯಾಗಿರುವುದರಿಂದ, ಬ್ರಹ್ಮಾಭೇದಪ್ರಯುಕ್ತವಾಗಿ ಜೀವನಲ್ಲಿ ಬ್ರಹ್ಮನ ಧರ್ಮವನ್ನು ಕೂಡಿಸುತ್ತಾನೆ. ಆದರೆ ಸಿದ್ಧಾಂತಿಗಳು ಭೇದವಾದಿಗಳಾದ್ದರಿಂದ ಜೀವನ ಧರ್ಮವೆನಿಸಿದ ಸ್ವಪ್ನಾದಿದ್ರಷ್ಟೃತ್ವವನ್ನು ಜೀವಾಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿ ಕೂಡಿಸುತ್ತೇವೆಂದು ಹೇಳಲು ಸಾಧ್ಯವಿಲ್ಲ.

*ಪ್ರತಿಯೊಬ್ಬ ಜೀವಿಯ ಸ್ವಾಪ್ನಪದಾರ್ಥಗಳೆಲ್ಲವನ್ನೂ ಸಂಪೂರ್ಣವಾಗಿ ನೋಡುವವನು ಪರಮಾತ್ಮನು ಮಾತ್ರ*

ಸ್ವಪ್ನಕಾಲದಲ್ಲಿ ಸೃಷ್ಟಿಯಾದ ವಸ್ತುಗಳನ್ನು ಸಂಪೂರ್ಣವಾಗಿ ನೋಡಲು ನಮ್ಮಿಂದ ಸಾಧ್ಯವಿಲ್ಲ. ಆದರೆ ಪರಮಾತ್ಮನು ಎಲ್ಲವನ್ನೂ ಕೂಡ ಸಂಪೂರ್ಣವಾಗಿ ನೋಡುತ್ತಾನೆ. ಅಷ್ಟೇ ಅಲ್ಲದೇ, ಇನ್ನೊಬ್ಬರ ಸ್ವಾಪ್ನಪದಾರ್ಥವನ್ನು ನೋಡಲು ಸಾಧ್ಯವೇ ಇಲ್ಲ. ಆದರೆ ಪರಮಾತ್ಮನು ಸಕಲಜೀವರುಗಳ ಸ್ವಾಪ್ನಪದಾಥಗಳನ್ನು ಸಂಪೂರ್ಣವಾಗಿ ನೋಡುತ್ತಾನೆ. ಆದ್ದರಿಂದ ಸ್ವಪ್ನದ್ರಷ್ಟೃತ್ವವು ಪರಮಾತ್ಮನಲ್ಲೇ ಮುಖ್ಯವಾಗಿ ಬರುತ್ತದೆ.

ಈ ಅಧಿಕರಣದ ವಿಷಯವಾಕ್ಯವನ್ನು ನೋಡಿದಾಗಲೇ ಸ್ಪಷ್ಟವಾಗಿ ಪರಮಾತ್ಮನೇ ಸ್ವಪ್ನದ್ರಷ್ಟೃವೆಂದು ತಿಳಿಯುತ್ತದೆ. 'ಸವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ, ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾಯೈವ ಸ ಯತ್ ತತ್ರ ಕಿಂಚಿತ್ ಪಶ್ಯತಿ ಅನನ್ವಾಗತಃ ತೇನ ಭವತಿ ಅಸಂಗೋ ಹ್ಯಯಂ ಪುರುಷಃ' ಎಂಬ ಬೃಹದಾರಣ್ಯಕದ ಈ ವಾಕ್ಯದ ಅಭಿಪ್ರಾಯ ಹೀಗಿದೆ - ಪರಮಾತ್ಮನು ಜೀವಾತ್ಮನ ನಿದ್ರಾವಸ್ಥೆಯಲ್ಲಿ ರಮಿಸುತ್ತಾ ಸಂಚರಿಸುತ್ತಾನೆ. ಜೀವನಿಗೆ ಉಂಟಾಗುವ ಪುಣ್ಯಾಪಾಪಗಳನ್ನು ಕೇವಲ ನೋಡುತ್ತಾ ಪುನಃ ಜೀವರುಗಳ ಪುಣ್ಯಾಪಾಪಗಳಿಗೆ ಅನುಗುಣವಾಗಿ ಆಯಾಯ ನಾಡಿಗಳನ್ನು ಅನುಸರಿಸಿ, ಸ್ವಪ್ನ ಸ್ಥಾನಕ್ಕೆ ಜೀವನ ಜೊತೆಗೆ ಹೋಗುತ್ತಾನೆ. ಆವಾಗ ಪರಮಾತ್ಮನು ಸ್ವಪ್ನಾವಸ್ಥೆಯಲ್ಲಿ ಏನನ್ನು ನೋಡುತ್ತಾನೋ, ಆ ಜೀವನು ಸ್ವಾಪ್ನದರ್ಶನದಿಂದ ಪರಮಾತ್ಮನು ಯಾವುದೇ ದುಃಖಕ್ಕೆ ಒಳಗಾಗದೇ ಇರುತ್ತಾನೆ. ಏಕೆಂದರೆ ಪರಮಾತ್ಮನು ಪುಣ್ಯಾಪಾಪಗಳ ಸಂಪರ್ಕದಿಂದ ರಹಿತನಾಗಿದ್ದಾನೆ. ಹೀಗೆ ಪರಮಾತ್ಮನನ್ನು ಪ್ರತಿಪಾದನೆ ಮಾಡಲು ಹೊರಟಿರುವ ಈ

ವಾಕ್ಯವು ಜೀವನ ಸ್ವಪ್ನದ್ರಷ್ಟೃತ್ವವನ್ನು ಸರ್ವಥಾ ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ.

ಲೋಕದಲ್ಲಿ ಜೀವನೇ ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆಂದು ಪ್ರಸಿದ್ಧಿಯಿರಬಹುದು. ಆದರೆ ಬ್ರಹ್ಮನಲ್ಲಿ ಶ್ರುತಿಪ್ರಸಿದ್ಧಿಯಿದೆ. ಜೀವನಲ್ಲಿ ಲೋಕಪ್ರಸಿದ್ಧಿಯಿದ್ದರೂ ಕೂಡ ಸಂಪೂರ್ಣವಾದ ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆಂಬ ಪ್ರಸಿದ್ಧಿಯಿರುವುದಿಲ್ಲ. ಸಂಪೂರ್ಣವಾಗಿ ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆಂಬ ಲೋಕಪ್ರಸಿದ್ಧಿಯೂ ಕೂಡ ಪರಮಾತ್ಮನಲ್ಲೇ ಇರುತ್ತದೆ.

ಈ ಪ್ರಕರಣದಲ್ಲಿ ಜೀವೇಶ್ವರರಿಗೆ ಭೇದವನ್ನೇ ಹೇಳಲಾಗಿದೆ. ಸುಷುಪ್ತ್ಯವಸ್ಥೆಯಲ್ಲಿ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂದು ಪ್ರಾಜ್ಞನಾಮಕ ಪರಮಾತ್ಮನು ಜೀವನನ್ನು ಆಲಿಂಗನ ಮಾಡಿಕೊಳ್ಳುತ್ತಾನೆಂದು ಹೇಳಲಾಗಿದೆ. ಜೀವಾತ್ಮನು ದೇಹವನ್ನು ಬಿಟ್ಟು ಹೊರಡುವ ಪ್ರಸಂಗದಲ್ಲಿಯೂ 'ಪ್ರಾಜ್ಞೇನಾತ್ಮನಾ ಅನ್ವಾರೂಢಃ' ಎಂದು ಪ್ರಾಜ್ಞನಾಮಕ ಪರಮಾತ್ಮನು ಜೀವನನ್ನು ಹೊತ್ತು ಹೊರಡುತ್ತಾನೆಂದು ಆಧಾರಾಧೇಯ ಭಾವವನ್ನು ಹೇಳಲಾಗಿದೆ. ಆಲಿಂಗನ ಮಾಡಬೇಕೆಂದರೆ ಮತ್ತು ಆಧಾರಾಧೇಯ ಭಾವವನ್ನು ಕೂಡಿಸಬೇಕೆಂದರೆ ಜೀವೇಶ್ವರಿಬ್ಬರಿಗೆ ಭೇದವನ್ನೇ ಒಪ್ಪಬೇಕು. ಇಂತಹ ಪರಮಾತ್ಮನು ಅಸಂಗನಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಸ್ವಪ್ನದ್ರಷ್ಟೃಗಳು ಸ್ವಪ್ನವನ್ನು ಕಾಣುವಂತಹ ಪರಮಾತ್ಮನು ಅಸಂಗನಾಗಿದ್ದಾನೆ ಎಂದರೆ ಸರ್ವಜ್ಞನಾದ್ದರಿಂದ ನಿರ್ಲಿಪ್ತನಾಗಿ ಜೀವನ ಸ್ವಾಪ್ನವಸ್ತುಗಳನ್ನು ನೋಡುತ್ತಾನೆಂದರ್ಥ. ಹೀಗೆ ಶ್ರುತಿಯಲ್ಲಿ ಭೇದವ್ಯಪದೇಶವಿರುವುದರಿಂದ 'ಸ ಯತ್ತತ್ರ ಕಿಂಚಿತ್ಪಶ್ಯತಿ' ಎಂಬ ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟ ಸ್ವಪ್ನದರ್ಶಕನೂ ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಸುಷುಪ್ತ್ಯಧಿಕರಣದಲ್ಲಿ ಹಾಗೂ ಉತ್ಕ್ರಾಂತಿಪ್ರಕರಣದಲ್ಲಿ ಜೀವೇಶ್ವರರಿಗೆ ಭೇದವನ್ನೇ ಹೇಳಲಾಗಿದೆ ಎಂದು ಸಿದ್ಧಾಂತ.

# ಬ್ರಾಹ್ಮಣಾಧಿಕರಣ

### *ಪಾದಸಂಗತಿ-ಅಧಿಕರಣಸಂಗತಿ ಮತ್ತು ಪ್ರಯೋಜನ ವಿಚಾರ*

ಬ್ರಾಹ್ಮಣಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಬ್ರಾಹ್ಮಣ' ಎಂಬ ನಾಮಾತ್ಮಕಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ವಾಸ್ತವಿಕವಾಗಿ 'ಬ್ರಾಹ್ಮಣ' ಶಬ್ದವು ಬ್ರಾಹ್ಮಣ ವರ್ಗದಲ್ಲಿ ಎಲ್ಲರೂ ವ್ಯವಹರಿಸುತ್ತಾರೆ. ಆದ್ದರಿಂದ ಪ್ರಥಮಪಾದದಲ್ಲಿ ಇದರ ಸಮನ್ವಯವು ಪ್ರಸಕ್ತವಾಗುತ್ತದೆಂದೆನಿಸುತ್ತದೆ. ಆದರೆ ಶ್ರುತಿಯು ಅಜಶಬ್ದದ ಜೊತೆಗೆ ಬ್ರಾಹ್ಮಣಶಬ್ದವನ್ನು ಪ್ರಯೋಗಿಸಿದೆ. ಹಾಗಾಗಿ ಚತುರ್ಮುಖಬ್ರಹ್ಮದೇವನನ್ನು ಬ್ರಾಹ್ಮಣಶಬ್ದವು ಪ್ರತಿಪಾದನೆ ಮಾಡುತ್ತಿದೆಯೆಂದು ಇಲ್ಲಿ ವಿವಕ್ಷಿಸುತ್ತಿದ್ದಾರೆ. ಹಾಗಾದರೆ ಅದೇ ಶ್ರುತಿಯಲ್ಲೇ ನಿತ್ಯಮಹಿಮತ್ವವೆಂಬ ವಿಷ್ಣುವಿನ ಲಿಂಗವಿರುವುದರಿಂದ ಬ್ರಾಹ್ಮಣಶಬ್ದವು ವಿಷ್ಣುವನ್ನು ಪ್ರತಿಪಾದನೆ ಮಾಡಬಹುದಲ್ಲವೇ? ಎಂಬ ಗೊಂದಲವುಂಟಾಗುತ್ತದೆ. ಹೀಗೆ ಒಂದೇ ಬ್ರಾಹ್ಮಣಶಬ್ದವು ಚತುರ್ಮುಖ ಬ್ರಹ್ಮನಲ್ಲಿ ಮತ್ತು ವಿಷ್ಣುವಿನಲ್ಲಿ ಪ್ರಯೋಗಸಾಧಾರಣ್ಯವನ್ನು ಹೊಂದಿರುವ ಕಾರಣ ಉಭಯಪ್ರಸಿದ್ಧವೆನಿಸುತ್ತದೆಂದು ವಿವಕ್ಷಿಸಿ, ಮೂರನೆಯ ಈ ಪಾದದಲ್ಲಿ ಸಮನ್ವಯ ಮಾಡಲು ಹೊರಟಿದ್ದಾರೆ.

ಹಿಂದಿನ ಅಧಿಕರಣದಲ್ಲಿ ಬ್ರಹ್ಮನನ್ನು ಅಸಂಗನೆಂದು ಸಮರ್ಥಿಸಲಾಯಿತು. ಆದರೆ 'ಅಸಂಗೋ ನಹಿ ಸಜ್ಯತೇ' ಎಂಬಲ್ಲಿ ಮತ್ತೊಬ್ಬ ಪುರುಷನು ಅಸಂಗನೆಂದು ಹೇಳಿದಂತಿದೆ. ಇವನು ಬೇರೆಯವನಾದಲ್ಲಿ, 'ಅಸಂಗೋ

ಹ್ಯಯಂ ಪುರುಷಂ' ಎಂಬಲ್ಲಿ ಹೇಳಲ್ಪಟ್ಟ ಅಸಂಗನೂ ಕೂಡ ಬೇರೆಯವನೇ ಆಗುತ್ತಾನೆಂದು ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಮಾಡಿದ ಅನಂತರವೇ ಈ ಅಧಿಕರಣವು ಹೊರಟಿದೆ.

ಜಿಜ್ಞಾಸಾಧಿಕರಣದಿಂದ ಪ್ರಾರಂಭ ಮಾಡಿ, ಹಿಂದಿನ ಸುಷುಪ್ತ್ಯಧಿಕರಣದ ತನಕ, ಪ್ರತಿಯೊಂದು ಅಧಿಕರಣಗಳಲ್ಲಿಯೂ ಪರಮಾತ್ಮನ ಮಹಿಮೆಯು ನಿತ್ಯನೂತವಾಗಿದೆಯೆಂದು ಸಮರ್ಥಿಸಲಾಯಿತು. 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿ ಅಂತಹ ಪರಮಾತ್ಮನ ಮಹಿಮೆಯೇ ನಿತ್ಯವಾಗಿದೆಯೆಂದು ಹೇಳಲಾಗಿದೆ. ಒಂದು ವೇಳೆ 'ಏಷ ನಿತ್ಯೋ ಮಹಿಮಾ' ಎಂಬ ಶ್ರುತಿಯು ಬೇರೆಯವರ ಮಹಿಮೆಯನ್ನು ನಿತ್ಯವೆಂದು ಹೇಳಿದರೆ, ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಸಮರ್ಥಿಸಲ್ಪಟ್ಟ ವಿಷ್ಣುವಿನ ಮಹಿಮೆಗೆ ನಿತ್ಯತ್ವವು ಸಿದ್ಧವಾಗುವುದಿಲ್ಲ. ಅದಕ್ಕೋಸ್ಕರ ಈ ಅಧಿಕರಣವು 'ಏಷ ನಿತ್ಯೋ ಮಹಿಮಾ' ಎಂಬ ಶ್ರುತಿಯಿಂದಲೂ ಕೂಡ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲು ಹೊರಟಿದೆ.

*ಅಧಿಕರಣದ ಸಂಶಯಕೋಟಿಗಳು*

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯೇ ಈ ಅಧಿಕರಣದ ವಿಷಯವಾಕ್ಯ. ನಿತ್ಯಮಹಿಮೆಯುಳ್ಳವನೆಂದು ಬ್ರಾಹ್ಮಣನನ್ನು ಶ್ರುತಿಯಲ್ಲಿ ಪ್ರಸಿದ್ಧನಾಗಿದ್ದಾನೆ. 'ಸ ವಾ ಏಷ ಮಹಾನಜ ಆತ್ಮಾ' ಎಂಬ ಮುಂದಿನ ವಾಕ್ಯದಲ್ಲಿ ಚತುರ್ಮುಖನಲ್ಲಿ ಪ್ರಸಿದ್ಧವಾದ ಅಜಶಬ್ದವಿದೆ. ಇದರ ಬಲದಿಂದ ಚತುರ್ಮುಖನೇ ಬ್ರಾಹ್ಮಣನಾಗುತ್ತಾನೆಂದು ಪೂರ್ವಪಕ್ಷ.

ಬ್ರಹ್ಮನ ಅಸಾಧಾರಣಧರ್ಮಗಳೆನಿಸಿದ ಸರ್ವಾಧಿಪತ್ಯ ಮೊದಲಾದ ಧರ್ಮಗಳನ್ನು 'ಸರ್ವಸ್ಯಾಧಿಪತಿಃ ಸರ್ವಸ್ಯೇನಾಃ' ಇತ್ಯಾದಿ ಶ್ರುತಿಯು ಸಾರುತ್ತಿದೆ. ಈ ಲಿಂಗದ ಬಲದಿಂದ ಬ್ರಾಹ್ಮಣಶಬ್ದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗುತ್ತಾನೆಂಬುದು ಸಿದ್ಧಾಂತ.

*ಚತುರ್ಮುಖಬ್ರಹ್ಮನು ಬ್ರಾಹ್ಮಣಶಬ್ದ ಪ್ರತಿಪಾದ್ಯನೆಂದು ಪೂರ್ವಪಕ್ಷ*

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ವಾಕ್ಯದಿಂದ ಪ್ರತಿಪಾದ್ಯನಾದವನು ವಿರಿಂಚನೇ ಆಗಿದ್ದಾನೆಂದು ಪೂರ್ವಪಕ್ಷ. ಚತುರ್ಮುಖಬ್ರಹ್ಮನಲ್ಲಿ ಪ್ರಸಿದ್ಧವಾದ ಅಜಶಬ್ದವನ್ನು ಶ್ರುತಿಯು ಹೇಳುತ್ತಿದೆ. ಅಜಶಬ್ದವು ಯೌಗಿಕವಾಗಿ ಮತ್ತು ರೂಢವಾಗಿ ಚತುರ್ಮುಖನಲ್ಲೇ ಪ್ರಸಿದ್ಧವಾಗಿದೆ. ಇಂತಹ ಅಜಶಬ್ದದ ಜೊತೆಗೆ ಪಠಿತವಾದ ಕಾರಣ. ಬ್ರಾಹ್ಮಣಶಬ್ದವೂ ಕೂಡ ಚತುರ್ಮುಖನನ್ನೇ ಪ್ರತಿಪಾದನೆ ಮಾಡುತ್ತದೆ. ಮತ್ತು ಶ್ರುತಿಯಲ್ಲಿ 'ಮಹಾನ್' ಎಂಬ ಪದವಿದೆ. 'ಆತ್ಮಾ' ಎಂಬ ಪದವಿದೆ. 'ಮಹಾನ್' ಎಂಬ ಪದವು ಅಭಿಮಾನ್ಯಧಿಕರಣದ ನ್ಯಾಯದಂತೆ ಮಹತ್ತತ್ವಾಭಿಮಾನಿಯಾದ ಚತುರ್ಮುಖನನ್ನೇ ಮುಖ್ಯವನ್ನಾಗಿ ಪ್ರತಿಪಾದನೆ ಮಾಡುತ್ತದೆ. ಆತ್ಮಶಬ್ದವೂ ಕೂಡ 'ಆತ್ಮಾವಿರಿಂಚ ಸುಮನಾಃ' ಇತ್ಯಾದಿ ಕಾಠಕದ ಮಾತಿನಂತೆ ವಿರಿಂಚನನ್ನೇ ಪ್ರತಿಪಾದನೆ ಮಾಡುತ್ತದೆ.

ಹಾಗಾದರೆ ಅದೇ ಶ್ರುತಿಯಲ್ಲಿ 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿ' ಇತ್ಯಾದಿಯಾಗಿ ಸರ್ವಾಧಿಪತಿತ್ವವೇ ಮೊದಲಾದ ವಿಷ್ಣುವಿನ ಲಿಂಗಗಳು ಕೇಳಿಸುತ್ತಿವೆಯಲ್ಲವೇ? ಎಂದು ಪ್ರಶ್ನಿಸಬಾರದು. ವಿರಿಂಚನಿಗೆ ವಿಷ್ಣುವಿನಿಂದ ಅಭೇದವನ್ನು ಒಪ್ಪಿ, ಈ ಎಲ್ಲಾ ಲಿಂಗಗಳನ್ನು ವಿರಿಂಚನಲ್ಲಿ ಸಾವಕಾಶ ಮಾಡಬೇಕು. ಇದರಿಂದ ಶ್ರುತಿಗೆ ಹಾಗೂ ಲಿಂಗಗಳಿಗೆ ನ್ಯಾಯವನ್ನು ಒದಗಿಸಿದಂತಾಗುತ್ತದೆ. ಎರಡರಲ್ಲಿ ಒಂದಕ್ಕೆ ಬಾಧವನ್ನು ಹೇಳುವ

ಪ್ರಸಂಗ ಬರುವುದಿಲ್ಲ. 'ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾ' ಇತ್ಯಾದಿ ಸ್ಮೃತಿಗಳು 'ವಿಷ್ಣೋರ್ಭಾವ ಸತ್ತಸ್ಯ ರಜಸೋ ಬ್ರಹ್ಮೋ ಈಶಾನಃ' ಇತ್ಯಾದಿ ಶ್ರುತಿಗಳು ವಿರಿಂಚ, ಪರಮಾತ್ಮ, ರುದ್ರ ಈ ಮೂವರು ಒಬ್ಬನೇ ವಿಷ್ಣುವಾಗಿದ್ದಾನೆಂದು ಅಭೇದವನ್ನು ಹೇಳುತ್ತಿವೆ. ಆದ್ದರಿಂದ ಶ್ರುತಿಲಿಂಗಗಳೆಲ್ಲವೂ ಚತುರ್ಮುಖನಲ್ಲೇ ಬರುತ್ತದೆಂದು ಬ್ರಾಹ್ಮಣಶಬ್ದಪ್ರತಿಪಾದ್ಯನು ವಿರಿಂಚನೇ ಆಗುತ್ತಾನೆ ಹೊರತು, ವಿಷ್ಣುವಲ್ಲವೆಂಬ ಪೂರ್ವಪಕ್ಷವು ಸ್ಥಾಪಿತವಾಯಿತು.

*ವಿಷ್ಣುವಿನ ಧರ್ಮ ವಿರಿಂಚನಲ್ಲಿ ಸರ್ವಥಾ ಬರುವುದಿಲ್ಲ*

ಚತುರ್ಮುಖನು ಬ್ರಾಹ್ಮಣಶಬ್ದವಾಚ್ಯನಾಗಲು ಸಾಧ್ಯವಿಲ್ಲ. ಹೊರತು, ಮಹಾವಿಷ್ಣುವೇ ಬ್ರಾಹ್ಮಣಶಬ್ದವಾಚ್ಯನಾಗುತ್ತಾನೆ. 'ಉತಾಮೃತತ್ವಸ್ಯೇಶಾನಃ' ಇತ್ಯಾದಿ ಶ್ರುತಿಗಳು ಸರ್ವಾಧಿಪತಿತ್ವ ಧರ್ಮವು ವಿಷ್ಣುವಿನಲ್ಲಿ ಮಾತ್ರವಿದೆಯೆಂದು ಘೋಷಣೆ ಮಾಡುತ್ತಿವೆ. ಅದೇ ಸರ್ವಾಧಿಪತಿತ್ವಧರ್ಮವನ್ನು ಬ್ರಾಹ್ಮಣನಲ್ಲಿ ಶ್ರುತಿಹೇಳಿದ್ದರಿಂದ, ಬ್ರಾಹ್ಮಣನೂ ಕೂಡ ಮಹಾವಿಷ್ಣುವೇ ಆಗುತ್ತಾನೆ. ಹಾಗಾದರೆ ಅಜಶ್ರುತಿಯಿಂದ ವಿರೋಧಪರಿಹರಿಸಲು ಮಹಾವಿಷ್ಣುವಿಗೂ ಚತುರ್ಮುಖನಿಗೂ ಅಭೇದವನ್ನು ಹೇಳಬಹುದಲ್ಲವೇ? ಎಂದು ಆಕ್ಷೇಪ ಮಾಡಬಾರದು. ಒಂದು ವೇಳೆ ಪರಸ್ಪರ ವಿರೋಧ ಬಂದಾಗ ಅದರ ಪರಿಹಾರಕ್ಕೆ ಅಭೇದವನ್ನು ಆಶ್ರಯಿಸುವುದಾದರೆ ವ್ರೀಹಿಯಿಂದ ಹೋಮಿಸಬೇಕೋ, ಯವದಿಂದ ಹೋಮಿಸಬೇಕೋ? ಎಂಬ ಗೊಂದಲವುಂಟಾದಾಗ ವಿರುದ್ಧಧರ್ಮಗಳಿಗೆ ಆಶ್ರಯವಾದ ವ್ರೀಹಿ ಹಾಗೂ ಯವಗಳಿಗೂ ಅಭೇದವನ್ನೇ ಒಪ್ಪಬೇಕಾಗುತ್ತದೆ. ಅದರಂತೆ ಸೋಮಕ್ರಯಣವನ್ನು ಧೇನುವನ್ನು ಕೊಟ್ಟು ಮಾಡಬೇಕೋ, ಅಥವಾ ಬಟ್ಟೆಯನ್ನು ಕೊಟ್ಟು ಮಾಡಬೇಕೋ? ಎಂಬ ಸಂಶಯವು ಉಂಟಾದಾಗ. ಧೇನು ಹಾಗೂ ಬಟ್ಟೆ ಎರಡಕ್ಕೂ ಅಭೇದವನ್ನು ಒಪ್ಪಬೇಕಾಗುತ್ತದೆ. ಹೀಗೆ ಒಪ್ಪುತ್ತಾ ಹೋದರೆ, ಲೋಕದಲ್ಲಿ ಹಾಗೂ ವೇದದಲ್ಲಿ ವಿಕಲ್ಪ ಎಂಬ ವಾರ್ತೆಯೇ ಸುಳ್ಳಾಗುತ್ತದೆ. ಆದ್ದರಿಂದ ಯಾವ ಎರಡು ಪದಾರ್ಥಗಳು ವಿರುದ್ಧಧರ್ಮಗಳಿಗೆ ಆಶ್ರಯವಾಗಿದೆಯೋ, ಅವುಗಳಿಗೆ ಅಭೇದವನ್ನು ಸರ್ವಥಾ ಒಪ್ಪಬಾರದು.

ಮತ್ತು ಸ್ಪಷ್ಟವಾಗಿ ಯಾವ ಶ್ರುತಿಯಿಂದ ಚತುರ್ಮುಖನು ಸಿದ್ಧನಾಗಿದ್ದಾನೋ, ಅಂತಹ 'ತತ ಏತೇ ವ್ಯಜಾಯಂತ ವಿಶ್ವೋ ಹಿರಣಗರ್ಭ' ಎಂಬ ಶ್ರುತಿಯೇ ವಿಷ್ಣುವಿನಿಂದ ಚತುರ್ಮುಖನಿಗೆ ಭೇದವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಕೆಲವೊಮ್ಮೆ ವೇದದಲ್ಲಿ ಬ್ರಹ್ಮ, ರುದ್ರ ಇವರನ್ನು ವಿಷ್ಣುವೆಂಬ ವ್ಯವಹಾರ ಕಂಡರೆ, ಅಂತರ್ಯಾಮಿ ರೂಪದಿಂದ ಅವುಗಳನ್ನು ಕೂಡಿಸಬೇಕು. ಏಕೆಂದರೆ ಚತುರ್ಮುಖಬ್ರಹ್ಮದೇವರೇ ಸ್ಪಷ್ಟವಾಗಿ ರುದ್ರದೇವರ ಬಳಿ 'ಯೋಽಸ್ಮಿಯೇ ಸ್ಥ ಯಃಸ' ಎಂದು ತಮಗೂ, ಪರಮಾತ್ಮನಿಗೂ ಭೇದವಿದೆಯೆಂದು ಹೇಳಿಕೊಂಡಿದ್ದಾರೆ. ತಮಗಿಂತಲೂ ಪರಮಾತ್ಮನು ಅತ್ಯಂತ ಉತ್ಕೃಷ್ಟನಾಗಿದ್ದಾನೆಂದು ಸಾರಿದ್ದಾರೆ. ಹೀಗಿರುವಾಗ ಅಭೇದವನ್ನು ಒಪ್ಪಿ, ಸರ್ವಾಧಿಪತಿತ್ವ ಮೊದಲಾದ ವಿಷ್ಣುವಿನ ಲಿಂಗಗಳನ್ನು ಚತುರ್ಮುಖಬ್ರಹ್ಮದೇವರಲ್ಲಿ ಕೂಡಿಸಲು ಸಾಧ್ಯವಿಲ್ಲ. ವಿಷ್ಣುವಿನಲ್ಲಿರುವ ಸರ್ವಾಧಿಪತಿತ್ವ ಮೊದಲಾದ ಧರ್ಮಗಳು ಬೇರೆ ಎಲ್ಲಿಯೂ ಕೂಡ ಬರುವುದಿಲ್ಲವಾದ್ದರಿಂದ ನಿರವಕಾಶವಾಗಿವೆ. ಇಂತಹ ನಿರವಕಾಶಲಿಂಗಗಳಿಂದ ಮಹಾವಿಷ್ಣುವೇ ಬ್ರಾಹ್ಮಣಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

*ಭೇದಪ್ರತಿಪಾದಕವಾದ ಅನೇಕ ಸೂತ್ರಗಳಲ್ಲಿ ಪುನರುಕ್ತಿದೋಷವಿಲ್ಲ*

ಹಿಂದಿನ ಅಧಿಕರಣದಲ್ಲಿಯೂ ಜೀವಬ್ರಹ್ಮರಿಗೆ ಅಭೇದವನ್ನು ನಿರಾಕರಣೆ ಮಾಡಿ, ಭೇದವನ್ನು ಸಮರ್ಥಿಸಿದ್ದಾಗಿದೆ. ಪುನಃ ಈ ಅಧಿಕರಣದಲ್ಲಿಯೂ ವಿರಿಂಚನು ಬ್ರಹ್ಮನಿಂದ ಭಿನ್ನನಾಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ. ಹಾಗಾಗಿ ಹೇಳಿದ ಭೇದವನ್ನೇ ಪುನಃ ಪುನಃ ಸಮರ್ಥನೆ ಮಾಡಿದರೆ, ಪುನರುಕ್ತಿ ದೋಷ ಬರುತ್ತದಲ್ಲವೇ? ಎಂಬ ಆಶಂಕೆಗೆ ಗ್ರಂಥಕಾರರು ಕೂಲಂಕಷವಾಗಿ ವಿಮರ್ಶೆ ಮಾಡಿದ್ದಾರೆ.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಭೇದಪ್ರತಿಪಾದಕವಾದ ಸೂತ್ರಗಳು ಅನೇಕ ಬಾರಿ ಕೇಳಿಸುತ್ತಿವೆ. ಆದರೆ ಒಂದೇ ವಿಷಯದ ಭೇದವನ್ನು ಎಲ್ಲಾ ಅಧಿಕರಣಗಳಲ್ಲಿ ಸಮರ್ಥನೆ ಮಾಡುತ್ತಿಲ್ಲ. ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಭೇದವನ್ನು ಭೇದಪ್ರತಿಪಾದಕ ಸೂತ್ರಗಳು ನಿರಾಕರಣೆ ಮಾಡುತ್ತಿವೆ. ಉದಾ - ಆನಂದಮಯಾಧಿಕರಣದಲ್ಲಿ 'ಭೇದವ್ಯಪದೇಶಾಚ್ಚ' ಎಂಬ ಸೂತ್ರವು ಜೀವಬ್ರಹ್ಮರ ಭೇದವನ್ನು ಸಮರ್ಥನೆ ಮಾಡುತ್ತಿದೆಯೆಂದು ಮೇಲ್ನೋಟಕ್ಕೆ ಕಾಣಿಸುತ್ತದೆ. ಆದರೆ ವಿಚಾರ ಮಾಡಿದಾಗ, ಜೀವನಿಗೂ ವಿಷ್ಣುವಿಗೂ ಭೇದವನ್ನು ಒಪ್ಪಿ, ಆನಂದಮಯನ ಜೊತೆ ಅಭೇದವನ್ನು ಮಾತ್ರ ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದಾನೆ. ಅದನ್ನು ಸೂತ್ರವು ನಿರಾಕರಣೆ ಮಾಡಿದೆ. ಅದರಂತೆ 'ಶಾರೀರಾಶ್ಚೋಭಯೇಽಪಿಹಿಭೇದೇನೈನಮಧೀಯತೇ' ಎಂಬ ಅಂತರ್ಯಾಮಿಗುಣಸೂತ್ರದಲ್ಲಿ, ಅಂತರ್ಯಾಮಿಗೂ ಜೀವನಿಗೂ ಅಭೇದವನ್ನು ಆಕ್ಷೇಪಿಸಿ, ಭೇದವನ್ನು ಸ್ಥಾಪನೆ ಮಾಡಲಾಗಿದೆ ಹೊರತು, ಸಾಮಾನ್ಯವಾಗಿ ಜೀವಬ್ರಹ್ಮರ ಭೇದವನ್ನು ಸಮರ್ಥನೆ ಮಾಡಿಯೇ ಇಲ್ಲ.

ಮತ್ತು ದ್ಯುಭ್ವಾದ್ಯಧಿಕರಣದ 'ಭೇದವ್ಯಪದೇಶಾಚ್ಚನ್ಯಃ' ಎಂಬ ಸೂತ್ರದಲ್ಲಿ ಆ ಪ್ರಕರಣದಲ್ಲಿ ಮಾತ್ರ ಜೀವಬ್ರಹ್ಮರ ಅಭೇದವು ಪ್ರಸಕ್ತವಾಗಿದೆ. ಅದೇ ಪ್ರಕರಣದಲ್ಲಿರುವ ಭೇದಸಾಧಕಲಿಂಗಗಳಿಂದ ಅಭೇದವನ್ನು ನಿರಾಕರಣೆ ಮಾಡಿ, ಭೇದವನ್ನು ಸ್ಥಾಪನೆ ಮಾಡಿದ್ದಾರೆ ಹೊರತು, ಶ್ರುತಿಯಲ್ಲಿ ಎಲ್ಲಾ ವಾಕ್ಯಗಳಲ್ಲಿರುವ ಅಭೇದದ ನಿರಾಕರಣೆಯನ್ನಾಗಲೀ, ಭೇದದ ಸ್ಥಾಪನೆಯನ್ನಾಗಲೀ ಮಾಡಿರುವುದಿಲ್ಲ. ಹಿಂದಿನ ಅಧಿಕರಣದಲ್ಲಿ ಜೀವನಿಗೆ ಈಶನಿಂದ ಅಭೇದವನ್ನು ಸ್ವೀಕರಿಸಿ, ಭೇದವನ್ನು ಸ್ಥಾಪನೆ ಮಾಡಿದ್ದು, ಕೇವಲ ಆ ವಿಷಯವಾಕ್ಯಕ್ಕೆ ಸಂಬಂಧಪಟ್ಟಂತೆ ಮಾತ್ರ. ಈ ಅಧಿಕರಣದಲ್ಲಿ ವಿರಿಂಚನಿಗೆ ಬ್ರಹ್ಮನಿಂದ ಭೇದವನ್ನು ಸ್ಥಾಪನೆ ಮಾಡುತ್ತಿರುವುದೂ ಕೂಡ ವಾಕ್ಯವಿಶೇಷಕ್ಕೆ ಸಂಬಂಧಪಟ್ಟಂತೆ ಮಾತ್ರ. ಆದ್ದರಿಂದ ಭೇದಪ್ರತಿಪಾದಕವಾದ ಯಾವುದೇ ಸೂತ್ರಗಳನ್ನು ತೆಗೆದುಕೊಂಡರೂ ವಾಕ್ಯವಿಶೇಷದಲ್ಲಿ ಮಾತ್ರ ಭೇದಸ್ಥಾಪನೆಯನ್ನು ಮಾಡಿರುತ್ತಾರೆ ಹೊರತು ಎಲ್ಲಾ ಶ್ರುತಿವಾಕ್ಯಗಳಲ್ಲಿ ಭೇದವನ್ನು ಸ್ಥಾಪನೆ ಮಾಡಿರುವುದಿಲ್ಲ. 'ಪೃಥಗುಪದೇಶಾತ್' ಎಂಬ ಅಧಿಕರಣದಲ್ಲಿ ಮಾತ್ರ ಸಕಲ ಶ್ರುತಿವಾಕ್ಯಗಳಲ್ಲಿರುವ ಅಭೇದಪರವಾದ ವಾಕ್ಯಗಳನ್ನು ವಿಮರ್ಶೆ ಮಾಡಿ, ಭೇದವನ್ನು ಸ್ಥಾಪನೆ ಮಾಡಿದ್ದಾರೆ. ಆದ್ದರಿಂದ ವಾಕ್ಯವಿಶೇಷವನ್ನು ತೆಗೆದುಕೊಳ್ಳದೇ ಸಾಮಾನ್ಯವಾಗಿ ಜೀವಬ್ರಹ್ಮರ ಅಭೇದವನ್ನು ಆಕ್ಷೇಪಿಸಿ ಭೇದವನ್ನು ಸ್ಥಾಪನೆಮಾಡಿದ್ದು ಪೃಥಗುಪದೇಶಾಧಿಕರಣದಲ್ಲಿ ಮಾತ್ರ. ಭೇದಸ್ಥಾಪನೆಯ ಪೂರ್ಣತೆಯು ಪೃಥಗುಪದೇಶಾಧಿಕರಣದಲ್ಲಿ ಪರ್ಯವಸಾನವಾಗುತ್ತದೆ. ಆದ್ದರಿಂದ ಭೇದಸಾಧಕವಾದ ಸೂತ್ರಗಳಿಗೆ ಪುನರುಕ್ತಿ ದೋಷವನ್ನು ಹೇಳಲು ಸಾಧ್ಯವಿಲ್ಲ.

*ಸೂತ್ರದಲ್ಲಿರುವ ಪದಗಳ ಸ್ವಾರಸ್ಯ*

ಸೂತ್ರದಲ್ಲಿ 'ಅಧಿಪತಿತ್ವ' ಎಂಬ ವಿಷ್ಣುವಿನ ನಿರವಕಾಶಲಿಂಗವನ್ನು ಹೇಳಿದ್ದರಿಂದ ವಿರಿಂಚನನ್ನು ವಿಷ್ಣುವೆಂದು ಹೇಳಲು ಸಾಧ್ಯವಿಲ್ಲ. ಇಬ್ಬರಿಗೂ ಅಭೇದವನ್ನು ಒಪ್ಪಿ, ಹೊರಟ ಪೂರ್ವಪಕ್ಷವು ನಿರಾಕೃತವಾಗುತ್ತದೆ. 'ಸರ್ವಾಧಿಪತಿತ್ವ' ಎಂಬ ವಿಷ್ಣುವಿನ ಧರ್ಮವನ್ನು ವಿರಿಂಚನಲ್ಲಿ ಅಭೇದವನ್ನು ಹೇಳಿದಾಗ ಮಾತ್ರ ಕೂಡಿಸಬಹುದು. ಆದರೆ ವಿಷ್ಣುವಿನಿಂದ ವಿರಿಂಚನಿಗೆ ಅಭೇದ ಹೇಳಬೇಕೆಂದರೆ 'ಸರ್ವಾಧಿಪತಿತ್ವ' ಎಂಬುದು ಇಬ್ಬರಿಗೂ ಭೇದವನ್ನು ತಂದುಕೊಡುವುದಿಲ್ಲವೆಂಬುದು ಮೊದಲು ಸಿದ್ಧವಾಗಬೇಕು. ಹಾಗಾಗಿ ಅಭೇದ ಸಿದ್ಧವಾದರೆ ಮಾತ್ರ ಸರ್ವಾಧಿ-ಪತಿತ್ವಾದಿಗಳಿಗೆ ಅಭೇದ ತಂದುಕೊಡುವಿಕೆಯು ಸಿದ್ಧವಾಗುವುದಿಲ್ಲ. ಅಭೇದಕ ತಂದುಕೊಡುವಿಕೆಯು ಸಿದ್ಧವಾಗದಿದ್ದಾಗ ಮಾತ್ರ ಪರಸ್ಪರ ವಿರಿಂಚನಿಗೆ ಬ್ರಹ್ಮನಿಂದ ಅಭೇದವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ

ಬರುವ ಕಾರಣ, ಅನಿವಾರ್ಯವಾಗಿ ಸರ್ವಾಧಿಪತಿತ್ವವನ್ನು ವಿಷ್ಣುವಿನಲ್ಲಿ ಮಾತ್ರ ಹೇಳಬೇಕು. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ಇತ್ಯಾದಿ ಶ್ರುತಿಗಳಂತೂ ಸ್ಪಷ್ಟವಾಗಿ ವಿರಿಂಚಾದಿಗಳಿಗೆ ಸರ್ವಾಧಿಪತಿತ್ವವಿಲ್ಲವೆಂದು ನಿಷೇಧ ಮಾಡುತ್ತಿವೆ.

ಸೂತ್ರದಲ್ಲಿ 'ಸರ್ವಸ್ಯ ವಶೀ' ಎಂಬ ಶ್ರುತಿಗೆ ಅನುಗುಣವಾಗಿ 'ವಶ್ಯಾದಿಶಬ್ದೇಭ್ಯಃ' ಎಂದು ಹೇಳಬೇಕಿತ್ತು. ಆದರೆ ಭಾಷ್ಯದಲ್ಲಿ ಉದಾಹರಿಸಿದ 'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ' ಎಂಬ ವಾಕ್ಯದಲ್ಲಿ ಪತಿಶಬ್ದವಿರುವುದರಿಂದ, ಅದಕ್ಕನುಗುಣವಾಗಿ ಸೂತ್ರಕಾರರು 'ಪತ್ಯಾದಿಶಬ್ದೇಭ್ಯಃ' ಎಂಟೇ ಹೇಳಿದ್ದಾರೆ. 'ಅಧಿಪತ್ಯಾದಿಶಬ್ದೇಭ್ಯಃ' ಎಂದೂ ಕೂಡ ಹೇಳಬಹುದಿತ್ತು. ಆದರೆ ಉಪಸರ್ಗವು ಯಾವುದೇ ಅರ್ಥಗಳಿಗೆ ವಾಚಕವಲ್ಲ. ಕೇವಲ ದ್ಯೋತಕವಾಗಿರುವ ಕಾರಣ ಉಪಸರ್ಗವನ್ನು ಬಿಟ್ಟು ಕೇವಲ ಪತಿಶಬ್ದವನ್ನಷ್ಟೇ ಸೂತ್ರಕಾರರು ಉಲ್ಲೇಖ ಮಾಡಿದ್ದಾರೆ.

*ಶಾಂಕರಭಾಷ್ಯದ ಅಧಿಕರಣವಿಮರ್ಶೆ*

ಶಾಂಕರಭಾಷ್ಯದಲ್ಲಿ ಹಿಂದಿನ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರದ ಜೊತೆಗೆ 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರವನ್ನೂ ಸಹ ಸೇರಿಸಿ ಒಂದೇ ಅಧಿಕರಣವೆಂದು ವಿಂಗಡಣೆ ಮಾಡಲಾಗಿದೆ. ಈ ಅಧಿಕರಣಕ್ಕೆ ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿರುವ 'ಕತಮ ಆತ್ಮ ಇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಆರಂಭವಾಗಿ 'ಸ ವಾ ಏಷ ಮಹಾನಜಃ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು' ಎಂಬಲ್ಲಿ ಉಪಸಂಹಾರವಾಗುವ ಪ್ರಕರಣವು ವಿಷಯವಾಗಿದೆ. ಪ್ರಾರಂಭದಲ್ಲಿ 'ವಿಜ್ಞಾನಮಯಃ ಹೃದ್ಯಂತಃ' ಇತ್ಯಾದಿ ಶಬ್ದಗಳೆಲ್ಲಾ ಕೇಳಿಸುತ್ತಿರುವುದರಿಂದ, ಜೀವನನ್ನೇ ಇದು ಪ್ರತಿಪಾದನೆ ಮಾಡುತ್ತದೆಂದು ಸ್ಪಷ್ಟವಾಗುತ್ತದೆ. ಉಪಸಂಹಾರದಲ್ಲಿಯೂ ಕೂಡ ವಿಜ್ಞಾನಮಯಶಬ್ದವೂ ಇರುವುದರಿಂದ ಉಪಸಂಹಾರವಾಕ್ಯವೂ ಕೂಡ ಜೀವಪ್ರತಿಪಾದಕವೇ ಆಗುತ್ತದೆ. ಮಧ್ಯದಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿಗಳ ಉಲ್ಲೇಖವಿರುವುದರಿಂದ, ಇವೆಲ್ಲವೂ ಜೀವಾತ್ಮನ ಲಿಂಗಗಳೇ ಆಗುವುದರಿಂದ, ಜೀವನೇ ಈ ಪ್ರಕರಣದಿಂದ ಪ್ರತಿಪಾದ್ಯನಾಗುತ್ತಾನೆಂದು ಪೂರ್ವಪಕ್ಷ. ಸುಷುಪ್ತಿಕಾಲದಲ್ಲಿ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ' ಎಂಬುದಾಗಿ ಜೀವನಿಗೆ ಬಾಹ್ಯಪದಾರ್ಥಗಳ ಜ್ಞಾನವನ್ನು 'ಪ್ರಾಜ್ಞೇನಾ' ಎಂದು ಬ್ರಹ್ಮನಿಗೆ ಸರ್ವಜ್ಞತ್ವವನ್ನು ಹೇಳಿ, ಜೀವ ಹಾಗೂ ಬ್ರಹ್ಮರಿಗೆ ಭೇದವನ್ನು ತಿಳಿಸಲಾಗಿದೆ. ಉತ್ಕ್ರಾಂತಿಪ್ರಕರಣದಲ್ಲಿಯೂ ಕೂಡ 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಎಂಬುದಾಗಿ ಭೇದವನ್ನೇ ಹೇಳಲಾಗಿದೆ. ಇದರಿಂದ ಜೀವನಿಗಿಂತಲೂ ಬ್ರಹ್ಮನು ಭಿನ್ನನಾಗಿದ್ದಾನೆಂದು ಪ್ರಕರಣದ ಅಭಿಪ್ರಾಯವೆಂದು ಸ್ಪಷ್ಟವಾಗುತ್ತದೆ. ಉಪಕ್ರಮದಲ್ಲಿ ಜೀವಸ್ವರೂಪವನ್ನು ಹೇಳಿದ್ದರೂ ಜೀವನಲ್ಲಿರುವ ಧರ್ಮಗಳು ಮಿಥ್ಯಾಭೂತವೆಂದು ತಿಳಿಸಿ, ಜೀವನಿಗೆ ಬ್ರಹ್ಮೈಕ್ಯವನ್ನು ಪ್ರತಿಪಾದನೆ ಮಾಡುವುದೇ ಪ್ರಕರಣದ ಉದ್ದೇಶ. ಉಪಸಂಹಾರವಾಕ್ಯದಲ್ಲಿಯೂ ಸ್ಪಷ್ಟವಾಗಿ ಅಭೇದವೇ ಹೇಳಲ್ಪಟ್ಟಿದೆ. ವಿಜ್ಞಾನಮಯನಾದ ಜೀವನೇ 'ಮಹಾನ್ ಅಜಃ' ಎನಿಸಿದ ಬ್ರಹ್ಮಸ್ವರೂಪನಾಗಿದ್ದಾನೆಂಬುದು ಉಪಸಂಹಾರ ವಾಕ್ಯದ ಅಭಿಪ್ರಾಯ. ಇದರಿಂದ ಜೀವಾಭೇದವು ಸಿದ್ಧವಾಯಿತೆಂದು ಸಿದ್ಧಾಂತ.

ಪ್ರಕರಣದಲ್ಲಿರುವ 'ಸರ್ವಸ್ಯ ವಶೀಸರ್ವಸ್ಯೇಶಾನಃ' ಇತ್ಯಾದಿ ಶಬ್ದಗಳು ಜೀವನಲ್ಲೇ ಅಸಂಭಾವಿತವಾದ್ದರಿಂದಲೂ, ಈ ಪ್ರಕರಣವು ಅಸಂಸಾರಿಯಾದ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ.

ಅದ್ವೈತಿಗಳ ಈ ಅಧಿಕರಣ ಶರೀರವಾಗಲೀ, ಸೂತ್ರಾರ್ಥಗಳಾಗಲೀ ಅಸಾಧುವಾಗಿವೆ. ಏಕೆಂದರೆ

'ಯತ್ತತ್ತ್ವಮೈಕ್ಯಂ ತನ್ನೈವ ಕೀರ್ತ್ಯತೇ ಶ್ರುತಿಸೂತ್ರಯೋಃ ।
ತತ್ರ ಯಃ ಕೀರ್ತ್ಯತೇ ಭೇದಃ ತಚ್ಚ ತತ್ತ್ವಂ ನ ತೇ ಮತೇ'

*ಪರಿಪೂರ್ಣಚಂದ್ರಿಕಾ*

ಯಾವ ಐಕ್ಯವು ಅದ್ವೈತ ಮತದ ತತ್ವವಾಗಿದೆಯೋ, ಅದನ್ನು ಶ್ರುತಿಯಾಗಲೀ, ಸೂತ್ರವಾಗಲೀ, ಪ್ರತಿಪಾದನೆ ಮಾಡುತ್ತಿಲ್ಲ. ಶ್ರುತಿ ಹಾಗೂ ಸೂತ್ರಗಳಲ್ಲಿ ಪ್ರತಿಪಾದನೆ ಮಾಡುತ್ತಿರುವ ಜೀವೇಶಭೇದವು ಅದ್ವೈತಮತದ ತತ್ವವಲ್ಲ.

ಹೀಗೆ ಶ್ರುತಿ ಹಾಗೂ ಸೂತ್ರಗಳಲ್ಲಿ ಸ್ಪಷ್ಟವಾಗಿ ಭೇದವೇ ಪ್ರತಿಪಾದಿತವಾಗಿರುವಾಗ ಅದಕ್ಕೆ ವಿರುದ್ಧವಾಗಿ ಐಕ್ಯವನ್ನು ಪ್ರತಿಪಾದನೆ ಮಾಡುವುದು ತಪ್ಪಾಗುತ್ತದೆ. ಮತ್ತು 'ಪತ್ಯಾದಿ' ಸೂತ್ರದಲ್ಲಿಯೂ ಕೂಡ ಜೀವಬ್ರಹ್ಮಭೇದಕದ ಧರ್ಮಗಳನ್ನೇ ಹೇಳಲಾಗಿದೆ. ಒಂದು ವೇಳೆ ಐಕ್ಯವನ್ನು ಪ್ರತಿಪಾದನೆ ಮಾಡುವುದಾದಲ್ಲಿ, ಶ್ರುತಿಸೂತ್ರಗಳ ವಿರೋಧ ಬರುತ್ತದೆ. ಮತ್ತು 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರವು ಹಿಂದಿನ ಸೂತ್ರಕ್ಕೆ ಶೇಷಭೂತವಾದಲ್ಲಿ, 'ಚ'ಶಬ್ದವನ್ನು ಸೂತ್ರದಲ್ಲಿ ಹೇಳಬೇಕಿತ್ತಲ್ಲವೇ? ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಅತ್ಯಂತ ಅಸಾಧುವಾಗಿದೆ.

*ರಾಮಾನುಜರ ಅಧಿಕರಣವಿಮರ್ಶೆ*

ರಾಮಾನುಜರು 'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' 'ಪತ್ಯಾದಿಶಬ್ದೇಭ್ಯಃ' ಎಂಬ ಮೂರು ಸೂತ್ರಗಳೂ ಸೇರಿ ಒಂದೇ ಅಧಿಕರಣವೆನ್ನುತ್ತಾರೆ. ಆಕಾಶಶಬ್ದದ ಸಮನ್ವಯವೇ ಮೂರೂ ಸೂತ್ರಗಳ ಉದ್ದೇಶ. ನಾವು ಯಾವ ಛಾಂದೋಗ್ಯದ ಮಂತ್ರವನ್ನು ವಿಷಯವಾಕ್ಯವೆನ್ನುತ್ತೇವೋ, ಅದನ್ನೇ ಅವರೂ ಕೂಡ ವಿಷಯವಾಕ್ಯವೆನ್ನುತ್ತಾರೆ. ಮುಕ್ತಜೀವನು ಪರಮಾತ್ಮನಿಗಿಂತ ಅಭಿನ್ನನಾದ್ದರಿಂದ ಆಕಾಶಶಬ್ದವಾಚ್ಯನೆಂದು ಪೂರ್ವಪಕ್ಷ. ನಾಮರೂಪವಿಲಕ್ಷಣವೆಂದು ಹೇಳಿರುವ ಕಾರಣ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆ ಹೊರತು, ಮುಕ್ತಜೀವನಲ್ಲವೆಂದು ಸಿದ್ಧಾಂತ. ಜೀವ ಹಾಗೂ ಬ್ರಹ್ಮರಿಗೆ ಭೇದವಿಲ್ಲದ ಕಾರಣ ನಾಮರೂಪನಿರ್ವಾಹಕನು ಮುಕ್ತಜೀವನೂ ಕೂಡ ಆಗಬಹುದಲ್ಲವೇ? ಎಂಬ ಆಶಂಕೆಗೆ ಉತ್ತರಿಸುವುದಕ್ಕಾಗಿ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಮತ್ತು 'ಪತ್ಯಾದಿಶಬ್ದೇಭ್ಯಃ' ಎಂಬೆರಡು ಸೂತ್ರಗಳು ಹೊರಟಿವೆ. ಇವೆರಡು ಸೂತ್ರಗಳಿಂದ ಜೀವ ಹಾಗೂ ಬ್ರಹ್ಮರಿಗೆ ಸುಷುಪ್ತಿ ಹಾಗೂ ಉತ್ಕ್ರಾಂತಿಗಳಿಂದ ಭೇದವು ಸಿದ್ಧವಾಗುತ್ತದೆ. ಅಧಿಪತಿತ್ವ ಹಾಗೂ ಧರ್ಮಗಳು ಮುಕ್ತಾವಸ್ಥೆಯಲ್ಲಿಯೂ ಕೂಡ ಜೀವನಿಗೆ ಬಾರದ ಕಾರಣ ಮುಕ್ತಜೀವರಿಗೂ ಪರಮಾತ್ಮನಿಗೂ ಭೇದವು ಸಿದ್ಧವಾಗುತ್ತದೆಂದು ವ್ಯಾಖ್ಯಾನ ಮಾಡುತ್ತಾರೆ.

ಇವರ ಈ ಸೂತ್ರವ್ಯಾಖ್ಯಾನವಾಗಲೀ, ಅಧಿಕರಣಶರೀರವಾಗಲೀ, ಅಯುಕ್ತವಾಗಿದೆ. ಏಕೆಂದರೆ ಮುಕ್ತಜೀವನು ಆಕಾಶಶಬ್ದದಿಂದ ವಾಚ್ಯನಾಗುತ್ತಾನೆ. ಬ್ರಹ್ಮನಲ್ಲವೆಂದು 'ಆಕಾಶೋಽರ್ಥಾಂತರತ್ವಾದಿ' ಎಂಬ ಸೂತ್ರದಿಂದ ಪೂರ್ವಪಕ್ಷ ಮಾಡಿ ಅದೇ ಸೂತ್ರದಿಂದಲೇ ಉತ್ತರಿಸಿದ್ದಾರೆ. ಅಂದರೆ ಪೂರ್ವಪಕ್ಷಿಯು ಜೀವಬ್ರಹ್ಮಭೇದವನ್ನು ಒಪ್ಪಿ ಪ್ರಶ್ನಿಸಿದ್ದಾನೆಂದು ಹೇಳಿದಂತಾಯಿತು. ಹೀಗೆ ಮೊದಲೇ ಒಪ್ಪಿರುವ ಭೇದಕ್ಕೆ ವಿರುದ್ಧವಾಗಿ ಪೂರ್ವಪಕ್ಷಿಯು ಅಭೇದವನ್ನು ಒಪ್ಪಿ, ಸುಷುಪ್ತಿಸೂತ್ರದಲ್ಲಿಯೂ ಆಕ್ಷೇಪ ಮಾಡುವುದು ಯುಕ್ತವಾಗುವುದಿಲ್ಲ. ಹಿಂದಿನ ಸೂತ್ರದಿಂದಲೇ ಭೇದವು ಸಿದ್ಧವಾದ ಮೇಲೆ ಪುನಃ ಪ್ರಶ್ನಿಸುವುದು ತಪ್ಪಾಗುತ್ತದೆ. ಮತ್ತು ಸುಷುಪ್ತ್ಯಾದಿ ಸೂತ್ರಗಳೆರಡೂ 'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' ಎಂಬಸೂತ್ರಕ್ಕೆ ಶೇಷವಾದಲ್ಲಿ 'ಚ' ಶಬ್ದದ ಪ್ರಯೋಗವಿರಬೇಕಿತ್ತೆಂಬ ದೋಷ ಇವರಿಗೂ ಕೂಡ ತಪ್ಪಿದ್ದಲ್ಲ. ಆದ್ದರಿಂದ ಅದ್ವೈತಿಗಳಂತೆ ರಾಮಾನುಜರೂ ಕೂಡ ಅಧಿಕರಣಶರೀರದ ರಚನೆಯಲ್ಲಿ ಎಡವಿದ್ದಾರೆ.

*ಅನುವಾದಕರು*

ವಿ. ಬೆಮ್ಮತ್ತಿ ವೇಂಕಟೇಶಾಚಾರ್ಯ

॥ ಶ್ರೀಕೃಷ್ಣಾರ್ಪಣಮಸ್ತು ॥

# ವಿಷಯಾನುಕ್ರಮಣಿಕೆ

## ದೇವತಾಧಿಕರಣ

### ಭಾಷ್ಯ ತತ್ವಪ್ರಕಾಶಿಕಾ



### ತಾತ್ಪರ್ಯಚಂದ್ರಿಕಾ

# ಅಪಶೂದ್ರಾಧಿಕರಣ -

## ಭಾಷ್ಯ ತತ್ವಪ್ರಕಾಶಿಕಾ

# ತಾತ್ಪರ್ಯಚಂದ್ರಿಕಾ



*ಪರಿಪೂರ್ಣಚಂದ್ರಿಕಾ*

## ಜ್ಯೋತಿರಧಿಕರಣ -

## ಭಾಷ್ಯ ತತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

# ಆಕಾಶಾಧಿಕರಣ -

## ಭಾಷ್ಯ ತತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ



# ಸುಷುಪ್ತ್ಯಧಿಕರಣ -

## ಭಾಷ್ಯ ತತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

## ಬ್ರಾಹ್ಮಣಾಧಿಕರಣ -

## ಭಾಷ್ಯ ತತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

# ದೇವತಾಧಿಕರಣ

(೧-೩-೮)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ದೇವತಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಮನುಷ್ಯರು ದೇವತೆಗಳಾದ ಅನಂತರವೂ ವೇದಾಧಿಕಾರಿಗಳೇ ಆಗಿರುತ್ತಾರೆ

**॥ अथ देवताधिकरणम् ॥**

**सू – ॥ ॐ तदुपर्यपि बादरायणः सम्भवात् ॐ ॥ २६ ॥**

ಸೂತ್ರಾರ್ಥ -- ದೇವತಾಪದವಿಯನ್ನು ಹೊಂದಲು ಅರ್ಹರಾದ ಮನುಷ್ಯರಿಗೆ ದೇವತಾಪದವಿಯು ದೊರೆತನಂತರವೂ, ಮನುಷ್ಯರಿಗೆ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಏಕೆಂದರೆ ವಿಶಿಷ್ಟವಾದ ಬುದ್ಧಿಸಾಮರ್ಥ್ಯವಿರುವುದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** तदुपर्यपि देवत्वयोग्यमनुष्याणां न केवलं मनुष्यत्वदशायां किन्तु देवादित्वप्राप्त्यनन्तरमपि वेदविद्याधिकरोऽस्ति । कुतः? सम्भवात् तेषामप्यधिकारप्रयोजकविशिष्टबुध्यादेर्योगादिति बादरायणो भगवान् वक्तीत्यर्थः ॥१॥

ಪರಿಪೂರ್ಣಚಂದ್ರಿಕಾ

ಅರ್ಥ - ತದುಪರ್ಯಪಿ = ದೇವತಾಪದವಿಗೆ ಯೋಗ್ಯರಾದ ಮನುಷ್ಯರಿಗೆ, ಮನುಷ್ಯರಾಗಿದ್ದಾಗಷ್ಟೇ ಅಲ್ಲ; ದೇವತಾಪದವಿಯು ಪ್ರಾಪ್ತವಾದ ಅನಂತರವೂ, ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಏಕೆಂದರೆ, ಸಂಭವಾತ್ = ಅಧಿಕಾರಕ್ಕೆ ಪ್ರಯೋಜಕವಾದ ವಿಶಿಷ್ಟವಾದ ಬೌದ್ಧಿಕಸಾಮರ್ಥ್ಯವಿರುವುದರಿಂದ ಎಂದು, ಬಾದರಾಯಣಃ = ಬಾದರಾಯಣರು ಹೇಳುತ್ತಾರೆ.

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् — मनुष्याणामेव वेदविद्याधिकार इत्युक्तम् ।**

ಅನುವಾದ - ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ಮಾತ್ರ ವೇದವಿದ್ಯಾಧಿಕಾರವಿರುತ್ತದೆಯೆಂದು ಹೇಳಲಾಯಿತು.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವಿರುತ್ತದೆಯೆಂದು ಸಮರ್ಥಿಸುತ್ತಿದ್ದಾರೆ. ಪ್ರಾಸಂಗಿಕವಾಗಿಯೇ ಅಧ್ಯಾಯ ಸಂಗತಿ ಹಾಗು ಪಾದಸಂಗತಿಗಳನ್ನು ತಿಳಿಯಬೇಕು -

ಮನುಷ್ಯಾಣಾಮೇವ = ಮನುಷ್ಯರಿಗೆಮಾತ್ರ, ವೇದವಿದ್ಯಾಧಿಕಾರಃ = ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆ, ಇತಿ = ಹೀಗೆ, ಉಕ್ತಮ್ = ಹಿಂದಿನಸೂತ್ರದಲ್ಲಿ ಹೇಳಲಾಯಿತು.[१]

---

(१) **भाष्यदीपिका** – अस्मिन्नधिकरणे देवानां ब्रह्मविद्याधिकारः समर्थ्यते । प्रासङ्गिकत्वान्नाध्यायपादसङ्गती मार्गणीये । श्रुत्यादिसङ्गतिविषयसंशयतद्बीजानि दर्शयति – **मनुष्याणामिति** ।। **'उक्तं'** पूर्वसूत्रे । तुशब्दार्थावधारणस्य समासप्रविष्टमनुष्यपदेनापि सम्बन्धोऽस्तीति भावेन मनुष्याणामेवेत्यनुवादः । नेतरेषामित्येवशब्दार्थः ।**'वेदविद्याधिकारः'** वेदविद्योपासनाधिकारः । अनेन – देवताधिकाराभावमुखेन **'विश्वे देवा उपासते'** इत्यादिपूर्वोदाहृतश्रुत्युपलक्षिताशेषश्रुतिप्रामाण्यस्याऽक्षेपात् पूर्वाधिकरणेनास्याऽक्षेपिकी सङ्गतिः वेदविद्याधिकाराख्यो विषयश्चोक्तो भवति । **'अङ्गुष्ठमात्रः'** इति श्रुतिमूलायाः **'मनुष्याणामेव'** इत्युक्तेः **'विश्वे देवा उपासते'** (कठ.२.२.३) इति श्रुतेश्च कोटिद्वयोपस्थापकत्वेन सन्देहबीजत्वात् तदुक्त्यैव देवानामधिकारोऽस्ति उत नास्तीति संशयः, नास्तीति पूर्वपक्षश्च सूचितः ।

**भाष्यम् – तिर्यगाद्यपेक्षयैव मनुष्यत्वविशेषणमुक्तं, नतु देवाद्यपेक्षयेत्याह –**

ಅನುವಾದ - ಆದರೆ 'ಮನುಷ್ಯಾಧಿಕಾರತ್ವಾತ್' ಎಂಬ ಹಿಂದಿನಸೂತ್ರದಲ್ಲಿ, ಪ್ರಾಣಿ ಮೊದಲಾದವುಗಳನ್ನು ಬಿಡಬೇಕೆಂಬ ಉದ್ದೇಶದಿಂದಲೇ ಅಧಿಕಾರ ಪದಕ್ಕೆ ಮನುಷ್ಯ ಎಂಬ ವಿಶೇಷಣವನ್ನು ನೀಡಲಾಗಿದೆ ಹೊರತು ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವನ್ನು ನಿಷೇಧಮಾಡುವುದಕ್ಕಾಗಿ ಮನುಷ್ಯ ಎಂಬ ವಿಶೇಷಣವನ್ನು ನೀಡಲಾಗಿಲ್ಲ. ಈ ವಿಷಯವನ್ನೇ ಸೂತ್ರಾಕಾರರು ಹೇಳುತ್ತಿದ್ದಾರೆ. ಇದರಿಂದೇನಾಯಿತು ಎಂಬ ಸಂಶಯವನ್ನು ಪರಿಹರಿಸುತ್ತಾ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸುತ್ತಿದ್ದಾರೆ -

ಪ್ರತಿಪದಾರ್ಥ -- ತಿರ್ಯಗಾದ್ಯಪೇಕ್ಷಯೈವ = ಪಶುಮೊದಲಾದುವುಗಳನ್ನು ವ್ಯಾವೃತ್ತಿಮಾಡುವುದಕ್ಕಾಗಿಯೇ, ಮನುಷ್ಯತ್ವವಿಶೇಷಣಂ = ಅಧಿಕಾರದಲ್ಲಿ ಮನುಷ್ಯವೆಂಬ ವಿಶೇಷಣವು, ಉಕ್ತಮ್ = ಹೇಳಲ್ಪಟ್ಟಿದೆ ಮತ್ತು ಹೊರತಾಗಿ ದೇವಾದ್ಯಪೇಕ್ಷಯಾ = ದೇವತೆಗಳನ್ನು ವ್ಯಾವೃತ್ತಿ ಮಾಡುವುದಕ್ಕೆ ಅಲ್ಲ. ಇತ್ಯಾಹ = ಇದನ್ನೇ ಸೂತ್ರಕಾರರು ಹೇಳುತ್ತಿದ್ದಾರೆ. (१)

**भाष्यम् – ॐ ॥ तदुपर्यपि बादरायणः सम्भवात् ॥ ॐ ॥२६॥**

**तदुपरि मनुष्याणां सतां देवादित्वप्राप्त्युपरि ।**
**सम्भवति हि तेषां विशिष्टबुद्ध्यादिभावात् ।**

ಅನುವಾದ - ಸೂತ್ರದಲ್ಲಿರುವ 'ತದುಪರಿ' ಎಂಬ ಶಬ್ದಕ್ಕೆ ಸಜ್ಜನರಾದ ಮನುಷ್ಯೋತ್ತಮರಿಗೆ ದೇವತಾಪದವಿಯು ದೊರೆತನಂತರವೂ ಸಹ ಎಂದರ್ಥ, ದೇವತೆಗಳಿಗೂ ಸಹ ವೇದದಲ್ಲಿ ಹೇಳಿರುವ ಅರ್ಥವನ್ನು ತಿಳಿದು ಅನುಷ್ಠಾನ ಮಾಡುವ ಬುದ್ಧಿಶಕ್ತಿ ಇರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ.

ಪ್ರತಿಪದಾರ್ಥ -- ಸೂತ್ರವನ್ನು ಪಠಿಸುತ್ತಿದ್ದಾರೆ -

ತದುಪರಿ = ಅಂದರೆ 'ಸತಾಂ' ಮುಕ್ತಿಯೋಗ್ಯರಾದ ಚೇತನರೆನಿಸಿದ, ಮನುಷ್ಯಾಣಾಂ = ಮನುಷ್ಯೋತ್ತಮರಿಗೆ, ತದುಪರಿಅಪಿ = ದೇವತಾಪದವಿಯ ಪ್ರಾಪ್ತಿ ಎಂಬ

(१) **भाष्यदीपिका** – ततः किमित्यतः संशयबीजं विघटयन् सिद्धान्तयितुं सूत्रमवतारयति – **तिर्यगादीति** ॥ विशिष्टबुद्ध्यादिरहिततिर्यगादिव्यावृत्त्यर्थमित्यर्थः । मनुष्यत्वविशेषणं सावधारणत्वेनाभिप्रेतम् । मनुष्यपदम् **'उक्तं'** प्रयुक्तं, तत्रेति शेषः । पूर्वसूत्र इति तदर्थः। स्वप्रयुक्तैवकारव्यावर्त्यं दर्शयति – **न त्विति** ॥ **'देवाद्यपेक्षया'** देवादिव्यावृत्त्यर्थम् । तुशब्दो विशेषार्थः । नतु देवाद्यर्थमपीत्यपिशब्दार्थो वा । **'इत्याह'** इत्यभिप्रेत्य सूत्रकारो देवानामधिकारभावमाहेत्यर्थः ।

ಉತ್ತಮಯೋನಿಯು ದೊರೆತನಂತರವೂ, ವೇದವಿದ್ಯಾಧಿಕಾರವು, ಸಂಭವತಿ = ಪ್ರಾಪ್ತವಾಗುತ್ತದೆ. ಹಿ = ಏಕೆಂದರೆ, ತೇಷಾಂ = ಅಂತಹ ದೇವತೆಗಳಿಗೆ, ವಿಶಿಷ್ಟಬುದ್ಧ್ಯಾದಿಭಾವಾತ್ = ಅಧ್ಯಯನಕ್ಕೆ ಉಪಯುಕ್ತವಾದ ವಿಶಿಷ್ಟಬುದ್ಧಿಯು ಇರುವುದರಿಂದ .(१)

**भाष्यम् – तिर्यगादीनां तदभावादभावः । तेषामपि यत्र विशिष्टबुद्ध्यादिभावस्तत्राविरोधः ।**

---

(१) **भाष्यदीपिका** – तत्सूत्रं पठति – **तदुपरीति** ।। अत्र तदुपरीति साध्यधर्मिसूचकं पदमनूद्य तेषां तस्मात् तस्या इति विग्रहाश्रयेण व्याचष्टे – **तदुपरीति** ।। वेदविद्याधिकार इत्यनुषज्यते । न केवलं मनुष्याणां सतां, किन्तु तदुपर्यपीत्यपेरर्थः । तथा च **'तेषां'** मनुष्याणां सतां देवतापदयोग्यानां जीवानां पदप्राप्तेः पूर्वं मनुष्यशरीरं प्राप्तानां सतां 'तस्मात्' मनुष्यत्वात् 'उपरि' मनुष्यशरीरापगमेन 'तस्या उपरि' देवोपदेवादिपदप्राप्तेरुपरितनकालेऽपि देवभावमापन्नानामपि वेदविद्याधिकारोऽस्त्येवेति योजना । कुत इत्यतस्तद्धेतुतया सम्भवादिति हेतुं व्याचष्टे । 'हि' यतः । **'वेदविद्याधिकारः'** इत्यत्रापि सम्बध्यते । **'तेषां'** देवानाम् । अधिकारसम्भवोऽपि कुत इत्यतोऽत्रापि सम्भवादित्येतदेवाऽवृत्त्य हेतुतया योजयति – **विशिष्टेति** ।। तेषामित्यत्राप्यन्वीयते । तथा च **'तेषां'** योग्यमनुष्याणां विद्याकर्मभ्यां देवादित्वप्राप्तिमतां **'सम्भवात्'** विशिष्टबुद्ध्यादिभावादर्थग्रहणानुष्ठानोपयुक्तबुद्धिविशेषादिसद्भावादित्यर्थः। अर्थित्वसामर्थ्ये आदिपदेन ग्राह्ये । न चार्थित्वाभाव इत्यत्रापि तेषां सम्भवति हीत्येव हेतुः । विद्याभिस्तेषां मोक्षसिद्धिः सम्भवति हीति तदर्थः । अनेन – सूत्रे तदित्यावर्तते । मनुष्यपरामर्शि चेदं बुद्धिस्थपरामर्शि च । अपिः समुच्चये । अधिकार इति बुद्ध्या विविच्यात्रान्वेति । अनधिकाराधिकाराभिधायकजैमिनिबादरायणोक्तिरूपविप्रतिपत्तिसूचनाय बादरायणपदम् । तत्त्वप्रदीपरीत्या तात्पर्यज्ञापनार्थमधिकाराधिक्यज्ञप्तिदाढर्यार्थं च बादरायणः स्वयमेव वक्तीत्याह – **इति वा** । सम्भवादिति चाऽवर्तते । तथा च यतो न केवलं देवादिपदयोग्यजीवानां पदप्राप्तेः पूर्वं भूमौ किञ्चित्कालं मनुष्याणां सतां तस्यां दशायामेवाधिकारः, किन्तु **'तदुपर्यपि'** तस्मान्मनुष्यत्वादुपरि तदत्ययेन ताभ्यां विद्याकर्मभ्यां तस्याः देवादित्वप्राप्तेरुपरितनकालेऽपि देवभावमापन्नानामपि वेदविद्यायामधिकारोऽस्त्येव । नच तत्कारणाभावः । **'सम्भवात्'** अधिकारोपयोगिनो विशिष्टबुद्ध्यादेस्तेषु सम्भवात् । नच देवादीनां विशिष्टबुद्धिसामर्थ्यसद्भावेऽप्यर्थित्वाभावादधिकाराभाव इति वाच्यम् । कुतः ? 'सम्भवात्' विद्यासाध्यज्ञानमोक्षयोरर्थित्वसम्भवादिति भगवान् बादरायणो मन्यत इति सूत्रार्थ उक्तो भवति ।

**भाष्यम् – तिर्यगाद्यपेक्षयैव मनुष्यत्वविशेषणमुक्तं, नतु देवाद्यपेक्षयेत्याह –**

ಅನುವಾದ - ಆದರೆ 'ಮನುಷ್ಯಾಧಿಕಾರತ್ವಾತ್' ಎಂಬ ಹಿಂದಿನಸೂತ್ರದಲ್ಲಿ, ಪ್ರಾಣಿ ಮೊದಲಾದವುಗಳನ್ನು ಬಿಡಬೇಕೆಂಬ ಉದ್ದೇಶದಿಂದಲೇ ಅಧಿಕಾರ ಪದಕ್ಕೆ ಮನುಷ್ಯ ಎಂಬ ವಿಶೇಷಣವನ್ನು ನೀಡಲಾಗಿದೆ ಹೊರತು ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವನ್ನು ನಿಷೇಧಮಾಡುವುದಕ್ಕಾಗಿ ಮನುಷ್ಯ ಎಂಬ ವಿಶೇಷಣವನ್ನು ನೀಡಲಾಗಿಲ್ಲ. ಈ ವಿಷಯವನ್ನೇ ಸೂತ್ರಾಕಾರರು ಹೇಳುತ್ತಿದ್ದಾರೆ. ಇದರಿಂದೇನಾಯಿತು ಎಂಬ ಸಂಶಯವನ್ನು ಪರಿಹರಿಸುತ್ತಾ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸುತ್ತಿದ್ದಾರೆ -

ಪ್ರತಿಪದಾರ್ಥ -- ತಿರ್ಯಗಾದ್ಯಪೇಕ್ಷಯೈವ = ಪಶುಮೊದಲಾದುವುಗಳನ್ನು ವ್ಯಾವೃತ್ತಿಮಾಡುವುದಕ್ಕಾಗಿಯೇ, ಮನುಷ್ಯತ್ವವಿಶೇಷಣಂ = ಅಧಿಕಾರದಲ್ಲಿ ಮನುಷ್ಯವೆಂಬ ವಿಶೇಷಣವು, ಉಕ್ತಮ್ = ಹೇಳಲ್ಪಟ್ಟಿದೆ ಮತ್ತು ಹೊರತಾಗಿ ದೇವಾದ್ಯಪೇಕ್ಷಯಾ = ದೇವತೆಗಳನ್ನು ವ್ಯಾವೃತ್ತಿ ಮಾಡುವುದಕ್ಕೆ ಅಲ್ಲ. ಇತ್ಯಾಹ = ಇದನ್ನೇ ಸೂತ್ರಕಾರರು ಹೇಳುತ್ತಿದ್ದಾರೆ. (१)

**भाष्यम् – ॐ ॥ तदुपर्यपि बादरायणः सम्भवात् ॥ ॐ ॥२६॥**

**तदुपरि मनुष्याणां सतां देवादित्वप्राप्त्युपरि ।**

**सम्भवति हि तेषां विशिष्टबुद्ध्यादिभावात् ।**

ಅನುವಾದ - ಸೂತ್ರದಲ್ಲಿರುವ 'ತದುಪರಿ' ಎಂಬ ಶಬ್ದಕ್ಕೆ ಸಜ್ಜನರಾದ ಮನುಷ್ಯೋತ್ತಮರಿಗೆ ದೇವತಾಪದವಿಯು ದೊರೆತನಂತರವೂ ಸಹ ಎಂದರ್ಥ, ದೇವತೆಗಳಿಗೂ ಸಹ ವೇದದಲ್ಲಿ ಹೇಳಿರುವ ಅರ್ಥವನ್ನು ತಿಳಿದು ಅನುಷ್ಠಾನ ಮಾಡುವ ಬುದ್ಧಿಶಕ್ತಿ ಇರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ.

ಪ್ರತಿಪದಾರ್ಥ -- ಸೂತ್ರವನ್ನು ಪಠಿಸುತ್ತಿದ್ದಾರೆ -

ತದುಪರಿ = ಅಂದರೆ 'ಸತಾಂ' ಮುಕ್ತಿಯೋಗ್ಯರಾದ ಚೇತನರೆನಿಸಿದ, ಮನುಷ್ಯಾಣಾಂ = ಮನುಷ್ಯೋತ್ತಮರಿಗೆ, ತದುಪರಿಅಪಿ = ದೇವತಾಪದವಿಯ ಪ್ರಾಪ್ತಿ ಎಂಬ

---

(१) **भाष्यदीपिका** – ततः किमित्यतः संशयबीजं विघटयन् सिद्धान्तयितुं सूत्रमवतारयति – **तिर्यगादीति** ।। विशिष्टबुद्ध्यादिरहिततिर्यगादिव्यावृत्त्यर्थमित्यर्थः । मनुष्यत्वविशेषणं सावधारणत्वेनाभिप्रेतम् । मनुष्यपदम् 'उक्तं' प्रयुक्तं, तत्रेति शेषः । पूर्वसूत्र इति तदर्थः। स्वप्रयुक्तैवकारव्यावर्त्यं दर्शयति – **न त्विति** ।। 'देवाद्यपेक्षया' देवादिव्यावृत्त्यर्थम् । तुशब्दो विशेषार्थः । नतु देवाद्यर्थमपीत्यपिशब्दार्थो वा । 'इत्याह' इत्यभिप्रेत्य सूत्रकारो देवानामधिकारभावमाहेत्यर्थः ।

ಉತ್ತಮಯೋನಿಯು ದೊರೆತನಂತರವೂ, ವೇದವಿದ್ಯಾಧಿಕಾರವು, ಸಂಭವತಿ = ಪ್ರಾಪ್ತವಾಗುತ್ತದೆ. ಹಿ = ಏಕೆಂದರೆ, ತೇಷಾಂ = ಅಂತಹ ದೇವತೆಗಳಿಗೆ, ವಿಶಿಷ್ಟಬುದ್ಧ್ಯಾದಿಭಾವಾತ್ = ಅಧ್ಯಯನಕ್ಕೆ ಉಪಯುಕ್ತವಾದ ವಿಶಿಷ್ಟಬುದ್ಧಿಯು ಇರುವುದರಿಂದ .(१)

**भाष्यम् – तिर्यगादीनां तदभावादभावः । तेषामपि यत्र विशिष्टबुद्ध्यादिभावस्तत्राविरोधः ।**

---

(१) **भाष्यदीपिका** – तत्सूत्रं पठति – **तदुपरीति** ।। अत्र तदुपरीति साध्यधर्मिसूचकं पदमनूद्य तेषां तस्मात् तस्या इति विग्रहाश्रयेण व्याचष्टे – **तदुपरीति** ।। वेदविद्याधिकार इत्यनुषज्यते । न केवलं मनुष्याणां सतां, किन्तु तदुपर्यपीत्यपेरर्थः । तथा च **'तेषां'** मनुष्याणां सतां देवतापदयोग्यानां जीवानां पदप्राप्तेः पूर्वं मनुष्यशरीरं प्राप्तानां सतां 'तस्मात्' मनुष्यत्वात् 'उपरि' मनुष्यशरीरापगमेन 'तस्या उपरि' देवोपदेवादिपदप्राप्तेरुपरितनकालेऽपि देवभावमापन्नानामपि वेदविद्याधिकारोऽस्त्येवेति योजना । कुत इत्यतस्तद्धेतुतया सम्भवादिति हेतुं व्याचष्टे । 'हि' यतः । **'वेदविद्याधिकारः'** इत्यत्रापि सम्बध्यते । **'तेषां'** देवानाम् । अधिकारसम्भवोऽपि कुत इत्यतोऽत्रापि सम्भवादित्येतदेवाऽवृत्त्य हेतुतया योजयति – **विशिष्टेति** ।। तेषामित्यत्राप्यन्वीयते । तथा च **'तेषां'** योग्यमनुष्याणां विद्याकर्मभ्यां देवादित्वप्राप्तिमतां **'सम्भवात्'** विशिष्टबुद्ध्यादिभावादर्थग्रहणानुष्ठानोपयुक्तबुद्धिविशेषादिसद्भावादित्यर्थः। अर्थित्वसामर्थ्ये आदिपदेन ग्राह्ये । न चार्थित्वाभाव इत्यत्रापि तेषां सम्भवति हीत्येव हेतुः । विद्याभिस्तेषां मोक्षसिद्धिः सम्भवति हीति तदर्थः । अनेन – सूत्रे तदित्यावर्तते । मनुष्यपरामर्शि चेदं बुद्धिस्थपरामर्शि च । अपिः समुच्चये । अधिकार इति बुद्ध्या विविच्यात्रान्वेति । अनधिकाराधिकाराभिधायकजैमिनिबादरायणोक्तिरूपविप्रतिपत्तिसूचनाय बादरायणपदम् । तत्त्वप्रदीपरीत्या तात्पर्यज्ञापनार्थमधिकाराधिक्यज्ञप्तिदाढर्यार्थं च बादरायणः स्वयमेव वक्तीत्याह – **इति वा** । सम्भवादिति चाऽवर्तते । तथा च यतो न केवलं देवादिपदयोग्यजीवानां पदप्राप्तेः पूर्वं भूमौ किञ्चित्कालं मनुष्याणां सतां तस्यां दशायामेवाधिकारः, किन्तु **'तदुपर्यपि'** तस्मान्मनुष्यत्वादुपरि तदत्ययेन ताभ्यां विद्याकर्मभ्यां तस्याः देवादित्वप्राप्तेरुपरितनकालेऽपि देवभावमापन्नानामपि वेदविद्यायामधिकारोऽस्त्येव । नच तत्कारणाभावः । **'सम्भवात्'** अधिकारोपयोगिनो विशिष्टबुद्ध्यादेस्तेषु सम्भवात् । नच देवादीनां विशिष्टबुद्धिसामर्थ्यसद्भावेऽप्यर्थित्वाभावादधिकाराभाव इति वाच्यम् । कुतः ? 'सम्भवात्' विद्यासाध्यज्ञानमोक्षयोरर्थित्वसम्भवादिति भगवान् बादरायणो मन्यत इति सूत्रार्थ उक्तो भवति ।

ಅನುವಾದ - ಪ್ರಾಣಿಗಳಿಗೆ ಇಂತಹ ಬುದ್ಧಿಸಾಮರ್ಥ್ಯವು ಇರುವುದಿಲ್ಲ. ಆದ್ದರಿಂದಲೇ ವೇದವಿದ್ಯಾಧಿಕಾರವೂ ಸಹ ಅವರಿಗೆ ಇರುವುದಿಲ್ಲ. ಪ್ರಾಣಿಗಳಿಗೂ ಅಂತಹ ವಿಶಿಷ್ಟವಾದ ಬುದ್ಧಿಶಕ್ತಿ ಇರುವುದಾದಲ್ಲಿ ವೇದವಿದ್ಯಾಧಿಕಾರವನ್ನು ಒಪ್ಪಲು ಏನೂ ತೊಂದರೆ ಇಲ್ಲ.

ಪ್ರತಿಪದಾರ್ಥ -- ದೇವತೆಗಳಿಗೆ ಮಾತ್ರ ವೇದವಿದ್ಯಾಧಿಕಾರವಿರುವುದಲ್ಲ; ವಿಶಿಷ್ಟವಾದ ಬುದ್ಧಿಶಕ್ತಿ ಇರುವವರೆಲ್ಲರಿಗೂ ವೇದವಿದ್ಯಾಧಿಕಾರವಿದೆ ಎಂದು ಸಮರ್ಥಿಸುತ್ತಿದ್ದಾರೆ -

ತಿರ್ಯಗಾದೀನಾಂ = ಪಶುಪ್ರಾಣಿಗಳಿಗೆ, ತದಭಾವಾತ್ = ಅಧ್ಯಯನಕ್ಕೆ ಉಪಯುಕ್ತವಾದ ಬುದ್ಧಿಶಕ್ತಿ ಇಲ್ಲದ ಕಾರಣ, ಅಭಾವಃ = ವೇದಾಧ್ಯಯನವು ಇರುವುದಿಲ್ಲ, ತೇಷಾಮ್ ಅಪಿ = ಅಂತಹ ಪ್ರಾಣಿಗಳಿಗೂ ಸಹ, ಯತ್ರ = ಯಾವ ಸಂದರ್ಭದಲ್ಲಿ, ವಿಶಿಷ್ಟಬುದ್ಧ್ಯಾದಿಭಾವಃ = ಹೆಚ್ಚಿನ ಬುದ್ಧಿಶಕ್ತಿ ಇರುತ್ತದೋ, ತತ್ರ = ಆ ಸಂದರ್ಭದಲ್ಲಿ, ಅವಿರೋಧಃ = ವೇದಾಧಿಕಾರವನ್ನು ಒಪ್ಪಿದರೆ ವಿರೋಧವು ಬರುವುದಿಲ್ಲ.[१]

---

(१) **भाष्यदीपिका** – ननु न देवा वेदविद्याधिकारिणः, तथा सति सूत्रेऽमनुष्यमात्र-व्यावर्तकमनुष्यपदप्रयोगेण तिर्यगादिवदमनुष्यत्वान्न देवा वेदविद्याधिकारिण इत्यनुमानसूचनात् तद्विरोधापत्तेरित्यत आह – **तिर्यगादीनामिति** ।। आदिपदेन स्थावराणि मूढमनुष्या वा गृह्यन्ते । 'तदभावात्' विशिष्टबुद्ध्यादेरभावात् 'अभावः' तस्य वेदविद्याधिकारस्य । अनेनाधिकाराभावे विशिष्टबुद्ध्यादिराहित्यस्य प्रयोजकत्वोक्त्या परोक्तामनुष्यत्वहेतोः सोपाधिकत्वं साध्यव्यतिरेकसाधकोपाधि-व्यतिरेकाख्यप्रतिपक्षग्रस्तत्वं चोक्तं भवति । सौत्रमनुष्यपदं च मननादिशीलपरं सद् विशिष्टबुद्ध्यादिरहितमेव चेतनं व्यावर्तयति, नतु मर्त्यभिन्नमात्रमिति न तद्विरोध इति भावः । ननु विशिष्टबुद्ध्यादिराहित्यमुपाधिः । तिर्यक्षु अधिकाराभावरूपसाध्या-व्यापकत्वात् । अत एव न तदभावोऽपि साध्यव्यतिरेकहेतुरित्यत आह – **तेषामपीति**।। अपिरुभयत्रान्वेति । तत्राऽद्यः समुच्चये । अधिकार इति शेषः । तथा च न केवलं देवानां, किन्तु 'तेषां' तिरश्चामप्यधिकारेऽपि न विरोधः । ननु कथमविरोधस्तिर्यक्षु सर्वत्र वेदाधिकारे मानविरोधापातादित्यत आह – **तेषामपीति** ।। तिरश्चां मध्येऽपीत्यर्थः । 'यत्र' येषु विशिष्टबुद्ध्यर्थित्वाख्यरागादिभावः तत्सत्त्वं तत्रैवाधिकारे 'अविरोधः' मानाविरोधः । बाधो न सर्वत्रेत्यर्थः । अनेनापिना सौत्रोऽपिशब्दो जरितार्यादिसमुच्चायकश्चेति सूचितम् । यदाह तत्त्वप्रदीपिकाकारः – 'तेषामपीत्यादिरपि-पदव्याख्या' इति । आनन्दमालाकारोऽपि – 'तिर्यञ्चोऽपि केचिदपिशब्दगृहीताः' इत्याह।

**भाष्यम् – निषेधाभावात् । दृश्यन्ते हि जरितार्यादयः ॥२६॥**

ಅನುವಾದ - ಪ್ರಾಣಿಗಳಿಗೂ ಬುದ್ಧಿಶಕ್ತಿ ಇದ್ದಾಗ ಒಪ್ಪಿದರೆ ವಿರೋಧಬರುವುದಿಲ್ಲ ಏಕೆಂದರೆ ಜರಿತಾರಿ ಮೊದಲಾದ ಪಕ್ಷಿಗಳು ವೇದಾಧ್ಯಯನ ಮಾಡಿದ್ದು ಇತಿಹಾಸದಲ್ಲಿ ದೃಷ್ಟಾಂತವಿದೆ.

ಪ್ರತಿಪದಾರ್ಥ -- ನಿಷೇಧಾಭಾವಾತ್ = ನಿಷೇಧವಿಲ್ಲದ ಕಾರಣ ವೇದಾಧಿಕಾರವನ್ನು ಒಪ್ಪಿದರೆ ವಿರೋಧವಿಲ್ಲ. ಹೀಗೇಕೆಂದರೆ, ಜರಿತಾರ್ಯಾದಯಃ = ಜರಿತಾರಿ ಮೊದಲಾದ ಪಕ್ಷಿಗಳು, ದೃಶ್ಯಂತೇ = ವೇದಾಧಿಕಾರ ಉಳ್ಳವರಾಗಿರುವಂತೆ ದೃಷ್ಟಾಂತವು, ಹಿ = ಭಾರತಾದಿಗಳಲ್ಲಿ ಕಂಡಿದೆ.(१)

---

तथा च मनुष्यभिन्नेष्वपि तिर्यक्ष्वधिकारसद्भावाद् व्यभिचारादधिकाराभावे नामनुष्यत्वं हेतुः, किन्तु विशिष्टबुद्ध्यादिराहित्यमेवाव्यभिचारात् । अतो भवत्येव स उपाधिः । अत एव सौत्रमनुष्यपदस्य व्यावर्त्यसङ्कोचोऽपि युक्त इति भावः ।

(१) **भाष्यदीपिका** – ननु कथं तिरश्चामप्यधिकारेऽप्यविरोधः । तेषामधिकारनिषेधस्य तद्दर्शनस्य वा विरोधित्वादित्याशङ्क्य नाऽद्य इत्याह – **निषेधेति** ।। तेषामित्यत्रापि सम्बध्यते । अधिकारे इत्यादौ संयोज्यम् । तेन निषेधराहित्ये सति विशिष्ट-बुद्ध्यादिमत्त्वमेवाधिकारे प्रयोजकम्, न केवलं येन शूद्रादौ व्यभिचारः स्यादिति सूचितम् । न द्वितीय इत्याह – **दृश्यन्ते हीति** ।। वेदाधिकारितयेति शेषः । हिशब्दो भारतादिप्रसिद्धिसूचकः । अत एव भारते –

**'एवमुक्तो भ्रातृभिस्तु जरितारिर्विभावसुम् ।**
**तुष्टाव प्राञ्जलिर्भूत्वा यत् तच्छृणु नराधिप ॥'**

इत्यादिना जरितारिसारिसृक्कस्तम्बमित्रद्रोणाख्येषु पक्षिषु मध्ये जरितारिरग्रजः स्वभ्रातृभिरस्मान् मोचयेति प्रार्थितः **'अयमग्ने जरिता'** (ऋ.१०.१४२.१) इत्याग्नेयसूक्तेनाग्निं स्तुत्वा खाण्डववनदहने स्वभ्रातॄनग्निदाहादमोचयदिति प्रतिपादितम्। यत इत्यर्थे वा हिशब्दः । अत्र जरितार्यादय इत्येव पाठो युक्तः, न तु जरितर्यादय इति ह्रस्वयुक्तपाठः, भारतविरोधात्, तत्त्वप्रदीपविरोधाच्चेति ध्येयम् । दृश्यन्ते हीत्यनेन – देवा वेदविद्याधिकारिणः निषेधराहित्ये सति विशिष्टबुद्ध्यादिमत्त्वात् तादृशमर्त्यवदिति सिद्धान्त्यभिमतानुमाने मनुष्यत्वोपाधिर्निरस्तो भवति । जरितारौ आदिशब्दगृहीतसारिसृक्कादौ च साध्याव्यापकत्वात् ।

## श्रीपद्मनाभतीर्थविरचितसत्तर्कदीपावळिः

### ॐ तदुपर्यपि बादरायणः सम्भवात् ॐ ॥

अत्र मनुष्याधिकारत्वादित्युक्तेऽप्यर्थित्वसामर्थ्यादिमत्त्वेन देवादीनां वेदोक्तब्रह्मोपासनाधिकारसम्भवात् 'मध्ये वामनमासीनम्' इत्यादिश्रुत्युक्तत्वाच्च नात्राधिकारस्तेषां वार्यः ।

ವೇದಾಧ್ಯಯನದಲ್ಲಿ ಮನುಷ್ಯರು ಅಧಿಕಾರಿಗಳು ಎಂದು ಹೇಳಿದ್ದರೂ ಸಹ, ಅರ್ಥಿತ್ವ, ಸಾಮರ್ಥ್ಯ, ಇವುಗಳು ಇರುವ ಕಾರಣ ದೇವತೆಗಳೂ ಸಹ ವೇದವಿದ್ಯೆಗೆ ಅಧಿಕಾರಿಗಳೇ ಆಗಿರುತ್ತಾರೆ. ಆದ್ದರಿಂದ ವೇದದಲ್ಲಿ ಹೇಳಲ್ಪಟ್ಟ ಬ್ರಹ್ಮೋಪಾಸನೆಯು ದೇವತೆಗಳಿಗೂ ವಿಹಿತವಾಗಿದೆ. ಮತ್ತು 'ಮಧ್ಯೇ ವಾಮನಮಾಸೀನಮ್' ಇತ್ಯಾದಿ ಶ್ರುತಿಯಲ್ಲಿ ಹೇಳಿದ್ದರಿಂದಲೂ ದೇವತೆಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದು ನಿರಾಕರಣೆ ಮಾಡಬಾರದು.

इदानीन्तनदेवानामुत्पत्तिमत्त्वादुत्पत्तेः प्राक् 'आत्मा वा अरे द्रष्टव्यः श्रोतव्यो मन्तव्यो निदिध्यासितव्यः' इत्यादिशास्त्रं कथं तानधिकरोति? कथञ्च तदुद्देशेन हविर्दानं तदानीम्? इति नाशङ्कनीयम् । 'यत्र पूर्वे साध्याः सन्ति देवाः' इति पूर्वमपि देवतान्तरसद्भावश्रुतिविरोधात् ।

ಈಗ ಇರುವಂತಹ ದೇವತೆಗಳಿಗೆ ಉತ್ಪತ್ತಿಯಿದೆ. ಉತ್ಪತ್ತಿಗಿಂತ ಮೊದಲು 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ' ಇತ್ಯಾದಿ ವೇದವಾಕ್ಯಗಳು ದೇವತೆಗಳನ್ನು ಉದ್ದೇಶಿಸಿ ಶ್ರವಣ-ಮನನಾದಿಗಳನ್ನು ವಿಧಿಸಲು ಹೇಗೆ ಸಾಧ್ಯವಾಗುತ್ತದೆ? ಮತ್ತು ಇನ್ನೂ ಉತ್ಪತ್ತಿಯನ್ನೇ ಹೊಂದದ ದೇವತೆಗಳನ್ನು ಉದ್ದೇಶಿಸಿ ಹವಿರ್ದಾನಾದಿಗಳೂ ಕೂಡ ಹೇಗೆ ಕೂಡುತ್ತವೆ? ಎಂದು ಆಕ್ಷೇಪಿಸಬಾರದು. ಏಕೆಂದರೆ, 'ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂಬ ಪುರುಷಸೂಕ್ತವಾಣಿಯಂತೆ, ಈ ದೇವತೆಗಿಂತ ಮೊದಲು ಮತ್ತೊಬ್ಬ ದೇವತೆಯು ಇದ್ದೇ ಇರುತ್ತಾನೆ. ಅಂತಹ ದೇವತೆಯನ್ನು ಉದ್ದೇಶಿಸಿ 'ಆತ್ಮಾ ವಾ ಅರೇ' ಮೊದಲಾದ ಶ್ರುತಿಗಳು ಪ್ರವೃತ್ತವಾಗಿವೆ, ಮತ್ತು ಹವಿರ್ದಾನಾದಿಗಳೂ ಯುಕ್ತವಾಗುತ್ತವೆ.

तदाह – मनुष्याणां सतां देवादित्वप्राप्त्युपरीति ॥ अस्य देवादिपदयोग्यानां मनुष्यादीनां तत्तत्साधनानुष्ठानेन देवादिपदप्राप्तेः उपर्यपि वेदोक्तब्रह्मोपासनाधिकारोऽस्तीत्यर्थः ।

ಇದನ್ನೇ ಸೂತ್ರಕಾರರು 'ತದುಪರ್ಯಪಿ' ಇತ್ಯಾದಿಯಾಗಿ ಹೇಳಿದ್ದಾರೆ. ಅದನ್ನು ಭಾಷ್ಯದಲ್ಲಿ 'ಮನುಷ್ಯಾಣಾಂ' ಎಂದು ವಿವರಿಸಿದ್ದಾರೆ. ಉತ್ತಮರಾದ ಮನುಷ್ಯರು ಸಾಧನಾನುಷ್ಠಾನದಿಂದ ದೇವತಾಪದವಿಯನ್ನು ಹೊಂದುತ್ತಾರೆ. ಅಂತಹ ದೇವತಾಪದಕ್ಕೆ ಯೋಗ್ಯರಾದ ಮನುಷ್ಯರು ದೇವತಾಪದವಿಯನ್ನು ಹೊಂದಿದ ಮೇಲೆಯೂ, ಅವರು ವೇದದಲ್ಲಿ ಹೇಳಲ್ಪಟ್ಟ ಬ್ರಹ್ಮೋಪಾಸನೆಗೆ ಅಧಿಕಾರಿಗಳಾಗಿರುತ್ತಾರೆ ಎಂದು ಅಭಿಪ್ರಾಯ.

**तिर्यगादीनाम् इत्यत्रादिशब्देन स्थावरग्रहणम् । दृश्यन्ते हि जातिस्मरणयोगात् सूक्तद्रष्टृत्वेन भारतादिषु जरितार्यादयः पक्षिणः ।**

'ತಿರ್ಯಗಾದೀನಾಂ' ಎಂಬಲ್ಲಿರುವ ಆದಿಶಬ್ದದಿಂದ ಸ್ಥಾವರ ಪದಾರ್ಥಗಳನ್ನು ವಿವಕ್ಷಿಸಬೇಕು. ಮಹಾಭಾರತದಲ್ಲಿ ಜರಿತಾರಿ ಪಕ್ಷಿಯ ಕಥೆಯನ್ನು ಗಮನಿಸಿದಾಗ ಜಾತಿಸ್ಮರಣೆ ಮೊದಲಾದವುಗಳು ಆ ಪಕ್ಷಿಗೆ ಇದ್ದು ಅದರಿಂದ 'ಅಯಮಗ್ನೇ ಜರಿತಾ' ಇತ್ಯಾದಿ ಸೂಕ್ತಗಳ ದ್ರಷ್ಟೃತ್ವವೂ ಕೂಡ ಆ ಪಕ್ಷಿಯು ಆಗಿರುವುದು ಕಂಡುಬರುತ್ತದೆ.

**अतो मनुष्येभ्योऽन्योऽपि वेदोक्तब्रह्मोपासनाधिकारिदेवताङ्गीकारो न घटते । वेदानां नित्यत्वाद्देवानां विनाशित्वात् ।।**

ಆದ್ದರಿಂದ ಮನುಷ್ಯರಿಗಿಂತಲೂ ಭಿನ್ನರಾದ ಜರಿತಾರಿ ಮೊದಲಾದ ಪಕ್ಷಿಗಳಲ್ಲಿ ವೇದೋಕ್ತವಾದ ಬ್ರಹ್ಮೋಪಾಸನೆ ಇರುವುದು ಕಂಡಿದೆ. ಆದರೆ ಯಾವ ಪಕ್ಷಿಗಳಿಗೆ ವಿಶಿಷ್ಟಬುದ್ಧಿಯಿರುವುದಿಲ್ಲವೋ, ಅಂಥಹ ತಿರ್ಯಗಾದಿ ಪಕ್ಷಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದು ನಿಷೇಧಿಸಲಾಗಿದೆ. ಹೊರತು, ದೇವತೆಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದು ನಿಷೇಧ ಮಾಡಿಲ್ಲ. ವೇದಗಳು ನಿತ್ಯವಾಗಿವೆ, ದೇವತೆಗಳು ಅನಿತ್ಯರಾದ್ದರಿಂದ ವೇದವಿದ್ಯೆಯಲ್ಲಿ ಅಧಿಕಾರಿಗಳಾಗುತ್ತಾರೆ.

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।।ॐ।।**

**तत्वप्रकाशिका –**

**।। ॐ तदुपर्यपि बादरायणः सम्भवात् ॐ ।।**

**अत्र देवानां ब्रह्मविद्याऽधिकारसमर्थनादस्ति शास्त्रसङ्गतिः । प्रासङ्गिकत्वान्नाध्यायादिसङ्गतिर्गवेषणीया । श्रुत्यादिसङ्गतिं विषयसंशयतद्बीजानि सूचयति ।। मनुष्याणामिति ।।**

ಈ ಅಧಿಕರಣದಲ್ಲಿ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಸಮರ್ಥಿಸುತ್ತಿದ್ದಾರೆ. ಆದ್ದರಿಂದಲೇ ಶಾಸ್ತ್ರಸಂಗತಿಯಿರುತ್ತದೆ ಎಂದು ತಿಳಿಯಬೇಕು. ಪ್ರಾಸಂಗಿಕವಾಗಿ ದೇವತೆಗಳಿಗೆ ವೇದವಿದ್ಯಾಧಿಕಾರವಿದೆ ಎಂದು ಸಮರ್ಥನೆ ಮಾಡುತ್ತಿರುವುದರಿಂದ ಯಾವುದೇ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡದಿರುವುದರಿಂದ, ಅಧ್ಯಾಯಸಂಗತಿಯನ್ನಾಗಲಿ, ಪಾದಸಂಗತಿಯನ್ನಾಗಲಿ ಅನ್ವೇಷಣೆ ಮಾಡಬೇಕಾಗಿಲ್ಲ. ಆದರೆ, ಶ್ರುತಿಸಂಗತಿ-ಅಧಿಕರಣಸಂಗತಿಗಳು ಇರುತ್ತವೆ. ಭಾಷ್ಯಕಾರರು 'ಮನುಷ್ಯಾಣಾಮ್' ಇತ್ಯಾದಿ ವಾಕ್ಯಗಳಿಂದ ಶ್ರುತಿಸಂಗತಿ, ಅಧಿಕರಣಸಂಗತಿ, ವಿಷಯ, ಸಂಶಯ, ಸಂಶಯಬೀಜ ಇವುಗಳನ್ನು ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – ''मनुष्याधिकारत्वात्'' इति मनुष्याणामेव वेदविद्याधिकार इत्युक्तम् । स च यदि न देवानां स्यात्तदा 'विश्वेदेवा उपासते' इत्यादिश्रुत्यप्रमाण्यं प्रसज्येत इत्यवश्यं विचार्यः । स वेदविद्याधिकारो विषयः ।**

ಹಿಂದಿನ ಅಧಿಕರಣದಲ್ಲಿ 'ಮನುಷ್ಯಾಧಿಕಾರತ್ವಾತ್' ಎಂಬ ಪದದಿಂದ, ಮನುಷ್ಯರಿಗೆ ಮಾತ್ರ ವೇದವಿದ್ಯೆಯಲ್ಲಿ ಅಧಿಕಾರ ಎಂದು ಹೇಳಿದರು. ಒಂದು ವೇಳೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಿದರೆ, 'ವಿಶ್ವೇದೇವಾ ಉಪಾಸತೇ' ಇತ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಆದ್ದರಿಂದ ಅವಶ್ಯವಾಗಿ ದೇವತೆಗಳಿಗೆ ಅಧಿಕಾರವಿದೆಯೋ, ಇಲ್ಲವೋ ಎಂಬುದನ್ನು ವಿಚಾರ ಮಾಡಬೇಕು. ಅಂತಹ ವೇದವಿದ್ಯಾಧಿಕಾರವೇ ಈ ಅಧಿಕರಣದ ವಿಷಯವಾಗಿದೆ.

**तत्वप्रकाशिका – देवानामस्ति न वेति सन्देहः । मनुष्याणामेवेत्युक्ति-र्विश्वेदेवा उपासत इति श्रुतिश्च सन्देहबीजमिति भावः ।**

ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೋ, ಇಲ್ಲವೋ ಎಂಬುದೇ ಸಂದೇಹ. 'ಮನುಷ್ಯಾಣಾಮೇವ' ಎಂಬ ವಚನವು ಮನುಷ್ಯರಿಗೆ ಮಾತ್ರ ಅಧಿಕಾರವಿದೆ ಎನ್ನುತ್ತಿದೆ. 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು ದೇವತೆಗಳಿಗೂ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂದು ಹೇಳುತ್ತಿದೆ. ಹೀಗೆ ವಿರುದ್ಧವಾದ ಎರಡು ವಾಕ್ಯಗಳು ಸಂದೇಹಕ್ಕೆ ಕಾರಣವಾಗಿದೆ.

**तत्वप्रकाशिका – नच श्रुत्युक्त्योरसाम्यादसन्देहबीजत्वम् । उक्तेरप्यङ्गुष्ठमात्र श्रुतिमूलत्वात् ।**

'ಮನುಷ್ಯಾಣಾಮೇವ' ಎಂಬುದು ಕೇವಲ ವಾಕ್ಯ. 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತ್ಯುಕ್ತಿ. ಆದ್ದರಿಂದ ಎರಡೂ ಉಕ್ತಿಗಳಿಗೂ ಸಾಮ್ಯವಿಲ್ಲದ ಕಾರಣ, ಸಂದೇಹಬೀಜವಿಲ್ಲವೆಂದು ಹೇಳಬಾರದು. ಏಕೆಂದರೆ, ಭಾಷ್ಯೋಕ್ತವಾದ ವಚನಕ್ಕೆ 'ಅಂಗುಷ್ಠಮಾತ್ರಃ ಪುರುಷಃ' ಎಂಬ ಶ್ರುತಿಮೂಲತ್ವವಿರುತ್ತದೆ.

**तत्वप्रकाशिका – न देवानां वेदविद्याधिकार इति पूर्वः पक्षः । तथाहि । किं देवा अनादिनित्या उत विद्यादिना पदप्राप्तिमुक्तिमन्तः ।**

ದೇವತೆಗಳಿಗೆ ವೇದವಿದ್ಯೆಯಲ್ಲಧಿಕಾರವಿಲ್ಲವೆಂದು ಪೂರ್ವಪಕ್ಷ. ಅದು ಹೀಗೆ. ದೇವತೆಗಳು ಅನಾದಿನಿತ್ಯರೋ, ಅಥವಾ ಬ್ರಹ್ಮವಿದ್ಯೆ ಮೊದಲಾದ ಸಾಧನಾನುಷ್ಠಾನಗಳಿಂದ ದೇವತಾಪದವನ್ನು ಮತ್ತು ಮುಕ್ತಿಯನ್ನು ಅವರು ಹೊಂದುತ್ತಾರೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು.

**तत्वप्रकाशिका – आद्ये न वेदविद्याधिकारः । अर्थी समर्थो विद्वानधिक्रियत इति न्यायात् । तेषां चार्थित्वाभावात् । न ह्यनादितः प्राप्तपदानां मोक्षशून्यानां च विद्याभिः प्रयोजनमस्ति येनार्थिता स्यात् ।**

ಪ್ರಥಮಪಕ್ಷದಲ್ಲಿ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವನ್ನು ನಿರ್ವಹಿಸಲಾಗದು. ಏಕೆಂದರೆ, 'ಅರ್ಥೀ ಸಮರ್ಥೋ ವಿದ್ವಾನ್ ಅಧಿಕ್ರಿಯತೇ' ಎಂದರೆ ಪುರುಷಾರ್ಥವನ್ನು ಅಪೇಕ್ಷಿಸುವ, ಅನುಷ್ಠಾನವನ್ನು ಮಾಡಲು ಸಮರ್ಥನಾದ, ಜ್ಞಾನಿಯಾದ ವ್ಯಕ್ತಿಯೇ ವೇದವಿದ್ಯೆಯಲ್ಲಿ ಅಧಿಕಾರಿಯಾಗುತ್ತಾನೆ ಎಂಬ ನ್ಯಾಯವಿರುತ್ತದೆ. ದೇವತೆಗಳಿಗೆ ಪುರುಷಾರ್ಥದ ಅಪೇಕ್ಷೆಯೇ ಕೂಡುವುದಿಲ್ಲ. ಏಕೆಂದರೆ, ಅನಾದಿಕಾಲದಿಂದಲೇ ದೇವತೆಯ ಪದವಿಯನ್ನು ಅವರು ಪಡೆದಿರುತ್ತಾರೆ. ಮತ್ತು, ದೇವತಾಪದವಿಯೂ ನಿತ್ಯವಾಗಿರುವುದರಿಂದ ಮೋಕ್ಷವೂ ಸಹ ಅವರಿಗೆ ಇರುವುದಿಲ್ಲ. ಹೀಗಿರುವಾಗ, ಬ್ರಹ್ಮವಿದ್ಯೆಯಿಂದ ದೇವತೆಗಳಿಗೆ ಯಾವುದೇ ಪ್ರಯೋಜನವಿಲ್ಲ. ಆದ್ದರಿಂದಲೇ ಅವರಿಗೆ ಅರ್ಥಿತ್ವವು ಕೂಡುವುದಿಲ್ಲ.

**तत्वप्रकाशिका – न द्वितीयः । अमराणां मुक्त्याद्यङ्गीकारे कर्मादिविरोधापातात् । अतो देवानां वेदविद्याधिकाराभावान्न तदुपास्यत्वलिङ्गं विष्णोः सम्भवति।**

ಇನ್ನು ಸಾಧನಾನುಷ್ಠಾನದಿಂದ ದೇವತಾಪದವಿಯನ್ನು ಹೊಂದಿರುತ್ತಾರೆಂಬ ಎಂಬ ಎರಡನೇ ಪಕ್ಷವೂ ಸಹ ಕೂಡುವುದಿಲ್ಲ. ಏಕೆಂದರೆ, ದೇವತೆಗಳಿಗೆ ದೇವತಾಪದವಿ, ಮುಕ್ತಿ ಮೊದಲಾದವುಗಳನ್ನು ಅಂಗೀಕಾರ ಮಾಡಿದರೆ, ಕರ್ಮಾದಿಗಳ ವಿರೋಧವು ಬರುತ್ತದೆ. ಅಂದರೆ, ಇಲ್ಲಿಯ ತನಕ ದೇವತಾಪದವಿಯನ್ನು ಹೊಂದಿಲ್ಲ, ಮೋಕ್ಷವನ್ನು ಹೊಂದಿಲ್ಲ ಎಂದು ಹೇಳುವುದಾದರೆ ದೇವತಾಪದವಿಯನ್ನೇ ಹೊಂದದ ದೇವತೆಯನ್ನು ಉದ್ದೇಶಿಸಿ ಮಾಡುವಂತಹ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವೆ. ಆದ್ದರಿಂದ ದೇವತೆಗಳಿಗೆ ವೇದವಿದ್ಯಾಧಿಕಾರವು ಕೂಡುವುದಿಲ್ಲ. ಆದ್ದರಿಂದಲೇ, 'ದೇವೋಪಾಸ್ಯತ್ವ' ಎಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಗದು.

ದೇವತಾಧಿಕರಣ (೧-೩-೮)

**तत्वप्रकाशिका – अथ सन्देहबीजं विघटयन् सिद्धान्तयितुं सूत्रमवतारयति – तिर्यगादीति ।।**

ಹೀಗೆ ಭಾಷ್ಯಕಾರರು ಸಂದೇಹಬೀಜವನ್ನು ಪರಿಹಾರ ಮಾಡಿ ಸಿದ್ಧಾಂತವನ್ನು ಸ್ಥಾಪಿಸುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆ ನೀಡುತ್ತಿದ್ದಾರೆ, 'ತಿರ್ಯಗಾದಿ' ಎಂಬುದರಿಂದ.

**तत्वप्रकाशिका – मनुष्यपदं विशिष्टबुद्ध्यादिरहिततिर्यगादिव्यावृत्त्यर्थं प्रयुक्तं नतु देवतादिव्यावृत्त्यर्थमित्यभिप्रेत्य देवानामधिकारमाहाऽऽचार्यो बादरायण इत्यर्थः ।**

ಹಿಂದಿನ ಸೂತ್ರದಲ್ಲಿ 'ಮನುಷ್ಯ' ಎಂಬ ಪದವನ್ನು ಬಳಸಲು ಕಾರಣ ಹೀಗಿದೆ. 'ಯಾವ ಪಶು-ಪಕ್ಷಿಗಳಿಗೆ ವಿಶಿಷ್ಟಬುದ್ಧಿಯು ಇರುವುದಿಲ್ಲವೋ, ಅಂಥಹ ಪ್ರಾಣಿಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ' ಹೀಗೆ ತಿರ್ಯಗ್-ಜಂತುಗಳಿಗೆ ವೇದವಿದ್ಯಾಧಿಕಾರವನ್ನು ನಿರಾಕರಿಸುವುದಕ್ಕಾಗಿಯೇ 'ಮನುಷ್ಯ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಹೊರತು, ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದನ್ನು ಸಮರ್ಥಿಸುವುದಕ್ಕಾಗಿ ಅಲ್ಲ. ಈ ಅಭಿಪ್ರಾಯದಿಂದಲೇ, ದೇವತೆಗಳಿಗೆ ವೇದವಿದ್ಯಾಧಿಕಾರವಿದೆ ಎಂದು ಶ್ರೀಬಾದರಾಯಣರು ಹೇಳಿರುತ್ತಾರೆ.

**तत्वप्रकाशिका – सूत्रं व्याचष्टे ।। तदिति ।। देवानामपि वेदविद्याधिकारो विद्यत एव । विशिष्टबुद्ध्यादेरधिकारोपयोगिनो देवेषु विद्यमानत्वेन तेषामधिकारसम्भवात् ।**

ಸೂತ್ರವನ್ನು ಸ್ವತಃ ಭಾಷ್ಯಕಾರರು ವ್ಯಾಖ್ಯಾನಮಾಡುತ್ತಿದ್ದಾರೆ, 'ತತ್' ಇತ್ಯಾದಿಯಾಗಿ. ದೇವತೆಗಳಿಗೂ ಸಹ ವೇದವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಏಕೆಂದರೆ, ವೇದವಿದ್ಯೆಗೆ ಉಪಯೋಗಿಯಾದ ವಿಶಿಷ್ಟಬುದ್ಧಿಯು ದೇವತೆಗಳಲ್ಲಿ ಇರುತ್ತದೆ. ಆದ್ದರಿಂದ ಅವರಿಗೆ ಅಧಿಕಾರವಿದೆ.

**तत्वप्रकाशिका – नचोक्तप्रकारेण देवानामर्थित्वाभावात् सामर्थ्यविद्वत्ता-सत्त्वेऽप्यधिकाराभाव इति वाच्यम् ।**

ಹಾಗಾದರೆ ಪೂರ್ವಪಕ್ಷದಲ್ಲಿ ಹೇಳಿದಂತೆ ದೇವತೆಗಳಿಗೆ ಅರ್ಥಿತ್ವವೇ ಇರುವುದಿಲ್ಲ. ಅವರಲ್ಲಿ ಸಾಮರ್ಥ್ಯ ಮತ್ತು ವಿದ್ವತ್ತುಗಳು ಇದ್ದರೂ, ಅರ್ಥಿತ್ವವಿಲ್ಲದ ಕಾರಣ ವೇದಾಧಿಕಾರ ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ ಏನು ಉತ್ತರ ಎಂದು ಶಂಕಿಸಬಾರದು.

**तत्वप्रकाशिका – विद्याकर्मभ्यां योग्यमनुष्याणां देवादित्वप्राप्त्यभ्युपगमेन विद्याभिस्तेषां मोक्षसिद्धेरिति भगवान् बादरायणो मन्यत इत्यर्थः ।**

ಏಕೆಂದರೆ ಯೋಗ್ಯನಾದ ಮನುಷ್ಯನಿಗೆ ವಿದ್ಯೆ ಮತ್ತು ಕರ್ಮಾನುಷ್ಠಾನ ಇವುಗಳಿಂದ ದೇವತಾಪದವಿಯು ಪ್ರಾಪ್ತವಾಗುತ್ತದೆ ಎಂದು ಸಿದ್ಧಾಂತದಲ್ಲಿ ಅಂಗೀಕರಿಸಲಾಗಿದೆ. ಅಂತಹ ದೇವತಾಪದವಿಯನ್ನು ಹೊಂದಿರುವ ಮನುಷ್ಯನಿಗೆ ವೇದವಿದ್ಯೆಯಿಂದಲೇ ಮೋಕ್ಷವು ಪ್ರಾಪ್ತವಾಗುತ್ತದೆಂದು ಭಗವಾನ್ ಬಾದರಾಯಣರು ಅಭಿಪ್ರಾಯಪಡುತ್ತಾರೆ. ಇಷ್ಟು ಸೂತ್ರದ ಅಭಿಪ್ರಾಯ.

**तत्वप्रकाशिका – विप्रतिपत्तिसूचनाय बादरायणपदम् । न देवा वेदविद्याधिकारिणोऽमनुष्यत्वात्तिर्यगादिवदित्यत आह – तिर्यगादीनामिति ।।**

ಈ ವಿಷಯದಲ್ಲಿ ಮತಭೇದವಿದೆಯೆಂದು ಸೂಚನೆ ಮಾಡುವುದಕ್ಕಾಗಿ 'ಬಾದರಾಯಣ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

'ದೇವಾಃ ನ ವೇದವಿದ್ಯಾಧಿಕಾರಿಣಃ, ಅಮನುಷ್ಯತ್ವಾತ್, ತಿರ್ಯಗಾದಿವತ್', ತಿರ್ಯಗಾದಿ ಪ್ರಾಣಿಗಳು ಮನುಷ್ಯರಾಗಿಲ್ಲ, ವೇದವಿದ್ಯೆಯಲ್ಲೂ ಸಹ ಅಧಿಕಾರವನ್ನು ಹೊಂದಿಲ್ಲ. ಅದರಂತೆ ದೇವತೆಗಳಲ್ಲೂ ಅಮನುಷ್ಯತ್ವವಿರುವ ಪ್ರಯುಕ್ತ ವೇದವಿದ್ಯೆಯಲ್ಲಿ ಅಧಿಕಾರವು ಕೂಡುವುದಿಲ್ಲ. ಹೀಗೆ, ಅನುಮಾನದಿಂದ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದನ್ನು ಸಾಧಿಸಬಹುದಲ್ಲವೆ? ಎಂಬ ಪ್ರಶ್ನೆಗೆ 'ತಿರ್ಯಗಾದೀನಾಂ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – न तिर्यगादीनाममनुष्यत्वप्रयुक्तोऽधिकाराभावोऽपि तु विशिष्टबुद्ध्यादिराहित्यनिबन्धन एव । तथा च विशिष्टबुद्ध्यादिराहित्यं व्यावर्तमानं पक्षात्स्वव्याप्यमधिकाराभावं च व्यावर्तयतीति भावः ।**

ಪಶುಪಕ್ಷಿಗಳಿಗೆ ಅಮನುಷ್ಯತ್ವಪ್ರಯುಕ್ತವಾಗಿ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ನಾವು ಹೇಳುತ್ತಿಲ್ಲ. ಹೊರತಾಗಿ ವೇದವಿದ್ಯೆಗೆ ಪ್ರಯೋಜಕವಾದ ವಿಶಿಷ್ಟಬುದ್ಧ್ಯಾದಿಗಳು ಅವುಗಳಿಗೆ ಇಲ್ಲದ ಕಾರಣ, ಅಧಿಕಾರವಿಲ್ಲವೆಂದು ಹೇಳುತ್ತಿದ್ದೇವೆ. ಆದ್ದರಿಂದ ವೇದವಿದ್ಯಾಧಿಕಾರವಿಲ್ಲವೆನ್ನಲು ಅಮನುಷ್ಯತ್ವವು ಪ್ರಯೋಜಕವಲ್ಲ. ವಿಶಿಷ್ಟಬುದ್ಧ್ಯಾದಿರಾಹಿತ್ಯವೇ ಪ್ರಯೋಜಕವಾಗಿದೆ.

ಇಂಥಹ ವಿಶಿಷ್ಟಬುದ್ಧಿರಾಹಿತ್ಯವು ದೇವತೆಗಳೆಂಬ ಪಕ್ಷದಿಂದ ವ್ಯಾವೃತ್ತವಾಗಿ ತನ್ನಿಂದ ವ್ಯಾಪ್ಯವಾದ ಅಧಿಕಾರಾಭಾವವನ್ನೂ ಕೂಡ ವ್ಯಾವೃತ್ತಿಮಾಡುತ್ತದೆ. ಅಂದರೆ, ಸಾಧ್ಯದ ಜೊತೆಗೆ ವ್ಯಾಪ್ತಿಯನ್ನು ಹೊಂದಿರುವ ವಿಶಿಷ್ಟಬುದ್ಧಿರಾಹಿತ್ಯವೆಂಬ ಉಪಾಧಿಯು ಪಕ್ಷದಲ್ಲಿಲ್ಲದ ಕಾರಣ, ಪಕ್ಷದಲ್ಲಿ ಸಾಧ್ಯವನ್ನೂ ಸಹ ಇಲ್ಲವೆಂದೇ ಸಾಧನೆ ಮಾಡುತ್ತದೆ. ಆದ್ದರಿಂದ ದೇವತೆಗಳಿಗೆ ವೇದಾಧಿಕಾರವಿದೆಯೆಂದೇ ಸಿದ್ಧವಾಗುತ್ತದೆ.

ದೇವತಾಧಿಕರಣ (೧-೩-೮)

ಎಂಬ ವಚನದಂತೆ ಪ್ರತಿಕಲ್ಪಗಳಲ್ಲಿಯೂ ಒಂದೇ ವಿಧವಾದ ದೇವತೆಗಳಿರುತ್ತಾರೆಂದು ಸ್ಪಷ್ಟವಾಗುತ್ತದೆ. ಇದನ್ನೇ ದ್ವಾದಶಸ್ತೋತ್ರದಲ್ಲಿ ಶ್ರೀಮದಾಚಾರ್ಯರು ಹೀಗೆ ಹೇಳಿದ್ದಾರೆ -

ಸ ಹಿ ವಿಶ್ವಸೃಜೋ ವಿಭುಶಂಭುಪುರಂದರ ಸೂರ್ಯಮುಖಾನಪರಾಮರಾನ್ ।
ಸೃಜತೀಡ್ಯತಮೋಽವತಿ ಹಂತಿ ನಿಜಂ ಪದಮಾಪಯತಿ ಪ್ರಾಣತಾನ್ ಸುಧಿಯಾ ॥

ಹಿಂದಿನ ಹಾಗೂ ಮುಂದಿನ ಕಾಲದಲ್ಲಿ ದೇವತೆಗಳ ಆಕಾರ ಮತ್ತು ಕೃತಿಗಳು ಒಂದೇ ಬಗೆಯಲ್ಲಿರುತ್ತವೆನ್ನಲು ಜ್ಞಾನಿಗಳ ದಿವ್ಯದೃಷ್ಟಿಯಿಂದಲೂ ಸಿದ್ಧವಾಗಿದೆ. ಉಳಿದವರಿಗೆ 'ಉಪರಿತನ ಕಾಲಃ ದೇವಾದಿಮಾನ್ ಕಾಲತ್ವಾತ್ ಸಂಮತವತ್' ಎಂಬ ಅನುಮಾನದಿಂದ ಸಿದ್ಧವಾಗುತ್ತದೆ. ಪ್ರಳಯಕಾಲವು ಪಕ್ಷೈಕದೇಶವಾದ್ದರಿಂದ ಅಲ್ಲಿ ಕಾಲತ್ವಹೇತುವಿಗೆ ವ್ಯಭಿಚಾರ ಬರುವುದಿಲ್ಲ. ಯಾವರೀತಿಯಾಗಿ ಪರ್ವತದ ಏಕದೇಶದಲ್ಲಿ ಅಗ್ನಿಯಿಲ್ಲದಿದ್ದರೂ ಅಲ್ಲಿ ಧೂಮವೆಂಬ ಹೇತು ಇರುತ್ತದೆಂದು ವ್ಯಭಿಚಾರವನ್ನು ಯಾರೂ ಹೇಳುವುದಿಲ್ಲ.

**तत्वप्रकाशिका –**

**।। ॐ शब्द इति चेन्नातः प्रभवात्प्रत्यक्षानुमानाभ्याम् ॐ ।।**

**पुनरुक्तमाक्षिप्य समादधत्सूत्रं पठित्वाऽऽक्षेपांशं विवृणोति – शब्द इति ।।**

ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂಬ ಹಿಂದೆ ಹೇಳಿದ ಪ್ರಮೇಯದ ಬಗ್ಗೆ ಆಕ್ಷೇಪ ಮಾಡಿ ಸಮಾಧಾನ ನೀಡುವ ಸೂತ್ರವನ್ನು ಪಠಿಸಿ, ಸೂತ್ರದಲ್ಲಿರುವ ಆಕ್ಷೇಪಭಾಗವನ್ನು ವಿವರಿಸುತ್ತಿದ್ದಾರೆ - 'ಶಬ್ದ' ಇತ್ಯಾದಿ ಭಾಷ್ಯದಿಂದ.

**तत्वप्रकाशिका – अत्रापि विरोधपदाकर्षणम् । यद्देवानामधिकारसिद्ध्यर्थमाद्यन्तवत्त्वमुक्तम् । न तद्युक्तम् । देवानामाद्यन्तवत्त्वे वेदाप्रामाण्याख्य-विरोधापातात् ।**

ಹಿಂದಿನ ಸೂತ್ರದಲ್ಲಿರುವ 'ವಿರೋಧ' ಎಂಬ ಪದವನ್ನು ಈ ಸೂತ್ರದಲ್ಲಿಯೂ ಅನುವೃತ್ತಿ ಮಾಡಿಕೊಳ್ಳಬೇಕು. ದೇವತೆಗಳಿಗೆ ವೇದವಿದ್ಯಾಧಿಕಾರವು ಇರುತ್ತದೆಂಬುದನ್ನು ಸಮರ್ಥಿಸಲು ಉತ್ಪತ್ತಿ ಹಾಗೂ ನಾಶಗಳನ್ನು ಅವರಿಗೆ ಸಮರ್ಥಿಸಲಾಯಿತು. ಇದು ಸರಿಯಲ್ಲ. ಏಕೆಂದರೆ, ಒಂದು ವೇಳೆ ದೇವತೆಗಳಿಗೆ ಉತ್ಪತ್ತಿ ಮತ್ತು ನಾಶಗಳನ್ನು ಅಂಗೀಕಾರ ಮಾಡಿದರೆ, ವೇದಪ್ರಾಮಾಣ್ಯಕ್ಕೆ ವಿರೋಧ ಬರುತ್ತದೆ.

**तत्वप्रकाशिका – वेदस्य नित्यत्वादनित्यदेवानां तद्वाच्यत्वात् । वाच्यहीनाया वाचः प्रामाण्यासम्भवात् ।**

ವೇದವು ನಿತ್ಯವಾಗಿದೆ. ದೇವತೆಗಳು ಅನಿತ್ಯರಾಗಿದ್ದಾರೆ. ನಿತ್ಯವಾದ ವೇದದಿಂದ, ಅನಿತ್ಯರಾದ ದೇವತೆಗಳು ವಾಚ್ಯರಾಗಲು ಸಾಧ್ಯವಿಲ್ಲ. ಏಕೆಂದರೆ, ಯಾವ ಕಾಲದಲ್ಲಿ ದೇವತೆಗಳು ಇರುವುದಿಲ್ಲವೋ, ಆ ಕಾಲದಲ್ಲಿ ಆ ಶಬ್ದಕ್ಕೆ ವಾಚ್ಯವಾದ ಪದಾರ್ಥವೇ ಇಲ್ಲವೆಂದಂತಾಗುತ್ತದೆ. ವಾಚ್ಯಾರ್ಥಶೂನ್ಯವಾದ ಶಬ್ದಕ್ಕೆ ಪ್ರಾಮಾಣ್ಯವೇ ಸಂಭವಿಸುವುದಿಲ್ಲ.

**तत्वप्रकाशिका – यावता तदेव वाक्यस्याप्रामाण्यम् ।**

ವಾಚ್ಯವಾದ ಪದಾರ್ಥವಿಲ್ಲದಿದ್ದಾಗ ಮಾತ್ರ ವಾಕ್ಯಕ್ಕೆ ಅಪ್ರಾಮಾಣ್ಯವು ಬರುತ್ತದೆ. ವಾಚ್ಯವಾದ ಪದಾರ್ಥವಿಲ್ಲದಾಗಲೇ ವಾಕ್ಯಕ್ಕೆ ಅಪ್ರಾಮಾಣ್ಯದೋಷವು ಬರುತ್ತದೆ. ಅಂದರೆ, ಅಪ್ರಾಮಾಣ್ಯಕ್ಕೆ ಕಾರಣವಾದದ್ದು ವಾಚ್ಯವಾದ ಪದಾರ್ಥವಿಲ್ಲದಿರುವಿಕೆ. ಈಗ ದೇವತೆಗಳೆಂಬ ವಾಚ್ಯವಾದ ಪದಾರ್ಥವಿಲ್ಲದ ಕಾರಣ, ತತ್ಪ್ರತಿಪಾದಕವಾದ ಶ್ರುತಿಗಳಿಗೆ ಅಪ್ರಾಮಾಣ್ಯದೋಷ ಸಂಭವಿಸುತ್ತದೆ.

**तत्वप्रकाशिका – वेदस्य नित्यत्वमेव कुत इति चेत् ।**

ವೇದವೂ ಕೂಡ ಅನಿತ್ಯವೇ ಆಗಿರಬಹುದು. ನಿತ್ಯವೇ ಆಗಿದೆ ಎಂದು ಹೇಳಲು ಏನು ಪ್ರಮಾಣ? ಹೀಗೆ ಪ್ರಶ್ನಿಸಬಾರದು.

**तत्वप्रकाशिका – 'वाचा विरूप नित्यया' इत्यादिश्रुतेः ।**

ಹೀಗೆ ಪ್ರಶ್ನಿಸಬಾರದು. 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯು ವೇದವಾಕ್ಯಗಳೆಲ್ಲವೂ ನಿತ್ಯವಾಗಿವೆ ಎಂದು ಸಮರ್ಥಿಸುತ್ತಿದೆ.

**तत्वप्रकाशिका – नच वाच्यमनित्य एव वेदो नित्य इत्युपचारमात्रमिति ।**

ವೇದವು ಅನಿತ್ಯವೇ ಆಗಿದೆ. ಶ್ರುತಿಯಲ್ಲಿ ಹೇಳಲ್ಪಟ್ಟ ನಿತ್ಯತ್ವವು ಕೇವಲ ಔಪಚಾರಿಕ. ಅಂದರೆ, ಬಹಳ ಕಾಲದ ತನಕ ವೇದವು ಇರುವುದರಿಂದ ಅದನ್ನು ನಿತ್ಯವೆಂದು ಹೇಳಿದೆ ಹೊರತು, ನಾಶವೇ ಇಲ್ಲವೆಂಬ ಅಭಿಪ್ರಾಯದಿಂದ 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯು ಹೊರಟಿಲ್ಲ. ಹೀಗೆ ಶಂಕಿಸಬಾರದು.

**तत्वप्रकाशिका – वेदानित्यत्वे प्रामाण्याभावापत्तेः ।**

ವೇದವು ಅನಿತ್ಯವೆಂದು ಹೇಳಿದರೆ, ಅಪ್ರಾಮಾಣ್ಯದೋಷವು ಬರುತ್ತದೆ. ಏಕೆಂದರೆ, ಪುರುಷಕರ್ತೃಕವಾದ ಪೌರುಷೇಯ ಗ್ರಂಥಗಳೆಲ್ಲವೂ ಪುರುಷರ ಅಜ್ಞಾನಾದಿದೋಷನಿಮಿತ್ತ-ವಾಗಿರುವುದರಿಂದ ಅಪ್ರಮಾಣವಾಗುತ್ತವೆ.

**तत्वप्रकाशिका – आप्तमूलत्वेन प्रामाण्यमिति चेन्न ।**

ಆಪ್ತರಿಂದ ರಚಿತವಾದ ವಾಕ್ಯದೊಳಗೆ ಪ್ರಾಮಾಣ್ಯವಿರುವ ಕಾರಣ, ವೇದವು ಆಪ್ತಿಮೂಲಕವಾಗಿರುವುದರಿಂದ ಪ್ರಾಮಾಣ್ಯವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – कर्तृसार्वज्ञादौ मानाभावेनाप्त्यनिश्चयात् ।**

ವೇದವನ್ನು ರಚನೆ ಮಾಡಿದ ವ್ಯಕ್ತಿಯಲ್ಲಿ ಸರ್ವಜ್ಞತ್ವವನ್ನು ಒಪ್ಪಲು ಯಾವುದೇ ಪ್ರಮಾಣವಿಲ್ಲ. ಆದ್ದರಿಂದ ಅವರಿಗೆ ಆಪ್ತತ್ವವು ಕೂಡ ನಿಶ್ಚಯವಾಗುವುದಿಲ್ಲ.

**तत्वप्रकाशिका – विवादपदं कस्यचित्प्रत्यक्षं प्रमेयत्वादिति सार्वज्ञे मानमिति चेन्न ।**

'ವಿವಾದಪದಂ ಕಸ್ಯಚಿತ್ ಪ್ರತ್ಯಕ್ಷಮ್, ಪ್ರಮೇಯತ್ವಾತ್'. ಯಥಾರ್ಥಜ್ಞಾನಕ್ಕೆ ವಿಷಯವಾದ್ದರಿಂದ, ವಿವಾದ ವಿಷಯವಾದ ಈ ಜಗತ್ತು ಯಾರಾದರೊಬ್ಬರ ಪ್ರತ್ಯಕ್ಷಕ್ಕೆ ವಿಷಯವಾಗಿದೆ ಎಂದು ಸಾರ್ವಜ್ಞವನ್ನು ಕರ್ತೃವಿನಲ್ಲಿ ಅನುಮಾನದಿಂದ ಸಾಧಿಸಬಹುದಲ್ಲವೆ? ಎಂದು ಪ್ರಶ್ನಿಸಬಾರದು.

**तत्वप्रकाशिका – प्रमेयत्वेन विप्रतिपन्नधर्मान्तरसाधनापातात् ।**

ಪ್ರಮೇಯತ್ವಹೇತುವಿನಿಂದ ವಿಪ್ರತಿಪನ್ನವಾದ ಸ್ಥಳದಲ್ಲಿ ಮತ್ತೊಂದು ಧರ್ಮವನ್ನು ಕೂಡ ಸಾಧನೆ ಮಾಡಲು ಬರುತ್ತದೆ. ಅಂದರೆ, ಅನಿತ್ಯವಾದ ಜ್ಞಾನವುಳ್ಳವನೆಂದು ಕೂಡ ಅನುಮಾನ ಮಾಡಲು ಬರುತ್ತದೆಂದು ಅಭಿಪ್ರಾಯ.

**तत्वप्रकाशिका – किञ्चेदं प्रमेयत्वं न तावत्सामान्यं केवलान्वयिधर्मत्वात् ।**

ಮತ್ತು ಪ್ರಮೇಯತ್ವವೆಂಬ ಹೇತು ಜಾತಿರೂಪವಾಗಿದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಅದು ಕೇವಲಾನ್ವಯಿಯಾದ ಧರ್ಮರೂಪವಾಗಿದೆ. ಅಂದರೆ, ಯಾವ ಧರ್ಮಕ್ಕೆ ಅಭಾವಪ್ರತಿಯೋಗಿತ್ವವನ್ನು ತೋರಿಸಲು ಬರುವುದಿಲ್ಲವೋ, ಅಂತಹ ರೂಪವುಳ್ಳದ್ದಾಗಿದೆ.

**तत्वप्रकाशिका – उपाधित्वेऽपि क्वचिदन्तर्भावस्यापेक्षितत्वात् ।**

ಇನ್ನು ಹೇತುರೂಪವಾದ ಪ್ರಮೇಯತ್ವವನ್ನು ಜಾತಿರೂಪವಲ್ಲ, ಉಪಾಧಿರೂಪವಾಗಿದೆ ಎಂದು ಹೇಳಬೇಕು. ಹಾಗೆ ಹೇಳಿದರೆ, ತಾರ್ಕಿಕರು ಹೇಳುವ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಈ ಏಳು ಪದಾರ್ಥಗಳಲ್ಲಿ ಎಲ್ಲಾದರೂ ಅಂತರ್ಭಾವ ಮಾಡಬೇಕಾಗಿ ಬರುತ್ತದೆ.

**तत्वप्रकाशिका – न तावद्द्रव्यम् । निर्गुणत्वादस्वतन्त्रत्वाच्च । नापि गुरकर्मणी । गुणादावपि वृत्तेः । न समवायः । असम्बन्धत्वात् ।**

ಪ್ರಮೇಯತ್ವವು ದ್ರವ್ಯರೂಪವಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ದ್ರವ್ಯವು ಗುಣವುಳ್ಳದ್ದಾಗಿದೆ, ಆದರೆ ಪ್ರಮೇಯತ್ವದಲ್ಲಿ ಯಾವುದೇ ಗುಣಗಳಿರುವುದಿಲ್ಲ. ಮತ್ತು ಪ್ರಮಾಪರತಂತ್ರವಾಗಿದೆ. ಇದರಂತೆ ಗುಣ ಮತ್ತು ಕರ್ಮಗಳಲ್ಲಿಯೂ ಪ್ರಮೇಯತ್ವವು ಅಂತರ್ಭಾವ ಹೊಂದುವುದಿಲ್ಲ. ಏಕೆಂದರೆ, ಪ್ರಮೇಯತ್ವವು ಗುಣದಲ್ಲೂ ಇರುತ್ತದೆ. ಗುಣ-ಕರ್ಮಗಳು ಗುಣದಲ್ಲಿರಲು ಸಾಧ್ಯವಿಲ್ಲ. ಸಮವಾಯದಲ್ಲೂ ಕೂಡ ಅಂತರ್ಭಾವ ಹೊಂದುವುದಿಲ್ಲ. ಸಮವಾಯವು ಸಂಬಂಧರೂಪವಾಗಿದೆ, ಪ್ರಮೇಯತ್ವವು ಸಂಬಂಧರೂಪವಾಗಿಲ್ಲ.

**तत्वप्रकाशिका – नच विशेषोऽनित्येऽपि वृत्तेः । न चाभावोऽप्रतियोगिसापेक्षत्वात् ।**

ವಿಶೇಷದಲ್ಲೂ ಪ್ರಮೇಯತ್ವವು ಅಂತರ್ಭಾವ ಹೊಂದುವುದಿಲ್ಲ. ವಿಶೇಷವೂ ನಿತ್ಯಪದಾರ್ಥದಲ್ಲಷ್ಟೇ ಇರುತ್ತದೆ, ಆದರೆ ಪ್ರಮೇಯತ್ವವು ಅನಿತ್ಯಪದಾರ್ಥಗಳಲ್ಲೂ ಇದೆ. ಅಭಾವದಲ್ಲೂ ಸಹ ಅಂತರ್ಭಾವ ಹೊಂದುವುದಿಲ್ಲ. ಏಕೆಂದರೆ, ಅಭಾವವು ಪ್ರತಿಯೋಗಿಯ ಅಪೇಕ್ಷೆಯನ್ನು ಹೊಂದಿರುತ್ತದೆ, ಪ್ರಮೇಯತ್ವವು ಪ್ರತಿಯೋಗಿಯನ್ನು ಅಪೇಕ್ಷಿಸಿಲ್ಲ.

**तत्वप्रकाशिका – प्रमेयस्य भाव एव प्रमेयत्वं नतु ततोऽतिरिक्तमिति चेत् ।**

ಪ್ರಮೇಯದ ಭಾವವೇ ಪ್ರಮೇಯತ್ವ ಹೊರತು, ಬೇರೆಯಲ್ಲ. ಅಂದರೆ, ದ್ರವ್ಯಗುಣಾದಿಗಳ ಸ್ವರೂಪವೆಂದು ಹೇಳುವುದೇ ಇಲ್ಲ ಎಂದು ಪ್ರಶ್ನಿಸಿದರೆ,

**तत्वप्रकाशिका – सत्यम् । भावभवित्रोर्भेदे पुनरुक्तानतिवृत्तेः ।**

ಹಾಗಾದರೆ, ಪ್ರಮಾ ಮತ್ತು ಪ್ರಮೇಯತ್ವ, ಇವೆರಡೂ ಭಿನ್ನವೋ, ಅಭಿನ್ನವೋ? ಭಿನ್ನವೆಂದರೆ ಇದುವರೆಗೂ ಹೇಳಿದಂತೆ ಏಳು ಪದಾರ್ಥಗಳಲ್ಲಿ ಪ್ರಮೇಯತ್ವವು ಅಂತರ್ಭಾವವನ್ನು ಹೊಂದಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಆ ಎಲ್ಲ ದೋಷಗಳಿಂದ ಬಿಡುಗಡೆಯಾಗಲು ಸಾಧ್ಯವಿಲ್ಲ.

**तत्वप्रकाशिका – भावस्य भवितुः पृथगभावे तच्छब्दयोः पर्यायतापातात् ।**

ಇನ್ನು ಪ್ರಮಾ ಮತ್ತು ಪ್ರಮೇಯತ್ವ ಇವೆರಡೂ ಅಭಿನ್ನವೆಂದು ಹೇಳಿದರೆ, ಪ್ರಮೇಯ ಮತ್ತು ಪ್ರಮೇಯತ್ವಗಳೆರಡೂ ಪರ್ಯಾಯಶಬ್ದಗಳಾಗುತ್ತವೆ.

**तत्वप्रकाशिका – एवं परत्वापरत्वादिगुणानां च दत्तजाञ्जलिता स्यात् ।**

ಪ್ರಮೇಯದ ಭಾವವನ್ನೇ ಪ್ರಮೇಯತ್ವವೆಂದು ಹೇಳುವುದಾದರೆ, ಪರತ್ವ-ಅಪರತ್ವ-ಗುರುತ್ವ-ದ್ರವತ್ವ ಮೊದಲಾದವುಗಳೂ ಪ್ರತ್ಯೇಕ ಗುಣವೆಂಬುದಕ್ಕೆ ತಿಲಾಂಜಲಿ ನೀಡಬೇಕಾಗುತ್ತದೆ. ಏಕೆಂದರೆ,

'ಪರಸ್ಯ ಭಾವಃ ಪರತ್ವಮ್' 'ಅಪರಸ್ಯ ಭಾವಃ ಅಪರತ್ವಮ್' ಇತ್ಯಾದಿಯಾಗಿಯೇ ಹೇಳಲು ಸಾಧ್ಯವಿದೆ.

**तत्वप्रकाशिका – प्रमातद्विषयतत्सम्बन्धेष्वन्तर्भावोऽस्तीति चेन्न ।**

ಪ್ರಮಾ, ಪ್ರಮಾವಿಷಯ, ಪ್ರಮಾ ಹಾಗೂ ವಿಷಯಗಳ ಸಂಬಂಧ, ಈ ಮೂರರಲ್ಲಿ ಪ್ರಮೇಯತ್ವವು ಅಂತರ್ಭಾವ ಹೊಂದುತ್ತದೆ ಎಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – प्रमाप्रमेययोः सम्बन्धस्यैव दुर्निरूपत्वात् ।**

ಏಕೆಂದರೆ, ಪ್ರಮಾ ಹಾಗೂ ಪ್ರಮೇಯ ಇವೆರಡರಲ್ಲಿ ಇರುವಂತಹ ಸಂಬಂಧವನ್ನೇ ಹೇಳಲು ಸಾಧ್ಯವಿಲ್ಲ.

**तत्वप्रकाशिका – न ह्यात्मगुणस्यान्येन समवायः संयोगो वा सम्भवति । विषयविषयिभाव इति चेन्न ।**

'ಪ್ರಮಾ' ಎಂಬುದು ಆತ್ಮನ ಗುಣವಾಗಿದೆ. ಇದಕ್ಕೂ ಪ್ರಮಾಕ್ಕೆ ವಿಷಯವಾದ ಪ್ರಮೇಯಕ್ಕೂ ಸಮವಾಯ ಅಥವಾ ಸಂಯೋಗ ಸಂಬಂಧವನ್ನು ಹೇಳಲು ಬರುವುದಿಲ್ಲ. ಒಂದುವೇಳೆ ಹೇಳುವುದಾದರೆ - ವಿಷಯ-ವಿಷಯಿಭಾವ ಸಂಬಂಧವನ್ನು ಹೇಳಬಹುದು. ಆದರೆ,

**तत्वप्रकाशिका – तस्याप्यन्तर्भाव्यत्वात् । अन्तर्भावस्य चोक्तदोषाङ्गनाजङ्गालत्वात् ।**

ಆದೂ ಸಹ ದ್ರವ್ಯಾದಿ ಸಪ್ತ ಪದಾರ್ಥಗಳಲ್ಲಿ ಅಂತರ್ಭಾವವನ್ನು ಹೊಂದಬೇಕು. ಏಕೆಂದರೆ, ವಿಷಯ-ವಿಷಯಿಭಾವ ಸಂಬಂಧವು ಕೇವಲ ಸಪ್ತ ಪದಾರ್ಥಗಳಲ್ಲಿರುವುದಷ್ಟೇ ಕಂಡಿದೆ. ಆದರೆ, ಪ್ರಮೇಯತ್ವವು ಈ ಹಿಂದೆ ಹೇಳಿದಂತೆ, ದ್ರವ್ಯಾದಿ ಸಪ್ತ ಪದಾರ್ಥಗಳಲ್ಲಿ ಅಂತರ್ಭೂತವಾಗುವುದಿಲ್ಲ. ಹಾಗೆ ಅಂತರ್ಭಾವ ಮಾಡಲು ಹೊರಟರೆ, ಹಿಂದಿನ ದೋಷಗಳೆಲ್ಲವೂ ಪುನಃ ಅಂಟಿಕೊಳ್ಳುತ್ತವೆ.

**तत्वप्रकाशिका – एषैव दिगन्यसमये धर्मान्तरेऽपीति । प्रमेयत्वानिर्वचनान्न तेन सार्वज्ञसिद्धिः ।**

ಇದೇ ಮಾರ್ಗದಲ್ಲಿ ಬೇರೆ ಸಿದ್ಧಾಂತಿಗಳು ಹೇಳುವ ಅಭಿಧೇಯತ್ವ, ಜ್ಞೇಯತ್ವ ಮೊದಲಾದ ಧರ್ಮಗಳ ವಿಷಯದಲ್ಲೂ ದೋಷವನ್ನು ತಿಳಿಯಬೇಕು. ಪ್ರಮೇಯತ್ವದ ನಿರ್ವಚನವು ಸಾಧ್ಯವಿಲ್ಲದ ಕಾರಣದಿಂದಲೇ ಅಂತಹ ಹೇತುವಿನಿಂದ ಸರ್ವಜ್ಞತ್ವಧರ್ಮವನ್ನೂ ಸಾಧಿಸಲು ಬರುವುದಿಲ್ಲ.

**तत्वप्रकाशिका – विप्रतिपन्नं सकर्तृकं कार्यत्वात् घटवदित्यनुमानेन जगत्कर्तरि सिद्धे तस्य सार्वज्ञादिसिद्धिरिति चेन्न ।**

ವಿಪ್ರತಿಪನ್ನವಾದ ಜಗತ್ತು ಸಕರ್ತೃಕವಾಗಿದೆ. ಕಾರ್ಯವಾದ್ದರಿಂದ, ಘಟದಂತೆ. ಘಟವು ಹೇಗೆ ಕಾರ್ಯವಾದ್ದರಿಂದ ಕುಲಾಲನೆಂಬ ಕರ್ತೃಸಹಿತವಾಗಿದೆಯೋ, ಅದರಂತೆ ಜಗತ್ತು ಕೂಡ ಕಾರ್ಯವಾಗಿದ್ದರಿಂದ ಕರ್ತೃವಿನಿಂತ ಸಹಿತವಾಗಿರಬೇಕು. ಹೀಗೆ ಅನುಮಾನದಿಂದ ಒಬ್ಬ ಜಗತ್ಕರ್ತೃವು ಸಿದ್ಧನಾಗುತ್ತಾನೆ. ಅಂಥಹ ಜಗತ್ಕರ್ತೃವಿಗೆ ಸಾರ್ವಜ್ಞವು ಶತಃಸಿದ್ಧವಾಗುತ್ತದೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – शरीरिजन्यत्वोपाधेः । शरीर्यजन्यत्वेन सत्प्रतिपक्षत्वाच्च ।**

ಈ ಅನುಮಾನಕ್ಕೆ ಶರೀರಿಜನ್ಯತ್ವವೆಂಬ ಉಪಾಧಿದೋಷವಿದೆ. ಅಂದರೆ, ಸಕರ್ತೃತ್ವಕ್ಕೆ ಪ್ರಯೋಜಕವಾದದ್ದು ಶರೀರಿಜನ್ಯತ್ವವೇ ಹೊರತು, ಕಾರ್ಯತ್ವವಲ್ಲ. ಜಗತ್ತಿನಲ್ಲಿ ಶರೀರಿಜನ್ಯತ್ವವಿಲ್ಲದ ಕಾರಣ, ಸಕರ್ತೃಕತ್ವವಿಲ್ಲವೆಂದೇ ಸಾಧಿಸಬಹುದು. ಆದ್ದರಿಂದ 'ವಿಪ್ರತಿಪನ್ನಂ ವಿಕರ್ತೃಕಂ ಶರೀರಿಅಜನ್ಯತ್ವಾತ್' ಎಂದು ಸತ್ಪ್ರತಿಪಕ್ಷಾನುಮಾನವನ್ನು ಮಾಡಬಹುದಾದ್ದರಿಂದ, ನಿಮ್ಮ ಅನುಮಾನವು ಸತ್ಪ್ರತಿಪಕ್ಷಿತವಾಗಿದೆ.

**तत्वप्रकाशिका – शरीरिविशेषणं व्यर्थमिति चेन्न । उपाधौ पक्षव्यावत्त्यर्थत्वात् । प्रतिपक्षेऽसिद्धिपरिहारार्थत्वात् ।**

ಶರೀರಿಜನ್ಯತ್ವವೆಂಬ ಉಪಾಧಿಯಲ್ಲಿ ಶರೀರಿಪದವು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ, ಶರೀರಿಜನ್ಯತ್ವವೆಂಬ ಉಪಾಧಿಯಲ್ಲಿರುವ ಶರೀರಿಪದವು ಪಕ್ಷದಿಂದ ಉಪಾಧಿಯು ವ್ಯಾವೃತ್ತವಾಗಿದೆ ಎಂದು ತಿಳಿಸಲು ಸಾರ್ಥಕವಾಗಿದೆ. ಸತ್ಪ್ರತಿಪಕ್ಷಾನುಮಾನದಲ್ಲಿ ಅಸಿದ್ಧಿಪರಿಹಾರವನ್ನು ಮಾಡಲು ಸಾರ್ಥಕವಾಗಿದೆ. ಅಂದರೆ, 'ವಿಮತಂ ಅಕರ್ತೃಕಂ ಶರೀರಿಅಜನ್ಯತ್ವಾತ್' ಎಂಬ 'ಸತ್ಪ್ರತಿಪಕ್ಷಾನುಮಾನದಲ್ಲಿ ಶರೀರಿ' ಎಂಬ ವಿಶೇಷಣವು ವ್ಯರ್ಥವಾದಾಗ 'ಅಜನ್ಯತ್ವಾತ್' ಎಂದಷ್ಟೇ ಹೇತು ಹೇಳಿದಂತಾಗುತ್ತದೆ. ಇಂಥಹ ಹೇತು ವಿಶ್ವವೆಂಬ ಪಕ್ಷದಲ್ಲಿಲ್ಲದ ಕಾರಣ, ಅಸಿದ್ಧಿ ದೋಷ ಬರುತ್ತದೆ. ಅದಕ್ಕೋಸ್ಕರ 'ಶರೀರಿ' ಎಂಬ ವಿಶೇಷಣವನ್ನು ನೀಡಬೇಕು. ಅಶರೀರಿಯಾದ ಪರಮಾತ್ಮನಿಂದ ಜಗತ್ತು ಸೃಷ್ಟವಾದ್ದರಿಂದ ಶರೀರಿಅಜನ್ಯತ್ವವನ್ನು ಹೇಳಲು ಬರುತ್ತದೆ.

**तत्वप्रकाशिका – पक्षव्यावृत्त्यर्थविशेषणवतोऽप्युपाधित्वे पक्षेतरत्वस्याप्यापद्यते तदिति चेत्का नो हानिः ।**

ಪಕ್ಷದಿಂದ ವ್ಯಾವೃತ್ತಿಮಾಡುವುದಕ್ಕಾಗಿ ಉಪಾಧಿಯಲ್ಲಿ 'ಶರೀರಿ' ಎಂಬ ವಿಶೇಷಣವನ್ನು ನೀಡಬೇಕೆಂದು ಹೇಳುವುದಾದರೆ ಪಕ್ಷೇತರತ್ವವನ್ನು ಉಪಾಧಿಯೆಂದಂತಾಯಿತು. ಇಂತಹ ಉಪಾಧಿಯನ್ನು ಸಕಲಾನುಮಾನ-

ಗಳಲ್ಲಿಯೂ ಹೇಳಬಹುದಲ್ಲವೇ? ಎಂದರೆ, ಹೀಗೆ ಪಕ್ಷೇತರತ್ವಕ್ಕೆ ಉಪಾಧಿಯನ್ನು ಆರೋಪಿಸಿದರೆ ನಮಗೇನೂ ಹಾನಿಯಿಲ್ಲ.

**तत्वप्रकाशिका – पर्वतेतरत्वादीनामपि व्याप्तिरस्ति चेत् अनुमानोपजीव्येन बाधादव्याप्तौ स्वयं दुष्टत्वात् ।**

ಏಕೆಂದರೆ, 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಅನುಮಾನದಲ್ಲಿ ಪರ್ವತೇತರತ್ವವೂ ಕೂಡ ಉಪಾಧಿಯಾಗುತ್ತದೆ ಎಂದು ನೀವು ಆಕ್ಷೇಪಿಸಬೇಕು. ಆದರೆ, 'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಅನುಮಾನದಲ್ಲಿ ಪರ್ವತೇತರತ್ವವನ್ನು ಉಪಾಧಿಯೆಂದು ಹೇಳಿದರೆ, ಉಪಾಧಿ ಮತ್ತು ಸಾಧ್ಯಗಳಿಗೆ ವ್ಯಾಪ್ತಿಯಿದ್ದಾಗ ಏನೂ ದೋಷವಿಲ್ಲ. ಒಂದು ವೇಳೆ, ಅನುಮಾನೋಪಜೀವ್ಯಪ್ರಮಾಣದಿಂದ ಸಾಧ್ಯ ಮತ್ತು ಉಪಾಧಿ ಇವುಗಳ ವ್ಯಾಪ್ತಿಗೆ ಬಾಧವಿದ್ದರೆ, ಆವಾಗ ಉಪಾಧಿಯು ಸ್ವತಃ ದುಷ್ಟವಾಗುವುದರಿಂದ, ಆವಾಗಲೂ ನಮಗೆ ಅನಿಷ್ಟವಿಲ್ಲ.

**तत्वप्रकाशिका – नचासिद्धिपरिहारार्थं विशेषणासम्भव इति राज्ञामाज्ञाऽस्ति।**

ಇನ್ನು ಸತ್ಪ್ರತಿಪಕ್ಷಾನುಮಾನದಲ್ಲಿ ಅಸಿದ್ಧಿಯೆಂಬ ದೋಷವನ್ನು ಪರಿಹಾರ ಮಾಡಲು, 'ಅಜನ್ಯ' ಎಂಬ ವಿಶೇಷಣವನ್ನು ನೀಡುವುದು ಸರಿಯಲ್ಲ. ವ್ಯಭಿಚಾರದೋಷದ ನಿವೃತ್ತಿಗಾಗಿ ಮಾತ್ರ ಹೇತುವಿನಲ್ಲಿ ವಿಶೇಷಣವನ್ನು ನೀಡುವುದು ಸರ್ವಸಮ್ಮತವಾಗಿದೆ. ಕೇವಲ ಅಸಿದ್ಧಿಪರಿಹಾರಕ್ಕಾಗಿ ವಿಶೇಷಣವ ನೀಡಬೇಕೆಂದು ಯಾವ ರಾಜಾಜ್ಞೆಯೂ ಇಲ್ಲ ಎಂದು.

**तत्वप्रकाशिका – तथत्वे व्यभिचारनिवृत्त्यर्थमपि न प्रयोक्तव्यम् ।**

ಹಾಗಾದಲ್ಲಿ ವ್ಯಭಿಚಾರದೋಷದ ಪರಿಹಾರಕ್ಕಾಗಿಯೂ ಹೇತುವಿನಲ್ಲಿ ವಿಶೇಷಣವನ್ನು ಕೊಡಬಾರದೆಂದು ನಾವು ಹೇಳುತ್ತೇವೆ.

**तत्वप्रकाशिका – व्याप्तिवत्व पक्षधर्मताया आवश्यकत्वात् ।**

ಏಕೆಂದರೆ ವ್ಯಾಪ್ತಿಯು ಅನುಮಾನಕ್ಕೆ ಸಾಧಕವಾದ್ದರಿಂದ, ವ್ಯಭಿಚಾರಿಯಾದ ಹೇತುವಿಗೆ ವಿಶೇಷಣವನ್ನು ನೀಡಿ ದೋಷವನ್ನು ಪರಿಹರಿಸುವುದು ನ್ಯಾಯವಾಗಿದೆ ಎಂದು ಉತ್ತರಿಸಿದರೆ, ಪಕ್ಷಧರ್ಮತಾ ಎಂಬುವುದು ಕೂಡ ಅನುಮಾನಕ್ಕೆ ಸಾಧಕವಾಗಿರುವುದರಿಂದ, ಅದರ ಸಮರ್ಥನೆಗಾಗಿ ಹೇತುವಿಗೆ ವಿಶೇಷಣ ನೀಡುವುದು ಯುಕ್ತವೇ ಆಗಿದೆ. ಆದ್ದರಿಂದ ಅಸಿದ್ಧಿಪರಿಹಾರಕ್ಕಾಗಿ ವಿಶೇಷಣ ನೀಡುವುದು ತಪ್ಪಾಗುವುದಿಲ್ಲ.

**तत्वप्रकाशिका – सकर्तृकत्वे कार्यत्वमेव प्रयोजकम् । शरीरमपि तत्र सन्निहितमित्युत्तरत्र निरसिष्यते ।**

ಸಕರ್ತೃಕತ್ವವೆಂಬ ಸಾಧ್ಯದ ವಿಷಯದಲ್ಲಿ ಕಾರ್ಯತ್ವವಷ್ಟೇ ಪ್ರಯೋಜಕವಾಗಿದೆ. ಶರೀರವು ಅಲ್ಲಿ ಸನ್ನಿಹಿತವಾಗಿರುತ್ತದಷ್ಟೇ ಎಂಬ ನೈಯ್ಯಾಯಿಕರ ಮತವನ್ನು ಮುಂದೆ ನಿರಾಕರಿಸುವವರಿದ್ದೇವೆ.

**तत्वप्रकाशिका – अस्तु वा सकर्तृकत्वम् । कथं सार्वज्ञसिद्धिः । बहुकर्तृत्वेनाप्युपपत्तेः । लाघवादेकाङ्गीकार इति चेन्न ।**

ಅಥವಾ ಅನುಮಾನದಿಂದ ಸಕರ್ತೃಕತ್ವವು ಸಿದ್ಧವಾದರೆ, ಇದರಿಂದೇನು ಸರ್ವಜ್ಞತ್ವವನ್ನು ಸಾಧಿಸಿದಂತಾಗುವುದಿಲ್ಲ. ಏಕೆಂದರೆ, ಅನೇಕರು ಕರ್ತೃಗಳಾಗಿದ್ದಾರೆಂದು ಅಂಗೀಕರಿಸಿದರೂ ಸಹ, ಸಕರ್ತೃಕತ್ವವೆಂಬ ಸಾಧ್ಯವನ್ನು ಪಕ್ಷದಲ್ಲಿ ಪರ್ಯವಸಾನ ಮಾಡಬಹುದು. ಲಾಘವವಿರುವುದರಿಂದ ಒಬ್ಬನೇ ಕರ್ತೃವನ್ನು ಅಂಗೀಕರಿಸುವುದು ಸೂಕ್ತವಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – बह्वङ्गीकारस्य लोकानुकूल्येनागौरवात् । अतो न सार्वज्ञसिद्धिः । अविप्रलम्भादि चातिदुरवगमम् ।**

ಅನೇಕಕರ್ತೃಗಳನ್ನು ಅಂಗೀಕಾರಮಾಡುವುದರಿಂದ ಲೋಕವ್ಯವಹಾರವು ಅನುಕೂಲವಾಗುತ್ತದೆ. ಆದ್ದರಿಂದ ಬಹುಕರ್ತೃತ್ವವನ್ನು ಅಂಗೀಕರಿಸುವುದು ಗೌರವವಲ್ಲ. ಆದ್ದರಿಂದ, ಸರ್ವಕರ್ತೃತ್ವದಿಂದ ಸರ್ವಜ್ಞತ್ವವು ಸಿದ್ಧವಾಗುವುದಿಲ್ಲ. ವಿಶ್ವಕರ್ತೃವಿನಲ್ಲಿ ವಂಚನೆ ಮಾಡದಿರುವಿಕೆ ಮೊದಲಾದ ಧರ್ಮಗಳನ್ನು ಸಾಧಿಸುವುದೂ ಸಹ ಅತ್ಯಂತ ಕಠಿಣವಾಗಿದೆ.

**तत्वप्रकाशिका – अस्तु वा आप्तिनिश्चयस्तन्मूलत्वं कुतो वेदस्य । वेदः सार्वज्ञादिमता प्रणीतो वेदत्वादिति व्यतिरेक्यनुमानादिति चेन्न ।**

ಅಥವಾ ವಿಶ್ವಕರ್ತನಾದ ಭಗವಂತನು ಆಪ್ತನೆಂದು ಅಂಗೀಕಾರ ಮಾಡೋಣ. ಇಷ್ಟುಮಾತ್ರದಿಂದ ಅವನೇ ವೇದಕ್ಕೆ ಕಾರಣನಾದವನೆಂದು ನಿಶ್ಚಯಿಸಲು ಹೇಗೆ ಸಾಧ್ಯ? 'ವೇದಃ ಸಾರ್ವಜ್ಞಾದಿಮತಾ ಪ್ರಣೀತಃ, ವೇದತ್ವಾತ್' ಎಂಬುದಾಗಿ ವ್ಯತಿರೇಕಿ ಅನುಮಾನದಿಂದ ಸರ್ವಜ್ಞತ್ವವುಳ್ಳ ಈಶ್ವರನೇ ವೇದಕ್ಕೆ ಕರ್ತೃವಾಗಿದ್ದಾನೆಂದು ಸಾಧಿಸಬೇಕು. ಇದು ಸರಿಯಲ್ಲ.

**तत्वप्रकाशिका – वेदत्वस्य पामरप्रणीतत्वादौ साम्यात् ।**

ಏಕೆಂದರೆ, ಇದೇ ವೇದತ್ವಹೇತುವಿನಿಂದ ಪಾಮರಪ್ರಣೀತತ್ವವನ್ನು ಸಾಧಿಸಬಹುದು.

**तत्वप्रकाशिका – असाधारण्यस्यापि साम्यात् ।**

ವೇದತ್ವಹೇತುವಿನಿಂದ ಪಾಮರಪ್ರಣೀತತ್ವವನ್ನು ಸಾಧನೆಮಾಡಿದಾಗ ಅಸಾಧಾರಣ್ಯವೆಂಬ ಹೇತ್ವಾಭಾಸದೋಷವು ಬರುತ್ತದೆಂದು ಹೇಳಿದರೆ, ಸರ್ವಜ್ಞಪ್ರಣೀತತ್ವವನ್ನು ಸಾಧನೆ ಮಾಡಿದಾಗಲೂ ಪಕ್ಷ ಬಿಟ್ಟು ಬೇರೆ ಎಲ್ಲಿಯೂ ಹೇತುವಿಲ್ಲದ ಕಾರಣ, ಅಸಾಧಾರಣ್ಯದೋಷವು ಬರುತ್ತದೆ.

**तत्वप्रकाशिका – वेद आप्तप्रणीतः प्रमाणवाक्यत्वादिति चेन्न । वेदानित्यत्वे प्रामाण्यविवादात् ।**

'ವೇದಃ ಆಪ್ತಪ್ರಣೀತಃ ಪ್ರಮಾಣವಾಕ್ಯತ್ವಾತ್', ವೇದವು ಪ್ರಮಾಣವಾಕ್ಯವಾದ್ದರಿಂದ ಆಪ್ತಪ್ರಣೀತವಾಗಿದೆ ಎಂದು ಸಾಧಿಸಬಹುದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ, ವೇದದ ಅನಿತ್ಯತ್ವವಿಷಯದ ಪ್ರಮಾಣದಲ್ಲಿ ವಿವಾದವಿದೆ. ಇಂತಹ ವಿವಾದಗ್ರಸ್ತವಾದ ಹೇತುವಿನಿಂದ ವೇದಕ್ಕೆ ಆಪ್ತಪ್ರಣೀತತ್ವವನ್ನು ಸಾಧಿಸಲು ಆಗುವುದಿಲ್ಲ.

**तत्वप्रकाशिका – 'तस्माद्यज्ञात्' इति सर्वज्ञेश्वरप्रणीतत्वं श्रूयत इति चेन्न । उक्तदोषात् ।**

'ತಸ್ಮಾದ್ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ' ಯಜ್ಞನಾಮಕನಾದ ಪರಮಾತ್ಮನ ದೆಸೆಯಿಂದ ಋಗ್ವೇದಾದಿಗಳು ಹುಟ್ಟಿದವು ಎಂಬ ಪುರುಷಸೂಕ್ತದ ಮಾತಿನಿಂದ ವೇದವು ಈಶ್ವರಪ್ರಣೀತವಾಗಿದೆ ಎಂದು ಸಿದ್ಧವಾಗುತ್ತದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ, ವೇದನಿತ್ಯತ್ವವಿಷಯದಲ್ಲಿ ವಿವಾದವಿದೆ ಎಂಬ ಹಿಂದಿನ ದೋಷವು ಬಂದೇ ಬರುತ್ತದೆ.

**तत्वप्रकाशिका –'ऋग्वेद एवाग्नेरजायत' इत्यसर्वज्ञप्रणीतत्वोक्तेश्च ।**

'ಋಗ್ವೇದ ಏವ ಅಗ್ನೇರಜಾಯತ' ಅಗ್ನಿಯಿಂದ ಋಗ್ವೇದವು ಹುಟ್ಟಿತು ಎಂಬುದಾಗಿ ಅಸರ್ವಜ್ಞನಾದ ಅಗ್ನಿಯಿಂದಲೇ ಋಗ್ವೇದದ ಹುಟ್ಟುವಿಕೆಯನ್ನು ಹೇಳಲಾಗಿದೆ. ಹೀಗಿರುವಾಗ ನಿಮಗೆ ಸರ್ವಜ್ಞಪ್ರಣೀತತ್ವವನ್ನು ಸಾಧಿಸಲಾಗದು.

**तत्वप्रकाशिका – सम्प्रदायप्रवर्तकतया तद्वाक्यमुपचरितमिति चेन्न । कारणाभावात् ।**

'ಅಜಾಯತ' ಎಂಬ ಪದಕ್ಕೆ ಲಕ್ಷಣಾ ಮಾಡಿ, ಸಂಪ್ರದಾಯಪ್ರವರ್ತಕನಾಗಿದ್ದಾನೆ ಎಂಬರ್ಥವನ್ನು ಒಪ್ಪಿ, ಔಪಚಾರಿಕಾರ್ಥವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗೆ, ಲಕ್ಷಣಾ ಮಾಡಲು ಕಾರಣವಿಲ್ಲ. ಕಾರಣವಿದ್ದರೆ ಮಾತ್ರ ಲಕ್ಷಣಾ ಮಾಡುವ ಪ್ರಸಂಗ ಬರುತ್ತದೆ.

**तत्वप्रकाशिका – ईश्वरविरचितत्ववाक्यादिति चेन्न । तद्वाक्यादस्य सम्प्रदायप्रवर्तकत्वाद्यर्थोपपत्तेः ।**

ಈಶ್ವರನೇ ಋಗ್ವೇದಾದಿಗಳನ್ನು ರಚನೆ ಮಾಡಿದ್ದಾನೆ ಎಂದೇಕೆ ಹೇಳಬಾರದು? ಎಂದು ಪ್ರಶ್ನಿಸಬಾರದು. 'ಈಶ್ವರನಿಂದ ಪ್ರಣೀತವಾಗಿದೆ' ಎಂಬ ವಾಕ್ಯದ ಬಲದಿಂದ 'ಋಗ್ವೇದ ಏವ ಅಗ್ನೇರಜಾಯತ' ಎಂಬ ವಾಕ್ಯಕ್ಕೆ ಸಂಪ್ರದಾಯಪ್ರವರ್ತಕತ್ವಾದ್ಯರ್ಥವನ್ನೇ ಹೇಳಬೇಕಾಗುತ್ತದೆ.

ಸಕರ್ತೃಕತ್ವವೆಂಬ ಸಾಧ್ಯದ ವಿಷಯದಲ್ಲಿ ಕಾರ್ಯತ್ವವಷ್ಟೇ ಪ್ರಯೋಜಕವಾಗಿದೆ. ಶರೀರವು ಅಲ್ಲಿ ಸನ್ನಿಹಿತವಾಗಿರುತ್ತದಷ್ಟೇ ಎಂಬ ನೈಯ್ಯಾಯಿಕರ ಮತವನ್ನು ಮುಂದೆ ನಿರಾಕರಿಸುವವರಿದ್ದೇವೆ.

**तत्वप्रकाशिका – अस्तु वा सकर्तृकत्वम् । कथं सार्वज्ञसिद्धिः । बहुकर्तृत्वेनाप्युपपत्तेः । लाघवादेकाङ्गीकार इति चेन्न ।**

ಅಥವಾ ಅನುಮಾನದಿಂದ ಸಕರ್ತೃಕತ್ವವು ಸಿದ್ಧವಾದರೆ, ಇದರಿಂದೇನು ಸರ್ವಜ್ಞತ್ವವನ್ನು ಸಾಧಿಸಿದಂತಾಗುವುದಿಲ್ಲ. ಏಕೆಂದರೆ, ಅನೇಕರು ಕರ್ತೃಗಳಾಗಿದ್ದಾರೆಂದು ಅಂಗೀಕರಿಸಿದರೂ ಸಹ, ಸಕರ್ತೃಕತ್ವವೆಂಬ ಸಾಧ್ಯವನ್ನು ಪಕ್ಷದಲ್ಲಿ ಪರ್ಯವಸಾನ ಮಾಡಬಹುದು. ಲಾಘವವಿರುವುದರಿಂದ ಒಬ್ಬನೇ ಕರ್ತೃವನ್ನು ಅಂಗೀಕರಿಸುವುದು ಸೂಕ್ತವಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – बह्वङ्गीकारस्य लोकानुकूल्येनागौरवात् । अतो न सार्वज्ञसिद्धिः । अविप्रलम्भादि चातिदुरवगमम् ।**

ಅನೇಕಕರ್ತೃಗಳನ್ನು ಅಂಗೀಕಾರಮಾಡುವುದರಿಂದ ಲೋಕವ್ಯವಹಾರವು ಅನುಕೂಲವಾಗುತ್ತದೆ. ಆದ್ದರಿಂದ ಬಹುಕರ್ತೃತ್ವವನ್ನು ಅಂಗೀಕರಿಸುವುದು ಗೌರವವಲ್ಲ. ಆದ್ದರಿಂದ, ಸರ್ವಕರ್ತೃತ್ವದಿಂದ ಸರ್ವಜ್ಞತ್ವವು ಸಿದ್ಧವಾಗುವುದಿಲ್ಲ. ವಿಶ್ವಕರ್ತೃವಿನಲ್ಲಿ ವಂಚನೆ ಮಾಡದಿರುವಿಕೆ ಮೊದಲಾದ ಧರ್ಮಗಳನ್ನು ಸಾಧಿಸುವುದೂ ಸಹ ಅತ್ಯಂತ ಕಠಿಣವಾಗಿದೆ.

**तत्वप्रकाशिका – अस्तु वा आप्तिनिश्चयस्तन्मूलत्वं कुतो वेदस्य । वेदः सार्वज्ञादिमता प्रणीतो वेदत्वादिति व्यतिरेक्यनुमानादिति चेन्न ।**

ಅಥವಾ ವಿಶ್ವಕರ್ತನಾದ ಭಗವಂತನು ಆಪ್ತನೆಂದು ಅಂಗೀಕಾರ ಮಾಡೋಣ. ಇಷ್ಟುಮಾತ್ರದಿಂದ ಅವನೇ ವೇದಕ್ಕೆ ಕಾರಣನಾದವನೆಂದು ನಿಶ್ಚಯಿಸಲು ಹೇಗೆ ಸಾಧ್ಯ? 'ವೇದಃ ಸಾರ್ವಜ್ಞಾದಿಮತಾ ಪ್ರಣೀತಃ, ವೇದತ್ವಾತ್' ಎಂಬುದಾಗಿ ವ್ಯತಿರೇಕಿ ಅನುಮಾನದಿಂದ ಸರ್ವಜ್ಞತ್ವವುಳ್ಳ ಈಶ್ವರನೇ ವೇದಕ್ಕೆ ಕರ್ತೃವಾಗಿದ್ದಾನೆಂದು ಸಾಧಿಸಬೇಕು. ಇದು ಸರಿಯಲ್ಲ.

**तत्वप्रकाशिका – वेदत्वस्य पामरप्रणीतत्वादौ साम्यात् ।**

ಏಕೆಂದರೆ, ಇದೇ ವೇದತ್ವಹೇತುವಿನಿಂದ ಪಾಮರಪ್ರಣೀತತ್ವವನ್ನು ಸಾಧಿಸಬಹುದು.

**तत्वप्रकाशिका – असाधारण्यस्यापि साम्यात् ।**

ವೇದತ್ವಹೇತುವಿನಿಂದ ಪಾಮರಪ್ರಣೀತತ್ವವನ್ನು ಸಾಧನೆಮಾಡಿದಾಗ ಅಸಾಧಾರಣ್ಯವೆಂಬ ಹೇತ್ವಾಭಾಸದೋಷವು ಬರುತ್ತದೆಂದು ಹೇಳಿದರೆ, ಸರ್ವಜ್ಞಪ್ರಣೀತತ್ವವನ್ನು ಸಾಧನೆ ಮಾಡಿದಾಗಲೂ ಪಕ್ಷ ಬಿಟ್ಟು ಬೇರೆ ಎಲ್ಲಿಯೂ ಹೇತುವಿಲ್ಲದ ಕಾರಣ, ಅಸಾಧಾರಣ್ಯದೋಷವು ಬರುತ್ತದೆ.

**तत्वप्रकाशिका – वेद आप्तप्रणीतः प्रमाणवाक्यत्वादिति चेन्न । वेदानित्यत्वे प्रामाण्यविवादात् ।**

'ವೇದಃ ಆಪ್ತಪ್ರಣೀತಃ ಪ್ರಮಾಣವಾಕ್ಯತ್ವಾತ್', ವೇದವು ಪ್ರಮಾಣವಾಕ್ಯವಾದ್ದರಿಂದ ಆಪ್ತಪ್ರಣೀತವಾಗಿದೆ ಎಂದು ಸಾಧಿಸಬಹುದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ, ವೇದದ ಅನಿತ್ಯತ್ವವಿಷಯದ ಪ್ರಮಾಣದಲ್ಲಿ ವಿವಾದವಿದೆ. ಇಂತಹ ವಿವಾದಗ್ರಸ್ತವಾದ ಹೇತುವಿನಿಂದ ವೇದಕ್ಕೆ ಆಪ್ತಪ್ರಣೀತತ್ವವನ್ನು ಸಾಧಿಸಲು ಆಗುವುದಿಲ್ಲ.

**तत्वप्रकाशिका – 'तस्माद्यज्ञात्' इति सर्वज्ञेश्वरप्रणीतत्वं श्रूयत इति चेन्न । उक्तदोषात् ।**

'ತಸ್ಮಾದ್ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ' ಯಜ್ಞನಾಮಕನಾದ ಪರಮಾತ್ಮನ ದೆಸೆಯಿಂದ ಋಗ್ವೇದಾದಿಗಳು ಹುಟ್ಟಿದವು ಎಂಬ ಪುರುಷಸೂಕ್ತದ ಮಾತಿನಿಂದ ವೇದವು ಈಶ್ವರಪ್ರಣೀತವಾಗಿದೆ ಎಂದು ಸಿದ್ಧವಾಗುತ್ತದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ, ವೇದನಿತ್ಯತ್ವವಿಷಯದಲ್ಲಿ ವಿವಾದವಿದೆ ಎಂಬ ಹಿಂದಿನ ದೋಷವು ಬಂದೇ ಬರುತ್ತದೆ.

**तत्वप्रकाशिका –'ऋग्वेद एवाग्नेरजायत' इत्यसर्वज्ञप्रणीतत्वोक्तेश्च ।**

'ಋಗ್ವೇದ ಏವ ಅಗ್ನೇರಜಾಯತ' ಅಗ್ನಿಯಿಂದ ಋಗ್ವೇದವು ಹುಟ್ಟಿತು ಎಂಬುದಾಗಿ ಅಸರ್ವಜ್ಞನಾದ ಅಗ್ನಿಯಿಂದಲೇ ಋಗ್ವೇದದ ಹುಟ್ಟುವಿಕೆಯನ್ನು ಹೇಳಲಾಗಿದೆ. ಹೀಗಿರುವಾಗ ನಿಮಗೆ ಸರ್ವಜ್ಞಪ್ರಣೀತತ್ವವನ್ನು ಸಾಧಿಸಲಾಗದು.

**तत्वप्रकाशिका – सम्प्रदायप्रवर्तकतया तद्वाक्यमुपचरितमिति चेन्न । कारणाभावात् ।**

'ಅಜಾಯತ' ಎಂಬ ಪದಕ್ಕೆ ಲಕ್ಷಣಾ ಮಾಡಿ, ಸಂಪ್ರದಾಯಪ್ರವರ್ತಕನಾಗಿದ್ದಾನೆ ಎಂಬರ್ಥವನ್ನು ಒಪ್ಪಿ, ಔಪಚಾರಿಕಾರ್ಥವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗೆ, ಲಕ್ಷಣಾ ಮಾಡಲು ಕಾರಣವಿಲ್ಲ. ಕಾರಣವಿದ್ದರೆ ಮಾತ್ರ ಲಕ್ಷಣಾ ಮಾಡುವ ಪ್ರಸಂಗ ಬರುತ್ತದೆ.

**तत्वप्रकाशिका – ईश्वरविरचितत्ववाक्यादिति चेन्न । तद्वाक्यादस्य सम्प्रदायप्रवर्तकत्वाद्यर्थोपपत्तेः ।**

ಈಶ್ವರನೇ ಋಗ್ವೇದಾದಿಗಳನ್ನು ರಚನೆ ಮಾಡಿದ್ದಾನೆ ಎಂದೇಕೆ ಹೇಳಬಾರದು? ಎಂದು ಪ್ರಶ್ನಿಸಬಾರದು. 'ಈಶ್ವರನಿಂದ ಪ್ರಣೀತವಾಗಿದೆ' ಎಂಬ ವಾಕ್ಯದ ಬಲದಿಂದ 'ಋಗ್ವೇದ ಏವ ಅಗ್ನೇರಜಾಯತ' ಎಂಬ ವಾಕ್ಯಕ್ಕೆ ಸಂಪ್ರದಾಯಪ್ರವರ್ತಕತ್ವಾದ್ಯರ್ಥವನ್ನೇ ಹೇಳಬೇಕಾಗುತ್ತದೆ.

**तत्वप्रकाशिका – तेषामसार्वज्ञादेतदिति चेन्न । चक्रकापातात् ।**

ಅಗ್ನಿ ಮೊದಲಾದವರಿಗೆ ಸಾರ್ವಜ್ಞವಿಲ್ಲದ ಕಾರಣ, ಈಶ್ವರನೇ ವೇದಪ್ರಣೇತೃವಾಗಿದ್ದಾನೆಂದು ಹೇಳಬಹುದಲ್ಲವೆ? ಎಂದು ಶಂಕಿಸಬಾರದು. ಹಾಗಾದಲ್ಲಿ ಚಕ್ರಕಾಪತ್ತಿದೋಷ ಬರುತ್ತದೆ. ಈಶ್ವರನು ಸರ್ವಜ್ಞನೆಂದು ಸಿದ್ಧವಾದರೆ 'ತಸ್ಮಾದ್ಯಜ್ಞಾತ್' ಇತ್ಯಾದಿ ವಾಕ್ಯದ ಬಲದಿಂದ ವೇದಕ್ಕೆ ಸರ್ವಜ್ಞಪ್ರಣೇತೃತ್ವವು ಸಿದ್ಧವಾಗುತ್ತದೆ. ವೇದಕ್ಕೆ ಸರ್ವಜ್ಞಪ್ರಣೇತೃತ್ವವು ಸಿದ್ಧವಾದರೆ ವೇದಪ್ರಾಮಾಣ್ಯವು ಸಿದ್ಧವಾಗುತ್ತದೆ. ವೇದಪ್ರಾಮಾಣ್ಯವು ಸಿದ್ಧವಾದರೆ ವೇದದಿಂದ ಈಶ್ವರನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಹೀಗೆ, ಚಕ್ರಕಾಪತ್ತಿದೋಷವು ಬರುತ್ತದೆಂದು ತಿಳಿಯಬೇಕು.

**तत्वप्रकाशिका – तस्मादाप्तितन्मूलत्वानिश्चयाद्वेदानित्यत्वे तत्प्रामाण्याभावापत्तेर्न नित्यत्वश्रुतेरुपचरितार्थत्वं वाच्यम् ।**

ಆದ್ದರಿಂದ, ವೇದಕ್ಕೆ ಆಪ್ತಿಮೂಲತ್ವವು ಸಿದ್ಧವಾಗುವುದಿಲ್ಲ. ಮತ್ತು ವೇದವು ಅನಿತ್ಯವಾದರೆ, ವೇದಪ್ರಾಮಾಣ್ಯವೂ ಕೂಡ ಸಿದ್ಧವಾಗದ ಕಾರಣ, ನಿತ್ಯತ್ವಶ್ರುತಿಗೆ ಲಾಕ್ಷಣಿಕಾರ್ಥವನ್ನು ಒಪ್ಪಬಾರದು.

**तत्वप्रकाशिका – किञ्च वेदस्याप्तप्रणीतत्वे मूलप्रमाणेन भाव्यम् । पौरुषेयस्य मूलप्रमाणसापेक्षतानियमात् ।**

ಮತ್ತು, ವೇದಕ್ಕೆ ಆಪ್ತಪ್ರಣೀತತ್ವವನ್ನು ಅಂಗೀಕಾರ ಮಾಡಿದರೆ, ಮೂಲಭೂತವಾದ ಮತ್ತೊಂದು ಪ್ರಮಾಣವನ್ನು ಒಪ್ಪಬೇಕಾಗುತ್ತದೆ. ಏಕೆಂದರೆ, ಲೋಕದಲ್ಲಿ ಪೌರುಷೇಯ ಗ್ರಂಥಗಳಿಗೆಲ್ಲ ಮೂಲಭೂತವಾದ ಮತ್ತೊಂದು ಪ್ರಮಾಣವು ಇರುವುದು ಕಂಡಿದೆ.

**तत्वप्रकाशिका – नच तत्प्रत्यक्षम् । अदृष्टादौ तदप्रवेशात् । नच कस्यचित्प्रत्यक्षं तादृशम् । अत्र प्रमाणाभावात् ।**

ಈಶ್ವರನ ಪ್ರತ್ಯಕ್ಷವನ್ನೇ ಮೂಲವೆಂದು ಹೇಳಲಾಗದು. ಏಕೆಂದರೆ, ಅದೃಷ್ಟಾದಿ ವಿಷಯದಲ್ಲಿ ಪ್ರತ್ಯಕ್ಷವನ್ನು ಹೇಳಲು ಸಾಧ್ಯವಿಲ್ಲ. ಇನ್ನು ಈಶ್ವರನ ಪ್ರತ್ಯಕ್ಷಕ್ಕೆ ಅದೃಷ್ಟಾದಿಗಳೂ ಕೂಡ ವಿಷಯಗಳಾಗುತ್ತವೆಂದು ಹೇಳಬೇಕು. ಆದರೆ, ಈ ವಿಷಯದಲ್ಲಿ ಯಾವುದೇ ಪ್ರಮಾಣಗಳಿರುವುದಿಲ್ಲ.

**तत्वप्रकाशिका – नाप्यनुमानम् । तस्य प्रतिपक्षादिदुष्टत्वात् । कथञ्चित्तेनादृष्टसम्भवनेऽपि तद्विशेषासिद्धेः ।**

ಅದೃಷ್ಟಾದಿಗಳ ವಿಷಯದಲ್ಲಿ ಅನುಮಾನವೇ ಪ್ರಮಾಣವಾಗಿದೆ, ಎಂದು ಶಂಕಿಸಬಾರದು. ಅನುಮಾನವು ಸತ್ಪ್ರತಿಪಕ್ಷಾದಿದೋಷಗಳಿಂದ ದುಷ್ಟವಾದ್ದರಿಂದ ಅದೃಷ್ಟಾದಿ ವಿಷಯದಲ್ಲಿ ಪ್ರಮಾಣವಾಗಲು ಸಾಧ್ಯವಿಲ್ಲ.

**तत्वप्रकाशिका – नहि लशुनागृञ्जनाद्यदनस्य पापहेतुत्वं यज्ञादेः पुण्यसाधनत्वं वाऽनुमानेन शक्यसाधनम् ।**

ಅದು ಹೀಗೆ. ಬೆಳ್ಳುಳ್ಳಿ ಮೊದಲಾದವುಗಳನ್ನು ಭಕ್ಷಿಸುವುದು ಪಾಪಸಾಧನವಾಗಿದೆ. ಯಜ್ಞ-ಯಾಗಾದಿಗಳಲ್ಲಿ ತೊಡಗುವುದು ಪುಣ್ಯಸಾಧನವಾಗಿದೆ. ಇದನ್ನು ಅನುಮಾನದಿಂದ ಸಾಧನೆ ಮಾಡಲು ಸಾಧ್ಯವೇ ಇಲ್ಲ. ಆದ್ದರಿಂದ, ಅದೃಷ್ಟವಿಶೇಷವನ್ನು ಸಾಧಿಸಲು ಅನುಮಾನವು ಅಸಮರ್ಥವಾಗುತ್ತದೆ.

**तत्वप्रकाशिका – अतो वाक्यमेवेति वक्तव्यम् । तदपि न तावत्पौरुषेयम् । मूलान्तरान्वेषणेनानवस्थानात् ।**

ಆದ್ದರಿಂದ, ಅದೃಷ್ಟಾರ್ಥವಿಷಯದಲ್ಲಿ ವಾಕ್ಯವನ್ನೇ ಪ್ರಮಾಣವೆನ್ನಬೇಕು. ಅಂತಹ ವಾಕ್ಯವಾದರೋ, ಪೌರುಷೇಯವಾದಲ್ಲಿ, ಆ ಪೌರುಷೇಯವಾಕ್ಯಕ್ಕೂ ಮತ್ತೊಂದು ಮೂಲ ಪ್ರಮಾಣದ ಆವಶ್ಯಕತೆ ಇರುತ್ತದೆ. ಆ ಮೂಲ ಪ್ರಮಾಣವೂ ಸಹ ಪೌರುಷೇಯವಾದರೆ, ಅದಕ್ಕೂ ಮತ್ತೊಂದು ಮೂಲ ಪ್ರಮಾಣ ಬೇಕಾಗುತ್ತದೆ. ಅದೂ ಸಹ ಪೌರುಷೇಯವಾದರೆ, ಹೀಗೆ ಅನವಸ್ಥಾದೋಷವು ಬರುತ್ತದೆ.

**तत्वप्रकाशिका –अतस्तन्नित्यमेवापेक्षितम् । तथा च किमनया कल्पनया श्रुतिसिद्धं वेदनित्यत्वमेवाङ्गीक्रियताम् ।**

ಆದ್ದರಿಂದ, ಅನವಸ್ಥಾದೋಷವನ್ನು ಪರಿಹಾರ ಮಾಡುವುದಕ್ಕಾಗಿ, ಮೂಲಪ್ರಮಾಣವನ್ನು ಅಪೌರುಷೇಯವೆಂದೇ ಹೇಳಬೇಕು. ಆದ್ದರಿಂದ ಈ ಕಲ್ಪನೆಮಾಡುವುದರ ಬದಲಿಗೆ ಶ್ರುತಿಯಲ್ಲಿ ಹೇಳಿದ ವೇದನಿತ್ಯತ್ವವನ್ನೇ ಒಪ್ಪಿದರೆ ಲಾಘವವಿದೆ.

**तत्वप्रकाशिका – ननु वेदस्य नित्यत्वेऽपि न प्रामाण्यम् । आप्तोक्तत्वाभावादिति ।**

ವೇದವು ನಿತ್ಯವಾದರೂ ಸಹ ಪ್ರಾಮಾಣ್ಯವನ್ನು ಸಾಧಿಸಲಾಗದು. ಏಕೆಂದರೆ, ಆಪ್ತೋಕ್ತವಾದ ವಾಕ್ಯವಷ್ಟೇ ಪ್ರಮಾಣವಾಗುತ್ತದೆ. ಅಪೌರುಷೇಯವೆಂದು ಹೇಳಿದಲ್ಲಿ ಆಪ್ತೋಕ್ತತ್ವವೆಂಬ ಗುಣವನ್ನು ಹೇಳಲು ಹೇಗೆ ಸಾಧ್ಯ ?

**तत्वप्रकाशिका – मैवम् । प्रामाण्यस्य स्वतस्त्वे गुणानपेक्षणात् ।**

ತಾರ್ಕಿಕರ ಈ ಶಂಕೆಯು ತಪ್ಪು. ಏಕೆಂದರೆ, ಪ್ರಾಮಾಣ್ಯವು ಸ್ವತಃಸಿದ್ಧವಾಗಿದೆ ಹೊರತು, ಆಪ್ತೋಕ್ತತ್ವಾದಿ ಗುಣವನ್ನು ಅಪೇಕ್ಷಿಸಿರುವುದಿಲ್ಲ.

**तत्वप्रकाशिका – प्रामाण्यं नाम यथार्थज्ञानकरणत्वम् ।**

ಏಕೆಂದರೆ, ಪ್ರಾಮಾಣ್ಯಶಬ್ದಕ್ಕೆ, ಯಥಾರ್ಥಜ್ಞಾನಕರಣ ಎಂದರ್ಥ.

**तत्वप्रकाशिका – नच याथार्थ्यं ज्ञानकारणातिरिक्तकारणनिरपेक्षम् अयथार्थतातिरिक्तत्वे सति ज्ञानधर्मत्वात् । ज्ञानत्ववत् ।**

ಅಂದರೆ, ಜ್ಞಾನಕ್ಕೆ ಯಾವುದು ಕಾರಣವಾಗಿದೆಯೋ, ಅದನ್ನು ಬಿಟ್ಟು ಮತ್ತೊಂದು ಕಾರಣವನ್ನು ಅಪೇಕ್ಷಿಸುವುದಿಲ್ಲ.

ಆದ್ದರಿಂದ 'ಯಾಥಾರ್ಥ್ಯಂ ಜ್ಞಾನಕಾರಣಾತಿರಿಕ್ತಕಾರಣನಿರಪೇಕ್ಷಮ್, ಅಯಥಾರ್ಥತಾತಿರಿಕ್ತತ್ವೇ ಸತಿ ಜ್ಞಾನಧರ್ಮತ್ವಾತ್, ಜ್ಞಾನತ್ವವತ್' ಎಂಬುದಾಗಿ ಯಾಥಾರ್ಥ್ಯವು ಅಯಥಾರ್ಥಕ್ಕಿಂತ ಭಿನ್ನವಾಗಿದ್ದು ಜ್ಞಾನದ ಧರ್ಮವಾಗಿರುವುದರಿಂದ, ಜ್ಞಾನಕಾರಣವನ್ನು ಬಿಟ್ಟು ಅತಿರಿಕ್ತವಾದ ಮತ್ತೊಂದು ಕಾರಣವನ್ನು ಅಪೇಕ್ಷಿಸುವುದಿಲ್ಲವೆಂದು ಸಾಧಿಸುತ್ತೇವೆ. ಈ ವಿಷಯದಲ್ಲಿ ಜ್ಞಾನತ್ವವೇ ದೃಷ್ಟಾಂತವಾಗಿದೆ.

**तत्वप्रकाशिका – याथार्थ्यं न गुणोत्पन्नं ज्ञानधर्मत्वादप्रामाण्यवदित्याद्यनुमानात् ।**

ಅಥವಾ, 'ಯಾಥಾರ್ಥ್ಯಂ ನ ಗುಣೋತ್ಪನ್ನಂ ಜ್ಞಾನಧರ್ಮತ್ವಾತ್, ಅಪ್ರಾಮಾಣ್ಯವತ್', ಅಪ್ರಾಮಾಣ್ಯವು ಜ್ಞಾನದ ಧರ್ಮವಾದ್ದರಿಂದ ಹೇಗೆ ಗುಣಜನ್ಯವಲ್ಲವೋ, ಅದರಂತೆ ಯಾಥಾರ್ಥ್ಯವೂ ಸಹ ಜ್ಞಾನಧರ್ಮವಾಗಿರುವುದರಿಂದ ಆಪ್ತೋಕ್ತತ್ವಾದಿ ಗುಣಗಳಿಂದ ಜನ್ಯವಾಗಲು ಸಾಧ್ಯವಿಲ್ಲ ಎಂದೂ ಸಹ ಅನುಮಾನ ಮಾಡುತ್ತೇವೆ.

**तत्वप्रकाशिका – नच ज्ञानधर्मत्वेनायथार्थत्वस्यापि स्वतस्त्वं वाच्यम् । दोषाभावे तदभावनियमात् ।**

ಅಯಥಾರ್ಥತ್ವವು ಕೂಡ ಜ್ಞಾನದ ಧರ್ಮವೇ ಆಗಿರುವುದರಿಂದ, ಜ್ಞಾನಪ್ರಾಮಾಣ್ಯದಂತೆ ಅಪ್ರಾಮಾಣ್ಯದಲ್ಲಿಯೂ ಸ್ವತಸ್ತ್ವವನ್ನು ಏಕೆ ಒಪ್ಪಬಾರದು? ಎಂದು ಪ್ರಶ್ನಿಸಬಾರದು. ಏಕೆಂದರೆ, ಯಾವ ಸಂದರ್ಭದಲ್ಲಿ ದೋಷಾಭಾವವಿರುತ್ತದೋ, ಆವಾಗಲೇ ಅಪ್ರಾಮಾಣ್ಯಾಭಾವವೂ ಇರುತ್ತದೆಂಬ ನಿಯಮವಿದೆ. ಆದ್ದರಿಂದ ದೋಷವೇ ಅಪ್ರಾಮಾಣ್ಯಕ್ಕೆ ಕಾರಣವೆಂದಂತಾಯಿತು.

**तत्वप्रकाशिका – प्रमा ज्ञानसामग्रीव्यतिरिक्तकारणजन्या कार्यत्वादिति चेन्न । प्रमाया ज्ञानकारणातिरिक्तकारणजन्यत्वं नाम प्रमात्वस्यैवं विघत्वेन वा ज्ञानस्य वा तत्सम्बन्धस्य वा ।**

ಇನ್ನು 'ಪ್ರಮಾ ಜ್ಞಾನಸಾಮಗ್ರೀವ್ಯತಿರಿಕ್ತಕಾರಣಜನ್ಯಾ, ಕಾರ್ಯತ್ವಾತ್' ಕಾರ್ಯತ್ವವಿರುವುದರಿಂದ ಯಥಾರ್ಥಜ್ಞಾನವು ಜ್ಞಾನಸಾಮಗ್ರಿಗಿಂತ ಅತಿರಿಕ್ತವಾದ ಕಾರಣದಿಂದಲೇ ಜನ್ಯವಾಗಿದೆ ಎಂದು ಅನುಮಾನ ಮಾಡಬೇಕು. ಆದರೆ, ಯಥಾರ್ಥಜ್ಞಾನವು ಜ್ಞಾನಕಾರಣಾತಿರಿಕ್ತಕಾರಣದಿಂದ ಹುಟ್ಟುತ್ತದೆಂಬುದಕ್ಕೆ ಏನು ಅರ್ಥ? ಪ್ರಮಾತ್ವವು ಆಗಿರುವುದರಿಂದ. ಹೀಗೆ ಅತಿರಿಕ್ತ ಕಾರಣದಿಂದ ಹುಟ್ಟುತ್ತದೆಂದು ಹೇಳುತ್ತಿರುವುದೋ, ಅಥವಾ ಜ್ಞಾನ ಆಗಿರುವುದರಿಂದ ಹೀಗೆ ಹುಟ್ಟುತ್ತದೆಂದೋ, ಅಥವಾ ಅವೆರಡರ ಸಂಬಂಧವಾಗಿರುವುದರಿಂದ ಎಂದೋ?

**तत्वप्रकाशिका – नाद्यः । अजन्यत्वात् । न द्वितीयः । व्याहतेः । न तृतीयः । तस्य समवायत्वेनाजन्यत्वादेव ।**

ಪ್ರಮಾತ್ವವು ಜಾತಿಯಾಗಿರುವುದರಿಂದ ನೈಯ್ಯಾಯಿಕರ ಮತದ ಪ್ರಕಾರ ಅದು ಹುಟ್ಟಲು ಸಾಧ್ಯವಿಲ್ಲ. ಎರಡನೆಯ ಪಕ್ಷದಲ್ಲಿ ವ್ಯಾಹತಿದೋಷ ಬರುತ್ತದೆ. ಏಕೆಂದರೆ, ಜ್ಞಾನವು ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಕಾರಣದಿಂದ ಹುಟ್ಟುತ್ತದೆಂಬುದು ಹೇಗೆ ಸಾಧ್ಯ? ಇನ್ನು ಸಂಬಂಧರೂಪವೆಂದರೆ, ಪ್ರಮಾ ಹಾಗೂ ಪ್ರಮಾತ್ವಗಳ ಸಂಬಂಧ ಎಂದಂತಾಯಿತು. ಇವೆರಡೂ ವ್ಯಕ್ತಿ ಹಾಗೂ ಜಾತಿರೂಪವಾದ್ದರಿಂದ, ಅವುಗಳ ಸಂಬಂಧವನ್ನು ಸಮವಾಯರೂಪವೆಂದು ನೈಯ್ಯಾಯಿಕರು ಒಪ್ಪಿದ್ದಾರೆ. ಆದರೆ ಸಮವಾಯವು ನಿತ್ಯವಾದ್ದರಿಂದ ಅಜನ್ಯವಾಗಿದೆ.

**तत्वप्रकाशिका – प्रमात्वयुक्तज्ञानस्यैवंविधत्वं साध्यत इति चेन्न । तादृशज्ञानस्यापि ज्ञानकारणातिरिक्तकारणजन्यत्वसाधने व्याघातानिस्तारात् ।**

ಇನ್ನು 'ಪ್ರಮಾತ್ವದಿಂದ ಸಹಿತವಾದ ಜ್ಞಾನಕ್ಕೆ ಮಾತ್ರ ಜ್ಞಾನಕಾರಣಾತಿರಿಕ್ತಕಾರಣಜನ್ಯತ್ವವನ್ನು ಸಾಧಿಸುತ್ತೇವೆಂದು ಹೇಳಬೇಕು. ಆವಾಗ, ಅಂತಹ ವಿಶಿಷ್ಟಜ್ಞಾನಕ್ಕೂ ಕೂಡ ಜ್ಞಾನಕಾರಣಾತಿರಿಕ್ತ-ಕಾರಣಜನ್ಯತ್ವವನ್ನು ಸಾಧನೆ ಮಾಡಿದರೆ, ವ್ಯಾಘಾತದೋಷವು ಬಂದೇ ಬರುತ್ತದೆ.

**तत्वप्रकाशिका – ज्ञानकारणतदतिरिक्तजन्यत्वं साध्यत इति चेन्न । ईशप्रमायां बाधात् ।**

ಈ ದೋಷವನ್ನು ಪರಿಹಾರ ಮಾಡುವುದಕ್ಕಾಗಿ ಪ್ರಮಾ ಎಂಬುದು ಜ್ಞಾನಕಾರಣ ಮತ್ತು ತದತಿರಿಕ್ತಕಾರಣದಿಂದ ಜನ್ಯವಾಗುತ್ತದೆಂದು ಹೇಳಿದರೆ, ಅಂದರೆ ವಿಷಯೇಂದ್ರಿಯಸನ್ನಿಕರ್ಷ ಮತ್ತು ತದತಿರಿಕ್ತವಾದ ಅನುಮಾನಾದಿಗಳಿಂದ ಹುಟ್ಟುತ್ತದೆಂದು ಹೇಳಿದರೆ, ಈಶ್ವರಪ್ರಮಾ ಎಂಬುದು ಜನ್ಯವಾಗದ ಕಾರಣ ಅದರಲ್ಲಿ ಜ್ಞಾನಕಾರಣಾತಿರಿಕ್ತಕಾರಣಜನ್ಯತ್ವಕ್ಕೆ ಬಾಧವು ಬರುತ್ತದೆ.

**तत्वप्रकाशिका – तदतिरिक्तप्रमापक्षीकारान्नैवमिति चेन्न । तथापि घटादौ व्यभिचारात् ।**

ಈಶ್ವರಪ್ರಮಾ ಅತಿರಿಕ್ತವೆಂದು ಪ್ರಮಾದಲ್ಲಿ ವಿಶೇಷಣ ನೀಡಿದರೆ, ಘಟ-ಪಟ ಮೊದಲಾದ ಪದಾರ್ಥಗಳಲ್ಲಿ ಕಾರ್ಯತ್ವವಿದ್ದು ಸಾಧ್ಯದ ಏಕದೇಶವಾದ ಜ್ಞಾನಕಾರಣಜನ್ಯತ್ವವೂ ಇಲ್ಲದ ಕಾರಣ ವ್ಯಭಿಚಾರದೋಷವು ಬರುತ್ತದೆ.

**तत्वप्रकाशिका – ज्ञानकारणमात्रजन्यत्वाभावः साध्यत इति चेन्न । ज्ञाने व्यभिचारापरिहारात् ।**

ಇನ್ನು ಜ್ಞಾನಕಾರಣಮಾತ್ರಜನ್ಯತ್ವಾಭಾವವನ್ನು ಸಾಧ್ಯವನ್ನಾಗಿ ಮಾಡುತ್ತೇವೆಂದು ಉತ್ತರಿಸಬೇಕು. ಅಂದರೆ, ಕೇವಲ ಜ್ಞಾನಕಾರಣದಿಂದಲೇ ಉತ್ಪನ್ನವಾಗದಿರುವುದನ್ನು ಸಾಧಿಸಿದರೆ ವ್ಯಭಿಚಾರವು ತಪ್ಪಿದ್ದಲ್ಲ. ಏಕೆಂದರೆ, ಘಟ-ಪಟಾದಿಗಳಲ್ಲಿ ವ್ಯಭಿಚಾರ ಬಾರದಿದ್ದರೂ ಜ್ಞಾನದಲ್ಲಿ ವ್ಯಭಿಚಾರ ಬರುತ್ತದೆ. ಏಕೆಂದರೆ, ಸಾಧ್ಯವು ಜ್ಞಾನದಲ್ಲಿರುವುದಿಲ್ಲ. ಆದರೆ ಕಾರ್ಯತ್ವವೆಂಬ ಹೇತು ಜ್ಞಾನದಲ್ಲಿರುವುದರಿಂದ ದೋಷವಿರುತ್ತದೆ.

**तत्वप्रकाशिका – ज्ञानातिरिक्तत्वेन हेतुर्विशेष्यत इति चेन्न । ज्ञानेऽपि कार्यत्वेन तत्साधनसौलभ्यात् ।**

ಈ ವ್ಯಭಿಚಾರವನ್ನು ಪರಿಹಾರ ಮಾಡುವುದಕ್ಕಾಗಿ ಜ್ಞಾನಭಿನ್ನವಾದ ಕಾರ್ಯವಾಗಿರಬೇಕೆಂದು ಹೇತುವಿನಲ್ಲಿ ಜ್ಞಾನಾತಿರಿಕ್ತತ್ವವನ್ನು ವಿಶೇಷಣವನ್ನಾಗಿ ಹೇಳಬೇಕು. ಆವಾಗ, ಜ್ಞಾನದಲ್ಲಿಯೂ ಕಾರ್ಯತ್ವವಿರುವುದರಿಂದ ಅದರಲ್ಲಿಯೂ ಜ್ಞಾನಕಾರಣಮಾತ್ರಜನ್ಯತ್ವಾಭಾವಧರ್ಮವನ್ನು ಸಾಧನೆ ಮಾಡುವುದು ಸುಲಭವಾಗುತ್ತದೆ.

**तत्वप्रकाशिका – विशिष्टाभावविकल्पेन व्याघातस्य समीकरणात् । प्रमागुणजन्या तदन्वयव्यतिरेकित्वादित्येतदपि प्रतिज्ञानिरासेन निरस्तम् ।**

ಜ್ಞಾನಕಾರಣಮಾತ್ರಜನ್ಯತ್ವಾಭಾವವೆಂಬ ವಿಶಿಷ್ಟಾಭಾವವಿಷಯದಲ್ಲಿ ವಿಕಲ್ಪವನ್ನು ತೋರಿಸಿ, ವ್ಯಾಘಾತದೋಷವನ್ನು ಹೇಳಿದರೆ 'ಪ್ರಮಾ ಜ್ಞಾನಕಾರಣಮಾತ್ರಜನ್ಯಾಭಾವವತೀ' ಎಂಬ ಅನುಮಾನದಲ್ಲಿಯೂ ವ್ಯಾಘಾತದೋಷವನ್ನು ತೋರಿಸಬಹುದು. 'ಪ್ರಮಾ ಗುಣಜನ್ಯಾನ್ವಯ ತದನ್ಯವ್ಯತಿರೇಕಿತ್ವಾತ್' ಎಂಬ ಅನುಮಾನವೂ ಸಹ ಪ್ರತಿಜ್ಞೆಯ ನಿರಾಕರಣೆಯಿಂದಲೇ ನಿರಸ್ತವಾಯಿತು.

**तत्वप्रकाशिका – किं चेदं गुणान्वयव्यतिरेकित्वमन्यत्रानुपक्षीणं सामान्यं वा । न द्वितीयः । व्यभिचारात् । नाद्यः । दोषनिरासोपक्षीणत्वात् ।**

ಮತ್ತು ಪ್ರಮಾದಲ್ಲಿ ಗುಣಾನ್ವಯವ್ಯತಿರೇಕಿತ್ವವು ಇರುತ್ತದೆಂದು ಹೇಳಿದಿರಿ. ಈ ಗುಣಾನ್ವಯವ್ಯತಿರೇಕಿತ್ವವು ಅನ್ಯತ್ರ ಉಪಕ್ಷೀಣವಾಗಿಲ್ಲವೋ? ಅಂದರೆ ಅನನ್ಯಥಾಸಿದ್ಧವಾಗಿದೆಯೋ?, ಅಥವಾ ಸಾಮಾನ್ಯರೀತಿಯಾಗಿದೆಯೋ ಎಂದರೆ ಅನ್ಯಥಾಸಿದ್ಧವಾಗಿದೆಯೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಅನ್ಯಥಾಸಿದ್ಧವಾಗಿದೆ ಎಂಬ ಎರಡನೆಯ ಪಕ್ಷ ಕೂಡುವುದಿಲ್ಲ. ಏಕೆಂದರೆ, ಈ ಹೇತುವಿಗೆ ವ್ಯಭಿಚಾರದೋಷವು ಬರುತ್ತದೆ. ಇನ್ನು ಅನನ್ಯಥಾಸಿದ್ಧವಾಗಿದೆ ಎಂದು ಮೊದಲನೆಯ ಪಕ್ಷವನ್ನು ಸ್ವೀಕರಿಸಿದರೆ, ಅದು ಗುಣದೋಷ ನಿರಾಸ ಮಾಡಲು ಉಪಯುಕ್ತವಾಗಿರುತ್ತದೆ. ಅಂದರೆ ಅನ್ಯಥಾಸಿದ್ಧವೇ ಆಗಿರುತ್ತದೆ. ಆದ್ದರಿಂದ, ಪ್ರಮೋತ್ಪತ್ತಿಗೆ ಕಾರಣವೆಂದು ಹೇಳಲು ಸಾಧ್ಯವಿಲ್ಲ.

**तत्वप्रकाशिका – न चोभयकारणत्वे कल्पकमस्ति । न चैवमप्रमाया अपि स्वतस्त्वम् । तत्र दोषान्वयव्यतिरेकनियमेन दोषाणामुभयकारणत्वकल्पनोपपत्तेः ।**

ಏಕೆಂದರೆ ದೋಷನಿರಾಸ ಮತ್ತು ಪ್ರಮೋತ್ಪತ್ತಿ ಎರಡಕ್ಕೂ ಕಾರಣವಾಗಿದೆ ಎಂದು ಹೇಳಲು ಯಾವುದೇ ಯುಕ್ತಿಗಳು ಇರುವುದಿಲ್ಲ. ಇನ್ನು ಸಾಮಾನ್ಯವು ಹೇಗೆ ಸ್ವತಃಸಿದ್ಧವಾಗಿದೆಯೋ, ಹಾಗೆಯೇ ಅಪ್ರಾಮಾಣ್ಯವೂ ಸಹ ಸ್ವತಃಸಿದ್ಧವಾಗಿದೆ ಎಂದು ಹೇಳಬಾರದು. ಏಕೆಂದರೆ, ಅಪ್ರಾಮಾಣ್ಯದಲ್ಲಿ ದೋಷದ ಅನ್ವಯವ್ಯತಿರೇಕವು ನಿಯಮೇನ ಇರುತ್ತದೆ. ಆದ್ದರಿಂದ, ಈ ದೋಷ-ಗುಣನಿರಾಕರಣ ಮತ್ತು ಅಪ್ರಾಮಾಣ್ಯೋತ್ಪತ್ತಿ ಉಭಯಕ್ಕೂ ಕಾರಣವಾಗಿದೆ ಎಂದು ಹೇಳಬೇಕು. ಆದರೆ ಪ್ರಾಮಾಣ್ಯವಿಷಯದಲ್ಲಿ ಗುಣದ ಅನ್ವಯ-ವ್ಯತಿರೇಕವನ್ನು ತೋರಿಸಲು ಸಾಧ್ಯವಿಲ್ಲ. ಹಾಗಾಗಿ ಗುಣದೋಷನಿರಾಸ ಹಾಗೂ ಪ್ರಮೋತ್ಪತ್ತಿಗೆ ಉಭಯಕ್ಕೂ ಕಾರಣವಾಗಿದೆ ಎಂದು ಹೇಳಲಾಗದು.

**तत्वप्रकाशिका – न चैतत्समं प्रकृतेऽपि । यादृच्छिकायथार्थवाक्यजनित-प्रमायां व्यभिचारात् ।**

ಈ ಎಲ್ಲ ದೋಷಗಳು ಪ್ರಾಮಾಣ್ಯದ ವಿಷಯದಲ್ಲಿ ಸಮ ಎಂದು ಹೇಳಲು ಬರುವುದಿಲ್ಲ. ಯಾದೃಚ್ಛಿಕವಾದ ಅಯಥಾರ್ಥವಾಕ್ಯದಿಂದ ಹುಟ್ಟಿದ ಪ್ರಮಾದಲ್ಲಿ ವ್ಯಭಿಚಾರವು ಬರುತ್ತದೆ. ಅಂದರೆ, ಯಾವನೋ ಒಬ್ಬ ಪ್ರತಾರಕನು ಅಯಥಾರ್ಥವಾಕ್ಯವನ್ನು ಪ್ರಯೋಗಿಸುತ್ತಾನೆ. ಅವನ ವಾಕ್ಯವನ್ನು ಕೇಳಿದಾಗ, ಅಕಸ್ಮಾತ್ತಾಗಿ ಯಥಾರ್ಥಜ್ಞಾನವೂ ಸಹ ಬರಬಹುದು. ಅಂತಹ ಸಮಯದಲ್ಲಿ ಆಪ್ತೋಕ್ತವಾಕ್ಯತ್ವವೆಂಬ ಗುಣವಿಲ್ಲದ ಕಾರಣ ವ್ಯಭಿಚಾರದೋಷವು ಬರುತ್ತದೆ.

**तत्वप्रकाशिका – गुणानां दोषनिरसनव्यापारत्वे दोषाभावोऽपि कारणतयापन्न इति चेन्न । प्रदीपावरणनिवृत्त्यादीनामपि प्रकाशनादिकारणत्वापत्तेः ।**

ಗುಣವು ದೋಷವನ್ನು ನಿರಾಸಮಾಡುವುದರಲ್ಲೇ ವ್ಯಾಪಾರವುಳ್ಳದ್ದಾಗಿರುವುದರಿಂದ, ದೋಷಾಭಾವವು ಜ್ಞಾನಪ್ರಾಮಾಣ್ಯಕ್ಕೂ ಕಾರಣವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ಕಾರ್ಯಕ್ಕೆ ಕಾರಣವು ಇದ್ದೇ ಇರುತ್ತದೆಂದು ಒಪ್ಪಿದಾಗ, ದೀಪದ ಆವರಣನಿವೃತ್ತಿಯೂ ಸಹ ದೀಪದ ಪ್ರಕಾಶಕ್ಕೆ ಕಾರಣವೆಂದು ಹೇಳಬೇಕಾದೀತು.

**तत्वप्रकाशिका – दोषाभावस्य कारणत्वे च नास्माकमनिष्टम् । तावता वेदापौरुषेयताऽव्याघातात् ।**

ಅಷ್ಟೇ ಅಲ್ಲದೆ, ಜ್ಞಾನಪ್ರಾಮಾಣ್ಯವಿಷಯದಲ್ಲಿ ದೋಷಾಭಾವಕ್ಕೆ ಕಾರಣತ್ವವಿದೆಯೆಂದು ಒಪ್ಪಿದರೆ, ಅದರಿಂದ ನಮಗೆ ಅನಿಷ್ಟವಾದದ್ದು ಏನೂ ಇಲ್ಲ. ಏಕೆಂದರೆ, ಅಷ್ಟುಮಾತ್ರದಿಂದ ವೇದಾಪೌರುಷೇಯತ್ವಕ್ಕೆ ವ್ಯಾಹತಿಯು ಬರುವುದಿಲ್ಲ.

**तत्वप्रकाशिका – प्रमा गुणजन्या प्रमात्वादिति चेन्न । ईशप्रमायां बाधात् ।**

ಯಥಾರ್ಥಜ್ಞಾನದಲ್ಲಿ ಪ್ರಮಾತ್ವವು ಇರುವುದರಿಂದ, ಅದು ಗುಣಜನ್ಯವಾಗಿದೆ ಎಂದು ಸಾಧಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಈಶಪ್ರಮಾದಲ್ಲಿ ಪ್ರಮಾತ್ವವಿದ್ದರೂ ಸಹ ಗುಣಜನ್ಯತ್ವವು ಇರುವುದಿಲ್ಲ. ಆದ್ದರಿಂದ ಬಾಧದೋಷವು ಬರುತ್ತದೆ.

**तत्वप्रकाशिका – तदतिरिक्तप्रमाः क्रियन्त इति चेन्न । तत्रैव व्यभिचारात् ।**

ಹಿಂದಿನ ದೋಷದ ಪರಿಹಾರಕ್ಕಾಗಿ ಜನ್ಯಪ್ರಮಾತ್ವವನ್ನು ಹೇತುವನ್ನಾಗಿ ಮಾಡುತ್ತೇವೆಂದು ಉತ್ತರಿಸಬಹುದು. ಆದರೆ, ಪುನಃ ಅಲ್ಲಿಯೇ ವ್ಯಭಿಚಾರದೋಷವು ಬರುತ್ತದೆ.

**तत्वप्रकाशिका – जन्यप्रमात्वं हेतुरिति चेन्न । प्रमा गुणजन्या न भवति । प्रमात्वादीश्वरप्रमावदिति प्रतिपक्षसाधनात् । न चाजन्यत्वमुपाधिः । घटादौ व्यभिचारात् । अजन्यप्रमात्वमुपाधिरिति चेन्न । व्याप्त्यभावात् ।**

ಜನ್ಯಪ್ರಮಾತ್ವವನ್ನು ಹೇತು ಮಾಡುತ್ತೇವೆಂದು ಹೇಳಿದರೆ ಸತ್ಪ್ರತಿಪಕ್ಷದೋಷವು ಬರುತ್ತದೆ. ಏಕೆಂದರೆ, 'ಪ್ರಮಾ ಗುಣಜನ್ಯಾ ನ ಭವತಿ, ಪ್ರಮಾತ್ವಾತ್, ಈಶ್ವರಪ್ರಮಾವತ್', ಈಶ್ವರಪ್ರಮಾ ಎಂಬುದು ಹೇಗೆ ಗುಣಜನ್ಯವಾಗಿಲ್ಲವೋ, ಅದರಂತೆ ಬೇರೆ ಪ್ರಮಾ ಎಂಬುದು ಸಹ ಪ್ರಮಾ ಆಗಿರುವುದರಿಂದ ಗುಣಜನ್ಯವಾಗುವುದಿಲ್ಲವೆಂದು ಸತ್ಪ್ರತಿಪಕ್ಷಾನುಮಾನವನ್ನು ಮಾಡಬಹುದು. ಇನ್ನು ಅಜನ್ಯತ್ವವನ್ನು ಉಪಾಧಿಯೆಂದು ಹೇಳಲಾಗದು. ಏಕೆಂದರೆ, ಘಟಾದಿಗಳಲ್ಲಿ ವ್ಯಭಿಚಾರದೋಷವು ಬರುತ್ತದೆ. ಅಜನ್ಯಪ್ರಮಾತ್ವವನ್ನು ಉಪಾಧಿಯೆಂದು ಹೇಳಿದರೆ, ವ್ಯಾಪ್ತಿಯೇ ಇರುವುದಿಲ್ಲ.

**तत्वप्रकाशिका – अतः प्रमाया ज्ञानकारणातिरिक्तकारणनिरपेक्षत्वेन वेदस्य कर्तृगुणनिरपेक्षस्यापि प्रामाण्यसिद्धेर्युक्तमेव तन्नित्यत्वम् । तस्यैवं नित्यत्वात्तद्वाच्यदेवानां चानित्यत्वेऽप्रामाण्यमेव स्यात् ।**

ಹೀಗೆ ಯಥಾರ್ಥಜ್ಞಾನಕ್ಕೆ ಜ್ಞಾನಕಾರಣಾತಿರಿಕ್ತವಾದ ಆಪ್ತೋಕ್ತತ್ವಾದಿ ಗುಣಗಳ ಅಪೇಕ್ಷೆಯಿಲ್ಲದ ಕಾರಣ, ವೇದಗಳಿಗೆ ಗುಣನಿರಪೇಕ್ಷೆಯಿಂದಲೇ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಆದ್ದರಿಂದಲೇ ನಿತ್ಯತ್ವವೂ ಸಹ ಸಿದ್ಧವಾಗುತ್ತದೆ. ವೇದಗಳು ನಿತ್ಯವಾದ್ದರಿಂದ ತತ್ಪ್ರತಿಪಾದ್ಯವಾದ ದೇವತೆಗಳು ಅನಿತ್ಯವೆಂದು ಹೇಳಿದರೆ, ವೇದಕ್ಕೆ ಅಪ್ರಾಮಾಣ್ಯದೋಷವೇ ಬರುತ್ತದೆ.

**तत्वप्रकाशिका – नच तद्युक्तम् । अतस्तत्सिध्यर्थं देवानां नित्यत्वमेवाभ्युपेयम् । तथा च न तेषां वेदविद्याधिकारः ।**

ಆದರೆ ವೇದಕ್ಕೆ ಅಪ್ರಾಮಾಣ್ಯವನ್ನು ಒಪ್ಪುವುದು ಯುಕ್ತವಲ್ಲದ ಕಾರಣ ಪ್ರಾಮಾಣ್ಯದ ಸಿದ್ಧಿಗಾಗಿ ದೇವತೆಗಳಿಗೆ ನಿತ್ಯತ್ವವನ್ನೇ ಅಂಗೀಕರಿಸಬೇಕು. ಹೀಗೆ ನಿತ್ಯತ್ವವನ್ನು ಒಪ್ಪಿದಾಗ, ಯಾವುದೇ ಪ್ರಯೋಜನವಿಲ್ಲದ ಕಾರಣ ದೇವತೆಗಳಿಗೆ ವೇದವಿದ್ಯಾಧಿಕಾರವನ್ನು ಇಲ್ಲವೆಂದೇ ಹೇಳಬೇಕು.

**तत्वप्रकाशिका – नच वाच्यं कर्मविधाभाववदयमपि विरोधः परिहर्तव्य इति । अतीतदेवताप्रवाहे प्रमाणसद्भावेनातीतकालीनविरोधस्यैव परिहर्तुं शक्यत्वात्। उत्तरकालेऽन्यदेवताभावनियमे प्रमाणाभावेन विरोधस्य कर्मण्यपि साम्यात् ।**

ಯಾವ ರೀತಿಯಾಗಿ ಕರ್ಮವಿರೋಧವಿಲ್ಲವೆಂದು ಪ್ರತಿಪಾದಿಸಿದ್ದೇವೋ, ಅದರಂತೆ ಈ ವಿರೋಧವೂ ಸಹ ಪರಿಹಾರವಾಗುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ಭೂತಕಾಲದ ದೇವತಾಪ್ರವಾಹವಿಷಯದಲ್ಲಿ ಪ್ರಮಾಣವಿರುವುದರಿಂದ, ಆ ಕಾಲದ ದೇವತಾವಿಷಯದಲ್ಲಿ ವಿರೋಧವು ಪರಿಹಾರವಾಗಬಹುದು. ಆದರೆ ಮುಂದಿನ ಕಾಲದ ದೇವತೋತ್ಪತ್ತಿವಿಷಯದಲ್ಲಿ ಪ್ರಮಾಣವಿಲ್ಲದ ಕಾರಣ, ಆ ಸಂದರ್ಭದಲ್ಲಿ ವೇದನಿತ್ಯತ್ವವನ್ನು ಸಾಧಿಸುವುದು ಕಷ್ಟವಾಗುತ್ತದೆ. ಮತ್ತು, ವರ್ತಮಾನ, ಭವಿಷ್ಯತ್ಕಾಲೀನ ದೇವತಾಪ್ರವಾಹವಿಷಯದಲ್ಲಿ ಪ್ರಮಾಣವಿಲ್ಲದ ಕಾರಣ, ಕರ್ಮವಿಷಯದಲ್ಲೂ ಸಹ ಈ ವಿರೋಧವು ಬಂದೇ ಬರುತ್ತದೆ.

**तत्वप्रकाशिका – नच भारतादिवदतीतविषयतया वेदस्य प्रामाण्योपपत्तिः तस्य देवताह्वानादिरूपस्य वर्तमानविषयतया अवश्यम्भावात् । अतो देवानां नानित्यत्वं युक्तमिति न तेषां वेदाधिकारः इति भावः ।**

ದೇವತಾಧಿಕರಣ (೧-೩-೮)

ಇನ್ನು ವೇದವು ಮಹಾಭಾರತಾದಿಗಳಂತೆ ಅತೀತಕಾಲವಿಷಯಕವಾದ್ದರಿಂದ ಅದಕ್ಕೆ ಪ್ರಾಮಾಣ್ಯವನ್ನು ಸಮರ್ಥಿಸಲು ಬರುವುದಿಲ್ಲ. ಏಕೆಂದರೆ, 'ಏಹ್ಯಗ್ನೇ' ಇತ್ಯಾದಿ ಮಂತ್ರಗಳಲ್ಲಿ ವರ್ತಮಾನಕಾಲದಲ್ಲಿ ದೇವತೆಗಳನ್ನು ಆಹ್ವಾನ ಮಾಡುವಂತಹ ಕ್ರಿಯಾಪದವು ಕೇಳಿಸುತ್ತಿರುವುದರಿಂದ, ಅತೀತದೇವತಾವಿಷಯಕವೆಂದು ಹೇಳಲು ಸಾಧ್ಯವಿಲ್ಲ. ಹೊರತಾಗಿ, ವರ್ತಮಾನವಿಷಯಕವೆಂದೇ ಅವಶ್ಯವಾಗಿ ಒಪ್ಪಬೇಕು. ಆದ್ದರಿಂದ ದೇವತೆಗಳಿಗೆ ವೇದವಿದ್ಯಾಧಿಕಾರವು ಇಲ್ಲವೆಂದು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – परिहारां व्याख्याति – नेति ।। यदुदितं वेदो नित्य इति तत्सत्यमेव । तथापि न तस्याप्रामाण्यम्**

ಸಿದ್ಧಾಂತವನ್ನು ಸ್ಥಾಪನೆ ಮಾಡುವುದಕ್ಕಾಗಿ ಪೂರ್ವಪಕ್ಷವನ್ನು ನಿರಾಕರಿಸುತ್ತಿದ್ದಾರೆ – 'ನ' ಇತ್ಯಾದಿಯಾಗಿ. ವೇದವು ನಿತ್ಯವೆಂದು ಏನು ಪ್ರತಿಪಾದಿಸಲ್ಪಟ್ಟಿತ್ತೋ, ಅದು ಸತ್ಯವೇ ಆಗಿದೆ. ಆದರೂ ಸಹ, ದೇವತೆಗಳು ಅನಿತ್ಯವೆಂದರೆ, ವೇದಕ್ಕೆ ಅಪ್ರಾಮಾಣ್ಯದೋಷವು ಬರುವುದಿಲ್ಲ.

**तत्वप्रकाशिका – तद्वाच्यानां देवानां स्वरूपनित्यत्वाभावेऽपि प्रवाहरूपेण नित्यत्वात् ।**

ಏಕೆಂದರೆ ವೇದಪ್ರತಿಪಾದ್ಯವಾದ ದೇವತೆಗಳಿಗೆ ಸ್ವರೂಪತಃ ನಿತ್ಯತ್ವವಿಲ್ಲದಿದ್ದರೂ ಪ್ರವಾಹತಃ ನಿತ್ಯತ್ವವಿರುತ್ತದೆ.

**तत्वप्रकाशिका – नच तत्र प्रमाणाभावः । 'सूर्याचन्द्रमसौ' इति श्रुतेरेव ।**

ಈ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಹೇಳಬಾರದು. 'ಸೂರ್ಯಾಚಂದ್ರಮಸೌ' ಎಂಬ ಶ್ರುತಿಯೇ ಪ್ರಮಾಣವಾಗಿದೆ.

**तत्वप्रकाशिका – न चेयं श्रुतिरतीतविषयैव देवप्रभवनियमं न प्रमापयतीति वाच्यम् । प्रतिकल्पमपि श्रुत्या यथा विष्णुः पूर्वकल्पे सूर्याचन्द्रमसावकल्पयत् तथाऽस्मिन्कल्पेऽपीति कथने देवानां सर्वकल्पेषु (प्रभव) सद्भावसिद्धेः ।**

ಈ ಶ್ರುತಿಯು ಅತೀತವಿಷಯಕವೇ ಆಗಿದೆ. ಆದ್ದರಿಂದ, ವರ್ತಮಾನಕಾಲದಲ್ಲಿ ದೇವತೆಗಳ ಉತ್ಪತ್ತಿಯನ್ನು ಹುಟ್ಟಿಸುತ್ತಿಲ್ಲವೆಂದು ಪ್ರಶ್ನಿಸಬಾರದು. ಪ್ರತಿಕಲ್ಪದಲ್ಲಿಯೂ ಸೂರ್ಯ-ಚಂದ್ರರನ್ನು ಉತ್ಪತ್ತಿ ಮಾಡಿದನೋ, ಅದೇ ರೀತಿಯಲ್ಲಿ ಈ ಕಲ್ಪದಲ್ಲಿಯೂ ಸಹ ಸೃಷ್ಟಿಮಾಡಿದ್ದೇನೆ ಎಂದು ಹೇಳಿದಾಗ, ದೇವತೆಗಳಿಗೆ ಪ್ರತಿಕಲ್ಪಗಳಲ್ಲಿಯೂ ಅಸ್ತಿತ್ವವು ಸಿದ್ಧವಾಗುತ್ತದೆ.

**तत्वप्रकाशिका – यथैवेति स्पष्टस्मृत्या च देवानां सर्वकल्पेषु प्रभवसिद्धेः । नच वाच्यं श्रुतावुपचारेणाप्युक्तिः संभवतीति न देवप्रभवनियम इति ।**

'ಯಥೈವ' ಇತ್ಯಾದಿ ಸ್ಪಷ್ಟವಾದ ಸ್ಮೃತಿಯಿಂದಲೂ ಸಹ ಸಕಲ ಕಲ್ಪಗಳಲ್ಲಿ ದೇವತೆಗಳ ಉತ್ಪತ್ತಿಯು ಇರುತ್ತದೆಂದು ಸಿದ್ಧವಾಗಿದೆ. ಇನ್ನು ಶ್ರುತಿಯಲ್ಲಿ ಹೇಳಿದ ದೇವತೆಗಳ ಜನನವು ಔಪಚಾರಿಕವಾಗಿಯೂ ಕೂಡಿಸಬಹುದು. ಇದರಿಂದ, ದೇವತೆಗಳ ಪ್ರವಾಹವು ಇದ್ದೇ ಇರುತ್ತದೆಂದು ಶ್ರುತಿಯಿಂದ ಸಿದ್ಧವಾಗುವುದಿಲ್ಲವೆಂದು ಶಂಕಿಸಬಾರದು.

**तत्वप्रकाशिका – अतीतानागतविदां महतां श्रुतिसंवादिनो देवप्रभवनियम-ग्राहकप्रत्यक्षस्य सत्त्वात् ।**

ಏಕೆಂದರೆ, ಅತೀತ-ಅನಾಗತ ಕಾಲವನ್ನು ತಿಳಿದ ಸೂತ್ರಕಾರರ ಪ್ರತ್ಯಕ್ಷವು ಶ್ರುತಿಸಂವಾದಿಯಾಗಿಯೇ ಇರುತ್ತದೆ. ಇವರ ಪ್ರತ್ಯಕ್ಷವೂ ದೇವತೆಗಳ ಉತ್ಪತ್ತಿಯ ವಿಷಯದಲ್ಲಿ ಶ್ರುತಿಗೆ ಸಂವಾದಿಯಾಗಿದೆ ಎಂದು ತಿಳಿಯಬೇಕು.

**तत्वप्रकाशिका – नच परप्रत्यक्षस्याप्रत्यक्षत्वात्तदनिश्चयः । 'यथर्तुष्वृतु-लिङ्गानि नानारूपाणि पर्यये । दृश्यन्ते तानि तान्येव तथा भावा युगादिषु' इति (त्यादि) तद्वचनान्निश्चयोपपत्तेः ।**

ಮಹಾತ್ಮರ ಪ್ರತ್ಯಕ್ಷವು ಹೀಗೆ ಇರುತ್ತದೆಂದು ನಮ್ಮಿಂದ ತಿಳಿಯಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು.

'ಯಥರ್ತುಷ್ವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ।

ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥'

ಆಯಾ ಋತುಗಳ ಅನೇಕವಿಧವಾದ ಚಿಹ್ನೆಗಳು ಋತುಪರ್ಯಾಯದ ಮೇಲೆ ಹೇಗೆ ನಮಗೆ ಪ್ರತೀತವಾಗುತ್ತವೋ, ಹಾಗೆ ಪ್ರತಿಯೊಂದು ಯುಗಗಳಲ್ಲಿ ಅದೇ ದೇವಾದಿ ಪದಾರ್ಥಗಳು ದೃಷ್ಟಿಗೆ ಬೀಳುತ್ತವೆ. ಎಂಬುದಾಗಿ ಮಹಾತ್ಮರ ವಚನದಿಂದ ಈ ವಿಷಯವು ಸ್ಪಷ್ಟವಾಗುತ್ತದೆ.

**तत्वप्रकाशिका – न चायोगिनां श्रुतिप्रत्यक्षयोरविश्वासेनोक्तानिश्चयः । उपरितनकालो देववान् कालत्वात् सम्प्रतिपन्नकालवदिति श्रुतिसंवाद्यनुमानेन तेषां देवप्रभवनियमसिद्धेरिति भावः ।**

ಅಯೋಗಿ ಜನರ ಶ್ರುತಿ ಮತ್ತು ಪ್ರತ್ಯಕ್ಷಗಳಲ್ಲಿ ವಿಶ್ವಾಸವಿಲ್ಲದ ಕಾರಣ, ದೇವತಾಪ್ರವಾಹ-ವಿಷಯದಲ್ಲಿ ಅನಿಶ್ಚಯವೇ ಬರುತ್ತದೆಂದು ಹೇಳಬಾರದು. ಏಕೆಂದರೆ, ಭವಿಷ್ಯತ್‌ಕಾಲವು ದೇವತೆಗಳಿಂದ ಹೇಗೆ ಕಾಲವಾದ್ದರಿಂದ ಯುಕ್ತವಾಗಿದೆಯೋ, ಅದೇ ರೀತಿಯಾಗಿ ಅತೀತ ಕಾಲವೂ ಕೂಡ ಕಾಲವಾಗಿರುವುದರಿಂದ ದೇವತೆಗಳಿಂದ ಯುಕ್ತವಾಗಿದೆ ಎಂಬುದಾಗಿ ಶ್ರುತ್ಯನುಸಾರಿಯಾದ ಅನುಮಾನದಿಂದ ದೇವತಾಪ್ರವಾಹವನ್ನು ಸಾಧಿಸಿ ತೋರಿಸಬಹುದು.

**तत्वप्रकाशिका – नच वाच्यं प्रलयकाले कालत्वहेतोर्व्यभिचारोऽप्रलयकालत्वहेतोः परं प्रति व्यर्थविशेषणत्वमिति । प्रलयस्य प्रमाणसिद्धत्वात् ॥२८॥**

ಈ ಅನುಮಾನದಲ್ಲಿ ಕಾಲತ್ವಹೇತುವು ಪ್ರಳಯಕಾಲದಲ್ಲಿ ವ್ಯಭಿಚರಿತವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅಪ್ರಳಯಕಾಲತ್ವವೇ ನಮಗೆ ಅಭಿಪ್ರೇತವಾದ ಹೇತುವಾಗಿದೆ. ಯಾರು ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳುತ್ತಾರೋ, ಅವರ ಪಕ್ಷದಲ್ಲಿ ಪ್ರಳಯಕಾಲವೇ ಇಲ್ಲದ ಕಾರಣ ಅವರನ್ನು ಕುರಿತು ಹೇಳುವಾಗ, ಅಪ್ರಳಯವೆಂಬ ವಿಶೇಷಣ ವ್ಯರ್ಥವಾಗುತ್ತದೆಂದು ಮೊದಲ ಅನುಮಾನದಲ್ಲಿ ಅಪ್ರಳಯತ್ವವನ್ನು ವಿಶೇಷಣವಾಗಿ ನೀಡಿಲ್ಲ. ಏಕೆಂದರೆ, ಪ್ರಳಯವು ಕೇವಲ ಶಬ್ದಪ್ರಮಾಣದಿಂದಷ್ಟೇ ತಿಳಿಯುತ್ತದಷ್ಟೇ ಹೊರತು, ಬೇರೆ ಪ್ರಮಾಣದಿಂದ ತಿಳಿಯುವುದಿಲ್ಲ.

**भावदीपः –**

**॥ ॐ शब्द इति चेन्नातः प्रभवात्प्रत्यक्षानुमानाभ्याम् ॐ ॥ २८ ॥**

शब्दे विरोध इति भाष्यं व्याचष्टे – **अत्रापीत्यादिना** ॥ आद्यन्तवत्त्व इति शेषोक्तिः ।

'ಓಂ ಶಬ್ದ ಇತಿ ಚೇನ್ನ ಅತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್ ಓಂ' ಎಂಬ ಸೂತ್ರವು ಪ್ರಾರಂಭವಾಗುತ್ತಿದೆ. 'ಶಬ್ದೇ ವಿರೋಧಃ' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತ್ರಾಪಿ' ಇತ್ಯಾದಿ ಟೀಕೆಯಿಂದ. ಟೀಕಾವಾಕ್ಯದಲ್ಲಿರುವ 'ಆದ್ಯಂತವತ್ವಮ್' ಎಂಬುದು ಶೇಷೋಕ್ತಿಯಾಗಿದೆ.

**भावदीपः** – यद्यप्यतीतदेवताप्रवाहे प्रमाणसद्भावेनेत्यादिना वक्ष्यमाणदिशा विरोधसूत्रं सादित्वप्रयुक्तशङ्काव्यावर्तकमिति तदनुरोधेन पूर्वत्र सादित्व इति, अत्र तु अनित्यत्व इत्येव वाच्यम् ।

ಪ್ರಶ್ನೆ - 'ಅತೀತದೇವತಾಪ್ರವಾಹೇ ಪ್ರಮಾಣಸದ್ಭಾವೇನ' ಅತೀತದೇವತಾಪ್ರವಾಹವಿಷಯದಲ್ಲಿ ಪ್ರಮಾಣವಿರುವುದರಿಂದ ಇತ್ಯಾದಿಯಾಗಿ ಮುಂದೆ ಹೇಳುವಂತೆ ಹಿಂದಿನ 'ವಿರೋಧಃ ಕರ್ಮಣಿ' ಎಂಬ ಸೂತ್ರವು ದೇವತೆಗಳಿಗೆ ಉತ್ಪತ್ತಿಯಿರುತ್ತದೆಂಬ ಆಶಂಕೆಯನ್ನು ಮಾತ್ರ ಪರಿಹರಿಸುತ್ತಿದೆ. ಅದಕ್ಕನುಸಾರಿಯಾಗಿ 'ಪೂರ್ವತ್ರ ಸಾದಿತ್ವಮ್' ಹಿಂದೆ ಸಾದಿತ್ವವನ್ನಷ್ಟೇ ಹೇಳಲಾಗಿದೆ, ಎಂದು ಟೀಕೆಯಲ್ಲಿ ಹೇಳಬೇಕಿತ್ತು. ಮತ್ತು ಈ ಸೂತ್ರದಲ್ಲಿ ದೇವತೆಗಳಿಗೆ ಅನಿತ್ಯತ್ವವನ್ನು ಸಾಧಿಸಲಾಗಿದೆ ಎಂದು ಹೇಳಬೇಕಲ್ಲವೇ?

**भावदीपः** – तथापि आद्यन्तवत्त्वे इति द्वयोरप्युक्तिः पूर्वत्रोक्तसादित्व-चोद्योत्तरयोः अत्र । अत्रोक्तसान्तत्वचोद्योत्तरयोः पूर्वत्रानुसन्धेयत्वं सूचयितुमित्याहुः।

ಹೌದು. ಆದರೆ, ಹಿಂದಿನ ಸೂತ್ರದಲ್ಲಿ ಸಾದಿತ್ವಪ್ರಯುಕ್ತವಾದ ಆಶಂಕೆಯನ್ನಷ್ಟೇ ಪರಿಹರಿಸಿದ್ದರೂ ನಾಶಪ್ರಯುಕ್ತವಾದ ಆಶಂಕೆಯನ್ನೂ ಸಹ ಪರಿಹರಿಸಬೇಕು. ಈ ಸೂತ್ರದಲ್ಲಿ ನಾಶಪ್ರಯುಕ್ತವಾದ ಆಶಂಕೆಯನ್ನು ಪರಿಹರಿಸಿದ್ದರೂ ಸಾದಿತ್ವಪ್ರಯುಕ್ತವಾದ ಆಶಂಕೆಯನ್ನು ಕೂಡ ಪರಿಹರಿಸಬೇಕು. ಆದ್ದರಿಂದ, ಹಿಂದೆ ಹೇಳಿದ ಸಾದಿತ್ವಪ್ರಯುಕ್ತವಾದ ಆಶಂಕೆ ಹಾಗೂ ಸಮಾಧಾನಗಳನ್ನು ಈ ಸೂತ್ರದಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಈ ಸೂತ್ರದಲ್ಲಿರುವ ಸಾಂತತ್ವಪ್ರಯುಕ್ತವಾದ ಆಶಂಕೆ ಮತ್ತು ಉತ್ತರಗಳನ್ನು ಹಿಂದಿನ ಸೂತ್ರದಲ್ಲಿ ಅನುಸಂಧಾನ ಮಾಡಿಕೊಳ್ಳಬೇಕೆಂದು ಸೂಚಿಸಿದಂತಾಯಿತು.

**भावदीपः** – नित्यत्वाद् वेदस्येत्यादि व्याचष्टे – **वेदस्येति** ।। यावता यस्मादित्यर्थः । वाचेत्यादि व्याचष्टे – **वेदस्येति** ।। आप्त्यनिश्चयादित्येतदवतार्य व्याख्यातुं श्रुतेरन्यथासिद्धिं शङ्कते – **नचेति** ।।

'ನಿತ್ಯತ್ವಾದ್ ವೇದಸ್ಯ' ಇತ್ಯಾದಿ ಭಾಷ್ಯವನ್ನು 'ವೇದಸ್ಯ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಯಾವತಾ' ಎಂದರೆ 'ಯಾವ ಕಾರಣದಿಂದ' ಎಂದರ್ಥ. 'ವಾಚಾ' ಇತ್ಯಾದಿ ಭಾಷ್ಯವನ್ನು 'ಭೇದಸ್ಯ ನಿತ್ಯತ್ವಮೇವ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಆಪ್ತ್ಯನಿಶ್ಚಯಾತ್' ಎಂಬ ಭಾಷ್ಯಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುವುದಕ್ಕಾಗಿ 'ವಾಚಾ ವಿರೂಪನಿತ್ಯಯಾ' ಎಂಬ ಶ್ರುತಿಗೆ ಅನ್ಯಥಾಸಿದ್ಧಿಯನ್ನು ಆಶಂಕೆ ಮಾಡುತ್ತಿದ್ದಾರೆ, 'ನಚ' ಇತ್ಯಾದಿ ಟೀಕೆಯಿಂದ.

**भावदीपः** – 'अविप्रलम्भस्तज्ज्ञानं तत्कृतत्वादयोऽपि च' । कल्प्या इति 'प्रत्यक्षः कस्यचिद्धर्मो वस्तुत्वादिति चोदितः ।' इति चानुभाष्यं हृदि कृत्वाऽह – **विवादेति** ।। विवादपदं धर्माधर्मादिकमित्यर्थः । अतीन्द्रियापरोक्षिणः सार्वज्ञ्यं कैमुत्यसिद्धमिति भावः ।।

ಅವಿಪ್ರಲಂಭಸ್ತಜ್‌ಜ್ಞಾನಂ ತತ್ಕೃತತ್ವಾದಯೋऽಪಿ ಚ ಕಲ್ಪ್ಯಾಃ

ಕಲ್ಪ್ಯಾಃ ಪ್ರತ್ಯಕ್ಷಃ ಕಸ್ಯಚಿದ್ಧರ್ಮೋ ವಸ್ತುತ್ವಾದಿತಿ ಚೋದಿತಃ ॥

ದೇವತಾಧಿಕರಣ (೧-೩-೮)

ಎಂಬ ಅನುಭಾಷ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ವ್ಯಾಖ್ಯಾನ ಮಾಡುತ್ತಿದ್ದಾರೆ, 'ವಿವಾದಪದಂ' ಇತ್ಯಾದಿಯಾಗಿ. 'ವಿವಾದಪದಂ' ಎಂದರೆ ಧರ್ಮಾಧರ್ಮಾದಿಗಳು ಎಂದರ್ಥ. ಅತೀಂದ್ರಿಯವಸ್ತುಗಳನ್ನೇ ಪ್ರತ್ಯಕ್ಷವಾಗಿ ನೋಡಿದ ಮೇಲೆ ಉಳಿದ ಎಲ್ಲ ವಸ್ತುಗಳ ಜ್ಞಾನವು ಸ್ವತಃಸಿದ್ಧವಾಗಿ ಸಾರ್ವಜ್ಞ್ಯವು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆಂದು ತಿಳಿಯಬೇಕು.

**भावदीपः – विप्रतिपन्नेति ।।** विवादास्पदं धर्मादिकं कस्यचिच्छरीरिणः प्रत्यक्षम् । कस्यचित् सुखिनः प्रत्यक्षं प्रमेयत्वाद् घटवदित्यादेरपि सम्भवेनेश्वरे सार्वज्ञ्यसाधनवद् विप्रतिपन्नशरीरसुखदुःखादृष्टानित्यज्ञानादिरूपधर्मान्तरसाधना-पातादित्यर्थः ।।

ಟೀಕೆಯಲ್ಲಿ 'ವಿಪ್ರತಿಪನ್ನಧರ್ಮಾಂತರಸಾಧನಾಪಾತಾತ್' ಎಂದು ಹೇಳಿದ್ದಾರೆ. ಎಂದರೆ ಪ್ರಮೇಯತ್ವ ಹೇತುವಿನಿಂದ ಸಾರ್ವಜ್ಞವನ್ನು ಸಾಧನೆ ಮಾಡುವುದಾದರೆ ಏನನ್ನು ಬೇಕಾದರೂ ಸಾಧನೆ ಮಾಡಬಹುದು. 'ವಿವಾದಾಸ್ಪದಂ ಧರ್ಮಾದಿಕಂ ಕಸ್ಯಚಿತ್ ಶರೀರಃ ಪ್ರತ್ಯಕ್ಷಮ್, ಪ್ರಮೇಯತ್ವಾತ್' ಎಂಬುದಾಗಿ ಪ್ರಮೇಯತ್ವಹೇತುವಿನಿಂದ ನಮ್ಮಂತೆ ಈಶ್ವರನಿಗೂ ಶರೀರವಿದೆ ಎಂದು ಸಾಧಿಸಬಹುದು. ಅದರಂತೆ, 'ವಿವಾದಪದಂ ಧರ್ಮಾದಿಕಂ ಕಸ್ಯಚಿತ್ ಸುಖಿನಃ ಪ್ರತ್ಯಕ್ಷಮ್ ಪ್ರಮೇಯತ್ವಾತ್' ಎಂಬ ಅನುಮಾನದಿಂದ ಸುಖದುಃಖಾದಿಗಳು ಕೂಡ ಈಶ್ವರನಲ್ಲಿವೆ ಎಂದು ಆಗಬೇಕಾದೀತು. ಇದರಂತೆ ಅನಿತ್ಯ ಜ್ಞಾನಾದಿಗಳು ಕೂಡ ಪ್ರಮೇಯತ್ವ ಹೇತುವಿನಿಂದ ಈಶ್ವರನಲ್ಲಿ ಬರಬೇಕಾದೀತು.

**भावदीपः – केवलान्वयीति ।।** केवलान्वयिनः सामान्यहीनत्वेन प्रसिद्धेषु सामान्यविशेषसमवायाभावेष्वपि सत्त्वादित्यर्थः ।। **क्वचिदिति ।।** अन्यथा सप्तपदार्थ नियमभङ्गापत्तेरिति भावः ।।

ಟೀಕೆಯಲ್ಲಿ 'ಕೇವಲಾನ್ವಯಿಧರ್ಮತ್ವಾತ್' ಎಂದು ಹೇಳಿದ್ದಾರೆ. ಅಂದರೆ ಪ್ರಮೇಯತ್ವವು ಜಾತಿ ಎಂದು ಹೇಳಲಾಗದು. ಯಾವುದು ಕೇವಲಾನ್ವಯಿಧರ್ಮವೋ, ಅದರಲ್ಲಿ ಜಾತಿಯಿರುವುದಿಲ್ಲ. ಮತ್ತು ಜಾತಿಯಿಲ್ಲವೆಂದು ಪ್ರಸಿದ್ಧವಾದ ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳಲ್ಲಿಯೂ ಪ್ರಮೇಯತ್ವವಿದೆ. ಆದ್ದರಿಂದ, ಇದರಲ್ಲಿ ಜಾತಿಯನ್ನು ಒಪ್ಪಲಾಗದು. 'ಕ್ವಚಿದಂತರ್ಭಾವಸ್ಯ ಅಪೇಕ್ಷಿತತ್ವಾತ್' ಎಂದು ಟೀಕೆಯಲ್ಲಿದೆ. ಅಂದರೆ, ಪ್ರಮೇಯತ್ವವನ್ನು ಉಪಾಧಿಯೆಂದು ಒಪ್ಪಿದರೂ ಸಪ್ತ ಪದಾರ್ಥಗಳಲ್ಲೇ ಅಂತರ್ಭಾವ ಮಾಡಬೇಕು. ಇಲ್ಲದಿದ್ದರೆ, ಅತಿರಿಕ್ತವಾದ ಪದಾರ್ಥವೆಂದು ಒಪ್ಪಿದಂತಾಗಿ ಸಪ್ತ ಪದಾರ್ಥನಿಯಮಕ್ಕೆ ಭಂಗ ಬರುತ್ತದೆ.

**भावदीपः – अस्वतन्त्रत्वाच्चेति ।।** प्रमापरतन्त्रत्वात् प्रमेयरूपाश्रय-परतन्त्रत्वाच्चेत्यर्थः ।। **एवमिति ।।** परत्वापरत्वगुरुत्वद्रवत्वादावपि परस्य भाव एव

परत्वम्, नतु ततोऽतिरिक्तमित्यापत्त्या परत्वादेरपि गुणत्वेन पृथग्गणनं न स्यादित्यर्थः ।।

ಟೀಕೆಯಲ್ಲಿ 'ಅಸ್ವತಂತ್ರತ್ವಾಚ್ಚ' ಎಂದು ಹೇಳಿದ್ದಾರೆ. ಅಂದರೆ, ಪ್ರಮೇಯತ್ವವು ಪ್ರಮೇಯಾಧೀನ-ವಾದ್ದರಿಂದ ಪ್ರಮೇಯರೂಪವಾದ ಆಶ್ರಯದ ಅಧೀನವಾದ್ದರಿಂದಲೂ ದ್ರವ್ಯವೆಂದು ಹೇಳಲಾಗದೆಂದರ್ಥ. 'ಏವಂ ಪರತ್ವಾಪರತ್ವಾದಿಗುಣಾನಾಂ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ - ಪ್ರಮೇಯದ ಧರ್ಮವೇ ಪ್ರಮೇಯತ್ವ ಎಂದು ಹೇಳುವುದಾದಲ್ಲಿ ಪರ ಎಂಬುದರ ಧರ್ಮವೇ ಪರತ್ವ. ಗುರುವಿನ ಧರ್ಮವೇ ಗುರುತ್ವ. ದ್ರವದ ಧರ್ಮವೇ ದ್ರವತ್ವ ಎಂದಂತಾಗಿ ಪರತ್ವ, ಅಪರತ್ವ, ಗುರುತ್ವ, ದ್ರವತ್ವ ಮೊದಲಾದವುಗಳೆಲ್ಲ ಪ್ರತ್ಯೇಕ ಗುಣಗಳೆಂದು ಪರಿಗಣಿಸದೇ ಇರಬೇಕಾದೀತು.

**भावदीपः – लङ्घनेति ।। लङ्घने जङ्घाशून्यत्वादित्यर्थः । प्राणिस्थादातो लजन्यतरस्याम्' इति जङ्घाशब्दान्मत्वर्थे लच्प्रत्ययः । 'जङ्घालोऽतिजवस्तुल्यौ' इत्यमरोक्तेः ।।**

ಟೀಕೆಯಲ್ಲಿ 'ಉಕ್ತದೋಷಲಂಘನಾಜಂಘಾಲತ್ವಾತ್' ಎಂದಿದೆ. 'ನ ತಾವದ್ ದ್ರವ್ಯಮ್' ಇತ್ಯಾದಿ ಟೀಕೆಯಿಂದ ಹಿಂದೆ ದ್ರವ್ಯಾದಿಗಳಲ್ಲಿ ಅಂತರ್ಭಾವ ಮಾಡಿದರೆ ಏನೇನು ದೋಷಗಳು ಬರುತ್ತವೆಂದು ಹೇಳಲಾಯಿತೋ, ಆ ಎಲ್ಲ ದೋಷಗಳನ್ನು ದಾಟಲು ಮೊಣಕಾಲು ಇಲ್ಲ ಎಂದು ಇದರ ಅರ್ಥ. ಪ್ರಾಣಿಸ್ಥಾದಾತೋಲಜದನ್ಯತರಸ್ಯಾಂ' ಎಂಬ ಸೂತ್ರದಿಂದ ಜಂಘಾ ಶಬ್ದದ ಮೇಲೆ ಮತ್ವರ್ಥದಲ್ಲಿ 'ಲಚ್' ಪ್ರತ್ಯಯವನ್ನು ವಿಧಿಸಲಾಗಿದೆ. 'ಜಂಘಾಲೋ ಅತಿಜವಸ್ತುಲ್ಯೌ ಜಂಘಾಕರಿಖಜಾಂಕಿಕೌ' ಎಂದು ಅಮರಕೋಶದಲ್ಲಿ 'ಜಂಘಾಲ' ಮತ್ತು 'ಅತಿಜವ' ಎಂಬ ಎರಡು ಶಬ್ದಗಳಿಗೆ ಜಂಘಾಬಲದಿಂದ ಬೇಗನೆ ನಡೆಯುವವನು ಎಂಬರ್ಥವನ್ನು ಹೇಳಲಾಗಿದೆ. ಪ್ರಕೃತ ದ್ರವ್ಯಾದಿಗಳಲ್ಲಿ ಅಂತರ್ಭಾವ ಮಾಡಿದಾಗ, ಹಿಂದೆ ಹೇಳಿದ ದೋಷಗಳನ್ನು ನಿಮಗೆ ತಪ್ಪಿಸಿಕೊಳ್ಳಲಾಗುವುದಿಲ್ಲ ಎಂದರ್ಥವಾಗುತ್ತದೆ.

**भावदीपः – धर्मान्तरेऽपीति ।। अभिधेयत्वव्यापकत्वादिरूपेऽयमेव खण्डनमार्ग इत्यर्थः । पर्वतेतरत्वादीनां व्याप्तिरस्ति नवा । आद्यं निराह – का नो हानिरिति।।**

ಹೀಗೆ ಪ್ರಮೇಯತ್ವದಿಂದ ಸರ್ವಜ್ಞತ್ವವನ್ನು ಸಾಧಿಸಲು ಹೊರಟಾಗ ಏನೇನು ದೋಷಗಳನ್ನು ಹೇಳಲಾಯಿತೋ, ಇದೇ ದೋಷಗಳು ಅಭಿಧೇಯತ್ವ ಅಥವಾ ಜ್ಞೇಯತ್ವಗಳನ್ನು ಹೇತುವನ್ನು ಮಾಡಿದಾಗಲೂ ಬರುತ್ತವೆಂದು ತಿಳಿಯಬೇಕು.

'ಶರೀರ್ಯಜನ್ಯತ್ವಾತ್' ಎಂಬುದು ಉಪಾಧಿಯಾಗುವುದಾದರೆ, ಪರ್ವತೇತರತ್ವಾದಿಗಳು ಕೂಡ ಉಪಾಧಿ-ಯಾಗಬೇಕಾದೀತು. ಹಾಗೆ ಹೇಳಿದರೆ, ಪರ್ವತೇತರತ್ವಾದಿಗಳಿಗೆ ವ್ಯಾಪ್ತಿಯಿದೆಯೋ ಇಲ್ಲವೋ ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ವ್ಯಾಪ್ತಿಯಿದೆ ಎಂಬ ಪಕ್ಷವನ್ನು 'ಕಾ ನೋ ಹಾನಿಃ' ಎಂಬ ಟೀಕೆಯಿಂದ ನಿರಾಕರಿಸಿದ್ದಾರೆ.

**भावदीपः** – द्वितीयं प्रत्याह – **अनुमानेति** ।। अनुमानं प्रत्युपजीव्येन व्याप्तिग्राहकानुकूलतर्केणेत्यर्थः । 'अनुकूलेन तर्केण सनाथे सति साधने । साध्यव्यापकताभङ्गात् पक्षे नोपाधिसम्भवः ।।' इति न्यायादिति भावः ।

ವ್ಯಾಪ್ತಿಯಿಲ್ಲವೆಂಬ ಪಕ್ಷವನ್ನು 'ಅನುಮಾನೋಪಜೀವ್ಯೇನ ಬಾಧಾತ್' ಎಂಬ ಟೀಕೆಯಿಂದ ನಿರಾಕರಿಸಿದ್ದಾರೆ. ಪರ್ವತೇತರತ್ವಾದಿಗಳಿಗೆ ವ್ಯಾಪ್ತಿಯಿರುವುದಾದರೆ ಅನುಮಾನಕ್ಕೆ ಉಪಜೀವ್ಯವಾದ ಅನುಕೂಲ ತರ್ಕದಿಂದ ಬಾಧವು ಬರುತ್ತದೆ. ಆದ್ದರಿಂದಲೇ, ಪರ್ವತೇತರತ್ವಾದಿಗಳು ಆ ಸಂದರ್ಭದಲ್ಲಿ ಉಪಾಧಿಯಾಗುವುದಿಲ್ಲ ಎಂದರ್ಥ. ಏಕೆಂದರೆ, ಅನುಮಾನಕ್ಕೆ ಉಪಜೀವ್ಯವಾದದ್ದು ವ್ಯಾಪ್ತಿ. ವ್ಯಾಪ್ತಿಗೆ ಗ್ರಾಹಕವಾದದ್ದು ಅನುಕೂಲ ತರ್ಕವಾಗಿರುತ್ತದೆ.

ಅನುಕೂಲೇನ ತರ್ಕೇಣ ಸನಾಥೇ ಸತಿಸಾಧನೇ ।
ಸಾಧ್ಯವ್ಯಾಪಕತಾಭಂಗಾತ್ ಪಕ್ಷೇ ನೋಪಾಧಿಸಂಭವಃ ॥

ಅನುಕೂಲ ತರ್ಕವಿದ್ದಾಗ ಸಾಧ್ಯವ್ಯಾಪಕತ್ವಕ್ಕೆ ಭಂಗ ಬರುತ್ತದೆ. ಆದ್ದರಿಂದ, ಪಕ್ಷದಲ್ಲಿ ಉಪಾಧಿಯೇ ಬರುವುದಿಲ್ಲ ಎಂಬ ನ್ಯಾಯದಂತೆ ಇಲ್ಲಿ ಬಾಧದೋಷವನ್ನು ತಿಳಿಯಬೇಕು.

**भावदीपः** – पक्षव्यावृत्त्यर्थत्वादित्येतदुपपाद्य असिद्धिपरिहारार्थत्वादित्येतदुपपादयति – **नचेत्यादिना** ।।

'ಪಕ್ಷವ್ಯಾವೃತ್ತ್ಯರ್ಥತ್ವಾತ್' ಎಂಬುದನ್ನು ಉಪಪಾದನೆ ಮಾಡಿ 'ಅಸಿದ್ಧಿಪರಿಹಾರಾರ್ಥತ್ವಾತ್' ಎಂಬುದನ್ನು ಸಮರ್ಥಿಸಲು 'ನಚ' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः** – **सन्निहितमिति** ।। अवर्जनीयसन्निधि, नतु कार्यकारीति तूत्तरत्र समयपादे 'सम्बन्धानुपपत्तेश्च' 'अन्तवत्त्वमसर्वज्ञता वा' इत्यत्र निरसिष्यत इत्यर्थः ।।

ಶರೀರವು ಕೇವಲ ಅವರ್ಜನೀಯ ಸನ್ನಿಧಿ ಎನಿಸುತ್ತದೆ ಹೊರತು, ಕಾರ್ಯಕಾರಿಯಾಗುವುದಿಲ್ಲವೆಂದು ಮುಂದೆ ಸಮಯಪಾದದಲ್ಲಿ 'ಸಂಬಂಧಾನುಪಪತ್ತೇಶ್ಚ' 'ಅಂತವತ್ತ್ವಮಸರ್ವಜ್ಞತಾ ವಾ' ಎಂಬ ಸೂತ್ರಗಳಲ್ಲಿ ನಿರಾಕರಿಸಲಾಗುತ್ತದೆ.

**भावदीपः** – **पामरेति** ।। वेदः पामरप्रणीतः वेदत्वाद्, व्यतिरेकेण गगनवदित्यपि प्रयोक्तुं शक्यत्वादित्यर्थः । पामरप्रणीतलौकिकवाक्यात् सपक्षाद् व्यावृत्त्या पक्षमात्रवृत्तेरसाधारण्यं चेत् सर्वज्ञप्रणीतपुराणादितो व्यावृत्त्या पक्षमात्रवृत्तेरसाधारणानैकान्त्यं तवापि तुल्यमित्याह – **असाधारण्यस्येति** ।।

'ವೇದಃ ಪಾಮರಪ್ರಣೀತಃ ವೇದತ್ವಾತ್, ವ್ಯತಿರೇಕೇಣ ಗಗನವತ್' ಎಂದು ಸಹ ಅನುಮಾನ ಮಾಡಲು ಬರುತ್ತದೆ. ಈ ಅನುಮಾನದಲ್ಲಿ ವೇದತ್ವ ಎಂಬ ಹೇತುವು ಅಸಾಧಾರಣ್ಯದೋಷಗ್ರಸ್ತವಾಗಿದೆ. ಏಕೆಂದರೆ ಪಾಮರಪ್ರಣೀತವಾದ ಲೌಕಿಕ ವಾಕ್ಯವೆಂಬ ಸಪಕ್ಷದಲ್ಲಿ ವೇದತ್ವವಿಲ್ಲ. ಕೇವಲ ಪಕ್ಷಮಾತ್ರದಲ್ಲಿ ಇರುತ್ತದೆ. ಆದ್ದರಿಂದ, ಈ ಅನುಮಾನವು ದುಷ್ಟವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದರೆ, ನಿಮಗೂ ಕೂಡ ಇದೇ ದೋಷವು ಪ್ರಾಪ್ತವಾಗುತ್ತದೆ. ಏಕೆಂದರೆ, ಸರ್ವಜ್ಞಪ್ರಣೀತವಾದ ಪುರಾಣಾದಿಗಳಲ್ಲಿ ವೇದತ್ವಹೇತುವು ಇರುವುದಿಲ್ಲ. ಕೇವಲ ಪಕ್ಷದಲ್ಲಷ್ಟೇ ಹೇತುವು ಇರುತ್ತದೆ. ಆದ್ದರಿಂದ ಅಸಾಧಾರಣ್ಯ ಅನೈಕಾಂತ್ಯ ದೋಷವು ನಿಮಗೂ ಸಮಾನವಾಗಿದೆ ಎಂದು 'ಅಸಾಧಾರಣ್ಯಸ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः – उक्तेति ।।** ईश्वरसार्वज्ञ्यासिद्धिरूपोक्तदोषादित्यर्थः । वेदप्रणेतृत्वोक्त्य-न्यथानुपपत्त्या सार्वज्ञं सेत्स्यतीत्यतो व्यभिचारान्नैवमित्याह – **ऋग्वेद एवेति ।। तद्वाक्यादिति ।।** ऋग्वेद इति वाक्यादित्यर्थः ।

ಈಶ್ವರನಿಗೆ ಸಾರ್ವಜ್ಞವು ಸಿದ್ಧವಾಗುವುದಿಲ್ಲ ಎಂದು ಹಿಂದೆ ಹೇಳಿದ ದೋಷವು ಪುನಃ ಪ್ರಾಪ್ತ-ವಾಗುತ್ತದೆಂದರ್ಥ. ವೇದಪ್ರಣೇತೃತ್ವೋಕ್ತಿಯ ಅನ್ಯಥಾನುಪಪತ್ತಿಯಿಂದ ಸಾರ್ವಜ್ಞ್ಯವು ಸಿದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ವ್ಯಭಿಚಾರ ಬರುವ ಕಾರಣ ಹೀಗೆ ಹೇಳಬಾರದೆಂದು 'ಋಗ್ವೇದ ಏವ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ತದ್ವಾಕ್ಯಾತ್' ಎಂದರೆ 'ಋಗ್ವೇದಃ' ಎಂಬ ವಾಕ್ಯದಿಂದ ಎಂದರ್ಥ. ಯಾವುದೇ ವಿಶೇಷವಿಲ್ಲವೆಂದು ಇದರ ಅಭಿಪ್ರಾಯ.

**भावदीपः –** अविशेषादिति भावः । विशेषमाशङ्कते – **तेषामिति ।। समं प्रकृतेऽपि ।** उक्तदिशा ईश्वरसार्वज्ञस्याप्यसिद्धेरिति भावः । **'यः सर्वज्ञः'** इत्यादि वेदेनैव तत्सार्वज्ञसिद्धिरस्त्वित्यत आह – **चक्रकेति ।।**

ವಿಶೇಷ ಕಾರಣವನ್ನು ಹೇಳುವ ಮೂಲಕ ಆಶಂಕಿಸುತ್ತಿದ್ದಾನೆ, ತೇಷಾಮಿತ್ಯಾದಿ ಟೀಕೆಯಿಂದ. ಅಸಾರ್ವಜ್ಞ ದೋಷವು ಪ್ರಕೃತ ನಿಮಗೂ ಸಮಾನ. ಏಕೆಂದರೆ, ಹಿಂದೆ ಹೇಳಿದಂತೆ ಈಶ್ವರನಿಗೆ ಸಾರ್ವಜ್ಞವು ಇಲ್ಲಿಯ ತನಕ ಸಿದ್ಧವೇ ಆಗಿಲ್ಲವೆಂದು ಅಭಿಪ್ರಾಯ. 'ಯಃ ಸರ್ವಜ್ಞಃ' ಇತ್ಯಾದಿ ವೇದ ವಾಕ್ಯದಿಂದಲೇ ಈಶ್ವರನಿಗೆ ಸಾರ್ವಜ್ಞ ಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಚಕ್ರಕ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः –** ईश्वरस्य सर्वज्ञत्वे सिद्धे 'तस्माद् यज्ञाद्' इत्यादिना वेदस्य सर्वज्ञप्रणीतत्वसिद्धिः, तत्सिद्धौ च वेदस्य प्रामाण्यसिद्धिः, तत्सिद्धौ च वेदेनेश्वर-सर्वज्ञत्वसिद्धिरिति चक्रकापातादित्यर्थः । नित्यत्वापेक्षत्वाच्च मूलप्रमाणस्येत्येतद् व्याचष्टे – **किञ्चेति ।।**

ಈಶ್ವರನು ಸರ್ವಜ್ಞನೆಂದು ಸಿದ್ಧವಾದರೆ 'ತಸ್ಮಾದ್ ಯಜ್ಞಾತ್' ಎಂಬ ವೇದವಾಕ್ಯದಿಂದ ಸರ್ವಜ್ಞಪ್ರಣೀತತ್ವವು ವೇದಕ್ಕೆ ಸಿದ್ಧವಾಗುತ್ತದೆ. ವೇದವು ಸರ್ವಜ್ಞಪ್ರಣೀತವೆಂದು ಸಿದ್ಧವಾದರೆ ವೇದವು ಪ್ರಮಾಣವೆಂದು ಸಿದ್ಧವಾಗುತ್ತದೆ. ಅಂತಹ ವೇದದಿಂದ ಈಶ್ವರನು ಸರ್ವಜ್ಞನೆಂದು ಸಿದ್ಧನಾಗುತ್ತಾನೆ. ಹೀಗೆ, ಚಕ್ರಕಾಶ್ರಯ ದೋಷವು ಬರುತ್ತದೆ. 'ನಿತ್ಯತ್ವಾಪೇಕ್ಷತ್ವಾಚ್ಚ ಮೂಲಪ್ರಮಾಣಸ್ಯ' ಎಂಬ ಭಾಷ್ಯವನ್ನು 'ಕಿಂಚ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – मूलेति ।।** अर्थमुपलभ्य रचितत्वं प्रणीतत्वमिति वाच्यत्वादिति भावः । तत्किं प्रत्यक्षमनुमानं पौरुषेयवाक्यं वा? न त्रयमपीति क्रमेण निराह – **नचेति ।।**

ವೇದವು ಆಪ್ತಪ್ರಣೀತವಾದಲ್ಲಿ ಅದಕ್ಕೊಂದು ಮೂಲ ಪ್ರಮಾಣ ಬೇಕಾಗುತ್ತದೆ. ಅಂದರೆ, ಮತ್ತೊಂದು ಪ್ರಮಾಣದಿಂದ ಅರ್ಥವನ್ನು ತಿಳಿದು ವೇದವನ್ನು ರಚನೆ ಮಾಡಿದ್ದಾರೆಂದು ಹೇಳಬೇಕಾಗುತ್ತದೆ. ಆ ಮೂಲ ಪ್ರಮಾಣವೆಂದರೆ ಪ್ರತ್ಯಕ್ಷವೋ ಅನುಮಾನವೋ, ಪೌರುಷೇಯ ವಾಕ್ಯವೋ, ಮೂರನ್ನು ಸಹ ಕ್ರಮವಾಗಿ ನಿರಾಕರಿಸುತ್ತಿದ್ದಾರೆ, 'ನಚ' ಇತ್ಯಾದಿ ಟೀಕೆಯಿಂದ.

**भावदीपः –** स्वतःप्रामाण्यप्रसिद्धेश्चेत्येतदवतार्य व्याचष्टे – **नन्विति ।।** न केवलमनित्यत्व इत्यपेरर्थः । स्वतस्त्वेन ज्ञानजनकसहजशक्त्यैव प्रमात्वजनकत्वेनेत्यर्थः।। **प्रामाण्यं नामेति ।।** वेदस्येत्यनुषङ्गः ।

'ಸ್ವತಃಪ್ರಾಮಾಣ್ಯಪ್ರಸಿದ್ಧೇಶ್ಚ' ಎಂಬುದಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ನನು' ಇತ್ಯಾದಿ ಟೀಕೆಯಿಂದ. 'ಅಪಿ' ಶಬ್ದಕ್ಕೆ 'ನನು ವೇದಸ್ಯ ನಿತ್ಯತ್ವೇऽಪಿ' ಎಂಬಲ್ಲಿರುವ 'ಅಪಿ' ಶಬ್ದಕ್ಕೆ ಅನಿತ್ಯತ್ವವಿಷಯದಲಷ್ಟೇ ಅಲ್ಲ, ನಿತ್ಯತ್ವವಿಷಯದಲ್ಲೂ ಪ್ರಾಮಾಣ್ಯವಿಲ್ಲ ಎಂದರ್ಥ. ಏಕೆಂದರೆ, ಪ್ರಾಮಾಣ್ಯವು ಸ್ವತಃಸಿದ್ಧವಾದ್ದರಿಂದ ಜ್ಞಾನಜನಕ ಸಹಜಶಕ್ತಿಯಿಂದಲೇ ಯಥಾರ್ಥಜ್ಞಾನಜನಕವಾಗಿದೆ. 'ಪ್ರಾಮಾಣ್ಯಂ ನಾಮ' ಎಂಬಲ್ಲಿ 'ವೇದಸ್ಯ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು.

**भावदीपः –** तादृशप्रामाण्यस्य स्वतस्त्वं ज्ञानयाथार्थ्यस्वतस्त्वायत्तमिति भावेन व्यनक्ति – **नचेति ।।** ज्ञाननिष्ठमित्यर्थः ।। **याथार्थ्यमिति ।। प्रमात्वरूपम् ।। ज्ञानकारणेति ।।** कारणपदं समग्रकारणपरम् ।

ವೇದಕ್ಕೆ ಹೇಳುವಂತಹ ಪ್ರಾಮಾಣ್ಯವು ಸ್ವತಃಸಿದ್ಧವಾಗಿದೆ. ಅಂದರೆ, ಜ್ಞಾನದ ಯಾಥಾರ್ಥ್ಯವು ಜ್ಞಾನಕಾರಣಕ್ಕಿಂತ ವ್ಯತಿರಿಕ್ತ ಕಾರಣವನ್ನು ಅಪೇಕ್ಷಿಸುವುದಿಲ್ಲ. ಈ ಅಭಿಪ್ರಾಯದಿಂದ 'ನಚ' ಇತ್ಯಾದಿ ಗ್ರಂಥವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಯಾಥಾರ್ಥ್ಯವೆಂದರೆ ಜ್ಞಾನದಲ್ಲಿ ಇರುವ ಯಥಾರ್ಥತ್ವ ಎಂದರ್ಥ. ಅದು ಪ್ರಮಾತ್ವರೂಪವಾಗಿದೆ. ಜ್ಞಾನಕಾರಣ ಎಂಬಲ್ಲಿರುವ ಕಾರಣಪದವು ಸಮಗ್ರ ಕಾರಣಗಳನ್ನು ಹೇಳುತ್ತಿದೆ.

**भावदीपः** – ननु दोषाभावस्य कारणत्वेऽपि नाऽस्माकमनिष्टमित्युपरितनवाक्याद् दोषाभावस्य याथार्थ्ये कारणत्वेन एवंरूपसाध्यस्य साधने बाध इति चेन्न ।

ಟೀಕೆಯಲ್ಲಿ 'ಯಾಥಾರ್ಥ್ಯಂ ಜ್ಞಾನಕಾರಣ ಅತಿರಿಕ್ತಕಾರಣನಿರಪೇಕ್ಷಮ್, ಅಯಾಥಾರ್ಥ್ಯ ಅತಿರಿಕ್ತತ್ವೇಽಪಿ ಜ್ಞಾನಧರ್ಮತ್ವಾತ್ ಜ್ಞಾನತ್ವವತ್' ಎಂಬ ಅನುಮಾನದಿಂದ ಯಾಥಾರ್ಥ್ಯವು ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಕಾರಣವನ್ನು ಅಪೇಕ್ಷೆ ಪಡುವುದಿಲ್ಲವೆಂದು ಸಾಧನೆ ಮಾಡಿದ್ದಾರೆ. ಆದರೆ ದೋಷಾಭಾವವನ್ನು ಕಾರಣವೆಂದು ನಾವೂ ಸಹ ಹೇಳುತ್ತೇವೆ. ಮುಂದೆ ದೋಷಾಭಾವವನ್ನು ಕಾರಣವೆಂದು ಸಮರ್ಥಿಸಲಾಗುತ್ತದೆ. ಹೀಗಿರುವಾಗ ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಮತ್ತೊಂದು ಕಾರಣವನ್ನು ಅಪೇಕ್ಷೆ ಪಡುವುದಿಲ್ಲವೆಂದು ಸಾಧನೆ ಮಾಡಿದರೆ, ಬಾಧದೋಷವು ಬರುತ್ತದಲ್ಲವೇ?

**भावदीपः** – भावकारणानपेक्षमिति तात्पर्यात् ।

ಭಾವರೂಪವಾದ ಕಾರಣವನ್ನು ಅಪೇಕ್ಷೆ ಪಡುವುದಿಲ್ಲವೆಂದಷ್ಟೇ ಅನುಮಾನದ ಅಭಿಪ್ರಾಯ. ದೋಷಾಭಾವವು ಅಭಾವರೂಪವಾದ್ದರಿಂದ, ಇದನ್ನು ಕಾರಣವನ್ನಾಗಿ ಮುಂದೆ ಹೇಳಿದರೂ ಕೂಡ, ಬಾಧದೋಷಕ್ಕೆ ಅವಕಾಶವಿರುವುದಿಲ್ಲ.

**भावदीपः** – यद्वा दोषाभावोऽपि न प्रामाण्यकारणम् । यादृच्छिकसंवादिषु सत्यपि दोषो प्रमाणज्ञानोदयादिति तत्त्वनिर्णयटीकोक्त्या तर्हि दोषाभावः कारणमित्यायातमिति चेन्न । तथा सत्युत्सर्गापवादयोः काप्यभावप्रसङ्गादिति सुधोक्त्या च दोषाभावः कारणं नेति भावेन एवं साध्योक्तिः ।

ಅಥವಾ, ದೋಷಾಭಾವವು ಪ್ರಾಮಾಣ್ಯಕ್ಕೆ ಕಾರಣವೇ ಅಲ್ಲ. ಏಕೆಂದರೆ 'ದೋಷಾಭಾವೋಽಪಿ ನ ಪ್ರಾಮಾಣ್ಯಕಾರಣಮ್, ಯಾದೃಚ್ಛಿಕಸಂವಾದಿಷು ಸತ್ಯಪಿ ದೋಷೇ ಪ್ರಮಾಣಜ್ಞಾನೋದಯಾತ್' ಎಂದು ತತ್ತ್ವನಿರ್ಣಯಟೀಕೆಯಲ್ಲಿ ಹೇಳಿದ್ದಾರೆ. ಅಂದರೆ ದೋಷಾಭಾವವನ್ನು ಕಾರಣವೆಂದು ಹೇಳಬೇಕಾದರೆ ಅನ್ವಯವ್ಯತಿರೇಕವನ್ನು ಹೇಳಬೇಕು. 'ದೋಷಾಭಾವವಿದ್ದರೆ, ಪ್ರಾಮಾಣ್ಯವಿರುವುದಿಲ್ಲ. ದೋಷಾಭಾವವಿಲ್ಲದಿದ್ದಲ್ಲಿ, ಪ್ರಾಮಾಣ್ಯವಿರುತ್ತದೆ' ಎಂದು ಹೇಳಬೇಕು. ಆದರೆ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ 'ನದೀತೀರೇ ಪಂಚಫಲಾನಿ ಸಂತಿ' ಎಂಬ ವಾಕ್ಯವನ್ನು ಪ್ರಯೋಗಿಸುತ್ತಾನೆ. ಈ ವಾಕ್ಯದಲ್ಲಿ ವಿಪ್ರಲಿಪ್ಸ ಎಂಬ ದೋಷವೇ ಇದೆ. ಆದರೆ ಪ್ರಾಮಾಣ್ಯವು ಕೂಡ ಇರುತ್ತದೆ. ಆದ್ದರಿಂದ ದೋಷಾಭಾವವಿದ್ದರೆ ಮಾತ್ರ ಪ್ರಾಮಾಣ್ಯವಿರುತ್ತದೆಂಬ ಅನ್ವಯವ್ಯಾಪ್ತಿಯನ್ನು ಇಲ್ಲಿ ಹೇಳಲಾಗದು. ಆದ್ದರಿಂದ ದೋಷಾಭಾವವನ್ನು ಪ್ರಾಮಾಣ್ಯಕ್ಕೆ ಕಾರಣವೆಂದು ಹೇಳಲು ಬರುವುದಿಲ್ಲ. ಮತ್ತು ನ್ಯಾಯಸುಧೆಯಲ್ಲಿ 'ತರ್ಹಿ ದೋಷಾಭಾವಃ ಕಾರಣಮಿತ್ಯಾಯಾತಮಿತಿ ಚೇನ್ನ, ತಥಾ ಸತಿ ಉತ್ಸರ್ಗಾಪವಾದಯೋಃ ಕ್ವಾಪ್ಯಭಾವಪ್ರಸಂಗಾತ್' ಹಾಗಾದರೆ ದೋಷಾಭಾವವನ್ನು ಕಾರಣವೆಂದು ಹೇಳುತ್ತಿರೋ? ಎಂದು ಪ್ರಶ್ನಿಸಿಕೊಂಡು, ದೋಷಾಭಾವವನ್ನು ಕಾರಣವೆಂದು ಹೇಳಿದರೆ, ಉತ್ಸರ್ಗಾಪವಾದನ್ಯಾಯವೇ ಎಲ್ಲಿಯೂ ಇಲ್ಲವೆಂದು ಹೇಳಬೇಕಾದೀತು ಎಂದು

ಉತ್ತರಿಸಿದ್ದಾರೆ. ಸುಧೆಯ ಈ ಮಾತಿನಿಂದಲೂ ದೋಷಾಭಾವವು ಕಾರಣವಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಕೃತ ಅನುಮಾನದಲ್ಲಿ ಯಾಥಾರ್ಥ್ಯಕ್ಕೆ ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಮತ್ತೊಂದು ಕಾರಣದ ಅಪೇಕ್ಷೆಯಿರುವುದಿಲ್ಲವೆಂದು ಸಾಧನೆ ಮಾಡಿದರೆ, ಬಾಧದೋಷಕ್ಕೆ ಸರ್ವಥಾ ಅವಕಾಶವಿರುವುದಿಲ್ಲ.

**भावदीपः – अग्रे कारणत्वोक्तिस्तु तावता प्रकृतवेदनित्यत्वाक्षतेरभ्युपेत्य वादेन वा 'निर्दोषः शब्द आगमः' इति प्रमाणलक्षणे 'आगमोऽदुष्टवाक्यं च' इति तत्त्वनिर्णयादौ च दोषाभावस्याप्युक्त्या दण्डगतदार्ढ्यादिवत् प्रयोजकत्वाभिप्राया वा**

ಹಾಗಾದರೆ ಮುಂದೆ ಟೀಕೆಯಲ್ಲಿಯೇ ದೋಷಾಭಾವವನ್ನು ಕಾರಣವೆಂದು ಹೇಳಿದ್ದಾರಲ್ಲವೇ? ಎಂದರೆ, ಅಭ್ಯುಪೇತ್ಯವಾದದಿಂದ ಹಾಗೆ ಹೇಳಿದ್ದು. ಅಂದರೆ ವೇದಾಪೌರುಷೇಯತ್ವವನ್ನು ಸಾಧನೆ ಮಾಡುವಾಗ ದೋಷಾಭಾವವನ್ನು ಪ್ರಾಮಾಣ್ಯಕ್ಕೆ ಕಾರಣವೆಂದು ಒಪ್ಪುವುದರಿಂದ ಏನೂ ಹಾನಿಯಿರುವುದಿಲ್ಲ. ಒಂದುವೇಳೆ ದೋಷಾಭಾವವನ್ನು ಕಾರಣವೆಂದು ಒಪ್ಪಿದರೂ ಸಹ ವೇದಾಪೌರುಷೇಯತ್ವಕ್ಕೆ ಏನೂ ಭಂಗವಿಲ್ಲ ಎಂಬ ಅಭಿಪ್ರಾಯದಿಂದಷ್ಟೇ ಟೀಕೆಯ ಮಾತು ಹೊರಟಿದೆ. ಅಥವಾ ಪ್ರಮಾಣಲಕ್ಷಣದಲ್ಲಿ 'ನಿರ್ದೋಷಃ ಶಬ್ದಃ ಆಗಮಃ' ಎಂದು ದೋಷಾಭಾವವನ್ನು ಸೇರಿಸಿಕೊಂಡೇ ಲಕ್ಷಣವನ್ನು ಹೇಳಿರುತ್ತಾರೆ. ತತ್ತ್ವನಿರ್ಣಯ-ದಲ್ಲಿಯೂ 'ಆಗಮೋऽದುಷ್ಟವಾಕ್ಯಂ ಚ' ಎಂದು ದೋಷಾಭಾವವನ್ನು ಸೇರಿಸಿಕೊಂಡೇ ಲಕ್ಷಣವನ್ನು ಹೇಳಿದ್ದಾರೆ. ಈ ವಾಕ್ಯಗಳು ಕೇವಲ ಪ್ರಯೋಜಕತ್ವಾಭಿಪ್ರಾಯದಿಂದ ಹೊರಟಿವೆ. ಹೇಗೆಂದರೆ ಘಟಕ್ಕೆ ದಂಡವೇ ಕಾರಣ. ಆದರೆ ದಂಡದಲ್ಲಿ ದಾರ್ಢ್ಯವಿಲ್ಲದಿದ್ದರೆ ಘಟ ಹುಟ್ಟುವುದಿಲ್ಲ. ಅಂದಮಾತ್ರಕ್ಕೆ ದಂಡದಲ್ಲಿರುವ ದಾರ್ಢ್ಯವನ್ನು ಕಾರಣವೆಂದು ಯಾರೂ ಹೇಳುವುದಿಲ್ಲ. ಹೊರತಾಗಿ, ದಂಡವೇ ಕಾರಣ, ದಂಡದಲ್ಲಿರುವ ದಾರ್ಢ್ಯವು ಕೇವಲ ಪ್ರಯೋಜಕವೆಂದು ಹೇಗೆ ಹೇಳುತ್ತಾರೋ? ಅದರಂತೆ ದೋಷಾಭಾವವು ಕೇವಲ ಪ್ರಯೋಜಕವಾಗಿದೆ ಎಂಬ ಅಭಿಪ್ರಾಯವನ್ನು ತಿಳಿಯಬೇಕು.

**भावदीपः – ज्ञानजनकत्वशक्तिरेव प्रामाण्यजनकत्वशक्तिरिति पद्धत्युक्त्या ज्ञानजनकशक्तियाथार्थ्यजनकशक्त्योरेकत्वपक्षे चायं साध्यनिर्देशो बोध्यः ।**

ಕರಣಗಳಲ್ಲಿ ಯಾವ ಜ್ಞಾನಜನಕತ್ವಶಕ್ತಿಯಿದೆಯೋ, ಅದೇ ಪ್ರಾಮಾಣ್ಯಜನಕಶಕ್ತಿಯಾಗಿದೆ ಎಂದು ಕೆಲವರು ಹೇಳುತ್ತಾರೆ. ಇನ್ನು ಕೆಲವರು ಜ್ಞಾನಜನಕತ್ವ ಶಕ್ತಿಯು ಹೇಗೆ ಸಹಜವೋ, ಅದರಂತೆ ಪ್ರಾಮಾಣ್ಯಜನಕಶಕ್ತಿಯೂ ಕೂಡ ಸಹಜ. ಅಂದರೆ ಪ್ರಾಮಾಣ್ಯಜನನಶಕ್ತಿಯೇ ಬೇರೆ, ಜ್ಞಾನಜನಕಶಕ್ತಿಯೇ ಬೇರೆ ಎಂದು ಇನ್ನು ಕೆಲವರು ಹೇಳುತ್ತಾರೆ. ಈ ಎರಡು ಮತಗಳಲ್ಲಿ ಎರಡನೆಯ ಮತವನ್ನು ವಿವಕ್ಷಿಸಿದಾಗ, 'ಜ್ಞಾನಕಾರಣಾತಿರಿಕ್ತಕಾರಣನಿರಪೇಕ್ಷಂ' ಎಂಬ ಸಾಧ್ಯವು ಬಾಧಿತವೇ ಆಗುತ್ತದೆ. ಏಕೆಂದರೆ ಜ್ಞಾನಕಾರಣವಾದ ಯಾವ ಶಕ್ತಿಯಿದೆಯೋ, ಅದಕ್ಕಿಂತ ಬೇರೆಯಾದ ಶಕ್ತಿಯಿಂದಲೇ ಪ್ರಾಮಾಣ್ಯ ಹುಟ್ಟುತ್ತದೆ. ಆದ್ದರಿಂದ ಬಾಧದೋಷವು ಬರುತ್ತದೆ. ಆದ್ದರಿಂದ ಈ ಮತವನ್ನು ಬಿಟ್ಟು ಮೊದಲನೆಯ ಮತದ ಪ್ರಕಾರ ಅನುಮಾನವನ್ನು ಪ್ರಯೋಗಿಸಲಾಗಿದೆ ಎಂದು ತಿಳಿಯಬೇಕು. ಅಂದರೆ ಕರಣಗಳಲ್ಲಿ ಯಾವ ಜ್ಞಾನಜನಕತ್ವಶಕ್ತಿಯಿದೆಯೋ, ಅದೇ ಪ್ರಾಮಾಣ್ಯಜನಕಶಕ್ತಿಯಾಗಿದೆ ಎಂಬ ಮತದ ಪ್ರಕಾರ ಸಾಧ್ಯಕ್ಕೆ ಬಾಧದೋಷ ಬರಲು ಸಾಧ್ಯವಿಲ್ಲ.

ಮೊದಲೇ ಹೊಂದಲ್ಪಟ್ಟ ಜ್ಞಾನಕ್ಕೋಸ್ಕರ ಜೈಮಿನಿ ಋಷಿಗಳು ದೇವತೆಗಳಿಗೆ ಅಂತಹ ವಿದ್ಯೆಯಲ್ಲಿ ಅಧಿಕಾರ ಇಲ್ಲವೆಂದು ಹೇಳಿರುತ್ತಾರೆ.

**तत्वप्रकाशिका – सूत्रकारेण च तदुक्तमङ्गीकृत्य प्रयोजनान्तराय तस्य समर्थिततत्वादित्यर्थः । किमनयोर्मतयोर्विषयवैलक्षण्यकल्पनेन विरोध एव किं न स्यादित्यत आह – सर्वज्ञस्येति ।।**

ಆದರೆ, ಸೂತ್ರಕಾರರಾದ ಶ್ರೀವೇದವ್ಯಾಸದೇವರು ಜೈಮಿನಿ ಋಷಿಗಳ ಅಭಿಪ್ರಾಯವನ್ನು ಸ್ವೀಕಾರ ಮಾಡಿ, ಬೇರೆ ಫಲವಿಶೇಷ ಅಥವಾ ಜ್ಞಾನವಿಶೇಷ ಎಂಬ ಪ್ರಯೋಜನಕ್ಕೋಸ್ಕರ ದೇವತೆಗಳಿಗೆ ಆಯಾ ವಿದ್ಯೆಯಲ್ಲಿ ಅಧಿಕಾರವು ಪ್ರಾಪ್ತವಾಗುತ್ತದೆಂದು ಸಮರ್ಥನೆ ಮಾಡಿರುತ್ತಾರೆ. ಹೀಗೆ, ಇಬ್ಬರ ಅಭಿಪ್ರಾಯದಲ್ಲಿಯೂ ವಿಷಯವೈಲಕ್ಷಣ್ಯವಿರುವುದಕ್ಕೋಸ್ಕರ ವಿರೋಧಕ್ಕೆ ಅವಕಾಶವಿಲ್ಲ.

**तत्वप्रकाशिका – अतो देवानां सर्वविद्याधिकारित्वात् तदुपास्यत्वं हरेर्युक्तमिति सिद्धम् ।। ३३ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् देवताधिकरणम् ।।**

ಇಬ್ಬರ ಅಭಿಪ್ರಾಯದಲ್ಲಿಯೂ ವಿರೋಧವನ್ನೇ ಏಕೆ ಹೇಳಬಾರದು? ಎಂಬ ಪ್ರಶ್ನೆಗೆ 'ಸರ್ವಜ್ಞಸ್ಯ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ಆದ್ದರಿಂದ, ಈ ಅಧಿಕರಣದಲ್ಲಿ ಇಲ್ಲಿಯ ತನಕ ವಿಚಾರಮಾಡಿದಂತೆ ದೇವತೆಗಳಿಗೆ ಸಕಲ ವಿದ್ಯೆಗಳಲ್ಲಿಯೂ ಅಧಿಕಾರವಿರುತ್ತದೆ. ಅಂತಹ ದೇವತೆಗಳಿಂದ ಶ್ರೀಹರಿಯು ಉಪಾಸ್ಯನಾಗುತ್ತಾನೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ದೇವತಾಧಿಕರಣವು ಮುಗಿಯಿತು

**भावदीपः –**

**।। ॐ भावं तु बादरायणोऽस्ति हि ॐ ।।**

**समर्थयदिति** ।। समाहितमेतस्य साधुत्वं प्राक् । भाष्ये फले विशेषाभावादित्येतत् सौत्रतुशब्दार्थ इति भावेन देवानामित्यादिभाष्यं व्याचष्टे – देवानामिति ।।

ಭಾಷ್ಯದಲ್ಲಿ 'ಫಲವಿಶೇಷಾಭಾವಾತ್' ಎಂದು ಹೇಳಿದ್ದಾರೆ. ಇದು ಸೂತ್ರದ 'ತು' ಶಬ್ದದ ಅರ್ಥವಾಗಿದೆ. ಇದನ್ನು 'ದೇವಾನಾಂ' ಇತ್ಯಾದಿ ಟೀಕೆಯಿಂದ ಹೇಳುತ್ತಾ, ಭಾಷ್ಯವನ್ನೂ ಕೂಡ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – भगवानित्युक्त्या बादरायणपदं पूजार्थमिति सूचितम् । विमति-सूचनार्थत्वस्यादावुक्तत्वात् । प्राप्तपदानाममपीत्यस्यार्थः – **मोक्षेति** ।। फले विशेषभावादित्यस्यार्थः – **विद्योक्तेति** ।। अस्ति हि प्रकाशविशेष इत्येतद् व्याचष्टे – **नचेति** ।।

ಟೀಕೆಯಲ್ಲಿ 'ಭಗವಾನ್' ಎಂಬ ಪದವನ್ನು ಪ್ರಯೋಗ ಮಾಡಿದ್ದರಿಂದ ಸೂತ್ರದಲ್ಲಿರುವ ಬಾದರಾಯಣ ಪದವು ಗೌರವಾರ್ಥದಲ್ಲಿದೆ ಎಂದು ಸೂಚಿಸಿದಂತಾಯಿತು. 'ಬಾದರಾಯಣತ್ವ' ಎಂಬುದನ್ನು ಮೊದಲು ಹೇಳಿದ್ದರಿಂದ ವಿಪ್ರತಿಪತ್ತಿಯನ್ನು ಸೂಚಿಸಿದ್ದಾರೆ. 'ಪ್ರಾಪ್ತಪದಾನಾಮಪಿ' ಎಂಬುದರ ಅರ್ಥವನ್ನು 'ಮೋಕ್ಷತದಿತರಫಲಾನಾಂ' ಎಂಬುದರಿಂದ ಹೇಳಿದ್ದಾರೆ.

'ಫಲೇ ವಿಶೇಷಾಭಾವಾತ್' ಎಂಬುದರ ಅರ್ಥವನ್ನು 'ವಿದ್ಯೋಕ್ತ ಉಪಾಸನಾಕರ್ಮಕರಣಾಭ್ಯಾಂ' ಎಂಬುದರಿಂದ ಹೇಳಿದ್ದಾರೆ. 'ಅಸ್ತಿ ಹಿ ಪ್ರಕಾಶವಿಶೇಷಃ' ಎಂಬುದನ್ನು 'ನಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – **ज्ञानविशेषेति** ।। एतेन सूत्रे तुशब्दः फलविशेषद्योतकः । अस्ति हीति तु ज्ञानादिशयोक्तिपरमिति सूचितम् । अप्रामाण्यमेवानुक्त्वा तन्मताविरोधोक्ते-र्बीजोक्तिः – **आप्ततमेति** ।। फलोक्त्योपसंहरति – **अत इति** ।।

'ಜ್ಞಾನವಿಶೇಷಸಂಭವಾದಿತ್ಯರ್ಥಃ' ಎಂದು ಹೇಳಿದ್ದರಿಂದ ಸೂತ್ರದಲ್ಲಿ ಹೇಳಿದ 'ತು' ಪದವು ಫಲವಿಶೇಷಕ್ಕೆ ದ್ಯೋತಕವಾಗಿದೆ. 'ಅಸ್ತಿ ಹಿ' ಎಂಬ ಭಾಷ್ಯದ ಮಾತು ಜ್ಞಾನದಲ್ಲಿ ಅತಿಶಯವನ್ನು ಸೂಚಿಸುತ್ತಿದೆ. ಜ್ಞಾನವಿಶೇಷ ಎಂದು ಹೇಳಿದ್ದರಿಂದ ಸೂತ್ರದಲ್ಲಿರುವ 'ತು'ಶಬ್ದವು ಫಲವಿಶೇಷಕ್ಕೆ ದ್ಯೋತಕವಾಗಿದೆ ಎಂದು ತಿಳಿಸಿದ್ದಾರೆ. 'ಅಸ್ತಿ ಹಿ' ಎಂಬುದು ಜ್ಞಾನದಲ್ಲಿರುವ ಅತಿಶಯೋಕ್ತಿಯನ್ನು ತಿಳಿಸುತ್ತಿದೆ ಎಂದು ಸೂಚಿಸಿದಂತಾಯಿತು. ಅಪ್ರಾಮಾಣ್ಯವನ್ನೇ ಹೇಳದೆ, ಜೈಮಿನಿ ಮತಗಳ ಅವಿರೋಧವನ್ನು ಹೇಳಲು ಕಾರಣವನ್ನು 'ಆಪ್ತತಮ' ಎಂಬುದರಿಂದ ಹೇಳಿದ್ದಾರೆ. ಅಂದರೆ ಜೈಮಿನಿಗಳು ಆಪ್ತರೇ ಆದ್ದರಿಂದ ಅವರ ಮತಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದೆಂದು ಅಭಿಪ್ರಾಯ. ಅಧಿಕರಣಗಳ ಫಲವನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ 'ಅತಃ' ಇತ್ಯಾದಿ ವಾಕ್ಯದಿಂದ.

**भावदीपः** – स्वपदविशिष्टानां देवानामाद्यन्तवत्त्वेन प्राप्तफलतत्साधनानामपि मोक्षे ज्ञाने च विशेषस्य सत्त्वेन चार्थित्वसम्भवादाद्यन्तवत्त्वेऽपि तेषां प्रवाहतोऽनादिनित्यत्वेन समाननामरूपत्वेन च शब्दकर्मणोरप्रामाण्याननुष्ठानाख्य-विरोधाभावाचेति समस्तसूत्रार्थः । तद्धेतुकप्रतिज्ञांशार्थमाह – **देवानामिति**।। ३३।।

।। इति श्रीराघवेन्द्रयतिकृते भावदीपे देवताधिकरणम् ।।

ದೇವತಾಧಿಕರಣ (೧-೩-೮)

ತಮ್ಮ ಪದವಿಗಳಿಂದ ವಿಶಿಷ್ಟರಾದ ದೇವತೆಗಳು ಉತ್ಪತ್ತಿ-ನಾಶವುಳ್ಳವರಾದ್ದರಿಂದ ಮತ್ತು ಫಲ ಹಾಗೂ ಸಾಧನೆಗಳನ್ನು ಹೊಂದಿದ್ದರೂ ಕೂಡ ಮೋಕ್ಷದಲ್ಲಿ ಅತಿಶಯವಾದ ಫಲವಿರುವುದರಿಂದ ಜ್ಞಾನದಲ್ಲಿಯೂ ಕೂಡ ಅತಿಶಯವಾದ ಫಲವಿರುವುದರಿಂದ ಅರ್ಥಿತ್ವವು ದೇವತೆಗಳಿಗೆ ಯುಕ್ತವಾಗುತ್ತದೆ. ಉತ್ಪತ್ತಿ-ನಾಶಗಳಿದ್ದರೂ ಪ್ರವಾಹತಃ ಅನಾದಿನಿತ್ಯರಾದ್ದರಿಂದ ಪ್ರತಿಕಲ್ಪದಲ್ಲಿರುವ ದೇವತೆಗಳಿಗೆ ಸಮಾನವಾದ ನಾಮ-ರೂಪಗಳಿರುವುದರಿಂದ ಶಬ್ದವಿರೋಧ ಹಾಗೂ ಕರ್ಮವಿರೋಧಗಳ ಮೂಲಕ ಅಪ್ರಾಮಾಣ್ಯ-ದೋಷವು ಕೂಡ ಬರುವುದಿಲ್ಲ. ಮತ್ತು ಕರ್ಮವಿಲೋಪದ ಪ್ರಸಂಗವು ಕೂಡ ಬರುವುದಿಲ್ಲವೆಂದು ಈ ಅಧಿಕರಣದ ಎಲ್ಲ ಸೂತ್ರಗಳ ಅರ್ಥವಾಗಿದೆ. ಇದರಿಂದ, ಸಿದ್ಧವಾದ ವಿಚಾರವನ್ನು 'ಅತೋ ದೇವಾನಾಂ' ಎಂಬುದಾಗಿ ಹೇಳಿದ್ದಾರೆ. ಅಂದರೆ, ಶ್ರೀಹರಿಯು ದೇವತೆಗಳಿಂದ ಉಪಾಸ್ಯನಾಗಿದ್ದಾನೆಂದು ಈ ಅಧಿಕರಣದಿಂದ ಸಿದ್ಧವಾಯಿತು.

ಇಲ್ಲಿಗೆ ದೇವತಾಧಿಕರಣವು ಸಮಾಪ್ತವಾಯಿತು.

**वाक्यार्थमञ्जरी –**

**।। ॐ भावं तु बादरायणोऽस्ति हि ॐ ।।**

तं मध्वादिष्वधिकारम् ।। ॐ भावं तु बादरायणोऽस्ति हि ॐ ।। बादरायणस्तु देवानां मध्वाद्यशेषविद्यास्वधिकारस्य भावं सद्भावं मन्यते । कुतः? हि यस्मान्मोक्षफले तद्धेतुज्ञाने चातिशयोऽस्ति, तस्मादित्यर्थः । प्रागुक्ताधिकारिद्वय मप्युपपादयति – विद्योक्तेत्यादिना ।। ३३ ।।

**।। इति श्रीशर्कराश्रीनिवासविरचितायां वाक्यार्थमञ्जर्यां देवताधिकरणम् ।।**

ದೇವತಾಧಿಕರಣ

(೧-೩-೮)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ देवताधिकरणम्

### ದೇವತೆಗಳ ಜ್ಞಾನಾಧಿಕಾರ ವಿಚಾರವು ಅಸಂಗತವಲ್ಲ

**।। ॐ तदुपर्यपि बादरायणः सम्भवात् ॐ ।। यद्यपि तृतीयेऽध्याये ''असार्वत्रिकी'' इत्यादावधिकारचिन्ताऽस्ति ।**

ಅನುವಾದ - 'ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ' ಎಂಬುದಾಗಿ ದೇವತಾಧಿಕರಣವು ಪ್ರಾರಂಭವಾಗುತ್ತಿದೆ.

ಪ್ರಶ್ನೆ - ಈ ಅಧಿಕರಣದಲ್ಲಿ ದೇವತೆಗಳಿಗೆ, ಋಷಿಗಳಿಗೆ, ಗಂಧರ್ವ ಮೊದಲಾದವರಿಗೆ ವೇದವಿದ್ಯಾಧಿಕಾರವಿದೆಯೋ, ಇಲ್ಲವೋ ಎಂದು ವಿಮರ್ಶಿಸುತ್ತಿದ್ದಾರೆ. ಆದರೆ ಮೂರನೇ ಅಧ್ಯಾಯದ ನಾಲ್ಕನೆಯ ಪಾದದಲ್ಲಿರುವ 'ಅಸಾರ್ವತ್ರಿಕೀ' ಎಂಬ ಸೂತ್ರದಲ್ಲಿ ಜ್ಞಾನಾಧಿಕಾರವು ಯಾವ ವಿಧದ ಅಧಿಕಾರಿಗಳಿಗೆ ಇರುತ್ತದೆಂಬುದನ್ನು ವಿಮರ್ಶಿಸಿದ್ದಾರೆ. ಆದರಿಂದಲೇ ಈ ಅಧಿಕರಣದ ಅರ್ಥವು ಗತಾರ್ಥವಾಗುತ್ತದಲ್ಲವೇ?

**तथापि पूर्वाधिकरणस्थमनुष्यग्रहणस्य विशिष्टबुद्ध्यादिहीनं तिर्यगाद्येव व्यावर्त्यं नतु देवादीत्यनेन रूपेणेयं चिन्ता न तृतीये सङ्गता । किं त्वत्रैव ।**

ಉತ್ತರ - ಪ್ರಾಸಾಂಗಿಕವಾಗಿ ಇಲ್ಲೇ ಹೇಳುವುದು ಯುಕ್ತವಾಗುತ್ತದೆ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಬ್ರಹ್ಮವಿದ್ಯೆಯಲ್ಲಿ ಮನುಷ್ಯರೇ ಅಧಿಕಾರಿಗಳಾಗಿದ್ದಾರೆಂದು ಹೇಳಲಾಯಿತು. ಮನುಷ್ಯ ಪದದಿಂದ ವಿಶಿಷ್ಟಬುದ್ಧ್ಯಾದಿಗಳಿಂದ ರಹಿತರಾದ ತಿರ್ಯಗಾದಿ ಪ್ರಾಣಿಗಳೇ ವ್ಯಾವರ್ತ್ಯವಾಗಿವೆ ಹೊರತು, ದೇವತೆಗಳು, ಋಷಿಗಳು ಮೊದಲಾದವರಲ್ಲ. ಈ ವಿಷಯವನ್ನು ಪ್ರಕೃತ ದೇವತಾಧಿ-

ಕರಣದಲ್ಲಿ ಸಮರ್ಥಿಸುತ್ತಿದ್ದಾರೆ. ಈ ಬಗೆಯ ಸಂಗತಿಯನ್ನು ಇಲ್ಲೇ ತೋರಿಸಬೇಕು ಹೊರತು, ಮೂರನೆಯ ಅಧ್ಯಾಯದಲ್ಲಿ ತೋರಿಸುವುದು ಸಂಗತವಾಗುವುದಿಲ್ಲ.

**यथा पश्वेकत्वादिशेषत्वचिन्ता शेषत्वरूपेण तृतीये सङ्गताऽप्यौपादानिकत्वरूपेण चतुर्थ एव सङ्गता । यथा च ''भोक्त्रापत्तेः'' इति मुक्तेशयोर्भेदसमर्थनं फलविचाररूपेण चतुर्थे सङ्गतमपि युक्तिविरोधपरिहाररूपेण द्वितीये सङ्गतं तद्वत् ।**

ಉದಾಹರಣೆ - ಪೂರ್ವಮೀಮಾಂಸೆಯಲ್ಲಿ ಪಶ್ವೇಕತ್ವಾದಿಶೇಷತ್ವಚಿಂತೆಯನ್ನು ಶೇಷತ್ವರೂಪದಿಂದ ಮೂರನೆಯ ಅಧ್ಯಾಯದಲ್ಲಿ ಮಾಡುವುದೇ ಸಂಗತವಾಗುತ್ತಿತ್ತು. ಆದರೂ ಸಹ ಔಪಾದಾನಿಕತ್ವ ಎಂಬ ವಿಶೇಷಪ್ರಯುಕ್ತವಾಗಿ ನಾಲ್ಕನೆಯ ಅಧ್ಯಾಯದಲ್ಲಿ ಸಂಗತ ಎಂದು ವಿಚಾರ ಮಾಡಿದ್ದಾರೆ.

ಉತ್ತರಮೀಮಾಂಸೆಯಲ್ಲಿಯೂ ಇದೇ ರೀತಿಯ ದೃಷ್ಟಾಂತ ಕಂಡಿದೆ. 'ಭೋಕ್ತ್ರಾಪತ್ತೇರಿವಭಾಗಶ್ಚೇತ್ಸ್ಯಾಲ್ಲೋಕವತ್' ಎಂಬ ಸೂತ್ರದಲ್ಲಿ ಮುಕ್ತರಿಗೂ ಪರಮಾತ್ಮನಿಗೂ ಭೇದವನ್ನು ಸಮರ್ಥಿಸಲಾಗಿದೆ. ವಸ್ತುತಃ ಫಲವಿಚಾರರೂಪವಾದ್ದರಿಂದ, ನಾಲ್ಕನೆಯ ಅಧ್ಯಾಯದಲ್ಲಿ ಇದು ಸಂಗತವಾಗುತ್ತಿತ್ತು. ಆದರೂ ಸಹ ಶ್ರುತಿಯಿಂದ ಉಪಸರ್ಜನಭೂತವಾದ ಯುಕ್ತಿವಿರೋಧಪರಿಹಾರರೂಪವಾಗಿರುವ ಕಾರಣದಿಂದ ಎರಡನೆಯ ಅಧ್ಯಾಯದಲ್ಲಿ ಸಂಗತವಾಗಿದೆಯೆಂದು ಎರಡನೆಯ ಅಧ್ಯಾಯದಲ್ಲೇ ಉಲ್ಲೇಖಿಸಿದ್ದಾರೆ.

**न चेह तृतीयेऽधिकारः प्रतिपाद्यः । येन साक्षादध्यायसङ्गतिलोभादियं चिन्ता तत्र स्यात् । किं त्वत्र समन्वय इव तत्रापि साधनमेव प्रतिपाद्यमिति प्रसङ्गादत्रैव युक्ता ।**

ಬ್ರಹ್ಮಮೀಮಾಂಸಾಶಾಸ್ತ್ರದ ಮೂರನೆಯ ಅಧ್ಯಾಯದಲ್ಲಿ ಅಧಿಕಾರವು ಪ್ರತಿಪಾದ್ಯವಾಗಿಲ್ಲ. ಹಾಗೇನಾದರೂ ಅಧಿಕಾರವೇ ಮುಖ್ಯವಾಗಿ ಪ್ರತಿಪಾದ್ಯವಾಗಿದ್ದಲ್ಲಿ, ಈ ವಿಚಾರವನ್ನು ಅಲ್ಲಿ ಮಾಡುವುದು ಸಂಗತವಾಗುತ್ತಿತ್ತು. ಅಧ್ಯಾಯಸಂಗತಿಯು ದೊರೆಯುತ್ತದೆಂಬ ಲೋಭದಿಂದ ಈ ದೇವತಾಧಿಕರಣವನ್ನು ಅಲ್ಲಿಯೇ ಉಲ್ಲೇಖಿಸಬಹುದಿತ್ತು. ಆದರೆ ಪ್ರಥಮಾಧ್ಯಾಯದಲ್ಲಿ ಸಮನ್ವಯವು ಹೇಗೆ ಪ್ರತಿಪಾದ್ಯವಾಗಿದೆಯೋ, ಅದರಂತೆ ತೃತೀಯಾಧ್ಯಾಯದಲ್ಲಿ ಸಾಧನವೇ ಪ್ರತಿಪಾದ್ಯವಾಗಿದೆ. ಆದ್ದರಿಂದ ಇಲ್ಲಿಯಂತೆ ಅಲ್ಲಿಯೂ ಸಹ ದೇವತೆಗಳಿಗೆ ಅಧಿಕಾರವಿದೆಯೆಂಬ ವಿಷಯವು ಪ್ರಾಸಂಗಿಕವೇ ಆಗುತ್ತದೆ. ಎರಡೂ ಕಡೆ ಸಮಾನವಾಗಿ ಪ್ರಾಸಂಗಿಕಸಂಗತಿಯನ್ನು ತೋರಿಸಬೇಕಾದ್ದರಿಂದ ಇಲ್ಲಿಯೇ ದೇವತೆಗಳ ಅಧಿಕಾರವಿಚಾರವನ್ನು ವಿಮರ್ಶಿಸಿದ್ದು ಯುಕ್ತವಾಗಿದೆ.

**अवान्तरसङ्गतिस्तु पूर्वोक्तस्य मनुष्यपदस्येह व्यावर्त्योक्तेर्वा सर्वदेवोपास्यत्वस्याक्षेपेण पूर्वपक्षोत्थानाद्वा ।**

ಅವಾಂತರಸಂಗತಿಯನ್ನಾದರೂ ಹೀಗೆ ಹೇಳಬಹುದು. ಹಿಂದಿನ ಅಧಿಕರಣದಲ್ಲಿ 'ಮನುಷ್ಯಾಧಿಕಾರತ್ವಾತ್' ಎಂಬಲ್ಲಿರುವ ಮನುಷ್ಯಪದದಿಂದ ತಿರ್ಯಕ್‌ಪ್ರಾಣಿಗಳಷ್ಟೇ ವ್ಯಾವರ್ತ್ಯವಾಗಿದೆ, ದೇವತೆ ಮೊದಲಾದವರಲ್ಲ ಎಂದು ಈ ಅಧಿಕರಣದಲ್ಲಿ ಸಮರ್ಥಿಸುತ್ತಿರುವುದರಿಂದ ಅವಾಂತರ ಸಂಗತಿ ಇರುತ್ತದೆ. ಅಥವಾ 'ಮಧ್ಯೇವಾಮನಾಮಾಸೀನಂ ವಿಶ್ವೇದೇವಾ ಉಪಾಸತೇ' ಎಂಬಲ್ಲಿ ಸರ್ವದೇವೋಪಾಸ್ಯತ್ವವೆಂಬ ಧರ್ಮವನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಆದರೆ ದೇವತೆಗಳಿಗೆ ಉಪಾಸನೆಯಲ್ಲಿ ಅಧಿಕಾರವೇ ಇಲ್ಲದ ಕಾರಣ ಸರ್ವದೇವೋಪಾಸ್ಯತ್ವಧರ್ಮವನ್ನು ಮಹಾವಿಷ್ಣುವಿನಲ್ಲಿ ಹೇಳಲು ಹೇಗೆ ಸಾಧ್ಯ? ಎಂಬ ಹೆಚ್ಚಿನ ಆಶಂಕೆಗೆ ಉತ್ತರಿಸುವುದಕ್ಕಾಗಿ ಈ ಅಧಿಕರಣವು ಹೊರಟಿದ್ದರಿಂದಲೂ ಪ್ರಾಸಂಗಿಕಸಂಗತಿಯಿರುತ್ತದೆ. ಆದ್ದರಿಂದಲೇ ಇದನ್ನು ಇಲ್ಲಿಯೇ ವಿಚಾರ ಮಾಡುತ್ತಿದ್ದಾರೆ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**ॐ तदुपर्यपि बादरायणस्सम्भवात् ॐ ॥ ननु कथमस्याधिकारचिन्तापरस्य समन्वयाध्यायादौ सङ्गतिः ।**

ವಿವರಣೆ - ಪ್ರಶ್ನೆ - ಈ ಅಧಿಕರಣದಲ್ಲಿ ದೇವತೆ ಮೊದಲಾದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೋ, ಇಲ್ಲವೋ ಎಂದು ವಿಚಾರ ಮಾಡುತ್ತಿದ್ದಾರೆ. ಹಾಗಾದರೆ ಸಮನ್ವಯಾಧ್ಯಾಯದಲ್ಲಿ ಈ ಅಧಿಕರಣವು ಹೇಗೆ ಸಂಗತವಾಗುತ್ತದೆ?

**प्रकाशः – नच ''प्रासङ्गिकत्वान्नाध्यायादिसङ्गतिर्गवेषणीया'' इति टीकोक्तेः प्रासङ्गिकीति वाच्यम् ।**

''ಪ್ರಾಸಂಗಿಕತ್ವಾನ್ನಾಧ್ಯಾಯಯಾದಿಸಂಗತಿರ್ಗವೇಷಣೀಯಾತ್' ಈ ಅಧಿಕರಣವು ಪ್ರಾಸಂಗಿಕವಾಗಿ ಪ್ರಸಕ್ತವಾದ್ದರಿಂದ ಅಧ್ಯಾಯ ಸಂಗತಿ ಹಾಗೂ ಪಾದಸಂಗತಿಗಳನ್ನು ಅನ್ವೇಷಣೆ ಮಾಡಬಾರದು ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. ಆದ್ದರಿಂದ ಪ್ರಾಸಂಗಿಕ ಸಂಗತಿಯನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**प्रकाशः –** तथात्वे ज्ञानपादे ''असार्वत्रिकी'' इति द्वितीयाधिकरणे ब्रह्मज्ञाने सर्वेषामधिकारोऽस्ति न वेति सन्देहे

ಹಾಗಾದರೆ ಮೂರನೆಯ ಅಧ್ಯಾಯದ ಜ್ಞಾನಪಾದದಲ್ಲೇ ಇದನ್ನು ಹೇಳಬೇಕು. ಏಕೆಂದರೆ 'ಓಂ ಅಸಾರ್ವತ್ರಿಕೀ ಓಂ' ಎಂಬ ಸೂತ್ರದಲ್ಲಿ ಹೀಗೆ ವಿಚಾರ ಮಾಡಿದ್ದಾರೆ. ಜ್ಞಾನಪಾದದ ಎರಡನೆಯ ಅಧಿಕರಣದಲ್ಲಿ 'ಓಂ ಅಸಾರ್ವತ್ರಿಕೀ ಓಂ' ಎಂಬ ಸೂತ್ರವು ಪ್ರಸಕ್ತವಾಗಿದೆ. ಬ್ರಹ್ಮಜ್ಞಾನದಲ್ಲಿ ಎಲ್ಲರಿಗೂ ಅಧಿಕಾರವಿದೆಯೋ ಇಲ್ಲವೋ ಎಂದು ಸಂಶಯ.

**प्रकाशः** – **ज्ञानफले मोक्षे सर्वेषामर्थित्वादेरधिकारप्रयोजकस्य सत्त्वेनास्त्यधिकार इति प्राप्ते**

ಜ್ಞಾನಫಲವೆನಿಸಿದ ಮೋಕ್ಷದಲ್ಲಿ ಪ್ರತಿಯೊಬ್ಬರಿಗೂ ಅಪೇಕ್ಷೆಯಿರುವುದರಿಂದ ಅಧಿಕಾರಕ್ಕೆ ಪ್ರಯೋಜಕವಾದ ಅರ್ಥಿತ್ವವು ಇರುವ ಕಾರಣ ಎಲ್ಲರೂ ಸಹ ಅಧಿಕಾರಿಗಳಾಗುತ್ತಾರೆಂಬುದು ಪೂರ್ವಪಕ್ಷ.

**प्रकाशः** – **अर्थित्वादिमात्रस्याधिकाराप्रयोजकतया विष्णुभक्त्यादिपूर्वकाध्ययनादिमत्त्वस्यापि प्रयोजकतया सर्वेषां तथात्वायोगेन न सर्वेषामधिकारः**

ಕೇವಲ ಅರ್ಥಿತ್ವವು ಅಧಿಕಾರಕ್ಕೆ ಪ್ರಯೋಜಕವಾಗುವುದಲ್ಲ. ಹೊರತಾಗಿ, ವಿಷ್ಣುಭಕ್ತಿ, ಶಮದಮಾದಿಸಂಪತ್ತು ಮೊದಲಾದವುಗಳಿಂದ ಸಹಿತನಾಗಿ ಯಾರು ವೇದಾಧ್ಯಯನವನ್ನು ಮಾಡಿರುತ್ತಾನೋ, ಅಂತಹವನಿಗೆ ಅರ್ಥಿತ್ವವಿದ್ದರೆ, ಅಧಿಕಾರಿಯೆನಿಸುತ್ತಾನೆ. ಆದರೆ ಪ್ರತಿಯೊಬ್ಬರಲ್ಲಿಯೂ ವಿಷ್ಣುಭಕ್ತಿ ಮೊದಲಾದ ಗುಣಗಳು ಬರಲು ಸಾಧ್ಯವಿಲ್ಲ. ಹಾಗಾಗಿ ಅರ್ಥಿತ್ವವಿರುವ ಮಾತ್ರದಿಂದ ಎಲ್ಲರಿಗೂ ಅಧಿಕಾರವನ್ನು ಹೇಳಲು ಸಾಧ್ಯವಿಲ್ಲವೆಂದು ಸಿದ್ಧಾಂತ.

**प्रकाशः** – **इति वक्ष्यमाणत्वेन तत्रैव निवेशप्रसङ्गात् । तथात्वे साक्षात्सङ्गतिसम्भवाचेत्याशङ्क्य प्रसङ्गकोक्तिपूर्वमत्रैव निवेशं साधयति** – **यद्यपीति ॥**

ಪ್ರಶ್ನೆ - ಹೀಗೆ ಮುಂದೆ ಸಮರ್ಥಿಸುತ್ತಾದ್ದರಿಂದ ಆ ಅಧಿಕರಣದಲ್ಲಿಯೇ ಇದನ್ನು ನಿವೇಶ ಮಾಡಬೇಕು. ಅಲ್ಲಿ ನಿವೇಶ ಮಾಡುವುದರಿಂದ ಅಧ್ಯಾಯ ಪಾದ ಮೊದಲಾದವುಗಳ ಸಂಗತಿಯೂ ಸಹ ಸಹಜವಾಗಿ ಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ ಉತ್ತರಿಸಲು 'ಯದ್ಯಪಿ' ಇತ್ಯಾದಿ ಗ್ರಂಥವು ಹೊರಟಿದೆ. ನೇರವಾಗಿ ಸಮನ್ವಯಾಧ್ಯಾಯದಲ್ಲಿ ಈ ಅಧಿಕರಣವು ಸಂಗತವಾಗದಿದ್ದರೂ ಪ್ರಾಸಂಗಿಕವಾಗಿ ಸಂಗತವಾಗುತ್ತದೆಂಬ ವಿವಕ್ಷೆಯಿಂದ ಇಲ್ಲಿಯೇ ಅದನ್ನು ನಿವೇಶಿಸಿದ್ದಾರೆ.

**प्रकाशः** – **विशिष्टेति ॥** हिताहितप्राप्तिपरिहारोपायविषयेत्यर्थः । तत्र पूर्वोत्तरमीमांसासिद्धे उदाहरणे आह – **यथेति ॥**

'ವಿಶಿಷ್ಟಬುದ್ಧ್ಯಾದಿಹೀನಂ' ಎಂದು ಗ್ರಂಥದಲ್ಲಿದೆ. ವಿಶಿಷ್ಟಬುದ್ಧಿಯೆಂದರೆ ಹಿತವಾದದ್ದನ್ನು ಪಡೆದುಕೊಳ್ಳುವಿಕೆ. ಅಹಿತವಾದದ್ದನ್ನು ಬಿಡುವಿಕೆ ಇವೆರಡರ ಉಪಾಯವನ್ನು ವಿಷಯೀಕರಿಸುವ

ಬುದ್ಧಿಯೆಂದರ್ಥ. ದೇವತಾಧಿಕರಣಕ್ಕೆ ಈ ಪಾದದಲ್ಲಿ ಸಂಗತಿಯು ಹೇಗೆ ಲಭಿಸುತ್ತದೆನ್ನಲು ಪೂರ್ವಮೀಮಾಂಸೆ ಹಾಗೂ ಉತ್ತರ ಮೀಮಾಂಸೆಗಳ ದೃಷ್ಟಾಂತಗಳನ್ನು ನೀಡುತ್ತಿದ್ದಾರೆ 'ಯಥಾ' ಇತ್ಯಾದಿ ಗ್ರಂಥದಿಂದ.

**प्रकाशः –** पश्वेकत्वाधिकरणमुक्तं प्राक् छन्दोऽधिकरणे । यथा गुरुमते चतुर्थे उपादानाख्यप्रमाणविचारादौपादानिकस्य पश्वेकत्वादिशेषत्वस्य शेषत्वरूपेण तृतीये सङ्गतस्यापि चतुर्थे सङ्गतिस्तथेत्यर्थः ।

ಪಶ್ವೇಕತ್ವಾಧಿಕರಣವನ್ನು ಹಿಂದೆ ಛಂದೋಽಧಿಕರಣದಲ್ಲಿ ನಿರೂಪಿಸಲಾಗಿದೆ. (೧)ಗುರುಮತದಲ್ಲಿ ನಾಲ್ಕನೆಯ ಅಧ್ಯಾಯವು 'ಉಪಾದಾನ' ಎಂಬ ಪ್ರಮಾಣವಿಚಾರವನ್ನು ಮಾಡುತ್ತಿರುವುದರಿಂದ ಔಪಾದಾನಿಕವೆನಿಸುತ್ತದೆ. ಪಶ್ವೇಕತ್ವರೂಪವಾದ ಶೇಷತ್ವವು ಶೇಷರೂಪವಾದ್ದರಿಂದ ಮೂರನೆಯ ಅಧ್ಯಾಯದಲ್ಲಿ ಸಂಗತವಾದರೂ ನಾಲ್ಕನೆಯ ಅಧ್ಯಾಯದಲ್ಲಿ ಉಪಾದಾನವೆಂಬ ಪ್ರಮಾಣವಿಚಾರರೂಪವಾದ್ದರಿಂದ ಸಂಗತವಾಗುತ್ತದೆಂದು ಹೇಗೆ ಸಮರ್ಥಿಸಲಾಗಿದೆಯೋ, ಅದರಂತೆ ಇಲ್ಲಿಯೂ ಸಹ ತಿಳಿಯಬೇಕು.

**प्रकाशः –** गुरुमते हि श्रुत्यादिप्रमाणषट्कसिद्धशेषत्वचिन्ता तृतीये औपादानिकशेषत्वचिन्ता चतुर्थे विधिव्यापारमुपादानाभिधानं सप्तमं विनियोजकं प्रमाणमिति हि गुरुमतम् । तदुक्तं नयविवेकवरदराजीये "औपादानिकक्रतुशेषत्व-चिन्तारूपतयाऽध्याये पेटिकायां च पूर्वत्रोपादानतो विधिकल्पने वाऽत्रापि तस्य कल्पना युक्तेत्युक्तेरवान्तरसङ्गतिः" इति ॥

ಗುರುಮತದಲ್ಲಿ ಶ್ರುತ್ಯಾದಿ ಆರು ಪ್ರಮಾಣಗಳಿಂದ ಸಿದ್ಧವಾದ ಶೇಷಶೇಷಿಭಾವದ ವಿಚಾರವನ್ನು ಮೂರನೆಯ ಅಧ್ಯಾಯದಲ್ಲಿ ಮಾಡಲಾಗಿದೆ. ಔಪಾದಾನಿಕವಾದ ಶೇಷಶೇಷಿಭಾವದ ವಿಚಾರವನ್ನು ನಾಲ್ಕನೆಯ ಅಧ್ಯಾಯದಲ್ಲಿ ಮಾಡಲಾಗಿದೆ. ಔಪಾದಾನಿಕ ಪ್ರಮಾಣವೆಂದರೆ ಏಳನೆಯ ವಿಧಿ ವ್ಯಾಪಾರರೂಪವಾದ ಉಪಾದಾನ ಎಂದು ಕರೆಸಿಕೊಳ್ಳುವ ವಿನಿಯೋಜಕ ಪ್ರಮಾಣ. ಇದನ್ನು 'ನಯವಿವೇಕ ವರದರಾಜೀಯ' ಎಂಬ ಗ್ರಂಥದಲ್ಲಿ 'ಔಪಾದಾನಿಕಕ್ರತುಶೇಷತ್ವಚಿಂತಾರೂಪತಯಾಽಧ್ಯಾಯೇ ಪೇಟಿಕಾಯಾಂ ಚ ಪೂರ್ವತ್ರೋಪಾದಾನತೋ ವಿಧಿಕಲ್ಪನೇ ವಾ ಅತ್ರಾಪಿ ತಸ್ಯ ಕಲ್ಪನಾಯುಕ್ತೇತ್ಯುಕ್ತೇರವಾಂತರಸಂಗತಿಃ' ಎಂದು ಹೇಳಿದ್ದಾರೆ.

(೧) ಕುಮಾರಿಲಭಟ್ಟರ ಶಿಷ್ಯ ಪ್ರಭಾಕರ. ಇವನ ಮತವನ್ನು 'ಗುರುಮತ' ಎಂದು ಕರೆಯುತ್ತಾರೆ. 'ಗುರೋಃ ಮತಂ ಗುರುಮತಂ' ಎಂದು ಅಭಿಪ್ರಾಯವಲ್ಲ. 'ಗುರುಚ ತತ್ ಮತಂ ಚ ಗುರುಮತಂ' ಎಂದು ಅಭಿಪ್ರಾಯ. ಅಂದರೆ ಕುಮಾರಿಲಭಟ್ಟರ ಶಿಷ್ಯನಾದರೂ ಬಹಳ ವಿಸ್ತಾರವಾಗಿ ಶಾಸ್ತ್ರವನ್ನು ಬರೆದಿರುವುದರಿಂದ ಗುರುಮತವೆಂದು ಕರೆಯುತ್ತಾರೆ. 'ನಯವಿವೇಕ (ವರದರಾಜೀಯಾ)' ಎಂಬುದು ಬಹಳ ಬೃಹತ್ತಾದಕೃತಿ. ಇವನ ಗ್ರಂಥದ ಉಲ್ಲೇಖವು ಹೆಚ್ಚಾಗಿ ಕಾಣಿಸುವುದಿಲ್ಲ. ರಾಯರು ಬರೆದಿರುವ ಭಾಟ್ಟಸಂಗ್ರಹ ಗ್ರಂಥವು ಕುಮಾರಿಲಭಟ್ಟನ ಮತಕ್ಕೆ ಅನುಸಾರಿಯಾಗಿದೆ ಹೊರತು, ಗುರುಮತಕ್ಕೆ ಅನುಸಾರಿಯಾಗಿಲ್ಲ.

ಪಶ್ವೇಕತ್ವಾಧಿಕರಣದ ಸಂಗ್ರಹ ಹೀಗಿದೆ - 'ಪಶುಂ' ಎಂಬಲ್ಲಿರುವ ಏಕವಚನವು ಪ್ರಾತಿಪದಿಕದಲ್ಲಿ ಅನ್ವಯವನ್ನು ಹೊಂದುತ್ತದೆ ಹೊರತು, ಆಲಂಭನ ಎಂಬ ಕ್ರಿಯೆಯಲ್ಲಿ ಅನ್ವಯವನ್ನು ಹೊಂದುವುದಿಲ್ಲ. ಅತ್ಯಂತ ಸಮೀಪದಲ್ಲಿ ಪ್ರಾತಿಪದಿಕದಲ್ಲಿ ಅನ್ವಯವನ್ನು ಹೊಂದುವುದರಿಂದ ಯಜ್ಞಾಂಗವೆಂದು ನಿರ್ಣಯಿಸಲಾಗದು. ಏಕತ್ವವು ಯಜ್ಞಕ್ಕೆ ಅಂಗವಾಗದ ಕಾರಣ ಒಂದೇ ಪಶುವನ್ನು ಆಲಂಭನ ಮಾಡಬೇಕೆಂದೇನೂ ಸಿದ್ಧವಾಗುವುದಿಲ್ಲ. ಅನೇಕ ಪಶುಗಳನ್ನೂ ಸಹ ಆಲಂಭನ ಮಾಡಬಹುದೆಂದು ಪೂರ್ವಪಕ್ಷ. 'ಪಶುಂ' ಎಂಬಲ್ಲಿರುವ ಏಕತ್ವಸಂಖ್ಯೆಯು ದೂರದಲ್ಲಿರುವ ಆಲಂಭನ ಎಂಬ ಕ್ರಿಯೆಯಲ್ಲಿ ಅನ್ವಯವಾಗುವುದಕ್ಕಿಂತ ಹತ್ತಿರದಲ್ಲಿರುವ ಪ್ರಾತಿಪದಿಕದಲ್ಲಿ ಅನ್ವಯ ಹೊಂದುತ್ತದೆಂದು ಪೂರ್ವಪಕ್ಷದಲ್ಲಿ ಹೇಳಲಾಯಿತು. ವಿಚಾರ ಮಾಡಿದರೆ ಪ್ರಾತಿಪದಿಕಕ್ಕಿಂತಲೂ ಕಾರಕವು ಮತ್ತಷ್ಟು ಹತ್ತಿರದಲ್ಲಿದೆ. 'ಅಂ' ಪ್ರತ್ಯಯಕ್ಕೆ 'ಏಕತ್ವ' ಎಂಬರ್ಥವಿದ್ದಂತೆ 'ಕರ್ಮ' ಎಂಬರ್ಥವೂ ಸಹ ಇರುತ್ತದೆ. ಯಾವ ಪ್ರತ್ಯಯದಿಂದ ಏಕತ್ವಸಂಖ್ಯೆಯು ತಿಳಿಯುತ್ತಿದೆಯೋ, ಅದರಿಂದಲೇ ಕಾರಕವೂ ಸಹ ತಿಳಿಯುತ್ತಿರುವಾಗ ಅತ್ಯಂತ ಸಮೀಪದಲ್ಲಿರುವ ಕರ್ಮಕಾರಕದಲ್ಲೇ ಏಕತ್ವಸಂಖ್ಯೆಯು ಅನ್ವಯವನ್ನು ಹೊಂದಬೇಕು. ಆದ್ದರಿಂದ ಆಲಂಭನಕ್ರಿಯೆಗೆ ಯಾವುದು ಕರ್ಮವೋ, ಅದರಲ್ಲಿ ಏಕತ್ವಸಂಖ್ಯೆಯು ಅನ್ವಯವನ್ನು ಹೊಂದುತ್ತದೆಂದು ಹೇಳಿದಂತಾಯಿತು. ಆವಾಗ ಆಲಂಭನಕ್ರಿಯೆಗೆ ಪಶು ಹೇಗೆ ಅಂಗವೋ, ಅದರಂತೆ ಏಕತ್ವವೂ ಸಹ ಅಂಗವೆಂದಂತಾಗುತ್ತದೆ. ಆದ್ದರಿಂದ ಅನೇಕ ಪಶುಗಳನ್ನು ಆಲಂಭನಮಾಡಬಾರದು. ಒಂದೇ ಪಶುವನ್ನು ಆಲಂಭನಮಾಡಬೇಕೆಂದು ಸಿದ್ಧಾಂತ. ಹೀಗೆ ಈ ಅಧಿಕರಣದಲ್ಲಿ ಶೇಷಶೇಷಿಭಾವ ವಿಚಾರವನ್ನು ಮಾಡಿದ್ದರಿಂದ ಮೂರನೆಯ ಅಧ್ಯಾಯದಲ್ಲಿ ಸಂಗತವಾಗುತ್ತದೆ. ಆದರೆ ಉಪಾದಾನವೆಂಬ ಪ್ರಮಾಣವಿಚಾರರೂಪವಾದ್ದರಿಂದ ಮೂರನೆಯ ಅಧ್ಯಾಯದಲ್ಲಿ ಅಧಿಕರಣವನ್ನು ಹೇಳದೇ ನಾಲ್ಕನೆಯ ಅಧ್ಯಾಯದಲ್ಲಿ ಗುರುಮತದವರು ಸೇರಿಸಿದ್ದಾರೆ.

**प्रकाशः – यथा चेति ।।** युक्तिपादे ''भोक्त्रापत्तेरविभागश्चेत्स्याल्लोकवत्'' इति पञ्चमेऽधिकरणे विष्णोर्विश्वकर्तृत्वं युक्तं न वेति सन्देहे ''परेऽव्यये सर्व एकीभवन्ति'' इति श्रुत्या मुक्तावीश्वरस्य जीवैक्योक्त्या संसारेऽप्यैक्यस्यावश्यकत्वाज्जीवाभिन्नस्य विश्वकर्तृत्वायोगान्न युक्तमिति प्राप्ते एकीभवन्तीत्यस्य स्थानैक्यादिनोपपत्त्या मुक्तौ जीवैक्यस्यैवासिद्ध्या प्रागपि तदभावेन जीवभिन्नस्य विष्णोर्युक्तं जगत्कर्तृत्वमिति वक्ष्यमाणतया तस्य यथा जीवाभिन्नत्वादिति युक्तिविरोधपरिहाररूपेण सङ्गतिस्तद्वदित्यर्थः । उक्तं च तत्र भाष्ये ''फलत्वेऽपि युक्तिविरोधेऽन्तर्भावादत्रोक्तम्'' इति ।

ಈ ವಿಷಯದಲ್ಲಿ ಉತ್ತರ ಮೀಮಾಂಸೆಯ ದೃಷ್ಟಾಂತವನ್ನೂ ಸಹ ತಿಳಿಯಬೇಕು. ಎರಡನೆಯ ಅಧ್ಯಾಯದ ಯುಕ್ತಿಪಾದದಲ್ಲಿ 'ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್' ಎಂಬ ಐದನೆಯ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ -

ದೇವತಾಧಿಕರಣ (೧-೩-೮)

ವಿಶ್ವಕರ್ತೃತ್ವವನ್ನು ಮಹಾವಿಷ್ಣುವಿಗೆ ಹೇಳಿದ್ದು ಯುಕ್ತವಾಗುತ್ತದೋ, ಇಲ್ಲವೋ, ಎಂದು ಸಂದೇಹ. 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಮೋಕ್ಷದಲ್ಲಿ ಈಶ್ವರನಿಗೆ ಜೀವನಿಂದ ಐಕ್ಯವನ್ನು ಹೇಳಿದ್ದರಿಂದ ಸಂಸಾರಾವಸ್ಥೆಯಲ್ಲಿಯೂ ಜೀವೇಶ್ವರರಿಗೆ ಐಕ್ಯವನ್ನು ಒಪ್ಪುವುದು ಅನಿವಾರ್ಯ. ಹೀಗೆ ಜೀವಾಭಿನ್ನನಾದ ಈಶ್ವರನಿಗೆ ವಿಶ್ವಕರ್ತೃತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲವೆಂದು ಪೂರ್ವಪಕ್ಷ.

'ಏಕೀಭವಂತಿ' ಎಂಬ ಶ್ರುತಿಯು ಸ್ಥಾನೈಕ್ಯವಿವಕ್ಷೆಯಿಂದ ಹೊರಟಿದೆ. ಆದ್ದರಿಂದ ಮೋಕ್ಷಾವಸ್ಥೆಯಲ್ಲಿ ಜೀವನಿಂದ ಈಶ್ವರನಿಗೆ ಐಕ್ಯವೇ ಇರುವುದಿಲ್ಲ. ಆದ್ದರಿಂದ ಸಂಸಾರಾವಸ್ಥೆಯಲ್ಲಿಯೂ ಸಹ ಜೀವೇಶ್ವರರಿಗೆ ಐಕ್ಯವನ್ನು ಹೇಳುವುದು ತಪ್ಪಾಗುತ್ತದೆ. ಹೀಗೆ ಜೀವನಿಂದ ಅತ್ಯಂತ ಭಿನ್ನನಾದ ಮಹಾವಿಷ್ಣುವಿಗೆ ವಿಶ್ವಕರ್ತೃತ್ವವನ್ನು ಹೇಳಬಹುದೆಂದು ಸಿದ್ಧಾಂತ.

ಈ ಅಧಿಕರಣದಲ್ಲಿ 'ಜೀವಾಭಿನ್ನತ್ವಾತ್' ಎಂಬ ಯುಕ್ತಿಯ ವಿರೋಧವನ್ನು ಪರಿಹಾರ ಮಾಡಲಾಗಿದೆ. ವಸ್ತುತಃ ಮುಕ್ತಜೀವನ ಬಗ್ಗೆ ವಿಚಾರವಿರುವುದರಿಂದ, ನಾಲ್ಕನೆಯ ಅಧ್ಯಾಯದಲ್ಲಿ ಈ ಅಧಿಕರಣವನ್ನು ಹೇಳಬೇಕಾಗಿದ್ದರೂ ಸಹ ಜೀವಾಭೇದವಿರುವುದರಿಂದ ಎಂಬ ಯುಕ್ತಿವಿರೋಧವನ್ನೂ ಪರಿಹಾರ ಮಾಡುವುದರಿಂದ ಎರಡನೆಯ ಅಧ್ಯಾಯದಲ್ಲಿ ಹೇಗೆ ಸಂಗತವಾಗಿದೆಯೋ, ಅದರಂತೆ ದೇವತಾಧಿಕರಣವೂ ಸಹ ಪ್ರಕೃತ ಸಂಗತವಾಗಿದೆಯೆಂದು ತಿಳಿಯಬೇಕು. ಇದನ್ನೇ ಆ ಅಧಿಕರಣದ ಭಾಷ್ಯದಲ್ಲಿ 'ಫಲತ್ವೇಽಪಿ ಯುಕ್ತಿವಿರೋಧೇಽಂತರ್ಭಾವಾದತ್ರೋಕ್ತಮ್' ಫಲಾಧ್ಯಾಯದಲ್ಲಿ ಸೇರಿಸಬೇಕಾದರೂ ಯುಕ್ತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಈ ಅಧ್ಯಾಯದಲ್ಲಿ ಅಂತರ್ಭೂತವಾಗಿದೆಯೆಂದು ಹೇಳಿರುತ್ತಾರೆ.

**प्रकाशः –** यदपि तृतीये निवेशो साक्षात्सङ्गतिरिति तदपि नेत्याह – **नचेति** ।। इहेति पूर्वतन्त्रव्युदासाय । अध्यायपादान्तर्भावं टीकोक्तं प्रासङ्गिकमुपपाद्यानन्तरसङ्गतिमाह – **अवान्तरेति** ।।

ದೇವತಾಧಿಕರಣಕ್ಕೆ ಮೂರನೇ ಅಧ್ಯಾಯದಲ್ಲಿ ನೇರವಾಗಿ ಸಂಗತಿಯು ದೊರೆಯುತ್ತದೆಂಬ ಆಕ್ಷೇಪವೂ ಸಹ ಅಯುಕ್ತವಾಗಿದೆಯೆಂದು 'ನಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ಇಹ' ಎಂದು ಹೇಳಿದ್ದರಿಂದ ಪೂರ್ವಮೀಮಾಂಸೆಯನ್ನು ವ್ಯಾವೃತ್ತಿ ಮಾಡಿದ್ದಾರೆ. ಅಧ್ಯಾಯಾಂತರ್ಭಾವವನ್ನು ಹಾಗೂ ಪಾದಾಂತರ್ಭಾವವನ್ನು ದೇವತಾಧಿಕರಣಕ್ಕೆ ಟೀಕೆಯ ಪ್ರಕಾರ ಪ್ರಾಸಂಗಿಕವೆಂದು ಸಮರ್ಥಿಸಿದರು. ಈಗ ಅನಂತರ ಸಂಗತಿಯನ್ನು 'ಅವಾಂತರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

**प्रकाशः –** आद्या ''मनुष्यपदं तिर्यगादिव्यावृत्त्यर्थं प्रयुक्त'' इति टीका सूचिता। द्वितीया तु ''स च यदि न देवानां स्यात्तदा 'विश्वेदेवा उपासते' इत्यादिश्रुत्यप्रामाण्यं प्रसज्येत'' इति टीकयेति भावः ।

ಪರಿಪೂರ್ಣಚಂದ್ರಿಕಾ

ಗ್ರಂಥದಲ್ಲಿ ಎರಡು ಬಗೆಯ ಆನಂತರ್ಯಸಂಗತಿಯನ್ನು ತೋರಿಸಿದ್ದಾರೆ. ಮೊದಲನೆಯ ಸಂಗತಿಯು 'ಮನುಷ್ಯಪದಂ ತಿರ್ಯಗಾದಿವ್ಯಾವೃತ್ತ್ಯರ್ಥಂ ಪ್ರಯುಕ್ತಮ್' 'ಮನುಷ್ಯ ಪದವು ತಿರ್ಯಕ್‌ಪ್ರಾಣಿಗಳನ್ನು ವ್ಯಾವೃತ್ತಿಮಾಡುವುದಕ್ಕಾಗಿ ಪ್ರಯೋಗಿಸಲ್ಪಟ್ಟಿದೆ ಎಂಬ ಟೀಕೆಯಿಂದ ಸೂಚಿತವಾಗಿದೆ. ಎರಡನೆಯದ್ದು 'ಸ ಚ ಯದಿ ನ ದೇವಾನಾಂ ಸ್ಯಾತ್ತದಾ ವಿಶ್ವೇದೇವಾ ಉಪಾಸತೇ ಇತ್ಯಾದಿಶ್ರುತ್ಯಪ್ರಮಾಣ್ಯಂ ಪ್ರಸಜ್ಯೇತ' ಒಂದು ವೇಳೆ ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿದ್ದರೆ 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಗೆ ಅಪ್ರಾಮಾಣ್ಯವು ಬರಬೇಕಾದೀತು ಎಂಬ ಟೀಕೆಯಿಂದ ಸೂಚಿತವಾಗಿದೆ.




ದೇವತಾಧಿಕರಣದಲ್ಲಿ ಯಾವುದೇ ಶಬ್ದಗಳನ್ನು ಸಮನ್ವಯ ಮಾಡುತ್ತಿಲ್ಲ. ಮುಂದಿನ ಅಪಶೂದ್ರಾಧಿಕರಣದಲ್ಲಿಯೂ ಯಾವುದೇ ಶಬ್ದವನ್ನು ಸಮನ್ವಯ ಮಾಡುತ್ತಿಲ್ಲ. ಆದ್ದರಿಂದ ಸಮನ್ವಯಾಧ್ಯಾಯದಲ್ಲಿ ಈ ಎರಡು ಅಧಿಕರಣಗಳ ಕೃತ್ಯವೇನು? ಎಂದು ಸಾಮಾನ್ಯವಾಗಿ ಬರುವಂತಹ ಪ್ರಶ್ನೆ. ಆದರೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬ ದೊಡ್ಡ ಶಂಕಾಪಿಶಾಚಿಯು ಪ್ರಾಪ್ತವಾದಾಗ ಅದನ್ನು ನಿರಾಕರಿಸುವುದಕ್ಕಾಗಿ ಈ ಅಧಿಕರಣವನ್ನು ಇಲ್ಲಿ ಉಲ್ಲೇಖಿಸುವುದು ಅತ್ಯಂತ ಅನಿವಾರ್ಯ.

ಹಿಂದಿನ ಅಧಿಕರಣದಲ್ಲಿ ಮನುಷ್ಯರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಸಮರ್ಥಿಸಿದರು. ಮನುಷ್ಯರಿಗೆ ಅಧಿಕಾರವಿದೆಯೆಂದು ಹೇಳಿದಾಗ, ದೇವತೆಗಳಿಗೆ ಅಧಿಕಾರವಿಲ್ಲವೇನು? ಎಂಬ ಪ್ರಶ್ನೆಯು ಹುಟ್ಟುತ್ತದೆ. ಅದಕ್ಕೆ ಉತ್ತರಿಸುವುದಕ್ಕಾಗಿ ದೇವತೆಗಳಿಗೆ, ಋಷಿಗಳಿಗೆ, ಗಂಧರ್ವ ಮೊದಲಾದವರೆಲ್ಲರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಆದರೆ ತಿರ್ಯಕ್‌ಪ್ರಾಣಿಗಳಿಗೆ ಅಧಿಕಾರವಿಲ್ಲದಕಾರಣ ಮನುಷ್ಯರಿಗೆ ಅಧಿಕಾರವಿದೆಯೆಂದು ಸೂತ್ರಕಾರರು ಹೇಳಿರುತ್ತಾರೆ. ಮನುಷ್ಯಪದವನ್ನು ಪ್ರಯೋಗಿಸಿದ್ದರಿಂದ ದೇವತೆಗಳಿಗೆ ಅಧಿಕಾರವಿಲ್ಲವೆಂದು ಸೂತ್ರಕಾರರ ಅಭಿಪ್ರಾಯವಲ್ಲ. ಬ್ರಹ್ಮವಿದ್ಯೆಯನ್ನು ಸಂಪಾದಿಸಲು ಯಾವ ವಿಶಿಷ್ಟಬುದ್ಧಿಯು ಆವಶ್ಯಕವೋ, ಅಂತಹ ವಿಶಿಷ್ಟಬುದ್ಧಿಯು ತಿರ್ಯಕ್‌ಪ್ರಾಣಿಗಳಿಲ್ಲದ ಕಾರಣ ಅವುಗಳಿಗೆ ಅಧಿಕಾರವಿಲ್ಲವೆಂಬುದು ಸೂತ್ರಕಾರರ ಹೃದಯ.

ಈ ವಿಷಯವನ್ನು ಪ್ರಾಸಂಗಿಕವಾದ್ದರಿಂದ ಇಲ್ಲಿಯೇ ಸಮರ್ಥಿಸಬೇಕು. ಆದ್ದರಿಂದ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಜ್ಞಾನಾಧಿಕಾರವು ಯಾರಿಗೆಲ್ಲಾ ಇರುತ್ತದೆಂದು ವಿಚಾರ ಮಾಡಿದ್ದರಿಂದ ಅಲ್ಲಿಯೇ ಈ ಅಧಿಕರಣದ ಪ್ರಮೇಯವನ್ನು ವಿಚಾರಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಿದಂತಾಗುತ್ತದೆ. ಕೇವಲ ಜ್ಞಾನಾಧಿಕಾರದ ವಿಚಾರವಷ್ಟೇ ಇಲ್ಲಿ ಪ್ರಸಕ್ತವಾಗಿಲ್ಲ. ಮನುಷ್ಯಪದದಿಂದ ವ್ಯಾವರ್ತ್ಯವಾದ ವಿಷಯ ಯಾವುದು ಎಂಬುದನ್ನು ಇಲ್ಲಿ ವಿಮರ್ಶಿಸಬೇಕಾಗಿದೆ. ಆದ್ದರಿಂದ ಮೂರನೇ ಅಧ್ಯಾಯದಲ್ಲಿ ಈ ಅಧಿಕರಣವನ್ನು ಹೇಳಬೇಕಾಗಿದ್ದರೂ ಪ್ರಾಸಂಗಿಕವಾದ್ದರಿಂದ ಇಲ್ಲಿಯೇ ಹೇಳಿರುತ್ತಾರೆ.

ಉದಾಹರಣೆ : ಭೋಕ್ತ್ರಧಿಕರಣದಲ್ಲಿ ಮುಕ್ತರಿಗೂ, ಪರಮಾತ್ಮನಿಗೂ ಭೇದವನ್ನು ಸಮರ್ಥನೆ ಮಾಡಿರುವುದರಿಂದ ನಾಲ್ಕನೆಯ ಅಧ್ಯಾಯದಲ್ಲಿ ಸಂಗತವಾಗುತ್ತದೆ. ಆದರೂ ಜೀವಾಭೇದವಿರುವುದರಿಂದ ಎಂಬ

ಯುಕ್ತಿವಿರೋಧ ಪರಿಹಾರ ಮಾಡುತ್ತದೆಂಬ ಕಾರಣದಿಂದ ಎರಡನೆಯ ಅಧ್ಯಾಯದಲ್ಲೇ ಹೇಗೆ ಭೋಕ್ತ್ರಧಿಕರಣವನ್ನು ಸೇರಿಸಿದ್ದಾರೋ, ಅದರಂತೆ ಈ ದೇವತಾಧಿಕರಣವೂ ಸಹ ಇಲ್ಲಿಯೇ ಸಂಗತವಾಗುತ್ತದೆ ಹೊರತು, ಮೂರನೆಯ ಅಧ್ಯಾಯದಲ್ಲಲ್ಲ.

ವಿಚಾರ ಮಾಡಿದರೆ ಮೂರನೆಯ ಅಧ್ಯಾಯದಲ್ಲೂ ಸಹ ಇದು ಸಂಗತವಾಗುವುದಿಲ್ಲ. ಏಕೆಂದರೆ ಸಾಧನೆಯ ಬಗ್ಗೆ ಮಾತ್ರ ಮೂರನೆಯ ಅಧ್ಯಾಯವು ವಿಚಾರವನ್ನು ಪ್ರತಿಪಾದನೆ ಮಾಡಬೇಕು. ದೇವತೆಗಳ ಜ್ಞಾನಾಧಿಕಾರವು ಸಾಧನೆಯಲ್ಲಿ ಸೇರದಿದ್ದಾಗ ಅಲ್ಲಿಯೂ ಸಹ ಹೇಗೆ ಸಂಗತವಾಗುತ್ತದೆ? ಅಂತೂ ಯಾವುದೇ ಅಧ್ಯಾಯದಲ್ಲೂ ಈ ವಿಚಾರವೂ ಅಸಂಗತವೆಂದು ತಿಳಿಯುತ್ತಿರುವಾಗ ಪ್ರಸಕ್ತವಾದಾಗ ಪ್ರಾರಂಭದಲ್ಲೇ ಇದನ್ನು ಉಲ್ಲೇಖ ಮಾಡುವುದು ಹೆಚ್ಚು ಸ್ವರಸ. ಆದ್ದರಿಂದ ಸಮನ್ವಯಾಧ್ಯಾಯದಲ್ಲಿ ದೇವತಾಧಿಕರಣಕ್ಕೆ ಅಸಾಂಗತ್ಯದೋಷವಿಲ್ಲವೆಂದು ತಿಳಿಯಬೇಕು.

• • • • •

## ದೇವತೆಗಳ ಹಾಗೂ ಮನುಷ್ಯರ ಪ್ರವೃತ್ತಿಗಾಗಿ ಅಧಿಕರಣ ಸಾರ್ಥಕ

## तात्पर्यचन्द्रिका

**ननु देवादीनामधिकारोक्तिस्तावन्नास्मदादीनां प्रवृत्तावुपयुक्ता ।**

ಅನುವಾದ - ಆಕ್ಷೇಪ - ಈ ಅಧಿಕರಣದಲ್ಲಿ ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಸಮರ್ಥಿಸುತ್ತಿದ್ದಾರೆ. ಆದರೆ ದೇವತೆಗಳಿಗಿರುವ ವೇದವಿದ್ಯಾಧಿಕಾರವನ್ನು ತಿಳಿದುಕೊಳ್ಳುವ ಮಾತ್ರದಿಂದ ನಮಗೇನೂ ಉಪಯೋಗವಿಲ್ಲ. ಅಂದರೆ ಬ್ರಹ್ಮವಿದ್ಯೆಯಲ್ಲಿ ಪ್ರವೃತ್ತಿ ಮಾಡಲು ದೇವತೆಗಳ ಅಧಿಕಾರವನ್ನು ತಿಳಿದುಕೊಳ್ಳುವುದು ಕಾರಣವಾಗುವುದಿಲ್ಲ.

**नापि देवादीनाम् । तैः स्वगतस्य विग्रहादिमत्त्वस्य तत्प्रयुक्तस्य सामर्थ्यादि-रूपाधिकारिविशेषणस्य च सिद्धान्तन्यायनिरपेक्षमेव निश्चितत्वात् ।**

ದೇವತೆಗಳ ಪ್ರವೃತ್ತಿಗೆ ಈ ಅಧಿಕರಣದ ಸಿದ್ಧಾಂತನ್ಯಾಯವು ಉಪಯೋಗವಾಗುತ್ತದೆಂದೂ ಸಹ ಹೇಳಲಾಗದು. ಏಕೆಂದರೆ ದೇವತೆಗಳಿಗೆ ಶರೀರವೇ ಇಲ್ಲದ ಕಾರಣ. ತನ್ನಿಮಿತ್ತಿಕವಾದ ಅಧ್ಯಯನ ಮಾಡುವಂತಹ ಸಾಮರ್ಥ್ಯವೂ ಸಹ ಇರುವುದಿಲ್ಲ. 'ಅರ್ಥೀ ಸಮರ್ಥೋ, ವಿದ್ವಾನ್ ಅಧಿಕ್ರಿಯತೇ' ಎಂಬುದಾಗಿ ಅಧಿಕಾರಿಯಲ್ಲಿ ಸಾಮರ್ಥ್ಯವು ವಿಶೇಷಣವಾಗಿದೆ. ಇಂತಹ ಸಾಮರ್ಥ್ಯವನ್ನು ಹೇಳಬೇಕೆಂದರೆ ಶರೀರ, ಇಂದ್ರಿಯ ಮೊದಲಾದವುಗಳಿರಬೇಕು. ಈ ಅಧಿಕರಣದ ಪೂರ್ವಪಕ್ಷಿಯು ಅವುಗಳನ್ನು ಒಪ್ಪದ ಕಾರಣ, ದೇವತೆಗಳಿಗೆ ಸಾಮರ್ಥ್ಯವನ್ನು ಉಪಪಾದಿಸಲಾಗದೆಂದು ಪೂರ್ವಪಕ್ಷ. ದೇವತೆಗಳಿಗೂ ಸಹ ಶರೀರ, ಇಂದ್ರಿಯ ಮೊದಲಾದವುಗಳಿರುತ್ತವೆ. ಆದ್ದರಿಂದಲೇ ಸಾಮರ್ಥ್ಯವೂ ಸಹ ಇರುತ್ತದೆಂದು ಸಿದ್ಧಾಂತ ಮಾಡಬೇಕು. ಆದರೆ ಈ ದೇಹ, ಇಂದ್ರಿಯ ಮೊದಲಾದವುಗಳಿರುವುದು

ದೇವತೆಗಳಿಗೆ ಪ್ರತ್ಯಕ್ಷದಿಂದಲೇ ಸಿದ್ಧವಾಗಿರಬೇಕಾದರೆ, ಈ ಅಧಿಕರಣದ ಸಿದ್ಧಾಂತವನ್ನು ಅಪೇಕ್ಷಿಸಿ, ತಮ್ಮ ಸಾಮರ್ಥ್ಯವನ್ನು ಅವರು ತಿಳಿಯಬೇಕಾಗಿಲ್ಲ.

**तस्मादफलेयं चिन्तेति चेत्**

ಹೀಗೆ ನಮ್ಮ ದೃಷ್ಟಿಯಿಂದ ಹಾಗೂ ದೇವತೆಗಳ ದೃಷ್ಟಿಯಿಂದ ಈ ಅಧಿಕರಣ ಹೊರಡುವುದು ವ್ಯರ್ಥವೇ ಆಗುತ್ತದೆ.

**सत्यम् । देवादीनां विग्रहाद्यभावादनधिकार इति पूर्वपक्षयतां परेषामयं दोषः।**

ಸಮಾಧಾನ - ಈ ದೋಷ ಅದ್ವೈತಿಗಳಿಗೆ ಬರುತ್ತದೆ ಹೊರತು, ನಮಗಲ್ಲ. ದೇವತೆಗಳಿಗೆ ಶರೀರ, ಇಂದ್ರಿಯ ಮೊದಲಾದವುಗಳು ಇರುವುದಿಲ್ಲವೆಂದು ಪೂರ್ವಪಕ್ಷ ಮಾಡಿ, ಶರೀರ-ಇಂದ್ರಿಯಾದಿಗಳಿರುತ್ತವೆಂದು ಸಿದ್ಧಾಂತ ಮಾಡುವವರು ಅದ್ವೈತಿಗಳೇ ಹೊರತು, ನಾವಲ್ಲ. ಆದ್ದರಿಂದ ವಿಗ್ರಹಾದ್ಯಭಾವ ಪ್ರಯುಕ್ತವಾಗಿ ಅನಧಿಕಾರ ಪೂರ್ವಪಕ್ಷವನ್ನು ಯಾವ ಅದ್ವೈತಿಗಳು ಮಾಡುತ್ತಾರೋ, ಅವರಿಗಷ್ಟೇ ವೈಯರ್ಥ್ಯದೋಷವು ಬರುತ್ತದೆ.

**अस्माकं तु देवादिपदानां नित्यत्वात्तेषां मुमुक्षा न युक्तेति पूर्वपक्षयतां न दोषः ।**

ದೇವತೆಗಳ ಪದವಿಯು ನಿತ್ಯವಾದ್ದರಿಂದ ಯಾವ ದೇವತೆಗಳಿಗೂ ಮೋಕ್ಷವೇ ಇರುವುದಿಲ್ಲ. ಆದ್ದರಿಂದ 'ಮುಮುಕ್ಷಾ'ವು (ಮೋಕ್ಷೇಚ್ಛೆ) ಅವರಿಗೆ ಬರುವುದಿಲ್ಲ. ತತ್ಪ್ರಯುಕ್ತವಾದ ಅಧಿಕಾರವೂ ಸಹ ಅವರಿಗೆ ಕೂಡುವುದಿಲ್ಲವೆಂದು ಪೂರ್ವಪಕ್ಷ ಮಾಡುತ್ತೇವೆ. ನಮ್ಮಲ್ಲಿ ಈ ದೋಷಕ್ಕೆ ಅವಕಾಶವಿಲ್ಲ.

**पूर्वपक्षन्यायेन देवानां स्वपदनित्यत्वाशङ्कया मुमुक्षाभावोपपत्तेः ।**

ಈ ಅಧಿಕರಣದ ಪೂರ್ವಪಕ್ಷನ್ಯಾಯವನ್ನು ನೋಡಿದಾಗ ದೇವತೆಗಳಿಗೆ ತಮ್ಮ ಪದವಿಯು ನಿತ್ಯವಾಗಿದೆ ಎಂದೆನಿಸಿ ಮೋಕ್ಷವೇ ಇಲ್ಲದ ಕಾರಣ. 'ಮುಮುಕ್ಷಾ' ಎಂಬುದೂ ಸಹ ಇಲ್ಲವೆಂದು ಸಂಶಯ ಬರುತ್ತದೆ. ಆವಾಗ ಈ ಅಧಿಕರಣದ ಸಿದ್ಧಾಂತವನ್ನು ತಿಳಿದು ತಮ್ಮ ಪದವಿಗಳು ಅನಿತ್ಯವಾಗಿವೆ ಎಂದು ಅವರು ತಿಳಿದುಕೊಳ್ಳಬೇಕು. ಹಾಗಾಗಿ ದೇವತೆಗಳ ದೃಷ್ಟಿಯಿಂದ ಈ ಅಧಿಕರಣದ ಸಿದ್ಧಾಂತ ನ್ಯಾಯವು ಸಂಶಯಪರಿಹಾರಕ್ಕಾಗಿ ಅಥವಾ ...ರ್ಥ್ಯಕ್ಕಾಗಿ ಸಾರ್ಥಕವಾಗಿದೆ.

**अस्मदादीनां सर्वदेवोपास्यत्वप्रकारेण ब्रह्मज्ञानाभावापाताच्च ।**

ಹಾಗಾದರೆ ನಮ್ಮ ದೃಷ್ಟಿಯಲ್ಲಿ ಈ ಅಧಿಕರಣವು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ನಮಗೂ ಸಹ ಸಾರ್ಥಕ. ಏಕೆಂದರೆ ಪರಮಾತ್ಮನು ಸರ್ವದೇವೋಪಾಸ್ಯನಾಗಿದ್ದಾನೆ ಎಂದು

ಅವಶ್ಯವಾಗಿ ನಾವು ತಿಳಿಯಬೇಕು. ಒಂದು ವೇಳೆ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೇ ಇಲ್ಲವಾದರೆ, ಪರಮಾತ್ಮನನ್ನು ಅವರು ಉಪಾಸನೆ ಮಾಡಲಾರರು. ಆವಾಗ ಸರ್ವದೇವೋಪಾಸ್ಯತ್ವವೆಂಬ ಧರ್ಮವು ಪರಮಾತ್ಮನಲ್ಲಿ ಬರುವುದಿಲ್ಲ. ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂದು ತಿಳಿದಾಗ ಸರ್ವದೇವೋಪಾಸ್ಯತ್ವಧರ್ಮಪುರಸ್ಸರವಾಗಿ ಬ್ರಹ್ಮನನ್ನು ತಿಳಿಯದಂತಾಗುತ್ತದೆ. ಆದ್ದರಿಂದ ನಮಗೂ ಸಹ ಈ ಅಧಿಕರಣದ ಸಿದ್ಧಾಂತನ್ಯಾಯವು ಸಾರ್ಥಕವಾಗಿದೆ.

**''विश्वेदेवा उपासते'' इति श्रुत्यप्रामाण्यापातस्य टीकायामेवोक्तत्वाच्च ।**

ಮತ್ತು 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು ಸಕಲದೇವತೆಗಳು ಪರಮಾತ್ಮನನ್ನು ಉಪಾಸಿಸುತ್ತಾರೆಂದು ಹೇಳುತ್ತಿದೆ. ಒಂದು ವೇಳೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೇ ಇಲ್ಲವಾದರೆ, ಈ ಶ್ರುತಿಗೆ ಅಪ್ರಾಮಾಣ್ಯದೋಷವು ಬರಬೇಕಾದೀತು. ಈ ದೋಷವನ್ನು ಟೀಕೆಯಲ್ಲಿಯೇ ಹೇಳಿರುತ್ತಾರೆ.

**न चाप्रामाण्येन पूर्वपक्षो द्वितीयाध्याय एव युक्त इति वाच्यम् ।**

'ವಿಶ್ವೇದೇವಾ ಉಪಾಸತೇ' ಮೊದಲಾದ ಶ್ರುತಿಗಳಿಗೆ ಯುಕ್ತಿವಿರೋಧ ಬರುವುದರಿಂದ ಅಪ್ರಾಮಾಣ್ಯವನ್ನು ಆಶಂಕಿಸಿ, ಪ್ರಾಮಾಣ್ಯವನ್ನು ಸಮರ್ಥಿಸಲಾಗುತ್ತಿದೆ. ಈ ವಿಷಯವನ್ನು ಎರಡನೇ ಅಧ್ಯಾಯದಲ್ಲೇ ಸೇರಿಸಬೇಕು. ಯುಕ್ತಿವಿರೋಧ ಬರುವುದರಿಂದ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಆಶಂಕಿಸಿ, ಪ್ರಾಮಾಣ್ಯದ ಸಮರ್ಥನೆಯು ಎರಡನೆಯ ಅಧ್ಯಾಯದಲ್ಲಿ ಪ್ರಸಕ್ತವಾಗಿರುವುದರಿಂದ ಇದನ್ನು ಅಲ್ಲಿಯೇ ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು.

**विश्वजिदधिकरणपूर्वपक्षस्याप्रामाण्यपर्यन्तस्यापि षष्ठ इवास्य विचारस्यावान्तरसङ्गतिलोभेनात्रापि युक्तत्वाच्च ।**

ಅವಾಂತರಸಂಗತಿಯಿರುವುದರಿಂದ ಈ ಅಧ್ಯಾಯದಲ್ಲಿ ದೇವತಾಧಿಕರಣವು ಸಂಗತವಾಗುತ್ತದೆ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತ ಹೀಗಿದೆ - ಪ್ರಥಮಾಧ್ಯಾಯದಲ್ಲಿ ಅಪ್ರಾಮಾಣ್ಯ ಶಂಕೆಯನ್ನು ಮಾಡಿ, ಪ್ರಾಮಾಣ್ಯವನ್ನು ಸಮರ್ಥಿಸುತ್ತಾರೆ. ಆದರೆ ಆರನೇ ಅಧ್ಯಾಯದಲ್ಲಿ ಬರುವಂತಹ ವಿಶ್ವಜಿದಧಿಕರಣದಲ್ಲಿ ಅಪ್ರಾಮಾಣ್ಯದ ತನಕ ಪೂರ್ವಪಕ್ಷ ಮಾಡಿ, ಪ್ರಾಮಾಣ್ಯದ ತನಕ ಸಿದ್ಧಾಂತ ಮಾಡಿರುತ್ತಾರೆ. ಆದ್ದರಿಂದ ವಿಶ್ವಜಿದಧಿಕರಣವನ್ನು ಪೂರ್ವಮೀಮಾಂಸೆಯ ಪ್ರಥಮಾಧ್ಯಾಯದಲ್ಲೇ ಸೇರಿಸಬೇಕು. ಆದರೆ ಅವಾಂತರಸಂಗತಿಯಿದೆಯೆಂಬ ಲೋಭದಿಂದ ಪ್ರಥಮಾಧ್ಯಾಯದಲ್ಲಿ ಇದನ್ನು ಸೇರಿಸದೇ ಆರನೇ ಅಧ್ಯಾಯದಲ್ಲಿ ಹೇಗೆ ಸೇರಿಸಿದ್ದಾರೋ, ಅದರಂತೆ ಶ್ರುತಿಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತಿರುವುದರಿಂದ, ಈ ಅಧಿಕರಣವು ಎರಡನೇ ಅಧ್ಯಾಯದಲ್ಲೇ ಸೇರಬೇಕಾದರೂ, ಅವಾಂತರಸಂಗತಿಯಿರುವ ಕಾರಣದಿಂದ ಪ್ರಥಮಾಧ್ಯಾಯದಲ್ಲಿ ಸೂತ್ರಕಾರರು ಸೇರಿಸಿರುತ್ತಾರೆ.

**प्रकाशः –**

ननु प्रासङ्गिकमपि फले सत्येव चिन्तनीयम् । अन्यथाऽतिप्रसङ्गात् । इह च फलं नास्तीत्याक्षिपति – **नन्विति** ।।

ವಿವರಣೆ - ಪ್ರಾಸಂಗಿಕವಾಗಿ ದೇವತಾಧಿಕರಣವನ್ನು ಉಲ್ಲೇಖಿಸುತ್ತಿದ್ದಾರೆಂದು ಉತ್ತರಿಸಿದಿರಿ. ಆದರೆ ಯಾವುದಾದರೂ ಪ್ರಯೋಜನವಿದ್ದರೆ ಮಾತ್ರ ಪ್ರಾಸಂಗಿಕವಾಗಿ ವಿಷಯವನ್ನು ಹೇಳಬೇಕು. ಏನೂ ಪ್ರಯೋಜನವಿಲ್ಲದಿದ್ದಾಗ ಪ್ರಾಸಂಗಿಕವೆಂದು ವಿಚಾರ ಮಾಡಿದರೆ ಅತಿಪ್ರಸಂಗಬರುತ್ತದೆ. ಪ್ರಕೃತ ದೇವತಾಧಿಕರಣಕ್ಕೆ ಯಾವುದೇ ಪ್ರಯೋಜನವು ಇರುವುದಿಲ್ಲವಲ್ಲವೇ?

ಈ ಪ್ರಶ್ನೆಯನ್ನು 'ನನು' ಇತ್ಯಾದಿ ಗ್ರಂಥದಿಂದ ಮಾಡುತ್ತಿದ್ದಾರೆ.

**प्रकाशः – नास्मदिति** ।। तदज्ञानेऽपि स्वगतार्थित्वादिज्ञानेनैव प्रवृत्त्युपपत्तेरिति भावः ।

ಗ್ರಂಥದಲ್ಲಿ 'ನಾಸ್ಮದಾದೀನಾಂ' ಎಂದು ಹೇಳಿದ್ದಾರೆ. ದೇವತೆಗಳಿಗೆ ಅಧಿಕಾರವಿರುತ್ತದೆಂಬ ಅರಿವು ನಮಗಿಲ್ಲದಿದ್ದರೂ ನಮ್ಮಲ್ಲಿರುವ ಅಸ್ತಿತ್ವಾದಿಜ್ಞಾನಗಳಿಂದ, ಬ್ರಹ್ಮವಿದ್ಯೆಯಲ್ಲಿ ಪ್ರವೃತ್ತಿಯು ಉಂಟಾಗುತ್ತದೆಯೆಂದು ಅಭಿಪ್ರಾಯ.

**प्रकाशः – निश्चितत्वादिति** ।। प्रत्यक्षेणैवेति भावः ।। **परेषामिति** ।। एतेन यदुक्तं कल्पतरौ ''अधिकारचिन्तेयं यद्यपि न देवादिप्रवृत्त्यर्था । तथाऽपि क्रममुक्तिफलोपास्तिषु भोगद्वारा मोक्षकाममनुष्यप्रवृत्त्यर्थ'' इति तन्निरस्तम् ।

'ನಿಶ್ಚಿತತ್ವಾತ್' ಎಂದರೆ ಪ್ರತ್ಯಕ್ಷದಿಂದಲೇ ದೇವತೆಗಳಿಗೆ ದೇಹೇಂದ್ರಿಯಾದಿಗಳಿರುತ್ತವೆಂದು ನಿಶ್ಚಯವಾಗಿದೆ ಎಂದರ್ಥ. 'ಪರೇಷಾಮ್' ಎಂಬುದರಿಂದ ಗ್ರಂಥಕಾರರು ಕಲ್ಪತರುವನ್ನು ನಿರಾಕರಿಸಿದ್ದಾರೆ. ಕಲ್ಪತರುವಿನಲ್ಲಿ ಹೀಗೆ ಹೇಳಲಾಗಿದೆ - 'ಅಧಿಕಾರಿಚಿಂತೇಯಂ ಯದ್ಯಪಿ ನ ದೇವಾದಿಪ್ರವೃತ್ತ್ಯರ್ಥಾ । ತಥಾಪಿ ಕ್ರಮಮುಕ್ತಿಫಲೋಪಾಸ್ತಿಷು ಭೋಗದ್ವಾರಾ ಮೋಕ್ಷಕಾಮಮನುಷ್ಯಪ್ರವೃತ್ತ್ಯರ್ಥಾ' 'ಈ ಅಧಿಕರಣದಲ್ಲಿ ಮಾಡುತ್ತಿರುವ ಅಧಿಕಾರ ವಿಚಾರವು ದೇವತೆಗಳ ಪ್ರವೃತ್ತಿಗೋಸ್ಕರವಲ್ಲ. ಹೊರತಾಗಿ, ಮನುಷ್ಯರ ಪ್ರವೃತ್ತಿಗೋಸ್ಕರ. ಮನುಷ್ಯರಿಗೆ ಮೊದಲು ಭೋಗವನ್ನು ಅನುಭವಿಸಿ, ಆಮೇಲೆ ಮೋಕ್ಷವನ್ನು ಪಡೆಯಬೇಕೆಂಬ ಅಪೇಕ್ಷೆಯಿರುತ್ತದೆ. ಆದ್ದರಿಂದ ಕ್ರಮಮುಕ್ತಿಫಲದ ಪಡೆಯುವಿಕೆಯಲ್ಲಿ ಉಪಾಸನೆಯನ್ನು ಅಪೇಕ್ಷಿಸುತ್ತಾರೆ. ಅಂದರೆ ಮೊದಲು ಸಗುಣೋಪಾಸನೆಯಿಂದ ಸಗುಣಮೋಕ್ಷವನ್ನು ಪಡೆದು ಅನಂತರ ನಿರ್ಗುಣೋಪಾಸನೆಯಿಂದ ನಿರ್ಗುಣಮೋಕ್ಷವನ್ನು ಪಡೆಯುತ್ತಾರೆ. ಆದ್ದರಿಂದ ಸಗುಣೋಪಾಸನೆ ಮಾಡಿ, ದೇವತೆಗಳಾಗಿ, ಅಲ್ಲಿರುವಂತಹ ಭೋಗಗಳನ್ನು ಪಡೆದು ಅನಂತರ ನಿರ್ಗುಣೋಪಾಸನೆ ಮಾಡಿ ಮೋಕ್ಷವನ್ನು

ಪಡೆಯುತ್ತಾರೆಂದು ತಿಳಿಸಬೇಕಾಗಿದೆ. ಹೀಗೆ ಮನುಷ್ಯರ ಪ್ರವೃತ್ತಿಗೋಸ್ಕರ ದೇವತೆಗಳಿಗೂ ಅಧಿಕಾರವಿದೆಯೆಂದು ಈ ಅಧಿಕರಣದಲ್ಲಿ ಸಮರ್ಥಿಸುತ್ತಿದ್ದಾರೆ'. ಕಲ್ಪತರುವಿನ ಈ ಅಭಿಪ್ರಾಯವು ಈಗ ನಿರಾಕೃತವಾಯಿತು.

**प्रकाशः** – उपास्तीनां क्रममुक्तिफलकत्वं नाम देवतापदप्राप्तिद्वारा-मुक्तिपर्यन्तत्वम् । तच्च विग्रहादिमच्चेतनरूपदेवतासद्भावसमर्थनमात्रेण सिध्यतीत्यधि-कारसद्भावपर्यन्तचिन्ताया व्यर्थत्वात् ।

ಉಪಾಸನೆಗಳಿಗೆ ಕ್ರಮಮುಕ್ತಿಯೇ ಫಲವೆಂದು ಹೇಳುವ ಇವರ ಅಭಿಪ್ರಾಯ ದೇವತಾಪದಪ್ರಾಪ್ತಿಯ ಮುಖಾಂತರ ಮೋಕ್ಷವನ್ನು ಪಡೆಯುವಿಕೆ ಎಂದರ್ಥ. ಇದನ್ನು ಸಮರ್ಥಿಸಬೇಕೆಂದರೆ ಶರೀರೇಂದ್ರಿಯಾದಿಗಳುಳ್ಳ ಚೇತನರೂಪರಾದ ದೇವತೆಗಳಿದ್ದಾರೆಂದು ಸಮರ್ಥನೆ ಮಾಡಿದರೆ ಸಾಕು. ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂಬ ಸಮರ್ಥನೆಯು ಅಪ್ರಾಸಂಗಿಕ ಮತ್ತು ವ್ಯರ್ಥವಾಗುತ್ತದೆ.

**प्रकाशः** – एतेनैव 'देवतानां सिद्धावन्तरादित्यादिविद्यादिष्वादि-त्यदेवतान्तर्वृत्तित्वेन ब्रह्मोपासनं नतु ज्योतिर्मण्डलान्तर्वर्तित्वेन' इत्यादिप्रयोजनं परिमळग्रन्थोक्तमपि प्रत्युक्तं ध्येयम् । अधिकारपर्यन्तचिन्तायाः कृत्याभावात् ।

ಹೀಗೆ ಕಲ್ಪತರುವನ್ನು ನಿರಾಕರಣೆ ಮಾಡಿದ್ದರಿಂದ ಕಲ್ಪತರುವಿನ ವ್ಯಾಖ್ಯಾನವೆನಿಸಿದ ಪರಿಮಳಗ್ರಂಥದ ಧೋರಣೆಯನ್ನು ನಿರಾಕರಿಸಿದಂತಾಯಿತು. ಪರಿಮಳವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ - 'ದೇವತಾನಾಂ ಸಿದ್ಧಾವಂತರಾದಿತ್ಯಾದಿವಿದ್ಯಾದಿಷ್ವಾದಿತ್ಯದೇವತಾಂತರ್ವೃತ್ತಿತ್ವೇನ ಬ್ರಹ್ಮೋಪಾಸನಂ ನತು ಜ್ಯೋತಿರ್ಮಂಡಲಾಂತರ್ವರ್ತಿತ್ವೇನ' 'ದೇವತೆಗಳು ಸಿದ್ಧರಾದರಷ್ಟೇ ಅಂತರಾಧಿಕರಣದಲ್ಲಿ ಹೇಳಿದಂತೆ ಆದಿತ್ಯಾದಿವಿದ್ಯೆಯಿಂದ 'ಆದಿತ್ಯ' ಎಂಬ ದೇವತೆಯ ಅಂತರ್ಯಾಮಿಯಾದ ಬ್ರಹ್ಮನನ್ನು ಉಪಾಸನೆ ಮಾಡಬೇಕು ಹೊರತು, ಕೇವಲ ಜ್ಯೋತಿರ್ಮಂಡಲದಲ್ಲಿರುವ ಬ್ರಹ್ಮನನ್ನು ಉಪಾಸನೆ ಮಾಡಬಾರದು' ಇವೇ ಮೊದಲಾದ ಪ್ರಯೋಜನಗಳನ್ನು ತಿಳಿಸಬೇಕಾಗಿದೆ. ಅದಕ್ಕೋಸ್ಕರ ಈ ಅಧಿಕರಣವು ಸಾರ್ಥಕ ಎಂದು. ಇದೂ ಸಹ ತಪ್ಪು. ಏಕೆಂದರೆ 'ಆದಿತ್ಯ' ಎಂಬ ದೇವತೆಯ ಒಳಗಡೆ ಬ್ರಹ್ಮನನ್ನು ಉಪಾಸನೆ ಮಾಡಬೇಕೆಂದು ತಿಳಿಸುವ ಉದ್ದೇಶವಿದ್ದಲ್ಲಿ ಜ್ಯೋತಿರ್ಮಂಡಲಕ್ಕಿಂತ ಅತಿರಿಕ್ತವಾಗಿ 'ಆದಿತ್ಯ' ಎಂಬ ದೇವತೆಯಿದ್ದಾನೆ ಎಂದು ಸಮರ್ಥನೆ ಮಾಡಿದರೆ ಸಾಕು. ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆಂಬ ವಿಚಾರಕ್ಕೆ ಸಾರ್ಥಕ್ಯವಿರುವುದಿಲ್ಲ.

**प्रकाशः** – अभिमानिसूत्र एव विग्रहादिमद्देवतायास्सिद्धत्वाच्च ।

ಮತ್ತು ಅಭಿಮಾನ್ಯಧಿಕರಣದಲ್ಲಿ ದೇವತೆಗಳಿಗೆ ಶರೀರ, ಇಂದ್ರಿಯ ಮೊದಲಾದವುಗಳೆಲ್ಲವೂ ಇರುತ್ತವೆಂದು ಸಮರ್ಥಿಸಲಾಗಿದೆ. ಆ ಅಧಿಕರಣದಿಂದಲೇ ಈ ವಿಷಯವು ಸಿದ್ಧವಾಗುವಾಗ ಅದ್ವೈತಿಗಳಿಗೆ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಹೇಳಲು ಸಾಧ್ಯವಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः – देवादीनां प्रवृत्तावुपयुक्तेयमधिकारिचिन्तेति भावेनाह – पूर्वपक्षन्यायेनेति ।। टीकोक्तपूर्वपक्षे फलेऽनुपपत्तिमाशङ्क्य समाधत्ते – नचेति ।।**

ದೇವತೆಗಳ ಪ್ರವೃತ್ತಿಗೋಸ್ಕರ ಈ ಅಧಿಕರಣದ ಸಿದ್ಧಾಂತ ನ್ಯಾಯವು ಉಪಯುಕ್ತವಾಗಿದೆ ಎಂಬ ಅಭಿಪ್ರಾಯದಿಂದ 'ಪೂರ್ವಪಕ್ಷನ್ಯಾಯೇನ' ಎಂಬ ವಾಕ್ಯವು ಹೊರಟಿದೆ.

ಟೀಕೆಯಲ್ಲಿ ಹೇಳಲ್ಪಟ್ಟ ಪೂರ್ವಪಕ್ಷದ ಫಲದಲ್ಲಿ ಅನುಪಪತ್ತಿಯನ್ನು ಆಕ್ಷೇಪಿಸಿ, ಸಮಾಧಾನವನ್ನು 'ನಚ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

**प्रकाशः – विश्वजिदिति ।। उक्तमधिकरणशरीरं प्राग्जिज्ञासाधिकरणे । तस्य पूर्वपक्षे पुरुषार्थभाव्यकत्वानङ्गीकाराद्विध्यानर्थक्येन शास्त्राप्रामाण्यमुक्तम् । तथाच तस्याद्याध्याये निवेश्यत्वेऽप्यन्यत्र निवेशस्तथाऽत्रापीत्यर्थः ।**

ವಿಶ್ವಜಿದಧಿಕರಣವನ್ನು ಹಿಂದೆ ಜಿಜ್ಞಾಸಾಧಿಕರಣದಲ್ಲಿ ವಿವರಿಸಿದ್ದಾಗಿದೆ. 'ಸ್ವರ್ಗಕಾಮೋ ಯಜೇತ' ಇತ್ಯಾದಿ ಸ್ಥಳದಲ್ಲಿ ಯಾವ ವಿಧಿಪ್ರತ್ಯಯವು ಶ್ರುತವಾಗಿದೆಯೋ, ಇದರಿಂದ ಭಾವ್ಯವಾದದ್ದು ಕ್ಲೇಶರೂಪವಾದ ಕರ್ಮವಷ್ಟೇ ಅಲ್ಲ ಹೊರತಾಗಿ, ಹತ್ತಿರದಲ್ಲೇ ಇರುವ 'ಸ್ವರ್ಗಕಾಮನಾ' ಎಂಬ ಪುರುಷಾರ್ಥವು ಭಾವ್ಯವಾಗಿರುತ್ತದೆ. ಆದ್ದರಿಂದ 'ಯಾಗೇನ ಸ್ವರ್ಗಂ ಭಾವಯೇತ್' ಎಂಬ ಶಾಬ್ದಬೋಧವು ಬರುತ್ತದೆ. ಹೀಗೆ ಯಾವುದೇ ವಿಧಿಪ್ರತ್ಯಯದಿಂದ ಭಾವ್ಯವಾದದ್ದು ಪುರುಷಾರ್ಥವಾಗಿರುತ್ತದೆ. ಆದರೆ 'ವಿಶ್ವಜಿತಯಜೇತಾ' ಇತ್ಯಾದಿ ಸ್ಥಳದಲ್ಲಿ ಪುರುಷಾರ್ಥವು ಕೇಳಿಸುತ್ತಲೇ ಇಲ್ಲ. ಇಂತಹ ಸ್ಥಳದಲ್ಲಿ ಭಾವ್ಯವಾದದ್ದು ಯಾವುದು ಎಂಬ ಸಂಶಯವು ಬರುತ್ತದೆ. ಪುರುಷಾರ್ಥಭಾವ್ಯಕತ್ವವು ಇಲ್ಲದ ಕಾರಣ ಇಂತಹ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಬರುತ್ತದಲ್ಲವೇ? ಅಂದರೆ ಪುರುಷಾರ್ಥಭಾವ್ಯಕತ್ವವು ಒಪ್ಪಿಲ್ಲದ ಕಾರಣ, ವಿಧಿಯು ಅನರ್ಥವಾಗುತ್ತದೆ. ಇದರಿಂದ ಶಾಸ್ತ್ರಕ್ಕೆ ಅಪ್ರಾಮಾಣ್ಯದೋಷ ಬರುತ್ತದೆ. ಹೀಗೆ ವಿಶ್ವಜಿದಧಿಕರಣದಲ್ಲಿ ಅಪ್ರಾಮಾಣ್ಯದೋಷವನ್ನು ಪೂರ್ವಪಕ್ಷ ಮಾಡಿ ಸಿದ್ಧಾಂತದಲ್ಲಿ ಸಕಲ ಶಾಸ್ತ್ರಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸಿದ್ದಾರೆ.

ಹೀಗೆ ಅಪ್ರಾಮಾಣ್ಯವನ್ನು ಪರಿಹರಿಸಿ, ಪ್ರಾಮಾಣ್ಯವನ್ನು ಸ್ಥಾಪನೆ ಮಾಡುವುದಾದರೆ, ಪ್ರಥಮಾಧ್ಯಾಯದಲ್ಲೇ ಈ ಅಧಿಕರಣವನ್ನು ಸೇರಿಸಬೇಕು. ಆದರೂ ಸಹ ಅವಾಂತರಸಂಗತಿಯನ್ನು ವಿವಕ್ಷಿಸಿ, ಆರನೆಯ ಅಧ್ಯಾಯದಲ್ಲಿ ಪೂರ್ವಮೀಮಾಂಸಕರು ಸೇರಿಸಿದಂತೆ ಪ್ರಕೃತ ದೇವತಾಧಿಕರಣವನ್ನು ಎರಡನೆಯ ಅಧ್ಯಾಯದಲ್ಲಿ ಸೇರಿಸಬೇಕಾದರೂ ಅವಾಂತರ ಸಂಗತಿಯಿರುವ ಪ್ರಯುಕ್ತ ಪ್ರಥಮಾಧ್ಯಾಯದಲ್ಲಿ ಸೇರಿಸಿರುತ್ತಾರೆ.

**प्रकाशः –** ननु विश्वजिद्वाक्यं चतुर्थे ''चोदनायां फलाश्रुतेः कर्ममात्रं प्रतीयेत नह्यशब्दं प्रतीयते'' इति तृतीयपादीयपञ्चमाधिकरणे विचारितमित्यवादि । तथाच कथं षष्ठ इत्युक्तिः ।

ಪ್ರಶ್ನೆ - ಗ್ರಂಥಕಾರರು ವಿಶ್ವಜಿದಧಿಕರಣದ ನ್ಯಾಯವು ಆರನೆಯ ಅಧ್ಯಾಯದಲ್ಲಿ ವಿಚಾರ ಮಾಡಲ್ಪಟ್ಟಿದೆಯೆಂದು ಹೇಳಿದ್ದಾರೆ. ಆದರೆ 'ಚೋದನಾಯಾಂ ಫಲಾಶ್ರುತೇಃ ಕರ್ಮಮಾತ್ರಂ ಪ್ರತೀಯತೇ ನಹ್ಯಶಬ್ದಂ ಪ್ರತಿಯತೇ' ಎಂಬ ಈ ವಿಶ್ವಜಿದಧಿಕರಣವು ನಾಲ್ಕನೇ ಅಧ್ಯಾಯದ ಮೂರನೇ ಪಾದದ ಐದನೆಯ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಹೀಗಿರುವಾಗ ಗ್ರಂಥಕಾರರು ಈ ಪೂರ್ವಮೀಮಾಂಸಾನ್ಯಾಯವು ಆರನೆಯ ಅಧ್ಯಾಯದಲ್ಲಿ ಬಂದಿರುತ್ತದೆಂದು ಹೇಗೆ ಹೇಳಿದರು?

**प्रकाशः** – सत्यम् । अनेकोदाहरणसूचनायैवमुक्तिः । तथाहि । विश्वजिदित्युक्त्या तस्य यथा चतुर्थे निवेश इति लभ्यते । षष्ठ इत्युक्त्या स्वर्गकामाधिकरणस्य तादृशस्यापीति लभ्यते ।

ಉತ್ತರ - ಹೌದು, ವಿಶ್ವಜಿದಧಿಕರಣವು ನಾಲ್ಕನೆಯ ಅಧ್ಯಾಯದಲ್ಲಿ ಬರುವುದು ಸತ್ಯ. ಆದರೆ ಅನೇಕ ಉದಾಹರಣೆಗಳನ್ನು ಸೂಚನೆ ಮಾಡುವುದಕ್ಕಾಗಿ ಗ್ರಂಥಕಾರರು 'ಷಷ್ಠೇ' ಎಂದಿರುತ್ತಾರೆ. 'ವಿಶ್ವಜಿತ್' ಎಂದು ಹೇಳಿದ್ದರಿಂದ ವಿಶ್ವಜಿದಧಿಕರಣವನ್ನು ಪ್ರಥಮಾಧ್ಯಾಯದಲ್ಲಿ ಸೇರಿಸಬೇಕಾದರೂ ನಾಲ್ಕನೇ ಅಧ್ಯಾಯದಲ್ಲಿ ಹೇಗೆ ಸೇರಿಸಿದ್ದಾರೋ, ಎಂಬುದು ಒಂದು ಉದಾಹರಣೆ. 'ಷಷ್ಠೇ' ಎಂದು ಹೇಳಿದ್ದರಿಂದ ಸ್ವರ್ಗಕಾಮಾಧಿಕರಣದ ನ್ಯಾಯವನ್ನು ಪ್ರಥಮಾಧ್ಯಾಯದಲ್ಲಿ ಸೇರಿಸಬೇಕಾದರೂ ಹೇಗೆ ಆರನೇ ಅಧ್ಯಾಯದಲ್ಲಿ ಸೇರಿಸಿದ್ದಾರೋ, ಎಂಬುದು ಮತ್ತೊಂದು ಉದಾಹರಣೆ. ಆದ್ದರಿಂದ ಯೋಗವಿಭಾಗ ಮಾಡಿ ಸೂತ್ರವನ್ನು ಕೆಲವೊಮ್ಮೆ ವ್ಯಾಖ್ಯಾನ ಮಾಡುವಂತೆ ಗ್ರಂಥಕಾರರ 'ವಿಶ್ವಜಿದಧಿಕರಣ' ಇತ್ಯಾದಿ ವಾಕ್ಯವನ್ನು ಯೋಗವಿಭಾಗ ಮಾಡಬೇಕು. ಅಂದರೆ 'ವಿಶ್ವಜಿದಧಿಕರಣ ಪೂರ್ವಪಕ್ಷಸ್ಯ ಅಪ್ರಮಾಣ್ಯಪರ್ಯಂತಸ್ಯಾಪಿ ಅವಾಂತರಸಂಗತಿಲೋಭೇನ ಚತುರ್ಥೇನಿವೇಶಃ' ಎಂಬುದು ಒಂದು ವಾಕ್ಯ. 'ಸ್ವರ್ಗಕಾಮಾಧಿಕರಣಸ್ಯ ಷಷ್ಠೇ ಅವಾಂತರಸಂಗತಿಲೋಭೇನ ಯಥಾ ನಿವೇಶಃ' ಎಂಬುದು ಬೇರೆ ವಾಕ್ಯ. ಹೀಗೆ ಎರಡು ಬಗೆಯಲ್ಲಿ ವಾಕ್ಯವನ್ನು ಅರ್ಥೈಸಿಕೊಳ್ಳಬೇಕು.

**प्रकाशः** – यद्वा षष्ठगतस्वर्गकामाधिकरणे चतुर्थाध्यायोक्तन्यायसिद्ध-स्वर्गपदोपेतस्य विश्वजिदादेरप्युदाहरणत्वात्तदभिप्रायेण विश्वजिदित्युक्तमिति ।

ಅಥವಾ ಆರನೇ ಅಧ್ಯಾಯದ ಸ್ವರ್ಗಕಾಮಾಧಿಕರಣವನ್ನೇ ಗ್ರಂಥಕಾರರು ಇಲ್ಲಿ ಉದಾಹರಿಸಿದ್ದಾರೆ. ನಾಲ್ಕನೇ ಅಧ್ಯಾಯದ ವಿಶ್ವಜಿದಧಿಕರಣದ ನ್ಯಾಯದಿಂದ ಸಿದ್ಧವಾದ 'ಸ್ವರ್ಗ' ಪದದಿಂದ ವಿಶ್ವಜಿದ್ವಾಕ್ಯವನ್ನೂ ಸಹ ಸ್ವರ್ಗಕಾಮಾಧಿಕರಣದಲ್ಲಿ ಉದಾಹರಿಸಲಾಗಿದೆ. ಆದ್ದರಿಂದ 'ಸ್ವರ್ಗಕಾಮೋ ಯಜೇತ' ಎಂಬುದನ್ನು ಹೇಗೆ ಸ್ವರ್ಗಕಾಮಾಧಿಕರಣದಲ್ಲಿ ವಿಚಾರ ಮಾಡಲಾಗಿದೆಯೋ, ಆದರಂತೆ 'ವಿಶ್ವಜಿದ ಯಜೇತಾ' ಎಂಬ

ವಾಕ್ಯವನ್ನೂ ಸಹ ವಿಚಾರ ಮಾಡಲಾಗಿದೆ. ಆದ್ದರಿಂದ ಸ್ವರ್ಗಕಾಮಾಧಿಕರಣವನ್ನು ವಿಶ್ವಜಿದಧಿಕರಣವೆಂದು ಗ್ರಂಥಕಾರರು ಕರೆದಿದ್ದಾರೆ.

**प्रकाशः –** गुरुपादास्तु चतुर्थ इति वक्तव्ये षष्ठ इति पाठो लेखकदोषमूल इत्याहुः ॥

ಗುರುಚರಣರು 'ಚತುರ್ಥೇ' ಎಂದೇ ನಿಜವಾದ ಪಾಠ. 'ಷಷ್ಠೇ' ಎಂಬ ಮಾತು ಲೇಖಕ-ದೋಷಮೂಲವೆಂದು ಹೇಳುತ್ತಾರೆ.

**प्रकाशः – अवान्तरेति ॥** पयोव्रतं ब्राह्मणस्येत्यस्य फलाश्रवणादपुरुषार्थत्वमिति पूर्वाधिकरणोक्तरीत्या विश्वजिदादीनामपि फलाश्रवणादपुरुषार्थत्वमित्यादि-रूपावान्तरसङ्गतिलोभेन,

फले सत्येव विधेः प्रयोजकत्वं नान्यथेति प्रयोजकत्वौपयिकत्वरूपावान्तर-सङ्गतिलोभाद्वा यथाप्रयुक्त्यध्यायादौ निवेशस्तथेहाप्युक्तसङ्गतिलोभेनात्र निवेश इत्यर्थः ।

ವಿಶ್ವಜಿದಧಿಕರಣಕ್ಕೆ ಅವಾಂತರಸಂಗತಿಯನ್ನು ಪೂರ್ವಮೀಮಾಂಸೆಯಲ್ಲಿ ಹೀಗೆ ಹೇಳಿದ್ದಾರೆ - ನಾಲ್ಕನೆಯ ಅಧ್ಯಾಯದಲ್ಲಿ ವಿಶ್ವಜಿದಧಿಕರಣವು ಪ್ರಸಕ್ತವಾಗಿದೆ. ಇದರ ಹಿಂದಿನ ಅಧಿಕರಣದಲ್ಲಿ 'ಪಯೋವ್ರತಂ ಬ್ರಾಹ್ಮಣಸ್ಯ' ಎಂಬ ವಾಕ್ಯವನ್ನು ವಿಚಾರ ಮಾಡಿದ್ದಾರೆ. ಈ ವಾಕ್ಯದಲ್ಲಿ ಫಲವು ಅಶ್ರುತವಾದ್ದರಿಂದ ಅಪುರುಷಾರ್ಥರೂಪವಾಗಿದೆಯೆಂದು ಹೇಳಿದ್ದಾರೆ. ಅದರಂತೆ ಮುಂದಿನ ವಿಶ್ವಜಿದಧಿ-ಕರಣದಲ್ಲಿ 'ವಿಶ್ವಜಿತಾ ಯಜೇತ' ಇತ್ಯಾದಿ ವಾಕ್ಯದಲ್ಲಿ ಫಲವು ಅಶ್ರುತವಾದ್ದರಿಂದ ಅಪುರುಷಾರ್ಥರೂಪವಾಗಿದೆ ಎಂದು ಪೂರ್ವಪಕ್ಷ ಮಾಡಲಾಗಿದೆ. ಹೀಗೆ ಹಿಂದಿನ ಅಧಿಕರಣದಿಂದ ಅವಾಂತರಸಂಗತಿಯು ಇರುವುದರಿಂದ ಪ್ರಥಮಾಧ್ಯಾಯದಲ್ಲಿ ಸೇರಿಸದೇ ನಾಲ್ಕನೇ ಅಧ್ಯಾಯದಲ್ಲಿ ಸೇರಿಸಿದ್ದಾರೆ.

ಅಥವಾ ಫಲವಿದ್ದರೆ ಮಾತ್ರ ವಿಧಿಯು ಪ್ರಯೋಜಕವಾಗುತ್ತದೆ. ಇಲ್ಲದಿದ್ದರೆ ವ್ಯರ್ಥವಾಗುತ್ತದೆ. ಹೀಗೆ ಪ್ರಯೋಜಕತ್ವಕ್ಕೆ ಈ ಅಧಿಕರಣವು ಸಾಧಕವಾದ್ದರಿಂದ ಅವಾಂತರಸಂಗತಿಯಿರುತ್ತದೆ. ಆದ್ದರಿಂದ ಪ್ರಯುಕ್ತಿ ಅಧ್ಯಾಯವೆನಿಸಿದ ನಾಲ್ಕನೆಯ ಅಧ್ಯಾಯದಲ್ಲೇ ಪ್ರಯೋಜ್ಯಪ್ರಯೋಜಕಭಾವರೂಪವಾದ ಸಂಗತಿ-ಯಿರುವುದರಿಂದ ವಿಶ್ವಜಿದಧಿಕರಣವನ್ನು ಸೇರಿಸಿದ್ದಾರೆ. ಹೀಗೆ ಅವಾಂತರಸಂಗತಿಯೆಂಬ ಲೋಭದಿಂದ ವಿಶ್ವಜಿದಧಿಕರಣವನ್ನು ಹೇಗೆ ಪ್ರಥಮಾಧ್ಯಾಯದಲ್ಲಿ ಸೇರಿಸದೇ ನಾಲ್ಕನೆಯ ಅಧ್ಯಾಯದಲ್ಲಿ ಪೂರ್ವಮೀಮಾಂಸಕರು ಸೇರಿಸದ್ದಾರೋ, ಅದರಂತೆ ದೇವತಾಧಿಕರಣವನ್ನೂ ಸಹ ಪ್ರಥಮಾಧ್ಯಾಯದಲ್ಲಿ ಸೇರಿಸಿದ್ದಾರೆಂದು ತಿಳಿಯಬೇಕು.

**प्रकाशः** – उक्तं च तन्त्ररत्ने -

यथाऽश्रुतफलत्वेन व्रतस्यापुरुषार्थता ।
तथा विश्वजिदादीनां नह्येष्वपि फलं श्रुतम् ।।
नच क्रत्वर्थता तेषामध्वश्रुत्याद्यभावतः ।
अतो निष्फलता यातेत्येवं प्रकृतसङ्गतिः ।।
विधेः प्रयोजकत्वं च फले सत्येव कल्प्यते ।
फलं चैतेषु नास्तीति स्पष्टैवाध्यायसङ्गतिः ।। इति ।।

ಈ ವಿಷಯವನ್ನು ತಂತ್ರರತ್ನ ಎಂಬ ಗ್ರಂಥದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ಯಥಾऽಶ್ರುತಫಲತ್ವೇನ ವ್ರತಸ್ಯಾಪುರುಷಾರ್ಥತಾ ।
ತಥಾ ವಿಶ್ವಜಿದಾದೀನಾಂ ನಹ್ಯೇಷ್ವಪಿ ಫಲಂ ಶ್ರುತಮ್ ॥
ನಚ ಕ್ರತ್ವರ್ಥತಾ ತೇಷಾಮಧ್ವಶ್ರುತ್ಯಾದ್ಯಭಾವತಃ ।
ಅತೋ ನಿಷ್ಫಲತಾ ಯಾತೇತ್ಯೇವಂ ಪ್ರಕೃತಸಂಗತಿಃ ॥
ವಿಧೇಃ ಪ್ರಯೋಜಕತ್ವಂ ಚ ಫಲೇ ಸತ್ಯೇವ ಕಲ್ಪ್ಯತೇ ।
ಫಲಂ ಚೈತೇಷು ನಾಸ್ತೀತಿ ಸ್ಪಷ್ಟೈವಾಧ್ಯಾಯಸಂಗತಿಃ ॥

ಎಂಬುದಾಗಿ.

ಯಾವರೀತಿಯಾಗಿ ಬ್ರಾಹ್ಮಣನು ಮಾಡುವ ಪಯೋವ್ರತಕ್ಕೆ ಫಲವು ಅಶ್ರುತವಾದ್ದರಿಂದ ಅಪುರುಷಾರ್ಥರೂಪವಾಗಿದೆಯೋ, ಅದರಂತೆ ವಿಶ್ವಜಿದಾದಿಯಾಗಗಳನ್ನು ಮಾಡುವುದರಿಂದಲೂ ಯಾವುದೇ ಫಲಗಳು ಶ್ರುತವಾಗಿಲ್ಲ. ಮತ್ತು ಕ್ರತ್ವರ್ಥವೂ ಸಹ ಇರುವುದಿಲ್ಲ. ಹೀಗೆ ನೈಷ್ಫಲ್ಯವು ಬರುವುದರಿಂದ ನಾಲ್ಕನೇ ಅಧ್ಯಾಯದಲ್ಲಿ ವಿಶ್ವಜಿದಧಿಕರಣವು ಸಂಗತವಾಗುತ್ತದೆ. ಫಲವಿದ್ದರೆ ಮಾತ್ರ ವಿಧಿಗೆ ಪ್ರಯೋಜಕತ್ವವಿರುತ್ತದೆ. ಫಲವಿಲ್ಲದ ಕಾರಣ 'ವಿಶ್ವಜಿತಾಯಜೇತ' ಇತ್ಯಾದಿ ವಿಧಿಗಳಿಗೆ ಅಪ್ರಯೋಜಕತ್ವವು ಬರುತ್ತದೆಂದು ಅಧ್ಯಾಯಸಂಗತಿಯು ಸ್ಪಷ್ಟವಾಗಿರುತ್ತದೆ ಎಂದು.

ಹೀಗೆ ಅವಾಂತರಸಂಗತಿಯ ಲೋಭದಿಂದ ವಿಶ್ವಜಿದಧಿಕರಣವನ್ನು ನಾಲ್ಕನೆಯಅಧ್ಯಾಯದಲ್ಲಿ ಸೇರಿಸಿದಂತೆ ಪ್ರಕೃತ ದೇವತಾಧಿಕರಣವನ್ನೂ ಸಹ ಪ್ರಥಮಾಧ್ಯಾಯದಲ್ಲಿ ಸೇರಿಸಿದ್ದಾರೆಂದು ತಿಳಿಯಬೇಕು.

## ಸಾರ

ದೇವತಾ ಪದವಿಯು ನಿತ್ಯವಾದ್ದರಿಂದ ದೇವತೆಗಳಿಗೆ ಮೋಕ್ಷವೇ ಇರುವುದಿಲ್ಲ. ಆದ್ದರಿಂದಲೇ ಮುಮುಕ್ಷಾವೂ ಸಹ ಕೂಡುವುದಿಲ್ಲ. ಅಧಿಕಾರಿವಿಶೇಷಣವಾದ ಮುಮುಕ್ಷಾ ಎಂಬುದು ಇಲ್ಲದ ಕಾರಣ, ದೇವತೆಗಳು ಬ್ರಹ್ಮವಿದ್ಯೆಯಲ್ಲಿ ಅಧಿಕಾರಿಗಳಾಗುವುದಿಲ್ಲವೆಂದು ಸಂಶಯ ಬರುತ್ತದೆ. ಇದರ ಪರಿಹಾರಕ್ಕಾಗಿ ದೇವತಾಧಿಕರಣವು ಹೊರಟಿದೆ. ಅಂದರೆ ದೇವತೆಗಳ ಪದವು ನಿತ್ಯವಲ್ಲ. ಆದ್ದರಿಂದಲೇ ದೇವತೆಗಳು ಮೋಕ್ಷವನ್ನು ಬಯಸಲು ಬ್ರಹ್ಮಜ್ಞಾನವನ್ನು ಪಡೆಯಲೇ ಬೇಕು ಎಂದು ಈ ಅಧಿಕರಣವು ಸಮರ್ಥಿಸುತ್ತಿದೆ. ಈ ಅಧಿಕರಣವನ್ನು ಅಧ್ಯಯನ ಮಾಡಿದಾಗ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಆದ್ದರಿಂದ ದೇವತೆಗಳ ದೃಷ್ಟಿಯಿಂದ ಈ ಅಧಿಕರಣವು ಸಾರ್ಥಕ.

ನಮಗೂ ಸಹ ಈ ಅಧಿಕರಣವು ಸಾರ್ಥಕ. ಪರಮಾತ್ಮನು ಸರ್ವದೇವೋಪಾಸ್ಯನಾಗಿದ್ದಾನೆಂದು ಅವಶ್ಯವಾಗಿ ತಿಳಿಯಬೇಕು. ದೇವತೆಗಳಿಗೆ ಮೋಕ್ಷವೇ ಇಲ್ಲವೆಂದಾದರೆ, ಪರಮಾತ್ಮನನ್ನು ಉಪಾಸನೆ ಮಾಡಲಾರರು. ಆದ್ದರಿಂದ ದೇವತಾ ಪದವಿಯು ಅನಿತ್ಯವಾದ್ದರಿಂದ ಅವರಿಗೂ ಮೋಕ್ಷವಿರುತ್ತದೆಂದು ಈ ಅಧಿಕರಣದಲ್ಲಿ ಸಮರ್ಥಿಸಿದಾಗ, ದೇವತೆಗಳಿಂದ ಪರಮಾತ್ಮನು ಉಪಾಸ್ಯನೆಂದು ಸಿದ್ಧವಾಗುತ್ತದೆ. ಆವಾಗ 'ಸರ್ವದೇವೋಪಾಸ್ಯತ್ವ' ಎಂಬ ಧರ್ಮವನ್ನು ಪರಮಾತ್ಮನಲ್ಲಿ ತಿಳಿದಂತಾಗುತ್ತದೆ. ಈ ಜ್ಞಾನದ ಸಂಪಾದನೆಗಾಗಿ ದೇವತಾಧಿಕರಣವು ನಮಗೂ ಸಹ ಸಾರ್ಥಕವಾಗಿದೆ. ಮತ್ತು 'ವಿಶ್ವೇದೇವಾ ಉಪಾಸತೇ' ಇತ್ಯಾದಿ ಶ್ರುತಿಗಳ ಪ್ರಾಮಾಣ್ಯದ ಸಮರ್ಥನೆಯೂ ಸಹ ಈ ಅಧಿಕರಣದ ಮತ್ತೊಂದು ಉದ್ದೇಶ.

ಈ ಅಧಿಕರಣದಲ್ಲಿ ಶ್ರುತಿಗೆ ಯುಕ್ತಿಯಿಂದ ಅಪ್ರಾಮಾಣ್ಯದೋಷವು ಪ್ರಾಪ್ತವಾದರೆ, ಅದರ ಪರಿಹಾರವನ್ನೂ ಸಹ ಮಾಡುತ್ತಿದ್ದಾರೆಂದು ಹೇಳಿದಂತಾಯಿತು. ಆವಾಗ ಈ ಅಧಿಕರಣವು ಎರಡನೆಯ ಅಧ್ಯಾಯದಲ್ಲಿ ಸೇರಬೇಕಲ್ಲವೇ ಎಂಬ ಪ್ರಶ್ನೆ ಬರುತ್ತದೆ. ಆದರೆ ಹಿಂದಿನ ಅಧಿಕರಣದಿಂದ ಅವಾಂತರಸಂಗತಿಯಿರುವ ಪ್ರಯುಕ್ತ ಇದನ್ನು ಇಲ್ಲಿಯೇ ಸೇರಿಸಿದ್ದಾರೆ. ಹೊರತು, ಎರಡನೆಯ ಅಧ್ಯಾಯದಲ್ಲಿ ಇದನ್ನು ಸೇರಿಸಿಲ್ಲ. ಪೂರ್ವಮೀಮಾಂಸಕರು ವಿಶ್ವಜಿದಧಿಕರಣವನ್ನು ಪ್ರಥಮಾಧ್ಯಾಯದಲ್ಲಿ ಸೇರಿಸದೇ, ನಾಲ್ಕನೇ ಅಧ್ಯಾಯದಲ್ಲಿ ಸೇರಿಸಿದ್ದಾರೆ. ವಾಸ್ತವಿಕವಾಗಿ ಶ್ರುತಿಯ ಅಪ್ರಾಮಾಣ್ಯದೋಷವನ್ನು ಪರಿಹರಿಸುತ್ತಿರುವುದರಿಂದ ಪ್ರಥಮಾಧ್ಯಾಯದಲ್ಲೇ ಅದನ್ನು ಸೇರಿಸಬೇಕು. ಆದರೂ ಅವಾಂತರಸಂಗತಿಯಿದೆ ಎಂಬ ಕಾರಣಕ್ಕೋಸ್ಕರ ನಾಲ್ಕನೆಯ ಅಧ್ಯಾಯದಲ್ಲಿ ಹೇಗೆ ಸೇರಿಸಿದ್ದಾರೋ, ಅದರಂತೆ ದೇವತಾಧಿ-ಕರಣದಲ್ಲಿಯೂ ಅವಾಂತರಸಂಗತಿಯಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಸೇರಿಸದೇ ಪ್ರಥಮಾಧ್ಯಾಯದಲ್ಲೇ ಸೇರಿಸಿರುತ್ತಾರೆ.

• • • • •

## ಸಂಶಯ ಪರಂಪರೆ

**तात्पर्यचन्द्रिका**

**अत्र देवानां किं ब्रह्मविद्याधिकारो नास्त्युतास्तीति चिन्ता ।**

ಅನುವಾದ – ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ - ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೋ, ಇಲ್ಲವೋ ಎಂಬುದು ಪ್ರಧಾನ ವಿಚಾರ.

**तदर्थं तेषां किं मोक्षेऽर्थिता नास्त्युतास्तीति ।**

ಹಿಂದಿನ ವಿಚಾರಕ್ಕಾಗಿ ದೇವತೆಗಳಿಗೆ ಮೋಕ್ಷದಲ್ಲಿ ಅರ್ಥಿತ್ವವಿದೆಯೋ, ಇಲ್ಲವೋ, ಎಂಬುದು ಅವಾಂತರ ವಿಚಾರ.

**तदर्थं तत्तत्पदविशिष्टा देवाः किमनादिनित्याः किं वाऽऽद्यन्तवन्त इति ।**

ಹಿಂದಿನ ವಿಚಾರಕ್ಕಾಗಿ ಆಯಾ ಪದವಿಗಳಿಂದ ವಿಶಿಷ್ಟರಾದ ದೇವತೆಗಳು, ಅನಾದಿನಿತ್ಯರೋ, ಅಥವಾ ಉತ್ಪತ್ತಿನಾಶವುಳ್ಳವರೋ ಎಂಬ ವಿಚಾರ ಮಾಡಬೇಕು.

**तदर्थं किमाद्यन्तवत्त्वे कर्मशब्दौ विरुध्येते नवेति ।**

ಅದಕ್ಕಾಗಿ ದೇವತೆಗಳಿಗೆ ಉತ್ಪತ್ತಿನಾಶವಿರುವುದಾದರೆ, ಕರ್ಮ ಹಾಗೂ ಶಬ್ದಗಳೆರಡೂ ವಿರುದ್ಧವಾಗುತ್ತವೋ, ಇಲ್ಲವೋ ಎಂದು ವಿಚಾರ ಮಾಡಬೇಕು. ಮುಂದಿನ ವಿಚಾರಗಳು ಸಿದ್ಧವಾದರೆ ಮಾತ್ರ, ಹಿಂದಿನ ವಿಚಾರಗಳು ದೃಢವಾಗುತ್ತವೆ.

**प्रकाशः –**

विषयसंशयटीकां व्यनक्ति – **अत्रेति** ।। **मोक्ष इति** ।। विद्यासाध्यतया तत्फलरूपमोक्ष इत्यर्थः ।।

ವಿವರಣೆ - ಈ ಅಧಿಕರಣದ ವಿಷಯ ಹಾಗೂ ಸಂಶಯವನ್ನು ಸಮರ್ಥಿಸುವ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. 'ಮೋಕ್ಷ' ಎಂದರೆ ಬ್ರಹ್ಮವಿದ್ಯೆಯಿಂದ ದೊರೆಯಲ್ಪಡುವ ಮೋಕ್ಷ ಎಂಬ ಫಲದಲ್ಲಿ ಎಂದರ್ಥ.

**प्रकाशः – अर्थितेति** ।। 'अर्थी समर्थो विद्वानधिक्रियते' इति न्यायेन फलेऽर्थितादेस्तद्धेतुविद्याधिकारप्रयोजकत्वेनोक्तेरिति भावः ।।

'ಅರ್ಥಿತಾ' ಎಂಬುದರ ಅಭಿಪ್ರಾಯ ಹೀಗಿದೆ - 'ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ' 'ಫಲವನ್ನು ಅಪೇಕ್ಷಿಸುವನು, ಸಮರ್ಥನಾದವನು, ಜ್ಞಾನಿಯಾದವನು ಅಧ್ಯಯನದಲ್ಲಿ ಅಧಿಕಾರವನ್ನು ಹೊಂದುತ್ತಾನೆ' ಎಂಬ ನ್ಯಾಯದಂತೆ ಮೋಕ್ಷದಲ್ಲಿ ಅಪೇಕ್ಷೆ ಪಡುವಿಕೆಯು ಮೋಕ್ಷವೇ ಫಲವಾಗಿವುಳ್ಳ ಬ್ರಹ್ಮವಿದ್ಯಾಅಧಿಕಾರಕ್ಕೆ ಪ್ರಯೋಜಕವಾಗುತ್ತದೆಂದು ಅಭಿಪ್ರಾಯ.

**प्रकाशः – अनादीति** ।। स्वपदानामनादिनित्यत्वे आत्मनो मोक्षाभावनिश्चयेन तत्रार्थित्वादेरयोगादिति भावः ।

'ಅನಾದಿ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ದೇವತೆಗಳಿಗೆ ತಮ್ಮ ಪದವಿಯು ಅನಾದಿನಿತ್ಯವಾದರೆ, ತಮಗೆ ಮೋಕ್ಷವೇ ಇಲ್ಲವೆಂದುನಿಶ್ಚಯವಾದಂತಾಯಿತು. ಹೀಗಿರುವಾಗ ಅಂತಹ ಮೋಕ್ಷದಲ್ಲಿ ದೇವತೆಗಳಿಗೆ ಅಪೇಕ್ಷೆಯು ಯುಕ್ತವಾಗುವುದಿಲ್ಲ.

**प्रकाशः – स्वरूपेऽविवादात्तत्तत्पदेत्युक्तम्** । इयं चिन्ता तदुपर्यपीत्यनेन सूचिता ।।

ದೇವತೆಗಳ ಸ್ವರೂಪವು 'ಅನಾದಿನಿತ್ಯ' ಎಂಬ ವಿಚಾರದಲ್ಲಿ ಯಾವುದೇ ವಿವಾದವಿಲ್ಲ. ಆದ್ದರಿಂದ ದೇವತಾಪದವಿಯು ಅನಾದಿನಿತ್ಯವೋ, ಅಲ್ಲವೋ ಎಂದು ವಿಚಾರ ಮಾಡಿದ್ದಾರೆ. ಇದಕ್ಕಾಗಿ 'ತತ್ತತ್ಪದ' ಎಂಬ ಶಬ್ದಪ್ರಯೋಗ. ಈ ಸಂಶಯವು 'ತದುಪರ್ಯಪಿ' ಎಂಬ ಸೂತ್ರಭಾಗದಿಂದ ಸೂಚಿತವಾಗಿದೆ.

**प्रकाशः – कर्मेति** ।। इन्द्रादिपदप्राप्तेः पूर्वं पश्चाच्चेन्द्रादिदेवताभावेन तदुद्देशेन द्रव्यत्यागात्मकयागायोगरूपकर्मविरोधः अनादेश्शब्दस्य साद्यर्थसम्बन्धायोग-रूपशब्दविरोध इत्यर्थः ।

ಒಂದು ವೇಳೆ ದೇವತಾಪದವಿಯು ಅನಿತ್ಯವಾದರೆ, ಇಂದ್ರಾದಿಗಳಿಗೆ ತಮ್ಮ ಪದವಿಯು ದೊರೆಯುವುದಕ್ಕಿಂತ ಮೊದಲು ಮತ್ತೊಬ್ಬ ಇಂದ್ರನು ಇಲ್ಲವೆಂದಂತಾಯಿತು. ಆವಾಗ ಇಂದ್ರನನ್ನು ಉದ್ದೇಶಿಸಿ, ಮಾಡುವಂತಹ ದ್ರವ್ಯತ್ಯಾಗರೂಪವಾದ ಯಾಗವೇ ಉಪಪನ್ನವಾಗುವುದಿಲ್ಲ. ಅಂತಹ ದ್ರವ್ಯತ್ಯಾಗಾತ್ಮಕವಾದ ಯಾಗವೂ ಕೂಡುವುದಿಲ್ಲವೆಂಬ ಕರ್ಮವಿರೋಧ ಬರುತ್ತದೆ. ಮತ್ತು ಶಬ್ದವೂ ಅನಾದಿಯಾಗಿದೆ. ಅನಾದಿಯಾದ ಶಬ್ದಕ್ಕೆ ಸಾದಿಯಾದ ಅರ್ಥಸಂಬಂಧವು ಯುಕ್ತವಾಗುವುದಿಲ್ಲ. ಆದ್ದರಿಂದ ಕರ್ಮ ಹಾಗೂ ಶಬ್ದಗಳ ವಿರೋಧ ಬರುತ್ತದೆಂದು 'ಕರ್ಮಶಬ್ದೋವಿರೋದ್ಧೇತಿ' ಎಂಬುದರ ಅಭಿಪ್ರಾಯವಾಗಿದೆ.

ದೇವತಾಧಿಕರಣ (೧-೩-೮)

**प्रकाशः** – इयं द्वितीयादिसूत्रत्रयसूचिता । तथा तदर्थमिन्द्रादिदेवव्यक्तयः किमेकैका उतानेकाः । अनेकत्वेऽपि ता नानानामरूपा उत समाननामरूपा इति चिन्ता समानसूत्रसूचिता स्पष्टत्वान्नोक्ता ।

ಈ ಸಂಶಯವು ಎರಡು, ಮೂರು ಹಾಗೂ ನಾಲ್ಕನೆಯ ಸೂತ್ರಗಳಿಂದ ಸೂಚಿತವಾಗಿವೆ. ಈ ಸಂಶಯದಂತೆ ಇನ್ನೂ ಕೆಲವು ಸಂಶಯಗಳನ್ನು ಇಲ್ಲಿ ತಿಳಿದುಕೊಳ್ಳಬೇಕು. ಇಲ್ಲಿ ಕರ್ಮ ಹಾಗೂ ಶಬ್ದಗಳ ವಿರೋಧ ಬರಬಾರದೆಂದರೆ ಇಂದ್ರ ಮೊದಲಾದ ದೇವತೆಗಳು ಒಬ್ಬೊಬ್ಬರೇ ಎಂದು ಹೇಳಬೇಕೋ, ಅಥವಾ ಅನೇಕರೆಂದು ಹೇಳಬೇಕೋ ಎಂಬ ಸಂಶಯವು ಪರಿಹಾರವಾಗಬೇಕು. ಅನೇಕರೆಂದು ಹೇಳಿದಾಗಲೂ ಅನೇಕ ಹೆಸರು ಮತ್ತು ರೂಪಗಳನ್ನು ಹೊಂದಿರುತ್ತಾರೋ, ಅಥವಾ ಒಂದೇ ಹೆಸರು ಮತ್ತು ರೂಪಗಳನ್ನು ಹೊಂದಿರುತ್ತಾರೋ ಎಂಬ ಸಂಶಯವೂ ಪರಿಹಾರವಾಗಬೇಕು. ಈ ಎರಡು ಸಂಶಯಗಳು ಸಮಾನವಾದ ಸೂತ್ರಗಳಿಂದಲೇ ಸೂಚಿತವಾದ್ದು ಅತ್ಯಂತ ಸ್ಪಷ್ಟವಾಗಿವೆ. ಅದಕ್ಕಾಗಿ ಗ್ರಂಥಕಾರರು ಪ್ರತ್ಯೇಕವಾಗಿ ಹೇಳಿರುವುದಿಲ್ಲ.

**प्रकाशः** – यदि वक्ष्यमाणादिशा कर्मशब्दौ विरुध्येते तदा तन्निरासाय तेऽनादिनित्या एवोपेया इति तेषां तादृशानां मोक्षे वक्ष्यमाणदिशाऽर्थितादेरयोगान्नास्ति ब्रह्मविद्यायामधिकार इति पूर्वपक्षे फलम् ।

ಪೂರ್ವಪಕ್ಷದ ಫಲ ಹೀಗಿದೆ - ಮುಂದೆ ಹೇಳುವಂತೆ ಕರ್ಮ ಹಾಗೂ ಶಬ್ದಗಳು ವಿರುದ್ಧವಾಗುವುದಾದರೆ, ಈ ವಿರೋಧ ಪರಿಹಾರಕ್ಕೋಸ್ಕರ ದೇವತೆಗಳು ಅನಾದಿನಿತ್ಯರೆಂದೇ ಒಪ್ಪಬೇಕು. ಅಂತಹ ದೇವತೆಗಳಿಗೆ ಮುಂದೆ ಹೇಳುವ ಪ್ರಕಾರ ಮೋಕ್ಷದಲ್ಲಿ ಅಪೇಕ್ಷೆಯೂ ಉಪಪನ್ನವಾಗುವುದಿಲ್ಲ. ಆದ್ದರಿಂದಲೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೂ ಸಹ ಕೂಡುವುದಿಲ್ಲ.

**प्रकाशः** – यदा त्विन्द्रादिव्यक्तीनामाद्यन्तवत्त्वेऽपि तत्प्रवाहस्यानादिनित्यतया कर्मशब्दविरोधो नास्ति तदा बाधकाभावेन तेषामाद्यन्तवत्वयोगेन नित्यफले मोक्षेऽर्थितादेस्सम्भवेनास्ति तद्धेतुब्रह्मविद्यायामधिकार इति सिद्धान्ते फलमिति स्पष्टत्वात्फलफलिभावो नोक्तः ।

ಸಿದ್ಧಾಂತದ ಫಲ - ಒಂದು ವೇಳೆ ಇಂದ್ರಾದಿ ದೇವತೆಗಳಿಗೆ ಉತ್ಪತ್ತಿ-ನಾಶಗಳು ಇರುವುದಾದರೆ, ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಕರ್ಮ ಹಾಗೂ ಶಬ್ದಗಳ ವಿರೋಧಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದಲೇ ಬಾಧಕವಿಲ್ಲದ ಕಾರಣ, ಉತ್ಪತ್ತಿನಾಶಗಳನ್ನು ದೇವತೆಗಳಿಗೆ ಹೇಳಬಹುದು. ಇಂತಹ ದೇವತೆಗಳಿಗೆ ನಿತ್ಯವಾದ ಮೋಕ್ಷ ಎಂಬ ಫಲದಲ್ಲಿ ಅಪೇಕ್ಷೆಯು ಉಪಪನ್ನವಾಗುತ್ತದೆ. ಆದ್ದರಿಂದಲೇ ಮೋಕ್ಷಫಲಕವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಯುಕ್ತವಾಗುತ್ತದೆಂಬುದು ಸಿದ್ಧಾಂತದ ಫಲ. ಪೂರ್ವಪಕ್ಷದ

ಫಲ ಹಾಗೂ ಸಿದ್ಧಾಂತದ ಫಲಗಳು ಅತ್ಯಂತ ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಪ್ರತ್ಯೇಕವಾಗಿ ಹೇಳಿರುವುದಿಲ್ಲ.

### ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ॐ तदुपर्यपि बादरायणस्सम्भवात् ॐ ।। श्रुत्यादिप्रमाणषट्क-सिद्धशेषत्वचिन्ता तृतीये । औपादानिकशेषत्वचिन्ता चतुर्थे । पूर्वोत्तरमीमांसोदाहरणे दर्शयति – **यथेति** ।। पश्वेकत्वाधिकरणं छन्दोऽधिकरणेऽनुक्रान्तम् । यथा गुरुमते चतुर्थ उपादानाख्यप्रमाणविचारादौपादानिकस्य पश्वेकत्वादिशेषत्वस्य शेषत्वरूपेण तृतीये सङ्गतस्यापि चतुर्थे सङ्गतिस्तथेत्यर्थः ।। **व्यावर्त्योक्तेरिति** ।। अनेन प्रपञ्च्यप्रपञ्चकभावसङ्गतिरुक्ता भवति ।




ಪೂರ್ವಪಕ್ಷದ ಫಲ ಹೀಗಿದೆ - ಮುಂದೆ ಹೇಳುವಂತೆ ಕರ್ಮ ಹಾಗೂ ಶಬ್ದಗಳು ವಿರುದ್ಧವಾಗುವುದಾದರೆ, ಈ ವಿರೋಧ ಪರಿಹಾರಕ್ಕೋಸ್ಕರ ದೇವತೆಗಳು ಅನಾದಿನಿತ್ಯರೆಂದೇ ಒಪ್ಪಬೇಕು. ಅಂತಹ ದೇವತೆಗಳಿಗೆ ಮುಂದೆ ಹೇಳುವ ಪ್ರಕಾರ ಮೋಕ್ಷದಲ್ಲಿ ಅಪೇಕ್ಷೆಯೂ ಉಪಪನ್ನವಾಗುವುದಿಲ್ಲ. ಆದ್ದರಿಂದಲೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೂ ಸಹ ಕೂಡುವುದಿಲ್ಲ.

ಸಿದ್ಧಾಂತದ ಫಲ - ಒಂದು ವೇಳೆ ಇಂದ್ರಾದಿ ದೇವತೆಗಳಿಗೆ ಉತ್ಪತ್ತಿನಾಶಗಳು ಇರುವುದಾದರೆ, ದೇವತ[illegible]ವು ಅನಾದಿನಿತ್ಯವಾದ್ದರಿಂದ ಕರ್ಮ ಹಾಗೂ ಶಬ್ದಗಳ ವಿರೋಧಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂ[illegible] ಬಾಧಕವಿಲ್ಲದ ಕಾರಣ, ಉತ್ಪತ್ತಿನಾಶಗಳನ್ನು ದೇವತೆಗಳಿಗೆ ಹೇಳಬಹುದು. ಇಂತಹ ದೇವತೆಗಳಿಗೆ ನಿತ್ಯವಾದ ಮೋಕ್ಷ ಎಂಬ ಫಲದಲ್ಲಿ ಅಪೇಕ್ಷೆಯು ಉಪಪನ್ನವಾಗುತ್ತದೆ. ಆದ್ದರಿಂದಲೇ ಮೋಕ್ಷಫಲಕವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಯುಕ್ತವಾಗುತ್ತದೆಂಬುದು ಸಿದ್ಧಾಂತದ ಫಲ.



## ದೇವತಾಧಿಕರಣ (೧-೩-೮)

## ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु ।। न देवादीनां ब्रह्मोपासनाधिकारः । तथाहि । तत्तत्पदविशिष्टा देवाः किमुत्पत्तिविनाशवन्तः किं वाऽनादिनित्याः ।**

ಅನುವಾದ - ಪೂರ್ವಪಕ್ಷ - ಪೂರ್ವಪಕ್ಷ ಹೀಗಿದೆ - ದೇವತೆಗಳಿಗೆ ಬ್ರಹ್ಮೋಪಾಸನೆಯಲ್ಲಿ ಅಧಿಕಾರವಿಲ್ಲ. ಅಂದರೆ ಬ್ರಹ್ಮವಿದ್ಯೆಯಲ್ಲಿ ಅನಧಿಕಾರಿಗಳಾಗಿದ್ದಾರೆ. ಏಕೆಂದರೆ ಇಂದ್ರಾದಿ ಪದವಿಗಳಿಂದ ವಿಶಿಷ್ಟರಾದ ದೇವತೆಗಳು ಉತ್ಪತ್ತಿ ಹಾಗೂ ನಾಶವುಳ್ಳವರಾಗಿದ್ದಾರೋ, ಅಥವಾ ಅನಾದಿ-ನಿತ್ಯರಾಗಿದ್ದರೋ?

**नाद्यः । इन्द्रादिपदप्राप्तेः पूर्वं पश्चाच्चेन्द्रादिदेवताभावेन तदुद्देशेन द्रव्यत्यागात्मकयागादिरूपकर्मविरोधात् ।**

ಮೊದಲನೆಯ ಪಕ್ಷ ತಪ್ಪು. ಏಕೆಂದರೆ ಉತ್ಪತ್ತಿನಾಶಗಳನ್ನು ಒಪ್ಪಿದರೆ ಇಂದ್ರನಿಗೆ ತನ್ನ ಪದವಿಯು ದೊರೆಯುವುದಕ್ಕಿಂತ ಮೊದಲು ಮತ್ತು ಅನಂತರ ಮತ್ತೊಬ್ಬ ದೇವತೆ ಇಲ್ಲವೆಂದಂತಾಯಿತು. ಆ ಸಮಯದಲ್ಲಿ ಇಂದ್ರಾದಿ ದೇವತೆಗಳನ್ನು ಉದ್ದೇಶಿಸಿ ಮಾಡುವಂತಹ ದ್ರವ್ಯತ್ಯಾಗರೂಪವಾದ ಯಾಗಾದಿರೂಪವಾದ ಕರ್ಮಗಳ ವಿರೋಧವೂ ಬರುತ್ತದೆ. ಅಂದರೆ ಈಗ ಇರುವ ಇಂದ್ರನು ಸ್ವಲ್ಪಕಾಲದಲ್ಲಿ ಮಾತ್ರ ಇರುವವನಾದ್ದರಿಂದ ಇವನಿಗಿಂತ ಮೊದಲು ಅಥವಾ ಆಮೇಲೆ ಮತ್ತೊಬ್ಬ ಇಂದ್ರನು ಇರುವುದಿಲ್ಲವಾದ್ದರಿಂದ ಆ ಸಂದರ್ಭದಲ್ಲಿ ಮಾಡುವಂತಹ ಯಾಗವು ವ್ಯರ್ಥವಾಗ-ಬೇಕಾಗುತ್ತದೆ.

**न चेन्द्रादिपदोपलक्षित आत्मोद्देश्यः । स च पूर्वं पश्चाच्चास्तीति युक्तम् ।**

ಇಂದ್ರಾದಿದೇವತೆಗಳಿಗೆ ತಮ್ಮ ಪದವಿಯು ಇಲ್ಲದಿದ್ದರೂ ಚೇತನವು ಅನಾದಿನಿತ್ಯವಾಗಿರುವುದರಿಂದ, ಪದವಿಯು ದೊರೆಯುವುದಕ್ಕಿಂತ ಮೊದಲು ಇರುತ್ತಾರೆ. ಅನಂತರವೂ ಆಯಾ ಚೇತನರು ಇರುತ್ತಾರೆ. ಆದ್ದರಿಂದ ಅಂತಹ ಇಂದ್ರಾದಿ ಪದದಿಂದ ಉಪಲಕ್ಷಿತನಾದ ಚೇತನನ್ನು ವಿವಕ್ಷಿಸಿ, ದ್ರವ್ಯತ್ಯಾಗರೂಪವಾದ ಯಾಗವನ್ನು ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು.

ಪರಿಪೂರ್ಣಚಂದ್ರಿಕಾ

**भविष्यदिन्द्रादिपदानां मनुष्यादिशरीराणामप्युद्देश्यत्वापातात् ।**

ಏಕೆಂದರೆ ದೇವತೆಗಳಿಗೆ ತಮ್ಮ ಪದವಿಯು ದೊರೆಯುವುದಕ್ಕಿಂತ ಮೊದಲು ಮನುಷ್ಯ ಮೊದಲಾದ ಶರೀರವು ಬಂದಿರುತ್ತದೆ. ಅಂತಹ ಮನುಷ್ಯರನ್ನು ಕುರಿತು ಯಾಗವನ್ನು ಮಾಡಬೇಕಾದ ಪರಿಸ್ಥಿತಿ ಬರುತ್ತದೆ.

**ऐन्द्रादियागशेषार्थवादे तन्मन्त्रे च तत्तत्पदतत्तद्विग्रहादि-विशिष्टस्यैवेन्द्रादेस्तत्तद्यागादिना प्रीत्याद्युक्तेश्च ।**

ಮತ್ತು ಐಂದ್ರಾದಿ ಯಾಗಶೇಷಗಳ ಅರ್ಥವಾದದಲ್ಲಿ ಮತ್ತು ಮಂತ್ರಭಾಗದಲ್ಲಿ ಆಯಾ ಪದವಿಗಳಿಂದ, ಆಯಾ ಶರೀರದಿಂದ ವಿಶಿಷ್ಟರಾದ ದೇವತೆಗಳನ್ನು ಉದ್ದೇಶಿಸಿ, ಯಾಗವನ್ನು ಮಾಡಬೇಕು. ಮತ್ತು ಅಂತಹ ದೇವತೆಗಳ ಪ್ರೀತಿಯನ್ನು ಸಂಪಾದಿಸಬೇಕು. ಮತ್ತು ಆಯಾ ದೇವತಾಶರೀರವನ್ನೇ ಹೊಂದಿರುವ ಇಂದ್ರಾದಿದೇವತೆಗಳನ್ನು ಉದ್ದೇಶಿಸಿ, ದ್ರವ್ಯತ್ಯಾಗವನ್ನು ಮಾಡಬೇಕೆಂದು ಹೇಳಲಾಗಿದೆ. ಪ್ರಕೃತ ಚೇತನವನ್ನಷ್ಟೇ ವಿವಕ್ಷಿಸಿದರೆ, ಮಂತ್ರಗಳಲ್ಲಿ ಹೇಳಲ್ಪಟ್ಟ ಈ ವಿಷಯವು ತಪ್ಪಾಗುತ್ತದೆ.

**नच चतुर्थ्यन्तः शब्द एव देवता । स चानादिनित्य इति वाच्यम् ।**

ಇನ್ನು ಇಂದ್ರಾಯ, ಸೂರ್ಯಾಯ ಇವೇ ಮೊದಲಾದ ಚತುರ್ಥೀವಿಭಕ್ತಿಯಲ್ಲಿರುವ ಶಬ್ದಗಳನ್ನೇ ದೇವತೆಯೆಂದು ಹೇಳುತ್ತೇವೆ. ಇಂತಹ ಶಬ್ದಗಳು ಅನಾದಿನಿತ್ಯವಾದ್ದರಿಂದ ಹಿಂದಿನ ಯಾವ-ದೋಷಗಳೂ ಬರುವುದಿಲ್ಲವಲ್ಲವೇ ಎಂಬ ಪ್ರಶ್ನೆಗೂ ಅವಕಾಶವಿಲ್ಲ.

**मन्त्रार्थवादेतिहासपुराणादिना विग्रहादिमद्देवतासिद्धेरभिमान्यधिकरणे वक्ष्यमाणत्वात् ।**

ಏಕೆಂದರೆ ಮಂತ್ರ, ಅರ್ಥವಾದ, ಇತಿಹಾಸ, ಪುರಾಣ ಇವುಗಳಲ್ಲೆಲ್ಲಾ ದೇವತೆಗಳನ್ನು ಶರೀರ-ಇಂದ್ರಿಯ ಮೊದಲಾದವುಗಳಿಂದ ವಿಶಿಷ್ಟರೆಂದು ವರ್ಣಿಸಲಾಗಿದೆ. ಮತ್ತು ಇದೇ ಶಾಸ್ತ್ರದ ಅಭಿಮಾನ್ಯಧಿಕರಣದಲ್ಲಿಯೂ ದೇವತೆಗಳಿಗೆ ಶರೀರ ಮೊದಲಾದವುಗಳಿರುತ್ತವೆಂದು ಸಮರ್ಥಿಸಲಾಗುತ್ತದೆ. ಹೀಗಿರುವಾಗ ಶಬ್ದವನ್ನೇ ದೇವತೆಯೆಂದು ಹೇಳಿ, ದೇವತೆಗಳಿಗೆ ಶರೀರ-ಇಂದ್ರಿಯ ಮೊದಲಾದವುಗಳು ಇರುವುದಿಲ್ಲವೆಂದು ಹೇಳುವುದು ತಪ್ಪಾಗುತ್ತದೆ.

**शब्दस्याचेतनत्वेन सुतरामनधिकाराच्च ।**

ಮತ್ತು ಶಬ್ದವನ್ನೇ ದೇವತೆಯೆಂದು ಹೇಳಿದಾಗ, ಶಬ್ದವು ಜಡವಾದ್ದರಿಂದ ಅಂತಹ ಜಡವಾದ ಶಬ್ದಕ್ಕೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಸುತರಾಂ ಕೂಡುವುದಿಲ್ಲ.

**न चेन्द्रादीनामनित्यत्वेऽपि सर्वकर्मसु ब्रह्मैवोद्देश्यमिति युक्तम् ।**

ಇಂದ್ರಾದಿ ಪದವಿಗಳು ಅನಿತ್ಯವಾಗಿರಬಹುದು. ಆದರೆ ಅವರನ್ನು ಕುರಿತು ಮಾಡುವ ಪ್ರತಿಯೊಂದು ಕರ್ಮಗಳಲ್ಲಿಯೂ ಬ್ರಹ್ಮನೇ ಉದ್ದಿಶ್ಯನಾಗಿದ್ದಾನೆ. ಅಂತಹ ಬ್ರಹ್ಮನು ಅನಾದಿನಿತ್ಯನಾಗಿದ್ದರಿಂದ ಅವನನ್ನು ಕುರಿತು ಮಾಡುವಂತಹ ಯಾಗಗಳು ಸಾರ್ಥಕವಾಗುತ್ತದೆಯಲ್ಲವೇ? ಎಂದು ಪ್ರಶ್ನಿಸಬಾರದು.

**मनुष्यादिभिरिन्द्राद्यधिष्ठानस्यैव ब्रह्मण उद्देष्टव्यत्वात् । अन्यथा बहुविप्लवापातात् ।**

ಏಕೆಂದರೆ ಮನುಷ್ಯರು ಮಾಡುವಂತಹ ಯಾಗಾದಿಕ್ರಿಯೆಗಳಲ್ಲಿ ನೇರವಾಗಿ ಬ್ರಹ್ಮನೇ ಉದ್ದೇಶ್ಯನಾಗಲು ಸಾಧ್ಯವಿಲ್ಲ. ಇಂದ್ರ, ಸೂರ್ಯ ಮೊದಲಾದ ದೇವತೆಗಳ ಅಧಿಷ್ಠಾನದಲ್ಲಿಯೇ ಬ್ರಹ್ಮನನ್ನು ಉದ್ದೇಶಿಸಬೇಕು. ನೇರವಾಗಿ ಬ್ರಹ್ಮನನ್ನೇ ಉದ್ದೇಶಿಸುವುದಾದರೆ, ಸಕಲ ಕರ್ಮಗಳು ಬ್ರಹ್ಮವಿಷಯಕವಾಗುವುದರಿಂದ, ಈ ಕರ್ಮವು ಇಂದ್ರನಿಗೆ ಸಂಬಂಧಿಸಿದ್ದು, ಈ ಕರ್ಮವು ಸೂರ್ಯನಿಗೆ ಸಂಬಂಧಪಟ್ಟಿದ್ದು ಎಂಬ ವಿಭಾಗವೇ ತಪ್ಪಾಗಬೇಕಾಗುತ್ತದೆ.

**नन्वेतदिन्द्रोत्पत्तेः पूर्वमिन्द्रान्तरस्य सत्त्वेन तदुद्देश इति चेन्मैवम् । द्वितीयसूत्राशङ्कितकर्मविरोधोद्धारेऽपि तृतीयसूत्राशङ्कितशब्दविरोधानुद्धारात् ।**

ಈ ಇಂದ್ರನು ಹುಟ್ಟುವುದಕ್ಕಿಂತ ಮೊದಲು ಮತ್ತೊಬ್ಬ ಇಂದ್ರನು ಇರುತ್ತಾನೆ. ಆ ಸಂದರ್ಭದಲ್ಲಿ ಮಾಡುವಂತಹ ಯಾಗವು ಈ ಇಂದ್ರನಿಗೆ ಸಂಬಂಧಪಡದಿದ್ದರೂ ಆ ಮತ್ತೊಬ್ಬ ಇಂದ್ರನಿಗೆ ಸಂಬಂಧಪಟ್ಟಿರುತ್ತದೆ. ಆದ್ದರಿಂದ ಯಾಗಾದಿಕ್ರಿಯೆಗಳಿಗೆ ವೈಯರ್ಥ್ಯದೋಷವು ಬರುವುದಿಲ್ಲವಲ್ಲವೇ? ಎಂಬ ಶಂಕೆಯೂ ಸಹ ತಪ್ಪು. ಏಕೆಂದರೆ ಎರಡನೆಯ ಸೂತ್ರದಲ್ಲಿ ಆಶಂಕಿಸಲ್ಪಟ್ಟ ಕರ್ಮವಿರೋಧವನ್ನು ಇದರಿಂದ ಪರಿಹಾರ ಮಾಡಬಹುದು. ಆದರೆ ಮೂರನೆಯ ಸೂತ್ರದಲ್ಲಿ ಆಶಂಕಿಸಲ್ಪಟ್ಟ ಶಬ್ದವಿರೋಧವನ್ನು ಪರಿಹರಿಸಲಾಗದು.

**अत एव टीकायां ''कर्मादिविरोधात्'' इत्यादिशब्दः ।**

ಆದ್ದರಿಂದಲೇ ಟೀಕೆಯಲ್ಲಿ 'ಕರ್ಮಾದಿವಿರೋಧಾತ್' ಎಂಬುದಾಗಿ ಆದಿಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಕರ್ಮವಿರೋಧವಷ್ಟೇ ಅಲ್ಲ; ಶಬ್ದವಿರೋಧವೂ ಸಹ ಬರುತ್ತದೆಂದು ಅಭಿಪ್ರಾಯ.

**प्रकाशः –**

उत्तरोत्तरपूर्वपक्षकोटेः पूर्वपूर्वकोटिहेतुतां व्यञ्जयिष्यन्नन्त्योपान्त्ययोस्तां तावद्व्यञ्जयन् "तथाहि" इत्यादिटीकां विवृणोति – **तत्तत्पदेति** ।।

ವಿವರಣೆ - ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ. ಮುಂದಿನ-ಮುಂದಿನ ಪೂರ್ವಪಕ್ಷಕೋಟಿಗಳಿಗೆ ಹಿಂದಿನ ಕೋಟಿಗಳು ಕಾರಣಗಳಾಗಿರುತ್ತವೆ. ಇದನ್ನು ಸ್ವತಃ ಗ್ರಂಥಕಾರರೇ ಸ್ಪಷ್ಟಪಡಿಸುತ್ತಾ ಕೊನೆಯ ಎರಡು ಪೂರ್ವಪಕ್ಷ ಕೋಟಿಗಳಿಗೆ ಹೇತುಹೇತುಮದ್ಭಾವವನ್ನು ಮೊದಲು ವ್ಯಾಖ್ಯಾನ ಮಾಡುತ್ತಾ 'ತಥಾಹಿ' ಇತ್ಯಾದಿ ಟೀಕೆಯನ್ನು ವಿವರಿಸುತ್ತಿದ್ದಾರೆ 'ತತ್ತತ್ಪದ' ಇತ್ಯಾದಿ ಗ್ರಂಥದಿಂದ.

**प्रकाशः – इन्द्रादीति** ।। एतेन "अमराणाम्" इत्यादिटीकार्थ उक्तः ।।

ಗ್ರಂಥದಲ್ಲಿ 'ಇಂದ್ರಾದಿ ಪದಪ್ರಾಪ್ತೇಃ' ಎಂದು ಹೇಳಿದ್ದರಿಂದ 'ಅಮರಾಣಾಮ್' ಇತ್ಯಾದಿ ಟೀಕೆಯ ಅರ್ಥವನ್ನು ಹೇಳಿದಂತಾಯಿತು.

**प्रकाशः – द्रव्यत्यागात्मकेति** ।। "यजति चोदनाद्रव्यदेवताक्रियम्" इति चतुर्थजैमिनिसूत्रोक्तेः "यज्ञो देवतामुद्दिश्य द्रव्यत्यागः" इति नवमगीता-भाष्योक्तेश्चेति भावः ।

'ಯಜತಿ ಚೋದನಾದ್ರವ್ಯದೇವತಾಕ್ರಿಯಮ್' ಎಂಬ ನಾಲ್ಕನೆಯ ಅಧ್ಯಾಯದ ಜೈಮಿನಿಸೂತ್ರದಲ್ಲಿ ದೇವತೆಗಳನ್ನು ಉದ್ದೇಶಿಸಿ, ದ್ರವ್ಯತ್ಯಾಗರೂಪವಾದ ಯಾಗಾದಿ ಕರ್ಮಗಳಿರುತ್ತವೆ ಎಂದು ಸಮರ್ಥಿಸಲಾಗಿದೆ. 'ಯಜ್ಞೋ ದೇವತಾಮುದ್ದಿಶ್ಯ ದ್ರವ್ಯತ್ಯಾಗಃ' ಎಂಬ ಒಂಭತ್ತನೆ ಅಧ್ಯಾಯದ ಗೀತಾಭಾಷ್ಯದಲ್ಲಿಯೂ ಯಾಗವು ದೇವತೆಗಳನ್ನು ಉದ್ದೇಶಿಸಿಯೇ ಹೊರಟಿರುತ್ತದೆಂದು ಹೇಳಿರುತ್ತಾರೆ. ಇವುಗಳ ವಿರೋಧ ಬರುತ್ತದೆಂದು ಅಭಿಪ್ರಾಯ.

**प्रकाशः – आत्मा** चेतनः । इष्टापत्तिमाशङ्क्याह – **ऐन्द्रेति** ।।

'ಆತ್ಮಾ' ಎಂಬ ಶಬ್ದಕ್ಕೆ ಚೇತನರೆಂದರ್ಥ. ಅಂದರೆ ಇಂದ್ರಾದಿಗಳಿಗೆ ಪದವಿಯು ಅನಿತ್ಯವಾಗಿದ್ದರೂ ಚೇತನವು ನಿತ್ಯವಾಗಿರುತ್ತದೆಂದರ್ಥ. ಮನುಷ್ಯಾದಿ ಶರೀರದಲ್ಲಿರುವ ಇಂದ್ರಾದಿ ಚೇತನರನ್ನೂ ಸಹ ಉದ್ದೇಶಿಸಿ ಯಾಗವನ್ನು ಮಾಡುವುದು ನಮಗೆ ಇಷ್ಟಾಪತ್ತಿಯಾಗಿದೆ ಎಂಬ ಆಶಂಕೆಗೆ 'ಐಂದ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –** "यदनेन हविषाऽऽशास्ते तदश्यात्तदृध्यात्तदस्मै देवा राधन्तां वायुर्वै क्षेपिष्ठा देवता वायुमेव स्वेन भागधेयेनोपधावति" इत्याद्यर्थवाद इत्यर्थः ।

'ಯದನೇನ ಹವಿಷಾऽऽಶಾಸ್ತೇ ತದಶಯಾತ್ ತದೃಧ್ಯಾತ್ ತದಸ್ಮೈ ದೇವಾ ರಾಧಂತಾಂ' ಎಂಬ ವಾಕ್ಯದಲ್ಲಿ ಮತ್ತು 'ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ' ಎಂಬ ಅರ್ಥವಾದ ವಾಕ್ಯದಲ್ಲಿ ಆಯಾ ದೇವತಾ ಪದವಿಗಳಿಂದ ವಿಶಿಷ್ಟರಾದ ದೇವತೆಗಳನ್ನೇ ಉದ್ದೇಶಿಸಿ, ಯಾಗದ ಫಲ ಮೊದಲಾದವುಗಳನ್ನು ಹೇಳಲಾಗಿದೆ.

**प्रकाशः –** मीमांसकमतमपाकरोति ।। **नच चतुर्थ्यन्त इति ।। मन्त्रेति ।। 'वज्रहस्तःपुरन्दरः'** । **'तेनेन्द्रो वज्रमुदयच्छत्'** इत्यादिनेत्यर्थः ।

ಮೀಮಾಂಸಕಮತವನ್ನು 'ನಚ ಚತುರ್ಥ್ಯಂತೇ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. 'ಮಂತ್ರ' ಎಂದರೆ 'ವಜ್ರಹಸ್ತಃ ಪುರಂದರಃ'; 'ತೇನೇಂದ್ರೋ ವಜ್ರಮುದಯಚ್ಛತ್' ಇತ್ಯಾದಿ ಮಂತ್ರಗಳಿಂದ ಶರೀರಾದಿಗಳಿರುವುದು ಸ್ಪಷ್ಟವಾಗಿದೆ ಎಂದರ್ಥ.

**प्रकाशः –** एतेन भामत्याद्युक्तजडदेवतापूर्वपक्षः प्रत्यूढः ।

ಹೀಗೆ ದೇವತೆಗಳಿಗೆ ಶರೀರ, ಇಂದ್ರಿಯ ಮೊದಲಾದವುಗಳಿರುತ್ತವೆಂದು ಹೇಳಿದ್ದರಿಂದ ಭಾಮತಿಯನ್ನು ನಿರಾಕರಿಸಿದಂತಾಯಿತು. ಭಾಮತಿಯಲ್ಲಿ ಜಡವಾದ ದೇವತೆಯನ್ನು ಪೂರ್ವಪಕ್ಷ ಮಾಡಲಾಗಿದೆ. ಈ ಪೂರ್ವಪಕ್ಷವೇ ತಪ್ಪಾಗುತ್ತದೆಂದು ಈಗ ನಿರಾಕರಿಸಿದಂತಾಯಿತು.

**प्रकाशः –** सिद्धान्तमाशंक्याह – **नचेति** ।। ब्रह्मचानादिनित्यमिति भावः ।।

ಸಿದ್ಧಾಂತವನ್ನು 'ನಚ' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ. ಇಂದ್ರಾದಿದೇವತೆಗಳು ಉತ್ಪತ್ತಿ-ನಾಶವುಳ್ಳವರಾದರೂ ಬ್ರಹ್ಮನು ಅನಾದಿನಿತ್ಯನಾದ್ದರಿಂದ, ಅವನನ್ನು ಕುರಿತು ಯಾಗವನ್ನು ಮಾಡಬಹುದೆಂದು 'ನಚ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

**प्रकाशः – बहुविप्लवेति ।।** साक्षात्तस्यैवोद्देश्यत्वे सर्वस्य वैष्णवत्वेनैन्द्राग्नेयादि-कर्मव्यवस्था न स्यादित्यर्थः ।

'ಬಹುವಿಪ್ಲವಾಪಾತಾತ್' ಎಂಬುದರ ಅರ್ಥ ಹೀಗಿದೆ - ಒಂದು ವೇಳೆ ಬ್ರಹ್ಮನೇ ನೇರವಾಗಿ ಉದ್ದೇಶ್ಯನಾದಲ್ಲಿ, ಸಕಲಕರ್ಮಗಳು ವೈಷ್ಣವಕರ್ಮಗಳಾಗುತ್ತವೆ. ಆವಾಗ ಇಂದ್ರನಿಗೆ ಸಂಬಂಧಪಟ್ಟ ಕರ್ಮ, ಅಗ್ನಿಗೆ ಸಂಬಂಧಪಟ್ಟ ಕರ್ಮ ಎಂಬ ವ್ಯವಸ್ಥೆಯೇ ತಪ್ಪಾಗುತ್ತದೆ.

**प्रकाशः –** उक्तदोषपरिहारमाशङ्क्य दोषान्तरमाह – **नन्विति ।। शब्देति ।।** अनादेश्शब्दस्याद्यन्तवदर्थसम्बन्धेऽप्रामाण्याख्यविरोध इत्यर्थः ।

ಹಿಂದಿನ ದೋಷದ ಪರಿಹಾರವನ್ನು ಆಶಂಕಿಸಿ, ಮತ್ತೊಂದು ದೋಷವನ್ನು 'ನನು' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಅನಾದಿಯಾದ ಶಬ್ದಕ್ಕೆ ಆದ್ಯಂತವುಳ್ಳ ಅರ್ಥದ ಸಂಬಂಧವನ್ನು ಹೇಳಿದರೆ, ಅಪ್ರಾಮಾಣ್ಯವೆಂಬ ವಿರೋಧಬರುತ್ತದೆಂದು 'ಶಬ್ದವಿರೋಧ' ಎಂಬ ಪದದಿಂದ ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

**गुरुराजीयम् – अन्यथेति ।।** सर्वकर्मसु ब्रह्मण एवोद्देश्यत्वे कर्मभेदे वा सूक्तभेदे वा देवताभेदस्यैव प्रयोजकत्वेन देवतैक्ये यागव्यवस्था सूक्तव्यवस्था वा न स्यादित्यर्थः ।




ಪೂರ್ವಪಕ್ಷ ಹೀಗಿದೆ - ದೇವತೆಗಳಿಗೆ ಬ್ರಹ್ಮೋಪಾಸನೆಯಲ್ಲಿ ಅಧಿಕಾರವಿಲ್ಲ. ಏಕೆಂದರೆ ಇಂದ್ರಾದಿಪದವಿಗಳನ್ನು ಹೊಂದಿರುವಂತಹ ದೇವತೆಗಳಿಗೆ ಉತ್ಪತ್ತಿನಾಶಗಳು ಇದೆಯೋ, ಇಲ್ಲವೋ ಎಂಬ ಪ್ರಶ್ನೆಗೆ ಉತ್ತರಿಸಬೇಕು. ಒಂದು ವೇಳೆ ಉತ್ಪತ್ತಿವಿನಾಶವಿದೆಯೆಂದು ಉತ್ತರಿಸಿದರೆ, ಇಂದ್ರಾದಿಪದವಿಗಳು ದೊರೆಯುವುದಕ್ಕಿಂತ ಮೊದಲು ಆಯಾ ಪದವಿಗಳಲ್ಲಿ ಯಾರೂ ಇರುವುದಿಲ್ಲ. ಆ ಸಮಯದಲ್ಲಿ ಮಾಡುವಂತಹ ಯಾಗಾದಿ ಕ್ರಿಯೆಗಳು ವ್ಯರ್ಥವಾಗುವ ಪ್ರಸಂಗ ಬರುತ್ತವೆ. ಇನ್ನು ಪದವಿಯಲ್ಲಿ ದೇವತೆಗಳಿಲ್ಲದ್ದರೂ ಆ ಚೇತನರು ನಿತ್ಯರಾದ್ದರಿಂದ ಅಂತಹ ಚೇತನನ್ನು ವಿವಕ್ಷಿಸಿ ಯಾಗವನ್ನು ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಮನುಷ್ಯ ಮೊದಲಾದ ಶರೀರಗಳಲ್ಲಿದ್ದು ಸಾಧನೆಯನ್ನು ಮಾಡಿಕೊಂಡ ಮೇಲಷ್ಟೇ ದೇವತೆಗಳಿಗೆ ಪದವಿಯು ಪ್ರಾಪ್ತವಾಗುತ್ತದೆ. ಮನುಷ್ಯ ಮೊದಲಾದ ಶರೀರದಲ್ಲಿರುವ ವ್ಯಕ್ತಿಯನ್ನು ಕುರಿತು, ಯಾಗಮಾಡುವುದು ಸರ್ವಥಾ ಯುಕ್ತವಾಗುವುದಿಲ್ಲ. ಮತ್ತು ವೇದಮಂತ್ರಗಳಲ್ಲಿ ಆಯಾಪದವಿಗಳಿಂದ ವಿಶಿಷ್ಟರಾದ ದೇವತಾಶರೀರವುಳ್ಳ ವ್ಯಕ್ತಿಯನ್ನೇ ಉದ್ದೇಶಿಸಿ, ಯಾಗವನ್ನು ಮಾಡಬೇಕೆಂದು ಹೇಳಲಾಗಿದೆ.

ಪೂರ್ವಮೀಮಾಂಸಕರು ಹೇಳುವಂತೆ 'ಸೂರ್ಯಾಯ', 'ಇಂದ್ರಾಯ' ಮೊದಲಾದ ಚತುರ್ಥೀವಿಭಕ್ತ್ಯಂತವಾದ ಶಬ್ದವನ್ನೇ ದೇವತೆಯೆಂದು ಹೇಳಬೇಕು. ಶಬ್ದಗಳು ನಿತ್ಯವಾದ್ದರಿಂದ, ದೇವತೆಗಳೂ ಸಹ ನಿತ್ಯರಾಗುತ್ತಾರಲ್ಲವೇ? ಎಂಬ ಶಂಕೆಯೂ ಸಹ ತಪ್ಪಾಗುತ್ತದೆ. ಏಕೆಂದರೆ ಇತಿಹಾಸಪುರಾಣಾದಿಗಳಲ್ಲಿ ದೇವತೆಗಳ ಶರೀರವನ್ನು ಸ್ಪಷ್ಟವಾಗಿ ವರ್ಣಿಸಿರುತ್ತಾರೆ. ಅಭಿಮಾನ್ಯಧಿಕರಣದಲ್ಲಿಯೂ ದೇವತೆಗಳಿಗೆ ಶರೀರಾದಿಗಳಿವೆಯೆಂದು ಸಮರ್ಥಿಸಲಾಗಿದೆ. ಹೀಗಿರುವಾಗ ಶರೀರಾದಿಗಳಿಲ್ಲದ ಜಡಭೂತವಾದ ಶಬ್ದವನ್ನೇ ದೇವತೆಗಳೆಂದು ಹೇಳುವುದು ತಪ್ಪಾಗುತ್ತದೆ. ಇನ್ನು ಬ್ರಹ್ಮನನ್ನು ಉದ್ದೇಶಿಸಿ, ಯಾಗವನ್ನು ಮಾಡುವುದರಿಂದ ಅನಾದಿನಿತ್ಯನಾದ ಬ್ರಹ್ಮೋದ್ದೇಶಕವಾದ ಯಾಗಾದಿಗಳಿಗೆ ವೈಯರ್ಥ್ಯವಿಲ್ಲವೆಂದು ಹೇಳಬಹುದು. ಆದರೆ, ಸಕಲಕರ್ಮಗಳು ವೈಷ್ಣವಕರ್ಮಗಳೆಂದು ಹೇಳಿದರೆ, ಐಂದ್ರಕರ್ಮಕಯಾಗ, ಸೂರ್ಯಕರ್ಮಕಯಾಗವೆಂಬ ವಿಭಾಗವೇ ತಪ್ಪಾಗುತ್ತದೆ. ಆದ್ದರಿಂದ ದೇವತಾಪದವಿಗಳು ಅನಿತ್ಯವಾದಾಗ ಕರ್ಮವಿರೋಧ ದೋಷ ಬರುವುದಷ್ಟೇ ಅಲ್ಲದೇ, ಶಬ್ದವಿರೋಧದೋಷವೂ ಸಹ ಬರುತ್ತದೆ. ಅಂದರೆ ಅನಿತ್ಯರಾದ ದೇವತೆಗಳನ್ನು ನಿತ್ಯವಾದ ಶಬ್ದವು ಪ್ರತಿಪಾದಿಸಲು ಸಾಧ್ಯವಿಲ್ಲ.



• • • • •

ದೇವತಾಧಿಕರಣ (೧-೩-೮)

## ದೇವತೆಗಳು ಅನಿತ್ಯರಾದಲ್ಲಿ ಕರ್ಮವಿರೋಧ ಹಾಗೂ ಶಬ್ದವಿರೋಧ

### तात्पर्यचन्द्रिका

**ननु द्वितीयोक्तेन देवताप्रवाहस्यानादित्वेनैव कर्मविरोधवच्छब्दविरोधोऽप्युद्धृत एव ।**

ಅನುವಾದ - ಆಕ್ಷೇಪ - ಸೂತ್ರಕಾರರು 'ವಿರೋಧಃಕರ್ಮಣಿ ಇತಿ ಚೇನ್ನ' ಇತ್ಯಾದಿ ಎರಡನೆಯ ಸೂತ್ರದಲ್ಲಿ ಕರ್ಮವಿರೋಧವನ್ನು ಪರಿಹರಿಸಿದ್ದಾರೆ. 'ಶಬ್ದಃ ಇತಿ ಚೇನ್ನ' ಎಂಬ ಮೂರನೆಯ ಸೂತ್ರದಿಂದ ಶಬ್ದವಿರೋಧವನ್ನು ಪರಿಹರಿಸಿದ್ದಾರೆ. ಆದರೆ ಎರಡನೆಯ ಸೂತ್ರದಲ್ಲಿ ದೇವತಾಪ್ರವಾಹಕ್ಕೆ ಅನಾದಿತ್ವವನ್ನು ಹೇಳಿದ್ದರಿಂದ, ಕರ್ಮವಿರೋಧವು ಹೇಗೆ ಪರಿಹೃತವಾಯಿತೋ, ಅದರಂತೆ ಶಬ್ದವಿರೋಧವೂ ಸಹ ಪರಿಹೃತವೇ ಆಯಿತು. ಹೀಗಿರುವಾಗ ಪ್ರತ್ಯೇಕವಾಗಿ ಮೂರನೆಯ ಸೂತ್ರವನ್ನು ಏಕೆ ಹೇಳಿದರು.

**अनादेः शब्दस्य साद्यर्थसम्बन्धविरोधेऽप्यनाद्यर्थसम्बन्धाविरोधात् । तथाच तृतीये पुनः शब्दविरोधाशङ्का न युक्ता ।**

ಅನಾದಿಯಾದ ಶಬ್ದಕ್ಕೆ ಸಾದಿಯಾದ ಅರ್ಥಸಂಬಂಧವನ್ನು ಹೇಳಿದರೆ ವಿರೋಧಬರುತ್ತದೆ. ಆದರೆ ದೇವತಾಪ್ರವಾಹವು ಅನಾದಿಯೆಂದು ಎರಡನೆಯ ಸೂತ್ರದಲ್ಲಿ ಹೇಳಿದ್ದರಿಂದ ಅನಾದಿಯಾದ ಅರ್ಥಸಂಬಂಧವನ್ನು ಹೇಳಿದರೆ ವಿರೋಧಕ್ಕೆ ಅವಕಾಶವೇ ಇಲ್ಲ. ಹೀಗಿರುವಾಗ ಪುನಃ ಮೂರನೆಯ ಸೂತ್ರದಲ್ಲಿ ಶಬ್ದವಿರೋಧವನ್ನು ಯಾವ ದೃಷ್ಟಿಯಿಂದ ಆಶಂಕಿಸಿದ್ದಾರೆ.

**नच द्वितीये प्रवाहस्यानादित्वमेवोक्तम् । नत्वनन्तत्वम् । तस्य तृतीये वक्ष्यमाणत्वात् ।**

ಎರಡನೆಯ ಸೂತ್ರದಲ್ಲಿ ದೇವತೆಗಳ ಪ್ರವಾಹವು ಅನಾದಿಯಾಗಿದೆ ಎಂದಷ್ಟೇ ಹೇಳಿದ್ದಾರೆ ಹೊರತು, ಅನಂತ = ನಾಶವಿಲ್ಲದ್ದು ಎಂದು ಹೇಳಿಲ್ಲ. ದೇವತೆಗಳ ಪ್ರವಾಹಕ್ಕೆ ಉತ್ಪತ್ತಿಯಿಲ್ಲವೆಂದು ಸಮರ್ಥಿಸಲು ಎರಡನೆಯ ಸೂತ್ರವು ಸಾರ್ಥಕವಾಗಿದೆ. ನಾಶವಿಲ್ಲವೆಂದು ಸಮರ್ಥಿಸಲು ಮೂರನೆಯ ಸೂತ್ರವು ಸಾರ್ಥಕವಾಗಿದೆ.

**तथाचानन्तस्य शब्दस्यान्तवदर्थसम्बन्धो विरुद्ध इति शङ्का तृतीये युक्ता ।**

ಆದ್ದರಿಂದ ಎರಡನೆಯ ಸೂತ್ರದಲ್ಲಿ ದೇವತೆಗಳ ಪ್ರವಾಹವು ಅನಾದಿಯಾಗಿದೆಯೆಂದು ಸಮರ್ಥಿಸಿದ ಮೇಲೆ, ಪುನಃ ಹೀಗೆ ಆಶಂಕೆ ಬರುತ್ತದೆ. ಶಬ್ದವು ನಾಶವಿಲ್ಲದ್ದರಿಂದ ಅನಂತವಾಗಿದೆ.

ಆದರೆ ದೇವತೆಗಳ ಪ್ರವಾಹಕ್ಕೆ ಉತ್ಪತ್ತಿಯಿಲ್ಲದಿದ್ದರೂ ನಾಶವಿರಬಹುದು. (ಯಾವರೀತಿಯಾಗಿ ಸಂಸಾರವು ಅನಾದಿಯಾಗಿದ್ದರೂ ನಾಶವನ್ನು ಹೊಂದುತ್ತದೋ, ಅದರಂತೆ) ಇಂತಹ ನಾಶವಿರುವಂತಹ ದೇವತೆಗಳೆಂಬ ಅರ್ಥವನ್ನು ನಾಶವಿಲ್ಲದ ಶಬ್ದವು ಪ್ರತಿಪಾದನೆ ಮಾಡಿದರೆ, ವಿರೋಧ ಬರುತ್ತದಲ್ಲವೇ? ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ, ಮೂರನೆಯ ಸೂತ್ರವು ಹೊರಟಿದೆ.

**अत एव भाष्ये द्वितीयसूत्रे ''तत्पूर्वं देवताभावात्'' इति तृतीयसूत्रे तु ''देवानामनित्यत्वात्'' इत्युक्तमिति वाच्यम् ।**

ಆದ್ದರಿಂದಲೇ ಎರಡನೆಯ ಸೂತ್ರದ ಭಾಷ್ಯದಲ್ಲಿ 'ತತ್‌ಪೂರ್ವಂ ದೇವತಾಭಾವಾತ್' ಮೊದಲು ದೇವತೆಗಳು ಇಲ್ಲದ್ದರಿಂದ ಎಂದು ಆಶಂಕಿಸಿ, ಅನಾದಿತ್ವವನ್ನು ಸಮರ್ಥಿಸಿರುತ್ತಾರೆ. ಮೂರನೆಯ ಸೂತ್ರದ ಭಾಷ್ಯದಲ್ಲಿ 'ದೇವಾನಾಮನಿತ್ಯತ್ವಾತ್' ದೇವತೆಗಳು ಅನಿತ್ಯರಾದ್ದರಿಂದ ಎಂದು ಆಶಂಕಿಸಿ ಅನಂತತ್ವವನ್ನು ಸಮರ್ಥಿಸಿರುತ್ತಾರೆ. ಆದ್ದರಿಂದ ಎರಡನೆಯ ಮತ್ತು ಮೂರನೆಯ ಸೂತ್ರಗಳೆರಡೂ ಕೂಡ ಸಾರ್ಥಕವಾಗಿವೆಯಲ್ಲವೇ?

**द्वितीयेऽपि सादित्वप्रयुक्तकर्मविरोधवत्तत्प्रयुक्तशब्दविरोधस्यापि तृतीये सान्तत्वप्रयुक्तशब्दविरोधस्येव तत्प्रयुक्तकर्मविरोधस्यापि परिहारेण द्वितीये कर्मपदस्य तृतीये शब्दपदस्य चायोगादिति चेन्न ।**

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಎರಡನೆಯ ಸೂತ್ರದಲ್ಲಿಯೂ ಸಾದಿತ್ವಪ್ರಯುಕ್ತವಾದ ಕರ್ಮವಿರೋಧವನ್ನು ಹೇಗೆ ಪರಿಹರಿಸಿದ್ದಾರೋ, ಅದರಂತೆ ಸಾದಿತ್ವಪ್ರಯುಕ್ತವಾದ ಶಬ್ದವಿರೋಧವನ್ನೂ ಸಹ ಪರಿಹಾರ ಮಾಡಿರುತ್ತಾರೆ. ಮೂರನೆಯ ಸೂತ್ರದಲ್ಲಿಯೂ ಸಾಂತತ್ವಪ್ರಯುಕ್ತವಾದ ಶಬ್ದವಿರೋಧವನ್ನು ಪರಿಹಾರಮಾಡಿದಂತೆ ಸಾಂತತ್ವಪ್ರಯುಕ್ತವಾದ ಕರ್ಮವಿರೋಧವನ್ನೂ ಸಹ ಪರಿಹಾರ ಮಾಡಿರುತ್ತಾರೆ. ಹೀಗಿರುವಾಗ, ಎರಡನೆಯ ಸೂತ್ರದಲ್ಲಿ ಕರ್ಮಪದವನ್ನಾಗಲೀ, ಮೂರನೆಯ ಸೂತ್ರದಲ್ಲಿ ಶಬ್ದ ಎಂಬ ಪದವನ್ನಾಗಲೀ, ಸೂತ್ರಕಾರರು ಏಕೆ ಉಲ್ಲೇಖ ಮಾಡಿದ್ದಾರೆ.

**उभयत्रोभयविरोधपरिहारेऽप्याद्यसूत्रे मनुष्याणां सतां कर्मादिना देवादित्वमिति तदुपरीत्यनेनोक्ते तर्हि येन कर्मणा देवादित्वं साध्यं तस्मिन् कर्मण्येव विरोधः; ततः पूर्वं साधनावस्थायां देवताभावादिति शङ्किते कर्मविरोधे द्वितीयसूत्रेण पूर्वपूर्वदेवताप्रवाहस्यानादित्वप्रतिपादकशब्दान्निरस्ते तर्हि तस्मिन् शब्द एव विरोध**

**इति शङ्कितस्य शब्दविरोधस्य तृतीयेन निरासाद्द्वितीये कर्मशब्दस्य तृतीये शब्दशब्दस्य चोपपत्तेः ।**

ಸಮಾಧಾನ - ಎರಡನೆಯ ಸೂತ್ರ ಹಾಗೂ ಮೂರನೆಯ ಸೂತ್ರ ಎರಡೂ ಕಡೆ ಕರ್ಮವಿರೋಧ ಹಾಗೂ ಶಬ್ದವಿರೋಧಗಳೆರಡನ್ನೂ ಪರಿಹರಿಸುತ್ತಿದ್ದಾರೆ. ಆದರೂ ಸಹ ಎರಡನೆಯ ಸೂತ್ರದಲ್ಲಿ ಕರ್ಮಪದವು ಮೂರನೆಯ ಸೂತ್ರದಲ್ಲಿ 'ಶಬ್ದ' ಎಂಬ ಪದವು ಸಾರ್ಥಕವಾಗುತ್ತದೆ. ಅದು ಹೀಗೆ - ಮೊದಲನೆಯ ಸೂತ್ರದಲ್ಲಿ ಮನುಷ್ಯರು ಸತ್ಕರ್ಮಾಚರಣೆಯನ್ನು ಮಾಡುವುದರಿಂದ ದೇವತಾಪದವಿಯನ್ನು ಹೊಂದುತ್ತಾರೆಂದು 'ತದುಪರಿ' ಎಂಬ ಅಂಶದಿಂದ ಸಮರ್ಥನೆ ಮಾಡಿದರು. ಹಾಗಾದರೆ ಯಾವಕರ್ಮದಿಂದ ಮನುಷ್ಯರು ದೇವತಾಪದವಿಯನ್ನು ಪಡೆಯುತ್ತಾರೋ, ಅಂತಹ ಕರ್ಮದಲ್ಲೇ ವಿರೋಧಬರುತ್ತದೆ. ಏಕೆಂದರೆ ದೇವತಾಪದವಿಯನ್ನು ಪಡೆಯುವ ಮೊದಲು, ಸಾಧನಾವಸ್ಥೆಯಲ್ಲಿ ದೇವತೆಗಳೇ ಇಲ್ಲವೆಂದಂತಾಯಿತು. ಆ ಸಂದರ್ಭದಲ್ಲಿ ಮಾಡುವಂತಹ ಕರ್ಮಗಳಿಗೆ ದೇವತೋದ್ದೇಶ್ಯಕತ್ವವನ್ನು ಹೇಳಲು ಸಾಧ್ಯವಿಲ್ಲವಲ್ಲವೇ? ಹೀಗೆ ಕರ್ಮವಿರೋಧದ ಆಶಂಕೆಯು ಪ್ರಾಪ್ತವಾಗುತ್ತದೆ.[೧] ಹೀಗೆ ಕರ್ಮವಿರೋಧವು ಪ್ರಾಪ್ತವಾದಾಗ ಎರಡನೆಯಸೂತ್ರದಲ್ಲಿ ದೇವತಾಪ್ರವಾಹವು ಅನಾದಿಯಾದ್ದರಿಂದ ಕರ್ಮವಿರೋಧವನ್ನು ಪರಿಹರಿಸಿದ್ದಾರೆ. ಅಂದರೆ ಈ ದೇವತೆಯು ದೇವತಾಪದವಿಯಲ್ಲಿದಿದ್ದರೂ, ಮತ್ತೊಬ್ಬ ದೇವತೆಯು ಆ ಪದವಿಯಲ್ಲಿರುವುದರಿಂದ ದೇವತಾಪ್ರವಾಹವು ಅನಾದಿಯಾದ್ದರಿಂದ ಕರ್ಮವಿರೋಧಕ್ಕೆ ಅವಕಾಶವಿಲ್ಲ. ಹೀಗೆ ಎರಡನೆಯ ಸೂತ್ರದಲ್ಲಿ ಕರ್ಮವಿರೋಧವನ್ನು ಪರಿಹರಿಸಿದ ಮೇಲೆ ಪುನಃ ಶಬ್ದವಿರೋಧವು ಹುಟ್ಟುತ್ತದೆ. ಅಂದರೆ ಅನಾದಿಯಾದ ಶಬ್ದವು ಸಾದಿಯಾದ ಅರ್ಥವನ್ನು ಪ್ರತಿಪಾದಿಸಲು ಹೇಗೆ ಸಾಧ್ಯ ? ಎಂಬ ವಿರೋಧವು ಪ್ರಾಪ್ತವಾದಾಗ, ಅದನ್ನು ಪರಿಹರಿಸಲು ಮೂರನೆಯ ಸೂತ್ರವು ಹೊರಟಿದೆ. ಹೀಗೆ ಎರಡನೆಯ ಸೂತ್ರದಲ್ಲಿ 'ಕರ್ಮ' ಎಂಬ ಶಬ್ದವು ಮೂರನೆಯ ಸೂತ್ರದಲ್ಲಿ 'ಶಬ್ದ' ಎಂಬ ಪದವು ಸಾರ್ಥಕವಾಗಿದೆ.

**एतेनानादित्वश्रुतिवत् ''यथैव नियमः काले'' इति भाष्योदाहृतानन्तत्वश्रुतिरपि द्वितीयसूत्रस्थेन ''दर्शनात्'' इत्यनेन विवक्षितुं शक्येति पुनस्तृतीये सान्तत्वनिमित्ताऽपि शब्दविरोधशङ्का निर्बीजेति निरस्तम् ।**

(೧) ದೇವತೆಗಳು ಮನುಷ್ಯಜನ್ಮವನ್ನು ಹೊಂದಿ, ಸಾಧನೆಯನ್ನು ಮಾಡಿಕೊಳ್ಳುತ್ತಾರೆ. ಉದಾಹರಣೆ ಋಜುಪದವಿಯಲ್ಲಿರುವ ದೇವತೆಗಳು ಅವತಾರತ್ರಯವನ್ನು ಭೂಲೋಕದಲ್ಲಿ ಮಾಡಿ, ಅನಂತರ ಬ್ರಹ್ಮಪದವಿಯನ್ನು ಹೊಂದುತ್ತಾರೆ. ಬಲಿಚಕ್ರವರ್ತಿಯು ಮನುಷ್ಯದೇಹವನ್ನು ಪಡೆದು ನೂರು ಅಶ್ವಮೇಧಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಹೊಂದುತ್ತಾನೆ. ಈ ದೃಷ್ಟಾಂತಗಳನ್ನು ಇಲ್ಲಿ ತಿಳಿದುಕೊಳ್ಳಬೇಕು.

ಈ ಸಮಾಧಾನದಿಂದ ಮತ್ತೊಂದು ಶಂಕೆಯನ್ನು ಪರಿಹರಿಸಿದಂತಾಯಿತು. ಎರಡನೆಯ ಸೂತ್ರದಲ್ಲಿ ಅನಾದಿತ್ವಶ್ರುತಿಯನ್ನು ಹೇಗೆ ಉದಾಹರಿಸುತ್ತಾರೋ, 'ಯಥೈವ ನಿಯಮಃ ಕಾಲೇ' ಎಂಬ ಅನಂತತ್ವಶ್ರುತಿಯನ್ನೂ ಸಹ ಉದಾಹರಿಸಲು ಬರುತ್ತದೆ. ಎರಡನೆಯ ಸೂತ್ರದಲ್ಲಿರುವ 'ದರ್ಶನಾತ್' ಎಂಬ ಪದದಿಂದ ಈ ಎರಡೂ ಬಗೆಯ ವಾಕ್ಯಗಳನ್ನು ಉದಾಹರಿಸಬಹುದು. ಹೀಗಿರುವಾಗ ಪುನಃ ಮೂರನೆಯ ಸೂತ್ರದಲ್ಲಿ ಸಾಂತತ್ವನಿಮಿತ್ತಕವಾಗಿ ಮಾಡುವಂತಹ ಶಬ್ದವಿರೋಧಶಂಕೆಯು ನಿರ್ಬೀಜವಾಗಿದೆಯಲ್ಲವೇ? ಎಂಬ ಶಂಕೆಯು ನಿರಸ್ತವಾಯಿತು.

**उक्तरीत्याऽऽकाङ्क्षाक्रमेण द्वितीयेऽनादित्वस्यैव वक्तव्यत्वेन ''दर्शनात्'' इत्यनेन तत्रैव शब्दोपन्यासात् ।**

ಏಕೆಂದರೆ ಹಿಂದೆ ಹೇಳಿದಂತೆ ಆಕಾಂಕ್ಷಾಕ್ರಮದಿಂದ ಪ್ರಥಮಸೂತ್ರದ ಮೇಲೆ ಬರುವಂತಹ ಸಂಶಯವನ್ನು ಪರಿಹರಿಸುವುದಕ್ಕಾಗಿ ಅನಾದಿತ್ವ ವಿಷಯದಲ್ಲಿರುವ ವಾಕ್ಯವನ್ನಷ್ಟೇ ಎರಡನೆಯ-ಸೂತ್ರದಲ್ಲಿ ಉದಾಹರಿಸಬೇಕು. ಅದನ್ನು ಮಾತ್ರ 'ದರ್ಶನಾತ್' ಎಂಬಂಶವು ಹೇಳುತ್ತದೆ. ಪುನಃ ಶಬ್ದವಿರೋಧದ ಮೇಲೆ ಬರುವಂತಹ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಮುಂದಿನ ಸೂತ್ರದಲ್ಲಿ ಅನಂತತ್ವವಿಷಯದಲ್ಲಿ ಇರುವಂತಹ ವಾಕ್ಯವನ್ನು ಉದಾಹರಿಸಬೇಕು.

**प्रकाशः –**

''नच वाच्यं कर्मविरोधाभाववदयमपि परिहर्तव्य इति'' इति टीकां विवरीतुं शब्दविरोधस्य पुनरुत्थानमाक्षिप्य द्वेधा समाधिमाह – **नन्वित्यादिना विरोधशङ्का-समाधाने युक्ते इत्यन्तेन ॥**

ವಿವರಣೆ - 'ನಚ ವಾಚ್ಯಂ ಕರ್ಮವಿರೋಧಾಭಾವವತ್ ಅಯಮಪಿ ಪರಿಹರ್ತವ್ಯ ಇತಿ' ಎರಡನೆಯ ಸೂತ್ರದಲ್ಲಿ ಕರ್ಮವಿರೋಧವನ್ನು ಪರಿಹಾರ ಮಾಡಿದಂತೆ ಶಬ್ದವಿರೋಧವನ್ನೂ ಸಹ ಪರಿಹಾರ ಮಾಡಬಹುದೆಂದು ಶಂಕಿಸಬಾರದು ಎಂಬ ಟೀಕಾವಾಕ್ಯವನ್ನು ವಿವರಣೆ ಮಾಡುವುದಕ್ಕಾಗಿ ಶಬ್ದವಿರೋಧದ ಆಶಂಕೆಯು ಆಕಾಂಕ್ಷಾಕ್ರಮದಿಂದ ಹುಟ್ಟುತ್ತದೆಂದು ಆಕ್ಷೇಪ ಮಾಡಿ ಎರಡು ಬಗೆಯಲ್ಲಿ ಸಮಾಧಾನ ಹೇಳುತ್ತಿದ್ದಾರೆ 'ನನು' ಎಂಬಲ್ಲಿಂದ ಪ್ರಾರಂಭಮಾಡಿ 'ವಿರೋಧಶಂಕಾಸಮಾಧಾನೇ ಯುಕ್ತೇ' ಎಂಬಲ್ಲಿಯ ತನಕ.

**प्रकाशः** – संयुक्ततां हेतुभेदोपन्यासेनाशङ्क्य निराह – **नचेति ॥** इति वाच्यमित्यन्वयः । तृतीये सूत्रे अतः प्रभवादित्यंशेनेत्यर्थः । सूत्रार्थस्त्वग्रे स्पष्टः ।

ಎರಡು ಸೂತ್ರಗಳೂ ಸಹ ಸಾರ್ಥಕವಾಗಿವೆಯೆಂಬುದನ್ನು ಭಿನ್ನವಾದ ಹೇತುಗಳಿಂದ ಸಮರ್ಥಿಸಿ ನಿರಾಕರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ. 'ನಚ' ಎಂಬುದಕ್ಕೆ 'ಇತಿವಾಚ್ಯಂ' ಎಂಬಲ್ಲಿ ಅನ್ವಯ. ಮೂರನೆಯ ಸೂತ್ರದಲ್ಲಿ 'ಅತಃ ಪ್ರಭವಾತ್' ಎಂಬ ಅಂಶದಿಂದ ಎಂದರ್ಥ. ಸೂತ್ರದ ಅರ್ಥವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः** – अस्त्वेवं ततः किमित्यत आह – **तथाचेति** ।। द्वितीयसूत्रे इन्द्रादिदेवव्यक्तिसादित्वप्रयुक्तकर्मविरोधपरिहारेऽपि तेषामनित्यत्वेनोत्तरकाले देवतानामभावेन नित्यस्य शब्दस्य तत्सम्बन्धो विरुद्ध इति शङ्का युक्तेत्यर्थः ।

ಎರಡನೆಯ ಸೂತ್ರದಲ್ಲಿ ಅನಾದಿತ್ವವನ್ನಷ್ಟೇ ಹೇಳುವುದರಿಂದೇನಾಯಿತು? ಎಂಬ ಪ್ರಶ್ನೆಗೆ 'ತಥಾಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಎರಡನೆಯ ಸೂತ್ರದಲ್ಲಿ ಇಂದ್ರಾದಿದೇವತೆಗಳಲ್ಲಿ ಸಾದಿತ್ವಪ್ರಯುಕ್ತವಾದ ಕರ್ಮವಿರೋಧವನ್ನು ಪರಿಹಾರ ಮಾಡಿದರೂ ಅಂತಹ ದೇವತೆಗಳು ಅನಿತ್ಯರಾದ್ದರಿಂದ, ಭವಿಷ್ಯತ್ಕಾಲದಲ್ಲಿ ನಾಶವುಂಟಾಗುವುದರಿಂದ ದೇವತೆಗಳೇ ಇಲ್ಲದಂತಹ ಪ್ರಸಂಗ ಬರುತ್ತದೆ. ಆವಾಗ ನಿತ್ಯವಾದ ಶಬ್ದಕ್ಕೆ ಅಂತಹ ದೇವತೆಗಳ ಸಂಬಂಧವನ್ನು ಹೇಳುವುದು ವಿರುದ್ಧವಾಗುತ್ತದಲ್ಲವೇ? ಎಂದು ಶಂಕೆಯ ಅಭಿಪ್ರಾಯ.

**प्रकाशः** – हेतुभेदे ज्ञापकमाह – **अत एवेति** ।। **परिहारेणेति** ।। अन्यथा शब्दे देवसादित्वप्रयुक्तस्य कर्मणि देवतानित्यत्वप्रयुक्तस्य विरोधस्यान्यत्रापरिहृततयाऽनुद्धृतत्वापातात् । अत्रोद्धारन्यायस्योभयत्र साम्याच्चेति भावः ।

ಹೇತುಭೇದದಲ್ಲಿ ಜ್ಞಾಪಕವನ್ನು 'ಅತ ಏವ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ. 'ಪರಿಹಾರೇಣ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಹೀಗೊಪ್ಪದಿದ್ದರೆ, ಶಬ್ದದಲ್ಲಿ ದೇವಸಾದಿತ್ವಪ್ರಯುಕ್ತವಾದ ವಿರೋಧವನ್ನು, ಕರ್ಮವಿಷಯದಲ್ಲಿ ದೇವತಾನಿತ್ಯತ್ವ ಪ್ರಯುಕ್ತವಾದ ವಿರೋಧವನ್ನು ಬೇರೆಕಡೆ ಪರಿಹಾರ ಮಾಡದ ಕಾರಣ, ಇಲ್ಲಿಯೇ ಪರಿಹರಿಸಿದ್ದಾರೆಂದು ಹೇಳಬೇಕು. ಮತ್ತು ಇಲ್ಲಿ ಪರಿಹರಿಸುತ್ತಿರುವ ನ್ಯಾಯವು ಎರಡೂ ಕಡೆ ಸಮಾನವಾಗಿದೆಯೆಂದು ಅಭಿಪ್ರಾಯ.

**प्रकाशः** – भाष्यं तूपलक्षणतया कथञ्चिन्नेयमिति शङ्कितुर्भावः ।

ಭಾಷ್ಯದಲ್ಲಿ ಹಾಗೇ ವ್ಯಾಖ್ಯಾನಮಾಡಿದ್ದನ್ನು ಕೇವಲ ಉಪಲಕ್ಷಣವೆಂದು ಹೇಗಾದರೂ ವ್ಯಾಖ್ಯಾನ ಮಾಡಿ ಕೂಡಿಸಬೇಕು ಎಂದು ಶಂಕಾಕಾರರ ಅಭಿಪ್ರಾಯ.

**प्रकाशः** – अत एव ''शब्द इति चेत्'' इति सूत्रांशविवरणटीकायां ''नच वाच्यं कर्मविरोधाभाववदयमपि विरोधः परिहर्तव्य इति । अतीतदेवताप्रवाहे प्रमाण सद्भावेनातीतकालविरोधस्यैव परिहर्तुं शक्यत्वात् । उत्तरकालेऽन्यदेवताभावनियमे प्रमाणाभावेन विरोधस्य कर्मण्यपि साम्यात्'' इत्युक्तमिति हृदयम् ।

ಆದ್ದರಿಂದಲೇ 'ಶಬ್ದ ಇತಿ ಚೇತ್' ಸೂತ್ರಾಂಶವನ್ನು ವಿವರಣೆ ಮಾಡುವಂತಹ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ. 'ನಚ ವಾಚ್ಯಂ ಕರ್ಮವಿರೋಧಾಭಾವವದಯಮಪಿ ವಿರೋಧಃ ಪರಿಹರ್ತವ್ಯ ಇತಿ । ಅತೀತದೇವತಾಪ್ರವಾಹೇ ಪ್ರಮಾಣಸದ್ಭಾವೇನಾತೀತಕಾಲವಿರೋಧಸ್ಯೈವ ಪರಿಹರ್ತುಂ ಶಕ್ಯತ್ವಾತ್ । ಉತ್ತರಕಾಲೇಽನ್ಯದೇವತಾಭಾವನಿಯಮೇ ಪ್ರಮಾಣಾಭಾವೇನ ವಿರೋಧಸ್ಯ ಕರ್ಮಣ್ಯಪಿ ಸಾಮ್ಯಾತ್' ಕರ್ಮವಿರೋಧವನ್ನು ಪರಿಹಾರಮಾಡಿದಂತೆ, ಶಬ್ದವಿರೋಧವನ್ನೂ ಸಹ ಪರಿಹಾರಮಾಡಬಹುದಲ್ಲವೇ? ಎಂದು ಶಂಕಿಸಬಾರದು. ಅತೀತದೇವತಾಪ್ರವಾಹದಲ್ಲಿ ಪ್ರಮಾಣವಿರುವುದರಿಂದ ಅತೀತಕಾಲವಿರೋಧವನ್ನಷ್ಟೇ ಪರಿಹಾರ ಮಾಡಬಹುದು. ಭವಿಷ್ಯತ್ಕಾಲದಲ್ಲಿ ಬೇರೆ ದೇವತೆಗಳಿದ್ದಾರೆಂಬ ನಿಯಮದಲ್ಲಿ ಪ್ರಮಾಣವಿಲ್ಲದ ಕಾರಣ, ಆ ವಿರೋಧವು ಕರ್ಮವಿಷಯದಲ್ಲೂ ಸಹ ಬರುತ್ತದೆ ಎಂದು ಹೇಳಿರುತ್ತಾರೆ. ಟೀಕೆಯ ಈ ಮಾತನ್ನು ಗಮನಿಸಿದಾಗ, ಎರಡೂ ಸೂತ್ರಗಳಲ್ಲಿ ಎರಡು ಬಗೆಯ ಪರಿಹಾರವನ್ನು ಮಾಡಿದ್ದಾರೆಂದು ತಿಳಿಯುತ್ತದೆ.

**प्रकाशः – उभयोरुभयत्र परिहारं टीकाभिमतमुक्त्वा तत्र यस्सूत्रविन्यासायोगः शङ्कितस्तमुद्धरति – उभयत्रेति ।।**

ಎರಡು ಹಾಗೂ ಮೂರನೆಯ ಸೂತ್ರಗಳಲ್ಲಿ ಕರ್ಮವಿರೋಧ ಹಾಗೂ ಶಬ್ದವಿರೋಧವೆರಡನ್ನೂ ಪರಿಹಾರ ಮಾಡುವುದು ಟೀಕೆಗೆ ಅಭಿಮತವಾಗಿದೆಯೆಂದು ಹೇಳಿ ಸೂತ್ರವಿನ್ಯಾಸವೇ ತಪ್ಪಾಗುತ್ತದೆಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ 'ಉಭಯತ್ರ' ಇತ್ಯಾದಿ ಗ್ರಂಥದಿಂದ.

**प्रकाशः – कर्मादिनेति ।। विद्ययेत्यादिशब्दार्थः । शब्दादिति ।। ''तेह नाकं महिमानस्सचन्ते'' इत्यादिशब्दादित्यर्थः ।। तत्रैवेति ।। अनादित्व एवेत्यर्थः । अयं च परिहारः ''अतीतदेवता'' इत्यादिटीकासूचितः ।**

'ಕರ್ಮಾದಿನಾ' ಎಂಬಲ್ಲಿರುವ ಆದಿಪದದಿಂದ ವಿದ್ಯೆಯಿಂದ ಎಂಬುದನ್ನು ವಿವಕ್ಷಿಸಬೇಕು. 'ಶಬ್ದಾತ್' ಎಂದರೆ 'ತೇಹ ನಾಕಂ ಮಹಿಮಾನಃ ಸಚಂತೇ' ಇತ್ಯಾದಿ ಶಬ್ದಗಳು ದೇವತೆಗಳ ಪ್ರವಾಹವು ನಿತ್ಯವಾಗಿದೆಯೆನ್ನಲು ಆಧಾರವಾಗಿದೆ ಎಂದು ತಿಳಿಯಬೇಕು. 'ತತ್ರೈವ' ಎಂದರೆ ಅನಾದಿತ್ವ ವಿಷಯದಲ್ಲೇ ಎಂದರ್ಥ. ಈ ಪರಿಹಾರವು 'ಅತೀತದೇವತಾ' ಇತ್ಯಾದಿ ಟೀಕಾಮಾತುಗಳಿಂದ ಸೂಚಿತವಾಗಿದೆ.




ದೇವತೆಗಳು ಅನಿತ್ಯರಾದ್ದರಿಂದ ಮೋಕ್ಷವನ್ನು ಹೊಂದುತ್ತಾರೆ. ಮೋಕ್ಷಕ್ಕಾಗಿ ಅಧಿಕಾರಿವಿಶೇಷಣವಾದ 'ಮುಮುಕ್ಷಾ' ಎಂಬ ಧರ್ಮವು ದೇವತೆಗಳಲ್ಲಿ ಉಪಪನ್ನವಾಗುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳೂ ಸಹ ಅಧಿಕಾರಿಗಳಾಗಿದ್ದಾರೆಂದು ಸಿದ್ಧಾಂತಿಗಳು ಸಮರ್ಥಿಸಬೇಕು. ಆದರೆ ದೇವತೆಗಳು ಅನಿತ್ಯರಾದಲ್ಲಿ ಕರ್ಮವಿರೋಧ

ಹಾಗೂ ಶಬ್ದವಿರೋಧ ಎಂಬೆರಡು ಪ್ರಧಾನ ದೋಷಗಳು ಬರುತ್ತವೆ. ಅನಿತ್ಯರಾದ ದೇವತೆಗಳು ಯಾವಾಗ ತಮ್ಮ ಪದವಿಯಲ್ಲಿ ಇರುವುದಿಲ್ಲವೋ, ಆ ಸಂದರ್ಭದಲ್ಲಿ ಮಾಡುವಂತಹ ಯಾಗಗಳಿಗೆ ವೈಯರ್ಥ್ಯದೋಷ ಬರುತ್ತದೆ. ಮತ್ತು ದೇವತೆಗಳಿಲ್ಲದಾಗ ತದ್‌ವಾಚಕಪದಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ.

ಕರ್ಮವಿರೋಧ ದೋಷವನ್ನು ಎರಡನೆಯ ಸೂತ್ರವು ಹೇಳುತ್ತಿದೆ. ಶಬ್ದವಿರೋಧ ದೋಷವನ್ನು ಮೂರನೆಯ ಸೂತ್ರವು ಹೇಳುತ್ತಿದೆ. ಎರಡನೆಯ ಸೂತ್ರದಲ್ಲಿ ದೇವತಾಪ್ರವಾಹವು ನಿತ್ಯವಾದ್ದರಿಂದ ಕರ್ಮವಿರೋಧಕ್ಕೆ ಅವಕಾಶವಿಲ್ಲವೆಂದು ಪರಿಹಾರವನ್ನು ನೀಡುತ್ತದೆ. ಇದರಿಂದಲೇ ಶಬ್ದವಿರೋಧ ಪರಿಹಾರವನ್ನೂ ಸಹ ಮಾಡಿದಂತಾಗುತ್ತದೆ. ಏಕೆಂದರೆ ದೇವತಾಪ್ರವಾಹವು ನಿತ್ಯವಾದ್ದರಿಂದ, ನಿರಂತರವಾಗಿ ದೇವತೆಗಳು ತಮ್ಮ ಪದವಿಯಲ್ಲಿ ಇದ್ದೇ ಇರುತ್ತಾರೆಂದಂತಾಯಿತು. ಆವಾಗ ಶಬ್ದಕ್ಕೆ ಅಪ್ರಾಮಾಣ್ಯದೋಷಕ್ಕೂ ಸಹ ಅವಕಾಶ ಬರುವುದಿಲ್ಲ. ಹೀಗಿರುವಾಗ ಮೂರನೆಯ ಸೂತ್ರಕ್ಕೆ ಏನು ಸಾರ್ಥಕ್ಯ ? ಎಂಬುದು ಇಲ್ಲಿ ಪ್ರಾಸಂಗಿಕವಾಗಿ ಮಾಡಬೇಕಾದ ವಿಚಾರ.

ಎರಡನೆಯ ಸೂತ್ರವು ಕೇವಲ ದೇವತೆಗಳಿಗೆ ಉತ್ಪತ್ತಿಯಿಲ್ಲವೆಂದಷ್ಟೇ ಹೇಳುತ್ತಿದೆ. ಮೂರನೆಯ ಸೂತ್ರವು ನಾಶವಿಲ್ಲವೆಂದು ಹೇಳುತ್ತಿರುವುದರಿಂದ ಸಾರ್ಥಕವೆಂದು ಉತ್ತರಿಸಬೇಕು. ಹಾಗಾದಲ್ಲಿ ಎರಡು ಹಾಗೂ ಮೂರನೆಯ ಸೂತ್ರಗಳು ಒಟ್ಟಿಗೆ ಸೇರಿ, ಕರ್ಮವಿರೋಧ ಹಾಗೂ ಶಬ್ದವಿರೋಧಗಳೆರಡನ್ನೂ ಪರಿಹರಿಸುತ್ತಿವೆ ಎಂದೇ ಉತ್ತರಿಸಬೇಕಾಗುತ್ತದೆ. ಆವಾಗ ಎರಡನೆಯ ಸೂತ್ರದಲ್ಲಿ 'ಕರ್ಮ' ಎಂಬ ಪದವು ಮೂರನೆಯ ಸೂತ್ರದಲ್ಲಿ 'ಶಬ್ದ' ಎಂಬ ಪದವು ವ್ಯರ್ಥವಾಗುತ್ತದೆ. ಈ ಶಂಕೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ವಾಸ್ತವಿಕವಾಗಿ ಎರಡೂ ಸೂತ್ರಗಳಲ್ಲಿಯೂ ಎರಡು ಬಗೆಯ ಸಮಾಧಾನಗಳನ್ನು ಹೇಳುತ್ತಿದ್ದಾರೆ. ಆದರೆ ಪ್ರಥಮ ಸೂತ್ರದಲ್ಲಿ ಮನುಷ್ಯರು ಸತ್ಕರ್ಮಗಳಿಂದ ದೇವತಾಪದವಿಯನ್ನು ಪಡೆಯುತ್ತಾರೆಂದು ಹೇಳಿದರು. ಆವಾಗ ಮನುಷ್ಯರಾಗಿರುವ ಸಂದರ್ಭದಲ್ಲಿ ದೇವತಾಪದವಿಯಲ್ಲಿ ಯಾರೂ ಇಲ್ಲವೆಂದಂತಾಯಿತು. ಆ ಸಂದರ್ಭದಲ್ಲಿ ಮಾಡುವಂತಹ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವಲ್ಲವೇ? ಎಂಬ ಕರ್ಮವಿರೋಧಾಶಂಕೆಗೆ ಎರಡನೆಯ ಸೂತ್ರವು ಉತ್ತರಿಸಿತು. ಇದರ ಮೇಲೆ ಉಪಜೀವ್ಯವಾದ ಶಬ್ದದವಿರೋಧವೂ ಪ್ರಾಪ್ತವಾಗುತ್ತದೆ. ಅಂದರೆ ದೇವತೆಗಳೇ ಇಲ್ಲದಿದ್ದಾಗ ಶಬ್ದವಾದರೂ ಸಹ ದೇವತೆಯನ್ನು ಹೇಗೆ ಪ್ರತಿಪಾದಿಸಲು ಸಾಧ್ಯ ? ಎಂಬ ಅಭ್ಯಧಿಕಾಶಂಕೆಗೆ ಮೂರನೆಯ ಸೂತ್ರವು ಹೊರಟಿದೆ. ಆದ್ದರಿಂದ ಆಕಾಂಕ್ಷಾಕ್ರಮದಿಂದ ಎರಡನೆಯ ಹಾಗೂ ಮೂರನೆಯ ಸೂತ್ರಗಳು ಉತ್ತರಿಸುತ್ತಿರುವುದರಿಂದ, ಎರಡೂ ಸೂತ್ರಗಳು ಸಾರ್ಥಕವಾಗಿವೆ. ಮತ್ತು ಎರಡನೆಯ ಸೂತ್ರದಲ್ಲಿರುವ 'ಕರ್ಮ' ಎಂಬ ಪದವು ಮೂರನೆಯ ಸೂತ್ರದಲ್ಲಿರುವ 'ಶಬ್ದ' ಎಂಬ ಪದವೂ ಸಹ ಸಾರ್ಥಕವಾಗಿದೆ.



**तात्पर्यचन्द्रिका**

**यद्वा यथाहि कर्माणि प्रवाहेणानाद्यनन्तानि तथा देवता अपि ।**

ಅನುವಾದ - ಎರಡನೆಯ ಸೂತ್ರದಲ್ಲಿ ಕರ್ಮವಿಷಯಕವಾದ ಅನಾದಿತ್ವ, ಅನಂತತ್ವಗಳ ವಿರೋಧವನ್ನು ಪರಿಹರಿಸಲಾಗಿದೆ. ಕರ್ಮವಿರೋಧವನ್ನು ಪರಿಹರಿಸಿದಂತೆ ಶಬ್ದವಿರೋಧವನ್ನು ಎರಡನೆಯ ಸೂತ್ರದಲ್ಲಿ ಪರಿಹರಿಸಿಲ್ಲ. ಈ ವಿಷಯವನ್ನು ಮತ್ತೊಂದು ಬಗೆಯಲ್ಲಿ ಉಪಪಾದನೆ ಮಾಡುತ್ತಿದ್ದಾರೆ.

ಕರ್ಮಗಳೆಲ್ಲವೂ ಪ್ರವಾಹತಃ ಅನಾದಿಯಾಗಿವೆ ಮತ್ತು ಅನಂತವಾಗಿವೆ. ಇದರಂತೆ ಸಕಲಕರ್ಮಗಳಿಗೆ ಉದ್ದೇಶ್ಯಭೂತರಾದ ದೇವತೆಗಳೂ ಸಹ ಪ್ರವಾಹತಃ ಅನಾದಿಯಾಗಿರುತ್ತಾರೆ. ಅನಂತರಾಗಿರುತ್ತಾರೆ.

**यथाच ताः स्वरूपेणानित्यास्तथा तान्यपीति देवताप्रवाहस्यानाद्यनन्तत्वेनातीतानागतकर्मविरोध एव परिहृतो नतु शब्दविरोधः ।**

ದೇವತೆಗಳು ಹೇಗೆ ಸ್ವರೂಪತಃ ಅನಿತ್ಯರಾಗಿದ್ದಾರೋ, ಅದರಂತೆ ಕರ್ಮಗಳೂ ಸಹ ಸ್ವರೂಪತಃ ಅನಿತ್ಯವಾಗಿವೆ. ಅಂದರೆ ದೇವತೆಗಳು ತಮ್ಮ ಸ್ಥಾನದಲ್ಲಿ ಶಾಶ್ವತವಾಗಿ ಇರುವುದಿಲ್ಲ ಎಂದರ್ಥ. ಅದರಂತೆ ಕರ್ಮಗಳೂ ಸಹ ಶಾಶ್ವತವಲ್ಲ. ದೇವತೆಗಳು ತಮ್ಮ ಸ್ಥಾನದಲ್ಲಿ ನಿತ್ಯವಾಗಿಲ್ಲದಿದ್ದರೂ ದೇವತಾಪ್ರವಾಹವು ಅನಾದಿ ಮತ್ತು ಅನಂತವಾಗಿದೆ. ಆದ್ದರಿಂದ ಇಂದ್ರಾದಿಪದವಿಗಳಲ್ಲಿ ಯಾರಾದರೂ ಒಬ್ಬರು ಇದ್ದೇ ಇರುತ್ತಾರೆ. ಯಾರು ಯಾವಾಗ ಇರುತ್ತಾರೋ, ಅಂತಹವರನ್ನು ಉದ್ದೇಶಿಸಿ, ಕರ್ಮವು ಇರುತ್ತದೆ. ಹೀಗೆ ಅತೀತ ಅನಾಗತಕರ್ಮಗಳಿಗೆ ಉದ್ದೇಶ್ಯರೇ ಇಲ್ಲವೆಂದು ಹೇಳಲಾಗದೆಂದು ಕರ್ಮವಿರೋಧವನ್ನಷ್ಟೇ ಎರಡನೆಯ ಸೂತ್ರವು ಪರಿಹಾರ ಮಾಡಿದೆ ಹೊರತು, ಶಬ್ದವಿರೋಧವನ್ನು ಪರಿಹಾರ ಮಾಡಿಲ್ಲ.

**वेदरूपस्य शब्दस्य भाष्योक्तरीत्या स्वरूपेणैव नित्यत्वात् ।**

ಕಾರಣ ಹೀಗಿದೆ - ಕರ್ಮವು ಸ್ವರೂಪತಃ ಅನಿತ್ಯವಾದಂತೆ ಶಬ್ದವು ಸ್ವರೂಪತಃ ನಿತ್ಯವಲ್ಲ. ವೇದರೂಪವಾದ ಶಬ್ದವು ಭಾಷ್ಯದಲ್ಲಿ ಹೇಳಿದ ಪ್ರಕಾರ ಸ್ವರೂಪತಃ ನಿತ್ಯವೇ ಆಗಿದೆ.

**प्रवाहनित्यतायाः पुराणादावपि सत्त्वात् ।**

ಒಂದು ವೇಳೆ ಪ್ರವಾಹತಃ ನಿತ್ಯತ್ವವನ್ನು ವೇದಕ್ಕೆ ಹೇಳಿದರೆ ಇಂತಹ ನಿತ್ಯತ್ವವನ್ನು ಪುರಾಣಗಳಲ್ಲೂ ಸಹ ಹೇಳಬಹುದು. ಆವಾಗ ವೇದ ಹಾಗೂ ಪುರಾಣಗಳಿಗೆ ವ್ಯತ್ಯಾಸವೇ ಇಲ್ಲದಂತಾಗಬೇಕಾದೀತು.

**स्वरूपेण नित्यं चेन्द्रादिसूक्तं न प्रतिनियतैकेन्द्रादिपरम् । एकस्यैन्द्रादेः सदाऽभावात् ।**

ಹೀಗೆ ಸ್ವರೂಪತಃ ನಿತ್ಯವಾದ ಇಂದ್ರಾದಿಸೂಕ್ತರೂಪವಾದ ಶಬ್ದಗಳೆಲ್ಲವೂ ಒಬ್ಬನೇ ಇಂದ್ರನನ್ನು ಪ್ರತಿಪಾದಿಸುತ್ತದೆಂದು ಹೇಳಬಾರದು. ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನಿರಲು ಸಾಧ್ಯವಿಲ್ಲ.

**इन्द्राद्यन्तरस्यासिद्ध्यापाताच्च ।**

ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನಿರುವುದಾದರೆ, ಬೇರೆ ಬೇರೆ ಇಂದ್ರರಿರುತ್ತಾರೆಂಬ ವಿಷಯವು ಅಸಿದ್ಧವಾಗಬೇಕಾದೀತು.

**नच यदा य इन्द्रस्तदा तदुद्देशवद्यदा य इन्द्रस्तदा तत्परमिति वाच्यम् ।**

ಪ್ರಶ್ನೆ - ಅನೇಕ ಇಂದ್ರರಿದ್ದರೂ ಯಾವ ಸಮಯದಲ್ಲಿ ಯಾವ ಇಂದ್ರನಿರುತ್ತಾನೋ, ಅವನನ್ನು ಉದ್ದೇಶಿಸಿ, ಕರ್ಮವು ಇರುವಂತೆ ಶಬ್ದವೂ ಸಹ ಆಯಾ ಇಂದ್ರರನ್ನೇ ಪ್ರತಿಪಾದಿಸಬಹುದಲ್ಲವೇ?

**कालभेदेन सूक्तादेस्तात्पर्यभेदायोगादिति कर्माविरोधमङ्गीकृत्यैव शब्दविरोधशङ्कोदयः।**

ಉತ್ತರ - ಇದು ಸರಿಯಲ್ಲ. ಕಾಲಭೇದದಿಂದ ಇಂದ್ರಾದಿಸೂಕ್ತಗಳ ತಾತ್ಪರ್ಯಭೇದವನ್ನು ಒಪ್ಪಬಾರದು. ಕರ್ಮದಲ್ಲಿ ಉದ್ದೇಶ್ಯಭೇದವಿರಬಹುದು. ಆದರೆ ಶಬ್ದಕ್ಕೆ ಕಾಲಭೇದದಿಂದ ತಾತ್ಪರ್ಯಭೇದ ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಕರ್ಮವಿರೋಧಕ್ಕೆ ಅವಕಾಶವಿಲ್ಲವೆಂದು ಒಪ್ಪಿ ಶಬ್ದವಿರೋಧದ ಶಂಕೆಯು ಉದಯವಾಗುತ್ತದೆ.

**अत एव शङ्कानुसारेण तृतीयसूत्रस्थपरिहारभागस्यायं भावः ।**

ಆದ್ದರಿಂದಲೇ ಶಂಕೆಗೆ ಅನುಸಾರಿಯಾಗಿ ಮೂರನೆಯ ಸೂತ್ರದಲ್ಲಿರುವ 'ಅತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ' ಎಂಬ ಪರಿಹಾರ ಭಾಗದ ಅಭಿಪ್ರಾಯ ಹೀಗಿದೆ -

**इन्द्रादिसूक्तस्येन्द्रादिपदस्थे तात्पर्यम् । पदस्थत्वोपाधिश्चामात्यत्वादिवदतीतानागतेष्वेक एवेति नानेकेषु तात्पर्यापात इति ।**

ಪರಿಪೂರ್ಣಚಂದ್ರಿಕಾ

ಇಂದ್ರಾದಿಸೂಕ್ತಗಳಿಗೆ ಆಯಾವ್ಯಕ್ತಿಗಳಲ್ಲಷ್ಟೇ ತಾತ್ಪರ್ಯವಲ್ಲ; ಇಂದ್ರಾದಿಸ್ಥಾನದಲ್ಲಿರುವ ವ್ಯಕ್ತಿಯಲ್ಲಿ ತಾತ್ಪರ್ಯ. ಯಾವರೀತಿಯಾಗಿ 'ಮಂತ್ರಿ' ಎಂಬ ಶಬ್ದವು ಒಬ್ಬನೇ ಮಂತ್ರಿಯನ್ನು ಪ್ರತಿಪಾದನೆ ಮಾಡದೇ ವ್ಯತ್ಯಾಸವಾಗುತ್ತಿರುವ ಅನೇಕ ಮಂತ್ರಿಗಳನ್ನು ಪ್ರತಿಪಾದನೆ ಮಾಡುತ್ತದೋ, ಅದರಂತೆ 'ಇಂದ್ರ' ಎಂಬ ಶಬ್ದವು ಒಬ್ಬನೇ ಇಂದ್ರನನ್ನು ಪ್ರತಿಪಾದನೆ ಮಾಡದೇ ಆಯಾಕಾಲಗಳಲ್ಲಿ ವ್ಯತ್ಯಾಸವಾಗುವ ಎಲ್ಲಾ ಇಂದ್ರರನ್ನೂ ಸಹ ಪ್ರತಿಪಾದನೆ ಮಾಡುತ್ತದೆ. 'ಇಂದ್ರಾದಿಪದಸ್ಥತ್ವ' ಎಂಬುದು ಉಪಾಧಿಯಾಗಿದೆ. ಉಪಹಿತರಾದ ಇಂದ್ರಾದಿಗಳು ಭಿನ್ನ-ಭಿನ್ನರಾಗಿದ್ದರೂ ಉಪಾಧಿಯು ಒಂದೇ ಆಗಿರುವುದರಿಂದ ಇಂದ್ರಾದಿ ಶಬ್ದಗಳಿಗೆ ಒಂದೇ ವಿಷಯದಲ್ಲಿ ತಾತ್ಪರ್ಯವಿದೆ ಹೊರತು, ಅನೇಕ ವಿಷಯದಲ್ಲಿ ತಾತ್ಪರ್ಯವಿಲ್ಲವೆಂದು ಹೇಳಬೇಕು.

**तस्माद्द्वितीयसूत्रे कर्मविरोधे परिहृतेऽपि तृतीये शब्दविरोधाशङ्कासमाधाने युक्ते।**

ಆದ್ದರಿಂದ 'ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್' ಇತ್ಯಾದಿ ಎರಡನೆಯ ಸೂತ್ರದಿಂದ ಕರ್ಮವಿರೋಧವನ್ನಷ್ಟೇ ಪರಿಹಾರ ಮಾಡಿದ್ದರೂ 'ಶಬ್ದಃ ಇತಿಚೇನ್ನಾತಃ' ಎಂಬ ಮೂರನೆಯ ಸೂತ್ರದಲ್ಲಿ ಪುನಃ ಶಬ್ದವಿರೋಧವನ್ನು ಆಶಂಕಿಸಿ, ಸಮಾಧಾನವನ್ನು ಹೇಳುವುದು ತಪ್ಪಾಗುವುದಿಲ್ಲ.

**समाहितेऽपि शब्दविरोधे न देवानामनित्यता । तथाहि । न तावत्पौरस्त्यानां पाश्चात्यानां चेन्द्रादीनां नामरूपाभ्यां साम्यम् ।**

ಎರಡನೆಯ ಸೂತ್ರದಲ್ಲಿ ಕರ್ಮವಿರೋಧವನ್ನು, ಮೂರನೆಯ ಸೂತ್ರದಲ್ಲಿ ಶಬ್ದವಿರೋಧವನ್ನು ಪರಿಹರಿಸಿದ್ದಾಯಿತು. ಆದರೂ ಸಹ ದೇವತೆಗಳಿಗೆ ಅನಿತ್ಯತ್ವವನ್ನು ಹೇಳಲಾಗದು. ಏಕೆಂದರೆ ಈಗ ಇರುವ ಇಂದ್ರನಿಗೂ ಹಿಂದಿನ ಕಲ್ಪದಲ್ಲಿರುವ ಇಂದ್ರಾದಿಗಳಿಗೂ ನಾಮ ಹಾಗೂ ರೂಪಗಳಿಂದ ಸಾಮ್ಯವಿರುವುದಿಲ್ಲ. ಅಂದರೆ ಹಿಂದಿನ ಕಲ್ಪದಲ್ಲಿರುವ ಇಂದ್ರನ ಹೆಸರೇ ಬೇರೆ, ಆಕಾರವೇ ಬೇರೆ. ಈಗಿನ ಕಲ್ಪದಲ್ಲಿರುವ ಇಂದ್ರನ ಹೆಸರು ಆಕಾರಗಳೇ ಬೇರೆ ಆಗಿವೆ.

**लोकेऽमात्यान्तरस्य पूर्वामात्येन नामादिसाम्यनियमादर्शनात् । मानाभावाच।**

ಲೋಕದಲ್ಲಿಯೂ ಸಹ ಈಗಿರುವ ಮಂತ್ರಿಗಿಂತ ಹಿಂದಿನ ಮಂತ್ರಿಯ ನಾಮರೂಪಗಳು ಭಿನ್ನವಾಗಿರುವುದು ಕಂಡಿದೆ. ಅಂದರೆ ಹಿಂದಿನ ಮಂತ್ರಿಯು ಯಾವ ಹೆಸರು ಮತ್ತು ರೂಪಗಳನ್ನು ಹೊಂದಿದ್ದನೋ, ಅದೇ ಹೆಸರು ರೂಪಗಳನ್ನು ಈಗಿರುವ ಮಂತ್ರಿಯು ಹೊಂದಿರುವುದಿಲ್ಲ. ಆದ್ದರಿಂದ ಒಂದೇ ನಾಮರೂಪಗಳಿರಬೇಕೆಂಬ ನಿಯಮವನ್ನು ಮಾಡಲಾಗದು.

**प्रवाहनित्यतायाः पुराणादावपि सत्त्वात् ।**

ಒಂದು ವೇಳೆ ಪ್ರವಾಹತಃ ನಿತ್ಯತ್ವವನ್ನು ವೇದಕ್ಕೆ ಹೇಳಿದರೆ ಇಂತಹ ನಿತ್ಯತ್ವವನ್ನು ಪುರಾಣಗಳಲ್ಲೂ ಸಹ ಹೇಳಬಹುದು. ಆವಾಗ ವೇದ ಹಾಗೂ ಪುರಾಣಗಳಿಗೆ ವ್ಯತ್ಯಾಸವೇ ಇಲ್ಲದಂತಾಗಬೇಕಾದೀತು.

**स्वरूपेण नित्यं चेन्द्रादिसूक्तं न प्रतिनियतैकेन्द्रादिपरम् । एकस्यैन्द्रादेः सदाऽभावात् ।**

ಹೀಗೆ ಸ್ವರೂಪತಃ ನಿತ್ಯವಾದ ಇಂದ್ರಾದಿಸೂಕ್ತರೂಪವಾದ ಶಬ್ದಗಳೆಲ್ಲವೂ ಒಬ್ಬನೇ ಇಂದ್ರನನ್ನು ಪ್ರತಿಪಾದಿಸುತ್ತದೆಂದು ಹೇಳಬಾರದು. ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನಿರಲು ಸಾಧ್ಯವಿಲ್ಲ.

**इन्द्राद्यन्तरस्यासिद्ध्यापाताच्च ।**

ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನಿರುವುದಾದರೆ, ಬೇರೆ ಬೇರೆ ಇಂದ್ರರಿರುತ್ತಾರೆಂಬ ವಿಷಯವು ಅಸಿದ್ಧವಾಗಬೇಕಾದೀತು.

**नच यदा य इन्द्रस्तदा तदुद्देशवद्यदा य इन्द्रस्तदा तत्परमिति वाच्यम् ।**

ಪ್ರಶ್ನೆ - ಅನೇಕ ಇಂದ್ರರಿದ್ದರೂ ಯಾವ ಸಮಯದಲ್ಲಿ ಯಾವ ಇಂದ್ರನಿರುತ್ತಾನೋ, ಅವನನ್ನು ಉದ್ದೇಶಿಸಿ, ಕರ್ಮವು ಇರುವಂತೆ ಶಬ್ದವೂ ಸಹ ಆಯಾ ಇಂದ್ರರನ್ನೇ ಪ್ರತಿಪಾದಿಸಬಹುದಲ್ಲವೇ?

**कालभेदेन सूक्तादेस्तात्पर्यभेदायोगादिति कर्माविरोधमङ्गीकृत्यैव शब्दविरोधशङ्कोदयः।**

ಉತ್ತರ - ಇದು ಸರಿಯಲ್ಲ. ಕಾಲಭೇದದಿಂದ ಇಂದ್ರಾದಿಸೂಕ್ತಗಳ ತಾತ್ಪರ್ಯಭೇದವನ್ನು ಒಪ್ಪಬಾರದು. ಕರ್ಮದಲ್ಲಿ ಉದ್ದೇಶ್ಯಭೇದವಿರಬಹುದು. ಆದರೆ ಶಬ್ದಕ್ಕೆ ಕಾಲಭೇದದಿಂದ ತಾತ್ಪರ್ಯಭೇದ ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಕರ್ಮವಿರೋಧಕ್ಕೆ ಅವಕಾಶವಿಲ್ಲವೆಂದು ಒಪ್ಪಿ ಶಬ್ದವಿರೋಧದ ಶಂಕೆಯು ಉದಯವಾಗುತ್ತದೆ.

**अत एव शङ्कानुसारेण तृतीयसूत्रस्थपरिहारभागस्यायं भावः ।**

ಆದ್ದರಿಂದಲೇ ಶಂಕೆಗೆ ಅನುಸಾರಿಯಾಗಿ ಮೂರನೆಯ ಸೂತ್ರದಲ್ಲಿರುವ 'ಅತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ' ಎಂಬ ಪರಿಹಾರ ಭಾಗದ ಅಭಿಪ್ರಾಯ ಹೀಗಿದೆ -

**इन्द्रादिसूक्तस्येन्द्रादिपदस्थे तात्पर्यम् । पदस्थत्वोपाधिश्चामात्यत्वादिवदतीतानागतेष्वेक एवेति नानेकेषु तात्पर्यापात इति ।**

परिपूर्णचंद्रिका

ಇಂದ್ರಾದಿಸೂಕ್ತಗಳಿಗೆ ಆಯಾವ್ಯಕ್ತಿಗಳಲ್ಲಷ್ಟೇ ತಾತ್ಪರ್ಯವಲ್ಲ; ಇಂದ್ರಾದಿಸ್ಥಾನದಲ್ಲಿರುವ ವ್ಯಕ್ತಿಯಲ್ಲಿ ತಾತ್ಪರ್ಯ. ಯಾವರೀತಿಯಾಗಿ 'ಮಂತ್ರಿ' ಎಂಬ ಶಬ್ದವು ಒಬ್ಬನೇ ಮಂತ್ರಿಯನ್ನು ಪ್ರತಿಪಾದನೆ ಮಾಡದೇ ವ್ಯತ್ಯಾಸವಾಗುತ್ತಿರುವ ಅನೇಕ ಮಂತ್ರಿಗಳನ್ನು ಪ್ರತಿಪಾದನೆ ಮಾಡುತ್ತದೋ, ಅದರಂತೆ 'ಇಂದ್ರ' ಎಂಬ ಶಬ್ದವು ಒಬ್ಬನೇ ಇಂದ್ರನನ್ನು ಪ್ರತಿಪಾದನೆ ಮಾಡದೇ ಆಯಾಕಾಲಗಳಲ್ಲಿ ವ್ಯತ್ಯಾಸವಾಗುವ ಎಲ್ಲಾ ಇಂದ್ರರನ್ನೂ ಸಹ ಪ್ರತಿಪಾದನೆ ಮಾಡುತ್ತದೆ. 'ಇಂದ್ರಾದಿಪದಸ್ಥತ್ವ' ಎಂಬುದು ಉಪಾಧಿಯಾಗಿದೆ. ಉಪಹಿತರಾದ ಇಂದ್ರಾದಿಗಳು ಭಿನ್ನ-ಭಿನ್ನರಾಗಿದ್ದರೂ ಉಪಾಧಿಯು ಒಂದೇ ಆಗಿರುವುದರಿಂದ ಇಂದ್ರಾದಿ ಶಬ್ದಗಳಿಗೆ ಒಂದೇ ವಿಷಯದಲ್ಲಿ ತಾತ್ಪರ್ಯವಿದೆ ಹೊರತು, ಅನೇಕ ವಿಷಯದಲ್ಲಿ ತಾತ್ಪರ್ಯವಿಲ್ಲವೆಂದು ಹೇಳಬೇಕು.

**तस्माद्द्वितीयसूत्रे कर्मविरोधे परिहृतेऽपि तृतीये शब्दविरोधाशङ्कासमाधाने युक्ते।**

ಆದ್ದರಿಂದ 'ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್' ಇತ್ಯಾದಿ ಎರಡನೆಯ ಸೂತ್ರದಿಂದ ಕರ್ಮವಿರೋಧವನ್ನಷ್ಟೇ ಪರಿಹಾರ ಮಾಡಿದ್ದರೂ 'ಶಬ್ದಃ ಇತಿಚೇನ್ನಾತಃ' ಎಂಬ ಮೂರನೆಯ ಸೂತ್ರದಲ್ಲಿ ಪುನಃ ಶಬ್ದವಿರೋಧವನ್ನು ಆಶಂಕಿಸಿ, ಸಮಾಧಾನವನ್ನು ಹೇಳುವುದು ತಪ್ಪಾಗುವುದಿಲ್ಲ.

**समाहितेऽपि शब्दविरोधे न देवानामनित्यता । तथाहि । न तावत्पौरस्त्यानां पाश्चात्यानां चेन्द्रादीनां नामरूपाभ्यां साम्यम् ।**

ಎರಡನೆಯ ಸೂತ್ರದಲ್ಲಿ ಕರ್ಮವಿರೋಧವನ್ನು, ಮೂರನೆಯ ಸೂತ್ರದಲ್ಲಿ ಶಬ್ದವಿರೋಧವನ್ನು ಪರಿಹರಿಸಿದ್ದಾಯಿತು. ಆದರೂ ಸಹ ದೇವತೆಗಳಿಗೆ ಅನಿತ್ಯತ್ವವನ್ನು ಹೇಳಲಾಗದು. ಏಕೆಂದರೆ ಈಗ ಇರುವ ಇಂದ್ರನಿಗೂ ಹಿಂದಿನ ಕಲ್ಪದಲ್ಲಿರುವ ಇಂದ್ರಾದಿಗಳಿಗೂ ನಾಮ ಹಾಗೂ ರೂಪಗಳಿಂದ ಸಾಮ್ಯವಿರುವುದಿಲ್ಲ. ಅಂದರೆ ಹಿಂದಿನ ಕಲ್ಪದಲ್ಲಿರುವ ಇಂದ್ರನ ಹೆಸರೇ ಬೇರೆ, ಆಕಾರವೇ ಬೇರೆ. ಈಗಿನ ಕಲ್ಪದಲ್ಲಿರುವ ಇಂದ್ರನ ಹೆಸರು ಆಕಾರಗಳೇ ಬೇರೆ ಆಗಿವೆ.

**लोकेऽमात्यान्तरस्य पूर्वामात्येन नामादिसाम्यनियमादर्शनात् । मानाभावाच्च।**

ಲೋಕದಲ್ಲಿಯೂ ಸಹ ಈಗಿರುವ ಮಂತ್ರಿಗಿಂತ ಹಿಂದಿನ ಮಂತ್ರಿಯ ನಾಮರೂಪಗಳು ಭಿನ್ನವಾಗಿರುವುದು ಕಂಡಿದೆ. ಅಂದರೆ ಹಿಂದಿನ ಮಂತ್ರಿಯು ಯಾವ ಹೆಸರು ಮತ್ತು ರೂಪಗಳನ್ನು ಹೊಂದಿದ್ದನೋ, ಅದೇ ಹೆಸರು ರೂಪಗಳನ್ನು ಈಗಿರುವ ಮಂತ್ರಿಯು ಹೊಂದಿರುವುದಿಲ್ಲ. ಆದ್ದರಿಂದ ಒಂದೇ ನಾಮರೂಪಗಳಿರಬೇಕೆಂಬ ನಿಯಮವನ್ನು ಮಾಡಲಾಗದು.

ಮತ್ತು ಹಿಂದಿನ ಕಲ್ಪದಲ್ಲಿರುವ ಇಂದ್ರಾದಿಗಳ ನಾಮರೂಪಗಳನ್ನೇ ಈಗಿನ ಕಲ್ಪದ ಇಂದ್ರಾದಿಗಳು ಪಡೆದಿರುತ್ತಾರೆನ್ನಲು ಯಾವುದೇ ಪ್ರಮಾಣಗಳೂ ಸಹ ಇರುವುದಿಲ್ಲ.

**''सूर्याचन्द्रमसौ धाता यथा पूर्वमकल्पयत्'' इत्यादिवाक्यं तु तामेव सूर्यादि-व्यक्तिं पूर्वप्रकारेणाकल्पयदित्येवं सूर्यादिव्यक्त्यैक्यपरम् ।**

'ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್' ಇತ್ಯಾದಿ ಶ್ರುತಿಯು ಹಿಂದಿನ ಕಲ್ಪದಲ್ಲಿರುವ ಸೂರ್ಯ-ಚಂದ್ರಾದಿಗಳೇ ಬೇರೆ, ಈಗಿನ ಕಲ್ಪದಲ್ಲಿರುವ ಸೂರ್ಯ-ಚಂದ್ರಾದಿಗಳೇ ಬೇರೆ ಎಂದು ಹೇಳುತ್ತಿದೆಯಲ್ಲವೇ? ಇದರಿಂದ ದೇವತೆಗಳಿಗೆ ಅನಿತ್ಯತ್ವವನ್ನು ಸಮರ್ಥಿಸಬಹುದೆಂದು ಪ್ರಶ್ನಿಸಬಾರದು. ಏಕೆಂದರೆ ಹಿಂದಿನ ಕಲ್ಪದಲ್ಲಿರುವ ಸೂರ್ಯಾದಿಗಳನ್ನು ಪುನಃ ಅದೇ ಪ್ರಕಾರದಲ್ಲೇ ಅವರನ್ನೇ ಈ ಕಲ್ಪದಲ್ಲಿಯೂ ಸಹ ಆಯಾ ಸ್ಥಾನಗಳಲ್ಲಿ ಸೃಷ್ಟಿಮಾಡಿದನೆಂದು ಅರ್ಥೈಸಬಹುದು. ಆದ್ದರಿಂದ ಹಿಂದಿನ ಕಲ್ಪದ ಸೂರ್ಯಾದಿಗಳಿಗಿಂತ ಈ ಕಲ್ಪದ ಸೂರ್ಯಾದಿಗಳು ಭಿನ್ನರೆಂದು ಸಿದ್ಧವಾಗುವುದಿಲ್ಲ.

**नचैवं सूर्यादिसृष्टिवाक्यविरोधः । तस्यानित्यसंयोगद्वारा स्वाप्रामाण्यापादक-देवतोत्पत्तिपरत्वासम्भवेनान्यपरत्वात् ।**

ಹಾಗಾದರೆ ಪರಮಾತ್ಮನು ಸೂರ್ಯ-ಚಂದ್ರ ಮೊದಲಾದವರನ್ನೆಲ್ಲಾ ಸೃಷ್ಟಿ ಮಾಡಿದನೆಂಬ ಅನೇಕ ಶ್ರುತಿವಾಕ್ಯಗಳ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಅಂತಹ ವಾಕ್ಯಗಳಿಗೆಲ್ಲಾ ಅನ್ಯಾರ್ಥವನ್ನು ಮಾಡಬೇಕು. ಒಂದು ವೇಳೆ ಉತ್ಪತ್ತಿನಾಶವುಳ್ಳ ಸೂರ್ಯಾದಿಗಳನ್ನು ಅಂತಹ ಸೃಷ್ಟಿವಾಕ್ಯಗಳು ಪ್ರತಿಪಾದನೆ ಮಾಡಿದರೆ, ಅನಿತ್ಯವಾದ ಅರ್ಥದ ಸಂಬಂಧವನ್ನು ವೇದರೂಪವಾದ ಶಬ್ದಕ್ಕೆ ಹೇಳಿದಂತಾಗುತ್ತದೆ. ಇದರಿಂದ ಅಪ್ರಾಮಾಣ್ಯದೋಷಕ್ಕೆ ಆಸ್ಪದವಿದೆ. ಹೀಗೆ ಸ್ವಾಪ್ರಾಮಾಣ್ಯ (ವೇದಕ್ಕೆ ಅಪ್ರಮಾಣ್ಯ) ಆಪಾದಕವಾದ ದೇವತೆಗಳ ಉತ್ಪತ್ತಿಪರವಾಗಿ ಸೃಷ್ಟಿವಾಕ್ಯಗಳಿಗೆ ಅರ್ಥವನ್ನು ಹೇಳಬಾರದು. ಹೊರತಾಗಿ, ಪ್ರಳಯಕಾಲದಲ್ಲಿ ಸೂರ್ಯಾದಿಗಳು ನಿಯಮನಾದಿ ವ್ಯಾಪಾರದಿಂದ ವಿರಮಿಸಿದ್ದರು. ಪುನಃ ಸೃಷ್ಟಿಯು ಪ್ರಾರಂಭವಾದಾಗ ತಮ್ಮ ತಮ್ಮ ವ್ಯಾಪಾರದಲ್ಲಿ ತೊಡಗಿದರು ಎಂದಷ್ಟೇ ಅರ್ಥೈಸಬೇಕು.

**नाप्यसाम्यम् । इन्द्रादिसूक्तस्थानामिन्द्रादिनाम्नां सहस्राक्षत्ववज्रबाहुत्वादि-रूपाणां च विरोधात् ।**

ಹಿಂದಿನ ಕಲ್ಪದಲ್ಲಿರುವ ಇಂದ್ರಾದಿದೇವತೆಗಳು ಬೇರೆ-ಬೇರೆ ಹೆಸರು ಮತ್ತು ರೂಪಗಳನ್ನು ಹೊಂದಿರುತ್ತಾರೆಂದು ಹೇಳಬಹುದಲ್ಲವೇ?

ಹಾಗಾದರೆ ಇಂದ್ರಾದಿಸೂಕ್ತಗಳಲ್ಲಿರುವ ಇಂದ್ರ ಮೊದಲಾದ ನಾಮಗಳಿಗೆ ಸಹಸ್ರಾಕ್ಷ, ವಜ್ರಬಾಹುತ್ವ ಮೊದಲಾದ ರೂಪಗಳಿಗೆ ವಿರೋಧ ಬರುತ್ತದೆ. ಅಂದರೆ ಬೇರೆ-ಬೇರೆ ಹೆಸರು ರೂಪವುಳ್ಳವರು ಆಯಾ ಪದವಿಗಳಲ್ಲಿ ಬರುವುದಾದರೆ, ಪ್ರತೀಕಲ್ಪದಲ್ಲಿಯೂ ಒಂದೇರೀತಿಯಾಗಿರುವ ಇಂದ್ರ ಮೊದಲಾದ ಶಬ್ದಗಳು ಯಾರನ್ನು ಪ್ರತಿಪಾದಿಸುತ್ತಿದೆ ಎಂದೇ ತಿಳಿಯುವುದಿಲ್ಲ.

**तस्मात्तत्तत्पदादिविशिष्टा देवा अनादिनित्या इति द्वितीय एवाङ्गीकार्यः ।**

ಆದ್ದರಿಂದ ಆಯಾ ಪದವಿಗಳಿಂದ ವಿಶಿಷ್ಟರಾದ ದೇವತೆಗಳು ಅನಾದಿನಿತ್ಯರಾಗಿದ್ದಾರೆಂದೇ ಒಪ್ಪಬೇಕು. ಹಿಂದೆ 'ಪೂರ್ವಪಕ್ಷಸ್ತು' ಎಂಬಲ್ಲಿ ಪ್ರಶ್ನಿಸಿದ ಎರಡು ಪ್ರಶ್ನೆಗಳಲ್ಲಿ ದೇವತೆಗಳು ಅನಾದಿನಿತ್ಯರೆಂದೇ ಒಪ್ಪಬೇಕು.

**तथाच न देवानामधिकारः । स्वपदेभ्यो मोक्षस्यातिशयितत्वेऽपि स्वपदानां नित्यत्वेन स्वेषां मोक्षाभावनिश्चयेन तत्रार्थित्वायोगात् ।**

ಆದ್ದರಿಂದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲ. ವಾಸ್ತವಿಕವಾಗಿ ತಮ್ಮ ಸ್ಥಾನಕ್ಕಿಂತಲೂ ಮೋಕ್ಷದಲ್ಲಿ ಅತಿಶಯವಿರುತ್ತದೆ. ಆದರೂ ತಮ್ಮ ಸ್ಥಾನವು ನಿತ್ಯವಾದ್ದರಿಂದ ಅವರಿಗೆ ಮೋಕ್ಷವೇ ಇರುವುದಿಲ್ಲವೆಂದು ಖಚಿತವಾಗಿದೆ. ಇಂತಹ ಮೋಕ್ಷದಲ್ಲಿ ಪುನಃ ದೇವತೆಗಳಿಗೆ ಅರ್ಥಿತ್ವವು ಕೂಡುವುದಿಲ್ಲ.

**किञ्च न तावद्देवानां सर्वविद्याधिकारः । वसुत्वादिफलकमधुविद्यादिषु वस्वादीनामधिकारायोगात् ।**

ಮತ್ತು ದೇವತೆಗಳಿಗೆ ಸಕಲವಿದ್ಯೆಗಳಲ್ಲಿ ಅಧಿಕಾರವೂ ಸಹ ಇರುವುದಿಲ್ಲ. ಏಕೆಂದರೆ ಮಧುವಿದ್ಯಾದಿಗಳಲ್ಲಿ ವಸು ಮೊದಲಾದ ದೇವತಾಪದವಿಗಳನ್ನು ಫಲವನ್ನಾಗಿ ಹೇಳಲಾಗಿದೆ. ಯಾರಿಗೆ ಈಗಾಗಲೇ ವಸು ಮೊದಲಾದ ಪದವಿಗಳು ದೊರೆತಿವೆಯೋ, ಅಂತಹವರು ಪುನಃ ಮಧುವಿದ್ಯೆ ಮೊದಲಾದವುಗಳನ್ನು ಅಭ್ಯಾಸ ಮಾಡಬೇಕಾಗಿಲ್ಲ.

**नापि मोक्षफलकासु । "नैव देवपदं प्राप्ता ब्रह्मदर्शनवर्जिताः" इत्यादिवाक्यैर्देवानां ब्रह्मज्ञानित्वात्तज्ज्ञानार्थं विचारेऽनधिकारादिति ।**

ಮೋಕ್ಷಫಲಕ್ಕೋಸ್ಕರ ಮಧುವಿದ್ಯಾದಿಗಳನ್ನು ಅಧ್ಯಯನ ಮಾಡಬೇಕು. ಇದೂ ಸಹ ಕೂಡುವುದಿಲ್ಲ. ಏಕೆಂದರೆ 'ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ' ಬ್ರಹ್ಮಜ್ಞಾನವಿಲ್ಲದವರು ದೇವತಾಪದವಿಯನ್ನು ಹೊಂದಲಾರರು. ಇತ್ಯಾದಿ ವಾಕ್ಯಗಳಿಂದ ಸಕಲದೇವತೆಗಳು ಬ್ರಹ್ಮಜ್ಞಾನಿಗಳೆಂದು

ತೀರ್ಮಾನವಾಗಿದೆ. ಪುನಃ ಬ್ರಹ್ಮಜ್ಞಾನಕ್ಕೋಸ್ಕರ ಬ್ರಹ್ಮವಿದ್ಯೆಯಲ್ಲಿ ತೊಡಗುವುದು ತಪ್ಪಾಗುತ್ತದೆ. ಆದ್ದರಿಂದ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆಂದು ಸಿದ್ಧವಾಯಿತು.

**प्रकाशः –**

''अतीतदेवता'' इत्यादिटीकारीत्यैकं समाधिमुक्त्वा ''ननु कथं देवताप्रवाहनित्यत्वे समाननामरूपत्वे नित्यवेदप्रामाण्योपपत्तिः । तद्वाचित्वेनेति चेन्न । तस्यैवासम्भवात्'' इत्यादिटीकोक्तरीत्या पक्षान्तरमाह – **यद्वेति** ।।

ವಿವರಣೆ - ಮೂರನೆಯ ಸೂತ್ರವು ಸಾರ್ಥಕವೆನ್ನಲು 'ಅತೀತ ದೇವತಾ' ಇತ್ಯಾದಿ ಟೀಕೆಯ ಪ್ರಕಾರ ಒಂದು ಬಗ್ಗೆಯ ಸಮಾಧಾನವನ್ನು ಹೇಳಿದರು. ಈಗ 'ನನು ಕಥಂ ದೇವತಾಪ್ರವಾಹನಿತ್ಯತ್ವೇ ಸಮಾನನಾಮರೂಪತ್ವೇ ನಿತ್ಯವೇದಪ್ರಾಮಾಣ್ಯೋಪಪತ್ತಿಃ । ತದ್ವಾಚಿತ್ವೇನೇತಿ ಚೇನ್ನ । ತಸ್ಯೈವಾಸಂಭವಾತ್' ದೇವತಾಪ್ರವಾಹವು ನಿತ್ಯವಾದರೆ ಸಮಾನವಾದ ನಾಮರೂಪಗಳನ್ನು ಹೊಂದಿರುವುದಾದರೆ, ನಿತ್ಯವಾದ ವೇದಕ್ಕೆ ಪ್ರಾಮಾಣ್ಯವು ಹೇಗೆ ಕೂಡುತ್ತದೆ. ಅಂತಹ ದೇವತೆಗಳನ್ನು ಪ್ರತಿಪಾದನೆ ಮಾಡುವುದರಿಂದ ಎಂದು ಹೇಳಬಾರದು. ಅದೇ ಕೂಡುವುದಿಲ್ಲ. ಇತ್ಯಾದಿ ಟೀಕೆಯ ಪ್ರಕಾರ ಮತ್ತೊಂದು ಪಕ್ಷವನ್ನು 'ಯದ್ವಾ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – सूक्तादिकं किमेकेन्द्रपरमुतानेकेन्द्रपरम् । नाद्य इत्याह – **न प्रतिनियतेति** ।। **एकस्येति** ।। सूर्याचन्द्रमसावित्याद्युत्पत्तिश्रुतिविरोधादिति भावः । द्वितीयमाशङ्क्याह – **नचेति** ।।

ಇಂದ್ರಾದಿಸೂಕ್ತಗಳೆಲ್ಲವೂ ಒಬ್ಬನೇ ಇಂದ್ರನನ್ನು ಪ್ರತಿಪಾದನೆ ಮಾಡುತ್ತದೋ, ಅಥವಾ ಅನೇಕ ಇಂದ್ರರನ್ನು ಪ್ರತಿಪಾದನೆ ಮಾಡುತ್ತದೋ, ಮೊದಲನೆಯ ಪಕ್ಷವನ್ನು 'ನ ಪ್ರತಿನಿಯತ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡಿದ್ದಾರೆ. 'ಏಕಸ್ಯ' ಎಂದರೆ 'ಸೂರ್ಯಾಚಂದ್ರಮಸೌ' ಇತ್ಯಾದಿ ಉತ್ಪತ್ತಿ ಶ್ರುತಿಯ ವಿರೋಧ ಬರುತ್ತದೆಂದು ಅಭಿಪ್ರಾಯ. ಎರಡನೆಯ ಪಕ್ಷವನ್ನು ಶಂಕಿಸಿ 'ನಚ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ.

**प्रकाशः** – टीका त्वभ्युपेत्यवादेन नेयेति भावः । ननु नैवं शङ्कायुक्ता । एतत्समाधानस्य भाष्यादावनुपलब्धेरित्यत आह – **अत एवेति** ।। पञ्चमसूत्रव्यावर्त्यशङ्कामाह – **समाहितेऽपीति** ।।

ಯಾವಾಗ ಯಾವ ಇಂದ್ರನಿರುತ್ತಾನೋ, ಕರ್ಮವೂ ಸಹ ಅವನನ್ನೇ ಉದ್ದೇಶಿಸಿರುತ್ತದೆ ಎಂದು ಸಮಾಧಾನವನ್ನು ನೀಡಿದಂತೆ ಯಾವಾಗ ಯಾವ ಇಂದ್ರನಿರುತ್ತಾನೋ, ಶಬ್ದವೂ ಸಹ ಅವನನ್ನೇ ಪ್ರತಿಪಾದನೆ

ಮಾಡುತ್ತದೆಂದು ಗ್ರಂಥದಲ್ಲಿ ಹೇಳಿದ್ದಾರೆ. ಹಾಗಾದರೆ ಟೀಕೆಯಲ್ಲಿ ಈ ಪಕ್ಷವನ್ನು ಹೇಳಿಲ್ಲವಲ್ಲ ಎಂದು ಪ್ರಶ್ನಿಸಬಾರದು. ಅಂಗೀಕಾರವಾದ ಮಾಡಿ ಟೀಕೆಯ ಮಾತು ಹೊರಟಿದೆ ಎಂದು ತಿಳಿಯಬೇಕು.

ಈ ಶಂಕೆಯು ತಪ್ಪು. ಭಾಷ್ಯಾದಿಗಳಲ್ಲಿ ಈ ಸಮಾಧಾನವನ್ನು ಹೇಳಿದ್ದು ಕಾಣಿಸುವುದೇ ಇಲ್ಲವಲ್ಲ ಎಂಬ ಪ್ರಶ್ನೆಗೆ 'ಅತ ಏವ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. ಐದನೇ ಸೂತ್ರದಿಂದ ವ್ಯಾವರ್ತ್ಯವಾದ ಶಂಕೆಯನ್ನು 'ಸಮಾಹಿತೇಽಪಿ' ಇತ್ಯಾದಿ ಗ್ರಂಥವು ನಿರೂಪಣೆ ಮಾಡುತ್ತಿದೆ.

**प्रकाशः** – किं नाम रूपादेस्साम्यमुतासाम्यमिति कल्पौ हृदि कृत्वाऽऽद्ये आह – **नेति** ।। मानमाशङ्क्य ''एतच्छ्रुतेस्तत्स्वरूपकल्पनानियमपरत्वमपि सम्भवति'' इति टीकां विवृण्वन् तस्यान्यथासिद्धिमाह – **सूर्येति** ।।

ನಾಮ ಹಾಗೂ ರೂಪಗಳಿಗೆ ಸಾಮ್ಯವಿದೆಯೋ, ಇಲ್ಲವೋ, ಎಂದು ಪ್ರಶ್ನಿಸಿ ಸಮಾನತ್ವವಿದೆಯೆಂಬ ಪಕ್ಷದಲ್ಲಿ 'ನ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. 'ಧಾತಾ ಯಥಾ ಪೂರ್ವಮ್ ಅಕಲ್ಪಯತ್' ಎಂಬ ಪ್ರಮಾಣವು ಇದೆಯಲ್ಲವೇ? ಎಂದರೆ 'ಏತತ್ ಶ್ರುತೇಃ ತತ್ ಸ್ವರೂಪಕಲ್ಪನಾನಿಯಮಪರತ್ವಮಪಿ ಸಂಭವತಿ' ಎಂಬ ಟೀಕೆಯನ್ನು ವಿವರಿಸುತ್ತಾ ಅನ್ಯಥಾಶುದ್ಧಿಯನ್ನು ಪ್ರಮಾಣಕ್ಕೆ ಹೇಳುತ್ತಿದ್ದಾರೆ. ಅಂದರೆ ವ್ಯಕ್ತಿಭೇದವಿಲ್ಲದಿದ್ದರೂ ಅದೇ ವ್ಯಕ್ತಿಗೆ ಪುನಃ ಪುನಃ ಅದೇ ಕೆಲಸವನ್ನು ಕೊಡುತ್ತಿದ್ದಾರೆಂದು ಅರ್ಥೈಸಬೇಕು.

**प्रकाशः** – अन्यपरत्वात् अभिव्यक्तिपरत्वादित्यर्थः । न ह्यनुपपन्ने तात्पर्यमस्तीति भावः ।

'ಅನ್ಯಪರತ್ವಾತ್' ಎಂದರೆ ಅಭಿವ್ಯಕ್ತಿಪರವಾಗಿರುವುದರಿಂದ ಎಂದರ್ಥ. ಅನುಪಪನ್ನವಾದ ಅರ್ಥದಲ್ಲಿ ತಾತ್ಪರ್ಯವನ್ನು ಹೇಳುವುದು ಸರಿಯಲ್ಲವೆಂದು ಅಭಿಪ್ರಾಯ.

**प्रकाशः** – द्वितीयं निराह – **नापीति** ।। देवा उत्पत्तिविनाशवन्त उतानादिनित्या इति विकल्पे आद्यमियता निराकृत्य द्वितीये पर्यवसाययति – **तस्मादिति** ।।

ಎರಡನೆಯ ಪಕ್ಷವನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ದೇವತೆಗಳು ಉತ್ಪತ್ತಿವಿನಾಶವುಳ್ಳವರೋ ಅಥವಾ ಅನಾದಿನಿತ್ಯರೋ ಎಂದು ಪ್ರಾರಂಭದಲ್ಲಿ ಮಾಡಿದ ವಿಕಲ್ಪಗಳಲ್ಲಿ ಮೊದಲನೆಯ ಪಕ್ಷವನ್ನು ಇಲ್ಲಿಯತನಕ ನಿರಾಕರಣೆ ಮಾಡಿ, ಎರಡನೆಯ ಪಕ್ಷವನ್ನು 'ತಸ್ಮಾತ್' ಇತ್ಯಾದಿ ಗ್ರಂಥದಿಂದ ಪರ್ಯವಸಾನ ಮಾಡುತ್ತಿದ್ದಾರೆ.

**प्रकाशः** – नामादिभेदेन शब्दकर्मविरोधादित्यर्थः । अर्थित्वाभावे तस्य हेतुतां दर्शयति – **स्वपदेति** ।। मध्वादिसूत्राभिप्रेतपूर्वपक्षटीकां व्यनक्ति – **किञ्चेति** ।।

'ತಸ್ಮಾತ್' ಎಂದರೆ ನಾಮಾದಿಭೇದದಿಂದ ಶಬ್ದ ಹಾಗೂ ಕರ್ಮಗಳ ವಿರೋಧಬರುವುದರಿಂದ ಎಂದರ್ಥ. ದೇವತೆಗಳಿಗೆ ಅರ್ಥಿತ್ವವಿಲ್ಲವೆನ್ನಲು ಕಾರಣವನ್ನು 'ಸ್ವಪದ' ಇತ್ಯಾದಿ ಗ್ರಂಥದಿಂದ ನೀಡಿದ್ದಾರೆ.

ದೇವತಾಧಿಕರಣ (೧-೩-೮)

ಮಧ್ವಾದಿಸೂತ್ರದಿಂದ ಅಭಿಪ್ರೇತವಾದ ಪೂರ್ವಪಕ್ಷ ಟೀಕೆಯನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः – द्विविधा हि वेदविद्याः । मुक्तिफलकास्तदितरफलका इति । तत्र न** काप्यधिकार इत्याह – **न तावदित्यादिना ।।**

ವೇದವಿದ್ಯೆಗಳು ಎರಡು ವಿಧವಾಗಿವೆ. ಮುಕ್ತಿಫಲಕ ಹಾಗೂ ಅನ್ಯಫಲಕವೆಂದು. ಈ ಎರಡೂ ಬಗೆಯ ವಿದ್ಯೆಗಳಲ್ಲಿ ಯಾವುದರಲ್ಲೂ ಅಧಿಕಾರವಿಲ್ಲವೆಂದು 'ನತಾವತ್' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**प्रकाशः – "स य एतदेवममृतं वेद वसूनामेवैको भूत्वाऽग्निनैव मुखेनैतदेव दृष्ट्वा तृप्यति" इत्यादिना मध्वादिविद्यासु वस्वादिपदानामुपासनाप्राप्यफलत्व-श्रवणादिति भावः ।**

'ಸಯ ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾಽಗ್ನಿನೈವ ಮುಖೇನೈತದೇವ ದೃಷ್ಟ್ವಾ ತೃಪ್ಯತಿ' ಇತ್ಯಾದಿ ಮಧುವಿದ್ಯೆಗಳಲ್ಲಿ ವಸ್ವಾದಿಪದಗಳನ್ನೇ ಫಲವನ್ನಾಗಿ ಹೇಳಿದ್ದಾರೆ. ಉಪಾಸನಾದಿಂದ ಪ್ರಾಪ್ಯವಾದ ಫಲವು ಈ ವಾಕ್ಯದಲ್ಲಿ ಶ್ರುತವಾದ್ದರಿಂದ, ದೇವತೆಗಳಿಗೆ ಈಗಾಗಲೇ ಅಂತಹ ಫಲವು ಸಿಕ್ಕಿರುವುದರಿಂದ ಪುನಃ ಮಧ್ವಾದಿವಿದ್ಯೆಗಳ ಅಧ್ಯಯನದಲ್ಲಿ ದೇವತೆಗಳು ತೊಡಗುವುದಿಲ್ಲ.

**गुरुराजीयम् –** ननूक्तरीत्या सूत्रवैयर्थ्ये शङ्किते तत्सार्थक्यमकृत्वैवाकाङ्क्षाक्रमेण सङ्गतिकथनमयुक्तम् । पुरुषोत्प्रेक्षानिबन्धनायाः सङ्गतेरन्यथापि कर्तुं शक्यत्वादित्यरुच्या पक्षान्तरमाह – **यद्वेति ।।** इन्द्रादिसूक्तादिकं किमेकमेवेन्द्रं सदा प्रतिपादयत्युत कदाचित्कञ्चित् । नाद्य इत्याह – **न प्रतिनियतैकेति ।।** ननु चैकस्य सर्वदाऽसत्त्वेऽपि सूक्तं तत्प्रतिपादकमेवेत्यत आह – **इन्द्राद्यन्तरस्येति ।।** तच्च सिद्धान्तिनोऽनिष्टम् । अनेकेषामिन्द्रपदप्राप्तेस्तेनाभ्युपगमात् । द्वितीयं शङ्कते – **न चेति ।।** नन्वेवमधिकाशङ्कया पूर्वपक्षश्चेत्कथं तन्निरासः । सूत्रे तन्निरासस्याप्रतीतेरित्यत आह – **अत एवेति ।।** एवमधिकाशङ्कया पूर्वपक्षस्य प्रवृत्तत्वादेवेत्यर्थः ।। **विरोधादिति ।।** तथाच सहस्राक्षत्वादिप्रतिपादकागमस्या-प्रामाण्यमिति भावः ।



'ವಿರೋಧಃ ಕರ್ಮಣೀತಿ ಚೇನ್ನ ಅನೇಕಪ್ರತಿಪತ್ತೇರ್ದರ್ಶನಾತ್' ಎಂಬುದು ಎರಡನೆಯ ಸೂತ್ರ. ಈ ಸೂತ್ರದಲ್ಲಿ ದೇವತೆಗಳು ತಮ್ಮ ಸ್ಥಾನಕ್ಕೆ ಬರುವ ಮೊದಲು ಆಯಾ ಪದವಿಯು ಶೂನ್ಯವಾಗಿರುವುದಿಲ್ಲ. ಮತ್ತೊಬ್ಬ ದೇವತೆ ಅಲ್ಲಿರುತ್ತಾನೆ. ಹೀಗೆ ದೇವತಾಪ್ರವಾಹವು ಅನಾದಿಯಾದ್ದರಿಂದ, ತದುದ್ದೇಶಕವಾದ ಕರ್ಮಗಳು ಎಂದೂ ಸಹ ನಿಷ್ಫಲಗಳಲ್ಲ ಎಂದು ಸಮರ್ಥಿಸಲಾಯಿತು. ಹೀಗೆ ಕರ್ಮವಿರೋಧವನ್ನಷ್ಟೇ ಎರಡನೆಯ ಸೂತ್ರವು ಪರಿಹಾರ ಮಾಡಿದೆ ಹೊರತು, ಶಬ್ದವಿರೋಧವನ್ನು ಪರಿಹಾರ ಮಾಡಿಲ್ಲ. ಶಬ್ದವಿರೋಧವನ್ನೂ ಸಹ ಕರ್ಮವಿರೋಧಪರಿಹಾರದಿಂದಲೇ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ದೇವತೆಗಳಿಗೆ ತಮ್ಮ ಸ್ಥಾನವು ಹೇಗೆ ಅನಿತ್ಯವಾಗಿದೆಯೋ, ಅದರಂತೆ ಕರ್ಮಗಳೂ ಸಹ ಸ್ವರೂಪತಃ ಅನಿತ್ಯವಾಗಿವೆ. ಆದರೆ ದೇವತಾಪ್ರವಾಹವು ಅನಾದಿನಿತ್ಯವಾಗಿದೆ. ಅದರಂತೆ ಕರ್ಮಪ್ರವಾಹವೂ ಸಹ ಅನಾದಿನಿತ್ಯವಾಗಿದೆ. ಇದರಂತೆ ಶಬ್ದದಲ್ಲಿ ಹೇಳಲಾಗದು. ವೇದರೂಪವಾದ ಶಬ್ದವು ಸ್ವರೂಪತಃ ನಿತ್ಯವಾಗಿದೆ. ಪ್ರವಾಹತಃ ನಿತ್ಯತ್ವವನ್ನು ಕರ್ಮದ ವಿಷಯದಲ್ಲಿ ಹೇಳಬಹುದೇ ಹೊರತು, ಶಬ್ದದ ವಿಷಯದಲ್ಲಿ ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಹೇಳಿದಲ್ಲಿ ಪುರಾಣಾದಿಗಳಿಗೂ ವೇದಕ್ಕೂ ಪೌರುಷೇಯತ್ವ, ಅಪೌರುಷೇಯತ್ವ ಎಂಬ ವ್ಯತ್ಯಾಸವನ್ನೇ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವರೂಪತಃ ನಿತ್ಯವಾದ ಇಂದ್ರಾದಿಸೂಕ್ತಗಳು ಒಬ್ಬನೇ ಇಂದ್ರನನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಪ್ರತಿಕಲ್ಪಗಳಲ್ಲಿಯೂ ಒಬ್ಬನೇ ಇಂದ್ರನು ಇರುವುದಿಲ್ಲವೆಂದು ಸಿದ್ಧವಾಗಿದೆ. ಹಾಗಾಗಿ ಕರ್ಮವಿರೋಧವು ಪರಿಹಾರವಾದರೂ ಶಬ್ದವಿರೋಧವು ಹಾಗೆಯೇ ಉಳಿಯುತ್ತದೆ.

ಇದರ ಪರಿಹಾರಕ್ಕಾಗಿ 'ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬ ಮೂರನೆಯ ಸೂತ್ರವು ಹೊರಟಿದೆ. ಇಂದ್ರಾದಿಸೂಕ್ತಗಳಿಗೆ ಇಂದ್ರಾದಿ ಪದವಿಯಲ್ಲಿರುವ ವ್ಯಕ್ತಿಯಲ್ಲಷ್ಟೇ ತಾತ್ಪರ್ಯವಿರುತ್ತದೆ. ಯಾವರೀತಿಯಾಗಿ ಮಂತ್ರಿ ಎಂಬ ಒಂದೇ ಪದವು ಬೇರೆ ಬೇರೆ ಕಾಲದಲ್ಲಿ ಆ ಮಂತ್ರಿಸ್ಥಾನವನ್ನು ಹೊಂದುವ ಎಲ್ಲಾ ವ್ಯಕ್ತಿಗಳನ್ನು ಪ್ರತಿಪಾದನೆ ಮಾಡುತ್ತವೋ, ಅದರಂತೆ ಇಂದ್ರಾದಿಸೂಕ್ತಗಳು ಆಯಾ ಪದವಿಯಲ್ಲಿ ಬರುವ ಇಂದ್ರಾದಿದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆ. ಹಾಗಾಗಿ ಮೂರನೆಯ ಸೂತ್ರ ಹೊರಟಿದ್ದು ಸಾರ್ಥಕ. ಎರಡನೆಯ ಸೂತ್ರದಿಂದಲೇ ಇದು ಗತಾರ್ಥವಾಗುವುದಿಲ್ಲ.

ದೇವತೆಗಳಿಗೆ ನಿತ್ಯತ್ವವನ್ನು ಹೇಳುವುದು ಅನಿವಾರ್ಯ. ಏಕೆಂದರೆ ವೇದದಲ್ಲಿ ಒಂದೇ ಬಗೆಯ ನಾಮರೂಪಗಳಿಂದ ಇಂದ್ರಾದಿಸೂಕ್ತಗಳು, ಇಂದ್ರಾದಿದೇವತೆಗಳನ್ನು ಪ್ರತಿಪಾದಿಸುತ್ತಿವೆ. ಬೇರೆ ಬೇರೆ ಕಲ್ಪದಲ್ಲಿರುವ ಆಯಾದೇವತೆಗಳಿಗೆ ಒಂದೇ ರೂಪ ಹಾಗೂ ನಾಮಗಳು ಬರಲು ಸಾಧ್ಯವಿಲ್ಲ. ಆದ್ದರಿಂದ ದೇವತೆಗಳಿಗೆ ತಮ್ಮ ಪದವಿಯು ನಿತ್ಯವೆಂದು ಹೇಳಬೇಕು. ಸೂರ್ಯಾದಿ ದೇವತೆಗಳು ಪರಮಾತ್ಮನಿಂದ ಹುಟ್ಟಿದ್ದಾರೆ ಇತ್ಯಾದಿಯಾಗಿ ಕೆಲವು ಶ್ರುತಿಗಳು ಪ್ರತಿಪಾದನೆ ಮಾಡುತ್ತಿರಬಹುದು. ಆದರೆ ಪ್ರಳಯಕಾಲದಲ್ಲಿ ತಮ್ಮ ವ್ಯಾಪಾರದಿಂದ ವಿಶ್ರಮಿಸಿದ ಸೂರ್ಯಾದಿದೇವತೆಗಳಿಗೆ ಪುನಃ ಪರಮಾತ್ಮನು ಸೃಷ್ಟಿಕಾಲದಲ್ಲಿ ಆಯಾವ್ಯಾಪಾರದಲ್ಲಿ ತೊಡಗುವಂತೆ ಪ್ರೇರಣೆ ಮಾಡಿದನೆಂದಷ್ಟೇ ಆ ಶ್ರುತಿಯ ಅಭಿಪ್ರಾಯವಾಗಿರುತ್ತದೆ. ಆದ್ದರಿಂದ ಸಕಲ ದೇವತೆಗಳೂ ಆಯಾ ಪದವಿಗಳಿಂದ ವಿಶಿಷ್ಟರಾಗಿ ಅನಾದಿನಿತ್ಯರಾಗಿದ್ದಾರೆಂದು ಅನಿವಾರ್ಯವಾಗಿ ಒಪ್ಪಬೇಕು. ದೇವತಾಪದವಿಯು ನಿತ್ಯವಾದ್ದರಿಂದ ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರಬೇಕಾಗಿರುವುದಿಲ್ಲ. ತಮ್ಮ ಪದವಿಯು ನಿತ್ಯವಾದ ಮೇಲೆ ಮೋಕ್ಷವು

ದೊರೆಯುವುದಿಲ್ಲವೆಂದು ಖಚಿತವಾಗಿರುತ್ತದೆ. ಹೀಗಿರುವಾಗ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ದೇವತೆಗಳು ಹೊಂದುವುದಿಲ್ಲ.

ಮತ್ತು ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವೂ ಸಹ ಇಲ್ಲ. ಏಕೆಂದರೆ 'ಏತದೇವಾಮೃತಂ ವೇದ ವಸೂನಾಮೇವೈಕೋ ಭೂತ್ವಾ' ಎಂಬುದಾಗಿ ಯಾರು ಬ್ರಹ್ಮವಿದ್ಯೆಯನ್ನು ಅಭ್ಯಾಸ ಮಾಡುತ್ತಾರೋ ಅವರಿಗೆ ವಸು ಮೊದಲಾದ ಪದವಿಗಳು ದೊರೆಯುತ್ತವೆಂದು ಫಲವನ್ನು ಶ್ರುತಿಯು ಹೇಳಿದೆ. ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ದೊರೆತದ್ದರಿಂದ ಪುನಃ ಅದೇ ಫಲಕ್ಕೋಸ್ಕರ ಅವರು ಆಯಾವಿದ್ಯೆಗಳನ್ನು ಅಭ್ಯಾಸ ಮಾಡುವುದು ಕೂಡುವುದಿಲ್ಲ. ಇನ್ನು ಮೋಕ್ಷಫಲಕ್ಕೋಸ್ಕರ ಮಧುವಿದ್ಯಾದಿಗಳನ್ನು ಅಭ್ಯಾಸ ಮಾಡಬೇಕು. ಆದರೆ 'ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ' ಇತ್ಯಾದಿ ವಾಕ್ಯಗಳಿಂದ ದೇವತೆಗಳು ಈಗಾಗಲೇ ಬ್ರಹ್ಮಜ್ಞಾನಿಗಳಾಗಿರುತ್ತಾರೆ. ಹೀಗಿರುವಾಗ ಪುನಃ ಬ್ರಹ್ಮಜ್ಞಾನಕ್ಕೋಸ್ಕರ ಬ್ರಹ್ಮವಿದ್ಯೆಯಲ್ಲಿ ತೊಡಗುವುದು ಸರ್ವಥಾ ಕೂಡುವುದಿಲ್ಲ.

ಅನುಮಾನಸ್ವರೂಪಗಳನ್ನು ಹೀಗೆ ತಿಳಿಯಬೇಕು -

೧. ದೇವಾಃ ವೇದವಿದ್ಯಾದಿಷು ಅನಧಿಕಾರಿಣಃ ತತ್ ಫಲೇ ಮೋಕ್ಷೇ ಅರ್ಥಿತಾಶೂನ್ಯತ್ವಾತ್.

೨. ದೇವಾಃ ಅರ್ಥಿತಾಶೂನ್ಯಾಃ ಮೋಕ್ಷಾಭಾವನಿಶ್ಚಯವತ್ವಾತ್.

೩. ದೇವಾಃ ಮೋಕ್ಷಾಭಾವನಿಶ್ಚಯವಂತಃ ಪದವೀವಿಶಿಷ್ಟಾನಾಂ ತೇಷಾಂ ಅನಾದಿನಿತ್ಯತ್ವಾತ್.

ಇತ್ಯಾದಿ ಅನುಮಾನಗಳಿಂದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು. ಏಕೆಂದರೆ ಬ್ರಹ್ಮವಿದ್ಯೆಯ ಫಲವಾದ ಮೋಕ್ಷದಲ್ಲಿ ಅರ್ಥಿತ್ವವಿಲ್ಲವೆಂದು, ಮೋಕ್ಷವಿಲ್ಲವೆಂದು ನಿಶ್ಚಯವಾಗಿರುವುದರಿಂದ ಅರ್ಥಿತ್ವವಿಲ್ಲವೆಂದು ತಮ್ಮ ಪದವಿಗಳು ಅನಾದಿನಿತ್ಯವಾದ್ದರಿಂದ ಮೋಕ್ಷವಿಲ್ಲವೆಂದು ನಿರ್ಣಯವಾಗುತ್ತದೆ.

• • • • •

## ಸಿದ್ಧಾಂತ -
## ದೇವತೆಗಳಿಗೆ ವೇದವಿದ್ಯಾಧಿಕಾರವಿದೆ

### तात्पर्यचन्द्रिका

सिद्धान्तस्तु ।।

न देवानामसामर्थ्यं वर्तते तिर्यगादिवत् ।
न चापि प्रतिषेधोऽस्ति शूद्रादेरिव कुत्रचित् ।। १ ।।

ಪರಿಪೂರ್ಣಚಂದ್ರಿಕಾ

ಅನುವಾದ - ಸಿದ್ಧಾಂತ ಹೀಗಿದೆ -

ನ ದೇವಾನಾಮಸಾಮರ್ಥ್ಯಂ ವರ್ತತೇ ತಿರ್ಯಗಾದಿವತ್ ।
ನ ಚಾಪಿ ಪ್ರತಿಷೇಧೋಽಸ್ತಿ ಶೂದ್ರದೇರಿವ ಕುತ್ರಚಿತ್ ॥೧॥

ಈಗಿರುವ ಅನೇಕ ಪಶುಪಕ್ಷಿಗಳಲ್ಲಿ ವೇದವನ್ನು ಓದುವಂತಹ ಸಾಮರ್ಥ್ಯವಿರುವುದಿಲ್ಲ. ಅದರಂತೆ ದೇವತೆಗಳಿಗೆ ಸಾಮರ್ಥ್ಯವಿಲ್ಲವೆಂದು ಹೇಳಲಾಗದು. ವೇದವಿದ್ಯೆಯನ್ನು ಅಭ್ಯಾಸ ಮಾಡಲು ದೇವತೆಗಳು ಸಮರ್ಥರೇ ಆಗಿದ್ದಾರೆ. ಮತ್ತು ಶೂದ್ರರು, ಸ್ತ್ರೀಯರು, ಬ್ರಹ್ಮಬಂಧುಗಳು ವೇದವನ್ನು ಓದಬಾರದೆಂದು ಹೇಗೆ ನಿಷೇಧವಚನವಿದೆಯೋ, ಅದರಂತೆ ದೇವತೆಗಳು ವೇದವನ್ನು ಓದಬಾರದೆನ್ನಲು ಯಾವುದೇ ನಿಷೇಧವಾಕ್ಯಗಳಿರುವುದಿಲ್ಲ.

**स्वपदानामनित्यत्वात् मुक्तावस्त्यर्थिताऽपि च ।**
**प्रवाहानादिनित्याश्च तुल्यरूपादियोगिनः ।। २ ।।**

ಸ್ವಪದಾನಾಮನಿತ್ಯತ್ವಾತ್ ಮುಕ್ತಾವಸ್ತ್ಯರ್ಥಿತಾಽಪಿ ಚ ।
ಪ್ರವಾಹಾನಾದಿನಿತ್ಯಾಶ್ಚ ತುಲ್ಯರೂಪಾದಿಯೋಗಿನಃ ॥೨॥

ತಮ್ಮ ಪದವಿಗಳೆಲ್ಲವೂ ಅನಿತ್ಯವಾದುದು. ಮುಂದೆ ಮೋಕ್ಷವನ್ನು ದೇವತೆಗಳು ಪಡೆಯಲೇ ಬೇಕು. ಆದ್ದರಿಂದ ಮುಕ್ತಿಯ ವಿಷಯದಲ್ಲಿ ಅರ್ಥಿತ್ವವೂ ಸಹ ದೇವತೆಗಳಿಗೆ ಇದ್ದೇ ಇರುತ್ತದೆ. ಹಾಗಾದರೆ ದೇವತೆಗಳು ಅನಿತ್ಯವಾದರೆ, ಶಬ್ದವಿರೋಧ ಹಾಗೂ ಕರ್ಮವಿರೋಧಗಳು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಹಿಂದಿನ-ಮುಂದಿನ ಕಲ್ಪಗಳಲ್ಲಿರುವ ಎಲ್ಲ ದೇವತೆಗಳ ನಾಮ ಹಾಗೂ ರೂಪಗಳು ಒಂದೇ ರೀತಿಯಾಗಿರುವುದರಿಂದ ಶಬ್ದವಿರೋಧ ಮತ್ತು ಕರ್ಮವಿರೋಧಗಳಿಗೆ ಅವಕಾಶವಿಲ್ಲ.

**देवा न तेन देवानामधिकारेऽस्ति बाधकम् ।**
**श्रूयते चाधिकारोऽपि देवानां श्रुतिषु स्फुटम् ।। ३ ।।**

ದೇವಾ ನ ತೇನ ದೇವನಾಮಧಿಕಾರೇಽಸ್ತಿ ಬಾಧಕಮ್ ।
ಶ್ರೂಯತೇ ಚಾಧಿಕಾರೋಽಪಿ ದೇವಾನಾಂ ಶ್ರುತಿಷು ಸ್ಫುಟಮ್ ॥೩॥

ಆದ್ದರಿಂದ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆನ್ನಲು ಯಾವುದೇ ಬಾಧಕಗಳಿರುವುದಿಲ್ಲ. ಮತ್ತು ಶ್ರುತಿಗಳಲ್ಲಿ ಸ್ಪಷ್ಟವಾಗಿ ಅಧಿಕಾರವಿದೆಯೆಂಬ ಮಾತೇ ಹೆಚ್ಚಾಗಿ ಸ್ಪಷ್ಟವಾಗಿ ಕೇಳಿಸುತ್ತಿದೆ.

**अतीतानागतानां देवानां समाननामरूपत्वं ''यथा पूर्वम्'' इत्यादिभाष्योदाहृतश्रुत्यादिसिद्धम् । नच तद्देवताव्यक्त्यैक्यपरम् । तत्सृष्टिवाक्यविरोधात् ।**

ಹಿಂದಿನ-ಮುಂದಿನ ಎಲ್ಲಾ ದೇವತೆಗಳ ನಾಮ ಹಾಗೂ ರೂಪಗಳು ಸಮಾನವಾಗಿವೆ. ಈ ವಿಷಯದಲ್ಲಿ 'ಧಾತಾ ಯಥಾ ಪೂರ್ವಮಕಲ್ಪಯತ್' ಇತ್ಯಾದಿಯಾದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಗಳೇ ಆಧಾರವಾಗಿವೆ. 'ಯಥಾಪೂರ್ವಮ್' ಇತ್ಯಾದಿ ಶ್ರುತಿಯು ಹಿಂದಿನ-ಮುಂದಿನ ದೇವತೆಗಳ ಸಮಾನವಾದ ನಾಮರೂಪಗಳನ್ನು ವಿಧಿಸುತ್ತಿಲ್ಲ. ಹೊರತಾಗಿ, ಹಿಂದಿನ-ಮುಂದಿನ ಕಲ್ಪಗಳಲ್ಲಿರುವ ದೇವತೆಗಳಿಗೆ ಐಕ್ಯವನ್ನಷ್ಟೇ ಹೇಳುತ್ತಿದೆ ಎಂದು ಹೇಳಬಾರದು. ಏಕೆಂದರೆ ಸೂರ್ಯ-ಚಂದ್ರ ಮೊದಲಾದ ದೇವತೆಗಳನ್ನು ಪರಮಾತ್ಮನು ಸೃಷ್ಟಿ ಮಾಡಿದನೆಂಬ ವಾಕ್ಯಗಳಿಗೆ ವಿರೋಧಬರುತ್ತದೆ.

**तासां प्रवाहतोऽनादिनित्यतायाः समाननामरूपतायाश्चाङ्गीकारे सृष्टिवाक्यस्य स्वार्थपरत्वेऽपि नानित्यसंयोगाद्यापातः ।**

ದೇವತೆಗಳು ಪ್ರವಾಹತಃ ಅನಾದಿನಿತ್ಯರಾಗಿದ್ದಾರೆ ಮತ್ತು ಸಮಾನವಾದ ನಾಮರೂಪಗಳನ್ನು ಹೊಂದಿರುತ್ತಾರೆ. ಅಂದರೆ ಪ್ರತಿಕಲ್ಪಗಳಲ್ಲಿಯೂ ಬೇರೆ ಬೇರೆ ದೇವತೆಗಳೇ ಆಯಾ ಪದವಿಗಳಿಗೆ ಬರುತ್ತಾರೆ. ಮತ್ತು ಎಲ್ಲಾ ದೇವತೆಗಳ ಹೆಸರು ಮತ್ತು ರೂಪಗಳು ಒಂದೇ ರೀತಿಯಾಗಿರುತ್ತವೆ ಎಂದೇ ಹೇಳಬೇಕು. ಹೀಗೆ ಅಂಗೀಕರಿಸಿದಾಗ ಸೃಷ್ಟಿವಾಕ್ಯಗಳಿಗೆ ಸ್ವಾರ್ಥಪರತ್ವವನ್ನು ಹೇಳಿದಂತಾಗುತ್ತದೆ. ಹೀಗೆ ಹೇಳಿದ್ದರಿಂದ ನಿತ್ಯವಾದ ಶಬ್ದಕ್ಕೆ ಅನಿತ್ಯವಾದ ಅರ್ಥದ ಸಂಬಂಧವನ್ನು ಒಪ್ಪಿದಂತಾಯಿತೆಂಬ ಶಂಕೆಗೂ ಅವಕಾಶವಿಲ್ಲ.

**अन्यथा ''यथा पूर्वम्'' इत्यादेर्व्यक्त्यैक्यपरत्वे सिद्धे देवतानां प्रवाहानादित्व-समाननामरूपत्वयोरभावः । तत्सिद्धौ चानित्यसंयोगापत्त्या सृष्टिवाक्यस्य स्वार्थपरत्वाभावः । तत्सिद्धौ च सृष्टिवाक्यविरोधाभावाद यथापूर्वमित्यादेर्व्यक्त्यैक्य-परत्वसिद्धिरिति चक्रकाश्रयः स्यात् ।**

ಹೀಗೊಪ್ಪದಿದ್ದರೆ 'ಚಕ್ರಕಾಶ್ರಯ' ಎಂಬ ದೋಷವು ಬರುತ್ತದೆ. ಅದು ಹೀಗೆ - ದೇವತೆಗಳಿಗೆ 'ಸಮಾನನಾಮರೂಪತ್ವ' ಮತ್ತು 'ಪ್ರವಾಹತಃ ಅನಾದಿನಿತ್ಯತ್ವ' ಇವುಗಳನ್ನು ಸಾಧಿಸಲು 'ಸೂರ್ಯ-ಚಂದ್ರಮಸೌಧಾತಾ ಯಥಾಪೂರ್ವಮ್' ಎಂಬ ಶ್ರುತಿಯನ್ನು ನಾವು ಪ್ರಮಾಣವನ್ನಾಗಿ ಹೇಳಿದೆವು. ಆವಾಗ ಪೂರ್ವಪಕ್ಷಿಯು ಶ್ರುತಿಗೆ ಹೀಗರ್ಥವಲ್ಲ. ದೇವತಾವ್ಯಕ್ತಿಯನ್ನು ಹೇಳುತ್ತಿದೆಯೆಂದು ಹೇಳಿದನು. ಹಾಗಾಗಿ ಈ ವಾಕ್ಯವು ವ್ಯಕ್ತ್ಯೈಕ್ಯಪರವೆಂದು ಸಿದ್ಧವಾದರೆ, 'ಪ್ರವಾಹತಃ ಅನಾದಿತ್ವ' ಮತ್ತು 'ಸಮಾನನಾಮರೂಪತ್ವ' ಎಂಬ ಪ್ರಮೇಯವು ಸಿದ್ಧವಾಗುವುದಿಲ್ಲವೆಂದು ತಿಳಿಯುತ್ತದೆ. ಇವೆರಡು ಇಲ್ಲವೆಂದು ಸಿದ್ಧವಾದ ಮೇಲೆ ಶ್ರುತಿಗೆ ಅನಿತ್ಯಸಂಯೋಗದ ಮೂಲಕ ಅಪ್ರಾಮಾಣ್ಯದೋಷವು ಬರುತ್ತದೆ. ಅಪ್ರಾಮಾಣ್ಯದೋಷವು ಬರುತ್ತದೆಂದು ಸಿದ್ಧವಾದ ಮೇಲೆ ಸೃಷ್ಟಿವಾಕ್ಯಗಳ ವಿರೋಧವೂ ಪರಿಹಾರವಾಗುತ್ತದೆ. ಸೃಷ್ಟಿವಾಕ್ಯಗಳ ವಿರೋಧ ಪರಿಹಾರವಾದ ಮೇಲೆ

'ಧಾತಾಯಥಾ' ಎಂಬ ವಾಕ್ಯವು ವ್ಯಕ್ತ್ಯೈಕ್ಯಪರವೆಂದು ಸಿದ್ಧವಾಗುತ್ತದೆ. ಹೀಗೆ ಚಕ್ರಕಾಶ್ರಯ ದೋಷವನ್ನು ತಿಳಿಯಬೇಕು.

**''एकशतं ह वै वर्षाणि मघवान् प्रजापतौ ब्रह्मचर्यमुवास'' इत्यादिश्रुतिसिद्धश्च देवानामधिकारः ।**

'ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ' ಚತುರ್ಮುಖಬ್ರಹ್ಮದೇವರ ಬಳಿ ನೂರೊಂದು ವರ್ಷಗಳ ಕಾಲ ಇಂದ್ರದೇವರು ಬ್ರಹ್ಮಚರ್ಯದಿಂದ ಪಾಠವನ್ನು ಕೇಳಿದರು. ಇತ್ಯಾದಿ ಶ್ರುತಿಗಳಿಂದ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರ-ವಿರುತ್ತದೆಯೆಂದು ಸಿದ್ಧವಾಗುತ್ತದೆ.

**यद्यपि मधुविद्यादिफलं वसुत्वादिकं ब्रह्मज्ञानं च वस्वादीनामस्ति । तथापि ज्ञाने मोक्षे चातिशयार्थमुपासना युक्तेति ।**

ಪ್ರಶ್ನೆ - ಮಧುವಿದ್ಯೆ ಮೊದಲಾದವನ್ನು ಅಧ್ಯಯನ ಮಾಡಿದರೆ ವಸುಪದವಿ ಮೊದಲಾದವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಇನ್ನು ಕೆಲವು ವಿದ್ಯೆಗಳಿಂದ ಬ್ರಹ್ಮಜ್ಞಾನವು ಬರುತ್ತದೆಂದು ಶ್ರುತಿ ಹೇಳುತ್ತಿದೆ. ಆದರೆ ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ಮತ್ತು ಬ್ರಹ್ಮಜ್ಞಾನವು ದೊರೆತದ್ದರಿಂದ ಪುನಃ ಅದೇ ಫಲಕ್ಕಾಗಿ ಏಕೆ ವೇದಾಧ್ಯಯನದಲ್ಲಿ ತೊಡಗಬೇಕು.

ಉತ್ತರ - ಆದರೂ ಸಹ ದೇವತೆಗಳು ವೇದಾಧ್ಯಯನ ಮಾಡುತ್ತಾರೆ. ಏಕೆಂದರೆ ಬ್ರಹ್ಮಜ್ಞಾನದಲ್ಲಿ ಇನ್ನು ಹೆಚ್ಚಿನ ತತ್ವವನ್ನು ತಿಳಿಯುವುದಕ್ಕಾಗಿ ಮತ್ತು ಮೋಕ್ಷದಲ್ಲಿ ಅತಿಶಯವಾದ ಫಲವನ್ನು ಪಡೆಯುವುದಕ್ಕಾಗಿ. ಈ ಕಾರಣದಿಂದ ಪುನಃ ಪುನಃ ವೇದಾಧ್ಯಯನವನ್ನು ಮಾಡುತ್ತಾರೆ.

**प्रकाशः –**

अधिकारप्रयोजकमर्थित्वादिकं देवेषु समर्थयमानस्तत्प्रयोजके देवानामाद्यन्तवत्त्वे परोक्तकर्मविरोधादिबाधकं च परिहरन्नाद्यादिसूत्रभाष्यटीकोक्तं प्रमेयं सङ्गृह्णाह – न देवानामिति ।।

ವಿವರಣೆ - ಸಿದ್ಧಾಂತ ಹೀಗಿದೆ - 'ಅರ್ಥೀ ಸಮರ್ಥೋ ವಿದ್ವಾನ್ ಅಧಿಕ್ರಿಯತೇ' ಎಂಬಂತೆ ವೇದವಿದ್ಯಾಧಿಕಾರಕ್ಕೆ 'ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಇವುಗಳು ಪ್ರಯೋಜಕಗಳಾಗಿವೆ. ದೇವತೆಗಳಲ್ಲಿ ಇವು ಮೂರೂ ಸಹ ಇಲ್ಲದ ಕಾರಣ ಬ್ರಹ್ಮವಿದ್ಯೆಯಲ್ಲಿ ದೇವತೆಗಳು ಅಧಿಕಾರಿಗಳಾಗಲಾರರು. ಎಂದು ಪೂರ್ವಪಕ್ಷ ಮಾಡಿದ್ದರು.

ಇದು ಸರಿಯಲ್ಲ. ಅಧಿಕಾರಕ್ಕೆ ಪ್ರಯೋಜಕವಾದ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಇವುಗಳೆಲ್ಲವೂ ದೇವತೆಗಳಲ್ಲಿ ಇರುತ್ತವೆಂಬುದನ್ನು ಈಗ ಸಮರ್ಥಿಸುತ್ತಿದ್ದಾರೆ. ಮೊದಲು ಇವುಗಳಿಗೆ ಪ್ರಯೋಜಕವಾದ ದೇವತೆಗಳು ಉತ್ಪತ್ತಿನಾಶವುಳ್ಳವರಾದರೆ, ಕರ್ಮವಿರೋಧ ಮೊದಲಾದ ಬಾಧಕಗಳನ್ನು ಪೂರ್ವಪಕ್ಷಿಗಳು ಹೇಳಿದ್ದರು. ಅವುಗಳನ್ನೆಲ್ಲಾ ಪರಿಹಾರ ಮಾಡುತ್ತಿದ್ದಾರೆ. ಮತ್ತು ಮೊದಲನೆಯ ಸೂತ್ರದ ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿದ ಪ್ರಮೇಯಗಳನ್ನು ಮೂರು ಶ್ಲೋಕಗಳಲ್ಲಿ ಸಂಗ್ರಹಿಸುತ್ತಿದ್ದಾರೆ 'ನ ದೇವಾನಾಮ್' ಇತ್ಯಾದಿಯಾಗಿ.

**प्रकाशः** – अयं च ''सम्भवात्'' इति सूत्रांशभाष्याद्यर्थसङ्ग्रहः – **तिर्यगादिवदिति।।** इदानीन्तनपशुपक्ष्यादेरिवेत्यर्थः ।

ಸೂತ್ರದಲ್ಲಿ 'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬ ಸೂತ್ರದಲ್ಲಿರುವ 'ಸಂಭವಾತ್' ಎಂಬ ಪದಕ್ಕೆ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಮೊದಲಾದ ಧರ್ಮಗಳು ಸಂಭವಿಸುವುದರಿಂದ ಎಂದರ್ಥ. ಈ ಸೂತ್ರಾಂಶದ ಭಾಷ್ಯದ ಅರ್ಥವನ್ನೇ ಈ ಮೂರುಶ್ಲೋಕಗಳಲ್ಲಿ ಗ್ರಂಥಕಾರರು ಸಂಗ್ರಹಿಸಿದ್ದಾರೆ. 'ತಿರ್ಯಗಾದಿವತ್' ಎಂದರೆ ಈಗಿರುವ ಪಶುಪಕ್ಷ್ಯಾದಿಗಳಂತೆ ಎಂದು ತಿಳಿಯಬೇಕು. ಏಕೆಂದರೆ ಹಿಂದಿನ ಕಾಲದಲ್ಲಿರುವ ಜರಿತಾರಿ ಮೊದಲಾದ ಪಕ್ಷಿಗಳಿಗೆ ವೇದಾಧಿಕಾರವಿರುವುದು ಕಂಡಿದೆ. ಕಾಮಧೇನು, ನಂದಿನಿ, ಮತ್ತು ಇಂದ್ರನ ಬಳಿಯಿರುವ 'ಸರಮಾ' ಎಂಬ ನಾಯಿ ಇವುಗಳಿಗೆಲ್ಲಾ ವೇದವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಆದರೆ ಈಗಿರುವ ಪಶುಪಕ್ಷ್ಯಾದಿಗಳಲ್ಲಿ ಇಂತಹ ವೇದವಿದ್ಯಾಧಿಕಾರವಿರುವುದು ಕಂಡಿಲ್ಲವೆಂದು ಅಭಿಪ್ರಾಯ.

**प्रकाशः** – नन्वेतच्छूद्रे व्यभिचारीत्यतस्सूत्रांशतात्पर्यं भाष्याद्युक्तमाह – **नचापीति** ।। कुत्रचिदपीत्यपेरन्वयः । श्रुतौ स्मृतौ चेत्यर्थः । **प्रतिषेधश्चेति** चार्थः ।।

ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಎಂಬ ಅಧಿಕಾರಪ್ರಯೋಜಕ ಧರ್ಮಗಳು ಶೂದ್ರ ಹಾಗೂ ಸ್ತ್ರೀಯರಲ್ಲೂ ಇರುತ್ತದೆ. ಆದ್ದರಿಂದ ಅವರೂ ಸಹ ವೇದವಿದ್ಯೆಯಲ್ಲಿ ಅಧಿಕಾರವನ್ನು ಹೊಂದಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಸೂತ್ರಾಂಶದ ಅಭಿಪ್ರಾಯವನ್ನು ಭಾಷ್ಯಾದಿಗಳಲ್ಲಿ ಹೇಳಿದಂತೆ ಸ್ಪಷ್ಟಪಡಿಸುತ್ತಿದ್ದಾರೆ 'ನಚಾಪಿ' ಇತ್ಯಾದಿಯಾಗಿ. 'ಅಪಿ' ಶಬ್ದಕ್ಕೆ 'ಕುತ್ರಚಿತ್' ಎಂಬಲ್ಲಿ ಅನ್ವಯ. ಅಂದರೆ ಶ್ರುತಿ ಹಾಗೂ ಸ್ಮೃತಿಗಳಲ್ಲೆಲ್ಲೂ ಸಹ ಶೂದ್ರ ಹಾಗೂ ಸ್ತ್ರೀಯರಿಗೆ ವೇದವಿದ್ಯಾಧಿಕಾರವನ್ನು ಹೇಳಿರುವುದಿಲ್ಲ ಎಂದರ್ಥ. 'ಪ್ರತಿಷೇಧಶ್ಚ' ಎಂದು 'ಚ' ಪದಕ್ಕೆ ಅನ್ವಯಮಾಡಿಕೊಳ್ಳಬೇಕು. ಅಂದರೆ ವೇದವಿದ್ಯಾಧಿಕಾರವನ್ನು ಹೇಳಿಲ್ಲವೆಂದಷ್ಟೇ ಅಲ್ಲ. ವೇದವಿದ್ಯಾಧಿಕಾರದಲ್ಲಿ ನಿಷೇಧವನ್ನೇ ಹೇಳಿದ್ದಾರೆ ಎಂಬುದಾಗಿ 'ಚ' ಶಬ್ದದ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः – शूद्रादेरिति ।।** ब्रह्मबन्धुवर्णबाह्यादिरादिपदार्थः । शूद्रादेर्निषेधोऽग्रे स्पष्टः ।

'ಶೂದ್ರಾದೇಃ' ಎಂಬಲ್ಲಿರುವ ಆದಿಪದದಿಂದ ಬ್ರಹ್ಮಬಂಧುಗಳನ್ನು, ವರ್ಣಬಾಹ್ಯರನ್ನು ವಿವಕ್ಷಿಸಬೇಕು. ಶೂದ್ರ, ಸ್ತ್ರೀ, ಬ್ರಹ್ಮಬಂಧು, ವರ್ಣಬಾಹ್ಯರು ಇವರಿಗೆಲ್ಲಾ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬ ವಿಚಾರವು ಮುಂದಿನ ಅಪಶೂದ್ರಾಧಿಕರಣದಲ್ಲಿ ಸ್ಪಷ್ಟವಾಗುತ್ತದೆ.

**प्रकाशः –** ननु न सामर्थ्यमात्रं प्रयोजकम् । मुमुक्षोर्वात्स्यायनादावनधिकारात्। किन्तु यो यज्जन्यफलार्थी स तत्राधिकारीत्यर्थिताऽपि । साच न नित्यपदानां युक्तेत्युक्तमित्यतः ''तदुपरि'' इति सूत्रांशभाष्याद्युक्तं हेतूकृत्य ''संभवात्'' इत्यंशोपात्तमर्थित्वं साधयति – **स्वपदानामिति ।।**

ಪ್ರಶ್ನೆ - ಬ್ರಹ್ಮವಿದ್ಯೆಯ ಅಧಿಕಾರಕ್ಕೆ ಸಾಮರ್ಥ್ಯವಿರುವುದಷ್ಟೇ ಪ್ರಯೋಜಕವಲ್ಲ. ಏಕೆಂದರೆ ಮೋಕ್ಷವನ್ನು ಅಪೇಕ್ಷಿಸುವವನಿಗೆ ವಾತ್ಸಾಯನನ ಕಾಮಸೂತ್ರವನ್ನು ಓದಲು ಸಾಮರ್ಥ್ಯವಿರುತ್ತದೆ. ಆದರೆ ಅವನು ಅದಕ್ಕೆ ಅನಧಿಕಾರಿಯಾಗಿದ್ದಾನೆ. ಆದ್ದರಿಂದ ಯಾರು ಯಾವ ಫಲವನ್ನು ಅಪೇಕ್ಷಿಸಿದ್ದಾನೋ, ಅಂತಹ ಫಲವನ್ನು ನೀಡುವಂತಹ ವಿದ್ಯೆಯಲ್ಲಷ್ಟೇ ಅಧಿಕಾರಿಯಾಗುತ್ತಾನೆ ಎಂಬುದಾಗಿ ಅರ್ಥಿತ್ವವನ್ನೂ ಸಹ ಪ್ರಯೋಜಕವನ್ನಾಗಿ ಹೇಳಬೇಕು. ಇಂತಹ ಅರ್ಥಿತ್ವವು ನಿತ್ಯಪದವಿಯುಳ್ಳ ದೇವತೆಗಳಿಗೆ ಕೂಡುವುದಿಲ್ಲವಲ್ಲವೇ?

ಉತ್ತರ - ಈ ಪ್ರಶ್ನೆಗೆ ಉತ್ತರ ರೂಪವಾಗಿ 'ತದುಪರಿ' ಎಂಬ ಸೂತ್ರಾಂಶದ ಭಾಷ್ಯದಲ್ಲಿ ಹೇಳಿದ್ದನ್ನು ಹೇತುವನ್ನಾಗಿ ಮಾಡಿಕೊಂಡು, 'ಸಂಭವಾತ್' ಎಂಬ ಸೂತ್ರಾಂಶದಲ್ಲಿ ಸಮರ್ಥಿಸಿದ ಅರ್ಥಿತ್ವವನ್ನು ಸಾಧನೆ ಮಾಡುತ್ತಿದ್ದಾರೆ 'ಸ್ವಪದಾನಾಮ್' ಇತ್ಯಾದಿ ವಾಕ್ಯದಿಂದ.

**प्रकाशः –** चोऽवधारणे । अनित्यत्वादेवेत्यर्थः । ननूक्तं तथात्वे कर्मादिविरोध इत्यतः ''विरोधः कर्मणि'' इति सूत्रभाष्याद्युक्तमाह – **प्रवाहेति ।।**

ಅವಧಾರಣಾರ್ಥದಲ್ಲಿ 'ಚ' ಶಬ್ದವಿದೆ. ಆದ್ದರಿಂದ ದೇವತೆಗಳ ಪದವಿಯು ಅನಿತ್ಯವಾದ್ದರಿಂದಲೇ ಎಂಬರ್ಥವು ಲಾಭವಾಗುತ್ತದೆ.

ಪ್ರಶ್ನೆ - ದೇವತೆಗಳ ಪದವಿಯು ಅನಿತ್ಯವಾದರೆ, ಕರ್ಮಾದಿಗಳ ವಿರೋಧಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ 'ವಿರೋಧಃ ಕರ್ಮಣಿ' ಎಂಬ ಸೂತ್ರವೇ ಉತ್ತರಿಸಿದೆ. ಈ ಸೂತ್ರದ ಭಾಷ್ಯದಲ್ಲಿ ಹೇಳಿದ ಅಭಿಪ್ರಾಯವನ್ನೇ ಗ್ರಂಥಕಾರರು 'ಪ್ರವಾಹ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

**प्रकाशः** – ननूक्तमत्रैकरूपवेदप्रामाण्यविरोध इत्यतस्समानसूत्रभाष्यटीकोक्तार्थमाह – **तुल्येति** ।।

ಪ್ರಶ್ನೆ - ವೇದವು ಒಬ್ಬನೇ ವ್ಯಕ್ತಿಯನ್ನು ಪ್ರತಿಕಲ್ಪದಲ್ಲಿಯೂ ಪ್ರತಿಪಾದನೆ ಮಾಡುತ್ತಿರುವುದರಿಂದ ದೇವತೆಗಳನ್ನು ಅನಿತ್ಯರೆಂದು ಹೇಳಿದರೆ ವೇದಕ್ಕೆ ಅಪ್ರಾಮಾಣ್ಯದೋಷ ಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ 'ಸಮಾನನಾಮರೂಪತ್ವ' ಎಂಬ ಸೂತ್ರದ ಅಂಶವು ಉತ್ತರಿಸಿದೆ. ಈ ಸೂತ್ರದ ಭಾಷ್ಯ ಹಾಗೂ ಟೀಕೆಯಲ್ಲಿ ಹೇಳಿದ ಅರ್ಥವನ್ನು 'ತುಲ್ಯ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

**प्रकाशः** – न देवानामधिकारेऽस्ति बाधकमित्युक्त्या सूत्रादिकं देवानामधिकारे बाधकनिरासपरमित्युक्तम् ।

ದೇವತೆಗಳಿಗೆ ಅಧಿಕಾರವನ್ನು ಹೇಳುವುದಾದರೆ ಬಾಧಕವಿದೆಯೆಂದು ಹೇಳಿದ್ದರಿಂದ ಮೊದಲಿನ ನಾಲ್ಕು ಸೂತ್ರಗಳು ದೇವತೆಗಳ ಅಧಿಕಾರ ವಿಷಯದಲ್ಲಿ ಬಾಧಕಗಳನ್ನು ನಿರಾಕರಣೆ ಮಾಡುತ್ತಿವೆಯೆಂದು ಹೇಳಿದಂತಾಯಿತು.

**प्रकाशः** – तेन 'देवाः वेदविद्याधिकारिणः । अनिषिद्धत्वे सति सामर्थ्यादिमत्त्वात् संमतवत्' इत्यनुमानमुक्तं भवति । तत्र मूलभूतश्रुतिरूपसूत्राद्यभिप्रेतं प्रमाणं चाह – **श्रूयते चेति** ।। **श्रुतिष्विति** ।। तास्त्वग्रे व्यक्ताः ।

ಇದರಿಂದ ಹೀಗೆ ಅನುಮಾನ ಮಾಡಿದಂತಾಯಿತು - 'ದೇವಾಃ ವೇದವಿದ್ಯಾಧಿಕಾರಿಣಃ ಅನಿಷಿದ್ಧತ್ವೇ ಸತಿ ಸಾಮರ್ಥ್ಯಾದಿಮತ್ತ್ವಾತ್ ಸಮ್ಮತವತ್' ದೇವತೆಗಳ ವೇದವಿದ್ಯಾಧಿಕಾರವನ್ನು ನಿಷೇಧ ಮಾಡಿಲ್ಲ ಮತ್ತು ಸಾಮರ್ಥ್ಯ, ಅರ್ಥಿತ್ವ ಮೊದಲಾದವುಗಳು ಇರುವುದರಿಂದ ವೇದವಿದ್ಯಾಧಿಕಾರವು ದೇವತೆಗಳಿಗೆ ಇರುತ್ತದೆ ಎಂದು ಅನುಮಾನದಿಂದ ಸಾಧಿಸಿದಂತಾಯಿತು. ಈ ಅನುಮಾನಕ್ಕೆ ಮೂಲಭೂತವಾದ ಶ್ರುತಿಯು ಸೂತ್ರದಿಂದ ತಿಳಿಯುತ್ತದೆ ಎಂದೇ 'ಶ್ರೂಯತೇ ಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಈ ಶ್ರುತಿಗಳನ್ನು ಮುಂದೆ ಉಲ್ಲೇಖಮಾಡಲಾಗುತ್ತದೆ.

**प्रकाशः** – ननूक्तं तुल्यरूपादियोगित्वे मानाभाव इति । तत्राह – **अतीतेति** ।।

> ''अनादिनिधना नित्या वागुत्सृष्टा स्वयंभुवा ।
> ऋषीणां नामधेयानि याश्च वेदेषु दृष्टयः ।
> वेदशब्देभ्य एवादौ निर्ममे स महेश्वरः ।।''

इति स्मृत्यादिरादिपदार्थः ।

ಪ್ರಶ್ನೆ - ದೇವತೆಗಳಿಗೆ ಪ್ರತಿಕಲ್ಪಗಳಲ್ಲಿಯೂ ಸಮಾನವಾದ ನಾಮರೂಪಗಳಿರುತ್ತವೆಯೆಂದು ಹೇಳಿದಿರಿ. ಈ ವಿಷಯದಲ್ಲಿ ಏನು ಪ್ರಮಾಣ?

ಉತ್ತರ - ಈ ಪ್ರಶ್ನೆಗೆ 'ಅತೀತ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ -

'ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।
ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ ।
ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥'

ಅನಾದಿಯಾದ ವೇದವನ್ನೇ ಸೃಷ್ಟಿಯ ಆರಂಭದಲ್ಲಿ ಪರಮಾತ್ಮನು ಚತುರ್ಮುಖನಿಗೆ ಉಪದೇಶಿಸಿದನು. ಚತುರ್ಮುಖನು ಹಿಂದಿನ ಕಲ್ಪದಲ್ಲಿದ್ದಂತೆ ಈ ಕಲ್ಪದಲ್ಲಿಯೂ ವೇದವನ್ನು ಮತ್ತೊಬ್ಬರಿಗೆ ಉಪದೇಶಿಸಿದನು. ಮತ್ತು ದೇವತೆಗಳ, ಋಷಿಗಳ ನಾಮರೂಪಗಳನ್ನು ವೇದದಲ್ಲಿ ಹೇಗೆ ವರ್ಣಿಸಲಾಗಿದೆಯೋ, ಅದರಂತೆ ಸೃಷ್ಟಿಮಾಡಿದನು. ಈ ಸ್ಮೃತಿಯ ಆಧಾರದಿಂದ ಪ್ರತಿಕಲ್ಪಗಳಲ್ಲಿಯೂ ದೇವತೆಗಳ ನಾಮರೂಪಗಳು ಒಂದೇರೀತಿಯಾಗಿರುತ್ತವೆಂದು ಹೇಳಿದಂತಾಯಿತು. ಅಂದರೆ ಚತುರ್ಮುಖಬ್ರಹ್ಮದೇವರು ಸೃಷ್ಟಿಯನ್ನು ಮಾಡುವಾಗ ವೇದದಲ್ಲಿ ಹೇಗೆ ವರ್ಣನೆ ಮಾಡಲಾಗಿದೆಯೋ, ಅದರಂತೆ ಸೃಷ್ಟಿಯನ್ನು ಮಾಡುತ್ತಾರೆ. ಪ್ರತಿಕಲ್ಪದಲ್ಲಿಯೂ ಒಂದೇ ರೀತಿಯಾಗಿ ವೇದದಲ್ಲಿ ವರ್ಣನೆಯಿರುವುದರಿಂದ, ಪ್ರತೀ ಚತುರ್ಮುಖಬ್ರಹ್ಮದೇವರೂ ಸಹ ಒಂದೇ ರೀತಿಯಾಗಿಯೇ ದೇವತೆ ಮೊದಲಾದವರ ಸೃಷ್ಟಿಯನ್ನು ಮಾಡುತ್ತಾರೆಂದು ತಿಳಿಯಬೇಕು.

**प्रकाशः** – ननूक्तं श्रुतिरन्यथासिद्धेत्यतष्टीकायामनादिनिधनेति स्मृत्यैवान्यथा-सिद्धिनिरासेन युक्त्यनुक्तेस्स्वयं युक्त्याऽप्यन्यथासिद्धिं निराह – **नचेति** ॥

ಟೀಕೆಯಲ್ಲಿ 'ಧಾತಾಯಥಾ' ಎಂಬ ಶ್ರುತಿಗೆ ಗೌಣಾರ್ಥವನ್ನು ಮಾಡಬಾರದು. ಏಕೆಂದರೆ 'ಅನಾದಿನಿಧನಾ' ಇತ್ಯಾದಿ ಸ್ಮೃತಿಯು ದೇವತೆಗಳು ಅನಿತ್ಯವೆಂದು ಹೇಳುತ್ತಿದೆ. ಇದಕ್ಕನುಸಾರಿಯಾಗಿಯೇ ಶ್ರುತಿಗೆ ಅರ್ಥೈಸಬೇಕೆಂದು ಶ್ರುತಿಗೆ ಅನ್ಯಥಾಸಿದ್ಧಿಯನ್ನು ಪರಿಹರಿಸಿದ್ದಾರೆ. ಆದ್ದರಿಂದ ಟೀಕೆಯಲ್ಲಿ ಅನ್ಯಥಾಸಿದ್ಧಿಯನ್ನು ಸ್ಮೃತಿಯ ಆಧಾರದಿಂದ ಪರಿಹರಿಸಿದ್ದಾರೆ ಹೊರತು, ಯುಕ್ತಿಯ ಆಧಾರದಿಂದಲ್ಲ. ಅದಕ್ಕೋಸ್ಕರ ಗ್ರಂಥಕಾರರು ಪ್ರಕೃತ ಚಕ್ರಕಾಶ್ರಯವನ್ನು ಹೇಳುವ ಮೂಲಕ ಯುಕ್ತಿಯ ಆಧಾರದಿಂದಲೂ ಅನ್ಯಥಾಸಿದ್ಧಿಯನ್ನು ನಿರಾಕರಣೆ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः – तत्सृष्टीति** ॥ ''चक्षोस्सूर्यो अजायत'' इत्यादिवाक्यविरोधादित्यर्थः। नच तदन्यपरमिति वाच्यम् । बाधकाभावादिति भावेन प्रागुक्तं बाधकमुद्धरति – **तासामिति** ॥ **सूर्यादिव्यक्तीनामित्यर्थः** ।

'ಚಕ್ಷೋಸ್ಸೂರ್ಯೋ ಅಜಾಯತ' ಇತ್ಯಾದಿ ವಾಕ್ಯದಲ್ಲಿ ದೇವತೆಗಳ ಸೃಷ್ಟಿಯನ್ನು ಹೇಳಿದ್ದಾರೆ. ಅದರ ವಿರೋಧವು ಬರುತ್ತದೆಂದು ತಿಳಿಯಬೇಕು. ಈ ಶ್ರುತಿಗೆ ಅನ್ಯಾರ್ಥವನ್ನು ಮಾಡಲಾಗದು. ಏಕೆಂದರೆ

ಬಾಧಕವಿದ್ದರೆ ಅನ್ಯಾರ್ಥವನ್ನು ಹೇಳಬಹುದು ಎಂಬ ಅಭಿಪ್ರಾಯದಿಂದ ಹಿಂದೆ ಹೇಳಿದ ಬಾಧಕವನ್ನು ಉದ್ಧರಿಸುತ್ತಿದ್ದಾರೆ 'ತಾಸಾಮ್' ಇತ್ಯಾದಿ ವಾಕ್ಯದಿಂದ. 'ತಾಸಾಮ್' ಎಂದರೆ ಸೂರ್ಯಾದಿ ವ್ಯಕ್ತಿಗಳಿಗೆ ಎಂದರ್ಥ.

**प्रकाशः** – श्रूयते चेत्यर्धं व्यनक्ति ।। **एकशतमिति** ।। एतद्वाक्यं छान्दोग्याष्टमाध्यायगतम् । किञ्चेत्यादिनोक्तं "भावंतु" इति सूत्रभाष्याद्युक्तसमाधानेन निराह – **यद्यपीति** ।। "यावत्सेवा परे तत्वे तावत्सुखविशेषता" इत्यादेरिति भावः ।

'ಶ್ರೂಯತೇ ಚ' ಇತ್ಯಾದಿ ಶ್ಲೋಕದ ಅರ್ಧಪಾದವನ್ನು ವ್ಯಾಖ್ಯಾನಮಾಡುತ್ತಿದ್ದಾರೆ 'ಏಕಶತಮ್' ಇತ್ಯಾದಿ ವಾಕ್ಯದಿಂದ. ಈ ವಾಕ್ಯವು ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದಲ್ಲಿದೆಯೆಂದು ತಿಳಿಯಬೇಕು. 'ಕಿಂಚ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ 'ಭಾವಂತು' ಇತ್ಯಾದಿ ಸೂತ್ರಭಾಷ್ಯದಲ್ಲಿ ಹೇಳಿದ ಸಮಾಧಾನವನ್ನೇ ಹೇಳುತ್ತಾ ಶಂಕೆಯನ್ನು ನಿರಾಕರಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ. 'ಯಾವತ್ಸೇವಾ ಪರೇ ತತ್ವೇ ತಾವತ್‌ಸುಖವಿಶೇಷತಾ' ಎಂಬ ಪ್ರಮಾಣದ ಆಧಾರದಿಂದ ಮೋಕ್ಷದಲ್ಲಿ ಅತಿಶಯವಾದ ಸುಖಾದಿಗಳಿಗೋಸ್ಕರ ದೇವತೆಗಳು ಮಧುವಿದ್ಯೆ ಮೊದಲಾದವುಗಳಲ್ಲಿ ಅಧಿಕಾರವನ್ನು ಹೊಂದುತ್ತಾರೆಂದು ತಿಳಿಯಬೇಕು.

**गुरुराजीयम्** – श्रूयते चाधिकारोऽपीत्युक्तम् । तदुपपादयति – **एकशतमिति**।। तदुद्धारः शङ्काद्वयोद्धार इत्यर्थः ।



ಈಗಿರುವ ಅನೇಕ ಪಶುಪಕ್ಷಿಗಳಲ್ಲಿ ವೇದವನ್ನು ಓದುವಂತಹ ಸಾಮರ್ಥ್ಯವಿರುವುದಿಲ್ಲ. ಅದರಂತೆ ದೇವತೆಗಳಿಗೆ ಸಾಮರ್ಥ್ಯವಿಲ್ಲವೆಂದು ಹೇಳಲಾಗದು. ವೇದವಿದ್ಯೆಯನ್ನು ಅಭ್ಯಾಸ ಮಾಡಲು ದೇವತೆಗಳು ಸಮರ್ಥರೇ ಆಗಿದ್ದಾರೆ. ಮತ್ತು ಶೂದ್ರರು, ಸ್ತ್ರೀಯರು, ಬ್ರಹ್ಮಬಂಧುಗಳು ವೇದವನ್ನು ಓದಬಾರದೆಂದು ಹೇಗೆ ನಿಷೇಧವಚನವಿದೆಯೋ, ಅದರಂತೆ ದೇವತೆಗಳು ವೇದವನ್ನು ಓದಬಾರದೆನ್ನಲು ಯಾವುದೇ ನಿಷೇಧವಾಕ್ಯಗಳಿರುವುದಿಲ್ಲ.

ತಮ್ಮ ಪದವಿಗಳೆಲ್ಲವೂ ಅನಿತ್ಯವಾದುದು. ಮುಂದೆ ಮೋಕ್ಷವನ್ನು ದೇವತೆಗಳು ಪಡೆಯಲೇ ಬೇಕು. ಆದ್ದರಿಂದ ಮುಕ್ತಿಯ ವಿಷಯದಲ್ಲಿ ಅರ್ಥಿತ್ವವೂ ಸಹ ದೇವತೆಗಳಿಗೆ ಇದ್ದೇ ಇರುತ್ತದೆ. ಹಾಗಾದರೆ ದೇವತೆಗಳು ಅನಿತ್ಯರಾದರೆ, ಶಬ್ದವಿರೋಧ ಹಾಗೂ ಕರ್ಮವಿರೋಧಗಳು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ದೇವತಾಪ್ರವಾಹವು ಅನಾದಿನಿತ್ಯವಾದ್ದರಿಂದ ಹಿಂದಿನ- ಮುಂದಿನ ಕಲ್ಪಗಳಲ್ಲಿರುವ ಎಲ್ಲ ದೇವತೆಗಳ ನಾಮ ಹಾಗೂ ರೂಪಗಳು ಒಂದೇ ರೀತಿಯಾಗಿರುವುದರಿಂದ ಶಬ್ದವಿರೋಧ ಮತ್ತು ಕರ್ಮವಿರೋಧಗಳಿಗೆ ಅವಕಾಶವಿಲ್ಲ.

ಪರಿಪೂರ್ಣಚಂದ್ರಿಕಾ

ಹೀಗೆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆನ್ನಲು ಯಾವುದೇ ಬಾಧಕಗಳಿರುವುದಿಲ್ಲ. ಮತ್ತು ಶ್ರುತಿಗಳಲ್ಲಿ ಸ್ಪಷ್ಟವಾಗಿ ಅಧಿಕಾರವಿದೆಯೆಂಬ ಮಾತೇ ಹೆಚ್ಚಾಗಿ ಕೇಳಿಸುತ್ತದೆ.

ಆದ್ದರಿಂದ ವೇದವಿದ್ಯೆಯ ಅಧಿಕಾರಕ್ಕೆ ಉಪಯೋಗಿಯಾದ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಎಂಬ ಮೂರೂ ಧರ್ಮಗಳು ದೇವತೆಗಳಲ್ಲಿದೆಯೆಂದಷ್ಟೇ ಅಲ್ಲ. ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂಬ ವಿಧಿ ವಾಕ್ಯಗಳೂ ಸಹ ಅನೇಕ ಇರುತ್ತವೆ. 'ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ' ನೂರೊಂದು ವರ್ಷಗಳ ಕಾಲ ಇಂದ್ರದೇವರು ಬ್ರಹ್ಮದೇವರ ಬಳಿ ವಿದ್ಯೆಗಾಗಿ ಬ್ರಹ್ಮಚರ್ಯ ವ್ರತದಿಂದ ಉಪಸತ್ತಿ ಮಾಡಿದರು ಎಂದು. ಆದ್ದರಿಂದ ಮನುಷ್ಯರು ಹೇಗೆ ವೇದವಿದ್ಯೆಗೆ ಅಧಿಕಾರಿಗಳೋ, ಅದರಂತೆ ದೇವತೆಗಳೂ ಕೂಡ ಅಧಿಕಾರಿಗಳಾಗಿರುತ್ತಾರೆ.

ಮಧುವಿದ್ಯೆ ಮೊದಲಾದವನ್ನು ಅಧ್ಯಯನ ಮಾಡಿದರೆ ವಸುಪದವಿ ಮೊದಲಾದವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಇನ್ನು ಕೆಲವು ವಿದ್ಯೆಗಳಿಂದ ಬ್ರಹ್ಮಜ್ಞಾನವು ಬರುತ್ತದೆಂದು ಶ್ರುತಿ ಹೇಳುತ್ತಿದೆ. ಆದರೆ ದೇವತೆಗಳಿಗೆ ಈಗಾಗಲೇ ವಸು ಮೊದಲಾದ ಪದವಿಗಳು ಮತ್ತು ಬ್ರಹ್ಮಜ್ಞಾನವು ದೊರೆತದ್ದರಿಂದ ಪುನಃ ಅದೇ ಫಲಕ್ಕಾಗಿ ಏಕೆ ವೇದಾಧ್ಯಯನದಲ್ಲಿ ತೊಡಗಬೇಕು.

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಬ್ರಹ್ಮಜ್ಞಾನದಲ್ಲಿ ಇನ್ನು ಹೆಚ್ಚಿನ ತತ್ವವನ್ನು ತಿಳಿಯುವುದಕ್ಕಾಗಿ ಮತ್ತು ಮೋಕ್ಷದಲ್ಲಿ ಅತಿಶಯವಾದ ಫಲವನ್ನು ಪಡೆಯುವುದಕ್ಕಾಗಿ ದೇವತೆಗಳು ಪುನಃ ಪುನಃ ವೇದಾಧ್ಯಯನವನ್ನು ಮಾಡುತ್ತಾರೆ.

////////////////////////////////////////////////////////////////////

• • • • •

## ಸೂತ್ರಗಳ ವಿನ್ಯಾಸ ಶೈಲಿ

### तात्पर्यचन्द्रिका

**अत्र चाद्ये सूत्रे न तावद्देवताजीवानां कदाऽप्यनधिकारः, तेषामेव पदप्राप्तेः पूर्वं मनुष्यशरीरित्वदशायामधिकारादिति तदुपरीत्यनेन सूचयित्वा, नापि पदप्राप्त्यनन्तरमनधिकारः, विशिष्टबुद्ध्यादिभावादिति ''सम्भवात्'' इत्यनेनोक्तम् ।**

ಅನುವಾದ - ಸೂತ್ರಗಳ ವಿನ್ಯಾಸ ಕ್ರಮ ಅತ್ಯಂತ ಅರ್ಥಪೂರ್ಣವಾಗಿದೆ- 'ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ' ಮೊದಲನೆಯ ಸೂತ್ರ. ಈ ಸೂತ್ರದಲ್ಲಿ ದೇವತೆಗಳೆಂಬ ಜೀವರುಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಲೇಬಾರದೆಂದು ಸಾಧಿಸಿದ್ದಾರೆ. ಏಕೆಂದರೆ ಇದೇ ದೇವತೆಗಳು ತಮ್ಮ ಪದವಿಯನ್ನು ಹೊಂದುವ ಮೊದಲು, ಮನುಷ್ಯರಾಗಿರುತ್ತಾರೆ. ಆ ದಶೆಯಲ್ಲಿಯೂ ಬ್ರಹ್ಮವಿದ್ಯೆಯ ಅಧಿಕಾರವನ್ನು ಹೊಂದಿರುತ್ತಾರೆ. ಹೀಗೆ ದೇವತಾಪದವಿಯು

ದೊರೆಯುವುದಕ್ಕಿಂತ ಮೊದಲು ಬ್ರಹ್ಮವಿದ್ಯೆಗೆ ಅಧಿಕಾರಿಗಳಾಗಿರುತ್ತಾರೆಂಬ ವಿಷಯವನ್ನು ಸೂತ್ರದಲ್ಲಿರುವ 'ತದುಪರಿ' ಎಂಬ ಪದವು ತಿಳಿಸುತ್ತಿದೆ. ಇದರಂತೆ ದೇವತಾಪದವಿಯು ದೊರೆತ ಅನಂತರವೂ ಅಧಿಕಾರವಿಲ್ಲವೆಂದು ಹೇಳಬಾರದು. ಏಕೆಂದರೆ ಬ್ರಹ್ಮವಿದ್ಯೆಯ ಅಧಿಕಾರಕ್ಕೆ ಪ್ರಯೋಜಕವಾದ ವಿಶಿಷ್ಟಬುದ್ಧಿ ಮೊದಲಾದ ಪ್ರಯೋಜಕಧರ್ಮಗಳು ದೇವತೆಗಳಲ್ಲಿರುತ್ತವೆ. ಈ ವಿಷಯವನ್ನು ಸೂತ್ರದಲ್ಲಿರುವ 'ಸಂಭವಾತ್' ಎಂಬ ಪದವು ತಿಳಿಸಿದೆ.

**द्वितीये ''तदुपरि'' इत्यनेनोक्तदेवतापदस्य सादित्वे कर्मविरोधः शब्देन परिहृतः।**

'ಓಂ ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇ ರ್ದರ್ಶನಾತ್ ಓಂ' ಎಂಬುದು ಎರಡನೆಯ ಸೂತ್ರ. ಪ್ರಥಮಸೂತ್ರದಲ್ಲಿ 'ವಿಶಿಷ್ಟಬುದ್ಧ್ಯಾದಿಮತ್ವ' ಎಂಬ ಹೇತುವಿನಿಂದ ದೇವತೆಗಳಿಗೆ ವೇದವಿದ್ಯಾಧಿಕಾರವನ್ನು ಸಮರ್ಥಿಸಲಾಯಿತು. ಆದರೆ 'ತದುಪರಿ' ಎಂಬ ಪದದಿಂದ ದೇವತಾಪದವಿಯು ಸಾದಿಯಾಗಿದೆ ಎಂದು ಹೇಳಿದಂತಾಯಿತು. ಹಾಗಾದರೆ ಯಾವ ಸಮಯದಲ್ಲಿ ದೇವತೆಗಳು ತಮ್ಮ ಪದವಿಯಲ್ಲಿರುವುದಿಲ್ಲವೋ, ಆ ಸಮಯದಲ್ಲಿ ಮಾಡುವಂತಹ ಕರ್ಮಗಳು ವ್ಯರ್ಥವಾಗುತ್ತಲ್ಲವೇ? ಎಂಬ ಕರ್ಮವಿರೋಧದ ಆಶಂಕೆಯು ಪ್ರಾಪ್ತವಾದರೆ ಶಬ್ದಪ್ರಮಾಣದಿಂದ, ವಿರೋಧವನ್ನು ಪರಿಹರಿಸಲು ಎರಡನೆಯ ಸೂತ್ರವು ಹೊರಟಿದೆ.

**तृतीये तस्मिन्नेव शब्दे विरोधो देवताप्रवाहनित्यत्वेनोद्धृतः । तत्र च प्रभवशब्दः प्रभवनियमपर इति भाष्य एवोक्तम् ।**

'ಓಂ ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್ ಓಂ' ಎಂಬುದು ಮೂರನೆಯ ಸೂತ್ರ. ದೇವತೆಗಳು ಅನಿತ್ಯರಾದರೆ, ವೇದವು ಅಪ್ರಮಾಣವಾಗಬೇಕಾಗುತ್ತದಲ್ಲವೇ? ಎಂಬ ಶಂಕೆಯನ್ನು ಪರಿಹರಿಸಲು ಈ ಸೂತ್ರವು ಹೊರಟಿದೆ. ದೇವತೆಗಳು ಅನಿತ್ಯರಾದರೂ ದೇವತಾ-ಪ್ರವಾಹವು ಅನಾದಿನಿತ್ಯವಾಗಿದೆ. ಸೂತ್ರದಲ್ಲಿರುವ 'ಪ್ರಭವ' ಶಬ್ದಕ್ಕೆ 'ಪ್ರಭವನಿಯಮ' ಎಂಬರ್ಥವನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ ಪ್ರತಿಯೊಂದು ಕಲ್ಪದಲ್ಲಿಯೂ ಬೇರೆ ಬೇರೆ ದೇವತೆಗಳು ಪ್ರವಾಹದಂತೆ ಬರುತ್ತಿರುವುದರಿಂದ ಶ್ರುತಿಗಳು ಆಯಾದೇವತೆಗಳನ್ನು ಪ್ರತಿಪಾದಿಸುವುದರಿಂದ ಅಪ್ರಮಾಣಗಳಾಗುವುದಿಲ್ಲ.

**चतुर्थे देवताप्रवाहनित्यत्वं तद्वाचकवेदनित्यत्वेन साधितम् ।**

'ಓಂ ಅತ ಏವ ಚ ನಿತ್ಯತ್ವಮ್ ಓಂ' ಎಂಬುದು ನಾಲ್ಕನೆಯ ಸೂತ್ರ. ವೇದರೂಪವಾದ ಶಬ್ದವು ನಿತ್ಯವಾದ್ದರಿಂದ ದೇವತೆಗಳ ಪ್ರವಾಹವು ನಿತ್ಯವಾಗಿದೆಯೆಂದು ಈ ಸೂತ್ರದಲ್ಲಿ ಸಮರ್ಥಿಸುತ್ತಿದ್ದಾರೆ. ಅಂದರೆ ವೇದನಿತ್ಯತ್ವದ ಅನ್ಯಥಾನುಪಪತ್ತಿಯಿಂದ ದೇವತಾಪ್ರವಾಹದ ನಿತ್ಯತ್ವವು ಸಿದ್ಧವಾಗುತ್ತದೆ.

**प्रकाशः –**

भाष्याद्युक्तमर्थं सूत्रपदारूढं लेशतो दर्शयन् सूत्राणां क्रममाह – **अत्र चाद्य इति ।।** ''तदुपर्यपि बादरायणस्सम्भवात्'' इत्यत्र तच्छब्देन पूर्वप्रकृतयोग्यमनुष्यत्वं परामृश्यते ।

ವಿವರಣೆ - ಸೂತ್ರಗಳ ವಿನ್ಯಾಸ ಶೈಲಿಯನ್ನು ವರ್ಣಿಸುತ್ತಿದ್ದಾರೆ - ಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥವನ್ನು ಸೂತ್ರದಲ್ಲಿ ಸಂಪೂರ್ಣವಾಗಿ ಸಮನ್ವಯಮಾಡುತ್ತಾ ಸೂತ್ರಗಳ ಕ್ರಮವನ್ನು 'ಅತ್ರ ಚಾದ್ಯ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬ ಸೂತ್ರದಲ್ಲಿ 'ತತ್' ಶಬ್ದದಿಂದ ಪೂರ್ವಪ್ರಕೃತವಾದ ಯೋಗ್ಯ ಮನುಷ್ಯತ್ವವನ್ನು ಪರಾಮರ್ಶಿಸಬೇಕು. ಅಂದರೆ ಮನುಷ್ಯತ್ವದಶೆಯ ಅನಂತರ ದೇವತಾ ಪದವಿಯು ದೊರೆಯುತ್ತದೆಂದು 'ತದುಪರ್ಯಪಿ' ಎಂಬುದರಿಂದ ಹೇಳಿದ್ದಾರೆ. ಸಕಲ ಮನುಷ್ಯರಿಗೂ ದೇವತಾಪದವಿಯು ದೊರೆಯುತ್ತದೆಂದು ತಿಳಿಯಬಾರದು. ಯೋಗ್ಯರಾದ ಮನುಷ್ಯರು ಮಾತ್ರ ದೇವತಾಪದವಿಯನ್ನು ಹೊಂದುತ್ತಾರೆ. ಆದ್ದರಿಂದ 'ತತ್' ಶಬ್ದದಿಂದ ಯೋಗ್ಯರಾದ ಮನುಷ್ಯರನ್ನೇ ವಿವಕ್ಷಿಸಬೇಕು.

**प्रकाशः –** तस्मादुपरि तस्योपरीति वा विद्याकर्मभ्यां योग्यमनुष्याणां देवत्व-प्राप्त्यनन्तरमप्यधिकारोऽस्तीति विभागविपरिणामाभ्यां पूर्वप्रकृताधिकारपदान्वयः ।

'ತದುಪರ್ಯಪಿ' ಎಂದರೆ 'ತಸ್ಮಾದುಪರಿ' 'ತಸ್ಯೋಪರಿ' ಎಂದು ಎರಡು ಬಗೆಯಲ್ಲಿ ಸಮಾಸವನ್ನು ತಿಳಿಯಬಹುದು. ಅಂದರೆ 'ಉಪರಿ' ಶಬ್ದವನ್ನು ಪ್ರಯೋಗಿಸುವಾಗ ಅವಧಿತ್ವವನ್ನು ವಿವಕ್ಷಿಸಿ, ಪಂಚಮೀವಿಭಕ್ತಿಯನ್ನು ಹೇಳಬಹುದು. ಅಥವಾ ಸಂಬಂಧಸಮಾನ್ಯಾರ್ಥದಲ್ಲಿ ಷಷ್ಠೀವಿಭಕ್ತಿಯನ್ನೂ ಸಹ ಪ್ರಯೋಗಿಸಬಹುದು. ಆದ್ದರಿಂದ 'ಮನುಷ್ಯತ್ವಾದ್‌ದುಪರಿ' ಎಂದಾಗಲೀ, 'ಮನುಷ್ಯತ್ವಸ್ಯ ಉಪರಿ' ಎಂದಾಗಲೀ ಹೇಳಿದರೆ ತಪ್ಪಾಗುವುದಿಲ್ಲ. ವಿದ್ಯೆ ಹಾಗೂ ಕರ್ಮಗಳಿಂದ ಯೋಗ್ಯರಾದ ಮನುಷ್ಯರು ದೇವತಾಪದವಿಯನ್ನು ಹೊಂದಿದ ಮೇಲೂ ಸಹ ಬ್ರಹ್ಮವಿದ್ಯೆಯಲ್ಲಿ ಅಧಿಕಾರಿಗಳಾಗುತ್ತಾರೆ. ಸೂತ್ರದಲ್ಲಿ 'ತದುಪರಿ ಅಧಿಕಾರೋಽಸ್ತಿ' ಎಂದು ಅಧಿಕಾರಿ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಹಿಂದಿನ ಸೂತ್ರದಲ್ಲಿ 'ಮನುಷ್ಯಾಧಿಕಾರತ್ವಾತ್' ಎಂಬುದು ಸಮಸ್ತ ಪದವಾಗಿದೆ. ಇದನ್ನು ಬುದ್ಧಿಯಿಂದ ವಿಭಾಗ ಮಾಡಿಕೊಂಡು, ಆ ಅಧಿಕಾರ ಪದವನ್ನು ಪ್ರಥಮಾಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ಆವಾಗ 'ತದುಪರ್ಯಪಿ ಅಧಿಕಾರಃ ಅಸ್ತಿ' ಎಂಬರ್ಥವು ದೊರೆಯುತ್ತದೆ.

**प्रकाशः –** तेषामप्यधिकारोपयोगिनो विशिष्टबुद्ध्यादेस्सम्भवादित्यर्थः ।

ದೇವತಾಪದವಿಯು ದೊರೆತ ಮೇಲೂ ಸಹ ಅಧಿಕಾರವನ್ನು ಏಕೆ ಒಪ್ಪಬೇಕು ಎಂದರೆ. ಅಂತಹ ದೇವತೆಗಳಿಗೂ ಕೂಡ ಅಧಿಕಾರವು ಪ್ರಾಪ್ತವಾದ ಮೇಲೆ ವಿಶಿಷ್ಟಬುದ್ಧಿ ಮೊದಲಾದವು ಇರುತ್ತವೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಅಧಿಕಾರಿಗಳಾಗುತ್ತಾರೆ.

**प्रकाशः –** बादरायणपदं विप्रतिपत्तिसूचनायेति टीकोक्तिः । देवानामधिकारे सन्देहाभावज्ञापनायेति तत्वप्रदीपोक्तिः ।

ಸೂತ್ರದಲ್ಲಿ ಬಾದರಾಯಣಪದವನ್ನೇಕೆ ಹೇಳಿದ್ದಾರೆ ಎಂದರೆ ಮುಂದೆ ಜೈಮಿನಿ ಋಷಿಗಳು ಕೆಲವು ವಿದ್ಯೆಯಲ್ಲಿ ಮಾತ್ರ ದೇವತೆಗಳಿಗೆ ಅಧಿಕಾರವಿದೆಯೆಂದು ಹೇಳುತ್ತಾರೆ. ಆದ್ದರಿಂದ ಮುನಿಗಳಲ್ಲಿ ಪರಸ್ಪರ ವಿಪ್ರತಿಪತ್ತಿಯಿದೆ ಎಂದು ಸೂಚನೆ ಮಾಡುವುದಕ್ಕಾಗಿ ಬಾದರಾಯಣ ಪದವನ್ನು ಹೇಳಿರುತ್ತಾರೆಂದು ತತ್ವಪ್ರಕಾಶಿಕೆಯ ಅಭಿಪ್ರಾಯ. ಆದರೆ ತತ್ವಪ್ರದೀಪಕಾರರು ಬೇರೆ ರೀತಿಯ ಸಮಾಧಾನವನ್ನೇ ಹೇಳಿದ್ದಾರೆ. 'ದೇವಾನಾಮಧಿಕಾರೇ ಸಂದೇಹಾಭಾವಜ್ಞಾಪನಾಯ' ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಎಂಬುದನ್ನು ತಿಳಿಸುವುದಕ್ಕಾಗಿ ಬಾದರಾಯಣಪದವನ್ನು ಹೇಳಿದ್ದಾರೆ. ತಾವೇ ಮಾತನಾಡುವಾಗ ತಮ್ಮ ಹೆಸರನ್ನು ಉಲ್ಲೇಖ ಮಾಡಿ, ಪರೋಕ್ಷನಿರ್ದೇಶ ಮಾಡಿದಾಗ ಆ ಮಾತಿನಲ್ಲಿ ದಾರ್ಢ್ಯವು ತಿಳಿಯುತ್ತದೆ. 'ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದನ್ನು ಈ ಬಾದರಾಯಣರು ಒಪ್ಪುವುದಿಲ್ಲ' ಎಂದು ಹೇಳಿದಾಗ ಅಧಿಕಾರವಿದ್ದೇ ಇರುತ್ತದೆಂಬ ವಿಷಯದಲ್ಲಿ ದಾರ್ಢ್ಯವು ಸ್ಪಷ್ಟವಾಗುತ್ತದೆ.[೧]

**प्रकाशः –** अत्र देवानामिति वक्तव्ये तदुपरीत्युक्तिरयुक्ता । अपिपदं च व्यर्थमित्यत आह – न तावदिति ।। प्रधानहेतूक्तिपरत्वादाद्यत्वमिति भावः ।

(೧)ಸೀತೆಯನ್ನು ಹುಡುಕುವುದಕ್ಕಾಗಿ ಹನುಮಂತ ಮೊದಲಾದ ಕಪಿಗಳು ದಕ್ಷಿಣದಿಕ್ಕಿಗೆ ಹೊರಟರು. ಸಮುದ್ರದ ತನಕ ಹುಡುಕಿದರೂ ಸೀತೆಯು ಸಿಗುವುದಿಲ್ಲ. ಸಮುದ್ರ ತೀರದಲ್ಲಿ ವಿಚಿತ್ರವಾದ ಅದ್ಭುತವಾದ ಗುಹೆಯನ್ನು ಪ್ರವೇಶಿಸುತ್ತಾರೆ. ಆ ಗುಹೆಯ ಒಳಗಿರುವ ವೈಭವವನ್ನು ನೋಡಿ, ಜಾಂಬವಂತ, ಅಂಗದ ಮೊದಲಾದ ಕಪಿಗಳೆಲ್ಲರೂ ನಾವು ಇಲ್ಲೇ ಇದ್ದು ಬಿಡೋಣ. ಸೀತೆಯನ್ನು ಹುಡುಕಲು ನಮ್ಮಿಂದ ಸಾಧ್ಯವಾಗಲಿಲ್ಲ. ನಾವು ಇಲ್ಲಿ ಇರುವ ವಿಷಯವೂ ಶ್ರೀರಾಮನಿಗೆ ತಿಳಿಯುವುದೂ ಸಹ ಇಲ್ಲ. ಶ್ರೀರಾಮನ ಬಳಿಗೆ ಹೋದರೆ ನಾವು ಸಾಯುವುದು ನಿಶ್ಚಿತ ಎಂದು ಹೇಳುತ್ತಾರೆ. ಆವಾಗ ಹನುಮಂತದೇವರು ಹೀಗೆ ಹೇಳುತ್ತಾರೆ- 'ಶ್ರೀರಾಮಚಂದ್ರನಿಗೆ ವಿರುದ್ಧವಾದ ಮಾತುಗಳನ್ನು ಈ ಹನುಮಂತನು ಸಹಿಸುವುದಿಲ್ಲ' ಎಂದು.

'ನಾನು ಸಹಿಸುವುದಿಲ್ಲ' ಎಂದು ಹೇಳುವ ಬದಲು 'ಈ ಹನುಮಂತನು ಸಹಿಸುವುದಿಲ್ಲ' ಎಂದು ಪರೋಕ್ಷವಾಗಿ ತನ್ನನ್ನು ನಿರ್ದೇಶಮಾಡಿದ್ದರಿಂದ ತನ್ನ ವಚನದಲ್ಲಿ ದಾರ್ಢ್ಯವು ಸ್ಪಷ್ಟವಾಗುತ್ತದೆ. ಅದರಂತೆ ಪ್ರಕೃತದಲ್ಲಿಯೂ 'ಈ ಬಾದರಾಯಣರು ದೇವತಾ ಪದವಿಯು ದೊರೆತ ಮೇಲೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದನ್ನು ಒಪ್ಪುವುದಿಲ್ಲ' ಎಂದು ಹೇಳಿದಾಗಲೂ ಅಧಿಕಾರವಿದ್ದೇ ಇರುತ್ತದೆಂಬ ವಿಷಯದಲ್ಲಿ ದಾರ್ಢ್ಯವು ಇದ್ದೇ ಇರುತ್ತದೆ.

ಪರಿಪೂರ್ಣಚಂದ್ರಿಕಾ

'ತದುಪರಿ' ಎಂದು ಹೇಳುವ ಮೊದಲು 'ದೇವಾನಾಮ್' ಎಂದೇ ಹೇಳಬಹುದಿತ್ತು. 'ಅಪಿ' ಪದವೂ ಕೂಡ ವ್ಯರ್ಥವಾಗಿದೆ. ಈ ಪ್ರಶ್ನೆಗೆ 'ನ ತಾವತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ 'ತದುಪರಿ' ಎಂದು 'ಅಪಿ' ಎಂದು ಹೇಳಿದ್ದರಿಂದ, ದೇವತಾಪದವಿಯು ದೊರೆಯುವುದಕ್ಕಿಂತ ಮೊದಲು ಮನುಷ್ಯತ್ವದಶೆಯಲ್ಲೂ ಅವರಿಗೆ ಅಧಿಕಾರವಿದೆಯೆಂಬುದನ್ನು ಸೂಚನೆ ಮಾಡಿದ್ದಾರೆ. ಆದ್ದರಿಂದ ದೇವತಾಪದವಿಯು ದೊರೆತ ನಂತರ ಅಧಿಕಾರವಿಲ್ಲ ಎಂದು ಹೇಳಬಾರದೆಂದು ತಿಳಿಯಿತು.

ಹಾಗಾದರೆ ಈ ಸೂತ್ರವನ್ನೇ ಮೊದಲೇಕೆ ಹೇಳಬೇಕಿತ್ತು? ಎಂದರೆ ಪ್ರಧಾನವಾದ ಹೇತುವನ್ನು ಈ ಸೂತ್ರವು ಹೇಳುತ್ತಿರುವುದರಿಂದ ಪ್ರಥಮಸ್ಥಾನವನ್ನು ಹೊಂದಿದೆ - 'ದೇವಾಃ ಬ್ರಹ್ಮವಿದ್ಯಾಸು ಅಧಿಕಾರವಂತಃ ಅಸತಿ ಪ್ರತಿಷೇಧೇ ವಿಶಿಷ್ಟಬುದ್ಧ್ಯಾದಿಮತ್ವಾತ್' ಈ ವಿಶಿಷ್ಟಬುದ್ಧ್ಯಾದಿಮತ್ವ ಎಂಬ ಪ್ರಧಾನ ಹೇತುವಿನ ಮೇಲೆ ಅರ್ಥಿತ್ವ, ಮೋಕ್ಷ ಮೊದಲಾದವುಗಳು ದೇವತೆಗಳಿಗೆ ಇಲ್ಲವೆಂಬ ಆಶಂಕೆಯು ಪ್ರಾಪ್ತವಾದರೆ, ಮುಂದಿನ ಸೂತ್ರಗಳಲ್ಲಿ ಉತ್ತರಿಸಲಾಗಿದೆ.

**प्रकाशः** – ननु तदुपरीति कथम् । ''पूरणगुणसुहितार्थसदव्ययतव्य-समानाधिकरणेन'' इत्यव्ययेन समासनिषेधात् । न चाव्ययशब्देनोपरिशब्दो न ग्राह्यः । वृत्तावनुदाहृतत्वादिति वाच्यम् । अग्रहणे ज्ञापकस्य वाच्यत्वात् । तत्रैव मञ्जर्यां ''व्रजस्योपरीत्यप्युदाहर्तव्यम्'' इत्युक्तेश्च ।

ಪ್ರಶ್ನೆ - 'ತದುಪರಿ' ಎಂಬ ಸಮಾಸವು ಹೇಗಾಗುತ್ತದೆ? ಏಕೆಂದರೆ 'ಪೂರಣಗುಣಸುಹಿತಾರ್ಥ ಸದವ್ಯಯತವ್ಯಸಮಾನಾಧಿಕರಣೇನ' ಎಂಬ ಸೂತ್ರದಿಂದ ಅವ್ಯಯದ ಜೊತೆಗೆ ಸಮಾಸವನ್ನು ನಿಷೇಧ ಮಾಡಲಾಗಿದೆ.

ಪೂರಣಾರ್ಥದಲ್ಲಿರುವ 'ಮಟ್' ಎಂಬ ಅವ್ಯಯವು ಕೊನೆಯಲ್ಲಿರುವಂತಹ 'ದಶಮ' ಮೊದಲಾದ ಶಬ್ದಗಳಲ್ಲಿಯೂ ಸಮಾಸವಾಗುವುದಿಲ್ಲ. 'ತಸ್ಯ ದಶಮಃ' ಎಂದೇ ಹೇಳಬೇಕು ಹೊರತು, 'ತದ್‌ದಶಮಃ' ಎಂದು ಸಮಾಸ ಮಾಡಬಾರದು. ಇದರಂತೆ ಗುಣವಾಚಕವಾದ ಶಬ್ದದಲ್ಲಿಯೂ ಸಮಾಸ ಮಾಡಬಾರದು. 'ಘಟಸ್ಯ ಶೌಕ್ಲ್ಯಮ್' ಎಂದೇ ಹೇಳಬೇಕು. 'ಘಟಶೌಕ್ಲ್ಯಮ್' ಎಂದು ಸಮಾಸ ಮಾಡಬಾರದು. ಇದರಂತೆ 'ಉಪರಿ' ಮೊದಲಾದ ಅವ್ಯಯಗಳು ಮುಂದಿದ್ದಾಗಲೂ ಸಮಾಸ ಮಾಡಬಾರದು. ಆದ್ದರಿಂದ 'ತಸ್ಯ ಉಪರಿ' ಎನ್ನಬೇಕು. 'ತದುಪರಿ' ಎನ್ನಬಾರದು. ಮತ್ತು ತವ್ಯಪ್ರತ್ಯಯದ ಜೊತೆಗೂ ಸಮಾಸ ಮಾಡಬಾರದು. 'ತವ ಕರ್ತವ್ಯಮ್' ಎಂದೇ ಹೇಳಬೇಕು, 'ತತ್‌ಕರ್ತವ್ಯಮ್' ಎಂದು ಸಮಾಸ ಮಾಡಬಾರದು. ಹೀಗೆ ಸೂತ್ರವು ಅವ್ಯಯದ ಜೊತೆಗೆ ಸಮಾಸವನ್ನು ನಿಷೇಧ ಮಾಡಿದೆ.

ಸೂತ್ರದಲ್ಲಿ ಹೇಳಿದ ಅವ್ಯಯ ಶಬ್ದದಿಂದ 'ಉಪರಿ' ಶಬ್ದವನ್ನು ವಿವಕ್ಷಿಸಬಾರದು. ಏಕೆಂದರೆ ಕಾಶಿಕಾವೃತ್ತಿಯಲ್ಲಿ ಉಪರಿಶಬ್ದವನ್ನು ಸ್ವೀಕರಿಸಿಲ್ಲವಲ್ಲ? ಎಂದು ಶಂಕಿಸಬಾರದು. ಏಕೆಂದರೆ ಕಾಶಿಕಾವೃತ್ತಿಯಲ್ಲಿ ಉಪರಿಶಬ್ದವನ್ನು ವಿವಕ್ಷಿಸಬಾರದೆನ್ನಲು ಯಾವುದೇ ಜ್ಞಾಪಕಗಳಿರುವುದಿಲ್ಲ. ಅಷ್ಟೇ ಅಲ್ಲದೇ ಅಲ್ಲಿಯೇ ಮಂಜರಿವ್ಯಾಖ್ಯಾನದಲ್ಲಿ 'ವ್ರಜಸ್ಯೋಪರೀತ್ಯಪ್ಯುದಾಹರ್ತವ್ಯಮ್' ಎಂಬುದಾಗಿ 'ಉಪರಿ' ಎಂಬುದನ್ನೂ

ಸಹ ಅವ್ಯಯಶಬ್ದದಿಂದ ವಿವಕ್ಷಿಸಬೇಕೆಂದು ಹೇಳಲಾಗಿದೆ. ಆದ್ದರಿಂದ 'ಉಪರಿ' ಎಂಬ ಅವ್ಯಯದ ಜೊತೆಗೂ ಸಮಾಸವಾಗುವುದಿಲ್ಲವೆಂದೇ ಸೂತ್ರದ ಅಭಿಪ್ರಾಯವಾಗಿದೆ. ಹೀಗಿರುವಾಗ ಪ್ರಕೃತ ಸೂತ್ರಕಾರರು 'ತದುಪರಿ' ಎಂದು ಸಮಾಸವನ್ನು ಹೇಗೆ ಮಾಡಿದರು?

**प्रकाशः** – मैवम् । तत्र प्रकृतषष्ठीसमासस्यैव निषेधात् । इह च ''पञ्चमीभयेन'' इत्यत्र योगविभागेन पञ्चमीसमासाश्रयणात् । पञ्चमी च ''अत ऊर्ध्वं प्रवक्ष्यामि'' इत्यादाविवावधित्वमात्रविवक्षया युक्ता । अत एव तत्वप्रदीपे ''मनुष्यत्वादुपरि'' इत्युक्तम् ।

ಉತ್ತರ - 'ಪೂರಣಗುಣ' ಎಂಬ ಸೂತ್ರದಲ್ಲಿ ಷಷ್ಠೀಸಮಾಸವನ್ನಷ್ಟೇ ನಿಷೇಧಮಾಡಿದ್ದಾರೆ ಹೊರತು, ಪಂಚಮೀಸಮಾಸವನ್ನೇನೂ ನಿಷೇಧ ಮಾಡಿಲ್ಲ. 'ಪಂಚಮೀಭಯೇನ' ಎಂಬ ಸೂತ್ರದಂತೆ 'ತಸ್ಮಾದುಪರಿ' 'ತದುಪರಿ' ಎಂದು ಸಮಾಸವನ್ನು ಮಾಡಲು ಬರುತ್ತದೆ. ಭಯವಾಚಕವಾದ ಶಬ್ದವಿಲ್ಲದ ಕಾರಣ, 'ಪಂಚಮೀಭಯೇನ' ಎಂಬ ಸೂತ್ರಕ್ಕೂ ಸಹ ಅವಕಾಶವಿಲ್ಲವೆಂದು ಶಂಕಿಸಬಾರದು. 'ಪಂಚಮೀ' ಎಂಬುದನ್ನು ಯೋಗವಿಭಾಗ ಮಾಡಿದಾಗ, 'ಪಂಚಮೀ' ಎಂಬುದೇ ಬೇರೆ ಸೂತ್ರವಾಗುತ್ತದೆ. 'ಭಯೇನ' ಎಂಬುದೇ ಬೇರೆ ಸೂತ್ರವಾಗುತ್ತದೆ. 'ಪಂಚಮೀ' ಎಂಬ ಸೂತ್ರದಂತೆ 'ಅವಧಿತ್ವ' ಎಂಬರ್ಥವನ್ನಷ್ಟೇ ವಿವಕ್ಷಿಸಿದಾಗ ಪಂಚಮೀ ವಿಭಕ್ತಿ ಬರುತ್ತದೆಂದು ತಿಳಿಯಬೇಕು. ಪ್ರಕೃತ 'ತಸ್ಮಾದುಪರಿ' ಎಂಬಲ್ಲಿ ಅವಧಿತ್ವವು ವಿವಕ್ಷಿತವಾದ್ದರಿಂದ ಸಮಾಸವನ್ನು ಹೇಳಲು ಯಾವುದೇ ಆತಂಕವಿಲ್ಲ. 'ಅತ ಊರ್ಧ್ವಂ ಪ್ರವಕ್ಷ್ಯಾಮಿ' ಇತ್ಯಾದಿ ಸ್ಥಳಗಳಲ್ಲಿ ಕೇವಲ ಅವಧಿತ್ವಾರ್ಥವನ್ನೇ ವಿವಕ್ಷಿಸಿ ಪಂಚಮೀಯನ್ನು ಪ್ರಯೋಗಮಾಡಿರುವುದು ಕಂಡಿರುತ್ತದೆ. ಆದ್ದರಿಂದಲೇ ತತ್ವಪ್ರದೀಪದಲ್ಲಿ 'ಮನುಷ್ಯತ್ವಾದುಪರಿ' ಎಂದು ಅವಧಿತ್ವಾರ್ಥವನ್ನೇ ವಿವಕ್ಷಿಸಿದ್ದಾರೆ.

**प्रकाशः** – षष्ठीसमासपक्षेऽपि ''पूरणगुण'' इति सूत्रेऽव्ययशब्देनोपरीत्यस्याग्रहणेन दोषाभावात् । उक्तं च दुर्घटवृत्तौ ''सता तव्येन च कृता पूर्वत्रोत्तरत्र च साहचर्यात्कृदन्ताव्ययस्यैव ग्रहणं तत्र । नत्वन्यस्य । तथाच तदुपरि मदुपरीत्यादिरपि साधुः'' इति ॥

ಅಥವಾ 'ತಸ್ಯ ಉಪರಿ' 'ತದುಪರಿ' ಎಂದು ಷಷ್ಠೀಸಮಾಸವನ್ನೂ ಸಹ ಆಶ್ರಯಿಸಬಹುದು. 'ಪೂರಣಗುಣ' ಇತ್ಯಾದಿ ಸೂತ್ರದಲ್ಲಿ ಅವ್ಯಯಶಬ್ದದಿಂದ 'ಉಪರಿ' ಎಂಬುದನ್ನು ವಿವಕ್ಷಿಸಬೇಕಾಗಿಲ್ಲ. ಈ ವಿಷಯದಲ್ಲಿ ಜ್ಞಾಪಕವೇನು? ಎಂದು ಪ್ರಶ್ನಿಸಬಾರದು. ದುರ್ಘಟವೃತ್ತಿಯಲ್ಲಿ ಹೀಗೆ ಹೇಳಿದ್ದಾರೆ - 'ಸತಾ ತವ್ಯೇನ ಚ ಕೃತಾ ಪೂರ್ವತ್ರೋತ್ತರತ್ರ ಚ ಸಾಹಚರ್ಯಾತ್ ಕೃದಂತಾವ್ಯಯಸ್ಯೈವ ಗ್ರಹಣಂ ತತ್ರ । ನತ್ವನ್ಯಸ್ಯ । ತಥಾಚ ತದುಪರಿ ಮದುಪರೀತ್ಯಾದಿರಪಿ ಸಾಧುಃ' 'ಪೂರಣ ಗುಣ ಸುಹಿತಾರ್ಥ ಸತ್ ಅವ್ಯಯ ತವ್ಯ' ಇತ್ಯಾದಿ ಪದಗಳ ಜೊತೆಗೆ ಸಮಾಸವು ಆಗುವುದಿಲ್ಲವೆಂದು ಸೂತ್ರವು ಹೇಳಿದೆ. ಅವ್ಯಯಶಬ್ದದ ಹಿಂದೆ ಹೇಳಿದ 'ಸತ್' ಎಂಬುದು ಕೃದಂತವಾದ ಶಬ್ದವಾಗಿದೆ. ಮುಂದಿರುವ 'ತವ್ಯ' ಎಂಬುದೂ ಸಹ

ಕೃದಂತಶಬ್ದವೇ ಆಗಿದೆ. ಹಿಂದಿನ-ಮುಂದಿನ ಶಬ್ದಗಳೆರಡೂ ಕೃದಂತವಾಗಿರುವಾಗ ಮಧ್ಯದಲ್ಲಿರುವ ಅವ್ಯಯ ಎಂಬುದೂ ಸಹ ಕೃದಂತವಾದ ಅವ್ಯಯವೇ ಆಗುತ್ತದೆ ಹೊರತು, ಕೃದಂತವಲ್ಲದ 'ಉಪರಿ' ಮೊದಲಾದ ಅವ್ಯಯಗಳನ್ನು ವಿವಕ್ಷಿಸಲು ಬರುವುದಿಲ್ಲ. ಆದ್ದರಿಂದ 'ತದುಪರಿ' 'ಮದುಪರಿ' ಇತ್ಯಾದಿಯಾಗಿ ಸಮಾಸವನ್ನು ಮಾಡಬಹುದು.

**प्रकाशः** – कश्चित्तु तदिति भिन्नं पदम् । षष्ठ्यर्थेऽव्ययं वाऽविभक्तिकं वा लुप्तविभक्तिकं वेत्याह ।।

ಕೆಲವರು ಹೀಗೆ ಹೇಳುತ್ತಾರೆ - 'ತದುಪರಿ' ಎಂಬಲ್ಲಿ 'ತತ್' ಎಂಬುದು ಭಿನ್ನವಾದ ಪದವಾಗಿದೆ. ಷಷ್ಠ್ಯರ್ಥದಲ್ಲಿರುವ ಅವ್ಯಯವೆಂದು ಅವಿಭಕ್ತಿಕ ನಿರ್ದೇಶವೆಂದು ಲುಪ್ತವಿಭಕ್ತಿಕ ಪದವೆಂದು ವಿವಕ್ಷಿಸಬೇಕೆಂದು ಇವರ ಅಭಿಪ್ರಾಯ. ಆದರೆ ಪಂಚಮೀ ಸಮಾಸವನ್ನಾಗಲೀ, ಷಷ್ಠೀಸಮಾಸವನ್ನಾಗಲೀ ಮಾಡಲು ಬರುವಾಗ ಇವರ ಅಭಿಪ್ರಾಯವು ಕ್ಲಿಷ್ಟಕಲ್ಪನೆಯಾಗಿದೆ.

**प्रकाशः** – एतेन तद्ब्रह्मोपासनमुपरि देवादिष्वपि सम्भवतीत्यर्थं वदता केनचिद्रामानुजीयेन षष्ठ्यन्ततच्छब्दस्याव्ययेन समासायोग इत्युक्तं दूषणं निरस्तं ध्येयम् ।

ರಾಮಾನುಜರು ಹೀಗೆ ಹೇಳುತ್ತಾರೆ - 'ತತ್' ಎಂದರೆ 'ಬ್ರಹ್ಮೋಪಾಸನೆ' ಎಂದರ್ಥ. 'ಉಪರಿ' ಎಂದರೆ ಮನುಷ್ಯತ್ವದಶೆಯನ್ನು ಪಡೆದ ಅನಂತರ ದೇವತಾಪದವಿಯ ಅವಸ್ಥೆಯಲ್ಲಿಯೂ ಬ್ರಹ್ಮೋಪಾಸನೆಯು ಕೂಡುತ್ತದೆ. ಆದ್ದರಿಂದ 'ತಸ್ಯ ಉಪರಿ' ಎಂದು ಷಷ್ಠೀಸಮಾಸವನ್ನು ಮಾಡಬಾರದು ಎಂದು ರಾಮಾನುಜರು ಹೇಳುತ್ತಾರೆ. ಈಗಾಗಲೇ ನಾವು ಷಷ್ಠೀಸಮಾಸವನ್ನು ಸಮರ್ಥನೆ ಮಾಡಿದ್ದರಿಂದ ಇವರ ಮತವನ್ನು ನಿರಾಕರಿಸಿದಂತಾಯಿತು. ಮತ್ತು 'ಉಪರಿ' ಎಂಬುದಕ್ಕೆ ಅವಧಿಯ ಆಕಾಂಕ್ಷೆಯು ಇದ್ದೇ ಇರುತ್ತದೆ. ಹತ್ತಿರದಲ್ಲೇ ಇರುವ 'ತತ್' ಎಂಬ ಶಬ್ದವೇ ಅವಧಿತ್ವವನ್ನು ಸಮರ್ಥಿಸುತ್ತಿರುವಾಗ ಇದನ್ನು ಬಿಟ್ಟು ಬೇರೆ ಬಗೆಯಲ್ಲಿ ಅರ್ಥವನ್ನು ಹೇಳುವುದು ಅಸ್ವರಸವಾಗುತ್ತದೆ. ಮತ್ತು ಬ್ರಹ್ಮೋಪಾಸನೆಯನ್ನು 'ತತ್' ಶಬ್ದದ ಅರ್ಥವೆಂದು ಹೇಳುವ ಅವಶ್ಯಕತೆಯಿಲ್ಲ. ಏಕೆಂದರೆ 'ಮನುಷ್ಯಾಧಿಕಾರತ್ವಾತ್' ಎಂಬ ಹಿಂದಿನ ಸೂತ್ರವನ್ನು ಬುದ್ಧಿಯ ವಿವೇಕದಿಂದ ವಿಪರಿಣಾಮ ಮಾಡಿಕೊಂಡು ಅಧಿಕಾರಪದವನ್ನು ತೆಗೆದುಕೊಳ್ಳಲು ಬರುತ್ತದೆ. ಹೀಗೆ ಋಜುವಾಗಿಯೇ ಯೋಜನ ಮಾಡಲು ಬರುವಾಗ ಭಿನ್ನಪದಮಾಡುವುದು ಅತ್ಯಂತ ಅಸ್ವರಸವಾಗಿದೆ.

**प्रकाशः** – द्वितीये विरोधः कर्मणीति चेन्नानेकप्रतिपत्तेर्दर्शनादित्यत्र येन कर्मणा देवपदं प्राप्तं तस्मिन्नेव पूर्वकल्पे प्रवृत्तकर्मणि पूर्वं देवताभावेनोद्देश्याभावाद्वैयर्थ्याख्य-विरोधापत्तेरिति चेन्न । एतद्देवानां पूर्वमभावेऽप्यनेकेषां योग्यमनुष्याणां देवतापदप्राप्तेः "ते ह नाकं महिमानः सचन्ते" इत्यादौ दर्शनादित्यर्थः । तथाचान्तरङ्गबाधकनिरासाद्द्वितीयताऽस्येति भावः ।

'ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇ ರ್ದರ್ಶನಾತ್' ಎಂಬುದು ಎರಡನೆಯ ಸೂತ್ರ. ಇದರ ಅಭಿಪ್ರಾಯ ಹೀಗಿದೆ - ಯೋಗ್ಯರಾದ ಮನುಷ್ಯರು ವಿದ್ಯೆ ಹಾಗೂ ಕರ್ಮಗಳಿಂದ ದೇವತಾಪದವಿಗಳನ್ನು ಹೊಂದುತ್ತಾರೆಂದು ಪ್ರಥಮಸೂತ್ರದಲ್ಲಿ ಹೇಳಲಾಯಿತು. ಆದರೆ ಕರ್ಮಾಚರಣೆಯಲ್ಲಿ ಇವರು ತೊಡಗಲು ಹೇಗೆ ಸಾಧ್ಯ? ದೇವತುಪದವಿಯಲ್ಲಿರುವ ದೇವತೆಯನ್ನು ಉದ್ದೇಶಿಸಿ, ಕರ್ಮವನ್ನು ಆಚರಿಸಬೇಕು. ಆದರೆ ದೇವತಾಪದವಿಯಲ್ಲಿ ಯಾರೂ ಇಲ್ಲದ ಕಾರಣ ತದುದ್ದೇಶಕವಾದ ಕರ್ಮವನ್ನು ಮಾಡಲು ಹೇಗೆ ಸಾಧ್ಯ?

ಹೀಗೆ ಪ್ರಶ್ನಿಸಬಾರದು. ಕರ್ಮವನ್ನು ಆಚರಿಸುತ್ತಿರುವಂತಹ ಮನುಷ್ಯನು ಇನ್ನೂ ದೇವತಾಪದವಿಯನ್ನು ಹೊಂದದಿರಬಹುದು. ಆದರೆ ಹಿಂದಿನ ಕಲ್ಪದಲ್ಲಿ ಯೋಗ್ಯನಾದ ಮತ್ತೊಬ್ಬ ಮನುಷ್ಯನು ದೇವತಾಪದವಿಯನ್ನು ಹೊಂದಿರುತ್ತಾನೆ. 'ತೇಹ ನಾಕಂ ಮಹಿಮಾನಃ ಸಚಂತೇ' ಇತ್ಯಾದಿ ಪುರುಷಸೂಕ್ತವು ಈ ವಿಷಯದಲ್ಲಿ ಆಧಾರವಾಗಿದೆ. ಆದ್ದರಿಂದ ಈ ಯೋಗ್ಯಮನುಷ್ಯನು ದೇವತಾಪದವಿಯನ್ನು ಹೊಂದಿದ್ದರೂ ಮತ್ತೊಬ್ಬ ಮನುಷ್ಯನು ಆ ದೇವತಾಪದವಿಯಲ್ಲಿರುವುದರಿಂದ ಅವನನ್ನು ಉದ್ದೇಶಿಸಿ, ಕರ್ಮಾಚರಣೆಯಲ್ಲಿ ತೊಡಗಬಹುದು. ಮುಂದಿನ ಕಲ್ಪದಲ್ಲಿ ಈ ಮನುಷ್ಯನು ದೇವತಾಪದವಿಯನ್ನು ಹೊಂದುತ್ತಾನೆ.[೧]

ಎರಡು ಹಾಗೂ ಮೂರನೆಯ ಸೂತ್ರಗಳಲ್ಲಿ ಬಾಧಕವನ್ನು ಪರಿಹರಿಸುತ್ತಿದ್ದಾರೆ. ಹೀಗಿರುವಾಗ 'ವಿರೋಧ ಕರ್ಮಣಿ' ಇತ್ಯಾದಿ ಸೂತ್ರಕ್ಕೆ ಎರಡನೆಯ ಸ್ಥಾನವನ್ನು ನೀಡಲು ಏನು ಕಾರಣ? ಎಂದರೆ ಈ ಸೂತ್ರವು ಅಂತರಂಗ ಬಾಧಕವನ್ನು ಪರಿಹಾರ ಮಾಡುತ್ತಿದೆ. ಆದ್ದರಿಂದ ಮೂರನೆಯ ಸೂತ್ರಕ್ಕಿಂತ ಮೊದಲು ಇದನ್ನು ಹೇಳಿದ್ದಾರೆ. ಏಕೆಂದರೆ ಕರ್ಮದಿಂದ ದೇವತಾಪದವಿಯು ಪ್ರಾಪ್ತವಾಗುತ್ತದೆಂದು ಹೇಳಿದಾಗ ಕರ್ಮದಲ್ಲೇ ಅನುಪಪತ್ತಿಯು ಪ್ರಾಪ್ತವಾಗುತ್ತದೆ. 'ಉಪರಿ' ಎಂಬ ಶಬ್ದದಿಂದ ದೇವತಾಪದವಿಗೆ ಪ್ರಾಗಭಾವವನ್ನು ಹೇಳಿದಂತಾಯಿತು. ಕರ್ಮದಿಂದ ಆ ಪದವಿಯು ಪ್ರಾಪ್ತವಾಗುತ್ತದೆ. ಪ್ರಾಗಭಾವಕಾಲದಲ್ಲಿ ಕರ್ಮದಲ್ಲೇ ಅನುಪಪತ್ತಿಯು ಬರುವುದರಿಂದ ಶೀಘ್ರವಾಗಿ ಈ ಶಂಕೆಯು ಪ್ರಾಪ್ತವಾಗುತ್ತಿದೆ. ಹಾಗಾಗಿ ಬಾಧಕವು ಅಂತರಂಗವಾಗಿದೆಯೆಂದು ತಿಳಿಯಬೇಕು.

**प्रकाशः** – यदत्र केनचिदुक्तं मनुष्यप्रवाहस्यानादित्वे विवादाभावेन शङ्काया अनुत्थानाद्दर्शनशब्दस्य स्वार्थे सम्भवति तद्विषयश्रुतिपरत्वमस्वरसमिति तन्निरस्तम् ।

---

(೧) ಬಹಳ ಪ್ರಯತ್ನಪಟ್ಟು ವಿದ್ಯಾರ್ಥಿಯು ಅಧ್ಯಾಪಕ ಪದವಿಯನ್ನು ಹೊಂದುತ್ತಾನೆ. ಇವನು ಅಧ್ಯಾಪಕನಾಗುವ ಮೊದಲು ಯಾರೂ ಸಹ ಅಧ್ಯಾಪಕಪದವಿಯಲ್ಲಿ ಇಲ್ಲವೆಂದಲ್ಲ. ಇವನು ವಿದ್ಯಾರ್ಥಿಯಾಗಿದ್ದಾಗ. ಮತ್ತೊಬ್ಬ ಅಧ್ಯಾಪಕನನ್ನು ಆಶ್ರಯಿಸಿ, ಅವನಿಂದ ವಿದ್ಯೆ ಮೊದಲಾದವನ್ನು ಪಡೆದು, ಅನೇಕ ವರ್ಷಗಳ ಅನಂತರ ಅದೇ ಅಧ್ಯಾಪಕ ಸ್ಥಾನಕ್ಕೆ ಈ ವಿದ್ಯಾರ್ಥಿಯು ಹೋಗುತ್ತಾನೆ. ಈ ದೃಷ್ಟಾಂತದಂತೆ ದೇವತೆಗಳೂ ಸಹ ಮೊದಲು ಮನುಷ್ಯರಾಗಿದ್ದು, ಆಯಾಸ್ಥಾನದಲ್ಲಿರುವ ದೇವತೆಗಳನ್ನು ಉಪಾಸನೆ ಮಾಡಿ ಮುಂದೆ ಅದೇ ಸ್ಥಾನವನ್ನು ಹೊಂದುತ್ತಾರೆಂದು ತಿಳಿಯಬೇಕು.

ಎರಡನೆಯ ಸೂತ್ರಕ್ಕೆ ಕೆಲವರ ವ್ಯಾಖ್ಯಾನ ಹೀಗಿದೆ - ಮನುಷ್ಯ ಪ್ರವಾಹವು ಅನಾದಿಯಾಗಿದೆಂಬ ವಿಷಯದಲ್ಲಿ ವಿವಾದವೇ ಇಲ್ಲ. ಆದ್ದರಿಂದ ಶಂಕೆಯು ಪ್ರಾಪ್ತವಾಗದ ಕಾರಣ, 'ದರ್ಶನ' ಶಬ್ದಕ್ಕೆ ಪ್ರತ್ಯಕ್ಷ ಎಂಬರ್ಥವನ್ನೇ ಸ್ವಾರ್ಥದಲ್ಲಿ ಕೂಡಿಸಲು ಬರುವಾಗ ತದ್ವಿಷಯಕವಾದ ಶ್ರುತಿಪರತ್ವವನ್ನು ಹೇಳುವುದು ಅಸ್ವರಸವಾಗಿದೆ. ಅಂದರೆ ಮನುಷ್ಯರ ಪ್ರವಾಹವು ಅನಾದಿಯಾಗಿದೆಯೆಂದು ಪ್ರತ್ಯಕ್ಷದಿಂದಲೇ ತಿಳಿಯಲು ಬರುವಾಗ ಶ್ರುತಿಯನ್ನು ಉಲ್ಲೇಖಿಸುವ ಅವಶ್ಯಕತೆಯಿಲ್ಲ ಎಂದು ಇವರ ಅಭಿಪ್ರಾಯ. ಇದನ್ನು ನಿರಾಕರಿಸಿದಂತಾಯಿತು.

**प्रकाशः** – देवतापदं प्राप्तानामेव प्रवाहस्यानादित्वोक्त्या मनुष्यप्रवाहानादित्वानुक्तेः । तदुक्तं टीकायाम् ''एतद्देवानां पूर्वमभावेऽपि देवतान्तरसद्भावात्'' इति ॥

ದೇವತಾಪದವಿಯನ್ನು ಹೊಂದಿದಂತಹ ಜೀವರಿಗೆ ಮಾತ್ರ ಅನಾದಿತ್ವವನ್ನು ಹೇಳಲಾಗಿದೆ ಹೊರತು, ಮನುಷ್ಯ ಪ್ರವಾಹಕ್ಕೆ ಅನಾದಿತ್ವವನ್ನು ಇಲ್ಲಿ ಹೇಳುತ್ತಿಲ್ಲ. ಇದನ್ನೇ ಟೀಕೆಯಲ್ಲಿ 'ಏತದ್ದೇವಾನಾಂ ಪೂರ್ವಮಭಾವೇऽಪಿ ದೇವತಾಂತರಸದ್ಭಾವಾತ್' ಹಿಂದಿನ ಕಲ್ಪದಲ್ಲಿ ಈ ದೇವತೆಯು ಇಲ್ಲದ್ದಿದರೂ ಮತ್ತೊಬ್ಬ ದೇವತೆಯು ಇರುತ್ತಾನೆಂದು ಹೇಳಿದ್ದಾರೆ.

**प्रकाशः** – दर्शनपदं चाग्रे 'दर्शनात्' 'स्मृतेश्च' इत्यत्रेव श्रुतौ स्वरसम् । ''दृश्यते हि सौभरिप्रभृतीनां योगिनां युगपदनेकशरीरप्राप्तिः ।

आत्मनो वै शरीराणि बहूनि मनुजेश्वर ।
योगी कुर्याद्बलं प्राप्य तैश्च सर्वां महीं चरेत् ॥

इति भारतवचनात्'' इति त्वदुक्तरीत्या ममापि श्रुतौ दर्शनादित्यर्थोपपत्तेश्च ।

ಮತ್ತು ದರ್ಶನಪದಕ್ಕೆ ಮುಂದೆ 'ದರ್ಶನಾತ್' 'ಸ್ಮೃತೇಶ್ಚ' ಎಂಬಲ್ಲಿ ಹೇಗೆ ಶ್ರುತಿಯೆಂಬರ್ಥವನ್ನು ಹೇಳಲಾಗಿದೆಯೋ ಅದರಂತೆ ಇಲ್ಲಿಯೂ ತಿಳಿಯಬೇಕು. ಆದ್ದರಿಂದ ಯಾವುದಾದರೂ ಸೂತ್ರದಲ್ಲಿ 'ದರ್ಶನಾತ್' ಎಂದು ಹೇಳಿದರೆ ಶ್ರುತಿಪ್ರಮಾಣವಿರುವುದರಿಂದ ಎಂದೇ ಅರ್ಥ. 'ಸ್ಮೃತೇಃ ಸ್ಮರ್ಯಂತೇ' ಇತ್ಯಾದಿಯಾಗಿ ಹೇಳಿದರೆ ಸ್ಮೃತಿಪ್ರಮಾಣವಿದೆಯೆಂದರ್ಥ. ಮತ್ತು

'ದೃಶ್ಯತೇ ಹಿ ಸೌಭರಿಪ್ರಭೃತೀನಾಂ ಯೋಗಿನಾಂ ಯುಗಪದನೇಕಶರೀರಪ್ರಾಪ್ತಿಃ।
ಆತ್ಮನೋ ವೈ ಶರೀರಾಣಿ ಬಹೂನಿ ಮನುಜೇಶ್ವರ।
ಯೋಗೀ ಕುರ್ಯಾದ್ಬಲಂ ಪ್ರಾಪ್ಯ ತೈಶ್ಚ ಸರ್ವಾಂ ಮಹೀಂ ಚರೇತ್ ॥

ಇತಿ ಭಾರತವಚನಾತ್' ಎಂಬುದಾಗಿ ನೀವೇ ಹೇಳಿದಂತೆ ಶ್ರುತಿಯಲ್ಲಿ ಕಾಣಿಸುತ್ತಿದೆಯೆಂಬರ್ಥವನ್ನು ವಿವಕ್ಷಿಸಬಹುದು. ಸೌಭರಿ ಮೊದಲಾದ ಯೋಗಿಗಳಿಗೆ ಅನೇಕ ಶರೀರ ಬರುವುದು ಶ್ರುತಿಯಲ್ಲಿ ಕಂಡಿದೆ. ಹೇಗೆಂದರೆ 'ಆತ್ಮನೋ ಹಿ' ಎಂಬ ವಾಕ್ಯದಲ್ಲಿ ಅನೇಕ ಶರೀರವನ್ನು ಯೋಗಿಯು ಪಡೆಯಬಹುದು ಎಂದು

ಹೇಳಲಾಗಿದೆ. ಅದರಂತೆ ನಾವೂ ಸಹ 'ದರ್ಶನಾತ್' ಎಂಬ ಪದಕ್ಕೆ ಶ್ರುತಿಯಲ್ಲಿ ಕಾಣಿಸುತ್ತಿದೆಯೆಂಬರ್ಥವನ್ನು ಹೇಳುತ್ತೇವೆ.

**प्रकाशः –** शब्द इति चेन्नातः प्रभवात्प्रत्यक्षानुमानाभ्यामिति तृतीये येन वेदरूपशब्देन देवानामादिमत्त्वेऽपि प्रवाहानादित्वमुपेत्य कर्मविरोधो निरस्तः तस्मिन्नेव वेदरूपे शब्दे ''वाचा विरूप नित्यया'' इत्यादिना नित्येऽनित्यदेवार्थ-सम्बन्धायोगरूपविरोध इति चेन्न ।

'ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬುದು ಮೂರನೆಯ ಸೂತ್ರ. ಈ ಸೂತ್ರವು ಮೂರನೆಯ ಸ್ಥಾನವನ್ನು ಹೊಂದಲು ಕಾರಣ ಹೀಗಿದೆ. ಮತ್ತು ಸೂತ್ರಾರ್ಥ ಹೀಗಿದೆ - ಯಾವ ವೇದವನ್ನು ಪ್ರಮಾಣವನ್ನಾಗಿ ವಿವಕ್ಷಿಸಿ, ದೇವತೆಗಳಿಗೆ ಉತ್ಪತ್ತಿ ಮೊದಲಾದವುಗಳು ಇದ್ದರೂ ಪ್ರವಾಹತಃ ಅನಾದಿತ್ವ ಇರುವುದರಿಂದ ಕರ್ಮವಿರೋಧವನ್ನು ಪರಿಹರಿಸಲಾಯಿತು. ಈ ವಿಷಯದಲ್ಲಿ ಶಬ್ದವೇ ಪ್ರಮಾಣವಾಗಿದೆ. ಅಂತಹ ಶಬ್ದರೂಪವಾದ ಪ್ರಮಾಣದಲ್ಲಿ 'ವಾಚಾ ವಿರೂಪ ನಿತ್ಯಯಾ' ಇತ್ಯಾದಿಯಾಗಿ ನಿತ್ಯವಾದ ವೇದದಲ್ಲಿ ಅನಿತ್ಯವಾದ ದೇವತೆಗಳೆಂಬ ಅರ್ಥದ ಸಂಬಂಧವು ಕೂಡುವುದಿಲ್ಲವಲ್ಲವೇ? ಎಂಬ ಪ್ರಶ್ನಿಸಬಾರದು.

**प्रकाशः –**

सूर्याचन्द्रमसौ धाता यथापूर्वमकल्पयत् ।
यथैव नियमः काले सुरादिनियमस्तथा ।।

इत्यादिरूपात् अतः अस्माच्छब्दरूपप्रमाणाद्देवानां प्रतिकल्पं प्रभवात्प्रभव-नियमावगमात् महतां प्रत्यक्षात् यथेदानीं तथोपर्यपि देवा भविष्यन्तीतीतरेषा-मनुमानाच्चेति स्वरूपनित्यत्वाभावेऽपि प्रवाहरूपेण नित्यत्वमुपेत्योद्धृतः । तथाचाकाङ्क्षाक्रमात्क्रम इत्यर्थः ।

ಏಕೆಂದರೆ 'ಸೂರ್ಯಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್' 'ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ' ಇವೇ ಮೊದಲಾದ ಶಬ್ದರೂಪವಾದ ಪ್ರಮಾಣಗಳ ಬಲದಿಂದ ಮತ್ತು ಪ್ರಭವಾತ್ = ಪ್ರತಿಕಲ್ಪದಲ್ಲಿಯೂ ದೇವತೆಗಳ ಉತ್ಪತ್ತಿಯು ನಿಯಮೇನ ಆಗುತ್ತದೆಂದು ಇದೇ ಪ್ರಮಾಣಗಳು ಆಧಾರವಾಗಿದೆ. ಮತ್ತು ಮಹಜ್ಜನರ ಪ್ರತ್ಯಕ್ಷವೂ ಸಹ ಈ ವಿಷಯದಲ್ಲಿ ಆಧಾರವಾಗಿದೆ. ಅಷ್ಟೇ ಅಲ್ಲದೆ, ಭವಿಷತ್ಕಾಲಃ, ದೇವತಾವಾನ್, ಕಾಲತ್ವಾತ್, ಏತತ್‌ಕಾಲವತ್ ಎಂಬ ಅನುಮಾನದಿಂದ ನಮಗೆ ದೇವತೆಗಳ ಉತ್ಪತ್ತಿಯು ಪ್ರವಾಹತಃ ಅನಾದಿಯೆಂದು ತಿಳಿಯುತ್ತದೆ. ಆದ್ದರಿಂದ ದೇವತೆಗಳಿಗೆ ಸ್ವರೂಪತಃ ನಿತ್ಯತ್ವವಿಲ್ಲದಿದ್ದರೂ ಪ್ರವಾಹತಃ ನಿತ್ಯತ್ವವಿರುತ್ತದೆಂದು ವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ

ಮೊದಲು ಕರ್ಮದಲ್ಲಿ ಬಂದಿರುವಂತಹ ವಿರೋಧವನ್ನು ಪರಿಹರಿಸಿದ ಮೇಲೆ ಶಬ್ದದ ವಿಷಯದಲ್ಲಿ ವಿರೋಧವು ಬರುತ್ತದೆ. ಅದರ ಪರಿಹಾರಕ್ಕಾಗಿ ಮೂರನೆಯ ಸೂತ್ರವು ಹೊರಟಿದೆ. ಹೀಗೆ ಆಕಾಂಕ್ಷಾಕ್ರಮದಿಂದ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿ ಉಪಪನ್ನವಾಗಿದೆಯೆಂದು ತಿಳಿಯಬೇಕು.

**प्रकाशः –** अत्र नित्यत्वादिति वाच्ये प्रभवादित्युक्तिर्देवप्रवाहनित्यत्वद्योतनाय।

ಸೂತ್ರದಲ್ಲಿ 'ಪ್ರಭವಾತ್' ಎಂದು ಹೇಳುವ ಬದಲು 'ನಿತ್ಯತ್ವಾತ್' ಎಂದೇ ಹೇಳಬಹುದಿತ್ತು. ಆದರೆ ಪೂರ್ವಪಕ್ಷವು ದೇವತೆಗಳಿಗೆ ಸ್ವರೂಪತಃ ನಿತ್ಯತ್ವವನ್ನು ಹೇಳುತ್ತಿರುವುದರಿಂದ, ಉದ್ದೇಶವು ಸಿದ್ಧವಾಗುತ್ತಿರಲಿಲ್ಲ. 'ಪ್ರಭವಾತ್' ಎಂದು ಹೇಳಿದಾಗ ದೇವತೆಗಳಿಗೆ ಉತ್ಪತ್ತಿಯಿದೆ. ಮತ್ತು ಆ ಉತ್ಪತ್ತಿಯು ಪ್ರವಾಹತಃ ನಿತ್ಯವಾಗಿದೆ ಎಂದು ಸೂಚಿಸಿದಂತಾಯಿತು.

**प्रकाशः –** नन्वत्रात इत्युक्तशब्दरूपमानेनैवालम् । किं प्रत्यक्षाद्युपन्यासेनेति चेत् श्रुतावुपचारेणाप्युक्तिरिति शङ्कानिरासार्थत्वात् ।

ದೇವತೆಗಳ ಪ್ರವಾಹನಿತ್ಯತ್ವ ವಿಷಯದಲ್ಲಿ ಪ್ರತ್ಯಕ್ಷ, ಅನುಮಾನ, ಆಗಮ ಮೂರನ್ನೂ ಸಹ ಪ್ರಮಾಣವನ್ನಾಗಿ ಹೇಳಿದ್ದಾರೆ. 'ಅತಃ' ಎಂಬುದರಿಂದ ಶಬ್ದರೂಪಪ್ರಮಾಣವನ್ನು ಹೇಳಲಾಗಿದೆ. 'ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬುದರಿಂದ ಪ್ರತ್ಯಕ್ಷ ಹಾಗೂ ಅನುಮಾನರೂಪ ಪ್ರಮಾಣಗಳನ್ನು ಹೇಳಿದಂತಾಗಿದೆ. ಆದರೆ 'ಅತಃ' ಎಂಬ ಪದದಿಂದ ಶಬ್ದರೂಪಪ್ರಮಾಣವನ್ನು ಹೇಳಿದರೆ ಸಾಕು. ಪುನಃ ಪ್ರತ್ಯಕ್ಷಾನುಮಾನಪ್ರಮಾಣಗಳನ್ನೇಕೆ ಹೇಳಬೇಕು? ಎಂದು ಪ್ರಶ್ನಿಸಬಾರದು. ಏಕೆಂದರೆ ಶ್ರುತಿಪ್ರಮಾಣವನ್ನು ಹೇಳಿದಾಗ ಔಪಚಾರಿಕವಾಗಿ ಅದನ್ನು ಪೂರ್ವಪಕ್ಷಿಯು ಅರ್ಥೈಸಬಹುದು. ಅದರ ನಿರಾಸಕ್ಕಾಗಿ ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಹೇಳಿರುತ್ತಾರೆ.

**प्रकाशः –** तर्हि शब्दप्रत्यक्षानुमानेभ्यः प्रभवादिति सूत्रणीयम् । किं विभागेनेति चेन्न ।

ಪ್ರಶ್ನೆ - ಹಾಗಾದರೆ ಶಬ್ದಪ್ರಮಾಣವನ್ನು ಮೊದಲು ಹೇಳಿ, ಪ್ರತ್ಯಕ್ಷಾನುಮಾನಗಳನ್ನು ಅನಂತರ ಹೇಳಲು ಕಾರಣಗಳೇನು? 'ಶಬ್ದಪ್ರತ್ಯಕ್ಷಾನುಮಾನೇಭ್ಯಃ ಪ್ರಭವಾತ್' ಎಂದೇ ಸೂತ್ರವನ್ನು ಹೇಳಬಹುದಿತ್ತಲ್ಲವೇ? ಏಕೆ ವಿಭಾಗ ಎಂದು ಕೇಳಬಾರದು.

**प्रकाशः –** शब्दस्यान्यानपेक्षप्रमाणत्वेन प्रधानत्वेनादौ पृथङ्निर्देशात् ।

ಉತ್ತರ - ಶಬ್ದವು ಅನ್ಯಾನಪೇಕ್ಷಿತವಾಗಿ ಸ್ವತಂತ್ರಪ್ರಮಾಣವಾಗಿದೆ. ಹೀಗೆ ಪ್ರಧಾನ್ಯವಿರುವುದರಿಂದ ಪ್ರತ್ಯೇಕವಾಗಿ ಮೊದಲು ಶಬ್ದವನ್ನು ಪ್ರಮಾಣವನ್ನಾಗಿ ಹೇಳಿದ್ದಾರೆ. ಆದರೆ ಪ್ರತ್ಯಕ್ಷಾನುಮಾನಗಳೆರಡು ಸ್ವತಂತ್ರವಲ್ಲದ ಕಾರಣ ಅನಂತರ ಹೇಳಿರುತ್ತಾರೆ.

**प्रकाशः** – महतां प्रत्यक्षमस्तीति ज्ञानस्य तत्प्रामाण्यज्ञानस्य च शब्दमूलत्वादनुमानस्यापि शब्दसंवादित्वेनैव प्रामाण्यात्तयोस्समासेन निर्देश इति ।

ಮಹಾತ್ಮರಿಗೆ ಪ್ರತ್ಯಕ್ಷವಿದೆಯೆಂದು ನಮಗೆ ತಿಳಿಯಲು ಸಾಧ್ಯವಿಲ್ಲ. ಅದನ್ನು ಶಬ್ದದಿಂದಲೇ ತಿಳಿಯಬೇಕು. ಮತ್ತು ಆ ಪ್ರತ್ಯಕ್ಷದ ಪ್ರಾಮಾಣ್ಯವೂ ಸಹ ಆಗಮದಿಂದಲೇ ತಿಳಿಯುತ್ತದೆ. ಇದರಂತೆ ಅನುಮಾನವೂ ಸಹ ಸ್ವತಂತ್ರವಾಗಿ ಏನನ್ನೂ ಸಹ ನಿಶ್ಚಯ ಮಾಡುವುದಿಲ್ಲ. ಆಗಮದ ಸಂವಾದದಿಂದಲೇ ಅನುಮಾನಕ್ಕೆ ಪ್ರಾಮಾಣ್ಯವನ್ನು ಹೇಳಬೇಕು. ಹಾಗಾಗಿ ಶಬ್ದವು ಅನ್ಯಾನಪೇಕ್ಷಿತವಾಗಿದೆ. ಪ್ರತ್ಯಕ್ಷಾನುಮಾನಗಳೆರಡೂ ಆಗಮದ ಅಪೇಕ್ಷೆಯನ್ನು ಹೊಂದಿವೆ. ಈ ವ್ಯತ್ಯಾಸವನ್ನು ಗಮನಿಸಿ ಶಬ್ದವನ್ನು 'ಅತಃ' ಎಂಬುದರಿಂದ ಮೊದಲು ಹೇಳಿ, ಪ್ರತ್ಯಕ್ಷಾನುಮಾನಗಳನ್ನು ಅನಂತರ ಹೇಳಿರುತ್ತಾರೆ.

**प्रकाशः** – एतेन प्रत्यक्षानुमानाभ्यां चेति स्यादिति निरस्तम् । उत्तरसूत्रे युक्त्यन्तरसमुच्चायकचशब्दोक्तेश्च ।

ಇದರಿಂದ ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಶಂಕೆ ಹೀಗಿದೆ - ಸೂತ್ರದಲ್ಲಿ 'ಪ್ರತ್ಯಕ್ಷಾನುಮಾನಾಭ್ಯಾಂ ಚ' ಎಂಬುದಾಗಿ 'ಚ' ಶಬ್ದವನ್ನು ಹೇಳಬೇಕಿತ್ತು. ಏಕೆಂದರೆ ಶಬ್ದವಷ್ಟೇ ಪ್ರಮಾಣವಲ್ಲ. ಪ್ರತ್ಯಕ್ಷಾನುಮಾನಗಳೂ ಸಹ ಪ್ರಮಾಣವಾಗಿವೆ ಎಂಬ ಆಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ಈಗಾಗಲೇ ಹೇಳಿದಂತೆ ಪ್ರತ್ಯಕ್ಷ ಮತ್ತು ಅನುಮಾನಗಳು ಸ್ವತಂತ್ರವಾಗಿ ಪ್ರಮಾಣವೇ ಅಲ್ಲ. ಶಬ್ದವನ್ನು ಉಪಜೀವಿಸಿಕೊಂಡು ಇರುವುದರಿಂದ ಪ್ರತ್ಯೇಕವಾದ ಪ್ರಾಮಾಣ್ಯವೇ ಇಲ್ಲದ ಕಾರಣ 'ಚ' ಶಬ್ದವನ್ನು ಸೂತ್ರಕಾರರು ಹೇಳಿಲ್ಲ. ಅಥವಾ ಮುಂದಿನ 'ಅತ ಏವ ಚ ನಿತ್ಯತ್ವಂ' ಎಂಬ ಸೂತ್ರದಲ್ಲಿ ದೇವತೆಗಳ ಪ್ರವಾಹನಿತ್ಯತ್ವ ವಿಷಯದಲ್ಲೇ ಅನ್ಯಥಾನುಪಪತ್ತಿ ಪ್ರಮಾಣವನ್ನು ಹೇಳುತ್ತಾರೆ. ಅಲ್ಲಿ 'ಚ' ಶಬ್ದವಿರುವುದರಿಂದ ಹಿಂದಿನ ಸೂತ್ರದಲ್ಲಿ ಹೇಳಿರುವುದಿಲ್ಲ. ಅಂದರೆ ಒಂದೇ ವಿಷಯದಲ್ಲಿ ಅನೇಕ ಪ್ರಮಾಣಗಳನ್ನು ಆಧಾರವಾಗಿ ಹೇಳುವಾಗ ಪ್ರತಿಯೊಂದು ಕಡೆಯೂ 'ಚ' ಶಬ್ದವನ್ನು ಹೇಳಬೇಕಾಗಿಲ್ಲ. ಕೊನೆಯ ಪ್ರಮಾಣವನ್ನು ಹೇಳುವ ಮೊದಲು 'ಚ' ಶಬ್ದವನ್ನು ಹೇಳಿದರೆ ಸಾಕು ಎಂದಭಿಪ್ರಾಯ.

**प्रकाशः** – एतेनैव प्रत्यक्षं नोपन्यासार्हम् । विप्रतिपत्तेरिति केनचिदुक्तं निरस्तं बोध्यम् ।

ಮತ್ತೊಂದು ಶಂಕೆಯು ಹೀಗಿದೆ - ಪ್ರತ್ಯಕ್ಷವನ್ನು ಪ್ರಮಾಣವನ್ನಾಗಿ ಹೇಳಲೇಬಾರದು. ಈ ವಿಷಯದಲ್ಲಿ ವಿಪ್ರತಿಪತ್ತಿ ಇದೆ. ಮಹಜ್ಜನರ ಪ್ರತ್ಯಕ್ಷವಿದೆಯೆಂದು ನಮಗೆ ಹೇಗೆ ತಾನೇ ತಿಳಿಯಲು ಸಾಧ್ಯ ? ಎಂದು.

ಈ ಶಂಕೆಗೂ ಈಗ ಅವಕಾಶವಿಲ್ಲ. ಏಕೆಂದರೆ ಮಹಜ್ಜನರಿಗೆ ಪ್ರತ್ಯಕ್ಷವಿದೆಯೆಂಬ ವಿಷಯದಲ್ಲಿ ಶಬ್ದವೇ ಪ್ರಮಾಣವಾಗಿದೆಯೆಂದು ಹೇಳಿದ್ದರಿಂದ ವಿಪ್ರತಿಪತ್ತಿ ಬರಲು ಸಾಧ್ಯವಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – चतुर्थे अत एव च नित्यत्वमित्यत्र । परोक्तशब्दनित्यत्वादेव वाच्यार्थस्य देवस्य प्रवाहतो नित्यत्वं सिध्यति । नहि वाच्यानित्यत्वे वाचकनित्यत्वं सिध्यतीत्यर्थापत्त्या देवप्रवाहनित्यत्वमत्र साध्यते ।

'ಓಂ ಅತ ಏವ ಚ ನಿತ್ಯತ್ವಮ್ ಓಂ' ಎಂಬುದು ನಾಲ್ಕನೆಯ ಸೂತ್ರ. ಹಿಂದಿನ ಸೂತ್ರದಲ್ಲಿ ದೇವತೆಗಳ ಪ್ರವಾಹವು ಅನಾದಿನಿತ್ಯವಾಗಿದೆಯೆಂಬ ವಿಷಯದಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದಗಳನ್ನು ಪ್ರಮಾಣಗಳನ್ನಾಗಿ ಹೇಳಲಾಯಿತು. ಪ್ರಕೃತದಲ್ಲಿ ಅರ್ಥಾಪತ್ತಿ ಪ್ರಮಾಣವನ್ನು ಹೇಳಲಾಗಿದೆ. ಶಬ್ದವು ನಿತ್ಯವಾದ್ದರಿಂದ ವಾಚ್ಯವಾದ ದೇವತಾಪ್ರವಾಹ ಎಂಬ ಅರ್ಥವೂ ಸಹ ನಿತ್ಯವೆಂದು ಸಿದ್ಧವಾಗುತ್ತದೆ. ಏಕೆಂದರೆ ವಾಚ್ಯವು ಅನಿತ್ಯವಾದರೆ, ವಾಚಕವು ನಿತ್ಯವಾಗಲು ಸಾಧ್ಯವಿಲ್ಲ. ಆದ್ದರಿಂದ ವಾಚಕನಿತ್ಯತ್ವಾನ್ಯಥಾನುಪಪತ್ತಿಯಿಂದ ವಾಚ್ಯನಿತ್ಯತ್ವವು ಸಿದ್ಧವಾಯಿತು.

**प्रकाशः** – पूर्वोक्तश्रुत्याऽर्थापत्तेस्समुच्चयार्थश्चशब्दः । पूर्वं शब्दात्प्रभवनियमोक्तिः। अत्र नित्यत्वरूपतद्धर्मात्तदुक्तिरिति योगविभागः ।

ಹಿಂದೆ ಇದೇ ವಿಷಯದಲ್ಲಿ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದ್ದರು. ಪ್ರಕೃತ ಅರ್ಥಾಪತ್ತಿಯನ್ನೂ ಸಹ ಪ್ರಮಾಣವನ್ನಾಗಿ ಹೇಳುತ್ತಿದ್ದಾರೆ. ಶ್ರುತಿಯ ಜೊತೆಗೆ ಈ ಅರ್ಥಾಪತ್ತಿಯನ್ನು ಸಮುಚ್ಚಯ ಮಾಡುವುದಕ್ಕಾಗಿ ಸೂತ್ರದಲ್ಲಿರುವ 'ಚ' ಶಬ್ದವು ಸಾರ್ಥಕವಾಗಿದೆ.

ಹಾಗಾದರೆ ಹಿಂದಿನ ಸೂತ್ರದಲ್ಲಿಯೇ ಈ ಅರ್ಥಾಪತ್ತಿ ಪ್ರಮಾಣವನ್ನೂ ಸಹ ಸೇರಿಸಬಹುದಲ್ಲವೇ? ಬೇರೆ ಸೂತ್ರದಲ್ಲಿ ಇದನ್ನೇಕೆ ಹೇಳಿದ್ದಾರೆ. ಎಂದರೆ ಹಿಂದೆ ಶಬ್ದಪ್ರಮಾಣದಿಂದ ದೇವತಾಪ್ರವಾಹವು ನಿತ್ಯವೆಂದು ಹೇಳಲಾಯಿತು. ಪ್ರಕೃತ ಶಬ್ದದ ನಿತ್ಯತ್ವ ಎಂಬ ಧರ್ಮದ ಬಲದಿಂದ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಸಾಧಿಸಲಾಗುತ್ತಿದೆ. ಆದ್ದರಿಂದ ಪ್ರವಾಹನಿತ್ಯತ್ವ ವಿಷಯದಲ್ಲಿ ಶ್ರುತಿಯನ್ನೇ ಪ್ರಮಾಣವನ್ನಾಗಿ ಹಿಂದೆ ಹೇಳಿ, ಈಗ ಶಬ್ದದ ನಿತ್ಯತ್ವವೆಂಬ ಧರ್ಮವು ಅನ್ಯಥಾನುಪತ್ತಿಪ್ರಮಾಣದಿಂದ ಸಿದ್ಧವಾಗಿದೆಯೆಂದು ಹೇಳಿ ಸಾಧಿಸಲಾಗುತ್ತಿದೆ. ಹೀಗೆ ಧರ್ಮ-ಧರ್ಮಿಭಾವದ ವ್ಯತ್ಯಾಸವನ್ನು ಗಮನಿಸಿ ಪ್ರತ್ಯೇಕ ಸೂತ್ರವನ್ನಾಗಿ ಪರಿಗಣಿಸಿದ್ದಾರೆ.

**प्रकाशः** – ननु पूर्वत्र प्रभवशब्दस्य प्रभवनियमपरतया नित्यत्वार्थत्वस्येहानुवृत्त्याऽत एव च प्रभव इत्यन्वये सत्यत एव च नित्यत्वमित्यर्थस्य लाभान्नित्यत्वमित्यवक्तुं शक्यम् ।

ಶಂಕೆ - 'ಅತ ಏವ ಚ ನಿತ್ಯತ್ವಮ್' ಎಂಬ ಸೂತ್ರದಲ್ಲಿ 'ನಿತ್ಯತ್ವಮ್' ಎಂಬ ಪದವನ್ನು ಹೇಳಲೇಬೇಕಾಗಿಲ್ಲ. ಏಕೆಂದರೆ ಹಿಂದಿನ ಸೂತ್ರದಲ್ಲಿ 'ಪ್ರಭವ' ಶಬ್ದಕ್ಕೆ 'ಪ್ರಭವನಿಯಮ' ಎಂಬರ್ಥವನ್ನು ಮಾಡಲಾಗಿದೆ. ಅಂದರೆ 'ನಿತ್ಯತ್ವ' ಎಂಬರ್ಥವು ಪ್ರಭವ ಶಬ್ದದಿಂದಲೇ ದೊರೆಯುತ್ತದೆ. ಅದೇ ಶಬ್ದವನ್ನು

ಈ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಂಡು 'ಅತ ಏವ ಪ್ರಭವಃ' ಎಂದು ವಿಪರಿಣಾಮದಿಂದ ಅನ್ವಯ ಮಾಡಿಕೊಳ್ಳಲು ಬರುವಾಗ, 'ಅತ ಏವ ಚ ನಿತ್ಯತ್ವಮ್' ಎಂದು ಹೇಳುವ ಅವಶ್ಯಕತೆ ಇಲ್ಲವಲ್ಲವೇ?

**प्रकाशः** – मैवम् । तस्य पञ्चम्यन्तत्वेनेह प्रथमान्ततयाऽनुवृत्तेर्दुर्बोधत्वात् । प्रभवशब्दस्य नित्यत्वार्थकत्वस्यास्पष्टत्वाच्च । अत एव चेत्यस्य प्राक्प्रकृतशब्दनित्यत्वपरामर्शद्योतनाय च नित्यत्वमिति पृथुगुपादानाच्चेति ।

ಸಮಾಧಾನ - ಮೂರು ಕಾರಣಗಳಿಂದ 'ನಿತ್ಯತ್ವ' ಪದವನ್ನು ಪ್ರಯೋಗಿಸಿದ್ದಾರೆ -

೧. ಹಿಂದಿನ ಸೂತ್ರದಲ್ಲಿ 'ಪ್ರಭವ' ಶಬ್ದವು ಪಂಚಮ್ಯಂತದಲ್ಲಿದೆ. ಅದನ್ನು ಪ್ರಥಮಾಂತವಾಗಿ ವಿಪರಿಣಾಮಮಾಡಿಕೊಂಡು ಅನುವೃತ್ತಿಮಾಡಿಕೊಳ್ಳಬೇಕೆಂಬುದು ಸುಲಭವಾಗಿ ತಿಳಿಯುವ ವಿಚಾರವಲ್ಲ.

೨. 'ಪ್ರಭವ' ಎಂಬ ಶಬ್ದಕ್ಕೆ 'ನಿತ್ಯತ್ವ' ಎಂಬರ್ಥವು ಸ್ಪಷ್ಟವಾಗಿ ತಿಳಿಯುವುದೇ ಇಲ್ಲ. ಆದ್ದರಿಂದ ಹಿಂದಿನ ಸೂತ್ರದಲ್ಲಿ 'ಪ್ರಭವ' ಶಬ್ದಕ್ಕೆ ಲಕ್ಷಣಾವನ್ನು ಮಾಡಲಾಗಿತ್ತು. ಅಂತಹ ಲಾಕ್ಷಣಿಕ ಪದವನ್ನು ಇಲ್ಲಿಯೂ ಅನುವೃತ್ತಿಮಾಡಿಕೊಂಡು ವಿಪರಿಣಾಮದಿಂದ ಅರ್ಥವನ್ನು ತಿಳಿದುಕೊಳ್ಳುವುದು ಬಹಳ ಕಷ್ಟ.

೩. 'ಅತ ಏವ ಚ' ಎಂಬುದರಿಂದ ಪೂರ್ವಪ್ರಕೃತವಾದ ಶಬ್ದನಿತ್ಯತ್ವವನ್ನು ಪರಾಮರ್ಶ ಮಾಡಬೇಕು. ಒಂದು ವೇಳೆ 'ನಿತ್ಯತ್ವಮ್' ಎಂದು ಹೇಳದಿದ್ದರೆ. ಶಬ್ದನಿತ್ಯತ್ವವನ್ನು ಪರಾಮರ್ಶ ಮಾಡಬೇಕೆಂದು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ನಿತ್ಯತ್ವವನ್ನು ಸೂತ್ರದಲ್ಲಿ ಹೇಳಿದಾಗ, 'ಅತ ಏವ' ಎಂಬುದಕ್ಕೆ 'ಶಬ್ದನಿತ್ಯತ್ವಾದೇವ' ಎಂಬರ್ಥವು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಸೂತ್ರದಲ್ಲಿರುವ 'ನಿತ್ಯತ್ವ' ಪದವು ಸಾರ್ಥಕವಾಗಿದೆ.




ಸೂತ್ರಕಾರರ ಸೂತ್ರಗಳ ಜೋಡಣೆಯು ಅತ್ಯಂತ ಸ್ವರಸವಾಗಿದೆ. ಮೊದಲು 'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬ ಸೂತ್ರವನ್ನೇ ಉಲ್ಲೇಖಮಾಡಲು ಕಾರಣ ಹೀಗಿದೆ - ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ಮಾತ್ರ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಹೇಳಲಾಯಿತು. ಮನುಷ್ಯರು ಅಧಿಕಾರಿಗಳು ಎಂದು ಹೇಳಿದರೆ ದೇವತೆಗಳು ಅಧಿಕಾರಿಗಳಲ್ಲ ಎಂದರ್ಥವಲ್ಲ. ಹೊರತು, ಪ್ರಾಣಿಗಳಿಗೆ ಅಧಿಕಾರವಿಲ್ಲ ಎಂದಷ್ಟೇ ಅರ್ಥ. ಈ ವಿಷಯವನ್ನು ಸೂತ್ರಕಾರರೇ ಸ್ವತಃ 'ತದುಪರ್ಯಪಿ' ಇತ್ಯಾದಿ ಸೂತ್ರಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ.

'ತದುಪರಿ' ಎಂದರೆ ಮೊದಲು ಮನುಷ್ಯರಾಗಿದ್ದು, ಅನಂತರ ದೇವತಾ ಪದವಿಯು ಪ್ರಾಪ್ತವಾದ ಮೇಲೂ ಸಹ ಬೌದ್ಧಿಕಸಾಮರ್ಥ್ಯವು ವಿಶಿಷ್ಟವಾಗಿರುವುದರಿಂದ ಆ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಬಾದರಾಯಣರು ಈ ವಿಷಯವನ್ನು ಸಮರ್ಥಿಸಿದ್ದಾರೆ. ಆದ್ದರಿಂದ 'ವಿಶಿಷ್ಟ ಬುದ್ಧ್ಯಾದಿಮತ್ತ್ವ' ಎಂಬ ಪ್ರಧಾನಹೇತುವಿನಿಂದ ದೇವತೆಗಳಿಗೆ ಬ್ರಹ್ಮವಿದ್ಯಾಧಿಕಾರವನ್ನು ಮೊದಲು ಸಮರ್ಥಿಸಿದ್ದಾರೆ.

ಹಿಂದಿನ ಸೂತ್ರದಲ್ಲಿ 'ತದುಪರಿ' ಎಂಬ ಪದದಿಂದ ಮನುಷ್ಯರೇ ಮುಂದೆ ದೇವತೆಗಳಾಗುತ್ತಾರೆಂದು ಹೇಳಲಾಗಿದೆ. ಮೊದಲು ಮನುಷ್ಯರಾಗಿದ್ದವರು ಅನಂತರ ದೇವತೆಗಳಾಗುವುದಾದರೆ, ದೇವತೆಗಳಾಗುವ ಮೊದಲು

ದೇವತಾಪದವಿಯಲ್ಲಿ ಯಾರೂ ಇರುವುದಿಲ್ಲವೆಂದಂತಾಯಿತು. ಆವಾಗ ದೇವತೋದ್ದೇಶ್ಯಕವಾದ ಕರ್ಮ ಮತ್ತು ತದ್ವಾಚಕವಾದ ಶಬ್ದ ಎಲ್ಲವೂ ಕೂಡ ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಎರಡನೆಯ ಸೂತ್ರವು ಉತ್ತರಿಸುತ್ತಿದೆ. ದೇವತಾಪದವಿಯಲ್ಲಿ ಒಬ್ಬರೇ ದೇವತೆಗಳು ಶಾಶ್ವತವಾಗಿರುವುದಿಲ್ಲ. ಯಾವ ದೇವತೆಯು ಮನುಷ್ಯಾವಸ್ಥೆಯಲ್ಲಿದ್ದು ಕರ್ಮಾನುಷ್ಠಾನ ಮಾಡುತ್ತಿರುತ್ತಾನೋ, ಆ ಸಮಯದಲ್ಲಿ ಮತ್ತೊಬ್ಬ ದೇವತೆಯು ಆ ಪದವಿಯಲ್ಲಿ ಇದ್ದೇ ಇರುತ್ತಾನೆ. ಹೀಗೆ ದೇವತಾ ಪ್ರವಾಹವು ಅನಾದಿಯಾಗಿರುವುದರಿಂದ, ಕರ್ಮಗಳು ಎಂದೂ ಸಹ ವ್ಯರ್ಥವಾಗುವುದಿಲ್ಲ ಎಂದು ಸಮರ್ಥಿಸಲಾಗಿದೆ.

ದೇವತೆಗಳು ಅನಿತ್ಯರಾದರೆ, ವೇದವು ಅಪ್ರಾಮಾಣವಾಗಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಮೂರನೆಯ ಸೂತ್ರವು ಉತ್ತರಿಸಿದೆ. ಪರಮಾತ್ಮನು ಸೂರ್ಯ-ಚಂದ್ರರನ್ನು ಹಿಂದಿನ ಕಲ್ಪದಂತೆ, ಈ ಕಲ್ಪದಲ್ಲಿಯೂ ಸೃಷ್ಟಿಮಾಡಿದನು. ಆದ್ದರಿಂದ ದೇವತೆಗಳ ಪ್ರವಾಹವು ನಿತ್ಯವೇ ಆಗಿರುತ್ತದೆ. ಇವೇ ಮೊದಲಾದ ಶಬ್ದರೂಪಪ್ರಮಾಣಗಳಿಂದ ಮತ್ತು ಮಹಾತ್ಮರ ಪ್ರತ್ಯಕ್ಷದಿಂದ ನಮಗೆ ಬರುವ ಅನುಮಾನದಿಂದಲೂ ದೇವತೆಗಳ ಪ್ರವಾಹವು ನಿತ್ಯವೆಂದು ಸಿದ್ಧವಾಗುತ್ತದೆ.

ವೇದಗಳು ನಿತ್ಯವೆಂದು ಸಿದ್ಧವಾದ್ದರಿಂದಲೇ ಅವುಗಳು ಅಪ್ರಮಾಣವಲ್ಲ. ಒಂದು ವೇಳೆ ವಾಚ್ಯವಾದ ದೇವತೆಗಳು ಅನಿತ್ಯರಾದರೆ, ವಾಚಕವಾದ ವೇದವೂ ಕೂಡ ಅನಿತ್ಯವೇ ಆಗಬೇಕಾಗುತ್ತದೆ. ಹೀಗೆ ವಾಚಕನಿತ್ಯತ್ವದ ಅನ್ಯಥಾನುಪಪತ್ತಿಯಿಂದ ವಾಚ್ಯದ ನಿತ್ಯತ್ವವು ಸಿದ್ಧವಾಗುತ್ತದೆಂದು ನಾಲ್ಕನೆಯ ಸೂತ್ರವು ಸಮರ್ಥಿಸಿದೆ. ಹೀಗೆ ನಾಲ್ಕು ಸೂತ್ರಗಳಲ್ಲಿ ದೇವತೆಗಳ ಪ್ರವಾಹವು ನಿತ್ಯವೆಂದು ಸಮರ್ಥಿಸಿದ್ದಾರೆ.



## ಅನ್ಯಥಾನುಪಪತ್ತಿ ಪ್ರಮಾಣದಿಂದ ದೇವತಾಪ್ರವಾಹಕ್ಕೆ ನಿತ್ಯತ್ವಸಮರ್ಥನೆ

### तात्पर्यचन्द्रिका

**ननु न वाचकस्य नित्यत्वेन वाच्यनित्यत्वसिद्धिः । शब्दगतशक्तिविषयस्य वाच्यस्य नाशेऽपि शक्तेस्तदाश्रयस्य शब्दस्य चानाशोपपत्तेः । नहि शक्यनाशे शक्तितदाश्रययोर्नाशनियमः । प्रलये वाच्यस्य देवतादेरभावेऽपि वाचकावस्थानाच्च । तदा भारतादिवदतीतविषयत्वे चान्यदापि तथास्त्विति ॥**

ಅನುವಾದ - ಆಕ್ಷೇಪ - ವೇದನಿತ್ಯತ್ವದ ಅನ್ಯಥಾನುಪಪತ್ತಿಯಿಂದ ದೇವತಾಪ್ರವಾಹದ ನಿತ್ಯತ್ವವನ್ನು ನಾಲ್ಕನೆಯ ಸೂತ್ರವು ಸಮರ್ಥಿಸಿತು. ಇದು ಸರಿಯಲ್ಲ. ಏಕೆಂದರೆ ಶಬ್ದದಲ್ಲಿರುವ ಶಕ್ತಿಗೆ ವಿಷಯವಾದ ವಾಚ್ಯಪದಾರ್ಥವು ನಷ್ಟವಾದರೂ ಕೂಡ ಶಬ್ದಶಕ್ತಿಯಾಗಲೀ, ತದಾಶ್ರಯವಾದ ಶಬ್ದವಾಗಲೀ, ನಾಶವಾಗಬೇಕಾಗಿಲ್ಲ. ಶಕ್ಯವು ನಾಶವಾದ ಮಾತ್ರಕೆ ಶಕ್ತಿ ಹಾಗೂ ತದಾಶ್ರಯಗಳಿಗೆ ನಾಶದ ನಿಯಮವಿರುವುದಿಲ್ಲ.[೧]

(೧)ಮನೆಯಲ್ಲಿ ಒಂದು ಘಟವಿರುತ್ತದೆ. ಅದನ್ನು ಪ್ರತಿನಿತ್ಯ ಘಟ ಎಂಬ ಪದದಿಂದ ಕರೆಯುತ್ತಿರುತ್ತೇವೆ. ಕೆಲವು

ಪ್ರಳಯಕಾಲದಲ್ಲಿ ವಾಚ್ಯರಾದ ದೇವತೆಗಳು ಯಾರೂ ಸಹ ಇರುವುದಿಲ್ಲ. ಆದರೂ ಕೂಡ ವಾಚಕವಾದ ವೇದವು ಇದ್ದೇ ಇರುತ್ತದೆ. ಈಗಿರುವ ಮಹಾಭಾರತಾದಿಗಳು ಅತೀತವಿಷಯಕವೆಂದು ಹೇಗೆ ಹೇಳುತ್ತೇವೋ, ಅದರಂತೆ ವೇದವೂ ಸಹ ಪ್ರಳಯಕಾಲದಲ್ಲಿ ಅತೀತವಿಷಯಕವೆಂದು ಹೇಳಬೇಕು. ಅದರಂತೆ ಮುಂದಿನ ಕಲ್ಪದಲ್ಲಿರುವ ವೇದಗಳೆಲ್ಲವೂ ಅತೀತಕಲ್ಪದಲ್ಲಿರುವ ಇಂದ್ರಾದಿದೇವತಾ ಪ್ರತಿಪಾದಕವೆಂದೇ ಹೇಳಬಹುದು. ಪ್ರತಿಕಲ್ಪದಲ್ಲಿಯೂ ಬೇರೆ ಬೇರೆ ಇಂದ್ರಾದಿಗಳನ್ನು ಒಪ್ಪಿ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವನ್ನು ಏಕೆ ಒಪ್ಪಬೇಕು?

**मैवम् । प्रतिकल्पं वेदोक्तकर्माननुष्ठाने प्रतिकल्पं वेदोपदेशधारणादेर्वैयर्थ्यापातात् । अनुष्ठाने च कर्मकालप्रयुक्तानां "इन्द्रागच्छ" इत्यादीनां देवताह्वानाद्यर्थत्वात्तदा तदभावे चाह्वानाद्ययोगात् । प्रतिकल्पं कर्मानुष्ठानकाले च देवतासत्त्वस्य तत्प्रवाहानादिनित्यत्वं विनाऽयोगादिति दिक् ।**

ಸಮಾಧಾನ - ಪ್ರತಿಕಲ್ಪದಲ್ಲಿಯೂ ವೇದದಲ್ಲಿ ಹೇಳಿದ ಕರ್ಮವನ್ನು ಅನುಷ್ಠಾನ ಮಾಡಲೇಬೇಕು. ಒಂದು ವೇಳೆ ಅತೀತವಿಷಯಕವೆಂದು ಹೇಳಿದರೆ ದೇವತೆಗಳೇ ಇಲ್ಲವೆಂದಂತಾಯಿತು. ಆವಾಗ ಮಾಡುವಂತಹ ಕರ್ಮಗಳಿಗೆ ವೈಯರ್ಥ್ಯ ದೋಷವು ಪ್ರಾಪ್ತವಾಗುತ್ತದೆ. ಮತ್ತು ಪರಮಾತ್ಮನು ಚತುರ್ಮುಖಬ್ರಹ್ಮದೇವರಿಗೆ ಪ್ರತಿಕಲ್ಪದ ಪ್ರಾರಂಭದಲ್ಲಿಯೂ ವೇದವನ್ನು ಉಪದೇಶ ಮಾಡುತ್ತಾನೆ. ವೇದಗಳನ್ನು ಧಾರಣೆ ಮಾಡುತ್ತಾನೆ. ಇವೆಲ್ಲವೂ ಸಹ ವ್ಯರ್ಥವಾಗಬೇಕಾದೀತು.

ವೇದದಲ್ಲಿ ಹೇಳಿದ ಕರ್ಮವನ್ನು ಅನುಷ್ಠಾನ ಮಾಡಬೇಕಾದರೆ, 'ಇಂದ್ರಾಗಚ್ಛ' ಎಲೈ ! ಇಂದ್ರನೇ ಬಾ ! ಇತ್ಯಾದಿಯಾಗಿ ದೇವತೆಗಳನ್ನು ಆಹ್ವಾನವನ್ನು ಮಾಡಬೇಕು. ಒಂದು ವೇಳೆ ದೇವತೆಗಳೇ ಇಲ್ಲವಾದಲ್ಲಿ, ಯಾರನ್ನು ತಾನೇ ಕರೆಯಬೇಕು. ಆದ್ದರಿಂದ ಪ್ರತಿಕಲ್ಪದಲ್ಲಿಯೂ ಕರ್ಮಾನುಷ್ಠಾನ ಮಾಡುವ ಕಾಲದಲ್ಲಿ ಯಾರಾದರೊಬ್ಬ ದೇವತೆಗಳು ಇರಲೇಬೇಕು. ಇದರಿಂದ ದೇವತೆಗಳ ಪ್ರವಾಹನಿತ್ಯತ್ವವು ಸಿದ್ಧವಾಗುತ್ತದೆ. ಅಂದರೆ ದೇವತೆಗಳ ಪ್ರವಾಹನಿತ್ಯತ್ವವನ್ನು ಒಪ್ಪದೇ ಕರ್ಮಾನುಷ್ಠಾನಕಾಲದಲ್ಲಿ ಮಾಡುವಂತಹ ದೇವತಾಹ್ವಾನವು ಕೂಡುವುದಿಲ್ಲ. ಇಷ್ಟೆಲ್ಲಾ ವಿಚಾರವು ಕೇವಲ ದಿಕ್‌ಪ್ರದರ್ಶನವಾಗಿದೆ. ಹೆಚ್ಚಿನ ವಿಚಾರವನ್ನು ನೀವೇ ತಿಳಿದುಕೊಳ್ಳಿರಿ.

ದಿವಸಗಳ ಅನಂತರ ಆ ಘಟವು ನಾಶವಾಗುತ್ತದೆ. ಅನಂತರವೂ ಸಹ ಘಟ ಎಂಬ ಶಬ್ದವನ್ನು ನಾವು ಪ್ರಯೋಗಿಸುತ್ತಲೇ ಇರುತ್ತೇವೆ. ಅಂದರೆ ವಸ್ತು ನಾಶವಾದ ಮೇಲೆ ಶಬ್ದವಾಗಲೀ, ಶಬ್ದಶಕ್ತಿಯಾಗಲೀ, ನಾಶವಾಗಬೇಕೆಂಬ ನಿಯಮವಿಲ್ಲ.

**प्रकाशः –**

''नापि भारतादिवदतीतविषयत्वेनोपपत्तिः । अनुपपत्तेरुक्तत्वात्'' इति टीकां विवृण्वन्नर्थापत्तेरन्यथोपपत्तिमाशङ्क्य समाधत्ते – नन्विति ।।

ಓಂ ಅತ ಏವ ನಿತ್ಯತ್ವ ಓಂ ಎಂಬ ನಾಲ್ಕನೆಯ ಸೂತ್ರದಲ್ಲಿ ಅನ್ಯಥಾನುಪಪತ್ತಿ ಪ್ರಮಾಣದಿಂದ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಸಮರ್ಥಿಸಿದ್ದಾರೆ. ಅದನ್ನು 'ನಾಪಿ ಭಾರತಾದಿವತ್ ಅತೀತವಿಷಯತ್ವೇನೋಪಪತ್ತಿಃ । ಅನುಪಪತ್ತೇರುಕ್ತತ್ವಾತ್' ಇತ್ಯಾದಿ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಈ ಟೀಕಾ ಪಂಕ್ತಿಯನ್ನು ಅನ್ಯಥಾನುಪಪತ್ತಿಯನ್ನು ಆಶಂಕಿಸುವ ಮೂಲಕ ಸಮಾಧಾನ ನೀಡಿ, ವ್ಯಾಖ್ಯಾನ ಮಾಡುತ್ತಿದ್ದಾರೆ 'ನನು' ಇತ್ಯಾದಿ ಗ್ರಂಥದಿಂದ.

**प्रकाशः – अर्थापत्तेरनुमानत्वेऽपि तद्विशेषत्वात्पृथगुक्तिः ।**

ನಮ್ಮ ಸಿದ್ಧಾಂತದಲ್ಲಿ ಅರ್ಥಾಪತ್ತಿ ಪ್ರಮಾಣವು ಅನುಮಾನವೇ ಆಗಿದೆ. 'ಪ್ರತ್ಯಕ್ಷಾನುಮಾನಾಭ್ಯಾಂ' ಎಂಬುದಾಗಿ ಹಿಂದಿನ ಸೂತ್ರದಲ್ಲಿ ಅನುಮಾನ ಪ್ರಮಾಣವನ್ನು ಹೇಳಿದ ಮೇಲೆ ಪುನಃ ಈ ಸೂತ್ರದಲ್ಲಿ ಅರ್ಥಾಪತ್ತಿಪ್ರಮಾಣವನ್ನು ಏಕೆ ಹೇಳಿದ್ದಾರೆ? ಎಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಆದರೆ ಅರ್ಥಾಪತ್ತಿಯು ಅನುಮಾನವಾಗಿದ್ದರೂ ಅನುಮಾನದ ವಿಶೇಷರೂಪವಾದ್ದರಿಂದ ಸಾಮಾನ್ಯ ಅನುಮಾನವನ್ನು ಹಿಂದಿನ ಸೂತ್ರದಲ್ಲಿ ಹೇಳಿ, ವಿಶೇಷಾನುಮಾನವನ್ನು ಈ ಸೂತ್ರದಲ್ಲಿ ಹೇಳುತ್ತಿದ್ದಾರೆ. ಆದ್ದರಿಂದ ಪ್ರತ್ಯೇಕವಾಗಿ ಪರಿಗಣಿಸಿದ್ದು ತಪ್ಪಲ್ಲ.

**प्रकाशः – ननु तद्वाच्यदेवतास्वरूपस्य नित्यत्वे सर्वमुपपन्नमिति चेन्न ।**

ಶಂಕೆ - ಶಬ್ದರೂಪವಾದ ವೇದದಿಂದ ದೇವತೆಗಳು ಪ್ರತಿಪಾದ್ಯರಾಗಿದ್ದಾರೆ. ದೇವತೆಗಳಿಗೆ ಉತ್ಪತ್ತಿನಾಶವನ್ನು ಒಪ್ಪಿದರೆ, ವೇದಕ್ಕೆ ಅಪ್ರಾಮಾಣ್ಯದೋಷವು ಬರುತ್ತದೆ. ಅದಕ್ಕೋಸ್ಕರ ದೇವತೆಗಳಿಗೆ ಪ್ರವಾಹತಃ ನಿತ್ಯತ್ವವನ್ನು ಒಪ್ಪುವ ಅನಿವಾರ್ಯತೆಯಿಲ್ಲ. ಒಬ್ಬನೇ ದೇವತೆಯು ಪ್ರತಿಕಲ್ಪಗಳಲ್ಲಿಯೂ ಇರುತ್ತಾನೆಂದು ದೇವತಾಸ್ವರೂಪಕ್ಕೇನೇ ನಿತ್ಯತ್ವವನ್ನು ಒಪ್ಪಬಹುದು. ಹೀಗೆ ಒಪ್ಪುವುದರಿಂದ ಅಪ್ರಾಮಾಣ್ಯದೋಷಕ್ಕೆ ಆಸ್ಪದವಿಲ್ಲ.

**प्रकाशः – ''सूर्या चन्द्रमसौ'' इत्याद्युत्पत्तिविरोधात् । ''अग्नौ सर्वे देवा विलीयन्ते'' इति लयश्रुतिबाहुल्याच्च ।**

ಸಮಾಧಾನ - ಹೀಗೆ ಹೇಳಲಾಗದು ಏಕೆಂದರೆ 'ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್' ಎಂಬ ಶ್ರುತಿಯು ಸೂರ್ಯಚಂದ್ರಾದಿದೇವತೆಗಳಿಗೆ ಉತ್ಪತ್ತಿಯನ್ನು ಹೇಳುತ್ತಿದೆ. 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಯು ನಾಶವನ್ನು ಹೇಳುತ್ತಿದೆ. ಆದ್ದರಿಂದ ದೇವತೆಗಳಿಗೆ ಉತ್ಪತ್ತಿನಾಶಗಳೇ ಇಲ್ಲವೆಂದು ಹೇಳಲಾಗದು.

ದೇವತಾಧಿಕರಣ (೧-೩-೮)

---

**प्रकाशः – ''नच श्रुतीनामयथार्थत्वं बाधकाभावात्'' इत्यादिटीकोक्तं मनसि निधायाह – दिगिति ।।**

'ನಚ ಶ್ರುತೀನಾಮಯಥಾರ್ಥತ್ವಂ ಬಾಧಕಾಭಾವಾತ್' ಯಾವುದೇ ಬಾಧಕವಿಲ್ಲದ ಕಾರಣ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಇತ್ಯಾದಿ ಟೀಕಾಪಂಕ್ತಿಗಳಲ್ಲಿರುವ ಪ್ರಮೇಯವನ್ನು ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು 'ದಿಕ್' ಎಂದು ಹೇಳಿದ್ದಾರೆ. ಅಂದರೆ ಇದುವರೆಗೂ ತಾವು ತಿಳಿಸಿರುವ ವಿಚಾರ ಕೇವಲ ದಿಕ್‌ಪ್ರದರ್ಶನವಾಗಿದೆಯೆಂದು ಅಭಿಪ್ರಾಯ ಪಟ್ಟಿದ್ದಾರೆ.




ದೇವತೆಗಳನ್ನು ಪ್ರತಿಪಾದಿಸುವ ವೇದವು ಪ್ರತಿಕಲ್ಪಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಅಂತಹ ವೇದವನ್ನು ನೋಡಿಯೇ ಅದಕ್ಕನುಸಾರಿಯಾಗಿ ಪರಮಾತ್ಮನು ದೇವತೆಗಳನ್ನು ಸೃಷ್ಟಿಮಾಡುತ್ತಾನೆ. ವಾಚಕವಾದ ವೇದವು ನಿತ್ಯವಾದ್ದರಿಂದ ಆ ವೇದದಿಂದ ಪ್ರತಿಪಾದ್ಯರಾದ ದೇವತೆಗಳೂ ಕೂಡ ಪ್ರತಿಕಲ್ಪದಲ್ಲಿಯೂ ಒಂದೇರೀತಿಯಾಗಿ ಇರುತ್ತಾರೆ. ಇದರಿಂದ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಹೇಳಿದಂತಾಗುತ್ತದೆ.

ಪ್ರತಿಕಲ್ಪದಲ್ಲಿಯೂ ವೇದೋಕ್ತವಾದ ಕರ್ಮವನ್ನು ಅನುಷ್ಠಾನ ಮಾಡಲೇ ಬೇಕು. ಅನುಷ್ಠಾನ ಮಾಡುವಾಗ ಇಂದ್ರಾದಿಗಳನ್ನು ಆಹ್ವಾನ ಮಾಡಬೇಕು. ಆದ್ದರಿಂದ ಪ್ರತಿಕಲ್ಪಗಳಲ್ಲಿಯೂ ಇಂದ್ರಾದಿದೇವತೆಗಳು ಇದ್ದೇ ಇರುತ್ತಾರೆಂದು ನಿಶ್ಚಯವಾಗುತ್ತದೆ. ಕೇವಲ ಯಾವುದಾದರೂ ಒಂದೇ ಕಲ್ಪದಲ್ಲಿ ಇಂದ್ರಾದಿದೇವತೆಗಳನ್ನು ಒಪ್ಪಿ, ಮಹಾಭಾರತಾದಿ ಗ್ರಂಥಗಳಂತೆ ವೇದವೂ ಸಹ ಅತೀತವಿಷಯಕವಾಗಿದೆಯೆಂದು ಹೇಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ದೇವತೆಗಳ ಪ್ರವಾಹವನ್ನು ಅನಾದಿನಿತ್ಯವೆಂದು ಒಪ್ಪಲೇಬೇಕು.

• • • • •

## ಐದರಿಂದ ಎಂಟುಸೂತ್ರಗಳ ವಿನ್ಯಾಸ ಶೈಲಿ

### तात्पर्यचन्द्रिका

**पञ्चमे धर्मिभूतदेवानित्यत्वहेतुकविरोधाभावेऽपि धर्मभूतरूपादिवैचित्र्यनिमित्तकविरोधशङ्काया उद्धारः ।**

ಅನುವಾದ - ದೇವತೆಗಳು ಅನಿತ್ಯರಾದರೂ ದೇವತಾಪ್ರವಾಹವು ನಿತ್ಯವಾಗಿದೆ. ಆದ್ದರಿಂದ ಕರ್ಮವಿರೋಧವು ಮತ್ತು ಶಬ್ದವಿರೋಧವು ಬರುವುದಿಲ್ಲವೆಂದು ನಾಲ್ಕನೆಯ ಸೂತ್ರದ ತನಕ

ಸಮರ್ಥಿಸಿದ್ದಾಯಿತು. ಅಂದರೆ ಧರ್ಮೀಭೂತರಾದ ದೇವತೆಗಳ ಅನಿತ್ಯತ್ವವಿಷಯದಲ್ಲಿ ಬರುವಂತಹ ವಿರೋಧವನ್ನು ಪರಿಹರಿಸಿದ್ದಾಯಿತು. ಈಗ ಐದನೆಯ ಸೂತ್ರದಲ್ಲಿ ದೇವತೆಗಳ ನಾಮ, ಆಕಾರ, ಕಾರ್ಯ ಎಂಬ ಧರ್ಮದಲ್ಲಿರುವ ವೈಚಿತ್ರ್ಯಪ್ರಯುಕ್ತವಾದ ವಿರೋಧವನ್ನು ಆಶಂಕಿಸಿ ಪರಿಹರಿಸಿದ್ದಾರೆ. ಮೊದಲು ಧರ್ಮಿವಿರೋಧವನ್ನು ಪರಿಹರಿಸಿ, ಅನಂತರ ಧರ್ಮವಿರೋಧವನ್ನು ಪರಿಹರಿಸುವುದು ನ್ಯಾಯಸಮ್ಮತ. ಆದ್ದರಿಂದ 'ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ' ಎಂಬ ಸೂತ್ರವು ಐದನೆಯ ಸ್ಥಾನವನ್ನು ಪಡೆದಿದೆ.

**तत्र च ''आवृत्तौ' इत्यस्य प्राचीनानां पदस्थानां मुक्तावन्येषां तत्पदप्राप्तिः पुनस्तेषामपि मुक्तिरित्येवं मुक्तेरावृत्तावपीति वा प्राचीनानां मुक्तत्वेन स्वस्वपदादावृत्तावपीति वा स्वस्वपदेष्ववृत्तावपीति वार्थः ।**

ಸೂತ್ರದಲ್ಲಿರುವ 'ಆವೃತ್ತಾವಪಿ' ಎಂಬುದಕ್ಕೆ ಒಟ್ಟು ಮೂರು ಅರ್ಥ -

೧. ಪ್ರಾಚೀನ ದೇವತೆಗಳು ಮುಕ್ತರಾಗುತ್ತಾರೆ. ಅನಂತರ ಬೇರೆಯವರು ಆ ಪದವಿಗೆ ಬರುತ್ತಾರೆ. ಪುನಃ ಅವರಿಗೂ ಸಹ ಮೋಕ್ಷವಾಗುತ್ತದೆ. ಹೀಗೆ ಮುಕ್ತಿಯ ಆವೃತ್ತಿಯು ಪ್ರತಿಯೊಬ್ಬರಿಗೂ ಇರುತ್ತದೆ.

೨. ಪ್ರಾಚೀನ ದೇವತೆಗಳು ಮುಕ್ತರಾದ್ದರಿಂದ ತಮ್ಮ ಪದವಿಯಿಂದ ನಿವೃತ್ತರಾದರೂ ಸಹ.

೩. ತಮ್ಮ ಪದವಿಯಲ್ಲಿ ಅವರು ಇಲ್ಲದಿದ್ದರೂ ಕೂಡ ಎಂದು.

(ತತ್ವಪ್ರದೀಪದಂತೆ 'ಆವೃತ್ತೌ' ಎಂದು ಪದವಿಭಾಗ. ತತ್ವಪ್ರಕಾಶಿಕಾದ ಪ್ರಕಾರ 'ಅವೃತ್ತೌ' ಎಂದು ಪದವಿಭಾಗ. 'ಆವೃತ್ತೌ' ಎಂಬ ಪದಕ್ಕೆ ತತ್ವಪ್ರದೀಪದಲ್ಲಿರುವ ಅರ್ಥವನ್ನು ಗ್ರಂಥಕಾರರು ಹೇಳಿ ತಮ್ಮದೇ ಆದ ಮತ್ತೊಂದು ಅರ್ಥವನ್ನೂ ಸಹ ಹೇಳಿದ್ದಾರೆ. ಅಂದರೆ ಆ ದೇವತೆಗಳು ತಮ್ಮ ಪದವಿಯಲ್ಲಿ ಇಲ್ಲದಿದ್ದರೂ ಎಂಬುದು ಅದರ ಅರ್ಥ.)

**एवं ''मुक्त्यावृत्तावपि'' इति भाष्यमपि त्रेधा व्याख्येयम् ।**

ಇದರಂತೆ ಭಾಷ್ಯದಲ್ಲಿರುವ 'ಮುಕ್ತ್ಯಾವೃತ್ತಾವಪಿ' ಎಂಬ ಮಾತಿಗೂ ಮೂರು ಬಗೆಯಲ್ಲಿ ವ್ಯಾಖ್ಯಾನ ಮಾಡಿದಂತಾಯಿತು.

೧. 'ಮುಕ್ತೇಃ ಆವೃತ್ತಿಃ' ಇದರಂತೆ ಮುಕ್ತಿಯ ಆವೃತ್ತಿಯು ಪ್ರತಿಯೊಬ್ಬರಿಗೂ ಇರುತ್ತದೆ.

೨. 'ಮುಕ್ತ್ಯಾವೃತ್ತಿಃ' ತಮ್ಮ ಪದವಿಯಿಂದ ನಿವೃತ್ತರಾದ್ದರಿಂದ ಮತ್ತೊಬ್ಬರು ಬರುತ್ತಾರೆ.

೩. 'ಮುಕ್ತ ಅವೃತ್ತಿಃ' ತಮ್ಮ ಪದವಿಯಲ್ಲಿ ಅವರು ಇಲ್ಲದಿದ್ದರೂ ಸಹ ಮತ್ತೊಬ್ಬರು ಇರುತ್ತಾರೆ. ಎಂಬುದಾಗಿ ಮೂರುಬಗೆಯಲ್ಲಿ ವ್ಯಾಖ್ಯಾನವನ್ನು ತಿಳಿಯಬೇಕು.

ದೇವತಾಧಿಕರಣ (೧-೩-೮)

**प्रकाशः – ''नच श्रुतीनामयथार्थत्वं बाधकाभावात्'' इत्यादिटीकोक्तं मनसि निधायाह – दिगिति ।।**

'ನಚ ಶ್ರುತೀನಾಮಯಥಾರ್ಥತ್ವಂ ಬಾಧಕಾಭಾವಾತ್' ಯಾವುದೇ ಬಾಧಕವಿಲ್ಲದ ಕಾರಣ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಇತ್ಯಾದಿ ಟೀಕಾಪಂಕ್ತಿಗಳಲ್ಲಿರುವ ಪ್ರಮೇಯವನ್ನು ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು 'ದಿಕ್' ಎಂದು ಹೇಳಿದ್ದಾರೆ. ಅಂದರೆ ಇದುವರೆಗೂ ತಾವು ತಿಳಿಸಿರುವ ವಿಚಾರ ಕೇವಲ ದಿಕ್‌ಪ್ರದರ್ಶನವಾಗಿದೆಯೆಂದು ಅಭಿಪ್ರಾಯ ಪಟ್ಟಿದ್ದಾರೆ.




ದೇವತೆಗಳನ್ನು ಪ್ರತಿಪಾದಿಸುವ ವೇದವು ಪ್ರತಿಕಲ್ಪಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಅಂತಹ ವೇದವನ್ನು ನೋಡಿಯೇ ಅದಕ್ಕನುಸಾರಿಯಾಗಿ ಪರಮಾತ್ಮನು ದೇವತೆಗಳನ್ನು ಸೃಷ್ಟಿಮಾಡುತ್ತಾನೆ. ವಾಚಕವಾದ ವೇದವು ನಿತ್ಯವಾದ್ದರಿಂದ ಆ ವೇದದಿಂದ ಪ್ರತಿಪಾದ್ಯರಾದ ದೇವತೆಗಳೂ ಕೂಡ ಪ್ರತಿಕಲ್ಪದಲ್ಲಿಯೂ ಒಂದೇರೀತಿಯಾಗಿ ಇರುತ್ತಾರೆ. ಇದರಿಂದ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಹೇಳಿದಂತಾಗುತ್ತದೆ.

ಪ್ರತಿಕಲ್ಪದಲ್ಲಿಯೂ ವೇದೋಕ್ತವಾದ ಕರ್ಮವನ್ನು ಅನುಷ್ಠಾನ ಮಾಡಲೇ ಬೇಕು. ಅನುಷ್ಠಾನ ಮಾಡುವಾಗ ಇಂದ್ರಾದಿಗಳನ್ನು ಆಹ್ವಾನ ಮಾಡಬೇಕು. ಆದ್ದರಿಂದ ಪ್ರತಿಕಲ್ಪಗಳಲ್ಲಿಯೂ ಇಂದ್ರಾದಿದೇವತೆಗಳು ಇದ್ದೇ ಇರುತ್ತಾರೆಂದು ನಿಶ್ಚಯವಾಗುತ್ತದೆ. ಕೇವಲ ಯಾವುದಾದರೂ ಒಂದೇ ಕಲ್ಪದಲ್ಲಿ ಇಂದ್ರಾದಿದೇವತೆಗಳನ್ನು ಒಪ್ಪಿ, ಮಹಾಭಾರತಾದಿ ಗ್ರಂಥಗಳಂತೆ ವೇದವೂ ಸಹ ಅತೀತವಿಷಯಕವಾಗಿದೆಯೆಂದು ಹೇಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ದೇವತೆಗಳ ಪ್ರವಾಹವನ್ನು ಅನಾದಿನಿತ್ಯವೆಂದು ಒಪ್ಪಲೇಬೇಕು.

• • • • •

## ಐದರಿಂದ ಎಂಟುಸೂತ್ರಗಳ ವಿನ್ಯಾಸ ಶೈಲಿ

### तात्पर्यचन्द्रिका

**पञ्चमे धर्मिभूतदेवानित्यत्वहेतुकविरोधाभावेऽपि धर्मभूतरूपादिवैचित्र्य-निमित्तकविरोधशङ्काया उद्धारः ।**

ಅನುವಾದ - ದೇವತೆಗಳು ಅನಿತ್ಯರಾದರೂ ದೇವತಾಪ್ರವಾಹವು ನಿತ್ಯವಾಗಿದೆ. ಆದ್ದರಿಂದ ಕರ್ಮವಿರೋಧವು ಮತ್ತು ಶಬ್ದವಿರೋಧವು ಬರುವುದಿಲ್ಲವೆಂದು ನಾಲ್ಕನೆಯ ಸೂತ್ರದ ತನಕ

ಸಮರ್ಥಿಸಿದ್ದಾಯಿತು. ಅಂದರೆ ಧರ್ಮೀಭೂತರಾದ ದೇವತೆಗಳ ಅನಿತ್ಯತ್ವವಿಷಯದಲ್ಲಿ ಬರುವಂತಹ ವಿರೋಧವನ್ನು ಪರಿಹರಿಸಿದ್ದಾಯಿತು. ಈಗ ಐದನೆಯ ಸೂತ್ರದಲ್ಲಿ ದೇವತೆಗಳ ನಾಮ, ಆಕಾರ, ಕಾರ್ಯ ಎಂಬ ಧರ್ಮದಲ್ಲಿರುವ ವೈಚಿತ್ರ್ಯಪ್ರಯುಕ್ತವಾದ ವಿರೋಧವನ್ನು ಆಶಂಕಿಸಿ ಪರಿಹರಿಸಿದ್ದಾರೆ. ಮೊದಲು ಧರ್ಮಿವಿರೋಧವನ್ನು ಪರಿಹರಿಸಿ, ಅನಂತರ ಧರ್ಮವಿರೋಧವನ್ನು ಪರಿಹರಿಸುವುದು ನ್ಯಾಯಸಮ್ಮತ. ಆದ್ದರಿಂದ 'ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ' ಎಂಬ ಸೂತ್ರವು ಐದನೆಯ ಸ್ಥಾನವನ್ನು ಪಡೆದಿದೆ.

**तत्र च ''आवृत्तौ' इत्यस्य प्राचीनानां पदस्थानां मुक्तावन्येषां तत्पदप्राप्तिः पुनस्तेषामपि मुक्तिरित्येवं मुक्तेरावृत्तावपीति वा प्राचीनानां मुक्तत्वेन स्वस्वपदादावृत्तावपीति वा स्वस्वपदेष्ववृत्तावपीति वार्थः ।**

ಸೂತ್ರದಲ್ಲಿರುವ 'ಆವೃತ್ತಾವಪಿ' ಎಂಬುದಕ್ಕೆ ಒಟ್ಟು ಮೂರು ಅರ್ಥ -

೧. ಪ್ರಾಚೀನ ದೇವತೆಗಳು ಮುಕ್ತರಾಗುತ್ತಾರೆ. ಅನಂತರ ಬೇರೆಯವರು ಆ ಪದವಿಗೆ ಬರುತ್ತಾರೆ. ಪುನಃ ಅವರಿಗೂ ಸಹ ಮೋಕ್ಷವಾಗುತ್ತದೆ. ಹೀಗೆ ಮುಕ್ತಿಯ ಆವೃತ್ತಿಯು ಪ್ರತಿಯೊಬ್ಬರಿಗೂ ಇರುತ್ತದೆ.

೨. ಪ್ರಾಚೀನ ದೇವತೆಗಳು ಮುಕ್ತರಾದ್ದರಿಂದ ತಮ್ಮ ಪದವಿಯಿಂದ ನಿವೃತ್ತರಾದರೂ ಸಹ.

೩. ತಮ್ಮ ಪದವಿಯಲ್ಲಿ ಅವರು ಇಲ್ಲದಿದ್ದರೂ ಕೂಡ ಎಂದು.

(ತತ್ವಪ್ರದೀಪದಂತೆ 'ಆವೃತ್ತೌ' ಎಂದು ಪದವಿಭಾಗ. ತತ್ವಪ್ರಕಾಶಿಕಾದ ಪ್ರಕಾರ 'ಅವೃತ್ತೌ' ಎಂದು ಪದವಿಭಾಗ. 'ಆವೃತ್ತೌ' ಎಂಬ ಪದಕ್ಕೆ ತತ್ವಪ್ರದೀಪದಲ್ಲಿರುವ ಅರ್ಥವನ್ನು ಗ್ರಂಥಕಾರರು ಹೇಳಿ ತಮ್ಮದೇ ಆದ ಮತ್ತೊಂದು ಅರ್ಥವನ್ನೂ ಸಹ ಹೇಳಿದ್ದಾರೆ. ಅಂದರೆ ಆ ದೇವತೆಗಳು ತಮ್ಮ ಪದವಿಯಲ್ಲಿ ಇಲ್ಲದಿದ್ದರೂ ಎಂಬುದು ಅದರ ಅರ್ಥ.)

**एवं ''मुक्त्यावृत्तावपि'' इति भाष्यमपि त्रेधा व्याख्येयम् ।**

ಇದರಂತೆ ಭಾಷ್ಯದಲ್ಲಿರುವ 'ಮುಕ್ತ್ಯಾವೃತ್ತಾವಪಿ' ಎಂಬ ಮಾತಿಗೂ ಮೂರು ಬಗೆಯಲ್ಲಿ ವ್ಯಾಖ್ಯಾನ ಮಾಡಿದಂತಾಯಿತು.

೧. 'ಮುಕ್ತೇಃ ಆವೃತ್ತಿಃ' ಇದರಂತೆ ಮುಕ್ತಿಯ ಆವೃತ್ತಿಯು ಪ್ರತಿಯೊಬ್ಬರಿಗೂ ಇರುತ್ತದೆ.

೨. 'ಮುಕ್ತ್ಯಾವೃತ್ತಿಃ' ತಮ್ಮ ಪದವಿಯಿಂದ ನಿವೃತ್ತರಾದ್ದರಿಂದ ಮತ್ತೊಬ್ಬರು ಬರುತ್ತಾರೆ.

೩. 'ಮುಕ್ತ ಅವೃತ್ತಿಃ' ತಮ್ಮ ಪದವಿಯಲ್ಲಿ ಅವರು ಇಲ್ಲದಿದ್ದರೂ ಸಹ ಮತ್ತೊಬ್ಬರು ಇರುತ್ತಾರೆ. ಎಂಬುದಾಗಿ ಮೂರುಬಗೆಯಲ್ಲಿ ವ್ಯಾಖ್ಯಾನವನ್ನು ತಿಳಿಯಬೇಕು.

**स्वस्वपदेष्ववृत्तावपीति टीकायां तु तत्प्रकारद्वयं स्फुटत्वान्नोक्तम् ।**

'ಸ್ವಸ್ವಪದೇಷ್ವವೃತ್ತಾವಪಿ' ಎಂಬ ಟೀಕೆಯಲ್ಲಿ ಮೂರನೆಯ ಅರ್ಥವನ್ನು ವಿವಕ್ಷಿಸಿದ್ದಾರೆ. ಉಳಿದೆರಡು ಅರ್ಥಗಳು ಅತ್ಯಂತ ಸ್ಪಷ್ಟವಾಗಿರುವುದರಿಂದ ಉಲ್ಲೇಖ ಮಾಡಿಲ್ಲ.

**षष्ठे मध्वाद्युपासनाविशेषफलस्य वसुत्वादेर्वस्वादिभिः प्राप्तत्वान्न तेषां तत्राधिकार इति शङ्का ।**

'ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ' ಎಂಬುದು ಆರನೆಯ ಸೂತ್ರ. ಈ ಸೂತ್ರದಲ್ಲಿ ಮಧು ಮೊದಲಾದ ವಿದ್ಯೆಯ ಉಪಾಸನೆಗೆ ವಸು ಪದವಿಯೇ ಮೊದಲಾದ ಫಲಗಳನ್ನು ಹೇಳಿದ್ದಾರೆ. ದೇವತೆಗಳಿಗೆ ಈಗಾಗಲೇ ಆ ಪದವಿಗಳು ದೊರೆತದ್ದರಿಂದ ಪುನಃ ಅದೇ ವಿದ್ಯೆಯಲ್ಲಿ ಅವರಿಗೆ ಅಧಿಕಾರವು ಕೂಡುವುದಿಲ್ಲ ಎಂದು ಆಶಂಕಿಸಲಾಗಿದೆ.

**सप्तमे तु उपासनामात्रफलस्य ज्ञानस्य सर्वैरपि देवैः प्राप्तत्वान्न तेषां तत्राधिकार इति शङ्का ।**

'ಓಂ ಜ್ಯೋತಿಷಿ ಭಾವಾಚ್ಚ ಓಂ' ಎಂಬುದು ಏಳನೆಯ ಸೂತ್ರ. ಉಪಾಸನೆಗೆ ತತ್ವಜ್ಞಾನವೇ ಫಲ. ಅಂತಹ ತತ್ವಜ್ಞಾನವನ್ನು ಈಗಾಗಲೇ ದೇವತೆಗಳು ಹೊಂದಿರುವುದರಿಂದ ತತ್ಫಲಕವಾದ ವಿದ್ಯೆಯಲ್ಲಿ ಪುನಃ ಅಧಿಕಾರವು ಕೂಡುವುದಿಲ್ಲ ಎಂದು ಈ ಸೂತ್ರದಲ್ಲಿ ಆಶಂಕಿಸಲಾಗಿದೆ.

**तत्र च ज्योतिश्शब्दो ज्ञानपरः । ज्ञानस्य चाश्रयापेक्षायां "तदुपरि" इति प्रस्तुतदेवतान्वयः । ज्योतिषीति सप्तमी च चैत्रस्य बुद्धौ शास्त्रार्थ इतिवत् ।**

ಸೂತ್ರದಲ್ಲಿರುವ 'ಜ್ಯೋತಿಸ್' ಎಂದರೆ ದೇವತೆಗಳ ಜ್ಞಾನ ಎಂದರ್ಥ. ಜ್ಞಾನಕ್ಕೆ ಆಶ್ರಯದ ಅಪೇಕ್ಷೆಯು ಬಂದರೆ ಅದಕ್ಕೆ 'ತದುಪರಿ' ಎಂಬುದರಿಂದ ಪ್ರಾಪ್ತರಾದ ದೇವತೆಗಳಲ್ಲಿ ಅನ್ವಯವನ್ನು ಮಾಡಬೇಕು. 'ಜ್ಯೋತಿಷಿ' ಎಂಬ ಸಪ್ತಮೀ ವಿಭಕ್ತಿಯಿಂದ ಚೈತ್ರನ ಬುದ್ಧಿಯಲ್ಲಿ ಶಾಸ್ತ್ರಾರ್ಥವಿದೆ ಎಂದು ಹೇಳಿದಂತೆ ದೇವತೆಗಳ ಜ್ಞಾನದಲ್ಲಿ ಎಲ್ಲ ವಸ್ತುಗಳು ಇರುತ್ತದೆಂಬರ್ಥವು ದೊರೆಯುತ್ತದೆ.

**तथाच देवताज्ञाने सर्वस्य भावादिति सूत्राक्षरार्थः । अष्टमे तु तदुद्धार इति सूत्रक्रमः ।**

ಆದ್ದರಿಂದ ದೇವತೆಗಳ ಜ್ಞಾನದಲ್ಲಿ ಎಲ್ಲವೂ ಇರುತ್ತದೆಂದು ಸೂತ್ರದ ಅರ್ಥ. ಎಂಟನೆಯ ಸೂತ್ರದಲ್ಲಿ ಆರು ಹಾಗೂ ಏಳನೆಯ ಸೂತ್ರದಲ್ಲಿ ಮಾಡಲ್ಪಟ್ಟ ಸಾಮಾನ್ಯವಾದ ಆಶಂಕೆ ಮತ್ತು ವಿಶೇಷವಾದ ಆಶಂಕೆಗಳೆರಡನ್ನೂ ಪರಿಹರಿಸಿದ್ದಾರೆ. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸಾಧುವಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः –**

पञ्चमे समाननामरूपत्वाच्चावृत्तावप्यविरोधो दर्शनात्स्मृतेश्चेत्यत्र नियतैकपाठस्य वेदस्य नानाविधनामरूपवद्देववाचित्वेऽप्रामाण्यमाशङ्क्य प्राचां देवानां प्राप्तमुक्तित्वेन पुनस्स्वपदेष्ववृत्तावपि पुनस्तदन्येषां ''यथापूर्वम्'' इति श्रुत्या ''अनादिनिधना नित्या'' इत्यादिस्मृत्या च प्राचीनसमाननामरूपत्वात्तत्प्रतिपादकैकविधस्यापि प्रामाण्योपपत्तिरित्युद्धारः कृत इत्यर्थः ।

ವಿವರಣೆ - ಪ್ರಥಮ ಸೂತ್ರದಲ್ಲಿ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆನ್ನಲು 'ವಿಶಿಷ್ಟಬುದ್ಧ್ಯಾದಿಮತ್ತ್ವ' ಎಂಬ ಹೇತುವನ್ನು ಹೇಳಿದರು. ಅನಂತರದ ಮೂರು ಸೂತ್ರಗಳಲ್ಲಿ ದೇವತಾಪ್ರವಾಹವು ಅನಾದಿನಿತ್ಯವಾಗಿದೆಯೆಂದು ಸಮರ್ಥನೆ ಮಾಡಿದರು. ಪ್ರಕೃತ ಐದನೆಯ ಸೂತ್ರದಲ್ಲಿ ಶಬ್ದರೂಪವಾದ ವೇದಕ್ಕೆ ಅಪ್ರಾಮಾಣ್ಯದೋಷವನ್ನು ಆಶಂಕಿಸಿ ಉತ್ತರಿಸುತ್ತಿದ್ದಾರೆ. 'ಓಂ ಸಮಾನನಾಮ-ರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ' ಎಂಬುದು ಐದನೆಯ ಸೂತ್ರ. ನಿತ್ಯವಾದ ವೇದವು ಪ್ರತಿಕಲ್ಪಗಳಲ್ಲಿಯೂ ಒಂದೇ ರೀತಿಯಾದ ಆನುಪೂರ್ವಿಯನ್ನು ಹೊಂದಿರುತ್ತದೆ. ಆದರೆ ಅಂತಹ ವೇದವು ಯಾವ ದೇವತೆಗಳನ್ನು ಪ್ರತಿಪಾದನೆ ಮಾಡುತ್ತದೋ, ಆ ದೇವತೆಗಳು ಪ್ರತಿಕಲ್ಪದಲ್ಲಿಯೂ ಬೇರೆ ಬೇರೆಯಾಗಿರುತ್ತಾರೆ. ಅವರೆಲ್ಲರೂ ಒಂದೇ ವಿಧವಾದ ಹೆಸರು, ಆಕಾರ, ಕಾರ್ಯಗಳನ್ನು ಹೊಂದಿರಬೇಕಾಗಿಲ್ಲ. ಹಾಗಾಗಿ ಹಿಂದಿನ ದೇವತೆಯನ್ನು ಸ್ತೋತ್ರಮಾಡುವ ಶ್ರುತಿಗಳು ಅಪ್ರಮಾಣಗಳಾಗುತ್ತವಲ್ಲವೆ?

ಹೀಗೆ ಪ್ರಶ್ನಿಸಬಾರದು. ಹಿಂದಿನ ದೇವತೆಗಳು ಮೋಕ್ಷವನ್ನು ಪಡೆದದ್ದರಿಂದ ತಮ್ಮ ಸ್ಥಾನದಲ್ಲಿ ಈಗ ಇರುವುದಿಲ್ಲ. ಆದರೂ ಸಹ ಆಯಾ ಸ್ಥಾನಗಳಲ್ಲಿ ಬರುವ ಎಲ್ಲಾ ದೇವತೆಗಳು ಒಂದೇ ವಿಧವಾದ ಹೆಸರು, ಆಕಾರ, ಕಾರ್ಯ ಇವುಗಳನ್ನು ಪಡೆದಿರುತ್ತಾರೆ. ಆದ್ದರಿಂದ ಶ್ರುತಿಗೆ ಅಪ್ರಾಮಾಣ್ಯದೋಷವು ಬರುವುದಿಲ್ಲ. ಎಲ್ಲಾ ದೇವತೆಗಳಿಗೂ ಸಮಾನವಾದ ನಾಮರೂಪಗಳಿವೆ ಎಂಬ ವಿಷಯದಲ್ಲಿ 'ಯಥಾಪೂರ್ವಮ್' ಎಂಬ ಶ್ರುತಿಯು ಪ್ರಮಾಣವಾಗಿದೆ. ಮತ್ತು 'ಅನಾದಿನಿಧನಾ' ಇತ್ಯಾದಿ ಸ್ಮೃತಿಗಳೂ ಸಹ ಪ್ರಮಾಣವಾಗಿವೆ. ಅಂದರೆ ಶ್ರುತಿಸ್ಮೃತಿಗಳಿಂದ ಪ್ರತಿಕಲ್ಪಗಳಲ್ಲಿಯೂ ದೇವತೆಗಳ ಹೆಸರು, ಸ್ವರೂಪ, ಕಾರ್ಯಗಳು ಒಂದೇರೀತಿಯಾಗಿರುವುದೆಂದು ತಿಳಿದುಬರುವುದರಿಂದ ವೇದಗಳಿಗೆ ಅಪ್ರಾಮಾಣ್ಯದೋಷವು ಸರ್ವಥಾ ಬರುವುದಿಲ್ಲ.

**प्रकाशः – एवं चावसरक्रम इति भावः ।**

ಐದನೆಯ ಸೂತ್ರವು ಅವಸರಕ್ರಮದಿಂದಲೇ ಸಂಗತವಾಗಿದೆ. ಪ್ರಥಮಸೂತ್ರದಲ್ಲಿ ಅರ್ಥಿತ್ವ, ಸಾಮರ್ಥ್ಯ ಮೊದಲಾದ ಅಧಿಕಾರಪ್ರಯೋಜಕ ಧರ್ಮಗಳಿರುವುದರಿಂದ, ದೇವತೆಗಳಿಗೆ ವೇದವಿದ್ಯಾಧಿ-

ಕಾರವಿದೆಯೆಂದು ಸಮರ್ಥಿಸಲಾಯಿತು. ಅನಂತರ ದೇವತೆಗಳು ಉತ್ಪತ್ತಿವುಳ್ಳವರಾದರೆ ಕರ್ಮವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಎರಡನೆಯ ಸೂತ್ರದಲ್ಲಿ ಉತ್ತರಿಸಲಾಯಿತು. ಶಬ್ದಪ್ರಮಾಣದಿಂದ ಕರ್ಮವಿರೋಧವನ್ನು ಪರಿಹರಿಸಿದ ಮೇಲೆ ಶಬ್ದವಿಷಯದಲ್ಲೇ ಪುನಃ ವಿರೋಧವು ಪ್ರಾಪ್ತವಾದಾಗ ಮೂರನೆಯ ಸೂತ್ರವು ಅದನ್ನು ಪರಿಹಾರ ಮಾಡಿತು. ಅದೇ ವಿಷಯದಲ್ಲೇ ಪುನಃ ಅರ್ಥಾಪತ್ತಿ ಪ್ರಮಾಣವನ್ನೂ ಕೂಡ ನಾಲ್ಕನೆಯ ಸೂತ್ರವು ಸಮರ್ಥನೆ ಮಾಡಿತು. ಹೀಗೆ ಮೊದಲ ನಾಲ್ಕು ಸೂತ್ರಗಳಲ್ಲಿ ಧರ್ಮೀಭೂತರಾದ ದೇವತೆಗಳ ವಿಷಯದಲ್ಲಿ ಬರುವಂತಹ ವಿರೋಧವನ್ನು ಪರಿಹರಿಸಿದ್ದಾಯಿತು. ಪ್ರಕೃತ ದೇವತೆಗಳ ಧರ್ಮವೆನಿಸಿದ ನಾಮ, ಆಕಾರ, ಕಾರ್ಯ ಇವುಗಳಲ್ಲಿ ವಿರೋಧವು ಪ್ರಾಪ್ತವಾಗುತ್ತದೆ. ಅಂದರೆ ಧರ್ಮಗಳಲ್ಲಿ ವೈಚಿತ್ರ್ಯವಿರುವುದರಿಂದ ಪುನಃ ಶಬ್ದಕ್ಕೆ ಅಪ್ರಾಮಾಣ್ಯದೋಷ ಬರುತ್ತದಲ್ಲವೇ? ಎಂಬ ಬಾಧಕಶಂಕೆಯನ್ನು ಈ ಸೂತ್ರವು ಪರಿಹಾರ ಮಾಡುತ್ತಿದೆ. ಆದ್ದರಿಂದ ಪ್ರತಿಬಂಧಕಜಿಜ್ಞಾಸಾವಿಚ್ಛೇದದಿಂದ ಪ್ರಾಪ್ತವಾಗುವುದೇ ಅವಸರ ಸಂಗತಿಯೆನಿಸುತ್ತದೆ.

**प्रकाशः** – अपिरत्र यद्यप्यवृत्तिः तथाप्यविरोध इति शङ्काद्योतकः । टीकोक्तमुपलक्षणमिति भावेनाह – **तत्र चेति** ।।

ಸೂತ್ರದಲ್ಲಿ 'ಅಪಿ' ಶಬ್ದವು ಶಂಕಾದ್ಯೋತಕವಾಗಿದೆ. ಅಂದರೆ ದೇವತೆಗಳು ಮುಕ್ತರಾದ ಮೇಲೆ ತಮ್ಮ ತಮ್ಮ ಪದವಿಯಲ್ಲಿ ಇರುವುದಿಲ್ಲ. ಆದರೂ ಸಹ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಅವರಂತೆ ಮತ್ತೊಬ್ಬ ದೇವತೆಯು ಅದೇ ಪದವಿಯಲ್ಲಿ ಬರುತ್ತಾರೆ.

ಟೀಕೆಯಲ್ಲಿ ಸೂತ್ರಕ್ಕೆ ಹೇಳಿರುವ ಅರ್ಥವು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ 'ತತ್ರ ಚ' ಎಂಬ ಗ್ರಂಥವು ಹೊರಟಿದೆ.

**प्रकाशः** – आद्योऽर्थस्स्वयमुत्प्रेक्षितः । द्वितीयस्तत्वप्रदीपोक्तः । तृतीयस्तु तत्र टीकायां चोक्त इति ध्येयम् ।

ಗ್ರಂಥದಲ್ಲಿ ಮೂರು ಬಗೆಯ ಅರ್ಥವನ್ನು ಹೇಳಿದ್ದಾರೆ. ಅವುಗಳಲ್ಲಿ ಮೊದಲನೆಯ ಅರ್ಥವನ್ನು ಸ್ವತಃ ತಾವೇ ಉತ್ಪ್ರೇಕ್ಷೆಯಿಂದ ಹೇಳಿದ್ದಾರೆ. ಎರಡನೆಯ ಅರ್ಥವನ್ನು ತತ್ವಪ್ರದೀಪದಲ್ಲಿ ಹೇಳಿದ್ದಾರೆ. ಮೂರನೆಯ ಅರ್ಥವನ್ನು ತತ್ವಪ್ರದೀಪದ ಟೀಕೆಯಲ್ಲೂ ಕೂಡ ಹೇಳಿದ್ದಾರೆ.

**प्रकाशः** – षष्ठे मध्वादिष्वसम्भवादनधिकारं जैमिनिरित्यत्र ''वसूनामेवैको भूत्वा'' इत्यादिना मध्वादिविद्यासु वस्वादिपदानामुपासनाप्राप्यफलत्वश्रवणाद्देवानां च प्राप्ततत्पदत्वेनार्थिताऽसम्भवात्तत्रानधिकारं जैमिनिर्मन्यत इत्युक्तेः ।

'ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ' ಎಂಬುದು ಆರನೆಯ ಸೂತ್ರ. ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಪ್ರಥಮಸೂತ್ರದಲ್ಲಿ ಹೇಳಲಾಯಿತು. ಆದರೆ ವೇದವಿದ್ಯೆಯಿಂದ

ಯಾವ ಫಲವನ್ನು ದೇವತೆಗಳಿಗೆ ದೊರೆಯಬೇಕೋ, ಆ ಫಲವು ಈಗಾಗಲೇ ದೊರೆತದ್ದಾಗಿದೆ. ಅದು ಹೀಗೆ - ಛಾಂದೋಗ್ಯೋಪನಿಷತ್ತಿನಲ್ಲಿ 'ಅಸೌ ವಾ ಆದಿತ್ಯೋ ದೇವಮಧು' ಎಂದು ಪ್ರಾರಂಭವಾಗುವ ಮಧುವಿದ್ಯೆಯು ಸೂರ್ಯನಲ್ಲಿರುವ ವಿಷ್ಣು ಪರಮಾನಂದರೂಪನಾಗಿದ್ದಾನೆಂದು ಮಧುನಾಮಕ-ನಾಗಿದ್ದಾನೆಂದು ಹೇಳಿದೆ. ಸೂರ್ಯಮಂಡಲದ ನಾಲ್ಕು ದಿಕ್ಕುಗಳಲ್ಲಿ ವಾಸುದೇವಾದಿ ಪಂಚರೂಪಗಳಿವೆ. ಅವುಗಳನ್ನು ಉಪಾಸನೆ ಮಾಡಿದರೆ, ಕ್ರಮವಾಗಿ ವಸು, ರುದ್ರ, ಆದಿತ್ಯ, ಮರುತ್, ಸಾಧ್ಯ ಎಂಬ ದೇವತಾಪದವಿಗಳು ದೊರೆಯುತ್ತವೆಂದು ಹೇಳಲಾಗಿದೆ. ಆದರೆ ಈಗಾಗಲೇ ಅಂತಹ ಪದವಿಗಳನ್ನು ದೇವತೆಗಳು ಪಡೆದದ್ದರಿಂದ, ಅಂತಹ ಪದವಿಗಳನ್ನು ಪಡೆದಿರುವ ದೇವತೆಗಳಿಗೆ ತತ್ಫಲಕವಾದ ವಿದ್ಯೆಯಲ್ಲಿ ಅಧಿಕಾರವನ್ನು ಹೇಳಲಾಗದು. ಏಕೆಂದರೆ ಅಧಿಕಾರಲಕ್ಷಣದಲ್ಲಿ 'ಅರ್ಥೀ' ಎಂಬ ವಿಶೇಷಣವು ಇದೆ. ದೇವತೆಗಳಿಗೆ ಪದವಿಯು ದೊರೆತದ್ದರಿಂದ, ಅವರು ಈಗ ಅರ್ಥಿಗಳೇ ಅಲ್ಲ. ಅದಕ್ಕಿಂತ ಹೆಚ್ಚಿನ ಪದವಿಯನ್ನು ಹೊಂದಲು ಅವರಿಗೆ ಯೋಗ್ಯತೆಯಿಲ್ಲ. ಆದ್ದರಿಂದ ಮಧು ಮೊದಲಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಜೈಮಿನಿಋಷಿಗಳು ಹೇಳುತ್ತಾರೆ.

**प्रकाशः** – सप्तमे ज्योतिषि भावाच्चेत्यत्र ज्योतिषि सर्वज्ञत्वे सर्ववस्तूनां भावादन्तर्भावाद्देवानां सर्वज्ञतया सर्वविद्याज्ञानितया मोक्षहेतुज्ञानार्थमपि न तत्राधिकार इत्युक्तत्वाच्छङ्काद्वयं सूत्रद्वये कृतमित्यर्थः । विवक्षितार्थलाभप्रकारमाह – तत्र चेति ।।

'ಓಂ ಜ್ಯೋತಿಷಿ ಭಾವಾಚ್ಚ ಓಂ' ಎಂಬುದು ಏಳನೆಯ ಸೂತ್ರ. 'ಜ್ಯೋತಿಷಿ' ಎಂದರೆ ದೇವತೆಗಳ ಜ್ಞಾನದಲ್ಲಿ 'ಭಾವಾಚ್ಚ' ಎಂದರೆ ಸಕಲ ವಸ್ತುಗಳು ವಿಷಯವಾಗಿರುವುದರಿಂದ ಎಂದರ್ಥ. ಯಾವರೀತಿಯಾಗಿ ಸೂರ್ಯನಪ್ರಕಾಶದಲ್ಲಿ ಎಲ್ಲವೂ ತೋರುತ್ತದೋ, ಅದರಂತೆ ದೇವತೆಗಳ ಜ್ಞಾನದಲ್ಲಿಯೂ ಎಲ್ಲವೂ ಇದೆ.

ಹಿಂದಿನ ಸೂತ್ರದಲ್ಲಿ ದೇವತಾಪದವಿಗೆ ಕಾರಣವಾದ ಮಧು ಮೊದಲಾದ ವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಹೇಳಲಾಯಿತು. ಆದರೆ ಮೋಕ್ಷಕಾರಣವಾದ 'ಸತ್ಯಂಜ್ಞಾನಮನಂತಂಬ್ರಹ್ಮ' ಇತ್ಯಾದಿಯಾದ ಬ್ರಹ್ಮಜ್ಞಾನವೇ ಫಲವಾಗಿವುಳ್ಳ ಉಪಾಸನಾ ವಾಕ್ಯಗಳಲ್ಲಿ ಅಧಿಕಾರವನ್ನು ಹೇಳಬಹುದಲ್ಲವೇ? ಇದರ ಫಲವು ದೇವತೆಗಳಿಗೆ ಇನ್ನೂ ದೊರೆತಿಲ್ಲ. ಆದ್ದರಿಂದ ಅರ್ಥಿತ್ವವನ್ನೂ ಸಹ ಹೇಳಬಹುದು ಎಂದು ಹಿಂದಿನ ಸೂತ್ರದ ಮೇಲೆ ಪ್ರಶ್ನೆ ಬರುತ್ತದೆ. ಇದಕ್ಕೆ ಇಷ್ಟು ಉತ್ತರ. ದೇವತೆಗಳಿಗೆ ಮೋಕ್ಷದ ಇಚ್ಛೆ ಇರಬಹುದು. ಆದರೆ ಅದಕ್ಕೆ ಬೇಕಾಗಿರುವಂತಹ ಯೋಗ್ಯವಾದ ತತ್ವಜ್ಞಾನ ಈಗಾಗಲೇ ದೇವತೆಗಳು ಪಡೆದಿರುತ್ತಾರೆ. ಆದ್ದರಿಂದ ಅಂತಹ ಜ್ಞಾನಕ್ಕೆ ಸಾಧನವಾದ ವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿರುವುದಿಲ್ಲ. ಹೀಗೆ ಆರು ಮತ್ತು ಏಳನೆಯ ಸೂತ್ರಗಳಲ್ಲಿ ಎರಡು ಬಗೆಯ ಶಂಕೆಗಳನ್ನು ಮಾಡಲಾಗಿದೆ. 'ಜ್ಯೋತಿಷಿ' ಎಂಬ ಪದಕ್ಕೆ ವಿವಕ್ಷಿತವಾದ ಅರ್ಥವನ್ನು 'ತತ್ರ ಚ' ಎಂಬ ವಾಕ್ಯವು ವಿವರಿಸಿದೆ.

**प्रकाशः – अष्टमे भावं तु बादरायणोऽस्ति हीत्यत्र । सर्वविद्यासु देवानामधिकारभावं बादरायणो मन्यते । अस्ति ह्यतिशय इत्युक्ततया ज्ञाने मोक्षे चातिशयाधायकतयाऽनधिकारशङ्काद्वयोद्धारः कृत इत्यर्थः ।।**

'ಓಂ ಭಾವಂ ತು ಬಾದರಾಯಣೋSಸ್ತಿ ಹಿ ಓಂ' ಎಂಬುದು ಎಂಟನೆಯ ಸೂತ್ರ. ವಿದ್ಯೆಯ ಫಲವಾದ ಪದವಿ ಮತ್ತು ತತ್ವಜ್ಞಾನಗಳನ್ನು ದೇವತೆಗಳು ಈಗಾಗಲೇ ಹೊಂದಿರಬಹುದು. ಆದರೂ ಸಹ ಮಧ್ವಾದಿವಿದ್ಯೆಗಳಲ್ಲಿ ಅವರಿಗೆ ಅಧಿಕಾರವಿದ್ದೇ ಇರುತ್ತದೆ ಎಂಬುದು ಭಗವಾನ್ ಶ್ರೀ ವೇದವ್ಯಾಸದೇವರ ಅಭಿಪ್ರಾಯ. ಮಧುವಿದ್ಯೆಯ ಉಪಾಸನೆಯಿಂದ ದೇವತೆಗಳಿಗೆ ಐಹಿಕವಾದ ಪದಪ್ರಾಪ್ತಿಯು ಇರುವುದಿಲ್ಲ. ಮತ್ತು ಸತ್ಯಜ್ಞಾನಾದಿಗುಣಗಳಿಂದ ಬ್ರಹ್ಮನ ಶ್ರವಣಾದಿಗಳನ್ನು ಮಾಡಿದರೂ ಅವರಿಗೆ ಹೆಚ್ಚಿನ ಆನಂದದ ಪ್ರಾಪ್ತಿಯೂ ಇಲ್ಲ. ಆದರೂ ಸಹ ಅದು ವ್ಯರ್ಥವಲ್ಲ. ಏಕೆಂದರೆ ಇಂತಹ ಉಪಾಸನೆಗಳಿಂದ ಅವರ ಜ್ಞಾನದಲ್ಲಿ ಸ್ಪಷ್ಟತೆಯೂ ಹೆಚ್ಚಾಗುತ್ತದೆ. ಆದರಿಂದ ಅವರ ಯೋಗ್ಯತೆಗೆ ಅನುಗುಣವಾದ ಮೋಕ್ಷಾನಂದದಲ್ಲಿ ಅತಿಶಯವೂ ಉಂಟಾಗುತ್ತದೆ. ಅಂದರೆ ಸುಖವಿಶೇಷದ ಲಾಭವಿದೆ. ಆದ್ದರಿಂದ ಸಕಲ ವಿದ್ಯೆಗಳಲ್ಲೂ ದೇವತೆಗಳಿಗೆ ಅಧಿಕಾರವಿರುತ್ತದೆ.

ಮಧುವಿದ್ಯೆಯಿಂದ ಐಹಿಕಫಲವಿಲ್ಲ. ಅಪ್ರಾಪ್ತವಾದ ಜ್ಞಾನದ ಲಾಭವೂ ಇಲ್ಲ. ಎಂಬುದು ಜೈಮಿನಿಋಷಿಗಳ ಅಭಿಪ್ರಾಯ. ಆದ್ದರಿಂದ ವೇದವ್ಯಾಸದೇವರ ಅಭಿಪ್ರಾಯಕ್ಕೂ ಜೈಮಿನಿಋಷಿಗಳ ಅಭಿಪ್ರಾಯಕ್ಕೂ ವಿರೋಧವಿರುವುದಿಲ್ಲ. ಹೀಗೆ ಎರಡು ಶಂಕೆಗಳ ಪರಿಹಾರವನ್ನು ಎಂಟನೆಯ ಸೂತ್ರವು ಮಾಡಿದೆ. ಆದ್ದರಿಂದ ಎಂಟು ಸೂತ್ರಗಳ ವಿನ್ಯಾಸ ಕ್ರಮವು ಅತ್ಯಂತ ಅರ್ಥಪೂರ್ಣವಾಗಿದೆ.

## ಸಾರ

ಪ್ರಥಮ ಸೂತ್ರದಲ್ಲಿ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಹೇಳಲಾಯಿತು. ಮತ್ತು ದೇವತೆಗಳು ಉತ್ಪತ್ತಿವುಳ್ಳವರೆಂದೂ ಕೂಡ ಹೇಳಿದರು. ದೇವತೆಗಳಿಗೆ ಉತ್ಪತ್ತಿಯಿರುವುದಾದರೆ, ಕರ್ಮವಿರೋಧದ ಆಶಂಕೆಯು ಪ್ರಾಪ್ತವಾದರೆ, ಅದನ್ನು ಎರಡನೆಯ ಸೂತ್ರವು ಶಬ್ದದ ಮೂಲಕ ಪರಿಹರಿಸಿತು. ಪುನಃ ದೇವತೆಗಳು ಉತ್ಪತ್ತಿವುಳ್ಳವರಾದರೆ ಶಬ್ದಕ್ಕೆ ಅಪ್ರಾಮಾಣ್ಯದೋಷ ಬರುತ್ತದೆಂಬ ಶಬ್ದವಿರೋಧದೋಷವು ಪ್ರಾಪ್ತವಾದರೆ, ಮೂರನೆಯ ಸೂತ್ರವು ಅದನ್ನು ಪರಿಹಾರ ಮಾಡುತ್ತದೆ. ಅದೇ ಶಬ್ದವಿರೋಧದ ಪರಿಹಾರವಿಷಯದಲ್ಲಿ ನಾಲ್ಕನೆಯ ಸೂತ್ರವು ಅನ್ಯಥಾನುಪಪತ್ತಿಪ್ರಮಾಣವನ್ನು ಸಮರ್ಥನೆ ಮಾಡಿದೆ. ಹೀಗೆ ಮೊದಲ ನಾಲ್ಕು ಸೂತ್ರಗಳು ಧರ್ಮೀಭೂತರಾದ ದೇವತೆಗಳ ಅನಿತ್ಯತ್ವ ಪ್ರಯುಕ್ತವಾದ ವಿರೋಧ ಪರಿಹಾರದಲ್ಲಿ ಏಕಾಭಿಪ್ರಾಯವುಳ್ಳವುಗಳಾಗಿವೆ. ಆದರೆ ಪ್ರಕೃತ ಐದನೆಯ ಸೂತ್ರವು ಧರ್ಮವೆನಿಸಿದ ದೇವತೆಗಳ ರೂಪ, ಆಕಾರ, ಕಾರ್ಯ ಇವುಗಳ ವಿಷಯದಲ್ಲಿ ಬರುವಂತಹ ವಿರೋಧಗಳನ್ನು ಪರಿಹಾರ ಮಾಡುತ್ತಿದೆ. ಮೊದಲು ಧರ್ಮಿಯಲ್ಲಿ ಬರುವಂತಹ ವಿರೋಧವನ್ನು ಪರಿಹಾರ ಮಾಡಿ, ಅನಂತರ ಧರ್ಮದಲ್ಲಿ ಬರುವಂತಹ ವಿರೋಧವನ್ನು ಪರಿಹಾರ ಮಾಡುವುದು ಅತ್ಯಂತ ಸೂಕ್ತವಾಗಿದೆ. ಆದ್ದರಿಂದ 'ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ' ಎಂಬ ಸೂತ್ರವು ಐದನೆಯ ಸ್ಥಾನವನ್ನು ಪಡೆದಿದೆ.

## ಪರಿಪೂರ್ಣಚಂದ್ರಿಕಾ

ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆಯೆಂದು ಪ್ರಥಮಸೂತ್ರದಲ್ಲಿ ಹೇಳಲಾಯಿತು. ಮಧುವಿದ್ಯೆ ಮೊದಲಾದ ವಿದ್ಯೋಪಾಸನೆಯಿಂದ ಸಿಗುವಂತಹ ಫಲಗಳು ಈಗಾಗಲೇ ದೇವತೆಗಳಿಗೆ ದೊರೆತಿದೆ. ಅಂತಹ ಫಲವನ್ನು ಪಡೆದಿರುವ ದೇವತೆಗಳಿಗೆ ಪುನಃ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಜೈಮಿನಿ ಋಷಿಗಳು ಹೇಳುತ್ತಾರೆ. ಈ ಆಶಂಕೆಯನ್ನು ಆರನೆಯ ಸೂತ್ರದಲ್ಲಿ ಮಾಡಿದ್ದಾರೆ. ಮತ್ತು ದೇವತೆಗಳ ಜ್ಞಾನದಲ್ಲಿ ಸಕಲವಸ್ತುಗಳು ವಿಷಯವಾಗಿರುವುದರಿಂದ ತತ್ವಜ್ಞಾನವೆಂಬ ಫಲಕ್ಕೋಸ್ಕರವೂ ದೇವತೆಗಳು ವೇದವನ್ನು ಓದಬೇಕಾಗಿಲ್ಲ ಎಂದು ಏಳನೆಯ ಸೂತ್ರದಲ್ಲಿ ಆಶಂಕಿಸಲಾಗಿದೆ. ಈ ಎರಡೂ ಆಶಂಕೆಗಳನ್ನು 'ಭಾವಂ ತು ಬಾದರಾಯಣೋಽಸ್ತಿ ಹಿ' ಎಂಬ ಎಂಟನೆಯ ಸೂತ್ರದಲ್ಲಿ ಪರಿಹಾರ ಮಾಡಿದ್ದಾರೆ. ಅಂದರೆ ವಿದ್ಯೆಯ ಫಲವಾದ ಪದವಿ ಹಾಗೂ ಜ್ಞಾನವನ್ನು ದೇವತೆಗಳು ಹೊಂದಿರಬಹುದು. ಆದರೂ ಸಹ ಫಲವಿಶೇಷತೆಗೋಸ್ಕರ ಮಧ್ವಾದಿವಿದ್ಯೆಗಳಲ್ಲಿ ಅವರಿಗೆ ಅಧಿಕಾರವಿದ್ದೇ ಇರುತ್ತದೆಂಬುದು. ಶ್ರೀ ವೇದವ್ಯಾಸದೇವರ ಅಭಿಪ್ರಾಯ. ಸ್ಕಾಂದ ಪುರಾಣದಲ್ಲಿ ಪರತತ್ವದ ಸೇವೆಯನ್ನು ಶ್ರವಣಾದಿ ಉಪಾಸನೆಗಳನ್ನು ಮಾಡಿದಷ್ಟು ದೇವತೆಗಳಿಗೆ ಸುಖವಿಶೇಷಿತಲಾಭವಿದೆ ಮತ್ತು ಶ್ರೀಹರಿಯನ್ನು ಬಿಟ್ಟು ಉಳಿದೆಲ್ಲರಿಗೂ ಜ್ಞಾನವಿಶೇಷತ ಪ್ರಾಪ್ತಿಯು ಇದ್ದೇ ಇರುತ್ತದೆ ಎಂದು ಹೇಳಲಾಗಿದೆ. ಆದ್ದರಿಂದ ದೇವತೆಗಳಿಗೂ ಸಹ ಫಲ ಮತ್ತು ಯೋಗ್ಯತೆಗಳು ಇರುವುದರಿಂದ ವೇದಗಳ ಉಪಾಸನೆ ಅತ್ಯಂತ ಅನಿವಾರ್ಯವಾಗಿದೆ. ಆದ್ದರಿಂದ ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸರ್ವಥಾ ಹೇಳಬಾರದೆಂದು ಸಿದ್ಧವಾಯಿತು.

////////////////////////////////////////////

• • • • •

## ಶಾಂಕರ ಹಾಗೂ ರಾಮಾನುಜಭಾಷ್ಯದ ಅಧಿಕರಣ ವಿಮರ್ಶೆ

### तात्पर्यचन्द्रिका

**यत्तूक्तमुभाभ्यां मन्त्रार्थवादादेरनुष्ठेयप्रकाशनस्तुत्यादिपरत्वेन देवतानां विग्रहादिराहित्येनार्थावच्छिन्नशब्दरूपतया शब्दावच्छिन्नार्थरूपतया वा जडत्वेनासामर्थ्यादनधिकार इति प्राप्ते मन्त्रादिभिस्तासां विग्रहादिमचेतनत्वादस्त्यधिकार इत्याद्यसूत्रेण सिद्धान्त इति ।**[१]

---

(१) **शाङ्करभाष्यम् –**

**तदुपर्यपि बादरायणः सम्भवात् ॥ २६ ॥**

**नाधिक्रियन्ते विद्यायां देवाः किं नाधिकारिणः ।**

**विदेहत्वेन सामर्थ्यहानेनैषामधिक्रिया ॥**

**अविरुद्धार्थवादादिमन्त्रादेर्देहसत्त्वतः ।**

**अर्थित्वादेश्च सौलभ्याद्देवाद्या अधिकारिणः ॥**

ದೇವತಾಧಿಕರಣ (೧-೩-೮)

अङ्गुष्ठमात्रश्रुतिर्मनुष्यहृदयापेक्षया मनुष्याधिकारत्वाच्छास्त्रस्येत्युक्तम्, तत्प्रसङ्गेनेदमुच्यते । बाढं मनुष्यानधिकरोति शास्त्रम् । नतु मनुष्यानेवेतीह ब्रह्मज्ञाने नियमोऽस्ति । तेषां मनुष्याणामुपरिष्टाद् ये देवादयस्तानप्यधिकरोति शास्त्रमिति बादरायण आचार्यो मन्यते । कस्मात्? सम्भवात् । सम्भवति हि तेषामप्यर्थित्वाद्यधिकारकारणम् । तत्रार्थित्वं तावन्मोक्षविषयं देवादीनामपि सम्भवति विकारविषयविभूत्यनित्यत्वालोचनादिनिमित्तम् । तथा सामर्थ्यमपि तेषां सम्भवति, मन्त्रार्थवादेतिहासपुराणलोकेभ्यो विग्रहवत्त्वाद्यवगमात्। नच तेषां कश्चित् प्रतिषेधोऽस्ति । नचोपनयनशास्त्रेणैषामधिकारो निवर्त्येत, उपनयनस्य वेदाध्ययनार्थत्वात् । तेषां च स्वयं प्रतिभातवेदत्वात् । अपिचैषां विद्याग्रहणार्थं ब्रह्मचर्यादि दर्शयति –'एकशतं हवै वर्षाणि मघवान् प्रजापतौ ब्रह्मचर्यमुवास' (छा. ८-११-३) । 'भृगुर्वै वारुणिः । वरुणं पितरमुपससार । अधीहि भगवो ब्रह्म' (तै. ३-१) इत्यादि । यदपि कर्मस्वनधिकारकारणमुक्तम्, 'न देवानां देवतान्तराभावाद्' इति, 'न ऋषीणामार्षेयान्तराभावाद्' (जै. ६-१-६,७) इति । न तद्विद्यास्वस्ति । नहीन्द्रादीनां विद्यास्वधिक्रियमाणानामिन्द्राद्युद्देशेन किञ्चित्कृत्यमस्ति । नच भृग्वादीनां भृग्वादिसगोत्रतया । तस्माद्देवादीनामपि विद्यास्वधिकारः केन वार्यते । देवाद्यधिकारेऽप्यङ्गुष्ठमात्रश्रुतिः स्वाङ्गुष्ठापेक्षया न विरुद्ध्यते ।। २६ ।।

**विरोधः कर्मणीति चेन्नानेकप्रतिपत्तेर्दर्शनात् ॥ २७ ॥**

स्यादेतत्, यदि विग्रहवत्त्वाद्यभ्युपगमेन देवादीनां विद्यास्वधिकारो वर्ण्येत विग्रहवत्त्वादृत्विगादिवदिन्द्रादीनामपि स्वरूपसन्निधानेन कर्माङ्गभावोऽभ्युपगम्यते । तदा च विरोधः कर्मणि स्यात् । नहीन्द्रादीनां स्वरूपसन्निधानेन यागेऽङ्गभावो दृश्यते । नच सम्भवति । बहुषु यागेषु युगपदेकस्येन्द्रस्य स्वरूपसन्निधानतानुपपत्तेरिति चेत्, नायमस्ति विरोधः । कस्माद्? अनेकप्रतिपत्तेः । एकस्यापि देवतात्मनो युगपदनेकस्वरूपप्रतिपत्तिः सम्भवति । कथमेतदवगम्यते? दर्शनात् । तथाहि, कति देवाः? इत्युपक्रम्य 'त्रयश्च त्री च शता त्रयश्च त्री च सहस्रा' इति निरुच्य 'कतमे ते' इत्यस्यां पृच्छायाम् 'महिमान एवैषामेते त्रयस्त्रिंशत्त्वेव देवाः' (बृ. ३-९-१,२) इति निर्ब्रुवती श्रुतिरेकैकस्य देवतात्मनो युगपदनेकरूपतां दर्शयति । तथा त्रयस्त्रिंशतोऽपि षडाद्यन्तर्भावक्रमेण 'कतम एको देव इति प्राणः' इति प्राणैकरूपतां देवानां दर्शयन्ती तस्यैवैकस्य प्राणस्य युगपदनेकरूपतां दर्शयति । तथा स्मृतिरपि – 'आत्मनो वै शरीराणि बहूनि भरतर्षभ । योगी कुर्याद् बलं प्राप्य तैश्च सर्वैर्महीं चरेत् ।। प्राप्नुयाद् विषयान् कैश्चित् कैश्चिदुग्रं तपश्चरेत् । सङ्क्षिपेच्च पुनस्तानि सूर्यो रश्मिगणानिव ।।' इत्येवञ्जातीयका प्राप्ताणिमाद्यैश्वर्याणां योगिनामपि युगपदनेकशरीरयोगं दर्शयति । किमु वक्तव्यमाजानसिद्धानां देवानाम्? अनेकरूप-

ದೇವತೆಗಳು ಋಷಿಗಳು ಇವರಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿದೆಯೋ, ಇಲ್ಲವೋ ಎಂದು ಸಂಶಯ.

ಫಲದ ಅಪೇಕ್ಷೆಯಿರುವುದರಿಂದ ಇಬ್ಬರಿಗೂ ಅಧಿಕಾರವಿದೆಯೆಂದು ಪೂರ್ವಪಕ್ಷ.

**प्रकाशः** – देवानां देवतान्तराभावेन तदुद्देशेन हविस्त्यागायोगाद्भृगुप्रभृत्यृषीणां भृग्वाद्यन्तराभावेनार्षेयवरणायोगादनधिकारः कर्मणि देवर्ष्यादीनामिति सिद्धान्तितम् ।

ದೇವತೆಗಳು ಯಾಗಾದಿಕರ್ಮಗಳಲ್ಲಿ ತೊಡಗಬೇಕೆಂದರೆ ಆ ಯಾಗದಿಂದ ಉದ್ದಿಷ್ಟನಾದ ಮತ್ತೊಬ್ಬ ದೇವತೆಯನ್ನು ವಿವಕ್ಷಿಸಿ ಹವಿಸ್ಸಿನ ತ್ಯಾಗಾದಿಗಳನ್ನು ಮಾಡಬೇಕು. ಆದರೆ ಸ್ವತಃ ಯಾಗ ಮಾಡುವ ವ್ಯಕ್ತಿಯೇ ದೇವತೆಯಾಗಿರುವುದರಿಂದ ಆ ದೇವತೆಗೆ ಮತ್ತೊಬ್ಬ ದೇವತೆಯಿರಲು ಸಾಧ್ಯವಿಲ್ಲ. ಆದ್ದರಿಂದ ಮನುಷ್ಯರು ದೇವತೆಗಳನ್ನು ಉದ್ದೇಶಿಸಿ, ಯಾಗಾದಿಗಳನ್ನು ಮಾಡಬಹುದೇ ಹೊರತು, ದೇವತೆಗಳಿಗೆ ಮತ್ತೊಬ್ಬ ದೇವತೆಯಿಲ್ಲದ ಕಾರಣ ಅವರು ಯಾಗಾದಿಗಳನ್ನು ಮಾಡಲು ಸಾಧ್ಯವಿಲ್ಲ. ಇದರಂತೆ ಭೃಗು ಮೊದಲಾದ ಋಷಿಗಳಿಗೂ ಯಾಗಾದಿ ಕರ್ಮದಲ್ಲಿ ಅಧಿಕಾರವಿಲ್ಲ. ಏಕೆಂದರೆ ಯಾಗಾದಿ ಕರ್ಮಗಳಲ್ಲಿ ಋಷಿಗಳ

---

**पूर्वपक्षस्तु,** समस्ताङ्गोपसंहारासमर्थानामप्यन्धादीनामधिकारः । प्रधानवाक्यानुरोधेनाङ्गवाक्यानामुपवर्ण्यत्वात् । ''दर्शपूर्णमासाभ्यां स्वर्गकामो यजेत'' इति प्रधानवाक्येनावगतस्वर्गकाममात्राधिकारानुरोधेन तदसङ्कोचाय नित्यवच्छ्रुतानामप्यङ्गानां यथाधिकारं विनियोगस्य कल्प्यत्वाच्चक्षुष्मन्ते प्रत्याज्यावेक्षणविधिः । अन्धं प्रति तद्विध्यभावात्तद्रहितमेव फलसाधनं कल्प्यते । एवं बधिरस्य वचनरहितं, मूकस्य मन्त्रोच्चारणहीनं, पङ्गोश्च विष्णुक्रमणरहितमिति सर्वेषामर्थिनामशक्याङ्गरहितकर्मानुष्ठानसम्भवादिति । तदाह **सूत्रे, फलार्थत्वात्तु कर्मण** इत्यादि । व्यक्तः सूत्रार्थः । **सिद्धान्तस्तु,** यद्याज्यावेक्षणादयः पुमर्थतया विधीयेरंस्तदा तल्लोपेऽपि न क्रतोर्वैकल्यम् । इह तु क्रत्वङ्गतया ते विहिताः । तल्लोपे क्रतुर्विगुणस्सन् फलं न जनयेत् । अङ्गवाक्यानि हि स्वातन्त्र्येण न पुरुषैः सम्बध्यन्ते । किन्तु प्रधानवाक्यशेषत्वात्तेषां तद्युक्तेन प्रधानवाक्येन सर्वाङ्गयुक्तः क्रतुः पुरुषैः सम्बध्यमानोऽसमर्थान् विहाय समर्थान् प्रत्येव विज्ञायते इत्यन्धादीन् प्रति क्रतुरेव न **विहित** इति कथमसमर्थानां तत्राधिकारः स्यात् । तस्मादशक्तानां नास्त्यधिकारः । **तिरश्चामसामर्थ्यान्न** काप्यधिकारः । देवानां तूद्देश्यदेवतान्तराभावादात्मोद्देशेन त्यागायोगाद्विग्रहाभावाच्च नास्त्यधिकारः । ऋषीणमपि भृग्वादीनामृत्विगादिवरणासम्भवान्नास्त्यधिकार इति **भाष्यकारीय**मप्युदाहरणमयुक्तम् । अनादौ संसारे पूर्वपूर्वभृग्वादिवरण**सम्भवा**दस्त्येवाधिकार इत्याहुः । **फलन्तु** शक्तानां मनुष्याणामेव कर्मानुष्ठानेन तत्फलभाक्त्वमिति ।

**इति द्वितीयं यागादिषु मनुष्यस्यैवाधिकाराधिकरणम् (सूत्रे ४-५)**

ಪರಿಪೂರ್ಣಚಂದ್ರಿಕಾ

ವರಣವನ್ನು ಮಾಡಬೇಕು. ಆದರೆ ಭೃಗು ಮೊದಲಾದವರು ಸ್ವತಃ ಋಷಿಗಳಾಗಿರುವುದರಿಂದ ಮತ್ತೊಬ್ಬ ಋಷಿಗಳಿಲ್ಲದ ಕಾರಣ ಋಷಿಗಳ ವರಣವು ಕೂಡುವುದಿಲ್ಲ. ಹಾಗಾಗಿ ಋಷಿಗಳಿಗೂ ಸಹ ಯಾಗಾದಿ ಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಸಿದ್ಧಾಂತ.

**प्रकाशः** – तदुक्तन्यायेन कर्मण्यधिकाराभावेऽपीत्यर्थः । प्राचां वस्वादिदेवानां भृग्वाद्यृषीणां च क्षीणाधिकारत्वेनेदानीन्देवत्वऋषित्वयोरभावादिति भावः – सोऽस्तीति ।। तथेह बाधकाभावादिति भावः ।

ಪೂರ್ವಮೀಮಾಂಸೆಯ ಈ ಅಧಿಕರಣದ ನ್ಯಾಯದಂತೆ ದೇವತೆಗಳಿಗಾಗಲೀ, ಋಷಿಗಳಿಗಾಲೀ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ. ಆದರೂ ಸಹ ಬ್ರಹ್ಮವಿದ್ಯೆಯಲ್ಲಿ ದೇವತೆಗಳು ಮತ್ತು ಋಷಿಗಳು ಅಧಿಕಾರವನ್ನು ಪಡೆಯುತ್ತಾರೆ. ಏಕೆಂದರೆ ಹಿಂದಿನ ವಸು ಮೊದಲಾದ ದೇವತೆಗಳು ಮತ್ತು ಭೃಗುಮೊದಲಾದ ಋಷಿಗಳು ಅಧಿಕಾರವನ್ನು ಕಳೆದುಕೊಂಡಿದ್ದರಿಂದ ಈಗ ಅವರ[illegible]ತ್ವ ಮತ್ತು ಋಷಿತ್ವಗಳು ಇರುವುದಿಲ್ಲ. ಏಕೆಂದರೆ ಯಾಗಾದಿಕರ್ಮಗಳಲ್ಲಿ ಬಾಧಕವಿ[illegible] ಬ್ರಹ್ಮವಿದ್ಯೆಯ ಅಧಿಕಾರದಲ್ಲಿ ಬಾಧಕವಿರುವುದಿಲ್ಲವೆಂದು ತಿಳಿಯಬೇಕು.

**प्रकाशः** – यज्ञं विष्णुम् । यज्ञो वै विष्णुरिति श्रुतेः । अयजन्त आराधितवन्तः। एतत्पुरुषसूक्तगतं वाक्यम् । ''देवावै सत्रमासत ऋद्धिपरिमितं यशस्कामाः'' इति तैत्तिरीये द्वितीयकाण्डे तृतीयप्रश्नादावारण्यके च वाक्यम् । ''देवा यज्ञमतन्वत'' इत्यपि पुरुषसूक्तस्थं वाक्यम् ।

ಅದ್ವೈತಿಗಳ ಈ ಅಭಿಪ್ರಾಯವನ್ನು 'ತನ್ನ' ಎಂಬ ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಏಕೆಂದರೆ ದೇವತೆಗಳಿಗೂ ಯಾಗಾಧಿಕಾರವಿದೆಯೆನ್ನಲು ಅನೇಕ ಪ್ರಮಾಣಗಳಿವೆ. 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂಬಲ್ಲಿರುವ 'ಯಜ್ಞ' ಶಬ್ದಕ್ಕೆ ವಿಷ್ಣುವೆಂದರ್ಥ. 'ಯಜ್ಞೋ ವೈ ವಿಷ್ಣುಃ' ಎಂದು ಶ್ರುತಿಯೇ ವಿಷ್ಣುವನ್ನು ಯಜ್ಞವೆಂದು ಕರೆದಿದೆ. 'ಅಯಜಂತ' ಎಂದರೆ ಆರಾಧನೆ ಮಾಡಿದರು ಎಂದರ್ಥ. ಪುರುಷಸೂಕ್ತದಲ್ಲಿ ಈ ವಾಕ್ಯವಿರುತ್ತದೆ. 'ದೇವಾ ವೈ ಸತ್ರಮಾಸತ ಋದ್ಧಿಪರಿಮಿತಂ ಯಶಸ್ಕಾಮಾಃ' ಎಂಬ ವಾಕ್ಯವು ತೈತ್ತೀರಿಯೋಪನಿಷತ್ತಿನ ಎರಡನೆಯ ಕಾಂಡದ ಮೂರನೇ ಪ್ರಶ್ನದ ಹಾಗೂ ಆರಣ್ಯಕದ ವಾಕ್ಯವಾಗಿದೆ. ಈ ವಾಕ್ಯದಲ್ಲಿಯೂ ದೇವತೆಗಳು ಯಜ್ಞವನ್ನು ಮಾಡಿದರೆಂದು ಹೇಳಲಾಗಿದೆ. 'ದೇವಾಃ ಯಜ್ಞಮತನ್ವತ' ಎಂಬ ವಾಕ್ಯವೂ ಸಹ ಪುರುಷಸೂಕ್ತದಲ್ಲೇ ಇದೆ.

**प्रकाशः** – ''देवा वै चतुर्होतृभिः'' इति पराते द्वितीयकाण्डे द्वितीयप्रश्ने वाक्यम् । चतुर्होतृभिः चतुर्होतृनामकैः । अग्निर्होतेत्यादिमन्त्रैरित्यर्थः । ''यद्विश्वेदेवा'' इत्येतदपि पराते प्रथमकाण्डे चतुर्थप्रश्ने वाक्यम् ।।

'ದೇವಾ ವೈ ಚತುರ್ಹೋತೃಭಿಃ' ಎಂಬ ವಾಕ್ಯವು ಪರಾತದಲ್ಲಿ ಎರಡನೆಯ ಕಾಂಡದ ಎರಡನೆಯ ಪ್ರಶ್ನೆಯ ವಾಕ್ಯವಾಗಿದೆ. 'ಚತುರ್ಹೋತೃಭಿಃ' ಎಂದರೆ 'ಚತು ರ್ಹೋತೃ' ಎಂಬ ಹೆಸರಿನ ಎಂದರ್ಥ. ಅಂದರೆ 'ಅಗ್ನಿರ್ಹೋತಾ' ಇತ್ಯಾದಿ ಮಂತ್ರಗಳಿಂದ ಎಂದರ್ಥ. 'ಯದ್ವಿಶ್ವೇದೇವಾಃ' ಎಂಬ ವಾಕ್ಯವು ಕೂಡ ಪರಾತದ ಪ್ರಥಮಕಾಂಡದ ನಾಲ್ಕನೆಯ ಪ್ರಶ್ನದಲ್ಲಿದೆ.

**प्रकाशः – प्रजापतिर्वा इति ।। एतेन ''प्रजापतिर्वाव ज्येष्ठः । स ह्येतेनाग्रेऽयजत'' इति सप्तमकामकाण्डस्थं वाक्यमुपात्तमित्याहुः । अन्ये तु शाखान्तरस्थमिति ।**

'ಪ್ರಜಾಪತಿರ್ವಾವ ಜ್ಯೇಷ್ಠಃ । ಸ ಹ್ಯೇತೇನಾಗ್ರೇಽಯಜತ' ಎಂಬ ವಾಕ್ಯವು ಏಳನೆಯ ಕಾಮಕಾಂಡದಲ್ಲಿರುವ ವಾಕ್ಯವೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಬೇರೆ ಶಾಖೆಯಲ್ಲಿದೆಯೆಂದು ಹೇಳುತ್ತಾರೆ.

**प्रकाशः – ''इन्द्रोऽश्वमेधान्'' इति तृतीये ''श्रुत्यादिबलीयस्त्वाच्च न बाधः'' इत्यत्र भाष्योक्तश्रुतिः । 'देवा वा' इति पराते द्वितीयकाण्डे द्वितीयप्रश्ने श्रुतम् ।**

'ಇಂದ್ರೋಽಶ್ವಮೇಧಾನ್' ಎಂಬ ಶ್ರುತಿಯು 'ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಲಾಗಿದೆ. 'ದೇವಾ ವಾ' ಎಂಬ ವಾಕ್ಯವು ಪರಾತದಲ್ಲಿ ಎರಡನೆಯ ಕಾಂಡದ ಎರಡನೆಯ ಪ್ರಶ್ನದಲ್ಲಿ ಶ್ರುತವಾಗಿದೆ.

**प्रकाशः – अत्र वाक्य आद्यन्तयोश्श्रुतषष्ठ्यन्तपदयोर्देवतानामपि देवानामिति विशेषणविशेष्यभावेनान्वयः । देवतानामपीत्यस्य ''साऽस्य देवता'' इत्यादाविव सम्प्रदानभूतस्वामिवाचित्वाद्देवतापदस्य यज्ञेष्वाराध्यानामपीत्यर्थः । तेन न पौनरुक्त्यदोषः । देवानामपीत्यपिशब्दो न केवलं मनुष्याणामिति समुच्चयार्थः ।**

ಗ್ರಂಥಕಾರರ 'ದೇವತಾನಾಮಪಿ' ಎಂಬ ವಾಕ್ಯದಲ್ಲಿ ಷಷ್ಠ್ಯಂತವಾದ ದೇವತಾ ಶಬ್ದವಿದೆ. ಮೊದಲು 'ದೇವತಾನಾಮಪಿ' ಎಂದು ಪ್ರಾರಂಭವಾಗಿದೆ. ಕೊನೆಯಲ್ಲಿಯೂ ಸಹ 'ದೇವನಾಮಪಿ' ಎಂದು ಹೇಳಿದ್ದಾರೆ. ಒಂದೇ ಅರ್ಥವುಳ್ಳ ಈ ಎರಡು ಶಬ್ದಗಳು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಬೇರೆ ಬೇರೆ ಅರ್ಥವುಳ್ಳದ್ದರಿಂದ ಈ ಎರಡೂ ಶಬ್ದಗಳು ಸಾರ್ಥಕವಾಗಿವೆ. ಮೊದಲಿರುವ 'ದೇವತಾನಾಮಪಿ' ಎಂಬಲ್ಲಿರುವ ದೇವತಾಶಬ್ದಕ್ಕೆ ಯಜ್ಞದಲ್ಲಿ ಆರಾಧ್ಯರು ಎಂದರ್ಥ. ಅಂದರೆ ಯಜ್ಞದಲ್ಲಿ ಸ್ವತಃ ತಾವೇ ಆರಾಧ್ಯರಾಗಿದ್ದರೂ ಕೂಡ ಅಂತಹ ದೇವತೆಗಳಿಗೆ ಯಜ್ಞಾಧಿಕಾರವಿದೆ ಎಂದಭಿಪ್ರಾಯ. ಹೀಗೆ 'ದೇವತಾನಾಮಪಿ ದೇವಾನಾಮ್' ಎಂಬಲ್ಲಿ ವಿಶೇಷಣ ವಿಶೇಷ್ಯ ಭಾವವನ್ನು ತಿಳಿಯಬೇಕು. ಎರಡೂ ಕಡೆಯೂ 'ಅಪಿ' ಶಬ್ದಗಳಿವೆ. 'ದೇವತಾನಾಮಪಿ' ಎಂಬಲ್ಲಿರುವ 'ಅಪಿ' ಶಬ್ದವು ವಿರೋಧದ್ಯೋತಕವಾಗಿದೆ. ಅಂದರೆ ಸ್ವತಃ ಯಜ್ಞದಲ್ಲಿ ಆರಾಧ್ಯರಾಗಿದ್ದರೂ ಕೂಡ ಯಜ್ಞವನ್ನು ಮಾಡುತ್ತಾರೆ ಎಂದು. ಎರಡನೆಯ

'ಅಪಿ' ಶಬ್ದಕ್ಕೆ ಹೀಗರ್ಥ - ಮನುಷ್ಯರಿಗೆ ಮಾತ್ರ ಯಜ್ಞಾಧಿಕಾರವಿಲ್ಲ, ದೇವತೆಗಳಿಗೂ ಕೂಡ ಯಜ್ಞಾಧಿಕಾರವಿದೆ ಎಂದು. ಆದ್ದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.

**प्रकाशः**– अर्थवादानां स्वार्थे तात्पर्यस्य परेषामप्यनुमतत्वादन्यथा देवतातद्विग्रहाद्य-सिद्ध्यापत्तेरित्यग्रे वक्ष्याम इति भावः । नन्वबाधे स्वार्थे तात्पर्यम् । इह च बाधकान्न स्वार्थे तात्पर्यमस्तीति चेत् तत्किं शूद्रादिवन्निषेध उत देवतान्तराभावादिरूपः प्रागुक्तः । आद्य आह – **शूद्रेति** ।। ''नाग्निर्न यज्ञ :शूद्रस्य तथैवाध्ययनं कुतः'' इति ''नच वर्णावरस्याप्यधिकारः'' इतिवन्न देवानामधिकार इति निषेधाश्रवणादिति भावः । द्वितीय आह – **देवतेति** ।।

**वेदसूत्रे** वेदार्थनिर्णायकसूत्रे । **वज्रिणं** वज्रशब्दवाच्यं माम् । वज्र्यन्तर्गतमिति वा । **शक्रः** प्रसिद्धेन्द्रः । यजतामिति द्वितीयार्थे षष्ठी । यजतः ' अथवा ''यजतां पाण्डवः स्वर्गमवत्विन्द्रस्तपस्विनः । वयं हनाम द्विषतः'' इत्यादाविव यजतामिति लोडात्मनेपदम् ।

ಪ್ರಶ್ನೆ - ದೇವತೆಗಳಿಗೆ ಯಜ್ಞಾಧಿಕಾರವಿದೆಯೆನ್ನಲು ಅನೇಕ ಪ್ರಮಾಣಗಳನ್ನು ನೀಡಿದಿರಿ. ಇವೆಲ್ಲವೂ ಕೂಡ ಕೇವಲ ಅರ್ಥವಾದಗಳು ಹೊರತು, ಸ್ವಾರ್ಥದಲ್ಲಿ ಇವುಗಳಿಗೆ ತಾತ್ಪರ್ಯವಿಲ್ಲವಲ್ಲವೇ?

ಉತ್ತರ - ಹೀಗೆ ಮೀಮಾಂಸಕರು ಹೇಳಬಹುದೇ ಹೊರತು, ಅದ್ವೈತಿಗಳಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಮಂತ್ರ, ಅರ್ಥವಾದ ವಾಕ್ಯಗಳ ಬಲದಿಂದ ದೇವತೆಗಳಿಗೆ ಶರೀರವಿದೆಯೆಂದು ಅದ್ವೈತಿಗಳೇ ಹೇಳಿರುತ್ತಾರೆ. ಮಾನಾಂತರ ಅವಿರುದ್ಧವಾದ ಸ್ವಾರ್ಥದಲ್ಲಿಯೂ ಕೂಡ ತಾತ್ಪರ್ಯವನ್ನು ಒಪ್ಪಿದ್ದರಿಂದ, ದೇವತೆಗಳಿಗೆ ಯಜ್ಞಾಧಿಕಾರವಿದೆಯೆಂದು ಈ ಅರ್ಥವಾದವಾಕ್ಯಗಳಿಂದ ಸಿದ್ಧವಾಗುತ್ತದೆ. ಎರಡನೆಯ ಪಕ್ಷದಲ್ಲಿ 'ದೇವತಾ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ದೇವತೆಗಳಿಗೆ ಅಧಿಕಾರವಿಲ್ಲವೆಂದು ಹೇಳಬಾರದು. ಏಕೆಂದರೆ ಮಹಾಭಾರತದಲ್ಲಿ ಭಾರತವಾಕ್ಯವನ್ನು ಉದಾಹರಿಸುತ್ತಿದ್ದಾರೆ.

'ವೇದ ಸೂತ್ರೇ' ಎಂದರೆ ವೇದಾರ್ಥನಿರ್ಣಾಯಕವಾದ ಸೂತ್ರಗಳಲ್ಲಿ ಎಂದರ್ಥ. ವಜ್ರಿಣಂ = ವಜ್ರಶಬ್ದವಾಚ್ಯನಾದ ನನ್ನನ್ನು. ಅಥವಾ ವಜ್ರದಲ್ಲಿ ಅಂತರ್ಗತನಾದವನನ್ನು, ಶಕ್ರಃ = ಪ್ರಸಿದ್ಧನಾದ ಇಂದ್ರನು. 'ಯೋಮೇ' ಎಂಬ ಶ್ಲೋಕದ ಅಭಿಪ್ರಾಯವನ್ನು ಇಷ್ಟು ತಿಳಿಯಬೇಕು - ನನಗೆ ಯಾವಾತನು ಈ ಯಜ್ಞದಲ್ಲಿ ಮಹಾಭಾಗವನ್ನು ಕಲ್ಪಿಸುತ್ತಾನೋ, ಅವನೂ ಕೂಡ ಯಜ್ಞಭಾಗಾರ್ಹನಾಗಿ ವೇದಸೂತ್ರಗಳಲ್ಲಿ ಹೇಳಲ್ಪಟ್ಟಿದ್ದಾನೆ ಎಂದರ್ಥ. ಶ್ಲೋಕದಲ್ಲಿ 'ಯಜತಾಮ್' ಎಂಬ ಪ್ರಯೋಗವಿದೆ. ಆದರೆ 'ಯಜ' ಧಾತುವು ಪರಸ್ಮೈಪದದಲ್ಲಷ್ಟೇ ಇರುವುದರಿಂದ ಆತ್ಮನೇಪದಿಯಲ್ಲಿ ಪ್ರಯೋಗವಿರುವುದಿಲ್ಲ. ಆದ್ದರಿಂದ 'ಯಜತಾಮ್' ಎಂಬುದನ್ನು ಆತ್ಮನೇ ಪದೀಯ ಲೋಟ್‌ಲಕಾರವೆಂದು ಸರ್ವಥಾ ತಿಳಿಯಬಾರದು.

ಹೊರತಾಗಿ ದ್ವಿತೀಯಾರ್ಥದಲ್ಲಿರುವ ಷಷ್ಠೀವಿಭಕ್ತಿಯೆಂದು ಪರಿಗಣಿಸಬೇಕು. ಅಂದರೆ ನನ್ನನ್ನು ಕುರಿತು ಯಾರು ಯಾಗ ಮಾಡುತ್ತಾನೋ, ಅವನನ್ನು ಎಂದರ್ಥವಾಗುತ್ತದೆ. ನನ್ನನ್ನು ಕುರಿತು ಯಾರು ಯಾಗ ಮಾಡುತ್ತಾನೋ, ಅವನನ್ನು ನಾನು ಪವಿತ್ರ ಮಾಡುತ್ತೇನೆ ಎಂದರ್ಥವಾಗುತ್ತದೆ. ಇದು ಒಂದು ವಾಕ್ಯ. 'ಇಂದ್ರಃ ಮಾಮ್ ಅಯಜತ್' 'ಇಂದ್ರನು ನನ್ನನ್ನು ಹೋಮಿಸಲಿ' ಎಂಬುದು ಮತ್ತೊಂದು ವಾಕ್ಯವೆಂದು ತಿಳಿಯಬೇಕು.

ಅಥವಾ 'ಯಜತಾಮ್' ಎಂಬುದನ್ನು ಆತ್ಮನೇ ಪದಿಯ ಲೋಟ್‌ಲಕಾರವೆಂದು ಪರಿಗಣಿಸಬಹುದು. ಏಕೆಂದರೆ 'ಯಜತಾಂ ಪಾಂಡವಃ ಸ್ವರ್ಗಮ್ ಅನತ್ವಿಂದ್ರಸ್ತಪಸ್ವಿನಃ । ವಯಂ ಹನಾಮ ದ್ವಿಷತಃ' ಎಂಬಲ್ಲಿ ಆತ್ಮನೇ ಪದಿಯಲ್ಲಿಯೂ ಪ್ರಯೋಗ ಮಾಡಲಾಗಿದೆ. ಆದ್ದರಿಂದ 'ಚಾಂದ್ರಾದಿಯಸ್ತು ಮನ್ಯಂತೇ ಸರ್ವೇಷಾಂ ಉಭಯಂ ಪದಂ' ಎಂದಿರುವುದರಿಂದ 'ಯಜ್' ಧಾತುವನ್ನು ಆತ್ಮನೇಪದಿಯ ಲೋಟ್‌ಲಕಾರದಲ್ಲಿ ಪ್ರಯೋಗ ಮಾಡಬಹುದೆಂದು ಹೇಳಿದಂತಾಯಿತು.

**प्रकाशः –** अत्र विष्णुविषयत्वाप्रतीतेराह – **भगवद्वचनादिभिरिति ।। अत एवेति ।।** भगवत एवोद्देश्यत्वादित्यर्थः । **अभिजयेयं** प्राप्नुयामित्यर्थः । **इन्द्राय** इन्द्रशब्दवाच्याय विष्णवे ।

ಭಾರತದ ಈ ವಾಕ್ಯದಲ್ಲಿ 'ಮಾಮ್' ಎಂದಷ್ಟೇ ಇದೆ. ಇದು ವಿಷ್ಣುವಿಷಯಕವೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕೋಸ್ಕರ 'ಭಗವದ್ವಚನಾದಿಭಿಃ' ಎಂದು ಹೇಳಿರುತ್ತಾರೆ. 'ಅತ ಏವ' ಎಂದರೆ ಭಗವಂತನೇ ಉದ್ದೇಶ್ಯನಾದ್ದರಿಂದ ಎಂದರ್ಥ. 'ಅಭಿಜಯೇಯಂ' ಎಂದರೆ 'ಹೊಂದುತ್ತೇನೋ' ಎಂದರ್ಥ. ಅಂದರೆ ದೇವೇಂದ್ರನು ಇಂದ್ರನಾಮಕನಾದ ಪರಮಾತ್ಮನನ್ನು ಯಾಗದಿಂದ ಸಂತೋಷಪಡಿಸಿ ಜಯಶೀಲನಾಗಬೇಕೆಂದು ಉದ್ದೇಶಿಸಿದನು ಎಂದಭಿಪ್ರಾಯ. 'ಇಂದ್ರಾಯ' ಎಂದರೆ ಶಬ್ದವಾಚ್ಯನಾದ ವಿಷ್ಣುವಿಗೋಸ್ಕರ ಎಂದರ್ಥ.

**प्रकाशः –** इयं च श्रुतिः पराते तृतीयकाण्डे प्रथमप्रश्ने श्रूयते । एवं देवानामधिकारं समर्थ्य ऋषीणां तमाह – **भृग्विति ।।** अनेकमानविरोधेन सङ्कोचो न्याय्य इति भावः ।।

'ಇಂದ್ರೋ ವಾ ಅಕಾಮಯತ' ಎಂಬ ಶ್ರುತಿಯು ಪರಾತದ ತೃತೀಯಕಾಂಡದ ಪ್ರಥಮ ಪ್ರಶ್ನದಲ್ಲಿ ಶ್ರುತವಾಗಿದೆ.

ಇಲ್ಲಿಯ ತನಕ ದೇವತೆಗಳ ಅಧಿಕಾರವನ್ನು ಸಮರ್ಥನೆ ಮಾಡಿ, ಪ್ರಕೃತ ಋಷಿಗಳಿಗೂ ಕೂಡ ಅಧಿಕಾರವಿದೆಯೆಂದು 'ಭೃಗು' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಅನೇಕ ಪ್ರಮಾಣಗಳ ವಿರೋಧವಿರುವುದರಿಂದ ಮನುಷ್ಯರೆಂದು ಅರ್ಥವನ್ನು ಸಂಕೋಚ ಮಾಡಬಹುದಲ್ಲವೇ? ಹೀಗೆ ಸಂಕೋಚಮಾಡುವುದು ನ್ಯಾಯಸಮ್ಮತವೇ ಆಗಿದೆಯೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः – पूर्वपूर्वेति ।।** यदत्रोक्तं भामत्यां प्राचां भृग्वादीनां क्षीणाधिकारत्वेनेदानीमृषित्वाभावादिति तन्न । भृग्वादित्वानपायात् । उक्तं च तन्त्ररत्ने ''नच भृग्वादयो भृग्वादिसगोत्रा इति भाष्यमयुक्तम् । कुतः । अनादिर्हि कालोऽस्माकं भृगोरपि पूर्वं भृग्वन्तरसम्भवात् । ततः पूर्वमप्येवमेवेति सम्भवत्येव भृगोर्भार्गवत्वमित्यस्त्येवर्षीणामधिकारः'' इति । ''ऋष्युदाहरणमनादरणीयम्'' इति शास्त्रदीपिकायामपि ऋष्युदाहरणानादरणमुक्तम् ।

ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - ಹಿಂದಿನ ಭೃಗು ಮೊದಲಾದವರಿಗೆ ಈಗ ಅಧಿಕಾರವಿಲ್ಲದ ಕಾರಣ ಋಷಿತ್ವವೇ ಇರುವುದಿಲ್ಲವೆಂದು. ಇದು ತಪ್ಪು. ಹಿಂದೆ ಋಷಿಗಳಾದ ಮಾತ್ರಕ್ಕೆ ಈಗ ಭೃಗುತ್ವವಿಲ್ಲವೆಂದು ಹೇಳಬಾರದು. ಇದನ್ನೇ ತಂತ್ರರತ್ನದಲ್ಲಿ 'ನಚ ಭೃಗ್ವಾದಯೋ ಭೃಗ್ವಾದಿಸಗೋತ್ರಾ ಇತಿ ಭಾಷ್ಯಮಯುಕ್ತಮ್ । ಕುತಃ । ಅನಾದಿರ್ಹಿ ಕಾಲೋಽಸ್ಮಾಕಂ ಭೃಗೋರಪಿ ಪೂರ್ವಂ ಭೃಗ್ವಂತರಸಂಭವಾತ್ । ತತಃ ಪೂರ್ವಮಪ್ಯೇವಮೇವೇತಿ ಸಂಭವತ್ಯೇವ ಭೃಗೋರ್ಭಾರ್ಗವತ್ವಮಿತ್ಯಸ್ತ್ಯೇವರ್ಷೀಣಾಮಧಿಕಾರಃ' ಭೃಗ್ವಾದಿಗಳಿಗೆ ಭೃಗು ಮೊದಲಾದ ಗೋತ್ರದಲ್ಲಿ ಬಂದಿರುತ್ತಾರೆ ಎಂಬ ಭಾಷ್ಯವು ತಪ್ಪು. ಏಕೆಂದರೆ ಕಾಲವು ಅನಾದಿಯಾಗಿದೆ. ಈ ಭೃಗುವಿಗಿಂತ ಮೊದಲು ಮತ್ತೊಬ್ಬ ಭೃಗುವಿರುತ್ತಾನೆ. ಅವನಿಗಿಂತ ಮೊದಲು ಮತ್ತೊಬ್ಬ ಭೃಗುವಿರುತ್ತಾನೆ. ಹೀಗೆ ಭೃಗುವಿಗೂ ಸಹ ಭೃಗು ಗೋತ್ರೋದ್ಭವತ್ವವು ಉಪಪನ್ನವಾಗುತ್ತದೆ. ಆದ್ದರಿಂದ ಋಷಿಗಳಿಗೂ ಅಧಿಕಾರವಿದೆಯೆಂದು ಹೇಳಲಾಗಿದೆ. ಮತ್ತು ಶಾಸ್ತ್ರದೀಪಿಕೆಯಲ್ಲಿಯೂ 'ಋಷ್ಯುದಾಹರಣಮನಾದರಣೀಯಮ್' ಎಂದು ದೇವತೆಗಳನ್ನು ಉದಾಹರಿಸಬಹುದೇ ಹೊರತು, ಋಷಿಗಳನ್ನು ಉದಾಹರಿಸಬಾರದೆಂದು ಹೇಳಲಾಗಿದೆ. ಆದ್ದರಿಂದ ಹಿಂದಿನ ಭೃಗು ಮೊದಲಾದವರನ್ನು ಮುಂದಿನ ಭೃಗು ಮೊದಲಾದವರು ಅನುಸರಿಸಬೇಕೆಂಬುದು ಅವರಿಗೂ ಸಮ್ಮತವಾಗಿದೆಯೆಂದು ತಿಳಿಯುತ್ತದೆ.

**गुरुराजीयम्** – ननु 'ता एताः' इत्यादेस्सृज्येन तात्पर्यमिति चेत्तथात्वे स्रष्टर्यपि न स्यादविशेषादित्याह – **न हीति** ।। ननु श्रुतितात्पर्यगोचरस्यापि विग्रहादेर्ब्रह्मज्ञानेतरज्ञानाबाध्यत्वाद्व्यावहारिकत्वम्। यजमानप्रस्तरत्वादेर्ब्रह्मज्ञानेतरज्ञानबाध्यत्वादव्यावहारिकत्वमित्यत आह – **समर्थितं चेति** ।। श्रुतौ श्रद्धालुना त्वया श्रुतेस्तात्त्विकविषयत्वस्यैव वक्तव्यत्वात् । न चैतद्देवताशरीरादिकं प्रमाणान्तरप्राप्तम् । येन तद्वाक्यमनुवादकं सत्तत्रातात्पर्यादप्रमाणं न स्यादित्यादिनाऽतराद्यधिकरणेषु समर्थितमित्यर्थः । देवानां कर्मस्वनधिकारः किं साधकाभावात्किं वा निषेधसद्भावात्किं वाऽनुपपत्तिसद्भावादिति विकल्पान्मनसि निधायाद्यं दूषयति – **देवतानामपीति** ।। न द्वितीय इत्याह – **शूद्रवच्चेति** ।। तृतीये

देवानां देवतान्तरभावेन तदुद्देशेन हविस्त्यागायोगो बाधक इति तावन्निराकरोति । देवताकर्तृकयज्ञेष्विति – **वेदसूत्रेति** ।। सूचनात्सूत्रमित्यर्थः । ऋषीणां भृग्वादीनां भृग्वाद्यन्तराभावेन तद्वरणायोगात्स्वेन स्ववरणस्य च कर्तुमशक्यत्वान्न कर्मण्यधिकार इत्यत आह – **भृग्वादीति** ।। भृग्वादिवरणस्य मनुष्यमात्रविषयत्वे गौणता भवतीत्यरुच्याऽऽह – **यद्वेति** ।।




ದೇವತೆಗಳಿಗೆ ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಏಕೆಂದರೆ ಸ್ವತಃ ತಾವೇ ದೇವತೆಗಳಾದ್ದರಿಂದ, ದೇವತೋದ್ದೇಶಕವಾದ ಕರ್ಮದಲ್ಲಿ ಅಧಿಕಾರವನ್ನು ಹೇಳಲು ಹೇಗೆ ಸಾಧ್ಯ ? ಋಷಿಗಳಿಗೂ ಸಹ ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿಲ್ಲ. ಋಷಿಗಳ ವರಣವು ಯಜ್ಞಾದಿಕರ್ಮದಲ್ಲಿ ವಿಹಿತವಾಗಿದೆ. ಸ್ವತಃ ತಾವೇ ಋಷಿಗಳಾದ್ದರಿಂದ ಮತ್ತೊಬ್ಬ ಋಷಿಯ ವರಣವನ್ನು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ದೇವತೆಗಳಾಗಲೀ, ಋಷಿಗಳಿಗಾಗಲೀ, ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಆದರೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳಬಹುದೆಂದು ಅದ್ವೈತಿಗಳ ಎರಡನೆಯ ಸೂತ್ರ ವ್ಯಾಖ್ಯಾನ.

ಇದು ತಪ್ಪು. ಏಕೆಂದರೆ 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂಬ ಪುರುಷಸೂಕ್ತದಲ್ಲಿ ದೇವತೆಗಳು ಯಜ್ಞವನ್ನು ಮಾಡಿದರೆಂಬ ದಾಖಲೆಯಿದೆ. ತೈತ್ತಿರಿಯೋಪನಿಷತ್ತಿನಲ್ಲಿಯೂ 'ದೇವಾ ವೈ ಸತ್ರಮಾಸತ' ಇತ್ಯಾದಿ ಅನೇಕ ವಾಕ್ಯಗಳು ಆಧಾರಗಳಾಗಿವೆ. ಮಹಾಭಾರತದಲ್ಲಿಯೂ ಸಹ ಎಲ್ಲ ದೇವತೆಗಳು ವಿಷ್ಣುವನ್ನು ಕುರಿತು ಹೋಮ ಮಾಡಿದರೆಂಬ ಉಲ್ಲೇಖವಿದೆ. ಮತ್ತು ಶೂದ್ರಾದಿಗಳಿಗೆ ಅಧಿಕಾರದ ನಿಷೇಧವಿದ್ದಂತೆ ದೇವತೆಗಳಿಗೆ ಯಜ್ಞಾದಿಕರ್ಮಗಳ ಅಧಿಕಾರವನ್ನು ಎಲ್ಲಿಯೂ ನಿಷೇಧಿಸಿಲ್ಲ. ಆದ್ದರಿಂದ ದೇವತೆಗಳು ಮಾಡುವ ಯಜ್ಞಾದಿಕರ್ಮಗಳಿಗೆ ವಿಷ್ಣುವೇ ಉದ್ದೇಶ್ಯನಾಗಿರುತ್ತಾನೆ. 'ಮಾಮೇವ ಯಜತಾಂ ಶಕ್ರಃ ಪ್ರಾಪಯಿಷ್ಯಾಮಿ ವಜ್ರಿಣಮ್' ಎಂದು ಮಹಾಭಾರತದಲ್ಲಿ ಹಾಗೆ ಹೇಳಲಾಗಿದೆ. ಮತ್ತು ಅನಾದಿಯಾದ ಸಂಸಾರದಲ್ಲಿ ಮುಂದಿನ-ಮುಂದಿನ ಋಷಿಗಳನ್ನು ಹಿಂದಿನ ಋಷಿಗಳು ವರಣವನ್ನು ಮಾಡಬಹುದು. ಆದ್ದರಿಂದ ಋಷಿಗಳಿಗೂ ಅಧಿಕಾರವನ್ನು ಹೇಳಬಹುದು. ಆದ್ದರಿಂದ ಅದ್ವೈತಿಗಳ ನಿಲುವು ಸರಿಯಿಲ್ಲ.



## तात्पर्यचन्द्रिका

**ननु "वसन्ते ब्राह्मणोऽग्नीनादधीत, ग्रीष्मे राजन्यः शरदि वैश्यः" इति "वसन्ते ब्राह्मणमुपनयीत, ग्रीष्मे राजन्यं शरदि वैश्यम्" इति च त्रैवर्णिकानामेवाधानोपनयने श्रुते इति अत्रैवर्णिकानां देवानां तदभावात्तत्साध्याग्निविद्ययोरभावान्न धर्माधिकार इति चेन्न ।**

ಅನುವಾದ - ಆಕ್ಷೇಪ - 'ವಸಂತೇ ಬ್ರಾಹ್ಮಣೋऽಗ್ನೀನಾದಧೀತ, ಗ್ರೀಷ್ಮೇ ರಾಜನ್ಯಃ ಶರದಿ ವೈಶ್ಯಃ' ವಸಂತಋತುವಿನಲ್ಲಿ ಬ್ರಾಹ್ಮಣನು ಅಗ್ನ್ಯಾಧಾನ ಮಾಡಬೇಕು. ಗ್ರೀಷ್ಮ ಋತುವಿನಲ್ಲಿ ಕ್ಷತ್ರಿಯನು ಅಗ್ನ್ಯಾಧಾನ ಮಾಡಬೇಕು. ಶರದೃತುವಿನಲ್ಲಿ ವೈಶ್ಯನು ಅಗ್ನ್ಯಾಧಾನ ಮಾಡಬೇಕು ಎಂಬುದಾಗಿ ತ್ರೈವರ್ಣಿಕರಿಗೆ ಅಗ್ನ್ಯಾಧಾನವನ್ನು ಶ್ರುತಿಯು ವಿಧಾನ ಮಾಡುತ್ತಿದೆ. 'ವಸಂತೇ ಬ್ರಾಹ್ಮಣಮುಪನಯೀತ, ಗ್ರೀಷ್ಮೇ ರಾಜನ್ಯಂ ಶರದಿ ವೈಶ್ಯಮ್' ವಸಂತ ಋತುವಿನಲ್ಲಿ ಬ್ರಾಹ್ಮಣನಿಗೆ ಉಪನಯನ ಮಾಡಬೇಕು. ಗ್ರೀಷ್ಮಋತುವಿನಲ್ಲಿ ಕ್ಷತ್ರಿಯನಿಗೆ, ಶರದೃತುವಿನಲ್ಲಿ ವೈಶ್ಯನಿಗೆ ಉಪನಯನ ಮಾಡಬೇಕೆಂದು ಉಪನಯನವಿಧಿಯೂ ಕೂಡ ತ್ರೈವರ್ಣಿಕರಲ್ಲಿ ಮಾತ್ರ ಶ್ರುತವಾಗಿದೆ. ಆದರೆ ದೇವತೆಗಳು ತ್ರೈವರ್ಣಿಕರಲ್ಲಿ ಸೇರುವುದಿಲ್ಲ. ಆದ್ದರಿಂದ ತ್ರೈವರ್ಣಿಕರಿಂದಷ್ಟೇ ಮಾಡಬೇಕಾದ ಅಗ್ನ್ಯಾಧಾನವಾಗಲೀ, ಉಪನಯನಸಂಸ್ಕಾರವಾಗಲೀ ದೇವತೆಗಳಿಗೆ ಹೇಳಲು ಸಾಧ್ಯವಿಲ್ಲ. ಅಗ್ನ್ಯಾಧಾನದಿಂದ ಸಾಧ್ಯವಾದ ಅಗ್ನಿಯೂ ಸಹ ದೇವತೆಗಳಿಗಿರುವುದಿಲ್ಲ. ಉಪನಯನದಿಂದ ಸಾಧ್ಯವಾದ ವಿದ್ಯೆಯೂ ಸಹ ದೇವತೆಗಳಿಗೆ ಇರುವುದಿಲ್ಲ. ಆದ್ದರಿಂದ ಕರ್ಮಾಧಿಕಾರವು ದೇವತೆಗಳಿಗೆ ಇದೆಯೆಂದು ಉಪಪಾದನೆ ಮಾಡಲು ಬರುವುದಿಲ್ಲವಲ್ಲವೇ?

**"देवा वै भद्राः सन्तोऽग्निमाधित्सन्त" इत्युपक्रम्य "ते पुनर्वस्वोरादधत" इति "देवावा अग्निमादधत" इत्यादौ देवतानामप्याधानश्रवणात् । "यो ब्रह्माणं विदधाति पूर्वं यो वै वेदांश्च प्रहिणोति तस्मै" इति ब्रह्मणः, "ऋग्वेदं भगवोऽध्येमि यजुर्वेदं सामवेदमाथर्वणम्" इत्यादौ देवर्षीणां नारदादीनां चाध्ययनश्रवणाच्च ।**

ಸಮಾಧಾನ - 'ದೇವಾ ವೈ ಭದ್ರಾಃ ಸಂತೋऽಗ್ನಿಮಾಧಿತ್ಸಂತ' ಎಂದು ಪ್ರಾರಂಭವಾಗಿ 'ತೇ ಪುನರ್ವಸ್ವೋರಾದಧತ' ಎಂದು ಮತ್ತು 'ದೇವಾ ವಾ ಅಗ್ನಿಮಾದಧತ' ಇತ್ಯಾದಿಯಾಗಿ ದೇವತೆಗಳಿಗೂ ಕೂಡ ಅಗ್ನ್ಯಾಧಾನವನ್ನು ವಿಧಾನ ಮಾಡಲಾಗಿದೆ. ಮತ್ತು 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂಬುದಾಗಿ ಬ್ರಹ್ಮದೇವರೂ ಸಹ ಅಧ್ಯಯನಾದಿಗಳಲ್ಲಿ ತೊಡಗುತ್ತಾರೆಂದು ಹೇಳಲಾಗಿದೆ. ಇದರಂತೆ 'ಋಗ್ವೇದಂ ಭಗವೋऽಧ್ಯೇಮಿ

ಯಜುರ್ವೇದಂ ಸಾಮವೇದಮಾಥರ್ವಣಮ್' ಇತ್ಯಾದಿ ವಾಕ್ಯಗಳಿಂದ ದೇವರ್ಷಿಗಳಾದ ನಾರದರು ತಾವು ಎಲ್ಲವನ್ನು ಅಧ್ಯಯನ ಮಾಡಿರುತ್ತೇವೆಂದು ಹೇಳಿಕೊಂಡಿರುತ್ತಾರೆ.

**त्वत्प्रसादेन भगवन् ! स्वाध्यायतपसोर्मम ।**
**कुशलं चाव्ययं चैव सर्वस्य जगतस्तथा ।।**

**इति मोक्षधर्मे चतुर्मुखं प्रति रुद्रवचनाच्च ।**

ತ್ವತ್ಪ್ರಸಾದೇನ ಭಗವನ್ ! ಸ್ವಾಧ್ಯಾಯತಪಸೋರ್ಮಮ ।
ಕುಶಲಂ ಚಾವ್ಯಯಂ ಚೈವ ಸರ್ವಸ್ಯ ಜಗತಸ್ತಥಾ ॥

ಎಲೈ! ಭಗವಂತನೇ ನಿನ್ನ ಪ್ರಸಾದದಿಂದಲೇ ಸ್ವಾಧ್ಯಾಯ ಮತ್ತು ತಪಸ್ಸುಗಳಲ್ಲಿ ನಾನು ಕುಶಲನಾಗಿದ್ದೇನೆ. ಮತ್ತು ಅವ್ಯಯನಾಗಿದ್ದೇನೆ. ಜಗತ್ತೂ ಸಹ ಕುಶಲವಾಗಿದೆ ಎಂದು ಚತುರ್ಮುಖ ಬ್ರಹ್ಮದೇವರನ್ನು ಕುರಿತು ರುದ್ರದೇವರು ಹೇಳುವಂತಹ ಮಾತನ್ನು ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿ ನೋಡಬಹುದು.

**देवानां त्वन्मते कर्मानधिकारेऽपि वैदिकज्ञानाधिकारवदुपनयनाभावेऽप्यध्ययनोपपत्तेश्च ।**

ಮತ್ತು ಅದ್ವೈತಮತದಲ್ಲಿ ದೇವತೆಗಳಿಗೆ ಕರ್ಮಾಧಿಕಾರವನ್ನು ಒಪ್ಪಿರುವುದಿಲ್ಲ. ಆದರೂ ಸಹ ವೇದೋಕ್ತ ಜ್ಞಾನಾಧಿಕಾರವನ್ನು ಒಪ್ಪಲಾಗಿದೆ. ಅದರಂತೆ ದೇವತೆಗಳಿಗೆ ಉಪನಯನವನ್ನು ಒಪ್ಪದಿದ್ದರೂ ವೇದಾಧ್ಯಯನವನ್ನು ಹೇಳಬಹುದಲ್ಲವೇ?

**अध्ययनाभावेऽपि देवानां स्वयं प्रतिभातवेदत्वाच्च । ''अथ पुमर्थसाधनान्यर्थो धर्मो ज्ञानमित्युत्तरोत्तरम् । तत्राधिकारिणो मनुष्या ऋषयो देवा इत्युत्तरोत्तरम्'' इत्यादिश्रुतिसिद्धस्य देवानां कर्माधिकारस्यात्रैवर्णिकत्वादिनाऽपलापे तत एव तेषां ब्रह्मविद्यानधिकारापाताच्च ।**

ವಸ್ತುತಸ್ತು ದೇವತೆಗಳಿಗೆ ಅಧ್ಯಯನವೇ ಬೇಕಾಗಿಲ್ಲ. ಸ್ವತಃ ಅವರು ಎಲ್ಲವನ್ನೂ ಕೂಡ ತಿಳಿದಿರುತ್ತಾರೆ. ಆದರೂ ಸಹ 'ಅಥ ಪುಮರ್ಥಸಾಧನಾನ್ಯರ್ಥೋ ಧರ್ಮೋ ಜ್ಞಾನಮಿತ್ಯುತ್ತರೋತ್ತರಮ್ । ತತ್ರಾಧಿಕಾರಿಣೋ ಮನುಷ್ಯಾ ಋಷಯೋ ದೇವಾ ಇತ್ಯುತ್ತರೋತ್ತರಮ್' ಪುರುಷಾರ್ಥಕ್ಕೆ ಸಾಧನವಾದವು ಅರ್ಥ, ಧರ್ಮ, ಜ್ಞಾನ ಈ ಮೂರು. ಇವುಗಳಲ್ಲಿ ಹಿಂದಿನ ಪುರುಷಾರ್ಥಗಳಿಗಿಂತ ಮುಂದಿನ ಪುರುಷಾರ್ಥಗಳು ಶ್ರೇಷ್ಠವಾಗಿವೆ. ಮನುಷ್ಯರಿಗೆ ಅರ್ಥದಲ್ಲಿ ಅಧಿಕಾರವಿರುತ್ತದೆ. ಋಷಿಗಳಿಗೆ ಧರ್ಮದಲ್ಲಿ ಅಧಿಕಾರವಿರುತ್ತದೆ. ದೇವತೆಗಳಿಗೆ ಜ್ಞಾನದಲ್ಲಿ ಅಧಿಕಾರವಿರುತ್ತದೆಂದು ಶ್ರುತಿಯು ಹೇಳಿದೆ. ವಸ್ತುತಃ ಮೂವರಿಗೂ

ಮೂರರಲ್ಲಿಯೂ ಅಧಿಕಾರವಿರುತ್ತದೆ. ಆದರೆ ಮನುಷ್ಯರಿಗೆ ಕಡಿಮೆಪ್ರಮಾಣದಲ್ಲಿ, ಋಷಿಗಳಿಗೆ ಸ್ವಲ್ಪ ಹೆಚ್ಚು ಪ್ರಮಾಣದಲ್ಲಿ, ದೇವತೆಗಳಿಗೆ ಮತ್ತಷ್ಟು ಹೆಚ್ಚು ಪ್ರಮಾಣದಲ್ಲಿ ಅರ್ಥ, ಧರ್ಮ, ಜ್ಞಾನ ಇವುಗಳ ಸಂಪಾದನೆಯ ಅಧಿಕಾರವು ಇರುತ್ತದೆಂದು ತಿಳಿಯಬೇಕು. ಈ ವಾಕ್ಯದಿಂದ ದೇವತೆಗಳಿಗೆ ಕರ್ಮದಲ್ಲಿ ಅಧಿಕಾರವಿರುತ್ತದೆಂದು ಸ್ಪಷ್ಟವಾಗುತ್ತದೆ. ಪ್ರಕೃತ ದೇವತೆಗಳು ತ್ರೈವರ್ಣಿಕರಲ್ಲದ ಕಾರಣ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಅಪಲಾಪಮಾಡುವುದಾದರೆ ಇದೇ ಕಾರಣದಿಂದಲೇ ಬ್ರಹ್ಮವಿದ್ಯೆಯಲ್ಲೂ ಕೂಡ ಅವರಿಗೆ ಅಧಿಕಾರವನ್ನು ಹೇಳಬಾರದು.

**''देवा एव ब्रह्मचारिणः'' इति प्रक्रम्य ''सर्ववर्णाः सर्वाश्रमिणः सर्वं ह्येते कर्म कुर्वन्ति'' इत्यादिश्रुतेर्देवानामत्रैवर्णिकत्वाभावाच्च ''एतया निषादस्थपतिं याजयेत्'' इत्यादिवचनादत्रैवर्णिकत्वेनानाहिताग्नीनामपि निषादस्थपत्यादीनां लौकिकाग्नौ वैदिककर्माधिकाराङ्गीकाराच्च ।**

ಮತ್ತು 'ದೇವಾ ಏವ ಬ್ರಹ್ಮಚಾರಿಣಃ' ಎಂದು ಪ್ರಾರಂಭವಾಗಿ 'ಸರ್ವವರ್ಣಾಃ ಸರ್ವಾಶ್ರಮಿಣಃ ಸರ್ವಂ ಹ್ಯೇತೇ ಕರ್ಮ ಕುರ್ವಂತಿ' ಇತ್ಯಾದಿ ಶ್ರುತಿಯು ದೇವತೆಗಳಿಗೆ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಎಂಬ ಮೂರು ವರ್ಣಗಳನ್ನು ಒಟ್ಟಿಗೆ ವಿಧಾನ ಮಾಡಿದೆ. ಆದ್ದರಿಂದ ಈ ಶ್ರುತಿಯಿಂದ ದೇವತೆಗಳಿಗೆ ತ್ರೈವರ್ಣಿಕತ್ವವು ಸಿದ್ಧವಾಗುತ್ತದೆ. ಮತ್ತು 'ಏತಯಾ ನಿಷಾದಸ್ಥಪತಿಂ ಯಾಜಯೇತ್' ಇತ್ಯಾದಿ ಶ್ರುತಿಯಿಂದ ತ್ರೈವರ್ಣಿಕರಲ್ಲದಿದ್ದರೂ ಅಗ್ನ್ಯಾಧಾನವನ್ನು ಮಾಡಿರುವ 'ನಿಷಾದಸ್ಥಪತಿ' ಎಂಬ ಬೇಡ ಜಾತಿಯವರಿಗೆ ಲೌಕಿಕಾಗ್ನಿಯಲ್ಲಿ ವೈದಿಕಕರ್ಮದ ಅಧಿಕಾರವನ್ನು ಒಪ್ಪಲಾಗಿದೆ. ಯಾವರೀತಿಯಾಗಿ ಬೇಡಜಾತಿಯವರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ ಕರ್ಮಾಧಿಕಾರವನ್ನು ಒಪ್ಪಲಾಗಿದೆಯೋ, ಅದರಂತೆ ದೇವತೆಗಳಿಗೂ ಕೂಡ ಅವರಲ್ಲಿ ತ್ರೈವರ್ಣಿಕತ್ವವಿಲ್ಲದಿದ್ದರೂ ಕರ್ಮಾಧಿಕಾರವನ್ನು ಒಪ್ಪಬಹುದು.

**देवा वै सत्रमासतेत्याद्यर्थवादानां मानान्तरप्राप्तिविरोधयोरभावेन देवताविग्रहाद्यर्थवादानामिव त्वन्मते स्वार्थे प्रामाण्याच्च । देवानामुपासनाङ्गकर्मानधिकारे उपासनानधिकारापाताच्च ।**

ಮತ್ತು 'ದೇವಾ ವೈ ಸತ್ರಮಾಸತ' ಇತ್ಯಾದಿ ವಾಕ್ಯಗಳು ದೇವತೆಗಳಿಗೆ ಕರ್ಮಾಧಿಕಾರವಿದೆಯೆಂದು ಸಮರ್ಥಿಸುತ್ತಿವೆ. ಮೀಮಾಂಸಕರು ಇವುಗಳನ್ನು ಅರ್ಥವಾದವಾಕ್ಯವೆಂದು ಪರಿಗಣಿಸಿ ಸ್ವಾರ್ಥಪರತ್ವವನ್ನು ಒಪ್ಪಿರುವುದಿಲ್ಲ. ಅವರಂತೆ ನಿಮಗೆ ಹೇಳಲಾಗದು. ಏಕೆಂದರೆ ದೇವತೆಗಳಿಗೆ ಕರ್ಮಾಧಿಕಾರವಿಲ್ಲವೆಂಬ ನಿಷೇಧವಾಕ್ಯಗಳಾವುದೂ ಇರುವುದಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ

ನೀವು ದೇವತೆಗಳಿಗೆ ಶರೀರವಿದೆಯೆಂದು ಯಾವಶ್ರುತಿಯಿಂದ ಸಾಧನೆ ಮಾಡುತ್ತೀರೋ, ಅಂತಹ ಶ್ರುತಿಯಿಂದಲೇ ಕರ್ಮಾಧಿಕಾರವನ್ನೂ ಕೂಡ ಒಪ್ಪಬೇಕಾಗುತ್ತದೆ. ಅಂದರೆ ಸ್ವಾರ್ಥದಲ್ಲಿ ಪ್ರಾಮಾಣ್ಯವನ್ನು ಒಪ್ಪುವುದು ನಿಮಗೆ ಅನಿವಾರ್ಯ.

ಮತ್ತು ದೇವತೆಗಳಿಗೆ ಉಪಾಸನೆಗೆ ಅಂಗವಾದ ಕರ್ಮದಲ್ಲಿ ಅಧಿಕಾರವನ್ನು ನೀವು ಒಪ್ಪದಿದ್ದರೆ ಅಂಗಿಯಾದ ಉಪಾಸನೆಯಲ್ಲೂ ಕೂಡ ಅಧಿಕಾರವನ್ನು ಒಪ್ಪದೇ ಇರಬೇಕಾದೀತು. ಹಾಗಾಗಿ ದೇವತೆಗಳಿಗೆ ಯಾಗಾಧಿಕಾರವಿದೆಯೆಂದು ಸಿದ್ಧವಾಗುತ್ತದೆ.

**प्रकाशः –**

**देवानामधिकारे बाधकान्तरमाशङ्क्य निराह – नन्विति ।। तत्साध्येति ।। आधानोपनयनसाध्ययोरग्निविद्ययोरित्यर्थः ।**

ವಿವರಣೆ - ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂಬ ವಿಷಯದಲ್ಲಿ ಮತ್ತೊಂದು ಬಾಧಕವನ್ನು ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ 'ನನು' ಇತ್ಯಾದಿ ಗ್ರಂಥದಿಂದ. 'ತತ್‌ಸಾಧ್ಯ' ಎಂದರೆ ಆಧಾನದಿಂದ ಸಾಧ್ಯವಾದದ್ದು ಅಗ್ನಿ, ಉಪನಯನದಿಂದ ಸಾಧ್ಯವಾದದ್ದು ವಿದ್ಯೆ ಎಂದರ್ಥ.

**प्रकाशः – अग्निराहवनीयादिः । विद्या त्वध्ययनसाध्यार्थज्ञानम् । आधित्सन्त आधातुमैच्छन् । ''देवा वै भद्रास्सन्तोऽग्निमाधित्सन्त तेषामनाहितोऽग्निरासीत् अथैभ्यो वामंवस्वपाक्रामत् ते पुनर्वस्वोः'' इत्यादिश्रवणात्तैत्तिरीयशाखायामित्यर्थः।**

'ಅಗ್ನಿಃ' ಎಂದರೆ ಆಹವನೀಯಾದಿ ಅಗ್ನಿಗಳನ್ನು ವಿವಕ್ಷಿಸಬೇಕು. 'ವಿದ್ಯೆ' ಎಂದರೆ ವೇದಾಧ್ಯಯನದಿಂದ ಸಾಧ್ಯವಾದ ವೇದಾರ್ಥಜ್ಞಾನ ಎಂದರ್ಥ. 'ಆಧಿತ್‌ಸಂತ' ಎಂದರೆ ಅಗ್ನ್ಯಾಧಾನ ಮಾಡಲು ಇಚ್ಛೆಪಟ್ಟರು ಎಂದರ್ಥ. 'ದೇವಾ ವೈ ಭದ್ರಾಃ ಸಂತೋಽಗ್ನಿಮಾಧಿತ್ಸಂತ ತೇಷಾಮನಾಹಿತೋಽಗ್ನಿರಾಸೀತ್ ಅಥೈಭ್ಯೋ ವಾಮಂವಸ್ವಪಾಕ್ರಮತ್ ತೇ ಪುನರ್ವಸ್ವೋಃ' ಇತ್ಯಾದಿಯಾಗಿ ತೈತ್ತಿರೀಯಶಾಖೆಯಲ್ಲಿ ಅಗ್ನ್ಯಾಧಾನದ ವಿಷಯದಲ್ಲಿ ಇಚ್ಛೆಪಟ್ಟರೆಂದು ಹೇಳಲಾಗಿದೆ.

**प्रकाशः – तच्छब्दपरामर्शद्योतनाय ''इत्युपक्रम्य'' इत्युक्तम् । अध्ययनमप्यस्तीत्याह – य इति ।। प्रहिणोति उपदिशति । भगवः भगवन् । ''मतुवसोरुः सम्बुद्धौ छन्दसि'' इति मतोरुः ।**

'ತೇ ಪುನರ್ವಸ್ವೋಃ' ಎಂಬಲ್ಲಿರುವ 'ತತ್' ಶಬ್ದದಿಂದ ಮನುಷ್ಯರನ್ನು ಪರಾಮರ್ಶ ಮಾಡಬಾರದೆಂದು ತಿಳಿಸಲು 'ಇತ್ಯುಪಕ್ರಮ್ಯ' ಎಂದು ಹಿಂದಿನ ವಾಕ್ಯವನ್ನು ಹೇಳಿದ್ದಾರೆ. ಅಧ್ಯಯನವೂ ಇದೆಯೆಂದು 'ಯಃ'

ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ. 'ಪ್ರಹಿಣೋತಿ' ಎಂದರೆ ಉಪದೇಶ ಮಾಡುತ್ತಾನೆ ಎಂದರ್ಥ. 'ಭಗವಃ' ಎಂದರೆ ಎಲೈ ! ಭಗವಂತನೇ ಎಂದರ್ಥ. 'ಮತುವಸೋರುಃ ಸಂಬುದ್ಧೌ ಛಂದಸಿ' ಎಂಬ ಸೂತ್ರದಂತೆ 'ಮತುಪ್' ಮತ್ತು 'ವಸುಪ್' ಪ್ರತ್ಯಯಗಳಿಗೆ 'ರು' ಪ್ರತ್ಯಯವು ಬರುತ್ತದೆ ಸಂಬುದ್ಧಿಯಲ್ಲಿ. ಆದ್ದರಿಂದ ಛಾಂದಸ ಪ್ರಯೋಗದಲ್ಲಿ 'ಭಗವನ್' ಎನ್ನುವ ಬದಲು 'ಭಗವಃ' ಎಂದು ಹೇಳಬಹುದು. ಏಕೆಂದರೆ 'ಮತುಪ್' ಪ್ರತ್ಯಯಕ್ಕೆ 'ರುತ್ವ' ಬಂದು ಅನಂತರ ವಿಸರ್ಗ ಬಂದರೆ 'ಭಗವಃ' ಎಂದಾಗುತ್ತದೆ.

**प्रकाशः** – ननूपनयनसंस्काराभावादध्ययनोक्तिरुपचरितार्थेत्यत आह – देवानामिति ॥ ''विविदिषन्ति यज्ञेन दानेन तपसा'' इत्यादिश्रुत्या ''यज्ञादिश्रुतेरश्ववत्'' इति सूत्रेण च कर्मणोऽपि विद्याङ्गत्वादिति भावः ।

ದೇವತೆಗಳಿಗೆ ಉಪನಯನ ಸಂಸ್ಕಾರವಿಲ್ಲದ ಕಾರಣ ಅಧ್ಯಯನವನ್ನು ಹೇಳಿದ್ದು ಔಪಚಾರಿಕವೆಂದು ಕೂಡಿಸಬೇಕಲ್ಲವೇ ? ಎಂಬ ಪ್ರಶ್ನೆಗೆ 'ದೇವಾನಾಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ವಿವಿದಿಷಂತಿ ಯಜ್ಞೇನ ದಾನೇನ ತಪಸಾ' ಇತ್ಯಾದಿ ಶ್ರುತಿಯಿಂದ ಮತ್ತು 'ಯಜ್ಞಾದಿಶ್ರುತೇರಶ್ವವತ್' ಎಂಬ ಸೂತ್ರದಿಂದಲೂ ಕರ್ಮವೂ ಕೂಡ ವಿದ್ಯೆಗೆ ಅಂಗವೆಂದು ಹೇಳಲಾಗಿದೆ. ಕರ್ಮದಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿದ್ದರೂ ಜ್ಞಾನದಲ್ಲಿ ಅಧಿಕಾರವಿದೆಯೆಂದು ನೀವು ಹೇಗೆ ಹೇಳುತ್ತೀರೋ, ಅದರಂತೆ ಉಪನಯನದಿಂದಲೇ ಅಧ್ಯಯನವೆಂದು ಹೇಳಿದ್ದರೂ ಕೂಡ ಉಪನಯನವಿಲ್ಲದಿದ್ದರೂ ಅಧ್ಯಯನವನ್ನು ಹೇಳಬಹುದೆಂದು ಪ್ರತಿಬಂಧಿಯನ್ನು ತಿಳಿಯಬೇಕು.

**प्रकाशः** – उपनयनसाध्याध्यनाभावेऽपि विद्यासम्पत्तिमाह – अध्ययनेति ॥ ननु बाधकात्कर्मानधिकारेऽपि ''मघवान्प्रजापतौ ब्रह्मचर्यमुवास'' इत्यादिश्रुतिसिद्धत्वाद्ब्रह्मविद्यायां सोऽङ्गीकार्य इति चेत्तुल्यं कर्मण्यपि ।

ಉಪನಯನವೂ ಬೇಡ, ಅಧ್ಯಯನವೂ ಬೇಡ. ಆದರೂ ಸಹ ದೇವತೆಗಳಿಗೆ ವಿದ್ಯೆಯು ಇರುತ್ತದೆ ಎಂಬುದನ್ನು ಅಧ್ಯಯನ ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಅಂದರೆ ಸ್ವಪ್ರತಿಭೆಯಿಂದ ಅವರು ಎಲ್ಲವನ್ನು ತಿಳಿದಿದ್ದಾರೆಂದರ್ಥ.

ಬಾಧಕಗಳಿರುವ ಪ್ರಯುಕ್ತ ಕರ್ಮಾಚರಣೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿರಬಹುದು. 'ಮಘವಾನ್‌ಪ್ರಜಾಪತೌ ಬ್ರಹ್ಮಚರ್ಯಮುವಾಸ' ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ ಬ್ರಹ್ಮವಿದ್ಯೆಯಲ್ಲಿ ಅವರಿಗೆ ಅಧಿಕಾರವನ್ನು ಹೇಳಬಹುದಲ್ಲವೇ? ಎಂದು ಆಕ್ಷೇಪ ಮಾಡುವುದಾದರೆ, ನಾವೂ ಸಹ ದೇವತೆಗಳಿಗೂ ಕೂಡ ಕರ್ಮದಲ್ಲಿ ಅಧಿಕಾರವಿದೆಯೆಂದು ಹೀಗೆಯೇ ಸಮರ್ಥಿಸುತ್ತೇವೆ. ಏಕೆಂದರೆ ದೇವತೆಗಳಿಗೆ ಕರ್ಮದಲ್ಲಿ ಅಧಿಕಾರವಿದೆಯೆನ್ನಲು ಅನೇಕ ಪ್ರಮಾಣಗಳಿವೆ.

**प्रकाशः** – अन्यथा तत्रापि न स्यादिति श्रुत्युदाहरणपूर्वमाह – अथ पुमर्थेति ॥ श्रुतीति ॥ ज्ञानपादे ''नाविशेषात्'' इत्यत्र भाष्योक्तश्रुतिसिद्धेत्यर्थः ।

तत एव अत्रैवर्णिकत्वादेवेत्यर्थः । तदधिकारस्याप्युपनयनसापेक्षत्वादिति भावः ।

ಒಂದುವೇಳೆ ಪ್ರಮಾಣಗಳಿದ್ದರೂ ಕರ್ಮದಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆನ್ನುವುದಾದರೆ, ಜ್ಞಾನವಿಷಯದಲ್ಲಿಯೂ ಸಹ ಅಧಿಕಾರವನ್ನು ಪ್ರಮಾಣವಿದ್ದರೂ ಸಹ ಒಪ್ಪಬಾರದು. ಇದನ್ನು 'ಅಥ ಪುಮರ್ಥ' ಇತ್ಯಾದಿ ವಾಕ್ಯದಿಂದ ಶ್ರುತಿಯನ್ನು ಉದಾಹರಿಸುವ ಮೂಲಕ ಸಮರ್ಥಿಸುತ್ತಿದ್ದಾರೆ. 'ಶ್ರುತಿಸಿದ್ಧ' ಎಂದರೆ ಜ್ಞಾನಪಾದದಲ್ಲಿ 'ನಾವಿಶೇಷಾತ್' ಎಂಬ ಸೂತ್ರದ ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿಯಿಂದ ಸಿದ್ಧವಾಗಿದೆ ಎಂದರ್ಥ. 'ತತ ಏವ' ಎಂದರೆ ತ್ರೈವರ್ಣಿಕರಲ್ಲಿ ಸೇರದಿರುವುದರಿಂದಲೇ ಎಂದರ್ಥ. ಉಪನಯನಾದಿಗಳು ಇಲ್ಲದಿದ್ದರೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ನೀವು ಹೇಳುವುದಾದರೆ, ನಾವೂ ಸಹ ಉಪನಯನಾದಿಗಳನ್ನು ಒಪ್ಪದಿದ್ದರೂ ಕರ್ಮಾದಿಗಳಲ್ಲಿ ಅಧಿಕಾರವನ್ನು ಹೇಳುತ್ತೇವೆ. ಆದ್ದರಿಂದ ಕರ್ಮಾದಿಗಳು ಹೇಗೆ ಉಪನಯನ ಸಾಪೇಕ್ಷಿತವೋ, ಅದರಂತೆ ಬ್ರಹ್ಮವಿದ್ಯೆಯ ಅಧಿಕಾರವೂ ಸಹ ಉಪನಯನಸಾಪೇಕ್ಷಿತವಾಗಿದೆ.

**प्रकाशः** – अत्रैवर्णिकत्वमभ्युपेत्योक्तम् । वस्तुतस्तु तदेव नेत्याह – देवा इति ॥

ದೇವತೆಗಳು ತ್ರೈವರ್ಣಿಕರಲ್ಲವೆಂದು ಇಲ್ಲಿಯತನಕ ಒಪ್ಪಿ ಉತ್ತರಿಸಲಾಯಿತು. ವಿಚಾರ ಮಾಡಿದರೆ ದೇವತೆಗಳು ಅತ್ರೈವರ್ಣಿಕರೇ ಅಲ್ಲವೆಂದು ಸಮರ್ಥಿಸುತ್ತಿದ್ದಾರೆ 'ದೇವಾ' ಇತ್ಯಾದಿ ವಾಕ್ಯದಿಂದ.

**प्रकाशः** – श्रुतेरिति ॥ ज्ञानपादे "मौनवदितरेषामप्युपदेशात्" इति सूत्रे "देवा एव ब्रह्मचारिणो, देवा एव गृहस्था, देवा एव वनस्था यथा ह्येते मुनय एवं सर्ववर्णाः" इति भाष्योक्तकौंठरव्यश्रुतेरित्यर्थः ।

ಜ್ಞಾನಪಾದದ 'ಮೌನವದಿತರೇಷಾಮಪ್ಯುಪದೇಶಾತ್' ಎಂಬ ಸೂತ್ರದಲ್ಲಿ ಈ ಶ್ರುತಿಗಳು ಬಂದಿವೆ. 'ದೇವಾ ಏವ ಬ್ರಹ್ಮಚಾರಿಣೋ, ದೇವಾ ಏವ ಗೃಹಸ್ಥಾ, ದೇವಾ ಏವ ವನಸ್ಥಾ ಯಥಾ ಹ್ಯೇತೇ ಮುನಯ ಏವಂ ಸರ್ವವರ್ಣಾಃ' ಇತ್ಯಾದಿಯಾದ ಭಾಷ್ಯದಲ್ಲಿ ಉದಾಹರಿಸಿದ ಕೌಂಠರವ್ಯ ಶ್ರುತಿಯಿಂದ ದೇವತೆಗಳಗೆ ಬ್ರಹ್ಮಚರ್ಯ, ಗಾರ್ಹಸ್ಥ, ವಾನಪ್ರಸ್ಥ ಮೊದಲಾದ ಸಕಲ ಆಶ್ರಮಗಳು ಇರುತ್ತವೆಂದು ತಿಳಿಸಲಾಗಿದೆ.

**प्रकाशः** – एवं देवानामग्निविद्ये तत्प्रयोजकत्रैवर्णिकत्वं च प्रसाध्येदानीमग्नेरभावेऽप्यधिकारं न्यायेनोपपादयति – एतयेति ॥

ಇಲ್ಲಿಯತನಕ ದೇವತೆಗಳಿಗೆ ಅಗ್ನಿವಿದ್ಯೆಯನ್ನು ಹಾಗೂ ತತ್‌ಪ್ರಯೋಜಕವಾದ ತ್ರೈವರ್ಣಿಕತ್ವವನ್ನು ಸಮರ್ಥನೆ ಮಾಡಿ ಈಗ ಅಗ್ನಿ ಇಲ್ಲದಿದ್ದರೂ ಕೂಡ ಅಧಿಕಾರವಿರುತ್ತದೆಂಬುದನ್ನು ನ್ಯಾಯಬದ್ಧವಾಗಿ ಸಮರ್ಥನೆ ಮಾಡುತ್ತಿದ್ದಾರೆ 'ಏತಯಾ' ಇತ್ಯಾದಿ ವಾಕ್ಯದಿಂದ.

**प्रकाशः** – षष्ठस्याद्यपादे "स्थपतिर्निषादः स्याच्छब्दसामर्थ्यात्" इत्यन्तिमेऽधिकरणे "वास्तुमयं चरुं निर्वपेत्" इति प्रकृत्य "एतया निषादस्थपतिं

याजयेत्'' इति श्रुतम् । तत्र यो द्विजातिरेव निषादानामाधिपत्यं करोति तस्याधिकार उत यो निषाद एव स्थपतिस्तस्येति संशये

'ಸ್ಥಪತಿರ್ನಿಷಾದಃ ಸ್ಯಾತ್ ಶಬ್ದಸಾಮರ್ಥ್ಯಾತ್'[1] (೬-೧-ಕೊನೆಯ ಅಧಿಕರಣ)

'ವಾಸ್ತುಮಯಂ ಚರುಂ ನಿರ್ವಪೇತ್' ಎಂಬ ಪ್ರಕೃತಿಯಾಗದಲ್ಲಿ 'ಏತಯಾ ನಿಷಾದಸ್ಥಪತಿಂ ಯಾಜಯೇತ್' ಎಂಬ ವಾಕ್ಯವು ಶ್ರುತವಾಗಿದೆ. ಈ ವಾಕ್ಯವು ದ್ವಿಜರೆನಿಸಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರಲ್ಲಿ ಯಾರಾದೊಬ್ಬರು ಯಾಗ ಮಾಡಬೇಕೆಂದು ವಿಧಾನ ಮಾಡುತ್ತಿದೆಯೋ, ಅಥವಾ ನಿಷಾದರೇ ಅಂದರೆ ಬೇಡಜಾತಿಯವರೇ ಯಾಗವನ್ನು ಮಾಡಬೇಕೆಂದು ವಿಧಾನ ಮಾಡುತ್ತಿದೆಯೋ, ಪ್ರಥಮ ಪಕ್ಷದಲ್ಲಿ 'ನಿಷದಾನಾಂ ಸ್ಥಪತಿಃ' ಎಂದು ಷಷ್ಠೀತತ್ಪುರುಷ ಸಮಾಸ ಮಾಡಿದಾಗ, ಬೇಡಜಾತಿಯವರಿಗೆ ಯಾಗಾಧಿಕಾರವಿರುವುದಿಲ್ಲ. ಅವರಿಗೆ ಸ್ವಾಮಿಯಾದ ದ್ವಿಜರು ಯಾಗಾಧಿಕಾರವನ್ನು ಹೊಂದುತ್ತಾರೆ. ಎರಡನೆಯ ಪಕ್ಷದಲ್ಲಿ 'ನಿಷಾದಶ್ಚಾಸೌ ಸ್ಥಪತಿಶ್ಚ' ಎಂಬುದಾಗಿ ಕರ್ಮಧಾರಯ ಸಮಾಸವನ್ನು ತಿಳಿಯಬೇಕು. ಆವಾಗ ನಿಷಾದರೇ ಯಾಗಾಧಿಕಾರವನ್ನು ಹೊಂದುತ್ತಾರೆ.

---

(१) भाट्टसङ्ग्रहः —

**अथ त्रयोदशं त्रैवर्णिकभिन्नस्य निषादस्य रौद्रयागेऽधिकाराधिकरणम्**

**(निषादस्थपतिन्यायः सूत्रे ५१-५२)**

**स्थपतिर्निषादः स्याच्छब्दसामर्थात् ॥५१॥**

**(लिङ्गदर्शनाच्च ॥५२॥)**

पूर्ववैषम्येणात्र शङ्कनात्सङ्गतिः । ''वास्तुमयं रौद्रं चरुं निर्वपेत्'' इति प्रकृत्य श्रूयते ''एतया निषादस्थपतिं याजयेत्'' इति । वास्तुशब्दो द्रव्यविशेषवचनः । तत्र **सन्देहः**, निषादानामधिपत्यं कुर्वन् द्विज एव निषादस्थपतिशब्देनोच्यते । तस्यात्राधिकारः किं वा निषाद एव यः स्थपतिस्तस्यात्रेष्टावधिकार इति । **पूर्वपक्षस्तु**, युक्तं पूर्वत्र योगाद्रूढेर्बलीयस्त्वेन रथकारशब्दस्य त्रैवर्णिकेतरजातिविशेषपरत्वेनात्रैवर्णिकपरत्वम् । निषादस्थपतिशब्दस्य त्रैवर्णिके जातिविशेषे च यौगिकत्वाविशेषात् षष्ठीसमासाश्रयेण स्वतस्सिद्धाग्निविद्यत्रैवर्णिकपरतैव युक्ता । त्रैवर्णिकपरत्वे च स्थपतीष्टेरग्निविद्यावत् त्रैवर्णिकाधिकारिकत्वेनाग्निविद्याकल्पनागौरवाभावः । कर्मधारयमाश्रित्य जातिविशेष-परत्वोक्तावग्निविद्याकल्पनाप्रसङ्गः । तस्मात् त्रैवर्णिकाधिकारिकतेष्टेरिति । **सिद्धान्तस्तु**, षष्ठीतत्पुरुषपक्षे सम्बन्धवाचिषष्ठ्या आश्रयणेन निषादपदस्य निषादसम्बन्धीति सम्बन्धिनि लक्षणापातात्, कर्मधारये तु न कस्यापि लक्षणेति शब्दसामर्थ्यादनग्निविद्यस्यापि निषादस्यैव स्थपतेरिष्टावधिकार इति । **तदाह सूत्रे, स्थपतिर्निषादः स्यादित्यादि** । व्यक्तः सूत्रार्थः । फलन्तु, रौद्रेष्टिर्निषादस्येति ।

**इति त्रयोदशं त्रैवर्णिकभिन्नस्य निषादस्य रौद्रयागेऽधिकाराधिकरणम्**

ದೇವತಾಧಿಕರಣ (೧-೩-೮)

**प्रकाशः – पक्षद्वयेऽपि शब्दस्य यौगिकत्वात्षष्ठीसमासाश्रयणेऽग्निविद्यावतामेवाधिकारलाभाद्विजानामेवाधिकार इति प्राप्ते**

ಎರಡುಪಕ್ಷಗಳಲ್ಲಿ ಯಾವುದನ್ನು ಆಶ್ರಯಿಸಿದರೂ 'ನಿಷಾದಸ್ಥಪತಿಂ' ಎಂಬ ಪದಕ್ಕೆ ಯೌಗಿಕಾರ್ಥವನ್ನೇ ಮಾಡಬೇಕು. ಒಂದು ವೇಳೆ 'ನಿಷಾದಾನಾಂ ಸ್ಥಪತಿಃ' ಎಂಬುದಾಗಿ ಷಷ್ಠೀಸಮಾಸವನ್ನು ಆಶ್ರಯಿಸಿದರೆ, ಅಗ್ನಿವಿದ್ಯೆಯಲ್ಲಿ ಈಗಾಗಲೇ ಅಧಿಕಾರವನ್ನು ಹೊಂದಿರುವಂತಹ ದ್ವಿಜರಿಗೆ ಯಾಗಾಧಿಕಾರವನ್ನು ಹೇಳಿದಂತಾಗುತ್ತದೆಂಬ ಅನುಕೂಲವಿದೆ. ಆದ್ದರಿಂದ ಷಷ್ಠೀಸಮಾಸವನ್ನೇ ಆಶ್ರಯಿಸಿ, ದ್ವಿಜರಿಗೆ ಮಾತ್ರ ಯಾಗಾಧಿಕಾರವನ್ನು ಹೇಳಬೇಕೆಂದು ಪೂರ್ವಪಕ್ಷ.

**प्रकाशः – षष्ठीसमासाश्रयणे निषादपदस्य तत्सम्बन्धिनि लक्षणाप्रसङ्गात्कर्मधारये तदभावाच्छत्यर्थलाभायाविदुषो निषादस्यैवाधिकार इति सिद्धान्तितम् ।**

ಷಷ್ಠೀಸಮಾಸವನ್ನು ಇಲ್ಲಿ ಹೇಳಬಾರದು ಹೊರತಾಗಿ, ಕರ್ಮಧಾರಯ ಸಮಾಸವನ್ನೇ ಹೇಳಬೇಕು. ಒಂದು ವೇಳೆ ಷಷ್ಠೀಸಮಾಸವನ್ನು ಆಶ್ರಯಿಸಿದರೆ ನಿಷಾದಪದಕ್ಕೆ, ನಿಷಾದಸಂಬಂಧಿಯಾದ ದ್ವಿಜರಲ್ಲಿ ಲಕ್ಷಣಾ ಮಾಡುವ ಪ್ರಸಂಗ ಬರುತ್ತದೆ. ಕರ್ಮಧಾರಯ ಪಕ್ಷದಲ್ಲಿ ಪೂರ್ವಪದಕ್ಕೆ ಲಕ್ಷಣಾವನ್ನು ಆಶ್ರಯಿಸಬೇಕಾಗಿಲ್ಲ. ಆದ್ದರಿಂದ ಶ್ರುತಿಯ ನೇರವಾದ ಅರ್ಥವನ್ನೇ ಸ್ವೀಕರಿಸಿದಂತಾಗುತ್ತದೆಂಬ ಅನುಕೂಲವಿರುವುದರಿಂದ, 'ನಿಷಾದಶ್ಚಾಸೌ' ಎಂದೇ ಹೇಳಬೇಕು. ಆದ್ದರಿಂದ ನಿಷಾದಜಾತಿಯವರಿಗೆ ಯಾಗಾಧಿ- ಕಾರವಿರುತ್ತದೆಂಬುದು ಸಿದ್ಧಾಂತ.

**प्रकाशः – तथा च सिद्धेऽधिकारे "स्थपतीष्टिः प्रयाजवदग्न्याधेयं प्रयोजयेत्" इत्यष्टमपादीयतृतीयाधिकरणे "एतया" इति श्रुतस्थपतीष्टिः किमाहवनीयादिषु स्यादुत लौकिकाग्नाविति संशये**

ಹೀಗೆ ನಿಷಾದಸ್ಥಪತಿಗೆ ಯಾಗಾಧಿಕಾರವು ಸಿದ್ಧವಾಯಿತು. ಅನಂತರ ಮುಂದಿನ ಸೂತ್ರವು ಸಂಸ್ಕೃತವಾದ ಅಗ್ನಿಯಲ್ಲಿ ಇಷ್ಟಿಯನ್ನು ಆಚರಿಸಬೇಕೋ, ಲೌಕಿಕಾಗ್ನಿಯಲ್ಲೋ ? ಎಂಬ ವಿಚಾರ ಮಾಡುತ್ತಿದೆ -

'ಸ್ಥಪತೀಷ್ಟಿಃ ಪ್ರಯಾಜವದಗ್ನ್ಯಾಧೇಯಂ ಪ್ರಯೋಜಯೇತ್'[1] (೬-೮-೩)

---

(१) भाट्टसङ्ग्रहः –

**अथ तृतीयमनाहितेऽग्नौ स्थपतीष्ट्यधिकरणम् (सूत्रे २०-२१)**

**स्थपतीष्टिः प्रयाजवदग्न्याधेयं प्रयोजयेत्तादर्थ्याचापवृज्येत ॥२०॥**

**(अपि वा लौकिकेऽग्नौ स्यादाधानस्यासर्वशेषत्वात् ॥२१॥)**

अत्रापि पूर्ववैषम्येण शङ्कनात्सङ्गतिः । "एतया निषादस्थपतिं याजयेत्" इति श्रुता स्थपतीष्टिः किमाहवनीये स्यात्, उत लौकिकेऽग्नाविति सन्देहे, दर्शपूर्णमासरूप-

'ಏತಯಾ' ಎಂಬ ಶ್ರುತಿಯಿಂದ ಅಧಿಕಾರಿ ಎಂದು ಸಿದ್ಧನಾದ ನಿಷಾದಸ್ಥಪತಿಯು ಆಹವನೀಯವೇ ಮೊದಲಾದ ಸಂಸ್ಕೃತವಾದ ಅಗ್ನಿಯಲ್ಲಿ ಇಷ್ಟಿಯನ್ನು ಆಚರಣೆ ಮಾಡಬೇಕೋ, ಅಥವಾ ಲೌಕಿಕಾಗ್ನಿಯಲ್ಲಿ ಇಷ್ಟಿಯನ್ನು ಆಚರಣೆ ಮಾಡಬೇಕೋ? ಎಂದು ಸಂಶಯ.

**प्रकाशः** – प्रकृतित आहवनीयादिप्राप्तेस्तस्य चाधानाधीनत्वादसत्यपि स्थपतेराधानविधाविष्टिरेवेयमाधानं प्रयोजयेदिति प्राप्ते

ಪ್ರಕೃತಿಯಾಗದಲ್ಲಿ ಆಹವನೀಯಾದಿಗಳೇ ಪ್ರಾಪ್ತವಾಗಿದ್ದರಿಂದ, ವಿಕೃತಿಯಾಗದಲ್ಲಿಯೂ ಆಹವನೀಯಾದಿ ಸಂಸ್ಕೃತಾಗ್ನಿಗಳೇ ಪ್ರಸಕ್ತವಾಗುತ್ತವೆ. ಆಹವನೀಯಾದಿಗಳು ಪ್ರಾಪ್ತವಾದರೂ ಕೂಡ ನಿಷಾದಸ್ಥಪತಿಗೆ ಅವುಗಳನ್ನು ಆಧಾನ ಮಾಡಲು ಅಧಿಕಾರವಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. 'ವಸಂತೇ ಬ್ರಾಹ್ಮಣಃ ಅಗ್ನೀನಾದಧೀತ' ಎಂಬುದಾಗಿ ಬ್ರಾಹ್ಮಣಾದಿಗಳಿಗೆ ಅಗ್ನ್ಯಾಧಾನವನ್ನು ಹೇಳಿದಂತೆ ನಿಷಾದಸ್ಥಪತಿಗೆ ಅಗ್ನ್ಯಾಧಾನ ಮಾಡಲು ವಿಧಿವಾಕ್ಯಗಳಿರುವುದಿಲ್ಲ. ಆದರೂ ಸಹ ಅಗ್ನ್ಯಾಧಾನವನ್ನು ಹೇಳಬಹುದು. ಏಕೆಂದರೆ ಸ್ಥಪತಿಗೆ ಇಷ್ಟಿ ಮಾಡಬೇಕೆಂಬುದಂತು ಸಿದ್ಧವಾಗಿದೆ. ಮತ್ತು ಪ್ರಕೃತಿಯಾಗದಿಂದ ಆಹವನೀಯಾದಿ ಅಗ್ನಿಗಳೇ ಪ್ರಾಪ್ತವಾಗಿವೆ. ಇದರ ಅನ್ಯಥಾನುಪಪತ್ತಿಯ ಬಲದಿಂದಲೇ ನಿಷಾದಸ್ಥಪತಿಗೆ ಅಗ್ನ್ಯಾದಾನವು ಸಿದ್ಧವಾಗುತ್ತದೆ. ಇದೇ ಇಷ್ಟಿಯೇ ಅಗ್ನ್ಯಾಧಾನವನ್ನು ಆಕ್ಷೇಪದ ಬಲದಿಂದ ಸಾಧಿಸುತ್ತದೆಂದು ಪೂರ್ವಪಕ್ಷ.

**प्रकाशः** – वसन्तादिवाक्यविहिताधानजन्याग्निगतसंस्कारवाचित्वादाहवनीयादि-शब्दस्य स्थपतिकृतेन चाधानेनाविहितेन संस्कारासिद्धेर्नाधानाक्षेप इति लौकिकाग्नावेवेष्टिस्स्यादित्युक्तं तद्वद्देवानामधिकारस्स्यादित्यर्थः ।

ಸಿದ್ಧಾಂತ - ಆಹವನೀಯಾದಿಶಬ್ದಗಳು ಕೇವಲ, ಅಗ್ನಿಗಷ್ಟೇ ವಾಚಕವಾಗಿಲ್ಲ. ಹೊರತಾಗಿ ಸಂಸ್ಕಾರವಿಶಿಷ್ಟವಾದ ಅಗ್ನಿವಾಚಕಗಳಾಗಿವೆ. ಸಂಸ್ಕಾರವೆಂದರೆ ವಸಂತಾದಿ ವಾಕ್ಯಗಳಿಂದ ವಿಹಿತವಾದ,

---

प्रकृतितश्चोदकेनाऽहवनीयादेः प्राप्तत्वात्तस्य चाऽधानाधीनस्यासत्यपि स्थपतेराधानविधा-विष्टिविधानाबलादेवाऽधानाक्षेपेण पूर्वत्रेवाहवनीयाद्यसम्भवाभावादाहवनीये स्यादिति प्राप्तम् । तदाह, **स्थपतीष्टिः प्रयाजादिकमिवाग्निद्वारेणाधानमपि प्रयोजयेत्** । न चैवं स्थपतेरग्निमत्त्वे कर्मान्तरेऽप्यधिकारः स्यादिति शङ्क्यम् । **तादर्थ्याचापवृज्येत** । इदं ह्याधानं स्थपतीष्ट्यैव प्रयुक्तमिति तदर्थम् । नतु वसन्तादिविहिताधानवदग्निमात्रार्थम् । अतस्तस्यामिष्टौ समाप्तायामाधानमपवृज्येत समाप्येतेति न कर्मान्तराधिकारः । अग्न्याभावादिति । **सिद्धान्तस्तु,** प्रकृतित आहवनीयादेः प्राप्तावपि तस्य वसन्तादिवाक्यबलेन ब्राह्मणादिकर्तृकाधानसाध्यत्वावगमात्तत्कर्तृकमेवाधानमग्निद्वारेणापीष्टिविधिः प्रयोजयेत् । न स्थपतिकर्तृकमिति स्थपतीष्टिर्नाहवनीये । किन्त्वाचाराल्लौकिकेऽग्नावेवेति । फलं व्यक्तम् ।

**इति तृतीयमनाहितेऽग्नौ स्थपतीष्ट्यधिकरणम् (सूत्रे २०-२१)**

ದೇವತಾಧಿಕರಣ (೧-೩-೮)

ಆಧಾನದಿಂದ ಜನ್ಯವಾದ ಅಗ್ನಿಯಲ್ಲಿರುವ ಸಂಸ್ಕಾರವೆಂದರ್ಥ. ಆದ್ದರಿಂದ ಸ್ಥಪತಿಯು ಮಾಡುವ ಅಗ್ನ್ಯಾಧಾನವು ಅವಿಹಿತವಾಗಿದೆ. ಅಂತಹ ಸ್ಥಪತಿ ಮಾಡುವ ಅಗ್ನ್ಯಾಧಾನದಲ್ಲಿ ಸಂಸ್ಕಾರವು ಇರುವುದಿಲ್ಲ. ಸಂಸ್ಕೃತವಲ್ಲದ ಕಾರಣ ಆ ಅಗ್ನಿಯು ಆಹವನೀಯ ಎಂಬ ಶಬ್ದದಿಂದ ಪ್ರತಿಪಾದ್ಯವೇ ಆಗುವುದಿಲ್ಲ. ಹೊರತಾಗಿ, ಲೌಕಿಕಾಗ್ನಿಯಲ್ಲಿಯೇ ಅವರು ಇಷ್ಟಿಯನ್ನು ಆಚರಿಸುತ್ತಾನೆಂದು ಹೇಳಬೇಕು. ಹೀಗೆ ವೇದಾಧಿಕಾರವಿಲ್ಲದಿದ್ದರೂ ನಿಷಾದಸ್ಥಪತಿಗೆ ಯಾಗಾಧಿಕಾರವನ್ನು ಹೇಳಿದಂತೆ, ದೇವತೆಗಳಿಗೂ ಕೂಡ ಅಧಿಕಾರವನ್ನು ಹೇಳಬಹುದು.

**प्रकाशः** – ननु विषमोऽयमुपन्यासः । स्थपतेरिष्टिविधानबलेनैतस्य सर्वस्य कल्पनेऽपि प्रकृतेऽपि देवानां विशिष्य कर्मविध्यभावात् । प्रागुदाहृतवचनानां चार्थवादत्वेन सत्रादिप्रशंसापरत्वेन स्वार्थे तात्पर्याभावात् । अन्यथा ''वायुर्वै क्षेपिष्ठा देवता, अग्निर्हिमस्य भेषजं, को हि तद्वेद यद्यमुष्मिँल्लोकेऽस्ति वा न वेति आदित्यो यूपो भवति'' इत्यादेरपि स्वार्थपरता स्यादित्यत आह – **देवा वा इति** ॥

ನೀವು ನೀಡಿದ ದೃಷ್ಟಾಂತವೇ ವಿಷಮವಾಗಿದೆ. ಏಕೆಂದರೆ ಸ್ಥಪತಿಯು ಇಷ್ಟಿಯನ್ನು ಆಚರಿಸಬೇಕೆಂಬ ವಿಧಿಯ ಬಲದಿಂದ ತ್ರೈವರ್ಣಿಕನಾಗದಿದ್ದರೂ ಅವನಿಗೆ ಯಾಗಾಧಿಕಾರವಿದೆಯೆಂದು ಸಮರ್ಥನೆ ಮಾಡಲಾಯಿತು. ಆದರೆ ಈ ರೀತಿಯಾಗಿ ದೇವತೆಗಳಿಗೆ ಯಜ್ಞಾದಿಕರ್ಮಗಳಲ್ಲಿ ವಿಧಿಯು ಇರುವುದಿಲ್ಲ. ಹಿಂದೆ ದೇವತೆಗಳು ಯಾಗವನ್ನು ಮಾಡುತ್ತಾರೆಂದು ಸಮರ್ಥಿಸಲು ಅನೇಕ ವಾಕ್ಯಗಳನ್ನು ಪ್ರಮಾಣವನ್ನಾಗಿ ಹೇಳಿದ್ದೇವಲ್ಲವೇ? ಎಂದರೆ ಅವೆಲ್ಲವೂ ಅರ್ಥವಾದವಾಕ್ಯಗಳಾಗಿವೆ. ಮತ್ತು ಆ ವಾಕ್ಯಗಳಲ್ಲಿ ಸ್ಪಷ್ಟವಾಗಿ ದೇವತೆಗಳು ಯಜ್ಞವನ್ನು ಮಾಡಬೇಕು ಎಂಬ ವಿಧಿಯು ಕಾಣಿಸುವುದಿಲ್ಲ. ಆದ್ದರಿಂದ ಸತ್ರಾದಿಗಳ ಪ್ರಶಂಸಾಪರವಾಗಿ ಅವುಗಳನ್ನು ಕೂಡಿಸಬೇಕೇ, ಹೊರತು ಸ್ವಾರ್ಥದಲ್ಲಿ ತಾತ್ಪರ್ಯವನ್ನು ಹೇಳಬಾರದು. ಒಂದು ವೇಳೆ ಅರ್ಥವಾದ ವಾಕ್ಯಗಳಿಗೂ ಸ್ವಾರ್ಥೇ ತಾತ್ಪರ್ಯವನ್ನು ಹೇಳುವುದಾದರೆ 'ವಾಯುರ್ವೈ ಕ್ಷೇಪಿಷ್ಠಾ ದೇವತಾ, ಅಗ್ನಿರ್ಹಿಮಸ್ಯ ಭೇಷಜಂ, ಕೋ ಹಿ ತದ್ವೇದ ಯದ್ಯಮುಷ್ಮಿಂಲ್ಲೋಕೇಽಸ್ತಿ ವಾ ನ ವೇತಿ ಆದಿತ್ಯೋ ಯೂಪೋ ಭವತಿ' ಇತ್ಯಾದಿ ಅರ್ಥವಾದ ವಾಕ್ಯಗಳಿಗೂ ಕೂಡ ಸ್ವಾರ್ಥಪರತ್ವವನ್ನು ಹೇಳಬೇಕಾದೀತು ಎಂಬುದಾಗಿ 'ದೇವಾ ವಾ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – मीमांसकमते तथात्वेऽपि न त्वन्मते तथात्वं युक्तम् । अन्यथा देवताविग्रहाद्यसिद्ध्यैतदधिकरणसिद्धान्तानुन्मेषस्स्यादित्यर्थः ।

ಮೀಮಾಂಸಕರು ಹಾಗೇ ಅರ್ಥವಾದ ವಾಕ್ಯಗಳಿಗೆ ಸ್ವಾರ್ಥಪರತ್ವವನ್ನು ಒಪ್ಪದಿರಬಹುದು. ಅವರಂತೆ ನಿನಗೆ ಹೇಳಲಾಗದು. ಒಂದು ವೇಳೆ ಮೀಮಾಂಸಕರಿಗೆ ನೀನು ಹೇಳುವುದಾದರೆ, ದೇವತೆಗಳಿಗೆ ಶರೀರಾದಿಗಳೇ ಸಿದ್ಧವಾಗದೇ ಈ ಅಧಿಕರಣದ ಸಿದ್ಧಾಂತವೇ ಉದಯವಾಗದಿರಬೇಕಾದೀತು.

ಪರಿಪೂರ್ಣಚಂದ್ರಿಕಾ

**प्रकाशः** – तदुक्तं भामत्यां ''मन्त्रादिपदसमन्वयात् प्रतीयमानोऽर्थः प्रमाणान्तराविरोधे सत्यभ्युपेतव्यः । नतु विरोधे'' इति – उपासनाङ्गेति ।।

ಇದನ್ನೇ ಭಾಮತಿಯಲ್ಲಿ 'ಮಂತ್ರಾದಿಪದ ಸಮನ್ವಯಾತ್ ಪ್ರತೀಯಮಾನೋಽರ್ಥಃ ಪ್ರಮಾಣಾಂತರಾವಿರೋಧೇ ಸತ್ಯಭ್ಯುಪೇತವ್ಯಃ । ನತು ವಿರೋಧೇ' ಎಂದು ಹೇಳಲಾಗಿದೆ.

**प्रकाशः** – यद्यपि नित्ये कर्मण्यङ्गानधिकारेऽपि प्रधानेऽधिकारश्शक्याङ्गोपसंहारेण समर्थितः ''सर्वशक्तौ प्रवृत्तिस्स्यात्तथा भूतोपदेशात्'' इति षष्ठतृतीयपादीयाद्यनये । तथाप्युपासनायाः फलार्थतया विधानेन काम्यत्वाद्वा कर्मणां शक्यत्वेन वा तद्वैषम्यं ध्येयम् ।

ಪ್ರಶ್ನೆ - ನಿತ್ಯವಾದ ಕರ್ಮವನ್ನು ಆಚರಣೆ ಮಾಡಬೇಕಾದರೆ, ಕೆಲವು ಅಂಗಕರ್ಮಗಳನ್ನು ಆಚರಿಸದಿದ್ದರೂ ತೊಂದರೆಯಿಲ್ಲ. ಯಥಾಶಕ್ತಿ ಎಷ್ಟು ಅಂಗಗಳನ್ನು ಆಚರಣೆ ಮಾಡಲು ಸಾಧ್ಯವಿದೆಯೋ, ಅಷ್ಟನ್ನು ಆಚರಣೆ ಮಾಡಿದರೆ ಸಾಕು. ಆದ್ದರಿಂದ ಪ್ರಕೃತ ದೇವತೆಗಳಿಗೆ ಮುಖ್ಯವಾದ ಉಪಾಸನಾ ಎಂಬ ನಿತ್ಯಕರ್ಮದಲ್ಲಿ ಅಧಿಕಾರವಿದೆ. ಅಂಗವಾದ ಕರ್ಮಗಳಲ್ಲಿ ಅಧಿಕಾರವನ್ನು ಹೇಳಬೇಕಾಗಿಲ್ಲ. ಈ ವಿಷಯವು 'ಸರ್ವ ಶಕ್ತೌ ಪ್ರವೃತ್ತಿಃ ಸ್ಯಾತ್ ತಥಾ ಭೂತೋಪದೇಶಾತ್' ಎಂಬ ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದ ಮೂರನೇ ಪಾದದ ಪ್ರಥಮಾಧಿಕರಣದಲ್ಲಿ ಉಕ್ತವಾಗಿದೆ.

ಉತ್ತರ - ಒಂದು ವೇಳೆ ಉಪಾಸನೆಯು ನಿತ್ಯಕರ್ಮವಾಗಿದ್ದಲ್ಲಿ, ನಿಮ್ಮ ಪ್ರಶ್ನೆಯು ಸಮಂಜಸವಾಗುತ್ತಿತ್ತು. ಆದರೆ ಉಪಾಸನೆಯೂ ಕೂಡ ಕಾಮ್ಯಕರ್ಮವೇ ಆಗಿರುತ್ತದೆ. ಕಾಮ್ಯಕರ್ಮದಲ್ಲಿ ಎಲ್ಲಾ ಅಂಗಕರ್ಮಗಳನ್ನು ಅವಶ್ಯವಾಗಿ ಆಚರಿಸಬೇಕು. ಆದ್ದರಿಂದ ಪೂರ್ವಮೀಮಾಂಸೆಯ ನ್ಯಾಯದ ದೃಷ್ಟಾಂತವನ್ನು ಇಲ್ಲಿ ಸಮನ್ವಯ ಮಾಡಲು ಸಾಧ್ಯವಾಗುವುದಿಲ್ಲ.

**प्रकाशः** – एतेन कर्माङ्गविद्याधानानधिकारिणोऽपि स्थपतेः कर्माधिकारोऽस्तीति निरस्तम् । ''नाग्निर्न यज्ञश्शूद्रस्य तथैवाध्ययनं कुतः'' इति स्थपतेस्तत्राधिकार-निषेधस्येव देवानां कर्माधिकारनिषेधाभावात् ।

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಸ್ಥಪತಿಗೆ ಕರ್ಮಕ್ಕೆ ಅಂಗವಾದ ವಿದ್ಯೆ ಮತ್ತು ಆಧಾನಗಳಲ್ಲಿ ಅಧಿಕಾರವಿರುವುದಿಲ್ಲ. ಅದರಂತೆ ದೇವತೆಗಳಿಗೆ ಉಪಾಸನೆಯಲ್ಲಿ ಅಧಿಕಾರವಿದ್ದರೂ ಅದರ ಅಂಗವಾದ ಕರ್ಮದಲ್ಲಿ ಅಧಿಕಾರವಿರುವುದಿಲ್ಲ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ 'ನಾಗ್ನಿರ್ನ ಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ' ಎಂಬುದಾಗಿ ಸ್ಥಪತಿಗೆ ಅಧ್ಯಯನಾದಿಗಳಲ್ಲಿ ಅಧಿಕಾರವನ್ನು ನಿಷೇಧ ಮಾಡಿದಂತೆ ದೇವತೆಗಳಿಗೆ ಕರ್ಮಾಚರಣೆಯಲ್ಲಿ ಅಧಿಕಾರವಿಲ್ಲವೆಂಬ ಯಾವುದೇ

ನಿಷೇಧ ಮಾತುಗಳು ಕಾಣಿಸುವುದಿಲ್ಲ. ಆದ್ದರಿಂದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಮಾತ್ರ ಅಧಿಕಾರ ಹೊರತು, ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂಬ ಶಂಕೆಯು ಅತ್ಯಂತ ಅಸಾಧುವಾಗಿದೆ.

**गुरुराजीयम्** – ननु देवाः कर्माधिकारिणो न अत्रैवर्णिकत्वादित्यनुमानविरोधाद्देवानामनधिकारितेत्याशङ्क्य तर्हि देवाः न ब्रह्मविद्याधिकारिणोऽत्रैवर्णिकत्वाच्छूद्रवदित्यनुमानविरोधाद्ब्रह्मविद्याधिकारोऽपि न स्यादित्याह – **अथ पुमर्थसाधनानीति** ।। यदि च ब्रह्मविद्यानधिकारसाधकमत्रैवर्णिकत्वानुमानं देवानां ब्रह्मविद्याधिकारप्रतिपादकश्रुतिविरोधादप्रमाणम् । तर्हि कर्मानधिकारसाधकमप्यनुमानं तत्प्रतिपादकश्रुतिविरोधादमानमिति समानम् । तदेतदाह – **इत्यादिश्रुतिसिद्धस्येति**।। ननु तथापि न देवानां कर्मण्यधिकारः । तत्प्रतिपादकवाक्यस्य मानान्तरप्राप्तितद्विरोधाभ्यां तत्रातात्पर्यादित्यत उक्तं – **मानान्तरेत्यादि** ।।



ದೇವತೆಗಳಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಒಪ್ಪಬೇಕೋ, ಇಲ್ಲವೋ ಎಂದು ಸಂಶಯ ಬರುತ್ತದೆ. ಏಕೆಂದರೆ ಕರ್ಮದಲ್ಲಿ ಅಧಿಕಾರವನ್ನು ಹೇಳಬೇಕಾದರೆ, ಅಗ್ನಿಯನ್ನು ಆಧಾನ ಮಾಡಬೇಕು. ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಒಪ್ಪಬೇಕೆಂದರೆ ಉಪನಯನಸಂಸ್ಕಾರವಾಗಬೇಕು. ದೇವತೆಗಳಿಗೆ ಯಾವುದೇ ಶ್ರುತಿವಾಕ್ಯಗಳೂ ಕೂಡ ಅಗ್ನ್ಯಾಧಾನವನ್ನು ವಿಧಾನ ಮಾಡಿಲ್ಲ. ಉಪನಯನಸಂಸ್ಕಾರವನ್ನೂ ಕೂಡ ಹೇಳಿಲ್ಲ. ತ್ರೈವರ್ಣಿಕರಿಗಷ್ಟೇ ಅಗ್ನ್ಯಾಧಾನ ಮತ್ತು ಉಪನಯನಸಂಸ್ಕಾರಗಳು ವಿಹಿತವಾಗಿವೆ. ದೇವತೆಗಳು ತ್ರೈವರ್ಣಿಕರಲ್ಲಿ ಸೇರುವುದಿಲ್ಲ. ಆದ್ದರಿಂದ ಇವರಿಗೆ ಯಾಗಾದಿ ಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಆಕ್ಷೇಪ.

ಇದು ಸರಿಯಲ್ಲ. ಏಕೆಂದರೆ 'ದೇವಾ ವಾ ಅಗ್ನಿಮಾದಧತ' ಇತ್ಯಾದಿ ಶ್ರುತಿಯಲ್ಲಿ ಸ್ಪಷ್ಟವಾಗಿ ದೇವತೆಗಳಿಗೂ ಕೂಡ ಅಗ್ನಿಯ ಆಧಾನವನ್ನು ವಿಧಾನ ಮಾಡಲಾಗಿದೆ. ಮತ್ತು 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂಬ ವಾಕ್ಯದಲ್ಲಿ 'ಋಗ್ವೇದಂ ಭಗವೋಽಧ್ಯೇಮಿ' ಇತ್ಯಾದಿ ವಾಕ್ಯದಲ್ಲಿ ಸ್ಪಷ್ಟವಾಗಿ ದೇವತೆಗಳಿಗೂ ಕೂಡ ವೇದಾಧ್ಯಯನವನ್ನು ಹೇಳಲಾಗಿದೆ. ಅಷ್ಟೇ ಅಲ್ಲದೆ 'ಸರ್ವವರ್ಣಾಃ ಸರ್ವಾಶ್ರಮಿಣಃ ಸರ್ವಂ ಹ್ಯೇತೇ ಕರ್ಮ ಕುರ್ವಂತಿ' ಇತ್ಯಾದಿ ಮಾತುಗಳನ್ನು ಗಮನಿಸಿದಾಗ ಸಕಲವರ್ಣಗಳೂ ಸಕಲ ಆಶ್ರಮಗಳು ಎಲ್ಲಾ ದೇವತೆಗಳಿಗೂ ಇರುತ್ತವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ತ್ರೈವರ್ಣಿಕರಲ್ಲವೆಂದು ಹೇಳಲೂ ಕೂಡ ಸಾಧ್ಯವಿಲ್ಲ. ಆದ್ದರಿಂದ ದೇವತೆಗಳಿಗೆ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿದೆ. ಬ್ರಹ್ಮವಿದ್ಯೆಯಲ್ಲೂ ಕೂಡ ಅಧಿಕಾರವಿರುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಮಾತ್ರ ಅಧಿಕಾರವಿದೆ. ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂಬ ಅದ್ವೈತಿಗಳ ಅಭಿಪ್ರಾಯವು ಅತ್ಯಂತ ಅಸಾಧುವಾಗಿದೆ.

///////////////////////////////////////////////

ಪರಿಪೂರ್ಣಚಂದ್ರಿಕಾ

## तात्पर्यचन्द्रिका

**यच्चोक्तमुभाभ्यां तिर्यगादीनामसामर्थ्यात्कर्मब्रह्मविद्ययोरनधिकार इति तन्न ।**

ಅನುವಾದ - ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ತಿರ್ಯಕ್‌ಪ್ರಾಣಿಗಳಿಗೆ ವೇದಾವಿದ್ಯಾಧಿಕಾರವಿಲ್ಲವೆಂದು ಹೇಳಿರುತ್ತಾರೆ. ಅಧಿಕಾರಕ್ಕೆ ಪ್ರಯೋಜಕವಾದ ವಿಶಿಷ್ಟ ಬುದ್ಧಿ ಮೊದಲಾದ ಸಾಮರ್ಥ್ಯವಿಲ್ಲದ ಕಾರಣ ವೇದವಿದ್ಯೆಯಲ್ಲಿ ಅಧಿಕಾರವನ್ನು ಹೇಳಲಾಗದು. ಆದ್ದರಿಂದಲೇ ಕರ್ಮದಲ್ಲಿಯೂ ಅಧಿಕಾರವಿಲ್ಲವೆಂಬುದು ಇವರ ವಾದ.

ಇದು ಸರಿಯಲ್ಲ.

**एवमुक्तो भ्रातृभिस्तु जरितारिर्विभावसुम् ।**
**तुष्टाव प्राञ्जलिर्भूत्वा यत्तच्छृणु नराधिप ॥**

**इत्यादिना भारते जरितारिसारिसृक्वस्तंवमित्रद्रोणाख्यानां चतुर्णां पक्षिणां "अयमग्ने जरिता" इत्याग्नेयसूक्तेनाग्निस्तावकत्वोक्तेः ।**

ಏಕೆಂದರೆ ಮಹಾಭಾರತದಲ್ಲಿ ಸ್ಪಷ್ಟವಾಗಿ ಪಕ್ಷಿಗಳಿಗೂ ಕೂಡ ವೇದವಿದ್ಯಾಧಿಕಾರವನ್ನು ವರ್ಣಿಸಲಾಗಿದೆ -

'ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಮ್ ।
ತುಷ್ಟಾವ ಪ್ರಾಂಜಲಿರ್ಭೂತ್ವಾ ಯತ್ತಚ್ಛೃಣು ನರಾಧಿಪ ॥

ಎಲೈ ! ನರಶ್ರೇಷ್ಠನೇ, ಪಕ್ಷಿಗಳ ಪವಾಡವನ್ನು ಕೇಳು. ದ್ರೋಣ ಮೊದಲಾದ ಸಹೋದರ ಪಕ್ಷಿಗಳು ಜರಿತಾರಿ ಪಕ್ಷಿಯನ್ನು ಕುರಿತು ಹೇಳಿದ ಮೇಲೆ, ಜರಿತಾರಿ ಪಕ್ಷಿಯು ಅಗ್ನಿಯನ್ನು ಸೂಕ್ತದ ಮೂಲಕ ಕೈಮುಗಿದು ಸ್ತೋತ್ರ ಮಾಡುತ್ತದೆ.

ಈ ಶ್ಲೋಕದಿಂದ ಜರಿತಾರಿ, ಸಾರಿಸೃಕ್ವ, ಸ್ತಂಬಮಿತ್ರ, ದ್ರೋಣ ಎಂಬ ನಾಲ್ಕು ಬಗೆಯ ಪಕ್ಷಿಗಳು 'ಅಯಮಗ್ನೇ ಜರಿತಾ' ಎಂಬ ಆಗ್ನೇಯಸೂಕ್ತದಿಂದ, ಅಗ್ನಿಯನ್ನು ಸ್ತೋತ್ರಮಾಡುತ್ತವೆಂದು ಹೇಳಲಾಗಿದೆ.

**तत्रैव "स्तम्बमित्रस्तपः कुर्याद्द्रोणो ब्रह्मविदुत्तमः" इति द्रोणादेर्ब्रह्मवित्त्वाद्युक्तेश्च ।**

ಮತ್ತು ಅದೇ ಸಂದರ್ಭದಲ್ಲಿ 'ಸ್ತಂಬಮಿತ್ರಸ್ತಪಃ ಕುರ್ಯಾದ್ ದ್ರೋಣೋ ಬ್ರಹ್ಮವಿದುತ್ತಮಃ' ಸ್ತಂಬಮಿತ್ರಪಕ್ಷಿಯು ತಪಸ್ಸನ್ನು ಆಚರಿಸಿತು. ಬ್ರಹ್ಮಜ್ಞಾನಿಗಳಲ್ಲಿ ದ್ರೋಣ ಪಕ್ಷಿಯೇ ಉತ್ತಮವಾಗಿದೆ ಎಂಬುದಾಗಿ ದ್ರೋಣಾದಿ ಪಕ್ಷಿಗಳಿಗೂ ಬ್ರಹ್ಮಜ್ಞಾನವನ್ನು ಸ್ಪಷ್ಟವಾಗಿ ಹೇಳಲಾಗಿದೆ.

**''ऋषीनस्मान्बालकान्पालयस्व'' इति ऋषिशब्देन चतुर्णामपि मन्त्रद्रष्टृत्वोक्तेश्च ।**

'ಋಷೀನಸ್ಮಾನ್‌ಬಾಲಕಾನ್‌ಪಾಲಯಸ್ವ' ಋಷಿಗಳಾದ ಬಾಲಕರಾದ ನಮ್ಮನ್ನು ದಯವಿಟ್ಟು ರಕ್ಷಿಸು ಎಂಬುದಾಗಿ ನಾಲ್ಕು ಪಕ್ಷಿಗಳಲ್ಲಿಯೂ ಋಷಿಶಬ್ದದಿಂದ ಮಂತ್ರದ್ರಷ್ಟೃತ್ವವನ್ನು ಹೇಳಲಾಗಿದೆ.

**''ऋषिर्द्रौण त्वमसि वै ब्रह्मैतद्व्याहृतं त्वय'' इति द्रोणस्य वेदव्याहर्तृत्वोक्तेश्च।**

ಮತ್ತು 'ಋಷಿಃದ್ರೌಣ ತ್ವಮಸಿ ವೈ ಬ್ರಹ್ಮೈತದ್ವ್ಯಾಹೃತಂ ತ್ವಯಾ' ಎಲೈ ! ಋಷಿಯೆನಿಸಿದ ದ್ರೋಣಪಕ್ಷಿಯೇ ಯಾವಕಾರಣದಿಂದ ನಿನ್ನಿಂದ ವೇದರೂಪವಾದ ಬ್ರಹ್ಮನು ಉಚ್ಚರಿಸಲ್ಪಟ್ಟಿದ್ದಾನೆಯೋ ಎಂಬುದಾಗಿ ವೇದದ ಉಚ್ಚಾರಣೆಯನ್ನು ದ್ರೋಣಪಕ್ಷಿಗೆ ಹೇಳಲಾಗಿದೆ.

**''अयमष्टौव्यृचाः शार्ङजरिताद्रोणसारिसृकस्तंबमित्राश्च'' इत्यनुक्रमणिकायां ''अयमग्ने जरिता'' इत्यादि सूक्ते द्रोणादीनां पक्षिणामृषित्वोक्तेश्च ।**

'ಅಯಮಷ್ಟೌದ್ವ್ಯೃಚಾಃ ಶಾಂರ್ಙಜರಿತಾದ್ರೋಣಸಾರಿಸೃಕ್ವಸ್ತಂಬಮಿತ್ರಾಶ್ಚ' ಎಂಬುದಾಗಿ ಅನುಕ್ರಮಣಿಕೆದಲ್ಲಿ 'ಅಯಮಗ್ನೇ ಜರಿತಾ' ಎಂಬ ಸೂಕ್ತದಲ್ಲಿ ಈ ಪಕ್ಷಿಗಳು ಈ ಸೂಕ್ತಕ್ಕೆ ಋಷಿಗಳು ಎಂದು ದ್ರೋಣಾದಿ ಪಕ್ಷಿಗಳಿಗೆ ಸ್ಪಷ್ಟವಾಗಿ ಋಷಿತ್ವವನ್ನು ಹೇಳಲಾಗಿದೆ.

**रामायणादौ हनुमदादीनां वेदवित्त्वाद्युक्तेश्च । शूद्रादिवत्तिर्यगादीनामधिकार-निषेधाभावाच्च ।**

ಅಷ್ಟೇ ಅಲ್ಲದೇ ರಾಮಾಯಣಾದಿಗಳಲ್ಲಿಯೂ ಹನುಮಂತ ಮೊದಲಾದ ಕಪಿಗಳಿಗೆ ವೇದಜ್ಞಾನವಿರುತ್ತೆಂದು ವರ್ಣಿಸಲಾಗಿದೆ. ಅಷ್ಟೇ ಅಲ್ಲದೇ ಶೂದ್ರಾದಿಗಳಿಗೆ ಹೇಗೆ ಅಧಿಕಾರವನ್ನು ನಿಷೇಧ ಮಾಡಲಾಗಿದಯೋ, ಅದರಂತೆ ತಿರ್ಯಕ್ ಪ್ರಾಣಿಗಳಿಗೆ ವೇದವಿದ್ಯಾಧಿಕಾರವನ್ನು ನಿಷೇಧ ಮಾಡಿರುವುದಿಲ್ಲ.

**अर्वाचीनानां तिर्यगादीनामस्माभिरप्यधिकारानङ्गीकाराच्च । अर्वाचीनदृष्टान्ते-नेतरेषामप्यसामर्थ्यानुमानेऽतिप्रसङ्गाच्च ।**

ಅರ್ವಾಚೀನವಾದ ತಿರ್ಯಕ್‌ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದು ನಾವೂ ಕೂಡ ಅಂಗೀಕರಿದ್ದೇವೆ. ಈ ಅರ್ವಾಚೀನವಾದ ತಿರ್ಯಗ್ ಪ್ರಾಣಿಗಳ ದೃಷ್ಟಾಂತದಿಂದ ಪ್ರಾಚೀನವಾದ ವಿಶಿಷ್ಟವಾದ ಪಕ್ಷಿಗಳಿಗೆ ವೇದವಿದ್ಯಾಧಿಕಾರವನ್ನು ನಿಷೇಧ ಮಾಡುವುದಾದರೆ ಅತಿಪ್ರಸಂಗದೋಷವು ಬರುತ್ತದೆ.

**प्रकाशः –**

एवं देवादीनामधिकारं समर्थ्य तिरश्चामपि केषाञ्चित्साधयितुं परोक्तमनूद्यापाकरोति – **यच्चेति** ।।

ವಿವರಣೆ - ಇಲ್ಲಿಯತನಕ ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಸಮರ್ಥಿಸಿದಾಯಿತು. ಪ್ರಕೃತ ಕೆಲವು ತಿರ್ಯಕ್ ಪ್ರಾಣಿಗಳಿಗೂ ಸಹ ವೇದವಿದ್ಯಾಧಿಕಾರವಿದೆಯೆಂದೂ ಸಹ ಹೋ[illegible] ಅದಕ್ಕೋಸ್ಕರ ಕೆಲವರು ಹೇಳುವ ತಿರ್ಯಕ್‌ಪ್ರಾಣಿಗಳ ಅನಧಿಕಾರವನ್ನು ಅನುವಾದ ಮಾಡಿ [illegible]ಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ.

**प्रकाशः –** तिरश्चामनधिकारः किमश्रुतत्वात्किं वा शूद्रस्येव निषिद्धत्वाद्विशिष्टबुद्ध्याद्यभावाद्वा । आद्यं प्रत्याह – **एवमुक्त इति** ।।

ತಿರ್ಯಕ್ ಪ್ರಾಣಿಗಳಿಗೆ ಅಧಿಕಾರವಿಲ್ಲವೆಂದು ಹೇಳಲು ಏನು ಕಾರಣ? ಶ್ರುತಿಯಲ್ಲಿ ಹೇಳಿಲ್ಲವೆಂದೋ, ಅಥವಾ ಶೂದ್ರಾದಿಗಳಿಗೆ ಅಧಿಕಾರವನ್ನು ನಿಷೇಧ ಮಾಡಿದಂತೆ ತಿರ್ಯಕ್ ಪ್ರಾಣಿಗಳಿಗೂ ಕೂಡ ನಿಷೇಧ ಮಾಡಲಾಗಿದೆಯೋ, ಅಥವಾ ಅಧಿಕಾರಕ್ಕೆ ಪ್ರಯೋಜಕವಾದ ವಿಶಿಷ್ಟಬುದ್ಧ್ಯಾದಿಗಳಿಲ್ಲದಿರುವುದರಿಂದಲೋ, ಪ್ರಥಮಪಕ್ಷವನ್ನು 'ಏಮಮುಕ್ತ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ.

**प्रकाशः –** भारत आदिपर्वणि खाण्डवदाहसमये द्रोणादेः पक्षिण इत्यर्थः । हे द्रोण त्वमपि ऋषिर्वै यतः त्वया एतद्ब्रह्म वेदरूपं व्याहृतमिति योजना । **हनुमदिति** ।। तस्य कपित्वेन तिर्यक्त्वमिति भावः ।

ಮಹಾಭಾರತದ ಆದಿಪರ್ವದಲ್ಲಿ ಬರುವ ಖಾಂಡವದಾಹ ಸಮಯದಲ್ಲಿ ದ್ರೋಣಾದಿ ಪಕ್ಷಿಗಳಿಗೆ ಅಧಿಕಾರವನ್ನು ಹೇಳಲಾಗಿದೆ. ಎಲೈ ! ದ್ರೋಣಪಕ್ಷಿಯೇ ನೀನೂ ಸಹ ಋಷಿಯೇ ಆಗಿರುವಿ. ಏಕೆಂದರೆ ನಿನ್ನಿಂದ ವೇದರೂಪವಾದ ಬ್ರಹ್ಮವು ಉಚ್ಚರಿಸಲ್ಪಟ್ಟಿದೆ ಎಂದು ಶ್ಲೋಕವನ್ನು ಯೋಜನೆ ಮಾಡಿಕೊಳ್ಳಬೇಕು. ಹನುಮಂತನು ಕಪಿಯಾದ್ದರಿಂದ ತಿರ್ಯಕ್ ಪ್ರಾಣಿಯೆನಿಸಿದ್ದಾನೆ. ಇವನಿಗೂ ಕೂಡ ವೇದವಿದ್ಯಾಧಿಕಾರವನ್ನು ಹೇಳುವುದು ಕಂಡಿದೆ.

**प्रकाशः** – एतेन तृतीयोऽपि निरस्तो बोध्यः । द्वितीयं निरस्यति – **शूद्रेति** ।।

ಹೀಗೆ ಹೇಳಿದ್ದರಿಂದ ವಿಶಿಷ್ಟಬುದ್ಧ್ಯಾದಿಗಳಿಲ್ಲದ ಕಾರಣ ತಿರ್ಯಕ್ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂಬ ಮೂರನೆಯ ಪಕ್ಷವನ್ನೂ ಕೂಡ ನಿರಾಕರಿಸಿದಂತಾಯಿತು. ಶೂದ್ರಾದಿಗಳಂತೆ ತಿರ್ಯಕ್ ಪ್ರಾಣಿಗಳಿಗೆ ನಿಷೇಧವಚನವಿರುತ್ತದೆಂಬ ಎರಡನೆಯ ಪಕ್ಷವನ್ನು 'ಶೂದ್ರ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – ननु किं तिरश्चामद्यतनानामधिकारोऽथ केषाञ्चिद्विशिष्टानाम् । नाद्यः। बाधात् । नान्त्यः । विमतास्तिर्यंचो नाधिकारिणः तिर्यक्त्वात् । अर्वाचीन-तिर्यग्वदित्यनुमानविरोधादित्यतो द्वयं क्रमेण निराह – **अर्वाचीनानामिति** ।।

ಈಗಿರುವ ತಿರ್ಯಕ್ಪ್ರಾಣಿಗಳಿಗೂ ಕೂಡ ಅಧಿಕಾರವಿದೆಯೋ, ಅಥವಾ ಕೆಲವು ವಿಶಿಷ್ಟವಾದ ತಿರ್ಯಕ್ಪ್ರಾಣಿಗಳಿಗಷ್ಟೇ ಅಧಿಕಾರವಿದೆಯೋ, ಮೊದಲನೆಯ ಪಕ್ಷವು ಬಾಧಿತವಾಗಿದೆ. ಏಕೆಂದರೆ ಈಗಿರುವ ತಿರ್ಯಕ್ಪ್ರಾಣಿಗಳಲ್ಲಿ ವೇದವಿದ್ಯಾಧಿಕಾರವಿರುವುದು ಎಲ್ಲಿಯೂ ಕಂಡಿಲ್ಲ. ಕೆಲವು ವಿಶಿಷ್ಟವಾದ ತಿರ್ಯಕ್ ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿದೆಯೆಂಬ ಎರಡನೆಯ ಪಕ್ಷವೂ ಕೂಡ ಸರಿಯಲ್ಲ. ಏಕೆಂದರೆ 'ವಿಮತಾಃ ತಿರ್ಯಂಚೋ ನಾಧಿಕಾರಿಣಃ ತಿರ್ಯಕ್ತ್ವಾತ್' ಅರ್ವಾಚೀನಾತಿರ್ಯಗ್ವತ್ ಈಗಿರುವ ತಿರ್ಯಕ್ಪ್ರಾಣಿಗಳಲ್ಲಿ ತಿರ್ಯಕ್ಪ್ರಾಣಿತ್ವ ಇರುತ್ತದೆ. ಅಧಿಕಾರವಿರುವುದು ಕಂಡಿಲ್ಲ. ಅದರಂತೆ ವಿವಾದವಿಷಯಭೂತವಾದ ವಿಶಿಷ್ಟವಾದ ತಿರ್ಯಕ್ಪ್ರಾಣಿಗಳಲ್ಲಿಯೂ 'ತಿರ್ಯಕ್ತ್ವ' ಎಂಬ ಧರ್ಮವಿರುವುದರಿಂದ, ವೇದವಿದ್ಯಾಧಿಕಾರವಿಲ್ಲವೆಂದು ಅನುಮಾನದಿಂದ ಸಮರ್ಥಿಸುತ್ತೇವೆ. ಈ ಅನುಮಾನವಿರೋಧವಿರುವ ಕಾರಣ, ವಿಶಿಷ್ಟವಾದ ತಿರ್ಯಕ್ಪ್ರಾಣಿಗಳಿಗೆ ವೇದವಿದ್ಯಾಧಿಕಾರವನ್ನು ಹೇಳಬಾರದಲ್ಲವೇ? ಎಂಬ ಆಶಂಕೆಯನ್ನು ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ಅರ್ವಾಚೀನಾನಾಮ್' ಎಂಬ ವಾಕ್ಯದಿಂದ.

**प्रकाशः** – **अतिप्रसङ्गादिति** ।। अद्यतनपुरुषेषु सामर्थ्यादर्शनेन देवानामपि विश्वधारणादिसामर्थ्याभावानुमानं स्यात् । श्रुत्यादिबाधस्तूभयत्र सम इति भावः ।

ಒಂದು ವೇಳೆ ಅರ್ವಾಚೀನವಾದ ತಿರ್ಯಕ್ಪ್ರಾಣಿಗಳ ದೃಷ್ಟಾಂತವಾದ ವಿಶಿಷ್ಟವಾದ ತಿರ್ಯಕ್ ಪ್ರಾಣಿಗಳಿಗೂ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥನೆ ಮಾಡುವುದಾದರೆ, ಅತಿಪ್ರಸಂಗ ಬರುತ್ತದೆ - ಈಗಿರುವ ಪುರುಷರಲ್ಲಿ ವಿಶ್ವವನ್ನು ಧರಿಸುವಿಕೆಯೆಂಬ ಸಾಮರ್ಥ್ಯವಿರುವುದಿಲ್ಲ. ಇವರ ದೃಷ್ಟಾಂತದಿಂದ ದೇವತೆಗಳಲ್ಲಿಯೂ ವಿಶ್ವವನ್ನು ಧರಿಸುವಿಕೆಯೆಂಬ ಸಾಮರ್ಥ್ಯವಿಲ್ಲವೆಂದು ಅನುಮಾನ ಮಾಡಬಹುದು. ಈಗಿರುವ ಪುರುಷರಲ್ಲಿ ವಿಶ್ವಧಾರಣೆಯು ಶ್ರುತಿಯಿಂದ ಬಾಧಿತವಾಗಿದೆಯೆಂದು ಹೇಳುವುದಾದರೆ, ಪ್ರಾಚೀನವಾದ ವಿಶಿಷ್ಟ ತಿರ್ಯಕ್ ಪ್ರಾಣಿಗಳಲ್ಲಿಯೂ ವೇದವಿದ್ಯಾಧಿಕಾರವಿಲ್ಲವೆಂಬುದು ಶ್ರುತಿಯಿಂದ ಬಾಧಿತವಾಗಿದೆಯೆಂಬುದು ಸಮಾನವಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः** – एतेन "तिर्यगाद्यपेक्षया मनुष्यत्वविशेषणमुक्तम्" इति भाष्यादिकं त्वर्वाचीनतिर्यगाद्यपेक्षयेति व्याख्येयमित्युक्तं भवति । एतेन "तेषामप्ययमग्ने जरितेत्यादावधिकारदर्शनात्" इत्युत्तरनयस्थटीकावाक्यं विवृतं ध्येयम् ।

ಹೀಗೆ ಹೇಳಿದ್ದರಿಂದ 'ತಿರ್ಯಗಾದ್ಯಪೇಕ್ಷಯಾ ಮನುಷ್ಯತ್ವವಿಶೇಷಣಮುಕ್ತಮ್' ತಿರ್ಯಕ್‌ಪ್ರಾಣಿಗಳ ದೃಷ್ಟಿಯಿಂದ ಸೂತ್ರದಲ್ಲಿ ಮನುಷ್ಯಪದವನ್ನು ವಿಶೇಷವನ್ನಾಗಿ ಹೇಳಿದ್ದಾರೆ ಎಂಬ ಭಾಷ್ಯದ ಮಾತಿಗೆ ಈಗಿರುವ ತಿರ್ಯಕ್‌ಪ್ರಾಣಿಗಳನ್ನು ಬಿಟ್ಟು ಎಂದು ಅರ್ಥೈಸಬೇಕು. ಹೀಗೆ ಹೇಳಿದ್ದರಿಂದಲೇ 'ತೇಷಾಮಪ್ಯಯಮಗ್ನೇ ಜರಿತೇತ್ಯಾದಾವಧಿಕಾರದರ್ಶನಾತ್' ಎಂಬ ಮುಂದಿನ ಅಧಿಕರಣದ ಟೀಕಾವಾಕ್ಯವನ್ನೂ ಕೂಡ ವಿವರಿಸಿದಂತಾಯಿತು.

**प्रकाशः** – एवं विद्याधिकारसमर्थनादेव तदङ्गकर्माधिकारोऽपि सिद्ध इति स पृथङ् न समर्थित इति ध्येयम् ।

ಹೀಗೆ ವಿದ್ಯಾಧಿಕಾರವನ್ನು ಸಮರ್ಥನೆ ಮಾಡಿದ್ದರಿಂದ ತದಂಗವಾದ ಕರ್ಮಾಧಿಕಾರವನ್ನು ಸಮರ್ಥನೆ ಮಾಡಿದಂತಾಯಿತು. ಆದ್ದರಿಂದಲೇ ಪ್ರತ್ಯೇಕವಾಗಿ ಕರ್ಮಾಧಿಕಾರದ ಸಮರ್ಥನೆಯು ಗ್ರಂಥದಲ್ಲಿ ಕಾಣುವುದಿಲ್ಲ.




ಅದ್ವೈತಿಗಳು ಹಾಗೂ ರಾಮಾನುಜರು ತಿರ್ಯಕ್‌ಪ್ರಾಣಿಗಳಿಗೆ ಸಾಮರ್ಥ್ಯವಿಲ್ಲದ ಕಾರಣ ವೇದವಿದ್ಯೆಯಲ್ಲಿ ಮತ್ತು ಯಾಗಾದಿಕರ್ಮದಲ್ಲಿ ಅಧಿಕಾರವಿಲ್ಲವೆಂದು ಹೇಳಿದ್ದಾರೆ. ಇದೂ ಸಹ ತಪ್ಪು. ಮಹಾಭಾರತದಲ್ಲಿ

'ಏವಮುಕ್ತೋ ಭ್ರಾತೃಭಿಸ್ತು ಜರಿತಾರಿರ್ವಿಭಾವಸುಮ್ ।
ತುಷ್ಟಾವ ಪ್ರಾಂಜಲಿರ್ಭೂತ್ವಾ ಯತ್ತಚ್ಛೃಣು ನರಾಧಿಪ ॥

ಎಲೈ ! ನರಶ್ರೇಷ್ಠನೇ ಪಕ್ಷಿಗಳ ಪವಾಡವನ್ನು ಕೇಳು. ದ್ರೋಣ ಮೊದಲಾದ ಸಹೋದರ ಪಕ್ಷಿಗಳು ಜರಿತಾರಿ ಪಕ್ಷಿಯನ್ನು ಕುರಿತು ಹೇಳಿದ ಮೇಲೆ, ಜರಿತಾರಿ ಪಕ್ಷಿಯು ಅಗ್ನಿಯನ್ನು ಸೂಕ್ತದ ಮೂಲಕ ಕೈಮುಗಿದು ಸ್ತೋತ್ರ ಮಾಡುತ್ತದೆ.

ಈ ಶ್ಲೋಕದಿಂದ ಜರಿತಾರಿ, ಸಾರಿಸೃಕ್ವ, ಸ್ತಂಬಮಿತ್ರ, ದ್ರೋಣ ಎಂಬ ನಾಲ್ಕು ಬಗೆಯ ಪಕ್ಷಿಗಳು 'ಅಯಮಗ್ನೇ ಜರಿತಾ' ಎಂಬ ಆಗ್ನೇಯಸೂಕ್ತದಿಂದ, ಅಗ್ನಿಯನ್ನು ಸ್ತೋತ್ರಮಾಡುತ್ತವೆಂಬುದಾಗಿ ತಿರ್ಯಗ್ ಪ್ರಾಣಿಗಳಿಗೂ ಕೂಡ ವೇದವಿದ್ಯಾಧಿಕಾರವನ್ನು ಸಮರ್ಥಿಸಲಾಗಿದೆ. ಈ ಹಕ್ಕಿಗಳನ್ನು ಋಷಿಗಳೆಂದು ಹೇಳಿದ್ದರಿಂದ ಮಂತ್ರದ್ರಷ್ಟಾರರಾಗಿವೆ. ಮತ್ತು ರಾಮಾಯಣದಲ್ಲಿ ಹನುಮಂತ ಮೊದಲಾದ ಕಪಿಗಳಿಗೆ

ವೇದಜ್ಞಾನವಿದೆಯೆಂದು ವರ್ಣಿಸಲಾಗಿದೆ. ಆದ್ದರಿಂದ ಕೆಲವು ವಿಶಿಷ್ಟ ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಒಪ್ಪಬೇಕು. ಶೂದ್ರಾದಿಗಳಿಗೆ ಹೇಗೆ ನಿಷೇಧ ವಾಕ್ಯವಿದೆಯೋ, ಅದರಂತೆ ತಿರ್ಯಕ್ ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂದು ನಿಷೇಧವಾಕ್ಯವಿರುವುದಿಲ್ಲ. ಆದ್ದರಿಂದ ತಿರ್ಯಕ್‌ಪ್ರಾಣಿಗಳಿಗೆ ವೇದವಿದ್ಯಾಧಿಕಾರವಿಲ್ಲವೆಂಬ ಅದ್ವೈತಿಗಳ ನಿಲುವು ಸರಿಯಿಲ್ಲ. ವೇದವಿದ್ಯಾಧಿಕಾರವಿರುವುದರಿಂದ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿದೆಯೆಂದು ಸ್ವತಃಸಿದ್ಧವಾಗುತ್ತದೆ.

• • • • •

## ಅದ್ವೈತಿಗಳ ಮತ್ತು ರಾಮಾನುಜರ ಎರಡನೆಯ ಸೂತ್ರ ವಿಮರ್ಶೆ

### तात्पर्यचन्द्रिका

**यच्चोक्तमुभाभ्यामिन्द्रादीनां विग्रहवत्त्वे ऋत्विगादिवत्सन्निधानेन कर्माङ्गत्वं स्यात् । तच्च विरुद्धम् । बहुषु यागेषु युगपदेकस्येन्द्रादेः सन्निधानायोगादिति चेन्न । एकस्या अपि देवताया अनेकशरीरप्रतिपत्तेरिति द्वितीयार्थ इति ।**

ಅನುವಾದ - ಅದ್ವೈತಿಗಳು ಹಾಗೂ ರಾಮಾನುಜರು ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಇಂದ್ರಾದಿ ದೇವತೆಗಳಿಗೆ ಶರೀರಾದಿಗಳನ್ನು ಒಪ್ಪುವುದಾದರೆ, ಯಾಗಮಾಡುವ ಸಂದರ್ಭದಲ್ಲಿ ಋತ್ವಿಕ್ ಮೊದಲಾದವರ ಸನ್ನಿಧಾನವಿದ್ದಂತೆ ದೇವತೆಗಳ ಸನ್ನಿಧಾನವನ್ನು ಒಪ್ಪಬೇಕಾಗುತ್ತದೆ. ಅಂದರೆ ಋತ್ವಿಕ್ ಮೊದಲಾದವರು ಹೇಗೆ ಕರ್ಮಕ್ಕೆ ಅಂಗರಾಗಿದ್ದಾರೋ, ಅದರಂತೆ ದೇವತೆಗಳೂ ಕೂಡ ಕರ್ಮಾಂಗರಾಗಬೇಕಾಗುತ್ತದೆ. ಇದು ವಿರುದ್ಧ. ಏಕೆಂದರೆ ಒಂದೇ ಸಮಯದಲ್ಲಿ ಇಂದ್ರನನ್ನು ಉದ್ದೇಶಿಸಿ ಮಾಡುವಂತಹ ಯಾಗಗಳು ಅನೇಕವಿರುತ್ತವೆ. ಆ ಎಲ್ಲಾ ಯಾಗಗಳಲ್ಲಿಯೂ ಒಬ್ಬನೇ ಇಂದ್ರನ ಸನ್ನಿಧಾನವನ್ನು ಹೇಳುವುದು ಅತ್ಯಂತ ಅಯುಕ್ತವಾಗಿದೆ. ಆದ್ದರಿಂದ ವಿರೋಧಃ ಕರ್ಮಣಿ = ಯಜ್ಞಕರ್ಮದಲ್ಲಿ ದೇವತೆಗಳ ಉಪಸ್ಥಿತಿಯು ಸಾಧ್ಯವಿಲ್ಲದ್ದಾಗುತ್ತದೆ ಎಂಬುದು ಪ್ರಶ್ನೆ. ಅನೇಕ ಪ್ರತಿಪತ್ತೇಃ = ದೇವತೆಯು ಒಬ್ಬನೇ ಆಗಿದ್ದರೂ ಅವನಿಗೆ ಅನೇಕ ಶರೀರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವು, ದರ್ಶನಾತ್ = ಶ್ರುತಿ-ಸ್ಮೃತಿಗಳಿಂದ ಸಿದ್ಧವಾಗಿದೆ. ಹೀಗೆ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.

**तन्न । देवताया विग्रहवत्त्वेऽपि स्वस्थानस्थिताया एकस्या एव बहुभिरुद्देष्टुं शक्यत्वेन कर्मणि विरोधशङ्कानुदयात् ।**

ಇದು ಸರಿಯಲ್ಲ. ದೇವತೆಗಳಿಗೆ ಶರೀರವಿದ್ದರೆ ಅನೇಕ ಯಜ್ಞಗಳಲ್ಲಿ ಒಟ್ಟಿಗೆ ಹೋಗಲು ಸಾಧ್ಯವಾಗುವುದಿಲ್ಲವೆಂಬ ಪೂರ್ವಪಕ್ಷವೇ ತಪ್ಪು. ಶರೀರವಿದ್ದರೂ ಕೂಡ ಯಜ್ಞಮಂಟಪಕ್ಕೆ ಅವರು ಹೋಗಬೇಕಾಗಿಲ್ಲ. ಇದ್ದಲ್ಲೇ ಇದ್ದು ಅನೇಕರು ಮಾಡುವಂತಹ ಯಾಗದ ಭಾಗವನ್ನು ಸ್ವೀಕರಿಸಬಹುದು. ಆದ್ದರಿಂದ ಕರ್ಮದಲ್ಲಿ ವಿರೋಧಾಶಂಕೆ ಹುಟ್ಟುವುದಿಲ್ಲ.

ಪರಿಪೂರ್ಣಚಂದ್ರಿಕಾ

**ब्रह्मविद्याधिकारे हि सामर्थ्याद्यर्थं विग्रहादिकमेवापेक्षितम् । न त्वृत्विगादिवत्सन्निधानमपि ।**

ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳುವಾಗಲೂ ಕೂಡ ಅಧಿಕಾರಕ್ಕೆ ಪ್ರಯೋಜಕವಾದ ಸಾಮರ್ಥ್ಯಾದಿಗಳಿಗೋಸ್ಕರ ವಿಗ್ರಹಾದಿಗಳು ಅಪೇಕ್ಷಿತವಾಗಿವೆ. ಹೊರತು, ಋತ್ವಿಗಾದಿಗಳಂತೆ ಸನ್ನಿಧಾನವೂ ಅಪೇಕ್ಷಿತವಾಗಿಲ್ಲ.

**ननु ''इन्द्रागच्छ हरिव आगच्छ'' इत्यादिनाऽऽह्वानात्सन्निधानसिद्धेर्विरोध-शङ्कोदय इति चेत् यद्याह्वानमागमनार्थं तर्हि सिद्धं विग्रहवत्त्वम् । यदि त्वदृष्टार्थं न तर्हि सन्निधानसिद्धिः ।**

'ಇಂದ್ರಾಗಚ್ಛ, ಹರಿವ ಆಗಚ್ಛ' ಇತ್ಯಾದಿಯಾಗಿ ಮಂತ್ರದಲ್ಲಿ ಇಂದ್ರಾದಿಗಳ ಆಹ್ವಾನವನ್ನು ಮಾಡಿರುವುದರಿಂದ ಯಜ್ಞಮಂಟಪಕ್ಕೆ ಇಂದ್ರಾದಿಗಳು ಹೋಗಬೇಕಾಗುತ್ತದಲ್ಲವೇ, ಆದ್ದರಿಂದ ವಿರೋಧಾಶಂಕೆಯು ಮಾಡಿದ್ದು ಹೇಗೆ ತಪ್ಪು? ಎಂದು ಪ್ರಶ್ನಿಸಬಾರದು. ಒಂದುವೇಳೆ ಆಹ್ವಾನವು ಆಗಮನಕ್ಕೋಸ್ಕರವೆಂದು ಹೇಳುವುದಾದರೆ, ಅದರಿಂದಲೇ ಅವರಿಗೆ ಶರೀರವು ಸಿದ್ಧವಾಗುತ್ತದೆ. ಹೀಗಿರುವಾಗ ಪೂರ್ವಪಕ್ಷಕ್ಕೆ ಅವಕಾಶವೇ ಇರುವುದಿಲ್ಲ. ಒಂದು ವೇಳೆ ಅದೃಷ್ಟಪ್ರಯೋಜನ-ಕ್ಕೋಸ್ಕರವೆಂದು ಹೇಳುವುದಾದರೆ ಸನ್ನಿಧಾನವು ಸಿದ್ಧವಾಗುವುದಿಲ್ಲ.

**एतेन ''कस्य वा देवा यज्ञमागच्छन्ति'' इत्यादिवाक्यात्सन्निधानसिद्धेः शङ्कोदय इति निरस्तम् ।**

ಇದರಿಂದ 'ಕಸ್ಯ ವಾ ದೇವಾ ಯಜ್ಞಮಾಗಚ್ಛಂತಿ' 'ಯಾರ ಯಜ್ಞಕ್ಕೆ ದೇವತೆಗಳು ಬರುತ್ತಾರೆ' ಇತ್ಯಾದಿ ವಾಕ್ಯದಿಂದ ಸನ್ನಿಧಾನವು ಸಿದ್ಧವಾಗುತ್ತದಲ್ಲವೇ? ಎಂಬ ಶಂಕೆಯನ್ನೂ ಕೂಡ ನಿರಾಕರಿಸಿದಂತಾಯಿತು. ಏಕೆಂದರೆ ಇದ್ದಲ್ಲೇ ಇದ್ದು ಹವಿರ್ಭಾಗವನ್ನು ಅವರು ಸ್ವೀಕರಿಸಬಹುದು.

**अनेन वाक्येन देवतानामागमनसिद्धौ तत एव विग्रहवत्त्वसिद्धेः । असिद्धौ च कर्मणि विरोधशङ्कानुदयात् । एवं सूत्रान्तरेऽप्यनुपपत्तिरूह्या ।।**

ಮತ್ತು 'ಕಸ್ಯ ವಾ ದೇವಾ' ಎಂಬ ವಾಕ್ಯಗಳಿಂದ ದೇವತೆಗಳ ಆಗಮನವು ಸಿದ್ಧವಾದರೆ ಇದರಿಂದಲೇ ಶರೀರವಿದೆಯೆಂದೂ ಕೂಡ ಸಿದ್ಧವಾಗುತ್ತದೆ. 'ಕಸ್ಯ ವಾ ದೇವಾ' ಎಂಬ ವಾಕ್ಯದಿಂದ ದೇವತೆಗಳ ಆಗಮನವು ಸಿದ್ಧವಾಗದಿದ್ದರೆ, ಕರ್ಮದಲ್ಲಿ ವಿರೋಧಾಶಂಕೆಯೂ ಕೂಡ ಹುಟ್ಟುವುದಿಲ್ಲ. ಹೀಗೆ ಉಳಿದ ಸೂತ್ರಗಳಲ್ಲಿರುವ ಅನುಪಪತ್ತಿಯನ್ನೂ ಕೂಡ ಸ್ವತಃ ಊಹಿಸಿಕೊಳ್ಳಬೇಕು.

ದೇವತಾಧಿಕರಣ (೧-೩-೮)

**प्रकाशः –**

एवं मतद्वयेऽप्याद्यसूत्राभिप्रेतं सिद्धान्तं निरस्य द्वितीयसूत्रार्थमप्यनूद्य निराह – **यच्चेति ।।**

ವಿವರಣೆ - ಇಲ್ಲಿಯ ತನಕ ಅದ್ವೈತಭಾಷ್ಯ ಹಾಗೂ ರಾಮಾನುಜ ಭಾಷ್ಯದಲ್ಲಿರುವ ಪ್ರಥಮ ಸೂತ್ರದ ವ್ಯಾಖ್ಯಾನವನ್ನು ಮತ್ತು ಸಿದ್ಧಾಂತವನ್ನು ನಿರಾಕರಿಸಿದ್ದಾಯಿತು. ಈಗ 'ವಿರೋಧಃ ಕರ್ಮಣಿ' ಎಂಬ ಎರಡನೆಯ ಸೂತ್ರದ ಅರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ.

**प्रकाशः –** ''इन्द्रागच्छ हरिव आगच्छ'' इत्यादिनाऽऽहूतस्य सन्निधानानुपपत्तेरिति रामानुजभाष्यमाशङ्कते – **इन्द्रेति ।।**

'ಇಂದ್ರಾಗಚ್ಛ ಹರಿವ ಆಗಚ್ಛ' ಇತ್ಯಾದಿ ವಾಕ್ಯದಿಂದ ಆಹ್ವಾನಕ್ಕೆ ವಿಷಯರಾದ ಇಂದ್ರಾದಿ ದೇವತೆಗಳ ಶರೀರದ ಸನ್ನಿಧಾನವು ಸಿದ್ಧವಾಗುತ್ತದೆ. ಈ ಆಹ್ವಾನಮಂತ್ರದಿಂದ ದೇವತೆಗಳ ಸನ್ನಿಧಾನವು ಸಿದ್ಧವಾಗುತ್ತದೆ ಎಂಬುದಾಗಿ ರಾಮಾನುಜ ಭಾಷ್ಯದಲ್ಲಿ ಹೇಳಿರುತ್ತಾರೆ. ಅದರ ಪ್ರಕಾರ 'ಇಂದ್ರ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

**प्रकाशः – तर्हि सिद्धमिति ।।** एवं च विरोधशङ्कया विग्रहाद्यभावापादनं व्याहतमित्यर्थः । रामानुजभाष्योक्तमेवान्यदपि शङ्काबीजमाशङ्क्याह – **एतेनेति ।।**

ಆದ್ದರಿಂದ ವಿರೋಧಶಂಕೆಯಿಂದ ವಿಗ್ರಹವು ಇರುವುದಿಲ್ಲವೆಂದು ಆಪಾದನೆ ಮಾಡುವುದು ವ್ಯಾಹತವಾಗುತ್ತದೆಂದು ತಿಳಿಯಬೇಕು. ರಾಮಾನುಜಭಾಷ್ಯದಲ್ಲೇ ಹೇಳಿರುವ ಮತ್ತೊಂದು ಶಂಕಾಬೀಜವನ್ನು ಆಶಂಕಿಸುತ್ತಿದ್ದಾರೆ 'ಏತೇನ' ಇತ್ಯಾದಿ ವಾಕ್ಯದಿಂದ.

**प्रकाशः –** ''कस्य वा देवा यज्ञमागच्छन्ति कस्य वा न बहूनां यजमानानां यो वै देवताः पूर्वः परिगृह्णाति स एनाः श्वो भूते यजते'' इत्यादिनाऽग्न्यादेस्तत्र तत्रागमनसिद्धेरित्यर्थः । एतच्छब्दार्थं व्यनक्ति – **अनेनेति ।।**

'ಕಸ್ಯ ವಾ ದೇವಾ ಯಜ್ಞಮಾಗಚ್ಛಂತಿ ಕಸ್ಯ ವಾ ನ ಬಹೂನಾಂ ಯಜಮಾನಾನಾಂ ಯೋ ವೈ ದೇವತಾಃ ಪೂರ್ವಃ ಪರಿಗೃಹ್ಣಾತಿ ಸ ಏನಾಃ ಶ್ವೋ ಭೂತೇ ಯಜತೇ' ಅನೇಕ ಯಜಮಾನರು ದೇವತೆಗಳನ್ನು ಯಜ್ಞಕ್ಕೋಸ್ಕರ ಕರೆದಾಗ ಯಾರಮನೆಗೆ ದೇವತೆಗಳು ಹೋಗಬೇಕು, ಎಂದರೆ ಮೊದಲು ಯಾವ ಯಜಮಾನನು ಆಹ್ವಾನಮಾಡಿರುತ್ತಾನೋ, ಅವನ ಮನೆಗೆ ದೇವತೆಗಳು ಬರುತ್ತಾರೆ. ಅಂತಹ ಯಜಮಾನನು ಹಿಂದಿನ ದಿವಸ ದೇವತೆಯನ್ನು ಆಹ್ವಾನ ಮಾಡಿ, ಮರುದಿವಸ ಆ ದೇವತೆಯನ್ನು ಕುರಿತು ಹೋಮವನ್ನು ಮಾಡಬಹುದು. ಇತ್ಯಾದಿ ವಾಕ್ಯದಿಂದ ಅಗ್ನ್ಯಾದಿ ದೇವತೆಗಳಿಗೆ ಆಗಮನವು ಸಿದ್ಧವಾಗುತ್ತದೆ. 'ಏತತ್' ಶಬ್ದದ ಅರ್ಥವನ್ನೇ 'ಅನೇನ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – **एवमिति ।। तथा हि । विग्रहादिमत्त्वेऽङ्गीक्रियमाणे कर्मणि विरोधाभावेऽपि वैदिकेन्द्रादिशब्देऽनित्यार्थसंयोगरूपविरोधस्स्यादेव । विग्रहवत्त्वे जनिमृतियोगेन जनेः पूर्वं नाशादूर्ध्वमिन्द्रादिशब्दानामर्थशून्यत्वमनित्यत्वं वा स्यादिति चेन्न ।**

ಇದರಂತೆ ಬೇರೆ ಸೂತ್ರಗಳ ಅನುಪಪತ್ತಿಯನ್ನೂ ಕೂಡ ಹೀಗೆ ತಿಳಿದುಕೊಳ್ಳಬೇಕು. ಒಂದುವೇಳೆ ದೇವತೆಗಳಿಗೆ ಶರೀರಾದಿಗಳನ್ನು ಒಪ್ಪಿದಾಗ ಕರ್ಮದಲ್ಲಿ ವಿರೋಧವಿಲ್ಲದಿರಬಹುದು. ಆದರೆ ನಿತ್ಯವಾದ ವೈದಿಕವಾದ ಇಂದ್ರಾದಿಶಬ್ದಗಳಿಗೆ ಅನಿತ್ಯವಾದ ಅರ್ಥ ಸಂಯೋಗವನ್ನು ಒಪ್ಪಿದಂತಾಯಿತು. ಏಕೆಂದರೆ ಶರೀರ ಇದ್ದರೆ ಮಾತ್ರ ಜನನ-ಮರಣಾದಿಗಳನ್ನು ಒಪ್ಪಬೇಕು. ಆವಾಗ ಶರೀರಕ್ಕಿಂತ ಮೊದಲು ಮತ್ತು ಅನಂತರ ಅವರಿಗೆ ಉತ್ಪತ್ತಿನಾಶಗಳನ್ನು ಒಪ್ಪಿದಂತಾಯಿತು. ದೇವತೆಗಳಿಲ್ಲದ ಸಂದರ್ಭದಲ್ಲಿ ಇಂದ್ರ-ಚಂದ್ರ ಮೊದಲಾದ ಶಬ್ದಗಳಿರುವುದರಿಂದ ಅನಿತ್ಯವಾದ ಅರ್ಥಸಂಯೋಗವನ್ನು ಒಪ್ಪಿದಂತಾಯಿತು. ಆದ್ದರಿಂದ ಶಬ್ದಕ್ಕೂ ಸಹ ಅನಿತ್ಯತ್ವವನ್ನು ಹೇಳಬೇಕು. ಇಲ್ಲದಿದ್ದರೆ ನಿತ್ಯವಾದ ಶಬ್ದಕ್ಕೆ ಅನಿತ್ಯವಾದ ಅರ್ಥಸಂಯೋಗವನ್ನು ಒಪ್ಪಬೇಕು. ಅನಿತ್ಯಾರ್ಥಸಂಯೋಗವನ್ನು ಒಪ್ಪಿದಾಗ ಶಬ್ದಕ್ಕೆ ಅಪ್ರಾಮಾಣ್ಯದೋಷವನ್ನೇ ಹೇಳಿದಂತಾಗುತ್ತದೆ.

**प्रकाशः** – **अतो वैदिकादेवेन्द्रादिशब्दादिन्द्रादेः प्रभवादुत्पत्तेरिति तृतीय-सूत्रार्थमुभावप्याहतुः । स न युक्तः । इन्द्रादिजगद्धेतुत्वस्योपादानत्वरूपस्य ब्रह्मधर्मत्वेन शब्देऽभावात् । दण्डचक्रादिवन्निमित्तत्वरूपस्य चायोगात् ।**

ಹೀಗೆ ಶಂಕಿಸಬಾರದು. ಏಕೆಂದರೆ ವೇದದಲ್ಲಿರುವ ಇಂದ್ರಾದಿ ಶಬ್ದಗಳಿಂದಲೇ ಇಂದ್ರಾದಿ ದೇವತೆಗಳು ಹುಟ್ಟುತ್ತಾರೆಂದು ಮೂರನೆಯ ಸೂತ್ರದ ಅರ್ಥವನ್ನು ಇಬ್ಬರೂ ಕೂಡ ಹೇಳುತ್ತಾರೆ. ಇದು ಸರಿಯಲ್ಲ. ಹಾಗಾದರೆ ಶಬ್ದವು ಇಂದ್ರಾದಿ ದೇವತೆಗಳಿಗೆ ಉಪಾದಾನಕಾರಣವಾಗಿದೆಯೋ ಅಥವಾ ನಿಮಿತ್ತ-ಕಾರಣವಾಗಿದೆಯೋ? ಉಪಾದಾನತ್ವವು ಬ್ರಹ್ಮನ ಧರ್ಮವಾದ್ದರಿಂದ ಶಬ್ದವು ಉಪಾದಾನ ಕಾರಣವೆಂದು ಹೇಳಲು ಸಾಧ್ಯವಿಲ್ಲ. ನಿಮಿತ್ತಕಾರಣವೆಂದರೆ, ದಂಡಚಕ್ರಾದಿಗಳಂತೆ ಹೇಳಲು ಸಾಧ್ಯವಿಲ್ಲ. ಜಗತ್ತಿನಲ್ಲಿ ಶಬ್ದವು ಅರ್ಥಕ್ಕೆ ದಂಡಚಕ್ರಾದಿಗಳಂತೆ ನಿಮಿತ್ತಕಾರಣವಾಗಿದೆಯೆಂಬುದು ಎಲ್ಲಿಯೂ ಕಂಡಿರುವುದಿಲ್ಲ.

**प्रकाशः** – अथ मतं इन्द्रादिशब्दस्य न साक्षादिन्द्रादिजगदुत्पत्तौ हेतुत्वम् । किन्तु यथा कुलालो घटादिशब्दान्मनसि वर्तमानात्तदाकारं स्मृत्वा घटादिकं तद्वाच्यं सृजति तथा पूर्वस्मिन्निन्द्रादौ नष्टे वैदिकादिन्द्रादिशब्दाद्ब्रह्मा पूर्वेन्द्राद्याकृतिविशेषं स्मृत्वा तदाकारमपरमिन्द्रादिकं सृजतीति बुद्धिस्थितार्थस्मारकतयेति ।

ಇಂದ್ರಾದಿ ಶಬ್ದಗಳು ಇಂದ್ರಾದಿಜಗತ್ತಿನ ಉತ್ಪತ್ತಿಗೆ ನೇರವಾಗಿ ಕಾರಣಗಳಾಗುವುದಿಲ್ಲ. ಹೊರತಾಗಿ, ಯಾವರೀತಿಯಾಗಿ ಕುಲಾಲನು ಮೊದಲು ಮನಸ್ಸಿನಲ್ಲಿ 'ಘಟ' ಎಂಬ ಶಬ್ದದಿಂದ ಘಟದ ಆಕಾರವನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡು ಅಂತಹ ಘಟಶಬ್ದದಿಂದ ವಾಚ್ಯವಾದ ಘಟ ಎಂಬ ಪದಾರ್ಥವನ್ನು ಸೃಷ್ಟಿಮಾಡುತ್ತಾನೋ, ಅದರಂತೆ ಹಿಂದಿನ ಕಲ್ಪದಲ್ಲಿರುವ ಇಂದ್ರಾದಿಗಳು ನಷ್ಟರಾದ ಮೇಲೆ 'ಇಂದ್ರ' ಎಂಬ ಶಬ್ದದಿಂದ ಅಂತಹ ದೇವೇಂದ್ರನ ಆಕಾರವನ್ನು ಬ್ರಹ್ಮದೇವರು ಸ್ಮರಿಸಿಕೊಂಡು ಇಂದ್ರಶಬ್ದವಾಚ್ಯನಾದ ವ್ಯಕ್ತಿಯನ್ನು ಅದೇ ಆಕಾರದಲ್ಲಿ ಸೃಷ್ಟಿಮಾಡುತ್ತಾರೆ. ಹೀಗೆ ಇಂದ್ರಾದಿಶಬ್ದಗಳು ದೇವತೆಗಳಿಗೆ ಉತ್ಪಾದಕವಾಗಿವೆಯೆಂದರೆ ಬುದ್ಧಿಯಲ್ಲಿ ಅರ್ಥವನ್ನು ಸ್ಮರಣೆಗೆ ತಂದುಕೊಡುವ ಮೂಲಕ ಇಂದ್ರಾದಿಗಳ ಉತ್ಪತ್ತಿಗೆ ಕಾರಣವಾಗಿದೆಯೆಂದು ನಮ್ಮ ಅಭಿಪ್ರಾಯ.

**प्रकाशः** – तन्न । सर्वज्ञस्य शब्दाधीनार्थस्मरणेन सृष्ट्ययोगेन शब्दादित्यर्थकस्यात इत्यस्य वैयर्थ्यात् । चतुर्मुखस्य मुख्यस्रष्टृत्वाभावेन ''धाता यथा पूर्वमकल्पयत्'' इत्यादेः परब्रह्मपरत्वात् ।

ಇದು ತಪ್ಪು. ಸರ್ವಜ್ಞರಾದ ಬ್ರಹ್ಮದೇವರಿಗೆ ಶಬ್ದದಿಂದ ಅರ್ಥವನ್ನು ಸ್ಮರಿಸಿಕೊಳ್ಳುವಂತಹ ಪರಿಸ್ಥಿತಿಯಿರುವುದಿಲ್ಲ. ಶಬ್ದದಿಂದ ಅರ್ಥವನ್ನು ಸ್ಮರಿಸಿಕೊಂಡು ಅದರಿಂದ ಸೃಷ್ಟಿಮಾಡುತ್ತಾರೆಂಬುದನ್ನು ಅಜ್ಞಾನಿಗಳಾಗಿದ್ದಲ್ಲಿ ಹೇಳಬಹುದಿತ್ತು. ಆದ್ದರಿಂದ, 'ಶಬ್ದಾತ್' ಎಂಬರ್ಥದಲ್ಲಿರುವ 'ಅತಃ' ಎಂಬುದಕ್ಕೆ ವೈಯರ್ಥ್ಯವು ಬರುತ್ತದೆ. ಹಾಗಾದರೆ 'ಧಾತಾ ಯಥಾ ಪೂರ್ವಮಕಲ್ಪಯತ್' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಮುಖ್ಯವಾಗಿ ಈ ಶ್ರುತಿಯು ಚತುರ್ಮುಖಪರವೇ ಆಗಿರುವುದಿಲ್ಲ. ಹೊರತು ಪರಬ್ರಹ್ಮಕರ್ತೃಕ ಸೃಷ್ಟಿಯನ್ನು ವರ್ಣಿಸುತ್ತಿದೆ.

**प्रकाशः** – योऽपि प्रत्यक्षानुमानाभ्यामित्यस्य घटादिनिर्माणस्य शब्दपूर्वकत्वस्य प्रत्यक्षसिद्धत्वाज्जगत्सृष्टावप्येवमेवानुमानादिति परैरर्थ उक्तः स न युक्तः ।

ಇನ್ನು 'ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬುದರ ಅರ್ಥವೂ ಸಹ ಸರಿಯಲ್ಲ. ಏಕೆಂದರೆ ಘಟಾದಿ ನಿರ್ಮಾಣವು ಶಬ್ದಪೂರ್ವಕವಾಗಿದೆಯೆಂದು ಪ್ರತ್ಯಕ್ಷಸಿದ್ಧವಾಗಿದೆ. ಅದರಂತೆ ಜಗತ್ತಿನ ಸೃಷ್ಟಿಯೂ ಸಹ ಶಬ್ದಪೂರ್ವಕವೇ ಆಗಬೇಕೆಂದು ಅನುಮಾನ ಮಾಡಬೇಕು. 'ಜಗತ್ಸೃಷ್ಟಿಃ ಶಬ್ದಜನ್ಯಅರ್ಥಸ್ಮರಣಪೂರ್ವಿಕಾ ಸೃಷ್ಟಿತ್ವಾತ್ ಘಟಸೃಷ್ಟಿವತ್' ಎಂದು. ಇದೂ ಸಹ ಸರಿಯಲ್ಲ.

**प्रकाशः** – तथा सति तयोस्समुच्चित्य हेतुत्वानुपपत्तेः । जगत्सृष्टेश्शब्द-पूर्वकत्वेऽनुमानस्यैव साक्षात्प्रवृत्तेः प्रत्यक्षस्य व्याप्तिग्रहौपयिकत्वेन तच्छेषत्वात् प्रत्यक्षानुमानाभ्यामिति द्विवचनस्य क्लिष्टत्वात् । दण्डपरशुभ्यां वृक्षश्छिद्यत इति व्यपदेशाभावात् ।

ಹೀಗೆ ಹೇಳುವುದಾದರೆ ಪ್ರತ್ಯಕ್ಷ, ಅನುಮಾನಗಳೆರಡೂ ಒಟ್ಟಿಗೆ ಕಾರಣವಾಗಿವೆಯೆಂದು ಹೇಳಲು ಬರುವುದಿಲ್ಲ. ಹೊರತಾಗಿ, ಜಗತ್ಸೃಷ್ಟಿಯು ಶಬ್ದಪೂರ್ವಕವಾಗಿದೆಯೆನ್ನಲು ಅನುಮಾನವೇ ಮುಖ್ಯವಾದ ಪ್ರಮಾಣವಾಗಿದೆ. ಪ್ರತ್ಯಕ್ಷವು ವ್ಯಾಪ್ತಿಗ್ರಹಕ್ಕೆ ಉಪಪಾದಕವಾಗಿದೆ ಎಂದು ಹೇಳಿದಂತಾಯಿತು. 'ಪರ್ವತಃ ವಹ್ನಿಮಾನ್ ಧೂಮಾತ್ ಮಹಾನಸವತ್' ಎಂಬ ಅನುಮಾನದಿಂದಲೇ ಪರ್ವತದಲ್ಲಿ ವಹ್ನಿಯು ಸಿದ್ಧವಾಗುತ್ತದೆ. ಈ ಅನುಮಾನದಲ್ಲಿ ವ್ಯಾಪ್ತಿನಿಶ್ಚಯಕ್ಕೋಸ್ಕರ ಪ್ರತ್ಯಕ್ಷವು ಕಾರಣವಾಗಿದೆಯೆಂದು ಹೇಗೆ ಹೇಳುತ್ತೇವೋ, ಅದರಂತೆ ಇಲ್ಲಿಯೂ ಸಹ ಜಗತ್ಸೃಷ್ಟಿಗೆ ಶಬ್ದಪೂರ್ವಕತ್ವವು ಅನುಮಾನದಿಂದಲೇ ಸಿದ್ಧವಾಗಿದೆ. ಘಟಾದಿಸೃಷ್ಟಿಗಳಲ್ಲಿ ವ್ಯಾಪ್ತಿನಿಶ್ಚಯವು ಪ್ರತ್ಯಕ್ಷದಿಂದಾಗಿದೆಯೆಂದೇ ಹೇಳಬೇಕು. ಆದ್ದರಿಂದ ಪ್ರತ್ಯಕ್ಷ, ಅನುಮಾನಗಳೆರಡೂ ಒಟ್ಟಿಗೆ ಕಾರಣವಾಗಿವೆಯೆಂಬ ಸೂತ್ರವ್ಯಾಖ್ಯಾನವು ಸಮಂಜಸವಾಗುವುದಿಲ್ಲ. ಆದ್ದರಿಂದ 'ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬಲ್ಲಿರುವ ದ್ವಿವಚನಕ್ಕೆ ಕ್ಲಿಷ್ಟವಾದ ಅರ್ಥವನ್ನು ಕಲ್ಪಿಸಿದಂತಾಗುತ್ತದೆ. 'ದಂಡಪರಶುಭ್ಯಾಂ ವೃಕ್ಷಶ್ಛಿದ್ಯತೇ' ದಂಡ ಹಾಗೂ ಕೊಡಲಿಗಳಿಂದ ವೃಕ್ಷವು ತುಂಡರಿಸಲ್ಪಡುತ್ತದೆ ಎಂದು ಯಾರೂ ಹೇಳುವುದಿಲ್ಲ. ಹೊರತಾಗಿ ಪರಶುವಿನಿಂದಲೇ ವೃಕ್ಷವನ್ನು ಛೇದನಮಾಡುತ್ತಾರೆ. ಅಂತಹ ಪರಶುವಿಗೆ ದಂಡವು ಕೇವಲ ಸಾಧಕವಾಗಿದೆಯೆಂದೇ ಹೇಳುತ್ತಾರೆ. ಅದರಂತೆ ಇಲ್ಲೂ ಸಹ.

**प्रकाशः** – कैश्चिच्छ्रुतिस्मृतिभ्यामित्यर्थ उक्तः । सोऽपि न साधुः । रूढार्थत्यागापत्तेः । अत इत्यनेनैव श्रुतिस्मृतिरूपशब्दस्य ग्रहणसम्भवेन तस्य वैयर्थ्याच्च ।

ರಾಮಾನುಜರು 'ಪ್ರತ್ಯಕ್ಷಾನುಮಾನ್ಯಾಭ್ಯಾಮ್' ಎಂಬ ಪದಗಳಿಗೆ ಶ್ರುತಿ-ಸ್ಮೃತಿಗಳಿಂದ ಎಂದು ವ್ಯಾಖ್ಯಾನ ಮಾಡುತ್ತಾರೆ. ಇದೂ ಸಹ ಸರಿಯಲ್ಲ. 'ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬ ಪದಕ್ಕೆ ರೂಢವಾದ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಎಂದೇ ಅರ್ಥವನ್ನು ಹೇಳಲು ಬರುವಾಗ ಶ್ರುತಿ-ಸ್ಮೃತಿಗಳೆಂಬ ಯೌಗಿಕಾರ್ಥವನ್ನು ಸ್ವೀಕರಿಸುವುದು ಅನ್ಯಾಯವಾಗಿದೆ. ಮತ್ತು 'ಅತಃ' ಎಂಬ ಪದದಿಂದಲೇ ಶ್ರುತಿ-ಸ್ಮೃತಿರೂಪವಾದ ಶಬ್ದವನ್ನು ಸ್ವೀಕರಿಸಲು ಬರುವಾಗ ಪುನಃ ಅದನ್ನೇ ಹೇಳಿದರೆ 'ಪ್ರತ್ಯಕ್ಷಾನುಮಾನಾಭ್ಯಾಮ್' ಎಂಬ ಪದವು ಹೇಳಿದರೆ ವ್ಯರ್ಥವಾಗುತ್ತದೆ.

**प्रकाशः** – यच्चोक्तं परैः इन्द्रादिजगत इन्द्रादिवेदशब्दजन्यत्वादेव वेदस्य नित्यत्वमिति चतुर्थस्यार्थ इति तन्न । तत्समर्थनस्य प्रकृतानुपयोगात् । चशब्दानुपपत्तेश्चेत्यादिरूपेण ध्येयम् । ग्रन्थगौरवभयादुपरम्यते ।

'ಅತ ಏವ ಚ ನಿತ್ಯತ್ವಮ್' ಎಂಬ ನಾಲ್ಕನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಇಂದ್ರಾದಿ ಜಗತ್ತು, ಇಂದ್ರಾದಿ ಶಬ್ದರೂಪವಾದ ವೇದದಿಂದ ಹುಟ್ಟಿದೆ. ಜನಕವಾದ ವೇದವು ಇಂದ್ರಾದಿಗಳಿಗಿಂತ ಮೊದಲಿರಬೇಕಾದ ಕಾರಣ, ಅನಾದಿಯಾಗುತ್ತದೆಂದು ಈ ಸೂತ್ರದ ಅಭಿಪ್ರಾಯವೆನ್ನುತ್ತಾರೆ. ಇದು ತಪ್ಪು.

ಈ ಸೂತ್ರದಿಂದ ವೇದನಿತ್ಯತ್ವವನ್ನು ಸಮರ್ಥನೆ ಮಾಡಿದಂತಾಯಿತು. ಇದು ಪ್ರಕೃತ ಅನುಪಯುಕ್ತವಾಗಿದೆ. ಮತ್ತು ಹಿಂದೆ ಹೇಳಿದ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳಿದಂತಾಗದ ಕಾರಣ, 'ಚ' ಶಬ್ದವು ಅನುಪಪನ್ನವಾಗುತ್ತದೆ. ಹೀಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಅನೇಕ ದೋಷಗಳಿರುತ್ತದೆ. ಗ್ರಂಥಗೌರವ ಭಯದಿಂದ ಇಲ್ಲಿಗೆ ನಿಲ್ಲಿಸುತ್ತೇವೆ. ಇನ್ನು ಹೆಚ್ಚಿನ ದೋಷವನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು.

**प्रकाशः – यत्कश्चिदाह ''ततो देवा रुद्रं नापश्यन् । ते देवा रुद्रं ध्यायन्ति'' इत्यत्रोक्तो देवानामुपासनाधिकारो न युक्तोऽथ युक्त इति संशये पूर्वोक्तरीत्या विग्रहाभावेन सामर्थ्याभावात् ''देवा ह वै स्वर्गं लोकमगमन् । ते देवा रुद्रमपृच्छन्'' इति देवलोकस्य परब्रह्मपदस्य चैकार्थत्वावगमेनार्थित्वायोगादुपनयनाभावेन वैदुष्यायोगाज्जडत्वेनानधिकार इति प्राप्ते**

ಶೈವರ ಅಧಿಕರಣ ಶರೀರ ಹೀಗಿದೆ - 'ತತೋ ದೇವಾ ರುದ್ರಂ ನಾಪಶ್ಯನ್ । ತೇ ದೇವಾ ರುದ್ರಂ ಧ್ಯಾಯಂತಿ' ಎಂಬ ವಾಕ್ಯದಲ್ಲಿ ದೇವತೆಗಳು ರುದ್ರನನ್ನು ಉಪಾಸನೆ ಮಾಡುವಂತಹ ಅಧಿಕಾರವನ್ನು ಹೊಂದಿಲ್ಲವೋ, ಅಥವಾ ಹೊಂದಿದ್ದಾರೋ? ಎಂದು ಸಂಶಯ.

ಹಿಂದೆ ಹೇಳಿದಂತೆ ದೇವತೆಗಳಿಗೆ ಶರೀರವೇ ಇಲ್ಲದ ಕಾರಣ ಸಾಮರ್ಥ್ಯವಿರುವುದಿಲ್ಲ. ಮತ್ತು 'ದೇವಾ ಹ ವೈ ಸ್ವರ್ಗಂ ಲೋಕಮಗಮನ್ । ತೇ ದೇವಾ ರುದ್ರಮಪೃಚ್ಛನ್' ಎಂಬುದಾಗಿ ಪರಬ್ರಹ್ಮಸ್ಥಾನವೆನಿಸಿದ ಸ್ವರ್ಗಲೋಕವನ್ನು ಈಗಾಗಲೇ ದೇವತೆಗಳು ಹೊಂದಿರುವುದರಿಂದ, ಅರ್ಥಿತ್ವವೂ ಕೂಡ ಯುಕ್ತವಾಗುವುದಿಲ್ಲ. ಉಪನಯನಸಂಸ್ಕಾರವಿಲ್ಲದ ಕಾರಣ ವೇದಾಧ್ಯಯನವನ್ನೂ ಕೂಡ ಮಾಡಲು ಸಾಧ್ಯವಿಲ್ಲದ್ದರಿಂದ ವೈದುಷ್ಯವೂ ಸಹ ಅವರಲ್ಲಿರುವುದಿಲ್ಲ. ಹೀಗೆ ಸಾಮರ್ಥ್ಯ, ಅರ್ಥಿತ್ವ, ವೈದುಷ್ಯ ಮೂರು ಬಗೆಯ ಅಧಿಕಾರ ಧರ್ಮಗಳು ದೇವತೆಗಳಲ್ಲಿ ಬರುವುದಿಲ್ಲ. ಅಷ್ಟೇ ಅಲ್ಲದೇ, ಅವರು ಜಡರೂಪರಾದ್ದರಿಂದ, ಉಪಸನಾಧಿಕಾರವು ಸರ್ವಥಾ ಯುಕ್ತವಾಗುವುದಿಲ್ಲವೆಂದು ಪೂರ್ವಪಕ್ಷ.

**प्रकाशः – विग्रहलोकभेदस्वयंप्रतिभातवेदत्वाभ्युपगमेनास्त्यधिकार इति सिद्धान्त इति तदनेनैव निरस्तम् ।**

ದೇವತೆಗಳಿಗೆ ಶರೀರವು ಇರುವುದರಿಂದ ಸಾಮರ್ಥ್ಯವಿರುತ್ತದೆ. ಸ್ವರ್ಗಲೋಕವೇ ಬೇರೆ, ಶಿವಲೋಕವೇ ಬೇರೆ ಎಂಬ ಲೋಕಭೇದವಿರುವುದರಿಂದ ಅರ್ಥಿತ್ವವು ಉಪಪನ್ನವಾಗುತ್ತದೆ. ಸ್ವತಃ ಎಲ್ಲ ವೇದಗಳ ಅರ್ಥವನ್ನು ದೇವತೆಗಳು ತಿಳಿದಿದ್ದರಿಂದ ವೈದುಷ್ಯವೂ ಕೂಡ ಯುಕ್ತವಾಗುತ್ತದೆ. ಆದ್ದರಿಂದ ದೇವತೆಗಳಿಗೆ ಉಪಾಸನಾಧಿಕಾರವು ಇರುತ್ತದೆಂದು ಶೈವರ ಸಿದ್ಧಾಂತ.

ಅದ್ವೈತಮತದ ನಿರಾಕರಣೆಯಿಂದಲೇ ಇವರ ಮತವನ್ನೂ ಕೂಡ ನಿರಾಕರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

**प्रकाशः** – प्रागुक्तदोषात् । देवलोकपरब्रह्मलोकयोर्भेदस्य ''कर्मचितो लोकः क्षीयते । अक्षय्यं पदम्'' इत्याद्यनेकमानमितत्वेनास्मद्रीत्यैवार्थित्वाभावस्योपपादनीयत्वाच्च ।

ಅದ್ವೈತಿಗಳಿಗೆ ಹೇಳಿದ ದೋಷಗಳು ಇವರಿಗೂ ಕೂಡ ಬರುತ್ತವೆ. ಮತ್ತು ದೇವಲೋಕ, ಪರಬ್ರಹ್ಮಲೋಕಗಳಿಗೆ ಭೇದವನ್ನು ಹೇಳುವಂತಹ 'ಕರ್ಮಚಿತೋ ಲೋಕಃ ಕ್ಷೀಯತೇ । ಅಕ್ಷಯ್ಯಂ ಪದಮ್' ಇತ್ಯಾದಿ ಅನೇಕ ವಚನಗಳಿರುತ್ತವೆ. ಆದ್ದರಿಂದ ನಾವು ಹೇಳುವಂತೆ ಅರ್ಥಿತ್ವಾಭಾವವನ್ನು ಹೇಳಬೇಕು. ಆದ್ದರಿಂದ ಶೈವರನಿರೂಪಣೆಯು ಅಸಾಧುವಾಗಿದೆ.

**प्रकाशः** – ''ताभिरेनं रुद्रोऽन्वायत्त'' इति ''रुद्रेणैव मुखेन'' इति ''तद्रुद्रा उपजीवन्ति'' इत्यादिना रुद्रस्याप्युपासनाधिकारिवर्गप्रविष्टत्वेन तस्योपास्यकोटिप्रवेशायोगाच्च ।

ಮತ್ತು ರುದ್ರದೇವರು ಉಪಾಸಕರೇ ಹೊರತು, ಉಪಾಸ್ಯರಾಗಲು ಸಾಧ್ಯವಿಲ್ಲ. ಏಕೆಂದರೆ ಛಾಂದೋಗ್ಯೋಪನಿಷತ್ತಿನಲ್ಲಿ 'ತಾಭಿರೇನಂ ರುದ್ರೋऽನ್ವಾಯತ್ತ' ಇತ್ಯಾದಿ ಮಂತ್ರಗಳಿಂದ ಕಣ್ಣಿನಲ್ಲಿರುವ ಕೆಂಪುಗೆರೆಗಳಲ್ಲಿ ರುದ್ರದೇವರು ಕುಳಿತು ವಾಯುದೇವರ ಅಂತರ್ಗತನಾದ ಪರಮಾತ್ಮನನ್ನು ಉಪಾಸನೆ ಮಾಡುತ್ತಾರೆಂದು ವರ್ಣಿಸಲಾಗಿದೆ. ಇದರಂತೆ ಮಧುವಿದ್ಯೆಯಲ್ಲಿ 'ರುದ್ರೇಣೈವ ಮುಖೇನ' ಎಂಬುದಾಗಿ ರುದ್ರದೇವರನ್ನೇ ಪ್ರಧಾನವನ್ನಾಗಿಟ್ಟುಕೊಂಡು, ಏಕಾದಶರುದ್ರರು ಉಪಾಸನೆ ಮಾಡಿದರೆಂದು ಹೇಳಲಾಗಿದೆ. ಮತ್ತು 'ತದ್ರುದ್ರಾ, ಉಪಜೀವಂತಿ' ಎಂಬ ವಾಕ್ಯದಲ್ಲೂ ಕೂಡ ರುದ್ರದೇವರು ಉಪಾಸನಾಧಿಕಾರಿಗಳೆಂದು ಹೇಳಲಾಗಿದೆ. ಆದ್ದರಿಂದ ಇವರನ್ನು ಉಪಾಸ್ಯರೆಂದು ಹೇಳಲು ಸಾಧ್ಯವಿಲ್ಲ.

**प्रकाशः** – यच्चाद्यसूत्रे तदिति भिन्नं पदं लुप्तषष्ठीकम् । पूरणगुणेति समासनिषेधादिति । तन्न । निर्वाहस्योक्तत्वात् । द्वितीयादिसूत्रार्थोऽपि प्राग्वन्निरसनीयः ।

ಇನ್ನು ಪ್ರಥಮಸೂತ್ರದಲ್ಲಿ 'ತದುಪರಿ' ಎಂಬಲ್ಲಿರುವ 'ತತ್' ಪದವು ಭಿನ್ನವಾದ ಲುಪ್ತಷಷ್ಠೀಕವಾದ ಪದವಾಗಿದೆ. 'ಉಪರಿ' ಎಂಬುದೇ ಬೇರೆ ಪದವಾಗಿದೆ. ಏಕೆಂದರೆ 'ಪೂರಣಗುಣ' ಇತ್ಯಾದಿ ಸೂತ್ರವು ಅವ್ಯಯದ ಜೊತೆಗೆ ಷಷ್ಠೀಸಮಾಸವನ್ನು ನಿಷೇಧಮಾಡುತ್ತಿದೆಯೆಂದು ವ್ಯಾಖ್ಯಾನ ಮಾಡುತ್ತಾರೆ. ಈಗಾಗಲೇ ನಾವು ಸಮರ್ಥನೆ ಮಾಡಿದಂತೆ ಹಿಂದಿನ-ಮುಂದಿನ ಸೂತ್ರಗಳಲ್ಲಿ ಕೃದಂತವಾದ ಅವ್ಯಯಗಳೇ ಪ್ರಸಕ್ತವಾದ್ದರಿಂದ 'ಪೂರಣಗುಣ' ಇತ್ಯಾದಿ ಸೂತ್ರವೂ ಕೂಡ ಕೃದಂತವಾದ ಅವ್ಯಯದ ಜೊತೆಗೆ ಷಷ್ಠೀಸಮಾಸವನ್ನು ನಿಷೇಧಮಾಡುತ್ತಿದೆ. 'ಉಪರಿ' ಎಂಬುದು ಕೃದಂತವಾದ ಅವ್ಯಯವಲ್ಲದ ಕಾರಣ, ಷಷ್ಠೀಸಮಾಸವನ್ನು ಸೂತ್ರವು ನಿಷೇಧ ಮಾಡುವುದಿಲ್ಲ. ಆದ್ದರಿಂದ 'ತತ್' ಎಂಬುದನ್ನು ಭಿನ್ನಪದವೆಂದು ಹೇಳುವ ಅವಶ್ಯಕತೆಯಿರುವುದಿಲ್ಲ. ಅಥವಾ 'ತಸ್ಮಾದುಪರಿ' ಎಂಬುದಾಗಿ ಪಂಚಮೀ ಸಮಾಸವನ್ನೂ ಕೂಡ

ಈ ಸೂತ್ರದಿಂದ ವೇದನಿತ್ಯತ್ವವನ್ನು ಸಮರ್ಥನೆ ಮಾಡಿದಂತಾಯಿತು. ಇದು ಪ್ರಕೃತ ಅನುಪಯುಕ್ತವಾಗಿದೆ. ಮತ್ತು ಹಿಂದೆ ಹೇಳಿದ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳಿದಂತಾಗದ ಕಾರಣ, 'ಚ' ಶಬ್ದವು ಅನುಪಪನ್ನವಾಗುತ್ತದೆ. ಹೀಗೆ ಪ್ರತಿಯೊಂದು ಸೂತ್ರಗಳಲ್ಲಿಯೂ ಅನೇಕ ದೋಷಗಳಿರುತ್ತದೆ. ಗ್ರಂಥಗೌರವ ಭಯದಿಂದ ಇಲ್ಲಿಗೆ ನಿಲ್ಲಿಸುತ್ತೇವೆ. ಇನ್ನು ಹೆಚ್ಚಿನ ದೋಷವನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು.

**प्रकाशः –** यत्कश्चिदाह ''ततो देवा रुद्रं नापश्यन् । ते देवा रुद्रं ध्यायन्ति'' इत्यत्रोक्तो देवानामुपासनाधिकारो न युक्तोऽथ युक्त इति संशये पूर्वोक्तरीत्या विग्रहाभावेन सामर्थ्याभावात् ''देवा ह वै स्वर्गं लोकमगमन् । ते देवा रुद्रमपृच्छन्'' इति देवलोकस्य परब्रह्मपदस्य चैकार्थत्वावगमेनार्थित्वायोगादुपनयनाभावेन वैदुष्यायोगाज्जडत्वेनानधिकार इति प्राप्ते

ಶೈವರ ಅಧಿಕರಣ ಶರೀರ ಹೀಗಿದೆ - 'ತತೋ ದೇವಾ ರುದ್ರಂ ನಾಪಶ್ಯನ್ । ತೇ ದೇವಾ ರುದ್ರಂ ಧ್ಯಾಯಂತಿ' ಎಂಬ ವಾಕ್ಯದಲ್ಲಿ ದೇವತೆಗಳು ರುದ್ರನನ್ನು ಉಪಾಸನೆ ಮಾಡುವಂತಹ ಅಧಿಕಾರವನ್ನು ಹೊಂದಿಲ್ಲವೋ, ಅಥವಾ ಹೊಂದಿದ್ದಾರೋ? ಎಂದು ಸಂಶಯ.

ಹಿಂದೆ ಹೇಳಿದಂತೆ ದೇವತೆಗಳಿಗೆ ಶರೀರವೇ ಇಲ್ಲದ ಕಾರಣ ಸಾಮರ್ಥ್ಯವಿರುವುದಿಲ್ಲ. ಮತ್ತು 'ದೇವಾ ಹ ವೈ ಸ್ವರ್ಗಂ ಲೋಕಮಗಮನ್ । ತೇ ದೇವಾ ರುದ್ರಮಪೃಚ್ಛನ್' ಎಂಬುದಾಗಿ ಪರಬ್ರಹ್ಮಸ್ಥಾನವೆನಿಸಿದ ಸ್ವರ್ಗಲೋಕವನ್ನು ಈಗಾಗಲೇ ದೇವತೆಗಳು ಹೊಂದಿರುವುದರಿಂದ, ಅರ್ಥಿತ್ವವೂ ಕೂಡ ಯುಕ್ತವಾಗುವುದಿಲ್ಲ. ಉಪನಯನಸಂಸ್ಕಾರವಿಲ್ಲದ ಕಾರಣ ವೇದಾಧ್ಯಯನವನ್ನೂ ಕೂಡ ಮಾಡಲು ಸಾಧ್ಯವಿಲ್ಲದ್ದರಿಂದ ವೈದುಷ್ಯವೂ ಸಹ ಅವರಲ್ಲಿರುವುದಿಲ್ಲ. ಹೀಗೆ ಸಾಮರ್ಥ್ಯ, ಅರ್ಥಿತ್ವ, ವೈದುಷ್ಯ ಮೂರು ಬಗೆಯ ಅಧಿಕಾರ ಧರ್ಮಗಳು ದೇವತೆಗಳಲ್ಲಿ ಬರುವುದಿಲ್ಲ. ಅಷ್ಟೇ ಅಲ್ಲದೇ, ಅವರು ಜಡರೂಪರಾದ್ದರಿಂದ, ಉಪಸನಾಧಿಕಾರವು ಸರ್ವಥಾ ಯುಕ್ತವಾಗುವುದಿಲ್ಲವೆಂದು ಪೂರ್ವಪಕ್ಷ.

**प्रकाशः –** विग्रहलोकभेदस्वयंप्रतिभातवेदत्वाभ्युपगमेनास्त्यधिकार इति सिद्धान्त इति तदनेनैव निरस्तम् ।

ದೇವತೆಗಳಿಗೆ ಶರೀರವು ಇರುವುದರಿಂದ ಸಾಮರ್ಥ್ಯವಿರುತ್ತದೆ. ಸ್ವರ್ಗಲೋಕವೇ ಬೇರೆ, ಶಿವಲೋಕವೇ ಬೇರೆ ಎಂಬ ಲೋಕಭೇದವಿರುವುದರಿಂದ ಅರ್ಥಿತ್ವವು ಉಪಪನ್ನವಾಗುತ್ತದೆ. ಸ್ವತಃ ಎಲ್ಲ ವೇದಗಳ ಅರ್ಥವನ್ನು ದೇವತೆಗಳು ತಿಳಿದಿದ್ದರಿಂದ ವೈದುಷ್ಯವೂ ಕೂಡ ಯುಕ್ತವಾಗುತ್ತದೆ. ಆದ್ದರಿಂದ ದೇವತೆಗಳಿಗೆ ಉಪಾಸನಾಧಿಕಾರವು ಇರುತ್ತದೆಂದು ಶೈವರ ಸಿದ್ಧಾಂತ.

ಅದ್ವೈತಮತದ ನಿರಾಕರಣೆಯಿಂದಲೇ ಇವರ ಮತವನ್ನೂ ಕೂಡ ನಿರಾಕರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

**प्रकाशः** – प्रागुक्तदोषात् । देवलोकपरब्रह्मलोकयोर्भेदस्य ''कर्मचितो लोकः क्षीयते । अक्षय्यं पदम्'' इत्याद्यनेकमानमितत्वेनास्मद्रीत्यैवार्थित्वाभावस्योपपादनीयत्वाच्च ।

ಅದ್ವೈತಿಗಳಿಗೆ ಹೇಳಿದ ದೋಷಗಳು ಇವರಿಗೂ ಕೂಡ ಬರುತ್ತವೆ. ಮತ್ತು ದೇವಲೋಕ, ಪರಬ್ರಹ್ಮಲೋಕಗಳಿಗೆ ಭೇದವನ್ನು ಹೇಳುವಂತಹ 'ಕರ್ಮಚಿತೋ ಲೋಕಃ ಕ್ಷೀಯತೇ । ಅಕ್ಷಯ್ಯಂ ಪದಮ್' ಇತ್ಯಾದಿ ಅನೇಕ ವಚನಗಳಿರುತ್ತವೆ. ಆದ್ದರಿಂದ ನಾವು ಹೇಳುವಂತೆ ಅರ್ಥಿತ್ವಾಭಾವವನ್ನು ಹೇಳಬೇಕು. ಆದ್ದರಿಂದ ಶೈವರನಿರೂಪಣೆಯು ಅಸಾಧುವಾಗಿದೆ.

**प्रकाशः** – ''ताभिरेनं रुद्रोऽन्वायत्त'' इति ''रुद्रेणैव मुखेन'' इति ''तद्रुद्रा उपजीवन्ति'' इत्यादिना रुद्रस्याप्युपासनाधिकारिवर्गप्रविष्टत्वेन तस्योपास्यकोटिप्रवेशायोगाच्च ।

ಮತ್ತು ರುದ್ರದೇವರು ಉಪಾಸಕರೇ ಹೊರತು, ಉಪಾಸ್ಯರಾಗಲು ಸಾಧ್ಯವಿಲ್ಲ. ಏಕೆಂದರೆ ಛಾಂದೋಗ್ಯೋಪನಿಷತ್ತಿನಲ್ಲಿ 'ತಾಭಿರೇನಂ ರುದ್ರೋಽನ್ವಾಯತ್ತ' ಇತ್ಯಾದಿ ಮಂತ್ರಗಳಿಂದ ಕಣ್ಣಿನಲ್ಲಿರುವ ಕೆಂಪುಗೆರೆಗಳಲ್ಲಿ ರುದ್ರದೇವರು ಕುಳಿತು ವಾಯುದೇವರ ಅಂತರ್ಗತನಾದ ಪರಮಾತ್ಮನನ್ನು ಉಪಾಸನೆ ಮಾಡುತ್ತಾರೆಂದು ವರ್ಣಿಸಲಾಗಿದೆ. ಇದರಂತೆ ಮಧುವಿದ್ಯೆಯಲ್ಲಿ 'ರುದ್ರೇಣೈವ ಮುಖೇನ' ಎಂಬುದಾಗಿ ರುದ್ರದೇವರನ್ನೇ ಪ್ರಧಾನವನ್ನಾಗಿಟ್ಟುಕೊಂಡು, ಏಕಾದಶರುದ್ರರು ಉಪಾಸನೆ ಮಾಡಿದರೆಂದು ಹೇಳಲಾಗಿದೆ. ಮತ್ತು 'ತದ್ರುದ್ರಾ ಉಪಜೀವಂತಿ' ಎಂಬ ವಾಕ್ಯದಲ್ಲೂ ಕೂಡ ರುದ್ರದೇವರು ಉಪಾಸನಾಧಿಕಾರಿಗಳೆಂದು ಹೇಳಲಾಗಿದೆ. ಆದ್ದರಿಂದ ಇವರನ್ನು ಉಪಾಸ್ಯರೆಂದು ಹೇಳಲು ಸಾಧ್ಯವಿಲ್ಲ.

**प्रकाशः** – यच्चाद्यसूत्रे तदिति भिन्नं पदं लुप्तषष्ठीकम् । पूरणगुणेति समासनिषेधादिति । तन्न । निर्वाहस्योक्तत्वात् । द्वितीयादिसूत्रार्थोऽपि प्राग्वन्निरसनीयः ।

ಇನ್ನು ಪ್ರಥಮಸೂತ್ರದಲ್ಲಿ 'ತದುಪರಿ' ಎಂಬಲ್ಲಿರುವ 'ತತ್' ಪದವು ಭಿನ್ನವಾದ ಲುಪ್ತಷಷ್ಠೀಕವಾದ ಪದವಾಗಿದೆ. 'ಉಪರಿ' ಎಂಬುದೇ ಬೇರೆ ಪದವಾಗಿದೆ. ಏಕೆಂದರೆ 'ಪೂರಣಗುಣ' ಇತ್ಯಾದಿ ಸೂತ್ರವು ಅವ್ಯಯದ ಜೊತೆಗೆ ಷಷ್ಠೀಸಮಾಸವನ್ನು ನಿಷೇಧಮಾಡುತ್ತಿದೆಯೆಂದು ವ್ಯಾಖ್ಯಾನ ಮಾಡುತ್ತಾರೆ. ಈಗಾಗಲೇ ನಾವು ಸಮರ್ಥನೆ ಮಾಡಿದಂತೆ ಹಿಂದಿನ-ಮುಂದಿನ ಸೂತ್ರಗಳಲ್ಲಿ ಕೃದಂತವಾದ ಅವ್ಯಯಗಳೇ ಪ್ರಸಕ್ತವಾದ್ದರಿಂದ 'ಪೂರಣಗುಣ' ಇತ್ಯಾದಿ ಸೂತ್ರವೂ ಕೂಡ ಕೃದಂತವಾದ ಅವ್ಯಯದ ಜೊತೆಗೆ ಷಷ್ಠೀಸಮಾಸವನ್ನು ನಿಷೇಧಮಾಡುತ್ತಿದೆ. 'ಉಪರಿ' ಎಂಬುದು ಕೃದಂತವಾದ ಅವ್ಯಯವಲ್ಲದ ಕಾರಣ, ಷಷ್ಠೀಸಮಾಸವನ್ನು ಸೂತ್ರವು ನಿಷೇಧ ಮಾಡುವುದಿಲ್ಲ. ಆದ್ದರಿಂದ 'ತತ್' ಎಂಬುದನ್ನು ಭಿನ್ನಪದವೆಂದು ಹೇಳುವ ಅವಶ್ಯಕತೆಯಿರುವುದಿಲ್ಲ. ಅಥವಾ 'ತಸ್ಮಾದುಪರಿ' ಎಂಬುದಾಗಿ ಪಂಚಮೀ ಸಮಾಸವನ್ನೂ ಕೂಡ

ಮಾಡಬಹುದು. ದ್ವಿತೀಯಾದಿ ಸೂತ್ರಗಳ ವ್ಯಾಖ್ಯಾನವನ್ನು ಅದ್ವೈತಿಗಳಂತೆ ಶೈವರೂ ಸಹ ಮಾಡಿರುತ್ತಾರೆ. ಆದ್ದರಿಂದ ಪ್ರತ್ಯೇಕವಾಗಿ ಅವುಗಳನ್ನು ನಿರಾಕರಿಸಬೇಕಾಗಿಲ್ಲ.

**प्रकाशः** – यदत्रोक्तं शिवार्कमणिदीपिकायां पूर्वसूत्रे तदुपरीत्यनेनेन्द्रादेर्हविर्भोक्तृत्वमर्थादुक्तम् । तन्न सम्भवति । युगपदनुष्ठीयमानानेकक्रतुषु सन्निधानेन भोक्तृत्वायोगादिति विरोधशङ्कोदय इति

ಈ ಸಂದರ್ಭದಲ್ಲಿ ಶಿವಾರ್ಕಮಣಿದೀಪಿಕೆಯಲ್ಲಿ ಪ್ರಥಮಸೂತ್ರವನ್ನು ಹೀಗೆ ವ್ಯಾಖ್ಯಾನಮಾಡಲಾಗಿದೆ - 'ತದುಪರಿ' ಎಂಬುದರಿಂದ ಇಂದ್ರಾದಿದೇವತೆಗಳಿಗೆ ಹರ್ವಿಭೋಕ್ತೃತ್ವವನ್ನು ಅರ್ಥಾತ್ ಹೇಳಿದಂತಾಗಿದೆ. ಇದು ಕೂಡುವುದಿಲ್ಲ. ಏಕೆಂದರೆ ಒಟ್ಟಿಗೆ ಅನೇಕ ಯಾಗಗಳನ್ನು ಮಾಡುವ ಸಂದರ್ಭದಲ್ಲಿ, ಆ ಎಲ್ಲಾ ಯಾಗಗಳಿಗೂ ಹೋಗಿ, ಹವಿಸ್ಸನ್ನು ತಿನ್ನಲು ಸಾಧ್ಯವಿರುವುದಿಲ್ಲ. ಹೀಗೆ ವಿರೋಧಾಶಂಕೆಯು ಬರುತ್ತದೆಯೆಂದು ವ್ಯಾಖ್ಯಾನ ಮಾಡಲಾಗಿದೆ.

**प्रकाशः** – तन्न । ब्रह्मविद्याधिकारोपयोगिविग्रहादावेव विरोधशङ्कासमाधानौचित्येन तदनुपयुक्तभोक्तृत्वे विरोधशङ्कादेरसङ्गतत्वात् ।

ಇದು ತಪ್ಪು. ನಾವು ಹೇಳಿದಂತೆ ದೇವತೆಗಳು ತಮ್ಮ ಪದವಿಯಿಂದಲೋ, ಅಥವಾ ಶರೀರದಿಂದಲೋ ನಿತ್ಯವಾಗಿ ಇರುವುದಾದರೆ ಮೋಕ್ಷದಲ್ಲಿ ಅಸ್ತಿತ್ವಾದಿಗಳೇ ಕೂಡುವುದಿಲ್ಲ. ಒಂದುವೇಳೆ ಅವರ ಶರೀರ ಮತ್ತು ಪದವಿಗಳು ಅನಿತ್ಯವಾದರೆ, ತದುದ್ದೇಶಕವಾದ ಕರ್ಮಗಳಿಗೆ ವೈಯರ್ಥ್ಯದೋಷಬರುತ್ತದಲ್ಲವೇ? ಎಂದೇ ವಿರೋಧಾಶಂಕೆಯನ್ನು ಮಾಡಲು ಬರುವಾಗ ಹವಿರ್ಭೋಕ್ತೃತ್ವದವಿಷಯದಲ್ಲಿ ವಿರೋಧಾಶಂಕೆ ಮಾಡುವುದು ಅತ್ಯಂತ ಅಸಂಗತವಾಗಿದೆ.

**प्रकाशः** – अग्नौ प्रक्षिप्तस्य तदैव भस्मसाज्जातस्यानेककायधारणेनापि भोक्तृत्वस्य बाधाच्च । तद्द्वारा भोक्तृत्वे च स्वस्थाने स्थितस्याग्निनाऽनीतहविर्भोक्तृत्वसम्भवात् । अत एवाग्नेर्देवदूतत्वप्रसिद्धिरपीत्यास्ताम् ।

ಮತ್ತು ಅಗ್ನಿಯಲ್ಲಿ ಹಾಕುವಂತಹ ಹವಿಸ್ಸನ್ನು ದೇವತೆಗಳು ಹೇಗೆ ಸ್ವೀಕರಿಸುತ್ತಾರೆ? ಆ ಕ್ಷಣದಲ್ಲಿಯೇ ಭಸ್ಮವಾಗುವಂತಹ ಹವಿಸ್ಸನ್ನು ತಿನ್ನಲು ಅನೇಕ ಶರೀರಗಳನ್ನು ಸ್ವೀಕರಿಸಿದರೂ ಸಾಧ್ಯವಾಗುವುದಿಲ್ಲ. ಇನ್ನು ಅಗ್ನಿಯ ಮುಖಾಂತರ ಹವಿಸ್ಸನ್ನು ತಿನ್ನುತ್ತಾರೆಂದರೆ, ತಮ್ಮ ಸ್ಥಾನದಲ್ಲಿದ್ದೇ ಅಗ್ನಿಯಿಂದ ತೆಗೆದುಕೊಂಡು ಕೊಡಲ್ಪಟ್ಟ ಹವಿಸ್ಸನ್ನು ತಿನ್ನಲು ಬರುವಾಗ ತಮ್ಮ ಸ್ಥಾನವನ್ನು ಬಿಟ್ಟು ಯಜ್ಞಮಂಟಪದ ತನಕ ಬರುವ ಅವಶ್ಯಕತೆಯಿರುವುದಿಲ್ಲ. ಮತ್ತು ಅಗ್ನಿಯು ದೇವದೂತನಾಗಿದ್ದಾನೆಂಬ ಪ್ರಸಿದ್ಧಿಯೂ ಕೂಡ ಇರುತ್ತದೆ. ಆದ್ದರಿಂದ ಶೈವರ ಅಧಿಕರಣಶರೀರವು ಅತ್ಯಂತ ಅಸಾಧುವಾಗಿದೆ.

**गुरुराजीयम्** – नन्वधिकारप्रयोजकस्य विशिष्टबुद्ध्यादेस्तिर्यङ्मात्र-निष्ठत्वाभावात्कथं तिरश्चामधिकार इत्यत आह – **अर्वाचीनानामिति** ।। ननु विप्रतिपन्नास्तिर्यंचो नाधिकारिणः । तिर्यक्त्वात् । अर्वाचीनवदित्यनुमान-विरोधात्कथं तिर्यगादीनामधिकार इत्यत आह – **अर्वाचीनेति** ।। **अतिप्रसङ्गादिति** ।। अर्वाचीनानां शूद्रादीनां ब्रह्मविद्यानधिकारदर्शनेन देवानामपि ब्रह्मविद्यायामनधिकारा-नुमानमपि स्यादित्यतिप्रसङ्गादित्यर्थः ।




ದೇವತೆಗಳು ಯಜ್ಞದಲ್ಲಿ ನೀಡುವಂತಹ ಹವಿಸ್ಸನ್ನು ಸ್ವೀಕರಿಸುತ್ತಾರೆ. ಅವರಿಗೆ ಶರೀರವಿರುವುದಾರೆ, ಒಂದೇ ಸಮಯದಲ್ಲಿ ಅನೇಕರು ಮಾಡುವಂತಹ ಯಾಗಗಳಲ್ಲಿ ಅವರ ಉಪಸ್ಥಿತಿಯನ್ನು ಹೇಳಲು ಸಾಧ್ಯವಿರುವುದಿಲ್ಲ. ಆದ್ದರಿಂದ ಕರ್ಮದಲ್ಲಿ ದೇವತೆಗಳ ಉಪಸ್ಥಿತಿಯು ವಿರುದ್ಧವಾಗುತ್ತದಲ್ಲವೇ? ಎಂದು ಪ್ರಶ್ನಿಸಿಕೊಂಡು ದೇವತೆಯೊಬ್ಬನೇ ಆಗಿದ್ದರೂ ಅನೇಕ ರೂಪಗಳನ್ನು ತಾಳುವ ಸಾಮರ್ಥ್ಯವಿರುತ್ತದೆಂದು ಶ್ರುತಿ-ಸ್ಮೃತಿಗಳಲ್ಲಿ ಹೇಳಲಾಗಿದೆ. ಅಂದರೆ ಒಬ್ಬನೇ ಇಂದ್ರನನ್ನು ಉದ್ದೇಶಿಸಿ, ಅನೇಕರು ಹವಿಸ್ಸನ್ನು ನೀಡಬಹುದೆಂದು ವ್ಯಾಖ್ಯಾನ ಮಾಡುತ್ತಾರೆ.

ಇದು ತಪ್ಪು. ಏಕೆಂದರೆ ದೇವತೆಗಳಿಗೆ ಶರೀರವಿದ್ದರೆ ಅನೇಕ ಯಜ್ಞಗಳಲ್ಲಿ ಉಪಸ್ಥಿತಿಯು ಸಾಧ್ಯವಾಗುವುದಿಲ್ಲವೆಂಬ ಪೂರ್ವಪಕ್ಷವೇ ತಪ್ಪು. ದೇವತೆಗಳಿಗೆ ಶರೀರವಿದ್ದರೂ ಕೂಡ ಯಜ್ಞಮಂಟಪವನ್ನು ಕುರಿತು ಅವರು ಹೋಗಬೇಕಾಗಿಲ್ಲ. ತಮ್ಮ ಸ್ಥಾನದಲ್ಲೇ ಕುಳಿತು ಹವಿಸ್ಸಿನ ಭಾಗವನ್ನು ಸ್ವೀಕರಿಸಲು ಸಮರ್ಥರಾಗಿರುತ್ತಾರೆ. ಇನ್ನು 'ಇಂದ್ರಾಗಚ್ಛ' ಎಂಬ ಮಂತ್ರದಲ್ಲಿ ದೇವತೆಗಳ ಆಹ್ವಾನವಿರುವುದರಿಂದ, ಯಜ್ಞಮಂಟಪಕ್ಕೆ ಅವರು ಹೋಗಬೇಕಲ್ಲವೇ? ಎಂದರೆ ಇದರಿಂದಲೇ ಅವರಿಗೆ ಶರೀರವು ಸಿದ್ಧವಾಗುತ್ತದೆ. ಹೀಗಿರುವಾಗ ಪೂರ್ವಪಕ್ಷಕ್ಕೆ ಅವಕಾಶವಿಲ್ಲದಂತಾಯಿತು. ಇದರಂತೆ ಅದ್ವೈತಿಗಳ ಹಾಗೂ ಉಳಿದ ಸೂತ್ರಗಳ ವ್ಯಾಖ್ಯಾನವನ್ನು ಸ್ವತಃ ಶಿಷ್ಯಂದಿರೇ ವಿಮರ್ಶಿಸಬೇಕು.



• • • • •

## ಟೀಕೆಯ ಕಠಿಣಪದಾರ್ಥ

**तात्पर्यचन्द्रिका**

**टीकाक्षरार्थस्तु ।। नाध्यायादिसङ्गतिर्गवेषणीयेति ।। मुखतो व्युत्पाद्येऽधिकारे न साक्षादध्यायसङ्गतिर्गवेषणीयेत्यर्थः । प्रासङ्गिकसङ्गतेस्तत्रापि सत्त्वात् । फलिते देवतोपास्यत्वलिङ्गसमन्वये साक्षात्सङ्गतेरपि सत्त्वाच्च ।**

ಅನುವಾದ - ಟೀಕೆಯಲ್ಲಿ ಕೆಲವು ಕಠಿಣಪದಗಳ ಅರ್ಥ ಹೀಗಿದೆ - 'ನ ಅಧ್ಯಾಯಾದಿ ಸಂಗತಿರ್ಗವೇಷಣೀಯಾ' ಅಧ್ಯಾಯ ಹಾಗೂ ಪಾದಸಂಗತಿಯನ್ನು ಈ ಅಧಿಕರಣಕ್ಕೆ ಹುಡುಕಬಾರದು ಎಂದು ಟೀಕೆಯಲ್ಲಿದೆ. ಇದರ ಅಭಿಪ್ರಾಯ ಹೀಗಿದೆ - ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂಬುದನ್ನೇ ಮುಖ್ಯವಾಗಿ ಈ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಆವಾಗ ನೇರವಾಗಿ ಅಧ್ಯಾಯಸಂಗತಿಯನ್ನು ಹುಡುಕಬೇಕಾಗಿಲ್ಲ. ಏಕೆಂದರೆ ಮುಖ್ಯವಾಗಿ ಯಾವುದನ್ನೂ ಕೂಡ ಸಮನ್ವಯ ಮಾಡದೇ ಕೇವಲ ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂದಷ್ಟೇ ಸಮರ್ಥಿಸಿದ್ದಾರೆ. ಆದರೆ ಪ್ರಾಸಂಗಿಕಸಂಗತಿಯು ಇದ್ದೇ ಇರುತ್ತದೆ.

ಈ ಅಧಿಕರಣದಲ್ಲಿ 'ದೇವತೋಪಾಸ್ಯತ್ವ' ಎಂಬ ಲಿಂಗಸಮನ್ವಯವು ಫಲತಃ ಸಿದ್ಧವಾಗುತ್ತದೆ ಎಂದು ವಿವಕ್ಷಿಸಿದಾಗ ನೇರವಾದ ಸಂಗತಿಯೂ ಕೂಡ ಇರುತ್ತದೆ. ದೇವತೆಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಸಮರ್ಥಿಸಿದಾಗ ಅಂತಹ ದೇವತೆಗಳಿಂದ ಭಗವಂತನು ಉಪಾಸ್ಯನಾಗುತ್ತಾನೆ. ಹಾಗಾಗಿ 'ದೇವೋಪಾಸ್ಯತ್ವ' ಎಂಬ ಲಿಂಗವು ಪರಮಾತ್ಮನಲ್ಲಿ ಸಮನ್ವಯಮಾಡಿದಂತಾಗುತ್ತದೆ. ಆವಾಗ ನೇರವಾದ ಸಂಗತಿಯನ್ನೇ ಹೇಳಬಹುದು.

**पर्वतेतरत्वादीनामपि व्याप्तिरस्ति न वा । आद्यं निरस्यति ।। का नो हानिः पर्वतेतरत्वादीनामपि व्याप्तिरस्ति चेदिति ।। द्वितीयं प्रत्याह ।। अनुमानोपजीव्येन बाधादव्याप्ताविति ।।**

ಪಕ್ಷೇತರತ್ವವು ಉಪಾಧಿಯಾಗುವುದಿಲ್ಲ. ಹಾಗಾಗುವುದಾದರೆ, ಪರ್ವತೇತರತ್ವ ಮೊದಲಾದವೂ ಕೂಡ 'ಪರ್ವತೋ ವಹ್ನಿಮಾನ್‌ಧೂಮಾತ್' ಎಂಬಲ್ಲಿ ಉಪಾಧಿಯೆಂದಾಗಬೇಕಾದೀತು ಎಂದು ಪೂರ್ವಪಕ್ಷಿಯು ಆಕ್ಷೇಪಮಾಡುತ್ತಾನೆ. ಆವಾಗ ಅವನನ್ನು ಕುರಿತು ಹೀಗೆ ಪ್ರಶ್ನಿಸಬೇಕು. ಪರ್ವತೇತರತ್ವಾದಿಗಳಿಗೆ ಸಾಧ್ಯದ ಜೊತೆಗೆ ವ್ಯಾಪ್ತಿಯಿದೆಯೋ, ಇಲ್ಲವೋ? ಎಂದು. ಒಂದು ವೇಳೆ ಸಾಧ್ಯದ ಜೊತೆಗೆ ಪರ್ವತೇತರತ್ವಾದಿಗಳಿಗೆ ವ್ಯಾಪ್ತಿಯಿರುವುದಾದರೆ, 'ಕಾ ನೋ ಹಾನಿಃ

ಪರ್ವತೇತರತ್ವಾದೀನಾಮಪಿ ವ್ಯಾಪ್ತಿರಸ್ತಿ' ಎಂಬ ಟೀಕೆಯು ಹೊರಟಿದೆ. ಅಂದರೆ ವ್ಯಾಪ್ತಿಯಿದ್ದಮೇಲೆ ಪರ್ವತೇತರತ್ವಾದಿಗಳೂ ಕೂಡ ಉಪಾಧಿಯಾಗುತ್ತವೆ. ವ್ಯಾಪ್ತಿಯಿಲ್ಲವೆಂಬ ಎರಡನೆಯ ಪಕ್ಷವನ್ನು 'ಅನುಮಾನೋಪಜೀವ್ಯೇನ ಬಾಧಾದವ್ಯಾಪ್ತೌ' ಎಂಬ ಟೀಕೆಯಿಂದ ನಿರಾಕರಿಸಿದ್ದಾರೆ. ಅಂದರೆ ಅನುಮಾನಕ್ಕೆ ಉಪಜೀವ್ಯವಾದ ಅನುಕೂಲತರ್ಕದಿಂದ ಬಾಧವು ಬರುವುದರಿಂದ ಉಪಾಧಿ ದೋಷವನ್ನು ಹೇಳಲಾಗದು ಎಂದಭಿಪ್ರಾಯ.

**चक्रकापातादिति ।। ईश्वरस्य सर्वज्ञत्वे सिद्धे ''तस्माद्यज्ञात्'' इत्यादिना वेदस्य सर्वज्ञप्रणीतत्वसिद्धिः । तत्सिद्धौ च वेदस्य प्रामाण्यसिद्धिः । तत्सिद्धौ च वेदेनेश्वरस्य सर्वज्ञत्वसिद्धिरिति चक्रकापातादित्यर्थः ।**

'ಚಕ್ರಕಾಪತ್ತಿ' ದೋಷವನ್ನು ಹೀಗೆ ತಿಳಿಯಬೇಕು - ಈಶ್ವರನು ಸರ್ವಜ್ಞನೆಂದು ಸಿದ್ಧವಾದರೆ, 'ತಸ್ಮಾದ್ಯಜ್ಞಾತ್' ಇತ್ಯಾದಿ ವೇದವಾಕ್ಯಕ್ಕೆ ಸರ್ವಜ್ಞಪ್ರಣೀತತ್ವವು ಸಿದ್ಧವಾಗುತ್ತದೆ. ವೇದಕ್ಕೆ ಸರ್ವಜ್ಞಪ್ರಣೀತತ್ವವು ಸಿದ್ಧವಾದರೆ ಮಾತ್ರ ವೇದಕ್ಕೆ ಆಪ್ತೋಕ್ತತ್ವಾತ್ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಪ್ರಾಮಾಣ್ಯವು ಸಿದ್ಧವಾದರೆ ಮಾತ್ರ ವೇದದಿಂದ ಈಶ್ವರನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಹೀಗೆ ಮೂರೂ ಸಹ ಪ್ರತಿಯೊಂದನ್ನೂ ಅಪೇಕ್ಷೆ ಪಟ್ಟಿರುವುದಿಂದ ಚಕ್ರಾಕಾಶ್ರಯ ದೋಷವು ಬರುತ್ತದೆ.

**किं ज्ञानकारणातिरिक्तमात्रजन्यत्वं साध्यं किं वा ज्ञानत्वप्रयोजककारण-जन्यत्वे सत्यतिरिक्तजन्यत्वम् । आद्ये प्रमात्वयुक्तज्ञानस्यापि ज्ञानत्वाद्व्याघात इत्याह – तादृशज्ञानस्यापीति ।। द्वितीयं शङ्कते ।। ज्ञानकारणतदतिरिक्त-जन्यत्वमिति ।।**

'ಜ್ಞಾನಕಾರಣಾತಿರಿಕ್ತಮಾತ್ರಜನ್ಯತ್ವಂ' ಎಂಬುದನ್ನು ಸಾಧ್ಯಮಾಡುತ್ತೀರೋ, ಅಥವಾ 'ಜ್ಞಾನತ್ವ-ಪ್ರಯೋಜಕಕಾರಣಜನ್ಯತ್ವೇ ಸತ್ಯತಿರಿಕ್ತಜನ್ಯತ್ವಮ್' ಎಂಬುದನ್ನು ಸಾಧ್ಯವನ್ನಾಗಿ ಹೇಳುತ್ತೀರೋ? ಪ್ರಥಮಪಕ್ಷದಲ್ಲಿ ಪ್ರಮಾತ್ವಯುಕ್ತವಾದ ಜ್ಞಾನವೂ ಕೂಡ ಜ್ಞಾನವಾಗಿದೆ. ಆದರಲ್ಲಿ ಜ್ಞಾನಕಾರಣಾತಿರಿಕ್ತ ಜನ್ಯತ್ವವು ಇಲ್ಲದ ಕಾರಣ ವ್ಯಾಹತಿ ದೋಷವು ಬರುತ್ತದೆಂದು 'ತಾದೃಶಜ್ಞಾನಸ್ಯಾಪಿ' ಎಂಬ ಟೀಕೆಯಿಂದ ಹೇಳಿದ್ದಾರೆ. ಎರಡನೆಯ ಪಕ್ಷವನ್ನು 'ಜ್ಞಾನಕಾರಣತದತಿರಿಕ್ತಜನ್ಯತ್ವಮ್' ಎಂಬುದರಿಂದ ಆಶಂಕಿಸಿದ್ದಾರೆ.

**विशिष्टाभावविकल्पेन व्याघातस्य समीकरणादिति ।। यथा प्रमायां ज्ञानकारणातिरिक्तकारणमात्रजन्यत्वस्य व्याहतत्वेऽपि ज्ञानकारणमात्रजन्यत्व-रूपविशिष्टाभावो न व्याहतः ।**

ವ್ಯಾಹತಿಯನ್ನು ಪರಿಹಾರ ಮಾಡುವುದಕ್ಕಾಗಿ, ವಿಶಿಷ್ಟಾಭಾವವನ್ನು ಸಾಧ್ಯವನ್ನಾಗಿ ಮಾಡುತ್ತೇವೆ. 'ಪ್ರಮಾ ಜ್ಞಾನಕಾರಣಾತಿರಿಕ್ತಕಾರಣಮಾತ್ರಜನ್ಯ' ಎಂದು ಸಾಧ್ಯದ ಅಭಿಪ್ರಾಯ. ಈಶಪ್ರಮಾದಲ್ಲಿ ಜನ್ಯತ್ವವೆಂಬ ವಿಶೇಷ್ಯವೇ ಇಲ್ಲದ ಕಾರಣ ವಿಶಿಷ್ಟಾಭಾವ ಬರುತ್ತದೆ. ಅಸ್ಮದಾದಿಪ್ರಮಾದಲ್ಲಿ ಜ್ಞಾನಕಾರಣಮಾತ್ರ ಜನ್ಯತ್ವವು ಇರುವುದಿಲ್ಲ. ವಿಶೇಷಣಾಭಾವದಿಂದ ವಿಶಿಷ್ಟಾಭಾವವು ಬರುತ್ತದೆ. ಆದ್ದರಿಂದ ವ್ಯಾಹತಿ ದೋಷಕ್ಕೆ ಅವಕಾಶವಿಲ್ಲ. ಮತ್ತು ಈಶ ಪ್ರಮಾದಲ್ಲಿ ಬಾಧವೂ ಕೂಡ ಇಲ್ಲ.

**तस्य जन्यत्वाभावेन वा जन्यत्वेऽपि ज्ञानकारणातिरिक्तजन्यत्वेन वोपपत्तेः । तथा ज्ञानेऽपि ।**

ಇದರಂತೆ ನಾವೂ ಸಹ 'ಜ್ಞಾನಮ್ ಜ್ಞಾನಕಾರಣಮಾತ್ರಜನ್ಯಮ್ ಭವತಿ' ಎಂದು ಸಾಧಿಸುತ್ತೇವೆ. ಇದೂ ಕೂಡ ವಿಶಿಷ್ಟಾಭಾವವೇ ಆಗಿದೆ. ಜ್ಞಾನವು ಜನ್ಯತ್ವಾಭಾವದಿಂದ ಅಥವಾ ಜ್ಞಾನಕಾರಣದಿಂದ, ಅಥವಾ ಅತಿರಿಕ್ತವಾದ ಕಾರಣದಿಂದಲೂ ಹುಟ್ಟುತ್ತದೆಂದು ವಿಶಿಷ್ಟಾಭಾವವನ್ನು ಹೇಳಬಹುದು.

**यादृच्छिकसंवादस्थलेऽतिरिक्तकारणं विनापि दृष्टायाः भ्रमस्याप्यधिष्ठाननाशे प्रमात्वेन प्रमात्वरहितज्ञानव्यक्तेरभावेन ज्ञानवदनुवृत्तत्वेन दृष्टायाश्च प्रमाया अतिरिक्तकारणजन्यत्वे ज्ञानस्यापि तज्जन्यत्वप्रसङ्गादित्यर्थः ।**

ಧೂಳೀಪಟಲವನ್ನು ನೋಡಿ ಅಗ್ನಿ ಭ್ರಮೆಯು ಬರುತ್ತದೆ. ಯದೃಚ್ಛಯಾ ಅಲ್ಲಿ ಹೋದಾಗ ಅಗ್ನಿಯೂ ಕೂಡ ಇರುತ್ತದೆ. ಆವಾಗ ಅಗ್ನಿಜ್ಞಾನವು 'ಪ್ರಮಾ' ಎಂದೆನಿಸುತ್ತದೆ. ಆದರೆ ಈ ಪ್ರಮಾಗೆ ಕಾರಣೀಭೂತವಾದ ಗುಣವು ಅಲ್ಲಿರುವುದಿಲ್ಲ. ಪ್ರಮಾತ್ವವು ಅತಿರಿಕ್ತಕಾರಣವಿಲ್ಲದಿದ್ದರೂ ಹುಟ್ಟಿದೆ. ಮತ್ತು ಜ್ಞಾನತ್ವವು ಸಕಲಜ್ಞಾನವೃತ್ತಿಯಾಗಿದೆ. ಆದ್ದರಿಂದ ಜ್ಞಾನಕ್ಕೆ ಎಷ್ಟು ಕಾರಣಗಳಿವೆಯೋ, ಅಷ್ಟೇ ಕಾರಣಗಳಿಂದ ಜ್ಞಾನತ್ವವು ಹುಟ್ಟುತ್ತದೆ. ಅಂದರೆ ಪ್ರಮಾತ್ವರಹಿತವಾದ ಜ್ಞಾನವೇ ಇರುವುದಿಲ್ಲ. 'ಇದಂ ರಜತಂ' ಇತ್ಯಾದಿಗಳೂ ಸಹ ಅಧಿಷ್ಠಾನವಿಷಯದಲ್ಲಿ ಪ್ರಮಾವೇ ಆಗಿದೆ. ಹೀಗೆ ಎಲ್ಲೆಡೆ ಪ್ರಮಾತ್ವ ಇದ್ದೇ ಇರುತ್ತದೆ. ಆದ್ದರಿಂದ ಜ್ಞಾನಕ್ಕೆ ಎಷ್ಟು ಕಾರಣಗಳೋ, ಅಷ್ಟೇ ಪ್ರಮಾತ್ವಕ್ಕೂ ಕೂಡ ಕಾರಣಗಳು. ಹಾಗಾಗಿ 'ಯತ್ರ ಗುಣಃ ತತ್ರ ಪ್ರಾಮಾಣ್ಯಂ' 'ಯತ್ರ ಗುಣಃ ನಾಸ್ತಿ, ತತ್ರ ಪ್ರಾಮಾಣ್ಯಂ ನಾಸ್ತಿ' ಎಂದು ಎರಡುಬಗೆಯಲ್ಲಿ ವ್ಯಾಪ್ತಿಯನ್ನು ಹೇಳಿದಿರಿ. ಇಲ್ಲಿ ವ್ಯತಿರೇಕವ್ಯಾಪ್ತಿಗೆ ವ್ಯಭಿಚಾರವನ್ನು ಹೇಳಿದಂತಾಯಿತು. ಯಾದೃಚ್ಛಿಕಸಂವಾದಸ್ಥಳದಲ್ಲಿ ಗುಣಾಭಾವವಿದೆ. ಆದರೆ ಪ್ರಾಮಾಣ್ಯಾಭಾವವು ಇರುವುದಿಲ್ಲ. ಹೀಗೆ ವ್ಯತಿರೇಕ ವ್ಯಭಿಚಾರ ಬರುತ್ತಿದ್ದರೂ ನೀವು ಪ್ರಮಾತ್ವಕ್ಕೆ ಅತಿರಿಕ್ತಗುಣಜನ್ಯತ್ವವನ್ನು ಹೇಳುವುದಾದರೆ ಜ್ಞಾನತ್ವದಂತೆ ಪ್ರಮಾತ್ವವೂ ಸಹ ಸಕಲಜ್ಞಾನಗಳಲ್ಲಿ ಅನುವೃತ್ತವಾಗಿವೆ. ಆವಾಗ

ಸಕಲಜ್ಞಾನಗಳಂತೆ ಪ್ರಮಾತ್ವವು ಅನುವೃತ್ತವಾದ ಕಾರಣ ಅಲ್ಲಿಯೂ ಅತಿರಿಕ್ತಕಾರಣವನ್ನು ಹೇಳುವುದಾದರೆ, ಜ್ಞಾನದಲ್ಲಿಯೂ ಕೂಡ ನಾವು ಅತಿರಿಕ್ತಕಾರಣವನ್ನು ಹೇಳುತ್ತೇವೆ.

**व्याघात इत्युपलक्षणम् । ईशज्ञानस्य पक्षत्वेऽपि तत्र जन्यत्वाभावेन साध्यसम्भवात्तदंशे बाधोऽपि नेति भावः ॥**

ಟೀಕೆಯಲ್ಲಿ ವ್ಯಾಘಾತದೋಷವನ್ನು ಹೇಳಿದ್ದು ಕೇವಲ ಉಪಲಕ್ಷಣ. ಅಂಶೇಬಾಧದೋಷವೂ ಕೂಡ ಪರಿಹಾರವಾಗುತ್ತದೆ. ಈಶಜ್ಞಾನದಲ್ಲಿ ಜನ್ಯತ್ವಾಭಾವದಿಂದಲೇ ಸಾಧ್ಯವು ಪರ್ಯವಸಾನವಾಗುತ್ತದೆ. ಆದ್ದರಿಂದ ಜ್ಞಾನಕಾರಣಮಾತ್ರಜನ್ಯತ್ವಾಭಾವವು ಬರುತ್ತದೆ. ಇದರಿಂದ ಅಂಶದಲ್ಲಿ ಬಾಧವನ್ನು ಪರಿಹರಿಸಿದಂತಾಯಿತು.

**प्रतिज्ञानिरासेन निरस्तमिति ॥ परतस्त्ववादिनापि गुणत्वजातेरनङ्गीकारेण गुणशब्देन ज्ञानकारणातिरिक्तकारणस्यैव विवक्षणीयत्वेन पूर्वोक्त व्याघाताद्यापत्तेः इत्यर्थः ॥**

'ಪ್ರಮಾ ಗುಣಜನ್ಯಾ ನ ತದನ್ಯವ್ಯತಿರೇಕಿತ್ವಾತ್' ಎಂಬ ಅನುಮಾನವೂ ಕೂಡ ಪ್ರತಿಜ್ಞಾನಿರಾಸದಿಂದ ನಿರಸ್ತವಾಯಿತೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಗುಣಜನ್ಯಾ ಎಂಬುದಕ್ಕೆ ಗುಣತ್ವಜಾತಿವಿಶಿಷ್ಟವಾದ ಗುಣಜನ್ಯ ಅಲ್ಲವೆಂದು ಹೇಳಲಾಗದು. ಏಕೆಂದರೆ ಪರತಸ್ತ್ವವಾದಿಗಳು ಗುಣತ್ವಜಾತಿಯನ್ನೇ ಒಪ್ಪಿರುವುದಿಲ್ಲ. ಇನ್ನು 'ಪ್ರಮಾಣ್ಯಕಾರಣಂ ಗುಣಃ' ಎಂದು ಹೇಳಬೇಕು. ಆವಾಗ 'ಪ್ರಾಮಾಣ್ಯಂ ಪ್ರಾಮಾಣ್ಯಕಾರಣಜನ್ಯಂ' ಎಂದು ಹೇಳಿದಂತಾಗುತ್ತದೆ. ಇದನ್ನು ಪ್ರತ್ಯೇಕವಾಗಿ ಸಾಧಿಸುವ ಅವಶ್ಯಕತೆಯಿರುವುದಿಲ್ಲ. ಆದ್ದರಿಂದ ಜ್ಞಾನಕಾರಣ-ಅತಿರಿಕ್ತಕಾರಣ ಎಂದರ್ಥ. ಹೀಗೆ ಹೇಳಿದಾಗ, 'ಪ್ರಮಾಜ್ಞಾನಕಾರಣಾತಿರಿಕ್ತಕಾರಣಜನ್ಯನಾ' ಎಂಬ ಹಿಂದಿನ ಅನುಮಾನದ ಪ್ರತಿಜ್ಞೆಯನ್ನೇ ಪುನಃ ಮಾಡಿದಂತಾಯಿತು. ಅದರಿಂದಲೇ ಇದೂ ಕೂಡ ನಿರಸ್ತವಾಯಿತು. ಏಕೆಂದರೆ ಪ್ರತಿಜ್ಞೆಗೆ ವ್ಯಾಘಾತದೋಷವನ್ನು ಹೇಳಿದ್ದರಿಂದ ಆ ದೋಷವು ಪುನಃ ಇಲ್ಲಿಯೂ ಬಂದಂತಾಯಿತು.

**अजन्यप्रमात्वमिति ॥ जन्यप्रमात्वाभाव इत्यर्थः ॥ व्याप्त्यभावादिति ॥ यादृच्छिकसंवादिदुष्टवाक्यजन्यप्रमायां साध्ये सत्यप्युपाध्यभावादित्यर्थः ॥ तदभावादेवेति ॥ प्रामाण्यस्य साधितत्वेनाप्रामाण्यस्याभावादेवेत्यर्थः ॥**

'ಅಜನ್ಯಪ್ರಮಾತ್ವಮ್' ಎಂಬುದು ಉಪಾಧಿಯೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅರ್ಥ 'ಜನ್ಯಪ್ರಮಾತ್ವಾಭಾವ' ಎಂದು. ಹಾಗಾದರೆ ವ್ಯಾಪ್ತಿಯಿಲ್ಲವೆಂಬ ದೋಷವನ್ನು ಹೇಗೆ ಹೇಳುವುದು? ಎಂದು 'ವ್ಯಾಪ್ತ್ಯಭಾವಾತ್' ಎಂಬ ಟೀಕೆಯಲ್ಲಿ ಪ್ರಶ್ನಿಸಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಯಾದೃಚ್ಛಿಕಸಂವಾದಿಯಾದ ದುಷ್ಟವಾಕ್ಯಜನ್ಯಪ್ರಮೆಯಲ್ಲಿ ಸಾಧ್ಯವಿದ್ದರೂ ಉಪಾಧಿಯಿರುವುದಿಲ್ಲ. ಆದ್ದರಿಂದ ವ್ಯಾಪ್ತಿಯಿಲ್ಲವೆಂದು ತಿಳಿಯಬೇಕು. 'ತದಭಾವಾದೇವ' ಎಂದರೆ ಪ್ರಾಮಾಣ್ಯವನ್ನು ಸಾಧನೆಮಾಡಿದ್ದರಿಂದ ಅಪ್ರಾಮಾಣ್ಯವಿಲ್ಲದ ಕಾರಣದಿಂದಲೇ ಎಂದರ್ಥ.

**वृश्चिकताण्डुलीयकादिवदिति ।। यथा गोमयतण्डुलकणादिविजातीयजन्यानामपि वृश्चिकत्वताण्डुलीयकत्वादिजातिस्तथैव ब्राह्मणाज्जातस्यापि सर्गादिकालीनस्य ब्राह्मणत्वजातिरित्यर्थः ।। संयोजितवानिति ।। अयं शब्दोऽत्र शक्त इति ज्ञापितवानित्यर्थः ।।**

ಟೀಕೆಯಲ್ಲಿ 'ವೃಶ್ಚಿಕತಾಂಡುಲೀಯಕಾದಿವತ್' ಎಂದು ಇದೆ. ಅಂದರೆ ಬ್ರಾಹ್ಮಣರಿಂದಲೇ ಬ್ರಾಹ್ಮಣರು ಹುಟ್ಟುತ್ತಾರೆಂಬ ಲೋಕನಿಯಮವಿದೆ. ಆದರೆ ಸೃಷ್ಟಿಯ ಆದಿಯಲ್ಲಿ ಈ ನಿಯಮವನ್ನು ಹೇಳುವುದು ಹೇಗೆ? ಎಂದು ಪ್ರಶ್ನಿಸಬಾರದು. ಕೆಲವೊಮ್ಮೆ ನಿಯಮವು ವ್ಯತ್ಯಾಸವಾಗಬಹುದು. ವೃಶ್ಚಿಕದಿಂದಲೇ ವೃಶ್ಚಿಕವು ಹುಟ್ಟಬೇಕು. ಅದರಂತೆ ಕೀಟದಿಂದಲೇ ಕೀಟವು ಹುಟ್ಟಬೇಕು. ಆದರೆ ವಿಜಾತೀಯವಾದ ಗೋಮಯದಿಂದಲೂ ವೃಶ್ಚಿಕವು ಹುಟ್ಟುವುದು ಕಂಡಿದೆ. ಅದರಂತೆ ವಿಜಾತೀಯವಾದ ತಂಡುಲಕಣಗಳಿಂದಲೂ ಕೀಟಗಳು ಹುಟ್ಟುವುದು ಕಂಡಿದೆ. ಅದರಂತೆ ಬ್ರಾಹ್ಮಣರಿಂದಲೇ ಬ್ರಾಹ್ಮಣರು ಹುಟ್ಟಬೇಕಾದರೂ, ಸೃಷ್ಟಿಯ ಆದಿಯಲ್ಲಿ ಪರಮಾತ್ಮನಿಂದ ಎಲ್ಲರೂ ಹುಟ್ಟುತ್ತಾರೆ. ಆದರೂ ಬ್ರಾಹ್ಮಣ, ಶೂದ್ರ ಎಂಬ ಜಾತಿವ್ಯವಸ್ಥೆಯನ್ನು ಮಾಡಬಹುದು.

'ಸಂಯೋಜಿತವಾನ್' ಎಂದರೆ ಈ ಶಬ್ದವು ಈ ಅರ್ಥದಲ್ಲಿ ಶಕ್ತಿವೃತ್ತಿಯನ್ನು ಪಡೆದಿದೆ ಎಂದು ಭಗವಂತನು ತಿಳಿಸಿದನು ಎಂದರ್ಥ.

**नच द्वितीयाद्यमृतविद्यादिष्विति ।। ''तद्यत्प्रथमममृतं तद्वसव उपजीवन्ति'' इत्युक्तप्रथमामृतविद्याया वसुत्वफलकत्वेन तत्र वसूनामनधिकारेऽपि ''अथ यद्द्वितीयममृतं तद्रुद्रा उपजीवन्ति'' इत्यादिनोक्तद्वितीयाद्यमृतविद्यासु रुद्रत्वादेः फलत्वेन तत्राधिकारोऽस्त्विति न वाच्यमित्यर्थः ।।**

'ನಚ ದ್ವಿತೀಯಾದ್ಯಮೃತವಿದ್ಯಾದಿಷು' ಎಂದು ಟೀಕೆಯಲ್ಲಿದೆ - 'ತದ್ಯತ್‌ಪ್ರಥಮಮಮೃತಂ ತದ್ವಸವ ಉಪಜೀವಂತಿ' ಎಂಬುದಾಗಿ ಪ್ರಥಮವಾದ ಅಮೃತವಿದ್ಯೆಯಿಂದ ವಸುಪದವಿಯು

ದೊರೆಯುತ್ತದೆ. ಆದರೆ ದೇವತೆಗಳಿಗೆ ಈಗಾಗಲೇ ವಸುಪದವಿಯು ದೊರೆತದ್ದರಿಂದ ಪುನಃ ಆ ವಿದ್ಯೆಯಲ್ಲಿ ಅಧಿಕಾರವು ಯುಕ್ತವಾಗುವುದಿಲ್ಲ ಎಂದು ಆಕ್ಷೇಪಿಸಲಾಯಿತು. ಆದರೆ ದೇವತೆಗಳಿಗೆ ವಸುಪದವಿಯು ದೊರೆತಿದ್ದರೂ ಅದಕ್ಕಿಂತ ಮೇಲಿನ ರುದ್ರಾದಿಪದವಿಗಳು ದೊರೆತಿಲ್ಲ. 'ಅಥ ಯದ್ ದ್ವಿತೀಯಮಮೃತಂ ತದ್‌ರುದ್ರಾ ಉಪಜೀವಂತಿ' ಎಂಬ ಶ್ರುತಿಯು ಎರಡನೆಯ ಅಮೃತವಿದ್ಯೆಯಿಂದ ರುದ್ರಾದಿಪದವಿಗಳು ದೊರೆಯುತ್ತವೆಂದು ಹೇಳಿದೆ. ಅಂತಹ ದೊರೆಯದಿರುವ ರುದ್ರಾದಿ ಪದವಿಗಳಲ್ಲಿ ಅರ್ಥಿತ್ವವು ಉಪಪನ್ನವಾಗಿ, ಆ ವಿದ್ಯೆಯಲ್ಲಿಯೂ ಅಧಿಕಾರವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು ಎಂದು ಟೀಕೆಯ ಅಭಿಪ್ರಾಯ.

**प्रकाशवानस्मिँल्लोके भवतीत्यादीनामिति ।। ''प्रकाशवानस्मिँल्लोके भवति । प्रकाशवतो ह लोकाञ्जयति'' इत्यादिनोक्तानां ''एष वै सोम्य चतुष्कलः पादो ब्रह्मणः प्रकाशवान्नाम्'' इत्यादिविद्याफलानामस्मिँल्लोके प्रकाशवत्त्वादीनां मधुविद्यादिफलभूतवसुत्वादावन्तर्भावादित्यर्थः ।।**

'ಪ್ರಕಾಶವಾನ್ ಅಸ್ಮಿನ್ ಲೋಕೇ ಭವತಿ ಇತ್ಯಾದೀನಾಮ್' ಎಂದು ಟೀಕೆಯಲ್ಲಿದೆ. ಇದರ ಅಭಿಪ್ರಾಯ ಹೀಗಿದೆ - 'ಪ್ರಕಾಶವಾನಸ್ಮಿನ್‌ಲ್ಲೋಕೇ ಭವತಿ । ಪ್ರಕಾಶವತೋ ಹ ಲೋಕಾನ್‌ಜಯತಿ' ಮತ್ತು 'ಏಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಾಹ್ಮಣಃ ಪ್ರಕಾಶವಾನ್ ನಾಮ' ಇತ್ಯಾದಿ ವಾಕ್ಯಗಳಿಂದ ಮಧುವಿದ್ಯಾದಿಗಳಿಗೆ ಈ ಲೋಕದಲ್ಲಿಯೂ ಪ್ರಕಾಶವಾಗಿರುವಿಕೆ ಮತ್ತು ಮುಂದಿನ ಲೋಕಗಳಲ್ಲಿಯೂ ಪ್ರಕಾಶವಾಗಿರುವಿಕೆಯನ್ನು ಫಲವನ್ನಾಗಿ ಹೇಳಲಾಗಿದೆ. ಈ ಫಲಗಳನ್ನು ಮಧುವಿದ್ಯೆಯ ಫಲವೆನಿಸಿದ ವಸುತ್ವಾದಿಗಳಲ್ಲಿಯೇ ಅಂತರ್ಭಾವವನ್ನು ಮಾಡಬಹುದು ಎಂದರ್ಥ.

**न ह वा एवंविदि किञ्चनानन्नं भवतीत्यादीनां सर्वायोग्यत्वादिति ।। न ह वा एवंविदीत्यादिनोक्तेषु सर्वभोक्तृत्वादिरूपेषु ''ते ह प्राणा अहं श्रेयसि व्यूदिरे'' इत्यादिप्राणविद्याफलेषु रुद्रादेरेव योग्यत्वादित्यर्थः ।।**

'ನ ಹ ವಾ ಏವಂವಿದಿ ಕಿಂಚನಾನನ್ನಂ ಭವತಿ ಇತ್ಯಾದೀನಾಂ ಸರ್ವಾಯೋಗ್ಯತ್ವಾತ್' ಎಂಬ ಟೀಕೆಯ ಅಭಿಪ್ರಾಯ ಹೀಗಿದೆ - 'ನ ಹ ವಾ ಏವಂವಿತ್' ಎಂಬ ವಾಕ್ಯದಿಂದ ಸರ್ವಭೋಕ್ತೃತ್ವವನ್ನು ಫಲವನ್ನಾಗಿ ಹೇಳಲಾಗಿದೆ. ಇದು 'ತೇ ಹ ಪ್ರಾಣಾ ಅಹಂ ಶ್ರೇಯಸಿ ವ್ಯೂದಿರೇ' ಇತ್ಯಾದಿ ಪ್ರಾಣವಿದ್ಯೆಯ ಫಲ. ಇದಕ್ಕೆ ರುದ್ರಾದಿಗಳಷ್ಟೇ ಯೋಗ್ಯರಾಗಿದ್ದಾರೆ. ಆದ್ದರಿಂದ ಎಲ್ಲರಿಗೂ ಎಲ್ಲ ವಿದ್ಯೆಗಳಲ್ಲಿ ಅಧಿಕಾರವಿರುವುದಿಲ್ಲವೆಂದು ತಿಳಿಯಬೇಕು.

प्राचीनपक्षे दोषान्तरं चोक्तं भवतीति ।। न केवलमाद्यपक्षे पूर्वोक्तो वस्वादीनां मधुविद्यादिफले वसुत्वादावधिकाराभावदोषः । किन्तु विद्यासाध्ये वसुत्वादिसाधने ज्ञानेऽप्यर्थित्वाभावदोषः । वस्वादीनां सिद्धज्ञानत्वादित्यर्थः ।।छ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायां देवताधिकरणं सम्पूर्णम् ।।

'ಪ್ರಾಚೀನಪಕ್ಷೇ ದೋಷಾಂತರಂ ಚೋಕ್ತಂ ಭವತಿ' ಎಂದು ಟೀಕೆಯಲ್ಲಿದೆ. ಇದರ ಅಭಿಪ್ರಾಯ ಹೀಗಿದೆ - ಪ್ರಥಮಪಕ್ಷದಲ್ಲಿ ಮಾತ್ರ ಹಿಂದೆ ಹೇಳಿದ ವಸು ಮೊದಲಾದ ದೇವತೆಗಳಿಗೆ ಮಧುವಿದ್ಯೆಯ ಫಲವೆನಿಸಿದ ವಸುಪದವಿಗಳು ದೊರೆತಿದ್ದರಿಂದ ಅಧಿಕಾರವಿಲ್ಲವೆಂಬ ದೋಷವಷ್ಟೇ ಅಲ್ಲ. ಹೊರತಾಗಿ, ಮಧುವಿದ್ಯೆಯಿಂದ ದೊರೆಯುವ ವಸುಪದವಿಗೆ ಕಾರಣವಾದ, ಜ್ಞಾನದಲ್ಲಿಯೂ ಕೂಡ ಅರ್ಥಿತ್ವವು ಉಪಪನ್ನವಾಗುವುದಿಲ್ಲ. ಏಕೆಂದರೆ ಆ ದೇವತೆಗಳಿಗೆ ಈಗಾಗಲೇ ಜ್ಞಾನವು ದೊರೆತದ್ದರಿಂದ ಎಂಬ ದೋಷವನ್ನೂ ಕೂಡ ವಿವಕ್ಷಿಸಬೇಕು.

. ಇಲ್ಲಿಗೆ ಶ್ರೀವ್ಯಾಸತೀರ್ಥಶ್ರೀಪಾದಂಗಳವರಿಂದ ರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ದೇವತಾಧಿಕರಣವು ಸಂಪೂರ್ಣವಾಯಿತು.

**प्रकाशः –**

प्रासङ्गिकत्वान्नाध्यायादिसङ्गतिर्गवेषणीयेति टीका न युक्तेव । प्रसङ्ग-सङ्गतेरेवाभिधानाद्व्याहत्यापत्तेरित्यत आह – मुखत इति ।।

ವಿವರಣೆ - ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳು ಪ್ರಾಸಂಗಿಕವಾಗಿ ಉಲ್ಲೇಖಿತವಾಗಿವೆ ಆದ್ದರಿಂದ ಅಧ್ಯಾಯಸಂಗತಿ ಪಾದಸಂಗತಿಗಳನ್ನು ಹುಡುಕಬೇಕಾಗಿಲ್ಲ ಎಂಬುದಾಗಿ 'ಪ್ರಾಸಂಗಿಕತ್ವಾನ್ನಾಧ್ಯಾಯಾದಿ-ಸಂಗತಿರ್ಗವೇಷಣೀಯಾ' ಎಂಬ ಟೀಕೆಯು ಹೇಳುತ್ತಿದೆ. ಇದು ತಪ್ಪು. ಏಕೆಂದರೆ ಈ ಅಧಿಕರಣಗಳು ಪ್ರಾಸಂಗಿಕವಾಗಿ ಹೊರಟಿವೆ ಎಂಬ ಮಾತಿನಿಂದಲೇ ಸಂಗತಿಯಿರುತ್ತದೆಂದು ತಿಳಿಯುತ್ತದೆ. ಪುನಃ ಸಂಗತಿಯನ್ನು ಹುಡುಕಬಾರದು ಎಂದು ಹೇಳಿದರೆ ವ್ಯಾಹತಿ ಬರುತ್ತದಲ್ಲವೇ? ಪ್ರಶ್ನೆಗೆ 'ಮುಖತಃ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः – सङ्गतिरिति ।।** ब्रह्मण्युभयत्रप्रसिद्धलिङ्गादिसमन्वयरूपेत्यर्थः । तत्रापि अधिकारे व्युत्पाद्येऽपीत्यर्थः ।।

ಬ್ರಹ್ಮನಲ್ಲಿ ಉಭಯತ್ರಪ್ರಸಿದ್ಧವಾದ ಲಿಂಗಾದಿಸಮನ್ವಯರೂಪವಾದ ಸಂಗತಿಯನ್ನು ಎಂದರ್ಥ. 'ತತ್ರಾಪಿ' ಎಂದರೆ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂದು ಸಮರ್ಥನೆ ಮಾಡುವಾಗಲೂ ಸಹ ಎಂದರ್ಥ.

**प्रकाशः – फलित इति ।।** यथा वैश्वानरनाम्नि समन्विते पाचकत्वादिलिङ्गसमन्वयस्य फलितत्वात्तस्य द्वितीये निवेशस्तथाऽत्रापि देवानामधिकारे सिद्धे ''विश्वे देवा उपासते'' इत्युक्तलिङ्गसमन्वयः फलिष्यतीत्यर्थः ।

'ವೈಶ್ವಾನರ' ಎಂಬ ನಾಮಾತ್ಮಕಶಬ್ದವನ್ನು ಸಮನ್ವಯಮಾಡುವಾಗ ಪಾಚಕತ್ವಾದಿಲಿಂಗಗಳ ಸಮನ್ವಯವು ಫಲತಃ ಸಿದ್ಧವಾಗುತ್ತದೆಂಬ ದೃಷ್ಟಿಯಿಂದ ಎರಡನೆಯ ಪಾದದಲ್ಲಿ ವೈಶ್ವಾನರಾಧಿಕರಣವನ್ನು ಹೇಗೆ ಸೇರಿಸಲಾಯಿತೋ, ಅದರಂತೆ ಇಲ್ಲಿಯೂ ಸಹ ದೇವತೆಗಳಿಗೆ ಅಧಿಕಾರವು ಸಿದ್ಧವಾದಾಗ 'ವಿಶ್ವೇ ದೇವಾ ಉಪಾಸತೇ' ಎಂಬಲ್ಲಿ ಹೇಳಲ್ಪಟ್ಟ 'ವಿಶ್ವೇದೇವೋಪಾಸ್ಯತ್ವ' ಎಂಬ ಲಿಂಗದ ಸಮನ್ವಯವು ಫಲತಃ ಸಿದ್ಧವಾಗುತ್ತದೆ ಎಂದು 'ಫಲಿತಃ' ಇತ್ಯಾದಿ ವಾಕ್ಯದ ಅಭಿಪ್ರಾಯ.

**प्रकाशः** – तृतीयसूत्रे कार्यत्वानुमाने शरीरिजन्यत्वस्योपाधित्वमुक्त्वा तत्र व्यर्थविशेषणत्वमाशङ्क्य पक्षव्यावृत्त्यर्थत्वेन सार्थक्येऽभिहिते सति ''पक्षव्यावृत्त्यर्थ-विशेषणवतोऽप्युपाधित्वे पक्षेतरत्वस्याप्यापद्यते तदिति चेत्का नो हानिः पर्वतेतरत्वादीनामपि व्याप्तिरस्ति चेत् । अनुमानोपजीव्येन बाधादव्याप्तौ स्वयं दुष्टत्वात्'' इति वाक्यं दुर्गमत्वाद्व्यनक्ति – **पर्वतेति ।।**

ಮೂರನೆಯ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ತತ್ವಪ್ರಕಾಶಿಕೆಯಲ್ಲಿ 'ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್' ಎಂಬ ಅನುಮಾನಕ್ಕೆ ಶರೀರಿಜನ್ಯತ್ವವನ್ನು ಉಪಾಧಿಯಾನ್ನಾಗಿ ಹೇಳಿರುತ್ತಾರೆ. ಈ ಉಪಾಧಿಯಲ್ಲಿ 'ಶರೀರಿ' ಎಂಬ ವಿಶೇಷಣವು ವ್ಯರ್ಥವಾಗಿದೆ. 'ಯತ್ರಯತ್ರ ಸಕರ್ತೃಕತ್ವಂ ತತ್ರತತ್ರ ಜನ್ಯತ್ವಂ' ಎಂದು ವ್ಯಾಪ್ತಿಯನ್ನು ಹೇಳಿದಾಗ ಎಲ್ಲಿಯೂ ವ್ಯಭಿಚಾರವಿಲ್ಲದ ಕಾರಣ 'ಶರೀರಿ' ಎಂಬ ವಿಶೇಷಣವು ವ್ಯರ್ಥವಾಗಿದೆ. ಕೇವಲ ಜನ್ಯತ್ವವನ್ನು ಉಪಾಧಿಯನ್ನಾಗಿ ಹೇಳಿದರೆ, ಪಕ್ಷದಲ್ಲಿಯೂ ಕೂಡ ಜನ್ಯತ್ವವು ಬರುತ್ತದೆ. ಆವಾಗ ಪಕ್ಷದಲ್ಲಿ ಉಪಾಧಿಯು ಸ್ವಯಂ ವ್ಯಾವೃತ್ತವಾಗಿ ಸಾಧ್ಯವನ್ನೂ ಕೂಡ ವ್ಯಾವೃತ್ತಿ ಮಾಡುತ್ತದೆಂದು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಪಕ್ಷವ್ಯಾವೃತ್ತಿಗೋಸ್ಕರ 'ಶರೀರಿ' ಎಂಬ ವಿಶೇಷಣವು ಸಾರ್ಥಕವಾಗಿರುತ್ತದೆ ಎಂದು ಉತ್ತರಿಸಲಾಗಿದೆ. ಇದರ ಮೇಲೆ ಪುನಃ ಪ್ರಶ್ನೆ ಬರುತ್ತದೆ. ಕೇವಲ

ಪಕ್ಷ ವ್ಯಾವೃತ್ತಿಗೋಸ್ಕರ 'ಶರೀರಿ' ಎಂಬ ವಿಶೇಷಣವು ಸಾರ್ಥಕವಾಗಿದೆಯೆಂದು ಹೇಳುವುದಾದರೆ, ಪಕ್ಷೇತರತ್ವವೂ ಕೂಡ ಉಪಾಧಿಯೆಂದು ಆಗಬೇಕಾದೀತು. ಪಕ್ಷೇತರತ್ವವನ್ನು ಉಪಾಧಿಯೆಂದು ಹೇಳುವುದಾದರೆ, ಸಕಲ ಸದನುಮಾನಗಳೂ ಕೂಡ ದುಷ್ಟವೆಂದಾಗಬೇಕಾದೀತು. ಉದಾ: 'ಪರ್ವತೋವಹ್ನಿಮಾನ್ ಧೂಮಾತ್' ಎಂಬಲ್ಲಿಯೂ ಕೂಡ ಪರ್ವತೇರತ್ವವೂ ಉಪಾಧಿಯೆಂದಾಗಿ ದುಷ್ಟಾಮಾನವಾಗಬೇಕಾದೀತು. ಪರ್ವತೇರತ್ವವನ್ನೂ ಕೂಡ ಉಪಾಧಿಯೆಂದು ಏಕೆ ಹೇಳಬಾರದು. ಒಂದು ವೇಳೆ 'ಯತ್ರಯತ್ರ ಅಗ್ನಿಮತ್ವಂ ತತ್ರತತ್ರ ಪರ್ವತೇರತ್ವಂ' ಎಂಬುದಾಗಿ ವ್ಯಾಪ್ತಿಯು ಇರುವುದಾದರೆ, ಉಪಜೀವ್ಯವಾದ ಅನುಮಾನದಿಂದಲೇ ಬಾಧವು ಬರುತ್ತದೆ. ವ್ಯಾಪ್ತಿಯಿಲ್ಲವೆಂದರೆ ಸ್ವತಃ ದುಷ್ಟವೆಂದಾಗುತ್ತದೆ. ಆದ್ದರಿಂದ ಪರ್ವತೇತರತ್ವವನ್ನು ಉಪಾಧಿಯೆಂದು ಹೇಳಲಾಗದು. ಹಾಗಾಗಿ 'ಪಕ್ಷೇತರತ್ವಮ್' ಎಂಬುದು ಉಪಾಧಿಯಲ್ಲವೆನ್ನಲು ಪರ್ವತೇತರತ್ವವು ಕಾರಣವಾಗುವುದಿಲ್ಲ. ಈ ವಿಷಯವನ್ನು ಟೀಕೆಯಲ್ಲಿ 'ಪಕ್ಷವ್ಯಾವೃತ್ತ್ಯರ್ಥವಿಶೇಷಣವತೋಽಪ್ಯುಪಾಧಿತ್ವೇ ಪಕ್ಷೇತರತ್ವಸ್ಯಾಪ್ಯಾಪದ್ಯತೇ ತದಿತಿ ಚೇತ್ನಾ ನೋ ಹಾನಿಃ । ಪರ್ವತೇತರತ್ವಾದೀನಾಮಪಿ ವ್ಯಾಪ್ತಿರಸ್ತಿ ಚೇತ್ । ಅನುಮಾನೋಪಜೀವ್ಯೇನ ಬಾಧಾದವ್ಯಾಪ್ತೌ ಸ್ವಯಂ ದೃಷ್ಟತ್ವಾತ್' ಈ ವಾಕ್ಯಗಳಿಂದ ಹೇಳಿರುತ್ತಾರೆ. ಇದರ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ ಗ್ರಂಥಕಾರರೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪರ್ವತ' ಇತ್ಯಾದಿ ವಾಕ್ಯದಿಂದ.

**प्रकाशः – अनुमानेति ।।**

अनुकूलेन तर्केण सनाथे सति साधने ।
साध्यव्यापकताभङ्गात् पक्षे नोपाधिसम्भवः ।।

इत्युक्तदिशेत्यर्थः ।

ಎಲ್ಲಿ ಪಕ್ಷೇತರತ್ವವು ಉಪಾಧಿಯಾಗುತ್ತದೋ, ಅಲ್ಲಿ ಅನುಕೂಲ ತರ್ಕದಿಂದ ಪಕ್ಷದಲ್ಲೇ ವ್ಯಾಪ್ತಿಗೆ ಭಂಗಬರುತ್ತದೆ.

'ಅನುಕೂಲೇನ ತರ್ಕೇಣ ಸನಾಥೇ ಸತಿ ಸಾಧನೇ ।
ಸಾಧ್ಯವ್ಯಾಪಕತಾಭಂಗಾತ್ ಪಕ್ಷೇನೋಪಾಧಿಸಂಭವಃ ॥

ಪಕ್ಷೇತರತ್ವವನ್ನು ಉಪಾಧಿಯನ್ನಾಗಿ ಹೇಳಿದಾಗ ಉಪಾಧಿಗೆ ಅನುಕೂಲ ತರ್ಕದ ಸಹಕಾರವಿಲ್ಲದಿದ್ದರೆ, ಸಾಧ್ಯವ್ಯಾಪಕತ್ವವು ಬರುವುದರಿಂದ, ಅದೂ ಸಹ ಉಪಾಧಿಯಾಗುತ್ತದೆ. ಅಂದರೆ ಪಕ್ಷೇತರತ್ವವೂ ಕೂಡ ಉಪಾಧಿಯೆನಿಸುತ್ತದೆ. ಒಂದು ವೇಳೆ ಅನುಮಾನಕ್ಕೆ ಉಪಜೀವ್ಯವಾದ ಅನುಕೂಲ ತರ್ಕವು ಇದ್ದರೆ ಅಂತಹ ಅನುಕೂಲ ತರ್ಕದಿಂದ ಉಪಾಧಿಯ ವ್ಯಾಪ್ತಿಯು ಬಾಧಿತವಾಗುತ್ತದೆ. ಏಕೆಂದರೆ ಅನುಕೂಲ ತರ್ಕದಿಂದ ಪಕ್ಷದಲ್ಲಿ ಉಪಾಧಿಯಿಲ್ಲವೆಂದು ಸಿದ್ಧವಾಗುತ್ತದೆ. ಉಪಾಧಿಯು ಸ್ವತಃ ಬಾಧಿತವಾದ್ದರಿಂದ, ಅನುಮಾನಕ್ಕೆ ತಾನು ಬಾಧಕವಾಗಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅನುಕೂಲ ತರ್ಕವಿಲ್ಲದಿದ್ದಾಗ ಮಾತ್ರ ಪಕ್ಷೇತರತ್ವವು ಉಪಾಧಿಯಾಗುತ್ತದೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – चक्रकमस्पष्टत्वाद्दर्शयति – **ईश्वरस्येति** ।। प्रमा ज्ञानसामग्रीव्यतिरिक्त-कारणजन्या कार्यत्वादित्यनुमाने विकल्पेन व्याहत्यादिना दूषिते सति "प्रमात्वयुक्त ज्ञानस्यैवंविधत्वं साध्यत इति चेत्" इत्याशङ्क्य "तादृशज्ञानस्यापि ज्ञानकारणातिरिक्तकारणजन्यत्वसाधने व्याघातानिस्तारात् । ज्ञानकारणतदतिरिक्त-जन्यत्वं साध्यत इति चेन्न । ईशप्रमायां बाधादित्युक्तम् । तद्दुर्गमत्वाद्विकल्पेन घटयति – **किं ज्ञानेति** ।।

ಚಕ್ರಕಾಶ್ರಯವು ಟೀಕೆಯಲ್ಲಿ ಸ್ಪಷ್ಟವಾಗಿ ತಿಳಿಯದ ಕಾರಣ ಗ್ರಂಥಕಾರರೇ 'ಈಶ್ವರಸ್ಯ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಪ್ರಮಾ ಜ್ಞಾನಸಾಮಗ್ರೀವ್ಯತಿರಿಕ್ತಕಾರಣಜನ್ಯಾ ಕಾರ್ಯತ್ವಾತ್' ಎಂಬ ಅನುಮಾನವನ್ನು ವಿಕಲ್ಪ ಮಾಡಿಕೊಂಡು ವ್ಯಾಹತಿ ಮೊದಲಾದ ದೋಷಗಳಿಂದ ದೂಷಿಸಿದ ಮೇಲೆ ಪುನಃ 'ಪ್ರಮಾತ್ವಯುಕ್ತಜ್ಞಾನಸ್ಯೈವಂವಿಧತ್ವಂ ಸಾಧ್ಯತ ಇತಿ ಚೇತ್' ಎಂದು ಆಶಂಕಿಸುತ್ತಾನೆ. ಅಂದರೆ ಕೇವಲ ಜ್ಞಾನವನ್ನಷ್ಟೇ ನಾವು ಸಾಧನೆ ಮಾಡುತ್ತಿಲ್ಲ. ಪ್ರಮಾತ್ವದಿಂದ ಸಹಿತವಾದ ಜ್ಞಾನವನ್ನು ಸಾಧನೆಮಾಡುತ್ತಿದ್ದೇವೆ. ಪ್ರಮಾತ್ವವು ಜ್ಞಾನಕಾರಣದಿಂದಲೇ ಹುಟ್ಟಬೇಕಾಗಿಲ್ಲ ಎಂದು ಅವನು ಆಶಂಕಿಸಿದಾಗ 'ತಾದೃಶಜ್ಞಾನಸ್ಯಾಪಿ ಜ್ಞಾನಕಾರಣಾತಿರಿಕ್ತಕಾರಣಜನ್ಯತ್ವಸಾಧನೇ ವ್ಯಾಘಾತಾನಿಸ್ತಾರಾತ್ । ಜ್ಞಾನಕಾರಣತದಿತಿರಿಕ್ತಜನ್ಯತ್ವಂ ಸಾಧ್ಯತ ಇತಿ ಚೇನ್ನ । ಈಶಪ್ರಮಾಯಾಂ ಬಾಧಾತ್' ಎಂದು ಉತ್ತರಿಸಿದ್ದಾರೆ. ಅಂದರೆ ಪ್ರಮಾತ್ವಸಹಿತವಾದ 'ಪ್ರಮಾ' ಎಂಬುದೂ ಸಹ ಜ್ಞಾನವೇ ಆಗಿದೆ. ಆದ್ದರಿಂದ ಜ್ಞಾನಕಾರಣದಿಂದಲೇ ಹುಟ್ಟಬೇಕು ಹೊರತು, ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಕಾರಣದಿಂದ ಹುಟ್ಟುತ್ತದೆಂದು ಸಾಧನೆ ಮಾಡಿದರೆ, ವ್ಯಾಘಾತದೋಷವು ಬಂದೇ ಬರುತ್ತದೆ. ಇನ್ನು ಜ್ಞಾನಕಾರಣ ಹಾಗೂ ತದತಿರಿಕ್ತಕಾರಣ ಎರಡರಿಂದಲೂ ಹುಟ್ಟುತ್ತದೆಂದು ಸಾಧನೆ ಮಾಡುತ್ತೇವೆಂದು ಹೇಳಿದರೆ ಈಶಪ್ರಮಾದಲ್ಲಿ ಬಾಧವು ಬರುತ್ತದೆ. ಏಕೆಂದರೆ 'ಈಶಪ್ರಮಾ' ಎಂಬುದು ಜನ್ಯವೇ ಆಗಿರುವುದಿಲ್ಲ. ಈ ಟೀಕಾಮಾತು ಅತ್ಯಂತ ದುರ್ಗಮವಾದ್ದರಿಂದ ವಿಕಲ್ಪ ಮಾಡಿಕೊಂಡು ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂ ಜ್ಞಾನ' ಇತ್ಯಾದಿ ವಾಕ್ಯದಿಂದ.

**प्रकाशः** – "ज्ञानेऽपि कार्यत्वेन तत्साधनसौलभ्यात्" इति पूर्ववाक्ये ज्ञानं ज्ञानकारणमात्रजन्यं न कार्यत्वादित्यपि स्यादिति प्रतिबंध्युक्त्या तर्हि व्याघातस्स्यादित्याशङ्क्योक्तं – **विशिष्टेत्यादि** । तदप्रतीतेर्व्यनक्ति – **यथेति** ।।

'ಜ್ಞಾನೇಽಪಿ ಕಾರ್ಯತ್ವೇನ ತತ್ಸಾಧನಸೌಲಭ್ಯಾತ್' ಎಂಬ ಹಿಂದಿನ ವಾಕ್ಯದಲ್ಲಿ ಆಭಾಸಸಮಾನ-ಯೋಗಕ್ಷೇಮವನ್ನು ಹೇಳಲಾಗಿದೆ. ಅಂದರೆ 'ಜ್ಞಾನಂ ಜ್ಞಾನಕಾರಣಮಾತ್ರಜನ್ಯಂ ನ ಕಾರ್ಯತ್ವಾತ್' ಜ್ಞಾನವು ಕಾರ್ಯವಾದ್ದರಿಂದ ಜ್ಞಾನಕಾರಣದಿಂದಷ್ಟೇ ಜನ್ಯವಲ್ಲ ಎಂದೂ ಸಹ ಅನುಮಾನವನ್ನು ಮಾಡಬೇಕಾದೀತು ಎಂಬ ಪ್ರತಿಬಂಧಿಯನ್ನು ಹೇಳಿದಾಗ ವ್ಯಾಘಾತದೋಷವು ಬರುತ್ತದಲ್ಲವೇ? ಎಂಬ ಆಶಂಕೆಗೆ ನಿಮ್ಮ ಅನುಮಾನದಲ್ಲಿಯೂ ಕೂಡ ಈ ದೋಷವು ಸಮಾನವಾಗಿದೆಯೆಂದು ಉತ್ತರಿಸಿದ್ದಾರೆ. ಅದನ್ನು 'ವಿಶಿಷ್ಟ' ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ. ಟೀಕೆಯ ಈ ಮಾತಿನ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ 'ಯಥಾ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – ननु प्रमात्वस्य ज्ञानत्वन्यूनवृत्तिनस्तथात्वेऽपि ज्ञानकारणजन्यकृत्स्न-ज्ञानवर्तिनो ज्ञानत्वस्य न तथात्वम् । ज्ञानहेतुं विना क्वापि तस्यादृष्टेरित्यत आह – यादृच्छिकेति ॥

ಶಂಕೆ - ಪ್ರಮಾವು ಜ್ಞಾನಕಾರಣದಿಂದ ಜನ್ಯವಾಗಿದೆ. ಆದರೆ ಪ್ರಮಾತ್ವವು ಜ್ಞಾನಕಾರಣ ಅತಿರಿಕ್ತಕಾರಣದಿಂದಲೂ ಸಹ ಜನ್ಯವಾಗಿದೆ. ಏಕೆಂದರೆ ಜ್ಞಾನತ್ವಕ್ಕಿಂತ ಪ್ರಮಾತ್ವವು ನ್ಯೂನವೃತ್ತಿಯಾದ ಧರ್ಮ. ಕೆಲವು ಜ್ಞಾನಗಳಲ್ಲಿ ಪ್ರಮಾತ್ವವಿದೆ. ಕೆಲವು ಜ್ಞಾನಗಳಲ್ಲಿ ಪ್ರಮಾತ್ವವಿರುವುದಿಲ್ಲ. ಹೀಗೆ ಜ್ಞಾನತ್ವಕ್ಕಿಂತ ಕಡಿಮೆ ಸ್ಥಳಗಳಲ್ಲಿ ಪ್ರಮಾತ್ವವಿರುವ ಕಾರಣ ಜ್ಞಾನಕಾರಣಕ್ಕಿಂತ ಅತಿರಿಕ್ತಕಾರಣದಿಂದಲೂ ಜನ್ಯವಾಗಬೇಕು. ಆದರೆ ನಮ್ಮಂತೆ ನಿಮಗೆ ಹೇಳಲಾಗದು. ಜ್ಞಾನತ್ವವಿಶಿಷ್ಟಜ್ಞಾನವು ಜ್ಞಾನಕಾರಣಕ್ಕಿಂತ ಅತಿರಿಕ್ತಕಾರಣದಿಂದಲೂ ಜನ್ಯವಾಗಲಿ ಎಂದು ನೀವು ಹೇಳುತ್ತಿದ್ದೀರಿ. ಜ್ಞಾನವು ಜ್ಞಾನಕಾರಣದಿಂದ ಹುಟ್ಟಿದರೂ ಜ್ಞಾನತ್ವವು ಅತಿರಿಕ್ತಕಾರಣದಿಂದ ಹುಟ್ಟಲು ಹೇಗೆ ಸಾಧ್ಯ ? ಸಕಲ ಜ್ಞಾನಗಳಲ್ಲಿಯೂ ಜ್ಞಾನತ್ವವು ಇರುತ್ತದಷ್ಟೆ. ಹೀಗೆ ಜ್ಞಾನತ್ವಕ್ಕೂ, ಪ್ರಮಾತ್ವಕ್ಕೂ ವ್ಯತ್ಯಾಸವಿರುವ ಪ್ರಯುಕ್ತ ನಮ್ಮಂತೆ ನಿಮಗೆ ಆಕ್ಷೇಪಿಸಲಾಗದು.

ಈ ಶಂಕೆಗೆ 'ಯಾದೃಚ್ಛಿಕ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – ननु तत्रापि विषयाबाध एवातिरिक्तं कारणमिति चेन्न । विषयसत्त्वस्य प्रामाण्यशरीरत्वेन प्रामाण्यं प्रति हेतुत्वाभावात् । स्वतस्त्ववादिना विषयसत्त्वस्य स्वीकृतत्वेन सिद्धसाधनतापत्त्या ततोऽन्यस्यैव कस्यचिद्वक्तव्यत्वेन तस्य तत्राभावात् । विस्तरस्तु तर्कताण्डवे प्रथमपरिच्छेदे द्रष्टव्य इति भावः ।

'ಯಾದೃಚ್ಛಿಕ' ಸಂವಾದಸ್ಥಳದಲ್ಲಿಯೂ ಗುಣವಿದೆ. ಯದೃಚ್ಛೆಯಿಂದ ವಿಷಯವು ಇರುವ ಪ್ರಯುಕ್ತ ವಿಷಯಸತ್ವವೇ ಗುಣವಾಗಿದೆ. ಇಂತಹ ಸ್ಥಳದಲ್ಲಿರುವ ಪ್ರಾಮಾಣ್ಯವು ಗುಣಜನ್ಯವಾಯಿತೆಂದು ಹೇಳಬಾರದು. ಏಕೆಂದರೆ ಪ್ರಾಮಾಣ್ಯವು ವಿಷಯಸತ್ವದಿಂದ ಘಟಿತವಾಗಿದೆ. ಪುನಃ ಅಂತಹ ಪ್ರಾಮಾಣ್ಯಕ್ಕೆ ವಿಷಯಸತ್ವವನ್ನು ಕಾರಣವನ್ನಾಗಿ ಹೇಳಿದರೆ, ಆತ್ಮಾಶ್ರಯ ದೋಷ ಬರುತ್ತದೆ. 'ಯಾಥಾರ್ಥ್ಯಂ ಪ್ರಾಮಾಣ್ಯಂ' ಎಂಬುದಾಗಿ ಪ್ರಮಾಣದ ಲಕ್ಷಣ. 'ಯಾಥಾರ್ಥ್ಯಂ' ಎಂಬುದು ವಿಷಯದ ಸತ್ವವನ್ನಷ್ಟೇ ಹೇಳುತ್ತಿದೆ. ಮತ್ತು ಪರತಸ್ತ್ವವಾದಿಯಾದ ನೀನು ಪ್ರಾಮಾಣ್ಯ ಸ್ವತಸ್ತ್ವವಾದಿಯಾದ ನನ್ನನ್ನು ಕುರಿತು ವಿಷಯಸತ್ತ್ವವನ್ನು ಹೇಳುತ್ತಿದ್ದಿ. ಇದು ಇಷ್ಟಾಪತ್ತಿಯಾದ್ದರಿಂದ ನಮಗೆ ಸಿದ್ಧವೇ ಆಗಿದೆ. ಆದ್ದರಿಂದ ವಿಷಯಸತ್ತ್ವವನ್ನು ಬಿಟ್ಟು ಇತರ ಗುಣಜನ್ಯತ್ವವನ್ನಷ್ಟೇ ನನ್ನನ್ನು ಕುರಿತು ನೀನು ಹೇಳಬೇಕು. ಆವಾಗ ಮಾತ್ರ ಅನಿಷ್ಟಾಪತ್ತಿಯಾಗುತ್ತದೆ. ಅಂತಹ ಗುಣಜನ್ಯತ್ವವನ್ನು ಯಾದೃಚ್ಛಿಕ ಸಂವಾದಸ್ಥಳದಲ್ಲಿ ನಿನಗೆ ತೋರಿಸಲಾಗದು. ಆದ್ದರಿಂದ ವ್ಯತಿರೇಕ-ವ್ಯಭಿಚಾರವು ಬಂದೇ ಬರುತ್ತದೆ. ಇದರ ಹೆಚ್ಚಿನ ವಿಚಾರವನ್ನು ತರ್ಕತಾಂಡವಗ್ರಂಥದ ಪ್ರಥಮಪರಿಚ್ಛೇದವನ್ನು ಓದಿ ತಿಳಿದುಕೊಳ್ಳಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ननु ज्ञानमात्रं पक्षीकृत्य ज्ञानकारणमात्रजन्यत्वाभावे साध्यमाने तत्फलस्यातिरिक्तजन्यत्वस्येशज्ञाने बाधादित्यत आह – व्याघात इत्युपलक्षणमिति ।।

ಶಂಕೆ - ಕೇವಲ ಜ್ಞಾನವನ್ನು ಪಕ್ಷವನ್ನಾಗಿ ಮಾಡಿ, ಜ್ಞಾನಕಾರಣಮಾತ್ರಜನ್ಯತ್ವಾಭಾವವನ್ನು ಸಾಧಿಸಿದರೆ, ಫಲತಃ ಜ್ಞಾನಕಾರಣಕ್ಕಿಂತ ಅತಿರಿಕ್ತವಾದ ಕಾರಣಗಿಂದ ಜನ್ಯವಾಗುತ್ತದೆಂದು ಹೇಳಿದಂತಾಗುತ್ತದೆ. ಆದರೆ ಈಶಜ್ಞಾನದಲ್ಲಿ ಜನ್ಯತ್ವವೇ ಇಲ್ಲದ ಕಾರಣ ಅಂಶೇ ಬಾಧದೋಷವು ಬರುತ್ತದಲ್ಲವೇ?

ಈ ಶಂಕೆಗೆ 'ವ್ಯಾಘಾತ ಇತ್ಯುಪಲಕ್ಷಣಮ್' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यद्यपि व्याघातस्येति वक्तव्यम् । तथापि व्याघातो नेति फलितत्वात्तदभिप्रायेणैवमुक्तिः ।

ಗ್ರಂಥದಲ್ಲಿ 'ವ್ಯಾಘಾತಃ ಇತ್ಯುಪಲಕ್ಷಣಮ್' ಎಂದು ಹೇಳಿದ್ದಾರೆ. ವಸ್ತುತಃ 'ವ್ಯಾಘಾತಸ್ಯ' ಎಂದು ಟೀಕೆಯಲ್ಲಿರುವುದರಿಂದ, ಅದಕ್ಕನುಗುಣವಾಗಿ ಇಲ್ಲಿಯೂ 'ವ್ಯಾಘಾತಸ್ಯ' ಎಂದೇ ಹೇಳಬೇಕಿತ್ತು. ಆದರೆ 'ವ್ಯಾಘಾತಸ್ಯಾಪಿ ಸಮೀಕರಣಾತ್' ಎಂಬ ಟೀಕೆಗೆ ವ್ಯಾಘಾತ ದೋಷವು ಇರುವುದಿಲ್ಲ ಎಂದರ್ಥ. ಆದರ ಅರ್ಥವನ್ನು ಇಲ್ಲಿ ಅನುವಾದಮಾಡಿದ್ದಾರೆಂದು ತಿಳಿಯಬೇಕು.

**प्रकाशः** – यद्यपि कार्यत्वेनेत्युक्त्या तदतिरिक्तं ज्ञानं पक्ष इति लभ्यते । अन्यथा भागासिद्ध्यापत्तेः । तथापि पूर्वं प्रमापक्षकपरोक्तानुमाने भागासिद्धिमवधीर्य तथैवोद्भावनादिहापि तत्पक्षीकारेण दोषोद्धारः कृत इति ध्येयम् ।

ಪ್ರಶ್ನೆ - 'ಜ್ಞಾನಕಾರಣಮಾತ್ರಜನ್ಯಂ ನ ಭವತಿ ಕಾರ್ಯತ್ವಾತ್' ಎಂಬಲ್ಲಿ ಹೇತುವನ್ನು ನೋಡಿದಾಗಲೇ ಈಶಜ್ಞಾನವು ಪಕ್ಷದಲ್ಲಿ ಸೇರುವುದಿಲ್ಲವೆಂದು ಸ್ಪಷ್ಟವಾಗುತ್ತದೆ. ಹೀಗೊಪ್ಪದಿದ್ದರೆ, ಭಾಗಾಸಿದ್ಧಿದೋಷವು ಬರುತ್ತದಲ್ಲವೇ?

ಉತ್ತರ - ಆದರೂ ಸಹ ಪೂರ್ವಪಕ್ಷ ಮಾಡಿದ ಅನುಮಾನದಲ್ಲಿ ಬಾಧದೋಷವನ್ನು ನಾವು ಹೇಳಿದ್ದೇವೆ. ಅದರ ಪರಿಹಾರಕ್ಕಾಗಿ ಪೂರ್ವಪಕ್ಷಿಯು ವಿಶಿಷ್ಟಾಭಾವವನ್ನು ಸಾಧ್ಯವನ್ನಾಗಿ ಹೇಳಿದನು. ಆದರೂ ಕೂಡ ಕಾರ್ಯತ್ವಹೇತುವಿಗೆ ಭಾಗಾಸಿದ್ಧಿದೋಷವು ಬಂದೇ ಬರುತ್ತದೆ. ಪೂರ್ವಪಕ್ಷಿಗೆ ಅಂಶದಲ್ಲಿಬಾಧದ ಬಗ್ಗೆ ಲಕ್ಷ್ಯವಿದೆ ಹೊರತು, ಭಾಗಾಸಿದ್ಧಿದೋಷದ ಬಗ್ಗೆ ಲಕ್ಷ್ಯವಿಲ್ಲ. ಪೂರ್ವಪಕ್ಷಿಯ ಅನುಮಾನವು ಹೇಗೆ ಇದೆಯೋ, ಅದರಂತೆ ನಾವೂ ಕೂಡ ಪ್ರತಿಬಂಧಿಯಾದ ಅನುಮಾನವನ್ನು ಪ್ರಯೋಗಿಸಿದ್ದೇವೆ. ನಮ್ಮ ಅನುಮಾನಕ್ಕೆ ಭಾಗಾಸಿದ್ಧಿದೋಷವನ್ನು ಹೇಳುವುದಾದರೆ ಮೊದಲು ಈ ದೋಷವು ಅವನಿಗೇ ತಾಕುತ್ತದೆ ಎಂಬುದು ಅಭಿಪ್ರಾಯ.

**प्रकाशः** – "प्रमा गुणजन्या तदन्वयव्यतिरेकित्वादित्येतदपि प्रतिज्ञानिरासेन निरस्तम्" इति वाक्यार्थमप्रतीतेराह – **परतस्त्वेति** ।। आदिपदेनेशप्रमायां बाधादिर्ध्येयः ।

"ಪ್ರಮಾ ಗುಣಜನ್ಯಾ ತದನ್ವಯವ್ಯತಿರೇಕಿತ್ವಾತ್' ಎಂಬ ಅನುಮಾನವೂ ಕೂಡ ಪ್ರತಿಜ್ಞೆಯನ್ನು ನಿರಾಕರಣೆ ಮಾಡಿದ್ದರಿಂದಲೇ ನಿರಾಕೃತವಾಯಿತು. ಟೀಕೆಯ ಈ ಮಾತು ಅಸ್ಪಷ್ಟವಾಗಿರುವುದರಿಂದ 'ಪರತಸ್ತ್ವ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಆದಿಪದದಿಂದ ಈಶಪ್ರಮಾದಲ್ಲಿ ಬಾಧಾದಿ-ದೋಷವನ್ನು ತಿಳಿಯಬೇಕು.

**प्रकाशः** – प्रमा गुणजन्या न प्रमात्वादित्यत्र परेणाजन्यप्रमात्वमुपाधिराशङ्कितः । स न युक्तः । घटादौ साध्याव्यापकत्वस्य स्पष्टत्वादित्यत आह – **जन्यप्रमात्वाभाव इति** ।। तर्हि व्याप्त्यभावादिति दूषणं न लगतीत्यत आह – **यादृच्छिकेति** ।।

'ಪ್ರಮಾ ಗುಣಜನ್ಯಾ ನ ಭವತಿ ಪ್ರಮಾತ್ವಾತ್' ಎಂಬ ನಾವು ಪ್ರಯೋಗಿಸಿದ ಅನುಮಾನದಲ್ಲಿ ಪೂರ್ವಪಕ್ಷಿಯು ಅಜನ್ಯಪ್ರಮಾತ್ವವನ್ನು ಉಪಾಧಿಯನ್ನಾಗಿ ಆಶಂಕಿಸಿದ್ದಾನೆ. ಇದು ತಪ್ಪು. ಏಕೆಂದರೆ ಸಾಧ್ಯವ್ಯಾಪಕತ್ವಕ್ಕೆ ಘಟಾದಿಗಳಲ್ಲೇ ವ್ಯಭಿಚಾರವು ಕಾಣಸುತ್ತಿದೆ. ಘಟಾದಿಗಳಲ್ಲಿ ಗುಣಜನ್ಯತ್ವಾಭಾವವಿದ್ದರೂ ಅಜನ್ಯಪ್ರಮಾತ್ವವು ಇರುವುದಿಲ್ಲ. ಈ ಪ್ರಶ್ನೆಗೆ ಅಜನ್ಯಪ್ರಮಾತ್ವಶಬ್ದಕ್ಕೆ 'ಜನ್ಯಪ್ರಮಾತ್ವಾಭಾವಃ' ಎಂಬರ್ಥವನ್ನು ಗ್ರಂಥದಲ್ಲಿ ಹೇಳಿದ್ದಾರೆ. ಹೀಗೆ ಅರ್ಥವನ್ನು ಹೇಳಿದರೆ, ವ್ಯಾಪ್ತಿಯನ್ನು ಹೇಳಲು ಬರುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಯಾದೃಚ್ಛಿಕ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – दुष्टेति साध्यसत्त्वोपपादनम् । तत्रापि गुणजन्यत्वमस्तीति प्रत्युक्तम् ।

ಗ್ರಂಥದಲ್ಲಿ 'ಯಾದೃಚ್ಛಿಕ ಸಂವಾದಿ ದುಷ್ಟವಾಕ್ಯಜನ್ಯಪ್ರಮಾಯಾಂ' ಎಂಬ ವಾಕ್ಯದಲ್ಲಿ 'ದುಷ್ಟವಾಕ್ಯ' ಎಂದು ಹೇಳಿದ್ದರಿಂದ ಯಾದೃಚ್ಛಿಕ ಸಂವಾದಿ ಸ್ಥಳದಲ್ಲಿ 'ಗುಣಜನ್ಯತ್ವಾಭಾವ' ಎಂಬ ಸಾಧ್ಯವಿರುತ್ತದೆಂದು ತಿಳಿಸಿದ್ದಾರೆ. ಯಾದೃಚ್ಛಿಕ ಸಂವಾದ ಸ್ಥಳದಲ್ಲಿಯೂ ವಿಷಯಸತ್ವ ಪ್ರಯುಕ್ತವಾಗಿ ಗುಣಜನ್ಯತ್ವವನ್ನು ಹೇಳಬಹುದಲ್ಲವೇ ಎಂಬ ಪ್ರಶ್ನೆಯನ್ನು ಈಗಾಗಲೇ ನಿರಕಾರಣೆ ಮಾಡಿದ್ದಾಗಿದೆ. ಏಕೆಂದರೆ ವಿಷಯಸತ್ವವನ್ನು ಗುಣವೆಂದು ಹೇಳಬಾರದು.

**प्रकाशः** – "अत एव च" इति सूत्रे "न चाप्रामाण्येनोपपत्तिः । तदभावादेव" इत्युक्तम् । न वाङ्मात्रेण परिहारयोग इत्यतस्तं व्यनक्ति ।। **प्रामाण्यस्येति** ।।

'ಅತ ಏವ ಚ' ಎಂಬ ಸೂತ್ರದಲ್ಲಿ 'ನ ಚಾಪ್ರಾಮಾಣ್ಯೇನೋಪಪತ್ತಿಃ । ತದಭಾವಾದೇವ' ಅಪ್ರಾಮಾಣ್ಯಪ್ರಯುಕ್ತವಾಗಿ ಎಂದು ಹೇಳಿದ್ದಾರೆ. ಅಂದರೆ ಶಬ್ದವು ಪ್ರಮಾಣವಾಗಿರುವುದರಿಂದಲೇ ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಒಪ್ಪಬೇಕು. ದೇವತಾಪ್ರವಾಹಕ್ಕೆ ನಿತ್ಯತ್ವವನ್ನು ಒಪ್ಪದಿದ್ದರೆ ಶಬ್ದಕ್ಕೆ ಅಪ್ರಾಮಾಣ್ಯವನ್ನು ಹೇಳಿದಂತಾಗುತ್ತದೆ ಎಂದು ಹೇಳಿದ್ದಾರೆ. ಶಬ್ದವು ಪ್ರಮಾಣವೆಂಬುದು ಕೇವಲ ಮಾತಿನಿಂದ ಹೇಗೆ ಸಿದ್ಧವಾಗುತ್ತದೆ ? ಎಂದರೆ. ಈಗಾಗಲೇ ಹಿಂದಿನ ಸೂತ್ರದಲ್ಲಿ ಶಬ್ದಕ್ಕೆ ಸ್ವತಃಪ್ರಾಮಾಣ್ಯವನ್ನು ಸಮರ್ಥಿಸಿದ್ದಾಗಿದೆ ಎಂಬ ಉತ್ತರವನ್ನು 'ಪ್ರಾಮಾಣ್ಯಸ್ಯ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः – तत्रैव ''ब्राह्मणादेव ब्राह्मण इति नियमस्य कचिदन्यथात्वोपपत्तेर्वृश्चिकताण्डुलीयकादिवत्'' इत्युक्तम् । तत्र दृष्टान्तांशमप्रतीतेर्विवृणोति ॥ यथेति ॥**

'ಅತ ಏವ ಚ' ಎಂಬ ಸೂತ್ರದಲ್ಲಿಯೇ 'ಬ್ರಾಹ್ಮಣಾದೇವ ಬ್ರಾಹ್ಮಣ ಇತಿ ನಿಯಮಸ್ಯ ಕ್ವಚಿದನ್ಯಥಾತ್ವೋಪಪತ್ತೇರ್ವೃಶ್ಚಿಕತಾಂಡುಲೀಯಕಾದಿವತ್' ಬ್ರಾಹ್ಮಣನಿಂದಲೇ ಬ್ರಾಹ್ಮಣನು ಹುಟ್ಟುತ್ತಾನೆ ಎಂಬ ನಿಯಮವಿರಬಹುದು. ಆದರೆ ಕೆಲವೊಮ್ಮೆ ವ್ಯತ್ಯಾಸ ಮಾಡಬೇಕಾಗುತ್ತದೆ. ವೃಶ್ಚಿಕವು ಗೋಮಯದಿಂದ ಹುಟ್ಟುವಂತೆ ಟೀಕೆಯ ಮಾತಿದೆ. ಈ ವಾಕ್ಯದಲ್ಲಿ ದೃಷ್ಟಾಂತದ ಭಾಗ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದನ್ನು 'ಯಥಾ' ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः – समानेति सूत्रे ''ब्रह्मादिविबुधानां नामानि निर्ममे । ताञ्छब्दांस्तेषु संयोजितवान्'' इति वाक्यमयुक्तमिव । तथात्वे शब्दार्थसम्बन्धस्यौत्पत्तिकत्वानापत्तेरत आह – अयं शब्द इति ॥**

'ಸಮಾನನಾಮರೂಪತ್ವಾಚ್ಚ' ಇತ್ಯಾದಿ ಸೂತ್ರದಲ್ಲಿ 'ಬ್ರಹ್ಮಾದಿವಿಬುಧಾನಾಂ ನಾಮಾನಿ ನಿರ್ಮಮೇ । ತಾನ್‌ಶಬ್ದಾಂಸ್ತೇಷು ಸಂಯೋಜಿತವಾನ್' ಎಂಬ ವಾಕ್ಯವನ್ನು ನೋಡಿದಾಗ, ಶಬ್ದಗಳ ಹಾಗೂ ಅರ್ಥಗಳ ಸಂಬಂಧವು ಔತ್ಪತ್ತಿಕವೆಂದು ಭಾಸವಾಗುತ್ತದೆ. ಇದನ್ನು 'ಅಯಂ ಶಬ್ದಃ' ಎಂಬ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ಅಂದರೆ ಶಬ್ದವೂ ಕೂಡ ನಿತ್ಯವಾಗಿದೆ. ಅದರ ಶಕ್ತಿಯೂ ಕೂಡ ನಿತ್ಯವಾಗಿದೆ. ಕೇವಲ ಈ ಶಬ್ದಕ್ಕೆ ಈ ಪದಾರ್ಥದಲ್ಲಿ ಶಕ್ತಿಯಿದೆ ಎಂಬುದನ್ನಷ್ಟೇ ಪರಮಾತ್ಮನು ತಿಳಿಸುತ್ತಾನೆ ಎಂದಭಿಪ್ರಾಯ.

**प्रकाशः –** कचित्सङ्केतितवानिति टीकापाठः । तत्राप्ययमेवार्थो ध्येयः । संयोजितवानिति प्रतीकं तु बाहुल्याभिप्रायेण । यद्वैतदनुरोधेन पाठान्तरं लेखकदोषमूलमिति कल्प्यम् ।

ಕೆಲವು ಪುಸ್ತಕಗಳಲ್ಲಿ 'ಸಂಕೇತಿತವಾನ್' ಎಂಬ ಪಾಠವಿದೆ. ಇದರ ಪ್ರಕಾರ ಅರ್ಥದಲ್ಲಿ ಶಬ್ದಗಳಿಗೆ ಶಕ್ತಿಯೇ ಇಲ್ಲವೆಂಬ ಭ್ರಾಂತಿ ಬರುತ್ತದೆ. ಆದರೆ 'ಸಂಕೇತಿತವಾನ್' ಎಂಬ ಪದಕ್ಕೂ ಕೂಡ ಈ ಅರ್ಥದಲ್ಲಿ ಇಂತಹ ಶಬ್ದಕ್ಕೆ ಶಕ್ತಿಯಿದೆ ಎಂದು ತಿಳಿಸುತ್ತಾನೆ ಎಂಬರ್ಥವನ್ನೇ ತಿಳಿಯಬೇಕು. 'ಸಂಕೇತಿತವಾನ್' ಎಂದು ಟೀಕಾಪಾಠವಿರುವಾಗ ಗ್ರಂಥಕಾರರು 'ಸಂಯೋಜಿತವಾನ್' ಎಂಬ ಪಾಠವನ್ನೇಕೆ ಸ್ವೀಕರಿಸಿದ್ದಾರೆ ಎಂದರೆ ಅನೇಕ ಪುಸ್ತಕಗಳಲ್ಲಿ 'ಸಂಯೋಜತವಾನ್' ಎಂಬ ಪಾಠವೇ ಇರುವುದರಿಂದ ಬಾಹುಲ್ಯಾಭಿಪ್ರಾಯದಿಂದ ಇದನ್ನು ಸ್ವೀಕರಿಸಿದ್ದಾರೆ. ಅಥವಾ ಜ್ಞಾನಿಗಳಾದ ಗ್ರಂಥಕಾರರು 'ಸಂಯೋಜಿತವಾನ್' ಎಂಬ ಪಾಠವನ್ನು ಸ್ವೀಕರಿಸಿದ್ದರಿಂದ. 'ಸಂಕೇತಿತವಾನ್' ಎಂಬ ಪಾಠವು ಲೇಖಕನ ಪ್ರಮಾದದೋಷದಿಂದ ಪ್ರಚಲಿತವಾಗಿದೆಯೆಂದು ಕಲ್ಪಿಸಬಹುದು.

**प्रकाशः** – मध्वादिष्विति सूत्रे ''नच द्वितीयाद्यमृतविद्यादिषु वस्वादीनामधिकार स्सम्भवतीति वाच्यम्'' इति शङ्कावाक्यं व्यनक्ति ।। **तद्यदिति** ।।

'ಮಧ್ವಾದಿಷು ಸಂಭವಾತ್' ಎಂಬ ಸೂತ್ರದಲ್ಲಿ 'ನಚ ದ್ವಿತೀಯಾದ್ಯಮೃತವಿದ್ಯಾದಿಷು ವಸ್ವಾದೀನಾಮಧಿಕಾರಃ ಸಂಭವತೀತಿ ವಾಚ್ಯಮ್' ವಸುಪದವಿಯನ್ನು ಈಗಾಗಲೇ ದೇವತೆಗಳು ಪಡೆದಿದ್ದರಿಂದ, ದ್ವಿತೀಯಾದ್ಯಮೃತವಿದ್ಯೆಗೆ ಫಲವೆನಿಸಿದ ರುದ್ರಾದಿಪದವಿಗಳಲ್ಲಿ ಅರ್ಥಿತ್ವವಿರುವುದರಿಂದ ಅಧಿಕಾರವನ್ನು ಹೇಳಬಹುದಲ್ಲವೇ? ಎಂಬ ಶಂಕಾವಾಕ್ಯವನ್ನು 'ತದ್ಯತ್' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಅಂದರೆ ಯಾವವಿದ್ಯೆಯಿಂದ ಫಲವು ದೊರೆತಿದೆಯೋ, ಅದರಲ್ಲಿ ಅರ್ಥಿತ್ವವು ದೇವತೆಗಳಿಗೆ ಕೂಡುವುದಿಲ್ಲವೋ, ಅದರಂತೆ ಅಯೋಗ್ಯಫಲವಿಷಯದಲ್ಲಿಯೂ ಅವರಿಗೆ ಅರ್ಥಿತ್ವವು ಕೂಡುವುದಿಲ್ಲವೆಂದು ಅಭಿಪ್ರಾಯ.

**प्रकाशः** – तत्रैव ''सामान्यफलानां प्रकाशवानस्मिँल्लोके भवति' इत्यादीनां तत्फलेऽन्तर्भावात् । 'न ह वा एवंविदि किञ्चनानन्नं भवतीत्यादीनां सर्वायोग्यत्वात्'' इति वाक्यद्वयं क्रमेण व्यनक्ति ।। **प्रकाशवानिति** ।।

'ಮಧ್ವಾದಿಷು' ಎಂಬ ಸೂತ್ರದಲ್ಲಿಯೇ 'ಸಾಮಾನ್ಯಫಲಾನಾಂ ಪ್ರಕಾಶ' ಎಂಬೆರಡು ವಾಕ್ಯಗಳು ಟೀಕೆಯಲ್ಲಿವೆ. ಪ್ರಥಮವಾಕ್ಯದಲ್ಲಿ ಈ ಲೋಕದಲ್ಲಿ ಕೀರ್ತಿಶಾಲಿಯಾಗಿರುವಿಕೆಯು ಮತ್ತು ಪರಲೋಕದಲ್ಲಿಯೂ ಉತ್ತಮವಾದ ಲೋಕವನ್ನೇ ಪಡೆಯುವಿಕೆಯು ಎಂಬ ಫಲವನ್ನು ದೇವತೆಗಳು ಈಗಾಗಲೇ ಪಡೆದಿರುತ್ತಾರೆ ಎಂದು ಹೇಳಲಾಗಿದೆ. ದ್ವಿತೀಯವಾಕ್ಯದಲ್ಲಿ ದೇವತೆಗಳಿಗೆ ಸಕಲ ವಿಧವಾದ ಫಲಗಳಲ್ಲಿ ಅಧಿಕಾರವಿರುವುದಿಲ್ಲವೆಂದು ಹೇಳಲಾಗಿದೆ. ಈ ಎರಡು ವಾಕ್ಯಗಳ ಅಭಿಪ್ರಾಯವನ್ನು ಸ್ಪಷ್ಟವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪ್ರಕಾಶವಾನ್' ಇತ್ಯಾದಿ ಗ್ರಂಥದಿಂದ.

ಪರಿಪೂರ್ಣಚಂದ್ರಿಕಾ

**प्रकाशः** – ज्योतिषीति सूत्रे टीकास्थं वाक्यं व्यनक्ति ।। **न केवलमिति** ।। शिष्टं स्पष्टमुपन्यासमुखेनेति भावः ।। छ ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे देवताधिकरणं सम्पूर्णम् ।।**

'ಜ್ಯೋತಿಷಿ ಭಾವಾಚ್ಚ' ಎಂಬ ಸೂತ್ರದಲ್ಲಿರುವ ಟೀಕಾಮಾತನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ನ ಕೇವಲಮ್' ಎಂಬ ಗ್ರಂಥದಿಂದ. ಉಳಿದ ಟೀಕೆಯಲ್ಲಿರುವ ಕಠಿಣಪದಾರ್ಥಗಳು ಉಪನ್ಯಾಸಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ವ್ಯಾಖ್ಯಾನಿಸಿದ್ದಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ದೇವತಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – ननु पूर्वाधिकरणोक्तसर्वदेवोपास्यत्वाक्षेपनिरासकस्यास्याधिकरणस्य पूर्वाधिकरणस्याध्यायादिसङ्गतत्वेन तत्सङ्गतत्वेनाध्यायादिसङ्गतत्वात् कथमेतत् । नच साक्षादध्यायादिसङ्गत्यभावे तात्पर्यम् । देवतोपास्यत्वरूपलिङ्गसमन्वयस्य साक्षादपि सत्त्वादित्यतः प्रासङ्गिकत्वादध्यायादिसङ्गतिर्न गवेषणीयेति टीकां व्याचष्टे – **मुखत इति** ।। व्याख्याबीजं सूचयति – **प्रासङ्गिकेति**।। का नो हानिरित्यादिटीकाग्रन्थस्य शङ्काज्ञापकचेच्छब्दयुक्तत्वेन शङ्काग्रन्थत्वप्रतीतिनिरासाय विकल्पमुखेन टीकामुत्थापयति – **पर्वतेतरत्वादीनामिति** ।। अनुमानोपजीव्येन बाधादव्याप्तावित्यादिटीकाया अयमर्थः । अव्याप्तौ उपाधेः साध्याव्याप्तौ अनुकूलतर्केण हेतोः साध्यव्याप्यत्वे निर्णीते साध्यव्याप्यहेत्वव्यापकत्वेन पक्ष एव साध्यव्यापकताभङ्गादुपाधिलक्षणानाक्रान्तत्वादनुपाधित्वमिति। चक्रकापातादित्यस्य दुर्बोधत्वात्तद्व्याचष्टे – **ईश्वरस्येति** ।। ज्ञाने व्यभिचारापरिहारादिति टीकाया अयमर्थः । प्रमां पक्षीकुर्वता न प्रमामात्रं पक्षीकर्तुं शक्यम् । ईश्वरप्रमायां वक्ष्यमाणप्रकारेण बाधात् । नापि जन्यप्रमामात्रम् । यादृच्छिकयथार्थवाक्यजन्यप्रमायां बाधात् । तस्मात्तद्व्यावृत्तजन्यप्रमामात्रं पक्षीकर्तव्यम् । तत्र च कार्यत्व-

सद्भावेऽपि ज्ञानकारणातिरिक्ताजन्यत्वे सति ज्ञानकारणजन्यत्वाभावस्याभावात्तत्र व्यभिचारादित्यर्थः ।

ननु ज्ञानकारणमात्रजन्यं नेति साधयितुं न शक्यते । अत्र ज्ञानकारणातिरिक्ताजन्यत्वे सति ज्ञानकारणजन्यत्व रूपविशिष्टाभावस्य साध्यत्वात्तत्र च ज्ञाने ज्ञानकारणजन्यत्व रूपविशेष्याभावप्रयुक्तविशिष्टाभावासम्भवेन ज्ञान-कारणातिरिक्ताजन्यत्वरूपविशेषणाभावप्रयुक्तविशिष्टाभावो वाच्यः । तथा च व्याघात इति शङ्कानिरासाय टीकायां विशिष्टाभावविकल्पेनेत्याद्युक्तम् । तस्यार्थो न ज्ञायत इत्यतो व्याचष्टे – **यथेति** ।। प्रतिज्ञानिरासेनेत्युक्त्या ज्ञानं गुणजन्यमित्यत्र प्रतिज्ञानिरासकव्याघातस्यासम्भवादित्यतो व्याचष्टे – **परतस्त्ववादिनेति** ।। अजन्यप्रमात्वमुपाधिरिति टीका । तत्र घटादौ गुणजन्यत्वाभावरूपसाध्यसद्भावेऽप्य जन्यप्रमात्वाभावेन साध्याव्यापकत्वतदवस्थ्यादनुपपन्नत्वेन भातीत्यतो व्याचष्टे – **जन्यप्रमात्वाभाव इति** ।। तथा च साध्यव्यापकतेत्यर्थः । व्याप्यभावाप्रतीतेराह – **यादृच्छिकेति** ।। तदभावादेवेत्यत्राप्रामाण्याभावे हेतुर्नोक्त इत्यतस्तं वदन्नेव वाक्यं व्याख्याति – **प्रामाण्यस्येति** ।। सङ्केतितवानित्ययुक्तम् । सङ्केतस्येश्वरेच्छाविशेषरूपत्वेन शब्दानां साङ्केतिकत्वापत्त्या स्वाभाविकशक्तिः कुत्रापि न स्यादित्यतो व्याख्याति – **अयं शब्द इति** ।। प्राचीनपक्ष इत्यत्र कः प्राचीनः पक्षः । कथं चायं तत्र दोष इत्यतस्तदुपपादयितुमाह – **न केवलमिति** ।। छ ।।

।। इति श्रीकेशवभट्टारकेण विरचितायां भावदीपिकायां
देवताधिकरणं सम्पूर्णम् ।। ८ ।।

# ದೇವತಾಧಿಕರಣ

(೧-೩-೮)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## देवताधिकरणम् (१।३।८)

**दैवतैरपि ज्ञेयः**

ದೇವತೆಗಳೂ ಕೂಡ ಜನಾರ್ದನನ ಉಪಾಸನೆಯನ್ನು ವೇದಗಳಿಂದ ಮಾಡಬೇಕು. ಅಂದರೆ, ದೇವತೆಗಳೂ ಮನುಷ್ಯದೆಶೆಯಲ್ಲಿ ಮಾತ್ರವಲ್ಲ, ದೇವತಾದೆಶೆಯಲ್ಲೂ ಕೂಡ ಜನಾರ್ದನನ ಉಪಾಸನೆಯನ್ನು ಮಾಡಬೇಕು ಎಂದರ್ಥ.

***

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## देवताधिकरणम् (१।३।८)

ननु 'विश्वेदेवा उपासते' इत्ययुक्तम् । देवानां तत्पदविशिष्टानां आद्यन्तवत्त्वे पूर्वं पश्चाच्च देवताऽभावेन तदुद्देशेन हविषः त्यागायोगेन कर्मविरोधापत्त्या 'इन्द्रागच्छ' इत्याद्यनादिनित्यवेदस्य पूर्वोत्तरं वाच्यहीनत्वेन अप्रामाण्यापत्त्या चानादिनित्यत्वे वाच्ये तादृशानां मोक्षे अर्थित्वाभावेन तद्धेतुभगवदुपासनायामनधिकारादित्यतः प्राप्तं – तदुपर्यपि बादरायण इत्यादिसूत्राष्टकम् । तस्यार्थः देवतैरपि ज्ञेय इति ।

ಹಿಂದಿನ ವಾಮನಾಧಿಕರಣದಲ್ಲಿ 'ವಿಶ್ವೇದೇವಾ ಉಪಾಸತೇ' ಎಂಬ ಕಾಠಕೋಪನಿಷತ್ತನ್ನು ವಿಷಯವನ್ನಾಗಿ ಹೇಳುವ ಮೂಲಕ ಸರ್ವದೇವೋಪಾಸ್ಯತ್ವವನ್ನು ಹೇಳಲಾಯಿತು. ಇದು ತಪ್ಪು. ಇಂದ್ರಾದಿ ದೇವತೆಗಳು ಅನಾದಿನಿತ್ಯರಾದ್ದರಿಂದ ಭಗವಂತನ ಉಪಾಸನೆಯನ್ನು ವೇದಗಳಿಂದ ಮಾಡುವ ಆವಶ್ಯಕತೆ ಇರುವುದಿಲ್ಲ. ಒಂದು ವೇಳೆ ಉತ್ಪತ್ತಿ-ನಾಶವನ್ನು ಇಂದ್ರಾದಿ ದೇವತೆಗಳಿಗೂ ಸಹ ಹೇಳುವುದಾದರೆ, ಆಯಾ ಪದವಿಗಳಿಗೆ ಬರುವ ಮೊದಲು ಬೇರೆ ಯಾರೂ ಸಹ ಆ ಪದವಿಯಲ್ಲಿರುವುದಿಲ್ಲ ಎಂದಂತಾಯಿತು. ಮತ್ತು, ಯಾವಾಗ ಸೂರ್ಯ-ಚಂದ್ರ-ಇಂದ್ರ ಮೊದಲಾದ ದೇವತೆಗಳು ನಾಶವನ್ನು ಹೊಂದುತ್ತಾರೋ, ಅನಂತರವೂ ಕೂಡ ಆಯಾ ಪದವಿಯಲ್ಲಿ ಬೇರೆ ಯಾವ ದೇವತೆಗಳೂ ಕೂಡ ಇಲ್ಲವೆಂದಂತಾಯಿತು. ಆ ಸಂದರ್ಭದಲ್ಲಿ ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಸಮರ್ಪಣೆ ಮಾಡಲು ಬರುವುದಿಲ್ಲ. ದೇವತೆಗಳೇ ಇಲ್ಲದಿದ್ದಾಗ, ಅವರನ್ನು ಉದ್ದೇಶಿಸಿ ಮಾಡುವಂತಹ ಯಾಗಗಳಿಗೆ ಸಾರ್ಥಕ್ಯವನ್ನಾದರೂ ಕೂಡ ಹೇಳಲು ಹೇಗೆ ತಾನೇ ಸಾಧ್ಯ ? ಹೀಗೆ, ಕರ್ಮಗಳ ವಿರೋಧವು ಬರುತ್ತದೆ. ಮತ್ತು, 'ಇಂದ್ರಾಗಚ್ಛ' 'ಎಲೈ ಇಂದ್ರನೇ ! ಯಜ್ಞವನ್ನು ಕುರಿತು ಆಗಮಿಸು' ಇತ್ಯಾದಿಯಾದ ಅನಾದಿನಿತ್ಯವಾದ ವೇದವಚನಗಳಿಗೆ ಇಂದ್ರಾದಿಗಳು ಇಲ್ಲದ ಸಂದರ್ಭದಲ್ಲಿ ವಾಚ್ಯವಾದ ವಸ್ತುವೇ ಇಲ್ಲದಂತಾಯಿತು. ಆದ್ದರಿಂದ, ಅಪ್ರಾಮಾಣ್ಯದೋಷವೂ ಕೂಡ ಬರುತ್ತದೆ. ಹೀಗೆ, ಕರ್ಮವಿರೋಧವೆಂಬ ದೋಷ ಮತ್ತು ವೇದಕ್ಕೆ ಅಪ್ರಾಮಾಣ್ಯವೆಂಬ ದೋಷ ಇವೆರಡನ್ನು ಪರಿಹರಿಸಲು ಇಂದ್ರಾದಿ ದೇವತೆಗಳನ್ನು ಅನಾದಿನಿತ್ಯರೆಂದು ಒಪ್ಪಬೇಕು.

ಅನಾದಿನಿತ್ಯರಾದ ದೇವತೆಗಳಿಗೆ ಮೋಕ್ಷವಿಲ್ಲವೆಂದಂತಾಯಿತು. ಮೋಕ್ಷದ ಅಪೇಕ್ಷೆಯನ್ನೂ ಕೂಡ ಇವರಲ್ಲಿ ಸಮರ್ಥಿಸಲಾಗದು. ಬ್ರಹ್ಮವಿದ್ಯೆಯ ಅಧಿಕಾರಕ್ಕೆ ಪ್ರಯೋಜಕವಾದ ಅರ್ಥಿತ್ವವು ಇವರಲ್ಲಿಲ್ಲದ ಕಾರಣ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನೂ ಕೂಡ ದೇವತೆಗಳು ಹೊಂದುವುದಿಲ್ಲ. ಹೀಗೆ ಭಗವದುಪಾಸನೆಯಲ್ಲಿ ದೇವತೆಗಳು ಅನಧಿಕಾರಿಗಳಾಗಿರುವಾಗ 'ವಿಶ್ವೇದೇವಾ ಉಪಾಸತೇ' ಎಂಬ ಮಾತಿನಿಂದ ಸರ್ವದೇವೋಪಾಸ್ಯತ್ವವೆಂಬ ಲಿಂಗವನ್ನು ವಿಷ್ಣುವಿನಲ್ಲಿ ಹೇಗೆ ಸಮರ್ಥಿಸುತ್ತೀರಿ?

ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ 'ತದುಪರ್ಯಪಿ ಬಾದರಾಯಣಃ' ಇತ್ಯಾದಿಯಾದ ಎಂಟು ಸೂತ್ರಗಳುಳ್ಳ ದೇವತಾಧಿಕರಣವು ಹೊರಟಿದೆ. ಇದರ ಸಾರಸರ್ವಸ್ವವನ್ನು ಶ್ರೀಮದಾಚಾರ್ಯರು 'ದೈವತೈರಪಿ ಜ್ಞೇಯಃ' ಎಂಬುದರಿಂದ ಸಂಗ್ರಹಿಸಿದ್ದಾರೆ.

**अस्य नयस्य साक्षादसमन्वयपरत्वेन प्रासङ्गिकत्वादेको जनार्दन इत्येवान्वेति । एवमग्रेऽपि । वेदैरितीहाप्याकृष्यते । बहुवचनमाद्यर्थे । षण्णां च सप्तानां चोद्गातॄणां चमसभक्ष इत्यादाविव ।**

ಈ ಅಧಿಕರಣದಲ್ಲಿ ಯಾವುದೇ ಲಿಂಗಗಳ ಸಮನ್ವಯವನ್ನಾಗಲೀ ಶಬ್ದಗಳ ಸಮನ್ವಯವನ್ನಾಗಲೀ ನೇರವಾಗಿ ಮಾಡುತ್ತಿಲ್ಲ. ಹೊರತಾಗಿ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ ಎಂಬುದನ್ನಷ್ಟೇ

ಸಮರ್ಥನೆ ಮಾಡುತ್ತಿದ್ದಾರೆ. ಈ ವಿಚಾರವು ಕೇವಲ ಪ್ರಾಸಂಗಿಕವಾಗಿ ಪ್ರಸಕ್ತವಾಗಿದೆ. ಆದ್ದರಿಂದ, 'ಏಕೋ ಜನಾರ್ದನಃ' ಎಂಬುದನ್ನಷ್ಟೇ ಅನ್ವಯ ಮಾಡಿಕೊಳ್ಳಬೇಕು. 'ತದನ್ಯತ್ರ ಚ ವಾಚಕೈಃ' ಎಂಬುದನ್ನು ಅನ್ವಯ ಮಾಡಿಕೊಳ್ಳಬಾರದು. ಇದರಂತೆ ಮುಂದಿನ ಅಪಶೂದ್ರಾಧಿಕರಣದಲ್ಲಿಯೂ ತಿಳಿಯಬೇಕು. ಮುಂದಿನ ಪಾದದಲ್ಲಿರುವ 'ವೇದ್ಯೈಃ' ಎಂಬುದನ್ನು ಇಲ್ಲಿಯೂ ಕೂಡ ಅನ್ವಯ ಮಾಡಿಕೊಳ್ಳಬೇಕು. 'ವೇದ್ಯೈಃ' ಎಂಬಲ್ಲಿಯ ಬಹುವಚನವು ವೇದಾದಿಗಳಿಂದ ಎಂಬರ್ಥದಲ್ಲಿದೆ. 'ಷಣ್ಣಾಂ ಚ ಸಪ್ತಾನಾಂ ಚ ಉದ್ಗಾತೃಣಾಂ ಚಮಸಪಕ್ಷಃ' ಎಂಬಲ್ಲಿ ಬಹುವಚನವು ಹೇಗೆ ಮೊದಲಾದವರು ಎಂಬರ್ಥದಲ್ಲಿದೆಯೋ, ಅದರಂತೆ ಇಲ್ಲಿಯೂ ಕೂಡ ಬಹುವಚನವು ಮೊದಲಾದವುಗಳಿಂದ ಎಂಬರ್ಥದಲ್ಲಿದೆ.

**यद्वा, 'वेदा इत्येव शब्दिताः' इति नविलक्षणत्वनयभाष्योक्तस्मृत्या वेदशब्दस्यैव वेदादीत्यर्थः । एको जनार्दनो दैवतैरपि कर्तृभिः वेदैः वेदादिभिः करणैः ज्ञेयः । न केवलं मनुष्यैरित्यपेरर्थः ।**

ಅಥವಾ, 'ವೇದಾ ಇತ್ಯೇವ ಶಬ್ದಿತಾಃ' ಎಂಬುದಾಗಿ ನವಿಲಕ್ಷಣತ್ವಾಧಿಕರಣದ ಭಾಷ್ಯದಲ್ಲಿ ಸ್ಮೃತಿಯನ್ನು ಉಲ್ಲೇಖಿಸಿದ್ದಾರೆ. ಅದರ ಪ್ರಕಾರ ವೇದಶಬ್ದಕ್ಕೇ ವೇದಾದಿಗಳು ಎಂಬರ್ಥವನ್ನು ಹೇಳಬಹುದು. 'ಏಕೋ ಜನಾರ್ದನಃ ದೈವತೈರಪಿ ವೇದ್ಯೈಃ ಜ್ಞೇಯಃ' ಎಂದು ಅನ್ವಯ ಮಾಡಿದಂತಾಯಿತು. ಒಬ್ಬನೇ ಜನಾರ್ದನನು ಸಕಲ ದೇವತೆಗಳಿಂದಲೂ ವೇದಾದಿಗಳ ಮೂಲಕ ತಿಳಿಯಲು ಅರ್ಹನಾಗಿದ್ದಾನೆ ಎಂದು ಇದರ ಅರ್ಥ. ಕೇವಲ ಮನುಷ್ಯರು ಮಾತ್ರವಲ್ಲ, ಎಂಬುದು 'ಅಪಿ'ಶಬ್ದದ ಅರ್ಥ. ಒಟ್ಟಾರೆ, ದೇವತೆಗಳು ಮನುಷ್ಯಾವಸ್ಥೆಯಲ್ಲಿ ಮಾತ್ರವಲ್ಲ, ದೇವತಾವಸ್ಥೆಯಲ್ಲೂ ಕೂಡ ಜನಾರ್ದನನನ್ನು ವೇದಗಳಿಂದ ಉಪಾಸನೆ ಮಾಡಬೇಕೆಂದು ಸಿದ್ಧವಾಯಿತು.

**तेन देवानां मनुष्यतादशायामिव देवतादशायामपीति सूचनात्, योग्यमनुष्याणां विद्याकर्मभ्यां देवत्वप्राप्त्या देवानामाद्यन्तवत्त्वेन अतिशयितफले मोक्षेऽर्थित्वसम्भवात्, सामर्थ्यविशिष्टबुद्ध्यादेः देवत्वादेव सिद्धेर्निषेधाभावाच्च अधिकारप्रयोजनस्य अनिषिद्धत्वे सति विशिष्टबुद्ध्यादिमत्त्वस्य सत्त्वेनाधिकारावश्यंभावादिति भावः ।**

ಹೀಗೆ ಹೇಳಿದ್ದರಿಂದ ಬ್ರಹ್ಮವಿದ್ಯಾಧಿಕಾರಕ್ಕೆ ಪ್ರಯೋಜಕವಾದ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯ ಎಂಬ ಮೂರು ಬಗೆಯ ಧರ್ಮಗಳೂ ಕೂಡ ದೇವತೆಗಳಲ್ಲಿರುತ್ತವೆ ಎಂದು ಸಮರ್ಥಿಸಿದಂತಾಯಿತು. ಅದು ಹೀಗೆ - ಯೋಗ್ಯರಾದ ಮನುಷ್ಯರಿಗೆ ವಿದ್ಯೆ ಹಾಗೂ ಕರ್ಮಗಳಿಂದ ದೇವತಾಪದವಿಯು ಪ್ರಾಪ್ತವಾಗುತ್ತದೆ. ಆದ್ದರಿಂದ, ದೇವತೆಗಳಿಗೆ ಉತ್ಪತ್ತಿ ಹಾಗೂ ನಾಶಗಳಿವೆಯೆಂದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಹೆಚ್ಚಿನ ಫಲಕ್ಕಾಗಿ ಮೋಕ್ಷದ ಬಯಕೆಯೂ ಕೂಡ ಅವರಿಗಿರುತ್ತದೆ. ಇದರಿಂದ ಅರ್ಥಿತ್ವವೆಂಬ ಅಧಿಕಾರಧರ್ಮವು ಇದೆಯೆಂದು ಸಿದ್ಧವಾಯಿತು. ಮತ್ತು, ಸಾಮರ್ಥ್ಯ, ವೈದುಷ್ಯಗಳೆರಡು

ದೇವತೆಗಳಾದ್ದರಿಂದಲೂ ಸ್ವತಃಸಿದ್ಧವಾಗಿವೆ. ಮತ್ತು ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆನ್ನಲು ಶೂದ್ರಾದಿಗಳಂತೆ ನಿಷೇಧವಚನವಿರುವುದಿಲ್ಲ. ಹಾಗಾಗಿ, 'ಅನಿಷಿದ್ಧತ್ವೇ ಸತಿ ವಿಶಿಷ್ಟಬುದ್ಧ್ಯಾದಿಮತ್ತ್ವ' ಎಂಬ ಹೇತುವಿನಿಂದ ದೇವತೆಗಳು ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೊಂದುತ್ತಾರೆಂದು ಸಾಧಿಸಬಹುದು. 'ದೇವಾಃ ಬ್ರಹ್ಮವಿದ್ಯಾಧಿಕಾರಿಣಃ ಅನಿಷಿದ್ಧತ್ವೇ ಸತಿ ವಿಶಿಷ್ಟಬುದ್ಧ್ಯಾದಿಮತ್ತ್ವಾತ್' ಎಂಬ ಅನುಮಾನಕ್ಕೆ ಯಾವುದೇ ದೋಷಗಳಿರುವುದಿಲ್ಲ.

**नचैवं देवतानामाद्यन्तवत्त्वे कर्मणि शब्दे च विरोधः । दैवतैरिति बहुवचनसूचनेन देवतानां बहुत्वसूचनात् । पूर्वोत्तरकालयोः इदानीन्तनेन्द्रादिदेवताऽभावेऽपि तदन्यदेवतासत्त्वेन तदुद्देशेन कर्मानुष्ठानस्य तत्प्रतिपादकानादिनित्यशब्दप्रामाण्यस्य चोपपत्तेरिति भावः ।**

ಹಾಗಾದರೆ, ದೇವತೆಗಳಿಗೆ ಉತ್ಪತ್ತಿ-ನಾಶಗಳನ್ನು ಹೇಳಿದಂತಾಯಿತು. ಆವಾಗ, ಕರ್ಮವಿರೋಧ ಹಾಗು ವೇದಾಪ್ರಾಮಾಣ್ಯ ಎಂಬೆರಡು ದೋಷಗಳು ಬರುತ್ತವಲ್ಲವೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ, 'ದೈವತೈಃ' ಎಂಬಲ್ಲಿ ಬಹುವಚನದಿಂದ ಅನೇಕ ದೇವತೆಗಳು ಆಯಾ ಪದವಿಗಳಿಗೆ ಬರುತ್ತಾರೆಂದು ಸೂಚನೆ ಮಾಡಿದ್ದಾರೆ. ಅಂದರೆ, ಹಿಂದಿನ-ಮುಂದಿನ ಕಲ್ಪಗಳಲ್ಲಿ ಈ ಕಲ್ಪದಲ್ಲಿರುವ ಇಂದ್ರಾದಿ ದೇವತೆಗಳಿಲ್ಲದಿರಬಹುದು. ಆದರೆ, ಬೇರೆ ಚೇತನನು ಆ ಇಂದ್ರಾದಿ ಪದವಿಯಲ್ಲಿ ಇರುತ್ತಾನೆ. ಅಂತಹ ದೇವತಾಪದವಿಯಲ್ಲಿರುವ ಚೇತನನನ್ನು ಉದ್ದೇಶಿಸಿ ಯಾಗಾದಿ ಕರ್ಮಗಳನ್ನು ಅನುಷ್ಠಾನ ಮಾಡಬಹುದು. ಮತ್ತು, ಅಂತಹ ದೇವತೆಯೇ ಇಂದ್ರಾದಿ ಸೂಕ್ತಗಳಿಂದ ಪ್ರತಿಪಾದ್ಯನಾಗುತ್ತಾನೆ. ಹಾಗಾಗಿ, ವೇದಕ್ಕೆ ಅಪ್ರಾಮಾಣ್ಯದೋಷವೂ ಕೂಡ ಬರುವುದಿಲ್ಲ.

**नच तेषां बहुत्वेऽपि नानानामरूपादिमत्त्वेन एकरूपवेदप्रामाण्यविरोध इत्यतोऽपि – दैवतैरिति । देवातानां सम्बन्धिभिर्दैवतैरित्यर्थः ।**

ದೇವತೆಗಳು ಅನೇಕ ಮಂದಿ ಇದ್ದಾರೆಂದು ಹೇಳಲಾಯಿತು. ಅವರೆಲ್ಲರಿಗೂ ಭಿನ್ನಭಿನ್ನವಾದ ಹೆಸರುಗಳು, ರೂಪಗಳು, ಕಾರ್ಯಗಳು ಇರುತ್ತವೆ. ಆದರೆ, ವೇದವು ಒಬ್ಬನೇ ದೇವತೆಗೆ ಒಂದೇ ಹೆಸರನ್ನು, ಒಂದೇ ಕೆಲಸವನ್ನು ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ, ಪುನಃ ಅಪ್ರಾಮಾಣ್ಯ ದೋಷವು ಬಂದೇ ಬರುತ್ತದಲ್ಲವೇ? ಎಂಬ ಪ್ರಶ್ನೆಗೂ ಕೂಡ ಶ್ರೀಮದಾಚಾರ್ಯರು 'ದೈವತೈರಪಿ ಜ್ಞೇಯಃ' ಎಂಬುದರಿಂದಲೇ ಉತ್ತರಿಸಿದ್ದಾರೆ. ಅಂದರೆ, ಭಿನ್ನಭಿನ್ನವಾದ ಸಮಾನ ಧರ್ಮ-ಕರ್ಮಗಳನ್ನು ಹೊಂದಿರುವುದಿಲ್ಲ ಎಂದರ್ಥ. ದೇವತೆಗಳಿಗೆ ಸಂಬಂಧಪಟ್ಟ ವೇದಗಳಿಂದಲೂ ಅವರು ಪ್ರತಿಪಾದ್ಯರಾಗಿತ್ತಾರೆ.

## ದೇವತಾಧಿಕರಣ (೧-೩-೮)

'एक एव वा महानात्मा देवता' इत्यनुक्रमणिकादौ प्रतिपाद्ये देवतापदप्रयोगस्य प्रसिद्धेः । या देवता इदानीं 'इन्द्र आगच्छ' इत्यादिभिः प्रतिपाद्यते तत्सम्बन्धिभिः तज्जातीयैः तत्समानरूपधर्मकर्मवद्भिरनेकैः पूर्वोत्तरकालीनैर्देवतैः ज्ञेय इत्यर्थः ।

'ಏಕ ಏವ ವಾ ಮಹಾನಾತ್ಮಾ ದೇವತಾ' ಎಂದು ವೇದದ ಅನುಕ್ರಮಣಿಕಾದ ಪ್ರಾರಂಭದಲ್ಲಿ ಈ ವಿಷಯವನ್ನು ಸಮರ್ಥಿಸಲಾಗಿದೆ. ಆದ್ದರಿಂದ, ಒಂದೇ ದೇವತಾಪದವಿಯಲ್ಲಿ ಅನೇಕ ಚೇತನರು ದೇವತ್ವವನ್ನು ಪಡೆದು ಬರುತ್ತಾರೆ ಎಂದರ್ಥ. ಯಾವ ದೇವತೆಯು ಈಗ 'ಇಂದ್ರ ಆಗಚ್ಛ' 'ಎಲೈ ಇಂದ್ರನೇ! ಬಾ' ಇತ್ಯಾದಿ ಮಂತ್ರಗಳಿಂದ ಪ್ರತಿಪಾದ್ಯನಾಗುತ್ತಾನೋ, ಅದೇ ಇಂದ್ರನಿಗೆ ಸಂಬಂಧಪಟ್ಟ ಸಮಾನವಾದ ನಾಮ, ರೂಪ, ಧರ್ಮ, ಕರ್ಮ ಇವುಗಳನ್ನು ಹೊಂದಿರುವ ಮತ್ತೊಬ್ಬ ಇಂದ್ರನು ಮುಂದಿನ ಕಲ್ಪದಲ್ಲಿ ಬರುತ್ತಾನೆ. ಹೀಗೆ, ಒಂದೇ 'ಇಂದ್ರ' ಎಂಬ ಸ್ಥಾನದಲ್ಲಿ ಅನಂತ ಇಂದ್ರರು ಬರುತ್ತಾರೆ. ಅವರೆಲ್ಲರೂ ಒಂದೇ ವಿಧವಾದ ನಾಮ, ರೂಪ, ಧರ್ಮ, ಕರ್ಮಗಳನ್ನು ಹೊಂದಿದ್ದಾರೆ. ವೇದವೂ ಕೂಡ ಅದೇ ರೀತಿಯಲ್ಲಿ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ ವೇದಕ್ಕೆ ಅಪ್ರಾಮಾಣ್ಯ ದೋಷವು ಬರುವುದಿಲ್ಲ.

नच प्रलये देवताऽभावादप्रामाण्यं वेदस्येत्यतोऽपि दैवतैरिति देवतानां इन्द्रादीनां सम्बन्धिभिः तत्प्रतिपादकैरपि वेदैरेको जनार्दनोऽनादिनित्यो ज्ञेयः । प्रतिपाद्य इत्यर्थः ।

ಪ್ರಳಯಕಾಲದಲ್ಲಿ ಯಾವ ದೇವತೆಗಳೂ ಇಲ್ಲ. ಆ ಸಂದರ್ಭದಲ್ಲಿ ನಿತ್ಯವಾದ ವೇದವಿದೆ. ಅದು ಯಾರನ್ನು ಪ್ರತಿಪಾದಿಸುತ್ತದೆ. ವಾಚ್ಯಾರ್ಥವಿಲ್ಲದ ವಾಚಕಶಬ್ದಗಳಿಗೆ ಅಪ್ರಾಮಾಣ್ಯ ಬರುತ್ತದಲ್ಲವೆ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಪ್ರಳಯಕಾಲದಲ್ಲಿ ಇಂದ್ರಾದಿ ದೇವತೆಗಳಿಲ್ಲದಿರಬಹುದು. ಆದರೆ, ಪರಮಾತ್ಮನನ್ನು ಸಕಲ ವೇದಗಳೂ ಪ್ರತಿಪಾದನೆ ಮಾಡುತ್ತವೆ. ಪರಮಾತ್ಮನಾದರೋ ಅನಾದಿನಿತ್ಯನಾಗಿದ್ದಾನೆ. ಹಾಗಾಗಿ, ವೇದಗಳಿಗೆ ಪ್ರಾಮಾಣ್ಯವು ಉಪಪನ್ನವಾಗುತ್ತದೆ.

'सृजतो हि ते श्रुतयोऽनुवर्तन्ते नैवासृजतः कं विदधते कं वा निषेधन्ति स्तुतिमात्रा एव ते स्युः' इति,'लयस्य त्वष्टमो भागः सृष्टिकाल उदाहृतः । तत्रैव वेदसञ्चारो ह्यान्यदा स्तुतिमात्रकाः' इति श्रुतिगीतातात्पर्योक्तश्रुत्यादेः तदा भगवन्मात्रविषयत्वोपपत्तेरिति भावः ।

'ಸೃಜತೋ ಹಿ ತೇ ಶ್ರುತಯೋಽನುವರ್ತಂತೇ ನೈವಾಸೃಜದರ್ಕಂ ವಿದಧತೇ ಕಂ ವಾ ನಿಷೇಧಂತಿ ಶ್ರುತಿಮಾತ್ರಾ ಏವ ತೇ ಸ್ಯುಃ' ಪ್ರಳಯಕಾಲದ ಎಂಟರಲ್ಲಿ ಒಂದು ಭಾಗ ಮಾತ್ರ ಸೃಷ್ಟಿಕಾಲ ಎನಿಸುತ್ತದೆ. ಪ್ರಳಯಕಾಲದಲ್ಲಿ ಶ್ರುತಿಯು ವಿಧಿನಿಷೇಧಗಳನ್ನು ಬೋಧನೆ ಮಾಡುವುದಿಲ್ಲ. ಸೃಷ್ಟಿ ಕಾಲದಲ್ಲಿ ಮಾತ್ರ

ಬೋಧಿಸುತ್ತದೆ. ಪ್ರಳಯಕಾಲದಲ್ಲಿ ಶ್ರುತಿಗಳು ಭಗವಂತನನ್ನು ಮಾತ್ರ ಸ್ತೋತ್ರ ಮಾಡುತ್ತಿರುತ್ತವೆ ಎಂಬ ಶ್ರುತಿಯನ್ನು ಗೀತಾತಾತ್ಪರ್ಯದಲ್ಲಿ ಉಲ್ಲೇಖಿಸಿದ್ದಾರೆ.

ಆದ್ದರಿಂದ, ಪ್ರಳಯಕಾಲದಲ್ಲಿ ದೇವತೆಗಳಿಲ್ಲದಿದ್ದರೂ ವೇದಕ್ಕೆ ಅಪ್ರಾಮಾಣ್ಯದೋಷವು ಬರುವುದಿಲ್ಲ.

**ननु मोक्षेतरफलार्थब्रह्मकर्मविद्याफलानां वसुत्वादीनां तैराप्तत्वान्न तास्वधिकारः। नापि मोक्षार्थासु । तेषां सार्वज्ञेन मुक्तिहेतुविद्यासाध्यज्ञानस्य प्रागेव सिद्धत्वादित्यतोऽपि – दैवतैरपीति ।**

ಕೆಲವು ವೇದವಿದ್ಯೆಗಳಿಗೆ ವಸು ಮೊದಲಾದ ಪದವಿಗಳೇ ಫಲಗಳಾಗಿರುತ್ತವೆ. ಅಂತಹ ಪದವಿಗಳನ್ನು ದೇವತೆಗಳು ಈಗಾಗಲೇ ಪಡೆದಿರುತ್ತಾರೆ. ಆದ್ದರಿಂದ, ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳಲು ಹೇಗೆ ಸಾಧ್ಯ? ಇನ್ನು ಮೋಕ್ಷಫಲವನ್ನುದ್ದೇಶಿಸಿ ಬ್ರಹ್ಮವಿದ್ಯೆಯನ್ನು ಅಧ್ಯಯನ ಮಾಡಬೇಕು. ಆದರೆ, ದೇವತೆಗಳು ಸರ್ವಜ್ಞರಾದ್ದರಿಂದ ಮೋಕ್ಷಕ್ಕೆ ಕಾರಣವಾದ ಬ್ರಹ್ಮಜ್ಞಾನವು ಈಗಾಗಲೇ ಅವರಲ್ಲಿ ಸಿದ್ಧವಾಗಿದೆ. ಆದ್ದರಿಂದ, ವೇದವಿದ್ಯೆಯಲ್ಲಿ ಅಧಿಕಾರವನ್ನು ಹೇಳಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೂ ಕೂಡ 'ದೈವತೈರಪಿ' ಎಂಬುದರಿಂದಲೇ ಉತ್ತರಿಸಿದ್ದಾರೆ.

**प्राप्तवसुत्वादिफलैरपि दैवतैर्वस्वादिदेवैर्वेदैः । कात्स्न्र्ये बहुवचनार्थः । मोक्षार्थैः मोक्षेतरफलार्थैः कर्मब्रह्मविद्यारूपैरशेषैः वेदैर्ज्ञेय इत्यर्थः । मोक्षरूपफलसाधन-ज्ञानेऽतिशयसत्त्वात् । तथा दैवतैस्तन्त्रम् । साऽस्य देवतेत्यादौ सम्प्रदाने देवता-पदप्रयोगाद्देवतासम्बन्धीनि देवतोद्देशेन क्रियमाणानि यज्ञादिकर्माणि तैर्दैवतैर्यज्ञादिकर्मभिः जनार्दनः संसारमोचको ज्ञेय आराध्य इत्यर्थः । तथा दैवतानां मुख्यसार्वज्ञाभावेन मुक्तिहेतुज्ञानेऽतिशयसत्त्वेन मोक्षार्थासु ज्ञानमात्रसाध्यमोक्षगतातिशयसत्त्वेन च मोक्षेतरासु कर्मविद्यास्वधिकारोऽस्त्विति भावः ।**

ವಸು ಮೊದಲಾದ ಪದವಿಗಳನ್ನು ದೇವತೆಗಳು ಹೊಂದಿದ್ದರೂ ಕೂಡ ವಸ್ವಾದಿ ದೇವತೆಗಳಿಂದ ಮತ್ತು ವೇದಗಳಿಂದ ಎಂದು ಇದರ ಅರ್ಥ. ಬಹುವಚನವು ಬಾಹುಲ್ಯಾರ್ಥದಲ್ಲಿದೆ. ಅಂದರೆ, ಮೋಕ್ಷವನ್ನು ಬಯಸುವ ಮತ್ತು ಮೋಕ್ಷೇತರವಾದ ಫಲವನ್ನು ಬಯಸುವ ಕರ್ಮಪ್ರತಿಪಾದಕವಾದ ಮತ್ತು ಬ್ರಹ್ಮವಿದ್ಯಾಪ್ರತಿಪಾದಕವಾದ ಎಲ್ಲ ವೇದಗಳಿಂದಲೂ ಜ್ಞೇಯನಾಗಿದ್ದಾನೆ ಎಂದರ್ಥ. ಮೋಕ್ಷರೂಪವಾದ ಫಲಸಾಧನ ಜ್ಞಾನದಲ್ಲಿ ಅತಿಶಯವು ಇರುತ್ತದೆ. ದೇವತೆಗಳಿಗೆ ಮುಖ್ಯವಾದ ಸಾರ್ವಜ್ಞವಿಲ್ಲದಿರಬಹುದು. ಮುಕ್ತಿಹೇತುವಾದ ಜ್ಞಾನವು ಅತಿಶಯವುಳ್ಳದ್ದು. ಅದನ್ನು ಅವರು ಪಡೆಯಲೇಬೇಕು. ಹಾಗಾಗಿ,

ದೇವತೆಗಳಿಗೆ ಮೋಕ್ಷಪ್ರಯೋಜಕವಾದ ವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಮೋಕ್ಷೇತರವಾದ ಯಜ್ಞಾದಿ ಕರ್ಮಗಳಿಂದಲೂ ಪರಮಾತ್ಮನನ್ನು ಆರಾಧನೆ ಮಾಡಿದರೆ, ಮೋಕ್ಷದಲ್ಲಿ ಅತಿಶಯವಾದ ಆನಂದವು ಲಭಿಸುತ್ತದೆ. ಆದ್ದರಿಂದ, ವಸ್ವಾದಿಪದವಿಗಳನ್ನು ಪಡೆದವರಿಗೂ ಮೋಕ್ಷೇತರವಾದ ವಿದ್ಯೆಗಳಲ್ಲಿ ಅಧಿಕಾರವಿರುತ್ತದೆ. ಇಷ್ಟು ಭಾಷ್ಯದ ಅಭಿಪ್ರಾಯ.

'अङ्गावबद्धास्तु' इति वक्ष्यमाणदिशा अन्येषां ज्ञेयत्वेऽपि एको जनार्दनो ज्ञेय इत्युक्तिः 'तमेवैकं जानथ आत्मानमन्या वाचो विमुञ्चथ अमृतस्यैष सेतुः' इत्युक्तदिशा स्वस्वयोग्यविमुक्त्यै प्राधान्येन स एको भवबन्धमोचकत्त्वात् ज्ञेय इति सूचयितुम् ॥ ८ ॥

ಆದ್ದರಿಂದ, ದೇವತೆಗಳಿಗೆ ಮುಖ್ಯವಾದ ಸಾರ್ವಜ್ಞವಿಲ್ಲದಿದ್ದರೂ

ಮುಂದೆ 'ಅಂಗಾವಬದ್ಧಾಸ್ತು' ಎಂಬ ಸೂತ್ರದಲ್ಲಿ ಹೇಳುವ ಪ್ರಕಾರ ಬೇರೆ ದೇವತೆಗಳೂ ಕೂಡ ಜ್ಞೇಯರಾಗಿರುತ್ತಾರೆ. ಆದರೂ ಕೂಡ 'ಏಕೋ ಜನಾರ್ದನಃ' ಜನಾರ್ದನನೊಬ್ಬನೇ ಜ್ಞೇಯನಾಗಿದ್ದಾನೆ ಎಂದು ಹೇಳಲು ಕಾರಣವೇನೆಂದರೆ, 'ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ, ಅಮೃತಸ್ಯೈಷ ಹೇತುಃ' ಎಂಬ ಶ್ರುತಿಯ ಪ್ರಕಾರ ಪರಮಾತ್ಮನನ್ನೇ ಪ್ರಧಾನವಾಗಿ ತಮ್ಮ ತಮ್ಮ ಯೋಗ್ಯವಾದ ಮೋಕ್ಷಸ್ಥಾನವನ್ನು ಪಡೆಯುವುದಕ್ಕೋಸ್ಕರ ಆರಾಧನೆ ಮಾಡಬೇಕು. ಅವನೊಬ್ಬನೇ ಸಂಸಾರಬಂಧನಕ್ಕೆ ಮೋಚಕನಾಗಿದ್ದಾನೆಂದು ತಿಳಿಯಬೇಕು. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ. ಉಳಿದ ದೇವತೆಗಳಿಗೆ ಸಂಸಾರಮೋಚಕತ್ವಶಕ್ತಿಯು ಇರುವುದಿಲ್ಲ.

'ದೈವತ್ಯೈಃ' ಎಂಬ ಪದವನ್ನು ಎರಡು ಬಾರಿ ಅನುವೃತ್ತಿ ಮಾಡಿಕೊಂಡು ದೇವತೆಗಳಿಗೆ ಸಂಬಂಧಿಸಿದ ಯಜ್ಞಾದಿ ಕರ್ಮಗಳು ಎಂದು ಅರ್ಥ ಮಾಡಿ, ಯಜ್ಞಾದಿ ಕರ್ಮಗಳಿಂದಲೂ ಸಂಸಾರಮೋಚಕನಾದ ಜನಾರ್ದನನನ್ನು ಆರಾಧನೆ ಮಾಡಬೇಕು ಎಂಬರ್ಥವನ್ನು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ದೇವತಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## देवताधिकरणम् (१।३।८)

।। ॐ तदुपर्यपि बादरायणः सम्भवात् ॐ ।। १-३-२६ ।।

अत्र देवानामधिकारोऽस्तीति प्रसङ्गादुच्यते । अधिकार इति विभागविपरिणामाभ्यामस्ति । तदुपरि तस्य प्रकृतस्य मनुष्यत्वस्योपरि विद्याकर्मभ्यां देवत्वप्राप्त्यनन्तरमपि । देवानामपीति यावत् । अधिकारोऽस्ति । कुतः ? सम्भवात् । विशिष्टबुद्ध्यादेः सम्भवादिति बादरायण आहेत्यर्थः ।

ಈ ಅಧಿಕರಣದಲ್ಲಿ ದೇವತೆಗಳಿಗೆ ವೇದವಿದ್ಯಾಧಿಕಾರವಿರುತ್ತದೆಂಬುದನ್ನು ಪ್ರಾಸಂಗಿಕವಾಗಿ ವಿಚಾರ ಮಾಡಲಾಗಿದೆ. ಅಧಿಕಾರ ಎಂಬ ಪದವು ವಿಭಾಗ ಮತ್ತು ವಿಭಕ್ತಿಗಳ ವಿಪರಿಣಾಮದಿಂದ ಅನ್ವಯವನ್ನು ಹೊಂದಿದೆ.

ಸೂತ್ರಾರ್ಥ – ತದುಪರಿ = ಪ್ರಸಕ್ತವಾದ ಮನುಷ್ಯತ್ವದಶೆಯ ಅನಂತರ, ವಿದ್ಯೆ ಹಾಗೂ ಕರ್ಮಗಳಿಂದ ದೇವತ್ವ ದಶೆಯನ್ನು ಹೊಂದಿದ ಮೇಲೂ ಕೂಡ, ಅಂದರೆ ದೇವತೆಗಳಿಗೂ ಕೂಡ, ಅಧಿಕಾರಃ = ಬ್ರಹ್ಮವಿದ್ಯಾಧಿಕಾರವು ಇರುತ್ತದೆ. ಏಕೆಂದರೆ, ಸಂಭವಾತ್ = ವಿಶಿಷ್ಟಬುದ್ಧಿ, ಅರ್ಥಿತ್ವ, ಸಾಮರ್ಥ್ಯ ಮೊದಲಾದವುಗಳು ಇರುವುದರಿಂದ ಎಂಬುದಾಗಿ ಬಾದರಾಯಣಃ = ಬಾದರಾಯಣರು ಹೇಳುತ್ತಾರೆ, ಎಂದು.

बादरायण इति विमतिसूचनाय । देवानामिति वाच्ये तदुपरीत्युक्तिर्देवत्वस्य सादित्वादिना मोक्षार्थिता युक्तेति सूचयितुम् । अपीत्यनेन न केवलं तेषां मनुष्यत्वदशायामित्याह । पूरणगुणेत्यत्र सना तव्येन च साहचर्यात् कृदन्ताव्ययेनैव समासनिषेधात्तदुपरीति साधु ।।

ಸೂತ್ರದಲ್ಲಿ 'ಬಾದರಾಯಣಃ' ಎಂಬ ಪದವು ವಿಪ್ರತಿಪತ್ತಿಯನ್ನು ಸೂಚನೆ ಮಾಡುತ್ತಿದೆ. 'ದೇವಾನಾಂ' ಎಂದೇ ಹೇಳಬಹುದಿತ್ತು. ಆದರೂ ಸಹ 'ತದುಪರಿ' ಎಂದು ಹೇಳಿದ್ದರಿಂದ ದೇವತ್ವಕ್ಕೆ ಉತ್ಪತ್ತಿ ಮೊದಲಾದವುಗಳಿರುವುದರಿಂದ ಮೋಕ್ಷದ ವಿಷಯದಲ್ಲಿ ಅರ್ಥಿತ್ವವು ಯುಕ್ತವಾಗುತ್ತದೆಂದು ಸೂಚನೆ ಮಾಡಿದ್ದಾರೆ. 'ಅಪಿ' ಎಂಬ ಪದದಿಂದ ದೇವತೆಗಳಿಗೆ ಮನುಷ್ಯತ್ವಾವಸ್ಥೆಯಲ್ಲಿ ಮಾತ್ರ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದಲ್ಲ. ದೇವತಾಪದವಿಯಲ್ಲೂ ಕೂಡ ಅಧಿಕಾರವಿರುತ್ತದೆ, ಎಂದು ಹೇಳಿರುತ್ತಾರೆ.

'ಪೂರಣಗುಣಸಹಿತಾರ್ಥಸದವ್ಯಯದ್ರವ್ಯಸಮಾನಾಧಿಕರಣೇನ' (೨-೨-೧೧) ಪೂರಣ-ಗುಣ-ತೃಪ್ತಿ ಈ ಮೂರನ್ನು ಹೇಳುವ ಪದಗಳ ಜೊತೆಗೆ 'ಸತ್', 'ಶತೃ' ಮತ್ತು 'ಶಾನಚ್' ಪ್ರತ್ಯಯಾಂತವಾದ ಪದದ ಜೊತೆಗೆ, 'ಅವ್ಯಯ', 'ತವ್ಯ' ಪ್ರತ್ಯಯಾಂತವಾದ ಪದಗಳ ಜೊತೆಗೆ, ಮತ್ತು ಸಮಾನವಿಭಕ್ತಿಕವಾದ ಪದಗಳ ಜೊತೆಗೆ ಷಷ್ಠ್ಯಂತವಾದ ಪದವು ಸಮಾಸವನ್ನು ಹೊಂದುವುದಿಲ್ಲವೆಂದು ಸೂತ್ರದಲ್ಲಿ ಹೇಳಲಾಗಿದೆ. 'ಸತ್' ಮತ್ತು 'ತವ್ಯ'ಗಳು ಕೃತ್‌ಪ್ರತ್ಯಯಾಂತವಾದ ಪದಗಳು. ಇವುಗಳ ಮಧ್ಯೆ ಇರುವ ಅವ್ಯಯ ಎಂಬುದೂ ಕೂಡ ಕೃದಂತವಾದದ್ದನ್ನೇ ಹೇಳುತ್ತದೆ. ಆದ್ದರಿಂದ, 'ಉಪರಿ' ಎಂಬುದು ಪ್ರಸಕ್ತ ತದ್ಧಿತಾವ್ಯಯವಾಗಿರುವುದರಿಂದ, ಇದರ ಜೊತೆಗೆ 'ತಸ್ಯ' ಎಂಬ ಷಷ್ಠ್ಯಂತ ಪದವು ಸಮಾಸವನ್ನು ಹೊಂದಬಹುದು. ಆದ್ದರಿಂದ, 'ಪೂರಣಗುಣ' ಎಂಬ ಸೂತ್ರದಲ್ಲಿ 'ಸನ್' ಮತ್ತು 'ತವ್ಯ' ಎಂಬ ಪ್ರತ್ಯಯಗಳ ಜೊತೆಗೆ ಕೃದಂತ ಅವ್ಯಯದೊಂದಿಗೆ ಸಮಾಸವು ನಿಷೇಧಿಸಲ್ಪಟ್ಟಿದೆ. ಹಾಗಾಗಿ, 'ತಸ್ಯ ಉಪರಿ ತದುಪರಿ' ಎಂಬ ಷಷ್ಠೀ ಸಮಾಸಕ್ಕೆ ವಿರೋಧ ಬರುವುದಿಲ್ಲ.

तदुपरीत्यनेनोक्तं सादित्वं तावदाक्षिप्याह -

**।। ॐ विरोधः कर्मणीति चेन्नानेकप्रतिपत्तेर्दर्शनात् ॐ ।। १-३-२७ ।।**

तदुपरीत्युक्तदेवपदस्य सादित्वे कर्मणि कर्मविषये विरोधो व्यर्थता स्यात् । इन्द्रादिपदप्राप्तेः पूर्वमिन्द्रादिदेवताऽभावेन तदुद्देशेन हविस्त्यागायोगादिति चेन्न । अनेकप्रतिपत्तेर्दर्शनात् । अनेकेषां योग्यमनुष्याणां प्रतिपत्तेः पूर्वं पूर्वं देवतापदप्राप्तेः "यज्ञेन यज्ञम्" इति श्रुतौ दर्शनादित्यर्थः ।

'ತದುಪರಿ' ಎಂದು ಹೇಳಿದ್ದರಿಂದ ದೇವತಾಪದವಿಯು ಸಾದಿಯೆಂದಂತಾಯಿತು. ಇದರ ಮೇಲೆ ಬರುವ ಆಕ್ಷೇಪವನ್ನು ತೋರಿಸಿ ಸಮಾಧಾನವನ್ನು ಹೇಳಲಾಗಿದೆ –

'ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್'

ಸೂತ್ರಾರ್ಥ ಹೀಗಿದೆ - ವಿರೋಧಃ = 'ತದುಪರಿ' ಎಂಬಲ್ಲಿ ಹೇಳಿದಂತೆ ದೇವತಾಪದವಿಯು ಸಾದಿಯಾದರೆ ಕರ್ಮವಿಷಯದಲ್ಲಿ ವಿರೋಧಃ = ವೈಯರ್ಥ್ಯದೋಷವು, ಸ್ಯಾತ್ = ಬರುತ್ತದೆ.

ಏಕೆಂದರೆ, ಇಂದ್ರಾದಿ ಪದವಿಗಳು ದೊರೆಯುವ ಮೊದಲು ಇಂದ್ರಾದಿ ದೇವತೆಗಳೇ ಇಲ್ಲದ ಕಾರಣ ಅವರನ್ನು ಉದ್ದೇಶಿಸಿ ಹವಿಸ್ಸನ್ನು ತ್ಯಾಗ ಮಾಡುವುದು ಯುಕ್ತವಾಗುವುದಿಲ್ಲವಲ್ಲವೇ? ಇತಿ ಚೇನ್ನ = ಹೀಗೆ ಆಕ್ಷೇಪ ಮಾಡಬಾರದು. ಅನೇಕಪ್ರತಿಪತ್ತೇಃ ದರ್ಶನಾತ್ = ಯೋಗ್ಯತೆಯುಳ್ಳ ಅನೇಕ ಮನುಷ್ಯರು ಹಿಂದಿನ ಕಲ್ಪಗಳಲ್ಲಿ ದೇವತಾಪದವಿಯನ್ನು ಹೊಂದಿರುತ್ತಾರೆ. 'ಯಜ್ಞೇನ ಯಜ್ಞಂ' ಎಂಬ ಶ್ರುತಿಯಲ್ಲಿ ಇದು ಹೀಗೆ ಇರುವುದು ಕಂಡಿದೆ ಎಂದು ಸೂತ್ರಾರ್ಥ.

एतद्देवताभावेऽपि प्राप्तपददेवतान्तरसत्त्वान्न कर्मविरोध इति भावः ॥

ಹಿಂದಿನ ಕಲ್ಪಗಳಲ್ಲಿ ಈ ದೇವತೆ ಇಲ್ಲದಿದ್ದರೂ ಬೇರೆ ದೇವತೆಗಳು ಇರುತ್ತಾರೆ. ಆದ್ದರಿಂದ ಕರ್ಮವಿರೋಧವಿಲ್ಲವೆಂದು ಅಭಿಪ್ರಾಯ.

सान्तत्वमाक्षिप्याह -

॥ ॐ शब्द इति चेन्नातः प्रभवात्प्रत्यक्षानुमानाभ्याम् ॐ ॥ १-३-२८ ॥

विरोध इत्यस्ति । अतःशब्दः प्रकृतशब्दपरः । प्रभवशब्दस्तन्नियमावगमपरः । तदुपरीत्युक्तिलब्धसान्तत्वे देवपदस्योपप्लवे सति शब्दे नित्ये वेदरूपशब्दे अप्रामाण्याख्यविरोधः स्यात् । पश्चादिन्द्रादिदेवताभावेन वाच्यहीनस्य प्रामाण्यायोगादिति चेन्न । अतः शब्दात् । धाता यथा पूर्वमकल्पयत्'' ''यथैव नियमः काले'' इत्यादिशब्दात् देवानां प्रभवनियमावगमात् प्रवाहरूपेण देवानां नित्यत्वान्न दोष इति भावः ।

ದೇವತಾಪದವಿಗೆ ನಾಶವಿದೆ ಎಂದು ಹೇಳಲಾಯಿತು. ಅದನ್ನು ಆಕ್ಷೇಪ ಮಾಡಿ ಉತ್ತರಿಸಲಾಗಿದೆ.–

'ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್'

'ವಿರೋಧಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ಅತಃ' ಎಂಬ ಪದವು ಪ್ರಕೃತವಾದ ಶಬ್ದವನ್ನು ಹೇಳುತ್ತಿದೆ. ಪ್ರಭವಶಬ್ದವು ಉತ್ಪತ್ತಿಯ ನಿಯಮವನ್ನು ಹೇಳುತ್ತಿದೆ. ಅಂದರೆ, ಒಂದು ಕಲ್ಪ ಮುಗಿದ ಅನಂತರ, ಮತ್ತೊಂದು ಕಲ್ಪದಲ್ಲಿ ಬೇರೆ ದೇವತೆ ಹುಟ್ಟಿಯೇ ಹುಟ್ಟುತ್ತಾರೆ. 'ತದುಪರಿ' ಎಂದು ಹೇಳಿದ್ದರಿಂದ ದೇವತಾಪದವಿಗೆ ನಾಶವಿದೆಯೆಂದು ತಿಳಿಯುವುದಾದರೆ ಶಬ್ದೇ = ನಿತ್ಯವಾದ ವೇದರೂಪವಾದ ಶಬ್ದದಲ್ಲಿ, ವಿರೋಧಃ = ಅಪ್ರಾಮಾಣ್ಯರೂಪವಾದ ವಿರೋಧವು ಬರುತ್ತದೆ. ಏಕೆಂದರೆ, ಈ ದೇವತೆಯು ನಾಶವಾದ ಮೇಲೆ ಯಾವುದೇ ಇಂದ್ರಾದಿ ದೇವತೆಗಳಿಲ್ಲದ ಕಾರಣ, ವಾಚ್ಯಾರ್ಥವಿಲ್ಲದೆ ಶಬ್ದಕ್ಕೆ ಅಪ್ರಾಮಾಣ್ಯದೋಷವು ಬರುತ್ತದೆ. ಇತಿ ಚೇನ್ನ = ಹೀಗೆ ಆಕ್ಷೇಪ ಮಾಡಬಾರದು. ಅತಃ = ಶಬ್ದದಿಂದ, 'ಧಾತಾ ಯಥಾ ಪೂರ್ವಮಕಲ್ಪಯತ್' 'ಯಥೈವ ನಿಯಮಃ

ಕಾಲೇ' ಇತ್ಯಾದಿ ಆಗಮವಾಕ್ಯಗಳಿಂದ ದೇವತೆಗಳಿಗೆ, ಪ್ರಭವಾತ್ = ಉತ್ಪತ್ತಿಯ ನಿಯಮವಿದೆಯೆಂದು ತಿಳಿದುಬರುತ್ತಿರುವುದರಿಂದ. ಅಂದರೆ ದೇವತೆಗಳು ಪ್ರವಾಹತಃ ನಿತ್ಯರಾದ್ದರಿಂದ, ನ ದೋಷಃ = ಯಾವುದೇ ದೋಷಗಳಿರುವುದಿಲ್ಲ.

**शब्दे उपचरिताऽप्युक्तिः स्यादत उक्तं प्रत्यक्षेति । महतां प्रभवनियमप्रत्यक्षाद-न्येषामुपरितनकालो देववान् कालत्वादित्यनुमानात्तन्नियमावगमादित्यर्थः ।**

ಆಗಮಗಳನ್ನು ಔಪಚಾರಿಕವಾಗಿಯೂ ಅರ್ಥೈಸಬಹುದಲ್ಲವೇ? ಎಂಬ ಆಶಂಕೆಗೆ 'ಪ್ರತ್ಯಕ್ಷ' ಎಂದು ಸೂತ್ರದಲ್ಲಿ ಹೇಳಿದ್ದಾರೆ. ಅಂದರೆ ಮಹಾತ್ಮರಿಗೆ ದೇವತೆಗಳಿಗೆ ಪ್ರವಾಹನಿತ್ಯತ್ವವು ಪ್ರತ್ಯಕ್ಷವಿರುತ್ತದೆ. ನಮ್ಮಂತಹ ಸಾಮಾನ್ಯರಿಗೆ ಅನುಮಾನದಿಂದ ದೇವತೆಗಳ ಪ್ರವಾಹನಿತ್ಯತ್ವವು ಸಿದ್ಧವಾಗುತ್ತದೆ.

'ಉಪರಿತನಕಾಲಃ ದೇವವಾನ್ ಕಾಲತ್ವಾತ್' 'ಮುಂದಿನ ಕಾಲವು ಕಾಲವಾದ್ದರಿಂದ ದೇವತೆಗಳನ್ನೊಳಗೊಂಡಿದೆ' ಎಂಬ ಅನುಮಾನದಿಂದ ಪ್ರಭವದ ನಿಯಮವು ತಿಳಿದುಬರುತ್ತದೆ, ಇಷ್ಟು ಸೂತ್ರಾರ್ಥ.

**नन्वत इत्येवालं किं प्रत्यक्षाद्युक्त्या । मैवम् । श्रुतावुपचारोक्तिनिरासार्थ-त्वादनुमानस्याप्ययोग्यजनार्थत्वात् । अत एव चशब्दाभावः । शब्दप्रत्यक्षानुमानेभ्य इत्यनुक्त्वा पृथगुक्तिश्च प्राङ्निर्देशश्च शब्दस्य जात्या प्रबल्यात् । कर्मणीव सादित्वयुक्तचोद्यसमाध्योः शब्दे, शब्द इव च सान्तत्वनिमित्तशङ्कोत्तरयोः कर्मण्यपि साम्येन विरोधः शब्दकर्मणोरिति चेदिति विन्यसितव्येऽपि कर्मणा देवत्वोक्तौ तर्हि कर्मणि विरोध इति तत्रैवोत्थिते चोद्ये शब्देनोद्धृते तर्हि शब्दे विरोध इत्यनन्तरं शङ्कोत्थानादाकाङ्क्षाक्रमाद्योगद्वयम् ॥**

ಸೂತ್ರದಲ್ಲಿ 'ಪ್ರತ್ಯಕ್ಷಾನುಮಾನಾಭ್ಯಾಂ' ಎಂದು ಹೇಳುವುದು ಬೇಡ. 'ಅತಃ' ಎಂದು ಹೇಳಿದರಷ್ಟೇ ಸಾಕು. ಪ್ರತ್ಯಕ್ಷಾದಿಗಳನ್ನು ಹೇಳಿದ್ದಕ್ಕೆ ಏನು ಪ್ರಯೋಜನ? ಹೀಗೆ ಪ್ರಶ್ನಿಸಬಾರದು. ಶ್ರುತಿಯು ಔಪಚಾರಿಕವಾದ ಅರ್ಥವನ್ನೊಳಗೊಂಡಿದೆ ಎಂದು ಆಶಂಕೆ ಬಂದರೆ ದೇವತೆಗಳ ಪ್ರವಾಹವು ನಿತ್ಯವಾಗಿದೆ ಎಂಬುದನ್ನು ಮಹಾತ್ಮರು ಪ್ರತ್ಯಕ್ಷದಿಂದ ತಿಳಿದಿದ್ದಾರೆ. ಆದ್ದರಿಂದ, ದೇವತಾಪ್ರವಾಹವು ನಿತ್ಯವೆಂದು ಹೇಳುವ ಆಗಮಕ್ಕೆ ಗೌಣಾರ್ಥವನ್ನು ಮಾಡಬಾರದೆಂದು ಅಭಿಪ್ರಾಯ. ಪ್ರತ್ಯಕ್ಷದಿಂದ ತಿಳಿಯುವ ಅರ್ಹತೆ ಇಲ್ಲದ ನಮ್ಮಂತಹ ಸಾಮಾನ್ಯ ಜನರಿಗೆ ಅನುಮಾನ ಪ್ರಮಾಣದಿಂದ ನಿತ್ಯತ್ವವು ಸಿದ್ಧವಾಗುತ್ತದೆಂದು ಅಭಿಪ್ರಾಯ. ಅದಕ್ಕೋಸ್ಕರ, ಅನುಮಾನವನ್ನು ಹೇಳಿದ್ದು ಸಹ ಸಾರ್ಥಕ. ಆದ್ದರಿಂದಲೇ, ಸೂತ್ರದಲ್ಲಿ ಚಶಬ್ದವು ಇರುವುದಿಲ್ಲ. ಹಾಗಾದರೆ, 'ಶಬ್ದಪ್ರತ್ಯಕ್ಷಾನುಮಾನೇಭ್ಯಃ' ಎಂದೇ

ಹೇಳಬಹುದಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಶಬ್ದಕ್ಕೆ ಜಾತ್ಯಾ ಪ್ರಾಬಲ್ಯವಿದೆ. ಇದನ್ನು ತಿಳಿಸುವುದಕ್ಕಾಗಿ ಶಬ್ದವನ್ನು ಪ್ರತ್ಯೇಕವಾಗಿ ಹೇಳಿದ್ದಾರೆ. ಮತ್ತು ಮೊದಲು ಉಲ್ಲೇಖ ಮಾಡಿದ್ದಾರೆ.

ಹಾಗಾದರೆ, 'ವಿರೋಧಃ ಶಬ್ದಕರ್ಮಣೋರಿತಿ ಚೇತ್' ಎಂದು ಒಂದೇ ಸೂತ್ರವನ್ನು ರಚನೆ ಮಾಡಿದರೆ ಸಾಕಾಗಿತ್ತು. ಎರಡು ಪ್ರತ್ಯೇಕ ಸೂತ್ರಗಳನ್ನು ರಚಿಸಲು ಏನು ಕಾರಣ? ಎಂದರೆ ದೇವತಾ ಪದವಿಯು ಸಾದಿಯಾಗಿದೆ ಎಂದು ಹೇಳಿದಾಗ ಕರ್ಮವಿಷಯದಲ್ಲಿ ಆಕ್ಷೇಪ-ಸಮಾಧಾನಗಳು ಹೇಗೆ ಇರುತ್ತವೋ, ಹಾಗೆಯೇ ಶಬ್ದದ ವಿಷಯದಲ್ಲೂ ಸಂದೇಹ ಎಂದರೆ ದೇವತಾ ಪದವಿಯೂ ಸಾಂತವಾಗಿದೆ ಎಂದು ಹೇಳಿದಾಗಲೂ ಶಬ್ದದ ವಿಷಯದಲ್ಲಿ ಶಂಕೆ ಹಾಗೂ ಸಮಾಧಾನಗಳು ಹೇಗೆ ಬರುತ್ತವೋ, ಅದರಂತೆ ಕರ್ಮದ ವಿಷಯದಲ್ಲೂ ಸಮಾನವಾಗಿಯೇ ಬರುತ್ತದೆ. ಅದಕ್ಕೋಸ್ಕರ 'ವಿರೋಧಃ ಶಬ್ದಕರ್ಮಣೋರಿತಿ ಚೇತ್' ಎಂದು ಸೂತ್ರವನ್ನು ಹೇಳಬೇಕಾಗಿದ್ದರೂ, ಕರ್ಮದಿಂದ ದೇವತ್ವವು ಲಭಿಸುತ್ತದೆಂದು ಹೇಳಿದಾಗ ಕರ್ಮದ ವಿಷಯದಲ್ಲೂ ವಿರೋಧವು ಬರುತ್ತದಲ್ಲವೇ? ಎಂದು ಹುಟ್ಟಿದಂತಹ ಆಕ್ಷೇಪವನ್ನು ಶಬ್ದದಿಂದ ಪರಿಹರಿಸಬೇಕು. ಆವಾಗ ಶಬ್ದದ ವಿಷಯದ ವಿರೋಧವು ಪ್ರಸಕ್ತವಾಗುತ್ತದೆ. ಅಂದರೆ, ಮೊದಲು ಕರ್ಮದ ವಿಷಯದಲ್ಲಿ ಆಕ್ಷೇಪವು ಹುಟ್ಟುತ್ತದೆ. ಅದರ ಆಧಾರದಲ್ಲಿ ಶಬ್ದವಿರೋಧವು ಪ್ರಸಕ್ತವಾಗುತ್ತದೆ. ಆದ್ದರಿಂದ, ಮೊದಲು ಕರ್ಮವಿರೋಧವನ್ನು ಹೇಳಿ, ನಂತರ ಶಬ್ದವಿರೋಧವನ್ನು ಆಶಂಕಿಸುವುದು ಆಕಾಂಕ್ಷೆಯ ಕ್ರಮಕ್ಕೆ ಅನುಗುಣವಾಗಿರುತ್ತದೆ. ಆದ್ದರಿಂದ, ಪ್ರತ್ಯೇಕವಾಗಿ ಎರಡು ಸೂತ್ರಗಳನ್ನು ರಚನೆ ಮಾಡಿದ್ದಾರೆ.

अर्थापत्त्या देवप्रवाहनित्यत्वमाह -

**।। ॐ अत एव च नित्यत्वम् ॐ ।। १-३-२९ ।।**

अत एव शब्दनित्यत्वादेव । तदन्यथानुपपत्त्यावेत्यर्थः । नित्यत्वं देवप्रवाहस्येत्यर्थः । किं युक्त्यन्तरान्वेषणेनेत्येवार्थः । न केवलं शब्दात् किन्तु शब्दनित्यत्वान्यथानुपपत्त्या चेति चार्थः । न हीन्द्रागच्छेत्यादिवाचो नित्यत्वं वाच्यानित्यत्वे युज्यत इति भावः । अर्थापत्तेरनुमानविशेषत्वात्पृथगुक्तिः ।।

ಅರ್ಥಾಪತ್ತಿ ಪ್ರಮಾಣದಿಂದ ದೇವತಾಪ್ರವಾಹವು ನಿತ್ಯವಾಗಿದೆ ಎಂದು ಸಮರ್ಥಿಸಲು ಮುಂದಿನ ಸೂತ್ರವು ಹೊರಟಿದೆ –

ಅತ ಏವ ಚ ನಿತ್ಯತ್ವಮ್ ।

ಅತ ಏವ = ಶಬ್ದವು ನಿತ್ಯವಾಗಿರುವುದರಿಂದಲೇ, ಅಂದರೆ ಶಬ್ದನಿತ್ಯತ್ವದ ಅನ್ಯಥಾನುಪಪತ್ತಿಯಿಂದಲೇ ಎಂದರ್ಥ. ನಿತ್ಯತ್ವಮ್ = ದೇವತಾಪ್ರವಾಹಕ್ಕೆ ನಿತ್ಯತ್ವವು ಸಿದ್ಧವಾಗುತ್ತದೆ, ಎಂದು ಸೂತ್ರಾರ್ಥ.

ದೇವತಾಪ್ರವಾಹವು ನಿತ್ಯವಾಗಿದೆ ಎಂದು ಸಮರ್ಥಿಸಲು ಪುನಃ ಬೇರೆ ಯುಕ್ತಿಗಳನ್ನು ಏಕೆ ಹುಡುಕಬೇಕು? ಎಂಬುದು ಏವಕಾರದ ಅಭಿಪ್ರಾಯ. ಕೇವಲ, ಶಬ್ದದಿಂದಷ್ಟೇ ಅಲ್ಲ. ಶಬ್ದನಿತ್ಯತ್ವದ ಅನ್ಯಥಾನುಪಪತ್ತಿಯಿಂದಲೂ ಕೂಡ ಎಂಬುದು 'ಚ' ಶಬ್ದದ ಅರ್ಥ. 'ಇಂದ್ರ ಆಗಚ್ಛ' 'ಎಲೈ ಇಂದ್ರನೇ, ಬಾ' ಇತ್ಯಾದಿ ವಾಕ್ಯಗಳ ನಿತ್ಯತ್ವವು ವಾಚ್ಯಾರ್ಥವು ಅನಿತ್ಯವಾದರೆ ಯುಕ್ತವಾಗುವುದಿಲ್ಲ, ಎಂದು ಅಭಿಪ್ರಾಯ. ಅರ್ಥಾಪತ್ತಿಯು ಬೇರೆ ಪ್ರಮಾಣವಲ್ಲ. ಅನುಮಾನರೂಪವೇ ಆಗಿದೆ, ಎಂಬುದು ನಮ್ಮ ಸಿದ್ಧಾಂತ. ಆದ್ದರಿಂದ, ಹಿಂದಿನ ಸೂತ್ರದಲ್ಲಿ ಹೇಳಿದ ಅನುಮಾನದಿಂದಲೇ ಈ ಸೂತ್ರದಲ್ಲಿ ಹೇಳಲ್ಪಡುವ ಅರ್ಥಾಪತ್ತಿಯ ಸಂಗ್ರಹವಾಗುತ್ತದಲ್ಲವೇ? ಎಂದು ಪ್ರಶ್ನೆ ಮಾಡಬಾರದು. ಅರ್ಥಾಪತ್ತಿಯು ಅನುಮಾನದ ವಿಶೇಷರೂಪವಾದ್ದರಿಂದ ಪ್ರತ್ಯೇಕವಾಗಿ ಹೇಳಿದ್ದು ತಪ್ಪಲ್ಲ.

**ननु देवानां प्रवाहनित्यत्वेऽपि नानानामरूपवत्त्वेनैकप्रकारवेदस्याप्रामाण्याख्यविरोधः स्यादित्यत आह -**

**।। ॐ समाननामरूपत्वाचावृत्तावप्यविरोधो दर्शनात्स्मृतेश्च ॐ ।। १-३-३० ।।**

**तदुपरित्यतो देवानामित्यन्वेति । प्राचीनदेवानां मुक्तत्वेन स्वस्वपदेष्ववृत्तावपि तदन्येषां तत्समाननामरूपत्वात् । तत्वप्रदीपरीत्या समानधर्मकत्वाचेति चशब्दार्थः। तत्प्रतिपादकैकविधवेदस्याप्रामाण्याख्यविरोधो नास्ति । तदेव कुत इति चेत् दर्शनात् । ''यथा पूर्वम्'' इति श्रुतेः । ''अनादिनिधना नित्या'' इत्यादिस्मृतेश्चेत्यर्थः। इन्द्रादिपदस्थत्वोपाधिना तानेव प्रतिपादयतीति भावः ।**

ದೇವತೆಗಳು ಪ್ರವಾಹತಃ ಅನಾದಿನಿತ್ಯರಾಗಿದ್ದರೂ ಬೇರೆ ಬೇರೆ ಹೆಸರು, ರೂಪ, ಆಕೃತಿಗಳನ್ನು ಹೊಂದಿರುತ್ತಾರೆ. ಆದರೆ, ಒಂದೇ ಹೆಸರು, ರೂಪ, ಕೃತಿಗಳನ್ನು ಹೇಳುವಂತಹ ವೇದಕ್ಕೆ ಅಪ್ರಾಮಾಣ್ಯವೆಂಬ ವಿರೋಧವು ಬಂದೇ ಬರುತ್ತದಲ್ಲವೆ? ಎಂಬ ಆಕ್ಷೇಪಕ್ಕೆ ಮುಂದಿನ ಸೂತ್ರ ಉತ್ತರಿಸುತ್ತದೆ.

ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧಃ ದರ್ಶನಾತ್ ಸ್ಮೃತೇಶ್ಚ

'ತದುಪರಿ' ಎಂಬ ಸೂತ್ರದಿಂದ 'ದೇವಾನಾಂ' ಎಂಬ ಪದವನ್ನು ಅನ್ವಯ ಮಾಡಿಕೊಳ್ಳಬೇಕು. ಹಿಂದಿನ ಕಲ್ಪದಲ್ಲಿರುವ ದೇವತೆಗಳು ಈಗ ಮುಕ್ತರಾಗಿರಬಹುದು. ಆದ್ದರಿಂದಲೇ ತಮ್ಮ ಪದವಿಯಲ್ಲಿ ಆ ದೇವತೆಗಳು ಇರುವುದಿಲ್ಲ. ಅಂದ ಮಾತ್ರಕ್ಕೆ, ದೇವತೆಗಳೇ ಇಲ್ಲವೆಂದಲ್ಲ. ಹಿಂದಿನ ಕಲ್ಪಗಳಲ್ಲಿರುವ ದೇವತೆಗಳ ನಾಮ, ರೂಪ ಮೊದಲಾದವನ್ನು ಹೊಂದಿರುವಂತಹ ಮತ್ತೊಬ್ಬ ದೇವತೆಯು ಈ ಕಲ್ಪದಲ್ಲಿ ಅದೇ ಪದವಿಯಲ್ಲಿ ಇರುತ್ತಾನೆ. ತತ್ತ್ವಪ್ರದೀಪದ ಪ್ರಕಾರ, ಸಮಾನ ಧರ್ಮಗಳನ್ನು ಹೊಂದಿರುವುದರಿಂದಲೂ ಎಂದು 'ಚ'ಶಬ್ದದ ಅರ್ಥವಾಗುತ್ತದೆ. ಅಂತಹ ದೇವತೆಗಳನ್ನು

ಪ್ರತಿಪಾದಿಸುವ ಏಕವಿಧವಾದ ವೇದಕ್ಕೆ ಅಪ್ರಾಮಾಣ್ಯವೆಂಬ ವಿರೋಧಕ್ಕೆ ಅವಕಾಶವಿಲ್ಲ. ಪ್ರತಿ ಕಲ್ಪಗಳಲ್ಲಿಯೂ ಇರುವಂಥಹ ದೇವತೆಗಳಿಗೆ ಸಮಾನವಾದ ನಾಮ-ರೂಪಗಳಿರುತ್ತವೆಂದು ಹೇಗೆ ಸಿದ್ಧವಾಗುತ್ತದೆ? ಎಂದರೆ ದರ್ಶನಾತ್ = 'ಯಥಾಪೂರ್ವಮ್' ಎಂಬ ಶ್ರುತಿಯಿರುವುದರಿಂದ. ಸ್ಮೃತೇಶ್ಚ = 'ಅನಾದಿನಿಧನಾ ನಿತ್ಯಾ' ಇತ್ಯಾದಿ ಸ್ಮೃತಿಯು ಪ್ರಮಾಣವಾಗಿರುವುದರಿಂದ, ಎಂದು ಸೂತ್ರಾರ್ಥ. ಇಂದ್ರಾದಿ ಪದವಿಗಳಲ್ಲಿರುವ ಪ್ರಯುಕ್ತ, ಆ ಚೇತನರನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತದೆಂದು ಅಭಿಪ್ರಾಯ.

श्रुतेः स्वरूपक्लृप्तिनियमपरत्वरूपान्यथासिद्धिनिरासकत्वात् स्मृतेः पृथगुक्तिः । चन्द्रिकायान्तु प्राचीनानां तत्पदस्थानां मुक्तानां सतामन्येषां तत्पदप्राप्तिः पुनस्तेषामपि मुक्तिरित्येवं मुक्तेरावृत्तावपीत्येकमर्थमुक्त्वा प्राचीनानां मुक्तत्वेन स्वस्वपदावृत्तावपीति चेति तत्त्वप्रदीपोक्तमावृत्तावित्यस्यार्थान्तरमुक्तम् ॥

'ಧಾತಾ ಯಥಾ' ಇತ್ಯಾದಿ ಶ್ರುತಿಯು ಹಿಂದಿನ ಕಲ್ಪದಂತೆ ಈ ಕಲ್ಪದಲ್ಲಿಯೂ ದೇವತೆಗಳು ಇರುತ್ತಾರೆ ಎಂಬುದಷ್ಟನ್ನೇ ಹೇಳುತ್ತದೆ, ಹೊರತು ಹಿಂದಿನ ಕಲ್ಪದಲ್ಲರುವ ದೇವತೆಯ ನಾಮ, ರೂಪಗಳೆಲ್ಲವನ್ನು ಈ ಕಲ್ಪದಲ್ಲಿರುವ ದೇವತೆಯೂ ಕೂಡ ಹೊಂದಿರುತ್ತಾನೆ ಎಂಬುದನ್ನು ಹೇಳುವುದಿಲ್ಲ. ಈ ಬಗೆಯ ಅನ್ಯಥಾಸಿದ್ಧಿ ಶಂಕೆಯನ್ನು ಹಿಂದಿನ ಕಲ್ಪದ ನಾಮ, ರೂಪಗಳೇ ಈ ಕಲ್ಪದ ದೇವತೆಗಳಲ್ಲಿಯೂ ಇರುತ್ತದೆಂದು ಸ್ಪಷ್ಟವಾಗಿ ಹೇಳುವ ಶ್ರುತಿಯು ನಿರಾಕರಣೆ ಮಾಡಿದೆ. ಆದ್ದರಿಂದ ಸ್ಮೃತಿಯನ್ನು ಪ್ರತ್ಯೇಕವಾಗಿ ಸೂತ್ರಕಾರರು ಹೇಳಿರುತ್ತಾರೆ.

ಸೂತ್ರದಲ್ಲಿರುವ 'ಆವೃತ್ತಾವಪಿ' ಎಂಬುದಕ್ಕೆ ಚಂದ್ರಿಕೆಯಲ್ಲಿ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮಾಡಿದ್ದಾರೆ. ಆಯಾ ಪದವಿಗಳಲ್ಲಿರುವ ಹಿಂದಿನ ದೇವತೆಗಳು ಮುಕ್ತರಾದ ಮೇಲೆ ಬೇರೆ ಚೇತನರು ಪುನಃ ಆ ಪದವಿಯನ್ನು ಹೊಂದುತ್ತಾರೆ. ಅವರಿಗೂ ಕೂಡ ಮೋಕ್ಷವಾಗುತ್ತದೆ. ಹೀಗೆ, ಮುಕ್ತಿಯ ಆವೃತ್ತಿ ಇದ್ದರೂ ಕೂಡ ಎಂಬುದು ಒಂದು ಬಗೆಯ ಅರ್ಥ. ಮತ್ತು, ಹಿಂದಿನ ದೇವತೆಗಳು ಮುಕ್ತರಾದ ಮೇಲೆ ಆಯಾ ಪದವಿಗಳಿಂದ ಆವೃತ್ತಿಯಿದ್ದರೂ ಎಂದು 'ಆವೃತ್ತೌ' ಎಂಬ ತತ್ತ್ವಪ್ರದೀಪದಲ್ಲಿ ಹೇಳಿದ ಮತ್ತೊಂದು ಅರ್ಥವನ್ನು ಕೂಡ ಹೇಳಿರುತ್ತಾರೆ.

देवानामधिकारमाक्षिपति

**॥ ॐ मध्वादिष्वसम्भवादनधिकारं जैमिनिः ॐ ॥ १-३-३१ ॥**

देवानामित्यस्ति । ''असौ वा आदित्यो देवमधु'' इत्याद्युक्तमधुज्योतिष्टोमादि-

विद्यासु देवानामनधिकारं जैमिनिर्मन्यत इत्यर्थः । मोक्षेतरवसुत्वादिफलकासु योग्यानां वसुत्वादिफलानामाप्तत्वादयोग्यानामकाम्यत्वेनार्थिताऽसम्भवादित्यर्थः ॥

ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂದು ಆಕ್ಷೇಪ ಮಾಡುವ ಸೂತ್ರ ಹೀಗಿದೆ -

'ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ'

'ದೇವಾನಾಂ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ಅಸೌ ವಾ ಆದಿತ್ಯೋ ದೇವಮಧು' ಎಂದು ಪ್ರಾರಂಭವಾಗುವ ಮಧುವಿದ್ಯೆಯಲ್ಲಿ ಮತ್ತು ಜ್ಯೋತಿಷ್ಟೋಮಾದಿ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಜೈಮಿನಿ ಋಷಿಗಳು ಭಾವಿಸುತ್ತಾರೆ ಎಂದು ಸೂತ್ರಾರ್ಥ.

ಮೋಕ್ಷಕ್ಕಿಂತ ಇತರವಾದ ವಸು ಮೊದಲಾದ ಪದವಿಗಳೇ ಫಲವಾಗಿ ಉಳ್ಳ ವಿದ್ಯೆಗಳಲ್ಲಿ ಆ ಪದವಿಯನ್ನು ಹೊಂದಿರುವಂತಹ ದೇವತೆಗಳಿಗೆ ಅಧಿಕಾರವಿರುವುದಿಲ್ಲ. ಏಕೆಂದರೆ, ಅಧಿಕಾರಕ್ಕೆ ಪ್ರಯೋಜಕವಾದ ಅರ್ಥಿತ್ವ ಅವರಲ್ಲಿ ಇರುವುದಿಲ್ಲ. ಅಂದರೆ, ಈಗಾಗಲೇ ಆಯಾ ಪದವಿಗಳನ್ನು ಹೊಂದಿರುವುದರಿಂದ ಪುನಃ ಆ ಪದವಿಗಳ ಬಯಕೆ ದೇವತೆಗಳಿಗಿರುವುದಿಲ್ಲ. ಅಂತಹ ಪದವಿಗಳೇ ಫಲವಾಗಿ ಉಳ್ಳ ವಿದ್ಯೆಯಲ್ಲೂ ಅಧಿಕಾರವನ್ನು ಹೊಂದಿರುವುದಿಲ್ಲ. ಯಾರಿಗೆ ಆ ಪದವಿಯನ್ನು ಹೊಂದುವಂಥಹ ಯೋಗ್ಯತೆಯಿರುವುದಿಲ್ಲವೋ, ಅವರೂ ಅದನ್ನು ಬಯಸಬಾರದಾದ್ದರಿಂದ, ಅವರಿಗೂ ಕೂಡ ಮಧುವಿದ್ಯೆಗಳಲ್ಲಿ ಅಧಿಕಾರವಿರುವುದಿಲ್ಲ ಎಂದು ಸೂತ್ರದ ಅಭಿಪ್ರಾಯ.

मोक्षार्थविद्यास्वधिकारः स्यादित्यत आह -

**॥ ॐ ज्योतिषि भावाच्च ॐ ॥ १-३-३२ ॥**

चोऽप्यर्थे । देवानामित्यस्ति । ज्योतिःशब्दो ज्ञानपरः । देवानां ज्ञाने भावात्। वस्तूनामिति शेषः । समस्तवस्तुविषयीकरणादिति यावत् । देवानां सार्वज्ञ्येन मोक्षार्थविद्यास्वपि तत्साध्यज्ञानस्याप्तत्वेनाऽर्थिताऽसम्भवादनधिकारं मन्यत इत्यन्वयः । ज्ञाने भावादिति सर्वज्ञत्वादिति वा वाच्ये ज्योतिषीत्याद्युक्तिरादित्यप्रकाशे सर्ववस्तूनामन्तर्भाववदित्यर्थसूचनार्था ।

ಮೋಕ್ಷವನ್ನು ನೀಡುವಂತಹ ವಿದ್ಯೆಗಳಲ್ಲಿ ಅಧಿಕಾರವನ್ನು ಹೇಳಬಹುದಲ್ಲವೇ? ಎಂಬ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ.

ಓಂ ಜ್ಯೋತಿಷಿ ಭಾವಾಚ್ಚ ಓಂ

'ಚ' ಶಬ್ದವು 'ಅಪಿ' ಎಂಬರ್ಥದಲ್ಲಿದೆ. 'ದೇವಾನಾಂ' ಎಂಬುದು ಈ ಸೂತ್ರದಲ್ಲಿ ಅನುವೃತ್ತವಾಗುತ್ತದೆ. ಜ್ಯೋತಿ ಎಂಬ ಶಬ್ದವು ಜ್ಞಾನ ಎಂಬರ್ಥದಲ್ಲಿದೆ. 'ವಸ್ತೂನಾಂ' ಎಂಬುದನ್ನು

ಶೇಷಪೂರಣ ಮಾಡಿಕೊಳ್ಳಬೇಕು. ಎಂದರೆ ದೇವತೆಗಳ ಜ್ಞಾನದಲ್ಲಿ ಸಕಲ ವಸ್ತುಗಳು ವಿಷಯವಾಗಿರುವುದರಿಂದ ಎಂದರ್ಥವಾಯಿತು. ಎಂದರೆ ದೇವತೆಗಳು ಸರ್ವಜ್ಞರಾದ್ದರಿಂದ ಮೋಕ್ಷವನ್ನು ಕೊಡುವಂತಹ ಯಾವ ತತ್ತ್ವಜ್ಞಾನವಿದೆಯೋ, ಆ ಜ್ಞಾನವನ್ನು ಕೂಡ ದೇವತೆಗಳು ಈಗ ಹೊಂದಿರುತ್ತಾರೆ. ಪುನಃ ತತ್ಫಲಕವಾದ ಬ್ರಹ್ಮವಿದ್ಯೆಯಲ್ಲಿ ಅರ್ಥಿತ್ವವನ್ನು ಉಪಪಾದನೆ ಮಾಡಲು ಬರುವುದಿಲ್ಲ. ಆದ್ದರಿಂದಲೂ ಬ್ರಹ್ಮವಿದ್ಯೆಯಲ್ಲೂ ದೇವತೆಗಳು ಅಧಿಕಾರವನ್ನು ಹೊಂದಿರುವುದಿಲ್ಲವೆಂದು ಜೈಮಿನಿ ಋಷಿಗಳು ಭಾವಿಸುತ್ತಾರೆ.

ಸೂತ್ರದಲ್ಲಿ 'ಜ್ಞಾನೇ ಭಾವಾತ್' 'ಸರ್ವಜ್ಞತ್ವಾತ್' ಎಂದಾಗಲಿ ಹೇಳಬೇಕಾಗಿತ್ತು. 'ಜ್ಯೋತಿಷಿ' ಎಂದೇಕೆ ಹೇಳಿದರು? ಎಂದರೆ ಸೂರ್ಯನ ಪ್ರಕಾಶದಲ್ಲಿ ಸಕಲ ವಸ್ತುಗಳು ಅಂತರ್ಭೂತವಾಗುವಂತೆ ದೇವತೆಗಳ ಜ್ಞಾನದಲ್ಲಿ ಸಕಲ ವಸ್ತುಗಳು ಅಂತರ್ಭಾವವಾಗಿವೆ, ಎಂಬರ್ಥವನ್ನು ಸೂಚಿಸಬೇಕಾಗಿದೆ. ಅದಕ್ಕೋಸ್ಕರ, 'ಜ್ಯೋತಿಷಿ' ಎಂಬ ಪದವನ್ನೇ ಪ್ರಯೋಗಿಸಿದ್ದಾರೆ.

## योगद्वयोक्तमधिकारचोद्यं समाधत्ते

**।।ॐ भावं तु बादरायणोऽस्ति हि ॐ ।। १-३-३३ ।।**

**मध्वादिष्विति अधिकारस्येति देवानामिति चास्ति । तुर्विशेषे । बादरायणस्त्वित्यन्वयः । भावं देवानां मध्वाद्यशेषविद्यास्वधिकारस्य भावं मन्यते । कुतः ? अस्ति हि । अतिशय इति शेषः । मोक्षफले तद्धेतुज्ञाने चातिशयोऽस्ति हि यतोऽतोऽतिशयार्थमित्यर्थः । अन्यथा योग्यस्य ज्ञानफलयोरतिशयस्यानवाप्त्यापत्तेरिति भावः । जैमिनिमतं तु प्राप्तज्ञानफलयोरर्थेऽनाधिकार इत्यविरोधो बोध्यः ।। ८ ।।**

ಎರಡು ಸೂತ್ರಗಳಲ್ಲಿ ಹೇಳಿದ ದೇವತೆಗಳಿಗೆ ವೇದವಿದ್ಯಾಧಿಕಾರವಿಲ್ಲವೆಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡಲು ಮುಂದಿನ ಸೂತ್ರ ಹೊರಟಿದೆ.

ಭಾವಂ ತು ಬಾದರಾಯಣೋಽಸ್ತಿ ಹಿ

'ಮಧ್ವಾದಿಷು' 'ಅಧಿಕಾರಸ್ಯ' 'ದೇವಾನಾಂ' ಎಂಬ ಮೂರು ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ತು'ಶಬ್ದವು ವಿಶೇಷಾರ್ಥದಲ್ಲಿ ಇದೆ. 'ಬಾದರಾಯಣಸ್ತು' ಎಂದನ್ವಯ ಮಾಡಿಕೊಳ್ಳಬೇಕು. ಭಾವಂ = ದೇವತೆಗಳಿಗೆ ಮಧು ಮೊದಲಾದ ಸಕಲ ವಿದ್ಯೆಗಳಲ್ಲೂ ಅಧಿಕಾರವಿರುವುದನ್ನು, ಬಾದರಾಯಣಃ = ಬಾದರಾಯಣರು ಅಂಗೀಕರಿಸಿದ್ದಾರೆ. ಏಕೆಂದರೆ, ಅಸ್ತಿ ಹಿ = 'ಅತಿಶಯೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಮೋಕ್ಷಫಲದಲ್ಲಿ ಮತ್ತು ಅದಕ್ಕೆ

ಕಾರಣವಾದ ಜ್ಞಾನದಲ್ಲಿ ಅತಿಶಯವಿರುವುದರಿಂದ. ಅತಿಶಯಕ್ಕೋಸ್ಕರ ವೇದವಿದ್ಯೆಯನ್ನೋದಬೇಕು ಎಂದರ್ಥ. ಒಂದು ವೇಳೆ ಅಧಿಕಾರವಿಲ್ಲದಿದ್ದರೆ, ಹೀಗೆ ಅಧಿಕಾರವನ್ನು ಹೇಳದಿದ್ದರೆ, ಯೋಗ್ಯವಾದ ಜ್ಞಾನ ಮತ್ತು ಫಲಗಳ ಅತಿಶಯವು ಲಭಿಸದೇ ಇರಬೇಕಾದೀತು ಎಂದು ಅಭಿಪ್ರಾಯ.

ಹಾಗಾದರೆ ಜೈಮಿನಿಗಳ ಅಭಿಪ್ರಾಯಕ್ಕೆ ವಿರೋಧ ಬರುತ್ತದಲ್ಲವೇ? ಎಂದರೆ, ಈಗಾಗಲೇ ನಡೆದಿರುವಂತಹ ಜ್ಞಾನದ ವಿಷಯದಲ್ಲಾಗಲೀ, ಅಥವಾ ಫಲದ ವಿಷಯದಲ್ಲಾಗಲೀ ಪುನಃ ಅರ್ಥಿತ್ವವನ್ನು ಅವರು ಹೊಂದಿರುವುದಿಲ್ಲ. ಅಂತಹ ವಿದ್ಯೆಯಲ್ಲೂ ಕೂಡ ಅವರು ಅಧಿಕಾರಿಗಳಲ್ಲ ಎಂದಷ್ಟೇ ಜೈಮಿನಿಗಳ ಅಭಿಪ್ರಾಯ. ಆದ್ದರಿಂದ, ಯಾವುದೇ ವಿರೋಧಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ದೇವತಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## देवताधिकरणम् (१।३।८)

।। ॐ तदुपर्यपि बादरायणः सम्भवात् ॐ ।। ८ ।।

।। ॐ विरोधः कर्मणीति चेन्नानेकप्रतिपत्तेर्दर्शनात् ॐ ।।

।। ॐ शब्द इति चेन्नातः प्रभवात्प्रत्यक्षानुमानाभ्याम् ॐ ।।

।। ॐ अत एव च नित्यत्वम् ॐ ।।

।। ॐ समाननामरूपत्वाच्चावृत्तावप्यविरोधो दर्शनात्स्मृतेश्च ॐ ।।

।। ॐ मध्वादिष्वसंभवादनधिकारं जैमिनिः ॐ ।।

।। ॐ ज्योतिषि भावाच्च ॐ ।।

।। ॐ भावं तु बादरायणोऽस्ति हि ॐ ।।

पूर्वत्र मनुष्याधिकारत्वादित्युक्तिः तिर्यगाद्यपेक्षयैव, देवादीनां तु अधिकारोऽस्त्येव इत्यत्रोच्यत इति सङ्गतिः । "विश्वे देवा उपासते" इत्युपासकत्वेन श्रुतदेवानाम् उपासनादौ अधिकारोऽस्ति न वेति सन्देहः । नास्तीति पूर्वः पक्षः ॥

ಹಿಂದಿನ ಅಧಿಕರಣದಲ್ಲಿ 'ಮನುಷ್ಯಾಧಿಕಾರತ್ವಾತ್' ಎಂದು ಹೇಳಿದರು. ಬ್ರಹ್ಮವಿದ್ಯೆಯಲ್ಲಿ ಮನುಷ್ಯರಿಗೆ ಅಧಿಕಾರವಿದೆಯೆಂದು ಹೇಳಿದ್ದರಿಂದ ತಿರ್ಯಕ್ ಪ್ರಾಣಿಗಳಿಗೆ ಅಧಿಕಾರವಿಲ್ಲವೆಂಬುದನ್ನು ವ್ಯಾವೃತ್ತಿ ಮಾಡಿದ್ದಾರೆ. ಹೊರತು, ದೇವತೆಗಳಿಗೆ ಅಧಿಕಾರವಿಲ್ಲವೆಂಬುದನ್ನು ವ್ಯಾವೃತ್ತಿ ಮಾಡಿಲ್ಲ. ಹಾಗಾಗಿ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದೇ ಇರುತ್ತದೆ. ಹೀಗೆ, ಈ ಅಧಿಕರಣದಲ್ಲಿ ದೇವತೆಗಳ ಬ್ರಹ್ಮವಿದ್ಯಾಧಿಕಾರವನ್ನು ಸಮರ್ಥನೆ ಮಾಡುವುದರಿಂದ ಹಿಂದಿನ ಅಧಿಕರಣದಿಂದ ಸಂಗತಿಯು ಇರುತ್ತದೆ.

'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯಲ್ಲಿ ಸಕಲ ದೇವತೆಗಳು ಭಗವದುಪಾಸಕರೆಂದು ಹೇಳಲಾಗಿದೆ. ಇಂತಹ ಉಪಾಸನೆಯಲ್ಲಿ ದೇವತೆಗಳಿಗೆ ಅಧಿಕಾರವಿದೆಯೋ? ಇಲ್ಲವೋ? ಎಂಬುದು ಸಂಶಯ. ಅಧಿಕಾರವಿಲ್ಲವೆಂದು ಪೂರ್ವಪಕ್ಷ.

तत्तत्पदविशिष्टानां देवानाम् उत्पत्तिविनाशवत्त्वे इन्द्रादिपदप्राप्तेः पूर्वं पश्चाच्च इन्द्रादिदेवानामभावेन तदुद्देशेन द्रव्यत्यागात्मकयागादिरूपकर्मविरोधस्य तत्तद्देवताबोधकानादिनित्यवेदाप्रामाण्यस्य च आपातात् । पूर्वं पश्चाच्च इन्द्रान्तरस्वीकारेण तेषां प्रवाहतोऽनादिनित्यत्वाङ्गीकारेऽपि एकनामरूपवत्त्वे मानाभावेन नानानामरूपवत्त्वात् एकरूपार्थबोधकवेदाप्रामाण्यानिवारणाच्च, अनादिनित्यत्वेऽवश्यं स्वीकार्ये तादृशानां तत्फले मोक्षेऽर्थिताभावात् ।

ದೇವತೆಗಳು ಉತ್ಪತ್ತಿ-ನಾಶವುಳ್ಳವರು. ಅವರಿಗೆ ದೊರಕುವ ಇಂದ್ರಾದಿಪದವಿಗಳು ಶಾಶ್ವತವಲ್ಲ. ಆದ್ದರಿಂದ, ಯಾವ ಕಲ್ಪದಲ್ಲಿ ಇಂದ್ರಾದಿ ದೇವತೆಗಳು ತಮ್ಮ ಪದವಿಗೆ ಬಂದಿದ್ದಾರೋ, ಅದಕ್ಕಿಂತ ಮೊದಲು ಆ ಪದವಿಯಲ್ಲಿ ಬೇರೆ ಯಾರೂ ಇರಲಿಲ್ಲ. ಮತ್ತು ಮುಂದೆಯೂ ಕೂಡ ಯಾರೂ ಇರುವುದಿಲ್ಲ. ಇಂದ್ರಾದಿ ದೇವತೆಗಳು ಇಲ್ಲದ ಸಮಯದಲ್ಲಿ ಮಾಡುವಂತಹ ದ್ರವ್ಯತ್ಯಾಗರೂಪವಾದ ಯಾಗಾದಿರೂಪ ಕರ್ಮಗಳಿಗೆ ವೈಯರ್ಥ್ಯವೆಂಬ ವಿರೋಧ ಬರುತ್ತದೆ. ಮತ್ತು, ಇಂದ್ರಾದಿದೇವತೆಗಳನ್ನು ಪ್ರತಿಪಾದನೆ ಮಾಡುವಂತಹ ವೇದಕ್ಕೆ ವಾಚ್ಯಾರ್ಥವೇ ಇಲ್ಲದಂತಾಗಿ ಅಪ್ರಾಮಾಣ್ಯ ದೋಷವು ಬರುತ್ತದೆ.

ಅನೇಕ ಇಂದ್ರರಿರುವುದರಿಂದ ಇಂದ್ರಾದಿ ದೇವತೆಗಳು ಪ್ರವಾಹತಃ ಅನಾದಿನಿತ್ಯರಾಗಿದ್ದಾರೆ. ಆದ್ದರಿಂದ, ಹಿಂದಿನ ಅಥವಾ ಮುಂದಿನ ಕಲ್ಪದಲ್ಲಿ ಈ ದೇವೇಂದ್ರರು ಇಲ್ಲದಿದ್ದರೂ ಬೇರೆ

ದೇವೇಂದ್ರಾದಿಗಳು ಇರುತ್ತಾರೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ ಎಂದು ಉತ್ತರಿಸಬಹುದು. ಆದರೆ, ಹಿಂದಿನ, ಮುಂದಿನ ಕಲ್ಪಗಳಲ್ಲಿ ಇರುವ ಇಂದ್ರಾದಿ ದೇವತೆಗಳು ಈಗಿನ ಇಂದ್ರಾದಿ ದೇವತೆಗಳಿಗಿಂತ ಒಂದೇ ಬಗೆಯ ನಾಮ, ರೂಪ, ಕ್ರಿಯೆಗಳನ್ನು ಹೊಂದಿರುತ್ತಾರೆಂಬ ವಿಷಯದಲ್ಲಿ ಪ್ರಮಾಣವಿಲ್ಲ. ಬೇರೆ ಬೇರೆ ನಾಮರೂಪಗಳನ್ನು ಹೊಂದಿರಬಹುದು. ಆದರೆ, ವೇದವು ಮಾತ್ರ ಒಂದೇ ರೀತಿಯಲ್ಲಿಯೇ ಇಂದ್ರಾದಿ ದೇವತೆಗಳನ್ನು ಪ್ರತಿಪಾದನೆ ಮಾಡುತ್ತಿದೆ. ಹಾಗಾಗಿ, ಏಕರೂಪಾರ್ಥಬೋಧಕವಾದ ವೇದಕ್ಕೆ ಅಪ್ರಾಮಾಣ್ಯದೋಷವು ತಪ್ಪಿದ್ದಲ್ಲ.

ಈ ದೋಷವನ್ನು ಪರಿಹರಿಸಲು ದೇವತೆಗಳು ಅನಾದಿನಿತ್ಯರೆಂದೇ ಹೇಳಬೇಕು. ಆವಾಗ, ಮೋಕ್ಷವೇ ಇಲ್ಲವೆಂದಂತಾಯಿತು. ಮೋಕ್ಷವೇ ಫಲವಾಗಿ ಉಳ್ಳಂತಹ ಬ್ರಹ್ಮವಿದ್ಯೆಗಳಲ್ಲಿ ಅಧಿಕಾರವು ಕೂಡ ಅವರಿಗೆ ಕೂಡುವುದಿಲ್ಲ. ಏಕೆಂದರೆ, ಮೋಕ್ಷಕ್ಕೆ ಬೇಕಾಗಿರುವಂತಹ ಅರ್ಥಿತ್ವವೇ ಅವರಲ್ಲಿ ಇರುವುದಿಲ್ಲ.

किञ्च वसुत्वादिफलकमधुविद्यादिषु वस्वादीनामधिकारायोगेन सर्वविद्यासु अनधिकारात् मोक्षांफलिकास्वपि ''नैव देवपदं प्राप्ताः ब्रह्मदर्शनवर्जिताः'' इत्यादेः तेषां सिद्धज्ञानतया मोक्षहेतुज्ञानार्थं अधिकारायोगादिति ॥

ಮತ್ತು, ವಸುಪದವಿಯನ್ನು ನೀಡುವಂತಹ ಮಧುವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ. ಈಗಾಗಲೇ ವಸು ಮೊದಲಾದ ಪದವಿಗಳು ಅವರಿಗೆ ದೊರೆತದ್ದರಿಂದ, ಪುನಃ ಆ ವಿದ್ಯೆಯ ಅಧಿಕಾರವು ಅವರಿಗೆ ಅನಾವಶ್ಯಕ. ಆದ್ದರಿಂದ, ಸಕಲ ವಿದ್ಯೆಗಳಲ್ಲಿ ಅಧಿಕಾರವಿದೆ ಎಂದು ಹೇಳಲಾಗದು. ಇನ್ನು ಮೋಕ್ಷಫಲಕವಾದ ವಿದ್ಯೆಯಲ್ಲಿ ಅಧಿಕಾರವನ್ನು ಹೇಳಬಹುದು. ಆದರೆ, 'ನೈವ ದೈವಪದಂ ಪ್ರಾಪ್ತಾಃ ಬ್ರಹ್ಮದರ್ಶನವರ್ಜಿತಾಃ' ಎಂಬ ಪ್ರಮಾಣದಿಂದ ಈಗಾಗಲೇ ಅವರಿಗೆ ಬ್ರಹ್ಮಜ್ಞಾನವು ಪ್ರಾಪ್ತವಾಗಿದೆ. ಆದ್ದರಿಂದ ಬ್ರಹ್ಮಜ್ಞಾನವನ್ನೇ ನೀಡುವಂತಹ ವೇದದ ಅಧ್ಯಯನವು ಅವರಿಗೆ ಅನಾವಶ್ಯಕ. ಹಾಗಾಗಿ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲವೆಂದು ಪೂರ್ವಪಕ್ಷ.

सिद्धान्तस्तु ॥ देवानामपि विशिष्टबुद्ध्यादिमत्वात् शूद्रवत् अपर्युदस्तत्वाद् आद्यन्तवत्वेन मोक्षेऽर्थित्वस्यापि सम्भवात् तेषाम् उत्पत्तिविनाशवत्त्वेऽपि ''ते ह नाकं महिमानः सचन्त यत्र पूर्वे साध्यास्सन्ति देवाः'' ''धाता यथा पूर्वमकल्पयत्'' (पुरुष सू.) ''यथैव नियमः काले सुरादिनियमस्तथा'' इत्यादिवचनैः प्रमाणभूतवेदस्य अनादिनित्यत्वान्यथानुपपत्त्या च प्रवाहतोऽनादिनित्यत्वात् तेषां च यथापूर्वमिति श्रुत्या अनादिनिधनेत्यादिस्मृत्या समाननामरूपत्वेन

वेदाप्रमाण्यानापत्तेः । मधुविद्यादेः वसुत्वादिफलकत्वेऽपि वस्वादीनां ज्ञाने मोक्षे च अतिशयार्थं तत्र अर्थित्वसम्भवाद् अस्ति ब्रह्मविद्यायां अधिकार इति ॥

ಸಿದ್ಧಾಂತ ಹೀಗಿದೆ. ದೇವತೆಗಳಿಗೆ ವಿಶಿಷ್ಟಬುದ್ಧಿ, ಅರ್ಥಿತ್ವ, ವೈದುಷ್ಯ ಮೊದಲಾದ ಅಧಿಕಾರ ಪ್ರಯೋಜಕವಾದ ಮೂರು ಬಗೆಯ ಧರ್ಮಗಳು ಇರುತ್ತವೆ. ಮತ್ತು, ಶೂದ್ರಾದಿಗಳು ವೇದಾಧ್ಯಯನ ಮಾಡಬಾರದೆಂದು ನಿಷೇಧವಿದ್ದಂತೆ ದೇವತೆಗಳಿಗೆ ಅಂತಹ ನಿಷೇಧವಿರುವುದಿಲ್ಲ. ಉತ್ಪತ್ತಿ-ನಾಶವುಳ್ಳವರಾದ್ದರಿಂದ ಮೋಕ್ಷವಿಷಯದಲ್ಲಿ ಅರ್ಥಿತ್ವವು ಕೂಡ ಯುಕ್ತವಾಗುತ್ತದೆ. ಮತ್ತು ದೇವತೆಗಳು ಅನಾದಿನಿತ್ಯರಾಗಿದ್ದಾರೆ. ಒಬ್ಬೊಬ್ಬ ದೇವತೆಯು ಉತ್ಪತ್ತಿ-ನಾಶವನ್ನು ಹೊಂದಿದ್ದರೂ, ಅದೇ ಸ್ಥಾನದಲ್ಲಿ ಭಿನ್ನ-ಭಿನ್ನರಾದ ದೇವತೆಗಳು ಬರುತ್ತಲೇ ಇರುತ್ತಾರೆ. ಈ ವಿಷಯದಲ್ಲಿ 'ತೇ ಹ ನಾಕಂ ಮಹಿಮಾನಃ ಸಚಂತೇ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' 'ಧಾತಾ ಯಥಾ ಪೂರ್ವಮಕಲ್ಪಯತ್' 'ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ' ಇವೇ ಮೊದಲಾದ ಪ್ರಮಾಣಗಳು ಆಧಾರವಾಗಿವೆ. ಪ್ರಮಾಣಭೂತವಾದ ವೇದವು ಅನಾದಿನಿತ್ಯವಾಗಿದೆ. ಇಂತಹ ವೇದದ ಅನಾದಿನಿತ್ಯತ್ವದ ಅನ್ಯಥಾನುಪಪತ್ತಿಯಿಂದ ದೇವತೆಗಳಿಗೆ ಪ್ರವಾಹತಃ ಅನಾದಿನಿತ್ಯತ್ವವು ಸಿದ್ಧವಾಗುತ್ತದೆ.

ಮತ್ತು, 'ಯಥಾಪೂರ್ವಮ್' ಎಂಬ ಶ್ರುತಿಯು 'ಅನಾದಿನಿಧನಾ' ಎಂಬ ಶ್ರುತಿಯು ಪ್ರತಿಕಲ್ಪದಲ್ಲಿ ಬರುವಂತಹ ದೇವತೆಗಳಿಗೆ ಸಮಾನವಾದ ನಾಮ, ರೂಪ, ಆಕಾರ, ಕ್ರಿಯೆ ಮೊದಲಾದವುಗಳು ಇರುತ್ತವೆ ಎಂದು ಹೇಳುತ್ತಿವೆ. ಆದ್ದರಿಂದ, ವೇದಕ್ಕೆ ಅಪ್ರಾಮಾಣ್ಯದೋಷವು ಕೂಡ ಬರುವುದಿಲ್ಲ.

ಮಧುವಿದ್ಯೆ ಮೊದಲಾದವುಗಳಿಗೆ ವಸುಪದವಿ ಮೊದಲಾದ ಫಲಗಳಿರಬಹುದು. ಆದರೆ, ವಸು ಮೊದಲಾದ ಪದವಿಗಳಲ್ಲಿ ಮತ್ತು ತತ್ತ್ವಜ್ಞಾನದಲ್ಲಿ ಮೋಕ್ಷದಲ್ಲಿಯೂ ಕೂಡ ಹೆಚ್ಚಿನ ಫಲವನ್ನು ಪಡೆಯುವುದಕ್ಕಾಗಿ ಅವರಿಗೆ ಅರ್ಥಿತ್ವವು ಉಪಪನ್ನವಾಗುತ್ತದೆ. ಆದ್ದರಿಂದ, ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆಂದು ಸಿದ್ಧವಾಯಿತು.

फलं तु 'विश्वेदेवा उपासते' इत्यादेः पूर्वोक्तस्याप्रामाण्याक्षेपः तत्समाधिश्च ॥८॥

ಫಲ-ಫಲಿ ಭಾವ ಹೀಗಿದೆ. 'ವಿಶ್ವೇದೇವಾ ಉಪಾಸತೇ' ಇತ್ಯಾದಿಯಾದ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ವೇದವಾಕ್ಯಕ್ಕೆ ಅಪ್ರಾಮಾಣ್ಯವನ್ನು ಆಕ್ಷೇಪ ಮಾಡುವುದೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ದೇವತಾಧಿಕರಣವು ಸಮಾಪ್ತವಾಯಿತು.

ದೇವತಾಧಿಕರಣ (೧-೩-೮)

# सूत्रार्थरत्नावळिः

## देवताधिकरणम् (१।३।८)

अत्र देवानां ब्रह्मविद्याधिकारः समर्थ्यते ।

**ॐ।। तदुपर्यपि बादरायणः सम्भवात् ।। ॐ १-३-२६।।**

ननु न देवानां वेदविद्याधिकारः सम्भवति । तेषामनादिनित्यपदत्वे वा विद्यादिना प्राप्तपदत्वे वाऽधिकारासम्भवात् । देवानां प्राप्तपदत्वेनावाप्तमोक्षेतरसकलपुरुषार्थानां सर्वज्ञत्वे मोक्षप्राप्तिं जानतां क्वापि कामनाऽसम्भवात् । देवानामुत्पत्तिविनाशित्वे ततः पूर्वं देवताऽभावेन देवत्वप्राप्त्यर्थं देवैरनुष्ठीयमानशतकृत्वादिकर्मणां व्यङ्ग्यत्वेन देवादिपदाप्रापकत्वात् । नहि व्यङ्ग्यं कर्म फलजनकम् । बाह्यकृतयज्ञादेरपि फलजनकत्वप्रसङ्गात् । तथा चासतो वन्ध्यापुत्रस्याधिकारादर्शनाद्देवानां नाधिकार इति प्राप्ते सूत्रितम् –

ॐ।। तदुपर्यपि बादरायणः सम्भवात् - इति । तस्यार्थः – तदुपर्यपि देवत्वयोग्यमनुष्याणां न केवलं मनुष्यत्वदशायां किन्तु देवादित्वप्राप्त्यनन्तरमपि वेदविद्याधिकारोऽस्ति । कुतः? सम्भवात् तेषामप्यधिकारप्रयोजकविशिष्ट-बुद्धेर्योगादिति बादरायणो भगवान् वक्तीत्यर्थः ।

एवञ्च न देवानां तिर्यगादीनामिव वेदविद्याधिकारोऽसम्भावितः । सम्भावकस्य विशिष्टबुद्ध्यादेर्भावात् । सत्यां च सम्भावनामयं प्रयोग उपजायते । देवा वेदविद्याधिकारवन्तः। तदुपर्यपि देवत्वप्राप्त्युपर्यपि देवाधिकारोपयोगिनोः सामर्थ्यविद्वत्वयोरर्थत्वस्य मोक्षगतातिशय-योग्यत्वादेव सम्भवात् । नच देवा न विद्याधिकारिणोऽमनुष्यत्वात् तिर्यगादिवदिति मानम्। विशिष्टबुद्ध्यादिराहित्यस्योपाधित्वात् । नच जरितर्यादिष्वनधिकारेऽपि विशिष्टबुद्ध्यादेः सत्वेन विशिष्टबुद्ध्यादिराहित्याभावेन साध्याव्यापकत्वान्नायमुपाधिरिति । तेषामधिकारत्वे नानधिकाररूपसाध्यस्य तत्राभावात् । 'अयमग्ने जरिता' इति (ऋ. १०-१४२-१) श्रुतेः। ननु तेषामप्यधिकारे पूर्वाधिकरणविरोधः । अमनुष्यत्वादित्यधिकारनिषेधादिति चेन्न । भावानवबोधात्। पूर्वाधिकारिणेऽङ्गुष्ठाभावेनाङ्गुष्ठमात्रविद्यायामनधिकार उक्तः । इह तु तत्रोक्तमङ्गीकृत्य विद्यान्तराधिकाराभिधानात् । अतो देवानां वेदविद्याधिकार इति सिद्धम् ।।

## ॐ।। विरोधः कर्मणीति चेन्नानेकप्रतिपत्तेर्दर्शनात् ।। ॐ १-३-२७ ।।

ननु यद्देवानां सादिविनाशित्वमिति द्वितीयकल्पमङ्गीकृत्य वेदविद्याधिकारकथनं तदयुक्तम् । देवानां सादिविनाशित्वे ततः पूर्वे देवताऽभावेन पूर्वकल्पे प्रवृत्तकर्मण्युद्देशाभावाद्वैयर्थ्याख्य-विरोधापत्तेरित्याक्षिप्य, समादधत् सूत्रं पठति –

ॐ।। विरोधः कर्मणीति चेन्नानेकप्रतिपत्तेर्दर्शनात् - इति । अस्यार्थः। देवादीनां सादित्वे कर्मणि पूर्वकल्पे प्रवृत्तयज्ञादिकर्मणि विषये । विरोधः उद्देश्याभावनिमित्तवैयर्थ्याख्यविरोधः स्यादिति चेन्न । कुतः? अनेकप्रतिपत्तेः। अनेकेषां योग्यमनुष्याणाम् । देवतापदप्राप्तेर्दर्शनात् यत्र पूर्व इति (तै.आ. ३-१२) श्रुतावुक्तत्वादित्यर्थः ।

एवञ्च तेषां प्रवाहतोऽनादिनित्यत्वेनैतद्देवानामभावेऽपि देवतान्तरसद्भावात् । तेह नाकमिति श्रुतौ एकैकगणशोऽनन्तानां देवत्वादियोग्यमनुष्याणां विद्याकर्मभ्यां पूर्व पूर्व देवतापदप्राप्तेर्दर्शनात्। ततश्च वैयर्थ्याख्यविरोधभाव इति सिद्धम् ।।*।।

## ॐ।। शब्द इति चेन्नातःप्रभवात् प्रत्यक्षानुमानाभ्याम् ।।ॐ १-३-२८

ननु वेदानित्यत्वे प्रामाण्यायोगेन नित्यत्वं तावदङ्गीकार्यम् । 'वाचा विरूपा' इति श्रुतेः। तद्वाच्या देवा यद्यनित्यास्तर्हि पूर्वदेवतापरित्यागेनान्यदेवतावाचकत्वमभ्युपेयम् । न चैतद् घटते । वाक्यस्यार्थेन स्वाभाविकसम्बन्धात् । नहि किमपि वाक्ये केचित्कालं कञ्चिदर्थं प्रतिपाद्य तमपहाय कालान्तरेऽर्थान्तरं प्रतिपादयतीति दृष्टचरं येन वेदेऽपि तथा स्यात् । वेदे तथात्वमङ्गीकुर्वाणेन वेदस्यार्थेन सम्बन्धः काल्पनिक इत्यङ्गीकार्यः । तथा काल्पनिकसम्बन्धस्याप्रामाण्य-प्रयोजकत्वाद्वेदाप्रामाण्यम् । काल्पनिकसमबन्धस्य प्रामाण्यप्रयोजकत्वेऽपि वेदप्रामाण्यं न घटते । प्रामाणिकत्वेन पूर्वदेवताप्रवाहनियमेऽपि प्रमाणाभावेनोत्तरकल्पेष्वपि देवताप्रवाहनियमाभावेन काल्पनिकसम्बन्धस्याप्यभावादित्याक्षिप्य, समादधत् सूत्रमाह –

ॐ।। शब्द इति चेन्नातःप्रभवात् प्रत्यक्षानुमानाभ्याम् - इति । अस्यार्थः – विरोध इति वर्तते । देवानामाद्यन्तवत्त्वे शब्दे वेदे । अप्रमाण्याख्यविरोधः स्यात् । नित्यत्वेन श्रुतिसिद्धवेदवाचां कदाचिद्वाच्यहीनत्वादिति भावः । इति चेन्न । अतः 'धाता यथा' (महाना, ५-७) इति वेदवाक्यात् । तथा प्रत्यक्षानुमानाभ्याम् । महतां प्रत्यक्षात् । देवानां प्रवाहतः उत्पत्तिसाधक-

लिङ्गाच्च । प्रभावात् प्रतिकल्पं नियमेन प्रभवशब्दितोत्पत्त्यवगमाच्चोक्तं युक्तमिति भावः ।

एवञ्च 'सूर्याचन्द्रमसौ' इति श्रुतेः । महतां प्रत्यक्षात् । उत्तरकल्पः देववान् अप्रलयकालत्वादित्यनुमानस्य च भावात् । न च सम्बन्धस्य काल्पनिकत्वान्न प्रामाण्यप्रयोजकत्वमिति वाच्यम् । अन्यान्यदेवतासम्बन्धस्य 'अनादिनिधने'ति प्रामाण्यसिद्धत्वेनाकाल्पनिकत्वात् । तथा च वैयर्थ्याख्यविरोधाभाव इति सिद्धम् ।।*।।

**ॐ।। अत एव च नित्यत्वम् ।।ॐ १-३-२९**

युक्त्यन्तरेण देवप्रवाहस्य नित्यतां साधयत्सूत्रमुपन्यस्यति –

ॐ।। अत एव च नित्यत्वम् - इति ।। अस्यार्थः – अत एव पूर्वपक्ष्युक्तवेदनित्यत्वादेव । तदन्यथाऽनुपपत्त्याऽपि तद्वाच्यदेवताप्रवाहस्य नित्यत्वं सिद्ध्यतीत्यर्थः ।

एवञ्च परेणाभिहितवेदनित्यत्वस्यान्यथाऽनुपपत्त्यैव देवताप्रवाहनित्यत्वस्य सिद्धत्वात्। वाच्यस्य नित्यत्वाभावे एवं रूपाया वाचो नित्यत्वं नोपपद्यते । उत्पत्तिविनाशित्वात् स्वरूपनित्यत्वायोगेन तेषां प्रवाहरूपेणैव नित्यत्वं सिद्धम् ।।*।।

**ॐ।। समाननामरूपत्वाच्चावृत्तावप्यविरोधो दर्शनात् स्मृतेश्च ।। ॐ १-३-३०**

ननु देवताप्रवाहस्य नित्यत्वेऽपि वेदप्रामाण्यस्यानुपपद्यमानत्वं भवेत् । पूर्वकल्पमुक्तानामुत्तरकल्पे पुनरावर्तनत्वे मुक्तेरपुनरावृत्तित्वात् । तदन्येषां पुनरावर्तनत्वे धर्मिभूतदेवानित्यत्वहेतुकं विरोधाभावेऽपि नामरूपादिधर्मवैचित्र्यकृतविरोधापत्तेः । वाचकवेदस्य प्रतिकल्पे पाठभेदाभावेनैकविधत्वात् । वाच्यदेवानां च नानाविधनामरूपवत्त्वादिति प्राप्ते सूत्रमाह –

ॐ।। समाननामरूपत्वाच्चावृत्तावप्यविरोधो दर्शनात् स्मृतेश्च इति । अस्यार्थः – आवृत्तावपि पूर्वकल्पे मुक्तानां देवानां पुनः स्वपदेषु असत्त्वेऽपि। अविरोधः तत्प्रतिपादकैकविधवेदाप्रामाण्याख्यविरोधो नास्ति । कुतः? समाननामरूपत्वात् एतत्कल्पोत्पन्नानामपि देवानां प्राचीनतुल्यनामरूपत्वात्। तथा च प्रतिपाद्यस्याप्येकविधत्वात् न

तद्बोधकवेदाप्रामाण्यमिति भावः । एकविधत्वमेव कुत इत्यत उक्तम् – दर्शनात् स्मृतेश्चेति ।। 'यथा पूर्वम्' इति श्रुतेः । अनादिनिधनेति स्मृतेश्चेत्यर्थः ।

एवञ्च इन्द्रादिदेवतानां वेदे यादृशे नामरूपे प्रतिपाद्येते तयोरेव कल्पान्तरे जायमानानां देवानामभ्युपगमात् । तत्प्रामाणिकत्वे यथा पूर्वमिति श्रुतेः, अनादिनिधनेति स्मृतेश्च सद्भावात् । तथा च वेदाप्रामाण्याख्यविरोधाभाव इति सिद्धम् ।।*।।

**ॐ।। मध्वादिष्वसम्भवादनाधिकारं जैमिनिः ।।ॐ १-३-३१**

ननु न वेदानां वेदविद्याधिकारो युक्तः । वेदविद्या मुख्यफलार्थास्तदितरफलार्थश्चेति द्विविधाः । मोक्षेतरफला अपि ब्रह्मकर्मभेदान्मधुविद्याऽग्निष्टोमविद्या चेति द्विविधाः । तत्र तावन्न देवानां मोक्षेतरफलकद्विविधविद्यास्वधिकारो युज्यते । तत्साध्यानां मोक्षेतरफलानां मध्ये केषाञ्चिद्योग्यानां प्राप्तत्वेनायोग्यानां च प्राप्तुमशक्यत्वेनार्थित्वाभावादिति [illegible] ावलम्बेन वेदविद्याधिकारत्वस्य सामान्यनिषेधप्राप्ते सूत्रमाह –

ॐ।। मध्वादिष्वसम्भवादनाधिकारं जैमिनि[illegible] । 'मध्वादिषु असौवाऽऽदित्यो देव मधु' (छां. ३-१-१) इत्याद्युक्तं मध्वादिविद्यासु । अनधिकारं देवानामधिकाराभावम् । जैमिनिराचार्यो मन्यते कुतः? असम्भवात् तेषामर्थित्वतत्पदयोग्यत्वाद्ययोगादित्यर्थः ।

एवञ्च कक्षद्वयमध्ये प्रथमे तथा द्वितीयस्य प्रथमेऽसम्भवात् । द्वितीयस्य द्वितीयेऽर्थित्वाभावाच्चाधिकारस्य निषेधान्नत्वधिकारमात्रस्य निषेधात् । जैमिन्याचार्यमताविरोध इति सिद्धम् ।।*।।

**ॐ।। ज्योतिषि भावाच्च ।।ॐ १-३-३२**

ननु मास्तु मोक्षेतरफलविद्यास्वाधिकारो देवानाम् । तथाऽपि 'सत्यं ज्ञानम्' (तै. २-१-१) इत्यादि मोक्षार्थविद्यास्वधिकारो भविष्यति । तत्रार्थित्वसम्भवादित्याशङ्कां परिहरत् सूत्रं पठति –

ॐ।। ज्योतिषि भावाच्चेति ।। अस्यार्थः । ज्योतिषि देवानां ज्ञाने । भावात् सर्ववस्तूनां विषयतयान्तर्भूतत्वात् सिद्धज्ञानानां देवानां न ज्ञानार्थता युज्यत इति न मोक्षविद्यास्वधिकार इत्यर्थः ।

एवञ्च देवानां सार्वज्ञ्येन सर्वब्रह्मकर्मविद्यासाध्यज्ञानानां नियमेन प्राप्तत्वेनात एव वेदद्रष्टृत्वात् । ततश्च तेषामुभयविद्यासाध्यज्ञानेऽर्थिताया असम्भवात् । तस्मात् जैमिनिमताविरोध इति सिद्धम् ।।*।।

## ॐ।। भावं तु बादरायणोऽस्ति हि ।।ॐ १-३-३३

एवं देवैर्मोक्षेतरयोग्यफलानां प्राप्तत्वात् । अयोग्यानां प्राप्तुमशक्यत्वात् । मोक्षस्यापि ब्रह्मज्ञानित्वेनार्थतो लब्धत्वात् । अर्थित्वाभावेन तेषां कास्वपि विद्यास्वधिकाराभावेन जैमिनिमतावलम्बिना समर्थिते पुनरधिकारं समर्थयत् सूत्रमुपन्यस्यति –

ॐ।। भावं तु बादरायणोऽस्ति हि – इति । अस्यार्थः – बादरायणस्तु । हि यस्मात् । देवानामप्यस्ति विद्यासाध्यपूर्वप्रकाशविशेषो मोक्षफलेऽतिशयश्चास्ति । तस्माद्भावं देवानामधिकारसद्भावं मन्यत इत्यर्थः । जैमिनिमतं तु देवानां प्राप्तज्ञानफलार्थमनधिकाराभिप्रायमित्यवधेयम् ।

एवञ्च यद्यपि देवाः प्राप्तपदा ब्रह्मज्ञानित्वात् सिद्धमोक्षतदितरफलाः प्राप्तुमशक्यायोग्यफलाश्च । तथाऽपि प्राप्तपदानामपि देवानां मध्वादिविद्यासूक्तोपासना कर्मकरणाभ्यां फलविशेषभावेन स्वस्वयोग्यस्य ज्ञानमात्रेणासाध्यस्य मोक्षफलेऽतिशयस्य भावेन सिद्धेरर्थित्वसम्भवात् । मोक्षफल आनन्दातिशयरूपविद्याफलस्य भावेन ज्ञानार्थमप्यधिकारसम्भवात् । 'यावत्सेवापरः' इति स्कान्दवचनात् । भगवद्व्यतिरिक्तानां निरुपचरितसार्वज्ञ्याभावेन विद्याविचारेण ज्ञानलाभसम्भवात् । जैमिनिमतस्य देवानां प्राप्तफलार्थमनधिकाराभिप्रायेणाविरुद्धत्वात् । एवं भगवता बादरायणेन देवानां मध्वाद्यशेषविद्यास्वधिकाराभावस्योक्तत्वात् । ततश्च सर्वदेवोपास्यत्वं विष्णोयुक्तमिति सिद्धम् ।।*।।

।। इति सूत्रार्थरत्नावळ्यां देवताधिकरणम् ।।

# ಅಪಶೂದ್ರಾಧಿಕರಣ

## (೧-೩-೯)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಅಪಶೂದ್ರಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಶೂದ್ರರಿಗೆ ವೇದಾಧಿಕಾರವಿಲ್ಲ

**।। अथ अपशूद्राधिकरणम् ।।**

**सू — ॥ ॐ शुगस्य तदनादरश्रवणात्तदाद्रवणात्सूच्यते ॐ ॥ ३४ ॥**

ಸೂತ್ರಾರ್ಥ - ಹಂಸಗಳ ತಿರಸ್ಕಾರದ ಮಾತುಗಳಿಂದ ಪೌತ್ರಾಯಣನಿಗೆ ಬಹಳ ದುಃಖವಾಗಿದೆ. ದುಃಖದಿಂದ ಕರಗಿರುವುದರಿಂದಲೇ ರೈಕ್ವ ಮುನಿಯು ಅವನನ್ನು ಶೂದ್ರನೆಂದು ಸಂಬೋಧಿಸಿದ್ದಾನೆ. ರಾಜನಿಗೆ ದುಃಖವಾಗಿದೆ ಎಂಬ ವಿಷಯವು ಎದ್ದಕೂಡಲೇ ರೈಕ್ವಮುನಿಯ ಅನ್ವೇಷಣೆಗಾಗಿ ಸಾರಥಿಯನ್ನು ಆಜ್ಞೆ ಮಾಡಿದ್ದರಿಂದ ಸೂಚಿತವಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** अस्य पौत्रायणाख्यस्य राज्ञः तदनादरश्रवणात् हंसकृतस्य ''कम्वर एनम्'' इत्यनादरस्य श्रवणान्निमित्तात् । शुक् शोकः । तथाऽपि कुतः शोकः? इत्यत उक्तम् । सूच्यते हीति । हि यस्मात् । ''स ह सञ्जिहान एव''

इत्युत्तरवाक्येन सूच्यते तथा ज्ञायते । तस्माच्छोकः अस्मादेव निमित्तात् । राज्ञा रैक्केण ऋषिणा शूद्रेति सम्बोधितः । नतु वर्णावरत्वाभिप्रायेणेत्यर्थः । तथा च नैतज्ज्ञापकबलेन शूद्रस्य वेदविद्याधिकारो मन्तव्य इति भावः ।।१।।

ಅರ್ಥ -- ಅಸ್ಯ = ಪೌತ್ರಾಯಣನೆಂಬ ರಾಜನಿಗೆ, ತದನಾದರಶ್ರವಣಾತ್ = ಹಂಸಗಳು ಮಾಡಿದ, 'ಕಂ ಉ ಅರೆ ಏನಂ' ಮುಂತಾದ ತಿರಸ್ಕಾರದ ಮಾತುಗಳನ್ನು ಕೇಳಿರುವ ಕಾರಣದಿಂದ, ಶುಕ್ = ದುಃಖ ಉಂಟಾಗಿದೆ, ರಾಜನಿಗೆ ದುಃಖ ಉಂಟಾಗಿದೆ ಎಂದು ನಮಗೆ ಹೇಗೆ ತಿಳಿಯುತ್ತದೆ? ಎಂದರೆ, ಸೂಚ್ಯತೇ ಹಿ = ಯಾವ ಕಾರಣದಿಂದ ಆ ರಾಜನು, ಸ ಹ ಸಂಜಿಹಾನ ಏವ = ಹಾಸಿಗೆಯಿಂದ ಎದ್ದ ಕೂಡಲೇ ರಾಜನು ಸಾರಥಿಯನ್ನು ಕುರಿತು ಹೇಳಿದನು ಎಂಬ ಮುಂದಿನ ವಾಕ್ಯದಿಂದ ರಾಜನ ವ್ಯಗ್ರತೆಯು ಸೂಚಿತವಾಗಿದೆ. ಈ ಕಾರಣದಿಂದಲೇ ರಾಜನಿಗೆ ಶೋಕ ಉಂಟಾಗಿದೆ. ಈ ದುಃಖದಿಂದ ಕರಗಿರುವುದರಿಂದಲೇ ರಾಜನು ರೈಕ್ವಮುನಿಯಿಂದ ಶೂದ್ರನೆಂದು ಸಂಬೋಧಿಸಲ್ಪಟ್ಟಿದ್ದಾನೆ ಹೊರತು ನೀಚಜಾತಿಯವನು ಎಂಬ ಕಾರಣದಿಂದಲ್ಲ. ಹೀಗೆ ಛಾಂದೋಗ್ಯ ಉಪನಿಷತ್ತಿನ ಆಧಾರದಿಂದ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲವೆಂದು ತಿಳಿಯಬೇಕು.

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – मनुष्याधिकारत्वादित्युक्तेऽविशेषाच्छूद्रस्यापि 'अह हारेत्वा शूद्र' (छा. ४-२-३.) इति पौत्रायणोक्तेरधिकार इति ।**

ಅನುವಾದ - ವಾಮನಾಧಿಕರಣದ ಕೊನೆಯ ಸೂತ್ರದಲ್ಲಿ ಮನುಷ್ಯರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳಿದರು. ಹಾಗಾದಲ್ಲಿ, ಶೂದ್ರರೂ ಕೂಡ ಮನುಷ್ಯರಾದ್ದರಿಂದ, ಬ್ರಹ್ಮವಿದ್ಯೆಯಲ್ಲಿ ಇವರಿಗೂ ಅಧಿಕಾರವನ್ನು ಹೇಳಬೇಕಲ್ಲವೆ? ಮತ್ತು 'ಅಹ ಹಾರೇತ್ವಾ ಶೂದ್ರ' ಎಂಬುದಾಗಿ ಪೌತ್ರಾಯಣನನ್ನು ರೈಕ್ವ ಋಷಿಗಳು 'ಎಲೈ ಶೂದ್ರನೇ !' ಎಂದು ಸಂಬೋಧನೆ ಮಾಡಿದ್ದರಿಂದಲೂ ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯಲ್ಲವೇ?

ಪ್ರತಿಪದಾರ್ಥ -- ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂಬುದನ್ನು ಈ ಅಧಿಕರಣವು ನಿರಾಕರಣೆ ಮಾಡುತ್ತಿದೆ. ಪ್ರಾಸಂಗಿಕವಾಗಿ, ಈ ಅಧಿಕರಣ ಹೊರಟಿದ್ದರಿಂದ ಅಧ್ಯಾಯಸಂಗತಿಯನ್ನಾಗಲಿ ಪಾದಸಂಗತಿಯನ್ನಾಗಲಿ ಅನ್ವೇಷಣ ಮಾಡಬೇಕಾಗಿಲ್ಲ. ಆದರೆ, ಶ್ರುತಿಸಂಗತಿ, ಅಧಿಕರಣಸಂಗತಿಗಳು, ವಿಷಯಾದಿಗಳು ಕೂಡ ಇರುತ್ತವೆಂದು ಹೇಳುತ್ತಿದ್ದಾರೆ –

ಮನುಷ್ಯಾಧಿಕಾರತ್ವಾತ್ = ವೇದವಿದ್ಯೆಯಲ್ಲಿ ಮನುಷ್ಯರಿಗೆ ಅಧಿಕಾರವಿರುವುದರಿಂದ, ಇತ್ಯುಕ್ತೇ = ಹೀಗೆ ವಾಮನಾಧಿಕರಣದ ಕೊನೆಯ ಸೂತ್ರದಲ್ಲಿ ಹೇಳಿದ್ದರಿಂದ,

ಅವಿಶೇಷಾತ್ = ಮನುಷ್ಯತ್ವವು ಶೂದ್ರರಲ್ಲಿಯೂ ಸಮಾನವಾದ ಕಾರಣ, ಶೂದ್ರಸ್ಯಾಪಿ = ಶೂದ್ರನಿಗೂ ಕೂಡ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಮತ್ತು, ಅಹ ಹಾರೇತ್ವಾ ಶೂದ್ರ ಇತಿ = ಛಾಂದೋಗ್ಯಶ್ರುತಿಯಲ್ಲಿ 'ಎಲೈ ಶೂದ್ರನೇ!' ಎಂದು ಪೌತ್ರಾಯಣೋಕ್ತೇಃ = ಪೌತ್ರಾಯಣರಾಜನನ್ನು ಸಂಬೋಧನೆ ಮಾಡಿದ್ದರಿಂದ, ಅಧಿಕಾರಃ = ವೇದವಿದ್ಯಾಧಿಕಾರವು ಶೂದ್ರರಿಗೂ ಕೂಡ ಇರುತ್ತದೆ. ಇತಿ = ಹೀಗೆಂದರೆ,[१]

(१) **भाष्यदीपिका** – अत्राधिकरणे त्रिवर्णेतरस्य शूद्रस्य वेदोक्तब्रह्मविद्याधिकारो निराक्रियते । प्रासङ्गिकत्वान्नाध्यायादिसङ्गतिरन्वेषणीया । श्रुत्यादिसङ्गतिं विषयादिकं च सूचयति – **मनुष्येति** निमित्तसप्तमीयम् । अधिकारोपयोगितयोक्ते मनुष्यत्वेऽविशेषादिति वा । न केवलं द्विजातीनां, किन्तु शूद्रस्यापीत्यपेर्थः । तथा च शूद्रस्यापि वेदविद्याधिकारः प्राप्नोति। कुतः ? **'मनुष्याधिकारत्वात्'** इत्यनेन मनुष्याणामधिकारस्योक्तत्वात् । अधिकारोपयोगितयोक्ते मनुष्यत्वे च शूद्रस्य द्विजातिभ्यः **'अविशेषात्'** विशेषाभावात् । ननु न मनुष्यत्वं वेदविद्याधिकारोपयोगि, किन्तु विशिष्टबुद्ध्यादिमत्त्वमेवेत्यतोऽप्याह – **अविशेषादिति ॥** शूद्रस्य विशिष्टबुद्ध्यादिमत्त्वेऽप्यन्येभ्यः 'अविशेषात्' विशेषाभावादित्यर्थः। एवमविशेषाख्ययुक्तिमभिधाय शूद्रस्य वेदविद्याधिकारादर्शनात्, अनधिकार इत्यतो लिङ्गदर्शनमाह – **पौत्रायणोक्तेरिति ॥** छान्दोग्ये पौत्रायणस्य वैदिकसंवर्गविद्याध्ययनोक्ते-र्दर्शनादित्यर्थः । ननु पौत्रायणाख्यपुरुषस्य शूद्रत्वमेव कुत इत्यतः तज्ज्ञापकमाह – **अह हारेत्वा शूद्रेति ॥ पौत्रायणोक्तेरिति ॥** पौत्रायणं प्रति रैक्वोक्तेस्तत्कर्तृकसम्बोधनादेवेत्यर्थः। नन्वधिकाराभावेऽपि पौत्रायणो वेदविद्यां विचारयामासेति किं न स्यादित्यतोऽप्याह – **पौत्रायणोक्तेरिति ॥** पौत्रायणं प्रति रैक्वेण निस्पृहेण मुनिना संवर्गविद्योपदेशादित्यर्थः । अनधिकारिणं प्रति मुनेरुपदेशासम्भवात् ।

पौत्रायणस्य अर्थाच्छ्रुतावधिकारोक्तेश्चेति वा योजना । अधिकार इत्यनन्तरमतो विरोध इत्यनुकृष्यते । तस्योक्त इत्यनेनान्वयः ।

अनेनोक्तन्यायेन उक्तार्थे श्रुत्यादिप्रमाणविरोधाक्षेपात् पूर्वेणास्याऽक्षेपिकी सङ्गतिः, वेदविद्याधिकाराख्यो विषयः, सयुक्तिकपूर्वपक्षश्च दर्शितो भवति । छान्दोग्ये चतुर्थाध्याये संवर्गप्रकरणे हीत्थमाख्यायिका – पौत्रायणो नाम राजा प्रासादाग्रे निशायां शयानोऽभूत् । तदा प्रासादोपरि हंसपक्षिणोऽगमन् । उपरिपततां परस्परं वार्तां कुर्वतां तेषां मध्ये द्वावग्रगामिनावास्ताम् । तत्रैक एकमुवाच । किमिति ? अरे पौत्रायणीयं तेजस्त्वं मा गमः । तत्सम्बन्धे तदीयं तेजस्त्वां दहेदिति । एवमुक्तः परो हंसः कमित्याक्षेपवचनेन राजानमनादृत्य रैक्वमुनिमेव प्रशशंस । तच्छ्रुत्वा परितप्तमना राजा तल्पादुत्थितस्त्वरया स्वसारथिमाहूय रैक्वगवेषणायाऽदिदेश । स तत्र तत्र रैक्वमन्विष्यन् नाविदमिति प्रथममागतः। पुनस्तल्लक्षणोक्तिपूर्वकं राज्ञा तन्मार्गणायाऽदिष्टः पुनरन्विष्य क्वचित् प्रदेशे रैक्वमवलोक्य पुना

भाष्यम् – अत आह –

**सू - ॐ ॥ शुगस्य तदनादरश्रवणात्तदाद्रवणात्सूच्यते हि ॥ ॐ ॥३४**

**नासौ पौत्रायणश्शूद्रः शुचाऽऽद्रवणमेव शूद्रत्वम् ।**

ಅನುವಾದ - ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಪೌತ್ರಾಯಣನು ಶೂದ್ರಜಾತಿಯವನಲ್ಲ. ಹೊರತಾಗಿ, ಶೋಕಪೂರ್ಣನಾಗಿ ಋಷಿಯ ಬಳಿ ಬಂದಿದ್ದರಿಂದ ಶೂದ್ರ ಎಂದು ಸಂಬೋಧಿಸಿದ್ದಾರೆ.

ಪ್ರತಿಪದಾರ್ಥ -- ಸಿದ್ಧಾಂತ ಸ್ಥಾಪನೆಗಾಗಿ ಸೂತ್ರ ಹೊರಟಿದೆ –

ಅತಃ ಆಹ = ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ, ಅಸೌ ಪೌತ್ರಾಯಣಃ = ಈ ಪೌತ್ರಾಯಣನು, ನ ಶೂದ್ರಃ = ಶೂದ್ರಜಾತಿಯವನಲ್ಲ. ಏಕೆಂದರೆ, ಶುಚಾ = ಶೋಕಪೂರ್ಣನಾಗಿ, ಆದ್ರವಣಮೇವ = ಓಡಿ ಬಂದವನಾದ ಕಾರಣದಿಂದಲೇ, ಶೂದ್ರತ್ವಂ = ಶೂದ್ರ ಎಂದು ಸಂಬೋಧನೆ ಮಾಡಿದ್ದಾರೆ.(१)

---

राजानं प्रत्येत्याऽऽह – रैकमविदमिति यथावृत्तमवदत् । तदा राजा स्वसारथिवचनेन रैकमुनिस्थानं निश्चित्य तस्मात् तत्त्वं विविदिषुर्गुरुदक्षिणां गृहीत्वा तत्समीपं जगाम । अथ द्वारि शकटस्याधस्यात् स्थितं रैकं दृष्ट्वा सम्बोध्य दक्षिणां निवेद्य मह्यं विद्यां ब्रूहीत्युवाच । तदा तं पौत्रायणं परो लोकविलक्षणो रैकः प्रत्याचख्यौ । किमिति ? अह हारेत्वा शूद्रेत्यादि । अत्र अहेति सम्बोधनं, हार इत्वेति भिन्नपदत्वे विसर्गलोपे गुणे हारेत्वेति भवति । तथा च हे शूद्र हारः कण्ठमालाख्यं भूषणं इत्वा रथः । तत्त्वप्रदीपरीत्या शकटो वा । गोभिः सह तवास्त्वित्यर्थः । हारेत्वानावित्येकपदत्वपक्षे द्विवचनस्य एकवचनादेशो वा आकारादेशो वा कर्तव्यः । प्रत्येकं चास्तु इति क्रियासम्बन्धः ।

(१) भाष्यदीपिका – सिद्धान्तयत्सूत्रमवतारयति – अत इति ॥ अविशेषाख्ययुक्तेः श्रवणसूत्रे निराकरिष्यमाणत्वात्, पूर्वपक्ष्युक्तलिङ्गदर्शनस्यान्यथोपपत्तिप्रदर्शनाय प्रवृत्तस्य तदाद्रवणादित्यस्यान्वययोग्यार्थाकाङ्क्षोत्थापकं सूत्रस्य फलितार्थं दर्शयति – नेति ॥ 'असौ' रैकेण सम्बोधितः पौत्रायणो 'न शूद्रः' जात्या शूद्रो न, किन्तु क्षत्रिय इत्यर्थः । तर्हि कथमस्य शूद्रेति सम्बोधितत्वं युज्यते रूढ्यभावादित्यतो योगादेवेत्याशयेन तच्छब्द-प्रवृत्तिनिमित्तप्रदर्शकं तदाद्रवणादिति सूत्रांशं सावधारणं व्याचष्टे – शुचेति ॥ 'शुचा' शोकेन रैकं क्षत्तारं वा प्रत्याशुगमनमेव 'शूद्रत्वम्' शूद्रेति सम्बोधने निमित्तं, नतु जातिरित्यर्थः । अनेन तदाद्रवणादित्यस्य सूत्रे शूद्रत्वमित्यध्याहृतेन शूद्रेति सम्बोधितत्व-रूपार्थबोधकेन पदेनान्वयः सूचितः । तथा च न सम्बोधनानुपपत्तिरिति नेदं शूद्रस्य

**भाष्यम् – 'कम्वर एनमेतत्सन्तम्' (छा. ४-१-३.) इत्यनादरश्रवणात् ।**

ಅನುವಾದ - 'ಕಮ್ವರ' ಇತ್ಯಾದಿಯಾಗಿ ಹಂಸ ಪಕ್ಷಿಗಳು ರಾಜನ ಬಗ್ಗೆ ತಿರಸ್ಕಾರದ ಮಾತುಗಳನ್ನಾಡಿದ್ದರಿಂದ ಅವನಿಗೆ ಶೋಕವುಂಟಾಗಿದೆ.

ಪ್ರತಿಪದಾರ್ಥ -- ಯಾವ ಕಾರಣದಿಂದ ರಾಜನಿಗೆ ಶೋಕವಾಯಿತು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ –

ಅರೇ = ಎಲೈ ಹಂಸ ಪಕ್ಷಿಯೇ, ಕಂ ಏನಂ = ಯಾವ ರಾಜನನ್ನು ಕುರಿತು, ಆಹ = ಹೇಳುತ್ತಿದ್ದೀಯೋ, ಸಂತಂ ಸಯುಗ್ವಾನಂ = ಸಜ್ಜನನಾದ ಗಾಡಿಯ ಕೆಳಗೆ ಇರುವ ರೈಕ್ವನ ಮುಂದೆ ಇವನೆಲ್ಲಿ? ಎಂಬುದಾಗಿ, ಅನಾದರಶ್ರವಣಾತ್ = ಹಂಸಪಕ್ಷಿಯು ತನ್ನ ಬಗ್ಗೆ ಆಡಿದ ತಿರಸ್ಕಾರದ ಮಾತನ್ನು ಪೌತ್ರಾಯಣನು ಕೇಳಿದ್ದರಿಂದ.(१)

**भाष्यम् – 'स ह सञ्जिहान एव क्षत्तारमुवाच' (छा. ४-१-५.) इति सूच्यते हि ॥३४ ॥**

ಅನುವಾದ - 'ಸಃ ಸಂಜಿಹಾನ ಏವ' ಎಂಬ ವಾಕ್ಯವನ್ನು ಕೇಳಿ ರಾಜನಿಗೆ ಶೋಕವುಂಟಾಗಿದೆ ಎಂದು ಸೂಚಿತವಾಗಿದೆ.

ಪ್ರತಿಪದಾರ್ಥ -- ಅನಾದರದ ಮಾತುಗಳನ್ನು ಕೇಳಿದ ಮಾತ್ರಕ್ಕೆ ರಾಜನಿಗೆ ಏಕೆ ಶೋಕವುಂಟಾಯಿತು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ –

---

वेदविद्याधिकारे लिङ्गमित्यतो न शूद्रस्य वेदविद्याधिकार इति नञावृत्त्या अन्वयः । एवेत्यनेन अयं शूद्रशब्दः शुचा द्रवणाच्छूद्र इति नैरुक्त एव, नतु 'शुचेर्दश्च' इत्युणादिसूत्रेण रप्रत्यये धातोश्च दीर्घे चकारस्य दकारादेशे च निष्पन्नो रूढ इत्युक्तं भवति । पौत्रायण इत्यनेन बुद्धिस्थपरामर्शकेदंशब्दार्थः शुचेत्यनेन प्रागुक्तवाचिसौत्रद्वितीयतच्छब्दार्थः, त्वप्रत्ययेन निमित्तार्थकपञ्चम्यर्थश्च दर्शितः । सूत्रकारस्य सदा सर्वज्ञत्वेन शुगस्येत्युक्तिः । भाष्ये 'सः' इति श्रुत्यनुसारेणासाविति परोक्षेणोक्तिश्च युक्ता ।

(१) भाष्यदीपिका – कस्मान्निमित्तादस्य शोक इत्यस्योत्तरतया प्रवृत्तं शुगस्य तदनादरश्रवणादिति सूत्रखण्डं व्याचष्टे – कम्वर इति ॥ कं उ अरे इति पदच्छेदः । 'अरे' हंस ! एतद्वचनं कमेनमुद्दिश्याऽऽत्थ 'सन्तं' निर्दुष्टं 'सयुग्वानं' सशकटं रैकमित्येवेत्यर्थः । उ इति निपातः, अस्य निन्दार्थः । अस्मिन् राज्ञि वक्तुमननुरूपमिदम्, एवं वक्तुं रैक एव योग्य इत्यर्थः । 'एतत्सन्तं' निन्द्यं सन्तमात्थेत्यर्थः तत्त्वप्रदीपेऽभिहितः । 'एतत्सन्तम्' अत्र सन्तमिति वा । इत्यनादरश्रवणादिति । अनादरो निन्दा । तथा च इत्येवंरूपस्य हंसकृतानादरबोधकवाक्यस्य हंसात् स्वानादरवाक्यस्य वा श्रवणादित्यर्थः । श्रवणादित्यनन्तरं प्राप्तयेति शेषः । अस्य शुचेत्यनेनान्वयः ॥

**भावदीपः – वेदेति ।।** 'ज्ञेयो न वेदैः शूद्राद्यैः' इति सङ्क्षेपभाष्योक्तेरिति भावः। वेदेत्युक्त्या 'स्त्रीशूद्रब्रह्मबन्धूनां तन्त्रज्ञानेऽधिकारिता' । इत्यादेर्वेदादन्येन ज्ञेय इति दर्शितम् । फलं तु प्रागेवोक्तमिति भावः ।। ३८ ।।

।। इति श्रीराघवेन्द्रयतिकृते भावदीपे अपशूद्राधिकरणम् ।।

'ಜ್ಞೇಯೋ ನ ವೇದೈಃ ಶೂದ್ರಾದ್ಯೈಃ' ಎಂಬ ಅಣುಭಾಷ್ಯದಲ್ಲಿ ಶೂದ್ರರಿಗೆ ವೇದಗಳಿಂದ ತಿಳಿಯಲು ಅರ್ಹತೆಯಿರುವುದಿಲ್ಲವೆಂದು ತಿಳಿಸಿದ್ದಾರೆ. ಮತ್ತು, 'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇಽಧಿಕಾರಿತಾ' ಎಂಬ ಆಧಾರದಿಂದ ಸ್ತ್ರೀಶೂದ್ರಾದಿಗಳು ವೇದಗಳನ್ನು ಬಿಟ್ಟು ಬೇರೆ ಇತಿಹಾಸಾದಿಗಳಿಂದ ಜ್ಞಾನವನ್ನು ಸಂಪಾದನೆ ಮಾಡಬಹುದು ಎಂದು ಹೇಳಿದಂತಾಯಿತು. ಈ ಅಧಿಕರಣದ ಫಲವನ್ನು ಹಿಂದೆಯೇ ಹೇಳಿದ್ದಾಗಿದೆ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅಪಶೂದ್ರಾಧಿಕರಣವು ಮುಗಿಯಿತು

**वाक्यार्थमञ्जरी –**

**।। ॐ श्रवणाध्ययनार्थप्रतिषेधात् स्मृतेश्च ॐ ।।**

**शूद्रत्वाभावेत्यसूत्रयदिति ।।** 'तदभावनिर्धारणे' इत्यत्र तच्छब्देन 'सुगस्य' इत्यादि पूर्वसूत्रैरुपक्षिप्तशूद्रत्वस्य परामर्शादिति भावः । उत्तरयति – **ब्राह्मणपदेनेति।।** 'आर्जवं ब्राह्मणे साक्षाच्छूद्रो नार्जवलक्षणः' इति श्रुतिसमाख्यानरूपायां स्मृतौ ब्राह्मणप्रतियोगित्वेन शूद्रस्योपादानात् श्रुतावपि ब्राह्मणशब्दो वेदज्ञानयोग्य-त्रैवर्णिकपर इति भावः । शङ्कते – **शूद्र इति ।।** अप्रयोजकत्वं परिहरति – **अन्यथेति ।। ॐ श्रवणाध्ययनार्थप्रतिषेधात् स्मृतेश्च ॐ ।।** अर्थपदेन अर्थावधारणमुच्यते । वेदश्रवणाध्ययनार्थावधारणानमां श्रवण इत्यादिना प्रतिषेधयन्नाग्निरित्यादिस्मृतेश्च न शूद्रस्याधिकार इत्यर्थः । धर्मो यमः व्याधः एकलव्यः अधिजगौ अधीतवान् ।। **अविहितोपनयनानामेवेति ।।** अविहितोपनयनत्वे सत्यनिषिद्धाध्ययनानामुत्तमस्त्रीति र्यगादीनामेवापवादविषयत्वम् ।। नतु निषिद्धाध्ययनानामपीत्यर्थः ।। ३८ ।।

**।। इति श्रीशर्कराश्रीनिवासविरचितायां वाक्यार्थमञ्जर्याम् अपशूद्राधिकरणम् ।।**

ಅಪಶೂದ್ರಾಧಿಕರಣ

(೧-೩-೯)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अपशूद्राधिकरणम्

### ಸಂಗತಿ ಮತ್ತು ಫಲವಿಚಾರ

**।। ॐ शुगस्य तदनादरश्रवणात्तदाद्रवणात्सूच्यते हि ॐ ।। अत्र पूर्वाधिकरण-सिद्धान्तरीत्या पूर्वपक्षोत्थानादनन्तरसङ्गतिः ।**

ಅನುವಾದ - 'ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ' ಎಂಬ ಸೂತ್ರದಿಂದ ಅಪಶೂದ್ರಾಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಲ್ಲಿ ಅರ್ಥಿತ್ವ, ಸಾಮರ್ಥ್ಯ, ವಿದ್ವತ್ತ್ವ ಎಂಬ ಅಧಿಕಾರ ಪ್ರಯೋಜಕವಾದ ಧರ್ಮಗಳು ದೇವತೆಗಳಲ್ಲಿರುವುದರಿಂದ, ವೇದವಿದ್ಯಾಧಿಕಾರವನ್ನು ಅವರು ಹೊಂದಿರುತ್ತಾರೆಂದು ಸಿದ್ಧಾಂತ ಮಾಡಲಾಯಿತು. ಹಾಗಾದರೆ ಈ ಮೂರು ಧರ್ಮಗಳು ಶೂದ್ರರು ಮತ್ತು ಸ್ತ್ರೀಯರಲ್ಲಿಯೂ ಸಹ ಇರುವುದರಿಂದ, ಅವರೂ ಸಹ ವೇದವಿದ್ಯೆಯಲ್ಲಿ ಅಧಿಕಾರಿಗಳಾಗುತ್ತಾರಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಈ ಅಧಿಕರಣವು ಹೊರಟಿದೆ. ಆದ್ದರಿಂದ ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಬರುವಂತಹ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಿರುವುದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು.

**फलं तु ''न चोक्ते विरोधाभावात्'' इत्यादिटीकायामेवोक्तम् ।**

ಈ ಅಧಿಕರಣದ ಫಲವೇನು? ಸೃಷ್ಟಿಕರ್ತೃತ್ವ, ಗುಣಪೂರ್ಣತ್ವ ಮೊದಲಾದವು ಶೂದ್ರನಿಗೆ ವೇದವಿದ್ಯಾಧಿಕಾರವನ್ನು ಅಲ್ಲಗಳೆಯುವುದರಿಂದ ಸಿದ್ಧವಾಗುವುದಿಲ್ಲವೇ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ನ ಚೋಕ್ತೇ ವಿರೋಧಾಭಾವಾತ್' ಎಂಬ ಮಾತಿನಿಂದ ಉತ್ತರಿಸಿದ್ದಾರೆ. ಅಂದರೆ ಗುಣಪೂರ್ಣತ್ವಾದಿಗಳು ಈ ಅಧಿಕರಣದ ಫಲವಲ್ಲ.

**अयं हि टीकार्थः । शूद्रस्याधिकारेऽप्युक्ते मनुष्याधिकारे विरोधो न । शूद्रस्यापि मनुष्यत्वात् । तथा चोक्ताक्षेपाभावेनास्य विचारस्य निष्फलत्वादसङ्गतिरिति न वाच्यम् ।**

ಟೀಕೆಯ ಅರ್ಥ ಹೀಗಿದೆ - ವಾಮನಾಧಿಕರಣದಲ್ಲಿರುವ 'ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರದಲ್ಲಿ ಮನುಷ್ಯರು ಮಾತ್ರ ವೇದವಿದ್ಯೆಗೆ ಅಧಿಕಾರಿಗಳಾಗಿದ್ದಾರೆಂದು ಹೇಳಲಾಗಿದೆ. ಹಾಗಾದರೆ ಶೂದ್ರರಿಗೂ ಸಹ ವೇದವಿದ್ಯಾಧಿಕಾರವನ್ನು ಹೇಳಬಹುದಲ್ಲವೇ? ಶೂದ್ರರಿಗೆ ಅಧಿಕಾರವನ್ನು ಹೇಳುವುದರಿಂದ, ಮನುಷ್ಯಾಧಿಕಾರಕ್ಕೆ ವಿರೋಧವೇನೂ ಬರುವುದಿಲ್ಲ. ಏಕೆಂದರೆ ಶೂದ್ರರೂ ಕೂಡ ಮನುಷ್ಯರೇ ಆಗಿದ್ದಾರೆ. ಆದ್ದರಿಂದ ಹಿಂದಿನ ವಾಮನಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡದ ಕಾರಣ. ಈ ಅಧಿಕರಣದಲ್ಲಿ ಮಾಡುತ್ತಿರುವ ವಿಚಾರವು ನಿಷ್ಫಲವಾಗಿದೆ. ಆದ್ದರಿಂದ ಅಸಂಗತವಾಯಿತಲ್ಲವೇ? ಎಂದು ಪ್ರಶ್ನಿಸಬಾರದು.

**शूद्रस्याधिकारवदनधिकारेऽपि श्रुत्यादेः सत्त्वेनाधिकारोपपादकपूर्वपक्षन्यायेनानधिकारस्यापि प्राप्तेः । तथा च सामान्येन मनुष्याधिकारोक्तिः प्रमाणविरुद्धा । अनधिकारे तु सामान्येनोक्तेः शूद्रेतरविषयत्वान्न विरोध इति ।**

ಪೂರ್ವಪಕ್ಷಿಯು ಶೂದ್ರನಿಗೆ ವೇದವಿದ್ಯಾಧಿಕಾರವಿದೆಯೆನ್ನಲು ಶ್ರುತಿಯನ್ನೇ ಪ್ರಮಾಣವನ್ನಾಗಿ ಹೇಳಬೇಕು. ಆದರೆ ಶೂದ್ರನಿಗೆ ಅಧಿಕಾರವಿಲ್ಲವೆಂಬುದನ್ನೂ ಕೂಡ ಶ್ರುತಿಯೇ ಸಮರ್ಥಿಸುತ್ತಿದೆ. ಆದ್ದರಿಂದ ಶೂದ್ರನಿಗೆ ವೇದವಿದ್ಯಾಧಿಕಾರವಿದೆಯೆನ್ನಲು ಯಾವ ಪೂರ್ವಪಕ್ಷ ನ್ಯಾಯವನ್ನು ಹೇಳಲಾಗುತ್ತದೋ ಅದು ಶೂದ್ರನಿಗೆ ಅಧಿಕಾರವಿಲ್ಲವೆಂಬ ಸಿದ್ಧಾಂತದಲ್ಲಿಯೂ ಕೂಡ ಅನ್ವಯವಾಗುತ್ತದೆ. ಆದ್ದರಿಂದ 'ಹೃದ್ಯಪೇಕ್ಷಯಾತು' ಎಂಬ ಸೂತ್ರದಲ್ಲಿ ಮನುಷ್ಯಸಾಮಾನ್ಯರಿಗೆ ವೇದವಿದ್ಯಾಧಿಕಾರವಿದೆಯೆಂದು ಅರ್ಥೈಸುವುದು ಪ್ರಮಾಣವಿರುದ್ಧವಾಗಿದೆ. ಸಿದ್ಧಾಂತದಲ್ಲಿ ಅಧಿಕಾರವಿಲ್ಲವೆಂದು ಹೇಳಿದಾಗ ಅಧಿಕಾರವಿದೆಯೆಂಬ ಮಾತನ್ನು ಶೂದ್ರರನ್ನು ಬಿಟ್ಟು ಉಳಿದವರಿಗೆ ಅಧಿಕಾರವಿದೆಯೆಂದು ಕೂಡಿಸಬೇಕು. ಆದ್ದರಿಂದ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ.

**यद्यप्यत्राद्यसूत्रस्थाथशब्दसूचितस्य त्रैवर्णिकाधिकारस्येहाक्षेपादपि फलं सुवचम् । तथापि टीकायां सन्निकृष्टत्वान्मनुष्याधिकार एवाक्षिप्तः ।**

ಪ್ರಶ್ನೆ - 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ 'ಅಥ' ಶಬ್ದದಿಂದ ತ್ರೈವರ್ಣಿಕರಿಗೆ ವೇದವಿದ್ಯಾಧಿಕಾರವಿದೆಯೆಂದು ಸೂಚನೆ ಮಾಡಿದ್ದಾರೆ. ಪ್ರಕೃತ ಶೂದ್ರರಿಗೂ ಕೂಡ ಅಧಿಕಾರವಿರುವುದರಿಂದ ತ್ರೈವರ್ಣಿಕರಿಗೆ ಮಾತ್ರ ಅಧಿಕಾರವಿದೆಯೆಂದು ಹೇಗೆ ಹೇಳಿದಿರಿ? ಎಂದು

ಆಕ್ಷೇಪ ಮಾಡಲಾಗಿದೆ. ಶೂದ್ರರಿಗೆ ಅಧಿಕಾರವಿಲ್ಲವೆಂದು ಸಿದ್ಧಾಂತ ಮಾಡಿದಾಗ, ಪ್ರಥಮ ಸೂತ್ರದಲ್ಲಿ ಹೇಳಲ್ಪಟ್ಟ ತ್ರೈವರ್ಣಿಕರ ವೇದಾಧಿಕಾರವು ಸಿದ್ಧವಾಗುತ್ತದೆ. ಆದ್ದರಿಂದ 'ಅಥ' ಶಬ್ದಸೂಚಿತವಾದ ತ್ರೈವರ್ಣಿಕರ ಅಧಿಕಾರವೇ ಈ ಅಧಿಕರಣದ ಫಲವಾಗಿದೆ. ಹೀಗೆ ಜಿಜ್ಞಾಸಾಧಿಕರಣಕ್ಕೆ ನೇರವಾಗಿ ಸಂಗತಿಯನ್ನು ತೋರಿಸಬಹುದಲ್ಲವೇ?

ಉತ್ತರ - ಹತ್ತಿರದಲ್ಲಿರುವ ವಾಮನಾಧಿಕರಣದ ಜೊತೆಗೆ ಸಂಗತಿಯನ್ನು ತೋರಿಸಲು ಬರುತ್ತದೆ. ಏಕೆಂದರೆ ವಾಮನಾಧಿಕರಣದಲ್ಲಿ ಮನುಷ್ಯರಿಗೆ ವೇದಾಧಿಕಾರವನ್ನು ಹೇಳಿದಾಗ, ಸಹಜವಾಗಿ ಶೂದ್ರರೂ ಕೂಡ ಅಧಿಕಾರಿಗಳಾಗಿದ್ದಾರೆಯೇ? ಎಂಬ ವಿಚಾರವು ಪ್ರಾಪ್ತವಾಗುತ್ತದೆ. ಆದ್ದರಿಂದ ಹತ್ತಿರದಲ್ಲಿರುವ ವಾಮನಾಧಿಕರಣದ ಜೊತೆಗೆ ಸಂಗತಿಯನ್ನು ತೋರಿಸುವುದೇ ಉಚಿತವೆಂದು ತಿಳಿದು ಜಿಜ್ಞಾಸಾಧಿಕರಣದ ಜೊತೆಗೆ ಸಂಗತಿಯನ್ನು ತೋರಿಸಿರುವುದಿಲ್ಲ.

**यद्वा अत्रत्यसिद्धान्तेन त्रैवर्णिकाधिकारे सिद्धेऽथशब्देन तत्सूचनम् । पूर्वपक्षे तु नेति न तदाक्षेपः शक्यः ।**

ಅಥವಾ ಈ ಅಧಿಕರಣದ ಸಿದ್ಧಾಂತದಿಂದ ತ್ರೈವರ್ಣಿಕರಿಗೆ ಮಾತ್ರ ವೇದವಿದ್ಯಾಧಿಕಾರವಿದೆಯೆಂದು ಸಿದ್ಧವಾಗುತ್ತದೆ. ಅದನ್ನು ಪ್ರಥಮಸೂತ್ರದಲ್ಲಿರುವ 'ಅಥ' ಶಬ್ದವು ಸೂಚಿಸುತ್ತಿದೆ ಎಂದು ಹೇಳಬಹುದು. ಹೀಗಿರುವಾಗ ಪೂರ್ವಪಕ್ಷದ ಸಂದರ್ಭದಲ್ಲಿಯೇ 'ಅಥ' ಶಬ್ದದಿಂದ ತ್ರೈವರ್ಣಿಕರಿಗೆ ಅಧಿಕಾರವು ಸೂಚಿತವಾಗಿದೆಯೆಂದು ಆಕ್ಷೇಪ ಮಾಡಲು ಸಾಧ್ಯವೇ ಇಲ್ಲ. ಅಂದರೆ ಈ ಅಧಿಕರಣದಿಂದ ಸಿದ್ಧವಾಗುವ ಪ್ರಮೇಯವನ್ನು ಮೊದಲು ವಿವಕ್ಷಿಸಿಕೊಂಡು ಸಂಗತಿಯನ್ನು ತೋರಿಸಲು ಬರುವುದಿಲ್ಲ ಎಂದು ಅಭಿಪ್ರಾಯ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – ॐ शुगस्य तदनादरश्रवणात्तदाद्रवणात्सूच्यते हि ॐ ।। ''मनुष्याधिकारत्वादित्युक्त'' इति भाष्यदिशा तदानन्तर्यप्राप्तेस्तस्य फलपरत्वमभिप्रेत्यास्य पूर्वानन्तर्ये हेतुमाह – अत्रेति ।।**

'ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ' ಎಂಬ ಸೂತ್ರದಿಂದ ಅಪಶೂದ್ರಾಧಿಕರಣವು ಪ್ರಾರಂಭವಾಗುತ್ತಿದೆ. ಭಾಷ್ಯದಲ್ಲಿ 'ಮನುಷ್ಯಾಧಿಕಾರತ್ವಾದಿತ್ಯುಕ್ತಮ್' ವಾಮನಾಧಿಕಾರದಲ್ಲಿ 'ಮನುಷ್ಯಾಧಿಕಾರತ್ವಾತ್' ಎಂದು ಹೇಳಿದ್ದರಿಂದ ಶೂದ್ರರೂ ಸಹ ಮನುಷ್ಯರೇ ಆಗಿರುವುದರಿಂದ ಇವರಿಗೂ ವೇದವಿದ್ಯಾಧಿಕಾರವಿದೆಯಲ್ಲವೇ ? ಎಂಬುದಾಗಿ ವಾಮನಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೆ. ಹಾಗಾದರೆ ವಾಮನಾಧಿಕರಣದ ಅನಂತರದಲ್ಲಿಯೇ ಅಪಶೂದ್ರಾಧಿಕರಣವು ಬರಬೇಕಿತ್ತು. ಮಧ್ಯದಲ್ಲಿ ದೇವತಾಧಿಕರಣವನ್ನು ಹೇಳಿದ್ದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಭಾಷ್ಯವು ಕೇವಲ ಈ ಅಧಿಕರಣದ ಫಲವನ್ನಷ್ಟೇ ಹೇಳುತ್ತಿದೆ ಹೊರತು, ಸಂಗತಿಯನ್ನು ಹೇಳುತ್ತಿಲ್ಲ. ದೇವತಾಧಿಕರಣದ ಅನಂತರದ ಅಪಶೂದ್ರಾಧಿಕರಣವು ಬರಲು ಏನು ಕಾರಣ? ಎಂಬುದನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः –** सम्भवादिति हेतूक्तविशिष्टबुद्ध्यादिमत्त्वेन देवानां यथाऽधिकारस्तथा शूद्राणामपीत्युत्थानादापवादिकीसङ्गतिरित्यग्रे स्पष्टम् ।

ದೇವತಾಧಿಕರಣದಲ್ಲಿ 'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬಲ್ಲಿ 'ಸಂಭವಾತ್' ಎಂಬ ಪದದಿಂದ ಅಧಿಕಾರಪ್ರಯೋಜಕವಾದ ಧರ್ಮಗಳೆಲ್ಲವೂ ದೇವತೆಗಳಲ್ಲಿವೆಯೆಂದು ಸಮರ್ಥಿಸಿದಿರಿ. ಆ ಎಲ್ಲಾ ಧರ್ಮಗಳು ಶೂದ್ರರಲ್ಲಿಯೂ ಕೂಡ ಇರುವುದರಿಂದ ದೇವತೆಗಳಿಗೆ ವೇದವಿದ್ಯಾಧಿಕಾರವಿರುವಂತೆ ಶೂದ್ರರಿಗೂ ಕೂಡ ವೇದಾಧಿಕಾರವನ್ನು ಹೇಳಬೇಕಲ್ಲವೇ? ಹೀಗೆ ಹಿಂದಿನ ಅಧಿಕರಣದಿಂದ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಆಪವಾದಿಕೀಸಂಗತಿಯಿರುತ್ತದೆಂಬುದನ್ನು ತಿಳಿಯಬೇಕು. ಈ ವಿಚಾರವು ಮುಂದೆ ಇನ್ನೂ ಸ್ಪಷ್ಟವಾಗುತ್ತದೆ. 'ಯತ್ರ ಸಾಮರ್ಥ್ಯ ಅರ್ಥಿತ್ವ ವಿದ್ವತ್ವಾನಿ ತತ್ರ ವೇದವಿದ್ಯಾಧಿಕಾರಃ' ಎಂಬುದಾಗಿ ಶೂದ್ರಾದಿಗಳಲ್ಲಿಯೇ ವಿರೋಧವೆಂಬುದು ಪ್ರಾಪ್ತವಾಗುತ್ತದೆ.

**प्रकाशः –** इयं च ''स्वन्यायेन'' इति टीका सूचिता । व्यर्थेयं चिन्तेत्यत आह – फलं त्विति ॥

ಈ ಬಗೆಯ ಸಂಗತಿಯು 'ಸ್ವನ್ಯಾಯೇನ' ಪೂರ್ವಪಕ್ಷಿಯ ನ್ಯಾಯದಿಂದ ಎಂಬ ಟೀಕಾಮಾತಿನಿಂದ ಸೂಚಿತವಾಗಿದೆ. ಪ್ರಕೃತ ಮಾಡುತ್ತಿರುವ ವಿಚಾರವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಫಲಂತು' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –** ''न चोक्ते विरोधाभावादसङ्गतिः । स्वन्यायेन श्रुत्यादिविरोधप्राप्तेः'' इति टीकायामित्यर्थः । तदेतदप्रतीतेर्व्याचष्टे – अयं हीति ॥

'ನ ಚೋಕ್ತೇ ವಿರೋಧಾಭಾವಾದಸಂಗತಿಃ । ಸ್ವನ್ಯಾಯೇನ ಶ್ರುತ್ಯಾದಿವಿರೋಧಪ್ರಾಪ್ತೇಃ' ಎಂಬ ಟೀಕೆಯಲ್ಲಿ ಫಲವನ್ನು ಹೇಳಿದ್ದಾರೆಂದು ತಿಳಿಯಬೇಕು. ಟೀಕೆಯ ಈ ಮಾತು ಸ್ಪಷ್ಟವಾಗಿ ಅರ್ಥವಾಗದ ಕಾರಣ ಸ್ವತಃ ಗ್ರಂಥಕಾರರೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅಯಂ ಹಿ' ಇತ್ಯಾದಿ ವಾಕ್ಯದಿಂದ.

**प्रकाशः** – शूद्रस्याधिकारेऽङ्गीकृतेऽपि मनुष्याधिकारत्वादित्यनेनोक्ते मनुष्याधिकारे विरोधो नास्तीत्यर्थः । स्वन्यायेनेत्यस्यार्थमाह – **अधिकारेति** ।। मनुष्यत्वविशिष्टबुद्ध्यादिरूपन्यायेनेत्यर्थः ।

ಶೂದ್ರನಿಗೆ ವೇದಾಧಿಕಾರವನ್ನು ಅಂಗೀಕಾರ ಮಾಡಿದರೂ ಕೂಡ ವಾಮನಾಧಿಕರಣದಲ್ಲಿ ಹೇಳಲ್ಪಟ್ಟ ಮನುಷ್ಯರಿಗೆ ಅಧಿಕಾರವಿದೆಯೆಂಬ ಮಾತಿಗೆ ಯಾವುದೇ ವಿರೋಧ ಬರುವುದಿಲ್ಲ ಎಂದರ್ಥ. 'ಸ್ವನ್ಯಾಯೇನ' ಎಂಬುದರ ಅರ್ಥವನ್ನು 'ಅಧಿಕಾರ' ಎಂಬುದರಿಂದ ಹೇಳಿರುತ್ತಾರೆ. 'ಶೂದ್ರಃ ವೇದವಿದ್ಯಾಧಿಕಾರಿ ಮನುಷ್ಯತ್ವಾತ್' ಎಂಬುದು ಒಂದು ಯುಕ್ತಿ. 'ಶೂದ್ರಃ ವೇದವಿದ್ಯಾಧಿಕಾರಿವಿಶಿಷ್ಟಬುದ್ಧ್ಯಾದಿಮತ್ವಾತ್' ಎಂಬುದು ಮತ್ತೊಂದು ಯುಕ್ತಿಯೆಂದು ತಿಳಿಯಬೇಕು.

**प्रकाशः** – अधिकारवदित्यन्वयः । निषेध श्रुत्यादिनाऽनधिकारस्यापि प्राप्तेरित्यर्थः ।

ಮೇಲೆ ಹೇಳಿದ ನ್ಯಾಯದಿಂದ ಶೂದ್ರರಿಗೆ ಅಧಿಕಾರವಿದೆಯೆಂದು ಹೇಗೆ ತಿಳಿಯುತ್ತದೋ, ಅದರಂತೆ ನಿಷೇಧಶ್ರುತಿಯ ಬಲದಿಂದ ಅಧಿಕಾರವಿಲ್ಲವೆಂಬುದೂ ಕೂಡ ತಿಳಿಯುತ್ತದೆ.

**प्रकाशः** – टीकोक्तं फलमाक्षिप्य समाधत्ते – **यद्यपीति** ।। इह पूर्वपक्षे पूर्वन्यायेनाधिकारे सिद्धे "अथातो ब्रह्मजिज्ञासा" इत्यत्राथशब्दोक्तत्रैवर्णिकाधिकारो न युक्त इत्याक्षेपसम्भवादित्यर्थः ।

ಟೀಕೆಯಲ್ಲಿ ಹೇಳಿದ ಫಲವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ. ಈ ಅಧಿಕರಣದ ಪೂರ್ವಪಕ್ಷದಲ್ಲಿ ಹಿಂದಿನ ಅಧಿಕರಣದ ನ್ಯಾಯದಿಂದ ಶೂದ್ರರಿಗೆ ಅಧಿಕಾರವಿದೆಯೆಂದು ಸಿದ್ಧವಾದ ಮೇಲೆ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿರುವ 'ಅಥ' ಶಬ್ದಕ್ಕೆ ತ್ರೈವರ್ಣಿಕರು ಮಾತ್ರ ಅಧಿಕಾರಿಗಳಾಗಿದ್ದಾರೆಂಬುದು ಸೂಚಿತವಾಗಿದೆ. ಅದನ್ನು ಇಲ್ಲಿ ಆಕ್ಷೇಪ ಮಾಡುತ್ತಿದ್ದಾರೆಂದು ತಿಳಿಯುತ್ತದೆ ಎಂದರ್ಥ.

**प्रकाशः** – ननु प्रागुक्तमनुष्याधिकाराक्षेपस्य हृद्यपेक्षयाङ्गुष्ठमात्रत्वं विष्णौ युक्तमित्यस्याक्षेपद्वारा जिज्ञास्यत्वाक्षेपपर्यन्तत्वेन व्यवहिताक्षेपः प्रागप्यविशिष्ट इति चेन्न ।

ಪ್ರಶ್ನೆ - ಜಿಜ್ಞಾಸಾಧಿಕರಣವನ್ನು ಆಕ್ಷೇಪ ಮಾಡುವುದು ವ್ಯವಹಿತವಾಗುತ್ತದೆಂದು ಹೇಳಿದಿರಿ. ವಿಚಾರ ಮಾಡಿದರೆ ವಾಮನಾಧಿಕರಣವನ್ನು ಆಕ್ಷೇಪ ಮಾಡಿದಾಗಲೂ ಅನಿವಾರ್ಯವಾಗಿ ಕೊನೆಯಲ್ಲಿ ಜಿಜ್ಞಾಸಾಧಿಕರಣವನ್ನು ಆಕ್ಷೇಪ ಮಾಡಲೇ ಬೇಕು. ಏಕೆಂದರೆ ಮನುಷ್ಯಾಧಿಕಾರವನ್ನು ಆಕ್ಷೇಪ ಮಾಡಿದಾಗ, ಹೃದ್ಯಪೇಕ್ಷೆಯಿಂದ ಅಂಗುಷ್ಠಮಾತ್ರತ್ವವು ವಿಷ್ಣುವಿನಲ್ಲಿ ಯುಕ್ತವಾಗುತ್ತದೆಂಬುದನ್ನೂ ಕೂಡ ಆಕ್ಷೇಪ

ಮಾಡಿದಂತಾಗುತ್ತದೆ. ಇದರಿಂದ ವಿಷ್ಣುವಿಗೆ ಜಿಜ್ಞಾಸ್ಯತ್ವವು ಕೂಡುವುದಿಲ್ಲವೆಂದು ವಾಮನಾಧಿಕರಣದಲ್ಲಿ ಜಿಜ್ಞಾಸಾಧಿಕರಣವನ್ನೇ ಆಕ್ಷೇಪ ಮಾಡಿದ್ದರಿಂದ ಈ ಅಧಿಕರಣದ ಆಕ್ಷೇಪವೂ ಕೂಡ ಜಿಜ್ಞಾಸಾಧಿಕರಣದ ಆಕ್ಷೇಪದಲ್ಲಿಯೇ ಪರ್ಯವಸಾನವಾಗುತ್ತದೆ. ಆದ್ದರಿಂದ ವ್ಯವಹಿತಾಕ್ಷೇಪವೆಂಬ ದೋಷವು ಬಂದೇ ಬರುತ್ತದಲ್ಲವೇ?

**प्रकाशः – साक्षाद्व्यवहिताक्षेपापेक्षया सन्निहिताक्षेपस्योचितत्वादित्याशयात् ।**

ಉತ್ತರ - ಮೊದಲು ಸನ್ನಿಹಿತವಾದದ್ದನ್ನು ಆಕ್ಷೇಪ ಮಾಡಿ, ಅದರ ಮೂಲಕ ವ್ಯವಹಿತವಾದದ್ದನ್ನು ಆಕ್ಷೇಪ ಮಾಡುವುದು ತಪ್ಪಲ್ಲ. ಆದರೆ ನೇರವಾಗಿ ವ್ಯವಹಿತವಾದದ್ದನ್ನು ಆಕ್ಷೇಪ ಮಾಡುವುದು ತಪ್ಪಾಗುತ್ತದೆ. ಅಂದರೆ ಈ ಅಧಿಕರಣಕ್ಕೆ ವ್ಯವಹಿತವಾದ ಜಿಜ್ಞಾಸಾಧಿಕರಣವನ್ನು ಆಕ್ಷೇಪ ಮಾಡುವುದು ತಪ್ಪಾಗುತ್ತದೆ. ಆದರೆ ಮೊದಲು ಸನ್ನಿಹಿತವಾದ ವಾಮನಾಧಿಕರಣವನ್ನು ಆಕ್ಷೇಪ ಮಾಡಿ, ಅದರ ಮೂಲಕ ಜಿಜ್ಞಾಸಾಧಿಕರಣವನ್ನು ಆಕ್ಷೇಪ ಮಾಡುವುದು ತಪ್ಪಾಗುವುದಿಲ್ಲ. ಆದ್ದರಿಂದ ಟೀಕೆಯಲ್ಲಿ ವಾಮನಾಧಿಕರಣದಿಂದಲೇ ಸಂಗತಿಯನ್ನು ತೋರಿಸಿರುತ್ತಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम् – ॐ शुगस्य तदनादरश्रवणात्तदाद्रवणात्सूच्यते हि ॐ ।।** नन्वाक्षेपे सन्निकृष्टत्वं विप्रकृष्टत्वं वाऽप्रयोजकम् । किन्तु योग्यत्वम् । तच्च व्यवहितस्यापि प्रथमसूत्रस्यैव । तत्राथशब्देन साक्षात्त्रैवर्णिकाधिकारस्योक्तत्वात् । किं चापवादविषयं परित्यज्य सामान्यस्य सत्त्वेन तयोर्विरोध एव नोपपद्यते । तथा सति न हिंस्यात्सर्वा भूतानीत्यस्य सामान्यस्याग्नीषोमीयं पशुमालभेतेति विशेषेण विरोधः । प्रकृते च मनुष्याणामधिकार इति सामान्यम् । शूद्रस्य नेति तु विशेषः। तत थमनयोर्विरोध इत्यरुचेराह – **यद्वेति** ।।

## ಸಾರ

ಹಿಂದಿನ ಅಧಿಕರಣದಲ್ಲಿ ಅರ್ಥಿತ್ವ, ಸಾಮರ್ಥ್ಯ, ವಿದ್ವತ್ವ ಎಂಬ ಅಧಿಕಾರ ಪ್ರಯೋಜಕವಾದ ಧರ್ಮಗಳು ದೇವತೆಗಳಲ್ಲಿರುವುದರಿಂದ, ವೇದವಿದ್ಯಾಧಿಕಾರವನ್ನು ಅವರು ಹೊಂದಿರುತ್ತಾರೆಂದು ಸಿದ್ಧಾಂತ ಮಾಡಲಾಯಿತು. ಹಾಗಾದರೆ ಈ ಮೂರು ಧರ್ಮಗಳು ಶೂದ್ರರು ಮತ್ತು ಸ್ತ್ರೀಯರಲ್ಲಿಯೂ ಸಹ ಇರುವುದರಿಂದ, ಅವರೂ ಸಹ ವೇದವಿದ್ಯೆಯಲ್ಲಿ ಅಧಿಕಾರಿಗಳಾಗುತ್ತಾರಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಈ ಅಧಿಕರಣವು ಹೊರಟಿದೆ. ಆದ್ದರಿಂದ

ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಬರುವಂತಹ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಿರುವುದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು.

'ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್' ಎಂಬ ವಾಮನಾಧಿಕರಣದ ಕೊನೆಯ ಸೂತ್ರದಲ್ಲಿ ಮನುಷ್ಯರಿಗೆ ವೇದಾಧಿಕಾರವಿದೆಯೆಂದು ಸಮರ್ಥಿಸಲಾಯಿತು. ಶೂದ್ರರೂ ಕೂಡ ಮನುಷ್ಯರೇ ಆಗಿರುವುದರಿಂದ, ಅವರಿಗೂ ಕೂಡ ವೇದಾಧಿಕಾರವನ್ನು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಶೂದ್ರರಿಗೆ ಅಧಿಕಾರವಿದೆಯೆನ್ನಲು ಪೌತ್ರಾಯಣ ಶ್ರುತಿಯನ್ನು ಆಧಾರವನ್ನಾಗಿ ನೀಡಬೇಕು. ಆದರೆ ಶ್ರುತಿಯ ಬಲದಿಂದ ಶೂದ್ರರಿಗೆ ಅಧಿಕಾರವಿಲ್ಲವೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ, 'ಮನುಷ್ಯಾಧಿಕಾರತ್ವಾತ್' ಎಂಬ ಪದಕ್ಕೆ ಶೂದ್ರರನ್ನು ಬಿಟ್ಟು ಉಳಿದ ಮನುಷ್ಯರು ಮಾತ್ರ ವೇದವಿದ್ಯೆಯಲ್ಲಿ ಅಧಿಕಾರವನ್ನು ಪಡೆದಿರುತ್ತಾರೆ ಎಂದರ್ಥ. ಹೀಗೆ ವಾಮನಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವುದೇ ಈ ಅಧಿಕರಣದ ಫಲ.

ವಾಸ್ತವಿಕವಾಗಿ ಜಿಜ್ಞಾಸಾಧಿಕರಣದ 'ಅಥ' ಶಬ್ದದಿಂದ ತ್ರೈವರ್ಣಿಕರಿಗೆ ಮಾತ್ರ ವೇದಾಧಿಕಾರವಿದೆಯೆಂದು ಸೂಚಿತವಾಗಿದೆ. ಅದನ್ನೂ ಕೂಡ ನೇರವಾಗಿಯೇ ಆಕ್ಷೇಪ ಮಾಡಬಹುದು. ಆದರೆ ಹತ್ತಿರದಲ್ಲೇ ಇರುವ 'ಮನುಷ್ಯಾಧಿಕಾರತ್ವಾತ್' ಎಂಬುದನ್ನೇ ಆಕ್ಷೇಪ ಮಾಡಲು ಬರುವಾಗ ದೂರದಲ್ಲಿರುವ ಬುದ್ಧಿಯಲ್ಲಿ ಉಪಸ್ಥಿತವಾಗದ, ಜಿಜ್ಞಾಸಾಧಿಕರಣದಲ್ಲಿ 'ಅಥ' ಶಬ್ದದಿಂದ ಸೂಚಿತವಾದ ಅಧಿಕಾರವನ್ನು ಆಕ್ಷೇಪ ಮಾಡುವುದು ಯುಕ್ತವಾಗುವುದಿಲ್ಲ. ಹಾಗಾಗಿ ವಾಮನಾಧಿಕರಣದ ಸಿದ್ಧಾಂತದ ಆಕ್ಷೇಪವೇ ಈ ಅಧಿಕರಣದ ಫಲವಾಗಿದೆ.

• • • • •

## ಸಂಶಯ ಕೋಟಿಗಳು

## तात्पर्यचन्द्रिका

**अत्र शूद्रादेः किं ब्रह्मविद्याधिकारोऽस्त्युत नेति चिन्ता ।**

ಅನುವಾದ - ಈ ಅಧಿಕರಣದ ಸಂಶಯಪರಂಪರೆ ಹೀಗಿದೆ - ಶೂದ್ರಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೋ, ಇಲ್ಲವೋ ? ಎಂಬುದು ಪ್ರಧಾನ ಸಂಶಯ.

**तदर्थं ''अहहारेत्वाशूद्र'' इति श्रुतः शूद्रशब्दः किं रूढः किं वा यौगिक इति ।**

ಅದಕ್ಕಾಗಿ 'ಅಹಹಾರೇತ್ವಾಶೂದ್ರ' ಎಂಬಲ್ಲಿ ಶ್ರುತವಾದ ಶೂದ್ರಶಬ್ದವು ರೂಢವೋ, ಅಥವಾ ಯೌಗಿಕವೋ ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किं रूढिबाधकं नास्त्युतास्तीति ।**

ಅದಕ್ಕಾಗಿ ರೂಢಿಗೆ ಬಾಧಕವಾದದ್ದು ಇಲ್ಲವೋ? ಅಥವಾ ಇದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

ಪರಿಪೂರ್ಣಚಂದ್ರಿಕಾ

**तदर्थं ''अयमश्वतरीरथ'' इति श्रुतो रथः किं शूद्रे युक्त उत न युक्त इति ।**

ಆದಕ್ಕಾಗಿ 'ಅಯಮಶ್ವತರೀರಥ' ಎಂಬಲ್ಲಿ ಶ್ರುತವಾದ ರಥವು ಶೂದ್ರನಿಗೆ ಯುಕ್ತವಾಗುತ್ತದೋ, ಅಥವಾ ಇಲ್ಲವೊ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

यद्वैतदनुशयेनाह – **यद्वेति** ।। विषयसंशयटीकां व्यनक्ति – **अत्रेति** ।। शूद्रादेरित्यादिपदेन त्रैवर्णिकेतरजातेः त्रैवर्णिकमध्येऽपि भक्तिशमदमादिरहितस्य च परिग्रहः ।

ವಿವರಣೆ - ಈ ಅಧಿಕರಣದ ವಿಷಯ ಮತ್ತು ಸಂಶಯಗಳನ್ನು ಪ್ರತಿಪಾದನೆ ಮಾಡುವ ಟೀಕೆಗಳನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. ಟೀಕೆಯಲ್ಲಿ 'ಶೂದ್ರಸ್ಯ' ಎಂದಷ್ಟೇ ಇದ್ದರೂ ಗ್ರಂಥಕಾರರು ಶೂದ್ರಶಬ್ದ ಉಪಲಕ್ಷಣವೆಂದು ತಿಳಿದು 'ಶೂದ್ರಾದೇಃ' ಎಂದು ಹೇಳಿದ್ದಾರೆ. ಆದಿಪದದಿಂದ ತ್ರೈವರ್ಣಿಕರ ಮಧ್ಯದಲ್ಲಿರುವ ಭಕ್ತಿ, ಶಮ, ದಮ, ಮೊದಲಾದ ಗುಣಗಳಿಲ್ಲದ ಮನುಷ್ಯರನ್ನೂ ಕೂಡ ಸ್ವೀಕರಿಸಬೇಕು.

**प्रकाशः – टीकायां ''तदाद्रवणात्'' इति सूत्रभाष्यानुरोधेन शूद्रस्येत्युक्तावप्युपनयन संस्काराभावादित्युक्तेः**

ಈ ಅರ್ಥವು ಟೀಕೆಗೂ ಕೂಡ ಸಮ್ಮತವಾಗಿದೆ. ಏಕೆಂದರೆ 'ತದಾದ್ರವಣಾತ್' ಎಂಬ ಸೂತ್ರದ ಭಾಷ್ಯಕ್ಕೆ ಅನುಸಾರಿಯಾಗಿ 'ಶೂದ್ರಸ್ಯ' ಎಂದಷ್ಟೇ ಹೇಳಿದ್ದರೂ ಉಪನಯನಸಂಸ್ಕಾರವಿಲ್ಲದ ಕಾರಣ ಅಧಿಕಾರವಿಲ್ಲವೆಂದು ಹೇಳಿದ್ದರಿಂದ ಉಳಿದವರನ್ನೂ ಕೂಡ ತೆಗೆದುಕೊಳ್ಳಬೇಕೆಂದು ತಿಳಿಯುತ್ತದೆ.

**प्रकाशः –**

अवैष्णवस्य वेदेऽपि ह्यधिकारो न विद्यते ।
गुरुभक्तिविहीनस्य शमादिरहितस्य च ।
नच वर्णावरस्यापि तस्मादध्ययनान्वितः ।।

इत्यादिनिषेधस्य च तुल्यतया समानन्यायविषयाणां टीकोपलक्षणमित्यभिप्रेत्यादिपदं प्रयुक्तम् ।।

ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಬರುವಂತಹ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಿರುವುದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು.

'ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್' ಎಂಬ ವಾಮನಾಧಿಕರಣದ ಕೊನೆಯ ಸೂತ್ರದಲ್ಲಿ ಮನುಷ್ಯರಿಗೆ ವೇದಾಧಿಕಾರವಿದೆಯೆಂದು ಸಮರ್ಥಿಸಲಾಯಿತು. ಶೂದ್ರರೂ ಕೂಡ ಮನುಷ್ಯರೇ ಆಗಿರುವುದರಿಂದ, ಅವರಿಗೂ ಕೂಡ ವೇದಾಧಿಕಾರವನ್ನು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಶೂದ್ರರಿಗೆ ಅಧಿಕಾರವಿದೆಯೆನ್ನಲು ಪೌತ್ರಾಯಣ ಶ್ರುತಿಯನ್ನು ಆಧಾರವನ್ನಾಗಿ ನೀಡಬೇಕು. ಆದರೆ ಶ್ರುತಿಯ ಬಲದಿಂದ ಶೂದ್ರರಿಗೆ ಅಧಿಕಾರವಿಲ್ಲವೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ, 'ಮನುಷ್ಯಾಧಿಕಾರತ್ವಾತ್' ಎಂಬ ಪದಕ್ಕೆ ಶೂದ್ರರನ್ನು ಬಿಟ್ಟು ಉಳಿದ ಮನುಷ್ಯರು ಮಾತ್ರ ವೇದವಿದ್ಯೆಯಲ್ಲಿ ಅಧಿಕಾರವನ್ನು ಪಡೆದಿರುತ್ತಾರೆ ಎಂದರ್ಥ. ಹೀಗೆ ವಾಮನಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವುದೇ ಈ ಅಧಿಕರಣದ ಫಲ.

ವಾಸ್ತವಿಕವಾಗಿ ಜಿಜ್ಞಾಸಾಧಿಕರಣದ 'ಅಥ' ಶಬ್ದದಿಂದ ತ್ರೈವರ್ಣಿಕರಿಗೆ ಮಾತ್ರ ವೇದಾಧಿಕಾರವಿದೆಯೆಂದು ಸೂಚಿತವಾಗಿದೆ. ಅದನ್ನೂ ಕೂಡ ನೇರವಾಗಿಯೇ ಆಕ್ಷೇಪ ಮಾಡಬಹುದು. ಆದರೆ ಹತ್ತಿರದಲ್ಲೇ ಇರುವ 'ಮನುಷ್ಯಾಧಿಕಾರತ್ವಾತ್' ಎಂಬುದನ್ನೇ ಆಕ್ಷೇಪ ಮಾಡಲು ಬರುವಾಗ ದೂರದಲ್ಲಿರುವ ಬುದ್ಧಿಯಲ್ಲಿ ಉಪಸ್ಥಿತವಾಗದ, ಜಿಜ್ಞಾಸಾಧಿಕರಣದಲ್ಲಿ 'ಅಥ' ಶಬ್ದದಿಂದ ಸೂಚಿತವಾದ ಅಧಿಕಾರವನ್ನು ಆಕ್ಷೇಪ ಮಾಡುವುದು ಯುಕ್ತವಾಗುವುದಿಲ್ಲ. ಹಾಗಾಗಿ ವಾಮನಾಧಿಕರಣದ ಸಿದ್ಧಾಂತದ ಆಕ್ಷೇಪವೇ ಈ ಅಧಿಕರಣದ ಫಲವಾಗಿದೆ.

• • • • •

## ಸಂಶಯ ಕೋಟಿಗಳು

### तात्पर्यचन्द्रिका

**अत्र शूद्रादेः किं ब्रह्मविद्याधिकारोऽस्त्युत नेति चिन्ता ।**

ಅನುವಾದ - ಈ ಅಧಿಕರಣದ ಸಂಶಯಪರಂಪರೆ ಹೀಗಿದೆ - ಶೂದ್ರಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೋ, ಇಲ್ಲವೋ ? ಎಂಬುದು ಪ್ರಧಾನ ಸಂಶಯ.

**तदर्थं ''अहहारेत्वाशूद्र'' इति श्रुतः शूद्रशब्दः किं रूढः किं वा यौगिक इति ।**

ಅದಕ್ಕಾಗಿ 'ಅಹಹಾರೇತ್ವಾಶೂದ್ರ' ಎಂಬಲ್ಲಿ ಶ್ರುತವಾದ ಶೂದ್ರಶಬ್ದವು ರೂಢವೋ, ಅಥವಾ ಯೌಗಿಕವೋ ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किं रूढिबाधकं नास्त्युतास्तीति ।**

ಅದಕ್ಕಾಗಿ ರೂಢಿಗೆ ಬಾಧಕವಾದದ್ದು ಇಲ್ಲವೋ? ಅಥವಾ ಇದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

ಪರಿಪೂರ್ಣಚಂದ್ರಿಕಾ

**तदर्थं "अयमश्वतरीरथ" इति श्रुतो रथः किं शूद्रे युक्त उत न युक्त इति ।**

ಅದಕ್ಕಾಗಿ 'ಅಯಮಶ್ವತರೀರಥ' ಎಂಬಲ್ಲಿ ಶ್ರುತವಾದ ರಥವು ಶೂದ್ರನಿಗೆ ಯುಕ್ತವಾಗುತ್ತದೋ, ಅಥವಾ ಇಲ್ಲವೊ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

यद्वैतदनुशयेनाह – **यद्वेति** ।। विषयसंशयटीकां व्यनक्ति – **अत्रेति** ।। शूद्रादेरित्यादिपदेन त्रैवर्णिकेतरजातेः त्रैवर्णिकमध्येऽपि भक्तिशमदमादिरहितस्य च परिग्रहः ।

ವಿವರಣೆ - ಈ ಅಧಿಕರಣದ ವಿಷಯ ಮತ್ತು ಸಂಶಯಗಳನ್ನು ಪ್ರತಿಪಾದನೆ ಮಾಡುವ ಟೀಕೆಗಳನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. ಟೀಕೆಯಲ್ಲಿ 'ಶೂದ್ರಸ್ಯ' ಎಂದಷ್ಟೇ ಇದ್ದರೂ ಗ್ರಂಥಕಾರರು ಶೂದ್ರಶಬ್ದ ಉಪಲಕ್ಷಣವೆಂದು ತಿಳಿದು 'ಶೂದ್ರಾದೇಃ' ಎಂದು ಹೇಳಿದ್ದಾರೆ. ಆದಿಪದದಿಂದ ತ್ರೈವರ್ಣಿಕರ ಮಧ್ಯದಲ್ಲಿರುವ ಭಕ್ತಿ, ಶಮ, ದಮ, ಮೊದಲಾದ ಗುಣಗಳಿಲ್ಲದ ಮನುಷ್ಯರನ್ನೂ ಕೂಡ ಸ್ವೀಕರಿಸಬೇಕು.

**प्रकाशः – टीकायां "तदाद्रवणात्" इति सूत्रभाष्यानुरोधेन शूद्रस्येत्युक्तावप्युपनयन संस्काराभावादित्युक्तेः**

ಈ ಅರ್ಥವು ಟೀಕೆಗೂ ಕೂಡ ಸಮ್ಮತವಾಗಿದೆ. ಏಕೆಂದರೆ 'ತದಾದ್ರವಣಾತ್' ಎಂಬ ಸೂತ್ರದ ಭಾಷ್ಯಕ್ಕೆ ಅನುಸಾರಿಯಾಗಿ 'ಶೂದ್ರಸ್ಯ' ಎಂದಷ್ಟೇ ಹೇಳಿದ್ದರೂ ಉಪನಯನಸಂಸ್ಕಾರವಿಲ್ಲದ ಕಾರಣ ಅಧಿಕಾರವಿಲ್ಲವೆಂದು ಹೇಳಿದ್ದರಿಂದ ಉಳಿದವರನ್ನೂ ಕೂಡ ತೆಗೆದುಕೊಳ್ಳಬೇಕೆಂದು ತಿಳಿಯುತ್ತದೆ.

**प्रकाशः –**

अवैष्णवस्य वेदेऽपि ह्यधिकारो न विद्यते ।
गुरुभक्तिविहीनस्य शमादिरहितस्य च ।
नच वर्णावरस्यापि तस्मादध्ययनान्वितः ।।

इत्यादिनिषेधस्य च तुल्यतया समानन्यायविषयाणां टीकोपलक्षणमित्यभिप्रेत्यादिपदं प्रयुक्तम् ।।

ಅವೈಷ್ಣವಸ್ಯ ವೇದೇऽಪಿ ಹ್ಯಧಿಕಾರೋ ನ ವಿದ್ಯತೇ।
ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ।
ನಚ ವರ್ಣಾವರಸ್ಯಾಪಿ ತಸ್ಮಾದಧ್ಯಯನಾನ್ವಿತಃ॥

ತ್ರೈವರ್ಣಿಕರೇ ಆಗಿದ್ದರೂ ಕೂಡ ವಿಷ್ಣುಭಕ್ತರಾಗದಿದ್ದರೆ ವೇದದಲ್ಲಿ ಅಧಿಕಾರವನ್ನು ಹೊಂದುವುದಿಲ್ಲ. ಅಷ್ಟೇ ಅಲ್ಲದೆ, ಯಾರಿಗೆ ಗುರುಗಳಲ್ಲಿ ಭಕ್ತಿ ಇಲ್ಲವೋ, ಶಮದಮಾದಿಗುಣಗಳಿಲ್ಲವೋ, ಅವರಿಗೂ ಕೂಡ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಮತ್ತು ಶೂದ್ರ, ಸ್ತ್ರೀಶೂದ್ರರಿಗೂ ಕೂಡ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಈ ಪ್ರಮಾಣದಿಂದ, ಶೂದ್ರರಿಗೆ ಯಾವ ಕಾರಣದಿಂದ ವೇದವಿದ್ಯಾಧಿಕಾರವನ್ನು ನಿಷೇಧ ಮಾಡಿದ್ದಾರೋ, ಅದೇ ಕಾರಣದಿಂದಲೇ ತ್ರೈವರ್ಣಿಕರಿಗೂ ಕೂಡ ವೇದವಿದ್ಯಾಧಿಕಾರದ ನಿಷೇಧವಿದೆ. ಆದ್ದರಿಂದ ಟೀಕೆಯಲ್ಲಿರುವ 'ಶೂದ್ರಸ್ಯ' ಎಂಬ ಪದವು ಶೃಂಗಗ್ರಾಹಿಕತಯಾ ಪ್ರಯೋಗಿಸಿದ್ದಾರೆ ಹೊರತು, ಶೂದ್ರರನ್ನು ಮಾತ್ರ ವಿವಕ್ಷಿಸಬೇಕೆಂಬ ದೃಷ್ಟಿಯಿಂದಲ್ಲ. ಅದನ್ನು ತಿಳಿಸಲು ಗ್ರಂಥಕಾರರು 'ಆದಿ' ಪದವನ್ನು ಪ್ರಯೋಗಿಸಿದ್ದಾರೆ. ಹಾಗಾಗಿ ಈ ಅಧಿಕರಣದಲ್ಲಿ ಶೂದ್ರರಿಗೆ ಮಾತ್ರ ವೇದವಿದ್ಯಾಧಿಕಾರವನ್ನು ನಿಷೇಧ ಮಾಡುತ್ತಿಲ್ಲ. ಬ್ರಾಹ್ಮಣರೇ ಆಗಿದ್ದರೂ ಶಮ-ದಮಾದಿಗುಣಗಳಿಲ್ಲದಿದ್ದರೆ, ಅಥವಾ ವಿಷ್ಣುಭಕ್ತಿಯು ಅಧಿಕವಾಗಿಲ್ಲದಿದ್ದರೆ, ಅವರಿಗೂ ಕೂಡ ವೇದಾಧಿಕಾರವು ಇರುವುದಿಲ್ಲ ಎಂದು ತಿಳಿಯಬೇಕು.

**प्रकाशः – इति श्रुत इति ॥ छान्दोग्ये चतुर्थेऽध्याये संवर्गविद्यायां ''तमुह परः प्रत्युवाच अहहारेत्वा शूद्र तवैव सह गोभिरस्तु'' इति पौत्रायणं प्रति रैकोक्ते वाक्ये श्रुतस्सम्बुद्ध्यन्तश्शूद्रशब्द इत्यर्थः ।**

'ಇತಿ ಶ್ರುತಃ' ಎಂದರೆ ಛಾಂದೋಗ್ಯೋಪನಿಷತ್ತಿನ ನಾಲ್ಕನೆಯ ಅಧ್ಯಾಯದ ಸಂವರ್ಗವಿದ್ಯೆಯಲ್ಲಿ ಕೇಳಿಸುತ್ತಿದೆ ಎಂದರ್ಥ. ಅದು ಹೀಗೆ - 'ತಮುಹ ಪರಃ ಪ್ರತ್ಯುವಾಚ ಅಹಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು' ಎಂಬ ವಾಕ್ಯದಿಂದ ಪೌತ್ರಾಯಣ ರಾಜನನ್ನು ಕುರಿತು ರೈಕ್ವಮುನಿಗಳು ಉಪದೇಶವನ್ನು ಮಾಡುತ್ತಾರೆ. ಈ ವಾಕ್ಯದಲ್ಲಿ 'ಶೂದ್ರ' ಶಬ್ದವು ಸಂಬುದ್ಧ್ಯಂತವಾಗಿದೆ.

**प्रकाशः – अहेति सम्बुद्धिः । हारेति लुप्तविभक्तिकः । इत्वा रथः ।**

'ಅಹ' ಎಂಬುದು ಸಂಬೋಧವಾಚಕವಾದ ಪದ. ಅಂದರೆ ಎಲೈ ! ಶೂದ್ರನೇ ಎಂದರ್ಥ. 'ಹಾರಃ ಇತ್ವಾ' ಎಂದು ಪದಚ್ಛೇದ ಆವಾಗ ವಿಸರ್ಗವು ಲೋಪವಾಗಿ 'ಹಾರಯಿತ್ವ' ಎಂದಾಗಬೇಕು. ಆದರೆ 'ಹಾರೇತ್ವ' ಎಂದು ಗುಣಸಂಧಿ ಮಾಡಿದ್ದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. 'ಹಾರ' ಎಂಬುದು ಲುಪ್ತವಿಭಕ್ತಿಕವಾದ ಪದವಾಗಿದೆ. ಕೇವಲ ಪ್ರಾತಿಪದಿಕವನ್ನು ವಿವಕ್ಷಿಸಿದ್ದರಿಂದ 'ಇತ್ವಾ' ಎಂಬ ಪದದ ಜೊತೆಗೆ ಗುಣಸಂಧಿಯನ್ನು ಹೊಂದಿ, 'ಹಾರಯಿತ್ವ' ಎಂದಾಗಿದೆ. ಈ ಪ್ರಯೋಗವು ಛಾಂದಸವಾದ್ದರಿಂದ ತಪ್ಪಾಗುವುದಿಲ್ಲ. 'ಅಂದರೆ ನೀನು ತಂದಿರುವ ಹಾರ, ರಥ ಇವೆಲ್ಲವೂ ನಿನಗೇ ಇರಲಿ, ನನಗೆ ಬೇಡ' ಎಂದು ರೈಕ್ವಮುನಿಗಳು ನಿಷೇಧ ಮಾಡುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः** – यदत्र केनचिदुक्तं "अहहारेत्वाशूद्र" इति दक्षिणाप्रत्याख्यानवाक्ये शूद्रवद्ब्रह्मविद्यागौरवमजानानस्स्वल्पां दक्षिणामाहरसीति कोपेन शूद्रेत्यामन्त्रण-मित्यन्यथा सिद्धिर्वक्तुं शक्या । तथापि "आजहारेमाश्शूद्राऽनेनैवमुखेना-लापयिष्यथा" इत्युत्तरवाक्यस्थशूद्रशब्दात्सन्देह इति

ಕೆಲವರ ಆಕ್ಷೇಪ - 'ಅಹಹಾರೇತ್ವ ಶೂದ್ರ' ಎಂಬ ವಾಕ್ಯದಲ್ಲಿ 'ಶೂದ್ರ' ಶಬ್ದವು ಕೇಳಿಸುತ್ತಿದೆ. ಇಲ್ಲಿರುವ ಶೂದ್ರಶಬ್ದವು ಇಲ್ಲಿ ವಿಚಾರಕ್ಕೆ ವಿಷಯವಾಗಿಲ್ಲ. ಉಪನಿಷತ್ತಿನಲ್ಲಿ ಬರುವ ಪ್ರಕರಣ ಹೀಗಿದೆ - ಪೌತ್ರಾಯಣರಾಜನು ಮೊದಲು ಹಾರ, ರಥ ಮೊದಲಾದವುಗಳನ್ನು ರೈಕ್ವಮುನಿಗಳಿಗೆ ಸಮರ್ಪಿಸಿ ಬ್ರಹ್ಮವಿದ್ಯೆಯನ್ನು ಪ್ರಾರ್ಥನೆ ಮಾಡುತ್ತಾನೆ. ಆವಾಗ ಪೌತ್ರಾಯಣ ಋಷಿಗಳು ಅಮೂಲ್ಯವಾದ ಬ್ರಹ್ಮವಿದ್ಯೆಯ ಉಪದೇಶಕ್ಕೆ ಅಲ್ಪವಾದ ಹಾರ, ರಥಾದಿಗಳನ್ನು ಕೊಡುತ್ತೀಯಲ್ಲಾ, ನೀನು 'ಶೂದ್ರ' ಎಂದು ಬೈಯುತ್ತಾರೆ. ಆವಾಗ ಪುನಃ ಮರಳಿ ಬಂದು, ಪೌತ್ರಾಯಣರಾಜನು ಲೆಕ್ಕವಿಲ್ಲದಷ್ಟು ಸಂಪತ್ತನ್ನು ಮತ್ತು ಸ್ವತಃ ತನ್ನ ಮಗಳನ್ನೇ ಕಾಣಿಕೆಯನ್ನಾಗಿ ನೀಡಲು ಮುಂದಾಗುತ್ತಾನೆ. ಆ ಸಂದರ್ಭದಲ್ಲಿಯೂ ಕೂಡ ರೈಕ್ವಮುನಿಗಳು 'ಏಲೈ ! ಶೂದ್ರನೇ' ಎಂದು ಸಂಬೋಧಿಸಿದ್ದಾರೆ. ವಾಸ್ತವಿಕವಾಗಿ ಬಹಳ ಸಂಪತ್ತನ್ನು ತಂದುಕೊಟ್ಟಾಗ ಸಿಟ್ಟಿನಲ್ಲಿ ರೈಕ್ವಮುನಿಗಳು 'ಶೂದ್ರನೇ' ಎಂದು ಸಂಬೋಧಿಸಲು ಸಾಧ್ಯವಿಲ್ಲ. ಆದರೂ ಕೂಡ 'ಏಲೈ ! ಶೂದ್ರನೇ' ಎಂದು ಸಂಬೋಧಿಸಿದ್ದರಿಂದ ಇಲ್ಲಿರುವ 'ಶೂದ್ರ' ಶಬ್ದಕ್ಕೆ ತ್ರೈವರ್ಣಿಕನಿಗಿಂತ ಭಿನ್ನನಾದ ಶೂದ್ರನನ್ನು ವಿವಕ್ಷಿಸಬೇಕೋ ? ಎಂಬ ಸಂಶಯವು ಹುಟ್ಟುತ್ತದೆ. ಆದ್ದರಿಂದ ಎರಡನೆಯ ಬಾರಿ ಕೇಳಿಸುತ್ತಿರುವ ಶೂದ್ರಶಬ್ದವನ್ನೇ ಇಲ್ಲಿ ವಿಚಾರಕ್ಕೆ ವಿಷಯವನ್ನಾಗಿ ಸ್ವೀಕರಿಸಬೇಕು.

ಆದ್ದರಿಂದ 'ಅಹಹಾರೇತ್ವ ಶೂದ್ರ' ಎಂಬ ಪ್ರಥಮಶ್ರುತವಾದ ದಕ್ಷಿಣೆಯನ್ನು ನಿರಾಕರಿಸುವ ವಾಕ್ಯದಲ್ಲಿ 'ಶೂದ್ರ' ಎಂಬ ಆಮಂತ್ರಣವು ಶೂದ್ರನಂತೆ ನಿನಗೆ ಬ್ರಹ್ಮವಿದೆಯಲ್ಲಿ ಗೌರವವಿಲ್ಲ. ಕೇವಲ ಸ್ವಲ್ಪಮಾತ್ರ ದಕ್ಷಿಣೆಯನ್ನು ತೆಗೆದುಕೊಂಡು ಬಂದಿದ್ದಿ ಎಂಬ ಕೋಪದಲ್ಲಿ ಹೇಳಿದ ಮಾತು. ಹೀಗೆ ಶೂದ್ರಶಬ್ದಕ್ಕೆ ಅನ್ಯಥಾಸಿದ್ಧಿಯನ್ನು ಹೇಳಬಹುದು. ಆದರೆ ಆಜಹಾರೇಮಾಃ ಶೂದ್ರಾऽನೇನ್ಯೆವ ಮುಖೇನಾಲಪಯಿಷ್ಯಥಾಃ' ಎಂಬ ಮುಂದಿನ ವಾಕ್ಯದಲ್ಲಿರುವ ಶೂದ್ರಶಬ್ದಕ್ಕೆ ಹೀಗೆ ಅರ್ಥವನ್ನು ಹೇಳಲು ಸಾಧ್ಯವಾಗದ ಕಾರಣ ಇದೇ ವಿಚಾರಕ್ಕೆ ವಿಷಯವಾಗಿದೆ.

**प्र ाशः** – तन्न । तथात्वेऽग्रेपि शूद्रेत्युक्तेरनुपपत्तेः । प्रक्रमस्थशूद्रशब्देऽन्यथासिद्धि-शङ्कायामुपरितनेति तथात्वशङ्कानपायात् । एकप्रकरणस्थत्वात् । विषयकामुकवृषल वत्कामिन्यादिमुखेनालापयिष्यथा इति वा त्रैवर्णिकवच्छुश्रूषया विना शूद्रवद् हारादिद्रव्यमुखेन विद्यां प्राप्तुमिच्छसीति वा तदानीतकन्यापरिग्रहेणास्याशूद्रत्वशङ्कया शूद्रेत्युक्तेर्वर्णावरत्वान्यनिमित्तकत्वमिति वा शङ्कोदयस्य तत्रापि सम्भवाच्च ।

ಸಮಾಧಾನ - ಇವರ ಆಕ್ಷೇಪ ತಪ್ಪು. ಏಕೆಂದರೆ ಮೊದಲಿರುವ ಶೂದ್ರಶಬ್ದಕ್ಕೆ ಅನ್ಯಥಾಸಿದ್ಧಿಯನ್ನು ಆಶಂಕಿಸಿದ ಮೇಲೆ, ಎರಡನೆಯ ಬಾರಿ ಇರುವ ಶೂದ್ರಶಬ್ದದಲ್ಲಿಯೂ ಕೂಡ ಅನ್ಯಥಾಸಿದ್ಧಿ ಶಂಕೆಯು

ಬಂದೇ ಬರುತ್ತದೆ. ಒಂದೇ ಪ್ರಕರಣದಲ್ಲಿರುವ ಎರಡು ಶಬ್ದಗಳ ಮಧ್ಯ ಒಂದಕ್ಕೆ ಅನ್ಯಥಾಸಿದ್ಧಿಯನ್ನು ಆಶಂಕಿಸಿ, ಮತ್ತೊಂದಕ್ಕೆ ಅನ್ಯಥಾಸಿದ್ಧಿಯನ್ನು ಆಶಂಕಿಸದಿರುವುದು ಸರಿಯಾಗುವುದಿಲ್ಲ.

ಹಾಗಾಗಿ ಎರಡನೆಯ ಬಾರಿ ಇರುವ ಶೂದ್ರಶಬ್ದದಲ್ಲಿಯೂ ಕೂಡ ಅನ್ಯಥಾಸಿದ್ಧಿಯ ಆಶಂಕೆಯು ಬಂದೇ ಬರುತ್ತದೆ. ಹೇಗೆಂದರೆ ವಿಷಯಕಾಮುಕನಾದ ಚಂಡಾಲನು ಕಾಮಿನಿಸ್ತ್ರೀಯನ್ನು ಮುಂದಿಟ್ಟುಕೊಂಡು, ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವಂತೆ, ನೀನೂ ಸಹ ಚಂಡಾಲನಂತೆ ಸ್ತ್ರೀಯನ್ನು ಮುಂದಿಟ್ಟುಕೊಂಡು ಕಾರ್ಯಸಾಧನೆಗಾಗಿ ಬಂದಿದಿಯೇನು? ಎಂದು ಎರಡನೆಯ ವಾಕ್ಯದಲ್ಲಿಯೂ ಕೂಡ ಆಕ್ಷೇಪ ಮಾಡಬಹುದು.

ಅಥವಾ ತ್ರೈವರ್ಣಿಕರು ಹೇಗೆ ಗುರುಶುಶ್ರೂಷೆಯಿಂದ ಬ್ರಹ್ಮವಿದ್ಯೆಯನ್ನು ಪಡೆದುಕೊಳ್ಳುತ್ತಾರೋ, ಅವರಂತೆ ನೀನು ಗುರುಶುಶ್ರೂಷೆ ಮಾಡದೇ ಶೂದ್ರನಂತೆ ಹಾರ ಮೊದಲಾದ ದ್ರವ್ಯಾದಿಗಳನ್ನು ಮುಂದಿಟ್ಟುಕೊಂಡು ವಿದ್ಯೆಯನ್ನು ಕಲಿಯಲು ಬಂದಿರುವಿಯೇನು ಎಂದೂ ಸಹ ಆಕ್ಷೇಪ ಮಾಡಬಹುದು.

ಅಥವಾ ಪೌತ್ರಾಯಣರಾಜನು ತನ್ನ ಮಗಳನ್ನೇ ಕರೆದುಕೊಂಡು ಬಂದಿದ್ದಾನೆ ಹೊರತು, ಅನ್ಯಸ್ತ್ರೀಯನ್ನು ಕರೆದುಕೊಂಡು ಬಂದಿಲ್ಲ. ರೈಕ್ವಮುನಿಗಳು ಆ ಕನ್ಯೆಯನ್ನು ಸ್ವತಃ ಪರಿಗ್ರಹ ಮಾಡುತ್ತಾರೆ. ಬ್ರಾಹ್ಮಣಶ್ರೇಷ್ಠರಾದ ರೈಕ್ವಮುನಿಗಳು ಕನ್ಯೆಯನ್ನು ಪರಿಗ್ರಹ ಮಾಡಿದ್ದಾರೆಂದರೆ ಅವಳು ಬ್ರಾಹ್ಮಣಳೇ ಆಗಿರಬೇಕು. ಅವಳ ತಂದೆಯಾದ ಪೌತ್ರಾಯಣರಾಜನೂ ಕೂಡ ಬ್ರಾಹ್ಮಣನೇ ಆಗಿರಬೇಕು. ಹೀಗಿರುವಾಗ ಶೂದ್ರಶಬ್ದಕ್ಕೆ ಬೇರೆಯವರನ್ನು ವಿವಕ್ಷಿಸಬಹುದೋ ಏನೋ ? ಎಂದು ಸಂಶಯ ಬರಲು ಸಾಧ್ಯವೇ ಇರುವುದಿಲ್ಲ. ಹಾಗಾಗಿ ಪ್ರಥಮಶ್ರುತವಾದ ಶೂದ್ರಶಬ್ದದಲ್ಲಿ ಅನ್ಯಥಾಸಿದ್ಧಿಶಂಕೆಯು ಬರುತ್ತದೆಂದರೆ ದ್ವಿತೀಯ ಶ್ರುತವಾದ ಶೂದ್ರಶಬ್ದದಲ್ಲಿಯೂ ಕೂಡ ಅನ್ಯಥಾಸಿದ್ಧಿಶಂಕೆಯು ಬಂದೇ ಬರುತ್ತದೆ. ಆದ್ದರಿಂದ ಇವರ ವಾದ ಹುರುಳಿಲ್ಲದ್ದು.[೧]

**ಪ್ರಕಾಶಃ –** किञ्च क्षत्रियत्वनिर्णायकद्वितीयसूत्रोक्तरथसम्बन्धित्वस्य ''अहहारेत्व'' इति वाक्य इवोत्तरवाक्येऽभावात्तदनादरश्रवणतदाद्रवणतत्सूचनानामाद्यसूत्रोपात्तानां भाष्योक्तवाक्यस्थशूद्रशब्द एव सन्निधानेन तन्निर्णयाधीननिर्णयत्वादुत्तरशूद्रशब्दस्य ।

ಉಪನಿಷತ್ತಿನಲ್ಲಿರುವ ಪ್ರಥಮವಾಕ್ಯವನ್ನೇ ವಿಷಯವೆಂದು ಪರಿಗಣಿಸಲು ಮತ್ತೊಂದು ಕಾರಣ ಹೀಗಿದೆ- ಪ್ರಥಮ ವಾಕ್ಯದಲ್ಲಿ ಪೌತ್ರಾಯಣರಾಜನು ಕ್ಷತ್ರಿಯನೇ ಆಗಿದ್ದಾನೆನ್ನಲು ರಥಸಂಬಂಧ ಮೊದಲಾದ ಕಾರಣಗಳನ್ನು ನೀಡಲಾಗಿದೆ. 'ಅಹಹಾರೇತ್ವ' ಎಂಬ ವಾಕ್ಯದಲ್ಲಿ ರಥಸಂಬಂಧವನ್ನು ಹೇಳಿದಂತೆ ಎರಡನೆಯ ವಾಕ್ಯದಲ್ಲಿ ಇಂತಹ ಕ್ಷತ್ರಿಯತ್ವನಿರ್ಣಾಯಕವಾದ ಯಾವುದೇ ಲಿಂಗಗಳು ಕೇಳಿಸುತ್ತಿಲ್ಲ. ಆದ್ದರಿಂದ ದ್ವಿತೀಯ ಸೂತ್ರದಲ್ಲಿ ಹೇಳಿದ ರಥಸಂಬಂಧವೆಂಬ ಕಾರಣವಿರುವ ವಾಕ್ಯವನ್ನೇ ವಿಷಯವೆಂದು ಪರಿಗಣಿಸಬೇಕು. ಮತ್ತು ಹಂಸಪಕ್ಷಿಗಳ ಸಂವಾದದಿಂದ ತಿರಸ್ಕಾರವು ಆದರಿಂದ ರಾಜನಿಗುಂಟಾದ ಶೋಕದಿಂದ ಆದ್ರವಣವು ಮತ್ತು ಮರುಕ್ಷಣದಲ್ಲಿಯೇ ಸಾರಥಿಯು ರೈಕ್ವಮುನಿಯನ್ನು ಹುಡುಕಿಕೊಂಡು ಬಾ ಎಂಬ ಆದೇಶವು

(೧) ರಾಯರ ಅದ್ಭುತ ಚಮತ್ಕಾರದ ವ್ಯಾಖ್ಯಾನ ಕೌಶಲ್ಯವನ್ನು ಬುಭುತ್ಸುಗಳು ಗಮನಿಸಬೇಕು.

ಇವುಗಳೆಲ್ಲವೂ ಕ್ಷತ್ರಿಯತ್ವಕ್ಕೆ ನಿರ್ಣಾಯಕವಾಗಿವೆ. ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ ಎಲ್ಲ ಲಿಂಗಗಳು. ಭಾಷ್ಯದಲ್ಲಿ ಉದಾಹರಿಸಿದ ಪ್ರಥಮವಾಕ್ಯದಲ್ಲೇ ಇರುತ್ತವೆ ಹೊರತು, ಎರಡನೆಯ ವಾಕ್ಯದಲ್ಲಿ ಇರುವುದಿಲ್ಲ. ಹೀಗೆ ಕ್ಷತ್ರಿಯತ್ವವು ಪ್ರಥಮವಾಕ್ಯದಿಂದ ನಿರ್ಣಯಿತವಾದ ಮೇಲೆ ತದಧೀನವಾಗಿ ಎರಡನೆಯ ವಾಕ್ಯವೂ ಕೂಡ ಅದೇ ವಿಷಯವನ್ನು ಪ್ರತಿಪಾದಿಸುತ್ತಿದೆ ಎಂದು ನಿರ್ಣಯ ಮಾಡಬಹುದು. ಆದ್ದರಿಂದ ಪ್ರಥಮವಾಕ್ಯದಲ್ಲಿರುವ ಶೂದ್ರವಾಕ್ಯಕ್ಕೆ ಅನ್ಯಥಾಸಿದ್ಧಿಯನ್ನು ಕಲ್ಪಿಸಲಾಗದು.

**प्रकाशः** – किञ्च दक्षिणा प्रत्याख्यानं शूद्रजातित्वादेव शूद्रेति सम्बोध्य कृतम्। शूद्रप्रतिग्रहस्य निन्दनात् । न त्वल्पत्वेनेति विरक्तस्य मुनेः स्वल्पत्वेन प्रत्याख्यानायोगादिति जातिवाचित्वशङ्काया एवोदयेनान्यथासिद्धि शङ्कानुदयाच्च ।

ಮತ್ತೊಂದು ಕಾರಣ ಹೀಗಿದೆ - ದಕ್ಷಿಣೆಯನ್ನು ರೈಕ್ವಮುನಿಗಳು ಏಕೆ ನಿರಾಕರಿಸಿದ್ದಾರೆಂದರೆ, ಶೂದ್ರನಾದ್ದರಿಂದ ಎಂದೇ ಹೇಳಬಹುದು. ಆದ್ದರಿಂದಲೇ 'ಶೂದ್ರ' ಎಂದು ಸಂಬೋಧಿಸಿದ್ದಾರೆ. ಇದರಿಂದ ಶೂದ್ರನಿಂದ ಪ್ರತಿಗ್ರಹ ಮಾಡಬಾರದೆಂದು ನಿಂದಿಸಲಾಯಿತು ಹೊರತು, ಅವನು ತಂದಿರುವ ದಕ್ಷಿಣೆಯು ಅಲ್ಪವಾಗಿದೆಯೆಂಬ ಕಾರಣದಿಂದಲ್ಲ. ವಿರಕ್ತರಾದ ಮುನಿಗಳಿಗೆ ದಕ್ಷಿಣೆಯು ಸ್ವಲ್ಪವಾದರೇನು? ಬಹಳವಾದರೇನು? ಸ್ವಲ್ಪವಾಗಿದೆ ಎಂಬ ಕಾರಣದಿಂದ ದಕ್ಷಿಣೆಯನ್ನು ನಿರಾಕರಿಸುವಂತಹವರಲ್ಲ. ಆದ್ದರಿಂದ ಶೂದ್ರಶಬ್ದವು ಜಾತಿವಾಚಿಯೇ ಆಗಿದೆಯೆಂಬ ಶಂಕೆಯೇ ಉತ್ಪನ್ನವಾಗುತ್ತದೆ. ಹೀಗಿರುವಾಗ 'ಶೂದ್ರ' ಎಂಬ ಸಂಬೋಧನೆಗೆ ಅನ್ಯಥಾಸಿದ್ಧಿಯ ಆಶಂಕೆಯು ಯುಕ್ತವಾಗುವುದಿಲ್ಲ.

**प्रकाशः** – नच तथात्वेऽग्रेतनवाक्ये दक्षिणापरिग्रहश्रवणविरोध इति शङ्क्यम् । त्वत्पक्षेऽप्यग्रे शूद्रपदश्रवणविरोधस्य तुल्यत्वात् । पुनरागते तस्मिन् दयया तद्दत्तस्वीकरणं मुनेरित्युपपत्तेश्च । तस्माद्भाष्याद्युक्तं ''अहहारेत्वाशूद्र'' इति वाक्यमेवोदाहरणं युक्तम् ।

ಹಾಗಾದರೆ ಶೂದ್ರನಿಂದ ದಕ್ಷಿಣೆಯನ್ನು ಸ್ವೀಕರಿಸಬಾರದೆಂತಾಯಿತು. ಆದರೆ ಮುಂದಿನ ವಾಕ್ಯದಲ್ಲಿ ದಕ್ಷಿಣೆಯನ್ನು ಸ್ವೀಕರಿಸಿದ್ದು, ಶ್ರುತವಾಗಿದೆಯಲ್ಲವೇ? ಎಂಬ ಶಂಕೆಗೂ ಅವಕಾಶವಿಲ್ಲ. ಆ ಶಂಕೆಯು ನಿನಗೂ ಸಹ ಸಮಾನ. ಸಿಟ್ಟಿನಿಂದ ನಿಂದನೆಗೋಸ್ಕರ 'ಶೂದ್ರ' ಎಂದು ಕರೆದಿದ್ದಾರೆಂದು ನಿನ್ನ ವ್ಯಾಖ್ಯಾನ. ಆದರೆ ಮುಂದೆ ಪುನಃ ಬಹಳವಾಗಿ ದಕ್ಷಿಣೆಯನ್ನು ತಂದಾಗಲೂ ರೈಕ್ವಮುನಿಗಳು ಶೂದ್ರ ಎಂದೇ ಸಂಬೋದಿಸಿದ್ದಾರೆ. ಬಹಳ ದಕ್ಷಿಣೆಯನ್ನು ತಂದ ಮೇಲೆ ಪುನಃ ಕೋಪವನ್ನೇಕೆ ಮಾಡುತ್ತಾರೆ. ಹಾಗಾಗಿ ಭಾಷ್ಯದಲ್ಲಿ ಹೇಳಿಧ 'ಅಹಹಾರೇತ್ವ ಶೂದ್ರ' ಎಂಬ ವಾಕ್ಯವನ್ನೇ ಈ ಅಧಿಕರಣದ ವಿಷಯವನ್ನಾಗಿ ಹೇಳಬೇಕು.

**प्रकाशः** – आद्यसूत्रसूचितं चिन्ताद्वयमुक्त्वा द्वितीयसूचितं चिन्ताद्वयमाह – **रूढिबाधकमिति** ।।

ಅಪಶೂದ್ರಾಧಿಕರಣ (೧-೩-೯)

ಪ್ರಥಮಸೂತ್ರದಿಂದ ಸೂಚಿತವಾದ ಎರಡು ಬಗೆಯ ಸಂಶಯಗಳನ್ನು ಹೇಳಿ, ಎರಡನೆಯ ಸೂತ್ರದಿಂದ ಸೂಚಿತವಾದ ಮತ್ತೆರಡು ಬಗೆಯ ಸಂಶಯಗಳನ್ನು ಹೇಳುತ್ತಿದ್ದಾರೆ 'ರೂಢಿಬಾಧಕಮ್' ಎಂಬ ವಾಕ್ಯದಿಂದ.

**प्रकाशः** – यदि वक्ष्यमाणदिशा शूद्रे वेदाध्ययनादेस्सम्भवेन ''यत्र वेदो रथस्तत्र न वेदो यत्र नो रथ'' इति स्मृतेर्वेदाविनाभूतोऽपि रथो युक्तः तदा बाधकाभावेन रूढित्यागायोगाच्छूद्रादीनामप्यधिकारस्सिध्यति ।

ಪೂರ್ವಪಕ್ಷದ ಫಲ - ಮುಂದೆ ಪೂರ್ವಪಕ್ಷದಲ್ಲಿ ಹೇಳುವ ಪ್ರಕಾರ ಶೂದ್ರನಿಗೂ ವೇದಾಧ್ಯಯನವು ಇರುವುದಾದರೆ, 'ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ' ಎಂಬ ಸ್ಮೃತಿಯು ಹೇಳಿದ ವೇದದಿಂದ ಅವಿನಾಭೂತವಾದ ರಥವು ಶೂದ್ರನಿಗೆ ಯುಕ್ತವಾಗುತ್ತದೆ. ಅಂದರೆ ವೇದವಿದ್ದಲ್ಲಿ ರಥವಿರುತ್ತದೆ. ವೇದವಿಲ್ಲದಿದ್ದರೆ ರಥವು ಇರುವುದಿಲ್ಲವೆಂದು ಸ್ಮೃತಿಯು ಹೇಳುತ್ತಿದೆ. ಶೂದ್ರನಿಗೆ ವಿಶಿಷ್ಟಬುದ್ಧ್ಯಾದಿಗಳಿರುವ ಕಾರಣ ವೇದವಿದೆಯೆಂದಂತಾಯಿತು. ಆದ್ದರಿಂದ ರಥಸಂಬಂಧವೂ ಕೂಡ ಶೂದ್ರನಿಗೆ ಯುಕ್ತವಾಗುತ್ತದೆ. ಆವಾಗ ರಥಸಂಬಂಧವೆಂಬ ಬಾಧಕವಿಲ್ಲದ ಕಾರಣ ತ್ರೈವರ್ಣಿಕನಲ್ಲವೆಂದು ಹೇಳಲಾಗದು. ಆದ್ದರಿಂದ ರೂಢಿಯ ಬಲದಿಂದ ಶೂದ್ರಶಬ್ದವು ಜಾತಿಪರವೇ ಆಗುತ್ತದೆ. ಆದ್ದರಿಂದ ಶೂದ್ರಾದಿಗಳಿಗೂ ವೇದಾಧಿಕಾರವಿದೆಯೆಂದು ಸಿದ್ಧವಾಗುತ್ತದೆ. .

**प्रकाशः** – यदा तु सिद्धान्ते वक्ष्यमाणदिशा शूद्रे वेदाभावेन तदविनाभूतो रथो न युक्तः तदा बाधकसत्त्वेन रूढित्यागेन यौगिकार्थस्याशूद्रेऽपि सम्भवान्नास्त्यधिकार इति सिध्यतीति फलफलिभावस्स्पष्टः ।

ಸಿದ್ಧಾಂತದ ಫಲ - ಒಂದು ವೇಳೆ ಸಿದ್ಧಾಂತದಲ್ಲಿ ಹೇಳುವಂತೆ ಶೂದ್ರನಿಗೆ ವೇದಾಧಿಕಾರವಿಲ್ಲವೆಂದಾದರೆ, ವೇದದಿಂದ ಅವಿನಾಭೂತವಾದ ರಥದ ಸಂಬಂಧವೂ ಕೂಡ ಯುಕ್ತವಾಗುವುದಿಲ್ಲ. ಆವಾಗ ರಥಸಂಬಂಧವೆಂಬ ಬಾಧಕವಿರುವ ಕಾರಣದಿಂದಲೇ ರೂಢಿಯನ್ನು ತ್ಯಾಗ ಮಾಡಬೇಕು, ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಆವಾಗ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ಫಲಫಲಿಭಾವವು ಸ್ಪಷ್ಟವಾಗಿದೆ.

**प्रकाशः** – नन्वत्र तदर्थं रथव्यापकमध्ययनं शूद्रे युक्तं न वेति तृतीयसूत्रादि-सूचितचिन्तान्तरं कुतो न प्रदर्शितमिति चेत् द्वितीयसूत्रे चैत्ररथेनेति तद्धितप्रत्ययसूचितं स्वाभाविकत्वं रथसम्बन्धस्य प्रतिपादयितुम् । तथा प्रदर्शने हि रथो वेदानुमानद्वारा शूद्रत्वज्ञापकस्स्यान्न साक्षादिति साक्षादपि लिङ्गत्वस्य सिद्ध्यर्थमेतावत्येव चिन्ता दर्शिता ।

**ಶಂಕೆ** - ಈ ಸಂಶಯ ಪರಂಪರೆಯ ಮಧ್ಯದಲ್ಲಿ 'ತದರ್ಥಂ ರಥವ್ಯಾಪಕಮಧ್ಯಯನಂ ಶೂದ್ರೇ ಯುಕ್ತಂ ನ ವಾ' ಅದಕ್ಕಾಗಿ ರಥವ್ಯಾಪಕವಾದ ಅಧ್ಯಯನವು ಶೂದ್ರನಲ್ಲಿ ಯುಕ್ತವಾಗುತ್ತದೋ ಇಲ್ಲವೋ?,

ಎಂಬ ಮೂರನೆಯ ಸೂತ್ರದಿಂದ ಸೂಚಿತವಾದ ಮತ್ತೊಂದು ಸಂಶಯವನ್ನು ಕೂಡ ಸೇರಿಸಬೇಕಿತ್ತಲ್ಲವೇ, ಇದನ್ನೇಕೆ ಹೇಳಿಲ್ಲ?

ಉತ್ತರ - ಎರಡನೆಯ ಸೂತ್ರದಲ್ಲಿ 'ಚಿತ್ರರಥಸ್ಯ ಅಯಂ ಚೈತ್ರರಥಃ' ಎಂಬುದಾಗಿ 'ಚೈತ್ರರಥ' ಶಬ್ದದಲ್ಲಿ ತದ್ಧಿತಪ್ರತ್ಯಯವನ್ನು ಸೇರಿಸಲಾಗಿದೆ. 'ತದ್ಧಿತಪ್ರತ್ಯಯವು ಔತ್ಪತ್ತಿಕಸಂಬಂಧವನ್ನು ಹೇಳದೇ, ಸ್ವಾಭಾವಿಕ ಸಂಬಂಧವನ್ನಷ್ಟೇ ಎಲ್ಲೆಡೆ ಹೇಳುತ್ತದೆ. ಆದ್ದರಿಂದ ರಥಸಂಬಂಧವು ಪೌತ್ರಾಯಣನಲ್ಲಿ ಸ್ವಾಭಾವಿಕವಾಗಿದೆಯೆಂದು ಸ್ಪಷ್ಟವಾಗುತ್ತದೆ. ಒಂದು ವೇಳೆ ಮೂರನೆಯ ಸೂತ್ರದಿಂದ ಸೂಚಿತವಾದ ಚಿಂತೆಯನ್ನು ತೋರಿಸಿದರೆ ನೇರವಾಗಿ ಪೂರ್ವಪಕ್ಷವನ್ನು ತೋರಿಸಿದಂತಾಗುವುದಿಲ್ಲ. ಅಂದರೆ ವೇದಾನುಮಾನದ ಮೂಲಕವಾಗಿ ಶೂದ್ರನಲ್ಲವೆಂದು ತಿಳಿಸಬೇಕು. ಮೊದಲು 'ಶೂದ್ರಃ ನ ರಥವಾನ್ ವೇದರಹಿತ್ವಾತ್' ಎಂಬ ಅನುಮಾನದಿಂದ ಶೂದ್ರನಿಗೆ ರಥದ ಸಂಬಂಧವಿಲ್ಲವೆಂದು ಸಾಧಿಸಿ, ಅನಂತರ 'ಪೌತ್ರಾಯಣಃ ನ ಶೂದ್ರಃ ರಥಸಂಬಂಧವತ್ವಾತ್' ಎಂದು ಸಾಧಿಸಬೇಕು. ಹೀಗೆ ಹೇಳಿದಾಗ ನೇರವಾಗಿ ಅಶೂದ್ರತ್ವವನ್ನು ಸಾಧಿಸಿದಂತಾಗುವುದಿಲ್ಲ. ಆದಕ್ಕಾಗಿ ಮೂರನೆಯ ಸೂತ್ರದಿಂದ ಸೂಚಿತವಾದ ಚಿಂತೆಯನ್ನು ತೋರಿಸಿಲ್ಲ.

**प्रकाशः** – एवं चास्मिन्पक्षे रथस्यास्वाभाविकत्वेन शूद्रे युक्तत्वादस्त्यधिकार इति पूर्वपक्षे फलम् । सिद्धान्ते तु तस्यात्र स्वाभाविकस्यैव श्रवणात्तस्य च शूद्रेऽयोगान्नास्त्यधिकार इत्यवधेयम् ।

ಈ ಪಕ್ಷದಲ್ಲಿ ರಥವು ಅಸ್ವಾಭಾವಿಕವಾದ್ದರಿಂದ ಶೂದ್ರನಿಗೆ ರಥದ ಸಂಬಂಧವು ಯುಕ್ತವಾಗುತ್ತದೆ. ಹಾಗಾಗಿ ವೇದಾಧಿಕಾರವಿರುತ್ತದೆಂಬುದು ಪೂರ್ವಪಕ್ಷದ ಫಲ. ಸಿದ್ಧಾಂತದಲ್ಲಿ ಸ್ವಾಭಾವಿಕವಾದ ರಥಸಂಬಂಧವೇ ಶ್ರುತಿಯಲ್ಲಿ ಹೇಳಿರುವುದಿರಂದ ಶೂದ್ರರಲ್ಲಿ ಸ್ವಾಭಾವಿಕ ರಥದ ಸಂಬಂಧವಿಲ್ಲದ ಕಾರಣ ಅಧಿಕಾರವಿಲ್ಲವೆಂಬುದು ಸಿದ್ಧಾಂತದ ಫಲ.




ಛಾಂದೋಗ್ಯದ ನಾಲ್ಕನೇ ಅಧ್ಯಾಯದ ಸಂವರ್ಗ ಪ್ರಕರಣದಲ್ಲಿ ಹೀಗೊಂದು ಕಥೆಯಿದೆ - ಪೌತ್ರಾಯಣನೆಂಬ ಒಬ್ಬ ರಾಜನಿದ್ದನು, ಮಂಚದ ಮೇಲೆ ಮಲಗಿದ್ದಾಗ ಒಂದು ರಾತ್ರಿ ತನ್ನ ಪ್ರಾಸಾದದ ಮೇಲ್ಭಾಗದ ಬಯಲಿನಲ್ಲಿ ಮಂಚದ ಮೇಲೆ ಮಲಗಿದ್ದನು. ಅವನ ಮೇಲೆ ಆಕಾಶದಲ್ಲಿ ಹಂಸಪಕ್ಷಿಗಳು ಹಾರಿಹೋದವು. ಎರಡು ಹಂಸಪಕ್ಷಿಗಳಲ್ಲಿ ಹಿಂದಿರುವ ಹಂಸಪಕ್ಷಿಯು ಮುಂದಿರುವ ಹಂಸ ಪಕ್ಷಿಯನ್ನು ಉದ್ದೇಶಿಸಿ, ಹೀಗೆ ಮಾತನಾಡಿತು - 'ಎಲೈ ! ಮಂದನೇ ಪೌತ್ರಾಯಣನ ಬ್ರಹ್ಮವರ್ಚಸ್ಸು ಅತ್ಯದ್ಭುತವಾಗಿದೆ. ಅದು ತಗಲುವಂತೆ ಅವನ ಮೇಲೆ ಹಾರಬೇಡ, ಸುಟ್ಟುಹೋಗುತ್ತಿ' ಎಂದು ಎಚ್ಚರಿಸಿತು. ಅದಕ್ಕೆ ಪ್ರತ್ಯುತ್ತರವಾಗಿ ಮುಂದಿರುವ ಹಂಸ ಪಕ್ಷಿಯು ಹೇಳಿತು. ' ಎಲೈ ! ಹಂಸವೇ? ಗಾಡಿಯ ಕೆಳಗಿರುವ ಅವಧೂತ ರೈಕ್ವಮುನಿಯ ಬಗ್ಗೆ ಹೇಳುವಂತೆ ಯಾರನ್ನೂ ಕುರಿತು ಮಾತನಾಡುತ್ತಿದ್ದೀಯಾ? ಅವನ ಬ್ರಹ್ಮವರ್ಚಸ್ಸಿನ ಮುಂದೆ ಇವನದ್ದೇನು?' ಎಂದು ಪೌತ್ರಾಯಣನ ಬಗ್ಗೆ ಅನಾದರವನ್ನು ತೋರ್ಪಡಿಸಿತು.

ಈ ತಿರಸ್ಕಾರದ ಮಾತನ್ನು ಕೇಳಿದ ರಾಜನು ಎದ್ದಕೂಡಲೇ ಬಹಳ ದುಃಖದಿಂದ ತನ್ನ ಸಾರಥಿಯನ್ನು ಕರೆದು 'ರೈಕ್ವಮುನಿಯನ್ನು ಹುಡುಕಿಕೊಂಡು ಬಾ' ಎಂದು ಆದೇಶ ಮಾಡಿದನು. ರೈಕ್ವಮುನಿಯನ್ನು ಹುಡುಕಲು ಸಾರಥಿಯು ಹೊರಟನು. ಎಲ್ಲೆಡೆ ಹುಡುಕಿ ಅವನು ಸಿಗಲಿಲ್ಲವೆಂದು ರಾಜನ ಬಳಿ ಹೇಳಿದನು. ಪುನಃ ರಾಜನು ರೈಕ್ವನ ಗುರುತನ್ನು ಹೇಳಿ ಕಳುಹಿಸಿದನು. ಅನಂತರ ಸಾರಥಿಯು ರೈಕ್ವಮುನಿಯನ್ನು ಹುಡುಕಿಕೊಂಡು ಬಂದು, ರೈಕ್ವನಿರುವ ಸ್ಥಳವನ್ನು ತಿಳಿಸಿದನು. ಕೂಡಲೇ ರಾಜನು ಆರುನೂರು ಗೋವುಗಳನ್ನು, ಮುತ್ತಿನಹಾರವನ್ನು, ರಥವನ್ನು ತೆಗೆದುಕೊಂಡು ರೈಕ್ವನ ಮುಂದೆ ನಡೆದನು. ಗುರುದಕ್ಷಿಣೆಯಾಗಿ ಅವುಗಳನ್ನು ತಾವು ಸ್ವೀಕರಿಸಿ, ನನಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿದನು. ರೈಕ್ವಮುನಿಯು ರಾಜನನ್ನು ಕುರಿತು, 'ಎಲೈ ! ಶೂದ್ರನೇ ಈ ಹಾರ, ರಥ, ಗೋವುಗಳು ಎಲ್ಲವೂ ನಿನಗೇ ಇರಲಿ. ನನಗೆ ಅದರಿಂದೇನು ಉಪಯೋಗ?' ಎಂದು ಹೇಳಿದನು. ಮತ್ತಷ್ಟು ಗುರುಕಾಣಿಕೆಯನ್ನು ರಾಜನು ವಿನಯದಿಂದ ಸಮರ್ಪಿಸಿ, ಸಾಂತ್ವನಗೊಳಿಸಿದನು. ರೈಕ್ವಮುನಿಯು ರಾಜನ ಮೇಲೆ ಕರುಣೆದೋರಿ, ಸಂವರ್ಗವಿದ್ಯೆಯನ್ನು ಉಪದೇಶ ಮಾಡಿದನು.

ಈ ಆಖ್ಯಾಯಿಕೆಯಲ್ಲಿ 'ಅಹಹಾರೇತ್ವ ಶೂದ್ರ' ಎಂಬ ಮಾತು ಕೇಳಿಸುತ್ತಿದೆ. 'ಶೂದ್ರ' ಎಂದು ಸಂಬೋಧನೆ ಮಾಡಿದ್ದರಿಂದ ಪೌತ್ರಾಯಣನು ಶೂದ್ರನೇ ಆಗಿದ್ದಾನೆ. ಅಂತಹ ಪೌತ್ರಾಯಣನಿಗೆ ಸಂವರ್ಗ ವಿದ್ಯೆಯನ್ನು ಉಪದೇಶ ಮಾಡಿದ ಕಾರಣ ಶೂದ್ರರಿಗೂ ವೇದವಿದ್ಯಾಧಿಕಾರವಿದೆಯೆಂದು ಪೂರ್ವಪಕ್ಷದಲ್ಲಿ ಹೇಳಲಾಗುತ್ತದೆ.

ತ್ರೈವರ್ಣಿಕರಿಗಿಂತ ಬೇರೆಯವರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಪೌತ್ರಾಯಣನು ಕ್ಷತ್ರಿಯನೇ ಹೊರತು, ಶೂದ್ರನಲ್ಲ. ರೈಕ್ವನು ಶೂದ್ರನೆಂಬ ಜಾತಿನಿಮಿತ್ತವೆಂಬ ಶೂದ್ರನೆಂದು ಕರೆದಿಲ್ಲ ಹೊರತಾಗಿ, 'ಶುಚಾದ್ರವಣಂ' ಶೋಕದಿಂದ ಓಡಿಬಂದಿದ್ದೀಯಾ ಎಂಬರ್ಥದಲ್ಲಿ ಶೂದ್ರನೆಂದು ಸಂಬೋಧನೆ ಮಾಡಿದ್ದಾನೆ ಆದ್ದರಿಂದ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಿದ್ಧಾಂತ.

ಪೂರ್ವಪಕ್ಷದ ಫಲ - ಮುಂದೆ ಪೂರ್ವಪಕ್ಷದಲ್ಲಿ ಹೇಳುವ ಪ್ರಕಾರ ಶೂದ್ರನಿಗೂ ವೇದಾಧ್ಯಯನವು ಇರುವುದಾದರೆ, 'ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ' ಎಂಬ ಸ್ಮೃತಿಯು ಹೇಳಿದ ವೇದದಿಂದ ಅವಿನಾಭೂತವಾದ ರಥವು ಶೂದ್ರನಿಗೆ ಯುಕ್ತವಾಗುತ್ತದೆ. ಅಂದರೆ ವೇದವಿದ್ದಲ್ಲಿ ರಥವಿರುತ್ತದೆ. ವೇದವಿಲ್ಲದಿದ್ದರೆ ರಥವು ಇರುವುದಿಲ್ಲವೆಂದು ಸ್ಮೃತಿಯು ಹೇಳುತ್ತಿದೆ. ಶೂದ್ರನಿಗೆ ವಿಶಿಷ್ಟಬುದ್ಧ್ಯಾದಿಗಳಿರುವ ಕಾರಣ ವೇದವಿದೆಯೆಂದಂತಾಯಿತು. ಆದ್ದರಿಂದ ರಥಸಂಬಂಧವೂ ಕೂಡ ಶೂದ್ರನಿಗೆ ಯುಕ್ತವಾಗುತ್ತದೆ. ಆವಾಗ ರಥಸಂಬಂಧವೆಂಬ ಬಾಧಕವಿಲ್ಲದ ಕಾರಣ ತ್ರೈವರ್ಣಿಕನಲ್ಲವೆಂದು ಹೇಳಲಾಗದು. ಆದ್ದರಿಂದ ರೂಢಿಯ ಬಲದಿಂದ ಶೂದ್ರಶಬ್ದವು ಜಾತಿಪರವೇ ಆಗುತ್ತದೆ. ಆದ್ದರಿಂದ ಶೂದ್ರಾದಿಗಳಿಗೂ ವೇದಾಧಿಕಾರವಿದೆಯೆಂದು ಸಿದ್ಧವಾಗುತ್ತದೆ. .

ಸಿದ್ಧಾಂತದ ಫಲ - ಒಂದು ವೇಳೆ ಸಿದ್ಧಾಂತದಲ್ಲಿ ಹೇಳುವಂತೆ ಶೂದ್ರನಿಗೆ ವೇದಾಧಿಕಾರವಿಲ್ಲವೆಂದಾದರೆ, ವೇದದಿಂದ ಅವಿನಾಭೂತವಾದ ರಥದ ಸಂಬಂಧವೂ ಕೂಡ ಯುಕ್ತವಾಗುವುದಿಲ್ಲ. ಆವಾಗ ರಥಸಂಬಂಧವೆಂಬ ಬಾಧಕವಿರುವ ಕಾರಣದಿಂದಲೇ ರೂಢಿಯನ್ನು ತ್ಯಾಗ ಮಾಡಬೇಕು, ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಆವಾಗ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ಫಲಫಲಿಭಾವವು ಸ್ಪಷ್ಟವಾಗಿದೆ.

---

ಪರಿಪೂರ್ಣಚಂದ್ರಿಕಾ

ಸ್ತ್ರೀ, ಶೂದ್ರ, ಬ್ರಹ್ಮಬಂಧುಗಳಿಗೂ ಸಹ ವೇದವಿದ್ಯಾಧಿಕಾರವಿದೆಯೆಂದು ಪೂರ್ವಪಕ್ಷ

**तात्पर्यचन्द्रिका**

**।। पूर्वपक्षस्तु ।। विशिष्टबुद्ध्यादिमत्त्वाद्देववच्छूद्रादिरपि वेदविद्याधिकारी ।**

ಅನುವಾದ - ಪೂರ್ವಪಕ್ಷ ಹೀಗಿದೆ - ಬ್ರಹ್ಮವಿದ್ಯೆಯ ಅಧಿಕಾರಕ್ಕೆ ಪ್ರಯೋಜಕವಾದದ್ದು ವಿಶಿಷ್ಟಬುದ್ಧ್ಯಾದಿಗಳು. ಇವುಗಳು ದೇವತೆಗಳಲ್ಲಿರುವಂತೆ, ಶೂದ್ರಾದಿಗಳಲ್ಲೂ ಇರುತ್ತವೆ. ಆದ್ದರಿಂದ ವೇದವಿದ್ಯಾಧಿಕಾರವನ್ನು ದೇವತೆಗಳಂತೆ ಶೂದ್ರರೂ ಕೂಡ ಪಡೆದಿರುತ್ತಾರೆ.

**ननु शूद्र उपनयनाभावादध्ययनरहितः । तद्रहितश्च नाधिकारीति ''अध्ययनमात्रवतः'' इत्यत्र वक्ष्यत इति चेन्न ।**

ಪ್ರಶ್ನೆ - ವೇದವನ್ನು ಅಧ್ಯಯನ ಮಾಡಬೇಕೆಂದರೆ ಉಪನಯನವಾಗಿರಬೇಕು. ಶೂದ್ರನಿಗೆ ಉಪನಯನವೇ ಇಲ್ಲದ ಕಾರಣ ವೇದಾಧ್ಯಯನದಲ್ಲಿ ಅಧಿಕಾರವಿರುವುದಿಲ್ಲ. ಈ ವಿಷಯವನ್ನು 'ಅಧ್ಯಯನಮಾತ್ರವತಃ' ಎಂಬ ಮೂರನೆಯ ಅಧ್ಯಾಯದ ಸೂತ್ರದಲ್ಲಿ ಸಮರ್ಥಿಸುತ್ತಾರೆ. ಹೀಗಿರುವಾಗ ಶೂದ್ರನಿಗೂ ವೇದಾಧಿಕಾರವಿದೆಯೆಂದು ಪೂರ್ವಪಕ್ಷ ಮಾಡಲು ಹೇಗೆ ಸಾಧ್ಯ ?

**वैदिकसंवर्गविद्याश्रोतारं पौत्रायणं प्रति ''अहहारेत्वाशूद्र'' इति रैकस्य सम्बोधनरूपेण, शूद्रस्यापि विदुरादेर्वेदार्थावधारणादिरूपेण च लिङ्गेन शूद्रेऽप्युपनयनाध्ययनयोः सत्त्वात् ।**

ಉತ್ತರ - ಶೂದ್ರನಿಗೂ ಕೂಡ ಉಪನಯನಸಂಸ್ಕಾರವು ಇರುತ್ತದೆಂದು ಅರ್ಥಾಪತ್ತಿಯಿಂದ ಸಿದ್ಧವಾಗುತ್ತದೆ. ಅದು ಹೀಗೆ - ವೇದೋಕ್ತವಾದ ಸಂವರ್ಗವಿದ್ಯೆಯ ಉಪದೇಶವನ್ನು ಪೌತ್ರಾಯಣರಾಜನು ರೈಕ್ವಮುನಿಯಿಂದ ಪಡೆಯುತ್ತಾನೆ. 'ಅಹಹಾರೇತ್ವಾಶೂದ್ರ' ಎಂಬುದಾಗಿ ರೈಕ್ವಮುನಿಯು 'ಎಲೈ ! ಶೂದ್ರನೇ' ಎಂದು ಸಂಬೋಧನೆ ಮಾಡಿದ್ದರಿಂದ ಪೌತ್ರಾಯಣನು ಶೂದ್ರನೆಂದು ಮತ್ತು ಅವನಿಗೆ ಅಧಿಕಾರವಿದೆಯೆಂದು ಸ್ಪಷ್ಟವಾಗುತ್ತದೆ. ಮತ್ತು ವಿದುರ, ಧರ್ಮವ್ಯಾಧ ಮೊದಲಾದವರೆಲ್ಲರೂ ಶೂದ್ರರೇ ಆಗಿದ್ದಾರೆ. ಆದರೆ ವೇದಾರ್ಥತತ್ವಜ್ಞಾನವು ಅವರಲ್ಲಿರುವುದನ್ನು, ಮತ್ತೊಬ್ಬರಿಗೆ ಉಪದೇಶ ಮಾಡುವುದನ್ನು ಮಹಾಭಾರತಾದಿಗಳಲ್ಲಿ ಹೇಳಲಾಗಿದೆ. ಹೀಗೆ ಸಂಬೋಧನೆ ಹಾಗೂ ವೇದಾರ್ಥಾವಧಾರಣ ಈ ಲಿಂಗಗಳ ಬಲದಿಂದ ಶೂದ್ರರಿಗೂ ಉಪನಯನಸಂಸ್ಕಾರ ಮತ್ತು ಅಧ್ಯಯನಗಳು ಇರುತ್ತವೆಂದು ತಿಳಿಯಬೇಕು. ಅಂದರೆ 'ಉಪಯನಮ್

ಅನ್ಯಥಾ ವೇದಾರ್ಥಾವಧಾರಣಾದಿಃ ನೋಪಪದ್ಯತೇ' ಎಂಬ ಅನ್ಯಥಾನುಪಪತ್ತಿಯಿಂದ ಉಪನಯನಸಂಸ್ಕಾರವನ್ನು ಶೂದ್ರಾದಿಗಳಿಗೆ ಒಪ್ಪಬೇಕು.

**यद्वा शूद्रस्यानुपनीतस्यैवाध्ययनमस्तु ।**

ಅಥವಾ ಉಪನಯನಸಂಸ್ಕಾರವಿಲ್ಲದೇ ಅಧ್ಯಯನ ಮಾಡಬಹುದು.

**अथवा अनधीयानस्यैव शूद्रस्य श्रुताल्लिखितनिरीक्षिताद्वा वेदादर्थज्ञानमस्तु ।**

ಅಥವಾ ಶೂದ್ರನಿಗೆ ವೇದಾಧ್ಯಯನವೂ ಕೂಡ ಬೇಡ. ಆದರೂ ಮತ್ತೊಬ್ಬರು ಮಾಡುತ್ತಿರುವ ಅಧ್ಯಯನವನ್ನು ಕೇಳಿ, ಅಥವಾ ಲಿಖಿತವಾದ ಪುಸ್ತಕವನ್ನು ಓದಿ, ವೇದದಿಂದ ಅರ್ಥಜ್ಞಾನವನ್ನು ಶೂದ್ರನೂ ಸಹ ಪಡೆಯಬಹುದು.

**न चात्र शूद्रशब्दः शोकेनाद्रवणाद्यौगिकः । रूढेर्बलवत्त्वात् ।**

ಇಲ್ಲಿರುವ ಶೂದ್ರಶಬ್ದವು ರೂಢವಲ್ಲದ ಕಾರಣ ಜಾತಿನಿಮಿತ್ತಕವಲ್ಲ. ಹೊರತಾಗಿ, 'ಶುಚಾ ಆದ್ರವಣಾದಿತಿ ಶೂದ್ರಃ' ದುಃಖದಿಂದ ಓಡಿಬಂದಿದ್ದಾನೆ ಎಂಬ ಯೌಗಿಕಾರ್ಥವನ್ನು ವಿವಕ್ಷಿಸಬೇಕು ಎಂದು ಪ್ರಶ್ನಿಸಬಾರದು. ಯೋಗಕ್ಕಿಂತ ರೂಢಿಯೇ ಪ್ರಬಲವಾದ್ದರಿಂದ ರೈಕ್ವ ಮುನಿಯು ಸಂಬೋಧಿಸಿರುವ ಶೂದ್ರ ಶಬ್ದವು ಜಾತಿನಿಮಿತ್ತಕವೇ ಆಗಿದೆಯೆಂದು ಹೇಳುವುದು ಉಚಿತ.

**अन्यथा ''वर्षासु रथकार आदधीत'' इत्यत्र रथकारशब्दस्यापि योगेन त्रैवर्णिकपरत्वापातादिति ।**

ಒಂದು ವೇಳೆ ರೂಢ್ಯರ್ಥವನ್ನು ಸ್ವೀಕರಿಸದೇ ಯೌಗಿಕಾರ್ಥವನ್ನೇ ಸ್ವೀಕರಿಸುವುದಾದರೆ, 'ವರ್ಷಾಸು ರಥಕಾರ ಆದಧೀತ' ಎಂಬ ಆರನೆಯ ಅಧ್ಯಾಯದ ಪೂರ್ವಮೀಮಾಂಸೆಯ ರಥಕಾರಾಧಿಕರಣದಲ್ಲಿ ರಥಕಾರಶಬ್ದಕ್ಕೂ ಕೂಡ ಯೌಗಿಕಾರ್ಥವನ್ನು ಸ್ವೀಕರಿಸಿ, ತ್ರೈವರ್ಣಿಕಪರತ್ವವನ್ನು ಒಪ್ಪಬೇಕಾಗುತ್ತದೆ. ಆದರೆ ಆ ಅಧಿಕರಣದಲ್ಲಿ ಸ್ಥಪತಿಗೆ ವೇದಾಧಿಕಾರವನ್ನು ನಿಷೇಧ ಮಾಡಿ, ಲೌಕಿಕಾಗ್ನಿಯಲ್ಲಿಯೇ ಹವಿಸ್ಸನ್ನು ತ್ಯಾಗಮಾಡಬೇಕೆಂದು ಜೈಮಿನಿಋಷಿಗಳು ನಿರ್ಣಯಿಸಿದ್ದಾರೆ.

ಆದ್ದರಿಂದ ಶೂದ್ರನಿಗೂ ವೇದಾಧಿಕಾರವಿರುತ್ತದೆಂದು ಸಿದ್ಧವಾಯಿತು. ಉಪಲಕ್ಷಣಯಾ ಸ್ತ್ರೀಯರು ಮತ್ತು ಬ್ರಹ್ಮಬಂಧುಗಳೂ ಕೂಡ ವೇದಾಧಿಕಾರವನ್ನು ಹೊಂದಿರುತ್ತಾರೆಂದು ಪೂರ್ವಪಕ್ಷ.

**प्रकाशः –**

''विशिष्टबुद्ध्यादिमत्त्वेऽपि शूद्रस्यान्येभ्योऽविशेषात्'' इति टीकां विवृण्वन्पूर्वसिद्धान्तन्यायेन पूर्वपक्षं व्यनक्ति – **विशिष्टेति** ।। एतच्च ''सम्भवात्'' इति पूर्वहेत्वर्थकथनम् ।

ವಿವರಣೆ - ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವಿದೆಯೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. 'ವಿಶಿಷ್ಟಬುದ್ಧ್ಯಾದಿಮತ್ವೇಽಪಿ ಶೂದ್ರಸ್ಯಾನ್ಯೇಭ್ಯೋಽವಿಶೇಷಾತ್' ವಿಶಿಷ್ಟಬುದ್ಧ್ಯಾದಿಗಳಿರುವಿಕೆಯೇ ಬ್ರಹ್ಮವಿದ್ಯೆಗೆ ಅಧಿಕಾರವೆನ್ನುವುದಾದರೆ ಅವುಗಳು ಬೇರೆಯವರಂತೆ ಶೂದ್ರಾದಿಗಳಲ್ಲಿಯೂ ಇರುತ್ತದೆ. ಇತ್ಯಾದಿ ಟೀಕೆಯನ್ನು ವಿವರಿಸುತ್ತಿದ್ದಾರೆ. ಮತ್ತು ಈ ಅಧಿಕರಣಕ್ಕೆ ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದಿಂದ ಆಪವಾದಿಕೀಸಂಗತಿಯನ್ನು ಹೇಳಿರುವ ಕಾರಣ ಆ ಸಿದ್ಧಾಂತ ನ್ಯಾಯವನ್ನು ಅಪೇಕ್ಷಿಸಿ, ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ 'ವಿಶಿಷ್ಟ' ಇತ್ಯಾದಿ ಗ್ರಂಥದಿಂದ. 'ತದುಪರ್ಯಪಿ ಬಾದರಾಯಣಃ ಸಂಭವಾತ್' ಎಂಬ ಸೂತ್ರದಲ್ಲಿ 'ಸಂಭವಾತ್' ಎಂಬ ಪದಕ್ಕೆ ವಿಶಿಷ್ಟಬುದ್ಧ್ಯಾದಿಗಳಿರುವುದರಿಂದ ಅಧಿಕಾರವು ಯುಕ್ತವಾಗುತ್ತದೆಂದು ಹೇಳಿದರು. ಅದನ್ನು ಆಧರಿಸಿ ಪೂರ್ವಪಕ್ಷವು ಹೊರಡುತ್ತಿದೆ. 'ಸಂಭವಾತ್' ಎಂಬ ಪದದ ಅರ್ಥವನ್ನೇ 'ವಿಶಿಷ್ಟಬುದ್ಧ್ಯಾದಿ' ಇತ್ಯಾದಿ ವಾಕ್ಯದಲ್ಲಿ ಹೇಳಿರುತ್ತಾರೆ.

**प्रकाशः –** ननु पूर्वन्यायेऽविशिष्टेऽपि बाधकादपवादस्स्यादिति शङ्कते – **नन्विति** ।।

ವಿಶಿಷ್ಟಬುದ್ಧ್ಯಾದಿಗಳೆಲ್ಲಿರುತ್ತವೋ ಅಲ್ಲಿ ಅಧಿಕಾರವಿರುತ್ತದೆ ಎಂಬ ವ್ಯಾಪ್ತಿಯನ್ನು ಶೂದ್ರಾದಿಗಳಲ್ಲಿ ಹೇಳಲಾಗದು. ಏಕೆಂದರೆ ಉಪನಯನಾದಿ ಬಾಧಕಗಳಿರುವುದರಿಂದ, ಆ ನ್ಯಾಯಕ್ಕೆ ಅಪವಾದವನ್ನು ಹೇಳಬಹುದಲ್ಲವೇ? ಎಂಬುದಾಗಿ 'ನನು' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ.

**प्रकाशः –** अष्टमे वर्षे ब्राह्मणमुपनयीत तमध्यापयीतेति त्रैवर्णिकानेवाधिकृत्योपनयनविधानात् । उपनीतस्यैवाध्ययनविधेरिति भावः ।।

'ಅಷ್ಟಮೇ ವರ್ಷೇ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ' ಎಂಬುದಾಗಿ ಬ್ರಾಹ್ಮಣ ಶಬ್ದಕ್ಕೆ ತ್ರೈವರ್ಣಿಕರೆಂಬ ಅರ್ಥವನ್ನು ವಿವಕ್ಷಿಸಿದಾಗ ತ್ರೈವರ್ಣಿಕರಿಗೆ ಮಾತ್ರ ಉಪನಯನದಲ್ಲಿ ಅಧಿಕಾರವಿರುತ್ತದೆಂದು ಶ್ರುತಿಯು ವಿಧಾನ ಮಾಡಿದೆ. ಅನಂತರ 'ತಮಧ್ಯಾಪಯೀತ' ಎಂಬುದಾಗಿ ಉಪನೀತನಾದವನಿಗೆ ಮಾತ್ರ ಅಧ್ಯಯನವನ್ನು ವಿಧಾನ ಮಾಡಿದೆ. ಶೂದ್ರನಿಗೆ ಉಪನಯನಸಂಸ್ಕಾರವೇ ಇಲ್ಲದ ಕಾರಣ ಅಧ್ಯಯನದ ವಿಧಾನವೂ ಸಹ ಯುಕ್ತವಾಗುವುದಿಲ್ಲವೆಂದು ಅಭಿಪ್ರಾಯ.

**प्रकाशः – अध्ययनेति** ।। ज्ञानपादे ''असार्वत्रिकि'' इत्येतदधिकरणे गुणसूत्रे अर्थित्वादेस्सर्वेषां सत्त्वेन ज्ञानेऽधिकारस्सर्वेषाम् । अन्यथा कस्यापि न स्यात् ।

**अर्थित्वादेस्सर्वत्र साम्येऽपि केषाञ्चिदेवाधिकारो नान्येषामित्यत्रार्थित्वाद्यन्यविशेषाभावादित्याशङ्क्य यथाशक्त्यखिलवेदाध्ययनवत्त्वरूपविशेषणान्तरयुक्तस्यैवाधिकारो न सर्वेषां तादृग्विशेषणस्य विष्णुभक्त्यादिविहीने वर्णावरादौ चायोगादिति वक्ष्यत इत्यर्थः ।**

ಮೂರನೆಯ ಅಧ್ಯಾಯದ ಜ್ಞಾನಪಾದಲ್ಲಿ 'ಅಸಾರ್ವತ್ರಿಕೀ' ಎಂಬ ಅಧಿಕರಣವಿದೆ. ಅದರ ಗುಣಸೂತ್ರದಲ್ಲಿ ಪ್ರತಿಯೊಬ್ಬರಿಗೂ ಅರ್ಥಿತ್ವ, ಸಾಮರ್ಥ್ಯ, ವೈದುಷ್ಯಗಳು ಇರುತ್ತವಾದ್ದರಿಂದ ಬ್ರಹ್ಮಜ್ಞಾನಕ್ಕೆ ಎಲ್ಲರೂ ಅಧಿಕಾರಿಗಳಾಗುತ್ತಾರೆ. ಒಂದು ವೇಳೆ ಅರ್ಥಿತ್ವಾದಿಗಳಿದ್ದರೂ ಕೆಲವರಿಗೆ ಅಧಿಕಾರವಿಲ್ಲವೆನ್ನುವುದಾದರೆ, ಯಾರಿಗೂ ಸಹ ಅಧಿಕಾರವಿರುವುದೇ ಬೇಡ. ಅರ್ಥಿತ್ವಾದಿಗಳು ಎಲ್ಲರಲ್ಲಿಯೂ ಸಮಾನವಾಗಿರುವಾಗ ಕೆಲವರಿಗೆ ಮಾತ್ರ ಅಧಿಕಾರ, ಇನ್ನು ಕೆಲವರಿಗೆ ಅಧಿಕಾರವಿಲ್ಲವೆಂಬ ವ್ಯತ್ಯಾಸವು ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರತಿಯೊಬ್ಬರು ಜ್ಞಾನಾಧಿಕಾರಿಗಳಾಗುತ್ತಾರೆ ಎಂದು ಆಕ್ಷೇಪ ಮಾಡಿಕೊಂಡು ಯಥಾಶಕ್ತಿಯಾಗಿ ಸಕಲವೇದಗಳ ಅಧ್ಯಯನವನ್ನು ಮಾಡಿರಬೇಕು. ವಿಷ್ಣುಭಕ್ತಿ ಮೊದಲಾದ ಗುಣಗಳಿರಬೇಕು. ಶಮದಮಾದಿಗಳಿರಬೇಕು. ಅಂತಹವನು ಮಾತ್ರ ಬ್ರಹ್ಮಜ್ಞಾನಕ್ಕೆ ಅಧಿಕಾರವನ್ನು ಪಡೆಯುತ್ತಾನೆ ಹೊರತು, ಅರ್ಥಿತ್ವಾದಿಗಳಿದ್ದ ಮಾತ್ರಕ್ಕೆ ಅಧಿಕಾರವನ್ನು ಪಡೆಯುವುದಿಲ್ಲ ಎಂದು ಸಿದ್ಧಾಂತ ಮಾಡಿದ್ದಾರೆ. ಶೂದ್ರಾದಿಗಳಲ್ಲಿ ಅಧ್ಯಯನ, ಶಮದಮಾದಿ ಸಂಪತ್ತು, ವಿಷ್ಣುಭಕ್ತಿ ಮೊದಲಾದವು ಇಲ್ಲದ ಕಾರಣ, ಜ್ಞಾನಕ್ಕೆ ಅಧಿಕಾರವಿರುವುದಿಲ್ಲ. ಆದ್ದರಿಂದ 'ಅಧ್ಯಯನಮಾತ್ರವತಃ' ಎಂಬ ಗುಣಸೂತ್ರದಲ್ಲಿ ಹೇಳುವಂತೆ ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂದು ಸಿದ್ಧವಾಗುವಾಗ, ಪುನಃ ಇಲ್ಲಿ ಅಧಿಕಾರವಿರುತ್ತದೆಂಬ ಪೂರ್ವಪಕ್ಷವು ಹೇಗೆ ಯುಕ್ತವಾಗುತ್ತದೆ? ಎಂದು 'ನನು' ಇತ್ಯಾದಿ ಪ್ರಶ್ನೆವಾಕ್ಯದ ಅಭಿಪ್ರಾಯವಾಗಿದೆ.

**प्रकाशः – एतेन "शूद्रस्य वेदविद्याधिकारादर्शनात्" इति टीकोक्तिरुपलक्षणम् । अधिकारप्रयोजकाध्ययनाभावाच्चेत्यपि ग्राह्यमिति सूचितम् ।।**

ಹೀಗೆ ಶಮದಮಾದಿಗಳು ಅಧ್ಯಯನ ಮೊದಲಾದವೂ ಕೂಡ ಅಧಿಕಾರಕ್ಕೆ ಪ್ರಯೋಜಕವೆಂದು ಹೇಳಿದ್ದರಿಂದ 'ಶೂದ್ರಸ್ಯ ವೇದವಿದ್ಯಾಧಿಕಾರಾದರ್ಶನಾತ್' ಶೂದ್ರನಿಗೆ ವೇದವಿದ್ಯಾಧಿಕಾರವಿರುವುದು ಕಂಡಿಲ್ಲ ಎಂಬ ಟೀಕೆಯ ಮಾತು ಕೇವಲ ಉಪಲಕ್ಷಣವೆಂದು ತಿಳಿಯುತ್ತದೆ. ಅಧಿಕಾರಕ್ಕೆ ಪ್ರಯೋಜಕವಾದ ಅಧ್ಯಯನವಿಲ್ಲದಿರುವಿಕೆಯನ್ನೂ ಕೂಡ ವಿವಕ್ಷಿಸಬೇಕೆಂದು ಸೂಚಿಸಿದ್ದಾರೆ.

**प्रकाशः** – **विद्याश्रोतारमिति** ।। एतेनानधिकारेऽपि पौत्रायणो विद्यां विचारयामासेति निरस्तम् । अनधिकारिणं प्रति मुनेरुपदेशायोगादिति । एतेन **"पौत्रायणस्य" इत्यादिटीका विवृता – विदुरादेरिति** ।। धर्मव्याधादिरादिपदार्थः । **प्रसिद्धमेतत्पुराणादाविति भावः ।**

ಪರಿಪೂರ್ಣಚಂದ್ರಿಕಾ

'ವಿದ್ಯಾಶ್ರೋತಾರಮ್' ಎಂದು ಹೇಳಿದ್ದರಿಂದ ಪೌತ್ರಾಯಣ ರಾಜನು ಶೂದ್ರನಾಗಿದ್ದಾನೆ. ಆದ್ದರಿಂದ ಅನಧಿಕಾರಿಯಾಗಿದ್ದಾನೆ ಆದರೂ ಸಹ ಸಂವರ್ಗವಿದ್ಯೆಯನ್ನು ವಿಚಾರ ಮಾಡಿದನು ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ ಅನಧಿಕಾರಿಯನ್ನು ಕುರಿತು, ಮುನಿಯು ಉಪದೇಶ ಮಾಡುವುದು ಕೂಡುವುದೇ ಇಲ್ಲ. ಆದ್ದರಿಂದ 'ಪೌತ್ರಾಯಣಸ್ಯ' ಇತ್ಯಾದಿ ಟೀಕೆಯನ್ನೂ ಕೂಡ ವಿವರಿಸಿದಂತಾಯಿತು. 'ವಿದುರಾದೇಃ' ಎಂಬಲ್ಲಿರುವ ಆದಿಪದದಿಂದ ಧರ್ಮವ್ಯಾಧನನ್ನು ಸ್ವೀಕರಿಸಬೇಕು. ಮಾಂಸವನ್ನು ಮಾರಾಟ ಮಾಡುವ ಧರ್ಮವ್ಯಾಧನೂ ಸಹ ವಿದ್ಯೋಪದೇಶವನ್ನು ಮಾಡಿದ್ದು ಮಹಾಭಾರತಾದಿಗಳಲ್ಲಿ ಪ್ರಸಿದ್ಧವಾಗಿದೆ.

**प्रकाशः** – एतेन ''युक्त्या लिङ्गदर्शनेन च'' इति टीकायां लिङ्गदर्शनेनेत्यस्य शूद्रेति सम्बोधनरूपलिङ्गदर्शनेन विदुरादेर्वेदार्थावधारणरूपलिङ्गदर्शनेन चेत्यर्थ उक्तो भवति ॥

ಹೀಗೆ ಹೇಳಿದ್ದರಿಂದ, 'ಯುಕ್ತ್ಯಾ ಲಿಂಗದರ್ಶನೇನ ಚ' ಎಂಬ ಟೀಕೆಯಲ್ಲಿರುವ 'ಲಿಂಗದರ್ಶನೇನ' ಎಂಬುದಕ್ಕೆ 'ಎಲೈ ! ಶೂದ್ರನೇ' ಎಂಬ ಸಂಬೋಧನ ರೂಪವಾದ ಲಿಂಗವು ಕಾಣಿಸುತ್ತಿರುವುದರಿಂದ ಎಂಬರ್ಥವನ್ನು ಮತ್ತು ವಿದುರಾದಿಗಳಲ್ಲಿಯೂ ವೇದಾರ್ಥವನ್ನು ನಿಶ್ಚಯವಾಗಿ ತಿಳಿದಿರುವಿಕೆ ಎಂಬ ಮತ್ತೊಂದು ಲಿಂಗವು ಕಾಣಿಸುತ್ತಿರುವುದರಿಂದ ಎಂಬರ್ಥವನ್ನು ಹೇಳಿದಂತಾಯಿತು.

**प्रकाशः** – उपनयनेति ॥ अष्टवर्षं ब्राह्मणमित्यत्र ब्राह्मणशब्दस्य ब्रह्माणनयोग्यत्वेन यथा त्रैवर्णिकपरत्वं तथा चतुर्वर्णपरत्वमपि स्यादिति विधिबलाद्वा विध्यभावेऽपि शूद्रे विद्यासम्बन्धान्यथानुपपत्त्यैव तदङ्गोपनयनादेराक्षेपलब्धत्वाद्वा सत्त्वादित्यर्थः । इयं च संस्कारसूत्रनिरस्याशङ्का ।

ಶೂದ್ರಾದಿಗಳಿಗೂ ಉಪನಯನ ಮೊದಲಾದವುಗಳನ್ನು ಮಾಡಬಹುದೆಂದು ಮೂಲದಲ್ಲಿ ಹೇಳಿದ್ದಾರೆ. ಹಾಗಾದರೆ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ' ಎಂಬಲ್ಲಿ ಬ್ರಾಹ್ಮಣನಿಗೆ ಮಾತ್ರ ಉಪನಯನ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ಬ್ರಾಹ್ಮಣ' ಶಬ್ದಕ್ಕೆ 'ಬ್ರಹ್ಮಾಣನಯೋಗ್ಯತ್ವ' ಬ್ರಹ್ಮನನ್ನು ತಿಳಿದುಕೊಳ್ಳುವಂತಹ ಯೋಗ್ಯತೆಯಿರುವಿಕೆ ಎಂಬ ಪ್ರವೃತ್ತಿನಿಮಿತ್ತವನ್ನು ಆಧರಿಸಿ ತ್ರೈವರ್ಣಿಕರೆಂಬ ಅರ್ಥವನ್ನು ಹೇಗೆ ಸ್ವೀಕರಿಸುತ್ತೀರೋ ಅದರಂತೆ ಶೂದ್ರನನ್ನೂ ಸಹ ವಿವಕ್ಷಿಸಬಹುದು. ಹೀಗೆ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ' ಎಂಬ ವಿಧಿವಾಕ್ಯದ ಬಲದಿಂದಲೇ ಶೂದ್ರನಿಗೂ ಸಹ ಉಪನಯನಸಂಸ್ಕಾರವು ಸಿದ್ಧವಾಗುತ್ತದೆ. ಅಥವಾ ವಿಧಿವಾಕ್ಯವು ಬೇಡ. ಶೂದ್ರನಿಗೆ ವಿದ್ಯಾಸಂಬಂಧವನ್ನು ಪೌತ್ರಾಯಣಾದಿಗಳಲ್ಲಿ ಹೇಳಿರುವುದು ಕಂಡಿದ್ದರಿಂದ, ಇದರ ಅನ್ಯಥಾನುಪಪತ್ತಿಯಿಂದಲೇ ತದಂಗವಾದ ಉಪನಯಾದಿಸಂಸ್ಕಾರಗಳೂ ಕೂಡ ಆಕ್ಷೇಪದಿಂದ ಲಭ್ಯವಾಗುತ್ತವೆ. ಅಂದರೆ 'ಉಪಯನಮ್ ಅನ್ಯಥಾ ವಿದ್ಯಾಸಂಬಂಧಾದಿಃ ನೋಪಪದ್ಯತೇ' ಎಂದು ಆದ್ದರಿಂದ ಉಪನಯನಸಂಸ್ಕಾರವು ಶೂದ್ರನಿಗೂ ಕೂಡ ಇರುತ್ತದೆಂದು ಪೂರ್ವಪಕ್ಷದ ಅಭಿಪ್ರಾಯ. ಈ ಪೂರ್ವಪಕ್ಷವು 'ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ' ಎಂಬ ಸೂತ್ರದಿಂದ ನಿರಸ್ಯವಾದದ್ದು.

**प्रकाशः** – नन्वेवं स्थपत्यादेरप्यग्न्याधानादिसिद्धिस्स्यात् । न चेष्टापत्तिः । षष्ठे तदभावस्योक्तत्वादित्यत आह – **शूद्रस्येति** ।। कल्पकं तु निरवकाशलिङ्गदर्शनमेवेति भावः ।

ಅನ್ಯಥಾನುಪಪತ್ತಿಯಿಂದ ಶೂದ್ರನಿಗೆ ಉಪನಯನಸಂಸ್ಕಾರವನ್ನು ಸಮರ್ಥಿಸುವುದಾದರೆ ಸ್ಥಪತ್ಯಾದಿಗಳಿಗೂ ಕೂಡ ಲೌಕಿಕಾಗ್ನಿಯಲ್ಲಿ ಆಹುತಿಯನ್ನು ನೀಡುವುದು ಬೇಡ. ವೈದಿಕವಾದ ಅಗ್ನಿಯಲ್ಲಿಯೇ ಅಗ್ನ್ಯಾಧಾನವನ್ನು ಮಾಡಬೇಕಾದೀತು. ಆದರೆ ಇದು ಪೂರ್ವಮೀಮಾಂಸೆಯ ಷಷ್ಠಾಧ್ಯಾಯದ ಸಿದ್ಧಾಂತಕ್ಕೆ ವಿರುದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಶೂದ್ರಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಯಾವರೀತಿಯಾಗಿ ಜೈಮಿನ್ಯಾಚಾರ್ಯರು ಸ್ಥಪತಿಗೆ ವೇದವಿದ್ಯಾಧಿಕಾರವಿಲ್ಲದಿದ್ದರೂ ಲೌಕಿಕಾಗ್ನಿಯಲ್ಲಿ ಆಹುತಿಪ್ರದಾನವನ್ನು ಹೇಳಿದ್ದಾರೋ, ಅದರಂತೆ ಇಲ್ಲಿಯೂ ಸಹ ಅಧ್ಯಯನವಿಲ್ಲದಿದ್ದರೂ ಬೇರೆ ಉಪಾಯಗಳಿಂದ ಅಂದರೆ ಶ್ರವಣ, ಲೇಖನ ಮೊದಲಾದವುಗಳ ಉಪಾಯದಿಂದ ಬ್ರಹ್ಮವಿದ್ಯೆಯ ಅಧಿಕಾರವನ್ನು ಹೇಳಬಹುದು. ಈ ವಿಷಯದಲ್ಲಿ ನಿರವಕಾಶಲಿಂಗದರ್ಶನವೇ ಕಲ್ಪಕವಾಗಿದೆ.

**प्रकाशः** – इयं च "श्रवणाध्ययनार्थ" इति पञ्चमसूत्रव्यावर्त्यशङ्केति ध्येयम् । एवं च तदविनाभूतो रथोऽपि शूद्रे युक्त इति भावः । द्वितीयसूत्रव्यावर्त्यं शङ्कापूर्वमाह – **नचेति** ।। **अन्यथेति** ।। रथकाराधिकरणमुक्तं जन्मादिसूत्रे । निषेधश्रुत्यादेस्तूपचरितार्थत्वादिना समाधानं कार्यमिति भावः ।

ಈ ಆಶಂಕೆಯು 'ಶ್ರವಣಾಧ್ಯಯನಾರ್ಥ' ಎಂಬ ಐದನೆಯ ಸೂತ್ರದಿಂದ ವ್ಯಾವರ್ತ್ಯವಾಗಿದೆ. ಹೀಗೆ ಹೇಳಿದ್ದರಿಂದ ಶೂದ್ರನಿಗೆ ವೇದಾಧಿಕಾರವಿರುವುದರಿಂದ, ವೇದದಿಂದ ಅವಿನಾಭೂತವಾದ ರಥಸಂಬಂಧವೂ ಸಹ ಶೂದ್ರನಲ್ಲಿ ಯುಕ್ತವಾಗುತ್ತದೆಂದು ತಿಳಿಯಬೇಕು. ಎರಡನೆಯ ಸೂತ್ರದಿಂದ ವ್ಯಾವರ್ತ್ಯವಾದ ಆಶಂಕೆಯನ್ನು 'ನಚ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. 'ಅನ್ಯಥಾ' ಇತ್ಯಾದಿ ವಾಕ್ಯದಲ್ಲಿ 'ರಥಕಾರ' ಶಬ್ದಕ್ಕೆಎಂದು ಯೋಗವೃತ್ತಿಯನ್ನು ಆಶ್ರಯಿಸಿ, ತ್ರೈವರ್ಣಿಕಪರತ್ವವನ್ನು ಅಂಗೀಕರಿಸಲಾಗಿದೆ. ಈ ಅಧಿಕರಣವನ್ನು ಜನ್ಮಾದಿಸೂತ್ರದಲ್ಲಿ ನಿರೂಪಣೆ ಮಾಡಲಾಗಿದೆ.

ಶೂದ್ರರಿಗೆ ವೇದವಿದ್ಯಾಧಿಕಾರವನ್ನು ಇಲ್ಲಿಯ ತನಕ ಸಮರ್ಥಿಸಿದಿರಿ. ಆದರೆ ಶೂದ್ರನಿಗೆ ವೇದಾಧಿಕಾರವಿಲ್ಲವೆಂಬ ನಿಷೇಧಶ್ರುತಿಯಿದೆಯಲ್ಲವೇ, ಎಂದರೆ ಅವುಗಳಿಗೆಲ್ಲಾ ಗೌಣಾರ್ಥವನ್ನು ಮಾಡಬೇಕು. ಏಕೆಂದರೆ ಮೇಲೆ ಹೇಳಿರುವ ಅನೇಕ ಕಾರಣಗಳಿಂದ ಶೂದ್ರನಿಗೂ ಕೂಡ ವೇದವಿದ್ಯಾಧಿಕಾರವಿದೆಯೆಂದು ಸಿದ್ಧವಾಗಿದೆ.

**गुरुराजीयम्** – ननु शूद्रेति सम्बोधनं न पौत्रायणस्य शूद्रत्वनिश्चायकम् । शुचा द्रवणनिमित्तकत्वेनापि तस्योपपत्तेरित्यरुचेराह – **शूद्रस्यापीति** ।। ननु श्रुतिरुक्तरीत्या योगेन सावकाशालिङ्गमपि विदुरादेर्जन्मान्तरसिद्धापरोक्षज्ञानत्वेनेतर-

शूद्रवैलक्षण्याद्वेदार्थावधारणोपपत्तेरित्यरुच्याऽह – **यद्वेति** ।। अष्टवर्षं ब्राह्मणमुपनयीत तमध्यापयीतेति श्रुतौ ब्राह्मणस्यैवाध्ययन उपनयनाद्यपेक्षा । नतु शूद्रादेरित्यर्थः । ननु तमध्यापयीतेत्यत्र न ब्राह्मणपरामर्शः । अपि तूपनीतमात्रपरामर्श इति कथमनुपनीतस्य शूद्रस्याध्ययनमित्यरुचेराह – **अथवेति** ।। **अन्यथेति** ।। योगेन रूढिबाध इत्यर्थः ।



ವೇದವನ್ನು ಅಧ್ಯಯನ ಮಾಡಲು ಅರ್ಥಿತ್ವ, ಸಾಮರ್ಥ್ಯ, ವೈದುಷ್ಯಗಳಿರಬೇಕು. ತ್ರೈವರ್ಣಿಕರಲ್ಲಿ ಈ ಧರ್ಮವಿರುವಂತೆ, ಶೂದ್ರರಲ್ಲೂ ಇರುತ್ತದೆ. ಆದ್ದರಿಂದ ಸ್ತ್ರೀಯರು ಶೂದ್ರರು ಬ್ರಹ್ಮಬಂಧುಗಳು ಇವರಿಗೂ ಕೂಡ ವೇದವಿದ್ಯಾಧಿಕಾರವನ್ನು ಹೇಳಬಹುದು.

ಇವರಿಗೆ ಉಪನಯನ ಸಂಸ್ಕಾರವಿಲ್ಲದ ಕಾರಣ ವೇದಾಧ್ಯಯನವನ್ನು ಹೇಗೆ ಹೇಳುವುದು? ಎಂಬ ಗೊಂದಲಕ್ಕೆ ಅವಕಾಶವಿಲ್ಲ. ಏಕೆಂದರೆ ಸಂವರ್ಗವಿದ್ಯಾ ಪ್ರಕರಣದಲ್ಲಿ ಶೂದ್ರನಾದ ಪೌತ್ರಾಯಣನಿಗೆ ರೈಕ್ವಮುನಿಗಳು 'ಅಹಹಾರೇತ್ವ ಶೂದ್ರ' ಎಲೈ ! ಶೂದ್ರನೇ ಎಂದು ಸಂಬೋಧನೆ ಮಾಡಿ, ಸಂವರ್ಗ ವಿದ್ಯೆಯನ್ನು ಉಪದೇಶ ಮಾಡಿರುತ್ತಾರೆ. ಅಷ್ಟೇ ಅಲ್ಲದೆ, ಮಹಾಭಾರತಾದಿಗಳಲ್ಲಿ ಹೇಳುವಂತೆ ಶೂದ್ರನಾದ ವಿದುರನಿಗೆ, ಮಾಂಸ ಮಾರಾಟ ಮಾಡುವ ಧರ್ಮವ್ಯಾಧನಿಗೆ ವೇದಾರ್ಥ ತತ್ವಜ್ಞಾನವಿರುವುದನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಹೀಗೆ ಕೆಲವು ಮಂದಿ ಶೂದ್ರರಿಗೆ ವೇದಾರ್ಥ ತತ್ವಜ್ಞಾನವಿರುವುದರಿಂದ ಅದಕ್ಕೆ ಕಾರಣವಾದ ಉಪನಯನ ಸಂಸ್ಕಾರವೂ ಸಹ ಅವರಿಗೆ ಆಗಿರುತ್ತದೆಂದು ಅನ್ಯಥಾನುಪಪತ್ತಿ ಪ್ರಮಾಣದಿಂದ ಸಾಧಿಸಬಹುದು.

ಅಥವಾ ಶೂದ್ರಾದಿಗಳಿಗೆ ಉಪನಯನಸಂಸ್ಕಾರವೂ ಬೇಡ, ವೇದಾಧ್ಯಯನವೂ ಬೇಡ? ಆದರೂ ವೇದಾರ್ಥ ತತ್ವಜ್ಞಾನವು ಮತ್ತೊಬ್ಬರ ಅಧ್ಯಯದಿಂದ ಅಥವಾ ಲಿಖಿತವಾದ ಪುಸ್ತಕಗಳ ಅಧ್ಯಯನದಿಂದ ಹೊಂದಬಹುದು. ಹಾಗಾಗಿ ಸ್ತ್ರೀ ಶೂದ್ರ, ಬ್ರಹ್ಮಬಂಧುಗಳಿಗೂ ವೇದಾಧಿಕಾರವಿರುತ್ತದೆ. ಪೌತ್ರಾಯಣರಾಜನು ಸಂಬೋಧನೆ ಮಾಡಿರುವ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸುವ ಅವಶ್ಯಕತೆಯಿಲ್ಲ. ಪ್ರಬಲವಾದ ರೂಢ್ಯರ್ಥವನ್ನೇ ಸ್ವೀಕರಿಸಲು ಬರುವಾಗ ಯೌಗಿಕಾರ್ಥವನ್ನು ಸ್ವೀಕರಿಸಬಾರದೆಂದು ಪೂರ್ವಮೀಮಾಂಸೆಯ ರಥಕಾರಾಧಿಕರಣವು ಸಾಧಿಸಿದೆ. ಇಷ್ಟು ಪೂರ್ವಪಕ್ಷ.





## ಅಪಶೂದ್ರಾಧಿಕರಣ (೧-೩-೯)

## ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಿದ್ಧಾಂತ

**तात्पर्यचन्द्रिका**

सिद्धान्तस्तु ॥

**शूद्रशब्दस्य रूढत्वे रथवत्त्वादिबाधकम् ।**
**रथकारादिशब्दे तु रूढेर्नैवास्ति बाधकम् ॥ १ ॥**

ಅನುವಾದ - ಸಿದ್ಧಾಂತ ಹೀಗಿದೆ - ಶ್ರುತಿಯಲ್ಲಿರುವ ಶೂದ್ರಶಬ್ದಕ್ಕೆ ಶೂದ್ರನೆಂಬ ರೂಢಾರ್ಥವನ್ನು ವಿವಕ್ಷಿಸುವುದಾದರೆ 'ರಥವತ್ತ್ವ' ಮೊದಲಾದ ಬಾಧಕಗಳಿವೆ. ಆದರೆ ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿರುವ ರಥಕಾರಾದಿ ಶಬ್ದಗಳಿಗೆ ರೂಢಾರ್ಥವನ್ನು ಸ್ವೀಕರಿಸಲು ಯಾವುದೇ ಬಾಧಕಗಳಿರುವುದಿಲ್ಲ. ಆದ್ದರಿಂದ ಪೂರ್ವಮೀಮಾಂಸೆಯ ದೃಷ್ಟಾಂತವು ವಿಷಮವಾಗಿದೆ.

**. अस्ति ह्यत्र ''अयमश्वतरीरथ'' इति वाक्यशेषस्थं पौत्रायणस्य रथवत्त्वं रूढे-र्बाधकम् । भाष्योक्तस्मृत्या शूद्रे रथायोगात् ।**

ಶ್ಲೋಕದ ವಿವರಣೆ ಹೀಗಿದೆ - 'ಅಹಹಾರೇತ್ವ ಶೂದ್ರ' ಎಂಬ ಶ್ರುತಿಯಲ್ಲಿರುವ ಶೂದ್ರಶಬ್ದವು ರೂಢಿಯ ಬಲದಿಂದ ಶೂದ್ರಜಾತಿಯನ್ನು ಹೇಳುತ್ತದೆಂದು ಮಾಡಿದ ಪೂರ್ವಪಕ್ಷವು ಅಸಾಧುವಾಗಿದೆ. ಏಕೆಂದರೆ 'ಅಯಮಶ್ವತರೀರಥ' ಎಂಬ ವಾಕ್ಯಶೇಷದಲ್ಲಿ ಪೌತ್ರಾಯಣನಿಗೆ ರಥದ ಸಂಬಂಧವು ಶ್ರುತವಾಗಿದೆ. ಪೌತ್ರಾಯಣನು ಶೂದ್ರನಾದಲ್ಲಿ, ರಥದ ಸಂಬಂಧವು ಯುಕ್ತವಾಗುವುದಿಲ್ಲ. ಹೀಗೆ ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿರುತ್ತದೆ. ಶೂದ್ರನಿಗೂ ಕೂಡ ರಥದ ಸಂಬಂಧವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯ ಬಲದಿಂದ ಶೂದ್ರನಿಗೆ ರಥದ ಸಂಬಂಧವಿಲ್ಲವೆಂದು ಸಿದ್ಧವಾಗಿದೆ.

**यद्यपि ''न वेदो यत्र नो रथ'' इति स्मृत्या रथस्य वेदं प्रति व्याप्यत्वेऽपि पूर्वपक्षिणा शूद्रेऽपि वेदाङ्गीकारान्न रथेन लिङ्गेन वेदानुमानद्वारा शूद्रत्वाभावसिद्धिः ।**

ಪ್ರಶ್ನೆ - 'ನ ವೇದೋ ಯತ್ರ ನೋ ರಥಃ' ಎಂಬ ಸ್ಮೃತಿಯ ಬಲದಿಂದ ಶೂದ್ರನಿಗೆ ರಥದ ಸಂಬಂಧವಿಲ್ಲವೆಂದು ನಿರ್ಣಯಿಸಲಾಗದು. ಏಕೆಂದರೆ ಸ್ಮೃತಿವಾಕ್ಯದಿಂದ ರಥವು ವೇದಕ್ಕೆ ವ್ಯಾಪ್ಯವಾಗಿದೆ ಎಂದಷ್ಟೇ ತಿಳಿಯುತ್ತದೆ. ಆದರೆ ಪೂರ್ವಪಕ್ಷಿಯು ಶೂದ್ರನಲ್ಲಿಯೂ ವೇದಾಧಿಕಾರವನ್ನು ಸಮರ್ಥಿಸುತ್ತಿರುವುದರಿಂದ ರಥವತ್ತ್ವವೆಂಬ ಲಿಂಗದಿಂದ ವೇದಾಧಿಕಾರವನ್ನು ಅನುಮಾನ ಮಾಡಿ ತನ್ಮೂಲಕ ಶೂದ್ರತ್ವಾಭಾವವನ್ನು ಸಾಧಿಸಲಾಗದು.

ಪರಿಪೂರ್ಣಚಂದ್ರಿಕಾ

(ಅಭಿಪ್ರಾಯ ಹೀಗಿದೆ - 'ರಥವತ್ತ್ವ' ಎಂಬ ಹೇತುವಿನಿಂದ ನೇರವಾಗಿ ಶೂದ್ರತ್ವಾಭಾವವನ್ನು ಸಾಧಿಸಲಾಗದು. ಹೊರತು, 'ಪೌತ್ರಾಯಣಃ ನ ಶೂದ್ರಃ, ವೇದಾಧಿಕಾರವತ್ತ್ವಾತ್' ಎಂಬ ಅನುಮಾನದಿಂದ ವೇದಾಧಿಕಾರವಿರುವ ಪ್ರಯುಕ್ತ ಶೂದ್ರತ್ವಾಭಾವವನ್ನು ಮೊದಲು ಸಮರ್ಥಿಸಬೇಕು. ಅನಂತರ 'ಪೌತ್ರಾಯಣಃ ವೇದಾಧಿಕಾರವಾನ್ ರಥವತ್ತ್ವಾತ್' ಎಂಬುದಾಗಿ ರಥವತ್ತ್ವ ಎಂಬ ಹೇತುವಿನಿಂದ ವೇದಾಧಿಕಾರವನ್ನು ಸಮರ್ಥಿಸಬೇಕು. ಹೀಗೆ ರಥವತ್ತ್ವವೆಂಬ ಹೇತುವು ಮೊದಲು ವೇದಾಧಿಕಾರವನ್ನು ಸಮರ್ಥಿಸಿ, ಆ ವೇದಾಧಿಕಾರದ ಮೂಲಕ ಶೂದ್ರತ್ವಾಭಾವವನ್ನು ಸಾಧಿಸುತ್ತದೆ. ಹೀಗೆ ಹೇಳಿದಾಗ 'ಪೌತ್ರಾಯಣಃ ವೇದಾಧಿಕಾರವಾನ್ ರಥವತ್ತ್ವಾತ್' ಎಂಬ ಅನುಮಾನವನ್ನು ಪೂರ್ವಪಕ್ಷಿಯು ಇಷ್ಟವೆಂದು ಒಪ್ಪುತ್ತಾನೆ. ಆದರೆ 'ಪೌತ್ರಾಯಣಃ ನಶೂದ್ರಃ ವೇದಾಧಿಕಾರವತ್ತ್ವಾತ್' ಎಂಬ ಅನುಮಾನದಲ್ಲಿ ವ್ಯಭಿಚಾರದೋಷವನ್ನು ಹೇಳುತ್ತಾನೆ. ವೇದಾಧಿಕಾರವಿದ್ದರೂ ಶೂದ್ರತ್ವವೇ ಇರಲಿ ಎಂದು ಅವನ ಆಶಯ.)

**तथापि क्षत्रिये रथस्य स्वाभाविकत्वात्तदन्यत्र चागन्तुकत्वात्स्वाभाविक-सम्भवे च नैमित्तिकग्रहणायोगात्साक्षाद्रथेनैव क्षत्रियत्वसिद्धिः ।**

ಉತ್ತರ - ಕ್ಷತ್ರಿಯನಿಗೆ ರಥದ ಸಂಬಂಧವು ಸ್ವಾಭಾವಿಕವಾಗಿರುತ್ತದೆ. ಉಳಿದ ವೈಶ್ಯ ಹಾಗೂ ಬ್ರಾಹ್ಮಣರಿಗೆ ಆಗಂತುಕವಾಗಿರುತ್ತದೆ. ಸ್ವಾಭಾವಿಕವಾದದ್ದನ್ನು ವಿವಕ್ಷಿಸಲು ಬರುವಾಗ ನೈಮಿತ್ತಿಕವನ್ನು ಇಟ್ಟುಕೊಳ್ಳುವುದು ಯುಕ್ತವಾಗುವುದಿಲ್ಲ. ಹೀಗೆ ಸ್ವಾಭಾವಿಕವಾದ ರಥದ ಸಂಬಂಧದಿಂದ ಪೌತ್ರಾಯಣನು ಕ್ಷತ್ರಿಯನಾಗಿದ್ದಾನೆಂದು ಸಮರ್ಥಿಸಬಹುದು - 'ಪೌತ್ರಾಯಣಃ ಕ್ಷತ್ರಿಯಃ ಸ್ವಾಭಾವಿಕ ರಥಸಂಬಂಧವತ್ತ್ವಾತ್' ಎಂದು ಸ್ವಾಭಾವಿಕ ರಥಸಂಬಂಧವು ಹೇಗೆ ಸಿದ್ಧವಾಗಿದೆ ಎಂದರೆ, 'ಸ್ವಾಭಾವಿಕ ಸಂಭವೇ ಚ ನೈಮಿತ್ತಿಕಗ್ರಹಣಾಯೋಗಾತ್' ಎಂಬ ನ್ಯಾಯದಿಂದ ಸಿದ್ಧವಾಗಿದೆಯೆಂದು ತಿಳಿಯಬೇಕು.

**नच शूद्रश्रुतेः स्वारस्याय लिङ्गस्यास्वारस्यमिति युक्तम् । हारेत्वातवैवेतीत्व-शब्दार्थरथसम्बन्धवाचिन्यास्तवेति षष्ठ्याः क्षत्रियत्वे लिङ्गत्वेऽपि रथसम्बन्धे श्रुतित्वात् ।**

ಶ್ರುತಿ ಹಾಗೂ ಲಿಂಗಗಳ ನಡುವೆ ಶ್ರುತಿಯೇ ಪ್ರಬಲವಾದ್ದರಿಂದ, ಶೂದ್ರಶ್ರುತಿಗೆ ಸ್ವಾರಸ್ಯಾರ್ಥವನ್ನು ಹೇಳುವುದಕ್ಕಾಗಿ ರಥಸಂಬಂಧವೆಂಬ ಲಿಂಗಕ್ಕೆ ನೈಮಿತ್ತಿಕತ್ವವೆಂಬ ಅಸ್ವಾರಸ್ಯವನ್ನು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಶೂದ್ರಶಬ್ದವು ಹೇಗೆ ಶ್ರುತಿರೂಪವಾಗಿದೆಯೋ, ಅದರಂತೆ ರಥಸಂಬಂಧವೂ ಸಹ ಶ್ರುತಿಪ್ರಮಾಣದಿಂದಲೇ ಸಿದ್ಧವಾಗಿದೆ - ಅದು ಹೀಗೆ - 'ಹಾರೇತ್ವಾತವೈವ' ಎಂಬಲ್ಲಿ 'ಇತ್ವ' ಎಂಬ ಶಬ್ದಕ್ಕೆ ರಥವೆಂದರ್ಥ. ಈ ರಥದ ಸಂಬಂಧವನ್ನು 'ತವ' ಎಂಬಲ್ಲಿರುವ ಷಷ್ಠೀವಿಭಕ್ತಿಯು ಹೇಳುತ್ತಿದೆ. ಆದ್ದರಿಂದ 'ಇತ್ವಾತವ' ಎಂಬ ಶ್ರುತಿಯಿಂದಲೇ ರಥಸಂಬಂಧವು

ಸಿದ್ಧವಾಗಿದೆ. ಆದ್ದರಿಂದ 'ಹಾರೇತ್ವಾತವೈವ' ಎಂಬ ಶ್ರುತಿಯು ಕ್ಷತ್ರಿಯತ್ವವನ್ನು ಸಮರ್ಥಿಸುವ ವಿಷಯದಲ್ಲಿ ಲಿಂಗರೂಪವಾಗಿರಬಹುದು. ಆದರೆ ರಥಸಂಬಂಧವೆಂಬ ವಿಷಯದಲ್ಲಿ ಶ್ರುತಿರೂಪವೇ ಆಗಿದೆ.

**वाक्यशेषस्थं क्रूसं शुचा द्रवणरूपं योगं विहाय "जानश्रुतिर्ह पौत्रायणः श्रद्धादेयो बहुदायी बहुपाक्य आस सह सर्वत आवसथान्मापयाञ्चक्रे सर्वत एव मेत्स्यन्ति" इत्यादिपूर्ववाक्यस्थेन सर्वत आवसथ निर्माणादिना तथा "अयं ग्रामो यस्मिन्नास्स" इत्याद्युत्तरवाक्यस्थेन ग्रामेशत्वादिना तथा "राजा पौत्रायणः शोकाच्छूद्रेति मुनिनोदित" इत्यादिस्मृत्या च क्षत्रियत्वावगतेस्तद्विरुद्धरूढि-ग्रहणायोगाच्च ।**

ಮತ್ತು 'ಶೂದ್ರ' ಎಂಬ ಶಬ್ದಕ್ಕೆ ಯೋಗಾರ್ಥವನ್ನು ಸ್ವೀಕರಿಸುವುದೇ ಅತ್ಯಂತ ಸಂಗತವಾಗಿದೆ. ವಾಕ್ಯಶೇಷದಲ್ಲಿ ಸ್ಪಷ್ಟವಾಗಿ ದುಃಖದಿಂದ ಓಡಿಬಂದಿದ್ದಾನೆಂಬ ಯೋಗಾರ್ಥವನ್ನು ಹೇಳಲಾಗಿದೆ. ಮತ್ತು ಇವನು ಕ್ಷತ್ರಿಯನೇ ಆಗಿದ್ದಾನೆನ್ನಲು ಅನೇಕ ಕಾರಣಗಳನ್ನು ಶ್ರುತಿಯು ಸ್ಪಷ್ಟಪಡಿಸುತ್ತಿದೆ. 'ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾಕ್ಯ ಆಸ ಸಹ ಸರ್ವತ ಆವಸಥಾನ್ಮಾಪಯಾಂಚಕ್ರೇ ಸರ್ವತ ಏವ ಮೇತ್ಸ್ಯಂತಿ' ಎಂಬ ಇದರ ಹಿಂದಿನ ವಾಕ್ಯದಲ್ಲಿ ಎಲ್ಲೆಡೆಯಿಂದ ಬರುವ ಜನರಿಗೆ ಆವಾಸಸ್ಥಾನವನ್ನು ಮತ್ತು ಅನ್ನವನ್ನು ನೀಡಲು ವ್ಯವಸ್ಥೆ ಮಾಡಿದನು. ಅದರಂತೆ 'ಅಯಂ ಗ್ರಾಮೋ ಯಸ್ಮಿನ್ನಾಸ್ಸೇ' ಎಂಬ ಮುಂದಿನ ವಾಕ್ಯದಲ್ಲಿ ಗ್ರಾಮೇಶತ್ವವು ಹೇಳಲಾಗಿದೆ. ಅದರಂತೆ 'ರಾಜಾ ಪೌತ್ರಾಯಣಃ ಶೋಕಾತ್ ಶೂದ್ರೇತಿ ಮುನಿನೋದಿತಃ' ಎಂಬ ಸ್ಮೃತಿಯಿಂದಲೂ ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದು ಅನೇಕ ಧರ್ಮಗಳಿಂದ ಸ್ಪಷ್ಟವಾಗುತ್ತಿದೆ. ಈ ಎಲ್ಲಾ ಮಾತುಗಳಿಗೆ ವಿರುದ್ಧವಾಗಿ 'ಶೂದ್ರಜಾತಿ' ಎಂಬ ರೂಢಾರ್ಥವನ್ನು ಸ್ವೀಕರಿಸುವುದು ಬಹಳ ತಪ್ಪಾಗುತ್ತದೆ. ಆದ್ದರಿಂದ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನೇ ಸ್ವೀಕರಿಸಬೇಕು.

**अत एव सूत्रे "क्षत्रियत्वावगतेः" इत्येवोक्तम् ।**

ಆದ್ದರಿಂದಲೇ ಸೂತ್ರದಲ್ಲಿ 'ಕ್ಷತ್ರಿಯತ್ವಾವಗತೇಃ' ಎಂದು ಸಾಮಾನ್ಯವಾಗಿ ಹೇಳಿದ್ದಾರೆ. ಕ್ಷತ್ರಿಯತ್ವವು ಕೇವಲ ರಥಸಂಬಂಧದಿಂದಷ್ಟೇ ಅಲ್ಲ, ಗ್ರಾಮೇಶತ್ವಾದಿಗಳಿಂದಲೂ ಸಿದ್ಧವಾಗುತ್ತದೆ ಎಂದು ಸೂತ್ರದ ಅಭಿಪ್ರಾಯ.

**भाष्ये त्वागन्तुकस्यापि रथस्य वेदं विनाऽयोगाद्वेदस्य च "संस्कारपरामर्शात्" इत्याद्युत्तरसूत्ररीत्या शूद्रेऽयोगाद्रथेन वेदानुमानद्वारेणाशूद्रत्वसिद्धिरुक्ता ।**

ಪರಿಪೂರ್ಣಚಂದ್ರಿಕಾ

ಇಲ್ಲಿಯ ತನಕ ಷಷ್ಠೀವಿಭಕ್ತಿಯಿಂದ ರಥಸಂಬಂಧವು ತಿಳಿಯುತ್ತಿದೆ. ಮುಖ್ಯವಾದ ರಥಸಂಬಂಧವೆಂದರೆ ಸ್ವಾಭಾವಿಕವಾದ ರಥಸಂಬಂಧವೆಂದೇ ಅರ್ಥ. ಹೀಗೆ ಸ್ವಾಭಾವಿಕ ರಥಸಂಬಂಧವೆಂಬ ಲಿಂಗದಿಂದ ಶೂದ್ರತ್ವಾಭಾವವನ್ನು ನೇರವಾಗಿ ಸಾಧನ ಮಾಡಬಹುದೆಂದು ಹೇಳಲಾಯಿತು.

ಆದರೆ ಭಾಷ್ಯದಲ್ಲಿ ಪರಂಪರೆಯಿಂದ ಶೂದ್ರತ್ವಾಭಾವವನ್ನು ಸಾಧಿಸಿದ್ದಾರೆ. 'ಪೌತ್ರಾಯಣಃ ವೇದಾಧಿಕಾರವಾನ್ ರಥವತ್ತ್ವಾತ್' ಎಂದು ಸಾಧಿಸಿ. ಅನಂತರ 'ಪೌತ್ರಾಯಣಃ ನ ಶೂದ್ರಃ ವೇದಾಧಿಕಾರವತ್ತ್ವಾತ್' ಎಂದು ಭಾಷ್ಯದಲ್ಲಿ ಅನುಮಾನ ಮಾಡಿದ್ದಾರೆ. ಇದರ ಅಭಿಪ್ರಾಯವೇನೆಂದರೆ ಪೂರ್ವಪಕ್ಷಿಯು ಶೂದ್ರನಿಗೆ ವೇದಾಧಿಕಾರವಿದೆಯೆಂದು ಹೇಳುತ್ತಿದ್ದಾನೆ. ಇದನ್ನು 'ಸಂಸ್ಕಾರಪರಾಮರ್ಶಾತ್' ಎಂಬ ಮುಂದಿನ ಸೂತ್ರದಲ್ಲಿ ಖಂಡಿಸಲಾಗಿದೆ. ಷಷ್ಠೀವಿಭಕ್ತಿಯಿಂದ ತಿಳಿದಿರುವ ಸ್ವಾಭಾವಿಕ ಸಂಬಂಧವೇ ಬೇಡ. ಆಗಂತುಕ ಸಂಬಂಧವೆಂದೇ ಇಟ್ಟುಕೊಳ್ಳಬಹುದು. ಇದರಿಂದ ಶೂದ್ರತ್ವಾಭಾವವನ್ನು ಅನುಮಾನ ಮಾಡಲು ಬಾರದಿದ್ದರೂ ವೇದವನ್ನು ಅನುಮಾನ ಮಾಡಬಹುದು. ತನ್ಮೂಲಕವಾಗಿ ಶೂದ್ರತ್ವಾಭಾವವನ್ನೂ ಕೂಡ ಅನುಮಾನ ಮಾಡಬಹುದೆಂದು ತಿಳಿಯಬೇಕು.

**यद्वा निषादस्य वेदाभावेऽपि तात्कालिकोपदेशात् ''एतया निषादस्थपतिं याजयेत्'' इति वाक्यविहितस्थपतीष्टिमात्र इव पौत्रायणस्यापि शूद्रत्वेन वेदाभावेऽपि संवर्गविद्यामात्राधिकारोऽस्त्विति शङ्कानिरासायागन्तुकस्यापि रथस्य वेदव्याप्यतोक्ता भाष्ये ।**

ಅಥವಾ ಯಾವರೀತಿಯಾಗಿ ನಿಷಾದನಿಗೆ ವೇದಾಧಿಕಾರವಿಲ್ಲದಿದ್ದರೂ ತಾತ್ಕಾಲಿಕ ಉಪದೇಶದಿಂದ 'ಏತಯಾ ನಿಷಾದಸ್ಥಪತಿಂ ಯಾಜಯೇತ್' ಎಂಬ ವಾಕ್ಯದಿಂದ ವಿಹಿತವಾದ ಸ್ಥಪತಿ ಮಾಡಬೇಕಾದ ಇಷ್ಟಿಮಾತ್ರದಲ್ಲಿ ಅಧಿಕಾರವನ್ನು ಹೊಂದಿದ್ದಾನೋ, ಅದರಂತೆ ಪೌತ್ರಾಯಣನು ಕೂಡ ಶೂದ್ರನೇ ಆಗಿದ್ದಾನೆ. ಹಾಗಾಗಿ ಸಂಪೂರ್ಣ ವೇದಾಧಿಕಾರವು ನಿಷಾದನಂತೆ ಇವನಿಗೂ ಸಹ ಇರುವುದಿಲ್ಲ. ಆದರೆ ಸಂವರ್ಗವಿದ್ಯೆಯಲ್ಲಿ ಮಾತ್ರ ಅಧಿಕಾರವನ್ನು ಪಡೆಯುತ್ತಾನೆ. ಹೀಗೆ ಹೇಳಬಹುದಲ್ಲವೇ?

ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಆಗಂತುಕವಾದ ವೇದಕ್ಕೂ ಸಹ ರಥವು ವ್ಯಾಪ್ಯವೆಂದು ವೇದದಲ್ಲಿ ಹೇಳಿದ್ದರಿಂದ ರಥವಿಲ್ಲದ ಶೂದ್ರನಿಗೆ ವೇದಾಧಿಕಾರವನ್ನೂ ಕೂಡ ಹೇಳುವುದು ಯುಕ್ತವಾಗುವುದಿಲ್ಲ. ಈ ಅಭಿಪ್ರಾಯದಿಂದಲೂ ಭಾಷ್ಯದ ಮಾತುಗಳು ಹೊರಟಿವೆ.

**विप्रक्षत्रार्थमपलायनमपि शूद्रस्य पदातितयैवेति टीकायामेवोक्तम् ।**

ಶೂದ್ರನಾದವನು ಬ್ರಾಹ್ಮಣರಿಗಾಗಿ ಮತ್ತು ಕ್ಷತ್ರಿಯರಿಗಾಗಿ ಯುದ್ಧದಲ್ಲಿ ಪಾಲ್ಗೊಳ್ಳಬೇಕು. ಆ ಸಂದರ್ಭದಲ್ಲಿ ಶತ್ರುಗಳಿಂದ ಸಾಯುವ ಸಂದರ್ಭಬಂದರೂ ಸಹ ಓಡಬಾರದು ಎಂಬುದಾಗಿ ಶೂದ್ರನಿಗೂ ಕೂಡ ಯುದ್ಧದಲ್ಲಿ ಅಧಿಕಾರವನ್ನು ಹೇಳಿರುತ್ತಾರೆ. ಯುದ್ಧದಲ್ಲಿ ಪಾಲ್ಗೊಳ್ಳಬೇಕೆಂದರೆ

ರಥಾರೂಢನಾಗಬೇಕಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಏಕೆಂದರೆ ಶೂದ್ರನಿಗೆ ಕೇವಲ ಕಾಲಾಳುವಾಗಿ ಮಾತ್ರ ಯುದ್ಧದಲ್ಲಿ ಪ್ರವೇಶ ಹೊರತು, ಗಜ, ಅಶ್ವ, ರಥ ಮೊದಲಾದ ವಾಹನಗಳ ಸಹಿತನಾಗಿ ಶೂದ್ರನಿಗೆ ಯುದ್ಧದಲ್ಲಿ ಪ್ರವೇಶವಿರುವುದಿಲ್ಲ. ಇದಕ್ಕೆ ಉತ್ತರವನ್ನು ಟೀಕೆಯಲ್ಲಿಯೇ ಹೇಳಿರುತ್ತಾರೆ.

**नच पौत्रायणेन रैकाय दीयमानो रथोऽन्यदीय इति युक्तम् । स्वत्वाभावे दानायोगात् ।**

ರೈಕ್ವಮುನಿಗಳಿಗೆ ಪೌತ್ರಾಯಣನು ನೀಡುತ್ತಿರುವ ರಥವು ತನ್ನದೇ ಆಗಿದೆಯೆಂದು ಹೇಗೆ ಕಲ್ಪಿಸುತ್ತೀರಿ? ಬೇರೆ ಯಾರೋ ಒಬ್ಬನ ರಥವನ್ನು ನೀಡುತ್ತಿರಬಹುದಲ್ಲವೇ? ಎಂದು ಶಂಕಿಸಬಾರದು. ಶ್ರುತಿಯಲ್ಲಿ ದಾನ ಮಾಡಿದನೆಂದು ಹೇಳಲಾಗಿದೆ. ತನ್ನ ಸ್ವಾಮಿತ್ವವಿರುವ ವಸ್ತುವನ್ನಷ್ಟೇ ಮತ್ತೊಬ್ಬರಿಗೆ ದಾನ ಮಾಡಲು ಸಾಧ್ಯ ? ಮತ್ತೊಬ್ಬರ ವಸ್ತುವನ್ನು ಕೊಡುವುದು ದಾನವೆಂದೇ ಎನಿಸುವುದಿಲ್ಲ.

**स्वतः प्राप्ततदीयत्वे बाधकाभावाच्च । तवैव सह गोभिरिति वाक्यशेषविरोधाच्च।**

ರಥ ಮೊದಲಾದವು ತನ್ನ ವಸ್ತುವೇ ಆಗಿದೆಯೆಂದು ಹೇಳಲು ಯಾವುದೇ ಬಾಧಕಗಳೂ ಕೂಡ ಇರುವುದಿಲ್ಲ. ಆದ್ದರಿಂದ ಮತ್ತೊಬ್ಬರ ವಸ್ತುವನ್ನು ಕೊಡುತ್ತಿದ್ದಾನೆಂದು ಹೇಳಬಾರದು. ಅಷ್ಟೇ ಅಲ್ಲದೇ 'ತವೈವ ಸಹ ಗೋಭಿಃ' ಎಂಬ ವಾಕ್ಯಶೇಷದಲ್ಲಿ ರೈಕ್ವಮುನಿಗಳು ಇವೆಲ್ಲವೂ ನಿನ್ನದೇ ಆಗಿದೆಯೆಂದು ಹೇಳಿದ್ದು ಕಾಣಿಸುತ್ತಿದೆ.

**तस्माद्बाधकाच्छूद्रशब्दे रूढित्यागः । रथकारादिशब्देषु तु न रूढिबाधकमस्तीति वैषम्यम् ।**

ಆದ್ದರಿಂದ ಶೂದ್ರಶಬ್ದಕ್ಕೆ 'ಶೂದ್ರಜಾತಿ' ಎಂಬ ರೂಢಾರ್ಥವನ್ನು ವಿವಕ್ಷಿಸಲು ಬಾಧಕವಿದೆ. ಪೂರ್ವಮೀಮಾಂಸೆಯಲ್ಲಿ ರಥಕಾರಾದಿಶಬ್ದಗಳಿಗೆ ರೂಢಾರ್ಥವನ್ನು ಸ್ವೀಕರಿಸಲು ಯಾವುದೇ ಬಾಧಕಗಳಿರುವುದಿಲ್ಲ. ಆದ್ದರಿಂದ ಸಂವರ್ಗಪ್ರಕರಣದಲ್ಲಿ ಬರುವಂತಹ ಶೂದ್ರಶಬ್ದಕ್ಕೆ ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನೇ ಸ್ವೀಕರಿಸಬೇಕೆಂದು ಸಿದ್ಧವಾಯಿತು.

**प्रकाशः –**

**द्वितीयसूत्रभाष्याद्युक्तबाधकाच्छ्रौतशूद्रशब्दस्य रूढित्यागेनाद्यसूत्रभाष्याद्युक्तदिशा यौगिकत्वावश्यंभावात् कल्पकाभावेन संस्कारादिसूत्राद्युक्तोपनयनाद्यभावश्रुति-**

लिङ्गदर्शनादिनाऽधिकारप्रयोजकाध्ययनादेरयोगान्नाधिकार इति भावेन द्वितीय-सूत्रभाष्याद्युक्तं प्रमेयं तावत्सङ्गृह्णाह – शूद्रशब्दस्येति ।।

ವಿವರಣೆ - ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಿದ್ಧಾಂತವನ್ನು ಪ್ರಾರಂಭಮಾಡುತ್ತಿದ್ದಾರೆ. ಎರಡನೆಯ ಸೂತ್ರಭಾಷ್ಯದಲ್ಲಿ ಹೇಳಿರುವಂತಹ ಬಾಧಕಗಳಿಂದ ಶ್ರುತಿಯಲ್ಲಿರುವ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಬಾರದೆಂದು ತಿಳಿಯುತ್ತದೆ. ಆದ್ದರಿಂದ ಪ್ರಥಮಸೂತ್ರದ ಭಾಷ್ಯದಲ್ಲಿ ಹೇಳಿದಂತೆ ಸೂತ್ರಶಬ್ದಕ್ಕೆ ಯೌಗಿಕಾರ್ಥವನ್ನೇ ಅವಶ್ಯವಾಗಿ ಸ್ವೀಕರಿಸಬೇಕು. ಆದ್ದರಿಂದ ಶೂದ್ರನಿಗೆ ವೇದಾಧಿಕಾರ-ವಿದೆಯೆನ್ನಲು ಯಾವುದೇ ಕಲ್ಪಕಗಳಿರುವುದಿಲ್ಲ. ಸಂಸ್ಕಾರಾದಿಸೂತ್ರದಲ್ಲಿ ಹೇಳಿದಂತೆ ಶೂದ್ರರಿಗೆ ಉಪನಯನವಿಲ್ಲವೆಂಬ ಶ್ರುತಿ ಹಾಗೂ ಲಿಂಗದರ್ಶನಗಳಿಂದ ಅಧಿಕಾರಪ್ರಯೋಜಕವಾದ ಅಧ್ಯಯನಾದಿಗಳು ಕೂಡುವುದಿಲ್ಲ. ಆದ್ದರಿಂದಲೇ ವೇದವಿದ್ಯಾಧಿಕಾರವೂ ಸಹ ಇರುವುದಿಲ್ಲ. ಈ ಅಭಿಪ್ರಾಯದಿಂದ ಎರಡನೆಯ ಸೂತ್ರಭಾಷ್ಯದಲ್ಲಿ ಹೇಳಿದ ಪ್ರಮೇಯವನ್ನು ಶ್ಲೋಕರೂಪದಲ್ಲಿ ಗ್ರಂಥಕಾರರು ಸಂಗ್ರಹಿಸುತ್ತಿದ್ದಾರೆ 'ಶೂದ್ರಶಬ್ದಸ್ಯ' ಎಂಬುದಾಗಿ.

**प्रकाशः** – आदिपदेन वक्ष्यमाणग्रामेशत्वादिग्रहः । अतिप्रसङ्गं निराह – **रथकारेति ।।**

'ರಥವತ್ತ್ವಾದಿಬಾಧಕಮ್' ಎಂಬಲ್ಲಿರುವ ಆದಿಪದದಿಂದ ಮುಂದೆ ಹೇಳುವ ಗ್ರಾಮೇಶ್ವತ್ವಾದಿಗಳನ್ನೂ ಕೂಡ ವಿವಕ್ಷಿಸಬೇಕು. ರಥ ಮೊದಲಾದವುಗಳ ಇರುವಿಕೆ ಎಂಬುದಷ್ಟೇ ಕ್ಷತ್ರಿಯತ್ವಕ್ಕೆ ಲಿಂಗವಲ್ಲ ಗ್ರಾಮೇಶ್ವತ್ವಾದಿಗಳೂ ಕೂಡ ಲಿಂಗವಾಗಿವೆ. ಯೋಗ ಮತ್ತು ರೂಢಿಗಳಲ್ಲಿ ರೂಢ್ಯರ್ಥವನ್ನೇ ಸ್ವೀಕರಿಸಬೇಕೆಂದು ರಥಕಾರಾಧಿಕರಣದಲ್ಲಿ ಹೇಳಿದ್ದಾರಲ್ಲವೇ? ಎಂದರೆ, ಅಲ್ಲಿ ರೂಢಿಗೆ ಯಾವುದೇ ಬಾಧಕಗಳಿಲ್ಲದ ಕಾರಣ, ರೂಢ್ಯರ್ಥವನ್ನು ಸ್ವೀಕರಿಸಲಾಗಿದೆ ಎಂಬುದಾಗಿ ಅತಿಪ್ರಸಂಗವನ್ನು 'ರಥಕಾರ' ಎಂಬ ಉತ್ತರಾರ್ಧದಿಂದ ನಿರಾಕರಿಸಿದ್ದಾರೆ.

**प्रकाशः** – पूर्वार्धं व्यनक्ति – **अस्ति हीति** ।। ''रैकेदं सहस्रं गवामयं निष्कोऽयमश्वतरीरथ इयं जायाऽयं ग्रामो यस्मिन्नास्स'' इति वाक्यशेषस्थमित्यर्थः ।

ಶ್ಲೋಕದ ಪೂರ್ವಾರ್ಧವನ್ನು ಸ್ವತಃ ಗ್ರಂಥಕಾರರೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅಸ್ತಿ ಹಿ' ಇತ್ಯಾದಿ ವಾಕ್ಯದಿಂದ. ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿದೆಯೆಂಬುದಾಗಿ 'ಅಸ್ತಿ ಹಿ' ಎಂಬ ವಾಕ್ಯವು ಪ್ರತಿಪಾದನೆ ಮಾಡಿದೆ. 'ರೈಕ್ವೇದಂ ಸಹಸ್ರಂ ಗವಾಮಯಂ ನಿಷ್ಕೋಽಯಮಶ್ವತರೀರಥ ಇಯಂ ಜಾಯಾಽಯಂ ಗ್ರಾಮೋ ಯಸ್ಮಿನ್ನಾಸೇ' ಎಂಬ ವಾಕ್ಯಶೇಷದಲ್ಲಿ 'ರಥಸಂಬಂಧ', 'ಗ್ರಾಮಾಧಿಪತ್ಯ ಮೊದಲಾದ ಧರ್ಮಗಳು ಬಾಧಕವಾಗಿ ಕೇಳಿಸುತ್ತಿವೆ ಎಂದಭಿಪ್ರಾಯ.

**प्रकाशः** – वाक्यशेषेत्युक्त्या रथवत्त्वस्य पक्षधर्मतोक्ता । रूढेः शूद्रशब्दे । टीकायां भाष्यदिशा शूद्रे वेदाभावेन तदविनाभूतरथाभावमुपपाद्य ''क्षत्रियस्य

ರಥಾರೂಢನಾಗಬೇಕಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಏಕೆಂದರೆ ಶೂದ್ರನಿಗೆ ಕೇವಲ ಕಾಲಾಳುವಾಗಿ ಮಾತ್ರ ಯುದ್ಧದಲ್ಲಿ ಪ್ರವೇಶ ಹೊರತು, ಗಜ, ಅಶ್ವ, ರಥ ಮೊದಲಾದ ವಾಹನಗಳ ಸಹಿತನಾಗಿ ಶೂದ್ರನಿಗೆ ಯುದ್ಧದಲ್ಲಿ ಪ್ರವೇಶವಿರುವುದಿಲ್ಲ. ಇದಕ್ಕೆ ಉತ್ತರವನ್ನು ಟೀಕೆಯಲ್ಲಿಯೇ ಹೇಳಿರುತ್ತಾರೆ.

**नच पौत्रायणेन रैकाय दीयमानो रथोऽन्यदीय इति युक्तम् । स्वत्वाभावे दानायोगात् ।**

ರೈಕ್ವಮುನಿಗಳಿಗೆ ಪೌತ್ರಾಯಣನು ನೀಡುತ್ತಿರುವ ರಥವು ತನ್ನದೇ ಆಗಿದೆಯೆಂದು ಹೇಗೆ ಕಲ್ಪಿಸುತ್ತೀರಿ? ಬೇರೆ ಯಾರೋ ಒಬ್ಬನ ರಥವನ್ನು ನೀಡುತ್ತಿರಬಹುದಲ್ಲವೇ? ಎಂದು ಶಂಕಿಸಬಾರದು. ಶ್ರುತಿಯಲ್ಲಿ ದಾನ ಮಾಡಿದನೆಂದು ಹೇಳಲಾಗಿದೆ. ತನ್ನ ಸ್ವಾಮಿತ್ವವಿರುವ ವಸ್ತುವನ್ನಷ್ಟೇ ಮತ್ತೊಬ್ಬರಿಗೆ ದಾನ ಮಾಡಲು ಸಾಧ್ಯ ? ಮತ್ತೊಬ್ಬರ ವಸ್ತುವನ್ನು ಕೊಡುವುದು ದಾನವೆಂದೇ ಎನಿಸುವುದಿಲ್ಲ.

**स्वतः प्राप्ततदीयत्वे बाधकाभावाच्च । तवैव सह गोभिरिति वाक्यशेषविरोधाच्च।**

ರಥ ಮೊದಲಾದವು ತನ್ನ ವಸ್ತುವೇ ಆಗಿದೆಯೆಂದು ಹೇಳಲು ಯಾವುದೇ ಬಾಧಕಗಳೂ ಕೂಡ ಇರುವುದಿಲ್ಲ. ಆದ್ದರಿಂದ ಮತ್ತೊಬ್ಬರ ವಸ್ತುವನ್ನು ಕೊಡುತ್ತಿದ್ದಾನೆಂದು ಹೇಳಬಾರದು. ಅಷ್ಟೇ ಅಲ್ಲದೇ 'ತವೈವ ಸಹ ಗೋಭಿಃ' ಎಂಬ ವಾಕ್ಯಶೇಷದಲ್ಲಿ ರೈಕ್ವಮುನಿಗಳು ಇವೆಲ್ಲವೂ ನಿನ್ನದೇ ಆಗಿದೆಯೆಂದು ಹೇಳಿದ್ದು ಕಾಣಿಸುತ್ತಿದೆ.

**तस्माद्बाधकाच्छूद्रशब्दे रूढित्यागः । रथकारादिशब्देषु तु न रूढिबाधकमस्तीति वैषम्यम् ।**

ಆದ್ದರಿಂದ ಶೂದ್ರಶಬ್ದಕ್ಕೆ 'ಶೂದ್ರಜಾತಿ' ಎಂಬ ರೂಢಾರ್ಥವನ್ನು ವಿವಕ್ಷಿಸಲು ಬಾಧಕವಿದೆ. ಪೂರ್ವಮೀಮಾಂಸೆಯಲ್ಲಿ ರಥಕಾರಾದಿಶಬ್ದಗಳಿಗೆ ರೂಢಾರ್ಥವನ್ನು ಸ್ವೀಕರಿಸಲು ಯಾವುದೇ ಬಾಧಕಗಳಿರುವುದಿಲ್ಲ. ಆದ್ದರಿಂದ ಸಂವರ್ಗಪ್ರಕರಣದಲ್ಲಿ ಬರುವಂತಹ ಶೂದ್ರಶಬ್ದಕ್ಕೆ ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನೇ ಸ್ವೀಕರಿಸಬೇಕೆಂದು ಸಿದ್ಧವಾಯಿತು.

**प्रकाशः —**

द्वितीयसूत्रभाष्याद्युक्तबाधकाच्छ्रौतशूद्रशब्दस्य रूढित्यागेनाद्यसूत्रभाष्याद्युक्तदिशा यौगिकत्वावश्यंभावात् कल्पकाभावेन संस्कारादिसूत्राद्युक्तोपनयनाद्यभावश्रुति-

लिङ्गदर्शनादिनाऽधिकारप्रयोजकाध्ययनादेरयोगान्नाधिकार इति भावेन द्वितीय-सूत्रभाष्याद्युक्तं प्रमेयं तावत्सङ्गृह्णाह – शूद्रशब्दस्येति ।।

ವಿವರಣೆ - ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಿದ್ಧಾಂತವನ್ನು ಪ್ರಾರಂಭಮಾಡುತ್ತಿದ್ದಾರೆ. ಎರಡನೆಯ ಸೂತ್ರಭಾಷ್ಯದಲ್ಲಿ ಹೇಳಿರುವಂತಹ ಬಾಧಕಗಳಿಂದ ಶ್ರುತಿಯಲ್ಲಿರುವ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಬಾರದೆಂದು ತಿಳಿಯುತ್ತದೆ. ಆದ್ದರಿಂದ ಪ್ರಥಮಸೂತ್ರದ ಭಾಷ್ಯದಲ್ಲಿ ಹೇಳಿದಂತೆ ಸೂತ್ರಶಬ್ದಕ್ಕೆ ಯೌಗಿಕಾರ್ಥವನ್ನೇ ಅವಶ್ಯವಾಗಿ ಸ್ವೀಕರಿಸಬೇಕು. ಆದ್ದರಿಂದ ಶೂದ್ರನಿಗೆ ವೇದಾಧಿಕಾರ-ವಿದೆಯೆನ್ನಲು ಯಾವುದೇ ಕಲ್ಪಕಗಳಿರುವುದಿಲ್ಲ. ಸಂಸ್ಕಾರಾದಿಸೂತ್ರದಲ್ಲಿ ಹೇಳಿದಂತೆ ಶೂದ್ರರಿಗೆ ಉಪನಯನವಿಲ್ಲವೆಂಬ ಶ್ರುತಿ ಹಾಗೂ ಲಿಂಗದರ್ಶನಗಳಿಂದ ಅಧಿಕಾರಪ್ರಯೋಜಕವಾದ ಅಧ್ಯಯನಾದಿಗಳು ಕೂಡುವುದಿಲ್ಲ. ಆದ್ದರಿಂದಲೇ ವೇದವಿದ್ಯಾಧಿಕಾರವೂ ಸಹ ಇರುವುದಿಲ್ಲ. ಈ ಅಭಿಪ್ರಾಯದಿಂದ ಎರಡನೆಯ ಸೂತ್ರಭಾಷ್ಯದಲ್ಲಿ ಹೇಳಿದ ಪ್ರಮೇಯವನ್ನು ಶ್ಲೋಕರೂಪದಲ್ಲಿ ಗ್ರಂಥಕಾರರು ಸಂಗ್ರಹಿಸುತ್ತಿದ್ದಾರೆ 'ಶೂದ್ರಶಬ್ದಸ್ಯ' ಎಂಬುದಾಗಿ.

**प्रकाशः** – आदिपदेन वक्ष्यमाणग्रामेशत्वादिग्रहः । अतिप्रसङ्गं निराह – **रथकारेति ।।**

'ರಥವತ್ವಾದಿಬಾಧಕಮ್' ಎಂಬಲ್ಲಿರುವ ಆದಿಪದದಿಂದ ಮುಂದೆ ಹೇಳುವ ಗ್ರಾಮೇಶ್ವತ್ವಾದಿಗಳನ್ನೂ ಕೂಡ ವಿವಕ್ಷಿಸಬೇಕು. ರಥ ಮೊದಲಾದವುಗಳ ಇರುವಿಕೆ ಎಂಬುದಷ್ಟೇ ಕ್ಷತ್ರಿಯತ್ವಕ್ಕೆ ಲಿಂಗವಲ್ಲ ಗ್ರಾಮೇಶ್ವತ್ವಾದಿಗಳೂ ಕೂಡ ಲಿಂಗವಾಗಿವೆ. ಯೋಗ ಮತ್ತು ರೂಢಿಗಳಲ್ಲಿ ರೂಢ್ಯರ್ಥವನ್ನೇ ಸ್ವೀಕರಿಸಬೇಕೆಂದು ರಥಕಾರಾಧಿಕರಣದಲ್ಲಿ ಹೇಳಿದ್ದಾರಲ್ಲವೇ? ಎಂದರೆ, ಅಲ್ಲಿ ರೂಢಿಗೆ ಯಾವುದೇ ಬಾಧಕಗಳಿಲ್ಲದ ಕಾರಣ, ರೂಢ್ಯರ್ಥವನ್ನು ಸ್ವೀಕರಿಸಲಾಗಿದೆ ಎಂಬುದಾಗಿ ಅತಿಪ್ರಸಂಗವನ್ನು 'ರಥಕಾರ' ಎಂಬ ಉತ್ತರಾರ್ಧದಿಂದ ನಿರಾಕರಿಸಿದ್ದಾರೆ.

**प्रकाशः** – पूर्वार्धं व्यनक्ति – **अस्ति हीति ।।** ''रैक्वेदं सहस्रं गवामयं निष्कोऽयमश्वतरीरथ इयं जायाऽयं ग्रामो यस्मिन्नास्स'' इति वाक्यशेषस्थमित्यर्थः ।

ಶ್ಲೋಕದ ಪೂರ್ವಾರ್ಧವನ್ನು ಸ್ವತಃ ಗ್ರಂಥಕಾರರೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅಸ್ತಿ ಹಿ' ಇತ್ಯಾದಿ ವಾಕ್ಯದಿಂದ. ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿದೆಯೆಂಬುದಾಗಿ 'ಅಸ್ತಿ ಹಿ' ಎಂಬ ವಾಕ್ಯವು ಪ್ರತಿಪಾದನೆ ಮಾಡಿದೆ. 'ರೈಕ್ವೇದಂ ಸಹಸ್ರಂ ಗವಾಮಯಂ ನಿಷ್ಕೋಽಯಮಶ್ವರತರೀರಥ ಇಯಂ ಜಾಯಾಽಯಂ ಗ್ರಾಮೋ ಯಸ್ಮಿನ್ನಾಸೇ' ಎಂಬ ವಾಕ್ಯಶೇಷದಲ್ಲಿ 'ರಥಸಂಬಂಧ', 'ಗ್ರಾಮಾಧಿಪತ್ಯ' ಮೊದಲಾದ ಧರ್ಮಗಳು ಬಾಧಕವಾಗಿ ಕೇಳಿಸುತ್ತಿವೆ ಎಂದಭಿಪ್ರಾಯ.

**प्रकाशः** – वाक्यशेषेत्युक्त्या रथवत्त्वस्य पक्षधर्मतोक्ता । रूढेः शूद्रशब्दे । टीकायां भाष्यदिशा शूद्रे वेदाभावेन तदविनाभूतरथाभावमुपपाद्य ''क्षत्रियस्य

स्वाभाविकत्वादन्येषामागन्तुकत्वात् स्वाभाविकस्यागन्तुकादाधिक्यम्'' इति रथस्य क्षत्रिये स्वाभाविकत्वमुपपादितम्

'ವಾಕ್ಯಶೇಷ' ಎಂದು ಹೇಳಿದ್ದರಿಂದ ರಥವತ್ತ್ವವು ಪಕ್ಷಧರ್ಮವೆಂದು ಹೇಳಿದಂತಾಯಿತು. 'ಶೂದ್ರೇ' ಎಂದರೆ 'ಶೂದ್ರ' ಶಬ್ದದಲ್ಲಿ ಎಂದರ್ಥ. ಟೀಕೆಯಲ್ಲಿ ಭಾಷ್ಯದ ಪ್ರಕಾರ ಶೂದ್ರನಿಗೆ ವೇದಾಧಿಕಾರ-ವಿಲ್ಲವಾದ್ದರಿಂದ ವೇದದಿಂದ ಅವಿನಾಭೂತವಾದ ರಥದ ಸಂಬಂಧವೂ ಸಹ ಶೂದ್ರನಿಗಿಲ್ಲವೆಂದು ಉಪಪಾದನೆ ಮಾಡಿದ್ದಾರೆ. ಅನಂತರ 'ಕ್ಷತ್ರಿಯಸ್ಯ ಸ್ವಾಭಾವಿಕತ್ವಾದನ್ಯೇಷಾಮಾಗಂತುಕತ್ವಾತ್ ಸ್ವಭಾವಿಕಸ್ಯಾಗಂತುಕಾದಾಧಿಕ್ಯಮ್' ಕ್ಷತ್ರಿಯನಿಗೆ ರಥದಸಂಬಂಧವು ಸ್ವಾಭಾವಿಕವಾಗಿರುತ್ತದೆ. ಉಳಿದವರಿಗೆ ಆಗಂತುಕವಾಗಿರುತ್ತದೆ. ಆಗಂತುಕಧರ್ಮಕ್ಕಿಂತ ಸ್ವಾಭಾವಿಕಧರ್ಮವು ಶ್ರೇಷ್ಠವಾದ್ದರಿಂದ ಕ್ಷತ್ರಿಯನಲ್ಲಿ ರಥದಸಂಬಂಧವು ಸ್ವಾಭಾವಿಕವೆಂದು ಉಪಪಾದನೆ ಮಾಡಿದ್ದಾರೆ.

**प्रकाशः** – तत्र भाष्योक्तं समाधिं संस्कारसूत्रावतरणपरटीकोक्तरीत्याऽऽक्षिप्य टीकोक्तमुपपादयति – **यद्यपीत्यादिना** ।।

ಈ ಸಂದರ್ಭದಲ್ಲಿ ಭಾಷ್ಯದಲ್ಲಿ ಹೇಳಿದ ಸಮಾಧಾನವನ್ನೇ ಹೇಳಿ, ಸಂಸ್ಕಾರಸೂತ್ರಕ್ಕೆ ಅವತಾರಿಕೆ ನೀಡುವ ಟೀಕಾಮಾತಿನ ಪ್ರಕಾರ ಆಕ್ಷೇಪ ಮಾಡುತ್ತಾ ಟೀಕೆಯಲ್ಲಿ ಹೇಳಿದ್ದನ್ನೇ ಉಪಪಾದನೆ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ.

**प्रकाशः – स्मृत्येति** ।। ''यत्र वेदो रथस्तत्र'' इति स्मृत्येत्यर्थः ।। **वेदाङ्गीकारादिति** ।। **तथैव प्रागुक्तेरिति** भावः । तथापीत्यभ्युपगमवादः । भाष्योक्तसमाधेरपि भाष्ये त्वित्यादिनोपपादयिष्यमाणत्वात् ।।

'ಸ್ಮೃತ್ಯಾ' ಎಂದರೆ 'ಯತ್ರ ವೇದೋ ರಥಸ್ತತ್ರ' ಎಂಬ ಸ್ಮೃತಿಯಿಂದ ಎಂದರ್ಥ. 'ವೇದಾಂಗಿಕಾರಾತ್' ಎಂದರೆ ಹಿಂದೆ ಪೂರ್ವಪಕ್ಷಿಯು ಶೂದ್ರನಲ್ಲಿಯೂ ವೇದಾಧಿಕಾರವನ್ನು ಒಪ್ಪಿರುತ್ತಾನೆ ಎಂದರ್ಥ. 'ತಥಾಪಿ' ಎಂಬುದರಿಂದ ಶೂದ್ರನಿಗೆ ವೇದಾಧಿಕಾರವನ್ನು ಒಪ್ಪಿದರೂ ಕೂಡ ಎಂಬುದಾಗಿ ಅಭ್ಯುಪಗಮವಾದವನ್ನು ಮಾಡಿರುತ್ತಾರೆ. ಹಾಗಾದರೆ ಭಾಷ್ಯದಲ್ಲಿ ಹೇಳಿದ ಸಮಾಧಾನಕ್ಕೆ ಏನರ್ಥ ? ಎಂದರೆ ಮುಂದೆ 'ಭಾಷ್ಯೇತು' ಇತ್ಯಾದಿ ವಾಕ್ಯದಿಂದ ಉಪಪಾದನೆ ಮಾಡುತ್ತೇವೆ.

**प्रकाशः – स्वाभाविकत्वादिति** ।। अयं च सूत्रे चैत्ररथेनेति सम्बन्धवाच्यण्प्रत्यय-प्रयोगसूचितस्समाधिः ।

ರಥದ ಸಂಬಂಧವು ಕ್ಷತ್ರಿಯನಿಗೆ ಸ್ವಾಭಾವಿಕವಾಗಿದೆಯೆಂದು ಸೂತ್ರದಲ್ಲಿ 'ಚೈತ್ರರಥೇನ' ಎಂಬಲ್ಲಿರುವ 'ಣ್ಯಣ್' ಪ್ರತ್ಯಯದಿಂದ ಸೂಚನೆ ಮಾಡಿದ್ದಾರೆ. 'ಚಿತ್ರರಥಸ್ಯ ಸಂಬಂಧಿ' ಚಿತ್ರರಥನಿಗೆ ಸಂಬಂಧಪಟ್ಟದ್ದು ಎಂಬುದಾಗಿ ಸಂಬಂಧವಾಚಿಯಾದ 'ಣ್ಯಣ್' ಪ್ರತ್ಯಯವನ್ನು ಪ್ರಯೋಗಮಾಡಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – ननु दुर्बलेन लिङ्गेन कथं श्रुतिबाधः ।** वैपरीत्यस्यैवौचित्यादित्याशङ्क्य निराह – **नचेति ।।** अस्वारस्यं आगन्तुकपरत्वम् ।।

ದುರ್ಬಲವಾದ ಲಿಂಗದಿಂದ ಶೂದ್ರನಲ್ಲಿ ರೂಢವಾದ ಶೂದ್ರಶ್ರುತಿಯನ್ನು ಹೇಗೆ ಬಾಧನೆ ಮಾಡುತ್ತೀರಿ? ಹೊರತಾಗಿ, ಶೂದ್ರಶ್ರುತಿಗೆ ಅನುಸಾರಿಯಾಗಿ ಲಿಂಗವನ್ನೇ ಬಾಧಿಸಬೇಕಲ್ಲವೇ? ಎಂಬ ಆಶಂಕೆಯನ್ನು 'ನಚ' ಎಂಬ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಅಸ್ವಾರಸ್ಯಂ' ಎಂದರೆ ಆಗಂತುಕಪರವಾಗುತ್ತದೆ ಎಂದರ್ಥ. ಅಂದರೆ ಶ್ರುತಿಗೆ ಅನುಸಾರಿಯಾಗಿ ರಥಸಂಬಂಧವೆಂಬ ಲಿಂಗವು ಆಗಂತುಕಪರವೆಂದು ಹೇಳಬಾರದು ಎಂದರ್ಥ.

**प्रकाशः – सम्बन्धेति ।।** "षष्ठी शेष" इति स्वस्वामिभावादौ षष्ठ्या विधाना त्सम्बन्धस्यागन्तुकत्वे श्रुतिबाधादित्यर्थः ।

ಶೂದ್ರಶಬ್ದವು ಶೂದ್ರನನ್ನು ಹೇಳುತ್ತದೆ ಎಂಬ ವಿಷಯದಲ್ಲಿ ಶ್ರುತಿಪ್ರಮಾಣವಿದೆ ಎನ್ನುತ್ತಿದ್ದೀರಿ. ಆದರೆ ನಾವೂ ಸಹ ಕ್ಷತ್ರಿಯನೆಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನೇ ಹೇಳುತ್ತಿದ್ದೇವೆ ಹೊರತು, ಲಿಂಗವನ್ನಲ್ಲ. ಯಾವರೀತಿಯಾಗಿ ನೀವು ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಿದರೆ ಅಸ್ವಾರಸ್ಯ ಬರುತ್ತದೆಂದು ಹೇಳುತ್ತಿದ್ದೀರೋ, ಅದರಂತೆ ನಾವೂ ಸಹ ಷಷ್ಠೀವಿಭಕ್ತಿಯು ರಥಸಂಬಂಧವನ್ನು ಬೋಧಿಸುತ್ತಿದೆ. ಈ ಅರ್ಥದಲ್ಲಿ ಶ್ರುತಿರೂಪವೇ ಆಗಿದೆ ಹೊರತು, ಲಿಂಗವಲ್ಲ. ಆಗಂತುಕ ರಥಸಂಬಂಧವೆಂದು ಇದಕ್ಕೆ ಅರ್ಥೈಸಿದರೆ ಷಷ್ಠೀಶ್ರುತಿಯೂ ಸಹ ಅಸ್ವರಸವೇ ಆಗುತ್ತದೆ. ಆದ್ದರಿಂದ ಕ್ಷತ್ರಿಯತ್ವದ ವಿಷಯದಲ್ಲಿ ಲಿಂಗರೂಪವಾದರೂ ರಥಸಂಬಂಧವೆಂಬ ಅರ್ಥದಲ್ಲಿ ಶ್ರುತಿರೂಪವೇ ಆಗಿದೆ. ಹಾಗಾಗಿ 'ಷಷ್ಠೀಶೇಷೇ' ಎಂಬ ಸೂತ್ರದಲ್ಲಿ ಸ್ವಸ್ವಾಮಿಭಾವಾದಿ ಸಂಬಂಧಾರ್ಥದಲ್ಲಿ ಮಾತ್ರ ಷಷ್ಠೀವಿಭಕ್ತಿಯನ್ನು ವಿಧಾನ ಮಾಡಿದ್ದರಿಂದ ಸಂಬಂಧವನ್ನು ಆಗಂತುಕವೆಂದು ಹೇಳಿದರೆ ಶ್ರುತಿಗೆ ಬಾಧವನ್ನು ಹೇಳಿದಂತಾಗುತ್ತದೆ.

**प्रकाशः –** ननूभयोश्श्रुतित्वाविशेषे निर्णयो न स्यात् । प्रत्युत शूद्रेति प्रातिपदिकश्रुत्या प्रबलया प्रत्ययश्रुतेरेवास्वारस्यं युक्तमित्यत आह – **वाक्येति ।।**

ಇಬ್ಬರು ಹೇಳುವಂತೆ ಶ್ರುತಿಯೇ ಆಗಿರಬಹುದು. ಆದರೆ ಶ್ರುತಿತ್ವವು ಇಬ್ಬರಿಗೂ ಸಮಾನವಾದ್ದರಿಂದ, ನಿರ್ಣಯವಾಗುವುದಿಲ್ಲವೆಂದು ಶಂಕಿಸಬಾರದು. ಏಕೆಂದರೆ ಪ್ರತ್ಯಯಶ್ರುತಿಗಿಂತಲೂ ಪ್ರಾತಿಪದಿಕಶ್ರುತಿಯು ಪ್ರಬಲವಾಗಿರುತ್ತದೆ. ಪ್ರಕೃತ ನೀವು ಷಷ್ಠೀಪ್ರತ್ಯಯ ಶ್ರುತಿಗೆ ಅಸ್ವಾರಸ್ಯವನ್ನು ಕಲ್ಪಿಸಬೇಕಾಗುತ್ತದೆ. ನಾವು ಪ್ರಾತಿಪದಿಕಶ್ರುತಿಗೆ ಅಸ್ವಾರಸ್ಯವನ್ನು ಕಲ್ಪಿಸಬೇಕಾಗುತ್ತದೆ. ಆದರೆ ಪ್ರಾತಿಪದಿಕವು ಪ್ರಬಲವಾದ್ದರಿಂದ ಪ್ರತ್ಯಯಶ್ರುತಿಗೆ ಅಸ್ವಾರಸ್ಯವನ್ನು ಕಲ್ಪನೆಮಾಡಿದರೂ ಪರವಾಗಿಲ್ಲ. ಪ್ರಾತಿಪದಿಕಶ್ರುತಿಗೆ ಅಸ್ವಾರಸ್ಯವನ್ನು ಕಲ್ಪನೆ ಮಾಡಬಾರದಲ್ಲವೇ? ಎಂಬ ಪ್ರಶ್ನೆಗೆ 'ವಾಕ್ಯೇ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः –** "कम्वर एनमेतत्सन्तं स युग्वानं रैकमिवात्थ" इति हंसकृतानादरश्रवणेन तस्य शोकोत्पत्तेः "सहसञ्जिहान एव क्षत्तारमुवाच" इति

शयनादुत्थानानन्तरमेव रैक्वान्वेषणवचनलिङ्गेनावगमात्तेन च मुनिं प्रत्याद्रवणाच्छुचाद्रवणरूपो योगः क्लृप्त इत्यर्थः । विहायेत्यस्य तद्विरुद्धरूढिग्रहणायोगाच्चेत्यन्वयः । एतच्चाद्यसूत्रभाष्यादितात्पर्यकथनम् ।

'ಕಮ್ವರ ಏನಮೇತತ್ ಸಂತಂ ಸ ಯುಗ್ವಾನಂ ರೈಕ್ವಮಿವಾತ್ಥ' 'ಎತ್ತಿನ ಬಂಡಿಯ ಕೆಳಗಡೆ ಕುಳಿತಿರುವ ರೈಕ್ವನಷ್ಟು ಬ್ರಹ್ಮವರ್ಚಸ್ಸು ಇವನಲ್ಲಿದೆಯೇನು? ಎಂಬುದಾಗಿ ಹಂಸವು ಮಾಡಿದ ಅನಾದರವನ್ನು ರಾಜನಾದ ಪೌತ್ರಾಯಣನು ಕೇಳುತ್ತಾನೆ. ಇದರಿಂದ ಅವನಿಗೆ ದುಃಖವಾಗುತ್ತದೆ. ದುಃಖವಾಗಿದೆಯೆಂದು ಮುಂದಿನವಾಕ್ಯದಿಂದ ಸ್ಪಷ್ಟವಾಗುತ್ತದೆ. 'ಸಹಸಿಂಜಿಹಾನ ಏವ ಕ್ಷತ್ತಾರಮುವಾಚ' ಎದ್ದ ಕೂಡಲೇ ಸಾರಥಿಯನ್ನು ಕರೆದು ರೈಕ್ವನನ್ನು ಹುಡುಕಲು ಆದೇಶ ಮಾಡುತ್ತಾನೆ. ಈ ರೈಕ್ವಾನ್ವೇಷಣವಚನವೆಂಬ ಲಿಂಗದಿಂದ ದುಃಖವುಂಟಾಗಿದೆಯೆಂದು ತಿಳಿಯುತ್ತದೆ. ಅನಂತರ ದುಃಖದಿಂದ ರೈಕ್ವಮುನಿಯ ಬಳಿ ಹೋಗುತ್ತಾನೆ. ಆ ಕಾರಣದಿಂದ 'ಶುಚಾದ್ರವಣಂ' ಎಂಬ ಯೋಗಾರ್ಥವು ಪ್ರಮಿತವೆಂದಂತಾಯಿತು. ವಿಹಾಯೇ' ಎಂಬುದಕ್ಕೆ 'ತದ್ವಿರುದ್ಧರೂಢಿಗ್ರಹಣಾಯೋಗಾಚ್ಚ' ಎಂಬಲ್ಲಿ ಅನ್ವಯ ಮಾಡಬೇಕು. ಇದು ಪ್ರಥಮಸೂತ್ರಭಾಷ್ಯದ ತಾತ್ಪರ್ಯವಾಗಿದೆ.

**प्रकाशः –** ननु मुनिना सर्वज्ञेन तदीयं शुचा द्रवणं विज्ञाय तदभिप्रायेणैव शूद्रेति सम्बोधितः पौत्रायण इत्यत्र न किञ्चित्कल्पकम् । येन तथा जानीम इत्यत आह – **जानश्रुतिरिति** ।।

ಸರ್ವಜ್ಞನಾದ ಮುನಿಯಿಂದ ಬಂದಿರುವಂತಹ ಪೌತ್ರಾಯಣನು ದುಃಖದಿಂದ ಓಡಿಬಂದಿದ್ದಾನೆಂದು ತಿಳಿದು 'ಶೂದ್ರ' ಎಂದು ಸಂಬೋಧನೆ ಮಾಡಿದ್ದಾನೆಂದು ಹೇಳಬೇಕು. ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದಾಗಲೀ, ದುಃಖದಿಂದ ಓಡಿಬಂದಿದ್ದಾನೆಂಬುದಾಗಲೀ, ಮುನಿಗಳಿಗೆ ತಿಳಿದಿರುತ್ತದೆಂಬುದನ್ನು ಕಲ್ಪಿಸಲು ಏನೂ ಆಧಾರವಿಲ್ಲ. ಹಾಗೇ ಆಧಾರವಿದ್ದಲ್ಲಿ, ನೀವು ಹೇಳಿದ್ದನ್ನು ಒಪ್ಪಬೇಹುದಿತ್ತು ? ಎಂಬ ಪ್ರಶ್ನೆಗೆ 'ಜಾನಶ್ರುತಿಃ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः – आवसथान्** आवासस्थानानि । सर्वत आगत्य मेऽन्नमत्स्यन्तीति बुद्ध्या कारयामासेत्यर्थः । **यस्मिन्नास्से** वर्तसे । आस उपवेशन इत्यस्य मध्यमपुरुषैकवचनम् । अयं ग्रामः तुभ्यं दीयत इत्यर्थः ।

'ಆವಸಥಾನ್' ಎಂದರೆ ಆವಾಸಸ್ಥಾನಗಳು ಎಂದರ್ಥ. ಎಲ್ಲಾ ಕಡೆಯಿಂದ ಬಂದು, ನಾನು ನೀಡುವಂತಹ ಅನ್ನವನ್ನು ತಿನ್ನುತ್ತಾರೆ ಎಂದು ಹೇಳಿದ್ದರಿಂದ ರಾಜನೆಂದು ತಿಳಿಯುತ್ತದೆ. 'ಯಸ್ಮಿನ್ನಾಸ್ಸೇ' ಯಾವಸ್ಥಳದಲ್ಲಿ ವಾಸಮಾಡುತ್ತಿದ್ದೀರೋ ಎಂದರ್ಥ. 'ಆಸ ಉಪವೇಶನೇ' ಎಂಬ ಧಾತುವಿನ ಮಧ್ಯಮಪುರುಷ ಏಕವಚನದಲ್ಲಿ 'ಆಸ್ಸೇ' ಎಂದಾಗುತ್ತದೆ. ನೀವು ವಾಸಮಾಡುತ್ತಿರುವ ಗ್ರಾಮವನ್ನು ನಿಮಗೆ ದಾನ ನೀಡುತ್ತೇನೆ ಎಂದರ್ಥ.

**प्रकाशः –** ''मुनिनोदितः । प्राणविद्यामवाप्यास्मात्परं धर्ममवाप्तवान्'' इति छान्दोग्यभाष्योदाहृतस्मृत्येत्यर्थः । स्वाभाविकेन रथेनैव साक्षात्क्षत्रियत्वावगमो न वेदद्वारेत्युक्तम् । तत्र सौत्रं ज्ञापकमाह – **अत एवेति** ।।

'ರಾಜಾಪೌತ್ರಾಯಣಃ ಶೋಕಾತ್ ಶೂದ್ರೇತಿ ಮುನಿನೋದಿತಃ।
ಪ್ರಾಣವಿದ್ಯಾಮವಾಪ್ಯಸ್ಮಾತ್ ಪರಂ ಧರ್ಮಮವಾಪ್ತವಾನ್ ॥'

ಎಂಬುದು ಛಾಂದೋಗ್ಯಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿ. ಈ ಸ್ಮೃತಿಯಿಂದ ಕ್ಷತ್ರಿಯತ್ವವು ಸ್ಪಷ್ಟವಾಗಿ ತಿಳಿಯುತ್ತದೆ.

ಸ್ವಾಭಾವಿಕವಾದ ರಥದ ಸಂಬಂಧದಿಂದಲೇ ನೇರವಾಗಿ ಕ್ಷತ್ರಿಯತ್ವವು ತಿಳಿಯುತ್ತಿರುವಾಗ ವೇದದ ಮೂಲಕವಾಗಿ ಕ್ಷತ್ರಿಯತ್ವವನ್ನು ಸಾಧಿಸಬೇಕಾಗಿಲ್ಲ ಎಂದು ಹೇಳಿದರು. ಈ ವಿಷಯದಲ್ಲಿ ಸೂತ್ರವೇ ಜ್ಞಾಪಕವಾಗಿದೆಯೆಂದು 'ಅತ ಏವ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः –** इत्येवोक्तं नतु लिङ्गात् वेदानुमानद्वारा क्षत्रियत्वावगतेरित्युक्त-मित्यर्थः।

ಸೂತ್ರದಲ್ಲಿ 'ಕ್ಷತ್ರಿಯತ್ವಾವಗತೇಃ' ಎಂದೇ ಹೇಳಿದ್ದಾರೆ. ಹೊರತು, 'ಲಿಂಗಾತ್ ವೇದಾನುಮಾನದ್ವಾರಾ ಕ್ಷತ್ರಿಯತ್ವಾವಗತೇಃ' ಎಂದು ಹೇಳಿರುವುದಿಲ್ಲ. ಆದ್ದರಿಂದ ನೇರವಾಗಿಯೇ ಕ್ಷತ್ರಿಯತ್ವವನ್ನು ಸ್ವಾಭಾವಿಕವಾದ ರಥಸಂಬಂಧದಿಂದ ಸಾಧಿಸಬಹುದು. ವೇದಾನುಮಾನದ ಮೂಲಕವಾಗಿ ಸಾಧಿಸಬೇಕಾಗಿಲ್ಲ.

**प्रकाशः –** यद्वा न त्वशूद्रत्वावगतेरित्युक्तमित्येवकारार्थः । पारंपर्याश्रयणे हि तथा निर्देशस्स्यादिति भावः ।

'ಪೌತ್ರಾಯಣಃ ವೇದಾಧಿಕಾರವಾನ್ ರಥಸಂಬಂಧವತ್ವಾತ್' ಎಂದು ಮೊದಲು ಸಾಧಿಸಿ, ಅನಂತರ 'ಪೌತ್ರಾಯಣಃ ನ ಶೂದ್ರಃ ವೇದಾಧಿಕಾರವತ್ವಾತ್' ಎಂದು ಅನಂತರ ಸಾಧಿಸಬೇಕು. ಎರಡನೆಯ ಅನುಮಾನದಲ್ಲಿ 'ಪೌತ್ರಾಯಣಃ ಕ್ಷತ್ರಿಯಃ ವೇದಾಧಿಕಾರವತ್ವಾತ್' ಎಂದು ಸಾಧಿಸಲಾಗದು. ಏಕೆಂದರೆ ವೇದದ ಸಂಬಂಧವು ವೈಶ್ಯ, ಬ್ರಾಹ್ಮಣರಲ್ಲಿಯೂ ಇರುವುದರಿಂದ ವೇದಸಂಬಂಧವಿದ್ದ ಮಾತ್ರಕ್ಕೆ ಕ್ಷತ್ರಿಯನೆಂದು ನಿರ್ಣಯಿಸಲಾಗದು. ಆದ್ದರಿಂದ ತ್ರೈವರ್ಣಿಕರೆಂದಷ್ಟೇ ಅನುಮಾನ ಮಾಡಬಹುದು, ಅಥವಾ ಶೂದ್ರನಲ್ಲವೆಂದಷ್ಟೇ ಅನುಮಾನ ಮಾಡಬಹುದು. ನಾವು ಹೇಳುವಂತೆ 'ಪೌತ್ರಾಯಣಃ ಕ್ಷತ್ರಿಯಃ ಸ್ವಾಭಾವಿಕರಥಸಂಬಂಧವತ್ವಾತ್' ಎಂದು ನೇರವಾಗಿ ಕ್ಷತ್ರಿಯತ್ವವನ್ನು ಅನುಮಾನ ಮಾಡಬಹುದು. ಸೂತ್ರಕಾರರು 'ಕ್ಷತ್ರಿಯತ್ವಾವಗತೇಃ' ಎಂದು ಹೇಳಿದ್ದರಿಂದ ಸಾಕ್ಷಾದನುಮಾನವೇ ಅಭಿಪ್ರೇತವೆಂದು ಸ್ಪಷ್ಟವಾಗುತ್ತದೆ.

**प्रकाशः – एवं सति भाष्ये पारम्पर्याश्रयणं किमर्थमाश्रितम् । कथमुपपद्येत च। शूद्रेऽपि वेदाभ्युपगमात् । त्रैवर्णिकमात्रचिह्नेन रथेन त्रैवर्णिकविशेषक्षत्रियत्वावगमा-योगाच्चेत्यतोऽभिप्रायं द्वेधा व्यनक्ति – भाष्ये त्विति ।।**

ರಥದಿಂದ ವೇದಸಂಬಂಧವನ್ನು ಅನುಮಾನ ಮಾಡಿದರೆ, ಸಿದ್ಧಸಾಧನತಾದೋಷವು ಬರುತ್ತದೆ. ವೇದವಿರುವುದರಿಂದ ಪೌತ್ರಾಯಣನು ಶೂದ್ರನಲ್ಲವೆಂದು ಸಾಧನೆ ಮಾಡಿದರೆ, ವ್ಯಭಿಚಾರದೋಷವು ಬರುತ್ತದೆ. ಏಕೆಂದರೆ ಶೂದ್ರನಲ್ಲಿಯೇ ವೇದಾಧಿಕಾರವನ್ನು ಒಪ್ಪಲಾಗಿದೆ. ಮತ್ತು ರಥವು ಸ್ವಾಭಾವಿಕ ಸಂಬಂಧವನ್ನು ಹೊಂದಿದೆಯೆಂದು ಹೇಳದಿದ್ದರೆ, ರಥದ ಸಂಬಂಧಸಾಮಾನ್ಯವನ್ನು ಹೇಳಿದಂತಾಗುತ್ತದೆ. ಆವಾಗ ತ್ರೈವರ್ಣಿಕರಿಗೂ ರಥದ ಸಂಬಂಧವಿರುವ ಪ್ರಯುಕ್ತ ತ್ರೈವರ್ಣಿಕರಲ್ಲಿ ಒಬ್ಬನಾಗಿದ್ದಾನೆಂದಷ್ಟೇ ಅನುಮಾನದಿಂದ ಸಾಧಿಸಬಹುದು ಹೊರತು, ಕ್ಷತ್ರಿಯತ್ವವನ್ನು ಸಾಧಿಸಲಾಗದು. ಆವಾಗ ಸೂತ್ರದಲ್ಲಿರುವ 'ಕ್ಷತ್ರಿಯತ್ವಾವಗತೇಃ' ಎಂಬ ವಚನವೂ ಕೂಡ ತಪ್ಪಾಗುತ್ತದೆ. ಈ ಪ್ರಶ್ನೆಯು ಪ್ರಾಪ್ತವಾದರೆ, ಭಾಷ್ಯದ ಅಭಿಪ್ರಾಯವನ್ನು ಎರಡು ಬಗೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಭಾಷ್ಯೇ ತು' ಇತ್ಯಾದಿ ಗ್ರಂಥದಿಂದ.

**प्रकाशः – उत्तरसूत्रेति ।। व्यक्तमेतदनुपदमेवेति भावः ।। अशूद्रत्वेति ।। एतेनास्मिन्पक्षे भाष्यादौ क्षत्रियत्वपदमशूद्रत्वपरमिति सूचितम् ।**

'ಸಂಸ್ಕಾರಪರಾಮರ್ಶಾತ್' ಎಂಬ ಉತ್ತರಸೂತ್ರದ ಪ್ರಕಾರ ವೇದವು ಶೂದ್ರನಲ್ಲಿ ಯುಕ್ತವಾಗುವುದಿಲ್ಲವೆಂದು ಹೇಳಿದ್ದಾರೆ. ಇದನ್ನು ಮುಂದೆ ಸ್ಪಷ್ಟಪಡಿಸುತ್ತೇವೆ. 'ಅಶೂದ್ರತ್ವಸಿದ್ಧಿಃ ಉಕ್ತಾ' ಎಂದು ಹೇಳಿದ್ದರಿಂದ ಭಾಷ್ಯದಲ್ಲಿ ಕ್ಷತ್ರಿಯತ್ವಪದವು ಅಶೂದ್ರಪರವೆಂದು ಸೂಚಿಸಿದಂತಾಯಿತು. ಆದ್ದರಿಂದ ಈ ಪಕ್ಷದಲ್ಲಿ 'ಅಶೂದ್ರತ್ವಾವಗತೇಃ' ಎಂದು ತಿಳಿದುಕೊಳ್ಳಬೇಕು.

**प्रकाशः – अत एव टीकायां "नन्वेवं वैदिकमात्रे विद्यमानं रथित्वं कथं क्षत्रियत्वे लिङ्गम्" इत्याक्षिप्य रथस्य क्षत्रिये स्वाभाविकत्वेनैव समाधानमुक्तमिति भावः ।**

ಪರಂಪರಾಪಕ್ಷದಲ್ಲಿ ಕೇವಲ ಶೂದ್ರತ್ವಾಭಾವವು ತಿಳಿಯುತ್ತದೆ. ಸ್ವಾಭಾವಿಕವಾದ ರಥಸಂಬಂಧವೆಂಬ ಸಾಕ್ಷಾತ್ ಪಕ್ಷದಲ್ಲಿ ಕ್ಷತ್ರಿಯತ್ವವು ವಿಶಿಷ್ಯವಾಗಿ ತಿಳಿಯುತ್ತದೆ. ಆದ್ದರಿಂದಲೇ ಟೀಕೆಯಲ್ಲಿ 'ನನ್ವೇವಂ ವೈದಿಕಮಾತ್ರೇ ವಿದ್ಯಮಾನಂ ರಥಿತ್ವಂ ಕಥಂ ಕ್ಷತ್ರಿಯತ್ವೇ ಲಿಂಗಮ್' ತ್ರೈವರ್ಣಿಕರಲ್ಲೂ ಸಮಾನವಾಗಿರುವ ರಥಿತ್ವವು ಕ್ಷತ್ರಿಯತ್ವವಿಷಯದಲ್ಲಿ ಹೇಗೆ ಲಿಂಗವಾಗುತ್ತದೆ ಎಂದು ಮೊದಲು ಪರಂಪರಾಪಕ್ಷವನ್ನು ಸಮರ್ಥಿಸಿ, ಅನಂತರ ರಥದ ಸಂಬಂಧವು ಕ್ಷತ್ರಿಯನಲ್ಲಿ ಸ್ವಾಭಾವಿಕವಾಗಿದೆಯೆಂಬ ಸಾಕ್ಷಾತ್‌ಪಕ್ಷವನ್ನು ಅನಂತರ ಹೇಳಿ ಸಮಾಧಾನವನ್ನು ಮಾಡಿರುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः** – नन्वेवं सूत्रादावशूद्रत्वावगतेरित्येव वाच्यम् । लाघवादिति चेन्न । वस्तुतस्तस्य क्षत्रियत्वेन तदभिप्रायात् । स्वाभाविकरथस्वीकारपक्षे तथैव वक्तव्यत्वाच्चेति ध्येयम् ॥

ಹಾಗಾದರೆ ಸೂತ್ರದಲ್ಲಿ 'ಅಶೂದ್ರತ್ವಾವಗತೇಃ' ಎಂದು ಹೇಳಬಹುದಿತ್ತು. ಹೀಗೆ ಹೇಳುವುದರಿಂದ ಸೂತ್ರವು ಲಘುಭೂತವಾಗುತ್ತಿತ್ತಲ್ಲವೇ? ಎಂಗು ಪ್ರಶ್ನಿಸಬಾರದು. ವಸ್ತುತಃ ಪೌತ್ರಾಯಣನು ಕ್ಷತ್ರಿಯನೆಂದು ಹೇಳಬೇಕಾಗಿದೆ. ಸ್ವಾಭಾವಿಕವಾದ ರಥಸಂಬಂಧವು ಕ್ಷತ್ರಿಯನಲ್ಲಿ ಮಾತ್ರ ಇರುವ ಕಾರಣ 'ಕ್ಷತ್ರಿಯತ್ವಾವಗತೇಃ' ಎಂದು ಸೂತ್ರದಲ್ಲಿ ಹೇಳಿದ್ದೇ ಸಮಂಜವಾಗಿದೆಯೆಂದು ತಿಳಿಯಬೇಕು.

**प्रकाशः** – **इति शङ्कानिरासायेति ॥** विद्यामात्रेऽधिकाराभावेऽपि तद्विशेषसंवर्ग-विद्यायामधिकारोऽस्त्वित्याशङ्कायां शूद्रे वेदाभावेन तद्व्याप्यरथोऽपि नेति नायं संवर्गविद्यायामधिकारीति वक्तुं वेदव्याप्यतोक्ता भाष्य इत्यर्थः ।

'ಇತಿ ಶಂಕಾನಿರಾಸಾಯ' ಎಂದು ಗ್ರಂಥದಲ್ಲಿ ಹೇಳಿದ್ದಾರೆ - ಇದರ ಅಭಿಪ್ರಾಯ ಹೀಗಿದೆ - ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ ಬ್ರಹ್ಮವಿದ್ಯೆಯ ವಿಶೇಷವಾದ ಸಂವರ್ಗವಿದ್ಯೆಯಲ್ಲಿ ಶೂದ್ರನಿಗೂ ಅಧಿಕಾರವನ್ನು ಹೇಳಬಹುದಲ್ಲವೇ? ಎಂಬ ಆಶಂಕೆಗೆ ಶೂದ್ರನಿಗೆ ವೇದವೇ ಇಲ್ಲದ ಕಾರಣ ತದ್ವ್ಯಾಪ್ಯವಾದ ರಥವೂ ಕೂಡ ಇರುವುದಿಲ್ಲ. ಆದ್ದರಿಂದಲೇ ಶೂದ್ರನು ಸಂವರ್ಗವಿದ್ಯೆಗೆ ಅಧಿಕಾರಿಯೂ ಆಗುವುದಿಲ್ಲ ಎಂದು ಹೇಳುವುದಕ್ಕಾಗಿ ವೇದವ್ಯಾಪ್ಯತ್ವಪಕ್ಷವನ್ನು ಭಾಷ್ಯದಲ್ಲಿ ಹೇಳಿರುತ್ತಾರೆ.

**प्रकाशः** – ननु शूद्रे स्वाभाविकस्यागन्तुकस्य वा रथस्यायोगेन नायं शूद्रशब्दो रूढ इति यदुक्तं तदयुक्तम् । "अपलायनं हि शूद्रस्य विप्रक्षत्रार्थमिष्यत" इत्यष्टादशाध्याय गीतातात्पर्योक्तस्मृत्या शूद्रस्यापि युद्धप्रतीत्या रथवत्त्वसिद्धेरित्यत आह – **विप्रेति ॥**

ಶೂದ್ರನಿಗೆ ಸ್ವಾಭಾವಿಕವಾದ ರಥಸಂಬಂಧವಾಗಲೀ, ಆಗಂತುಕವಾದ ರಥಸಂಬಂಧವಾಗಲೀ ಯುಕ್ತವಾಗುವುದಿಲ್ಲ. ಆದ್ದರಿಂದ ಈ ಶೂದ್ರಶಬ್ದವು ರೂಢವಲ್ಲ ಎಂದು ಹೇಳಿದ್ದು ತಪ್ಪು. ಏಕೆಂದರೆ 'ಅಪಲಾಯನಂ ಹಿ ಶೂದ್ರಸ್ಯ ವಿಪ್ರಕ್ಷತ್ರಾರ್ಥಮಿಷ್ಯತೇ' ಎಂಬ ಎಂಟನೆಯ ಅಧ್ಯಾಯದ ಗೀತಾತಾತ್ಪರ್ಯದಲ್ಲಿ ಉದಾಹರಿಸಿದ ಸ್ಮೃತಿಯ ಪ್ರಕಾರ ಶೂದ್ರನೂ ಕೂಡ ಯುದ್ಧಮಾಡುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ರಥದಸಂಬಂಧವು ಶೂದ್ರನಿಗೂ ಕೂಡ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ವಿಪ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – "नच वाच्यं पौत्रायणेन दीयमान" इत्यादिटीकां विवृण्वन् लिङ्गस्यान्यथासिद्धिमाशंक्य निरवकाशतामाह ॥ नचेति ॥

'ನಚ ವಾಚ್ಯಂ ಪೌತ್ರಾಯಣೇನ ದೀಯಮಾನ' ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ ಲಿಂಗಕ್ಕೆ ಅನ್ಯಥಾಸಿದ್ಧಿಯನ್ನು ಆಶಂಕಿಸಿ ನಿರವಕಾಶತ್ವವನ್ನು 'ನಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः – एवं पूर्वार्धविवरणमुखेन टीकाभाष्यार्थं प्रपञ्च्य ''रथकारे''त्युत्तरार्धं व्यनक्ति – रथकारेति ।।**

ಹೀಗೆ ಶ್ಲೋಕದ ಪೂರ್ವಾರ್ಧವನ್ನು ವಿವರಿಸುವವರಾಗಿ ಟೀಕೆ ಹಾಗೂ ಭಾಷ್ಯಗಳ ಅರ್ಥಗಳನ್ನೂ ಸಹ ಸ್ಪಷ್ಟಪಡಿಸಿ 'ರಥಕಾರಾದಿ ಶಬ್ದೇ' ಇತ್ಯಾದಿಯಾದ ಶ್ಲೋಕದ ಉತ್ತರಾರ್ಧವನ್ನು 'ರಥಕಾರಾದಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸಿದ್ದಾರೆ.

**गुरुराजीयम् – हारेत्वातवैवेति ।।** तथा च लिङ्गस्य निरवकाशत्वान्न श्रुतिस्वारस्यार्थं लिङ्गास्वारस्यमित्यर्थः – **अत एवेति ।।** साक्षाद्रथेनैव क्षत्रियत्वसिद्धेः संमतत्वादेवेत्यर्थः । तर्हि भाष्ये मध्ये वेदोक्तिरयुक्तेत्यत आह – **भाष्ये त्विति ।।** अनेन संस्कारपरामर्शादित्युत्तरसूत्रसहितस्यैव क्षत्रियत्वावगतेश्चेत्यस्य सूत्रस्य पौत्रायणस्य क्षत्रियत्वसाधकत्वं न केवलस्येति प्राप्तम् । अतः पक्षान्तरमाह – **यद्वेति ।। दानायोगादिति ।।** स्वस्वत्वपरित्यागेन परस्वत्वापादनस्यैव दानशब्दार्थत्वादिति भावः । नार्थवादमात्रस्य स्वार्थे तात्पर्याभावः । किन्तु विधिसन्निहितस्यैव ।




'ಅಹಹಾರೇತ್ವಶೂದ್ರ' ಎಂಬ ಸಂವರ್ಗ ಪ್ರಕರಣದಲ್ಲಿ ಬರುವಂತಹ 'ಶೂದ್ರ' ಶಬ್ದಕ್ಕೆ ಶೂದ್ರಜಾತಿಯವನು ಎಂಬರ್ಥವೇ ಅಲ್ಲ. ಹಾಗಾಗಿದ್ದಲ್ಲಿ, ಶೂದ್ರನಿಗೂ ವೇದಾಧಿಕಾರವನ್ನು ಊಹಿಸಬಹುದಿತ್ತು. ಹೊರತಾಗಿ ದುಃಖದಿಂದ ಓಡಿಬಂದವನು ಎಂಬ ಕಾರಣದಿಂದ ಪೌತ್ರಾಯಣನನ್ನು ಕುರಿತು, ಮುನಿಗಳಾದ ರೈಕ್ವರು 'ಎಲೈ ! ಶೂದ್ರನೇ' ಎಂದು ಸಂಬೋಧನೆ ಮಾಡಿದ್ದಾರೆ. 'ಶೂದ್ರ' ಎಂದು ಸಂಬೋಧನೆ ಮಾಡಿದ ಮಾತ್ರಕ್ಕೆ ಶೂದ್ರಜಾತಿಯವನೇ ಆಗಿರಬೇಕೆಂದೇನು ನಿಯಮವಿಲ್ಲ.

'ಶೂದ್ರ' ಶಬ್ದಕ್ಕೆ ಶೂದ್ರಜಾತಿಯೆಂಬ ರೂಢ್ಯರ್ಥವನ್ನು ವಿವಕ್ಷಿಸಬೇಕು. ಏಕೆಂದರೆ ಯೋಗಕ್ಕಿಂತಲೂ ರೂಢಿಯು ಪ್ರಬಲವಾಗಿರುತ್ತದೆಂದು ಹಿಂದೆ ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದನು. ಇದು ಸರಿಯಲ್ಲ. ಬಾಧಕವಿಲ್ಲದಿದ್ದಾಗ ಮಾತ್ರ ರೂಢ್ಯರ್ಥವನ್ನು ಸ್ವೀಕರಿಸಬೇಕು. ಆದ್ದರಿಂದಲೇ ಪೂರ್ವಮೀಮಾಂಸೆಯಲ್ಲಿ 'ರಥಕಾರ'

ಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಲಾಗಿದೆ. ಆದರೆ ಪ್ರಕೃತ ರೂಢ್ಯರ್ಥವನ್ನು ಸ್ವೀಕರಿಸಲು ರಥ ಸಂಬಂಧ ಮೊದಲಾದ ಬಾಧಕಗಳು ಇರುತ್ತವೆ. ಹಾಗಾಗಿ ಅನಿವಾರ್ಯವಾಗಿ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನೇ ಸ್ವೀಕರಿಸುವುದು ಉಚಿತ.

ಮತ್ತು 'ಹಾರೇತ್ವಾ ತವೈವ' ಎಂಬ ಶ್ರುತಿಯು ಕ್ಷತ್ರಿಯತ್ವವನ್ನು ಸಾಧಿಸುವ ವಿಷಯದಲ್ಲಿ ಲಿಂಗರೂಪವಾಗಿದೆ. ಆದರೆ ರಥಸಂಬಂಧ ಎಂಬರ್ಥದಲ್ಲಿ ಶ್ರುತಿರೂಪಪ್ರಮಾಣವೇ ಆಗಿದೆ. ಹಾಗಾಗಿ ಶೂದ್ರಶಬ್ದವು ಮಾತ್ರ ಶೂದ್ರಜಾತಿಯೆಂಬರ್ಥದಲ್ಲಿ ಶ್ರುತಿರೂಪವಾದ ಪ್ರಮಾಣವಾಗಿದೆಯೆಂದು ವಾದಿಸಲು ಪೂರ್ವಪಕ್ಷಿಗೆ ಸಾಧ್ಯವಿಲ್ಲ. ಮತ್ತು 'ಹಾರೇತ್ವಾ ತವೈವ' ಎಂಬ ಶ್ರುತಿಯ ಹಿಂದಿನ-ಮುಂದಿನ ಪ್ರಕರಣಗಳನ್ನು ಗಮನಿಸಿದಾಗ ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದು ಸ್ಪಷ್ಟವಾಗುತ್ತದೆ. ರೈಕ್ವಮುನಿಗಳು ವಾಸ ಮಾಡುವ ಗ್ರಾಮವನ್ನೇ ದಾನ ಮಾಡುತ್ತೇನೆಂದು ಪೌತ್ರಾಯಣನು ಹೇಳುತ್ತಾನೆ. ಬರುವವರಿಗೆಲ್ಲಾ ಅನ್ನದಾನವನ್ನು ಮಾಡುತ್ತೇನೆಂದೆಲ್ಲಾ ಪೌತ್ರಾಯಣನು ರೈಕ್ವಮುನಿಗಳ ಬಳಿ ವಿನಂತಿಸಿದ್ದಾನೆ. ಇವುಗಳನ್ನು ಗಮನಿಸಿದಾಗ ಶೂದ್ರನಾಗಲು ಸಾಧ್ಯವೇ ಇರುವುದಿಲ್ಲ.

ಬೇಡಜಾತಿಯವನಿಗೆ ವೇದಾಧಿಕಾರವಿಲ್ಲದಿದ್ದರೂ 'ಸ್ಥಪತೀಷ್ಟಿ' ಎಂಬ ಯಾಗವಿಶೇಷದಲ್ಲಿ ಮಾತ್ರ ಅಧಿಕಾರವನ್ನು ಹೇಳುವಂತೆ ಪೌತ್ರಾಯಣನು ಶೂದ್ರನಾದ್ದರಿಂದ ಸಮಗ್ರ ವೇದಾಧ್ಯಯನದಲ್ಲಿ ಅಧಿಕಾರವಿಲ್ಲದಿದ್ದರೂ ಸಂವರ್ಗಪ್ರಕರಣದಲ್ಲಿ ಮಾತ್ರ ಅಧಿಕಾರವನ್ನು ಹೇಳಬಹುದಲ್ಲವೇ? ಎಂದು ಪೂರ್ವಪಕ್ಷಿಯು ಆಶಂಕಿಸಬಹುದು. ಆದರೆ ಯಾವುದೇ ವೇದವಿದ್ಯೆಯನ್ನು ಓದಬೇಕಾದರೂ ರಥಸಂಬಂಧವು ಇರಲೇಬೇಕು. ರಥಸಂಬಂಧವಿರುವವನಿಗೆ ಮಾತ್ರ ವೇದಾಧಿಕಾರವನ್ನು ಶ್ರುತಿಯು ಹೇಳಿದೆ. ಪ್ರಕೃತ ಪೌತ್ರಾಯಣನಿಗೆ ರಥದ ಸಂಬಂಧವಿರುವ ಪ್ರಯುಕ್ತ ವೇದಾಧಿಕಾರವಿರುವುದು ನಿಶ್ಚಿತವಾಗಿದೆ. ವೇದಾಧಿಕಾರವು ಯಾರಿಗೆ ಇರುತ್ತದೋ, ಅವರಿಗೆ ಮಾತ್ರ ರಥದಲ್ಲಿ ಕುಳಿತುಕೊಳ್ಳುವ ಅರ್ಹತೆಯಿರುತ್ತದೆ. ಆದ್ದರಿಂದಲೇ ಒಂದು ವೇಳೆ ಶೂದ್ರಾದಿಗಳು ಯುದ್ಧದಲ್ಲಿ ಪಾಲ್ಗೊಂಡರೂ ಅವರು ಕೇವಲ ಕಾಲಾಳುಗಳಾಗಿ ಯುದ್ಧ ಮಾಡಬೇಕೇ ಹೊರತು, ರಥಾರೂಢರಾಗಲು ಅವರಿಗೆ ಅಧಿಕಾರವನ್ನು ನೀಡಿರುವುದಿಲ್ಲ. ಪ್ರಕೃತ ರಥಾರೂಢನಾಗಿ ಬಂದಿರುವಂತಹ ಪೌತ್ರಾಯಣನು ವೇದಾಧಿಕಾರವನ್ನು ಹೊಂದಿರುವಂತಹ ಕ್ಷತ್ರಿಯನೇ ಆಗಿದ್ದಾನೆಂದು ಇದರಿಂದ ಸ್ಪಷ್ಟವಾಗುತ್ತದೆ. ಮತ್ತೊಬ್ಬರ ರಥದಲ್ಲಿ ಕುಳಿತುಕೊಂಡು ಬಂದಿದ್ದಾನೆಂದೂ ಸಹ ಹೇಳಬಾರದು. ಮುಂದೆ ಅವುಗಳೆಲ್ಲವನ್ನು ದಾನ ಮಾಡುತ್ತಾನೆ. ತನ್ನ ಪ್ರಭುತ್ವವಿಲ್ಲದ ವಸ್ತುಗಳನ್ನು ದಾನ ಮಾಡಲು ಹೇಗೆ ಸಾಧ್ಯ ? ರೈಕ್ವಮುನಿಗಳೂ ಸಹ ಈ ಹಸು, ರಥ ಮೊದಲಾದವುಗಳೆಲ್ಲವೂ ನಿನ್ನದಾಗಿವೆ ಎಂದು ಹೇಳಿರುತ್ತಾರೆ. ಇದರಿಂದ ಪೌತ್ರಯಣನು ತನ್ನದೇ ಆದ ರಥದಲ್ಲಿ ಬಂದಿರುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ವಿವಕ್ಷಿಸಲು ಬಾಧಕವಿರುವ ಕಾರಣ ದುಃಖದಿಂದ ಓಡಿಬಂದಿದ್ದಾನೆಂಬ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು.

• • • • •

## ಅದ್ವೈತಿಗಳ ಶೂದ್ರಶಬ್ದವ್ಯಾಖ್ಯಾನ ವಿಮರ್ಶೆ

**तात्पर्यचन्द्रिका**

**यत्तूक्तं परैः शूद्रशब्दस्यार्थवादस्थत्वाद्रूढित्यागो, रथकारशब्दस्य तु विधिवाक्यस्थत्वात्तदत्याग इति वैषम्यमिति**

ಅನುವಾದ - ಅದ್ವೈತಿಗಳು ಶೂದ್ರಶಬ್ದಾರ್ಥದ ವಿಚಾರದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ - ಶೂದ್ರಶಬ್ದವಿರುವ ಪ್ರಕರಣವು ಕಥೆಯನ್ನು ಹೇಳುತ್ತಿರುವ ಕಾರಣ ಅರ್ಥವಾದವಾಗಿದೆ. ಆದ್ದರಿಂದ ರೂಢ್ಯರ್ಥವನ್ನು ಇಟ್ಟುಕೊಳ್ಳಲೇಬೇಕೆಂಬ ನಿಯಮವಿಲ್ಲ. ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನು ಸ್ವೀಕರಿಸಬಹುದು. ಆದರೆ ಪೂರ್ವಮೀಮಾಂಸೆಯ ರಥಕಾರಶಬ್ದವು ವಿಧಿವಾಕ್ಯದಲ್ಲಿಯೇ ಇರುವ ಕಾರಣ ರೂಢ್ಯರ್ಥವನ್ನು ಬಿಡಬಾರದು. ಏಕೆಂದರೆ ವಿಧಿವಾಕ್ಯಕ್ಕೆ ಗೌಣಾರ್ಥವನ್ನು ಮಾಡಬಾರದೆಂಬ ವ್ಯತ್ಯಾಸವಿದೆ.

**तन्न । मीमांसकमतेऽर्थवादानां स्वार्थपरत्वाभावेऽपि परमतेऽसति बाधकेऽर्थवादेष्वपि स्वार्थात्यागस्य सति बाधके विधावपि स्वार्थत्यागस्य सत्त्वेन तौल्यात् ।**

ಇದು ತಪ್ಪು. ಮೀಮಾಂಸಕರಂತೆ ಅದ್ವೈತಿಗಳಿಗೆ ಉತ್ತರಿಸಲಾಗದು. ಮೀಮಾಂಸಕರ ಮತದಲ್ಲಿ ಅರ್ಥವಾದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರೆ ಅದ್ವೈತಮತದಲ್ಲಿ ಬಾಧಕವಿಲ್ಲದಿದ್ದಾಗ ಅರ್ಥವಾದವಾಕ್ಯದಲ್ಲೂ ಕೂಡ ಸ್ವಾರ್ಥಪರತ್ವವನ್ನು ಒಪ್ಪಿರುತ್ತಾರೆ. ಹಾಗಾಗಿ ಬಾಧಕವಿರುವುದು ಇಲ್ಲದಿರುವುದೇ ಅದ್ವೈತಮತದಲ್ಲಿ ಮುಖ್ಯ ಹೊರತು, ಅರ್ಥವಾದವಾಗಿರುವಿಕೆ, ಅಲ್ಲದಿರುವಿಕೆ ಎಂಬುದಲ್ಲ. ಅರ್ಥವಾದವೇ ಆಗಿದ್ದರೂ ಸಹ ಬಾಧಕವಿಲ್ಲದಿದ್ದರೆ ಸ್ವಾರ್ಥಪರತ್ವವನ್ನು ಒಪ್ಪಲಾಗಿದೆ. ಅದರಂತೆ ವಿಧಿಯೇ ಆಗಿದ್ದರೂ ಬಾಧಕವಿದ್ದರೆ ಸ್ವಾರ್ಥಪರತ್ವವನ್ನು ಬಿಡಬೇಕೆಂದೂ ಸಹ ಒಪ್ಪಲಾಗಿದೆ. ಆದ್ದರಿಂದ ಮೀಮಾಂಸಕರಂತೆ ಅದ್ವೈತಿಗಳಿಗೆ ಉತ್ತರಿಸಲಾಗದು.

**अहहारेत्वाशूद्रेत्यस्यार्थवादस्य विधिसन्निध्यभावाच ।**

ಮತ್ತು 'ಅಹಹಾರೇತ್ವಾಶೂದ್ರ' ಎಂಬಲ್ಲಿ ಅರ್ಥವಾದಕ್ಕೆ ವಿಧಿವಾಕ್ಯದ ಸಾನ್ನಿಧ್ಯವೂ ಸಹ ಇರುವುದಿಲ್ಲ.

**प्रकाशः –**

स्वयं बाधकभावाभावाभ्यां रथकारशब्दवैषम्यमुक्त्वाऽन्योक्तं वैषम्यमनूद्य प्रत्याह – **यत्त्विति** ।।

ವಿವರಣೆ - ಹೀಗೆ ಬಾಧಕವಿರುವುದೇ ರೂಢ್ಯರ್ಥತ್ಯಾಗಕ್ಕೆ ಕಾರಣ, ಬಾಧಕವಿಲ್ಲವಿರುವುದೇ ರೂಢ್ಯರ್ಥವನ್ನು ಬಿಡದಿರಲು ಕಾರಣವೆಂದು ಸಮರ್ಥಿಸಲಾಯಿತು. ಆದರೆ ಪೂರ್ವಮೀಮಾಂಸೆಯ ರಥಕಾರಾದಿಶಬ್ದಗಳಲ್ಲಿ ಬಾಧಕವಿಲ್ಲದ ಕಾರಣ ರೂಢ್ಯರ್ಥವನ್ನು ಬಿಟ್ಟಿಲ್ಲವೆಂದು ಸಮರ್ಥಿಸಲಾಯಿತು. ಪ್ರಕೃತ ಅದ್ವೈತಿಗಳು ಈ ವಿಷಯದಲ್ಲಿ ಮಾಡುವಂತಹ ವ್ಯಾಖ್ಯಾನವನ್ನು ಅನುವಾದ ಮಾಡಿ ಖಂಡನೆ ಮಾಡುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥದಿಂದ.

**प्रकाशः –** ''वर्षासु रथकारोऽग्नीनादधीत'' इत्याधानविधिवाक्यस्थत्वादित्यर्थः।। **स्वार्थात्यागस्येति** ।। अन्यथा पूर्वाधिकरणे देवताविग्रहाद्यसिद्ध्यापत्तेरिति भावः ।।

'ವರ್ಷಾಸು ರಥಕಾರೋಽಗ್ನೀನಾದಧೀತ' ಎಂಬ ವಾಕ್ಯವು ಆಧಾನವನ್ನು ವಿಧಾನ ಮಾಡುವ ಪ್ರಕರಣದಲ್ಲಿದೆ. ಆದ್ದರಿಂದ ವಿಧಿವಾಕ್ಯವೆನಿಸಿದೆ. 'ಸ್ವಾರ್ಥಾತ್ಯಾಗಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - ಬಾಧಕವಿಲ್ಲದಿರುವಾಗ ಅರ್ಥವಾದವಾಕ್ಯದಲ್ಲೂ ಸಹ ಸ್ವಾರ್ಥಪರತ್ವವನ್ನು ಬಿಡಬಾರದೆಂದು ಒಪ್ಪದಿದ್ದರೆ, ಹಿಂದಿನ ಅಧಿಕರಣದಲ್ಲಿ ದೇವತೆಗಳಿಗೆ ಶರೀರವಿದೆಯೆಂದೇ ಸಿದ್ಧವಾಗುತ್ತಿರಲಿಲ್ಲ.

**प्रकाशः – स्वार्थत्यागस्येति** ।। ''ब्रह्मजिज्ञासा तद्विजिज्ञासस्व'' इत्यादौ विचारलक्षकत्वाद्युक्तेरिति भावः ।।

'ಬ್ರಹ್ಮಜಿಜ್ಞಾಸಾ ತದ್ವಿಜಿಜ್ಞಾಸಸ್ವ' ಇತ್ಯಾದಿ ಸ್ಥಳಗಳಲ್ಲಿ, ವಿಧಿವಾಕ್ಯವಾಗಿದ್ದರೂ ರೂಢ್ಯರ್ಥವನ್ನು ಬಿಟ್ಟು ವಿಚಾರ ಎಂಬರ್ಥದಲ್ಲಿ ಲಕ್ಷಣಾವನ್ನು ಅದ್ವೈತಿಗಳೂ ಕೂಡ ಒಪ್ಪಿರುತ್ತಾರೆ.

**प्रकाशः – विधिसन्निधीति** ।। तथात्वे वायुक्षेपिष्ठादिवाक्यवद्विध्येकवाक्यतया विधेयस्तुतिपरत्वेन स्वार्थे तात्पर्याभावात्तत्त्यागस्स्यात् । न चैवमित्यर्थः ।

ಒಂದು ವೇಳೆ ಹತ್ತಿರದಲ್ಲಿ ವಿಧಿವಾಕ್ಯವಿರುವುದಾದರೆ ವಾಯುಕ್ಷೇಪಿಷ್ಠಾದಿ ವಾಕ್ಯಗಳಂತೆ ವಿಧ್ಯೇಕವಾಕ್ಯತ್ವವನ್ನು ಒಪ್ಪಿ ವಿಧೇಯವಾದ ಸ್ತುತಿಪರತ್ವೇನ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ರೂಢ್ಯರ್ಥವನ್ನು ಬಿಡಬಹುದಿತ್ತು. ಆದರೆ ಹತ್ತಿರದಲ್ಲೆಲ್ಲೂ ಸಹ ವಿಧಿವಾಕ್ಯವು ಇರುವುದಿಲ್ಲ. ಆದ್ದರಿಂದ ವಿಧ್ಯೇಕವಾಕ್ಯತ್ವೇನ ಅರ್ಥವಾದತ್ವವನ್ನೂ ಕೂಡ ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಾಗುವುದಿಲ್ಲ.

**गुरुराजीयम् –** प्रकृते च विधेरभावेन तत्सान्निध्याभावान्न स्वार्थे तात्पर्यत्याग इत्यत आह – **अहहारेत्वेति** ।।

## ಅದ್ವೈತಿಗಳ ಶೂದ್ರಶಬ್ದವ್ಯಾಖ್ಯಾನ ವಿಮರ್ಶೆ

### तात्पर्यचन्द्रिका

**यत्तूक्तं परैः शूद्रशब्दस्यार्थवादस्थत्वाद्रूढित्यागो, रथकारशब्दस्य तु विधिवाक्यस्थत्वात्तदत्याग इति वैषम्यमिति**

ಅನುವಾದ - ಅದ್ವೈತಿಗಳು ಶೂದ್ರಶಬ್ದಾರ್ಥದ ವಿಚಾರದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ - ಶೂದ್ರಶಬ್ದವಿರುವ ಪ್ರಕರಣವು ಕಥೆಯನ್ನು ಹೇಳುತ್ತಿರುವ ಕಾರಣ ಅರ್ಥವಾದವಾಗಿದೆ. ಆದ್ದರಿಂದ ರೂಢ್ಯರ್ಥವನ್ನು ಇಟ್ಟುಕೊಳ್ಳಲೇಬೇಕೆಂಬ ನಿಯಮವಿಲ್ಲ. ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನು ಸ್ವೀಕರಿಸಬಹುದು. ಆದರೆ ಪೂರ್ವಮೀಮಾಂಸೆಯ ರಥಕಾರಶಬ್ದವು ವಿಧಿವಾಕ್ಯದಲ್ಲಿಯೇ ಇರುವ ಕಾರಣ ರೂಢ್ಯರ್ಥವನ್ನು ಬಿಡಬಾರದು. ಏಕೆಂದರೆ ವಿಧಿವಾಕ್ಯಕ್ಕೆ ಗೌಣಾರ್ಥವನ್ನು ಮಾಡಬಾರದೆಂಬ ವ್ಯತ್ಯಾಸವಿದೆ.

**तन्न । मीमांसकमतेऽर्थवादानां स्वार्थपरत्वाभावेऽपि परमतेऽसति बाधकेऽर्थवादेष्वपि स्वार्थात्यागस्य सति बाधके विधावपि स्वार्थत्यागस्य सत्त्वेन तौल्यात् ।**

ಇದು ತಪ್ಪು. ಮೀಮಾಂಸಕರಂತೆ ಅದ್ವೈತಿಗಳಿಗೆ ಉತ್ತರಿಸಲಾಗದು. ಮೀಮಾಂಸಕರ ಮತದಲ್ಲಿ ಅರ್ಥವಾದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರೆ ಅದ್ವೈತಮತದಲ್ಲಿ ಬಾಧಕವಿಲ್ಲದಿದ್ದಾಗ ಅರ್ಥವಾದವಾಕ್ಯದಲ್ಲೂ ಕೂಡ ಸ್ವಾರ್ಥಪರತ್ವವನ್ನು ಒಪ್ಪಿರುತ್ತಾರೆ. ಹಾಗಾಗಿ ಬಾಧಕವಿರುವುದು ಇಲ್ಲದಿರುವುದೇ ಅದ್ವೈತಮತದಲ್ಲಿ ಮುಖ್ಯ ಹೊರತು, ಅರ್ಥವಾದವಾಗಿರುವಿಕೆ, ಅಲ್ಲದಿರುವಿಕೆ ಎಂಬುದಲ್ಲ. ಅರ್ಥವಾದವೇ ಆಗಿದ್ದರೂ ಸಹ ಬಾಧಕವಿಲ್ಲದಿದ್ದರೆ ಸ್ವಾರ್ಥಪರತ್ವವನ್ನು ಒಪ್ಪಲಾಗಿದೆ. ಅದರಂತೆ ವಿಧಿಯೇ ಆಗಿದ್ದರೂ ಬಾಧಕವಿದ್ದರೆ ಸ್ವಾರ್ಥಪರತ್ವವನ್ನು ಬಿಡಬೇಕೆಂದೂ ಸಹ ಒಪ್ಪಲಾಗಿದೆ. ಆದ್ದರಿಂದ ಮೀಮಾಂಸಕರಂತೆ ಅದ್ವೈತಿಗಳಿಗೆ ಉತ್ತರಿಸಲಾಗದು.

**अहहारेत्वाशूद्रेत्यस्यार्थवादस्य विधिसन्निध्यभावाच ।**

ಮತ್ತು 'ಅಹಹಾರೇತ್ವಾಶೂದ್ರ' ಎಂಬಲ್ಲಿ ಅರ್ಥವಾದಕ್ಕೆ ವಿಧಿವಾಕ್ಯದ ಸಾನ್ನಿಧ್ಯವೂ ಸಹ ಇರುವುದಿಲ್ಲ.

**प्रकाशः –**

स्वयं बाधकभावाभावाभ्यां रथकारशब्दवैषम्यमुक्त्वाऽन्योक्तं वैषम्यमनूद्य प्रत्याह – **यत्त्विति** ।।

ವಿವರಣೆ - ಹೀಗೆ ಬಾಧಕವಿರುವುದೇ ರೂಢ್ಯರ್ಥತ್ಯಾಗಕ್ಕೆ ಕಾರಣ, ಬಾಧಕವಿಲ್ಲವಿರುವುದೇ ರೂಢ್ಯರ್ಥವನ್ನು ಬಿಡದಿರಲು ಕಾರಣವೆಂದು ಸಮರ್ಥಿಸಲಾಯಿತು. ಆದರೆ ಪೂರ್ವಮೀಮಾಂಸೆಯ ರಥಕಾರಾದಿಶಬ್ದಗಳಲ್ಲಿ ಬಾಧಕವಿಲ್ಲದ ಕಾರಣ ರೂಢ್ಯರ್ಥವನ್ನು ಬಿಟ್ಟಿಲ್ಲವೆಂದು ಸಮರ್ಥಿಸಲಾಯಿತು. ಪ್ರಕೃತ ಅದ್ವೈತಿಗಳು ಈ ವಿಷಯದಲ್ಲಿ ಮಾಡುವಂತಹ ವ್ಯಾಖ್ಯಾನವನ್ನು ಅನುವಾದ ಮಾಡಿ ಖಂಡನೆ ಮಾಡುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥಧಿಂದ.

**प्रकाशः –** ''वर्षासु रथकारोऽग्नीनादधीत'' इत्याधानविधिवाक्यस्थत्वादित्यर्थः।। **स्वार्थात्यागस्येति** ।। अन्यथा पूर्वाधिकरणे देवताविग्रहाद्यसिद्ध्यापत्तेरिति भावः ।।

'ವರ್ಷಾಸು ರಥಕಾರೋಽಗ್ನೀನಾದಧೀತ' ಎಂಬ ವಾಕ್ಯವು ಆಧಾನವನ್ನು ವಿಧಾನ ಮಾಡುವ ಪ್ರಕರಣದಲ್ಲಿದೆ. ಆದ್ದರಿಂದ ವಿಧಿವಾಕ್ಯವೆನಿಸಿದೆ. 'ಸ್ವಾರ್ಥಾತ್ಯಾಗಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - ಬಾಧಕವಿಲ್ಲದಿರುವಾಗ ಅರ್ಥವಾದವಾಕ್ಯದಲ್ಲೂ ಸಹ ಸ್ವಾರ್ಥಪರತ್ವವನ್ನು ಬಿಡಬಾರದೆಂದು ಒಪ್ಪದಿದ್ದರೆ, ಹಿಂದಿನ ಅಧಿಕರಣದಲ್ಲಿ ದೇವತೆಗಳಿಗೆ ಶರೀರವಿದೆಯೆಂದೇ ಸಿದ್ಧವಾಗುತ್ತಿರಲಿಲ್ಲ.

**प्रकाशः – स्वार्थत्यागस्येति** ।। ''ब्रह्मजिज्ञासा तद्विजिज्ञासस्व'' इत्यादौ विचारलक्षकत्वाद्युक्तेरिति भावः ।।

'ಬ್ರಹ್ಮಜಿಜ್ಞಾಸಾ ತದ್ವಿಜಿಜ್ಞಾಸಸ್ವ' ಇತ್ಯಾದಿ ಸ್ಥಳಗಳಲ್ಲಿ, ವಿಧಿವಾಕ್ಯವಾಗಿದ್ದರೂ ರೂಢ್ಯರ್ಥವನ್ನು ಬಿಟ್ಟು ವಿಚಾರ ಎಂಬರ್ಥದಲ್ಲಿ ಲಕ್ಷಣಾವನ್ನು ಅದ್ವೈತಿಗಳೂ ಕೂಡ ಒಪ್ಪಿರುತ್ತಾರೆ.

**प्रकाशः – विधिसन्निधीति** ।। तथात्वे वायुक्षेपिष्ठादिवाक्यवद्विध्येकवाक्यतया विधेयस्तुतिपरत्वेन स्वार्थे तात्पर्याभावात्तत्त्यागस्स्यात् । न चैवमित्यर्थः ।

ಒಂದು ವೇಳೆ ಹತ್ತಿರದಲ್ಲಿ ವಿಧಿವಾಕ್ಯವಿರುವುದಾದರೆ ವಾಯುಕ್ಷೇಪಿಷ್ಠಾದಿ ವಾಕ್ಯಗಳಂತೆ ವಿಧ್ಯೇಕವಾಕ್ಯತ್ವವನ್ನು ಒಪ್ಪಿ ವಿಧೇಯವಾದ ಸ್ತುತಿಪರತ್ವೇನ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ರೂಢ್ಯರ್ಥವನ್ನು ಬಿಡಬಹುದಿತ್ತು. ಆದರೆ ಹತ್ತಿರದಲ್ಲೆಲ್ಲೂ ಸಹ ವಿಧಿವಾಕ್ಯವು ಇರುವುದಿಲ್ಲ. ಆದ್ದರಿಂದ ವಿಧ್ಯೇಕವಾಕ್ಯತ್ವೇನ ಅರ್ಥವಾದತ್ವವನ್ನೂ ಕೂಡ ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಾಗುವುದಿಲ್ಲ.

**गुरुराजीयम्** – प्रकृते च विधेरभावेन तत्सान्निध्याभावान्न स्वार्थे तात्पर्यत्याग इत्यत आह – **अहहारेत्वेति** ।।

## ಅದ್ವೈತಿಗಳ ಶೂದ್ರಶಬ್ದವ್ಯಾಖ್ಯಾನ ವಿಮರ್ಶೆ

### तात्पर्यचन्द्रिका

**यत्तूक्तं परैः शूद्रशब्दस्यार्थवादस्थत्वाद्रूढित्यागो, रथकारशब्दस्य तु विधिवाक्यस्थत्वात्तदत्याग इति वैषम्यमिति**

ಅನುವಾದ - ಅದ್ವೈತಿಗಳು ಶೂದ್ರಶಬ್ದಾರ್ಥದ ವಿಚಾರದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ - ಶೂದ್ರಶಬ್ದವಿರುವ ಪ್ರಕರಣವು ಕಥೆಯನ್ನು ಹೇಳುತ್ತಿರುವ ಕಾರಣ ಅರ್ಥವಾದವಾಗಿದೆ. ಆದ್ದರಿಂದ ರೂಢ್ಯರ್ಥವನ್ನು ಇಟ್ಟುಕೊಳ್ಳಲೇಬೇಕೆಂಬ ನಿಯಮವಿಲ್ಲ. ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನು ಸ್ವೀಕರಿಸಬಹುದು. ಆದರೆ ಪೂರ್ವಮೀಮಾಂಸೆಯ ರಥಕಾರಶಬ್ದವು ವಿಧಿವಾಕ್ಯದಲ್ಲಿಯೇ ಇರುವ ಕಾರಣ ರೂಢ್ಯರ್ಥವನ್ನು ಬಿಡಬಾರದು. ಏಕೆಂದರೆ ವಿಧಿವಾಕ್ಯಕ್ಕೆ ಗೌಣಾರ್ಥವನ್ನು ಮಾಡಬಾರದೆಂಬ ವ್ಯತ್ಯಾಸವಿದೆ.

**तन्न । मीमांसकमतेऽर्थवादानां स्वार्थपरत्वाभावेऽपि परमतेऽसति बाधकेऽर्थवादेष्वपि स्वार्थात्यागस्य सति बाधके विधावपि स्वार्थत्यागस्य सत्त्वेन तौल्यात् ।**

ಇದು ತಪ್ಪು. ಮೀಮಾಂಸಕರಂತೆ ಅದ್ವೈತಿಗಳಿಗೆ ಉತ್ತರಿಸಲಾಗದು. ಮೀಮಾಂಸಕರ ಮತದಲ್ಲಿ ಅರ್ಥವಾದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರೆ ಅದ್ವೈತಮತದಲ್ಲಿ ಬಾಧಕವಿಲ್ಲದಿದ್ದಾಗ ಅರ್ಥವಾದವಾಕ್ಯದಲ್ಲೂ ಕೂಡ ಸ್ವಾರ್ಥಪರತ್ವವನ್ನು ಒಪ್ಪಿರುತ್ತಾರೆ. ಹಾಗಾಗಿ ಬಾಧಕವಿರುವುದು ಇಲ್ಲದಿರುವುದೇ ಅದ್ವೈತಮತದಲ್ಲಿ ಮುಖ್ಯ ಹೊರತು, ಅರ್ಥವಾದವಾಗಿರುವಿಕೆ, ಅಲ್ಲದಿರುವಿಕೆ ಎಂಬುದಲ್ಲ. ಅರ್ಥವಾದವೇ ಆಗಿದ್ದರೂ ಸಹ ಬಾಧಕವಿಲ್ಲದಿದ್ದರೆ ಸ್ವಾರ್ಥಪರತ್ವವನ್ನು ಒಪ್ಪಲಾಗಿದೆ. ಆದರಂತೆ ವಿಧಿಯೇ ಆಗಿದ್ದರೂ ಬಾಧಕವಿದ್ದರೆ ಸ್ವಾರ್ಥಪರತ್ವವನ್ನು ಬಿಡಬೇಕೆಂದೂ ಸಹ ಒಪ್ಪಲಾಗಿದೆ. ಆದ್ದರಿಂದ ಮೀಮಾಂಸಕರಂತೆ ಅದ್ವೈತಿಗಳಿಗೆ ಉತ್ತರಿಸಲಾಗದು.

**अहहारेत्वाशूद्रेत्यस्यार्थवादस्य विधिसन्निध्यभावाच ।**

ಮತ್ತು 'ಅಹಹಾರೇತ್ವಾಶೂದ್ರ' ಎಂಬಲ್ಲಿ ಅರ್ಥವಾದಕ್ಕೆ ವಿಧಿವಾಕ್ಯದ ಸಾನ್ನಿಧ್ಯವೂ ಸಹ ಇರುವುದಿಲ್ಲ.

**प्रकाशः –**

स्वयं बाधकभावाभावाभ्यां रथकारशब्दवैषम्यमुक्त्वाऽन्योक्तं वैषम्यमनूद्य प्रत्याह – **यत्त्विति** ।।

ವಿವರಣೆ - ಹೀಗೆ ಬಾಧಕವಿರುವುದೇ ರೂಢ್ಯರ್ಥತ್ಯಾಗಕ್ಕೆ ಕಾರಣ, ಬಾಧಕವಿಲ್ಲವಿರುವುದೇ ರೂಢ್ಯರ್ಥವನ್ನು ಬಿಡದಿರಲು ಕಾರಣವೆಂದು ಸಮರ್ಥಿಸಲಾಯಿತು. ಆದರೆ ಪೂರ್ವಮೀಮಾಂಸೆಯ ರಥಕಾರಾದಿಶಬ್ದಗಳಲ್ಲಿ ಬಾಧಕವಿಲ್ಲದ ಕಾರಣ ರೂಢ್ಯರ್ಥವನ್ನು ಬಿಟ್ಟಿಲ್ಲವೆಂದು ಸಮರ್ಥಿಸಲಾಯಿತು. ಪ್ರಕೃತ ಅದ್ವೈತಿಗಳು ಈ ವಿಷಯದಲ್ಲಿ ಮಾಡುವಂತಹ ವ್ಯಾಖ್ಯಾನವನ್ನು ಅನುವಾದ ಮಾಡಿ ಖಂಡನೆ ಮಾಡುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥಧಿಂದ.

**प्रकाशः –** ''वर्षासु रथकारोऽग्नीनादधीत'' इत्याधानविधिवाक्यस्थत्वादित्यर्थः।। **स्वार्थात्यागस्येति** ।। अन्यथा पूर्वाधिकरणे देवताविग्रहाद्यसिद्ध्यापत्तेरिति भावः ।।

'ವರ್ಷಾಸು ರಥಕಾರೋಽಗ್ನೀನಾದಧೀತ' ಎಂಬ ವಾಕ್ಯವು ಆಧಾನವನ್ನು ವಿಧಾನ ಮಾಡುವ ಪ್ರಕರಣದಲ್ಲಿದೆ. ಆದ್ದರಿಂದ ವಿಧಿವಾಕ್ಯವೆನಿಸಿದೆ. 'ಸ್ವಾರ್ಥಾತ್ಯಾಗಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - ಬಾಧಕವಿಲ್ಲದಿರುವಾಗ ಅರ್ಥವಾದವಾಕ್ಯದಲ್ಲೂ ಸಹ ಸ್ವಾರ್ಥಪರತ್ವವನ್ನು ಬಿಡಬಾರದೆಂದು ಒಪ್ಪದಿದ್ದರೆ, ಹಿಂದಿನ ಅಧಿಕರಣದಲ್ಲಿ ದೇವತೆಗಳಿಗೆ ಶರೀರವಿದೆಯೆಂದೇ ಸಿದ್ಧವಾಗುತ್ತಿರಲಿಲ್ಲ.

**प्रकाशः – स्वार्थत्यागस्येति** ।। ''ब्रह्मजिज्ञासा तद्विजिज्ञासस्व'' इत्यादौ विचारलक्षकत्वाद्युक्तेरिति भावः ।।

'ಬ್ರಹ್ಮಜಿಜ್ಞಾಸಾ ತದ್ವಿಜಿಜ್ಞಾಸಸ್ವ' ಇತ್ಯಾದಿ ಸ್ಥಳಗಳಲ್ಲಿ, ವಿಧಿವಾಕ್ಯವಾಗಿದ್ದರೂ ರೂಢ್ಯರ್ಥವನ್ನು ಬಿಟ್ಟು ವಿಚಾರ ಎಂಬರ್ಥದಲ್ಲಿ ಲಕ್ಷಣಾವನ್ನು ಅದ್ವೈತಿಗಳೂ ಕೂಡ ಒಪ್ಪಿರುತ್ತಾರೆ.

**प्रकाशः – विधिसन्निधीति** ।। तथात्वे वायुक्षेपिष्ठादिवाक्यवद्विध्येकवाक्यतया विधेयस्तुतिपरत्वेन स्वार्थे तात्पर्याभावात्तत्त्यागस्स्यात् । न चैवमित्यर्थः ।

ಒಂದು ವೇಳೆ ಹತ್ತಿರದಲ್ಲಿ ವಿಧಿವಾಕ್ಯವಿರುವುದಾದರೆ ವಾಯುಕ್ಷೇಪಿಷ್ಠಾದಿ ವಾಕ್ಯಗಳಂತೆ ವಿಧ್ಯೇಕವಾಕ್ಯತ್ವವನ್ನು ಒಪ್ಪಿ ವಿಧೇಯವಾದ ಸ್ತುತಿಪರತ್ವೇನ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ರೂಢ್ಯರ್ಥವನ್ನು ಬಿಡಬಹುದಿತ್ತು. ಆದರೆ ಹತ್ತಿರದಲ್ಲೆಲ್ಲೂ ಸಹ ವಿಧಿವಾಕ್ಯವು ಇರುವುದಿಲ್ಲ. ಆದ್ದರಿಂದ ವಿಧ್ಯೇಕವಾಕ್ಯತ್ವೇನ ಅರ್ಥವಾದತ್ವವನ್ನೂ ಕೂಡ ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಾಗುವುದಿಲ್ಲ.

**गुरुराजीयम् –** प्रकृते च विधेरभावेन तत्सान्निध्याभावान्न स्वार्थे तात्पर्यत्याग इत्यत आह – **अहहारेत्वेति** ।।




ಅದ್ವೈತಿಗಳು ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಯೌಗಿಕಾರ್ಥವನ್ನೇ ಸ್ವೀಕರಿಸಬೇಕೆನ್ನಲು ಬೇರೆ ಕಾರಣವನ್ನೇ ನೀಡುತ್ತಾರೆ. ಸಂವರ್ಗವಿದ್ಯೆಯು ಆಖ್ಯಾಯಿಕೆ ಎನಿಸಿದ್ದರಿಂದ ಅರ್ಥವಾದ ರೂಪವಾಗಿದೆ. ಪೂರ್ವಮೀಮಾಂಸೆಯ ರಥಕಾರಪ್ರಕರಣದಲ್ಲಿರುವ ರಥಕಾರಶಬ್ದವು ಇಷ್ಟಿವಿಶೇಷವನ್ನು ವಿಧಾನ ಮಾಡಲು ಹೊರಟಿದ್ದರಿಂದ ವಿಧಿರೂಪವಾಗಿದೆ. ಅರ್ಥವಾದ ವಾಕ್ಯದಲ್ಲಿ ರೂಢ್ಯರ್ಥವನ್ನು ಬಿಡಬಹುದು. ಆದರೆ ವಿಧಿವಾಕ್ಯದಲ್ಲಿ ರೂಢ್ಯರ್ಥವನ್ನು ಬಿಟ್ಟು ಗೌಣಾರ್ಥವನ್ನು ಮಾಡಬಾರದು. ಹಾಗಾಗಿ ರಥಕಾರಾದಿ ಶಬ್ದಗಳಲ್ಲಿ ರೂಢ್ಯರ್ಥವನ್ನು ಬಿಡದಿರಲು ಕಾರಣವಿರುವಂತೆ ಪ್ರಕೃತ ಅಂತಹ ಕಾರಣಗಳಿರುವುದಿಲ್ಲ. ಆದ್ದರಿಂದ ರೂಢ್ಯರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಶೂದ್ರಶಬ್ದಕ್ಕೆ ಹೇಳಬಹುದು ಎಂದು ಅದ್ವೈತಿಗಳ ವಾದ.

ಇದು ಸರಿಯಲ್ಲ. ಮೀಮಾಂಸಕರು ಹೀಗೆ ಉತ್ತರಿಸಬಹುದೇ ಹೊರತು, ಅದ್ವೈತಿಗಳು ಉತ್ತರಿಸಬಾರದು. ಏಕೆಂದರೆ ಮೀಮಾಂಸಕರ ಮತದಲ್ಲಿ ಅರ್ಥವಾದಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರೆ ಅದ್ವೈತಮತದಲ್ಲಿ ಸ್ವಾರ್ಥದಲ್ಲಿಯೂ ತಾತ್ಪರ್ಯವನ್ನು ಒಪ್ಪಲಾಗಿದೆ. ಆದ್ದರಿಂದ ಬಾಧಕವಿರುವುದು, ಇಲ್ಲದಿರುವುದೇ ರೂಢ್ಯರ್ಥತ್ಯಾಗ ಹಾಗೂ ಅತ್ಯಾಗಕ್ಕೆ ಕಾರಣಗಳು ಹೊರತು, ಅರ್ಥವಾದವಾಗಿರುವಿಕೆ, ಆಗದಿರುವಿಕೆ ಎಂಬುದಲ್ಲ. ಆದ್ದರಿಂದ ಅದ್ವೈತಿಗಳ ನಿಲುವು ಸರಿಯಿಲ್ಲ.



## ಉಪನಯನವಿಲ್ಲದ ಶೂದ್ರನಿಗೆ ವೇದಾಧ್ಯಯನದ ನಿಷೇಧವಿದೆ

### तात्पर्यचन्द्रिका

**किं चाध्ययनमुपनयनसापेक्षम् । शूद्र उपनयनाभावश्च भाष्योक्तश्रुत्यादिसिद्ध इति कथं शूद्रस्याध्ययनम् ।**

ಅನುವಾದ - ಶೂದ್ರರಿಗೆ ವೇದಾಧಿಕಾರವನ್ನು ಒಪ್ಪಲು ಸಾಧ್ಯವೇ ಇಲ್ಲ. ಏಕೆಂದರೆ ಉಪನಯನಸಂಸ್ಕಾರವಿದ್ದವರಿಗೆ ಮಾತ್ರ ವೇದಾಧಿಕಾರವನ್ನು ಹೇಳಬೇಕು. ಶೂದ್ರನಿಗೆ ಉಪನಯನಸಂಸ್ಕಾರವಿಲ್ಲವೆಂಬುದು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿಗಳಿಂದ ಸಿದ್ಧವಾಗಿದೆ. ಹಾಗಾಗಿ ಶೂದ್ರನಿಗೆ ವೇದಾಧಿಕಾರವನ್ನು ಹೇಳಲು ಹೇಗೆ ಸಾಧ್ಯ?

**नच "अष्टवर्षं ब्राह्मणमुपनयीत तमध्यापयीत" इति श्रुतौ ब्राह्मणस्यैवाध्ययन उपनयनापेक्षा नान्यत्रेति युक्तम् । तमध्यापयीतेत्यत्रोपनीतमात्रपरामर्शात् ।**

ಪರಿಪೂರ್ಣಚಂದ್ರಿಕಾ

ಪ್ರಶ್ನೆ - 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ' ಎಂಬ ಶ್ರುತಿಯಲ್ಲಿ ಬ್ರಾಹ್ಮಣನ ಅಧ್ಯಯನವು ಮಾತ್ರ ಉಪನಯನಸಾಪೇಕ್ಷಿತವಾಗಿದೆಯೆಂದು ಹೇಳಲಾಗಿದೆ. ಹಾಗಾಗಿ ಬ್ರಾಹ್ಮಣನು ಒಂದು ವೇಳೆ ವೇದಾಧ್ಯಯನ ಮಾಡಬೇಕೆಂದರೆ ಉಪನಯನ ಮಾಡಿಕೊಳ್ಳಬೇಕು. ಉಳಿದ ಜಾತಿಯವರು ವೇದಾಧ್ಯಯನ ಮಾಡಬೇಕಾದರೆ ಉಪನಯನವನ್ನು ಮಾಡಿಕೊಳ್ಳಬೇಕಾಗಿಲ್ಲ. ಹಾಗೇಯೇ ವೇದಾಧ್ಯಯನ ಮಾಡಬಹುದೆಂದು ಹೇಳಬಹುದಲ್ಲವೇ?

ಉತ್ತರ - 'ತಮಧ್ಯಾಪಯೀತ' ಎಂಬಲ್ಲಿ 'ತಮ್' ಎಂಬ 'ತತ್' ಶಬ್ದದಿಂದ ಉಪನೀತನಾದವನನ್ನೇ ಪರಾಮರ್ಶ ಮಾಡಬೇಕು. ಆದ್ದರಿಂದ, ಉಪನೀತನಾದವನಿಗೆ ಮಾತ್ರ ಅಧ್ಯಯನವನ್ನು ವಿಧಿಸಿರುವಾಗ ಉಪನಯನವಿಲ್ಲದ ಶೂದ್ರಾದಿಗಳಿಗೆ ವೇದಾಧಿಕಾರವನ್ನು ಹೇಳುವುದು ಕೂಡುವುದಿಲ್ಲ.

**''स्वाध्यायोऽध्येतव्य'' इत्यध्ययनविधेरनिर्दिष्टकर्तृकत्वेन प्रकृतोपनीतानामेव कर्तृत्वेनान्वयाच्च ।**

'ಸ್ವಾಧ್ಯಾಯೋऽಧ್ಯೇತವ್ಯಃ' ಎಂಬ ಅಧ್ಯಯನವಿಧಿಯಲ್ಲಿ ಕರ್ತೃಗಳನ್ನು ನಿರ್ದೇಶ ಮಾಡಿಲ್ಲ. ಆದ್ದರಿಂದ ಹಿಂದೆ ಪ್ರಕೃತರಾದ ಉಪನೀತರಾದವರೇ ಕರ್ತೃಗಳಾಗಿದ್ದಾರೆಂದು ಅನ್ವಯವನ್ನು ತಿಳಿಯಬೇಕು. ಹಾಗಾಗಿ ಉಪನೀತರಾದವರಿಗಷ್ಟೇ ವೇದಾಧ್ಯಯನವೆಂದು ಇದರಿಂದ ಸ್ಪಷ್ಟವಾಗುತ್ತದೆ.

**''वेदः कृत्स्नोऽधिगन्तव्यः सरहस्यो द्विजन्मना'' इति स्मृत्योपनयनाख्य-द्वितीयजन्मवत एवाध्ययनविधानाच्च ।**

'ವೇದಃ ಕೃತ್ಸ್ನೋऽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ' ಎಂಬ ಸ್ಮೃತಿಯಿಂದಲೂ ಉಪನಯನವೆಂಬ ಎರಡನೆಯ ಜನ್ಮವನ್ನು ಹೊಂದಿರುವಂತಹವನಿಗೆ ಮಾತ್ರ ವೇದಾಧ್ಯಯನವನ್ನು ವಿಧಿಸಲಾಗಿದೆ. ಆದ್ದರಿಂದ 'ಯತ್ರ ಅಧ್ಯಯನಂ ತತ್ರ ಉಪನಯನಂ' ಎಂಬ ವ್ಯಾಪ್ತಿಯು ಸಿದ್ಧವಾಯಿತು. ಶೂದ್ರರಲ್ಲಿ ವ್ಯಾಪಕವಾದ ಉಪನಯನವಿಲ್ಲದ ಕಾರಣ ವ್ಯಾಪ್ಯವಾದ ಅಧ್ಯಯನವೂ ಕೂಡ ಬರಲು ಸಾಧ್ಯವಿಲ್ಲ.

**नच ''नाग्निर्न यज्ञो न संस्कार'' इत्यादिश्रुतौ शूद्रे संस्कारादेरभावोक्तिमात्रम्। नतु प्रतिषेध इति शंक्यम् । संस्कारभावेऽपि तत्सापेक्षाध्ययनाभावसिद्धेः ।**

ಪ್ರಶ್ನೆ - 'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' ಇತ್ಯಾದಿ ಶ್ರುತಿಯಲ್ಲಿ ಶೂದ್ರನಿಗೆ ಸಂಸ್ಕಾರಾದಿಗಳಿಲ್ಲವೆಂದಷ್ಟೇ ಹೇಳಲಾಗಿದೆ ಹೊರತು, ಸಂಸ್ಕಾರಾದಿಗಳನ್ನು ಮಾಡಬಾರದೆಂಬ ಪ್ರತಿಷೇಧವಿರುವುದಿಲ್ಲ. ಹಾಗಾಗಿ ಶೂದ್ರರಿಗೆ ಉಪನಯನಸಂಸ್ಕಾರವನ್ನು ಮಾಡಬಹುದಲ್ಲವೇ?

ಉತ್ತರ - ಸಂಸ್ಕಾರವಿಲ್ಲದಿದ್ದರೂ ತದಪೇಕ್ಷಿತವಾದ ಅಧ್ಯಯನವೂ ಕೂಡ ಇರುವುದಿಲ್ಲವೆಂದು ಸಿದ್ಧವಾಗುತ್ತದೆ.

**सामान्यविधिप्राप्तयज्ञाद्यभावोक्तेस्तत्प्रतिषेधं विनाऽयोगाच्च । टीकायां प्रतिषेधं विनाप्यभावोक्तिसम्भवमुपेत्योत्तरसूत्रमवतारितम् ।**

ಅಥವಾ ಸಾಮಾನ್ಯವಿಧಿಯಿಂದ ಪ್ರಾಪ್ತವಾದ ಯಜ್ಞಾದ್ಯಭಾವವನ್ನು ಹೇಳಿದ್ದರಿಂದಲೇ ಯಜ್ಞಾದಿಗಳಲ್ಲಿ ಅಧಿಕಾರವಿಲ್ಲವೆಂದೂ ಸಹ ಸಿದ್ಧವಾಗುತ್ತದೆ. ಅಂದರೆ ಯಜ್ಞಾದಿಗಳ ನಿಷೇಧವನ್ನು ಬಿಟ್ಟು ಯಜ್ಞಾದಿಗಳ ಅಭಾವವನ್ನು ಹೇಳಿದ್ದು ಕೂಡುವುದಿಲ್ಲ. ಹಾಗಾಗಿ 'ನಾಗ್ನಿರ್ನ ಯಜ್ಞಃ' ಇತ್ಯಾದಿ ವಾಕ್ಯದಲ್ಲಿ ಯಜ್ಞಾದ್ಯಭಾವವನ್ನು ಹೇಳಿದ್ದರಿಂದಲೇ ಅವುಗಳ ನಿಷೇಧವನ್ನೂ ಸಹ ಹೇಳಿದಂತಾಯಿತು.

ಟೀಕೆಯಲ್ಲಿ ಪ್ರತಿಷೇಧವನ್ನು ಒಪ್ಪದಿದ್ದರೂ ಅಭಾವೋಕ್ತಿಯನ್ನು ಮಾತ್ರ 'ನಾಗ್ನಿರ್ನ ಯಜ್ಞಃ' ಎಂಬ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಶೂದ್ರರಿಗೆ ವೇದಾಧಿಕಾರವಿರಬಹುದಲ್ಲವೇ? ಎಂಬ ಪಕ್ಷವನ್ನು ಅಂಗೀಕಾರ ಮಾಡಿ ಮುಂದಿನ ಸೂತ್ರಕ್ಕೆ ಅವತಾರಿಕೆ ನೀಡಿರುತ್ತಾರೆ. ಅಂಗೀಕಾರವಾದ್ದರಿಂದ ಟೀಕಾ ವಿರೋಧವು ಬರುವುದಿಲ್ಲವೆಂದಂತಾಯಿತು.

**नच शूद्रस्याध्ययनाभावेऽपि लिखितपाठादिना वेदार्थावधारणम् । भाष्योक्त-श्रुत्याऽर्थावधारणादेरपि निषेधात् ।**

ಶೂದ್ರನಿಗೆ ಅಧ್ಯಯನವಿಲ್ಲದಿದ್ದರೂ ಲಿಖಿತಪಾಠಾದಿಗಳಿಂದ ವೇದಾರ್ಥಾವಧಾರಣವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯ ಆಧಾರದಿಂದ ಶೂದ್ರನಿಗೆ ವೇದದ ಶ್ರವಣಕ್ಕೂ ಅಧಿಕಾರವಿಲ್ಲ. ಅಧ್ಯಯನದಲ್ಲೂ ಅಧಿಕಾರವಿಲ್ಲ. ಅದರ ಅರ್ಥನಿಶ್ಚಯದಲ್ಲೂ ಕೂಡ ಅಧಿಕಾರವಿಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತದೆ.

**विदुरादेस्तु जन्मान्तरसिद्धापरोक्षज्ञानत्वेनेतरशूद्रवैलक्षण्याद्वेदार्थावधारणेऽपि न दोषः ।**

ಹಾಗಾದರೆ ವಿದುರಾದಿಗಳಲ್ಲಿ ಅರ್ಥಾವಧಾರಣೆಯಿರುವುದು ಮಹಾಭಾರತಾದಿಗಳಲ್ಲಿ ಕಂಡಿದೆಯಲ್ಲವೇ? ಎಂದರೆ ಜನ್ಮಾಂತರದಿಂದ ಸಿದ್ಧವಾದ ಅಪರೋಕ್ಷಜ್ಞಾನಿಗಳಾದ ಕಾರಣ ಇತರಶೂದ್ರರಿಗಿಂತಲೂ ಅತ್ಯಂತವಿಲಕ್ಷಣರಾಗಿರುತ್ತಾರೆ. ಆದ್ದರಿಂದ ಅಂತಹ ವಿದುರಾದಿಗಳಿಗೆ ವೇದಾರ್ಥದ ತತ್ವಜ್ಞಾನವನ್ನು ಹೇಳಿದರೆ ಯಾವುದೇ ವಿರೋಧಗಳು ಬರುವುದಿಲ್ಲ.

**प्रकाशः –**

एवं द्वितीयसूत्रभाष्याद्युक्तरथवत्त्वरूपलिङ्गरूपबाधकोपपादनेनाद्यसूत्रभाष्याद्युक्त-योगं समर्थ्य न शूद्रस्याधिकार इत्युक्त्वा यत्पूर्वमुक्तं शूद्रस्याप्यध्ययनादि-सत्त्वादस्त्यधिकार इति तदिदानीं ''संस्कारपरामर्शात्'' इति सूत्रभाष्यटीकार्थविवरणेन निराकर्तुमाह – **किञ्चेति** ।।

ವಿವರಣೆ - ಇಲ್ಲಿಯ ತನಕ ಎರಡನೆಯ ಸೂತ್ರದ ಭಾಷ್ಯದಲ್ಲಿ ಹೇಳಿದ ರಥವತ್ತ್ವವೆಂಬ ಲಿಂಗವೆಂಬ ಬಾಧಕವಿರುವ ಕಾರಣ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಬಾರದೆಂದು ಉಪಪಾದನೆ ಮಾಡಿದರು. ಇದರಿಂದ ಪ್ರಥಮಸೂತ್ರದ ಭಾಷ್ಯದಲ್ಲಿ ಹೇಳಿದ ಶೂದ್ರಶಬ್ದದ ಯೋಗಾರ್ಥವನ್ನು ಸಮರ್ಥಿಸಿದಂತಾಯಿತು. ಆದ್ದರಿಂದ ಶೂದ್ರನಿಗೆ ವೇದಾಧಿಕಾರವನ್ನು ಹೇಳಲಾಗದೆಂದು ಸಮರ್ಥಿಸಿ, ಈಗ ಶೂದ್ರನಿಗೆ ವೇದಾಧ್ಯಯನಾದಿಗಳು ಇರುವ ಕಾರಣ ವೇದಾಧಿಕಾರವನ್ನೂ ಕೂಡ ಹೇಳಬಹುದಲ್ಲವೇ ? ಎಂಬ ಹಿಂದೆ ಮಾಡಿದ ಮತ್ತೊಂದು ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. 'ಸಂಸ್ಕಾರಪರಾಮರ್ಶಾತ್' ಎಂಬ ಸೂತ್ರದ ಭಾಷ್ಯವನ್ನು ವಿವರಿಸುವಂತಹ ಟೀಕಾ ಮಾತನ್ನು ವ್ಯಾಖ್ಯಾನಿಸುವವರಾಗಿ ಪೂರ್ವಪಕ್ಷವನ್ನು ನಿರಾಕರಿಸಲು 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – श्रुत्यादीति** ।। नाग्निर्न यज्ञो न संस्कारो न व्रतानि शूद्रस्य'' इत्यादिसिद्ध इत्यर्थः । यदप्यनुपनीतस्यैवाध्ययनमस्त्विति तदाशङ्क्य सौत्रपरामर्श-शब्दार्थव्यञ्जनेन निराह – **नचेति** ।।

'ನಾಗ್ನಿರ್ನ ಯಜ್ಞೋ ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ' ಇತ್ಯಾದಿ ಶ್ರುತಿಯಿಂದ ಶೂದ್ರನಿಗೆ ಉಪನಯನಾದಿಗಳಿಲ್ಲವೆಂದು ಸಿದ್ಧವಾಗಿದೆ ಎಂದಭಿಪ್ರಾಯ.

ಇನ್ನು ಉಪನೀತನಾದವನಿಗೆ ಮಾತ್ರ ಅಧ್ಯಯನದಲ್ಲಿ ಅಧಿಕಾರವೆಂದು ನಾವು ಹೇಳಿದೆವು. ಇದನ್ನು ಆಶಂಕಿಸಿ, ಸೂತ್ರದಲ್ಲಿ ಪರಾಮರ್ಶ ಮಾಡಬೇಕಾದ ಶಬ್ದಾರ್ಥವನ್ನು ಸ್ಪಷ್ಟಪಡಿಸುತ್ತಾ ಆಶಂಕೆಯನ್ನು ನಿರಾಕರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – एतेन ''अष्टवर्षं ब्राह्मणम्'' इत्यादिटीका विवृता ।

ಇದರಿಂದ 'ಅಷ್ಟವರ್ಷಂ ಬ್ರಾಹ್ಮಣಮ್ ಉಪನಯೀತ' ಇತ್ಯಾದಿ ಟೀಕೆಯನ್ನೂ ಕೂಡ ವಿವರಿಸಿದಂತಾಯಿತು.

**प्रकाशः** – ननु तत्राध्यापनाङ्गत्वमेव श्रुतं न त्वध्ययनाङ्गत्वमित्यत आह – **स्वाध्याय इति** ।।

'ಅಷ್ಟವರ್ಷಂ ಬ್ರಾಹ್ಮಣಮ್ ಉಪನಯೀತ ತಮಧ್ಯಾಯಪಯೀತ' ಎಂಬ ವಾಕ್ಯದಲ್ಲಿ ಉಪನಯನವು ಅಧ್ಯಾಪನದ ಅಂಗವೆಂದಷ್ಟೇ ಹೇಳಲಾಗಿದೆ ಹೊರತು, ಅಧ್ಯಯನದ ಅಂಗವೆಂದು ಹೇಳಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಸ್ವಾಧ್ಯಾಯಃ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – तथा** चैतदनुरोधादध्यापयीतेत्यत्राप्यध्ययनविधावेव तात्पर्यम् । हितैषिपित्रादिना शिक्षणीयो बालक इति भावेनाध्ययनोक्तिरिति भावः ।।

ಹೀಗೆ ಹೇಳಿದ್ದರಿಂದ 'ತಮಧ್ಯಾಯಪಯೀತ' ಎಂಬ ವಾಕ್ಯಕ್ಕೆ ಅಧ್ಯಯನವಿಧಿಯಲ್ಲಿಯೇ ತಾತ್ಪರ್ಯವೆಂದು ಸ್ಪಷ್ಟವಾಗುತ್ತದೆ. ಹಿತೈಷಿಯಾದ ಪಿತ್ರಾದಿಗಳಿಂದ ಬಾಲಕನು ಅಧ್ಯಯನದಲ್ಲಿ ತೊಡಗಬೇಕು ಎಂಬ ಅಭಿಪ್ರಾಯದಿಂದ ಅಧ್ಯಾಪನವನ್ನು ಶ್ರುತಿಯಲ್ಲಿ ಹೇಳಲಾಗಿದೆ.

**प्रकाशः – द्वितीयजन्मवत एवेति** ।। एतेन टीकायां स्मृत्युक्तेः फलं सूचितं भवति । "तदभावाभिलापात्" इत्यस्याध्ययनाभावे हेतुत्वं स्पष्टयति – **नच नाग्निरिति** ।।

'ದ್ವಿತೀಯಜನ್ಮವತಃ' ಇತ್ಯಾದಿಯಾಗಿ ಹೇಳಿದ್ದರಿಂದ ಟೀಕೆಯಲ್ಲಿ ಉದಾಹರಿಸಿದ ಸ್ಮೃತಿಗೆ ಫಲವನ್ನು ಸೂಚಿಸಿಂದತಾಯಿತು. 'ತದಭಾವಾಭಿಲಾಪಾತ್' ಎಂಬ ಸೂತ್ರವು ಅಧ್ಯಯನಾಭಾವದಲ್ಲೇ ಹೇತುವನ್ನು ಹೇಳುತ್ತಿದೆಯೆಂಬುದನ್ನು ಸ್ಪಷ್ಟಪಡಿಸುತ್ತಿದ್ದಾರೆ 'ನಚ ನಾಗ್ನಿಃ' ಇತ್ಯಾದಿ ವಾಕ್ಯದಿಂದ.

**प्रकाशः – सामान्येति** ।। स्वर्गकामादिमात्रोद्देशेन यागादिविधिप्रवृत्तेस्तादृशयागादेरभावोक्त्यन्यथानुपपत्त्यानिषेधसिद्धिरित्यर्थः ।

ಗ್ರಂಥದಲ್ಲಿ ಸಾಮಾನ್ಯವಿಧಿಯಿಂದ ಪ್ರಾಪ್ತವಾದ ಯಜ್ಞಾದಿಗಳ ಅಭಾವದಿಂದಲೇ ಪ್ರತಿಷೇಧವೂ ಸಹ ತಿಳಿಯುತ್ತದೆಂದು ಹೇಳಿದ್ದಾರೆ. ಅಂದರೆ ಸ್ವರ್ಗಕಾಮನೆಯೆಂಬ ಉದ್ದೇಶದಿಂದ ಯಾಗಾದಿ ವಿಧಿಗಳು ಪ್ರವೃತ್ತವಾಗಿವೆ. ಅಂತಹ ಯಾಗಾದಿಗಳ ಅಭಾವವನ್ನು ಹೇಳಿದ್ದರಿಂದಲೇ ಯಾಗಾದಿಗಳನ್ನು ಮಾಡುವಂತಹ ಅಧಿಕಾರವನ್ನೂ ಸಹ ನಿಷೇಧ ಮಾಡಿದಂತಾಗುತ್ತದೆ.

**प्रकाशः** – टीकाविरोधमाशंक्याह – टीकायामिति ।। यदप्युक्तमथवाऽनधीयानस्येति तत् "श्रवणाध्ययनार्थ" इति सूत्रभाष्याद्यर्थव्यक्तयाऽऽपाकरोति – **नच शूद्रस्येति** ।।

ಟೀಕೆಯ ವಿರೋಧವನ್ನು ವಿರೋಧಿಸಿ ಆಶಂಕಿಸುತ್ತಿದ್ದಾರೆ 'ಟೀಕಾಯಾಮ್' ಇತ್ಯಾದಿ ಗ್ರಂಥದಿಂದ. ಇನ್ನು ಹಿಂದೆ ಪೂರ್ವಪಕ್ಷ ಮಾಡುವಾಗ ಗುರುಮುಖದಿಂದ ವೇದಾಧ್ಯಯನ ಮಾಡದಿದ್ದರೂ ಲಿಖಿತಪಾಠಾದಿಗಳಿಂದ ಅರ್ಥವನ್ನು ತಿಳಿದುಕೊಳ್ಳಬಹುದಲ್ಲವೇ? ಎಂದು ಪ್ರಶ್ನಿಸಲಾಗಿತ್ತು. ಆದರೆ

ಶ್ರವಣಾಧ್ಯಯನಾರ್ಥ ಇತ್ಯಾದಿ ಸೂತ್ರಭಾಷ್ಯದ ಅಭಿಪ್ರಾಯದಂತೆ ನಿರಾಕರಣೆ ಮಾಡುತ್ತಿದ್ದಾರೆ 'ನಚ ಶೂದ್ರಸ್ಯ' ಇತ್ಯಾದಿ ಗ್ರಂಥದಿಂದ.

**प्रकाशः** – ''श्रवणे त्रपुजतुभ्यां श्रोत्रपरिपूरणम्'' इत्यादिश्रुत्येत्यर्थः । **''कथं विदुरधर्मव्याधादीनां वैदिकार्थावधारणमस्ति''** इत्यादिटीकोक्तशङ्कां हृदि कृत्वा भाष्याद्युक्तमेव समाधिमाह – **विदुरादेस्त्विति** ।।

'ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಮ್' ಇತ್ಯಾದಿ ಶ್ರುತಿಯ ಆಧಾರದಿಂದ ಶೂದ್ರನಿಗೆ ವೇದವನ್ನು ಶ್ರವಣ ಮಾಡುವಂತಹ ಅಧಿಕಾರವೂ ಸಹ ಇರುವುದಿಲ್ಲವೆಂದು ಸ್ಪಷ್ಟವಾಗುತ್ತದೆ.

ಹಾಗಾದರೆ ವಿದುರ, ಧರ್ಮವ್ಯಾಧ ಮೊದಲಾದ ಶೂದ್ರಾದಿಗಳಿಗೆ ವೇದಾರ್ಥದ ತತ್ತ್ವಜ್ಞಾನವಾಗಿರುವುದು ಕಂಡಿದೆಯಲ್ಲವೇ? ಎಂದು 'ಕಥಂ ವಿದುರಧರ್ಮವ್ಯಾಧಾದೀನಾಂ ವೈದಿಕಾರ್ಥಾವಧಾರಣಮಸ್ತಿ' ಇತ್ಯಾದಿ ಟೀಕೆಯಲ್ಲಿ ಹೇಳಿರುತ್ತಾರೆ. ಈ ಆಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಭಾಷ್ಯಾದಿಗಳಲ್ಲಿ ಹೇಳಿದ ಸಮಾಧಾನವನ್ನೇ ಸ್ಪಷ್ಟಪಡಿಸುತ್ತಿದ್ದಾರೆ 'ವಿದುರಾದೇಸ್ತು' ಇತ್ಯಾದಿ ವಾಕ್ಯದಿಂದ.

**गुरुराजीयम्** – संस्कारपरामर्शादित्येतत्सूत्रसूचितां युक्तिमाह – **किञ्चेति** ।। शूद्रस्यैवानुपनीतस्यैवाध्ययनमस्त्विति द्वितीयं पूर्वपक्षं निराकर्तुं शङ्कते – **नचेति** ।। ननु तमित्यत्र ब्राह्मणस्यैव परामर्शः पूर्वं तस्यैव प्रकृतत्वादित्यत आह – **स्वाध्यायोऽध्येतव्य इति** ।। ननु प्रतिषेधं विना सामान्यविधिप्राप्तयज्ञाद्यभावोक्तेरयोगेन नाग्निर्न यज्ञ इत्यादौ तत्प्रतिषेध इत्यङ्गीकारे टीकाविरोधः । अभावोक्तिमात्रस्यैवाभ्युपगतत्वादित्यत आह – **टीकायामिति** ।। अथ वेत्यादितृतीयपक्षं दूषयति –**न चेति** ।। आदिपदेन लिखितनिरीक्षितसङ्ग्रहः । एवं शूद्रश्रुतेः शूद्रत्वनिर्णायकत्वाभावमुपपाद्य पूर्वपक्षीयं लिङ्गं विदुरादीनां तूत्पन्नज्ञानत्वादिति भाष्योक्तं परिहारं मनसि निधाय विघटयति – **विदुरादेस्त्विति**।।



ಶೂದ್ರರಿಗೆ ಉಪನಯನಸಂಸ್ಕಾರವೇ ಇರುವುದಿಲ್ಲ. ಆದ್ದರಿಂದ ವೇದಾಧ್ಯಯನದಲ್ಲೂ ಅಧಿಕಾರವಿರುವುದಿಲ್ಲ.

'ಅಷ್ಟವರ್ಷಂ ಬ್ರಾಹ್ಮಣಮ್ ಉಪನಯೀತ' ಎಂಬ ವಾಕ್ಯದಲ್ಲಿ ಬ್ರಾಹ್ಮಣನಾಗಿದ್ದರೆ ಮಾತ್ರ ಉಪನಯನ ಮಾಡಬೇಕು. ಬೇರೆ ಜಾತಿಯವರಾಗಿದ್ದರೆ ಉಪನಯನ ಮಾಡದಿದ್ದರೂ ವೇದಾಧ್ಯಯನವನ್ನು ಮಾಡಿಸಬಹುದೆಂದು ಹೇಳಲಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ತಮಧ್ಯಾಯಪಯೀತ' ಎಂಬ ಮುಂದಿನ ವಾಕ್ಯದಲ್ಲಿ 'ತತ್' ಶಬ್ದದಿಂದ ಉಪನೀತನಾದವನನ್ನೇ ಪರಾಮರ್ಶ ಮಾಡಬೇಕು. ಆದ್ದರಿಂದ ಉಪನೀತನಾದವನಿಗೆ ಮಾತ್ರ, ಅಧ್ಯಯನವನ್ನು ಮಾಡಿಸಬೇಕಾದ ಕಾರಣ ಉಪನಯನಸಂಸ್ಕಾರವಿಲ್ಲದ ಶೂದ್ರಾದಿಗಳಿಗೆ ವೇದಾಧ್ಯಯನದಲ್ಲಿ ಅಧಿಕಾರ ಬರಲು ಸಾಧ್ಯವೇ ಇಲ್ಲ. ಮತ್ತು 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯವು ಯಾವ ಕರ್ತೃವನ್ನೂ ಕೂಡ ಹೇಳಿಲ್ಲ. ಇದರಿಂದ ಹಿಂದೆ ಪ್ರಕೃತನಾದ ಉಪನೀತನನ್ನೇ ಕರ್ತೃತ್ವೇನ ವಿವಕ್ಷಿಸಬೇಕು. 'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ' ಎಂಬ ಶ್ರುತಿಯೂ ಸಹ ಉಪನಯನವೆಂಬ ಎರಡನೆಯ ಜನ್ಮವನ್ನು ಹೊಂದಿದವನಿಗೆ ಮಾತ್ರ ವೇದಾಧಿಕಾರವನ್ನು ಘೋಷಣೆ ಮಾಡುತ್ತಿದೆ.

'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' ಎಂಬ ವಾಕ್ಯವು ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳುತ್ತಿದೆ ಹೊರತು, ಸಂಸ್ಕಾರ ಮಾಡಬಾರದೆಂದೇನೂ ಹೇಳುತ್ತಿಲ್ಲವಲ್ಲ ಎಂದೂ ಸಹ ಪ್ರಶ್ನಿಸಬಾರದು. ಸಂಸ್ಕಾರವಿಲ್ಲವೆಂದರೆ ಸಂಸ್ಕಾರವನ್ನು ಮಾಡಬಾರದೆಂದೇ ಅಭಿಪ್ರಾಯ. ಸಾಮಾನ್ಯವಿಧಿಯಿಂದ ಪ್ರಾಪ್ತವಾದ ಯಜ್ಞಾದಿಗಳನ್ನು ಶೂದ್ರಾದಿಗಳಿಗೆ ಇಲ್ಲವೆಂದು ಹೇಳಿದರೆ ಶೂದ್ರಾದಿಗಳು ಯಜ್ಞಾದಿಗಳನ್ನು ಮಾಡಲು ಅರ್ಹರಲ್ಲ ಎಂದೇ ಅಭಿಪ್ರಾಯವಾಗುತ್ತದೆ. ಇನ್ನು ಅಧ್ಯಯನ ಮಾಡದಿದ್ದರೂ ಪುಸ್ತಕ ಮೊದಲಾದವುಗಳನ್ನು ಓದಿಕೊಂಡು ವೇದಾರ್ಥತತ್ವಜ್ಞಾನವನ್ನು ಶೂದ್ರರು ಪಡೆಯಬಹುದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಶ್ರುತಿಯು ಸ್ಪಷ್ಟವಾಗಿ ಶೂದ್ರನಿಗೆ ವೇದಾಧ್ಯಯನವಿಲ್ಲವೆಂದಷ್ಟೇ ಹೇಳಿಲ್ಲ. ವೇದವನ್ನು ಕಿವಿಯಿಂದ ಕೇಳಲೂ ಬಾರದು. ಅದರ ಅರ್ಥವನ್ನೂ ಸಹ ತಿಳಿದುಕೊಳ್ಳಬಾರದೆಂದು ಸ್ಪಷ್ಟವಾಗಿ ನಿಷೇಧ ಮಾಡುತ್ತಿದೆ. ವಿದುರ, ಧರ್ಮವ್ಯಾಧ ಮೊದಲಾದವರು ವೇದಾರ್ಥತತ್ವಜ್ಞಾನವನ್ನು ತಿಳಿದಿರುವುದು ಮಹಾಭಾರತಾದಿಗಳಲ್ಲಿ ಉಲ್ಲೇಖವಿರಬಹುದು. ಆದರೆ ಅವರು ಈ ಶೂದ್ರರಿಗಿಂತ ಅತ್ಯಂತ ವಿಲಕ್ಷಣರಾಗಿದ್ದಾರೆ ಜಾತಾಪರೋಕ್ಷಿಗಳಾದ್ದರಿಂದ ಜನ್ಮಾಂತರ ಸಂಸ್ಕಾರಗಳಿಂದ ಅವರಿಗೆ ಹಾಗೇ ತಿಳಿದುಕೊಳ್ಳುವಂತಹ, ಈ ಜನ್ಮದಲ್ಲಿ ತಿಳಿದುಕೊಳ್ಳದಿದ್ದರೂ ಹಿಂದಿನ ಜನ್ಮದ ಸಂಸ್ಕಾರದಿಂದ ವೇದಾರ್ಥತತ್ವಜ್ಞಾನವನ್ನು ಅವರು ಪಡೆದಿರುತ್ತಾರೆ.





ಉತ್ತಮ ಸ್ತ್ರೀಯರು ವೇದವನ್ನು ಓದಬಹುದು

**तात्पर्यचन्द्रिका**

**उत्तमस्त्रीणां तु ''सपत्नीं मे पराधम पतिं मे केवलं कुरु'' इत्यादिभाष्योक्तलिङ्गात्**

ಅನುವಾದ - ಶೂದ್ರಾದಿಗಳಂತೆ ಸ್ತ್ರೀಯರಿಗೂ ಸಹ ವೇದವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲ. ಆದರೆ ಉತ್ತಮಸ್ತ್ರೀಯರಿಗೆ ವೇದಾಧಿಕಾರವು ಇರುತ್ತದೆ. ಈ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. ಭಾಷ್ಯದಲ್ಲಿ ಉದಾಹರಿಸಿದ 'ಸಪತ್ನೀಂ ಮೇ ಪರಾಧಮ ಪತಿಂ ಮೇ ಕೆವಲಂ ಕುರು' 'ನನ್ನ ಸವತಿಯರನ್ನು ಕೆಳಗೆ ಮಾಡಿ ನನ್ನನ್ನು ಅಧಿಕಳನ್ನಾಗಿ ಮಾಡು. ಪತಿಯು ನನ್ನ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದುವಂತೆ ಮಾಡು', ಇವೇ ಮೊದಲಾದ ಶ್ರುತಿಗಳಿಂದ ವೇದವಿದ್ಯಾಧಿ-ಕಾರವಿದೆಯೆಂದು ತಿಳಿಯುತ್ತದೆ. ಅಂದರೆ ಈ ಶ್ರುತಿಯ ಆಧಾರದಿಂದ ಶಚೀ ಮೊದಲಾದ ಉತ್ತಮಸ್ತ್ರೀಯರಿಗೆ ವೇದಾಧಿಕಾರವಿದೆಯೆಂದು ಸ್ಪಷ್ಟವಾಗುತ್ತದೆಂದು ಭಾಷ್ಯದಲ್ಲಿ ಲಿಂಗವನ್ನು ಹೇಳಿರುತ್ತಾರೆ.

**तथा –**

**''आहुरप्युत्तमस्त्रीणामधिकारं तु वैदिके ।**
**यथोर्वशी यमी चैव शच्याद्याश्च तथाऽपराः ।।**

**इत्यादिस्मृतेः**

ಇದರಂತೆ -

ಆಹುರಪ್ಯುತ್ತಮಸ್ತ್ರೀಣಾಮಧಿಕಾರಂ ತು ವೈದಿಕೇ ।
ಯಥೋರ್ವಶೀ ಯಮೀ ಚೈವ ಶಚ್ಯಾದ್ಯಾಶ್ಚ ತಥಾಽಪರಾಃ ।।

ಉತ್ತಮಸ್ತ್ರೀಯರಿಗೆ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಊರ್ವಶೀ, ಯಮೀ, ಶಚೀ ಇವರೇ ಮೊದಲಾದ ಅನೇಕ ಸ್ತ್ರೀಯರಿಗೆ ವೇದವಿದ್ಯಾಧಿಕಾರವಿರುವುದೇ ಈ ವಿಷಯದಲ್ಲಿ 'ದೃಷ್ಟಾಂತ' ಎಂಬ ಸ್ಮೃತಿಯ ಆಧಾರದಿಂದಲೂ ಉತ್ತಮಸ್ತ್ರೀಯರಿಗೆ ವೇದಾಧಿಕಾರವನ್ನು ಹೇಳಬಹುದು.

**तथा बृहदारण्यके ''एतद्वैतदक्षरं गार्गि एतस्य वा अक्षरस्य प्रशासने गार्गि'' इत्यक्षरविद्यायां गार्ग्याः सम्बोधनात्**



## ಸಾರ

ಶೂದ್ರರಿಗೆ ಉಪನಯನಸಂಸ್ಕಾರವೇ ಇರುವುದಿಲ್ಲ. ಆದ್ದರಿಂದ ವೇದಾಧ್ಯಯನದಲ್ಲೂ ಅಧಿಕಾರವಿರುವುದಿಲ್ಲ.

'ಅಷ್ಟವರ್ಷಂ ಬ್ರಾಹ್ಮಣಮ್ ಉಪನಯೀತ' ಎಂಬ ವಾಕ್ಯದಲ್ಲಿ ಬ್ರಾಹ್ಮಣನಾಗಿದ್ದರೆ ಮಾತ್ರ ಉಪನಯನ ಮಾಡಬೇಕು. ಬೇರೆ ಜಾತಿಯವರಾಗಿದ್ದರೆ ಉಪನಯನ ಮಾಡದಿದ್ದರೂ ವೇದಾಧ್ಯಯನವನ್ನು ಮಾಡಿಸಬಹುದೆಂದು ಹೇಳಲಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ತಮಧ್ಯಾಯಪಯೀತ' ಎಂಬ ಮುಂದಿನ ವಾಕ್ಯದಲ್ಲಿ 'ತತ್' ಶಬ್ದದಿಂದ ಉಪನೀತನಾದವನನ್ನೇ ಪರಾಮರ್ಶ ಮಾಡಬೇಕು. ಆದ್ದರಿಂದ ಉಪನೀತನಾದವನಿಗೆ ಮಾತ್ರ, ಅಧ್ಯಯನವನ್ನು ಮಾಡಿಸಬೇಕಾದ ಕಾರಣ ಉಪನಯನಸಂಸ್ಕಾರವಿಲ್ಲದ ಶೂದ್ರಾದಿಗಳಿಗೆ ವೇದಾಧ್ಯಯನದಲ್ಲಿ ಅಧಿಕಾರ ಬರಲು ಸಾಧ್ಯವೇ ಇಲ್ಲ. ಮತ್ತು 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯವು ಯಾವ ಕರ್ತೃವನ್ನೂ ಕೂಡ ಹೇಳಿಲ್ಲ. ಇದರಿಂದ ಹಿಂದೆ ಪ್ರಕೃತನಾದ ಉಪನೀತನನ್ನೇ ಕರ್ತೃತ್ವೇನ ವಿವಕ್ಷಿಸಬೇಕು. 'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮಾ' ಎಂಬ ಶ್ರುತಿಯೂ ಸಹ ಉಪನಯನವೆಂಬ ಎರಡನೆಯ ಜನ್ಮವನ್ನು ಹೊಂದಿದವನಿಗೆ ಮಾತ್ರ ವೇದಾಧಿಕಾರವನ್ನು ಘೋಷಣೆ ಮಾಡುತ್ತಿದೆ.

'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' ಎಂಬ ವಾಕ್ಯವು ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳುತ್ತಿದೆ ಹೊರತು, ಸಂಸ್ಕಾರ ಮಾಡಬಾರದೆಂದೇನೂ ಹೇಳುತ್ತಿಲ್ಲವಲ್ಲ ಎಂದೂ ಸಹ ಪ್ರಶ್ನಿಸಬಾರದು. ಸಂಸ್ಕಾರವಿಲ್ಲವೆಂದರೆ ಸಂಸ್ಕಾರವನ್ನು ಮಾಡಬಾರದೆಂದೇ ಅಭಿಪ್ರಾಯ. ಸಾಮಾನ್ಯವಿಧಿಯಿಂದ ಪ್ರಾಪ್ತವಾದ ಯಜ್ಞಾದಿಗಳನ್ನು ಶೂದ್ರಾದಿಗಳಿಗೆ ಇಲ್ಲವೆಂದು ಹೇಳಿದರೆ ಶೂದ್ರಾದಿಗಳು ಯಜ್ಞಾದಿಗಳನ್ನು ಮಾಡಲು ಅರ್ಹರಲ್ಲ ಎಂದೇ ಅಭಿಪ್ರಾಯವಾಗುತ್ತದೆ. ಇನ್ನು ಅಧ್ಯಯನ ಮಾಡದಿದ್ದರೂ ಪುಸ್ತಕ ಮೊದಲಾದವುಗಳನ್ನು ಓದಿಕೊಂಡು ವೇದಾರ್ಥತತ್ವಜ್ಞಾನವನ್ನು ಶೂದ್ರರು ಪಡೆಯಬಹುದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಶ್ರುತಿಯು ಸ್ಪಷ್ಟವಾಗಿ ಶೂದ್ರನಿಗೆ ವೇದಾಧ್ಯಯನವಿಲ್ಲವೆಂದಷ್ಟೇ ಹೇಳಿಲ್ಲ. ವೇದವನ್ನು ಕಿವಿಯಿಂದ ಕೇಳಲೂ ಬಾರದು. ಅದರ ಅರ್ಥವನ್ನೂ ಸಹ ತಿಳಿದುಕೊಳ್ಳಬಾರದೆಂದು ಸ್ಪಷ್ಟವಾಗಿ ನಿಷೇಧ ಮಾಡುತ್ತಿದೆ. ವಿದುರ, ಧರ್ಮವ್ಯಾಧ ಮೊದಲಾದವರು ವೇದಾರ್ಥತತ್ವಜ್ಞಾನವನ್ನು ತಿಳಿದಿರುವುದು ಮಹಾಭಾರತಾದಿಗಳಲ್ಲಿ ಉಲ್ಲೇಖವಿರಬಹುದು. ಆದರೆ ಅವರು ಈ ಶೂದ್ರರಿಗಿಂತ ಅತ್ಯಂತ ವಿಲಕ್ಷಣರಾಗಿದ್ದಾರೆ ಜಾತಾಪರೋಕ್ಷಿಗಳಾದ್ದರಿಂದ ಜನ್ಮಾಂತರ ಸಂಸ್ಕಾರಗಳಿಂದ ಅವರಿಗೆ ಹಾಗೇ ತಿಳಿದುಕೊಳ್ಳುವಂತಹ, ಈ ಜನ್ಮದಲ್ಲಿ ತಿಳಿದುಕೊಳ್ಳದಿದ್ದರೂ ಹಿಂದಿನ ಜನ್ಮದ ಸಂಸ್ಕಾರದಿಂದ ವೇದಾರ್ಥತತ್ವಜ್ಞಾನವನ್ನು ಅವರು ಪಡೆದಿರುತ್ತಾರೆ.





ಉತ್ತಮ ಸ್ತ್ರೀಯರು ವೇದವನ್ನು ಓದಬಹುದು

## तात्पर्यचन्द्रिका

**उत्तमस्त्रीणां तु ''सपत्नीं मे पराधम पतिं मे केवलं कुरु'' इत्यादिभाष्योक्तलिङ्गात्**

ಅನುವಾದ - ಶೂದ್ರಾದಿಗಳಂತೆ ಸ್ತ್ರೀಯರಿಗೂ ಸಹ ವೇದವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲ. ಆದರೆ ಉತ್ತಮಸ್ತ್ರೀಯರಿಗೆ ವೇದಾಧಿಕಾರವು ಇರುತ್ತದೆ. ಈ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. ಭಾಷ್ಯದಲ್ಲಿ ಉದಾಹರಿಸಿದ 'ಸಪತ್ನೀಂ ಮೇ ಪರಾಧಮ ಪತಿಂ ಮೇ ಕೇವಲಂ ಕುರು' 'ನನ್ನ ಸವತಿಯರನ್ನು ಕೆಳಗೆ ಮಾಡಿ ನನ್ನನ್ನು ಅಧಿಕಳನ್ನಾಗಿ ಮಾಡು. ಪತಿಯು ನನ್ನ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದುವಂತೆ ಮಾಡು', ಇವೇ ಮೊದಲಾದ ಶ್ರುತಿಗಳಿಂದ ವೇದವಿದ್ಯಾಧಿಕಾರವಿದೆಯೆಂದು ತಿಳಿಯುತ್ತದೆ. ಅಂದರೆ ಈ ಶ್ರುತಿಯ ಆಧಾರದಿಂದ ಶಚೀ ಮೊದಲಾದ ಉತ್ತಮಸ್ತ್ರೀಯರಿಗೆ ವೇದಾಧಿಕಾರವಿದೆಯೆಂದು ಸ್ಪಷ್ಟವಾಗುತ್ತದೆಂದು ಭಾಷ್ಯದಲ್ಲಿ ಲಿಂಗವನ್ನು ಹೇಳಿರುತ್ತಾರೆ.

**तथा –**

**''आहुरप्युत्तमस्त्रीणामधिकारं तु वैदिके ।**
**यथोर्वशी यमी चैव शच्याद्याश्च तथाऽपराः ॥**

**इत्यादिस्मृतेः**

ಇದರಂತೆ -

ಆಹುರಪ್ಯುತ್ತಮಸ್ತ್ರೀಣಾಮಧಿಕಾರಂ ತು ವೈದಿಕೇ ।
ಯಥೋರ್ವಶೀ ಯಮೀ ಚೈವ ಶಚ್ಯಾದ್ಯಾಶ್ಚ ತಥಾऽಪರಾಃ ॥

ಉತ್ತಮಸ್ತ್ರೀಯರಿಗೆ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಊರ್ವಶೀ, ಯಮೀ, ಶಚೀ ಇವರೇ ಮೊದಲಾದ ಅನೇಕ ಸ್ತ್ರೀಯರಿಗೆ ವೇದವಿದ್ಯಾಧಿಕಾರವಿರುವುದೇ ಈ ವಿಷಯದಲ್ಲಿ 'ದೃಷ್ಟಾಂತ' ಎಂಬ ಸ್ಮೃತಿಯ ಆಧಾರದಿಂದಲೂ ಉತ್ತಮಸ್ತ್ರೀಯರಿಗೆ ವೇದಾಧಿಕಾರವನ್ನು ಹೇಳಬಹುದು.

**तथा बृहदारण्यके ''एतद्वैतदक्षरं गार्गि एतस्य वा अक्षरस्य प्रशासने गार्गि'' इत्यक्षरविद्यायां गार्ग्याः सम्बोधनात्**

ಇದರಂತೆ ಬೃಹದಾರಣ್ಯೋಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ - 'ಏತದ್ವೈತದಕ್ಷರಂ ಗಾರ್ಗಿ ಏತಸ್ಯಾ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಯಾಜ್ಞ್ಯವಲ್ಕ್ಯರು ಗಾರ್ಗಿಯನ್ನು ಸಂಬೋಧನೆ ಮಾಡಿ ಅಕ್ಷರವಿದ್ಯೆಯನ್ನು ಉಪದೇಶ ಮಾಡಿದ್ದಾರೆ.

**तथा ''आत्मा वा अरे द्रष्टव्यः श्रोतव्यो मन्तव्यो निदिध्यासितव्य'' इत्यत्र अरे इत्यनेन मैत्रेय्याः सम्बोधनात्**

ಇದರಂತೆ 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬಲ್ಲಿ 'ಅರೇ' ಎಂಬ ಪದದಿಂದ ಮೈತ್ರೇಯಿಯನ್ನು ಕುರಿತು ಸಂಬೋಧನೆ ಮಾಡಿ, ಪರಮಾತ್ಮನ ಬಗ್ಗೆ ಶ್ರವಣಮನನಾದಿಗಳನ್ನು ಮಾಡಬೇಕೆಂದು ಉಪದೇಶ ಮಾಡಿದ್ದಾರೆ.

**तथा ''भवति ते व्याख्यास्यामि'' इति मैत्रेयीं सम्बोध्य ''व्याचक्षाणस्य तु मे निदिध्यासस्व'' इति निदिध्यासनविधानाच्च ।**

ಇದರಂತೆ 'ಭವತಿ ತೇ ವ್ಯಾಖ್ಯಾಸ್ಯಾಮಿ' ಎಲೈ ! ಮೈತ್ರೇಯಿಯೇ ನಿನಗಾಗಿ ಇದನ್ನು ವ್ಯಾಖ್ಯಾನ ಮಾಡುತ್ತೇನೆ ಎಂದು ಮೈತ್ರೇಯಿಯನ್ನು ಕುರಿತು ಸಂಬೋಧನೆ ಮಾಡಿ 'ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವ' ನಾನು ವ್ಯಾಖ್ಯಾನ ಮಾಡಿದ್ದನ್ನು ನೀನು ನಿದಿಧ್ಯಾಸನ ಮಾಡಬೇಕು ಎಂಬುದಾಗಿ ನಿದಿಧ್ಯಾಸನವನ್ನು ವಿಧಾನ ಮಾಡಿದ್ದಾರೆ. ಇದರಿಂದ ವೇದಶ್ರವಣದಲ್ಲಷ್ಟೇ ಅಧಿಕಾರವಲ್ಲ. ಆದರ ಅನುಷ್ಠಾನದ ವಿಷಯದಲ್ಲಿಯೂ ಉತ್ತಮಸ್ತ್ರೀಯರಿಗೆ ಅಧಿಕಾರವಿದೆಯೆಂದು ಸ್ಪಷ್ಟವಾಗುತ್ತದೆ.

**तथा प्रदानकर्मण एवोपनयनप्रतिनिधित्वेन संस्कारसद्भावाच्चास्त्यधिकारः ।**

ಬ್ರಾಹ್ಮಣರಿಗೆ ಉಪನಯನ ಸಂಸ್ಕಾರವಿರುವುದರಿಂದ ಅಧಿಕಾರವನ್ನು ಹೇಳುವಂತೆ ಉತ್ತಮಸ್ತ್ರೀಯರಿಗೆ ಪ್ರಧಾನಕರ್ಮವೆನಿಸಿದ ಕನ್ಯಾದಾನವೇ ಸಂಸ್ಕಾರ ರೂಪವಾಗಿದೆ. ಉಪನಯನ ಪ್ರತಿನಿಧಿಯಾಗಿ ಉತ್ತಮಸ್ತ್ರೀಯರಿಗೂ ಸಂಸ್ಕಾರವಾಗುವುದರಿಂದ ವೇದವಿದ್ಯಾಧಿಕಾರವಿರುತ್ತದೆ.

**एतेन स्त्रीमात्रस्यानधिकार इति परमतं परास्तम् ।**

ಹೀಗೆ ಸಮರ್ಥನೆ ಮಾಡಿದ್ದರಿಂದ ಯಾವುದೇ ಸ್ತ್ರೀಯರಿಗೂ ವೇದವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲವೆಂಬ ಪರಮತವನ್ನು ನಿರಾಕರಣೆ ಮಾಡಿದಂತಾಯಿತು.

**प्रकाशः –**

''नन्वेवं संस्काराभावेन वेदानधिकारश्चेदुत्तमस्त्रीणामनधिकारप्रसङ्ग'' इत्यादिशङ्कोत्तरटीकां विवृणोति – उत्तमेति ।।

ವಿವರಣೆ - ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಇಲ್ಲಿಯ ತನಕ ಸಮರ್ಥಿಸಲಾಯಿತು. ಅದರಂತೆ ಸ್ತ್ರೀಯರಿಗೂ ಸಹ ವೇದವಿದ್ಯಾಧಿಕಾರವಿರುವುದಿಲ್ಲ. ಇದರ ಮೇಲೆ ಟೀಕೆಯಲ್ಲಿ ಒಂದು ಆಕ್ಷೇಪ ಮಾಡಲಾಗಿದೆ. 'ನನ್ವೇವಂ ಸಂಸ್ಕಾರಾಭಾವೇನ ವೇದಾನಧಿಕಾರಶ್ಚೇತ್ ಉತ್ತಮಸ್ತ್ರೀಣಾಮನಧಿಕಾರಪ್ರಸಂಗಃ' ಸಂಸ್ಕಾರವಿಲ್ಲದ ಕಾರಣ ಸ್ತ್ರೀ-ಶೂದ್ರಾದಿಗಳಿಗೆ ಅಧಿಕಾರವಿರುವುದಿಲ್ಲವೆನ್ನುವುದಾದರೆ ಉತ್ತಮ ಸ್ತ್ರೀಯರಿಗೂ ಸಹ ವೇದವಿದ್ಯೆಯಲ್ಲಿ ಅಧಿಕಾರವಿಲ್ಲದಿರುವ ಪ್ರಸಂಗ ಬರುತ್ತದೆ ಎಂದು. ಹೀಗೆ ಆಶಂಕೆ ಮಾಡುವ ಟೀಕೆಯನ್ನು 'ಉತ್ತಮಸ್ತ್ರೀಣಾಂ ತು' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः – लिङ्गादिति** ।। शच्यादीनां ''सपत्नीं म'' इत्यादिविद्याद्रष्टृत्व-लिङ्गादित्यर्थः । **अस्त्यधिकार** इत्यन्वयः । एतद्भाष्याद्युक्तमुपलक्षणं मत्वाऽऽह **– तथेति ।। इत्यादिस्मृतेरिति।।** जिज्ञासासूत्रभाष्योक्तस्मृतेरित्यर्थः ।

'ಭಾಷ್ಯೋಕ್ತಲಿಂಗಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ಶಚೀ ಮೊದಲಾದ ಉತ್ತಮಸ್ತ್ರೀಯರು 'ಸಪತ್ನೀಂ ಮೇ' ಇವೇ ಮೊದಲಾದ ವೇದಗಳ ದ್ರಷ್ಟಾರರಾಗಿದ್ದಾರೆ. ಈ ವೇದದ್ರಷ್ಟೃತ್ವವೆಂಬ ಲಿಂಗಬಲದಿಂದ ಅವರಿಗೂ ಅಧಿಕಾರವಿರುತ್ತದೆಂದು ತಿಳಿಯಬೇಕು. 'ಭಾಷ್ಯೋಕ್ತಲಿಂಗಾತ್' ಎಂಬುದಕ್ಕೆ 'ಅಸ್ತ್ಯಧಿಕಾರಃ' ಎಂಬಲ್ಲಿ ಅನ್ವಯ. ಭಾಷ್ಯದಲ್ಲಿ ಹೇಳಿದ್ದು ಉಪಲಕ್ಷಣವೆಂಬ ಅಭಿಪ್ರಾಯದಿಂದ 'ತಥಾ' ಇತ್ಯಾದಿ ಗ್ರಂಥವು ಹೊರಟಿದೆ. 'ಇತ್ಯಾದಿ ಸ್ಮೃತೇಃ' ಎಂದರೆ ಜಿಜ್ಞಾಸಾಧಿಕರಣದ ಸೂತ್ರಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಗಳಿರುವುದರಿಂದ ಎಂದರ್ಥ.

**प्रकाशः –** ''भवति ते'' इत्यत्र हे भवति इति सम्बोधनम् । ते तुभ्यमित्यर्थः।।

'ಭವತಿ ತೇ ವ್ಯಾಖ್ಯಾಸ್ಯಾಮಿ' ಎಂಬಲ್ಲಿರುವ 'ಭವತಿ' ಎಂಬುದು ಕ್ರಿಯಾಪದವಲ್ಲ. ಹೊರತಾಗಿ 'ಹೇ ಭವತಿ' ಎಂಬುದಾಗಿ 'ಭವತ್' ಶಬ್ದದ ಸಂಬೋಧನ ಪ್ರಥಮಾವಿಭಕ್ತಿಯಾಗಿದೆ. 'ತೇ' ಎಂದರೆ ನಿನಗೋಸ್ಕರ ಎಂದರ್ಥ. ಎಲೈ ! ಮೈತ್ರೇಯಿಯೇ ನಿನಗಾಗಿ ವ್ಯಾಖ್ಯಾನ ಮಾಡುತ್ತೇನೆ ಎಂದು ಅಭಿಪ್ರಾಯ.

**प्रकाशः – एतेनेति** ।। उदाहृतानेकमानसिद्धलिङ्गदर्शनेनेत्यर्थः ।

'ಏತೇನ' ಎಂದರೆ ಮೇಲೆ ಉದಾಹರಿಸಿದ ಅನೇಕ ಪ್ರಮಾಣಗಳ ಆಧಾರದಿಂದ ಎದರ್ಥ. ಹಾಗಾಗಿ ಉತ್ತಮ ಸ್ತ್ರೀಯರಿಗೆ ಅಧಿಕಾರವಿಲ್ಲವೆಂಬ ಪರಮತವು ನಿರಸ್ತವಾಯಿತು.




ಉಪನಯನ ಸಂಸ್ಕಾರವಿದ್ದವರಿಗೆ ಮಾತ್ರ ವೇದಾಧ್ಯಯನ. ಯಾರಿಗೆ ಉಪನಯನ ಸಂಸ್ಕಾರವಿಲ್ಲವೋ ಅವರಿಗೆ ವೇದಾಧ್ಯಯನವಿಲ್ಲ. ಆದ್ದರಿಂದಲೇ ಸ್ತ್ರೀಯರಿಗೂ ವೇದಾಧಿಕಾರವು ಇರುವುದಿಲ್ಲ. ಆದರೆ ಉತ್ತಮ ಸ್ತ್ರೀಯರಿಗೆ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಪರಮತದವರು ಯಾವುದೇ ಸ್ತ್ರೀಯರಿಗೂ ಸಹ ವೇದಾಧಿಕಾರವಿಲ್ಲವೆನ್ನುತ್ತಾರೆ. ಇದು ತಪ್ಪು. ಶಚಿದೇವಿಯೇ ಸಾಕ್ಷಾತ್ತಾಗಿ 'ಸಪತ್ನೀಂ ಮೇ ಪರಾಧಮ'

ಇತ್ಯಾದಿ ವೇದಗಳನ್ನು ಸಾಕ್ಷಾತ್ಕಾರ ಮಾಡಿಕೊಂಡಿರುತ್ತಾಳೆ. ಇದರಿಂದ ಊರ್ವಶೀ, ಶಚೀ ಮೊದಲಾದ ಉತ್ತಮ ಸ್ತ್ರೀಯರಿಗೆ ವೇದವಿದ್ಯಾಧಿಕಾರವಿರುತ್ತದೆಂದು ಸ್ಪಷ್ಟವಾಗುತ್ತದೆ. ಬೃಹದಾರಣ್ಯಕೋಪನಿಷತ್ತಿನಲ್ಲಿಯೂ ಯಾಜ್ಞವಲ್ಕ್ಯರು ಗಾರ್ಗಿಯನ್ನು ಕುರಿತು ಸಂಬೋಧನೆ ಮಾಡಿ ಅಕ್ಷರವಿದ್ಯೆಯನ್ನು ಉಪದೇಶ ಮಾಡಿದ್ದಾರೆ. ಮೈತ್ರೇಯಿಗೆ ಆತ್ಮೋಪದೇಶವನ್ನು ಮಾಡಿದ್ದಾರೆ. ಮತ್ತು 'ಭವತಿ ತೇ ವ್ಯಾಖ್ಯಾಸ್ಯಾಮಿ' ಎಂದು ಮೈತ್ರೇಯಿಯನ್ನು ಸಂಬೋಧನೆ ಮಾಡಿ, 'ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವ' 'ನಾನು ವ್ಯಾಖ್ಯಾನ ಮಾಡಿದ್ದನ್ನು ನೀನು ನಿದಿಧ್ಯಾಸನ ಮಾಡು' ಎಂದು ಉಪದೇಶ ಮಾಡಿದ್ದಾರೆ. ಆದ್ದರಿಂದ ಉತ್ತಮ ಸ್ತ್ರೀಯರಿಗೆ ವೇದಾಧ್ಯಯನದಲ್ಲಿ ಮಾತ್ರ ಅಧಿಕಾರವಲ್ಲ. ಅದರ ಅನುಷ್ಠಾನದ ವಿಷಯದಲ್ಲಿಯೂ ಅಧಿಕಾರವಿದ್ದೇ ಇರುತ್ತದೆ. 'ವಿವಾಹ' ಎಂಬ ಸಂಸ್ಕಾರವೇ ಉಪನಯನ ಪ್ರತಿನಿಧಿಯಾಗಿರುತ್ತದೆ. ಆದ್ದರಿಂದ ಅವರಿಗೂ ವಿವಾಹವೆಂಬ ಸಂಸ್ಕಾರವಿರುವ ಕಾರಣ ವೇದಾಧ್ಯಯನದಲ್ಲಿ ಅಧಿಕಾರವನ್ನು ಹೇಳಬೇಕು. ಆದರೆ ಸಾಮಾನ್ಯ ಸ್ತ್ರೀಯರಿಗೆ ವೇದದ ಶ್ರವಣ-ಪಠಣ ಮೊದಲಾದವುಗಳವುಗಳಲ್ಲಿ ಸರ್ವಥಾ ಅಧಿಕಾರವಿರುವುದಿಲ್ಲ.

• • • • •

## ಶೂದ್ರರಿಗೆ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿಲ್ಲ

### तात्पर्यचन्द्रिका

**एवं च शूद्रस्य न यज्ञ इत्यादिनिषेधादेव कर्मानधिकारः ।**

ಅನುವಾದ - ಶೂದ್ರನಿಗೆ ವೇದವಿದ್ಯೆಯಲ್ಲಷ್ಟೇ ಅಧಿಕಾರವಿಲ್ಲವೆಂದಲ್ಲ. ಯಜ್ಞಾದಿಕರ್ಮಗಳಲ್ಲಿಯೂ ಅಧಿಕಾರವಿರುವುದಿಲ್ಲ. ಏಕೆಂದರೆ 'ನಾಗ್ನಿರ್ನ ಯಜ್ಞಃ' ಎಂಬ ಶ್ರುತಿಯು ಶೂದ್ರನಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಸ್ಪಷ್ಟವಾಗಿ ನಿಷೇಧ ಮಾಡುತ್ತಿದೆ.

**नतु ज्योतिष्टोमादिकर्मणामाहवनीयाद्यग्निविद्यासाध्यत्वात्तयोश्चाधानोपनयनाधीनत्वात्तयोश्च वसन्तादिवाक्याभ्यां त्रैवर्णिकानामेव विधानात्तेषामेवाधिकारादिति मीमांसकोक्तरीत्याऽनधिकारः ।**

'ನ ಯಜ್ಞಃ' ಎಂಬ ನಿಷೇಧಪ್ರಮಾಣದಿಂದಲೇ ಶೂದ್ರರಿಗೆ ಕರ್ಮಾಧಿಕಾರವಿಲ್ಲವೆನ್ನಬೇಕು. ಹೊರತು, ಮೀಮಾಂಸಕರು ಹೇಳುವಂತೆ ಕರ್ಮಾನಧಿಕಾರವನ್ನು ಹೇಳಬಾರದು.

ಮೀಮಾಂಸಕರು ಶೂದ್ರಾದಿಗಳಿಗೆ ಕರ್ಮದಲ್ಲಿ ಅಧಿಕಾರವಿಲ್ಲವೆಂಬುದನ್ನು ಹೀಗೆ ಸಮರ್ಥಿಸುತ್ತಾರೆ - ಜ್ಯೋತಿಷ್ಟೋಮಾದಿಕರ್ಮಗಳು ಆಹವನೀಯ ಮೊದಲಾದ ಅಗ್ನಿ ಮತ್ತು ವೇದಾರ್ಥಜ್ಞಾನ ಇವೆರಡರಿಂದ ಸಾಧ್ಯವಾಗಿವೆ. ಅಗ್ನಿ ಹಾಗೂ ವೇದಾರ್ಥಜ್ಞಾನಗಳೆರಡೂ ಆಧಾನ ಮತ್ತು ಉಪನಯನಗಳ ಅಧೀನವಾಗಿವೆ. ಇವೆರಡನ್ನು ವಸಂತಾದಿವಾಕ್ಯಗಳು ತ್ರೈವರ್ಣಿಕರಿಗಷ್ಟೇ ವಿಧಾನ ಮಾಡುತ್ತಿವೆ. ಹಾಗಾಗಿ ತ್ರೈವರ್ಣಿಕರಿಗೆ ಮಾತ್ರ ವೇದವಿದ್ಯಾಧಿಕಾರವಿರುತ್ತದೆ.

ಪರಿಪೂರ್ಣಚಂದ್ರಿಕಾ

(ಅಭಿಪ್ರಾಯ ಹೀಗಿದೆ - ಯಾರಿಗೆ ಅಗ್ನ್ಯಾಧಾನವಿದೆಯೋ, ಅವರಿಗೆ ಸಂಸ್ಕೃತವಾದ ಅಗ್ನಿಯಿರುತ್ತದೆ. ಆದ್ದರಿಂದ ಆಹವನೀಯಾದ್ಯಗ್ನಿಯು ಅಗ್ನ್ಯಾಧಾನಸಾಪೇಕ್ಷಿತವಾಗಿದೆ. ಅದೇ ರೀತಿ ವೇದಾರ್ಥಜ್ಞಾನವೂ ಸಹ ಅಧ್ಯಯನಸಾಪೇಕ್ಷಿತವಾಗಿದೆ. ಅಗ್ನ್ಯಾಧಾನವನ್ನು ವಸಂತೇ ಬ್ರಾಹ್ಮಣಮುಪನಯೀತ' ಇತ್ಯಾದಿ ವಾಕ್ಯಗಳು ತ್ರೈವರ್ಣಿಕರಿಗೆ ಮಾತ್ರ ಹೇಳುತ್ತಿದೆ. ಶೂದ್ರರಿಗೆ ಅಗ್ನ್ಯಾಧಾನವಿಲ್ಲದ ಕಾರಣ ಅಗ್ನಿಯೂ ಇರುವುದಿಲ್ಲ. ಅಗ್ನಿಯಿಲ್ಲದ ಕಾರಣ ಜ್ಯೋತಿಷ್ಟೋಮಾದಿ-ಕರ್ಮದಲ್ಲಿಯೂ ಅಧಿಕಾರವಿರುವುದಿಲ್ಲ. ಇದರಂತೆ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ' ಎಂಬ ವಾಕ್ಯದಲ್ಲಿ ತ್ರೈವರ್ಣಿಕರಿಗೆ ಮಾತ್ರ ಉಪನಯನಸಂಸ್ಕಾರವನ್ನು ವಿಧಿಸಲಾಗಿದೆ. ಶೂದ್ರರಿಗೆ ಉಪನಯನಸಂಸ್ಕಾರವನ್ನು ಹೇಳಿಲ್ಲ. ಆದ್ದರಿಂದ ಅಧ್ಯಯನದಲ್ಲಿಯೂ ಅವರಿಗೆ ಅಧಿಕಾರವಿಲ್ಲ. ಆದ್ದರಿಂದಲೇ ವೇದಾರ್ಥಜ್ಞಾನವೂ ಸಹ ಅವರಿಗೆ ಇರುವುದಿಲ್ಲ.)

**(त्रैवर्णिकेतराणाम्) अनग्नित्वेनानधिकारे रथकाराख्यसंकरजातेरप्यनधि-कारापातात् ।**

ಮೀಮಾಂಸಕರ ಈ ಸಮರ್ಥನೆ ಸಾಧುವಲ್ಲ. ಹೀಗೆ ಅವರು ಅಗ್ನ್ಯಾಧಾನವಿಲ್ಲದ ಕಾರಣ ಕರ್ಮಾಧಿಕಾರವಿಲ್ಲವೆನ್ನುವುದಾದರೆ ರಥಕಾರವೆಂಬ ಸಂಕರ ಜಾತಿಯವನಿಗೂ ಯಾಗದಲ್ಲಿ ಅಧಿಕಾರವನ್ನು ಹೇಳದಿರಬೇಕಾದಿತು.

ಅಂದರೆ 'ತ್ರೈವರ್ಣಿಕೇತರಃ ಯಜ್ಞಕರ್ಮಣಿ ನಾಧಿಕಾರಿಣಃ ಅನಗ್ನಿತ್ವಾತ್' ಎಂಬ ಮೀಮಾಂಸಕರ ಅನುಮಾನಕ್ಕೆ ಅಂಶೇ ಬಾಧದೋಷವನ್ನು ಭಾಗಾಸಿದ್ಧಿದೋಷವನ್ನು ಹೇಳಿದಂತಾಯಿತು.

**''वर्षासु रथकार आदधीत'' इति श्रुत्या तस्याप्याधानोपगमात् ।**

'ವರ್ಷಾಸು ರಥಕಾರ ಆದಧೀತ' ವರ್ಷಾಕಾಲದಲ್ಲಿ ರಥಕಾರನು ಅಗ್ನ್ಯಾಧಾನ ಮಾಡಬೇಕು. ಎಂಬುದಾಗಿ ಶ್ರುತಿಯು ರಥಕಾರನೆಂಬ ಸಂಕರಜಾತಿಯವನಿಗೂ ಅಗ್ನ್ಯಾಧಾನವನ್ನು ಹೇಳುತ್ತಿದೆ. ಹೀಗಿರುವಾಗ ತ್ರೈವರ್ಣಿಕರಿಗೆ ಅಗ್ನ್ಯಾಧಾನವೆಂಬ ನಿಮ್ಮ ಯುಕ್ತಿಯು ಸರಿಯಲ್ಲ.

**''कृत्तिकास्वग्निमादधीत नक्तं गार्हपत्यमादधीत'' इत्यादिना शूद्रस्याप्याधानविधिः ।**

'ಕೃತ್ತಿಕಾಸ್ವಾಗ್ನಿಮಾದಧೀತ ನಕ್ತಂ ಗಾರ್ಹಪತ್ಯಮಾದಧೀತ' 'ಕೃತ್ತಿಕಾನಕ್ಷತ್ರದಲ್ಲಿ ಅಗ್ನಾಧಾನ ಮಾಡಬೇಕು. ರಾತ್ರಿಯಕಾಲದಲ್ಲಿ ಗಾರ್ಹಪತ್ಯವನ್ನು ಆಧಾನ ಮಾಡಬೇಕು' ಎಂಬ ವಿಧಿವಾಕ್ಯವು ಸಾಮಾನ್ಯವಾಗಿ ಎಲ್ಲರಿಗೂ ಅಗ್ನ್ಯಾಧಾನವನ್ನು ಹೇಳುತ್ತಿದೆ. ಈ ವಾಕ್ಯದಿಂದ ಶೂದ್ರನಿಗೂ ಅಗ್ನ್ಯಾಧಾನವನ್ನು ವಿಧಾನ ಮಾಡಿದಂತಾಗುತ್ತದೆ.

**वसन्तादिवाक्यानि तु गुणद्वययुक्तत्वेऽपि विधिलाघवाय सामान्यविषयेण कृत्तिकादिवाक्येन प्राप्तब्राह्मणादीनां वसन्तादिनियमपराणि ।**

'ವಸಂತೇ ಬ್ರಾಹ್ಮಣಮುಪನಯೀತ' ಇತ್ಯಾದಿ ವಾಕ್ಯಗಳು ಕಾಲವನ್ನು ವಿಧಾನ ಮಾಡುತ್ತಿವೆ. ಮತ್ತು ಬ್ರಾಹ್ಮಣ್ಯಾದಿಗಳಿಗೆ ನಿಮಿತ್ತತ್ವವನ್ನು ವಿಧಾನ ಮಾಡುತ್ತಿದೆ. ಹೀಗೆ ಗುಣದ್ವಯಗಳಿಂದ ಯುಕ್ತವಾಗಿದ್ದರೂ ವಿಧಿಯ ಲಾಘವಕ್ಕಾಗಿ ಸಾಮಾನ್ಯತಃ ವಿಧಿವಾಕ್ಯವೆನಿಸಿದ 'ಕೃತ್ತಿಕಾಸ್ವಗ್ನಿಮಾದಧೀತ' ಎಂಬ ವಾಕ್ಯದಿಂದ ಪ್ರಾಪ್ತವಾದ ಬ್ರಾಹ್ಮಣಾದಿಗಳಿಗೆ ವಸಂತ ಮೊದಲಾದ ಕಾಲನಿಯಮವನ್ನಷ್ಟೇ ವಿಧಾನ ಮಾಡುತ್ತಿದೆ.

**शूद्रस्य तु ऋत्वन्तर आधानमित्यपि सुवचत्वाच ।**

ಶೂದ್ರನಿಗೆ ಯಾವುದೇ ಕಾಲನಿಯಮವಿಲ್ಲದೇ ಬೇರೆ ಋತುಗಳಲ್ಲಿ ಅಗ್ನ್ಯಾಧಾನ ಮಾಡಬಹುದೆಂದೂ ಕೂಡ ವ್ಯಾಖ್ಯಾನ ಮಾಡಬಹುದಲ್ಲವೇ?

**प्रकाशः –**

एवं रथवत्त्वरूपादध्ययनाङ्गोपनयनाभावादिरूपाच्च बाधकाच्छूद्रशब्दस्य रूढित्यागान्न शूद्राधिकार इत्युक्तम् । इदानीं भाष्ये ''न संस्कारो न व्रतानि शूद्रस्य'' इत्येतावत्येवोदाहर्तव्ये यत् ''नाग्निर्न यज्ञ'' इत्यंशस्याप्युदाहरणं तेन शूद्रस्य यज्ञानधिकारोऽपि निषेधादेव । नतु मीमांसकरीत्येति सूचितमिति तत्प्रपञ्चयति – एवं चेत्यादिना ।।

ವಿವರಣೆ - ಇಲ್ಲಿಯ ತನಕ . ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆನ್ನಲು ರಥವತ್ವವೆಂಬ ಅಂತರಂಗಬಾಧಕವನ್ನು ಹೇಳಿದರು. ಮತ್ತು ಅಧ್ಯಯನಾಂಗವಾದ ಉಪನಯನಾಭಾವವೆಂಬ ಬಹಿರಂಗಬಾಧಕವನ್ನೂ ಕೂಡ ಸಮರ್ಥಿಸಲಾಯಿತು. ಹೀಗೆ ಅಂತರಂಗಬಾಧಕ ಬಹಿರಂಗಬಾಧಕಗಳಿರುವ ಕಾರಣ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಹಾಗಾಗಿ ಶೂದ್ರರಿಗೆ ವೇದವಿದ್ಯಾಧಿಕಾರವಿರುವುದಿಲ್ಲವೆಂದು ಸಮರ್ಥಿಸಿದ್ದಾಯಿತು. ಪ್ರಕೃತ ವೇದವಿದ್ಯೆಯಲ್ಲಷ್ಟೇ ಅಧಿಕಾರವಿಲ್ಲ-ವೆಂದಲ್ಲ. ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ಭಾಷ್ಯದಲ್ಲಿ ವೇದವಿದ್ಯಾಧಿಕಾರವಿಲ್ಲವೆನ್ನಲು 'ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ' ಎಂದಷ್ಟೇ ಶ್ರುತಿಯನ್ನು ಉದಾಹರಿಸಿದ್ದರೆ ಸಾಕಾಗಿತ್ತು. ಆದರೂ ಸಹ 'ನಾಗ್ನಿರ್ನ ಯಜ್ಞಃ' ಎಂಬ ಅಂಶವನ್ನು ಉದಾಹರಣೆ ಮಾಡಿದ್ದರಿಂದ ಶೂದ್ರರಿಗೆ ಯಾಗಾದಿಕರ್ಮಗಳಲ್ಲಿ ನಿಷೇಧವಿರುವ ಪ್ರಯುಕ್ತವಷ್ಟೇ ಅಧಿಕಾರವಿರುವುದಿಲ್ಲ

ಹೊರತಾಗಿ, ಮೀಮಾಂಸಕರು ಹೇಳುವಂತೆ ಅಧಿಕಾರವಿಲ್ಲವೆಂಬುದನ್ನು ಸಮರ್ಥನೆ ಮಾಡಬಾರದು ಎಂದು ಸೂಚಿಸಿದ್ದಾರೆ. ಹೀಗೆ 'ನಾಗ್ನಿರ್ನ ಯಜ್ಞಃ' ಎಂಬ ಅಂಶವನ್ನು ಉದಾಹರಿಸಿದ್ದರಿಂದಲೇ ಮೀಮಾಂಸಕಮತವನ್ನು ನಿರಾಕರಿಸಿದಂತಾಯಿತೆಂಬುದನ್ನು ಗ್ರಂಥಕಾರರು 'ಏವಂಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** –"चातुर्वर्ण्यमविशेषात्" इति षष्ठाद्यपादीयापशूद्राधिकरणसिद्धान्तमनुवदति – **ज्योतिष्टोमेति** ।।

ಪೂರ್ವಮೀಮಾಂಸೆಯ 'ಚಾತುರ್ವರ್ಣ್ಯಮವಿಶೇಷಾತ್' ಎಂಬ ಆರನೇ ಅಧ್ಯಾಯದ ಪ್ರಥಮಪಾದದಲ್ಲಿ ಅಪಶೂದ್ರಾಧಿಕರಣವಿದೆ. ಅದರ ಸಿದ್ಧಾಂತವನ್ನು ಅನುವಾದ ಮಾಡುತ್ತಿದ್ದಾರೆ 'ಜ್ಯೋತಿಷ್ಟೋಮ' ಇತ್ಯಾದಿ ವಾಕ್ಯದಿಂದ.

**प्रकाशः** – **त्रैवर्णिकानामेवेति** ।। द्वितीयस्य तृतीये पादे "आधाने सर्वशेषत्वात्" इति तृतीयेऽधिकरणे "वसन्ते ब्राह्मणोऽग्नीनादधीत ग्रीष्मे राजन्यः शरदि वैश्य" इति तथा "वसन्ते ब्राह्मणमुपनयीत, ग्रीष्मे राजन्यं, शरदि वैश्यम्" इति वाक्यद्वयमुदाहृत्य किं ब्राह्मणादीनामाधानोपनयनयोः प्राप्तानां वसन्तादिकालविधानं प्रति निमित्तार्थान्येतानि वचनान्युत तेषामप्राप्ताधानोपनयनविधिपराणीति संशये

'ಆಧಾನೇ ಸರ್ವಶೇಷತ್ವಾತ್' (೨-೩-೩)[1]

---

(१) भाट्टसङ्ग्रहः –

अथ तृतीयमाधानस्य विधेयत्वाधिकरणम्

आधाने सर्वशेषत्वात् ।।४।।

पूर्ववैषम्येण शङ्कनात् सङ्गतिः । अनारभ्य श्रूयते 'वसन्ते ब्राह्मणोऽग्नीनादधीत' ग्रीष्मे राजन्यः, शरदि वैश्यः" इति । तथा "वसन्ते ब्राह्मणमुपनयीत, ग्रीष्मे राजन्यम्, शरदि वैश्यम्" इति च । तत्र सन्देहः आधानोपनयनयोः कर्तृत्वेनार्थप्राप्तानां ब्राह्मणादीनां ब्राह्मणश्चेद्वसन्ते राजन्यश्चेद्ग्रीष्मे इत्यादिरूपेण कालविधिं प्रति निमित्तार्थानि वाक्यानि, उताप्राप्तानां ब्राह्मणादीनां वसन्तादिविशिष्टाधानोपनयनविध्यर्थानिति । **पूर्वपक्षस्तु युक्तः** पूर्वत्रावेष्टौ ब्राह्मणादेप्राप्त्या निमित्तार्थत्वाभावः । नेह तथा । क्रतुविध्यन्यथानुपपत्त्या प्राप्तिसम्भवात् । "अग्निहोत्रं जुहुयात् स्वर्गकामः" इति त्रैवर्णिकसाधारणक्रतुविधयस्तुदनुष्ठानद्वारा स्वर्गाद्यर्थाः । नच क्रत्वनुष्ठानमाहवनीयाद्यग्निं वेदाध्ययनतदर्थज्ञानरूपविद्यां च विना युक्तम् । नच ते आधानोपनयने विना शक्यसंपादे । अत आक्षेपादेव

ಅಪಶೂದ್ರಾಧಿಕರಣ (೧-೩-೯)

'ವಸಂತೇ ಬ್ರಾಹ್ಮಣೋಽಗ್ನೀನಾದಧೀತ ಗ್ರೀಷ್ಮೇ ರಾಜನ್ಯಃ ಶರದಿ ವೈಶ್ಯಃ' ವಸಂತಕಾಲದಲ್ಲಿ ಬ್ರಾಹ್ಮಣನು ಅಗ್ನಿಯನ್ನು ಆಧಾನ ಮಾಡಬೇಕು. ಗ್ರೀಷ್ಮಋತುವಿನಲ್ಲಿ ಕ್ಷತ್ರಿಯನು, ಶರತ್ಕಾಲದಲ್ಲಿ ವೈಶ್ಯನು ಅಗ್ನ್ಯಾಧಾನ ಮಾಡಬೇಕು. ಮತ್ತು 'ವಸಂತೇ ಬ್ರಾಹ್ಮಣಮುಪನಯೀತ, ಗ್ರೀಷ್ಮೇ ರಾಜನ್ಯಂ, ಶರದಿ ವೈಶ್ಯಮ್' ವಸಂತಋತುವಿನಲ್ಲಿ ಬ್ರಾಹ್ಮಣನಿಗೆ ಉಪನಯನ ಮಾಡಬೇಕು. ಗ್ರೀಷ್ಮ ಋತುವಿನಲ್ಲಿ ಕ್ಷತ್ರಿಯನಿಗೆ, ಶರದೃತುವಿನಲ್ಲಿ ವೈಶ್ಯನಿಗೆ ಉಪನಯನ ಮಾಡಬೇಕು' ಈ ಎರಡು ವಾಕ್ಯಗಳನ್ನು ಈ ಅಧಿಕರಣದಲ್ಲಿ ವಿಷಯವನ್ನಾಗಿ ಉಲ್ಲೇಖಿಸಲಾಗಿದೆ. ಬ್ರಾಹ್ಮಣಾದಿಗಳಿಗೆ ಈಗಾಗಲೇ ಆಧಾನ ಉಪಯನಗಳು ಸ್ವತಃ ಪ್ರಾಪ್ತವಾಗಿವೆ. ಅಂತಹವರಿಗೆ ವಸಂತಾದಿಕಾಲವನ್ನು ವಿಧಾನ ಮಾಡುವುದಕ್ಕಾಗಿ ಬ್ರಾಹ್ಮಣ್ಯಾದಿಗಳಿಗೆ ನಿಮಿತತ್ವವನ್ನಷ್ಟೇ ವಿಧಿಸಲಾಗಿದೆಯೆಂದು ಈ ವಾಕ್ಯಗಳು ಹೇಳುತ್ತಿವೆಯೋ, ಅಥವಾ ಅಧಾನ ಉಪನಯನಗಳು ಸ್ವತಃ ಪ್ರಾಪ್ತವಾಗಿಲ್ಲ. ಅಂತಹವರಿಗೆ ಉಪನಯನದ ವಿಧಾನಕ್ಕೋಸ್ಕರವೇ ಈ ವಾಕ್ಯಗಳು ಹೊರಟಿವೆಯೋ ಎಂದು ಸಂದೇಹ.

**प्रकाशः – अग्निविद्याभ्यां विना क्रत्वनुष्ठानासम्भवात्तयोश्चाधानोपनयनाधीनत्वात् क्रतुविधिभिरेवाग्निविद्यासाध्यैस्तदुपायभूतयोराधानोपनयनयोराक्षेपतः प्राप्तेस्तयोः कालविधानाय निमित्तकार्थानीति प्राप्ते**

ಪೂರ್ವಪಕ್ಷ - ಅಗ್ನಿ ಹಾಗೂ ವಿದ್ಯೆಗಳಿಲ್ಲದೆ ಜ್ಯೋತಿಷ್ಟೋಮಾದಿ ಕ್ರತುಗಳನ್ನು ಅನುಷ್ಠಾನ ಮಾಡಲು ಸಾಧ್ಯವಿಲ್ಲ. ಅಗ್ನಿ ಹಾಗೂ ವಿದ್ಯೆಗಳನ್ನು ಪಡೆಯಬೇಕೆಂದರೆ ಅಗ್ನ್ಯಾಧಾನ ಮಾಡಬೇಕು. ಮತ್ತು ಉಪನಯನಸಂಸ್ಕಾರವಾಗಬೇಕು. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವಾಕ್ಯವು ಯಾರಿಗೆ ಸ್ವರ್ಗಕಾಮನೆಯಿದೆಯೋ, ಅವರಿಗೆಲ್ಲರಿಗೂ ಕ್ರತುವಿನಲ್ಲಿ ಅಧಿಕಾರವಿದೆಯೆಂದು ಹೇಳುತ್ತಿದೆ. ಈ ಕ್ರತುವಿಧಿಯಿಂದಲೇ ಅಗ್ನಿ ಹಾಗೂ ವಿದ್ಯೆಗಳನ್ನು ಪಡೆಯಬೇಕು. ಅದಕ್ಕಾಗಿ ಅಗ್ನ್ಯಾಧಾನ ಮತ್ತು ಉಪನಯನಸಂಸ್ಕಾರಗಳನ್ನೂ ಹೊಂದಬೇಕು ಎಂದು ಆಕ್ಷೇಪದ ಬಲದಿಂದ ಸಿದ್ಧವಾಗುತ್ತದೆ. ಆದ್ದರಿಂದ ಬ್ರಾಹ್ಮಣಾದಿಗಳಿಗೆ ಆಧಾನಉಪನಯನಗಳು ಸ್ವತಃ ಮೊದಲೇ ಪ್ರಾಪ್ತವಾಗಿರುವುದರಿಂದ 'ವಸಂತೇ ಬ್ರಾಹ್ಮಣಮುಪನಯೀತ' ಇತ್ಯಾದಿ ವಾಕ್ಯಗಳು ಕೇವಲ ಕಾಲವನ್ನಷ್ಟೇ ವಿಧಿಸುತ್ತಿವೆ. ಬ್ರಾಹ್ಮಣಾದಿ ಪದಗಳು

ब्राह्मणादेराधानोपनयनसम्बन्धसिद्धेर्निमित्तार्थकानि वाक्यानीति । सिद्धान्तस्तु क्रत्वनुष्ठानस्याग्निविद्यासाध्यत्वेपि लौकिकाग्नौ वा अन्येनाऽहिताहवनीयादौ क्रयादिना सम्पादिते वा पुस्तकनिरीक्षणाद्युपायसम्पादितविद्यया वोपपत्त्या नावश्यमाधानोपनयने आक्षिपन्ति क्रतुविधयः इत्यप्राप्तब्राह्मणादेर्वसन्तादिविशिष्टाधानोपनयनविध्यर्थानि वाक्यानि । तथा च **सूत्रम्, आधाने** आधानपदवति वसन्तादिवाक्ये अप्राप्ताधानविधिः । कुतः? **सर्वशेषत्वात्** सर्वकर्मशेषभावादित्यर्थः **इत्येके । अन्ये तु असर्वशेषत्वात् ।** सर्वक्रत्वनङ्गत्वात् । **क्रत्वङ्गत्वे** हि क्रतुविधिभिरेवाऽक्षेपान्निमित्तार्थानि वाक्यानि स्युरित्यर्थ इत्याहुः । **फलन्तु** शूद्राणामप्याधानोपनयने **पूर्वपक्षे, सिद्धान्ते** तु त्रैवर्णिकानामेवेति ।

**॥ इति तृतीयमाधनस्य विधेयताधिकरणम् ॥**

ಕಾಲವಿಧಿಯಲ್ಲಿ ನಿಮಿತ್ತತ್ವವನ್ನು ಹೇಳುತ್ತಿವೆ. ಅಂದರೆ ಬ್ರಾಹ್ಮಣ್ಯವಿದ್ದರೆ ವಸಂತಕಾಲದಲ್ಲಿ, ಕ್ಷತ್ರಿಯತ್ವವಿದ್ದರೆ ಗ್ರೀಷ್ಮಕಾಲದಲ್ಲಿ, ವೈಶ್ಯತ್ವವಿದ್ದರೆ ಶರತ್ಕಾಲದಲ್ಲಿ ಉಪನಯನ ಮಾಡಬೇಕೆಂದು ಹೇಳುತ್ತಿವೆ. ಆದ್ದರಿಂದ ಈ ವಾಕ್ಯಗಳು ಕಾಲವನ್ನು ಮತ್ತು ಬ್ರಾಹ್ಮಣಾದಿಗಳಿಗೆ ನಿಮಿತ್ತತ್ವವನ್ನಷ್ಟೇ ವಿಧಾನ ಮಾಡುತ್ತಿದೆ ಹೊರತು, ಬ್ರಾಹ್ಮಣಾದಿಗಳಿಗೆ ಉಪನಯನಸಂಸ್ಕಾರವನ್ನು ವಿಧಾನ ಮಾಡುತ್ತಿಲ್ಲ.

**प्रकाशः** – वसन्तादिवाक्येषु तावत्, यदिशब्दाभावाद्वाक्यान्तरविहिताधानोपनयनविपरिवृत्त्यभावाच्च क्रियाविधिरेव प्रतीयते । क्रतुविधयोऽप्यग्निविद्यामात्रसाध्याः । तथापि न सर्वे तेनैव निष्पाद्याः । अन्येन निष्पादितानामप्यन्येन क्रयादिभिः प्राप्तेः सम्भवात् । तथा विद्यापि पुस्तकनिरीक्षणाद्युपायसम्भवान्नैकान्तेनोपनयनमाक्षिपतीत्याधानोपनयनयोः नप्रापकाणीति सिद्धान्तितत्वात्त्रैवर्णिकानामेव विधानमित्युक्तम् ।

ಸಿದ್ಧಾಂತ - ನೀವು ಹೇಳಿ ಕಾಲವಿಧಾಯಕವಾಗಿದ್ದಲ್ಲಿ 'ಯದಿ ಬ್ರಾಹ್ಮಣಃ ತರ್ಹಿ ವಸಂತೇ ಉಪನಯೀತ' ಇತ್ಯಾದಿಯಾಗಿ ವಸಂತಾದಿ ವಾಕ್ಯಗಳಲ್ಲಿ 'ಯದಿ' ಶಬ್ದವು ಇರಬೇಕಿತ್ತು. ಆದರೆ 'ಯದಿ' ಶಬ್ದವೇ ಎಲ್ಲಿಯೂ ಕಾಣಿಸುತ್ತಿಲ್ಲ. ಮತ್ತು ಬೇರೆ ವಾಕ್ಯಗಳಲ್ಲಿ ಅಗ್ನ್ಯಾಧಾನ ಮತ್ತು ಉಪನಯನಗಳನ್ನು ವಿಧಾನ ಮಾಡಿದ್ದಲ್ಲಿ, ಆ ವಾಕ್ಯಗಳಿಂದ ವಿಹಿತವಾದ ಆಧಾನ ಮತ್ತು ಉಪನಯನಗಳಲ್ಲಿ ಕಾಲವನ್ನು ಮತ್ತು ನಿಮಿತ್ತತ್ವವನ್ನು ಈ ವಾಕ್ಯವು ವಿಧಾನ ಮಾಡುತ್ತಿದೆ ಎಂದು ಹೇಳಬಹುದಿತ್ತು. ಆದರೆ ಬೇರೆ ಯಾವುದೇ ವಾಕ್ಯಗಳಲ್ಲಿಯೂ ಆಧಾನ ಮತ್ತು ಉಪನಯನಗಳನ್ನು ವಿಧಾನ ಮಾಡಿಲ್ಲ. ಆದ್ದರಿಂದ ಈ ವಾಕ್ಯವು ಉಪನಯನವೆಂಬ ಕ್ರಿಯೆಯನ್ನೇ ವಿಧಾನ ಮಾಡುತ್ತಿದೆ ಆದ್ದರಿಂದ ತ್ರೈವರ್ಣಿಕರು ಮಾತ್ರ ಅಧಿಕಾರಿಗಳಾಗುತ್ತಾರೆ.

ಜ್ಯೋತಿಷ್ಟೋಮಾದಿ ಕ್ರತುಗಳ ವಿಧಾನದಿಂದಲೇ ಅಗ್ನ್ಯಾಧಾನ ಮತ್ತು ಉಪನಯನ ಸಂಸ್ಕಾರಗಳೂ ಆಕ್ಷಿಪ್ತವಾಗುತ್ತವೆಂದು ಪೂರ್ವಪಕ್ಷ ಮಾಡಿದ್ದೂ ಕೂಡ ಸರಿಯಲ್ಲ. ಏಕೆಂದರೆ ಕ್ರತುವಿಧಿಯು ಅಗ್ನಿ ಹಾಗೂ ವಿದ್ಯೆಯನ್ನಷ್ಟೇ ಆಕ್ಷೇಪ ಮಾಡಬಹುದು. ಇದರಿಂದ ಅವನೇ ಅಗ್ನ್ಯಾಧಾನ ಮಾಡಿರಬೇಕು. ಗುರುಗಳ ಮುಖದಿಂದ ವಿದ್ಯೋಪದೇಶವನ್ನು ಪಡೆದಿರಬೇಕೆಂದು ಸಿದ್ಧವಾಗುವುದಿಲ್ಲ. ಏಕೆಂದರೆ ತಾನು ಅಗ್ನ್ಯಾಧಾನವನ್ನು ಮಾಡದಿದ್ದರೂ ಮತ್ತೊಬ್ಬನು ಮಾಡಿರುವ ಅಗ್ನ್ಯಾಧಾನದಿಂದ ಅಗ್ನಿಯನ್ನು ತೆಗೆದುಕೊಂಡು ಬಂದು ಇವನು ಜ್ಯೋತಿಷ್ಟೋಮಾದಿ ಕ್ರತುಗಳನ್ನು ಮಾಡುವ ಸಂಭವವಿರುತ್ತದೆ. ಇದರಂತೆ ಗುರುಮುಖದಿಂದ ವಿದ್ಯೋಪದೇಶ ಪಡೆಯದಿದ್ದರೂ ಪುಸ್ತಕವನ್ನು ಓದಿಯೇ ವೇದಾರ್ಥಜ್ಞಾನವನ್ನು ಪಡೆದಿರುವ ಸಂಭವವಿರುತ್ತದೆ. ಆದ್ದರಿಂದ ಕ್ರತುವು ಸಂಸ್ಕಾರ ಮತ್ತು ವಿದ್ಯೆಗಳನ್ನು ಆಕ್ಷೇಪ ಮಾಡುವುದಿಲ್ಲ. ಆದ್ದರಿಂದ ತ್ರೈವರ್ಣಿಕರಿಗೆ ಮಾತ್ರ ವೇದವಿದ್ಯಾಧಿಕಾರವೆಂದು ಈ ಮೂರು ವಾಕ್ಯಗಳ ಬಲದಿಂದ ಸಿದ್ಧವಾಗುತ್ತದೆ.

ಅಪಶೂದ್ರಾಧಿಕರಣ (೧-೩-೯)

**प्रकाशः** – तेषामेवाधिकारादित्यनन्तरं शूद्रस्याधानोपनयनयोरसम्भवात्तत्साध्ये यज्ञादौ नाधिकार इत्येतावद्योज्यम् । यत्तावदनग्नित्वादनधिकार इति तत्तावन्नेत्याह – अनग्नित्वेनेति ।।

'ತೇಷಾಮೇವಾಧಿಕಾರಾತ್' ಎಂಬುದರ ಅನಂತರ 'ಶೂದ್ರಸ್ಯಾಧಾನೋಪನಯನಯೋರಸಂಭವಾತ್ ತತ್ಸಾಧ್ಯೇ ಯಜ್ಞಾದೌ ನಾಧಿಕಾರಃ' ಶೂದ್ರರಿಗೆ ಆಧಾನ ಮತ್ತು ಉಪನಯನಗಳಲ್ಲಿ ಅಧಿಕಾರವಿಲ್ಲದ ಕಾರಣ ತತ್ಸಾಧ್ಯವಾದ ಯಾಗಾದಿಕರ್ಮಗಳಲ್ಲಿಯೂ ಅಧಿಕಾರವಿರುವುದಿಲ್ಲ ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು.

ಇನ್ನು ಶೂದ್ರರಿಗೆ ಅಗ್ನಿಯೇ ಇಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಮೀಮಾಂಸಕರು ಹೇಳಿದ್ದರು ಅದನ್ನೂ ಕೂಡ 'ಅನಗ್ನಿತ್ವೇನ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः** – संकरजातेरिति ।।

शूद्रायां करभो वैश्यान्माहिष्यो विट्स्त्रियां नृपात् ।
रथकारस्तु माहिष्यात्करभ्यां यस्य संभवः ।।

इत्युक्तसंकरजातेरित्यर्थः ।

ರಥಕಾರನು ತ್ರೈವರ್ಣಿಕರಲ್ಲಿ ಸೇರುವುದಿಲ್ಲ. ಹೊರತಾಗಿ ಸಂಕರಜಾತಿಯವನಾಗಿದ್ದಾನೆ. ಏಕೆಂದರೆ

ಶೂದ್ರಾಯಾಂ ಕರಭೋ ವೈಶ್ಯಾತ್ ಮಾಹಿಷ್ಯೋ ವಿಟ್‌ಸ್ತ್ರೀಯಾಂ ನೃಪಾತ್ ।
ರಥಕಾರಸ್ತು ಮಾಹಿಷ್ಯಾತ್ ಕರಭ್ಯಾಂ ಯಸ್ಯ ಸಂಭವಃ ॥

ವೈಶ್ಯಪುರುಷನಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಗು 'ಕರಭ' ಎನಿಸುತ್ತದೆ. ಕ್ಷತ್ರಿಯ ಪುರುಷನಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಗು 'ಮಾಹಿಷ್ಯ' ಎನಿಸುತ್ತದೆ. ಮಾಹಿಷ್ಯಜಾತಿಯ ಪುರುಷನಿಗೆ ಕರಭ ಸ್ತ್ರೀಯಲ್ಲಿ ಹುಟ್ಟಿದ ಮಗುವಿಗೆ 'ರಥಕಾರ' ಎಂದು ಹೆಸರು.

ಹೀಗೆ ರಥಕಾರನು ಸಂಕರಜಾತಿಯಲ್ಲಿ ಹುಟ್ಟಿದ ಸಂಕರಜಾತಿಯವನು. ಅಂದರೆ ತ್ರೈವರ್ಣಿಕರಲ್ಲಿ ಸರ್ವಥಾ ಸೇರುವುದಿಲ್ಲ.

**प्रकाशः** – किं च शूद्रमात्रेऽप्यसिद्धमनग्नित्वम् । तस्याप्याधानसम्भवात् ।

ಮತ್ತು ಶೂದ್ರಸಾಮಾನ್ಯರಿಗೆ ಅಗ್ನಿಯೇ ಇಲ್ಲವೆಂಬುದೂ ಕೂಡ ಅಸಿದ್ಧವಾಗಿದೆ. ಅಂತಹ ಶೂದ್ರನಿಗೂ ಅಗ್ನ್ಯಾಧಾನವನ್ನು ಹೇಳಬಹುದು.

**प्रकाशः** – नच वसन्तादिवाक्यान्याधानपराणीत्युक्ततया तैर्ब्राह्मणादीनामेवाधान विधानं न शूद्रस्येति वाच्यम् ।

ಪ್ರಶ್ನೆ - 'ವಸಂತೇ ಬ್ರಾಹ್ಮಣೋ ಅಗ್ನೀನಾದಧೀತ' ಇತ್ಯಾದಿ ವಾಕ್ಯಗಳಲ್ಲಿ ಬ್ರಾಹ್ಮಣಾದಿ ತ್ರೈವರ್ಣಿಕರಿಗೆ ಮಾತ್ರ ಅಗ್ನ್ಯಾಧಾನವನ್ನು ವಿಧಿಸಲಾಗಿದೆ. ಶೂದ್ರರಿಗೆ ಅಗ್ನ್ಯಾಧಾನವನ್ನು ವಿಧಿಸಿಲ್ಲ. ಆದ್ದರಿಂದ ಶೂದ್ರಾದಿಗಳಿಗೆ ಅಗ್ನ್ಯಾಧಾನವನ್ನು ಹೇಳಲು ಹೇಗೆ ಸಾಧ್ಯ ?

**प्रकाशः** – तेषां वाक्यानां प्राप्ताधानानुवादेन कालविधिपरतया ब्राह्मणादीनामाधानाविधायकत्वात् ।

ಉತ್ತರ - ಈ ವಾಕ್ಯಗಳು ಬೇರೆ ವಾಕ್ಯಗಳಿಂದ ಪ್ರಾಪ್ತವಾದ ಅಗ್ನ್ಯಾಧಾನವನ್ನು ಅನುವಾದ ಮಾಡಿ ಕೇವಲ ಕಾಲವನ್ನಷ್ಟೇ ವಿಧಾನ ಮಾಡುತ್ತಿದೆ. ಅಥವಾ ಬ್ರಾಹ್ಮಣ್ಯಾದಿಗಳಿಗೆ ನಿಮಿತ್ತತ್ವವನ್ನಷ್ಟೇ ವಿಧಾನ ಮಾಡುತ್ತಿವೆಯೆಂದು ಹೇಳಬಹುದು.

**प्रकाशः** – न चाक्षेपतः प्राप्तेर्निरस्तत्वात् ''य एवं विद्वानग्निमाधत्ते'' इत्यस्य च सामान्यवचनस्य वर्तमानापदेशत्वेनाविधायकत्वात्प्राप्त्यभाव इति वाच्यम् ।

ಪ್ರಶ್ನೆ - ಆಕ್ಷೇಪದಿಂದ ಪ್ರಾಪ್ತವಾಗಿದೆಯೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಯ ಏವಂ ವಿದ್ವಾನಗ್ನಿಮಾಧತ್ತೇ' ಎಂಬ ವಾಕ್ಯವು ಸಾಮಾನ್ಯವಾದ ವಿಧಾಯಕವಾಕ್ಯ. ಕೇವಲ ಏನು ನಡೆಯುತ್ತಿಯೆಂದಷ್ಟೇ ಹೇಳುತ್ತಿದೆ ಹೊರತು, ಯಾವುದನ್ನೂ ಕೂಡ ವಿಧಾನ ಮಾಡುತ್ತಿಲ್ಲ. ಆದ್ದರಿಂದ ಬೇರೆ ವಾಕ್ಯಗಳಿಂದ ಪ್ರಾಪ್ತವಾಗಿದೆಯೆಂದು ಹೇಗೆ ಹೇಳುತ್ತೀರಿ?

**प्रकाशः** – वाक्यान्तरैः प्राप्तिसम्भवादिति भावेनाह – कृत्तिकास्विति ।।

ಉತ್ತರ - 'ಅಗ್ನಿಮಾಧತ್ತೇ' ಎಂಬ ವಾಕ್ಯದಿಂದ ಪ್ರಾಪ್ತವಾಗದಿದ್ದರೂ ಬೇರೆ ವಾಕ್ಯಗಳಿಂದ ಅಗ್ನ್ಯಾಧಾನವು ಪ್ರಾಪ್ತವಾಗಿದೆಯೆಂದು ಹೇಳುತ್ತಿದ್ದಾರೆ 'ಕೃತ್ತಿಕಾಸು' ಇತ್ಯಾದಿ ವಾಕ್ಯದಿಂದ.

**प्रकाशः** – आदिपदेन ''दिवाहवनीयं त्रिभिर्गार्हपत्यमादधाति पञ्चभिराहवनीयम्'' इति वचनं गृह्यते । तत्र कर्तृविशेषानुपादानेन चतुर्वर्णाधिकारिकत्वसम्भवादिति भावः ।

ಆದಿಪದದಿಂದ 'ದಿವಾಹವನೀಯಂ ತ್ರಿಭಿರ್ಗಾರ್ಹಪತ್ಯಮಾದಧಾತಿ ಪಂಚಭಿರಾಹವನೀಯಮ್' ಎಂಬ ಮಾತನ್ನು ಸಂಗ್ರಹಿಸಬೇಕು. ಈ ವಾಕ್ಯಗಳಲ್ಲಿ ಕರ್ತೃವಿಶೇಷವನ್ನು ಹೇಳದ ಕಾರಣ ನಾಲ್ಕೂ ವರ್ಣದವರಿಗೂ ಅಗ್ನ್ಯಾಧಾನವನ್ನು ಸಾಮಾನ್ಯವಾಗಿ ವಿಧಾನ ಮಾಡುತ್ತಿದೆ.

ಅಪಶೂದ್ರಾಧಿಕರಣ (೧-೩-೯)

**प्रकाशः** – ननु कृत्तिकादिवाक्यप्राप्ताधानानुवादेन न वसन्तादिवाक्ये कालविधिश्शङ्क्यः । वसन्तादिब्राह्मणादिरूपगुणद्वयश्रवणात् ।

प्राप्ते कर्मणि नानेको गुणो वाक्ये विधीयते ।
अप्राप्ते तु विधीयेरन् बहवोऽप्येक यत्नतः ।। इत्युक्तेः ।

आदधीतेति यत्तद्वसन्ते स च ब्राह्मण इति वाक्यभेदापत्तेरित्यत आह – **वसन्तादीति** ।।

ಆಕ್ಷೇಪ - ಕೃತ್ತಿಕಾದಿವಾಕ್ಯಗಳಿಂದ ಅಗ್ನ್ಯಾಧಾನವು ಪ್ರಾಪ್ತವಾಗಿದೆ. ಅದನ್ನು ಅನುವಾದ ಮಾಡಿ, ವಸಂತಾದಿವಾಕ್ಯಗಳು ಕಾಲವನ್ನಷ್ಟೇ ವಿಧಾನ ಮಾಡುತ್ತಿವೆಯೆಂದು ಶಂಕಿಸಬಾರದು. ವಸಂತಾದಿ ವಾಕ್ಯಗಳಲ್ಲಿ ಬ್ರಾಹ್ಮಣ್ಯಾದಿಗಳಿಗೆ ನಿಮಿತತ್ವ ಹಾಗೂ ಕಾಲ ಎಂಬೆರಡು ಗುಣಗಳು ಶ್ರುತವಾಗಿವೆ.

ಪ್ರಾಪ್ತೇ ಕರ್ಮಣಿ ನಾನೇಕೋ ಗುಣೋ ವಾಕ್ಯೇ ವಿಧಿಯತೇ।
ಅಪ್ರಾಪ್ತೇ ತು ವಿಧೀಯೇರನ್ ಬಹವೋಽಪ್ಯೇಕ ಯತ್ನತಃ॥

ಯಾವುದೇ ಕರ್ಮವು ಪ್ರಾಪ್ತವಾಗದೇ ಹೊಸದಾಗಿ ವಿಧಿಯಿಂದ ಸಿದ್ಧವಾಗುತ್ತಿರುವಾಗ ಅದಕ್ಕೆ ಬೇಕಾದ ಅನೇಕ ಗುಣಗಳನ್ನು ವಿಧಾನ ಮಾಡಬಹುದು. ('ಅರುಣಯಾ ಏಕಹಾಯನ್ಯಾ' ಎಂಬ ಶ್ರುತಿಯು ಇದಕ್ಕೆ ಉದಾಹರಣೆ.) ಆವಾಗ ವಾಕ್ಯಭೇದದೋಷವು ಬರುವುದಿಲ್ಲ. ಆದರೆ ಎಲ್ಲಿ ಕರ್ಮವು ಮೊದಲೇ ಪ್ರಾಪ್ತವಾಗಿರುತ್ತದೋ ಆವಾಗ ಗುಣವನ್ನು ವಿಧಾನ ಮಾಡುವ ವಾಕ್ಯವು ಒಂದು ಗುಣವನ್ನಷ್ಟೇ ಹೇಳಬೇಕು. ಅನೇಕ ಗುಣಗಳನ್ನು ಹೇಳಿದರೆ ವಾಕ್ಯಭೇದವು ಬರುತ್ತದೆ.

ಆದ್ದರಿಂದ ಮೊದಲೇ ಪ್ರಾಪ್ತವಾದ ಅಗ್ನ್ಯಾಧಾನದ ವಿಷಯದಲ್ಲಿ 'ವಸಂತೇ' ಇತ್ಯಾದಿ ವಾಕ್ಯವು ಪ್ರವೃತ್ತವಾಗುವುದಾದರೆ, 'ಯದ್ವಸಂತೇ ಸ ಚ ಬ್ರಾಹ್ಮಣಃ' ಎಂಬುದಾಗಿ ವಾಕ್ಯಭೇದದೋಷವು ಬರುತ್ತದಲ್ಲವೇ?

ಈ ಆಕ್ಷೇಪಕ್ಕೆ ಗ್ರಂಥಕಾರರು 'ವಸಂತಾದಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – अत्यन्ताप्राप्तविध्यपेक्षया नियमविधेर्लघुत्वादित्यर्थः – प्राप्तेति ।।** तथा च ब्राह्मण आदधीतेति यत्तद्वसन्ते इत्यादिरूपेणान्वयान्न वाक्यभेद इत्यर्थः । शूद्रस्य कालविधायकाभावादाह – **ऋत्वन्तर इति** ।।

ಅತ್ಯಂತ ಅಪ್ರಾಪ್ತವಾದ ವಿಧಿಯ ಅಪೇಕ್ಷೆಯಿಂದ ಕಾಲನಿಯಮ ವಿಧಿವಾಕ್ಯವು ಲಘುಭೂತವಾಗಿದೆಯೆಂದರ್ಥ. 'ಪ್ರಾಪ್ತ ಬ್ರಾಹ್ಮಣಾದೀನಾಂ' ಎಂದು ಗ್ರಂಥದಲ್ಲಿದೆ. 'ಬ್ರಾಹ್ಮಣ ಆದಧೀತ ಯದ್ ವಸಂತೇ' ಇತ್ಯಾದಿಯಾಗಿ ಅನ್ವಯವನ್ನು ಮಾಡಬೇಕು. ಆದ್ದರಿಂದ ವಾಕ್ಯಭೇದದೋಷಕ್ಕೆ ಅವಕಾಶವಿಲ್ಲ. ಶೂದ್ರನಿಗೆ ಕಾಲವನ್ನು ವಿಧಾನ ಮಾಡುವಂತಹ ವಾಕ್ಯವಿಲ್ಲವೆಂದು ಹೇಳಿದರೆ 'ಋತ್ವಂತರೇ'

ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಬ್ರಾಹ್ಮಣಾದಿಗಳಿಗೆ ಉಪನಯನಸಂಸ್ಕಾರವನ್ನು ಮಾಡಲು ಕಾಲದ ನಿಯಮವಿದೆ. ಶೂದ್ರನಿಗೆ ಹಾಗೇ ಕಾಲದ ನಿಯಮವಿರುವುದಿಲ್ಲ ಎಂದಭಿಪ್ರಾಯ.




'ನಾಗ್ನಿರ್ನಯಜ್ಞಃ' ಎಂಬ ಶ್ರುತಿಯು ಯಾಗಾದಿಕರ್ಮಗಳಲ್ಲಿಯೂ ಶೂದ್ರರಿಗೆ ಅಧಿಕಾರವಿಲ್ಲವೆಂಗು ನಿಷೇಧ ಮಾಡುತ್ತಿದೆ. ಹೀಗೆ ನಿಷೇಧವಿರುವ ಕಾರಣದಿಂದಲೇ ಶೂದ್ರರಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಬೇಕು ಆದರೆ ಮೀಮಾಂಸಕರು ತ್ರೈವರ್ಣಕರಿಗೆ ಮಾತ್ರ ಅಗ್ನ್ಯಾಧಾನ ಸಂಸ್ಕಾರವನ್ನು ವಿಧಾನ ಮಾಡಿದ್ದರಿಂದ ಶೂದ್ರರಿಗೆ ಅಧಿಕಾರವಿಲ್ಲವೆಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಅಗ್ನ್ಯಾಧಾನ ಸಂಸ್ಕಾರವಿಲ್ಲದಿದ್ದರೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳುವುದೇ ತಪ್ಪು. ರಥಕಾರನು ತ್ರೈವರ್ಣಕರಲ್ಲಿ ಸೇರಿಲ್ಲ. ಆದರೂ ಯಾಗಕರ್ಮದಲ್ಲಿ ಅಧಿಕಾರವನ್ನು ಪಡೆದಿರುತ್ತಾನೆ. ಮತ್ತು 'ವಸಂತೇ ಬ್ರಾಹ್ಮಣಮುಪನಯೀತ ಗ್ರೀಷ್ಮೇ ರಾಜನ್ಯಂ ಶರದಿ ವೈಶ್ಯಮ್' ಎಂಬ ವಾಕ್ಯವು ಬ್ರಾಹ್ಮಣಾದಿಗಳಿಗೆ ವಸಂತ ಮೊದಲಾದ ಕಾಲಗಳಲ್ಲಿ ಉಪನಯನ ಸಂಸ್ಕಾರವನ್ನು ವಿಧಾನ ಮಾಡುತ್ತಿದೆ. ಶೂದ್ರರಿಗೆ ಹಾಗೇ ವಿಧಾನ ಮಾಡದ ಕಾರಣ ಉಪನಯನಸಂಸ್ಕಾರವಿಲ್ಲವೆಂದು ಹೇಳಲಾಗದು. ಏಕೆಂದರೆ ಬ್ರಾಹ್ಮಣಾದಿಗಳಿಗೆ ಉಪನಯನವಾಗಲು ಕಾಲದ ನಿಯಮವಿದೆ. ಶೂದ್ರಾದಿಗಳಿಗೆ ಉಪನಯನ ಮಾಡಲು ಕಾಲನಿಯಮವಿಲ್ಲವೆಂದೂ ಸಹ ಕೂಡಿಸಲು ಬರುತ್ತದೆ.



## ಶೂದ್ರರಿಗೆ ಅಧಿಕಾರವಿಲ್ಲವೆಂದು ಸಮರ್ಥಿಸುವ ಮೀಮಾಂಸಕಮತ ತಪ್ಪು

### तात्पर्यचन्द्रिका

**उपनयनहोमस्थपतीष्ट्यवकीर्ण ब्रह्मचार्यधिकारिकयागादिवल्लौकिकाग्नौ शूद्रस्यापि यागसम्भवाच्च । उक्तं हि षष्ठेऽनेकैरधिकरणैरुपनयनहोमादयो लौकिकाग्नाविति ।**

ಅನುವಾದ - ಶೂದ್ರರಿಗೆ ಸಂಸ್ಕೃತವಾದ ಅಗ್ನಿಯಲ್ಲಿ ಅಧಿಕಾರವಿಲ್ಲವೆಂದು ಬೇಕಾದರೆ ಒಪ್ಪೋಣ. ಆದರೆ ಲೌಕಿಕಾಗ್ನಿಯಲ್ಲಿ ಅಧಿಕಾರವನ್ನು ಹೇಳಬಹುದಲ್ಲವೇ? ಲೌಕಿಕವಾದ ಅಗ್ನಿಯಲ್ಲಿಯೂ ಯಾಗಾಧಿಕಾರವಿರುವುದು ಅನೇಕ ಕಡೆ ಕಂಡಿದೆ. ಮಾಣವಕನು ಉಪನಯನಕ್ಕಿಂತ ಮೊದಲು ಹೋಮವನ್ನು ಮಾಡುತ್ತಾನೆ. ಅಗ್ನಿಯನ್ನು ಸ್ವೀಕರಿಸುವ ಮೊದಲೇ ಹೋಮ ಮಾಡಬೇಕಾದ್ದರಿಂದ ಲೌಕಿಕಾಗ್ನಿಯಲ್ಲಿ ಹೋಮಮಾಡಬೇಕೆಂದು ತಿಳಿಯುತ್ತದೆ. ಮತ್ತು ಬೇಡಜಾತಿಯವನು ಸ್ಥಪತೀಷ್ಟಿಯನ್ನು ಲೌಕಿಕಾಗ್ನಿಯನ್ನು ಮಾಡುತ್ತಾನೆಂದು ನಿರ್ಣಯಿಸಲಾಗಿದೆ. ಮತ್ತು ಚರಮಧಾತುವಿಸರ್ಗವನ್ನು ಮಾಡಿಕೊಂಡು ಬ್ರಹ್ಮಚರ್ಯವನ್ನು ಕಳೆದುಕೊಂಡ ಗುರುಕುಲವಾಸಿಯಾದ ಮಾಣವಕನಿಗೆ ವಿವಾಹವಾಗಿರುವುದಿಲ್ಲವಾದ್ದರಿಂದ ಅಗ್ನ್ಯಾಧಾನವಿಲ್ಲ. ಆದರೆ ಮಾಡಿದ ಅಪರಾಧಕ್ಕೆ ಹೋಮವನ್ನು

**प्रकाशः** – ननु कृत्तिकादिवाक्यप्राप्ताधानानुवादेन न वसन्तादिवाक्ये कालविधिश्शङ्क्यः । वसन्तादिब्राह्मणादिरूपगुणद्वयश्रवणात् ।

प्राप्ते कर्मणि नानेको गुणो वाक्ये विधीयते ।
अप्राप्ते तु विधीयेरन् बहवोऽप्येक यत्नतः ।। इत्युक्तेः ।

आदधीतेति यत्तद्वसन्ते स च ब्राह्मण इति वाक्यभेदापत्तेरित्यत आह – **वसन्तादीति** ।।

ಆಕ್ಷೇಪ - ಕೃತ್ತಿಕಾದಿವಾಕ್ಯಗಳಿಂದ ಅಗ್ನ್ಯಾಧಾನವು ಪ್ರಾಪ್ತವಾಗಿದೆ. ಅದನ್ನು ಅನುವಾದ ಮಾಡಿ, ವಸಂತಾದಿವಾಕ್ಯಗಳು ಕಾಲವನ್ನಷ್ಟೇ ವಿಧಾನ ಮಾಡುತ್ತಿವೆಯೆಂದು ಶಂಕಿಸಬಾರದು. ವಸಂತಾದಿ ವಾಕ್ಯಗಳಲ್ಲಿ ಬ್ರಾಹ್ಮಣ್ಯಾದಿಗಳಿಗೆ ನಿಮಿತತ್ವ ಹಾಗೂ ಕಾಲ ಎಂಬೆರಡು ಗುಣಗಳು ಶ್ರುತವಾಗಿವೆ.

ಪ್ರಾಪ್ತೇ ಕರ್ಮಣಿ ನಾನೇಕೋ ಗುಣೋ ವಾಕ್ಯೇ ವಿಧಿಯತೇ।
ಅಪ್ರಾಪ್ತೇ ತು ವಿಧೀಯೇರನ್ ಬಹವೋऽಪ್ಯೇಕ ಯತ್ನತಃ॥

ಯಾವುದೇ ಕರ್ಮವು ಪ್ರಾಪ್ತವಾಗದೇ ಹೊಸದಾಗಿ ವಿಧಿಯಿಂದ ಸಿದ್ಧವಾಗುತ್ತಿರುವಾಗ ಅದಕ್ಕೆ ಬೇಕಾದ ಅನೇಕ ಗುಣಗಳನ್ನು ವಿಧಾನ ಮಾಡಬಹುದು. ('ಅರುಣಯಾ ಏಕಹಾಯನ್ಯಾ' ಎಂಬ ಶ್ರುತಿಯು ಇದಕ್ಕೆ ಉದಾಹರಣೆ.) ಆವಾಗ ವಾಕ್ಯಭೇದದೋಷವು ಬರುವುದಿಲ್ಲ. ಆದರೆ ಎಲ್ಲಿ ಕರ್ಮವು ಮೊದಲೇ ಪ್ರಾಪ್ತವಾಗಿರುತ್ತದೋ ಆವಾಗ ಗುಣವನ್ನು ವಿಧಾನ ಮಾಡುವ ವಾಕ್ಯವು ಒಂದು ಗುಣವನ್ನಷ್ಟೇ ಹೇಳಬೇಕು. ಅನೇಕ ಗುಣಗಳನ್ನು ಹೇಳಿದರೆ ವಾಕ್ಯಭೇದವು ಬರುತ್ತದೆ.

ಆದ್ದರಿಂದ ಮೊದಲೇ ಪ್ರಾಪ್ತವಾದ ಅಗ್ನ್ಯಾಧಾನದ ವಿಷಯದಲ್ಲಿ 'ವಸಂತೇ' ಇತ್ಯಾದಿ ವಾಕ್ಯವು ಪ್ರವೃತ್ತವಾಗುವುದಾದರೆ, 'ಯದ್ವಸಂತೇ ಸ ಚ ಬ್ರಾಹ್ಮಣಃ' ಎಂಬುದಾಗಿ ವಾಕ್ಯಭೇದದೋಷವು ಬರುತ್ತದಲ್ಲವೇ?

ಈ ಆಕ್ಷೇಪಕ್ಕೆ ಗ್ರಂಥಕಾರರು 'ವಸಂತಾದಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – अत्यन्ताप्राप्तविध्यपेक्षया नियमविधेर्लघुत्वादित्यर्थः – प्राप्तेति ।। तथा च ब्राह्मण आदधीतेति यत्तद्वसन्ते इत्यादिरूपेणान्वयान्न वाक्यभेद इत्यर्थः । शूद्रस्य कालविधायकाभावादाह – ऋत्वन्तर इति ।।**

ಅತ್ಯಂತ ಅಪ್ರಾಪ್ತವಾದ ವಿಧಿಯ ಅಪೇಕ್ಷೆಯಿಂದ ಕಾಲನಿಯಮ ವಿಧಿವಾಕ್ಯವು ಲಘುಭೂತವಾಗಿದೆಯೆಂದರ್ಥ. 'ಪ್ರಾಪ್ತ ಬ್ರಾಹ್ಮಣಾದೀನಾಂ' ಎಂದು ಗ್ರಂಥದಲ್ಲಿದೆ. 'ಬ್ರಾಹ್ಮಣ ಆದಧೀತ ಯದ್ ವಸಂತೇ' ಇತ್ಯಾದಿಯಾಗಿ ಅನ್ವಯವನ್ನು ಮಾಡಬೇಕು. ಆದ್ದರಿಂದ ವಾಕ್ಯಭೇದದೋಷಕ್ಕೆ ಅವಕಾಶವಿಲ್ಲ. ಶೂದ್ರನಿಗೆ ಕಾಲವನ್ನು ವಿಧಾನ ಮಾಡುವಂತಹ ವಾಕ್ಯವಿಲ್ಲವೆಂದು ಹೇಳಿದರೆ 'ಋತ್ವಂತರೇ'

ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಬ್ರಾಹ್ಮಣಾದಿಗಳಿಗೆ ಉಪನಯನಸಂಸ್ಕಾರವನ್ನು ಮಾಡಲು ಕಾಲದ ನಿಯಮವಿದೆ. ಶೂದ್ರನಿಗೆ ಹಾಗೇ ಕಾಲದ ನಿಯಮವಿರುವುದಿಲ್ಲ ಎಂದಭಿಪ್ರಾಯ.




'ನಾಗ್ನಿರ್ನಯಜ್ಞಃ' ಎಂಬ ಶ್ರುತಿಯು ಯಾಗಾದಿಕರ್ಮಗಳಲ್ಲಿಯೂ ಶೂದ್ರರಿಗೆ ಅಧಿಕಾರವಿಲ್ಲವೆಂಗು ನಿಷೇಧ ಮಾಡುತ್ತಿದೆ. ಹೀಗೆ ನಿಷೇಧವಿರುವ ಕಾರಣದಿಂದಲೇ ಶೂದ್ರರಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಬೇಕು ಆದರೆ ಮೀಮಾಂಸಕರು ತ್ರೈವರ್ಣಿಕರಿಗೆ ಮಾತ್ರ ಅಗ್ನ್ಯಾಧಾನ ಸಂಸ್ಕಾರವನ್ನು ವಿಧಾನ ಮಾಡಿದ್ದರಿಂದ ಶೂದ್ರರಿಗೆ ಅಧಿಕಾರವಿಲ್ಲವೆಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಅಗ್ನ್ಯಾಧಾನ ಸಂಸ್ಕಾರವಿಲ್ಲದಿದ್ದರೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳುವುದೇ ತಪ್ಪು. ರಥಕಾರನು ತ್ರೈವರ್ಣಿಕರಲ್ಲಿ ಸೇರಿಲ್ಲ. ಆದರೂ ಯಾಗಕರ್ಮದಲ್ಲಿ ಅಧಿಕಾರವನ್ನು ಪಡೆದಿರುತ್ತಾನೆ. ಮತ್ತು 'ವಸಂತೇ ಬ್ರಾಹ್ಮಣಮುಪನಯೀತ ಗ್ರೀಷ್ಮೇ ರಾಜನ್ಯಂ ಶರದಿ ವೈಶ್ಯಮ್' ಎಂಬ ವಾಕ್ಯವು ಬ್ರಾಹ್ಮಣಾದಿಗಳಿಗೆ ವಸಂತ ಮೊದಲಾದ ಕಾಲಗಳಲ್ಲಿ ಉಪನಯನ ಸಂಸ್ಕಾರವನ್ನು ವಿಧಾನ ಮಾಡುತ್ತಿದೆ. ಶೂದ್ರರಿಗೆ ಹಾಗೇ ವಿಧಾನ ಮಾಡದ ಕಾರಣ ಉಪನಯನಸಂಸ್ಕಾರವಿಲ್ಲವೆಂದು ಹೇಳಲಾಗದು. ಏಕೆಂದರೆ ಬ್ರಾಹ್ಮಣಾದಿಗಳಿಗೆ ಉಪನಯನವಾಗಲು ಕಾಲದ ನಿಯಮವಿದೆ. ಶೂದ್ರಾದಿಗಳಿಗೆ ಉಪನಯನ ಮಾಡಲು ಕಾಲನಿಯಮವಿಲ್ಲವೆಂದೂ ಸಹ ಕೂಡಿಸಲು ಬರುತ್ತದೆ.



• • • • •

## ಶೂದ್ರರಿಗೆ ಅಧಿಕಾರವಿಲ್ಲವೆಂದು ಸಮರ್ಥಿಸುವ ಮೀಮಾಂಸಕಮತ ತಪ್ಪು

### तात्पर्यचन्द्रिका

**उपनयनहोमस्थपतीष्ट्यवकीर्णब्रह्मचार्यधिकारिकयागादिवल्लौकिकाग्नौ शूद्रस्यापि यागसम्भवाच्च । उक्तं हि षष्ठेऽनेकैरधिकरणैरुपनयनहोमादयो लौकिकाग्नाविति ।**

ಅನುವಾದ - ಶೂದ್ರರಿಗೆ ಸಂಸ್ಕೃತವಾದ ಅಗ್ನಿಯಲ್ಲಿ ಅಧಿಕಾರವಿಲ್ಲವೆಂದು ಬೇಕಾದರೆ ಒಪ್ಪೋಣ. ಆದರೆ ಲೌಕಿಕಾಗ್ನಿಯಲ್ಲಿ ಅಧಿಕಾರವನ್ನು ಹೇಳಬಹುದಲ್ಲವೇ? ಲೌಕಿಕವಾದ ಅಗ್ನಿಯಲ್ಲಿಯೂ ಯಾಗಾಧಿಕಾರವಿರುವುದು ಅನೇಕ ಕಡೆ ಕಂಡಿದೆ. ಮಾಣವಕನು ಉಪನಯನಕ್ಕಿಂತ ಮೊದಲು ಹೋಮವನ್ನು ಮಾಡುತ್ತಾನೆ. ಅಗ್ನಿಯನ್ನು ಸ್ವೀಕರಿಸುವ ಮೊದಲೇ ಹೋಮ ಮಾಡಬೇಕಾದ್ದರಿಂದ ಲೌಕಿಕಾಗ್ನಿಯಲ್ಲಿ ಹೋಮಮಾಡಬೇಕೆಂದು ತಿಳಿಯುತ್ತದೆ. ಮತ್ತು ಬೇಡಜಾತಿಯವನು ಸ್ಥಪತೀಷ್ಟಿಯನ್ನು ಲೌಕಿಕಾಗ್ನಿಯನ್ನು ಮಾಡುತ್ತಾನೆಂದು ನಿರ್ಣಯಿಸಲಾಗಿದೆ. ಮತ್ತು ಚರಮಧಾತುವಿಸರ್ಗವನ್ನು ಮಾಡಿಕೊಂಡು ಬ್ರಹ್ಮಚರ್ಯವನ್ನು ಕಳೆದುಕೊಂಡ ಗುರುಕುಲವಾಸಿಯಾದ ಮಾಣವಕನಿಗೆ ವಿವಾಹವಾಗಿರುವುದಿಲ್ಲವಾದ್ದರಿಂದ ಅಗ್ನ್ಯಾಧಾನವಿಲ್ಲ. ಆದರೆ ಮಾಡಿದ ಅಪರಾಧಕ್ಕೆ ಹೋಮವನ್ನು

ಆಚರಿಸಬೇಕೆಂದು ವಿಧಿಸಲಾಗಿದೆ. ಅದೂ ಸಹ ಲೌಕಿಕಾಗ್ನಿಯಲ್ಲಿಯೇ ಮಾಡಬೇಕು. ಹೀಗೆ ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದಲ್ಲಿ ಇರುವ ಅನೇಕ ಅಧಿಕರಣಗಳಿಂದ ಉಪನಯನ ಹೋಮ ಮೊದಲಾದವುಗಳನ್ನು ಲೌಕಿಕಾಗ್ನಿಯಲ್ಲಿ ಮಾಡಬೇಕೆಂದು ನಿರ್ಣಯಿಸಲಾಗಿದೆ. ಅದರಂತೆ ಶೂದ್ರನೂ ಸಹ ಲೌಕಿಕಾಗ್ನಿಯಲ್ಲಿ ಹೋಮವನ್ನು ಆಚರಿಸಬಹುದು.

**अग्न्यसाध्यसन्ध्योपासनादावुपनीतमात्रस्य ब्राह्मणादेरध्ययनात्प्रागिव शूद्रस्याप्यधिकारापरिहाराच्च ।**

ಅಥವಾ ಶೂದ್ರನಿಗೆ ಸಂಸ್ಕೃತವಾದ ಅಗ್ನಿಯೂ ಬೇಡ, ಲೌಕಿಕವಾದ ಅಗ್ನಿಯೂ ಬೇಡ, ಆದರೆ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವನ್ನು ಹೇಳಲೇಬೇಕಾಗುತ್ತದೆ. ಏಕೆಂದರೆ ಬ್ರಾಹ್ಮಣವಟುವಿಗೆ ಎಂಟುವರ್ಷದಲ್ಲಿ ಉಪನಯನ ಮಾಡಿದ ಮೇಲೆ ಉಪಾಕರ್ಮದ ತನಕ ವೇದಾಧ್ಯಯನವನ್ನು ಪ್ರಾರಂಭ ಮಾಡಬಾರದು. ಉಪಾಕರ್ಮದ ಅನಂತರ ವೇದಾಧ್ಯಯನವನ್ನು ಪ್ರಾರಂಭಿಸಬೇಕು. ಆದರೂ ಸಹ ಸಂಧ್ಯಾವಂದನಾದಿಗಳಲ್ಲಿ ಉಪನೀತನಾದ ವಟು ಅಧಿಕಾರವನ್ನು ಪಡೆದಿರುತ್ತಾನೆ. ಈ ಸಂಧ್ಯೋಪಾಸನಾದಿಗಳು ಅಗ್ನಿಸಾಧ್ಯವಲ್ಲದಿದ್ದರೂ ಅವುಗಳ ಆಚರಣೆಯನ್ನು ಹೇಗೆ ಬ್ರಹ್ಮಚಾರಿಗೆ ವಿಧಿಸಲಾಗಿದೆಯೋ, ಅದರಂತೆ ಶೂದ್ರನಿಗೂ ಕೂಡ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವನ್ನು ಹೇಳಬಹುದು.

**अत एव षष्ठे ''उदङ्मुखो मूत्रं कुर्यात्'' इत्यादिस्मार्तनियमा अग्न्यसाध्यत्वादनुपनीतस्यापीति प्राप्ते ''उपनयनादिर्नियम'' इति वचनबलादेवोपनयनप्रभृति स्युरित्युक्तम् ।**

ಹೀಗೆ ಅಗ್ನಿಸಾಧ್ಯದಲ್ಲಿ ಅಗ್ನ್ಯಾಧಾನವನ್ನು ಮಾಡಿದವನಿಗೆ ಅಧಿಕಾರವಿರುತ್ತದೆ. ಅನಾಹಿತಾಗ್ನಿಗೆ ಸಾಧ್ಯವಾದ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವಿರುತ್ತದೆಂದು ಹೇಳಿದ್ದರಿಂದ ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದಲ್ಲಿ 'ಉದಙ್ಮುಖೋ ಮೂತ್ರಂ ಕುರ್ಯಾತ್' 'ಉತ್ತರದಿಕ್ಕಿಗೆ ಮುಖಮಾಡಿಕೊಂಡು ಮೂತ್ರ ಮಾಡಬೇಕು' ಎಂಬ ಸ್ಮೃತಿಯ ನಿಯಮವು ಎಲ್ಲರಿಗೂ ಇಲ್ಲವೆಂದು ಹೇಳಲಾಗಿದೆ. ಈ ಸ್ಮಾರ್ತನಿಯಮಗಳೆಲ್ಲವೂ ಅಗ್ನಿಸಾಧ್ಯವಲ್ಲದ ಕಾರಣ ಉಪನಯನ ಮಾಡಿಕೊಳ್ಳದ ವ್ಯಕ್ತಿಗೂ ಸಂಬಂಧಪಡುತ್ತವೆಂದು ಪೂರ್ವಪಕ್ಷ ಮಾಡಿ 'ಉಪನಯನಾದಿರ್ನಿಯಮಃ' ಸಕಲವಿಧಿ ನಿಯಮಗಳು ಅನಂತರವೇ ಸಂಬಂಧಪಡುತ್ತವೆ ಎಂಬ ಮಾತಿನ ಆಧಾರದಿಂದ ಉಪನಯನದ ಅನಂತರವೇ ಸ್ಮಾರ್ತನಿಯಮಗಳೆಂದು ತಿಳಿಯಬೇಕು. ಆದ್ದರಿಂದ ಸಾಧ್ಯವಾದ ಕೆಲವು ವಿಧಿಗಳು ಬ್ರಾಹ್ಮಣಾದಿಗಳಲ್ಲಿ ಇರುವುದು ಕಂಡಿದ್ದರಿಂದ, ಶೂದ್ರನಿಗೂ ಅವುಗಳನ್ನು ಹೇಳಬಹುದು.

**प्रकाशः –**

किञ्च किमेतेनाग्निमत्त्वोपपादनक्लेशेन । निषेधादेव शूद्रस्यानधिकारानङ्गीकारे क्रतुविधीनां स्वर्गादिकामनावन्मात्राधिकारिकत्वाच्छूद्रस्यापि कामनावत्त्वेन तदधिकारप्राप्तौ नाग्न्यभावेन तन्निरासः । लौकिकेऽग्नावपि तदनुष्ठानसम्भवात् । नच वैदिककर्मणोऽवैदिकेऽग्नावनुष्ठानमदृष्टचरम् । बहुषु दृष्टत्वादित्याह – उपनयनेति ॥

ವಿವರಣೆ - ಶೂದ್ರಾದಿಗಳಿಗೆ 'ನಾಗ್ನಿರ್ನ ಯಜ್ಞಃ' ಎಂಬ ನಿಷೇಧ ವಚನದಿಂದಲೇ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಸುಲಭವಾಗಿ ಹೇಳಲು ಬರುತ್ತದೆ. ಇದನ್ನು ಒಪ್ಪದೇ ಬೇರೆಗತಿಯಿಲ್ಲ. ಏಕೆಂದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇವೇ ಮೊದಲಾದ ಕ್ರತುವಿಧಿಗಳು ಸ್ವರ್ಗದಲ್ಲಿ ಕಾಮನಯುಳ್ಳವರೆಲ್ಲರೂ ಅಧಿಕಾರಿಗಳಾಗಿರುತ್ತಾರೆಂದು ಆಕ್ಷೇಪ ಮಾಡುತ್ತದೆ. ಶೂದ್ರರಿಗೂ ಸ್ವರ್ಗಕಾಮನೆಯಿರುವ ಪ್ರಯುಕ್ತ ಅವರಿಗೂ ಯಾಗಾಧಿಕಾರವು ಪ್ರಾಪ್ತವಾಗುತ್ತದೆ. ಹೀಗಿರುವಾಗ ಶೂದ್ರರಿಗೆ ಅಗ್ನ್ಯಾಧಾನವಿಲ್ಲವೆಂದು ಹೇಳುವ ಮೂಲಕ ಯಾಗದಲ್ಲಿ ಅಧಿಕಾರವಿಲ್ಲವೆಂದು ಉಪಪಾದನೆ ಮಾಡಲು ಸಾಧ್ಯವಿಲ್ಲ. ಲೌಕಿಕಾಗ್ನಿಯಲ್ಲಿಯೂ ಕ್ರತುವನ್ನು ಅನುಷ್ಠಾನ ಮಾಡಬಹುದು. ವೈದಿಕವಾದ ಕರ್ಮವನ್ನು ಅವೈದಿಕವಾದ ಅಗ್ನಿಯಲ್ಲಿ ಅನುಷ್ಠಾನ ಮಾಡುವುದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಅನೇಕ ಸ್ಥಳಗಳಲ್ಲಿ ವೈದಿಕಕರ್ಮಗಳನ್ನು ಲೌಕಿಕಾಗ್ನಿಗಳಲ್ಲಿ ಅನುಷ್ಠಾನ ಮಾಡಿದ್ದು ಕಂಡಿದೆ. ಈ ವಿಷಯವನ್ನು ಉಪನಯನ ಇತ್ಯಾದಿ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ.

**प्रकाशः –** षष्ठस्याष्टमे पादे "उपनयन्" इति द्वितीयेऽधिकरणे उपनयनाङ्गभूतमाणवककर्तृका होमाः किमाहवनीये स्युरुत लौकिक इति संशये

'ಉಪನಯನ್ನಾದದೀತ ಹೋಮಸಂಯೋಗಾತ್' (೬-೮-೨)[1]

---

(१) भाट्टसङ्ग्रहः –

**अथ द्वितीयमनाहिताग्निषूपनयनहोमाधिकाराधिकरणम् (सूत्राणि ११-१९)**

**उपनयन्नादधीत होमसंयोगात् ॥११॥**

**(स्थपतीष्टिवल्लौकिके वा विद्याकर्मानुपूर्वत्वात् ॥१२॥** आधानञ्च भार्यासंयुक्तम् ॥१३॥ **अकर्म चोर्ध्वमाधानात्तत्समवायो हि कर्मभिः ॥१४॥** श्राद्धवदिति चेत् ॥१५॥ **न श्रुतिविप्रतिषेधात् ॥१६॥ सर्वार्थत्वाच पुत्रार्थो न प्रयोजयेत् ॥१७॥ सोमपानात्तु प्रापणं द्वितीयस्य तस्मादुपयच्छेत् ॥१८॥ पितृयज्ञे तु दर्शनात्प्रागाधानात्प्रतीयेत ॥१९॥**

पूर्ववैषम्येण शङ्कनात्सङ्गतिः । उपनयनाङ्गभूता माणवककर्तृका आचार्यकर्तृकाश्च होमाः किमाहवनीये स्युः, उत लौकिकेऽग्नाविति सन्देहे, "एषा वाऽनाहिताग्नेः" इति वचनसत्त्वेन चतुर्होतृहोमस्य लौकिकाग्नौ कार्यत्वेपीह तथा वचनाभावादुपनयनात्प्राग्भार्यामुद्वाह्याऽधानं

ಉಪನಯನಕ್ಕೆ ಅಂಗವಾದ ಒಂದು ಹೋಮವನ್ನು ಮಾಣವಕನು ಮಾಡಬೇಕೆಂದು ಶ್ರುತಿಯು ಹೇಳಿದೆ. ಆಹವನೀಯ ಎಂಬ ಅಲೌಕಿಕಾಗ್ನಿಯಲ್ಲಿ ಮಾಡಬೇಕೋ ಅಥವಾ ಲೌಕಿಕಾಗ್ನಿಯಲ್ಲಿ ಮಾಡಬೇಕೋ? ಎಂದು ಸಂಶಯ.

**प्रकाशः** – तेषां माणवककर्तृकतया तदग्नावेव कर्तव्यतयोपनयनात्प्रागधीत्य भार्यामुद्वाह्याग्निमाधायाहवनीये तान् कुर्यादिति प्राप्ते

ಎಲ್ಲಾ ಹೋಮಗಳನ್ನು ಸಂಸ್ಕೃತವಾದ ಅಗ್ನಿಯಲ್ಲೇ ಮಾಡಬೇಕೆಂಬ ನಿಯಮವಿದೆ. ಮಾಣವಕನೇ ಈಗ ಹೋಮವನ್ನು ಮಾಡಬೇಕಾದ್ದರಿಂದ ಉಪನಯನಕ್ಕಿಂತ ಮೊದಲು ವೇದಾಧ್ಯಯನ ಮಾಡಿ, ಹೆಂಡತಿಯನ್ನು ಪಡೆದು, ಅಗ್ನ್ಯಾಧಾನವನ್ನು ಮಾಡಿ, ಅಂತಹ ಸಂಸ್ಕೃತವಾದ ಆಹವನೀಯಾಗ್ನಿಯಲ್ಲಿ ಹೋಮವನ್ನು ಮಾಡಬೇಕೆಂದು ಪೂರ್ವಪಕ್ಷ.

**प्रकाशः** – आधानस्य विद्वदधिकारित्वादुपनयनात्पूर्वं तदयोगान्नाधानमिति लौकिक एवोपनयनहोमा इत्युक्तम् ।

ಅಗ್ನ್ಯಾಧಾನದಲ್ಲಿ ವೈದುಷ್ಯವಿದ್ದವರು ಮಾತ್ರ ಅಧಿಕಾರಿಗಳಾಗುತ್ತಾರೆ. ಉಪನಯನಕ್ಕಿಂತ ಮೊದಲು ಮಾಣವಕನಿಗೆ ವೈದುಷ್ಯ ಬರಲು ಸಾಧ್ಯವೇ ಇಲ್ಲ. ಹಾಗಾಗಿ ಅಗ್ನ್ಯಾಧಾನವೂ ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ ಲೌಕಿಕವಾದ ಅಗ್ನಿಯಲ್ಲಿಯೇ ಉಪನಯನ ಹೋಮವನ್ನು ಮಾಡಬೇಕೆಂದು ಸಿದ್ಧಾಂತ ಮಾಡಿದ್ದಾರೆ.

**प्रकाशः** – तथा "स्थपतीष्टिः प्रयाजवदग्न्याधेयं प्रयोजयेत्तादर्थ्याच्चापवृज्येत" इति तृतीयेऽधिकरणे "एतया निषादस्थपतिं याजयत्" इति स्थपतीष्टिः किमाहितेऽग्नावुत लौकिक इति सन्देहे

---

कृत्वा सम्पादिते आहवनीये ते होमाः कार्याः । "स्नात्वा भार्यामधिगच्छेत्" इति स्नानोत्त लभार्योद्वाहवचनमपत्यार्थं स्यादिति **प्राप्तम्** । तदाह **सूत्रे, उपनयन्** उपगच्छन् माणवकः **प्रागुपनयनात् आदधीत** आहवनीयस्योपनयाङ्गभूतैर्होमैः **संयोगादिति** । **सिद्धान्तस्तु,** विद्वानेवाऽधानेऽधिकारी । न चानुपनीतस्य विद्यास्ति । अत आहवनीया-भावाल्लौकिकेऽग्नावुपनयनहोमः कार्य इति ।

**॥ इति द्वितीयमनाहिताग्निषूपनयनहोमाधिकाराधिकरणम् ॥ (सूत्राणि ११-१९)**

ಪರಿಪೂರ್ಣಚಂದ್ರಿಕಾ

'ಸ್ಥಪತೀಷ್ಟಿಃ ಪ್ರಯಾಜವದಗ್ನ್ಯಾಧೇಯಂ ಪ್ರಯೋಜಯೇತ್ತಾದರ್ಥ್ಯಾಚ್ಚಾಪವೃಜ್ಯೇತ'
(೬-೮-೩)[1]

'ಏತಯಾ ನಿಷಾದಸ್ಥಪತಿಂ ಯಾಜಯೇತ್' ಎಂಬಲ್ಲಿ ಸ್ಥಪತಿ ಮಾಡಬೇಕಾದ ಇಷ್ಟಿಯು ಆಹಿತವಾದ ಅಗ್ನಿಯಲ್ಲೋ, ಲೌಕಿಕಾಗ್ನಿಯಲ್ಲೋ ? ಎಂದು ಸಂದೇಹ.

**प्रकाशः** – प्रकृतित आहवनीयादिप्राप्तेस्तस्य चाधानाधीनत्वादसत्यप्याधानविधा विष्टिविधिबलादेव तदाक्षेपादाहित इति प्राप्ते

ಪೂರ್ವಪಕ್ಷ - ಪ್ರಕೃತಿಯಾಗದಲ್ಲಿ ಆಹವನೀಯಾದಿ ಸಂಸ್ಕೃತವಾದ ಅಗ್ನಿಗಳೇ ಇರುವುದರಿಂದ ವಿಕೃತಿಯಾಗವೆನಿಸಿದ ಸ್ಥಪತೀಷ್ಟಿಯಲ್ಲಿಯೂ ಅದೇ ಅಗ್ನಿಯು ಪ್ರಕೃತವಾಗುತ್ತದೆ. ಸಂಸ್ಕೃತಾಗ್ನಿಯು ಅಗ್ನ್ಯಾಧಾನದ ಅಧೀನವಾಗಿದೆ. ಆದರೆ ಅಗ್ನ್ಯಾಧಾನ ಮಾಡಬೇಕೆನ್ನುವ ಪ್ರತ್ಯೇಕವಿಧಿವಾಕ್ಯವು ಶ್ರುತವಾಗಿಲ್ಲ. ಆದ್ದರಿಂದ ಸ್ಥಪತಿಯು ಇಷ್ಟಿಯನ್ನು ಆಚರಿಸಬೇಕೆಂಬ ವಿಧಿಯ ಬಲದಿಂದಲೇ ಸ್ಥಪತಿಯು ಅಗ್ನ್ಯಾಧಾನಕ್ಕೆ

(१) **भाट्टसङ्ग्रहः** –

**अथ तृतीयमनाहितेऽग्नौ स्थपतीष्ट्यधिकरणम् (सूत्रे २०-२१)**
**स्थपतीष्टिः प्रयाजवदग्न्याधेयं प्रयोजयेत्तादर्थ्याच्चापवृज्येत ॥२०॥**
**(अपि वा लौकिकेऽग्नौ स्यादाधानस्यासर्वशेषत्वात् ॥२१॥)**

अत्रापि पूर्ववैषम्येण शङ्कनात्सङ्गतिः । ''एतया निषादस्थपतिं याजयेत्'' इति श्रुता स्थपतीष्टिः किमाहवनीये स्यात्, उत लौकिकेऽग्नाविति सन्देहे, दर्शपूर्णमासरूप-प्रकृतितश्चोदकेनाऽहवनीयादेः प्राप्तत्वात्तस्य चाऽधानाधीनस्यासत्यपि स्थपतेराधानविधा-विष्टिविधानबलादेवाऽधानाक्षेपेण पूर्वत्रेवाहनीयाद्यसम्भवाभावादाहवनीये स्यादिति **प्राप्तम्** । तदाह, **स्थपतीष्टिः** प्रयाजादिकमिवाग्निद्वारेणाधानमपि **प्रयोजयेत्** । न चैवं स्थपतेरग्निमत्त्वे कर्मान्तरेप्यधिकारः स्यादिति शंक्यम् । **तादर्थ्याच्चापवृज्येत** । इदं ह्याधानं स्थपतीष्ट्यैव प्रयुक्तमिति तदर्थम् । नतु वसन्तादिविहिताधानवदग्निमात्रार्थम् । अतस्तस्यामिष्टौ समाप्तायामाधानमपवृज्येत समाप्येतेति न कर्मान्तराधिकारः । अग्न्यभावादिति । सिद्धान्तस्तु, प्रकृतित आहवनीयादेः प्राप्तावपि तस्य वसन्तादिवाक्यबलेन ब्राह्मणादि-कर्तृकाधानसाध्यत्वावगमात्तत्कर्तृकमेवाधानमग्निद्वारेणापीष्टिविधिः प्रयोजयेत् । न स्थपतिकर्तृकमिति स्थपतीष्टिर्नाहवनीये । किन्त्वाचारल्लौकिकेऽग्नावेवेति । फलं व्यक्तम् ।

**॥ इति तृतीयमनाहितेऽग्नौ स्थपतीष्ट्यधिकरणम् ॥ (सूत्रे २०-२१)**
ಅಪಶೂದ್ರಾಧಿಕರಣ (೧-೩-೯)

ಅಧಿಕಾರಿಯಾಗಿರುತ್ತಾನೆ ಎಂದು ಸಿದ್ಧವಾಗುತ್ತದೆ. ಹಾಗಾಗಿ ಆಹಿತವಾದ ಅಗ್ನಿಯಲ್ಲಿಯೇ ಇಷ್ಟಿಯನ್ನು ಆಚರಿಸಬೇಕು.

**प्रकाशः** – वसन्तादिवाक्यविहिताधानजन्यसंस्कारवाचित्वादाहवनीयादिशब्दानां स्थपतिकृतेनाधानेन चाविहितेन संस्काराप्रतीतेर्नाधानस्याक्षेप इति लौकिक एवेत्युक्तम् ।

ವಸಂತಾದಿವಾಕ್ಯಗಳಲ್ಲಿ ಅಗ್ನ್ಯಾಧಾನದಿಂದ ಹುಟ್ಟಿದ ಸಂಸ್ಕೃತವಾದ ಅಗ್ನಿಯಲ್ಲಿಯೇ ಯಾಗವನ್ನು ಹೇಳಲಾಗಿದೆ. ಆಹವನೀಯಾದಿಶಬ್ದಗಳು ಸಂಸ್ಕೃತವಾದ ಅಗ್ನಿಯನ್ನೇ ಹೇಳುತ್ತಿವೆ. ಸ್ಥಪತಿ ಮಾಡಬೇಕಾದ ಆಧಾನದಿಂದ ವಿಹಿತವಾಗಿಲ್ಲ. ಆದ್ದರಿಂದ ಸಂಸ್ಕಾರವೂ ಸಹ ಪ್ರತೀತವಾಗುತ್ತಿಲ್ಲ. ಹೀಗಿರುವಾಗ ಸ್ಥಪತಿಯು ಅಗ್ನ್ಯಾಧಾನ ಮಾಡಬೇಕೆಂದು ಆಕ್ಷೇಪ ಬಲದಿಂದ ಸಿದ್ಧವಾಗುತ್ತದೆಂದು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಸ್ಥಪತಿಯು ಲೌಕಿಕಾಗ್ನಿಯಲ್ಲಿಯೇ ಹೋಮವನ್ನು ಮಾಡಬೇಕೆಂದು ನಿರ್ಣಯಿಸಲಾಗಿದೆ.

**प्रकाशः** – तथा ''अवकीर्णिपशुश्च तद्वदाधानस्याप्राप्तकालत्वात्'' इति चतुर्थेऽधिकरणे ''यो ब्रह्मचार्यवकिरेत्सगर्दभं पशुमालभेत'' इति विहितो यागः क कार्य इति पूर्ववत्सन्देहे

'ಅವಕೀರ್ಣಿಪಶುಶ್ಚ ತದ್ವದಾಧಾನಸ್ಯಾಪ್ರಾಪ್ತಕಾಲತ್ವಾತ್' (೬-೮-೪)[1]

'ಯೋ ಬ್ರಹ್ಮಚಾರ್ಯವಕಿರೇತ್ ಸ ಗರ್ದಭಂ ಪಶುಮಾಲಭೇತ' ಎಂಬ ವಾಕ್ಯದಲ್ಲಿ ವಿಹಿತವಾದ

(१) भाट्टसङ्ग्रहः –

अथ चतुर्थमनाहितेऽग्नाववकीर्णिपश्वनुष्ठानाधिकरणम्

अवकीर्णिपशुश्च तद्वदाधानस्याप्राप्तकालत्वात् ॥२२॥

अत्रापि पूर्ववैषम्येन शङ्कनात्सङ्गतिः । ''यो ब्रह्मचार्यवकिरेत् (अविकिरेत् धातुं विसृजेत्) स गर्दभं पशुमालभेत'' इति श्रुतः पशुयागः किमाहवनीये स्याल्लौकिकेऽग्नौ वेति सन्देहे, स्थपतीष्टेरध्ययनाप्रयोजकत्वेप्यवकीर्णिनस्त्रैवर्णिकत्वाद्विद्वत्त्वात्स्नातकव्रतभार्योद्वाहाधानानां सम्भवादाहवनीय एव प्रायश्चित्तरूपो गर्दभपशुयागः कार्य इति प्राप्ते सिद्धान्तः, ''अविच्युतब्रह्मचर्यो गृहस्थाश्रममाविशेत्'' इति वचनादसमाहिब्रह्मचर्यव्रतस्य गार्हस्थ्ये प्रवेशायोगात्, अपत्नीकस्याधानायोगादग्न्यभावेनायं गर्दभपशुयागो लौकिक एवाग्नाविति । तदाह, अवकीर्णिपशुयागश्च तद्वत् स्थपतीष्टिल्लौकिके स्यात् । प्रायश्चित्तमकृत्वा दारपरिग्रहासम्भवेनाऽधानस्य तदनीमप्राप्तकालत्वादिति ।

॥ इति चतुर्थमनाहितेऽग्नाववकीर्णिपश्वनुष्ठनाधिकरणम् ॥

ಪರಿಪೂರ್ಣಚಂದ್ರಿಕಾ

ಯಾಗವನ್ನು ಸಂಸ್ಕೃತವಾದ ಅಗ್ನಿಯಲ್ಲಿ ಮಾಡಬೇಕೋ? ಅಥವಾ ಲೌಕಿಕಾಗ್ನಿಯಲ್ಲಿ ಮಾಡಬೇಕೋ ? ಎಂದು ಸಂದೇಹ.

**प्रकाशः – ब्रह्मचारिणस्त्रैवर्णिकत्वाद्विद्वत्त्वाच्च स्नात्वा भार्यामुद्वाह्याग्निमाधाय तत्र कुर्यादिति प्राप्ते**

ಬ್ರಹ್ಮಚಾರಿಯು ತ್ರೈವರ್ಣಿಕರಲ್ಲಿ ಸೇರಿರುವ ಕಾರಣ ವೈದುಷ್ಯವಿರುವುದರಿಂದಲೂ ಸ್ನಾತಕನಾಗಿ ಹೆಂಡತಿಯನ್ನು ಪಡೆದು ಅಗ್ನ್ಯಾಧಾನ ಮಾಡಿ ಯಾಗವನ್ನು ಮಾಡಬೇಕೆಂದು ಪೂರ್ವಪಕ್ಷ.

**प्रकाशः – अपराधकृतब्रह्मचर्यविप्लवमसमाधाय गार्हस्थ्यप्रवेशायोगात् ''अविप्लुतब्रह्मचर्यो गृहस्थाश्रममाविशेत्'' इति विधानादपत्नीकस्याधानाभावाल्लौकिक एवेत्युक्तमित्यर्थः ।**

ಬ್ರಹ್ಮಚಾರಿಯು ಚರಮಧಾತುವಿಸರ್ಗವನ್ನು ಮಾಡಿ, ಅಪರಾಧಮಾಡಿದಾಗ ತನ್ನ ಬ್ರಹ್ಮಚರ್ಯವನ್ನೇ ಕಳೆದುಕೊಂಡಿರುತ್ತಾನೆ. ಹೀಗಿರುವಾಗ ಅವನು ಗೃಹಸ್ಥಾಶ್ರಮವನ್ನು ಹೊಂದಲು ಹೇಗೆ ಸಾಧ್ಯ ? ಏಕೆಂದರೆ 'ಅವಿಪ್ಲುತಬ್ರಹ್ಮಚರ್ಯೋ ಗೃಹಸ್ಥಾಶ್ರಮಮಾವಿಶೇತ್' 'ಬ್ರಹ್ಮಚರ್ಯವನ್ನು ಕಳೆದುಕೊಳ್ಳದ ವ್ಯಕ್ತಿಯಷ್ಟೇ ಗೃಹಸ್ಥಾಶ್ರಮವನ್ನು ಹೊಂದಲು ಅರ್ಹನಾಗಿರುತ್ತಾನೆ' ಎಂದು ವಿಧಾನ ಮಾಡಿದ್ದರಿಂದ, ಹೆಂಡತಿಯನ್ನು ಪಡೆಯಲು ಸಾಧ್ಯವಿಲ್ಲ. ಹೆಂಡತಿಯಿಲ್ಲದವನಿಗೆ ಅಗ್ನ್ಯಾಧಾನವೂ ಸಹ ಕೂಡುವುದಿಲ್ಲ. ಆದ್ದರಿಂದ ಚರಮಧಾತುವಿಸರ್ಗ ಮಾಡಿದ ಬ್ರಹ್ಮಚಾರಿಯು, ಲೌಕಿಕಾಗ್ನಿಯಲ್ಲಿಯೇ ಯಾಗವನ್ನು ಮಾಡಬೇಕೆಂದು ಸಿದ್ಧಾಂತ ಮಾಡಲಾಗಿದೆ. ಪೂರ್ವಮೀಮಾಂಸೆಯ ಈ ದೃಷ್ಟಾಂತಗಳಿಂದ ಲೌಕಿಕಾಗ್ನಿಯಲ್ಲಿಯೂ ಯಾಗವನ್ನು ಮಾಡಬಹುದೆಂದು ತಿಳಿಯುತ್ತದೆ. ಆದ್ದರಿಂದ ಶೂದ್ರನೂ ಕೂಡ ಇದರಂತೆ ಯಾಗವನ್ನು ಮಾಡಲು ಅರ್ಹನಾಗಿರುತ್ತಾನೆ.

**प्रकाशः – निषेधाननुसरणे बाधकान्तरमाह – अग्न्यसाध्येति ।। एतेन विद्वत्ताभावादनधिकार इति निरस्तम् । संध्योपासनादाववर्जनीयत्वात् ।।**

'ನಾಗ್ನಿರ್ನ ಯಜ್ಞಃ' ಎಂಬ ವಾಕ್ಯದಿಂದ ಶೂದ್ರನಿಗೆ ಕರ್ಮಾಧಿಕಾರವಿಲ್ಲ ಎಂಬುದನ್ನು ಒಪ್ಪದಿದ್ದರೆ ಮತ್ತೊಂದು ಬಾಧಕವನ್ನು ಹೇಳುತ್ತಿದ್ದಾರೆ 'ಅಗ್ನ್ಯಸಾಧ್ಯ' ಇತ್ಯಾದಿ ವಾಕ್ಯದಿಂದ. ಹೀಗೆ ಹೇಳಿದ್ದರಿಂದ ವಿದ್ವತ್ವವಿಲ್ಲದಕಾರಣ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಹೇಳುವುದನ್ನು ನಿರಾಕರಿಸಿದಂತಾಯಿತು. ಸಂಧ್ಯೋಪಾಸನಾದಿಗಳಲ್ಲಿ ಅರ್ಹತೆಯಿರುವುದು ಕಂಡಿದೆ.

**प्रकाशः – अत एवेति ।।** अग्न्यसाध्येऽनग्नेरप्यधिकारसम्भवादेवेत्यर्थः ।

ಅಪಶೂದ್ರಾಧಿಕರಣ (೧-೩-೯)

'ಅತ ಏವ' ಎಂದರೆ ಅಗ್ನಿಸಾಧ್ಯವಲ್ಲದ ಅನಗ್ನಿಪುರುಷನಿಗೂ ಅಧಿಕಾರವು ಕೊಡುವುದರಿಂದಲೇ ಎಂದರ್ಥ.

**प्रकाशः –** षष्ठे द्वितीयपादे "तस्मिंस्तु शिष्यमाणानि जनने न प्रवर्तेरन्" इति षष्ठाधिकरण इत्यर्थः । नियम उपनयनादिः उपनयनानन्तरभावीति वचनार्थः । एवमनग्नेरनधिकार इति निरस्तम् ।

'ತಸ್ಮಿಂಸ್ತು ಶಿಷ್ಯಮಾಣಾನಿ ಜನನೇ ನ ಪ್ರವರ್ತೇರನ್' (೬-೨-೬)[1]

ಎಂಬ ಅಧಿಕರಣದಲ್ಲಿ ಉಪನಯನಾದಿಸಂಸ್ಕಾರಗಳನ್ನು ಹೊಂದಿದವರಿಗೆ ಮಾತ್ರ ಉತ್ತರದಿಕ್ಕಿಗೆ ಮುಖಮಾಡಿ ಮೂತ್ರಾದಿಗಳನ್ನು ಮಾಡಬೇಕು ಇತ್ಯಾದಿ ವಿಧಿಗಳು ಸಂಬಂಧಪಡುತ್ತವೆಂದು ನಿರ್ಣಯಿಸಲಾಗಿದೆ ಎಂದರ್ಥ. 'ನಿಯಮ' ಶಬ್ದಕ್ಕೆ ಉಪನಯನಾದಿಗಳು ಎಂದರ್ಥ. ಈ ನಿಯಮದಿಂದ ಅಗ್ನಿಯಿಲ್ಲದವನಿಗೆ ಅಧಿಕಾರವಿಲ್ಲವೆಂಬುದನ್ನು ನಿರಾಕರಿಸಿದಂತಾಯಿತು.

---

(१) **भाट्टसङ्ग्रहः –**

**अथ षष्ठं गुर्वनुगमनादीनामुपनयनोत्तरकालकर्तव्यताधिकरणम् (सूत्रे २१-२२)**

**तस्मिंस्तु शिष्यमाणानि जनने न प्रवर्तेरन् ॥२१॥**

**(अपि वा वेदतुल्यत्वादुपायेन प्रवर्तेरन् ॥२२॥)**

पूर्वन्यायेनात्र शङ्कात्सङ्गतिः । "प्राङ्मुखो भुञ्जीत" "उदङ्मुखो मूत्रपुरीषं कुर्यात्" इति स्मार्तनियमः किमुपनयनात्प्रागप्यनुसर्तव्योऽथोपनयनात्प्रभृतीति सन्देहे, तन्नियमस्याऽहवनीयाद्याग्निभिर्मन्त्रैर्वा साध्यत्वाभावाज्जननानन्तरमुपनयनात्प्रागपि शक्तौ सत्यामनुसर्तव्य एव । तथा च कलञ्जाद्यभक्षणस्य सर्वाधिकारिकत्ववत्स्मार्त नियमोप्युपनीतानुपनीतसर्वाधिकारिक इति प्राप्तम् । तदाह सूत्रे, तस्मिन् पुरुषे शिष्यमाणानि कर्माणि जनने जातो यदा शक्नुयात्तदैव प्रवर्तेरन्निति । सिद्धान्तस्तु, श्रौतस्याध्ययनादिनियमस्योपनयनानन्तरभावित्व नियमात्, स्मृतेर्वेदमूलत्वेन वेदमूलस्मृतिप्राप्तनियमस्याप्युपनयनोत्तरकाल एव युक्तत्वात्, "उपनयादिर्नियमः" इति स्मरणादुपनीतस्यैव नियमो नानुपनीतस्येति । तथा च सूत्रम्, अपि वा वेदतुल्यत्वादुपायेन प्रवर्तेरन् इति । उपायेन उपनयनेन इत्यर्थः । वेदतुल्यत्वात् स्मृतीनामिति योज्यम् । फलं व्यक्तम् ।

**इति षष्ठं गुर्वनुगमनादीनामुपनयनोत्तरकालकर्तव्यताधिकरणम् (सूत्रे २१-२२)**




ತ್ರೈವರ್ಣಿಕರಿಗಿಂತ ಭಿನ್ನರಾದವರಿಗೆ ಯಾಗದಲ್ಲಿ ಅಧಿಕಾರವಿಲ್ಲವೆಂದು ಪೂರ್ವಮೀಮಾಂಸಕರು ಹೇಳಿದರು. ಆದರೆ ರಥಕಾರರಿಗೆ ಯಾಗಾಧಿಕಾರವನ್ನು ಮೀಮಾಂಸಕರೇ ಒಪ್ಪಿದ್ದರಿಂದ 'ಅಂಶೇ ಬಾಧ' ಮತ್ತು 'ಭಾಗಾಸಿದ್ಧಿ' ಎಂಬೆರಡು ದೋಷಗಳು ಬರುತ್ತವೆಂದು ಸಮರ್ಥಿಸಲಾಯಿತು. ಮತ್ತು ಶೂದ್ರರಿಗೂ ಕೂಡ ಸಂಸ್ಕೃತವಾದ ಅಗ್ನಿಯಲ್ಲಿಯೇ ಯಾಗಾಧಿಕಾರವನ್ನು ಹೇಳಬಹುದು. ವಸಂತಾದಿ ವಾಕ್ಯಗಳು ಕೇವಲ ಕಾಲವನ್ನಷ್ಟೇ ವಿಧಾನ ಮಾಡುತ್ತಿದೆ ಹೊರತು, ತ್ರೈವರ್ಣಿಕರಿಗೆ ಮಾತ್ರ ಅಗ್ನ್ಯಾಧಾನ ಬೇರೆಯವರಿಗೆ ಇಲ್ಲವೆಂದೇನೂ ಹೇಳುತ್ತಿಲ್ಲ. ಬೇರೆ ವಾಕ್ಯದಿಂದ ಶೂದ್ರರಿಗೂ ಅಗ್ನ್ಯಾದಾನದ ವಿಧಿಯಿದೆ. ಆದ್ದರಿಂದ ಬ್ರಾಹ್ಮಣಾದಿಗಳಾದಲ್ಲಿ ವಸಂತಾದಿಕಾಲಗಳಲ್ಲೇ ಅಗ್ನ್ಯಾಧಾನದ ವಿಧಾನವಿದೆ. ಶೂದ್ರನಾದರೆ ಋತುವಿನ ನಿಯಮವಿಲ್ಲದೇ ಬೇರೆ ಋತುಗಳಲ್ಲಿ ಆಧಾನ ಮಾಡಬೇಕೆಂದು ತಿಳಿಯುತ್ತದೆ. ಹಾಗಾಗಿ ಶೂದ್ರನಿಗೆ ಸಂಸ್ಕೃತವಾದ ಅಗ್ನಿಯಲ್ಲಿ ಅಧಿಕಾರವನ್ನು ಹೇಳಬಹುದು.

ಅಥವಾ ಸಂಸ್ಕೃತವಾದ ಅಗ್ನಿಯಲ್ಲಿ ಯಾಗಾಧಿಕಾರವನ್ನು ಒಪ್ಪದಿದ್ದರೂ ಲೌಕಿಕಾಗ್ನಿಯಲ್ಲಿ ಯಾಗಾಧಿಕಾರವನ್ನು ಹೇಳಬಹುದು. ಉದಾಹರಣೆ : ಉಪಯನ ಮಾಡುವ ಮೊದಲು ಮಾಣವಕನು ಹೋಮವನ್ನು ಆಚರಿಸಬೇಕು. ಮತ್ತು ಬೇಡಜಾತಿಯವನು ಸ್ಥಪತೀಷ್ಟಿಯನ್ನು ಆಚರಿಸುತ್ತಾನೆ. ಚರಮಧಾತು ವಿಸರ್ಗಮಾಡಿದ ಬ್ರಹ್ಮಚಾರಿಗೂ ಪ್ರಾಯಶ್ಚಿತ್ತಹೋಮವನ್ನು ವಿಧಿಸಲಾಗಿದೆ. ಇವೆಲ್ಲವೂ ಲೌಕಿಕಾಗ್ನಿಯಲ್ಲಿಯೇ ಮಾಡಬೇಕೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಿದ್ದಾರೆ. ಅದರಂತೆ ಶೂದ್ರನೂ ಕೂಡ ಲೌಕಿಕಾಗ್ನಿಯಲ್ಲಿ ಹೋಮವನ್ನು ಮಾಡಬಹುದು. ಅಥವಾ ಶೂದ್ರನಿಗೆ ಅಗ್ನಿಯೂ ಬೇಡ, ಅಗ್ನ್ಯಾಧಾನವೂ ಬೇಡ, ಲೌಕಿಕಾಗ್ನಿಯಲ್ಲಿ ಅಧಿಕಾರವೂ ಬೇಡ. ಆದರೆ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವಿರಬಹುದು. ಉಪನಯನ ಮಾಡಿಕೊಂಡ ನಂತರ ಉಪಾಕರ್ಮದ ತನಕ ಗುರುಕುಲವಾಸವನ್ನು ಮಾಡಬಾರದೆಂಬ ನಿಯಮವಿದೆ. ಆದರೂ ಅಲ್ಲಿಯ ತನಕ ಸಂಧ್ಯಾವಂದನಾದಿಗಳಲ್ಲಿ ಬ್ರಾಹ್ಮಣನು ಅಧಿಕಾರವು ಪಡೆಯುವಂತೆ ಶೂದ್ರನೂ ಸಹ ಸಂಧ್ಯಾವಂದನಾದಿಗಳಲ್ಲಿ ಅಧಿಕಾರವನ್ನು ಪಡೆಯಬಹುದಲ್ಲವೇ? ಆದ್ದರಿಂದ ಮೀಮಾಂಸಕರಿಗೆ ಶೂದ್ರಾದಿಗಳು ವೇದಾಧ್ಯಯನದಲ್ಲಿ ಅಧಿಕಾರವನ್ನು ಹೊಂದಲಾರರೆಂದು ಸಮರ್ಥಿಸಲಾಗದು.



## ಶೂದ್ರಾದಿಗಳಿಗೆ ಕರ್ಮಾಧಿಕಾರವಿಲ್ಲವೆನ್ನಲು ಅವಿದ್ವತ್ವವೂ ಸಹ ಕಾರಣವಲ್ಲ

### तात्पर्यचन्द्रिका

**नाप्यविद्यत्वादनधिकारः । अध्ययनाभावेऽपि रथकारादेराधानादिज्ञानस्येव ब्राह्मणादेरपि स्वशाखेतरशाखाविहितांगज्ञानस्येव शूद्रादेरपि ''ब्राह्मणो न हन्तव्य' इत्यादिनिषेधवाक्यार्थज्ञानस्येव चोपदेशादिना शूद्रस्यापि ज्योतिष्टोमादिज्ञानस्यापि सम्भवात् ।**

ಅನುವಾದ - ಶೂದ್ರಾದಿಗಳಿಗೆ ವೈದುಷ್ಯವಿಲ್ಲದ ಕಾರಣ ಕರ್ಮಾಧಿಕಾರವಿಲ್ಲವೆಂದು ಮೀಮಾಂಸಕರು ಹೇಳಿದ್ದರು. ಇದೂ ಸಹ ಸರಿಯಲ್ಲ. ವೈದುಷ್ಯವಿಲ್ಲದಿದ್ದರೂ ಕರ್ಮಾಧಿಕಾರವಿದೆಯೆನ್ನಲು ಮೀಮಾಂಸಕರೇ ಒಪ್ಪಿದ ಮೂರು ಉದಾಹರಣೆಗಳಿವೆ -

೧. ರಥಕಾರನಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲ. ಆದರೂ ಸಹ ಅಗ್ನ್ಯಾಧಾನವನ್ನು ಮಾಡಬೇಕೆಂಬ ಜ್ಞಾನವನ್ನು ಪಡೆದಿರುತ್ತಾನೆ.

೨. ಬ್ರಾಹ್ಮಣಾದಿಗಳಿಗೂ ಕೇವಲ ಸ್ವಶಾಖಾಧ್ಯಯನವೂ ವಿಹಿತವಾಗಿರುತ್ತದೆ. ಬೇರೆ ಶಾಖೆಗಳ ಅಧ್ಯಯನವು ವಿಹಿತವಾಗಿರುತ್ತದೆ. ಬೇರೆ ಶಾಖೆಗಳ ಅಧ್ಯಯನವು ವಿಹಿತವಾಗಿಲ್ಲ. ಆದರೆ ಯಾವ ಶಾಖೆಯನ್ನು ಅಧ್ಯಯನ ಮಾಡಿಲ್ಲವೋ, ಆ ಶಾಖೆಯಲ್ಲಿ ವಿಹಿತವಾದ ಯಜ್ಞಾಂಗದ ಜ್ಞಾನವು ಇವನಿಗೆ ಬರುತ್ತದೆ.

೩. ಶೂದ್ರನಿಗೂ ಸಹ 'ಬ್ರಾಹ್ಮಣೋ ನ ಹಂತವ್ಯಃ' ಬ್ರಾಹ್ಮಣನನ್ನು ಹನನ ಮಾಡಬಾರದು ಎಂಬ ವಿಶೇಷವಾಕ್ಯದ ಜ್ಞಾನವು ಇರುತ್ತದೆ.

ಈ ಮೂರೂ ಸ್ಥಳಗಳಲ್ಲಿಯೂ ಸ್ವತಃ ಅಧ್ಯಯನವಿಲ್ಲದಿದ್ದರೂ ಮತ್ತೊಬ್ಬರ ಉಪದೇಶದಿಂದ ಜ್ಞಾನ ಬರುತ್ತದೆಂದು ಒಪ್ಪಿಕೊಳ್ಳಬೇಕು. ಅದರಂತೆ ಶೂದ್ರನಿಗೂ ಸಹ ಮತ್ತೊಬ್ಬರ ಉಪದೇಶದಿಂದ ಜ್ಯೋತಿಷ್ಟೋಮಾದಿಯಾಗಗಳನ್ನು ಆಚರಿಸಬೇಕೆಂಬ ಜ್ಞಾನವು ಬರಬಹುದು.

**त्वन्मते ''सत्रिभिर्वेदैर्विधीयत'' इति वेदान्तराध्ययनस्य विहितत्वेऽपि ''स्वाध्यायोऽध्येतव्य'' इत्यत्र स्वाध्यायशब्दस्य स्वस्वशाखामात्रपरत्वेनैकवेदगत-शाखान्तराध्ययनस्याविहितत्वात् ।**

ಮೀಮಾಂಸಕರ ಮತದಲ್ಲಿ 'ಸತ್ರಿಭಿರ್ವೇದೈರ್ವಿಧೀಯತೇ' ಎಂಬ ವಾಕ್ಯದಂತೆ ಬ್ರಾಹ್ಮಣಾದಿಗಳಿಗೆ ಬೇರೆ ವೇದಗಳ ಅಧ್ಯಯನವೂ ಸಹ ವಿಹಿತವೇ ಆಗಿದೆ. ಆದರೆ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯದಲ್ಲಿ ಸ್ವಾಧ್ಯಾಯಶಬ್ದವು ತಮ್ಮ ಶಾಖೆಯನ್ನಷ್ಟೇ ಅಧ್ಯಯನ ಮಾಡಬೇಕು. ತಮ್ಮ ವೇದದಲ್ಲೇ ಇರುವ ಒಂದು ಶಾಖೆಯನ್ನಷ್ಟೇ ಅಧ್ಯಯನ ಮಾಡಬಹುದು ಹೊರತು, ಉಳಿದ ಶಾಖೆಗಳ ಅಧ್ಯಯನವು ವಿಹಿತವಲ್ಲವೆಂದು ಹೇಳಲಾಗಿದೆ. ಆದ್ದರಿಂದ ಬೇರೆ ಶಾಖೆಗಳಲ್ಲಿರುವ ಕರ್ಮಾಂಗದ ಅರಿವು ಬ್ರಾಹ್ಮಣರಿಗೆ ಇದ್ದೇ ಇರುತ್ತದೆ. ಅದರಂತೆ ಶೂದ್ರನ ವಿಷಯದಲ್ಲಿಯೂ ತಿಳಿಯಬೇಕು.

**किञ्च त्वया सर्वशक्तिनयेऽधादेराज्यावेक्षणाद्यङ्गहानेन शक्याङ्गोपसंहारेण नित्यकर्माधिकारोऽङ्गीकृतः ।**

ಪರಿಪೂರ್ಣಚಂದ್ರಿಕಾ

ಮತ್ತು ಮೀಮಾಂಸಕರಾದ ನೀವೇ ಸರ್ವಶಕ್ತ್ಯಧಿಕರಣದಲ್ಲಿ ಕುರುಡನಾದ ಕರ್ಮಾಧಿಕಾರಿಗೆ ತುಪ್ಪವನ್ನು ನೋಡುವಿಕೆಯು ಕೂಡುವುದಿಲ್ಲ. ಆದರೂ ತನಗೆ ಶಕ್ತಿಯಿದ್ದಷ್ಟು ಕರ್ಮಾಂಗಗಳನ್ನು ಅನುಷ್ಠಾನ ಮಾಡಿ, ಕರ್ಮವನ್ನು ಪೂರ್ಣಮಾಡಬೇಕು. ಇಲ್ಲದಿದ್ದರೆ ನಿತ್ಯಕರ್ಮವೇ ಲೋಪವಾಗುವ ಪ್ರಸಂಗ ಬರುತ್ತದೆ. ಮುಖ್ಯವಾದ ನಿತ್ಯಕರ್ಮವನ್ನು ಅನುಷ್ಠಾನ ಮಾಡಲೇಬೇಕು. ಅದರ ಅಂಗಗಳನ್ನು ಯಥಾಶಕ್ತ್ಯಾನುಷ್ಠಾನ ಮಾಡಿದರೆ ಸಾಕು ಎಂದು ನಿರ್ಣಯಿಸಲಾಗಿದೆ.

**एवं च तद्वदेव शूद्रादेरप्यग्निविद्याहानेनाङ्गान्तरोपसंहारेण नित्येष्वधिकारः किं न स्यात् ।**

ಸರ್ವಶಕ್ತ್ಯಧಿಕರಣದ ಉದಾಹರಣೆಯಂತೆ ಶೂದ್ರಾದಿಗಳೂ ಸಹ ನಿತ್ಯಕರ್ಮಗಳಲ್ಲಿ ಅನುಷ್ಠಾನವನ್ನು ಪಡೆಯುತ್ತಾರೆ. ಅಗ್ನಿವಿದ್ಯೆ ಎಂಬ ಅಂಗದಲ್ಲಿ ಅಧಿಕಾರವಿಲ್ಲದಿದ್ದರೂ ಈ ಅಗ್ನಿವಿದ್ಯೆಯೆಂಬ ಅಂಗವನ್ನು ಬಿಟ್ಟು, ಉಳಿದ ಅಂಗಗಳನ್ನು ಅನುಷ್ಠಾನ ಮಾಡಿ ನಿತ್ಯಕರ್ಮವನ್ನು ಶೂದ್ರನಾದವನು ಅನುಷ್ಠಾನ ಮಾಡಿದರೆ ಏನು ತಪ್ಪು ?

**अग्निविद्ये प्रयोगाद्बहिरेव सम्पाद्ये । आज्यावेक्षणादि तु प्रयोगमध्येऽनुष्ठेयमिति तु वैषम्यमात्रम् ।**

ತುಪ್ಪವನ್ನು ನೋಡಬೇಕೆಂಬುದು ಅನುಷ್ಠಾನಕಾಲದಲ್ಲಿ ಮಾಡಬೇಕಾದ ಕರ್ಮವಾಗಿದೆ. ಆದರೆ ಅಗ್ನಿವಿದ್ಯೆಯೆಂಬುದು ಅನುಷ್ಠಾನ ಮಾಡುವ ಮೊದಲೇ ತಿಳಿದಿರಬೇಕು. ಆದ್ದರಿಂದ ಶೂದ್ರಾದಿಗಳಿಗೆ ನಿತ್ಯಕರ್ಮಗಳಲ್ಲಿ ಅಧಿಕಾರವೇ ಇರುವುದಿಲ್ಲ. ಕುರುಡನಾದ ಅಧಿಕಾರಿಗೆ ನಿತ್ಯಕರ್ಮದಲ್ಲಿ ಅಧಿಕಾರವು ಯುಕ್ತವಾಗುತ್ತದಲ್ಲವೇ? ಎಂಬುದೂ ಸರಿಯಲ್ಲ. ಏಕೆಂದರೆ ಇದು ಕೇವಲ ವೈಷಮ್ಯಮಾತ್ರವಾಗಿದೆ.

**प्रयोगात्प्रागेव प्रतिनियतकालेऽग्न्यादिवदाज्यावेक्षणादेरपि कर्तव्यतया प्रमातव्यत्वादित्यलम् ।**

ಏಕೆಂದರೆ ಯಾಗಕರ್ಮವನ್ನು ಅನುಷ್ಠಾನ ಮಾಡುವ ಮೊದಲು, ಅಗ್ನಿವಿದ್ಯೆಯು ಹೇಗೆ ಆವಶ್ಯಕವೋ ಅದರಂತೆ ತುಪ್ಪವನ್ನು ಯಾಗಕಾಲದಲ್ಲಿ ನೋಡಬೇಕು ಎಂಬುದೂ ಸಹ ಮೊದಲೇ ತಿಳಿದಿರಬೇಕು. ಆದ್ದರಿಂದ ಅಂಧಾದಿಗಳಿಗೆ ಅಧಿಕಾರವಿರುವಂತೆ ಶೂದ್ರಾದಿಗಳಿಗೂ ಸಹ ಮೀಮಾಂಸಕರ ಪ್ರಕಾರ ಹೇಳಬೇಕಾದೀತು.

**प्रकाशः –**

अविद्वत्त्वात्स इत्येतन्निराचष्टे – **नापीति** ।। ब्राह्मणादेरपीत्येतदुपपादयति – **त्वन्मत इति** ।। मीमांसकमते ।। **स्वस्वेति** ।। स्वत्वस्य विवक्षितत्वादित्यर्थः ।।

ವಿವರಣೆ - ಶೂದ್ರನಿಗೆ ವೈದುಷ್ಯವಿಲ್ಲದ ಕಾರಣ ಯಾಗಕರ್ಮಗಳಲ್ಲಿ ಅಧಿಕಾರವಿರುವುದಿಲ್ಲವೆಂದು ಹಿಂದೆ ಮೀಮಾಂಸಕರು ಆಕ್ಷೇಪ ಮಾಡಿದ್ದರು. ಅದನ್ನೂ ಸಹ 'ನಾಪಿ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

ಶೂದ್ರನಿಗೆ ಕರ್ಮಾಧಿಕಾರವು ಯುಕ್ತವಾಗುತ್ತದೆನ್ನಲು ಮೂರು ದೃಷ್ಟಾಂತಗಳನ್ನು ಗ್ರಂಥಕಾರರು ಹೇಳಿದ್ದಾರೆ. ಅವುಗಳಲ್ಲಿ 'ಬ್ರಾಹ್ಮಣಾದೇರಪಿ' ಎಂಬ ಎರಡನೆಯ ದೃಷ್ಟಾಂತವನ್ನು ಮಾತ್ರ 'ತ್ವನ್ಮತೇ' ಇತ್ಯಾದಿ ಮುಂದಿನ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ.

'ತ್ವನ್ಮತೇ' ಎಂದರೆ ಮೀಮಾಂಸಕರ ಮತದಲ್ಲಿ ಎಂದರ್ಥ. 'ಸ್ವಸ್ವಶಾಖಾಮಾತ್ರಪರತ್ವೇನ' ಎಂದರೆ ತನ್ನದೇ ಆದ ಶಾಖೆಯನ್ನು ಅಧ್ಯಯನ ಮಾಡಬೇಕೆಂದು ವಿವಕ್ಷಿಸಿದ್ದರಿಂದ ಎಂದರ್ಥ.

**प्रकाशः – सर्वशक्तीति** ।। षष्ठस्य तृतीयपादे ''सर्वशक्तौ प्रवृत्तिस्स्यात्तथा-भूतोपदेशात्'' इति प्रथमाधिकरणे ''यावज्जीवमग्निहोत्रं जुहोति'' इत्यादौ किं सर्वाङ्गोपसंहारशक्तानामेवाधिकार उत यस्तु यावन्ति शक्नोत्युपसंहर्तुं तावद्भिरुपेतं प्रधानं कुर्वन्नधिक्रियेतेति सन्देहे

ಸರ್ವಶಕ್ತೌ ಪ್ರವೃತ್ತಿಃ ಸ್ಯಾತ್ತಥಾಭೂತೋಪದೇಶಾತ್ (೬-೩-೧)[1]

---

(१) **भाट्टसङ्ग्रहः –**

**अथ प्रथमं नित्ये यथाशक्त्यङ्गानुष्ठानाधिकरणम् (सूत्राणि१-७)**

**सर्वशक्तौ प्रवृत्तिः स्यात्तथातोपदेशात् ।।१।।**

**(अपि वाऽप्येकदेशः स्यात्प्रधाने ह्यर्थनिर्वृत्तिर्गुणमात्रमितरत्तदर्थत्वात् ।।२।। तदकर्मणि च दोषस्तस्मात्ततो विशेषः स्यात्प्रधानेनाभिसम्बन्धात् ।।३।। कर्माभेदं तु जैमिनिः प्रयोग-वचनैकत्वात्सर्वेषामुपदेशः स्यादिति ।।४।। अर्थस्य व्यपवर्गित्वादेकस्यापि प्रयोगे स्याद्यथा क्रत्वन्तरेषु ।।५।। विध्यपराधे च दर्शनात्समाप्तेः ।।६।। प्रायश्चित्तविधानाच्च ।।७।।)**

''यावज्जीवमग्निहोत्रं जुहोति'' इत्यादिनित्यकर्मणि किं सर्वाङ्गोपसंहाराशक्तस्यैवाधिकार उताशक्याङ्गत्यागिनोपीति **सन्देहः** । **पूर्वपक्षस्तु** सर्वाण्यङ्गानि युगपत्कथम्भावाकाङ्क्षिण्या भावनयाइत्थंभावेन गृह्यन्त इत्येकादशाद्यपादे अङ्गानान्तु शब्दभेदादित्यत्र वक्ष्यमाणत्वेन,

'ಯಾವಜ್ಜೀವಮಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯವು ಪ್ರತಿಯೊಬ್ಬರೂ ಸಹ ಜೀವನಪರ್ಯಂತವಾಗಿ ಅಗ್ನಿಹೋತ್ರವನ್ನು ಅನುಷ್ಠಾನ ಮಾಡಬೇಕು ಎಂದು ವಿಧಾನ ಮಾಡುತ್ತಿದೆ. ಅಗ್ನಿಹೋತ್ರದಲ್ಲಿ ಯಾರಿಗೆ ಅಧಿಕಾರವಿದೆ. ಯಾಗದ ಸಕಲ ಅಂಗಗಳನ್ನು ಅನುಷ್ಠಾನ ಮಾಡಲು ಶಕ್ತರಾದ ವ್ಯಕ್ತಿಗಳು ಮಾತ್ರ ಅಧಿಕಾರವನ್ನು ಪಡೆಯುತ್ತಾರೋ, ಅಥವಾ ಎಲ್ಲಾ ಅಂಗಗಳ ಅನುಷ್ಠಾನ ಮಾಡುವ ಅಧಿಕಾರವಿಲದಿದ್ದರೂ ತಮಗೆ ಶಕ್ತಿಯಿದ್ದಷ್ಟು ಅನುಷ್ಠಾನ ಮಾಡಿದರೆ ಸಾಕು. ಅಂತಹವರೂ ಸಹ ಅಧಿಕಾರವನ್ನು ಪಡೆಯುತ್ತಾರೋ ? ಎಂದು ಸಂಶಯ.

**प्रकाशः** – सर्वेषामङ्गानां समुच्चयेनेत्थंभावसम्बन्धात्सर्वाङ्गोपेतमेव कर्म फलसाधनमिति न हीनाङ्गस्यानुष्ठानमिति प्राप्ते

ಪೂರ್ವಪಕ್ಷ - 'ಅಗ್ನಿಹೋತ್ರಂ ಜುಹೋತಿ' ಎಂದು ಹೇಳಿದಾಗ ಹೇಗೆ ಅಗ್ನಿಹೋತ್ರವನ್ನು ಅನುಷ್ಠಾನ ಮಾಡಬೇಕು ಎಂದು ಕಥಂಭಾವಾಕಾಂಕ್ಷೆಯು ಪ್ರಾಪ್ತವಾಗುತ್ತದೆ. ಈ ಕಥಂಭಾವಾಕಾಂಕ್ಷೆಯನ್ನು ಶಾಂತಮಾಡಲು ಇತ್ಥಂಭಾವಾಕಾಂಕ್ಷೆಯಿಂದ ಉಳಿದ ಅಂಗಗಳೆಲ್ಲವೂ ಸಂಬಂಧವನ್ನು ಹೊಂದುತ್ತವೆ. ಅಂದರೆ ಶ್ರುತಿಯಲ್ಲಿ ಹೇಳಿದ ಎಲ್ಲಾ ಅಂಗಗಳನ್ನೂ ಸಹ ಅನುಷ್ಠಾನ ಮಾಡಲೇಬೇಕು. ಎಲ್ಲ ಅಂಗಗಳಿಂದ ಸಹಿತವಾದ ಅಗ್ನಿಹೋತ್ರವೆಂಬ ಕರ್ಮವು ಮಾತ್ರ ಫಲಸಾಧನವಾಗುತ್ತದೆ. ಹೀನಾಂಗದಿಂದ ಕೂಡಿರುವ ಅಗ್ನಿಹೋತ್ರವು ಫಲಸಾಧನವಾಗುವುದಿಲ್ಲ. ಆದ್ದರಿಂದ ಎಲ್ಲಾ ಅಂಗಗಳನ್ನು ಅನುಷ್ಠಾನ ಮಾಡಲು ಸಾಮರ್ಥ್ಯವಿರುವ ವ್ಯಕ್ತಿಯಷ್ಟೇ ಅಗ್ನಿಹೋತ್ರವನ್ನು ಆಚರಣೆ ಮಾಡಬೇಕು.

**प्रकाशः** – यावच्छब्दोपबृंहितं जीवनं यागानुरक्तां भावनां प्रति निमित्तत्वेन ज्ञायते । (दर्शपूर्णमासशब्दविशेषितश्च यजिः कालयोगिनामाग्नेयादीनामेव वाचको नाङ्गानां) निमित्तस्य चैतद्रूपं यस्मिन्सति नैमित्तिकमवश्यं कार्यमिति । अतः प्रधानानुरक्ता

असत्सु सर्वेष्वङ्गेषु प्रधानोपकारानिष्पत्तेः, अनुपकृताच्च प्रधानात्फलसिद्धेश्च, असति च फले फलस्वाम्यरूपाधिकाराभावान्न सर्वाङ्गोपसंहाराशक्तस्य नित्ये कर्मण्यप्यधिकार इति । तदाह **सूत्रे, सर्वशक्तौ** सर्वाङ्गोपसंहारसामर्थ्ये सत्येव प्रधाने **प्रवृत्तिः स्यात् । तथाभूतस्य** सर्वाङ्गयुक्तस्यैव जीवनादौ निमित्ते सत्युपदेशादिति । **सिद्धान्तस्तु,** ''यावज्जीवं'' इति यावच्छब्दोपबद्धं जीवनं धातुसम्बन्धविहितणमुल्प्रत्ययरूपश्रुत्या सम्बन्धान्तरासम्भवान्निमित्तत्वेन यागानुरक्तां भावानां प्रत्यवगम्यते । निमित्ते च सति नैमित्तिकमवश्यं कार्यमिति प्रधानवाक्यावगताऽवश्यकत्वस्य सत्यपि निमित्ते यत्किञ्चिदङ्गानुष्ठानाशक्त्या परित्यागे प्रधानवाक्यविरोधः स्यात् । अतः प्रधानानुरोधेनाशक्याङ्गहानेनापि नैमित्तिक प्रयोक्तव्यम् । तावतैव शास्त्रवशात्फलसिद्धिरिति यथाशक्त्यङ्गानुष्ठानेनापि प्रधानप्रयोगेऽस्त्यधिकार इति । तदुक्तं **सूत्रे, अपि वाप्येकदेशः स्यादित्यादि** । एकदेशेनाप्यङ्गानां स्यादेव प्रयोग इत्यर्थः । **फलन्तु** यथा शक्त्यङ्गानुष्ठानेन नित्यकर्मणोऽनुष्ठानम् ।

**॥ इति प्रथमं नित्ये यथाशक्त्यङ्गानुष्ठानाधिकरणम् (सूत्राणि -१-७)**

ಅಪಶೂದ್ರಾಧಿಕರಣ (೮-೩-೯)

भावना स्ववाक्यश्रुतनिमित्तवशप्राप्तावश्यकत्वानुरोधेन यथासम्भवमङ्गानि गृह्णातीति यथाशक्तिप्रयोग इति सिद्धान्तितत्वात्तद्वदेव शूद्रस्याप्यधिकारः स्यादित्यर्थः ।

ಸಿದ್ಧಾಂತ - ಒಂದು ವಾಕ್ಯವನ್ನು ಕೇಳಿದಾಗ ಕಥಂಭಾವಾಕಾಂಕ್ಷೆಯು ಬರುತ್ತದೆ. ಆಮೇಲೆ ಬೇರೆ ವಾಕ್ಯಗಳಿಂದ ಅಂಗಗಳು ಪ್ರಾಪ್ತವಾಗಿ ಇತ್ಥಂಭಾವಾಕಾಂಕ್ಷೆಯಿಂದ ಅನ್ವಯವನ್ನು ಹೊಂದುತ್ತವೆ. ಆದರೆ ಬೇರೆ ವಾಕ್ಯಗಳಿಂದ ಅಂಗವು ಪ್ರಾಪ್ತವಾಗುವ ಮೊದಲೇ ಇದೇ ವಾಕ್ಯದಲ್ಲೇ ಆವಶ್ಯಕತ್ವವು ಸೂಚಿತವಾಗುತ್ತಿದೆ. ಅಂದರೆ 'ಯಾವಜ್ಜೀವಮಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಿ 'ಯಾವತ್' ಎಂಬ ಶಬ್ದದಿಂದ ಕೂಡಿರುವ ಜೀವನವು ಭಾವನಾಕ್ಕೆ ಅಗ್ನಿಹೋತ್ರವು ಆವಶ್ಯಕವಾಗಿದೆಯೆಂದು ತಿಳಿಸುತ್ತದೆ. ಜೀವನವಿರುವ ತನಕ ಅಗ್ನಿಹೋತ್ರ ಮಾಡಲೇ ಬೇಕು ಎಂದು ತಿಳಿದ ಮೇಲೆ ವಾಕ್ಯಾಂತರದಿಂದ ಬೇರೆ ಅಂಗಗಳು ಅನ್ವಯವನ್ನು ಹೊಂದುತ್ತವೆ. 'ಜುಹೋತಿ' ಎಂಬಲ್ಲಿ ಯಾಗದಿಂದ ಅನುವೃತ್ತವಾಗಿ ಯಾವ ಭಾವನಾವು ಕೇಳಿಸುತ್ತಿದೆಯೋ, ಅದು ಸ್ವಪ್ರಕರಣದಲ್ಲೇ ಪಠಿತವಾದ ಎಲ್ಲಾ ಅಂಗಗಳನ್ನು ಗ್ರಹಣ ಮಾಡುತ್ತದೆ. ಆದರೆ ಸ್ವಪ್ರಕರಣದಲ್ಲಿ ಪಠಿತವಾದ ಅಂಗಗಳಿಗಿಂತ ಸ್ವವಾಕ್ಯದಲ್ಲೇ ಪಠಿತವಾದ ಯಾವ ಜೀವನನಿಮಿತ್ತತ್ವವೆಂಬ ಅಂಗವಿದೆಯೋ ಇದರಿಂದ ಆವಶ್ಯಕತ್ವವು ಮೊದಲು ತಿಳಿಯುತ್ತದೆ. ಇದೇ ಪ್ರಬಲ. ಆದ್ದರಿಂದ ಪ್ರಧಾನಕರ್ಮವನ್ನು ಮುಖ್ಯವನ್ನಾಗಿ ಮಾಡಬೇಕು. ಅಂಗಗಳನ್ನು ಯಥಾಶಕ್ತಿ ಮಾಡಬೇಕೆಂದು ಸಿದ್ಧಾಂತ ಮಾಡಲಾಗಿದೆ.

ಇದರಂತೆ ಶೂದ್ರನೂ ಸಹ ಜೀವನ ಪರ್ಯಂತವಾಗಿ ಅಗ್ನಿಹೋತ್ರವನ್ನು ಅನುಷ್ಠಾನ ಮಾಡಲೇಬೇಕು. ಅಂಗಕರ್ಮವೆನಿಸಿದ ಅಗ್ನಿವಿದ್ಯೆಯು ಲೋಪವಾದರೂ ಸಹ ಬಾಧಕವಿಲ್ಲ.

**प्रकाशः** – नन्वाज्यावेक्षणादेः प्रयोगात्प्रागनुपस्थितत्वादन्धादेरधिकारस्तत्र युक्तो न त्वग्न्यादिहीनस्य । अग्न्याद्यभावस्य प्रागेवोपस्थित्या क्रत्वारम्भस्यैवायोगादित्यत आह – **अग्निविद्ये इति** ।।

ಆಜ್ಯಾವೇಕ್ಷಣಾದಿಗಳಿಗೆ ತುಪ್ಪವನ್ನು ನೋಡುವಿಕೆ ಮೊದಲಾದವುಗಳಿಗೆ ಪ್ರಯೋಗಕ್ಕಿಂತ ಮೊದಲು ಉಪಸ್ಥಿತಿಯೇ ಇರುವುದಿಲ್ಲ. ಯಾವಾಗ ಯಾಗಕರ್ಮವನ್ನು ಪ್ರಾರಂಭ ಮಾಡುತ್ತಾನೋ ಅದರ ಮಧ್ಯದಲ್ಲಿ ತುಪ್ಪವನ್ನು ನೋಡಬೇಕೆಂದು ತಿಳಿಯುತ್ತದೆ. ಆವಾಗ ಕುರುಡನಾದ್ದರಿಂದ ನೋಡಲು ಸಾಧ್ಯವಾಗದ ಕಾರಣ ಆ ಕರ್ಮವು ಹೀನವಾದರೂ ನಿತ್ಯಕರ್ಮವನ್ನು ಮಾಡಿ ಪೂರೈಸಬೇಕು. ಆದರೆ ಶೂದ್ರನಿಗೆ ಈ ದೃಷ್ಟಾಂತದಿಂದ ನಿತ್ಯಕರ್ಮದ ಅನುಷ್ಠಾನವನ್ನು ಸಾಧಿಸಲಾಗದು. ಏಕೆಂದರೆ ಯಾಗಕರ್ಮದಲ್ಲಿ ತೊಡಗುವ ಮೊದಲೇ ಅಗ್ನಿವಿದ್ಯೆಯನ್ನು ಅವನು ಪಡೆದಿರಬೇಕು. ಆದರೆ ಅಗ್ನಿವಿದ್ಯೆಯ ಅಧಿಕಾರವು ಅವನಿಗೆ ಇಲ್ಲದ ಕಾರಣ ಪ್ರವೃತ್ತಿಯನ್ನೇ ಅವನು ಮಾಡುವುದಿಲ್ಲ. ಹೀಗೆ ವೈಲಕ್ಷಣ್ಯವಿದೆಯಲ್ಲವೇ ? ಎಂಬ ಪ್ರಶ್ನೆಗೆ 'ಅಗ್ನಿವಿದ್ಯೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – किमनेन प्रकृतानुपयुक्तप्रासङ्गिकप्रपञ्चनेनेत्याह – इत्यलमिति ।।

ಪ್ರಕೃತ ಅಪಶೂದ್ರಾಧಿಕರಣದಲ್ಲಿ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದಷ್ಟೇ ಸಮರ್ಥನೆ ಮಾಡಬೇಕು. ಪ್ರಾಸಂಗಿಕವಾಗಿ ಕರ್ಮಾಧಿಕಾರವಿಲ್ಲವೆಂಬ ವಿಚಾರವು ಪ್ರಸಕ್ತವಾಗಿದೆ. ಆದರೆ ಅದನ್ನೂ ಬಿಟ್ಟು ಮೀಮಾಂಸಕರು ಶೂದ್ರರಿಗೆ ಅಧಿಕಾರವಿಲ್ಲವೆಂಬುದನ್ನು ಹೇಗೆ ಸಮರ್ಥಿಸುತ್ತಾರೆಂದು ಅನುವಾದ ಮಾಡಿ, ಅವರನ್ನು ನಿರಾಕರಿಸುವುದು ಪ್ರಕೃತಕ್ಕೆ ಅನುಪಯುಕ್ತವಲ್ಲವೇ? ಪ್ರಾಸಂಗಿಕವಾಗಿ ಬಂದ ವಿಚಾರವನ್ನು ಏಕೆ ವಿವರಿಸಬೇಕು? ಎಂದರೆ ಅದಕ್ಕಾಗಿ ಗ್ರಂಥಕಾರರು 'ಇತ್ಯಲಮ್' ಎಂದು ಹೇಳಿದ್ದಾರೆ. ಮೀಮಾಂಸಕರ-ಮತದಲ್ಲಿ ಇನ್ನೂ ಹೆಚ್ಚು ದೋಷಗಳನ್ನು ತೋರಿಸಬಹುದು. ಆದರೆ ಪ್ರಕೃತ ಅಪ್ರಸ್ತುತವಾದ್ದರಿಂದ ಇಷ್ಟು ಸಾಕು ಎಂದಭಿಪ್ರಾಯ.

**गुरुराजीयम्** – उत्तमस्त्रीणामित्यस्याधिकार इत्युत्तरेण सम्बन्धः । परमतं मीमांसकमतम् । अनधिकारे किमनग्नित्वं प्रयोजकं किं वाऽविद्यत्वमिति विकल्पं मनसि निधायाद्यं दूषयति – **अनग्नित्वेनेति** ।। द्वितीयं निराह – **नाप्यविद्यत्वादिति**।। स्वरूपकथनार्थत्वं वैयर्थ्यापरपर्याय एवेत्यर्थः ।




ಮೀಮಾಂಸಕರು ಶೂದ್ರರಿಗೆ ಕರ್ಮಾಧಿಕಾರವಿಲ್ಲವೆನ್ನಲು ಅವಿದ್ವತ್ವವು ಕಾರಣವೆನ್ನುತ್ತಾರೆ. ಇದೂ ಸಹ ತಪ್ಪು. ವೇದಗಳಲ್ಲಿ ಹೇಳಿದ ಕರ್ಮವಿಚಾರವು ಯಾರಿಗೆ ತಿಳಿದಿರುತ್ತದೋ ಅವನು ಮಾತ್ರ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಪಡೆಯುತ್ತಾನೆ. ಆದರೆ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವೇ ಇಲ್ಲದ ಕಾರಣ ಅದರಲ್ಲಿ ಹೇಳಿರುವ ಕರ್ಮಗಳ ಜ್ಞಾನವೂ ಸಹ ಅವನಿಗಿರುವುದಿಲ್ಲವೆಂಬುದು ಮೀಮಾಂಸಕರ ಅಭಿಪ್ರಾಯ. ಆದರೆ ನೀಚಜಾತಿಯಲ್ಲಿ ಹುಟ್ಟಿದ ರಥಕಾರನಿಗೆ ಇದೇ ಮೀಮಾಂಸಕರು ಅಗ್ನ್ಯಾಧಾನವನ್ನು ಹೇಳಿರುತ್ತಾರೆ. ಮತ್ತು ಬ್ರಾಹ್ಮಣಾದಿಗಳು ಕೇವಲ ತಮ್ಮ ಶಾಖೆಯನ್ನಷ್ಟೇ ಅಧ್ಯಯನ ಮಾಡಬೇಕು. ಬೇರೆ ಶಾಖೆಗಳನ್ನು ಅಧ್ಯಯನ ಮಾಡಬಾರದೆನ್ನುತ್ತಾರೆ. ಬೇರೆ ಶಾಖೆಗಳಲ್ಲಿ ಹೇಳಿದ, ಕರ್ಮಾಂಗಗಳ ಜ್ಞಾನವು ಬ್ರಾಹ್ಮಣನಿಗೆ ಹೇಗೆ ಬರುತ್ತದೆ? ರಥಕಾರನಿಗೂ ಸಹ ಅಗ್ನ್ಯಾಧಾನ ಮಾಡಬೇಕೆಂಬ ಜ್ಞಾನವು ಹೇಗೆ ಬರುತ್ತದೆ ? ಅಷ್ಟೇ ಅಲ್ಲದೇ ಶೂದ್ರನು 'ಬ್ರಾಹ್ಮಣೋ ನ ಹಂತವ್ಯಃ' ಎಂಬ ನಿಷೇಧವನ್ನು ಅರಿತಿರುತ್ತಾನೆ. ವೇದಾಧ್ಯಯನ ಮಾಡದ ಶೂದ್ರನಿಗೆ ಈ ನಿಷೇಧವಾಕ್ಯಾರ್ಥಜ್ಞಾನವೂ ಸಹ ಹೇಗೆ ಬಂದಿರುತ್ತದೆ? ಆದ್ದರಿಂದ ಮತ್ತೊಬ್ಬರ ಉಪದೇಶದಿಂದ ಆಯಾ ಸಂದರ್ಭಕ್ಕನುಗುಣವಾಗಿ ಅಂಗಕರ್ಮಗಳನ್ನು ತಿಳಿಯುತ್ತಾರೆಂದೇ ಹೇಳಬೇಕು. ಅದರಂತೆ ಶೂದ್ರನಿಗೂ ಸಹ ಜ್ಯೋತಿಷ್ಟೋಮಾದಿ ಯಾಗಗಳನ್ನು ಹೇಗೆ ಅನುಷ್ಠಾನ ಮಾಡಬೇಕೆಂಬ ಅರಿವು ಮತ್ತೊಬ್ಬರ ಉಪದೇಶದಿಂದ ಬರಬಹುದಲ್ಲವೇ?

ಶೂದ್ರನಿಗೆ ಅಗ್ನಿವಿದ್ಯೆಯಾಗಲೀ, ಅಗ್ನ್ಯಾಧಾನವಾಗಲೀ ವಿಹಿತವಲ್ಲ. ಆದ್ದರಿಂದ ನಿತ್ಯಕರ್ಮದಲ್ಲಿ ಅನುಷ್ಠಾನವು ಯುಕ್ತವಾಗುವುದಿಲ್ಲವೆಂದು ಹೇಳಬಾರದು. ಏಕೆಂದರೆ ಸ್ವತಃ ಮೀಮಾಂಸಕರೇ ಸರ್ವಶಕ್ತ್ಯಧಿಕರಣದಲ್ಲಿ ಅಂಧರಿಗೂ ಕೂಡ ನಿತ್ಯಕರ್ಮವನ್ನು ಹೇಳಿರುತ್ತಾರೆ. ಅಂದರೆ ನಿತ್ಯಕರ್ಮಕ್ಕೆ ಅಧಿಕಾರಿಗಳೆನಿಸಿದ ಬ್ರಾಹ್ಮಣರು ಕುರುಡರಾಗಿದ್ದಲ್ಲಿ ಯಜ್ಞದ ಸಂದರ್ಭದಲ್ಲಿ ಆಜ್ಯಾವೇಕ್ಷಣವನ್ನು ನೋಡಲು ಸಾಧ್ಯವಾಗುವುದಿಲ್ಲ. ಆದರೂ ಸಹ ಆ ಆಜ್ಯಾವೇಕ್ಷಣೆಯೆಂಬ ಕರ್ಮವನ್ನು ಬಿಟ್ಟು ಉಳಿದ ಕರ್ಮಗಳನ್ನು ಅನುಷ್ಠಾನ ಮಾಡಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಅದರಂತೆ ಶೂದ್ರನಿಗೂ ಸಹ ಅಗ್ನಿವಿದ್ಯೆಯೆಂಬ ಒಂದು ಕರ್ಮದಲ್ಲಿ ಅಧಿಕಾರವಿಲ್ಲದಿದ್ದರೂ ಉಳಿದ ಅಂಗಕರ್ಮಗಳನ್ನು ಅನುಷ್ಠಾನ ಮಾಡುವ ಮೂಲಕ ನಿತ್ಯಕರ್ಮಗಳಲ್ಲಿ ಅಧಿಕಾರವನ್ನು ಪಡೆಯಬಹುದು.

ಶೂದ್ರನಿಗೆ ಅಗ್ನಿವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ 'ಯಾವಜ್ಜೀವಂ ಅಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಿ ಹೇಳಿದ ನಿತ್ಯಕರ್ಮವನ್ನು ಅನುಷ್ಠಾನ ಮಾಡಬಹುದು. ಹಾಗಾಗಿ ಶೂದ್ರಾದಿಗಳಿಗೆ ವೈದುಷ್ಯಾದಿಗಳಿಲ್ಲದ ಕಾರಣ ಕರ್ಮಾಧಿಕಾರವಿಲ್ಲವೆಂಬ ಮೀಮಾಂಸಕರ ಧೋರಣೆ ಅತ್ಯಂತ ಅಸಾಧುವಾಗಿದೆ ಹೊರತಾಗಿ, 'ನಾಗ್ನಿರ್ನ ಯಜ್ಞಃ' ಎಂಬ ನಿಷೇಧವಾಕ್ಯವಿರುವ ಪ್ರಯುಕ್ತವಾಗಷ್ಟೇ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಹೇಳಬೇಕು.

////////////////////////////////////////

• • • • •

## ಸೂತ್ರಗಳ ವಿನ್ಯಾಸ ಶೈಲಿ

### तात्पर्यचन्द्रिका

**अत्र चाद्ये सूत्रे ''तदाद्रवणात्'' इत्यनेन शुचा द्रवणाच्छूद्र इति शूद्रशब्दस्य यौगिकत्वोक्तिः । ''शुगस्य तदनादरश्रवणात्'' इत्यनेन शोके कारणोक्तिः । ''सूच्यते हि'' इत्यनेन शोके व्यग्रताख्यकार्यरूपलिङ्गोक्तिः ।**

ಅನುವಾದ - ಸೂತ್ರಗಳ ವಿನ್ಯಾಸಕ್ರಮ ಅತ್ಯಂತ ಸಮಂಜಸವಾಗಿದೆ. ಪ್ರಥಮಸೂತ್ರದಲ್ಲಿ 'ತದಾದ್ರವಣಾತ್' ಎಂಬುದರಿಂದ ದುಃಖದಿಂದ ಬಂದಿದ್ದಾನೆಂಬ ಕಾರಣದಿಂದ ರೈಕ್ವರು 'ಶೂದ್ರ' ಎಂದು ಸಂಬೋಧನೆ ಮಾಡಿದ್ದಾರೆ. ಆದ್ದರಿಂದ 'ಅಹ ಹಾರೇತ್ವ ಶೂದ್ರ' ಎಂಬಲ್ಲಿರುವ ಶೂದ್ರಶಬ್ದವು ಯೌಗಿಕವಾಗಿದೆ. ಸೂತ್ರದಲ್ಲಿರುವ 'ತದಾದ್ರವಣಾತ್' ಎಂಬ ಅಂಶವು ಶೂದ್ರಶಬ್ದವು ಯೌಗಿಕವೆಂದು ಸಮರ್ಥನೆ ಮಾಡುತ್ತಿದೆ. 'ಶುಗಸ್ಯ ತದನಾದರಶ್ರವಣಾತ್' ಎಂಬ ಭಾಗವು ಪೌತ್ರಾಯಣನಿಗೆ ದುಃಖವಾಗಲು ಕಾರಣವನ್ನು ನಿರೂಪಣೆ ಮಾಡುತ್ತಿದೆ. 'ಸೂಚ್ಯತೇ ಹಿ' ಎಂಬುದರಿಂದ ದುಃಖವಾಗಲು 'ವ್ಯಗ್ರತಾ' ಎಂಬ ಕಾರ್ಯರೂಪವಾದ ಲಿಂಗವನ್ನು ಹೇಳಲಾಗಿದೆ. ಹೀಗೆ ಪ್ರಥಮ ಸೂತ್ರವು ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸಮರ್ಥಿಸಿ, ಆ ವಿಷಯದಲ್ಲಿ ಕಾರಣವನ್ನು ಉಪಪಾದನೆ ಮಾಡಿದೆ, ಆದ್ದರಿಂದ ಪ್ರಾಥಮ್ಯವು ಯುಕ್ತವಾಗಿದೆ.

ಪರಿಪೂರ್ಣಚಂದ್ರಿಕಾ

द्वितीये वाक्यशेषस्थस्य रूढिबाधकस्योक्तिः । तत्र रथस्यान्यदीयत्वशङ्कानिरासाय भावप्रधानेन चैत्ररथशब्देन पौत्रायणस्य चित्ररथसम्बन्धित्वमुक्तम् । अन्यथा चित्ररथेनेत्यवक्ष्यत् । तत्र च रथमात्रमेव लिङ्गम् । चित्रपदं तु स्वरूपकथनार्थम् । अश्वतरीयुक्तापूर्वरथयोगेन क्षत्रियत्वसम्भावनार्थं वा ।

ಎರಡನೆಯ ಸೂತ್ರದಲ್ಲಿ 'ಅಯಮಶ್ವತರೀರಥಃ' ಎಂಬ ವಾಕ್ಯಶೇಷದಲ್ಲಿ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಬಾರದೆನ್ನಲು ಬಾಧಕವನ್ನು ಹೇಳಲಾಗಿದೆ. ಪೌತ್ರಾಯಣನು ತಂದಿರುವ ರಥವು ಬೇರೆಯವರದ್ದೇ ಆಗಿರಬಹುದಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸಲು ಚೈತ್ರರಥಶಬ್ದವನ್ನು ಭಾವಪ್ರಧಾನದಿಂದ ನಿರ್ದೇಶ ಮಾಡಿದ್ದಾರೆ. ಅಂದರೆ ತಂದಿರುವಂತಹ ರಥವು ಪೌತ್ರಾಯಣರಾಜನದ್ದೇ ಆಗಿದೆ ಎಂದು ತಿಳಿಸಿದ್ದಾರೆ. ಇಲ್ಲದಿದ್ದರೆ 'ಚಿತ್ರರಥೇನ' ಎಂದಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು. ಸೂತ್ರದಲ್ಲಿ ಕೇವಲ ರಥವು ಲಿಂಗವಾಗಿದೆ. ಚಿತ್ರಪದವನ್ನು ಪ್ರಯೋಗಿಸಿದ್ದು ರಥದ ಸ್ವರೂಪವನ್ನು ತಿಳಿಸುವುದಕ್ಕಾಗಿ ಅಥವಾ ಅಪೂರ್ವವಾದ ರಥದ ಸಂಬಂಧದಿಂದ ಪೌತ್ರಾಯಣನು ಕ್ಷತ್ರಿಯನಾಗಿರಬಹುದು ಎಂಬ ಸಂಭಾವನೆಯನ್ನು ಉಂಟುಮಾಡಲು.

तृतीया पञ्चम्योर्हेतुरूपैकार्थत्वात् व्यत्ययेन तृतीयायाः पञ्चम्यादेशाद्वा रथेन लिङ्गादिति सामानाधिकरण्यम् । अत एवोक्तं भाष्ये ''चित्ररथसम्बन्धित्वेन लिङ्गेन'' इति ।

ಸೂತ್ರದಲ್ಲಿ 'ಚೈತ್ರರಥೇನ' ಎಂಬ ವಿಶೇಷಣಕ್ಕೆ ಅನುಗುಣವಾಗಿ ಲಿಂಗೇನ ಎಂದೇ ಹೇಳಬೇಕಿತ್ತು. ಆದರೂ ಸಹ ಲಿಂಗಾತ್ ಎಂಬುದಾಗಿ ಪಂಚಮೀವಿಭಕ್ತಿಯನ್ನು ಪ್ರಯೋಗಿಸಿದ್ದಾರೆ. ಏಕೆಂದರೆ ತೃತೀಯಾ ಮತ್ತು ಪಂಚಮೀವಿಭಕ್ತಿಗಳಿಗೆ ಹೇತುವೆಂಬ ಒಂದೇ ವಿಭಕ್ತಿಯಿರುವುದರಿಂದ, ಅಥವಾ ವಿಭಕ್ತಿಯ ವ್ಯತ್ಯಾಸದಿಂದಲೂ ತೃತೀಯಾವನ್ನು ಹೇಳುವ ಬದಲು ಪಂಚಮೀಯನ್ನು ಹೇಳಿರುತ್ತಾರೆ. ಆದ್ದರಿಂದಲೇ ಭಾಷ್ಯದಲ್ಲಿ 'ಚಿತ್ರರಥಸಂಬಂಧಿತ್ವೇನ ಲಿಂಗೇನ' ಎಂದು ಸಮಾನಾಧಿಕರಣ್ಯದ ಪ್ರಯೋಗವನ್ನೇ ಮಾಡಿದ್ದಾರೆ.

तृतीये रूढिबाधके शूद्रस्याध्ययनाङ्गोपनयनाभावे श्रुत्यन्तरोक्तिः ।

ಮೂರನೆಯ ಸೂತ್ರದಲ್ಲಿ ಅಧ್ಯಯನಕ್ಕೆ ಅಂಗವಾದ ಉಪನಯನರೂಪವಾದ ಸಂಸ್ಕಾರವನ್ನು ಶ್ರುತಿಯು ಹೇಳುತ್ತಿರುವುದರಿಂದ, ಶೂದ್ರನಿಗೆ 'ನಾಗ್ನಿರ್ನ ಯಜ್ಞಃ ನ ಸಂಸ್ಕಾರಃ' ಎಂಬ ಪೈಂಗಿಶ್ರುತಿಯು ಸಂಸ್ಕಾರವಿಲ್ಲವೆಂದು ಹೇಳಿದ್ದರಿಂದ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥನೆ ಮಾಡುತ್ತಿದೆ. ಇದರಿಂದ ಶೂದ್ರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಿದರೆ ಬಾಧಕವಿದೆಯೆಂದು ಹೇಳಿದಂತಾಯಿತು.

ಅಪಶೂದ್ರಾಧಿಕರಣ (೧-೩-೯)

**चतुर्थे तत्रैव श्रुत्यन्तरस्थलिङ्गोक्तिः ।**

ನಾಲ್ಕನೆಯ ಸೂತ್ರದಲ್ಲಿ ರೂಢ್ಯರ್ಥವನ್ನು ಸ್ವೀಕರಿಸಿದರೆ ಬಾಧಕವಿದೆಯೆಂಬ ವಿಷಯದಲ್ಲೇ ಮತ್ತೊಂದು ಶ್ರುತಿಯಲ್ಲಿರುವ ಲಿಂಗವನ್ನು ಹೇಳಿರುತ್ತಾರೆ. ಅಂದರೆ ಸತ್ಯಕಾಮನು ಶೂದ್ರನಲ್ಲನೆಂದು ನಿರ್ಧಾರ ಮಾಡಿದ ಮೇಲಷ್ಟೇ ಉಪನಯನಸಂಸ್ಕಾರವನ್ನು ಮಾಡಿರುತ್ತಾರೆಂದು.

**पञ्चमे तूपनयनाद्यभावेऽप्यध्ययनाद्यस्त्विति शङ्काया निरासः ।**

ಐದನೆಯ ಸೂತ್ರದಲ್ಲಿ ಶೂದ್ರಾದಿಗಳಿಗೆ ಉಪನಯನಾದಿಗಳಿಲ್ಲದಿದ್ದರೂ ವಿಶಿಷ್ಟಬುದ್ಧಿ ಮೊದಲಾದವುಗಳಿರುವ ಕಾರಣ ವೇದಾಧಿಕಾರವನ್ನು ಹೇಳಬಹುದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಿದ್ದಾರೆ.

**यद्यप्यत्राद्यसूत्रस्थपरपक्षसाधकनिरासादपि द्वितीयादिस्थस्वपक्षसाधकमेव पूर्वं वक्तव्यम् ।**

ಪ್ರಶ್ನೆ - ಈ ಅಧಿಕರಣದ ಪ್ರಥಮಸೂತ್ರದಲ್ಲಿ ಪರಪಕ್ಷಸಾಧಕ ಪ್ರಮಾಣವನ್ನು ನಿರಾಕರಿಸಲಾಗಿದೆ. ಅಂದರೆ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಬಾರದೆಂದು ಸಮರ್ಥಿಸಲಾಗಿದೆ. ಮುಂದಿನ ಸೂತ್ರಗಳಲ್ಲಿ ಸ್ವಪಕ್ಷಸಾಧಕಪ್ರಮಾಣಗಳನ್ನು ಹೇಳಿದ್ದಾರೆ. ವಸ್ತುತಃ ಸ್ವಪಕ್ಷಸಾಧಕ ಪ್ರಮಾಣಗಳನ್ನು ಮೊದಲು ಹೇಳಿ, ಅನಂತರ ಪರಪಕ್ಷಪ್ರಮಾಣಗಳನ್ನು ನಿರಾಕರಿಸಬೇಕಲ್ಲವೇ?

**तथापि परेण शूद्रशब्दबलादेव सिद्धान्तहेतूनामन्यथयितत्वेन तन्निरासं विना तेषामसिद्धेः तथा परसाधकनिरासे यत्नाधिक्यात् स्वपक्षसाधकानां तु स्फुटत्वात्तेषां पश्चादुक्तिरिति सूत्रक्रमः ।।**

ಉತ್ತರ - ಪೂರ್ವಪಕ್ಷಕಾರರು ಶೂದ್ರಶಬ್ದದ ಬಲದಿಂದಲೇ ಎಲ್ಲಾ ಸಿದ್ಧಾಂತ ಹೇತುಗಳನ್ನು ಅನ್ಯಥಾ ಅರ್ಥೈಸುತ್ತಾರೆ. ಎಲ್ಲಿಯ ತನಕ ಅವರ ವಾದವನ್ನು ನಿರಾಕರಣೆ ಮಾಡುವುದಿಲ್ಲವೋ, ಅಲ್ಲಿಯ ತನಕ ಹೇತುಗಳೇ ಸಿದ್ಧವಾಗುವುದಿಲ್ಲ. ಅದಕ್ಕಾಗಿ ಮೊದಲು ಪೂರ್ವಪಕ್ಷವನ್ನೇ ನಿರಾಕರಣೆ ಮಾಡಿ, ಹೇತುಸಿದ್ಧಿಯನ್ನು ಪರಿಹರಿಸಿ ಶೂದ್ರರಿಗೆ ವೇದಾಧಿಕಾರವಿಲ್ಲವೆಂದು ಮುಂದಿನ ಸೂತ್ರಗಳಲ್ಲಿ ಸಾಧಿಸಲಾಗಿದೆ. ಅಥವಾ ಪರಪಕ್ಷದಲ್ಲಿ ಇರುವ ಸಾಧಕಪ್ರಮಾಣವನ್ನು ನಿರಾಕರಿಸಲು ಹೆಚ್ಚಿನ ಪ್ರಯತ್ನ ಬೇಕು. ಸ್ವಪಕ್ಷಸಾಧಕಪ್ರಮಾಣಗಳು ಅತ್ಯಂತ ಸ್ಪಷ್ಟವಾಗಿವೆ. ಆದ್ದರಿಂದ ಮೊದಲು ಪರಪಕ್ಷಸಾಧಕಗಳನ್ನು ನಿರಾಕರಿಸಿದ್ದಾರೆ. ಹಾಗಾಗಿ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸಾಧುವಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः –**

**आद्यसूत्र इति ।।** ''शुगस्य तदनादरश्रवणात्तदाद्रवणात्सूच्यते हि'' इत्यत्र । ''कम्वर एनमेतत्सन्तं स युग्वानं रैक्वमिवात्थ'' इति तत्कृतस्य हंसकृतस्यानादरस्य ''तदुह जानश्रुतिः पौत्रायण उपशुश्राव'' इति पौत्रायणेन श्रवणादस्य शुक् शोक आसीत् । तया शुचाऽऽद्रवणात्पौत्रायणः ''अहहारेत्वाशूद्र'' इति रैक्वेण सम्बोधितः। नतु वर्णावरत्वात् । सा हि शुक् ''सहसंजिहान एव क्षत्तारमुवाच'' इत्युक्तव्यग्रतारूपकार्यलिङ्गेन सूच्यते हीति टीकोक्तमर्थं निष्कृष्याह – **तदिति ।।**

ವಿವರಣೆ - ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಅರ್ಥಪೂರ್ಣವಾಗಿದೆಯೆಂದು ಸಮರ್ಥನೆ ಮಾಡುತ್ತಿದ್ದಾರೆ - 'ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ' ಎಂಬುದು ಪ್ರಥಮಸೂತ್ರ 'ಕಮ್ವರ ಏನಮೇತತ್ ಸಂತಂ ಸ ಯುಗ್ವಾನಂ ರೈಕ್ವಮಿವಾತ್ಥ' ಎಲೈ ! ಹಂಸವೇ ಬಂಡಿಯ ಕೆಳಗಿರುವ ರೈಕ್ವನನ್ನು ಕುರಿತು ಹೇಳುವಂತೆ ಪೌತ್ರಾಯಣನ ಬಗ್ಗೆ ಮಾತನಾಡುತ್ತಿದ್ದೀಯಲ್ಲ ಎಂಬುದಾಗಿ ಹಂಸವು ಪೌತ್ರಾಯಣನನ್ನು ತಿರಸ್ಕಾರ ಮಾಡುತ್ತದೆ. ಅದನ್ನು 'ತದುಹ ಜಾನಶ್ರುತಿಃ ಪೌತ್ರಾಯಣ ಉಪಶುಶ್ರಾವ' ಪೌತ್ರಾಯಣನು ಕೇಳಿ ದುಃಖವನ್ನು ಹೊಂದುತ್ತಾನೆ. ಹಾಗೇ ದುಃಖದಿಂದ ರೈಕ್ವನ ಬಳಿ ಹೋದಾಗ 'ಅಹ ಹಾರೇತ್ವ ಶೂದ್ರ' ಎಂಬುದಾಗಿ ರೈಕ್ವಮುನಿಯು ದುಃಖದಿಂದ ಬಂದಿರುತ್ತಾನೆಂಬ ಕಾರಣದಿಂದ ಶೂದ್ರ ಎಂದು ಸಂಬೋಧನೆ ಮಾಡಿದ್ದಾರೆ ಹೊರತು, ಶೂದ್ರಜಾತಿಯವನಾದ್ದರಿಂದ ಶೂದ್ರನೆಂದು ಸಂಬೋಧನೆ ಮಾಡಿಲ್ಲ. ಪೌತ್ರಾಯಣನಿಗೆ ದುಃಖವಾಗಿದೆಯೆಂಬುದು 'ಸಹಸಂಜಿಹಾನ ಏವ ಕ್ಷತ್ತಾರಮುವಾಚ' ಎದ್ದಕೂಡಲೇ ಸಾರಥಿಗೆ ರೈಕ್ವನನ್ನು ಹುಡುಕಿಕೊಂಡು ಬರಲು ಆಜ್ಞೆ ಮಾಡಿದನು ಎಂಬ ಮಾತಿನಿಂದ ವ್ಯಗ್ರತೆಯು ಸ್ಪಷ್ಟವಾಗಿ ತಿಳಿಯುತ್ತದೆ. ಈ ವ್ಯಗ್ರತೆಯೆಂಬ ಕಾರ್ಯದಿಂದ ದುಃಖವಾಗಿದೆಯೆಂದು ತಿಳಿಯಬಹುದು. ಇದನ್ನು ಸೂತ್ರದಲ್ಲಿ 'ಸೂಚ್ಯತೇ ಹಿ' ಎಂಬುದರಿಂದ ಹೇಳಿದ್ದಾರೆ. ಇಷ್ಟು ವಿಚಾರವು ಟೀಕೆಯಲ್ಲಿ ಹೇಳಲ್ಪಟ್ಟಿದೆ. ಅದನ್ನೇ ಗ್ರಂಥಕಾರರು ಸಂಗ್ರಹಿಸಿ 'ತತ್' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः –** शुक्शब्दोपपदाद्द्रुगतावित्यस्माद्धातोरौणादिके डप्रत्यये गकारलोपे शुद्रेति रूपम् । तथैव निर्देष्टव्ये यश्शूद्रेत्युकारस्य दैर्घ्येण निर्देशः स तस्य शोकाधिक्यज्ञापनाय । ''आधिक्येऽधिकम्'' इति सूत्रात् । अत एव सत्रे तद्द्रवणादिति वक्तव्ये तदाद्रवणादित्याङ्प्रयोग ऊकाररूपदीर्घस्वरार्थज्ञापनाय प्रयुक्त इति टीकायामेव व्यक्तमिति भावः ।

'ಶುಕ್' ಎಂಬ ಉಪಪದದ ಮುಂದೆ 'ದ್ರುಗತೌ' ಎಂಬ ಧಾತುವಿಗೆ ಔಣಾದಿಕದಲ್ಲಿ 'ಡ' ಪ್ರತ್ಯಯ ಬಂದರೆ 'ಗ'ಕಾರ ಲೋಪವಾಗಿ 'ಶುದ್ರ' ಎಂಬ ರೂಪವು ನಿಷ್ಪನ್ನವಾಗಿದೆ. ಅಂದರೆ 'ಶುಕ್' ಎಂಬಲ್ಲಿರುವ

'ಗ'ಕಾರಕ್ಕೆ 'ಡ'ಕಾರಾದೇಶ ಬಂದು ಶುದ್' ಎಂದಾಗುತ್ತದೆ. 'ದೃ' ಎಂಬಲ್ಲಿ 'ಉ' ಕಾರ ಹೋಗಿ 'ಡ' ಪ್ರತ್ಯಯದ 'ಅ'ಕಾರವು ಸೇರಿ 'ದ್ರ' ಎಂದಾಗಿದೆ. ಹೀಗೆ ನಿಷ್ಪತ್ತಿ ಮಾಡಿದಾಗ 'ಶುದ್ರ' ಎಂದಾಗುತ್ತದೆ. ಸೂತ್ರದಲ್ಲಿಯೂ ಹೀಗೆ ಹೇಳಬೇಕಿತ್ತು. ಆದರೂ 'ಶೂದ್ರ' ಎಂದು ಹೇಳಿರುವುದು ಶೋಕದ ಆಧಿಕ್ಯವನ್ನು ಸೂಚನೆ ಮಾಡುವುದಕ್ಕಾಗಿ. 'ಆಧಿಕ್ಯೇऽಧಿಕಮ್' ಎಂಬ ಸೂತ್ರವು ಆಧಿಕ್ಯವನ್ನು ತಿಳಿಸುವಾಗ ದೀರ್ಘದ ಪ್ರಯೋಗವನ್ನು ಮಾಡಬಹುದೆಂದು ಹೇಳಿದೆ. ಆದ್ದರಿಂದಲೇ ಸೂತ್ರದಲ್ಲಿಯೂ ಸಹ 'ತದ್‌ದ್ರವಣಾತ್' ಎಂದು ಹೇಳುವ ಬದಲು 'ತದಾದ್ರವಣಾತ್' ಎಂಬಲ್ಲಿ 'ಆಙ್' ಪ್ರಯೋಗವನ್ನು ಮಾಡಿದ್ದಾರೆ. ಇದರಿಂದ ಉಕಾರದ ದೀರ್ಘಸ್ವರವನ್ನು 'ಆಙ್' ಎಂಬ ಉಪರ್ಗದಿಂದ ವ್ಯಾಖ್ಯಾನ ಮಾಡಿದಂತಾಯಿತು. ಹೀಗೆ ಟೀಕೆಯಲ್ಲಿ ಹೇಳಿರುತ್ತಾರೆ.

**प्रकाशः – द्वितीये ।।** क्षत्रियत्वावगतेश्चोत्तरत्र चैत्ररथेन लिङ्गादित्यत्र ''अहहारेत्वाशूद्र'' इति सम्बोधनादुत्तरत्र वाक्ये ''अयमश्वतरीरथ'' इति चित्ररथशब्दिताश्वतरीयुक्तरथ-सम्बन्धित्वरूपाल्लिङ्गात्पौत्रायणस्य क्षत्रियत्वावगतेरित्युक्तत्वादिति भावः । तत्र चैत्ररथेनेति तद्धितस्य भावार्थत्वप्रतीतिं निवारयति – तत्रेति ।।

'ಓಂ ಕ್ಷತ್ರಿಯತ್ವಾಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ' ಎಂಬುದು ಎರಡನೆಯ ಸೂತ್ರ. 'ಅಹಹಾರೇತ್ವಾಶೂದ್ರ' ಎಂದು ಸಂಬೋಧನೆ ಮಾಡುವ ಮುಂದಿನ ವಾಕ್ಯದಲ್ಲಿ 'ಅಯಮಶ್ವತರೀರಥಃ' ಎಂಬ ಮುಂದಿನ ವಾಕ್ಯದಲ್ಲಿ ಚಿತ್ರರಥ ಸಂಬಂಧವೆಂಬ ಲಿಂಗವು ಶ್ರುತವಾಗಿದೆ. ಈ ಲಿಂಗದಿಂದ ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದು ತಿಳಿಯುತ್ತದೆ. ಇಲ್ಲಿರುವ ಚೈತ್ರರಥಶಬ್ದವು ತದ್ಧಿತಪ್ರತ್ಯಯಾಂತ-ವಾದ್ದರಿಂದ ಭಾವಪ್ರಧಾನದಿಂದ ನಿರ್ದಿಷ್ಟವಾಗಿದೆಯೆಂಬ ಪ್ರತೀತಿಯನ್ನು ನಿರಾಕರಣೆ ಮಾಡುತ್ತಿದ್ದಾರೆ 'ತತ್ರ' ಇತ್ಯಾದಿ ವಾಕ್ಯದಿಂದ.

**प्रकाशः** – चित्रश्चासौ रथश्च चित्ररथः । चित्ररथस्यायं चैत्ररथः । ''तस्येदम्'' इत्यण्प्रत्ययः । सम्बन्धश्च स्वाभाविकस्स्वस्वामिभावरूपः । स च भावप्रधानः । चैत्ररथत्वेनेत्यर्थः ।

'ಚಿತ್ರಶ್ಚಾಸೌ ರಥಶ್ಚ ಚಿತ್ರರಥಃ । ಚಿತ್ರರಥಸ್ಯ ಅಯಂ ಚೈತ್ರರಥಃ' ಎಂದು ವಿಗ್ರಹ. ಚಿತ್ರವಾಗಿರುವ ರಥವೇ 'ಚಿತ್ರರಥ' ಅದಕ್ಕೆ ಸಂಬಂಧಪಟ್ಟದ್ದು 'ಚೈತ್ರರಥ'. 'ತಸ್ಯೇದಮ್' ಎಂಬ ಸೂತ್ರದಿಂದ 'ಅಣ್' ಪ್ರತ್ಯಯವು ಸಂಬಂಧಾರ್ಥದಲ್ಲಿ ಪ್ರಯುಕ್ತವಾಗಿದೆ. ಸ್ವಸ್ವಾಮಿಭಾವರೂಪವಾದ ಸ್ವಾಭಾವಿಕ ಸಂಬಂಧವೇ ಇಲ್ಲಿ ವಿವಕ್ಷಿತ. ಚಿತ್ರರಥ ಸಂಬಂಧಿತ್ವ ಅಥವಾ ಚಿತ್ರರಥದ ಸಂಬಂಧವೆಂಬ ಧರ್ಮವು ಭಾವಪ್ರಧಾನದಿಂದ ತಿಳಿಯುತ್ತದೆ.

**प्रकाशः** – ननु चित्रशब्दस्यैव ''रथस्त्वश्वतरीयुक्तश्चित्र इत्यभिधीयते'' इति स्मृत्याऽश्वतरीयुक्तरथवाचित्वाच्चैत्रेण लिङ्गादिति वक्तव्यं नतु रथेनेति चेत्

ಪ್ರಶ್ನೆ - 'ಚಿತ್ರ' ಶಬ್ದಕ್ಕೆ 'ರಥಸ್ತ್ವಶ್ವತರೀಯುಕ್ತಶ್ಚಿತ್ರ ಇತ್ಯಭಿಧೀಯತೇ' ಎಂಬ ಸ್ಮೃತಿಯಿಂದ ಹೇಸರಗತ್ತೆಗಳಿಂದ ಕೂಡಿರುವಂತಹ ರಥವೆಂದೇ ಅರ್ಥ. ಆದ್ದರಿಂದ 'ಚೈತ್ರೇಣ ಲಿಂಗಾತ್' ಎಂದು ಹೇಳಿದ್ದರೆ ಸಾಕಾಗುತ್ತಿತ್ತು. 'ರಥೇನ ಲಿಂಗೇನ' ಎಂದು ಏಕೆ ಹೇಳಿದ್ದಾರೆ.

**प्रकाशः** – सत्यम् । यथा भक्तिशब्दस्य ज्ञानस्नेहोभयवाचित्वेऽपि ज्ञानभक्ती इत्यादौ भक्तिशब्दस्यैकदेशस्नेहमात्रार्थत्वं तथेहाप्यश्वतरीयुक्तविशेषणमात्रार्थकत्वाच्चित्र शब्दस्य ।

ಹೌದು, ಆದರೆ ಭಕ್ತಿ ಶಬ್ದಕ್ಕೆ ಜ್ಞಾನ ಹಾಗೂ ಸ್ನೇಹ ಎಂಬೆರಡರ್ಥಗಳಿದ್ದರೂ 'ಜ್ಞಾನಭಕ್ತಿ' ಎಂಬಲ್ಲಿ ಶ್ರುತವಾದ ಭಕ್ತಿಶಬ್ದಕ್ಕೆ ಕೇವಲ ಭಕ್ತಿಶಬ್ದದ ಏಕದೇಶವಾದ ಸ್ನೇಹ ಎಂಬರ್ಥವನ್ನಷ್ಟೇ ಹೇಗೆ ಸ್ವೀಕರಿಸುತ್ತೇವೋ ಅದರಂತೆ ಇಲ್ಲಿಯೂ ಸಹ 'ಚಿತ್ರ' ಶಬ್ದಕ್ಕೆ 'ರಥ' ಎಂಬರ್ಥವನ್ನು ಬಿಟ್ಟು ಕೇವಲ ಹೇಸರಗತ್ತೆಗಳಿಂದ ಕೂಡಿರುವಂತಹದ್ದು ಎಂದಷ್ಟೇ ವಿವಕ್ಷಿಸಬೇಕು.[೧]

**प्रकाशः** – चैत्रेणेत्युक्तौ तस्यानेकार्थत्वाच्छिष्याणां व्यामोहस्स्यात् । स मा भूदिति रथशब्दोऽपि प्रयुक्तः । तर्हि चैत्ररथाल्लिङ्गादिति वाच्यमित्यत आह – तृतीयेति ।।

ಸೂತ್ರದಲ್ಲಿ 'ಚೈತ್ರೇಣ' ಎಂದಷ್ಟೇ ಹೇಳಿದ್ದರೆ ಚೈತ್ರಶಬ್ದಕ್ಕೆ ಅನೇಕಾರ್ಥಗಳಿರುವುದರಿಂದ ಶಿಷ್ಯರಿಗೆ ಯಾವ ಅರ್ಥವನ್ನು ವಿವಕ್ಷಿಸಬೇಕೆಂದು ಗೊಂದಲವಾಗುತ್ತಿತ್ತು. ಹಾಗಾಗಬಾರದೆಂದು ರಥಶಬ್ದವನ್ನು ಪ್ರಯೋಗಿಸಿದ್ದಾರೆ. ಹಾಗಾದರೆ 'ಚೈತ್ರರಥಾತ್ ಲಿಂಗಾತ್' ಎಂದು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ 'ತೃತಿಯೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – ''हेतौ'' इति सूत्रे हेतुत्वे तृतीयाविधानात् ''विभाषा गुणेऽस्त्रियाम्'' इत्यत्र हेतावित्यनुवर्त्य पञ्चमीविधानात्परतन्त्रमात्रस्य गुणत्वोक्तेरित्यर्थः ।

'ಹೇತೌ' ಎಂಬ ಸೂತ್ರವು ಹೇತ್ವರ್ಥದಲ್ಲಿ ತೃತೀಯಾವಿಭಕ್ತಿಯನ್ನು ವಿಧಿಸಿದೆ. ಈ ಸೂತ್ರದಲ್ಲಿರುವ

(೧) 'ಕರಿಕಲಭ' ನ್ಯಾಯವನ್ನು ಇಲ್ಲಿ ವಿವಕ್ಷಿಸಿದ್ದಾರೆ. 'ಕಲಭ' ಎಂಬ ಶಬ್ದಕ್ಕೆ 'ಆನೆಯಮರಿ' ಎಂದೇ ಅರ್ಥ. ಆದರೂ 'ಕರಿಕಲಭ' ಎಂದು ಪ್ರಯೋಗಿಸಿದಾಗ 'ಕಲಭ' ಎಂಬ ಶಬ್ದಕ್ಕೆ ಕೇವಲ 'ಮರಿ' ಎಂದಷ್ಟೇ ಅರ್ಥವನ್ನು ವಿವಕ್ಷಿಸಿ, 'ಕ… ಶಬ್ದಕ್ಕೆ ಆನೆಯೆಂಬರ್ಥವನ್ನು ಹೇಳಬೇಕು. ಇದು ಪ್ರಸಿದ್ಧವಾದ ನ್ಯಾಯ, ಆದರೆ ರಾಯರು ಇಲ್ಲಿ ಹೊಸದಾದ ದೃಷ್ಟಾಂತವನ್ನು ನೀಡಿದ್ದಾರೆ. ನಾವೆಲ್ಲರೂ ಜ್ಞಾನ-ಭಕ್ತಿ ಎಂದು ಪ್ರಯೋಗ ಮಾಡುತ್ತೇವೆ. ವಸ್ತುತಃ ಭಕ್ತಿಯಲ್ಲೇ ಜ್ಞಾನವು ಸೇರಿರುವಾಗ ಪುನಃ ಜ್ಞಾನವೆಂಬ ಪ್ರಯೋಗವು ವ್ಯರ್ಥವೆನಿಸುತ್ತದೆ. ಹಾಗಾಗಿ ಭಕ್ತಿ ಶಬ್ದಕ್ಕೆ ಕೇವಲ ಸ್ನೇಹ ಎಂದಷ್ಟೇ ಅರ್ಥವನ್ನು ವಿವಕ್ಷಿಸಿ, ಜ್ಞಾನ ಶಬ್ದದಿಂದ ಜ್ಞಾನವೆಂಬರ್ಥವನ್ನು ವಿವಕ್ಷಿಸಬೇಕೆಂದು ಕರಿಕಲಭನ್ಯಾಯಕ್ಕೆ ಹೊಸದಾದ ದೃಷ್ಟಾಂತವನ್ನು ನೀಡಿದ್ದಾರೆ.

'ಹೇತೌ' ಎಂಬುದನ್ನು 'ವಿಭಾಷಾ ಗುಣೇಽಸ್ತ್ರಿಯಾಮ್' ಪಂಚಮೀವಿಧಾಯಕ ಸೂತ್ರದಲ್ಲಿಯೂ ಅನುವೃತ್ತಿ ಮಾಡಬೇಕು. ಆವಾಗ ಹೇತ್ವರ್ಥದಲ್ಲಿ ಪಂಚಮೀವಿಭಕ್ತಿಯನ್ನೂ ಕೂಡ ಹೇಳಬಹುದೆಂದಾಗುತ್ತದೆ.

**प्रकाशः** – तृतीये संस्कारपरामर्शात्तदभावाभिलापाच्चेत्यत्र । ''अष्टवर्षं ब्राह्मणमुपनयीत'' इत्यादिश्रुतावध्ययनार्थमुपनयनरूपसंस्कारपरामर्शात् ''नाग्निर्न यज्ञ'' इति श्रुतौ च शूद्रस्य तदभावाभिलापाच्चायं शूद्रशब्दो न रूढ इत्यर्थोक्तेरिति भावः ।

'ಓಂ ಸಂಸ್ಕಾರಪರಮರ್ಶಾತ್ತದಭಾವಾಭಿಲಾಪಾಚ್ಚ ಓಂ' ಎಂಬುದು ಮೂರನೆಯ ಸೂತ್ರ. 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ' ಎಂಬ ಶ್ರುತಿಯಲ್ಲಿ ಅಧ್ಯಯನಕ್ಕೋಸ್ಕರ ಉಪನಯನಸಂಸ್ಕಾರವನ್ನು 'ತಮ್' ಎಂಬುದರಿಂದ ಪರಾಮರ್ಶ ಮಾಡಲಾಗಿದೆ. ಆದ್ದರಿಂದ 'ನಾಗ್ನಿರ್ನ ಯಜ್ಞಃ' ಶ್ರುತಿಯಲ್ಲಿ ಶೂದ್ರನಿಗೆ ಉಪನಯನ ಸಂಸ್ಕಾರವಿಲ್ಲವೆಂದು ಹೇಳಿದ್ದರಿಂದ ವೇದಾಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದ ಶೂದ್ರಶಬ್ದಕ್ಕೆ ರೂಢಾರ್ಥವನ್ನು ಸ್ವೀಕರಿಸಬಾರದು ಎಂದು ಈ ಸೂತ್ರವು ಸಮರ್ಥನೆ ಮಾಡಿದೆ.

**प्रकाशः** – चतुर्थे तदभावनिर्धारणे च प्रवृत्तेरित्यत्र । गौतमस्य ''नाहमेतद्वेद यद्गोत्रोऽहमस्मि'' इति सत्यकामवचनेन ''नैतदब्राह्मणो विवक्तुमर्हति'' इति शूद्रत्वाभावनिर्धारण एव ''समिधं सोम्याहर उपत्वानेष्य'' इति तदुपनयने प्रवृत्तेः। सा च शूद्रोपनयननिषेधाभावे न युक्तेति श्रुत्यन्तरगतस्य शूद्रत्वाभावनिश्चयेन प्रवृत्तिरूपलिङ्गस्योक्तिरित्यर्थः ।

'ಓಂ ತದಭಾವನಿರ್ಧಾರಣೇ ಚ ಪ್ರವೃತ್ತೇಃ' ಎಂಬುದು ನಾಲ್ಕನೆಯ ಸೂತ್ರ. ಗೌತಮರ ಬಳಿ ಸತ್ಯಕಾಮನು 'ನಾಹಮೇತದ್ವೇದ ಯದ್ಗೋತ್ರೋಽಹಮಸ್ಮಿ' 'ನನ್ನ ಗೋತ್ರವನ್ನು ನಾನು ತಿಳಿದಿಲ್ಲ' ಎಂದು ಹೇಳುತ್ತಾನೆ. ಆವಾಗ ಗೌತಮರು 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' 'ಬ್ರಾಹ್ಮಣನಲ್ಲದಿದ್ದರೆ ಸತ್ಯವನ್ನು ಹೇಳುತ್ತಿರಲಿಲ್ಲ' ಎಂದು ಶೂದ್ರತ್ವಾಭಾವವನ್ನು ನಿಶ್ಚಯಿಸಿ, ಅನಂತರ 'ಸಮಿಧಂ ಸೋಮ್ಯಾಹರ ಉಪತ್ವಾನೇಷ್ಯೇ' ಎಂದು ಅವನಿಗೆ ಉಪನಯನ ಮಾಡಲು ಪ್ರವೃತ್ತರಾಗುತ್ತಾರೆ. ಹೀಗೆ ಶೂದ್ರನಲ್ಲವೆಂದು ನಿರ್ಧಾರ ಮಾಡಿ, ಉಪನಯನದಲ್ಲಿ ಪ್ರವೃತ್ತಿಮಾಡಿದ್ದರಿಂದ, ಶೂದ್ರನಿಗೆ ಉಪನಯನ ಸಂಸ್ಕಾರದಲ್ಲಿ ಅಧಿಕಾರವಿಲ್ಲ. ಆದ್ದರಿಂದಲೇ ವೇದಾಧಿಕಾರವಿಲ್ಲವೆಂದು ನಿಶ್ಚಯವಾಗುತ್ತದೆ. ಒಂದುವೇಳೆ ಶೂದ್ರನಿಗೆ ಉಪನಯನದ ನಿಷೇಧವಿಲ್ಲದಿದ್ದರೆ ಗೌತಮರು ಶೂದ್ರತ್ವಾಭಾವದ ನಿರ್ಧಾರದಲ್ಲಿ ಪ್ರವೃತ್ತಿ ಮಾಡುತ್ತಿರಲಿಲ್ಲ. ಆದ್ದರಿಂದ ಬೇರೆ ಶ್ರುತಿಯಲ್ಲಿರುವಂತೆ ಶೂದ್ರತ್ವಾಭಾವವನ್ನು ನಿಶ್ಚಯ ಮಾಡಿ, ಉಪನಯನದಲ್ಲಿ ಪ್ರವೃತಿಮಾಡಿರುವಿಕೆಯೆಂಬ ಲಿಂಗದಿಂದ ಶೂದ್ರರಿಗೆ ವೇದಾಧಿಕಾರವಿಲ್ಲವೆಂದು ನಿಶ್ಚಯವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः – पञ्चमे श्रवणाध्ययनार्थप्रतिषेधात्स्मृतेश्चेत्यत्र ।** ''श्रवणेत्रपुजतुभ्यां श्रोत्रपरिपूरणम्'' इत्यादिश्रुतौ शूद्रस्य वेदश्रवणाध्ययनार्थावधारणानां प्रतिषेधात् ''नाग्निर्न यज्ञः शूद्रस्य तथैवाध्ययनं कुत'' इति स्मृतेश्चेत्युक्तेरिति भावः ।।

'ಓಂ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ಓಂ' ಎಂಬುದು ಐದನೆಯ ಸೂತ್ರ. 'ಶ್ರವಣೇತ್ರಪುಜ್ಯತುಭ್ಯಾಂ ಶ್ರೋತ್ರಪರಿಪೂರಣಮ್' ಇತ್ಯಾದಿ ಶ್ರುತಿಯಲ್ಲಿ ಶೂದ್ರನಿಗೆ ವೇದಶ್ರವಣ, ವೇದಾಧ್ಯಯನ, ವೇದಾರ್ಥನಿರ್ಣಯ ಇವುಗಳನ್ನು ನಿಷೇಧ ಮಾಡಲಾಗಿದೆ. 'ನಾಗ್ನಿರ್ನ ಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ' ಎಂಬ ಸ್ಮೃತಿಯೂ ಸಹ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಹೇಳುತ್ತಿದೆ ಎಂದು ಸಮರ್ಥನೆ ಮಾಡುತ್ತಿದ್ದಾರೆ.

**प्रकाशः – परपक्षसाधकेति ।। शूद्रशब्दरूढेः परपक्षसाधकत्वाद्रथवत्त्वरूपलिङ्गस्य स्वपक्षसाधकत्वादित्यर्थः ।**

'ಶೂದ್ರ' ಶಬ್ದವು ರೂಢವಾಗಿದೆಯೆಂಬುದು 'ಪರಪಕ್ಷಸಾಧಕ ಪ್ರಮಾಣ'. 'ರಥವತ್ವ' ಎಂಬುದು 'ಸ್ವಪಕ್ಷಸಾಧಕಪ್ರಮಾಣ' ಎಂದು ತಿಳಿಯಬೇಕು.




ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಸಾಮಾನ್ಯವಾಗಿ ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿ ಸ್ವಪಕ್ಷಸಾಧಕಪ್ರಮಾಣಗಳನ್ನು ಹೇಳಿ, ಅನಂತರ ಪರಪಕ್ಷ ನಿರಾಕರಣೆಯನ್ನು ಮಾಡುತ್ತಾರೆ. ಆದರೆ ಈ ಅಧಿಕರಣದಲ್ಲಿ ಪರಪಕ್ಷನಿರಾಸವನ್ನು ಪ್ರಥಮಸೂತ್ರದಲ್ಲಿ ಮಾಡಿ, ಮುಂದಿನ ಸೂತ್ರಗಳಲ್ಲಿ ಸ್ವಪಕ್ಷ ಸಾಧಕಪ್ರಮಾಣಗಳನ್ನು ಹೇಳಿರುತ್ತಾರೆ. ಏಕೆಂದರೆ 'ಶೂದ್ರ' ಶಬ್ದವು ರೂಢವಾಗಿ ಬಿಟ್ಟರೆ ಸಿದ್ಧಾಂತ ಹೇತುಗಳೆಲ್ಲವೂ ಅಸಿದ್ಧವಾಗುತ್ತವೆ. ಹಾಗಾಗಿ ಪೂರ್ವಪಕ್ಷಕಾರನು ಹೇಳುವಂತೆ ಶೂದ್ರಶಬ್ದವು ರೂಢವಲ್ಲ. ಯೌಗಿಕವೇ ಆಗಿವೆಯೆಂದು ಮೊದಲು ಪರಪಕ್ಷವನ್ನು ನಿರಾಕರಣೆ ಮಾಡುವುದು ಅತ್ಯಂತ ಅನಿವಾರ್ಯವಾಗಿದೆ. ಮತ್ತು ಪರಪಕ್ಷ ನಿರಾಕರಣೆಯಲ್ಲಿ ಹೆಚ್ಚು ಪ್ರಯತ್ನ ಬೇಕು ಆದ್ದರಿಂದ ಮೊದಲು ಪರಪಕ್ಷವನ್ನು ನಿರಾಕರಣೆ ಮಾಡಿ ಅನಂತರ ಸುಲಭವಾದ ಸ್ವಪಕ್ಷಸಾಧಕಪ್ರಮಾಣಗಳ ಮುಂದಿನ ಸೂತ್ರಗಳಲ್ಲಿ ಸಮರ್ಥನೆ ಮಾಡಿದ್ದಾರೆ.

'ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ' ಎಂಬ ಮೊದಲನೆ ಸೂತ್ರದಲ್ಲಿ ಶೂದ್ರಶಬ್ದವನ್ನು ಯೌಗಿಕಾರ್ಥವೆಂದೇ ವಿವಕ್ಷಿಸಲು ಕಾರಣವನ್ನು ನಿರೂಪಣೆ ಮಾಡಿದ್ದಾರೆ. ಉಪನಿಷತ್ತಿನಲ್ಲಿರುವ ಶೂದ್ರಶಬ್ದವು ರೂಢಿಯಿಂದ ಶೂದ್ರಜಾತಿಯಲ್ಲಿ ಹುಟ್ಟಿದವನನ್ನು ಏಕೆ ಹೇಳಬಾರದು? ಎಂಬ ಆಶಂಕೆಗೆ 'ಓಂ ಕ್ಷತ್ರಿಯತ್ವಾಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ' ಎಂಬ ಎರಡನೆಯ ಸೂತ್ರವು ಉತ್ತರಿಸುತ್ತಿದೆ. ಸ್ವಾಭಾವಿಕವಾದ ರಥದ ಸಂಬಂಧವು ಕ್ಷತ್ರಿಯರಲ್ಲಿ ಮಾತ್ರ ಯುಕ್ತವಾಗುತ್ತದೆ.

ಶ್ರುತಿಯು ಸ್ವಾಭಾವಿಕರಥಸಂಬಂಧವನ್ನು ಪೌತ್ರಾಯಣನಿಗೆ ಹೇಳಿರುವ ಕಾರಣ ಶೂದ್ರ ಶಬ್ದವು ರೂಢಿಯಿಂದ ಪೌತ್ರಾಯಣನಿಗೆ ಶೂದ್ರತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ಈ ಸೂತ್ರವು ಸಮರ್ಥನೆ ಮಾಡಿದೆ. ಮತ್ತೊಂದು ಕಾರಣದಿಂದಲೂ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಮರ್ಥಿಸಲು 'ಓಂ ಸಂಸ್ಕಾರ-ಪರಾಮರ್ಶಾತ್ತದಭಾವಾಭಿಲಾಪಾಚ್ಚ ಓಂ' ಎಂಬ ಮೂರನೆಯ ಸೂತ್ರವು ಹೊರಟಿದೆ. 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ' ಎಂಬಲ್ಲಿ 'ತಮ್' ಎಂಬ ಪದದಿಂದ ಅಧ್ಯಯನಕ್ಕೆ ಅಂಗವಾದ ಉಪನಯನಸಂಸ್ಕಾರವನ್ನು ಪರಾಮರ್ಶ ಮಾಡಬೇಕು. ಶೂದ್ರನಿಗೆ 'ನಾಗ್ನಿರ್ನ ಯಜ್ಞಃ ನ ಸಂಸ್ಕಾರಃ' ಎಂಬ ಪೈಂಗಿಶ್ರುತಿಯಿಂದ ಸಂಸ್ಕಾರದ ನಿಷೇಧವೂ ಶ್ರುತವಾಗಿದೆ. ಆದ್ದರಿಂದ ವೇದಾಧಿಕಾರವಿಲ್ಲವೆಂದು ಇದರ ಅಭಿಪ್ರಾಯ. ಇದೇ ವಿಷಯದಲ್ಲಿ ಮತ್ತೊಂದು ಕಾರಣವನ್ನು ಹೇಳಲು 'ಓಂ ತದಭಾವನಿರ್ಧಾರಣೇ ಚ ಪ್ರವೃತ್ತೇಃ' ಎಂಬುದು ನಾಲ್ಕನೆಯ ಸೂತ್ರವು ಹೊರಟಿದೆ. ಗೌತಮರ ಬಳಿ ಸತ್ಯಕಾಮನು ವೇದಾಧ್ಯಯನಕ್ಕಾಗಿ ಬಂದಾಗ 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಬ್ರಾಹ್ಮಣನಲ್ಲದವನು ಇಂತಹ ಸತ್ಯ ವಚನವನ್ನು ಸರ್ವಥಾ ಹೇಳಲಾರ ಎಂದು ಸತ್ಯಕಾಮನು ಶೂದ್ರನಲ್ಲವೆಂದು ನಿರ್ಧಾರ ಮಾಡಿ, ಅನಂತರವೇ ಅವನ ಉಪನಯನದಲ್ಲಿ ಪ್ರವೃತ್ತಿ ಮಾಡಿದ್ದಾರೆ. ಇದರಿಂದಲೂ ಶೂದ್ರನಿಗೆ ಉಪನಯನಸಂಸ್ಕಾರವಿಲ್ಲವೆಂದು ಸ್ಪಷ್ಟವಾಗುತ್ತದೆ. ಶೂದ್ರಾದಿಗಳಿಗೆ ಸಂಸ್ಕಾರವಿಲ್ಲದಿದ್ದರೂ ವಿಶಿಷ್ಟಬುದ್ಧ್ಯಾದಿಗಳಿರುವ ಕಾರಣ ವೇದಾಧಿ-ಕಾರವನ್ನು ಹೇಳಬಹುದಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಮುಂದಿನ 'ಓಂ ಶ್ರವಣಾಧ್ಯಯನಾರ್ಥ-ಪ್ರತಿಷೇಧಾತ್ ಸ್ಮೃತೇಶ್ಚ ಓಂ' ಎಂಬ ಕೊನೆಯ ಸೂತ್ರವು ಹೊರಟಿದೆ. 'ಶ್ರವಣೇತ್ರಪುಜ್ಯತುಭ್ಯಾಂ' ಇತ್ಯಾದಿ ವಾಕ್ಯದಿಂದ ಶೂದ್ರನಾದವನು ವೇದಶ್ರವಣ, ವೇದಾಧ್ಯಯನ, ವೇದಾರ್ಥನಿರ್ಣಯ ಇವುಗಳನ್ನು ಮಾಡಲು ಅರ್ಹನಲ್ಲ. ಮತ್ತು 'ನಾಗ್ನಿರ್ನಃ ಯಜ್ಞಃ ಶೂದ್ರಸ್ಯ' ಎಂಬ ಸ್ಮೃತಿಯ ಆಧಾರದಿಂದಲೂ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಶೂದ್ರನಿಗೆ ಉಪನಯನಾದಿ-ಸಂಸ್ಕಾರಗಳಿಲ್ಲದಿದ್ದರೂ ವೇದಾಧ್ಯಯನಾದಿಗಳನ್ನು ಹೇಳಬಹುದಲ್ಲವೇ? ಎಂಬ ಆಶಂಕೆಯು ನಿರಾಕೃತವಾಯಿತು. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆ.



## ಅದ್ವೈತಭಾಷ್ಯದ ಅಧಿಕರಣಶರೀರ

### तात्पर्यचन्द्रिका

**अन्ये तु ।। अध्ययनस्य पिण्डपितृयज्ञवत्स्वर्गार्थत्वेन पुरुषार्थतया स्वाध्याय-संस्कारत्वाभावादधीतेनैव स्वाध्यायेन जन्यब्रह्मज्ञानान्मोक्ष इति नियमाभावात् शूद्रस्याप्युपनयनाभावेऽपि पुस्तकपठितस्वाध्यायजन्यादपि ब्रह्मज्ञानान्मोक्ष इति शूद्र इत्यस्यापि ब्रह्मविद्याधिकार इति प्राप्ते**

ಅನುವಾದ - ಅದ್ವೈತ ಭಾಷ್ಯದಲ್ಲಿ ಅಪಶೂದ್ರಾಧಿಕರಣದ ರಚನೆ ಹೀಗಿದೆ -

ಪೂರ್ವಪಕ್ಷ - ಪಿಂಡಪಿತೃಯಜ್ಞವು ಹೇಗೆ ಸ್ವರ್ಗಪ್ರಯೋಜನವುಳ್ಳದಾದ್ದರಿಂದ ಪುರುಷಾರ್ಥರೂಪವಾಗಿದೆಯೋ, ಅದರಂತೆ ಅಧ್ಯಯನವೂ ಸಹ ಸ್ವರ್ಗಪ್ರಯೋಜನವುಳ್ಳದ್ದಾದ್ದರಿಂದ

ಪುರುಷಾರ್ಥರೂಪವೇ ಆಗಿವೆ. ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರರೂಪವಲ್ಲದ ಕಾರಣ ಅಧೀತವಾದ ಸ್ವಾಧ್ಯಾಯದಿಂದ ಯಾವ ಬ್ರಹ್ಮಜ್ಞಾನವು ಹುಟ್ಟುತ್ತದೋ, ಅದರಿಂದಲೇ ಮೋಕ್ಷವಾಗುತ್ತದೆಂಬ ನಿಯಮವಿರುವುದಿಲ್ಲ. ಹಾಗಾಗಿ ಶೂದ್ರನಿಗೆ ಉಪನಯನವೆಂಬ ಸಂಸ್ಕಾರವಿಲ್ಲದಿದ್ದರೂ ಪುಸ್ತಕಪಾಠಾದಿಗಳಿಂದ ಸ್ವಾಧ್ಯಾಯವನ್ನು ಮಾಡಿ, ಅದರಿಂದ ಹುಟ್ಟುವ ಬ್ರಹ್ಮಜ್ಞಾನದಿಂದ ಮೋಕ್ಷವು ದೊರೆಯುತ್ತದೆ. ಆದ್ದರಿಂದ ಶೂದ್ರನಿಗೂ ಸಹ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆ.

**दृष्टे सम्भवत्यदृष्टस्याकल्प्यत्वेनाध्ययनस्य स्वाध्यायसंस्कारत्वेनोक्तनियम-सम्भवात्पुस्तकपठितस्वाध्यायजन्यज्ञानान्न मोक्ष इति न शूद्रस्य वेद विद्याधिकार इति सिद्धान्तः ।**

ಸಿದ್ಧಾಂತ - ದೃಷ್ಟಫಲವನ್ನೇ ಹೇಳಲು ಬರುವಾಗ ಅದೃಷ್ಟಫಲವನ್ನು ಹೇಳುವುದು ಸರಿಯಲ್ಲ. ಆದ್ದರಿಂದ ಅಧ್ಯಯನಕ್ಕೆ ಸ್ವಾಧ್ಯಾಯದ ಸಂಸ್ಕಾರರೂಪತ್ವವನ್ನೇ ಹೇಳಲು ಬರುವಾಗ ಪುಸ್ತಕಪಾಠದಿಂ ಅಧ್ಯಯನವನ್ನು ಮಾಡಿ ಅದರಿಂದ ಹುಟ್ಟುವ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಬಾರದು. ಆದ್ದರಿಂದ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರ- ವಿರುವುದಿಲ್ಲ.

**नचैवं पूर्वतन्त्रस्थापशूद्राधिकरणेन गतार्थता । तत्राप्यनधीयानस्य शूद्रस्याधीतस्वाध्यायजन्यविद्यासाध्यकर्मानधिकारार्थं विद्याभावोक्तेरिति वाच्यम् ।**

ಹಾಗಾದರೆ ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಪುನರುಕ್ತಿದೋಷ ಬರುತ್ತದಲ್ಲವೇ? ಏಕೆಂದರೆ ಅಲ್ಲಿಯೂ ಸಹ ಅಧೀತವಾದ ಸ್ವಾಧ್ಯಾಯದಿಂದ ಯಾವ ವಿದ್ಯೆಯು ಬರುತ್ತದೋ, ಅದರಿಂದ ಸಾಧ್ಯವಾದ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸಲಾಗಿದೆ. ಇದರಿಂದ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಿದಂತಾಗುತ್ತದಲ್ಲವೇ?

**तत्रानग्नेः शूद्रस्याग्निसाध्यकर्मानधिकार इत्येवोक्त्या विद्याभावानुक्तेरित्याहुः ।**

ಪುನರುಕ್ತಿಗೆ ಅವಕಾಶವಿಲ್ಲ. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಅಗ್ನಿಯಿಲ್ಲದ ಶೂದ್ರನಿ ಅಗ್ನಿಸಾಧ್ಯವಾದ ಯಜ್ಞಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದಷ್ಟೇ ಸಮರ್ಥಿಸಿದ್ದಾರೆ ಹೊರತು, ಬ್ರಹ್ಮವಿದ್ಯೆಯಿಲ್ಲವೆಂದು ಸಮರ್ಥಿಸಿಲ್ಲ. ಅದನ್ನು ಇಲ್ಲಿ ಸಮರ್ಥನೆ ಮಾಡುತ್ತಿರುವುದರಿಂದ ಪೂರ್ವಮೀಮಾಂಸೆಯಿಂದ ಗತಾರ್ಥತ್ವ ದೋಷವನ್ನು ಹೇಳಲು ಸಾಧ್ಯವಿಲ್ಲ. ಇಷ್ಟು ಅದ್ವೈತಿಗಳ ಅಧಿಕರಣ ಶರೀರ.

ಅಪಶೂದ್ರಾಧಿಕರಣ (೧-೩-೯)

**प्रकाशः –**

**अन्ये त्विति ।।** "स्वाध्यायोऽध्येतव्य" इत्युक्ताध्ययनस्य प्रधानकर्मत्व-संस्कारकर्मत्वाभ्यां ब्रह्मविद्या शूद्राधिकारा न वेति सन्देहे भामत्युक्तौ पूर्वोत्तरपक्षावनुवदति – **अध्ययनस्येति ।।**

ವಿವರಣೆ - ಶಾಂಕರಭಾಷ್ಯದ ಅಪಶೂದ್ರಾಧಿಕರಣ ಹೀಗಿದೆ - 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಶ್ರುತಿಯಲ್ಲಿ ಸ್ವಶಾಖಾಧ್ಯಯನವನ್ನು ವಿಧಿಸಲಾಗಿದೆ. ಈ ಅಧ್ಯಯನವು ಪ್ರಧಾನಕರ್ಮವೆಂದಾಗಲೀ ಅಥವಾ ಸಂಸ್ಕಾರಕರ್ಮವೆಂಧಾಗಲೀ ಹೇಳಬೇಕು. ಆದ್ದರಿಂದ ಬ್ರಹ್ಮವಿದ್ಯೆಗೆ ಶೂದ್ರರು ಅಧಿಕಾರಿಗಳಾಗುತ್ತಾರೋ, ಇಲ್ಲವೋ ? ಎಂದು ಸಂದೇಹ.

ಭಾಮತಿಯಲ್ಲಿ ಹೇಳಿದ ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳನ್ನು 'ಅಧ್ಯಯನಸ್ಯ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ.

**प्रकाशः –** अनिर्दिष्टफलकानां स्वर्गफलकत्वस्य "स स्वर्गःस्यात्" इति विश्वजिदधिकरणे दर्शितत्वात् "अमावास्यायामपराह्णे पिण्डपितृयज्ञेन चरन्ति" इत्यादेरनिर्दिष्टफलस्य स्वर्गफलकत्ववत् "स्वाध्यायोऽध्येतव्य" इत्युक्ताध्ययनस्याप्य-निर्दिष्टफलकत्वात् अनारभ्याधीततया फलवत्कर्मारभ्यानाम्नानाज्जुह्वादिवत्क्रत्व-व्यभिचरितत्वाभावात्क्रत्वर्थत्वासम्भवेन स्वर्गार्थतया पुरुषार्थत्वस्यैव वाच्यत्वात् ।

ಯಾವ ಕರ್ಮವಿಧಾಯಕವಾಕ್ಯದಲ್ಲಿ ಫಲವನ್ನೇ ಹೇಳಿರುವುದಿಲ್ಲವೋ, ಅಲ್ಲಿ ಸ್ವರ್ಗವನ್ನೇ ಫಲವನ್ನಾಗಿ ತಿಳಿಯಬೇಕೆನ್ನುವುದು ಪೂರ್ವಮೀಮಾಂಸಕರ ನಿರ್ಣಯ. ಹೀಗೆ 'ಸ ಸ್ವರ್ಗಃಸ್ಯಾತ್' ಎಂಬ ವಿಶ್ವಜಿದಧಿ-ಕರಣದಲ್ಲಿ ನಿರ್ಣಯಿಸಿದ್ದಾರೆ. 'ಅಮಾವಾಸ್ಯಾಯಾಮಪರಾಹ್ಣೇ ಪಿಂಡಪಿತೃಯಜ್ಞೇನ ಚರಂತಿ' ಅಮಾವಾಸ್ಯೆಯ ಅಪರಾಹ್ಣಕಾಲದಲ್ಲಿ ಪಿಂಡಪಿತೃಯಜ್ಞವನ್ನು ಆಚರಿಸಬೇಕು ಎಂಬ ವಾಕ್ಯದಲ್ಲಿ ಯಾವುದೇ ಫಲವನ್ನು ಹೇಳಿಲ್ಲ. ಆದ್ದರಿಂದ ಪಿಂಡಪಿತೃಯಜ್ಞಕ್ಕೆ ಸ್ವರ್ಗವೇ ಫಲವೆಂದು ನಿರ್ಣಯಿಸಲಾಗಿದೆ. ಅದರಂತೆ ಪ್ರಕೃತ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿವಾಕ್ಯದಲ್ಲಿಯೂ ಅಧ್ಯಯನಕ್ಕೆ ಯಾವ ಫಲವನ್ನೂ ಕೂಡ ನಿರ್ದೇಶ ಮಾಡಿಲ್ಲ.

ಒಂದು ಕರ್ಮವನ್ನು ಪ್ರಾರಂಭದಲ್ಲಿ ಹೇಳಿ, ಅನಂತರ ಅತೀತವಾದದ್ದೆಲ್ಲಾ ಕ್ರತುವಿಗೋಸ್ಕರ ಎಂದು ಹೇಳುವುದೇ ಆರಭ್ಯಾಧೀತತ್ವ ಎನಿಸುತ್ತದೆ. ಇಂತಹ ಕ್ರತ್ವರ್ಥತ್ವವನ್ನು ಅಧ್ಯಯನಕ್ಕೆ ಹೇಳಲಾಗದು. ಏಕೆಂದರೆ ಯಾವುದೋ ಒಂದು ಕ್ರತುವನ್ನು ಹೇಳಿ, ಅಲ್ಲಿ ಅಧ್ಯಯನವನ್ನು ಅದರ ಅಂಗವಾಗಿ ಹೇಳಿರುವುದಿಲ್ಲ. ಮತ್ತು ಕ್ರತುವಿನ ಜೊತೆ ಜುಹೂ ಎಂಬುದು ಅವ್ಯಭಿಚರಿತವಾಗಿದೆ. ಅಂದರೆ 'ಜುಹೂ' ಎಂಬುದು ಕ್ರತುವನ್ನು

ಬಿಟ್ಟು ಬೇರೆಲ್ಲೂ ಇರುವುದಿಲ್ಲ. ಅದರಂತೆ ಯಾವಾಗ ಅಧ್ಯಯನವಿರುತ್ತದೋ, ಆವಾಗೆಲ್ಲಾ ಕ್ರತು ಇದ್ದೇ ಇರುತ್ತದೆಂಬ ನಿಯಮವನ್ನು ಹೇಳಲಾಗದು. ಈ ಕಾರಣದಿಂದಲೂ ಅಧ್ಯಯನಕ್ಕೆ ಕ್ರತ್ವರ್ಥತ್ವವನ್ನು ಹೇಳುವುದು ಅಸಂಭಾವಿತ. ಹಾಗಾಗಿ ಅಧ್ಯಯನವು ಸ್ವರ್ಗಕ್ಕೋಸ್ಕರವಾದ್ದರಿಂದ ಪುರುಷಾರ್ಥಕ್ಕಾಗಿ ಎಂದೇ ಹೇಳಬೇಕು.

**प्रकाशः –** तथा चाध्ययनस्य 'स्वाध्यायेनाधीयीतस्वर्गकाम' इति वचनव्यक्त्या दर्शादिवत्प्रधानकर्मतया स्वाध्यायसंस्कारकत्वरूपगुणकर्मत्वं प्रोक्षणादिव नास्तीत्यर्थः ।।

ಆದ್ದರಿಂದ ಅಧ್ಯಯನವು 'ಸ್ವಾಧ್ಯಾಯೇನಾಧೀಯೀತಸ್ವರ್ಗಕಾಮಃ' ಎಂಬ ವಚನವ್ಯಕ್ತಿಯಿಂದ ದರ್ಶಾದಿಗಳಂತೆ ಪ್ರಧಾನಕರ್ಮವೆನಿಸುತ್ತದೆ ಹೊರತು ಪ್ರೋಕ್ಷಣಾದಿಗಳಂತೆ ಸ್ವಾಧ್ಯಾಯದ ಸಂಸ್ಕಾರರೂಪವಾದ ಗುಣಕರ್ಮತ್ವವನ್ನು ಹೊಂದುವುದಿಲ್ಲ.

**प्रकाशः – दृष्टेति** ।। स्वाध्यायसंस्कारद्वारा निश्श्रेयसहेतुकर्मब्रह्मरूपार्थावबोधोऽध्ययनस्य दृष्टं फलमित्यर्थः ।।

ಇಲ್ಲಿ ಸ್ವಾಧ್ಯಾಯವೆಂಬ ಸಂಸ್ಕಾರದ ಮೂಲಕ ನಿಃಶ್ರೇಯಕ್ಕೆ ಹೇತುವಾದ ಕರ್ಮ ಹಾಗೂ ಬ್ರಹ್ಮಗಳೆಂಬ ಅರ್ಥವನ್ನು ತಿಳಿಸುವಿಕೆಯೇ ಅಧ್ಯಯನದ ಫಲವೆಂದು ಕಂಡಿದೆ.

**प्रकाशः – उक्तनियमेति** ।। अधीतेनैव स्वाध्यायेन जन्यब्रह्मज्ञानान्मोक्ष इति नियमसद्भावादित्यर्थः **– न शूद्रस्येति** ।। उपनयनसाध्याध्ययनाभावादिति भावः ।

ಅತೀತವಾದ ಸ್ವಾಧ್ಯಾಯದಿಂದಲೇ ಯಾವ ಬ್ರಹ್ಮಜ್ಞಾನವು ಹುಟ್ಟುತ್ತದೋ ಆದರಿಂದ ಮೋಕ್ಷವಾಗುತ್ತದೆಂಬ ನಿಯಮವಿದೆ ಎಂದರ್ಥ. 'ನ ಶೂದ್ರಸ್ಯ' ಎಂದರೆ ಉಪನಯನಸಾಧ್ಯವಾದ ಅಧ್ಯಯನವು ಶೂದ್ರನಿಗಿರುವುದಿಲ್ಲವೆಂದು ಅಭಿಪ್ರಾಯ.

**प्रकाशः –** अध्ययनाभावादागन्तुक सामर्थ्याभावे सत्यनधिकार इति चेद्धन्ताधानाभावे सत्यग्न्यभावादग्निसाध्ये कर्मणि मा भूदधिकारः । नच ब्रह्मविद्यायामग्निः साधनमिति किमित्यनाहिताग्नयो नाधिक्रियन्ते इति भामत्युक्तगतार्थताशङ्कासमाधाने तदभिप्रायव्यञ्जनेनानुवदति **– न चैवमिति** ।।

ಶೂದ್ರರಿಗೆ ಅಧ್ಯಯನವಿಲ್ಲದಕಾರಣ ಆಗಂತುಕವಾದ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಗೆ ಹೊಂದುತ್ತಾರೆ ಎಂದರೆ ಅಗ್ನ್ಯಾಧಾನವಿಲ್ಲದ ಕಾರಣ ಅಗ್ನಿಯಿರುವುದಿಲ್ಲ. ಆದ್ದರಿಂದಲೇ ಅಗ್ನಿಸಾಧ್ಯವಾದ ಕರ್ಮದಲ್ಲಿಯೂ ಕೂಡ ಶೂದ್ರರಿಗೆ ಅಧಿಕಾರವಿರುವುದಿಲ್ಲ ಎಂಬುದನ್ನು ಒಪ್ಪೋಣ. ಆದರೆ ಬ್ರಹ್ಮವಿದ್ಯೆಯು ಅಗ್ನಿಸಾಧ್ಯವಲ್ಲ. ಆದ್ದರಿಂದ

ಅನಾಹಿತಾಗ್ನಿಕನಾದ ಶೂದ್ರನೂ ಕೂಡ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಪಡೆಯಬಹುದಲ್ಲವೇ? ಎಂಬ ಭಾಮತಿಯಲ್ಲಿ ಹೇಳಿದ ಗತಾರ್ಥತ್ವಾಶಂಕೆ ಮತ್ತು ಸಮಾಧಾನಗಳನ್ನು ಅವರ ಅಭಿಪ್ರಾಯಕ್ಕನುಸಾರವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ನ ಚೈವಮ್' ಇತ್ಯಾದಿ ಗ್ರಂಥದಿಂದ.




ಅದ್ವೈತಭಾಷ್ಯದಲ್ಲಿ ಅಪಶೂದ್ರಾಧಿಕರಣದ ರಚನೆ ಹೀಗಿದೆ - ಶೂದ್ರರಿಗೂ ಕೂಡ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆಂದು ಪೂರ್ವಪಕ್ಷ. ಏಕೆಂದರೆ ಅಧ್ಯಯನವು ಸಂಸ್ಕಾರರೂಪವಾಗಿದ್ದಲ್ಲಿ, ಅಶೀತವಾದ ಸ್ವಾಧ್ಯಾಯದಿಂದ ಯಾವ ಬ್ರಹ್ಮಜ್ಞಾನ ಹುಟ್ಟುತ್ತದೋ ಅದು ಮೋಕ್ಷಜನಕವೆಂದು ಹೇಳಬಹುದಿತ್ತು. ಆದರೆ ಅಧ್ಯಯನವು ಸಂಸ್ಕಾರರೂಪವಾಗದೇ ಪಿಂಡಪಿತೃಯಜ್ಞದಂತೆ ಸ್ವರ್ಗಫಲಕವಾಗಿದೆ. ಆದ್ದರಿಂದ ಶೂದ್ರರಿಗೆ ಉಪನಯನವಿಲ್ಲದಿದ್ದರೂ ಪುಸ್ತಕಾದಿಗಳನ್ನು ಓದಿಕೊಂಡು ಅಧ್ಯಯನದಿಂದ ಬ್ರಹ್ಮಜ್ಞಾನವನ್ನು ಪಡೆಯಬಹುದು. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಶೂದ್ರರಿಗೂ ಸಹ ಅಧಿಕಾರವಿರುತ್ತದೆ.

ಸಿದ್ಧಾಂತ - ದೃಷ್ಟಫಲವನ್ನು ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪನೆ ಮಾಡಬಾರದು. ಅಧ್ಯಯನಕ್ಕೆ ಸ್ವಾಧ್ಯಾಯದ ಸಂಸ್ಕಾರಪರತ್ವವನ್ನೇ ಹೇಳಲು ಬರುವಾಗ ಪುಸ್ತಕಾದಿಗಳನ್ನು ಓದಿ ಅದರಿಂದ ಬರುವ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳುವುದು ತಪ್ಪಾಗುತ್ತದೆ. ಅಧ್ಯಯನವು ಸಂಸ್ಕಾರರೂಪವಾದ್ದರಿಂದ ಶೂದ್ರರಿಗೂ ಸಹ ಉಪನಯನಸಂಸ್ಕಾರ ಬೇಕಾಗುತ್ತದೆ. ಆದ್ದರಿಂದ ವೇದವಿದ್ಯೆಯಲ್ಲಿ ಶೂದ್ರರಿಗೆ ಅಧಿಕಾರವಿರುವುದಿಲ್ಲ. ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಲ್ಲಿ ಅಗ್ನಿಯಿಲ್ಲದ ಶೂದ್ರನಿಗೆ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸಿದ್ದಾರೆ. ಆದರೆ ಬ್ರಹ್ಮಮೀಮಾಂಸೆಯ ಈ ಅಪಶೂದ್ರಾಧಿಕರಣದಲ್ಲಿ ಶೂದ್ರನಿಗೆ ವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸಿದ್ದಾರೆ. ಹಾಗಾಗಿ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ.



## तात्पर्यचन्द्रिका

**तन्न । तत्रापि "अवैद्यत्वादभावः कर्मणि स्यात्" इति सूत्रेऽवैद्यत्वग्रहणेन शूद्रस्य विद्याभावोक्तेः ।**

ಅನುವಾದ - ಅದ್ವೈತಿಗಳ ಅಧಿಕರಣಶರೀರ ಸರಿಯಿಲ್ಲ. ಮೊದಲು ಅವರು ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಹೇಳಿದ ಗತಾರ್ಥತ್ವದ ಪರಿಹಾರವು ಅಸಾಧುವಾಗಿದೆ. ಏಕೆಂದರೆ ಪೂರ್ವಮೀಮಾಂಸೆಯಲ್ಲಿಯೂ 'ಅವೈದ್ಯತ್ವದಾಭಾವಃ ಕರ್ಮಣಿ ಸ್ಯಾತ್' ಎಂಬ ಸೂತ್ರದಲ್ಲಿ 'ಅವೈದ್ಯತ್ವ' ಎಂಬ ಶಬ್ದದಿಂದ ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ಸಮರ್ಥನೆ ಮಾಡಲಾಗಿದೆ. ಅದೇ ವಿಚಾರವೂ ಇಲ್ಲಿಯೂ ಸಹ ಪ್ರಸಕ್ತವಾಗುತ್ತಿರುವುದರಿಂದ ಪುನರುಕ್ತಿ ದೋಷವು ಬಂದೇ ಬರುತ್ತದೆ.

**ननु तत्रावैद्यत्वमभ्युच्चयमात्रम् । अध्ययनस्य संस्कारत्वानुक्तेः । इह तु "संस्कारपरामर्शात्" इत्यनेन तदुक्तिरिति चेन्न ।**

ಪ್ರಶ್ನೆ - ಪೂರ್ವಮೀಮಾಂಸೆಯಲ್ಲಿ ಅವೈದ್ಯತ್ವವನ್ನು ಕೇವಲ ಅಭ್ಯುಚ್ಚಯಯುಕ್ತಿಯನ್ನಾಗಿ ಹೇಳಲಾಗಿದೆ. ಏಕೆಂದರೆ ಶೂದ್ರನಿಗೆ ಅಧ್ಯಯನವು ಸಂಸ್ಕಾರರೂಪವೆಂದು ಅಲ್ಲಿ ಹೇಳಿಲ್ಲ. ಹೊರತಾಗಿ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲದ ಕಾರಣ, ಕರ್ಮದಲ್ಲಿಯೂ ಕೂಡ ಅಧಿಕಾರ-ವಿಲ್ಲವೆಂದಷ್ಟೇ ಸಮರ್ಥನೆ ಮಾಡಿದ್ದಾರೆ. ಆದರೆ ಪ್ರಕೃತ 'ಸಂಸ್ಕಾರಪರಾಮರ್ಶಾತ್' ಎಂಬ ಸೂತ್ರದಲ್ಲಿ ಅಧ್ಯಯನವು ಸಂಸ್ಕಾರರೂಪವೆಂದು ಸಮರ್ಥನೆ ಮಾಡಿದ್ದಾರೆ. ಅಂದರೆ ಅಧ್ಯಯನವು ಪ್ರಧಾನಕರ್ಮವಾದರೆ, ಸಂಸ್ಕಾರಕರ್ಮವಾಗದಿದ್ದರೆ ಜ್ಞಾನವನ್ನು ಹೇಗಾದರೂ ಸಂಪಾದನೆ ಮಾಡಬಹುದು. ಒಂದು ವೇಳೆ ಸಂಸ್ಕಾರರೂಪವಾದರೆ ಅಧ್ಯಯನವಿಲ್ಲದೇ ವೇದದಿಂದ ಪಡೆಯುವ ಜ್ಞಾನವು ಅಸಂಸ್ಕೃತವಾಗುತ್ತದೆ. ಇದನ್ನು ಪೂರ್ವಮೀಮಾಂಸೆಯಲ್ಲಿ ಹೇಳಿರುವುದಿಲ್ಲ. ಇಲ್ಲಿ ಹೇಳಿದ್ದಾರೆ.

**त्वयापीह सूत्रे संस्कारशब्द उपनयनरूपसंस्कारार्थ इत्युक्तत्वेनाध्ययनस्य स्वाध्यायसंस्कारत्वानुक्तेः ।**

ಉತ್ತರ - ಪೂರ್ವಮೀಮಾಂಸೆಯಲ್ಲಿ ಅಧ್ಯಯನವು ಸಂಸ್ಕಾರರೂಪವೆಂದು ಹೇಗೆ ಹೇಳಿಲ್ಲವೋ ಅದರಂತೆ ಉತ್ತರಮೀಮಾಂಸೆಯಲ್ಲಿಯೂ ಕೂಡ ಹೇಳಿರುವುದಿಲ್ಲ. ಏಕೆಂದರೆ ನೀನೂ ಸಹ 'ಸಂಸ್ಕಾರ ಪರಾಮರ್ಶಾತ್' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಸಂಸ್ಕಾರಶಬ್ದಃ

ಉಪನಯನರೂಪಸಂಸ್ಕಾರಾರ್ಥಃ' 'ಸಂಸ್ಕಾರ' ಶಬ್ದಕ್ಕೆ 'ಉಪನಯನವೆಂಬ ಸಂಸ್ಕಾರ' ಎಂದರ್ಥ ಎಂದು ವ್ಯಾಖ್ಯಾನ ಮಾಡಿರುವಿ. ಹಾಗಾಗಿ ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರರೂಪವೆಂದು ಪೂರ್ವಮೀಮಾಂಸೆಯಲ್ಲಿ ಹೇಗೆ ಹೇಳಿಲ್ಲವೋ, ಅದರಂತೆ ಇಲ್ಲಿಯೂ ಕೂಡ ಹೇಳಿರುವುದಿಲ್ಲ.

**किं चास्मद्रीत्या "स्वाध्यायोऽध्येतव्य" इति तव्योक्त दृष्टार्थगुण-कर्मत्वस्य स्वीकारेण पूर्वपक्षसम्भवे तदस्वीकारेण स न युक्तः ।**[1]

(१) शाङ्करभाष्यम् –

**शुगस्य तदनादरश्रवणात्तदाद्रवणात् सूच्यते हि ॥ ३४ ॥**

**शूद्रोऽधिक्रियते वेदविद्यायामथवा नहि ।**

**अत्रैवर्णिकदेवाद्या इव शूद्रोऽधिकारवान् ॥**

**देवाः स्वयम्भातवेदाः शूद्रोऽध्ययनवर्जनात् ।**

**नाधिकारी श्रुतौ स्मार्ते त्वधिकारो न वार्यते ॥**

यथा मनुष्याधिकारनियममपोद्य देवादीनामपि विद्यास्वधिकार उक्तस्तथैव द्विजात्यधिकारनियमापवादेन शूद्रस्याप्यधिकारः स्यादित्येतामाशङ्कां निवर्तयितुमिदमधिकरणमारभ्यते । तत्र शूद्रस्याप्यधिकारः स्यादिति तावत् प्राप्तम् । अर्थित्वसामर्थ्ययोः सम्भवात् । 'तस्माच्छूद्रो यज्ञेऽनवक्लृप्तः' इतिवत् 'शूद्रो विद्यायामनवक्लृप्तः' इति च निषेधाश्रवणात् । यच्च कर्मस्वनधिकारकारणं शूद्रस्यानग्नित्वं, न तद्विद्यास्वधिकारस्यापवादकं लिङ्गम् । नह्याहवनीयादिरहितेन विद्या वेदितुं न शक्यते । भवति च लिङ्गं शूद्राधिकारस्योपोद्बलकम्। संवर्गविद्यायां हि जानश्रुतिं पौत्रायणं शुश्रूषुं शूद्रशब्देन परामृशति –'अथ हारेत्वा शूद्र तवैव सह गोभिरस्तु' इति । विदुरप्रभृतयश्च शूद्रयोनिप्रभवा अपि विशिष्टविज्ञानसम्पन्नाः स्मर्यन्ते । तस्मादधिक्रियते शूद्रो विद्यास्विति । एवं प्राप्ते ब्रूमः– न शूद्रस्याधिकारः, वेदाध्ययनाभावात् । अधीतवेदो हि विदितवेदार्थो वेदार्थेष्वधिक्रियते । नच शूद्रस्य वेदाध्ययनमस्ति, उपनयनपूर्वकत्वाद् वेदाध्ययनस्य, उपनयनस्य च वर्णत्रयविषयत्वात् । यत्त्वर्थित्वं न तदसति सामर्थ्येऽधिकारकारणं भवति । शास्त्रीयेऽर्थे शास्त्रीयस्य सामर्थस्यापेक्षितत्वात् । शास्त्रीयस्य च सामर्थ्यस्याध्ययननिराकरणेन निराकृतत्वात् । यच्चेदं 'शूद्रो यज्ञेऽनवक्लृप्तः' इति तन्न्यायपूर्वकत्वाद् विद्यायामप्यनवक्लृप्तत्वं द्योतयति, न्यायस्य साधारणत्वात् । यत् पुनः संवर्गविद्यायां शूद्रशब्दश्रवणं लिङ्गं मन्यसे, न तल्लिङ्गम्, न्यायाभावात् । न्यायोक्ते हि लिङ्गदर्शनं द्योतकं भवति । नचात्र न्यायोऽस्ति । कामं चायं शूद्रशब्दः संवर्गविद्यायामेवैकस्यां शूद्रमधिकुर्यात्, तद्विषयत्वात्, न सर्वासु विद्यासु । अर्थवादस्थत्वात्तु न क्वचिदप्ययं शूद्रमधिकर्तुमुत्सहते । शक्यते चायं शूद्रशब्दोऽधिकृतविषयो योजयितुम् । कथमित्युच्यते? 'कम्बर एनमेतत्सन्तं सयुग्वानमिव

रैक्कमात्थ' इत्यस्माद्धंसवाक्यादात्मनोऽनादरं श्रुतवतो जानश्रुतेः पौत्रायणस्य शुगुत्पेदे, तामृषी रैक्कः शूद्रशब्देनानेन सूत्रयाम्बभूवात्मनः परोक्षज्ञताख्यापनायेति गम्यते । जातिशूद्रस्यानधिकारात् । कथं पुनः शूद्रशब्देन शुगुत्पन्ना सूच्यत इति । उच्यते – तदाद्रवणात् । शुचमभिदुद्राव, शुचा वाभिदुद्रुवे, शुचा वा रैक्कमभिदुद्रावेति शूद्रः । अवयवार्थसम्भवाद् रूढ्यर्थस्य चासम्भवात् । दृश्यते चायमर्थोऽस्यामाख्यायिकायाम् ।।३४।।

**क्षत्रियत्वावगतेश्चोत्तरत्र चैत्ररथेन लिङ्गात् ॥ ३५ ॥**

इतश्च न जातिशूद्रो जानश्रुतिः । यत्कारणं प्रकरणनिरूपणेन क्षत्रियत्वमस्योत्तरत्र चैत्ररथेनाभिप्रतारिणा क्षत्रियेण समभिव्याहाराल्लिङ्गाद्गम्यते । उत्तरत्र हि संवर्गविद्यावाक्यशेषे चैत्ररथिरभिप्रतारी क्षत्रियः सङ्कीर्त्यते –'अथ ह शौनकं च कापेयमभिप्रतारिणं च काक्षसेनिं परिविष्यमाणऔ ब्रह्मचारी विभिक्षे' इति । चैत्ररथित्वं चाभिप्रतारिणः कापेययोगादवगन्तव्यम् । कापेययोगो हि चित्ररथस्यावगतः 'एतेन वै चित्ररथं कापेया अयाजयन्' इति । समानान्वयानां च प्रायेण समानान्वया याजका भवन्ति । तस्माच्चैत्ररथिर्नामैकः क्षत्रपतिरजायत' इति च क्षत्रपतित्वावगमात् क्षत्रियत्वमस्यावगन्तव्यम् । तेन क्षत्रियेणाभिप्रतारिणा सह समानायां विद्यायां सङ्कीर्तनं जानश्रुतेरपि क्षत्रियत्वं सूत्रयति । समानानामेव हि प्रायेण समभिव्याहारा भवन्ति । क्षत्तृप्रेषणाद्यैश्वर्ययोगाच्च जानश्रुतेः क्षत्रियत्वावगतिः । अतो न शूद्रस्याधिकारः ।। ३५ ।।

**संस्कारपरामर्शात्तदभावाभिलापाच्च ॥ ३६ ॥**

इतश्च न शूद्रस्याधिकारः, यद्विद्याप्रदेशेषूपनयनादयः संस्काराः परामृश्यन्ते 'तं होपनिन्ये'। 'अधीहि भगव इति होपससाद' 'ब्रह्मपरा ब्रह्मनिष्ठाः परं ब्रह्मान्वेषमाणा एष ह वै तत्सर्वं वक्ष्यतीति ते ह समित्पाणयो भगवन्तं पिप्पलादमुपसन्नाः' इतिच । 'तान् हानुपनीयैव' इत्यपि प्रदर्शितैवोपनयनप्राप्तिर्भवति । शूद्रस्य संस्काराभावोऽभिलप्यते, 'शूद्रश्चतुर्थो वर्ण एकजातिः' इत्येकजातित्वस्मरणात् । 'न शूद्रे पातकं किञ्चिन्नच संस्कारमर्हति' इत्यादिभिश्च ।। ३६ ।।

**तदभावनिर्धारणे च प्रवृत्तेः ॥ ३७ ॥**

इतश्च न शूद्रस्याधिकारः । यत्सत्यवचनेन शूद्रत्वाभावे निर्धारिते जाबालं गौतम उपनेतुमनुशासितुं च प्रववृते । 'नैतदब्राह्मणो विवक्तुमर्हति समिधं सोम्याहरोप त्वा नेष्ये न सत्यादगाः' इति श्रुतिलिङ्गात् ।। ३७ ।।

**श्रवणाध्ययनार्थप्रतिषेधात् स्मृतेश्च ॥ ३८ ॥**

इतश्च न शूद्रस्याधिकारः । यदस्य स्मृतेः श्रवणाध्ययनार्थप्रतिषेधो भवति ।

ಮತ್ತು ನಾವು ಹೇಳುವಂತೆ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬಲ್ಲಿರುವ 'ತವ್ಯ' ಪ್ರತ್ಯಯದಿಂದ ಸ್ವಾಧ್ಯಾಯಸಂಸ್ಕಾರವೆಂಬ ಗುಣಕರ್ಮತ್ವವೇ ಅಧ್ಯಯನದಲ್ಲಿ ಪ್ರತೀತವಾಗುತ್ತದೆ. ಅಂದರೆ ಅಧ್ಯಯನವು ಸಂಸ್ಕಾರರೂಪವೆಂದು ಅಂಗೀಕಾರ ಮಾಡಿದರೂ ಕೂಡ ಅಂತಹ ಅಧ್ಯಯನದ ಅಧಿಕಾರವನ್ನು ಶೂದ್ರನೂ ಕೂಡ ಪಡೆಯಬಹುದಲ್ಲವೇ? ಎಂದೇ ಪೂರ್ವಪಕ್ಷ ಮಾಡಲು ಬರುವಾಗ ಅದೃಷ್ಟಾರ್ಥವಾದ ಪ್ರಧಾನಕರ್ಮತ್ವವನ್ನು ಒಪ್ಪಿ, ಪೂರ್ವಪಕ್ಷ ಮಾಡುವುದು ಸರಿಯಲ್ಲ. ಅಂದರೆ ಅಧ್ಯಯನವು ಸಂಸ್ಕಾರರೂಪವಾದ್ದರಿಂದ ದೃಷ್ಟಾರ್ಥವಾದ ಗುಣಕರ್ಮರೂಪವೇ ಆಗಿವೆಯೆಂದು ದೃಷ್ಟಫಲವನ್ನು ಹೇಳಲು ಬರುವಾಗ ಪ್ರಧಾನಕರ್ಮತ್ವವೆಂಬ ಅದೃಷ್ಟಫಲವನ್ನು ಹೇಳುವುದು ಸರಿಯಲ್ಲ ಎಂದಭಿಪ್ರಾಯ.

**अपि च पूर्वतन्त्रे प्रथमसूत्र एवाध्ययनस्य दृष्टार्थताया उक्तत्वात्तेन गतार्थत्वस्य न परिहारः ।**

ಮತ್ತು ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಪುನರುಕ್ತಿಯನ್ನು ನೀವು ಪರಿಹರಿಸಿಕೊಂಡರೂ ಪೂರ್ವಮೀಮಾಂಸೆಯ ಮೊದಲನೆಯ ಧರ್ಮಜಿಜ್ಞಾಸಾಧಿಕರಣದಿಂದ ಪುನರುಕ್ತಿಯು ಬಂದೇ ಬರುತ್ತದೆ. ಏಕೆಂದರೆ ಅಲ್ಲಿ ಅಧ್ಯಯನಕ್ಕೆ ವೇದಾರ್ಥಜ್ಞಾನವೆಂಬ ದೃಷ್ಟಫಲವನ್ನು ಸಿದ್ಧಾಂತ ಮಾಡಲಾಗಿದೆ. ಇಲ್ಲಿಯೂ ಅದನ್ನೇ ಸಮರ್ಥನೆ ಮಾಡಿದರೆ ಪುನರುಕ್ತಿಯು ಬರುತ್ತದೆ.

**कथं च त्वन्मते गतार्थत्वाशङ्का । ऐकशास्त्र्याभावात् । तत्रोक्तस्य वेदनित्यत्वादेरिहापि ''अत एव च नित्यत्वम्'' इत्यादावुक्त्यङ्गीकाराच्च ।**

ಮತ್ತು ರಾಮಾನುಜರು ಪೂರ್ವಮೀಮಾಂಸೆ ಹಾಗೂ ಬ್ರಹ್ಮಮೀಮಾಂಸೆಗಳನ್ನು ಒಂದೇ ಶಾಸ್ತ್ರವೆನ್ನುತ್ತಾರಾದ್ದರಿಂದ, ಪೂರ್ವಮೀಮಾಂಸೆಯಲ್ಲಿ ಹೇಳಿದ್ದನ್ನು ಪುನಃ ಬ್ರಹ್ಮಮೀಮಾಂಸೆಯಲ್ಲಿ

वेदश्रवणप्रतिषेधो वेदाध्ययनप्रतिषेधस्तदर्थज्ञानानुष्ठानयोश्च प्रतिषेधः शूद्रस्य स्मर्यते । श्रवणप्रतिषेधस्तावद् 'अथास्य वेदमुपशृण्वतस्त्रपुजतुभ्यां श्रोत्रप्ररिपूरणम्' इति । 'पद्यु हवा एतच्छ्मशानं यच्छूद्रस्तस्माच्छूद्रसमीपे नाध्येतव्यम्' इतिच । अत एवाध्ययनप्रतिषेधः। यस्य हि समीपेऽपि नाध्येतव्यं भवति, स कथमश्रुतमधीयीत । भवति च वेदोच्चारणे जिह्वाच्छेदो, धारणे शरीरभेद इति । अत एव चार्थादर्थज्ञानानुष्ठानयोः प्रतिषेधो भवति 'न शूद्राय मतिं दद्याद्' इति, 'द्विजातीनामध्ययनमिज्या दानम्' इतिच । येषां पुनः पूर्वकृतसंस्कारवशाद् विदुरधर्मव्याधप्रभृतीनां ज्ञानोत्पत्तिस्तेषां न शक्यते फलप्राप्तिः प्रतिषेद्धुम्, ज्ञानस्यैकान्तिकफलत्वात् । 'श्रावयेच्चतुरो वणान्' इति चेतिहासपुराणाधिगमे चातुर्वर्ण्यस्याधिकारस्मरणात् । वेदपूर्वकस्तु नास्त्यधिकारः शूद्राणामिति स्थितम् ।।३८।।

ಹೇಳಬಾರದೆಂದು ಅವರು ಹೇಳುವುದು ಸೂಕ್ತವಾಗುತ್ತದೆ. ಆದರೆ ನಿಮ್ಮ ಮತದಲ್ಲಿ 'ಪೂರ್ವಮೀಮಾಂಸೆ' ಎಂಬ ಶಾಸ್ತ್ರವೇ ಬೇರೆ, 'ಬ್ರಹ್ಮಮೀಮಾಂಸೆ' ಎಂಬ ಶಾಸ್ತ್ರವೇ ಬೇರೆಯಾದ್ದರಿಂದ ಅಲ್ಲಿ ಹೇಳಿದ ವಿಚಾರವನ್ನು ಇಲ್ಲಿ ಹೇಳಬಾರದೆಂದು ಆಶಂಕೆ ಮಾಡುವುದೇ ತಪ್ಪಾಗುತ್ತದೆ. ಹೀಗೊಪ್ಪದಿದ್ದರೆ, ವೇದನಿತ್ಯತ್ವ ವಿಚಾರವನ್ನು ಪೂರ್ವಮೀಮಾಂಸೆಯಲ್ಲಿ ಸಮರ್ಥನೆ ಮಾಡಿದ್ದರಿಂದ ಪುನಃ ಅದೇ ವೇದನಿತ್ಯತ್ವವನ್ನು 'ಅತ ಏವ ಚ ನಿತ್ಯತ್ವಮ್' ಎಂಬ ಸೂತ್ರದಲ್ಲಿ ಸಮರ್ಥನೆ ಮಾಡುತ್ತಿರುವುದೂ ಕೂಡ ಪುನರುಕ್ತವಾಗಬೇಕಾದೀತು.

**किञ्च सिद्धान्ते "तदभावाभिलापाच" इति सूत्रे शूद्रोपनयनाभावस्य "श्रवणाध्ययनार्थप्रतिषेधाच" इति सूत्रेऽध्ययनाभावस्य चोक्तत्वेनोपनयनाध्ययने उपेत्यैव पूर्वपक्षयितव्यम् ।**

ಮತ್ತು ಸಿದ್ಧಾಂತದಲ್ಲಿ 'ತದಭಾವಾಭಿಲಾಪಾಚ್ಚ' ಎಂಬ ಸೂತ್ರವು ಶೂದ್ರನಿಗೆ ಉಪನಯನಸಂಸ್ಕಾರವಿಲ್ಲವೆಂದು ಹೇಳುತ್ತಿದೆ. 'ಶ್ರವಣಾಧ್ಯಯನಾರ್ಥಪ್ರತಿಷೇಧಾಚ್ಚ' ಎಂಬ ಸೂತ್ರವು ಅಧ್ಯಯನವಿಲ್ಲವೆಂದು ಸಿದ್ಧಾಂತ ಮಾಡುತ್ತಿದೆ. ಪೂರ್ವಪಕ್ಷ ಮಾಡುವ ಸಂದರ್ಭದಲ್ಲಿ ಈ ಸಿದ್ಧಾಂತದಿಂದ ನಿರಾಕೃತವಾಗುವಂತೆ ವಿಷಯವನ್ನು ಮಂಡನೆ ಮಾಡಬೇಕು. ಅಂದರೆ ಶೂದ್ರನಿಗೆ ವೇದಾಧ್ಯಯನವನ್ನು ಹೇಳಬಹುದಲ್ಲವೇ, ಉಪನಯನಸಂಸ್ಕಾರವನ್ನೂ ಕೂಡ ಹೇಳಬಹುದಲ್ಲವೇ? ಎಂದು ಪೂರ್ವಪಕ್ಷ ಮಾಡಿದಾಗ ಮುಂದಿನ ಸಿದ್ಧಾಂತ ಸೂತ್ರಗಳಿಂದ ಪರಿಹರಿಸಲು ಸಾಧ್ಯವಿದೆ.

**अध्ययनस्य प्रधानकर्मत्वेन पूर्वपक्षे हि सिद्धान्ते तस्य गुणकर्मतैव वाच्या ।**

ಅಧ್ಯಯನವು ಪ್ರಧಾನಕರ್ಮವಾಗಿದೆಯೆಂದು ಪೂರ್ವಪಕ್ಷ ಮಾಡಿದಾಗ ಸಿದ್ಧಾಂತದಲ್ಲಿ ಅಧ್ಯಯನವು ಗುಣಕರ್ಮವಾಗಿದೆಯೆಂದು ಸಮರ್ಥನೆ ಮಾಡಬೇಕು. ಆದರೆ ಸೂತ್ರದಲ್ಲಿ ಹಾಗೇ ಎಲ್ಲಿಯೂ ಹೇಳಿಲ್ಲ.

**अपि च**

**दशमस्त्वमसीत्यादिवाक्यादिव भवेद्ध्रुवम् ।**<br>**तत्त्वमस्यादिवाक्याच शूद्रस्याप्यपरोक्षधीः ।। १ ।।**

ಮತ್ತು

ದಶಮಸ್ತ್ವಮಸೀತ್ಯಾದಿವಾಕ್ಯದಿವ ಭವೇದ್ಧ್ರುವಮ್ ।<br>ತತ್ತ್ವಮಸ್ಯಾದಿವಾಕ್ಯಾಚ್ಚ ಶೂದ್ರಸ್ಯಾಪ್ಯಪರೋಕ್ಷಧೀಃ ॥ ೧ ॥<br>ಅಪಶೂದ್ರಾಧಿಕರಣ (೧-೩-೯)

'ದಶಮಸ್ತ್ವಮಸಿ' ಎಂಬ ವಾಕ್ಯದಂತೆ 'ತತ್ತ್ವಮಸಿ' ಎಂಬ ವಾಕ್ಯದಿಂದಲೂ ಶೂದ್ರನಿಗೆ ಅಪರೋಕ್ಷಜ್ಞಾನವನ್ನು ಹೇಳಬಹುದು.

**अतिक्रान्तनिषेधस्य व्युत्पन्नस्य शूद्रस्य ब्राह्मणादेरिव पुस्तकपठितादविधिनाधीतादनधीताद्वा ''तत्वमसि'' इत्यादिवाक्यात् ''दशमस्त्वमसि'' इति वाक्यादिव ज्ञानं तावज्जायत एव ।**

ಶೂದ್ರನು ವೇದವನ್ನು ಓದಬಾರದೆಂಬ ನಿಷೇಧವಿದೆ. ಆದರೂ ಆ ನಿಷೇಧವನ್ನು ದಾಟಿ, ವ್ಯುತ್ಪನ್ನನಾದ ಶೂದ್ರನಿಗೆ ಪುಸ್ತಕಪಠನಾದಿಗಳಿಂದ ಬ್ರಾಹ್ಮಣಾದಿಗಳಂತೆ 'ತತ್ತ್ವಮಸಿ' ಎಂಬ ವಾಕ್ಯವನ್ನು ಕೇಳಿದಾಗ ಅಪರೋಕ್ಷಜ್ಞಾನವು ಹುಟ್ಟಬಹುದು. ಅಥವಾ ಮತ್ತೊಬ್ಬರು ಮಾಡುತ್ತಿರುವ ಅಧ್ಯಯನವನ್ನು ಕೇಳಿಸಿಕೊಂಡು 'ತತ್ತ್ವಮಸಿ' ಎಂಬ ವಾಕ್ಯದಿಂದ ದಶಮಸ್ತ್ವಮಸಿ' ಎಂಬ ವಾಕ್ಯದಂತೆ ಶಬ್ದಾಪರೋಕ್ಷಜ್ಞಾನವು ಹುಟ್ಟಬಹುದು.

**साक्षात्त्वं च ब्राह्मणादेरिवास्यापि विषयस्वभावादेव भविष्यति । प्रतिबन्धनिरासोऽपि मननिदिध्यासनाभ्यां सेत्स्यति ।**

ಬ್ರಹ್ಮಸಾಕ್ಷಾತ್ಕಾರವು ವಿಷಯದಲ್ಲಿ ಅಪರೋಕ್ಷಜ್ಞಾನದ ಅರ್ಹತೆಯಿರುವುದರಿಂದ ಯುಕ್ತವಾಗುತ್ತದೆ. ಬ್ರಾಹ್ಮಣಾದಿಗಳಿಗೆ 'ತತ್ತ್ವಮಸಿ' ಎಂಬ ವಾಕ್ಯವನ್ನು ಕೇಳಿದಾಗ ಅಪರೋಕ್ಷೈಕರಸನಾದ ಬ್ರಹ್ಮನು ಹೇಗೆ ಅಪರೋಕ್ಷನಾಗುತ್ತಾನೋ, ಅದರಂತೆ ಶೂದ್ರನಿಗೂ ಸಹ ಅಪರೋಕ್ಷನಾಗಬಹುದು. ಅಸಂಭಾವನಾಶಂಕೆ ಹಾಗೂ ವಿಪರೀತ ಶಂಕೆಗಳೆಂಬ ಪ್ರತಿಬಂಧಕಗಳ ನಿರಾಸವಾದರೂ ಮನನ ನಿದಿಧ್ಯಾಸನಾದಿಗಳಿಂದ ಬ್ರಾಹ್ಮಣಾದಿಗಳಿಗೆ ಹೇಗೆ ಆಗುತ್ತದೋ, ಅದರಂತೆ ಶೂದ್ರನಿಗೂ ಸಹ ಹೇಳಬಹುದು.

**यदि चापरोक्ष्यस्वभावस्यापि ब्रह्मण आपरोक्ष्यं लोकविलक्षणत्वाददृष्टविशेषसाध्यं तर्हि तत एव तदापरोक्ष्यं सत्यस्यापि बन्धस्य निवर्तकं स्यात् ।**

ಒಂದು ವೇಳೆ ಬ್ರಹ್ಮನು ಅಪರೋಕ್ಷೈಕರಸನಾಗಿದ್ದರೂ ಲೋಕವಿಲಕ್ಷಣನಾದ ಕಾರಣ ನಿಯಮಾದೃಷ್ಟವು ಅನಿವಾರ್ಯ. ನಿಯಮಾದೃಷ್ಟವಿದ್ದರೆ ಮಾತ್ರ ಬ್ರಹ್ಮನು ಅಪರೋಕ್ಷನಾಗುತ್ತಾನೆ. ಶೂದ್ರನಿಗೆ ಅಧ್ಯಯನದಿಂದ ಅದೃಷ್ಟವು ಹುಟ್ಟುವುದಿಲ್ಲ. ಆದ್ದರಿಂದ ಬ್ರಾಹ್ಮಣನಿಗೆ ಮಾತ್ರ ಬ್ರಹ್ಮನು ಅಪರೋಕ್ಷನಾಗುತ್ತಾನೆಂದು ಹೇಳಬಾರದು. ಏಕೆಂದರೆ ಅಪರೋಕ್ಷಜ್ಞಾನದಿಂದ ಬಂಧವು ನಿವೃತ್ತವಾಗುತ್ತದೆ. ಆದ್ದರಿಂದ ಬಂಧಮಿಥ್ಯಾತ್ವವನ್ನು ಒಪ್ಪಬೇಕೆಂದು ಅದ್ವೈತಿಗಳು ಸಮರ್ಥಿಸುತ್ತಾರೆ.

ಪರಿಪೂರ್ಣಚಂದ್ರಿಕಾ

ಇದೂ ಸಹ ತಪ್ಪಾಗಬೇಕಾದೀತು. ಏಕೆಂದರೆ ಅಪರೋಕ್ಷೈಕರಸನಾದ ಬ್ರಹ್ಮನ ಜ್ಞಾನದಿಂದ ಲೋಕವಿಲಕ್ಷಣವೆಂಬ ಕಾರಣದಿಂದಲೇ ಸತ್ಯವಾದ ಬಂಧಕ್ಕೂ ಕೂಡ ನಿವೃತ್ತಿಯನ್ನು ಒಪ್ಪಬೇಕಾದೀತು.

**नच जातमपि ज्ञानं शूद्रकृतयागवन्न सफलमिति वाच्यम् । अज्ञाननिवृत्त्याख्य-दृष्टफले ज्ञानस्यान्यानपेक्षत्वात् ।**

ಶೂದ್ರನಿಗೆ ವೇದದಿಂದ ಜ್ಞಾನವು ಬರಬಹುದು. ಆದರೆ ಅಪರೋಕ್ಷವು ಬರುವುದಿಲ್ಲ. ಏಕೆಂದರೆ ಶೂದ್ರ ಮಾಡಿದ ಯಾಗವು ಹೇಗೆ ಸಫಲವಾಗುವುದಿಲ್ಲವೋ ಅದರಂತೆ ಶಬ್ದದಿಂದ ಬಂದಿರುವ ಜ್ಞಾನವೂ ಸಹ ಮೋಕ್ಷಕ್ಕೆ ಕಾರಣವಾಗುವುದಿಲ್ಲ ಎಂದು ಶಂಕಿಸಬಾರದು. ಏಕೆಂದರೆ ಜ್ಞಾನವು ಅಜ್ಞಾನವನ್ನಷ್ಟೇ ಪರಿಹಾರ ಮಾಡುತ್ತದೆ. ಅಜ್ಞಾನನಿವೃತ್ತಿಯೆಂಬ ದೃಷ್ಟಫಲವನ್ನು ಹೇಳಲು ಬರುವಾಗ ಮತ್ತೊಂದನ್ನು ಅದು ಅಪೇಕ್ಷಿಸುವುದಿಲ್ಲ. ಅಂದರೆ ಜ್ಞಾನಬಂದರೆ ಅಜ್ಞಾನವು ಸಹಜವಾಗಿ ನಿವೃತ್ತಿಯಾಗುತ್ತದೆ. ಅಜ್ಞಾನನಿವೃತ್ತಿಯೇ ಮೋಕ್ಷರೂಪವಾದ್ದರಿಂದ ಶೂದ್ರನಿಗೆ ಬಂದಿರುವಂತಹ ಜ್ಞಾನದಿಂದಲೂ ಮೋಕ್ಷವಾಗಬೇಕಾದೀತು ಎಂಬ ಆಕ್ಷೇಪ ಬಂದೇ ಬರುತ್ತದೆ.

**इयं शुक्तिरिति वाक्यजं हि ज्ञानं शूद्रस्यापि शुक्त्यज्ञाननिवर्तकम् ।**

'ಇಯಂ ಶುಕ್ತಿಃ' ಎಂಬ ಬಾಧಜ್ಞಾನವು ಬ್ರಾಹ್ಮಣನಿಗೆ ಬಂದರೂ ಶುಕ್ತ್ಯಜ್ಞಾನವು ಪರಿಹಾರವಾಗುತ್ತದೆ. ಅದರಂತೆ ಶೂದ್ರನಿಗೆ ಬಂದರೂ ಸಹ ಶುಕ್ತ್ಯಜ್ಞಾನವು ಪರಿಹಾರವಾಗುತ್ತದೆ.

**अदृष्टद्वारेश्वरप्रसादद्वारा वा ज्ञानस्य बन्धनिवर्तकत्वं च परैर्नाङ्गीकृतम् ।**

ನಮ್ಮಲ್ಲಿ ಈ ದೋಷವಿಲ್ಲ. ಏಕೆಂದರೆ ನಾವು ಜ್ಞಾನದಿಂದ ನೇರವಾಗಿ ಮೋಕ್ಷವಾಗುತ್ತದೆಂದು ಒಪ್ಪುವುದಿಲ್ಲ. ಹೊರತಾಗಿ ಅದೃಷ್ಟದ್ವಾರ ಈಶ್ವರನ ಪ್ರಸಾದವುಂಟಾಗಿ, ಈಶ್ವರನ ಪ್ರಸಾದದಿಂದ ಸಂಸಾರ ಬಂಧನವು ಕಳಚುತ್ತದೆಂದು ಒಪ್ಪಿದ್ದೇವೆ. ಆದರೆ ಅದ್ವೈತಿಗಳು ಹೀಗೆ ಒಪ್ಪಿರದ ಕಾರಣ ಶೂದ್ರನಿಗೆ ಬಂದಿರುವಂತಹ ಜ್ಞಾನದಿಂದಲೂ ಮೋಕ್ಷವಾಗಲಿ ಎಂಬ ಆಕ್ಷೇಪವು ಅವರಿಗೆ ಮಾತ್ರ ಬರುತ್ತದೆ.

**अङ्गीकारे च बन्धस्य ज्ञाननिवर्त्यत्वेन मिथ्यात्वोक्तिरयुक्ता स्यात् । अदृष्टनिवर्त्यत्वात् ।**

ಒಂದು ವೇಳೆ ನಮ್ಮಂತೆ ಅದ್ವೈತಿಗಳೂ ಸಹ ಅದೃಷ್ಟದ ಮೂಲಕ ಅಥವಾ ಈಶ್ವರನ ಪ್ರಸಾದದ ಮೂಲಕ ಬಂಧನಿವರ್ತಕವೆಂದು ಒಪ್ಪಿದರೆ ಬಂಧವು ಜ್ಞಾನನಿವರ್ತ್ಯವಾಗುವ ಕಾರಣದಿಂದ ಮಿಥ್ಯಾಭೂತವಾಗಿದೆಯೆಂದೇ ಅವರಿಗೆ ಹೇಳಲಾಗದು. ಹೊರತಾಗಿ ಅದೃಷ್ಟನಿವರ್ತ್ಯವಾಯಿತು, ಅಥವಾ ಈಶ್ವರಪ್ರಸಾದನಿವರ್ತ್ಯವಾಯಿತು. ಇದರಿಂದ ಮಿಥ್ಯಾತ್ವವನ್ನು ಸಮರ್ಥಿಸಲಾಗದು.

ಅಪಶೂದ್ರಾಧಿಕರಣ (೧-೩-೯)

**विध्यतिक्रमेणोत्पन्नः प्रत्यवायस्तु शूद्रस्य प्रपञ्चान्तर्गतत्वाज्ज्ञानेन निवर्तिष्यते।**

ಶೂದ್ರನು ವೇದವನ್ನು ಓದಬಾರದೆಂಬ ವಿಧಿಯಿದೆ. ಅದನ್ನು ಅತಿಕ್ರಮಣಮಾಡಿ ವೇದಾಧ್ಯಯನ ಮಾಡಿದರೆ ಪ್ರತ್ಯವಾಯ ಬರುತ್ತದೆ. ಈ ಪ್ರತ್ಯವಾಯವೆಂಬ ಪ್ರತಿಬಂಧಕವಿರುವ ಕಾರಣ ಶೂದ್ರನ ವೇದಾಧ್ಯಯನದಿಂದ ಮೋಕ್ಷವು ಹೇಗೆ ದೊರೆಯುತ್ತದೆ ? ಎಂಬ ಶಂಕೆಗೂ ಅವಕಾಶವಿಲ್ಲ. ಏಕೆಂದರೆ ಬ್ರಹ್ಮಜ್ಞಾನ ಬಂದಾಗ ಸಮಸ್ತ ಪ್ರಪಂಚವೇ ನಿವೃತ್ತವಾಗುತ್ತವೆ. ಅದರಲ್ಲಿ ಅಡಗಿರುವ ಪ್ರತ್ಯವಾಯವೂ ಕೂಡ ನಿವೃತ್ತವಾಗುತ್ತದೆ. ಆದ್ದರಿಂದ ಶೂದ್ರನ ವೇದಾಧ್ಯಯನದಿಂದ ಬರುವ ಜ್ಞಾನದಿಂದಲೂ ಮೋಕ್ಷವಾಗಬೇಕಾದೀತು ಎಂಬ ಆಕ್ಷೇಪವನ್ನು ಅದ್ವೈತಿಗಳಿಗೆ ಪರಿಹರಿಸಿಕೊಳ್ಳಲಾಗದು.

**प्रकाशः –**

''अवैद्यत्वादभावः कर्मणि स्यात्'' इति सूत्रेण विद्याभावोक्तेरित्यर्थः – **तत्रापीति ।। पूर्वतन्त्रापशूद्राधिकरणे – सूत्र इति ।। गुणसूत्र इत्यर्थः ।**

ವಿವರಣೆ - ಅದ್ವೈತಿಗಳ ಅಧಿಕರಣಶರೀರವನ್ನು 'ತನ್ನ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಮೊದಲು ಅವರು ಹೇಳಿದ ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಗತಾರ್ಥತ್ವದ ಪರಿಹಾರವನ್ನು ನಿರಾಕರಣೆ ಮಾಡುತ್ತಿದ್ದಾರೆ. 'ಅವೈದ್ಯತ್ವಾದಭಾವಃ ಕರ್ಮಣಿ ಸ್ಯಾತ್' ಎಂಬ ಪೂರ್ವಮೀಮಾಂಸೆಯ ಸೂತ್ರದಲ್ಲಿ 'ಅವೈದ್ಯತ್ವ' ಶಬ್ದದಿಂದ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಲಾಗಿದೆ. ಅದನ್ನು ಪುನಃ ಇಲ್ಲಿಯೂ ಹೇಳುತ್ತಿರುವುದರಿಂದ ಗತಾರ್ಥತ್ವಶಂಕೆಯು ಬಂದೇ ಬರುತ್ತದೆಂದಭಿಪ್ರಾಯ. 'ತತ್ರಾಪಿ' ಎಂದರೆ ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಲ್ಲಿ ಎಂದರ್ಥ. 'ಸೂತ್ರೇ' ಎಂದರೆ ಗುಣಸೂತ್ರದಲ್ಲಿ ಎಂದರ್ಥ.

**प्रकाशः – विद्यावान्वैद्यः स न भवतीत्यवैद्यः तत्त्वात्कर्मणि शूद्रस्याधिकाराभाव इत्यर्थः ।**

'ಅವೈದ್ಯತ್ವಾದಭಾವಃ' ಎಂಬ ಪೂರ್ವಮೀಮಾಂಸೆಯ ಸೂತ್ರದ ಅರ್ಥ ಹೀಗಿದೆ - ವಿದ್ಯೆಯುಳ್ಳವನನ್ನು ವೈದ್ಯನೆನ್ನುತ್ತಾರೆ. ಶೂದ್ರನು ವೈದ್ಯನಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಲಾಗಿದೆ. ಅಂದರೆ ಕರ್ಮಾಧಿಕಾರವಿಲ್ಲವೆಂದು ಹೇಳುವ ಮೊದಲು, ಬ್ರಹ್ಮವಿದ್ಯೆಯಲ್ಲೂ ಕೂಡ ಅಧಿಕಾರವನ್ನು ಹೊಂದಿಲ್ಲವೆಂದು ಹೇಳಿದ್ದರಿಂದ ಪುನಃ ಅದೇ ವಿಚಾರವನ್ನು ಈ ಅಧಿಕರಣದಲ್ಲಿಯೂ ಹೇಳಲಾಗಿದೆ ಎಂದಭಿಪ್ರಾಯ.

**प्रकाशः** – ''अवैद्यत्वमभ्युच्चयमात्रम् । अभ्युच्चयत्वं चाध्ययनविधेः पुरुषार्थत्वशङ्कायास्तत्र अनिरासादिह संस्कारपरामर्शादित्यध्ययनविधेस्संस्कारकर्म-विषयत्वसमर्थनात्'' इति कल्पतरूक्तमाशङ्कते – **ननु तत्रेति** ।।

ಕಲ್ಪತರುವಿನಲ್ಲಿ ಹೀಗೆ ಹೇಳಲಾಗಿದೆ - 'ಅವೈದ್ಯತ್ವಮಭ್ಯುಚ್ಚಯಮಾತ್ರಮ್ । ಅಭ್ಯುಚ್ಚಯತ್ವಂ ಚಾಧ್ಯಯನವಿಧೇಃ ಪುರುಷಾರ್ಥತ್ವಶಂಕಾಯಾಸ್ತತ್ರ ನಿರಾಸಾದಿಹ ಸಂಸ್ಕಾರಪರಾಮರ್ಶಾದಿತ್ಯಧ್ಯಯನವಿಧೇಃ ಸಂಸ್ಕಾರಕರ್ಮವಿಷಯತ್ವಸಮರ್ಥನಾತ್' ಪೂರ್ವಮೀಮಾಂಸೆಯಲ್ಲಿ ಹೇಳಿದ ಅವೈದ್ಯತ್ವವು ಕೇವಲ ಅಭ್ಯುಚ್ಚಯ ಯುಕ್ತಿಯಾಗಿದೆ. ಅಂದರೆ ಪ್ರಧಾನವಾಗಿ ಶೂದ್ರನಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರ-ವಿಲ್ಲವೆಂಬ ಸಮರ್ಥನೆಯೇ ಇರುತ್ತದೆ. ಅದಕ್ಕೆ ಪೂರಕವಾಗಿ ವಿದ್ಯೆಯಿಲ್ಲ ಎಂದು ಹೇಳಿದ್ದಾರೆ. ಏಕೆಂದರೆ ಅಧ್ಯಯನವಿಧಿಯು ಪುರುಷಾರ್ಥರೂಪವಾದ್ದರಿಂದ ಪ್ರಧಾನವಾಗಿದೆ. ಆದ್ದರಿಂದ ಸ್ವರ್ಗಾದಿಫಲಕವಾದ ಅಧ್ಯಯನವು ಸಂಸ್ಕಾರರೂಪವಲ್ಲದ ಕಾರಣ, ಶೂದ್ರಾದಿಗಳೂ ಸಹ ಅಧ್ಯಯನ ಮಾಡಬಹುದೆಂಬ ಆಶಂಕೆಯನ್ನು ಅಲ್ಲಿ ಪರಿಹಾರ ಮಾಡಿಲ್ಲ. ಆದರೆ ಪ್ರಕೃತ 'ಸಂಸ್ಕಾರಪರಾಮರ್ಶಾತ್' ಎಂಬ ಸೂತ್ರದಲ್ಲಿ ಅಧ್ಯಯನ ವಿಧಿಯು ಸಂಸ್ಕಾರಕರ್ಮವಿಷಯಕವಾದ್ದರಿಂದ ಶೂದ್ರಾದಿಗಳಿಗೆ ಸಂಸ್ಕಾರವು ಕೂಡುವುದಿಲ್ಲವಾದ ಕಾರಣ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಮರ್ಥನೆ ಮಾಡಿರುತ್ತಾರೆ. ಕಲ್ಪತರುವಿನಲ್ಲಿ ಹೇಳಿದ ಈ ಆಶಂಕೆಯನ್ನು 'ನನು ತತ್ರ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ.

**प्रकाशः** – नन्वयमप्यर्थोऽत्राभिप्रेयत इत्यत आह – **किञ्चेति** ।। **तव्योक्तेति** ।। तव्यस्य कर्मणि स्मरणेनाध्ययनस्य स्वाध्यायसंस्कारत्वरूपगुणकर्मत्वस्यैव प्रतीतेः । अन्यथा ''ज्योतिष्टोमेन'' इतिवत्स्वाध्यायेनाधीयीतेति स्यादित्यर्थः ।।

ಅಧ್ಯಯನವು ಸಂಸ್ಕಾರರೂಪವಾಗಿದೆಯೆಂಬ ವಿಚಾರವನ್ನು ಬ್ರಹ್ಮಮೀಮಾಂಸೆಯಲ್ಲೂ ಕೂಡ ಸೂತ್ರಕಾರರು ಹೇಳಿರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಈ ಅರ್ಥವೂ ಸಹ ಸೂತ್ರಕಾರರಿಗೆ ಅಭಿಪ್ರೇತವಾಗಿರಬಹುದಲ್ಲವೇ ? ಎಂಬ ಆಶಂಕೆಗೆ 'ಕಿಂಚ' ಇತ್ಯಾದಿ ವಾಕ್ಯದಿಂದ ಮತ್ತೊಂದು ದೋಷವನ್ನು ಹೇಳುತ್ತಿದ್ದಾರೆ.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬಲ್ಲಿ 'ತವ್ಯ' ಪ್ರತ್ಯಯವು ಕರ್ಮಾರ್ಥದಲ್ಲಿ ಬರುತ್ತದೆಂದು ಪಾಣಿನೀ ವ್ಯಾಕರಣಸೂತ್ರದಲ್ಲಿ ಹೇಳಲಾಗಿದೆ. ಆವಾಗ ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರರೂಪವೆಂಬ ಗುಣಕರ್ಮರೂಪವಾಗಿದೆಯೆಂದೇ ತಿಳಿಯುತ್ತದೆ. ಹೀಗೆ ಹೇಳಿದಾಗಲೇ ತವ್ಯಪ್ರತ್ಯಯಕ್ಕೆ ಸ್ವಾರಸ್ಯವನ್ನು ಹೇಳಿದಂತಾಗುತ್ತದೆ. ಒಂದು ವೇಳೆ ಅಧ್ಯಯನವು ಪ್ರಧಾನ ಕರ್ಮವಾಗಿ ಸ್ವರ್ಗಕ್ಕೋಸ್ಕರವೆಂದಾಗಿದ್ದಲ್ಲಿ, 'ಜ್ಯೋತಿಷ್ಟೋಮೇನ ಯಜೇತ' ಎಂದಿರುವಂತೆ 'ಸ್ವಾಧ್ಯಾಯೇನ ಅಧೀಯೀತ' ಎಂದಿರಬೇಕಿತ್ತು.

**प्रकाशः – प्रथमसूत्र इति ।।** ''अथातो धर्मजिज्ञास'' इत्यत्राध्ययनविधौ फलाश्रवणाद्विश्वजिन्न्यायेन स्वर्गः कल्प्य इति प्राप्ते दृष्टे सम्भवत्यदृष्टायोगादर्थावबोधः फलमित्युक्तत्वादित्यर्थः ।।

ಪೂರ್ವಮೀಮಾಂಸೆಯ 'ಓಂ ಅಥಾತೋ ಧರ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ ಹೀಗೆ ಹೇಳಿದ್ದಾರೆ - ಅಧ್ಯಯನ ವಿಧಿಯಲ್ಲಿ ಫಲವು ಕೇಳಿಸದ ಕಾರಣ ವಿಶ್ವಜಿದಧಿಕರಣದ ನ್ಯಾಯದಂತೆ ಸ್ವರ್ಗವೇ ಫಲವೆಂದು ಕಲ್ಪಿಸಬೇಕೆಂದು ಪೂರ್ವಪಕ್ಷ ಮಾಡಿ, ದೃಷ್ಟಫಲವನ್ನು ಹೇಳಲು ಬರುವಾಗ, ಅದೃಷ್ಟಫಲವನ್ನು ಕಲ್ಪನೆ ಮಾಡಬಾರದೆಂದು ಸಿದ್ಧಾಂತ ಮಾಡಿದ್ದಾರೆ. ಅಂದರೆ ಅಧ್ಯಯನ ವಿಧಿಗೆ ವೇದಾರ್ಥಜ್ಞಾನವೆಂಬ ದೃಷ್ಟಫಲವನ್ನೇ ಹೇಳಬೇಕೆಂದು ಪೂರ್ವಮೀಮಾಂಸೆಯ ಪ್ರಥಮಸೂತ್ರದಲ್ಲಿ ನಿರ್ಣಯಿಸಿದ್ದಾರೆ. ಅದನ್ನೇ ನೀವು ಈ ಅಧಿಕರಣದಲ್ಲಿ ಹೇಳುತ್ತಿರುವುದರಿಂದ, ಧರ್ಮಜಿಜ್ಞಾಸಾಧಿಕರಣದಿಂದ ಪುನರುಕ್ತಿ ಬರುತ್ತದೆಂದು ಅಭಿಪ್ರಾಯ.

**प्रकाशः – ऐकेति ।।** रामानुजमत इव पूर्वोत्तरतंत्रयोरित्यर्थः । ''अत एव जगतो वेदशब्दप्रभवत्वादेव । वेदशब्दनित्यत्वमपि प्रत्येतव्यम्'' इति त्वया भाषितत्वादित्यर्थः।

ರಾಮಾನುಜರು ಪೂರ್ವಮೀಮಾಂಸಾ ಹಾಗೂ ಬ್ರಹ್ಮಮೀಮಾಂಸಾಗಳನ್ನು ಒಂದೇ ಶಾಸ್ತ್ರವೆನ್ನುತ್ತಾರೆ. ಅವರಂತೆ ನೀವು ಒಂದೇ ಶಾಸ್ತ್ರವೆಂದು ಒಪ್ಪಿಲ್ಲ. ಬೇರೆ ಬೇರೆ ಶಾಸ್ತ್ರವಾದ್ದರಿಂದ, ಪೂರ್ವಮೀಮಾಂಸೆಯಲ್ಲಿ ಹೇಳಿದ್ದನ್ನೇ ಬ್ರಹ್ಮಮೀಮಾಂಸೆಯಲ್ಲಿಯೂ ಕೂಡ ಹೇಳಬಹುದು. ಹೀಗೊಪ್ಪದಿದ್ದರೆ, ಪೂರ್ವ-ಮೀಮಾಂಸೆಯಲ್ಲಿ ವೇದನಿತ್ಯತ್ವವನ್ನು ಸಮರ್ಥನೆ ಮಾಡಿದ್ದಾರೆ. ಅದನ್ನೇ ಪುನಃ ಬ್ರಹ್ಮಮೀಮಾಂಸೆಯ 'ಅತ ಏವ ನಿತ್ಯತ್ವಂ' ಎಂಬ ಸೂತ್ರದಲ್ಲಿಯೂ ಸಮರ್ಥನೆ ಮಾಡಲಾಗಿದೆ. 'ಅತ ಏವ ಜಗತೋ ವೇದಶಬ್ದಪ್ರಭವತ್ವಾದೇವ । ವೇದಶಬ್ದನಿತ್ಯತ್ವಮಪಿ ಪ್ರತ್ಯೇತವ್ಯಮ್' ಎಂದು ನೀವೇ ವ್ಯಾಖ್ಯಾನ ಮಾಡಿದ್ದೀರಿ. ಹಾಗಾಗಿ ವೇದನಿತ್ಯತ್ವವಿಷಯದಲ್ಲೂ ಕೂಡ ಪುನರುಕ್ತಿದೋಷವು ಬರಬೇಕಾದೀತು.

**प्रकाशः** – पूर्वपक्षस्य सूत्रावतारिकारूपस्य सूत्रपदनिवर्त्यस्यैव वक्तव्यत्वादेवंरूप पूर्वपक्षश्च न सूत्रानुगुण इत्याह – **किञ्चेति ।।**

ಮತ್ತು ಪೂರ್ವಪಕ್ಷವು ಸೂತ್ರಕ್ಕೆ ಅವತಾರಿಕೆ ಆಗಿರುತ್ತದೆ. ಆದ್ದರಿಂದ ಸೂತ್ರಪದದಿಂದ ನಿವರ್ತ್ಯವಾಗುವಂತಹ ಪೂರ್ವಪಕ್ಷವನ್ನೇ ಹೇಳಬೇಕು. ನೀವು ಹೇಳುತ್ತಿರುವ ಪೂರ್ವಪಕ್ಷವು ಸೂತ್ರಪದಗಳಿಂದ ನಿವರ್ತ್ಯವಾಗದೇ ಸೂತ್ರಕ್ಕೆ ಅನನುಗುಣವಾಗಿದೆಯೆಂದು 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – मोक्षहेतुशाब्दापरोक्षज्ञानस्यानधीयाने शूद्रेऽपि सम्भवात्सिद्धान्तोऽप्ययुक्त इत्याह – **अपि चेति ।।**

ಶಬ್ದದಿಂದ ಅಪರೋಕ್ಷಜ್ಞಾನ ಬರುತ್ತದೆಂದು ಅದ್ವೈತಿಗಳು ಒಪ್ಪಿರುತ್ತಾರೆ. ವಿಷಯದಲ್ಲಿ ಪ್ರತ್ಯಕ್ಷವಾಗುವ ಅರ್ಹತೆಯಿದ್ದರೆ ಶಬ್ದದಿಂದಲೇ ಅಪರೋಕ್ಷಜ್ಞಾನ ಬರುತ್ತದೆಂದು ಒಪ್ಪಿರುವಾಗ ಶೂದ್ರನಲ್ಲೂ ಸಹ 'ತತ್ವಮಸಿ' ಇತ್ಯಾದಿ ಶಬ್ದವನ್ನು ಕೇಳಿದಾಗ ಮೋಕ್ಷಕ್ಕೆ ಹೇತುವಾದ ಬ್ರಹ್ಮಜ್ಞಾನವು ಬರಬೇಕಾದೀತು. ಆದ್ದರಿಂದ ಸಿದ್ಧಾಂತವೂ ಕೂಡ ತಪ್ಪೆಂದು 'ಅಪಿ ಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – नन्वप्रतिबद्धापरोक्षज्ञानमेव मोक्षहेतुः । शूद्रस्य तु न तादृशमित्यत आह – **प्रतिबन्धेति** ।।

ಅಸಂಭಾವನಾ ಹಾಗೂ ವಿಪರೀತಶಂಕೆಗಳಿಂದ ಅಪರೋಕ್ಷಜ್ಞಾನವು ಪ್ರತಿಬದ್ಧವಾಗಿರುತ್ತದೆ. ಪ್ರತಿಬದ್ಧವಾಗದ ಅಪರೋಕ್ಷಜ್ಞಾನವಷ್ಟೇ ಮೋಕ್ಷಕ್ಕೆ ಕಾರಣ ಶೂದ್ರನಿಗೆ ಮೋಕ್ಷ ಪ್ರತಿಬಂಧಕವಾದ ಅಸಂಭಾವನಾ ಶಂಕೆ ಹಾಗೂ ವಿಪರೀತಭಾವನೆಗಳು ಇರುತ್ತದಲ್ಲವೇ? ಎಂಬ ಆಶಂಕೆಗೆ 'ಪ್ರತಿಬಂಧ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – **अदृष्टेति** ।। शूद्रस्य तदभावादिति भावः । अत एव अदृष्टविशेष-साध्यत्वादेवेत्यर्थः ।

ಶೂದ್ರನಲ್ಲಿ ಅದೃಷ್ಟವನ್ನೂ ಕೂಡ ಹೇಳಲು ಸಾಧ್ಯವಿಲ್ಲವೆಂದು ಅಭಿಪ್ರಾಯ. 'ಅತ ಏವ' ಎಂದರೆ ಅದೃಷ್ಟವಿಶೇಷದಿಂದ ಸಾಧ್ಯವಾಗುವುದರಿಂದಲೇ ಎಂದರ್ಥ.

**प्रकाशः** – ननूत्पन्नेऽपि ज्ञाने विध्यतिक्रमप्रत्यवायप्रतिबद्धत्वान्न कार्यक्षममित्यत आह – **विध्यतिक्रमेणेति** ।।

ಶೂದ್ರನಿಗೆ 'ತತ್ವಮಸಿ' ಇತ್ಯಾದಿ ವಾಕ್ಯದಿಂದ ಜ್ಞಾನವು ಹುಟ್ಟಿರಬಹುದು. ಆದರೆ ಶೂದ್ರನಿಗೆ ವೇದಾಧಿಕಾರವನ್ನು ಇಲ್ಲವೆಂಬ ವಿಧಿಯನ್ನು ಅತಿಕ್ರಮಣ ಮಾಡಿದ್ದರಿಂದ, ಪ್ರತ್ಯವಾಯವು ಬಂದಿರುತ್ತದೆ. ಈ ಪ್ರತಿಬಂಧಕವಿರುವ ಕಾರಣ, ಮೋಕ್ಷವೆಂಬ ಕಾರ್ಯಜನಕವಾಗುವುದಿಲ್ಲ ಎಂದು ಪ್ರಶ್ನಿಸಬಾರದು. ಬ್ರಹ್ಮಜ್ಞಾನವು ಎಲ್ಲವನ್ನೂ ನಿವೃತ್ತಿ ಮಾಡುವಾಗ ಈ ಪ್ರತ್ಯವಾಯವನ್ನೂ ಕೂಡ ನಿವೃತ್ತಿ ಮಾಡುತ್ತದೆಂದು 'ವಿಧ್ಯತಿಕ್ರಮೇಣ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ.

**गुरुराजीयम्** – प्रयोजनान्तरमाह – **अश्वतरीयुक्तेति** ।। **उक्तनियमेति** ।। अधीतेनैव स्वाध्यायेन जन्यब्रह्मज्ञानस्यैव मोक्षसाधनत्वमिति नियमसम्भवादित्यर्थः – **त्वयापीति** ।। तथा चात्राप्यवैद्यत्वस्याभ्युच्चयमात्रत्वापत्त्या तेन गतार्थता स्यादेवेति भावः । शूद्रस्य ब्रह्मविद्यायामनधिकारं वदन् पृष्टव्यः । किं

तत्त्वमस्यादिवाक्याच्छूद्रस्य ज्ञानमेव नोत्पद्यत उतोत्पन्नमपि निष्फलमिति । नाद्य इत्याह – **अतिक्रान्तनिषेधस्येति** ।। न चाकाङ्क्षाद्यनुसारेण वाक्यस्यार्थबोधकत्वाद-व्युत्पन्नस्य शूद्रस्य कथं वाक्यादर्थबोध इत्यत उक्तं व्युत्पन्नस्येति ।। तथापि निषेधे विद्यमाने कथं तत्र प्रवृत्तिरित्यतोऽतिक्रान्तनिषेधस्येति । दशमस्त्वमसीति वाक्यादिवेत्यनेन

व्युत्पन्नस्य शूद्रस्य दशमस्त्वमसीति वाक्याद्दशमत्वज्ञानं जायते । अन्यथा तदपि न स्यादित्यतिप्रसङ्गं सूचयति ।

ननु तत्त्वमसीति वाक्याज्जायमानं ज्ञानं ब्राह्मणादेरपरोक्षं भवति । न तथा शूद्रस्येत्यतो न शूद्रस्याधिकार इत्यत आह – **ब्राह्मणादेरिवेति** ।। शब्दजन्य-ज्ञानस्यापरोक्षत्वे विषयापरोक्षत्वस्यैव प्रयोजकत्वेन शूद्रस्यापि तत्त्वमस्यादि-वाक्याज्जायमानापरोक्षभूतं ब्रह्मविषयत्वादपरोक्षमेव । अन्यथा ब्राह्मणादेरपि तत्त्वमस्यादिवाक्यजन्यज्ञानस्यापरोक्षत्वं न स्यादित्यर्थः । ननु तथापि शूद्रस्यापरोक्षज्ञानं न सम्भवति । चित्तैकाग्र्या योग्यत्वरूपा सम्भावनाया वा विपरीतसंस्काररूपविपरीतसम्भावनाया वा प्रतिबन्धकत्वादिति चेत् तर्हि तत एव न ब्राह्मणस्याप्यपरोक्षधीः । यदि च तत्र मनननिदिध्यासनाभ्यामेवोक्तप्रतिबन्ध-निरासस्तर्हि शूद्रस्यापि तत्समानमित्याह – **प्रतिबन्धनिरासोऽपीति** ।। ननु ब्रह्मणो लोकविलक्षणत्वात्तदापरोक्ष्यस्यादृष्टसाध्यत्वाच्छूद्रे चापरोक्षप्रयोजकादृष्टाभावेन तत्साध्या-परोक्षज्ञानस्याप्यसम्भव इत्यत आह – **यदि चेति** ।। **तत एवेति** ।। शुक्तिकाज्ञानस्य सत्यनिवर्तकत्वादर्शनेऽपि ब्रह्मज्ञानस्य लोकविलक्षणत्वात्सत्यबन्धनिवर्तकत्वोपपत्त्या ज्ञाननिवर्त्यत्वेन बन्धस्य मिथ्यात्वोक्तिर्न स्यादिति भावः । द्वितीयमाशङ्कते – **नचेति** ।। अत्र वक्तव्यं ज्ञानस्य फलमज्ञाननिवृत्तिर्वोतादृष्टद्वारेशप्रसादद्वारा बन्धनिवृत्तिर्वा । नाद्य इत्याह – **अज्ञाननिवृत्त्याख्येति** ।। ननु ज्ञानस्याप्यज्ञान-निवर्तकत्वमदृष्टद्वारैव । तथा च शूद्रस्य ज्ञाने विद्यमानेऽपि द्वारभूतादृष्टाभावान्न तेनाज्ञाननिवृत्तिरूपं फलं शूद्रस्येत्यत आह – **इयं शुक्तिरितीति** ।। अन्यथा शूद्रस्येयं शुक्तिरिति वाक्यजन्यज्ञानेन शुक्तयज्ञाननिवृत्तिर्जायते सा न स्यात् । तत्रापि द्वारभूतादृष्टाभावात् । तस्मात्साक्षादेव ज्ञानस्याज्ञाननिवर्तकत्वे शूद्रस्य तत्त्वमस्यादि-वाक्यजन्यज्ञानस्याप्यज्ञाननिवर्तकत्वमावश्यकमिति भावः । अस्तु तर्हि ज्ञानस्या-

दृष्टद्वारेश्वरप्रसादद्वारा वा बन्धनिवृत्तिरेव फलमिति द्वितीयो निरवद्यत्वादित्यत आह – **अदृष्टद्वारेति** ।। परैरित्यनेन तदङ्गीकारेऽपसिद्धान्तं सूचयति ।। यस्तु वैयात्याज्ज्ञानस्य प्रसादादिद्वारैव बन्धनिवर्तकत्वं ब्रूयात्तं प्रत्याह – **अङ्गीकारे चेति** ।। **मिथ्यात्वोक्तिरयुक्तेति** ।। ज्ञानत्वेन ज्ञाननिवर्त्यत्वस्यैव मिथ्यात्वरूपत्वादित्यर्थः । ननु च शूद्रस्य तत्त्वमस्यादिवाक्याज्जातस्य ज्ञानस्याज्ञाननिवृत्त्याख्ये दृष्टफलेऽन्यानपेक्षत्वेनाज्ञाननिवृत्तावपि विध्यति क्रमेणोत्पन्नस्य प्रत्यवायेन साफल्यासम्भवादित्यत आह – **विध्यति क्रमेणेति** ।। ननु ब्राह्मण्यादिमच्छरीराभेदाध्यासातिरिक्तस्य सम्बन्धान्तरस्याभावादगत्याध्यस्तत्वमेव सम्बन्धोऽङ्गीकार्यः।



ಅದ್ವೈತಿಗಳು ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಪುನರುಕ್ತಿದೋಷವನ್ನು ಪರಿಹರಿಸಿದ್ದೇ ತಪ್ಪು. ಏಕೆಂದರೆ 'ಅವೈದ್ಯತ್ವಾದಭಾವಃ ಕರ್ಮಣಿ ಸ್ಯಾತ್' ಎಂಬ ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಲ್ಲಿಯೂ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲವೆಂದು 'ಅವೈದ್ಯತ್ವ' ಶಬ್ದದಿಂದ ಸಮರ್ಥನೆ ಮಾಡಲಾಗಿದೆ. ಪುನಃ ಇಲ್ಲಿಯೂ ಕೂಡ ಹೇಳಿದರೆ ಪುನರುಕ್ತಿಯು ಬಂದೇ ಬರುತ್ತದೆ. ಅಧ್ಯಯನವು ಪ್ರಧಾನಕರ್ಮವಾದರೆ, ಸಂಸ್ಕಾರಕರ್ಮವೆನಿಸುವುದಿಲ್ಲ. ಆವಾಗ ಜ್ಞಾನವನ್ನು ಹೇಗಾದರೂ ಸಂಪಾದನೆ ಮಾಡಬಹುದೆಂದಾಗುತ್ತದೆ. ಶೂದ್ರಾದಿಗಳೂ ಕೂಡ ಅಧ್ಯಯನವನ್ನು ಮಾಡಬಹುದೆಂದಾಗುತ್ತದೆ. ಆದರೆ ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರದ ರೂಪವೆಂದು ಹೇಳಿದಾಗ, ಶೂದ್ರನಿಗೆ ಅಧ್ಯಯನ ಮಾಡಲು ಅಧಿಕಾರವು ದೊರೆಯುವುದಿಲ್ಲ. ಹಾಗಾದಲ್ಲಿ ವೇದದಿಂದ ಪಡೆಯುವ ಜ್ಞಾನವು ಅಸಂಸ್ಕೃತ ವೇದಜನ್ಯಜ್ಞಾನರೂಪವಾಗುತ್ತದೆ. ಇದರಿಂದ ಅಪೂರ್ವದ ಉತ್ಪತ್ತಿಯು ಉಂಟಾಗುವುದಿಲ್ಲ. ಈ ವಿಷಯವನ್ನು ಬ್ರಹ್ಮಮೀಮಾಂಸೆಯಲ್ಲಿ ಮಾತ್ರ ಸಮರ್ಥನೆ ಮಾಡಲಾಗಿದೆ. ಆದರೆ ಪೂರ್ವಮೀಮಾಂಸೆಯಲ್ಲಿ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದಷ್ಟೇ ಹೇಳಿದ್ದಾರೆ. ಆದ್ದರಿಂದ ಪುನರುಕ್ತಿಯನ್ನು ಹೇಳಲು ಹೇಗೆ ಸಾಧ್ಯ ? ಎಂಬುದು ಅದ್ವೈತಿಗಳ ಆಕ್ಷೇಪ. ಆದರೆ ಪೂರ್ವಮೀಮಾಂಸೆಯಲ್ಲಿ ಅಧ್ಯಯನವು ಸಂಸ್ಕಾರರೂಪವೆಂದು ಹೇಗೆ ಸಮರ್ಥನೆ ಮಾಡಿಲ್ಲವೋ, ಅದರಂತೆ ಬ್ರಹ್ಮಮೀಮಾಂಸೆಯಲ್ಲಿಯೂ ಸಹ ಬಾದರಾಯಣರು ಸಂಸ್ಕಾರರೂಪವೆಂದು ಸಮರ್ಥನೆ ಮಾಡಿಲ್ಲ. ಅದ್ವೈತಿಗಳೂ ಸಹ 'ಸಂಸ್ಕಾರಪರಾಮರ್ಶಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ, ಉಪನಯನರೂಪ ಸಂಸ್ಕಾರವಿಲ್ಲವೆಂದಷ್ಟೇ ಹೇಳಿದ್ದಾರೆ. ಹೊರತಾಗಿ ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರರೂಪವೆಂದು ಹೇಳಿಲ್ಲ.

ಮತ್ತು ಪೂರ್ವಮೀಮಾಂಸೆಯ ಅಪಶೂದ್ರಾಧಿಕರಣದಿಂದ ಪುನರುಕ್ತಿಯನ್ನು ನೀವು ಪರಿಹರಿಸಿಕೊಂಡರೂ ಪೂರ್ವಮೀಮಾಂಸೆಯ ಮೊದಲಿನ ಧರ್ಮಜಿಜ್ಞಾಸಾಧಿಕರಣದಿಂದ ಪುನರುಕ್ತಿಯು ಬಂದೇ ಬರುತ್ತದೆ. ಏಕೆಂದರೆ ಅಲ್ಲಿ ದೃಷ್ಟಫಲವನ್ನೇ ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪಿಸಬಾರದು. ವೇದಕ್ಕೆ ವೇದಾರ್ಥತತ್ವಜ್ಞಾನವೆಂಬ ದೃಷ್ಟಫಲವನ್ನೇ ಫಲವನ್ನಾಗಿ ಹೇಳಬೇಕೆಂದು ಸಮರ್ಥನೆ ಮಾಡಿದ್ದಾರೆ.

ಅಪಶೂದ್ರಾಧಿಕರಣ (೧-೩-೯)

ಅದ್ವೈತಿಗಳ ಪೂರ್ವಪಕ್ಷವೂ ಸಹ ಸರಿಯಲ್ಲ. ಏಕೆಂದರೆ ಸಿದ್ಧಾಂತ ಮಾಡುವ ಸೂತ್ರಗಳಲ್ಲಿ ಶೂದ್ರನಿಗೆ ಉಪನಯನಸಂಸ್ಕಾರವಿಲ್ಲ. ಮತ್ತು ಅಧ್ಯಯನ ಮಾಡುವ ಅಧಿಕಾರವೂ ಸಹ ಇರುವುದಿಲ್ಲವೆಂದು ಸಮರ್ಥಿಸಲಾಗಿದೆ. ಅದಕ್ಕನುಗುಣವಾಗಿ ಶೂದ್ರನಿಗೆ ಅಧ್ಯಯನವನ್ನು ಹೇಳಬಹುದಲ್ಲವೇ? ಉಪನಯನಸಂಸ್ಕಾರವನ್ನೂ ಕೂಡ ಹೇಳಬಹುದಲ್ಲವೇ? ಎಂದೇ ಪೂರ್ವಪಕ್ಷ ಮಾಡಬೇಕು. ಅದನ್ನು ಬಿಟ್ಟು ಅಧ್ಯಯನವು ಪ್ರಧಾನಕರ್ಮವಾಗಿದೆಯೆಂದು ಪೂರ್ವಪಕ್ಷ ಮಾಡುವುದು ಯುಕ್ತವಲ್ಲ.

ಮತ್ತು 'ದಶಮತ್ವಮಸಿ' ಎಂಬ ವಾಕ್ಯದಿಂದ ಹೇಗೆ ಶಾಬ್ದಾಪರೋಕ್ಷವು ಬರುತ್ತದೋ, ಅದರಂತೆ 'ತತ್ವಮಸಿ' ಎಂಬ ವಾಕ್ಯದಿಂದ ಶಾಬ್ದಾಪರೋಕ್ಷವು ಬರುತ್ತದೆಂಬುದು ಅದ್ವೈತಿಗಳ ನಿಲುವು. ಬ್ರಾಹ್ಮಣರಿಗೆ 'ತತ್ವಮಸಿ' ಎಂಬ ವಾಕ್ಯವನ್ನು ಕೇಳಿದಾಗ ಬ್ರಹ್ಮಾಪರೋಕ್ಷವು ಬರುವಂತೆ ಶೂದ್ರರಿಗೂ ಬರಬಹುದಲ್ಲವೇ? ಅಪರೋಕ್ಷೈಕರಸನಾದ ಬ್ರಹ್ಮನಲ್ಲಿ ಅಪರೋಕ್ಷವಾಗುವಿಕೆಯೆಂಬ ಗುಣವಿರುವಾಗ ವಾಕ್ಯವನ್ನು ಕೇಳಿದ ವ್ಯಕ್ತಿಯು ಬ್ರಾಹ್ಮಣನಾದರೇನು ? ಶೂದ್ರನಾದರೇನು? ವಿಪರೀತಜ್ಞಾನ ಮೊದಲಾದ ಪ್ರತಿಬಂಧಕಗಳ ಪರಿಹಾರಕ್ಕಾಗಿ ಬ್ರಾಹ್ಮಣಾದಿಗಳು ಮನನನಿಧಿಧ್ಯಾಸಗಳಲ್ಲಿ ತೊಡಗುವಂತೆ ಶೂದ್ರನೂ ಸಹ ತೊಡಗಬಹುದಲ್ಲವೇ? ಹಾಗಾಗಿ ಶೂದ್ರನಿಗೂ ಕೂಡ 'ತತ್ವಮಸಿ' ಎಂಬ ವಾಕ್ಯವನ್ನು ಕೇಳಿದಾಗ ಮೋಕ್ಷವು ಬರಬೇಕಾದೀತು. 'ಇಯಂ ಶುಕ್ತಿಃ' ಎಂಬ ಬಾಧಜ್ಞಾನವು ಬಂದಾಗ ಶುಕ್ತಿಯ ಬಗ್ಗೆ ಇರುವ ಅಜ್ಞಾನವು ಬ್ರಾಹ್ಮಣನಿಗೆ ಹೇಗೆ ಪರಿಹಾರವಾಗುತ್ತದೋ, ಅದರಂತೆ ಶೂದ್ರನಿಗೂ ಸಹ ಪರಿಹಾರವಾಗುತ್ತದೆ. ಅದರಂತೆ 'ತತ್ವಮಸಿ' ಎಂಬ ವಾಕ್ಯದಿಂದ ಬ್ರಾಹ್ಮಣನಿಗೆ ಮೋಕ್ಷವೆಂಬ ಫಲವು ಹೇಗೆ ದೊರೆಯುತ್ತದೋ, ಅದರಂತೆ ಶೂದ್ರನಿಗೂ ಕೂಡ ಫಲವು ದೊರೆಯಲೇ ಬೇಕು. ನಮ್ಮಲ್ಲಿ ಈ ದೋಷವಿಲ್ಲ. ಏಕೆಂದರೆ ನಾವು ಜ್ಞಾನದಿಂದ ನೇರವಾಗಿ ಮೋಕ್ಷವಾಗುತ್ತದೆಂದು ಒಪ್ಪಿಲ್ಲ. ಹೊರತಾಗಿ ಅದೃಷ್ಟದ ಮೂಲಕ, ಅಥವಾ ಈಶ್ವರನ ಪ್ರಸಾದದ ಮೂಲಕ ಜ್ಞಾನವು ಬಂಧನಿವರ್ತಕವಾಗುತ್ತದೆಂದು ಒಪ್ಪಿದ್ದೇವೆ. ಆದರೆ ಅದ್ವೈತಿಗಳು ಹೀಗೊಪ್ಪದ ಕಾರಣ, ಶೂದ್ರನಿಗೆ ಈಶ್ವರನ ಪ್ರಸಾದವಿಲ್ಲವೆಂಬ ಕಾರಣದಿಂದ ಮೋಕ್ಷವಾಗುವುದಿಲ್ಲವೆಂದು ಉತ್ತರಿಸಲಾಗದು.

ಇನ್ನು ಶೂದ್ರನು ವೇದಾಧ್ಯಯನ ಮಾಡಬಾರದೆಂಬ ವಿಧಿಯಿದ್ದರೂ ಕೂಡ ಅಧ್ಯಯನವನ್ನು ಮಾಡಿದ್ದಾನೆ. ಆದ್ದರಿಂದ ಪ್ರತ್ಯವಾಯವು ಬಂದಿದೆ. ಪ್ರತ್ಯವಾಯವೆಂಬ ಪ್ರತಿಬಂಧಕವಿರುವ ಕಾರಣ ಅವನಿಗೆ ಮೋಕ್ಷವಾಗಿಲ್ಲವೆಂಬ ಉತ್ತರವನ್ನು ಅದ್ವೈತಿಗಳಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ತತ್ವಮಸಿ ಎಂಬ ವಾಕ್ಯವನ್ನು ಕೇಳಿದಾಗ ಶೂದ್ರನಿಗೆ ಮೋಕ್ಷವುಂಟಾಗಿ ಸಮಗ್ರ ಪ್ರಪಂಚವೇ ನಿವೃತ್ತವಾಗಿದೆ. ಆವಾಗ ಪ್ರಪಂಚದಲ್ಲಿ ಸೇರಿರುವ ಪ್ರತ್ಯವಾಯವೂ ಸಹ ಪರಿಹಾರವಾಗುತ್ತದೆ. ಆದ್ದರಿಂದ ಅದ್ವೈತಿಗಳ ಪೂರ್ವಪಕ್ಷವಾಗಲೀ, ಸಿದ್ಧಾಂತವಾಗಲೀ ಅತ್ಯಂತ ಅಸಾಧುವಾಗಿದೆ.



## ತತ್ತ್ವಜ್ಞಾನ ಪಡೆಯಲು ಅದ್ವೈತಿಗಳಿಗೆ ವೇದವೇ ಬೇಡ

### तात्पर्यचन्द्रिका

**किञ्च त्वयाऽध्यासभाष्ये ''तस्मादविद्यावत्पुरुषविषयाण्येव शास्त्राणि । तत्र जात्यध्यासो ब्राह्मणो यजेत'' इत्यादि वदता ब्राह्मणत्वादिमच्छरीराभेदाध्यासवत एवाधिकारस्वीकारात् ब्राह्मणीप्रभृतिषु जातानामब्राह्मणादीनामपि ब्राह्मण्याद्यध्यासवत्त्वेनाधिकारः स्यात् । विस्तृतं चैतदन्यत्र ।**

ಅನುವಾದ - ತ್ರೈವರ್ಣಿಕೇತರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸುವ ಅದ್ವೈತಿಗಳಿಗೆ ಸ್ವನ್ಯಾಯವಿರೋಧಬರುತ್ತದೆ. ಅದು ಹೀಗೆ -

ಅದ್ವೈತಿಗಳಾದ ನೀವು ಅಧ್ಯಾಸಭಾಷ್ಯದಲ್ಲಿ 'ತಸ್ಮಾದವಿದ್ಯಾವತ್ ಪುರುಷವಿಷಯಾಣ್ಯೇವ ಶಾಸ್ತ್ರಾಣಿ । ತತ್ರ ಜಾತ್ಯಧ್ಯಾಸೋ ಬ್ರಾಹ್ಮಣೋ ಯಜೇತ' ಇತ್ಯಾದಿಯಾಗಿ ಹೇಳಿದ್ದೀರಿ. ಅಂದರೆ ಶಾಸ್ತ್ರಗಳೆಲ್ಲವೂ ಅಜ್ಞಾನವುಳ್ಳ ಪುರುಷರನ್ನು ವಿಷಯೀಕರಿಸುತ್ತಿದೆ. 'ಬ್ರಾಹ್ಮಣೋ ಯಜೇತ' ಇತ್ಯಾದಿ ವಾಕ್ಯಗಳು ಬ್ರಾಹ್ಮಣರಿಗೆ ಯಾಗವನ್ನು ವಿಧಾನ ಮಾಡುತ್ತಿವೆ. ಬ್ರಾಹ್ಮಣ್ಯಾದಿಗಳು ಜಾತ್ಯಧ್ಯಾಸ ರೂಪವಾದವುಗಳು ಎಂದರ್ಥ. ಹೀಗೆ ಹೇಳಿದ್ದರಿಂದ, ಬ್ರಾಹ್ಮಣತ್ವ ಮೊದಲಾದ ಜಾತಿಗಳು ಕೇವಲ ಶರೀರಕ್ಕೆ ಸಂಬಂಧಪಟ್ಟಿವೆ. ಶರೀರವು ಆತ್ಮನಲ್ಲಿ ಅಧ್ಯಸ್ತವಾಗಿದೆ. ಹಾಗಾಗಿ ಬ್ರಾಹ್ಮಣ್ಯಾದಿಗಳುಳ್ಳ ಶರೀರದ ಅಭೇದಾಧ್ಯಾಸವುಳ್ಳ ವ್ಯಕ್ತಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಹೇಳಿದಂತಾಯಿತು. ಹಾಗಾದಲ್ಲಿ ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರಪುರುಷನಿಂದ ಹುಟ್ಟಿದ ವ್ಯಕ್ತಿಯು ಚಂಡಾಲನೆನಿಸುತ್ತಾನೆ. ಇವನಿಗೂ ಕೂಡ ಯಾಗಾಧಿಕಾರವು ಸಿದ್ಧವಾಗಬೇಕಾದೀತು. ಏಕೆಂದರೆ ಬ್ರಾಹ್ಮಣಸ್ತ್ರೀಯಲ್ಲಿ ತಾನು ಹುಟ್ಟಿರುವೆನೆಂಬ ಕಾರಣದಿಂದ ತನ್ನಲ್ಲಿ ಬ್ರಾಹ್ಮಣ್ಯವನ್ನು ಅಧ್ಯಾಸ ಮಾಡಿಕೊಂಡಿದ್ದಾನೆ. ಯಾವರೀತಿಯಾಗಿ ಬ್ರಾಹ್ಮಣಾದಿಗಳಲ್ಲಿ ಬ್ರಾಹ್ಮಣತ್ವವುಳ್ಳ ಶರೀರದ ಅಭೇದಾಧ್ಯಾಸವು ಅಧಿಕಾರಿ - ಪುರುಷನಲ್ಲಿರುತ್ತದೋ, ಅದರಂತೆ ಇವನಲ್ಲಿಯೂ ಸಹ ಬ್ರಾಹ್ಮಣ್ಯದ ಅಧ್ಯಾಸವಿರುವ ಕಾರಣ ಯಾಗಾದಿ ಕರ್ಮಗಳಲ್ಲಿ ಅಧಿಕಾರಿಯಾಗಬೇಕಾದೀತು. ಇನ್ನೂ ಹೆಚ್ಚಿನ ವಿಚಾರವನ್ನು ನ್ಯಾಯಾಮೃತದ ದೇಹಾತ್ಮೈಕ್ಯಾಧ್ಯಾಸಭಂಗದಲ್ಲಿ ನೋಡಬಹುದು.

**किञ्च –**

**ऋजूपायेन तर्केण तत्वनिश्चयसम्भवे ।**
**विप्रादेरपि वक्रैः किं साध्यं वेदविचारणैः ।। १ ।।**

ಅಪಶೂದ್ರಾಧಿಕರಣ (೧-೩-೯)

ಮತ್ತು

ಋಜೂಪಾಯೇನ ತರ್ಕೇಣ ತತ್ವನಿಶ್ಚಯಸಂಭವೇ ।
ವಿಪ್ರಾದೇರಪಿ ವಕ್ರೈಃ ಕಿಂ ಸಾಧ್ಯಂ ವೇದವಿಚಾರಣೈಃ ॥೧॥

ಸುಲಭವಾದ ತರ್ಕಮಾರ್ಗದಿಂದಲೇ ತತ್ವವು ನಿಶ್ಚಯವಾಗುತ್ತಿರುವಾಗ ವಕ್ರವಾದ ವೇದವಿಚಾರವೆಂಬ ಮಾರ್ಗದಲ್ಲಿ ಬ್ರಾಹ್ಮಣರೂ ಕೂಡ ಏಕೆ ಸಾಗಬೇಕು?

**त्वन्मते मोक्षसाधनस्य, चिन्मात्रं तत्वमन्यदारोपितमिति ज्ञानस्य, खण्डनकारादिभिर्विज्ञानवाद्यादिभिर्वोक्तेन प्रमाणप्रमेयाद्यनुपपत्तिरूप तर्कानुगृहीतेन दृश्यत्वाद्यनुमानरूपेण ऋजूपायेन सिद्धौ किं ब्राह्मणादेरपि मानान्तराप्राप्तं सर्वकर्तृत्वं सर्वज्ञत्वादिकं प्रापय्य, पुनस्तन्निषेधमुखेन चिन्मात्रप्रतिपादकेनानेकनियमपूर्वकाध्ययन-शमदमादिसापेक्षेण वक्त्रोपायेन वेदान्तविचारेण ।**

ನಿಮ್ಮ ಮತದಲ್ಲಿ ಚಿನ್ಮಾತ್ರವು ತತ್ವವಾಗಿದೆ. ಉಳಿದೆಲ್ಲವೂ ಆರೋಪಿತವಾಗಿದೆ ಎಂಬ ಜ್ಞಾನವೇ ಮೋಕ್ಷಕ್ಕೆ ಸಾಧನವಾದದ್ದು. ಈ ಜ್ಞಾನವು ದೃಶ್ಯತ್ವಾದ್ಯನುಮಾನಗಳೆಂಬ ಸುಲಭಮಾರ್ಗದಿಂದಲೇ ದೊರೆಯುತ್ತದೆ. ಖಂಡನಕಾರನಾದ ಶ್ರೀಹರ್ಷನು ಹೇಳಿದಂತೆ ಅಥವಾ ವಿಜ್ಞಾನವಾದಿಗಳಾದ ಬೌದ್ಧರು ಹೇಳಿದಂತೆ ಪ್ರಮಾಣ, ಪ್ರಮೇಯ ಎಲ್ಲವೂ ಅನುಪಪನ್ನವಾಗುತ್ತವೆಂಬ ತರ್ಕದಿಂದ ದೃಶ್ಯತ್ವಾನುಮಾನವು ಅನುಗೃಹೀತವಾಗಿದೆ. ಇಂತಹ ಅನುಮಾನವೆಂಬ ಸುಲಭಮಾರ್ಗದಿಂದಲೇ ಚಿನ್ಮಾತ್ರವು ಸತ್ಯ, ಉಳಿದದ್ದೆಲ್ಲವೂ ಆರೋಪಿತವೆಂಬ ತತ್ವನಿಶ್ಚಯವಾಗುತ್ತದೆ. ಹೀಗಿರುವಾಗ ವಕ್ರಮಾರ್ಗವನ್ನೇಕೆ ಅನುಸರಿಸಬೇಕು. ಬ್ರಾಹ್ಮಣಾದಿಗಳಿಗೂ ಕೂಡ ಬೇರೆ ಪ್ರಮಾಣಗಳಿಂದ ಸಿದ್ಧವಾಗದ ಸರ್ವಕರ್ತೃತ್ವ, ಸರ್ವಜ್ಞತ್ವ ಮೊದಲಾದವುಗಳನ್ನು ಮೊದಲು ಕಷ್ಟದಿಂದ ತಿಳಿದು, ಅನಂತರ 'ನೇಹಾನಾಸ್ತಿಕಿಂಚನ' ಎಂಬ ಶ್ರುತಿಯಿಂದ ತಿಳಿದದ್ದೆಲ್ಲವೂ ಕೂಡ ಸುಳ್ಳು ಎಂದು ಅರಿಯಬೇಕು. ಮತ್ತು ಚಿನ್ಮಾತ್ರನನ್ನು ಪ್ರತಿಪಾದನೆ ಮಾಡುವ ಅನೇಕ ನಿಯಮಗಳನ್ನೊಳಗೊಂಡ ಅಧ್ಯಯನ, ಶಮ, ದಮ ಮೊದಲಾದವುಗಳಿಂದ ಕೂಡಿರುವಂತಹ ಬಹಳ ಕಷ್ಟವಾದ ವೇದಾಂತವಿಚಾರವೆಂಬ ವಕ್ರಮಾರ್ಗದಿಂದ ಚಿನ್ಮಾತ್ರವೂ ಸತ್ಯ. ಉಳಿದೆಲ್ಲವೂ ಆರೋಪಿತವೆಂಬ ಜ್ಞಾನವನ್ನು ಏಕೆ ಪಡೆಯಬೇಕು?

**नच खण्डनाद्युक्तस्तर्को दृश्यत्वानुमानं च श्रुतिसहकार्येव । नतु शब्दैकसमधिगम्ये तत्वे स्वतन्त्रमिति वाच्यम् ।**

ಶಂಕೆ - ಖಂಡನಕಾರನು ಹೇಳಿದ ತರ್ಕಗಳು ಅಥವಾ ವಿಜ್ಞಾನವಾದಿಗಳು ಹೇಳಿರುವ ತರ್ಕಗಳು ಮತ್ತು ದೃಶ್ಯತ್ವಾನುಮಾನಗಳು ಶ್ರುತಿಗೆ ಸಹಕಾರಿಯಾಗುತ್ತವೆ ಹೊರತು, ಶಬ್ದೈಕಸಮಧಿಗಮ್ಯವಾದ

ತತ್ವದ ನಿರ್ಧಾರದಲ್ಲಿ ಸ್ವತಂತ್ರವಾಗಿ ಪ್ರಮಾಣಗಳಾಗುವುದಿಲ್ಲ. ಆದ್ದರಿಂದ ಶಬ್ದದಿಂದಲೇ ತತ್ವನಿಶ್ಚಯವಾಗಬೇಕಲ್ಲವೇ?

**तथात्वे वाक्यार्थ निर्णायकोपक्रमाद्यतिरेकेण यागादेः स्वर्गादिसाधनतायामिव चिन्मात्रेतरस्य मिथ्यात्वेऽप्यनुमानोक्त्ययोगात् ।**

ಸಮಾಧಾನ - ಹಾಗಾದಲ್ಲಿ ವಾಕ್ಯಾರ್ಥನಿರ್ಣಾಯಕವಾದ ಉಪಕ್ರಮಾದಿಗಳಷ್ಟೇ ಸಾಕು ಮಿಥ್ಯಾತ್ವಾನುಮಾನವನ್ನೂ ಕೂಡ ನೀವು ಪ್ರಯೋಗಿಸುವುದು ತಪ್ಪಾಗುತ್ತದೆ. ಯಾವರೀತಿಯಾಗಿ, ಯಾಗಕ್ಕೆ ಸ್ವರ್ಗಸಾಧನತ್ವವು ಅಪೂರ್ವವಿಧಿಯಾದ್ದರಿಂದ ಯಾವ ಪ್ರಮಾಣದಿಂದಲೂ ಪ್ರಾಪ್ತವಾಗುವುದಿಲ್ಲವೋ, ಅದರಂತೆ ಚಿನ್ಮಾತ್ರಕ್ಕಿಂತ ಇತರವಾದದ್ದೆಲ್ಲವೂ ಮಿಥ್ಯಾಭೂತವಾಗಿದೆಯೆಂದು ಸಮರ್ಥಿಸಲು ಅನುಮಾನವೂ ಕೂಡ ಸಾಧಕವಾಗುವುದಿಲ್ಲ.

**नच शब्दे प्रत्यक्षेण प्रतिबद्धे प्रतिबन्धनिरासायानुमानोक्तिः ।**

ಶಂಕೆ - ಚಿನ್ಮಾತ್ರಸ್ವರೂಪವು ಸತ್ಯವಾಗಿದೆಯೆಂಬುದಾಗಲೀ, ಚಿನ್ಮಾತ್ರೇತರಸ್ವರೂಪದ ಮಿಥ್ಯತ್ವವಾಗಲಿ, 'ನೇಹನಾನಾಸ್ತಿಕಿಂಚನ' ಎಂಬ ಶಬ್ದದಿಂದಷ್ಟೇ ಸಮಧಿಗಮ್ಯವಾಗಿದೆ. ಆದರೆ ಸನ್‌ಘಟಃ ಸನ್‌ಪಟಃ ಇತ್ಯಾದಿ ಪ್ರತ್ಯಕ್ಷದಿಂದ ಶಬ್ದವು ಪ್ರತಿಬದ್ಧವಾಗಿದೆ. ಪ್ರತಿಬಂಧಕವಾದ ಪ್ರತ್ಯಕ್ಷವನ್ನು ನಿರಾಕರಣೆ ಮಾಡಲು ಅನುಮಾನವು ಸಹಕಾರಿಯಾಗಿದೆಯಲ್ಲವೇ?

**शब्दप्रतिबन्धकेन प्रत्यक्षेणानुमानस्य सुतरां प्रतिबन्धात् ।**

ಸಮಾಧಾನ - ಇದು ತಪ್ಪು. ಪ್ರತ್ಯಕ್ಷವು ಶಬ್ದಕ್ಕೆ ಪ್ರತಿಬಂಧಕವಾದ ಮೇಲೆ ಅನುಮಾನವನ್ನೂ ಕೂಡ ಸುತರಾಂ ಬಾಧಿಸುತ್ತದೆ. ಶಬ್ದವನ್ನೇ ಬಾಧಿಸಿದ ಮೇಲೆ ಅನುಮಾನವನ್ನು ಬಾಧಿಸದೇ ಇರುತ್ತದೇನು !

**नच प्रत्यक्षादेः स्वरूपतो विषयतश्च दुर्निरूपत्वव्युत्पादकैः खण्डनतर्कैः शब्द-विरोधिप्रत्यक्षाद्यप्रामाण्यसिद्धिरिति वाच्यम् ।**

ಶಂಕೆ - 'ಅನುಮಾನ' ಎಂದರೆ ದೃಶ್ಯತ್ವಾನುಮಾನವಲ್ಲ. ಏಕೆಂದರೆ ಈ ಅನುಮಾನಕ್ಕೆ ಪ್ರತ್ಯಕ್ಷವನ್ನು ಖಂಡಿಸುವ ಸಾಮರ್ಥ್ಯವಿಲ್ಲ. ಹೊರತಾಗಿ ಖಂಡನಕಾರನಾದ ಶ್ರೀಹರ್ಷನು ಹೇಳಿದ ತರ್ಕಗಳನ್ನೇ ಅನುಮಾನವೆಂದು ವಿವಕ್ಷಿಸುತ್ತೇವೆ. ಆ ತರ್ಕಗಳು ಸ್ವರೂಪತಃ ವಿಷಯತಃ ಪ್ರತ್ಯಕ್ಷಕ್ಕೆ ದುರ್ನಿರೂಪತ್ವವನ್ನು ಸಮರ್ಥಿಸುತ್ತವೆ. ಅಂತಹ ಪ್ರಬಲವಾದ ತರ್ಕಗಳಿಂದ ಶಬ್ದವಿರೋಧಿಯಾದ ಪ್ರತ್ಯಕ್ಷಗಳನ್ನೂ ಕೂಡ ಬಾಧಿಸಬಹುದು. ಇದರಿಂದ ಪ್ರತ್ಯಕ್ಷಶಬ್ದಗಳೆಲ್ಲವೂ ಅಪ್ರಮಾಣವೆಂದು ಸಿದ್ಧವಾಗುತ್ತದಲ್ಲವೇ?

**शब्दस्यापि स्वरूपतो विषयतश्च दुर्निरूपत्वव्युत्पादकैस्तर्कैरेव प्रत्यक्षविरोधिशब्दाप्रामाण्यस्याप्यापातात् ।**

ಸಮಾಧಾನ - ಶ್ರೀಹರ್ಷನು ಹೇಳಿದ ತರ್ಕಗಳು ಪ್ರತ್ಯಕ್ಷಕ್ಕೆ ಸ್ವರೂಪತಃ ವಿಷಯತಃ ದುರ್ನಿರೂಪತ್ವವನ್ನು ಹೇಗೆ ಸಮರ್ಥಿಸುತ್ತವೋ ಅದರಂತೆ ಶಬ್ದಕ್ಕೂ ಕೂಡ ಸಮರ್ಥಿಸುತ್ತವೆ. ಅಂದರೆ ಶಬ್ದಪ್ರಮಾಣವೂ ಸ್ವರೂಪತಃ ವಿಷಯತಃ ದುರ್ನಿರೂಪವೆಂದು ಅವನೇ ಹೇಳಿದ್ದಾನೆ. ಆವಾಗ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯ ಬಂದಂತೆ ಶಬ್ದಕ್ಕೂ ಅಪ್ರಾಮಾಣ್ಯ ಬರುತ್ತದೆ.

**तस्माच्छब्दप्रामाण्योपयुक्ताकाङ्क्षायोग्यतादेः शब्दप्रतिपाद्यब्रह्मणश्च निर्वचननिरासमुखेन शब्दप्रतिकूलः खण्डनादितर्को न शब्दसहकारी ।**

ಆದ್ದರಿಂದ ಖಂಡನಕಾರನು ಹೇಳುವ ತರ್ಕಗಳು ಶಬ್ದಕ್ಕೆ ಸಹಕಾರಿಯಾಗದೇ ಪ್ರತಿಕೂಲವೇ ಆಗಿವೆ. ಏಕೆಂದರೆ ಶಬ್ದಪ್ರಾಮಾಣ್ಯಕ್ಕೆ ಉಪಯುಕ್ತವಾದ ಆಕಾಂಕ್ಷಾಯೋಗ್ಯತಾದಿಗಳನ್ನೂ ಕೂಡ ತರ್ಕದಿಂದ ಅವನು ಖಂಡನೆ ಮಾಡುತ್ತಾನೆ. ಸಮಾನನ್ಯಾಯದಿಂದ ಶಬ್ದಪ್ರತಿಪಾದ್ಯನಾದ ಬ್ರಹ್ಮನ ಸ್ವರೂಪವನ್ನೂ ಸಹ ಸ್ವರೂಪತಃ ವಿಷಯತಃ ನಿರೂಪಣೆ ಮಾಡಲು ಬರುವುದಿಲ್ಲವೆಂದು ಖಂಡನೆ ಮಾಡಬಹುದು. ಇಂತಹ ತರ್ಕಗಳಿಂದ ಶ್ರುತಿಗೆ ಸಾಧಕತ್ವವನ್ನು ಹೇಳಲು ಸಾಧ್ಯವಾಗುವುದಿಲ್ಲ.

**यदि च ब्रह्मनिर्वचननिरासितर्को न ब्रह्मस्वरूपविरोधी तर्हि द्रव्यगुणादिनिर्वचननिरासितर्कोऽपि न द्रव्यादिस्वरूपविरोधीति निर्वचननिरासो निष्फलः स्यात् ।**

ಒಂದು ವೇಳೆ ಬ್ರಹ್ಮನ ನಿರ್ವಚನವನ್ನು ತರ್ಕಗಳು ನಿರಾಸ ಮಾಡಿಯೂ ಬ್ರಹ್ಮಸ್ವರೂಪವನ್ನು ವಿರೋಧಿಸುವುದಿಲ್ಲವೆಂದು ಹೇಳುವುದಾದರೆ, ಆವಾಗ ದ್ರವ್ಯ, ಗುಣ, ಕರ್ಮ ಮೊದಲಾದವುಗಳನ್ನು ನಿರಾಸ ಮಾಡುವುದಾದರೂ, ಅದೇ ತರ್ಕಗಳು ದ್ರವ್ಯಾದಿ ಸ್ವರೂಪವನ್ನು ನಿರಾಕರಿಸುವುದಿಲ್ಲವೆಂದೂ ಕೂಡ ಹೇಳಬಹುದಲ್ಲವೇ? ಆವಾಗ ಯಾವುದೇ ಪದಾರ್ಥಗಳಿಗೆ ಸ್ವರೂಪತಃ ಮಿಥ್ಯಾತ್ವವು ಸಿದ್ಧವಾಗದ ಕಾರಣ ತರ್ಕವನ್ನು ಪ್ರಯೋಗಿಸಲು ಹೊರಟ, ಪ್ರಯಾಸವೆಲ್ಲವೂ ವ್ಯರ್ಥವಾಗುತ್ತದೆ.

**नच तार्किकादिरीतिं बाधितुं तान्प्रति खण्डनतर्कोक्तिर्न त्वद्वैतं साधयितुमिति वाच्यम् ।**

ಶಂಕೆ - ಶ್ರೀಹರ್ಷನು ಪ್ರಯೋಗಿಸಿದ ತರ್ಕಗಳೆಲ್ಲವೂ ತಾರ್ಕಿಕರ ರೀತಿಯನ್ನು ಬಾಧಿಸಲು ಹೊರಟಿವೆ ಹೊರತು, ಅದ್ವೈತವನ್ನು ಸಾಧಿಸುವುದಕ್ಕಾಗಿ ಅಲ್ಲವಲ್ಲವೇ?

ಪರಿಪೂರ್ಣಚಂದ್ರಿಕಾ

**स्वव्याघातकानां ब्रह्मप्रमाणभेदादि निरासितर्काणां तैर्बाधकत्वानङ्गीकारात् । तैरेव तर्कैरद्वैतप्रमाणोपनिषद्रीतेरपि बाधापाताच्च ।**

ಸಮಾಧಾನ - ಇದು ತಪ್ಪು. ಶ್ರೀಹರ್ಷನು ಹೇಳಿದ ತರ್ಕಗಳೆಲ್ಲವೂ ಸ್ವವ್ಯಾಘಾತಕವಾಗಿವೆ. ತನ್ನನ್ನೇ ನಾಶ ಮಾಡುವಂತಹ ತರ್ಕಗಳಿಗೆ ಇನ್ನೊಬ್ಬರ ತರ್ಕಗಳನ್ನು ನಿರಾಕರಣೆ ಮಾಡುವ ಸಾಮರ್ಥ್ಯವೇ ಇರುವುದಿಲ್ಲ. ಬ್ರಹ್ಮ, ಪ್ರಮಾಣ, ಭೇದ ಇವುಗಳನ್ನು ನಿರಾಸ ಮಾಡುವ ಸ್ವವ್ಯಾಘಾತಕವಾದ ತರ್ಕಗಳಿಗೆ ಬಾಧಕತ್ವವನ್ನು ಅಂಗೀಕರಿಸ[illegible]ದು. ಹೊರತಾಗಿ ಸ್ವವ್ಯಾಘಾತಕವಾದ ಆ ತರ್ಕಗಳಿಂದಲೇ ಅದ್ವೈತ, ಪ್ರಮಾಣ ಉಪನಿಷದ್ ರೀತಿಯೇ ಬಾಧಿತವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಋಜೂಪಾಯದಿಂದಲೇ ತತ್ವನಿಶ್ಚಯವಾಗಲು ಬರುವಾಗ ವಕ್ರಮಾರ್ಗವನ್ನು ಅನುಸರಿಸಬಾರದು.

**प्रकाशः –**

**त्रैवर्णिकेतरस्याधिकारनिषेधस्स्वन्यायविरुद्धश्च** । अतोऽपि न सिद्धान्तो युक्त इत्याह – **किञ्चेति** ।।

ವಿವರಣೆ - ಅದ್ವೈತಿಗಳು ತ್ರೈವರ್ಣಿಕೇತರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥನೆ ಮಾಡಿರುತ್ತಾರೆ. ಇದು ಸ್ವನ್ಯಾಯವಿರುದ್ಧವಾಗಿದೆ. ಆದ್ದರಿಂದಲೂ ಅದ್ವೈತಿಗಳ ಸಿದ್ಧಾಂತವು ಅಯುಕ್ತವಾಗಿದೆಯೆಂದು ಸಮರ್ಥನೆ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः – ब्राह्मणीक्षत्रियावैश्यास्वब्राह्मणादिभ्यो जातानामित्यर्थः** । क्षेत्रस्य ब्राह्मण्यादिना तेषु ब्राह्मणत्वादिजात्यध्याससम्भवादिति भावः । अन्यत्र न्यायामृते देहात्मैक्याध्यासभङ्ग इत्यर्थः । एवं मोक्षहेतुज्ञानस्य स्वाध्यायजन्यत्वमुपेत्य तस्य त्वन्मते शूद्रेऽपि सम्भवादनधिकारसिद्धान्तो न युक्त इत्युक्तम् ।

ಬ್ರಾಹ್ಮಣಸ್ತ್ರೀ, ಕ್ಷತ್ರಿಯಸ್ತ್ರೀ, ವೈಶ್ಯಸ್ತ್ರೀ ಇವರಲ್ಲಿ ಶೂದ್ರರಿಂದ ಹುಟ್ಟಿದ ಮಗು ಚಂಡಾಲಜನ್ಮವನ್ನು ತಾಳುತ್ತದೆ. ಆದರೆ ಕ್ಷೇತ್ರ ಎನಿಸಿದ ಬ್ರಾಹ್ಮಣೀ ಮೊದಲಾದವರಲ್ಲಿ ಬ್ರಾಹ್ಮಣ್ಯವಿರುವ ಕಾರಣ, ಹುಟ್ಟಿದ ವ್ಯಕ್ತಿ ತನ್ನಲ್ಲಿಯೂ ಕೂಡ ಬ್ರಾಹ್ಮಣ್ಯವನ್ನು ಅಧ್ಯಾಸ ಮಾಡಿಕೊಳ್ಳುತ್ತಾನೆ. ಅಂತಹ ವ್ಯಕ್ತಿಗೂ ವೇದವಿದ್ಯಾಧಿಕಾರವು ಬರಬೇಕಾದೀತು ಎಂಬುದು ವಾಕ್ಯದ ಅಭಿಪ್ರಾಯ. 'ಅನ್ಯತ್ರ' ಎಂದರೆ ನ್ಯಾಯಾಮೃತದ ದೇಹಾತ್ಮೈಕ್ಯಧ್ಯಾಸ ಭಂಗಪ್ರಕರಣದಲ್ಲಿ ಎಂದರ್ಥ.

ಹೀಗೆ ಮೋಕ್ಷಹೇತುವಾದ ಜ್ಞಾನವು ಸ್ವಾಧ್ಯಾಯದಿಂದ ಹುಟ್ಟುತ್ತದೆಂದು ಅಂಗೀಕರಿಸಿ, ಶೂದ್ರನಿಗೂ ಕೂಡ ಇಂತಹ ಜ್ಞಾನವು ಬರಬಹುದೆಂದು ಸಮರ್ಥನೆ ಮಾಡುವ ಮೂಲಕ, ಶೂದ್ರರಿಗೆ ಅಧಿಕಾರವಿಲ್ಲವೆಂದು ಅದ್ವೈತಿಗಳಿಂದ ಸಮರ್ಥಿಸಲಾಗದೆಂದು ಅವರ ಸಿದ್ಧಾಂತವನ್ನು ನಿರಾಕರಣೆ ಮಾಡಿದರು.

**प्रकाशः** – इदानीं विनापि स्वाध्यायमन्यस्मादपि जाताज्ज्ञानान्मोक्षसम्भवान्मोक्षहेतुज्ञाने शूद्रोऽधिक्रियेत । नच त्रैवर्णिकानां वेदजन्यमेव तथा दृष्टमिति वाच्यम् । तत्राप्येवमेवोपपत्तेरित्याह – **किञ्चेत्यादिना** ।।

ಪ್ರಕೃತ ಸ್ವಾಧ್ಯಾಯವನ್ನು ಮಾಡದಿದ್ದರೂ ಬೇರೆ ಉಪಾಯಗಳಿಂದ ತತ್ತ್ವಜ್ಞಾನವನ್ನು ಪಡೆದು ಮೋಕ್ಷವನ್ನು ಪಡೆಯಬಹುದು.. ಆದ್ದರಿಂದ ಮೋಕ್ಷಹೇತುವಾದ ತತ್ತ್ವಜ್ಞಾನದಲ್ಲಿ ಶೂದ್ರನಿಗೆ ಅಧಿಕಾರವಿದೆಯೆಂದು ಸಮರ್ಥನೆ ಮಾಡುತ್ತಿದ್ದಾರೆ.

ತ್ರೈವರ್ಣಿಕರಲ್ಲಿ ವೇದದಿಂದಲೇ ತತ್ತ್ವಜ್ಞಾನ ಹುಟ್ಟುವುದು ಕಾಣಿಸುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ತ್ರೈವರ್ಣಿಕರೂ ಕೂಡ ವೇದವನ್ನು ಅಧ್ಯಯನ ಮಾಡದಿದ್ದರೂ ತತ್ತ್ವಜ್ಞಾನವನ್ನು ಸಂಪಾದನೆ ಮಾಡಬಹುದೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – **तर्केणेति** ।। प्रमाणादिनिर्वचनानुपपत्त्यादिरूपतर्केणेत्यर्थः – **किं वेदान्तेति** ।। तथा च शूद्रस्यापि तज्जन्यज्ञानं सम्भवतीत्यधिकारस्स्यादित्यर्थः ।

'ತರ್ಕೇಣ' ಎಂದರೆ ಪ್ರಮಾಣದಿಗಳನ್ನು ನಿರ್ವಚನ ಮಾಡಲು ಸಾಧ್ಯವಿಲ್ಲವೆಂಬ ಅನುಪಪತ್ತಿರೂಪವಾದ ತರ್ಕದಿಂದ ಎಂದರ್ಥ. 'ಕಿಂ ವೇದಾಂತ' ಎಂದು ಹೇಳಿದ್ದರಿಂದ ಶೂದ್ರನಿಗೂ ಕೂಡ ತರ್ಕದಿಂದ ತತ್ತ್ವಜ್ಞಾನವು ಹುಟ್ಟಬಹುದಾದ್ದರಿಂದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಯುಕ್ತವಾಗುತ್ತದೆಂದು ಅಭಿಪ್ರಾಯ.

**प्रकाशः** – नन्वनुमानं न स्वातन्त्र्येण ज्ञानजनकम् । किन्तु शब्दोपसर्जनतया। अतो न दोष इत्याशङ्क्याह – **नचेति** ।।

ಅನುಮಾನವು ಸ್ವತಂತ್ರವಾಗಿ ತತ್ತ್ವಜ್ಞಾನವನ್ನು ಹುಟ್ಟಿಸುವುದಿಲ್ಲ. ಹೊರತಾಗಿ ಶಬ್ದಕ್ಕೆ ಸಹಕಾರಿಯಾಗುವ ಮೂಲಕ ಜ್ಞಾನವನ್ನು ಹುಟ್ಟಿಸುತ್ತದೆ. ಆದ್ದರಿಂದ ಹೇಗೆ ಆಕ್ಷೇಪ ಮಾಡುತ್ತೀರಿ ? ಎಂಬ ಶಂಕೆಯನ್ನು 'ನಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – अनुमानोक्तेरुपयोगमाशंक्याह – **नचेति** ।। प्रयोजनान्तरमाशङ्कते – **नच प्रत्यक्षादेरिति** ।। उपयोगान्तरमाशङ्कते – **नच तार्किकेति** ।। स्वव्याघातकत्वं व्यनक्ति – **तैरिति** ।।

ಪರಿಪೂರ್ಣಚಂದ್ರಿಕಾ

ಅನುಮಾನ ಹೇಳಿದ್ದಕ್ಕೆ ಉಪಯೋಗವನ್ನು 'ನಚ' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ. ಪ್ರಯೋಜನಾಂತರವನ್ನು 'ನಚ ಪ್ರತ್ಯಕ್ಷಾದೇಃ' ಎಂಬ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಉಪಯೋಗಾಂತರವನ್ನು 'ನಚ ತಾರ್ಕಿಕ' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ. ಸ್ವವ್ಯಾಘಾತಕತ್ವವನ್ನು 'ತೈಃ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**गुरुराजीयम्** – तत्र प्राप्तानुपपत्तिपरिहारस्त्वावयोः समान इत्यत आह – **विस्तृतं चैतदिति ।।** संयोगस्यात्मविभुत्वपक्षे सर्वदेहेषु स्वस्वामिभावस्य च भृत्यदेहे सत्त्वेऽपीच्छाविधायित्वस्यातुरादिदेहेष्वसत्त्वेऽपि साक्षात्स्वस्वामिभावस्य वा तदिन्द्रियाश्रयत्वस्य वा साक्षात्प्रयत्नजन्यक्रियाश्रयत्वस्य वा तद्भोगायतनत्वस्य वा तत्कर्मार्जितत्वस्य वा सम्बन्धान्तरस्य सम्भवादित्यादिना न्यायामृते देहात्मैक्याध्यासभङ्गे विस्तृतमित्यर्थः । ब्राह्मणादेरपीत्यस्य व्यवहितेन वेदान्तविचारेणेत्यनेनान्वयः ।




ತ್ರೈವರ್ಣಿಕರನ್ನು ಬಿಟ್ಟು ಉಳಿದವರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಮರ್ಥಿಸುವ ಅದ್ವೈತಿಗಳಿಗೆ ಸನ್ಯಾಯವಿರೋಧ ಬರುತ್ತದೆ. ತಮ್ಮ ಅಧ್ಯಾಸಭಾಷ್ಯದಲ್ಲಿ ಅದ್ವೈತಿಗಳು ಬ್ರಾಹ್ಮಣ್ಯಾದಿಗಳೆಲ್ಲವನ್ನೂ ಅಧ್ಯಸ್ತವಾಗಿವೆಯೆಂದು ಸಮರ್ಥಿಸಿದ್ದಾರೆ. ಅಂದರೆ ಕ್ಷತ್ರಿಯತ್ವ, ಬ್ರಾಹ್ಮಣ್ಯ ಮೊದಲಾದವುಗಳು ಶರೀರದ ಧರ್ಮಗಳು. ಶರೀರದ ಅಭೇದವು ಆತ್ಮನಲ್ಲಿ ಅಧ್ಯಸ್ತವಾಗಿದೆ. ಇಂತಹ ವ್ಯಕ್ತಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವನ್ನು ಅದ್ವೈತಿಗಳು ಒಪ್ಪಿರುತ್ತಾರೆ. ಹಾಗಾದರೆ ಬ್ರಾಹ್ಮಣೀ ಸ್ತ್ರೀಯಲ್ಲಿ ಶೂದ್ರನಿಂದ ಒಬ್ಬ ವ್ಯಕ್ತಿಯು ಹುಟ್ಟುತ್ತಾನೆ. ವಸ್ತುತಃ ಇವನು ಚಂಡಾಲ ಆದರೂ ತನ್ನ ತಾಯಿ, ಬ್ರಾಹ್ಮಣಿಯಾಗಿದ್ದಾಳೆಂಬ ಕಾರಣದಿಂದ ತನ್ನಲ್ಲಿಯೂ ಬ್ರಾಹ್ಮಣ್ಯವನ್ನು ಅಧ್ಯಾಸ ಮಾಡಿಕೊಳ್ಳುತ್ತಾನೆ. ಇಂತಹ ವ್ಯಕ್ತಿಗೂ ಯಾಗಾದಿಕಾರವನ್ನು ಹೇಳಬೇಕಾದೀತು.

ಮತ್ತು ಅಧ್ಯಯನದಿಂದ ತತ್ತ್ವಜ್ಞಾನವನ್ನು ಅದ್ವೈತಿಗಳಿಗೆ ಹೊಂದುವ ಅವಶ್ಯಕತೆಯೇ ಇಲ್ಲ. ಸುಲಭವಾಗಿ ತರ್ಕಗಳಿಂದಲೇ ತತ್ತ್ವಜ್ಞಾನವನ್ನು ಪಡೆಯಬಹುದು. ಹೀಗಿರುವಾಗ ಬಹಳ ಕಠಿಣಶ್ರಮವಾದ ವೇದಾಂತಾಧ್ಯಯನದಲ್ಲಿ ತೊಡಗುವುದು ವ್ಯರ್ಥ. ಏಕೆಂದರೆ ಚಿನ್ಮಾತ್ರವು ಸತ್ಯವಾಗಿದೆ. ಉಳಿದದೆಲ್ಲವೂ ಆರೋಪಿತವಾಗಿದೆ ಎಂಬ ಜ್ಞಾನವೇ ಮೋಕ್ಷಸಾಧನವೆಂದು ಅದ್ವೈತಿಗಳು ನಿರೂಪಣೆ ಮಾಡುತ್ತಾರೆ. ಇದನ್ನು ತಿಳಿಯಲು ಖಂಡನಕಾರನಾದ ಶ್ರೀಹರ್ಷನು ಪ್ರಯೋಗಿಸಿದ ತರ್ಕಗಳಿಂದಲೇ ತಿಳಿಯಬಹುದು. ಪ್ರಮಾಣ, ಪ್ರಮೇಯ ಮೊದಲಾದವುಗಳೆಲ್ಲವೂ ಮಿಥ್ಯಾಭೂತವಾಗಿವೆಯೆಂದು ಅವನು ತನ್ನ ತರ್ಕಗಳಲ್ಲಿ ಸಮರ್ಥನೆ ಮಾಡಿದ್ದಾನೆ. ಅಥವಾ ಸ್ವತಃ ಅದ್ವೈತಿಗಳೂ ಕೂಡ 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನವನ್ನು

ಪ್ರಯೋಗ ಮಾಡುತ್ತಾರೆ. ಇದರಿಂದಲೇ ಸಮಗ್ರ ಜಗತ್ತು ಮಿಥ್ಯಾಭೂತವಾಗಿದೆಯೆಂದು ತತ್ವಜ್ಞಾನವು ದೊರೆಯುತ್ತದೆ. ಹೀಗಿರುವಾಗ ವೇದಾಂತಾಧ್ಯಯನವನ್ನೇಕೆ ಮಾಡಬೇಕು. ವೇದಾಂತಗಳಿಂದ ಮೊದಲು ಬ್ರಹ್ಮನು ಸರ್ವಜ್ಞನಾಗಿದ್ದಾನೆ. ಸರ್ವಕರ್ತೃವಾಗಿದ್ದಾನೆ ಇತ್ಯಾದಿಯಾಗಿ ತಿಳಿದು, ಅನಂತರ ನೇಹನಾನಾಸ್ತಿಕಿಂಚನ' ಎಂಬ ಶ್ರುತಿಯಿಂದ ತಿಳಿದಿದ್ದೆಲ್ಲವೂ ಕೂಡ ಮಿಥ್ಯಾಭೂತವಾಗಿದೆಯೆಂಬ ಅರಿವನ್ನು ಪಡೆದು ಬಹಳ ಶ್ರಮದಿಂದ ಅಧ್ಯಯನ ಶಮದಮಾದಿಗಳನ್ನು ಮಾಡಿ ಕಷ್ಟದಿಂದ ವೇದಾಂತವಿಚಾರವನ್ನು ಮಾಡುವ ಅವಶ್ಯಕತೆಯಿಲ್ಲ.




## ರಾಮಾನುಜರ ಅಧಿಕರಣ ವಿಮರ್ಶೆ

### तात्पर्यचन्द्रिका

**केचित्तु ।। शूद्रस्योपनयनाध्ययनाभावेऽपि कर्मकाण्डापशूद्राधिकरणन्यायेन कर्मानधिकारेऽपि अध्ययनस्य स्वाध्यायसंस्कारतया लिखितपठितस्वाध्यायजन्यज्ञानस्याश्रेयः साधनत्वेऽपि "श्रावयेच्चतुरो वर्णान्" इत्यादिवचनादितिहासपुराणश्रवणेऽधिकारात्तज्जन्यब्रह्मज्ञानसम्भवादस्ति ब्रह्मोपासनेऽधिकार इति प्राप्ते,**[१]

(१) **रामानुजभाष्यम् –**

**शुगस्य तदनादरश्रवणात् तदाद्रवणात् सूच्यते हि ॥ ३३ ॥**

ब्रह्मविद्यायां शूद्रस्याप्यधिकारोऽस्ति न वेति विचार्यते । किं युक्तम्? अस्तीति । कुतः? अर्थित्वसामर्थ्यप्रयुक्तत्वादधिकारस्य, शूद्रस्यापि तत्सम्भवात् । यद्यप्यग्निविद्यासाध्येषु कर्मस्वनग्निविद्यात्वाच्छूद्रस्यानधिकारः । तथापि मनोवृत्तिमात्रत्वाद् ब्रह्मोपासनस्य तत्राधिकारोऽस्त्येव । शास्त्रीयक्रियापेक्षत्वेऽप्युपासनस्य तत्तद्वर्णाश्रमोचितक्रियाया एवापेक्षितत्वाच्छूद्रस्यापि स्ववर्णोचितपूर्ववर्णशुश्रूषयैव क्रिया भविष्यति । 'तस्माच्छूद्रो यज्ञेऽनवक्लृप्तः' इत्यप्यग्निविद्यासाध्ययज्ञादिकर्मानधिकार एव न्यायसिद्धोऽनूद्यते । नन्वनधीत वेदस्याश्रुतवेदान्तस्य ब्रह्मस्वरूपतदुपासनप्रकारानभिज्ञस्य कथं ब्रह्मोपासनं सम्भवति? उच्यते – अनधीतवेदस्याश्रुतवेदान्तवाक्यस्यापीतिहासपुराणश्रवणेनापि ब्रह्मस्वरूपतदुपासनज्ञानं सम्भवति । अस्ति च शूद्रस्यापीतिहासपुराणश्रवणानुज्ञा 'श्रावयेच्चतुरो वर्णान् कृत्वा ब्राह्मणमग्रतः' । इत्यादौ । दृश्यन्ते चेतिहासपुराणेषु विदुरादयो ब्रह्मनिष्ठाः । तथोपनिषत्स्वपि संवर्गविद्यायां शूद्रस्यापि ब्रह्मविद्याधिकारः प्रतीयते । शुश्रूषुं हि जानश्रुतिमाचार्यो रैक्वश्शूद्रेत्यामन्त्र्य तस्मै ब्रह्मविद्यामुपदिशति । 'आजहारेमाश्शूद्रानेनैव मुखेनालपयिष्यथाः' । इत्यादिना । अतश्शूद्रस्याप्यधिकारः सम्भवति, इति प्राप्ते उच्यते । न शूद्रस्याधिकारस्सम्भवति, सामर्थ्याभावात् । नहि ब्रह्मस्वरूपतदुपासनप्रकारमजानतस्तदङ्ग-

भूतवेदानुवचनयज्ञादिष्वनधिकृतस्योपासनोपसंहारसामर्थ्यसम्भवः । असमर्थस्य चार्थित्व-सद्भावेऽप्यधिकारो न सम्भवति । असामर्थ्यं च वेदाध्ययनाभावात् । यथैव हि त्रैवर्णिक-विषयाध्ययनविधिसिद्धस्वाध्यायसम्पाद्यज्ञानलाभेन कर्मविधयो ज्ञानतदुपायादीनपरान्न स्वीकुर्वन्ति । तथा ब्रह्मोपासनविधयोऽपि । अतोऽध्ययनविधिसिद्धस्वाध्यायाधिगतज्ञानस्यैव ब्रह्मोपासनोपायत्वाच्छूद्रस्य ब्रह्मोपासनसामर्थ्यासम्भवः । इतिहासपुराणे अपि वेदोपबृंहणं कुर्वती एवोपायभावमनुभवतः । न स्वातन्त्र्येण शूद्रस्येतिहासपुराणश्रवणानुज्ञानम्, पापक्षयादिफलार्थम्, नोपासनार्थम् । विदुरादयस्तु भवान्तराधिगतज्ञानप्रमोषात् ज्ञानवन्तः प्रारब्धकर्मवशाच्चेदृशजन्मयोगिन इति तेषां ब्रह्मनिष्ठत्वम् ।

यच्च संवर्गविद्यायां शुश्रूषोश्शूद्रेति सम्बोधनं शूद्रस्याधिकारं सूचयति इति । तन्नेत्याह — **शुगस्य तदनादरश्रवणात् तदाद्रवणात्सूच्यते हि ॥** शुश्रूषो जनिश्रुतेः पौत्रायणस्य ब्रह्मज्ञानवैकल्येन हंसोक्तानादरवाक्यश्रवणात्तदेव ब्रह्मविदो रैकस्य सकाशं प्रत्याद्रवणाच्छुगस्य सञ्जातेति हि सूच्यते । अतस्स शूद्रेत्यामन्त्र्यते, न चतुर्थवर्णत्वेन । शोचतीति हि शूद्रः। 'शुचेर्दश्च' इति रप्रत्यये धातोश्च दीर्घे चकारस्य च दकारे शूद्र इति भवति । अतश्शोचितृत्वमेवास्य शूद्रशब्दप्रयोगेन सूच्यते, न जातिप्रयोगः । जानश्रुतिः किल पौत्रायणः बहुद्रव्यप्रदो बह्वन्नप्रदश्च बभूव । तस्य धार्मिकाग्रेसरस्य धर्मेण प्रीतयोः कयोश्चिन्महात्मनोरस्य ब्रह्मजिज्ञासामुत्पिपादयिषतोः हंसरूपेण निशायामस्याविदूरे गच्छतोरन्यतर इतरमुवाच 'भो भोयि भल्लाक्ष भल्लाक्ष जानश्रुतेः पौत्रायणस्य समं दिवा ज्योतिराततं तन्मा प्रसाङ्क्षीस्तत्त्वा मा प्रधाक्षीत्' इति । एवं जानश्रुतिप्रशंसारूपं वाक्यमुपश्रुत्य परो हंसः प्रत्युवाच 'कम्वर एनमेतत्सन्तं सयुग्वानमिव रैकमात्थ' इति । कं सन्तमेनं जानश्रुतिं सयुग्वानं रैकं ब्रह्मज्ञमिव गुणश्रेष्ठमेतदात्थ, स ब्रह्मज्ञो रैक एव लोके गुणवत्तरः । महता धर्मेण संयुक्तस्याप्यस्य जानश्रुतेरब्रह्मज्ञस्य को गुणः । यदगुणजनितं तेजो रैकतेज इव मां दहेदित्यर्थः । एवमुक्तेन परेण कोऽसौ रैक इति पृष्टः लोके यत्किञ्चित् साध्वनुष्ठितं कर्म, यच्च सर्वचेतनगतं विज्ञानम्, तदुभयं यदीयज्ञानकर्मान्तर्भूतम्, स रैक इत्याह । तदेतद्धंसवाक्यं ब्रह्मज्ञानविधुरतया आत्मनिन्दागर्भं तद्वत्तया च रैकप्रशंसारूपं जानश्रुतिरुपश्रुत्य तत्क्षणादेव क्षत्तारं रैकान्वेषणाय प्रेष्य तस्मिन् विदित्वा आगते स्वयमपि रैकमुपसद्य गवां षट्छतं निष्कमश्वतरी रथं च रैकायोपहृत्य रैकं प्रार्थयामास 'अनुम एतां भगवो देवतां शाधि यां देवतामुपास्से' इति त्वदुपास्यां परां देवतां मामनुशाधीत्यर्थः । स च रैकस्स्वयोगमहिमविदितलोकत्रयो जानश्रुतेर्ब्रह्मज्ञान-विधुरतानिमित्तानादरगर्भहंसवाक्यश्रवणेन शोकाविष्टतां तदनन्तरमेव ब्रह्मजिज्ञासयोद्योगं च विदित्वाऽस्य ब्रह्मविद्यायोग्यतामभिज्ञाय चिरकालसेवां विना द्रव्यप्रदानेन

शुश्रूषमाणस्यास्य यावच्छक्तिप्रदानेन ब्रह्मविद्या प्रतिष्ठिता भवतीति मत्वा तमनुगृह्णन् तस्य शोकाविष्टतामुपदेशयोग्यताख्यापिकां शूद्रशब्देनामन्त्रणेन ज्ञापयन्निदमाह, 'अह हारे त्वा शूद्र तवैव सह गोभिरस्तु' इति । स गोभिरन्यं रथस्तवैवास्तु । नैतावता मह्यं दत्तेन ब्रह्मजिज्ञासया शोकाविष्टस्य तव ब्रह्मविद्या प्रतिष्ठिता भवतीत्यर्थः । स च जानश्रुतिर्भूयोऽपि स्वशक्त्यनुगुणमेव गवादिकं धनं कन्यां च प्रदायोपससाद । स रैक्वः पुनरपि तस्य योग्यतामेव ख्यापयन् शूद्रशब्देनामन्त्र्याह 'आजहारेमाश्शूद्रानेनैव मुखेनालपयिष्यथाः' इति । इमानि धनानि शक्त्यनुगुणान्याजहर्थ । अनेनैव द्वारेण चिरसेवया विनाऽपि मां त्वदभिलषितं ब्रह्मोपदेशरूपवाक्यमालापयिष्यसीत्युक्त्वा तस्मा उपदिदेश । अतश्शूद्रशब्देन विद्योपदेशयोग्यताख्यापनार्थं शोक एवास्य सूचितः, न चतुर्थवर्णत्वम् ।।३३।।

**क्षत्रियत्वावगतेश्च ।। ३४ ।।**

'बहुदायी' इति दानपतित्वेन 'बहुपाक्यः' इत्यादिना 'सर्वत एवमेतदन्नमत्स्यन्ति' इत्यन्तेन बहुतरपक्वान्नप्रदायित्वप्रतीतेः 'सहसञ्जिहान एव क्षत्तारमुवाच' इति क्षत्तृप्रेषणाद् बहुग्राम-प्रदानावगतजनपदाधिपत्याच्चास्य जानश्रुतेः क्षत्रियत्वप्रतीतेश्च न चतुर्थवर्णत्वम् ।।३४।।

तदेवमुपक्रमगताख्यायिकायां क्षत्रियत्वप्रतीतिरुक्ता । उपसंहारगताख्यायिकायामपि क्षत्रियत्वमस्य प्रतीयत इत्याह –

**उत्तरत्र चैत्ररथेन लिङ्गात् ।। ३५ ।।**

अस्य जानश्रुतेरुपदिश्यमानायामस्यामेव संवर्गविद्यायामुत्तरत्र कीर्त्यमानेनाभिप्रतारिनाम्ना चैत्ररथेन क्षत्रियेणास्य क्षत्रियत्वं गम्यते । कथम्? 'अथ ह शौनं च कापेयमभिप्रतारिणं च काक्षसेनिं परिविष्यमाणौ ब्रह्मचारी बिभिक्षे' इत्यादिना 'ब्रह्मचारिन्नेदमुपास्महे' इत्यन्तेन कापेयाभिप्रतारिणोर्भिक्षमाणस्य ब्रह्मचारिणश्च संवर्गविद्यासम्बन्धित्वं प्रतीयते । तेषउ चाभिप्रतारी क्षत्रियः, इतरौ ब्राह्मणौ । अतोऽस्यां विद्यायां ब्राह्मणस्य तदितरेषु च क्षत्रियस्यैवान्वयो दृश्यते, न शूद्रस्य । अतोऽस्यां विद्यायामन्विताद् रैक्वाद् ब्राह्मणादन्यस्य जानश्रुतेरपि क्षत्रियत्वमेव युक्तम्, न चतुर्थवर्णत्वम् । नन्वस्मिन् प्रकरणेऽभिप्रतारिणश्चैत्र रथत्वं क्षत्रियत्वं च न श्रुतम् । तत्कथमस्याभिप्रतारिणश्चैत्ररथत्वम्? कथं वा क्षत्रियत्वम्? तत्राह – **लिङ्गादिति** ।। 'अथ ह शौनकं च कापेयमभिप्रतारिणं च काक्षसेनिम्' इत्यभिप्रतारिणः कापेयसाहचर्याल्लिङ्गादस्याभिप्रतारिणः कापेयसम्बन्धः प्रतीयते । अन्यत्र च 'एतेन वै चैत्ररथं कापेया अयाजयन्' इति कापेयसम्बन्धिनश्चैत्ररथत्वं श्रूयते । तथा चैत्ररथस्य क्षत्रियत्वं 'तस्माच्चैत्ररथो नामैकः क्षत्रपतिरजायत' इति अतोऽभिप्रतारिणश्चैत्रर थत्वं क्षत्रियत्वं च गम्यते ।। ३५ ।।

तदेवं न्यायविरोधिनि शूद्रस्याधिकारे लिङ्गं नोपलभ्यत इत्युक्तम्, इदानीं

न्यायसिद्धश्शूद्रस्यानधिकारः श्रुतिस्मृतिभिरनुगृह्यत इत्याह –

**संस्कारपरामर्शात्तदभावाभिलापाच्च ॥ ३६ ॥**

ब्रह्मविद्योपदेशेषऊपनयनसंस्कारः परामृश्यते 'उप त्वा नेष्ये' 'तं होपनिन्ये' इत्यादिषु । शूद्रस्य चोपनयनादिसंस्काराभावोऽभिलप्यते 'न शूद्रे पातकं किञ्चिन्नच संस्कारमर्हति ।' 'चतुर्थो वर्ण एकजातिर्न च संस्कारमर्हति' इत्यादिषु ।। ३६ ।।

**तदभावनिर्धारणे च प्रवृत्तेः ॥ ३७ ॥**

'नैतदब्राह्मणो विवक्तुमर्हति समिधं सोम्याहर' इति शुश्रूषोर्जाबालस्य शूद्रत्वाभावनिर्धारणे सत्येव विद्योपदेशप्रवृत्तेश्च न शूद्रस्याधिकारः ।। ३७ ।।

**श्रवणाध्ययनार्थप्रतिषेधात् ॥ ३८ ॥**

शूद्रस्य वेदश्रवणतदध्ययनतदर्थानुष्ठानानि प्रतिषिद्ध्यन्ते 'पद्यु ह वा एतच्छ्मशानं यच्छूद्रस्तस्माच्छूद्रसमीपे नाध्येतव्यम्' 'तस्माच्छूद्रो बहुपशुरयज्ञीयः' इति । बहुपशुः पशुसदृश इत्यर्थः । अनुपशृण्वतोऽध्ययनतदर्थज्ञानतदर्थानुष्ठानानि न सम्भवन्ति । अतस्तान्यपि प्रतिषिद्धान्येव ।। ३८ ।।

**स्मृतेश्च ॥ ३९ ॥**

स्मर्यते च श्रवणादिनिषेधः 'अथ हास्य वेदमुपशृण्वतस्त्रपुजतुभ्यां श्रोत्रप्रतिपूरणमुदाहरणे जिह्वाच्छेदो धारणे शरीरभेदः' इति 'नचास्योपदिशेद्धर्मं नचास्य व्रतमादिशेद् ।' इति च । अतश्शूद्रस्यानधिकार इति सिद्धम् ।। ३९ ।।

ये तु निर्विशेषचिन्मात्रं ब्रह्मैव परमार्थः, अन्यत् सर्वं मिथ्याभूतम् । बन्धश्चापारमार्थिकः। स च वाक्यजन्यवस्तुयाथात्म्यज्ञानमात्रनिवर्त्यः । तन्निवृत्तिरेव मोक्षः इति वदन्ति । तैर्ब्रह्मज्ञाने शूद्रादेरनधिकारो वक्तुं न शक्यते । अनुपनीतस्य अनधीतवेदस्याश्रुत-वेदान्तवाक्यस्यापि यस्मात् कस्मादपि निर्विशेषचिन्मात्रं ब्रह्मैव परमर्थोऽन्यत् सर्वं तस्मिन् परिकल्पितं मिथ्याभूतमिति वाक्याद्वस्तुयाथात्म्यज्ञानोत्पत्तेः, तावतैव बन्धनिवृत्तेश्च । नच तत्त्वमस्यादिवाक्येनैव ज्ञानोत्पत्तिः कार्या, न वाक्यान्तरेणेति नियन्तुं शक्यम् । ज्ञानस्यापुरुषतन्त्रत्वात् । सत्यां सामग्र्यामनिच्छतोऽपि ज्ञानोत्पत्तेः । नच वेदवाक्यादेव वस्तुयाथात्म्यज्ञाने सति बन्धनिवृत्तिर्भवतीति शक्यं वक्तुम्, येन केनापि वस्तुयाथात्म्यज्ञाने सति भ्रान्तिनिवृत्तेः । पौरुषेयादपि निर्विशेषचिन्मात्रं ब्रह्म परमार्थोऽन्यत्सर्वं मिथ्याभूतमिति वाक्यात् ज्ञानोत्पत्तेस्तावतैव भ्रमनिवृत्तेश्च । यथा पौरुषेयादप्याप्तवाक्याच्छुक्तिकारजतादि-भ्रान्तिर्ब्राह्मणस्य शूद्रादेरपि निवर्तते, तद्वदेव शूद्रस्यापि वेदवित्सम्प्रदायागत-वाक्याद्वस्तुयाथात्म्यज्ञानेन जगद्भ्रमनिवृत्तिरपि भविष्यति । 'नचास्योपदिशेद्धर्मम्' इत्यादिना वेदविदः शूद्रादिभ्यो न वदन्तीति च न शक्यं वक्तुम्,

तत्त्वमस्यादिवाक्यावगतब्रह्मात्मभावानां वेदशिरसि वर्तमानतया दग्धाखिलाधिकारत्वेन निषेधशास्त्रकिङ्करत्वाभावात् । अतिक्रान्तनिषेधैर्वा कैश्चिदुक्ताद् वाक्याच्छूद्रादेः ज्ञानमुत्पद्यत एव । नच वाच्यम्, शुक्तिकादौ रजतादिभ्रमनिवृत्तिवत् पौरुषेयवाक्यजन्यतत्त्वज्ञान-समनन्तरं शूद्रस्य जगद्भ्रमो न निवर्तत इति । तत्त्वमस्यादिवाक्यश्रवणसमनन्तरं ब्राह्मणस्यापि जगद्भ्रमानिवृत्तेः । निदिध्यासनेन द्वैतवासनायां निरस्तायामेव तत्त्वमस्यादिवाक्यं निवर्तकज्ञानमुत्पादयतीति चेत्, पौरुषेयमपि वाक्यं शूद्रादेस्तथैवेति न कश्चिद् विशेषः । निदिध्यासनं हि नाम ब्रह्मात्मभावाभिधायि वाक्यं यदर्थप्रतिपादनयोग्यम्, तदर्थभावना, सैव विपरीतवासनां निवर्तयतीति दृष्टार्थत्वं निदिध्यासनविधेर्ब्रूषे, वेदानुवचनादीन्यपि विविदिषोत्पत्तावेवोपयुज्यन्ते इति शूद्रस्यापि विविदिषायां जातायां पौरुषेयवाक्यान्निदि-ध्यासनादिभिर्विपरीतवासनायां निरस्तायां ज्ञानमुत्पत्स्यते, तेनैवापरामार्थिको बन्धो निवर्तिष्यते । अथवा तर्कानुगृहीतात् प्रत्यक्षादनुमानाच्च निर्विशेषस्वप्रकाशचिन्मात्रप्रत्यग्वस्तुन्यज्ञानसाक्षित्वम्, तत्कृतविविधविचित्रज्ञातृज्ञेयविकल्परूपं कृत्स्नं जगच्चाध्यस्तमिति निश्चित्यैवम्भूतपरिशुद्धप्रत्यग्वस्तुन्यनवरतभावनया विपरीतवासनां निरस्य, तदेव प्रत्यग्वस्तु साक्षात्कृत्य शूद्रादयोऽपि विमोक्ष्यन्त इति मिथ्याभूतविचित्रैश्वर्य-विचित्रसृष्ट्याद्यलौकिकानन्तविशेषावलम्बिना वेदान्तवाक्येन न किञ्चित्प्रयोजनमिह दृश्यत इति शूद्रादीनामेव ब्रह्मविद्यायामधिकारस्सुशोभनः । अनेनैव न्यायेन ब्राह्मणादीनामपि ब्रह्मवेदनसिद्धेरुपनिषच्च तपस्विनी दत्तजलाञ्जलिः स्यात् । नच वाच्यं नैसर्गिकलोकव्यवहारे भ्राम्यतोऽस्य केनचिदयं लौकिकव्यवहारो भ्रमः, परमार्थस्त्वेवमिति समर्पिते सत्येव प्रत्यक्षानुमानवृत्तबुभुत्सा जायत इति तत्समर्पिका श्रुतिरप्यास्थेयेति । यतो भवभयभीतानां साङ्ख्यादय एव प्रत्यक्षानुमानाभ्यां वस्तुनिरूपणं कुर्वन्तः प्रत्यक्षानुमानाभ्यामेव विविक्तस्वभावाभ्यां नित्यशुद्धस्वप्रकाशाद्वितीयकूटस्थचैतन्यमेव सत्, अन्यत् सर्वं तस्मिन्नध्यस्तमिति सुविवेचम् । एवम्भूते स्वप्रकाशे वस्तुनि श्रुतिसमधिगम्यं विशेषान्तरं च नाभ्युपगम्यते । अध्यस्तात्तद्रूपनिवर्तिनी हि श्रुतिरपि त्वन्मते । नच सत आत्मन आनन्दरूपता ज्ञानायोपनिषदास्थेया, चिद्रूपताया एव सकलेतरातद्रूपव्यावृत्ताया आनन्दरूपत्वात् । यस्य तु मोक्षसाधनतया वेदान्तवाक्यैर्विहितं ज्ञानमुपासनरूपम्, तच्च परब्रह्मभूतपरमपुरुषप्रीणनम्, तच्च शास्त्रैकसमधिगम्यम्, उपासनशास्त्रं चोपनयनादिसंस्कृताधीत-स्वाध्यायजनितं ज्ञानं विवेकविमोकादिसाधनानुगृहीतमेव स्वोपायतया स्वीकरोति, एवंरूपोपासनप्रीतः पुरुषोत्तम उपासकं स्वाभाविकात्मयाथात्म्यज्ञानदानेन कर्मजनिताज्ञानं नाशयन् बन्धान्मोचयतीति पक्षः, तस्य यथोक्तया नीत्या शूद्रादेरनधिकार उपपद्यते ॥

ಪರಿಪೂರ್ಣಚಂದ್ರಿಕಾ

ಅನುವಾದ - ರಾಮಾನುಜರ ಅಪಶೂದ್ರಾಧಿಕರಣ ರಚನೆ ಹೀಗಿದೆ -

ಪೂರ್ವಪಕ್ಷ - ಶೂದ್ರನಿಗೆ ಉಪನಯನವಿಲ್ಲದ ಕಾರಣ ಅಧ್ಯಯನವೂ ಸಹ ಇರುವುದಿಲ್ಲ. ಮತ್ತು ಕರ್ಮಕಾಂಡದ ಅಪಶೂದ್ರಾಧಿಕರಣದ ನ್ಯಾಯದಂತೆ ಕರ್ಮದಲ್ಲಿಯೂ ಸಹ ಅಧಿಕಾರವನ್ನು ಹೊಂದಿರುವುದಿಲ್ಲ. ಮತ್ತು ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರರೂಪವಾದ್ದರಿಂದ ಲಿಖಿತ-ಪಾಠಾದಿಗಳಿಂದ ಮಾಡಿದ ಸ್ವಾಧ್ಯಾಯದಿಂದ ಹುಟ್ಟಿದ ಧ್ಯಾನವು ಶ್ರೇಯಸ್ಸಾಧನವಾಗಿರುವುದಿಲ್ಲ. ಆದರೂ ಸಹ 'ಶ್ರಾವಯೇಚ್ಚತುರೋ ವರ್ಣಾನ್' ಶೂದ್ರರಿಗೆ ಶ್ರವಣ ಮಾಡಿಸಬೇಕು. ಇತ್ಯಾದಿ ಪ್ರಮಾಣಗಳ ಆಧಾರದಿಂದ, ಇತಿಹಾಸ ಪುರಾಣಾದಿಗಳಲ್ಲಿ ಶೂದ್ರರು ಅಧಿಕಾರವನ್ನು ಪಡೆದಿರುತ್ತಾರೆ. ಇತಿಹಾಸಾದಿಗಳಿಂದ ಬ್ರಹ್ಮಜ್ಞಾನವನ್ನು ಶೂದ್ರರೂ ಸಹ ಹೊಂದಬಹುದು. ಹಾಗಾಗಿ ಬ್ರಹ್ಮೋಪಾಸನೆಯಲ್ಲಿ ಶೂದ್ರರಿಗೆ ಅಧಿಕಾರವಿರುತ್ತದೆ.

**''इतिहासपुराणाभ्यां वेदं समुपबृंहयेत् इति वचनेन तयोः वेदसमुपबृंहकमात्रत्वेन स्वातन्त्र्येण ज्ञानहेतुत्वाभावान्न शूद्रस्याधिकार इति सिद्धान्त इत्याहुः ।**

ಸಿದ್ಧಾಂತ - 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಇತಿಹಾಸ ಪುರಾಣಗಳ ಸಹಾಯದಿಂದ ವೇದಾರ್ಥವನ್ನು ತಿಳಿಯಬೇಕು ಎಂಬ ಮಾತಿನಂತೆ, ಇತಿಹಾಸ ಪುರಾಣಗಳು ಸ್ವತಂತ್ರವಾಗಿ ಜ್ಞಾನಕ್ಕೆ ಹೇತುವಲ್ಲ, ಹೊರತಾಗಿ ವೇದದಿಂದ ಜ್ಞಾನವನ್ನು ಪಡೆಯಲು ಕೇವಲ ಸಹಾಯವಾಗಿವೆ. ಆದ್ದರಿಂದ ಶೂದ್ರನಿಗೆ ಇತಿಹಾಸಪುರಾಣಗಳಿಂದ ನೇರವಾಗಿ ಜ್ಞಾನವನ್ನು ಪಡೆಯಲು ಅಧಿಕಾರವಿರುವುದಿಲ್ಲ.

**तत्र पूर्वपक्षे कर्मानधिकाराङ्गीकरणमयुक्तम् । शूद्रेऽग्नेर्वेदजन्यकर्मविद्यायाश्चा-सम्भवेऽपीतिहासादिना ब्रह्मज्ञानवत्स्मृतिभिः कर्मज्ञानस्यापि सम्भवेनाग्न्यसाध्य-संध्योपासनादिकर्माधिकारसम्भवात् ।**

ರಾಮಾನುಜರ ಈ ಅಧಿಕರಣಶರೀರ ಅಸಾಧುವಾಗಿದೆ. ಪೂರ್ವಪಕ್ಷ ಮಾಡುವಾಗ ಶೂದ್ರರಿಗೆ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಿದರು. ಇದು ಸರಿಯಲ್ಲ. ಶೂದ್ರನಿಗೆ ಅಗ್ನಿ ಹಾಗೂ ವೇದಜನ್ಯವಾದ ಕರ್ಮವಿದ್ಯೆಯಲ್ಲಿ ಅಧಿಕಾರವಿಲ್ಲದಿರಬಹುದು. ಆದರೆ ಇತಿಹಾಸಾದಿಗಳಿಂದ ಬ್ರಹ್ಮಜ್ಞಾನವನ್ನು ಶೂದ್ರನು ಪಡೆಯಬಹುದೆಂದು ನೀವು ಹೇಗೆ ಹೇಳುತ್ತೀರೋ ಅದರಂತೆ ಸ್ಮೃತಿಗಳಿಂದ ಶೂದ್ರನು ಕರ್ಮಜ್ಞಾನವನ್ನೂ ಕೂಡ ಪಡೆಯಬಹುದು. ವೇದದಿಂದಲೇ ಕರ್ಮಜ್ಞಾನವನ್ನು ಪಡೆಯಬೇಕೆಂಬ ನಿಯಮವಿಲ್ಲ. ಮತ್ತು ಅಗ್ನಿಸಾಧ್ಯವಲ್ಲದ ಸಂಧ್ಯೋಪಾಸನೆ ಮೊದಲಾದ ಕರ್ಮಗಳಲ್ಲಿಯೂ ಕೂಡ ಅಧಿಕಾರವನ್ನು ಶೂದ್ರನಾದವನು ಪಡೆಯಬಹುದು.

**किञ्चास्मिन्पक्षे सूत्र इतिहासादेरुपबृंहकत्वमेव सिद्धान्तहेतुतया वक्तव्यम् । नतु शूद्रस्योपनयनाद्यभावः ।**

ರಾಮಾನುಜರ ಪಕ್ಷದಲ್ಲಿ ಸೂತ್ರವು ಇತಿಹಾಸಾದಿಗಳಿಗೆ ವೇದೋಪಬ್ರಂಹಕತ್ವವನ್ನಷ್ಟೇ ಸಿದ್ಧಾಂತಹೇತುವನ್ನಾಗಿ ಹೇಳಬೇಕಿತ್ತು. ಹೊರತು, ಶೂದ್ರನಿಗೆ ಉಪನಯನವಿಲ್ಲವೆಂದು ಹೇಳಿದ್ದು ತಪ್ಪಾಗುತ್ತದೆ.

**किञ्च वैदिकसंवर्गविद्याश्रोतुः शूद्रेति सम्बोधनेन वैदिकविद्याश्रवणाधिकारे शङ्किते सिद्धान्तिना "शुगस्य" इति सूत्रे तत्रैवानधिकार उक्तः । तस्मादितिहासादिना शूद्रस्य ज्ञानसम्भवासम्भवचिन्ता सूत्रविरुद्धा ।**

ಮತ್ತು ವೇದದಲ್ಲಿರುವ ಸಂವರ್ಗವಿದ್ಯೆಯನ್ನು ಶ್ರವಣ ಮಾಡಲು ಶೂದ್ರನಿಗೂ ಕೂಡ ಅಧಿಕಾರವಿದೆ. ಏಕೆಂದರೆ ಶೂದ್ರ ಎಂದು ಸಂಬೋಧನೆ ಮಾಡಿದ್ದರಿಂದ ವೈದಿಕವಿದ್ಯೆಯ ಶ್ರವಣಾಧಿಕಾರವನ್ನು ಶೂದ್ರನಿಗೂ ಹೇಳಬಹುದು ಎಂದು ಶಂಕೆಯು ಪ್ರಾಪ್ತವಾದರೆ, 'ಶುಗಸ್ಯ' ಎಂಬ ಸೂತ್ರವು ಸಂವರ್ಗವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರವಿಲ್ಲವೆಂದು ಸಿದ್ಧಾಂತ ಮಾಡಿದೆ. ಹೀಗಿರುವಾಗ ಇತಿಹಾಸಾದಿಗಳಿಂದ ಶೂದ್ರನಿಗೆ ಜ್ಞಾನಹುಟ್ಟುತ್ತದೋ ಇಲ್ಲವೋ ಎಂಬ ವಿಚಾರವು ವಿರುದ್ಧವಾಗಿದೆ.

**अपि च इतिहासादेरुपबृंहकत्वेऽपि वेदानुपबृंहकेण वेदसमानार्थेन भाषाप्रबन्धादिना शूद्रस्य ब्रह्मज्ञान सम्भवात्तदुपासनाधिकारप्रसङ्गः । कर्मानधिकारादेव तदङ्कोपासनानधिकारेत्विति हासादितो ज्ञानाभाव व्युत्पादन-वैयर्थ्यम् ।**

ಮತ್ತು ಇತಿಹಾಸಾದಿಗಳು ವೇದಕ್ಕೆ ಸಹಕಾರಿಯಾಗಿ ತತ್ವಜ್ಞಾನವನ್ನು ಹುಟ್ಟಿಸುವ ಕಾರಣ ಶೂದ್ರನಿಗೆ ಇತಿಹಾಸಾದಿಗಳಲ್ಲಿ ಅಧಿಕಾರವಿಲ್ಲವೆಂದು ನೀವು ಸಮರ್ಥನೆ ಮಾಡಬಹುದು. ಆದರೆ ವೇದಕ್ಕೆ ಸಮಾನಾರ್ಥವಾದ ಪ್ರಬಂಧರೂಪವಾದ ಭಾಷಾಂತರದಿಂದ ಬ್ರಹ್ಮಜ್ಞಾನವನ್ನು ಶೂದ್ರನಾದವನು ನೇರವಾಗಿ ಪಡೆಯಬಹುದು. ಅಂತಹ ಬ್ರಹ್ಮೋಪಾಸನೆಯಲ್ಲಿ ಶೂದ್ರನಿಗೂ ಕೂಡ ಅಧಿಕಾರವು ಬಂದೇ ಬರುತ್ತದೆ. ಮತ್ತು ಶೂದ್ರನಿಗೆ ಕರ್ಮದಲ್ಲಿ ಅಧಿಕಾರವಿಲ್ಲದ ಕಾರಣ, ತದಂಗವಾದ ಉಪಾಸನೆಯಲ್ಲಿಯೂ ಅಧಿಕಾರವಿಲ್ಲವೆಂದೇ ಹೇಳಲು ಬರುವಾಗ, ಇತಿಹಾಸಾದಿಗಳಿಂದ ಶೂದ್ರನಿಗೆ ತತ್ವಜ್ಞಾನವನ್ನು ಹೊಂದುವ ಅರ್ಹತೆಯಿಲ್ಲವೆಂದು ಸಮರ್ಥನೆ ಮಾಡುವುದು ವ್ಯರ್ಥವಾಗಿದೆ.

**किञ्च "इतिहासपुराणाभ्याम्" इति वाक्यमितिहासाद्यनुसारिण्येवार्थे वेदस्य तात्पर्यमित्येवं परम् । नतु वेदनिरपेक्षेतिहासादिर्न बोधक इति ।**

'ಇತಿಹಾಸಪುರಾಣಾಭ್ಯಾಮ್ ವೇದಂ ಸಮುಪಬೃಂಹಯೇತ್' ಎಂಬ ವಾಕ್ಯವು ಇತಿಹಾಸಪುರಾಣಾದಿಗಳಿಗೆ ಅನುಸಾರಿಯಾಗಿಯೇ ವೇದದ ತಾತ್ಪರ್ಯವನ್ನು ನಿಶ್ಚಯಿಸಬೇಕೆಂದು ಸಮರ್ಥಿಸಲು ಹೊರಟಿದೆ ಹೊರತು, ವೇದನಿರಪೇಕ್ಷಿತವಾದ ಇತಿಹಾಸಾದಿಗಳಿಗೆ ಬೋಧಕತ್ವವೇ ಇಲ್ಲವೆಂದು ಹೇಳಲು ಹೊರಟಿಲ್ಲ.

**अनेकशाखाभिज्ञमुनिकृतान्निर्णयरूपाद्वाक्याद्वेदनिरपेक्षादपि ब्राह्मणादीनामपि ज्ञानोत्पत्तेः ।**

ಏಕೆಂದರೆ ವೇದಗಳಲ್ಲಿರುವ ಎಲ್ಲಾ ಶಾಖೆಗಳನ್ನು ಚೆನ್ನಾಗಿ ಬಲ್ಲ ಶ್ರೀಬಾದರಾಯಣರಿಂದ ಪ್ರಣೀತವಾದ ನಿರ್ಣಯರೂಪವಾದ ಇತಿಹಾಸಾದಿಗಳಲ್ಲಿರುವ ವಾಕ್ಯದಿಂದ ಬ್ರಾಹ್ಮಣಾದಿಗಳಿಗೂ ಕೂಡ ವೇದವನ್ನು ಅಪೇಕ್ಷೆ ಪಡದೇ, ನೇರವಾಗಿ ತತ್ವಜ್ಞಾನ ಬರುವುದು ಕಂಡಿದೆ. ಆದ್ದರಿಂದ ವೇದನಿರಪೇಕ್ಷಿತವಾದ ಇತಿಹಾಸಾದಿಗಳು ಏನನ್ನೂ ತಿಳಿಸಲಾರವೆಂದು ಹೇಳಲಾಗದು.

**न चोत्पन्नमपि ज्ञानं शूद्रस्य न फलदम् । तस्यापि "य इदं शृणुयात्" इत्युक्त्वा "शूद्रः सुखमवाप्नुयात्" इत्युक्तयेतिहासादिश्रवणविधानात् ।**

ಇತಿಹಾಸಾದಿಗಳಿಂದ ಜ್ಞಾನವು ಬರಬಹುದು. ಆದರೆ ಅವು ಫಲದಾಯಕವಲ್ಲ ಎಂದು ಹೇಳಬಾರದು. ಏಕೆಂದರೆ 'ಯ ಇದಂ ಶೃಣುಯಾನ್ನಿತ್ಯಮ್' ಇತ್ಯಾದಿಯಾಗಿ ಯಾರು ವಿಷ್ಣುಸಹಸ್ರನಾಮಾದಿಗಳನ್ನು ಕೇಳುತ್ತಾನೋ, ಅಂತಹವನು ಶೂದ್ರನಾಗಿದ್ದಲ್ಲಿ, ಸುಖವನ್ನು ಹೊಂದುತ್ತಾನೆ ಎಂದು 'ಶೂದ್ರಃ ಸುಖಮವಾಪ್ನುಯಾತ್' ಎಂಬ ವಾಕ್ಯವು ಹೇಳುತ್ತಿದೆ. ಆದ್ದರಿಂದ ಇತಿಹಾಸಾದಿಗಳಿಂದ ಪಡೆದ ಜ್ಞಾನವು ಶೂದ್ರನಿಗೂ ಕೂಡ ಫಲದಾಯಕವೇ ಆಗುತ್ತದೆ.

**नच श्रवणं न ज्ञानार्थम् । किन्तु पापक्षयार्थमिति शङ्क्यम् । दृष्टार्थत्वे सम्भवत्यदृष्टार्थत्वायोगात् ।**

ಇತಿಹಾಸಾದಿಗಳ ಶ್ರವಣದಿಂದ ಶೂದ್ರನು ಜ್ಞಾನವನ್ನು ಪಡೆಯಬೇಕೆಂದು ಹೇಳುತ್ತಿಲ್ಲ ಹೊರತಾಗಿ, ಕೇವಲ ಪಾಪವನ್ನು ಪರಿಹರಿಸಿಕೊಳ್ಳಲು ಶ್ರವಣಮಾಡಬೇಕೆಂದಷ್ಟೇ ಆ ವಾಕ್ಯದ ಅಭಿಪ್ರಾಯವೆಂದು ಶಂಕಿಸಬಾರದು. ಶ್ರವಣಾದಿಗಳಿಗೆ ತತ್ವಜ್ಞಾನವೆಂಬ ದೃಷ್ಟಫಲವನ್ನು ಹೇಳಲು ಬರುವಾಗ ಪಾಪಕ್ಷಯವೆಂಬ ಅದೃಷ್ಟಪ್ರಯೋಜನವನ್ನು ಹೇಳುವುದು ತಪ್ಪಾಗುತ್ತದೆ.

**"स्त्रीशूद्रब्रह्मबन्धूनां त्रयी न श्रुतिगोचरा" इत्यारभ्य "इति भारतमाख्यानं कृपया मुनिना कृतम्" इत्यादिस्मृत्या भारतादेः शूद्रान्प्रति वेदकार्यकारित्वोक्तेश्च ।**

ಮತ್ತು 'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ' ಸ್ತ್ರೀ, ಶೂದ್ರ ಬ್ರಹ್ಮಬಂಧು ಈ ಮೂವರಿಗೆ ವೇದಾಧಿಕಾರವಿರುವುದಿಲ್ಲ ಎಂದು ಪ್ರಾರಂಭ ಮಾಡಿ 'ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್' ಅವರ ಉದ್ಧಾರಕ್ಕೋಸ್ಕರ ಮಹಾಭಾರತವನ್ನು ಶ್ರೀವೇದವ್ಯಾಸದೇವರು ಬರೆದಿದ್ದಾರೆ ಎಂದು ಹೇಳಲಾಗಿದೆ. ಈ ಸ್ಮೃತಿವಾಕ್ಯದಿಂದ ಮಹಾಭಾರತಾದಿ ಗ್ರಂಥಗಳಿಂದ ಶೂದ್ರರಾದವರು ವೇದದಿಂದ ಪಡೆಯುವ ತತ್ತ್ವಜ್ಞಾನವನ್ನು ಪಡೆಯಬೇಕೆಂದು ತಿಳಿಯುತ್ತದೆ. ಆದ್ದರಿಂದ ಬ್ರಾಹ್ಮಣರಿಗೆ ವೇದದಿಂದ ತತ್ವಜ್ಞಾನವು ದೊರೆಯುವಂತೆ ಶೂದ್ರರಿಗೆ ಮಹಾಭಾರತವು ತತ್ವಜ್ಞಾನವನ್ನು ನೀಡುತ್ತದೆ.

**यथा च त्वन्मते शूद्रादेर्मुक्तिसाधनब्रह्मोपासनानधिकारेऽपि तत्साधन-प्रपत्तावधिकारः तथा वेदाद्ब्रह्मज्ञानेऽनधिकारेऽपीतिहासादिना तज्ज्ञानादावधिकारे बाधकाभावाच्च ।**

ಯಾವರೀತಿಯಾಗಿ ನಿಮ್ಮ ಮತದಲ್ಲಿ ಶೂದ್ರರಿಗೆ ಮುಕ್ತಿಸಾಧನವಾದ ಬ್ರಹ್ಮೋಪಾಸನೆಯಲ್ಲಿ ಅಧಿಕಾರವನ್ನು ಒಪ್ಪದಿದ್ದರೂ ಮುಕ್ತಿಸಾಧನವಾದ ಪ್ರಪತ್ತಿಯಲ್ಲಿ (ಶರಣಾಗತಿಯಲ್ಲಿ) ಅಧಿಕಾರವನ್ನು ಒಪ್ಪುತ್ತೀರೋ, ಅದರಂತೆ ವೇದದಿಂದ ಬ್ರಹ್ಮಜ್ಞಾನವನ್ನು ಪಡೆಯಲು ಶೂದ್ರರಿಗೆ ಅಧಿಕಾರವಿಲ್ಲದಿದ್ದರೂ ಇತಿಹಾಸಾದಿಗಳಿಂದ ಬ್ರಹ್ಮಜ್ಞಾನ ಪಡೆಯಲು ಅಧಿಕಾರವಿರುತ್ತದೆ. ಈ ವಿಷಯದಲ್ಲಿ ಯಾವುದೇ ಬಾಧಕಗಳಿರುವುದಿಲ್ಲ.

**मां हि पार्थ व्यपाश्रित्य येऽपि स्युः पापयोनयः ।**
**स्त्रियो वैश्यास्तथा शूद्रास्तेऽपि यान्ति परां गतिम् ।**
**किं पुनर्ब्राह्मणाः पुण्या भक्ता राजर्षयस्तथा"**

**इत्यादेश्च । तदेतदभिप्रेत्याह टीकाकारः "हरिः शूद्राद्यैर्वेदविद्या ज्ञेयो न भवति" इति । भाष्यकृच्च "ज्ञेयो न वेदैः शूद्राद्यैः" इति ।**

ಸ್ತ್ರೀ ಶೂದ್ರಾದಿಗಳಿಗೆ, ಮಹಾಭಾರತಾದಿಗಳಿಂದ ಜ್ಞಾನವನ್ನು ಪಡೆಯಲು ಅಧಿಕಾರವಿದೆಯೆನ್ನಲು ಗೀತೆಯ ಸಮ್ಮತಿಯೂ ಕೂಡ ಇರುತ್ತದೆ -

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ।
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ'

ಎಲೈ ! ಪ್ರಾರ್ಥನೇ ಪಾಪ ಯೋನಿಯಲ್ಲಿ ಹುಟ್ಟಿದ್ದರೂ ಸ್ತ್ರೀಯರು, ವೈಶ್ಯರು, ಶೂದ್ರರು, ನನನ್ನು ತಿಳಿದು, ನನನ್ನೇ ಪಡೆಯುತ್ತಾರೆ. ಹೀಗಿರುವಾಗ ಪುಣ್ಯಾತ್ಮರಾದ ಬ್ರಾಹ್ಮಣರು ಭಕ್ತರಾದ ರಾಜರ್ಷಿಗಳು ನನ್ನನ್ನು ಹೊಂದದೇ ಇರುತ್ತಾರೇನು?

ಇತ್ಯಾದಿಯಾಗಿ ಶ್ರೀಕೃಷ್ಣನು ಹೇಳಿರುತ್ತಾನೆ.

ಈ ಅಭಿಪ್ರಾಯದಿಂದಲೇ ಟೀಕೆಯಲ್ಲಿ 'ಹರಿಃ ಶೂದ್ರಾದ್ಯೈರ್ವೇದವಿದ್ಯಾ ಜ್ಞೇಯೋ ನ ಭವತಿ' ಎಂದು ಹೇಳಿರುತ್ತಾರೆ. ಭಾಷ್ಯಕಾರರೂ ಸಹ - 'ಜ್ಞೇಯೋ ನ ವೇದ್ಯಃ ಶೂದ್ರಾದ್ಯೈಃ' ಶೂದ್ರರು ವೇದಗಳಿಂದಷ್ಟೇ ತಿಳಿಯಲು ಅರ್ಹರಲ್ಲ ಎಂದು ಹೇಳಿರುತ್ತಾರೆ.

**प्रकाशः –**

**केचित्त्विति ।।** ब्रह्मविद्यायां शूद्रस्याधिकारोऽस्ति न वेति संशयो बोध्यः ।। **न्यायेनेति ।।** अग्निविद्ययोरभावादित्येवं रूपेणेत्यर्थः । एतेन पूर्वतन्त्रापशूद्राधिकरणे नागतत्वमुक्तम् ।

ವಿವರಣೆ - ರಾಮಾನುಜರ ಅಧಿಕರಣವನ್ನು 'ಕೇಚಿತ್ತು' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. ಬ್ರಹ್ಮವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರವಿದೆಯೋ ಇಲ್ಲವೋ? ಎಂಬ ಸಂಶಯವನ್ನು ಇಟ್ಟುಕೊಳ್ಳಬೇಕು. 'ನ್ಯಾಯೇನ' ಎಂದರೆ ಅಗ್ನ್ಯಾಧಾನದಲ್ಲಿ ಮತ್ತು ವೇದವಿದ್ಯೆಯಲ್ಲಿ ಅಧಿಕಾರವಿಲ್ಲದ್ದರಿಂದ ಎಂಬ ನ್ಯಾಯದಿಂದ ಎಂದರ್ಥ. ಹೀಗೆ ಹೇಳಿದ್ದರಿಂದ ಪೂರ್ವಮೀಮಾಂಸೆಯಲ್ಲಿರುವ ಅಪಶೂದ್ರಾಧಿಕರಣದಿಂದ ಪುನರುಕ್ತಿಯನ್ನು ಪರಿಹರಿಸಿದಂತಾಯಿತು.

**प्रकाशः –** अनिर्ज्ञातप्रकारस्य कथमधिकार इत्यत आह – **श्रावयेदिति ।।** प्रयोज्याभावे प्रयोजकासिद्धेः प्रयोज्योपादानमर्थात्सिद्धम् ।

ಬ್ರಹ್ಮನ ಬಗ್ಗೆ ಏನನ್ನೂ ತಿಳಿಯದವನಿಗೆ ಅಧಿಕಾರವನ್ನು ಹೇಳುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಶ್ರಾವಯೇತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಶ್ರಾವಯೇತ್' ಎಂಬಲ್ಲಿರುವ 'ಣಿಚ್' ಪ್ರತ್ಯಯದಿಂದ ಪ್ರಯೋಜ್ಯನಿಗೆ ಅಧಿಕಾರವನ್ನು ಹೇಳಿದಂತಾಗುತ್ತದೆ. ಪ್ರಯೋಜ್ಯನೇ ಇಲ್ಲದಿದ್ದರೆ ಪ್ರಯೋಜಕನು

ಅಪಶೂದ್ರಾಧಿಕರಣ (೧-೩-೯)

ಸಿದ್ಧನಾಗುವುದಿಲ್ಲ. ಆದ್ದರಿಂದ ಪ್ರಯೋಜಕನು ಶ್ರವಣ ಮಾಡಿಸುತ್ತಾನೆಂದರೆ ಪ್ರಯೋಜನು ಅದರಿಂದ ಜ್ಞಾನವನ್ನು ಪಡೆಯುತ್ತದೆಂಬುದನ್ನು ಅರ್ಥಾತ್‌ಸಿದ್ಧವಾಗುತ್ತದೆ.

**प्रकाशः –** नच "अन्नाद्यकामं याजयेत्" इतिवत्प्रयोज्यव्यापारविधिः । अधिकारिविशेषणाश्रवणादिति भावः ।

'ಅನ್ನಾದ್ಯಕಾಮಂ ಯಾಜಯೇತ್' ಎಂಬಲ್ಲಿ 'ಅನ್ನಾದ್ಯಕಾಮಂ' ಎಂಬ ವಿಶೇಷಣವನ್ನು ಪ್ರಯೋಜ್ಯನಲ್ಲಿ ಹೇಳಿದ್ದರಿಂದ, ಪ್ರಯೋಜ್ಯವ್ಯಾಪಾರನ ವಿಧಿಯು ಸಿದ್ಧವಾಗುತ್ತದೆ. ಅಧಿಕಾರಿ ವಿಶೇಷಣವು ಶ್ರುತವಾಗದ ಕಾರಣ.

**प्रकाशः –** "अग्नेर्वेदजन्यकर्मविद्यायाश्चासम्भवेऽपि" इत्यभ्युपगमवादोऽयम् । पूर्वतन्त्रन्यायेनाग्न्याद्यभावेन कर्मानधिकारस्य "अनग्नित्वेन कर्मानधिकार" इत्यादिना निरस्तत्वादिति ध्येयम् ॥

ಹಿಂದೆ ಶೂದ್ರನಿಗೂ ಸಹ ಅಗ್ನ್ಯಾಧಾನ ಮತ್ತು ಯಾಗಾದಿಕರ್ಮಗಳಲ್ಲಿ ಅಧಿಕಾರವಿರಬಹುದೆಂದು ಸಮರ್ಥಿಸಲಾಗಿತ್ತು. ಆದ್ದರಿಂದ ಇಲ್ಲಿ 'ಅಗ್ನೇರ್ವೇದಜನ್ಯಕರ್ಮವಿದ್ಯಾಯಾಶ್ಚಾಸಂಭವೇಽಪಿ' ಎಂದು ಹೇಳಿದ್ದು ಅಂಗೀಕಾರವಾದ. ಪೂರ್ವಮೀಮಾಂಸದ ನ್ಯಾಯದಂತೆ ಶೂದ್ರನಿಗೆ ಅಗ್ನ್ಯಾಧಾನವಿಲ್ಲದ ಕಾರಣ ಕರ್ಮದಲ್ಲಿ ಅಧಿಕಾರವಿಲ್ಲ ಎಂಬುದು 'ಅನಗ್ನಿತ್ವೇನ ಕರ್ಮಾನಧಿಕಾರಃ' ಎಂಬುದರಿಂದ ನಿರಸ್ತವಾಗಿದೆಯೆಂದು ತಿಳಿಯಬೇಕು.

**प्रकाशः – सन्ध्योपासनादीति ॥** एतेन यदुक्तं श्रुतप्रकाशे कर्मणामितिहासपुराणेषु सामान्यतः कीर्तनेऽपि विशेषोपदेशाभावा(द्वैशेषिकेषु) विशेषोपदेशेषु शूद्रस्यानधिकार इति तन्निरस्तम् । संध्यावन्दनादेर्विशेषोपदेशादिति ।

'ಸಂಧ್ಯೋಪಾಸನಾದಿ' ಇತ್ಯಾದಿ ವಾಕ್ಯದಿಂದ ಶ್ರುತಪ್ರಕಾಶದಲ್ಲಿ ಹೇಳಿದ ಮತ್ತೊಂದು ವಾದವನ್ನು ನಿರಾಕರಿಸಿದಂತಾಯಿತು. ಇತಿಹಾಸಪುರಾಣಾದಿಗಳಲ್ಲಿ ಕರ್ಮಗಳ ಬಗ್ಗೆ, ಸಾಮಾನ್ಯವಾಗಿ ಹೇಳಿದ್ದರೂ, ವಿಶೇಷವಾಗಿ ಹೇಳದ ಕಾರಣ, ವಿಶೇಷ ಉಪದೇಶದಲ್ಲಿ ಶೂದ್ರರಿಗೆ ಅಧಿಕಾರವಿರುವುದಿಲ್ಲ ಎಂದು. ಇದು ಸರಿಯಿಲ್ಲ. ಏಕೆಂದರೆ ಸ್ಮೃತಿಗಳಲ್ಲಿ ಸಂಧ್ಯಾವಂದನೆಯ ಬಗ್ಗೆ ವೇದಕ್ಕಿಂತ ಹೆಚ್ಚು ವಿವರಣೆಯಿರುತ್ತದೆ. ಆದ್ದರಿಂದ, ಯಾಗಾದಿಕರ್ಮಗಳಲ್ಲಿ ಶೂದ್ರರಿಗೆ ಅಧಿಕಾರವಿಲ್ಲದಿದ್ದರೂ ಸಂಧ್ಯಾವಂದನಾದಿಕರ್ಮಗಳಲ್ಲಿ ಅಧಿಕಾರವನ್ನು ಹೊಂದಬಹುದು.

**प्रकाशः –** एतेनैव कर्माङ्गवैदिकमन्त्राध्ययनाभावान्न शूद्रस्य कर्मण्यधिकार इति केनचिदुक्तं निरस्तम् । अविहितस्य स्वशाखेतरशाखागतमन्त्राध्ययनस्येव तदङ्गमन्त्र मात्राध्ययनस्योपपत्तेः । नित्ये कर्मणि शक्याङ्गमात्रोपसंहारेणानुष्ठानस्योक्तत्वाचेति।

ಹೀಗೆ ಹೇಳಿದ್ದರಿಂದಲೇ ಕರ್ಮಾಂಗವಾದ ವೈದಿಕಮಂತ್ರಗಳ ಅಧ್ಯಯನದಲ್ಲಿ ಶೂದ್ರನಿಗೆ ಅಧಿಕಾರವಿಲ್ಲದ ಕಾರಣ, ಕರ್ಮದಲ್ಲಿಯೂ ಕೂಡ ಅಧಿಕಾರವಿರುವುದಿಲ್ಲವೆಂಬುದನ್ನು ನಿರಾಕರಿಸಿದಂತಾಯಿತು. ಯಾವರೀತಿಯಾಗಿ ಬ್ರಾಹ್ಮಣರಿಗೆ ಸ್ವಶಾಖಾಧ್ಯಾಯನವನ್ನು ಬಿಟ್ಟು ಬೇರೆ ಶಾಖೆಗಳಲ್ಲಿ ಅಧಿಕಾರವಿರದಿದ್ದರೂ ಆ ಶಾಖೆಗಳಲ್ಲಿರುವ ಮಂತ್ರಗಳನ್ನು ಮಾತ್ರ ಅಧ್ಯಯನ ಮಾಡುತ್ತಾರೋ, ಅದರಂತೆ ಶೂದ್ರರೂ ಸಹ ಕರ್ಮಾಂಗವಾದ ವೈದಿಕಮಂತ್ರಗಳಲ್ಲಿ ಮಾತ್ರ ಅಧಿಕಾರವನ್ನು ಪಡೆಯಬಹುದು. ಏಕೆಂದರೆ ನಿತ್ಯಕರ್ಮಗಳಲ್ಲಿ ತಮ್ಮ ಶಕ್ತಿಯಿದ್ದಷ್ಟು ಮಾತ್ರ ಮಂತ್ರಗಳನ್ನು ಅನುಷ್ಠಾನ ಮಾಡಿದರೆ ಸಾಕೆಂದು ಹೇಳಲಾಗಿದೆ.

**प्रकाशः –** सौत्रपदव्यावर्त्यपूर्वपक्षस्यैवोचितत्वेनेतिहासादिजन्यज्ञानमादायाऽधिकारपूर्वपक्षकरणं सूत्राननुगुणं चेत्याह – **किञ्चेति ।। न त्विति ।।** तथा चोपनयनाद्यङ्गीकारेणास्मद्रीत्यैव पूर्वपक्षो वाच्य इति भावः ।

ಸೂತ್ರದಲ್ಲಿರುವ ಪದಗಳಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ತೋರಿಸುವುದೇ ಉಚಿತವಾಗಿದೆ. ಆದ್ದರಿಂದ ಇತಿಹಾಸಾದಿಗಳಿಂದ ಜನ್ಯವಾದ ಜ್ಞಾನವನ್ನು ವಿವಕ್ಷಿಸಿ, ಶೂದ್ರರಿಗೆ ಅಧಿಕಾರವಿರುತ್ತದೆಂಬ ಪೂರ್ವಪಕ್ಷ ಮಾಡುವುದು ಸೂತ್ರಕ್ಕೆ ಅನನುಗುಣವಾಗಿದೆಯೆಂಬ ಅಭಿಪ್ರಾಯದಿಂದ 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ. 'ನತು' ಎಂದು ಹೇಳಿದ್ದರಿಂದ ಶೂದ್ರರಿಗೂ ಉಪನಯನಾದಿಗಳನ್ನು ಒಪ್ಪಿ, ನಾವು ಮಾಡುವಂತೆ ಪೂರ್ವಪಕ್ಷವನ್ನು ಹೇಳುವುದು ಉಚಿತವಾಗಿದೆಯೆಂದಭಿಪ್ರಾಯ.

**प्रकाशः –** सिद्धान्तोऽपि सूत्राननुगुण इत्याह – **किञ्च वैदिकेति ।।** अत एव श्रुतप्रकाशे ''संवर्गविद्यावाक्यगतशूद्रशब्दनिर्वाह एव सौत्रः । अन्यत्पूर्वपक्षजातं सूत्रकाराभिप्रेतं स्वयमुपन्यस्तम्'' इत्याद्युक्तमिति भावः । अभ्युपेत्यापि सिद्धान्तप्रमेयमतिप्रसङ्गमाह – **अपि चेति ।। भाषेति ।।** तदीयद्राविडप्रबन्धादिनेत्यर्थः ।

ರಾಮಾನುಜರು ಮಾಡಿದ ಸಿದ್ಧಾಂತವೂ ಸಹ ಸೂತ್ರಕ್ಕೆ ಅನನುಗುಣವಾಗಿದೆಯೆಂದು 'ಕಿಂಚ ವೈದಿಕ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಆದ್ದರಿಂದ ಶ್ರುತಪ್ರಕಾಶದಲ್ಲಿ ಸಂವರ್ಗವಿದ್ಯಾವಾಕ್ಯಗತ-ಶೂದ್ರಶಬ್ದನಿರ್ವಾಹ ಏವ ಸೌತ್ರಃ । ಅನ್ಯತ್ಪೂರ್ವಪಕ್ಷಜಾತಂ ಸೂತ್ರಕಾರಾಭಿಪ್ರೇತಂ ಸ್ವಯಮುಪನ್ಯಸ್ತಮ್' ಇತ್ಯಾದಿಯಾಗಿ ಹೇಳಲಾಗಿದೆ. ಸಿದ್ಧಾಂತ ಪ್ರಮೇಯವನ್ನು ಅಂಗೀಕರಿಸಿದರೂ ಸಹ ಅತಿಪ್ರಸಂಗ ಬರುತ್ತದೆಂದು 'ಅಪಿಚ' ಇತ್ಯಾದಿ ಗ್ರಂಥವು ಸಮರ್ಥನೆ ಮಾಡುತ್ತಿದೆ. 'ಭಾಷಾ ಪ್ರಬಂಧ' ಎಂದರೆ ರಾಮಾನುಜರು ಬರೆದಿರುವ 'ದ್ರಾವಿಡ ಪ್ರಬಂಧ' ಎಂದರ್ಥ.[೧]

(೧) 'ಆಳನಾಳ ಪ್ರಬಂಧ' ಎಂಬುದು ರಾಮಾನುಜರಲ್ಲಿ ಅತ್ಯಂತ ಪ್ರಸಿದ್ಧವಾದದ್ದು. ಇದನ್ನು ಅವರು ವೇದಕ್ಕಿಂತಲೂ ಕೂಡ ಶ್ರೇಷ್ಠವೆನ್ನುತ್ತಾರೆ. ಇದರ ಅಧ್ಯಯನದಿಂದ ನೇರವಾಗಿ ತತ್ವಜ್ಞಾನವನ್ನು ಪಡೆಯಬಹುದೆಂದು ರಾಮಾನುಜ ಪಂಥದವರೇ ಹೇಳಿಕೊಂಡಿದ್ದಾರೆ.

**प्रकाशः –** ननु न ज्ञानासंभवादुपासनानधिकारः । किंत्वङ्गेष्वनधिकारादेवेत्यत आह – **कर्मेति** ।। ''इतिहासपुराणेऽपि वेदोपबृंहणं कुर्वती एवोपायभावमनुभवतो न स्वातन्त्र्येण'' इत्यादिना त्वद्भाष्ये ज्ञानाभावोपपादनं व्यर्थमित्यर्थः ।

ಶೂದ್ರರಿಗೆ ಜ್ಞಾನವಿಲ್ಲದ ಕಾರಣ ಉಪಾಸನೆಯಲ್ಲಿ ಅಧಿಕಾರವಿಲ್ಲವೆಂದು ಹೇಳುತ್ತಿಲ್ಲ ಹೊರತಾಗಿ, ಉಪಾಸನೆಗೆ ಅಂಗವಾದ ಕರ್ಮದಲ್ಲಿ ಅಧಿಕಾರವಿಲ್ಲದ ಕಾರಣ ಎಂಬ ಶಂಕೆಗೆ 'ಕರ್ಮ' ಇತ್ಯಾದಿ ಗ್ರಂಥವು ಉತ್ತರಿಸುತ್ತಿದೆ. 'ಇತಿಹಾಸಪುರಾಣೇऽಪಿ ವೇದೋಪಬೃಂಹಣಂ ಕುರ್ವತೀ ಏವೋಪಾಯಭಾವಮನುಭವತೋ ನ ಸ್ವಾತಂತ್ರ್ಯೇಣ' ಇತ್ಯಾದಿಯಾಗಿ ರಾಮಾನುಜಭಾಷ್ಯದಲ್ಲಿಯೇ ಶೂದ್ರರಿಗೆ ಜ್ಞಾನವಿಲ್ಲವೆಂದು ಸಮರ್ಥನ ಮಾಡಲಾಗಿದೆ. ಇದು ವ್ಯರ್ಥವೆಂದಭಿಪ್ರಾಯ.

**प्रकाशः –** अयुक्तं च तद्व्युत्पादनमित्याह – **किञ्चेति** ।। **अनेकेति** ।। अनेन आप्तिमूलतामाह – **निर्णयेत्यन्यानपेक्षताम्** ।।

ಹೀಗೆ ಹೇಳುವುದೂ ಕೂಡ ಅಯುಕ್ತವಾಗಿದೆಯೆಂದು 'ಕಿಂಚ' ಇತ್ಯಾದಿ ಗ್ರಂಥವು ಸಮರ್ಥನೆ ಮಾಡುತ್ತಿದೆ. ಅನೇಕ ಶಾಖೆಗಳನ್ನು ಅರಿತ ವೇದವ್ಯಾಸದೇವರು ಸ್ಮೃತಿಯನ್ನು ಬರೆದಿದ್ದಾರೆಂದು ಹೇಳಿದ್ದರಿಂದ ಆಪ್ತಿಮೂಲತ್ವವನ್ನು ಉಪಪಾದನೆ ಮಾಡಿದಂತಾಯಿತು. ನಿರ್ಣಯಾತ್ಮಕವೆಂದು ಹೇಳಿದ್ದರಿಂದ, ಮತ್ತೊಂದರ ಅಪೇಕ್ಷೆಯಿಲ್ಲವೆಂದು ಹೇಳಿದಂತಾಯಿತು. ವೇದಾರ್ಥವನ್ನು ತಿಳಿಯಲು ಉಪಕ್ರಮಾದಿಗಳ ಅಪೇಕ್ಷೆಯಿದ್ದಂತೆ ಇತಿಹಾಸಾದಿಗಳಿಂದ ಅರ್ಥವನ್ನು ಪಡೆಯಲು ಮತ್ತೊಂದರ ಅಪೇಕ್ಷೆಯಿರುವುದಿಲ್ಲ.

**प्रकाशः – ब्राह्मणादीनामिति** ।। यथा प्रबलेन ''अथातोऽग्निमग्निष्टोमेनानुयजन्ति'' इति वाक्येनेष्टकचितस्थण्डिलरूपाग्नेराहवनीयाधारतया ज्योतिष्टोमाङ्गत्वे सिद्धे दुर्बलप्रकरणोपनीतोत्तरवेदिरप्यग्न्याधारतया तदङ्गं एवं पुराणादिजन्यमपि तज्ज्ञानमुपासनाङ्गम् । अन्यथा तज्ज्ञानस्य व्यर्थतापत्तेः । तथा च शूद्रस्यापि तज्जन्यं ज्ञानमुपासनाङ्गं स्यादिति भावः ।।

ಪೂರ್ವಮೀಮಾಂಸೆಯಲ್ಲಿ 'ಅಥಾತೋऽಗ್ನಿಮ್ ಅಗ್ನಿಷ್ಟೋಮೇನ ಅನುಯಜಂತಿ' ಎಂಬ ವಾಕ್ಯದಿಂದ ಇಷ್ಟಕಚಿತಸ್ಥಂಡಿಲ್ಯರೂಪವಾದ ಅಗ್ನಿಗೆ ಆಹವನೀಯಕ್ಕೆ ಆಧಾರರೂಪವಾಗಿ ಜ್ಯೋತಿಷ್ಟೋಮದ ಅಂಗತ್ವವನ್ನು ಸಾಧಿಸಲಾಗಿದೆ. ಶ್ರುತಿಗಿಂತ ಪ್ರಕರಣವು ದುರ್ಬಲವಾಗಿದ್ದರೂ ಪ್ರಕರಣದಿಂದ ಉಪನೀತನಾದ ಉತ್ತರವೇದಿಯು ಅಗ್ನಿಗೆ ಆಧಾರವಾಗಿ ಪರಂಪರೆಯಿಂದ ಜ್ಯೋತಿಷ್ಟೋಮಕ್ಕೆ ಅಂಗವಾಗಿದೆಯೆಂದು ಸಾಧಿಸಲಾಗಿದೆ.

ಒಟ್ಟು ಅಭಿಪ್ರಾಯ - 'ಗಾರ್ಹಪತ್ಯ, ಆಹವನೀಯ, ದಾಕ್ಷಿಣಾತ್ಯ' ಎಂಬ ಮೂರುಬಗೆಯ ಅಗ್ನಿಗಳಲ್ಲಿ ಗಾರ್ಹಪತ್ಯದ ದಕ್ಷಿಣದಲ್ಲಿ ದಾಕ್ಷಿಣಾಗ್ನಿಯು ಇರುತ್ತದೆ. ಉತ್ತರಭಾಗದಲ್ಲಿ 'ಆಹವನೀಯ' ಎಂಬ ಅಗ್ನಿಯು ಇರುತ್ತದೆ. ಆಹವನೀಯಕ್ಕೆ ಆಧಾರವಾದದ್ದು 'ಸ್ಥಂಡಿಲ' ಇಷ್ಟಕಚಿತಸ್ಥಂಡಿಲರೂಪವಾದ ಈ ಅಗ್ನಿಗೆ ಆಧಾರವಾದದ್ದು ಉತ್ತರವೇದಿ, ಅಂದರೆ ಉತ್ತರವೇದಿಯು ನೇರವಾಗಿ ಆಹವನೀಯಕ್ಕೆ, ಆಧಾರವಾಗಿಲ್ಲ ಹೊರತಾಗಿ, ಆಹವನೀಯಕ್ಕೆ ಆಧಾರವಾದ ಸ್ಥಂಡಿಲಕ್ಕೆ ಆಧಾರವಾಗಿದೆ. ಏಕೆಂದರೆ ವಾಕ್ಯ ಮತ್ತು ಪ್ರಕರಣಗಳಲ್ಲಿ ವಾಕ್ಯವೇ ಪ್ರಬಲವಾಗಿದೆ. ಇದರಿಂದ ಸ್ಥಂಡಿಲರೂಪವಾದ ಅಗ್ನಿಯು ಜ್ಯೋತಿಷ್ಟೋಮಕ್ಕೆ ಅಂಗವೆಂದು ಸಿದ್ಧವಾಗಿದೆ. ಉತ್ತರವೇದಿಯು ಪ್ರಕರಣದಿಂದ ಉಪನೀತವಾಗಿದೆ. ಹಾಗಾಗಿ ವಾಕ್ಯಕ್ಕಿಂತಲೂ ದುರ್ಬಲವಾಯಿತು. ಆವಾಗ ಪ್ರಬಲವಾದ 'ಆಹವನೀಯೇ ಜುಹೋತಿ' ಎಂಬ ವಾಕ್ಯವು ಆಹವನೀಯ ಎಂಬ ಹೋಮ ಮಾಡಬೇಕು. ಇಂತಹ ಆಹವನೀಯಕ್ಕೆ ಆಧಾರವಾದದ್ದು. ಇಷ್ಟಕಚಿತಸ್ಥಂಡಿಲರೂಪವಾದ ಅಗ್ನಿಯಾಗಿದೆ. ಈ ಸ್ಥಂಡಿಲವು ಉತ್ತರವೇದಿಯಾಗಬೇಕು ಎಂದು ಅನಂತರ ಸಿದ್ಧವಾಗುತ್ತದೆ. ಹೀಗೆ ಸ್ಥಂಡಿಲರೂಪವಾದ ಅಗ್ನಿಯು ನೇರವಾಗಿ ಅಂಗವಾದರೂ ಪ್ರಕರಣದಿಂದ ಉಪನೀತವಾದ ಉತ್ತರವೇದಿಯು ಆಹವನೀಯಕ್ಕೆ ಆಧಾರವಾದ ಸ್ಥಂಡಿಲಕ್ಕೆ ಆಧಾರವಾಗುವ ಮೂಲಕ ಅಂಗವಾಗುತ್ತದೆ. ಅಂದರೆ ನೇರವಾಗಿ ಅಂಗವಾಗದಿದ್ದರೂ, ಪರಂಪರೆಯಿಂದ ಅಂಗವಾಗುತ್ತದೆಂದು ಪೂರ್ವಮೀಮಾಂಸೆಯಲ್ಲಿ ಸಾಧಿಸಲಾಗಿದೆ.

ಅದರಂತೆ ವೇದವು ಉಪಾಸನೆಗೆ ನೇರವಾಗಿ ಅಂಗವಾಗಿದ್ದರೂ ಇತಿಹಾಸಪುರಾಣಾದಿಗಳು ಪರಂಪರೆಯಿಂದ ಉಪಾಸನೆಗೆ ಅಂಗಗಳಾಗಬಹುದು. ಹೀಗೊಪ್ಪದಿದ್ದರೆ, ಇತಿಹಾಸಪುರಾಣಾದಿಗಳಿಂದ ಹುಟ್ಟುವ ಜ್ಞಾನವು ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ಶೂದ್ರರಿಗೂ ಸಹ ಇತಿಹಾಸಪುರಾಣಾದಿಗಳಿಂದ ಹುಟ್ಟುವಂತಹ ಜ್ಞಾನವು ಉಪಾಸನೆಗೆ ಅಂಗವಾಗಲಿ ಎಂದು 'ಬ್ರಾಹ್ಮಣಾದೀನಾಮ್' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

**प्रकाशः – न फलदमिति ।। विहितसाधनाजन्यत्वादिति भावः ।। इत्युक्त्वेति।।**

य इदं शृणुयान्नित्यं यश्चापि परिकीर्तयेत् ।
नाशुभं प्राप्नुयात्किञ्चित्सोऽमुत्रेह च मानवः ।
वेदान्तगो ब्राह्मणः स्यात् क्षत्रियो विजयी भवेत् ।
वैश्यो धनसमृद्धः स्याच्छूद्रः सुखमवाप्नुयात् ।।

इति सहस्रनामसूक्तयेत्यर्थः ।

ಇತಿಹಾಸ ಪುರಾಣಾದಿಗಳ ಅಧ್ಯಯನದಿಂದ ಶೂದ್ರಾದಿಗಳಿಗೆ ಫಲವೇ ದೊರೆಯುವುದಿಲ್ಲವೆಂದು ಹೇಳಬಾರದು. ಏಕೆಂದರೆ ಶೂದ್ರಾದಿಗಳಿಗೆ ವಿಹಿತವಲ್ಲದ ಇತಿಹಾಸಾದಿಗಳಿಂದ ಹುಟ್ಟುವಂತಹ ಜ್ಞಾನವು

ಫಲದಾಯಕವಲ್ಲವೆಂಬ ಪ್ರಶ್ನೆಗೆ ಅವರಿಗೂ ಸಹ ಇತಿಹಾಸಾದಿಗಳ ಪಠಣದಿಂದ ಫಲವು ಬರುತ್ತದೆಂದು ಹೇಳಲಾಗಿದೆ -

ಯ ಇದಂ ಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ ।
ನಾಶುಭಂ ಪ್ರಾಪ್ನುಯಾತ್ ಕಿಂಚಿತ್ ಸೋಽಮುತ್ರೇಹ ಚ ಮಾನವಃ ।
ವೇದಾಂತಗೋ ಬ್ರಾಹ್ಮಣಃ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯೋ ಧನಸಮೃದ್ಧಃ ಸ್ಯಾಚ್ಛೂದ್ರಃ ಸುಖಮವಾಪ್ನುಯಾತ್ ॥

ಯಾರು ವಿಷ್ಣುಸಹಸ್ರನಾಮವನ್ನು ಕೇಳುತ್ತಾರೋ, ಅಥವಾ ಪಠನೆ ಮಾಡುತ್ತಾರೋ ಅಂತಹ ಮಾನವನಿಗೆ ಇಹಲೋಕದಲ್ಲಿ, ಪರಲೋಕದಲ್ಲಿ ಅಶುಭವು ಉಂಟಾಗುವುದಿಲ್ಲ. ಬ್ರಾಹ್ಮಣನಿಗೆ ವೇದಾರ್ಥತತ್ತ್ವಜ್ಞಾನವು ದೊರೆಯುತ್ತದೆ. ಕ್ಷತ್ರಿಯನು ವಿಜಯಶಾಲಿಯಾಗುತ್ತಾನೆ. ವೈಶ್ಯನು ಸಂಪತ್ತನ್ನು ಪಡೆಯುತ್ತಾನೆ, ಶೂದ್ರನು ಸುಖವನ್ನು ಪಡೆಯುತ್ತಾನೆ.

ಹೀಗೆ ವಿಷ್ಣುಸಹಸ್ರನಾಮದ ಪಠನದಿಂದ ಫಲವನ್ನು ಹೇಳಲಾಗಿದೆ. ಆದ್ದರಿಂದ ಶೂದ್ರಾದಿಗಳು ಇತಿಹಾಸಾದಿಗಳಿಂದ ಜ್ಞಾನವನ್ನು ಪಡೆಯಬಹುದು.

**प्रकाशः** – एतेन ''श्मशानवच्छूद्रपतितौ'' इति प्रतिषिद्धस्य समीपपाठस्य प्रतिप्रसवमात्रं श्रवणविधिः । नतु ज्ञानान्त इति निरस्तम् । सुखमिति श्रवणफलनिर्देशात् । न ह्यविहितसाधनजन्यात्फलोदयोक्तिर्युक्तेति भावः ।

ಹೀಗೆ ಹೇಳಿದ್ದರಿಂದ 'ಶ್ಮಶಾನವತ್ ಶೂದ್ರಪತಿತೌ'

ಶಂಕೆ - 'ಶ್ರಾವಯೇತ್ ಚತುರೋ ವರ್ಣಾನ್' ಎಂಬ ವಾಕ್ಯವು ಸಾಮಾನ್ಯವಾಗಿ ಎಲ್ಲರೂ ಸಹ ಇತಿಹಾಸಾದಿಗಳನ್ನು ಶ್ರವಣ ಮಾಡಬಹುದು ಎಂದು ಹೇಳಿದೆ. ಹೀಗೆ ಹೇಳಿದಾಗ 'ಸ್ಮಶಾನವತ್ ಶೂದ್ರಪತಿತೌ' ಶೂದ್ರ ಹಾಗೂ ಪತಿತರಿಬ್ಬರೂ ಸ್ಮಶಾನದಂತೆ ಕೇಳಲು ಅಥವಾ ಹೇಳಲು ಅನರ್ಹರಾಗಿದ್ದಾರೆಂದು ನಿಷೇಧ ಮಾಡುತ್ತಿದೆ. ಅಂದರೆ ಸ್ಮಶಾನದಲ್ಲಿ ಅಥವಾ ಸ್ಮಶಾನದ ಸಮೀಪದಲ್ಲಿ ಹೇಗೆ ವೇದಾದಿಗಳನ್ನು ಪಠಿಸುವುದು ನಿಷಿದ್ಧವೋ, ಅದರಂತೆ ಶೂದ್ರರ ಸಮೀಪದಲ್ಲಿ ವೇದ-ಇತಿಹಾಸಾದಿಗಳನ್ನು ಪಠನೆ ಮಾಡಬಾರದು ಎಂದು ಹೇಳುತ್ತಿದೆ. ಅಂದರೆ ಸಾಮಾನ್ಯವಾಕ್ಯದಿಂದ ಎಲ್ಲರೂ ಶ್ರವಣ ಮಾಡಬಹುದು ಎಂದು ಪ್ರಾಪ್ತವಾದದ್ದನ್ನು ಇದು ನಿಷೇಧ ಮಾಡುತ್ತಿದೆ. ಅನಂತರ 'ಯ ಇದಂ ಶೃಣುಯಾನ್ನಿತ್ಯಂ' ಎಂಬ ವಾಕ್ಯವು ನಿಷೇಧ ಮಾಡುವುದಕ್ಕಾಗಿ ಹೊರಟಿದೆ. ಆದ್ದರಿಂದ ಇದನ್ನು ಪ್ರತಿಪ್ರಸವವೆನ್ನಬೇಕು ಹೊರತು, ಶೂದ್ರಾದಿಗಳಿಗೆ ಜ್ಞಾನಸಂಪಾದನೆಯ ವಿಧಿಗೋಸ್ಕರ ಈ ವಾಕ್ಯವು ಹೊರಟಿಲ್ಲವಲ್ಲವೇ?

ಸಮಾಧಾನ - ಈ ಶಂಕೆಯನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ 'ಶೂದ್ರಃ ಸುಖಮವಾಪ್ನುಯಾತ್' ಎಂಬಲ್ಲಿ ಶೂದ್ರನಿಗೆ ಸುಖವು ದೊರೆಯುತ್ತದೆಂದು ಫಲವನ್ನು ಹೇಳಲಾಗಿದೆ. ಯಾರಿಗೆ ಜ್ಞಾನವೇ ಬಂದಿಲ್ಲವೋ, ಅವರಿಗೆ ಫಲವನ್ನು ಹೇಳುವುದಾದರೂ ಹೇಗೆ ಕೂಡುತ್ತದೆ? ಆದ್ದರಿಂದ ಶೂದ್ರಾದಿಗಳಿಗೂ ಇತಿಹಾಸಾದಿಗಳಿಂದ ಜ್ಞಾನವನ್ನು ಪಡೆಯಬಹುದೆಂದು ಹೇಳಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ''इतिहासपुराणश्रवणानुज्ञानं पापक्षयार्थम् । नोपासनार्थम्'' इति तद्भाष्योक्तं शङ्कते – **नचेति** ।।

'ಇತಿಹಾಸಪುರಾಣಶ್ರವಣಾನುಜ್ಞಾನಂ ಪಾಪಕ್ಷಯಾರ್ಥಮ್ । ನ ಉಪಾಸನಾರ್ಥಮ್' ಇತಿಹಾಸಪುರಾಣದಿಗಳನ್ನು ಶ್ರವಣ ಮಾಡುವುದು ಕೇವಲ ಪಾಪಪರಿಹಾರಕ್ಕೋಸ್ಕರ ಹೊರತು, ಉಪಾಸನೆಗೋಸ್ಕರ ಅಲ್ಲ ಎಂಬುದಾಗಿ ರಾಮಾನುಜಭಾಷ್ಯದಲ್ಲಿ ಹೇಳಲಾಗಿದೆ. ಅದನ್ನು ಹೃದಯದಲ್ಲಿಟ್ಟುಕೊಂಡು 'ನಚ' ಇತ್ಯಾದಿ ಗ್ರಂಥದಿಂದ ಆಶಂಕೆ ಮಾಡುತ್ತಿದ್ದಾರೆ.

**प्रकाशः** – **स्मृत्येति** ।। ''न श्रुतिगोचरा । कर्मश्रेयसि मूढानां श्रेय एवं भवेदिह। इति भारतम्'' इति भागवतप्रथमस्कन्धगतया स्मृत्येत्यर्थः ।।

'ನ ಶ್ರುತಿಗೋಚರಾ । ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ । ಇತಿ ಭಾರತಮಾಖ್ಯಾನಮ್' ಎಂಬುದಾಗಿ ಭಾಗವತದ ಪ್ರಥಮಸ್ಕಂಧದಲ್ಲಿರುವ ಸ್ಮೃತಿಯಿಂದ ಶೂದ್ರಾದಿಗಳಿಗೆ ವೇದಾಧಿಕಾರವಿಲ್ಲ ಕರ್ಮದಿಂದಲೇ ಶ್ರೇಯಸ್ಸಾತ್ತಾಗುತ್ತದೆಂದು ತಿಳಿದ ಮೂಢರಿಗೆ ಮಹಾಭಾರತಾದಿ ಗ್ರಂಥಗಳನ್ನು ನಿರ್ಮಿಸಲಾಗಿದೆ ಎಂದು ಹೇಳಿದ್ದಾರೆ.

**प्रकाशः** – **वेदकार्येति** ।। तस्य यथा ब्रह्माद्यर्थावबोधद्वारा फलहेतुत्वं तथा इतिहासादिश्रवणस्यापीत्यर्थः ।

ಯಾವರೀತಿಯಾಗಿ ವೇದವು ಬ್ರಹ್ಮನ ಸ್ವರೂಪವನ್ನು ತಿಳಿಸುವ ಮೂಲಕ ಬ್ರಾಹ್ಮಣಾದಿಗಳಿಗೆ ಫಲಹೇತುವಾಗಿದೆಯೋ, ಅದರಂತೆ ಇತಿಹಾಸಾದಿ ಶ್ರವಣಗಳೂ ಕೂಡ ಶೂದ್ರಾದಿಗಳಿಗೆ ಫಲದಾಯಕವಾಗಿದೆ.

**प्रकाशः** – ननु वेदानधिकारे कथं तत्कार्ये ब्रह्मज्ञानादावधिकारस्स्यात् । ''इति भारतमाख्यानम्'' इति स्मृतिस्तु भारतप्रशंसामात्रपरत्वेनोपपद्यत इत्यत आह – **यथा चेति** ।।

ವೇದದಲ್ಲಿ ಅಧಿಕಾರವಿಲ್ಲದ ಶೂದ್ರಾದಿಗಳಿಗೆ ವೇದದಿಂದ ತಿಳಿಸುವ ಅರ್ಥವನ್ನೇ ಹೇಳುವಂತಹ ಇತಿಹಾಸಾದಿಗಳಲ್ಲಿ ಅಧಿಕಾರವನ್ನು ಹೇಳಲು ಹೇಗೆ ಸಾಧ್ಯ ? 'ಇತಿ ಭಾರತಮಾಖ್ಯಾನಮ್' ಎಂಬ ಸ್ಮೃತಿಗೆ ಕೇವಲ ಮಹಾಭಾರತಾದಿ ಪ್ರಶಂಸಾಪರವಾಗಿ ಅರ್ಥೈಸಬೇಕಲ್ಲವೇ? ಎಂಬ ಪ್ರಶ್ನೆಗೆ 'ಯಥಾ ಚ' ಎಂಬ ವಾಕ್ಯವು ಉತ್ತರಿಸಿದೆ.

**प्रकाशः** – प्रपत्तिः भरन्यासः । इत्यादेश्च गीतायामित्यर्थः – **भाष्येति** ।। अणुभाष्यकृदित्यर्थः । अन्यथा न ज्ञेय इत्येवावक्ष्यदिति भावः ।

ರಾಮಾನುಜಮತದಲ್ಲಿ 'ಪ್ರಪತ್ತಿ' ಎಂದರೆ ಸಂಪೂರ್ಣ ಭಾರವನ್ನು ದೇವರ ಮೇಲಿಡುವುದು. ಅಂದರೆ ಶರಣಾಗತನಾಗುವುದು ಎಂದರ್ಥ. 'ಇತ್ಯಾದೇಶ್ಚ' ಎಂದರೆ ಇತ್ಯಾದಿಯಾಗಿ ಹೇಳಲಾಗಿದೆ ಎಂದರ್ಥ. 'ಭಾಷ್ಯಕೃತ್' ಎಂದರೆ ಅಣುಭಾಷ್ಯವನ್ನು ರಚನೆ ಮಾಡಿದ ಶ್ರೀಮದಾಚಾರ್ಯರು ಎಂದರ್ಥ. ಅಣುಭಾಷ್ಯದಲ್ಲಿ 'ನ ಜ್ಞೇಯಃ' ಎಂದಷ್ಟೇ ಹೇಳಬಹುದಿತ್ತು. ವೇದಗಳಿಂದ ಶೂದ್ರಾದಿಗಳು ತಿಳಿಯಬಾರದೆಂದು ಹೇಳಿದ್ದರಿಂದ ಇತಿಹಾಸಾದಿಗಳಿಂದ ತಿಳಿಯಬಹುದು ಎಂದಂತಾಯಿತು.

**गुरुराजीयम्** – ननु न शूद्रस्य ब्रह्मोपासनाधिकारप्रसङ्गः । उपासनां प्रत्यङ्गीभूतकर्मण्यध्ययनोपेतताभावेनानधिकारेण तदङ्गिभूतोपासनायामनधिकारात् । न ह्यङ्गिन्यधिकारस्तदङ्गे त्वनधिकार इति सम्भवतीत्यत आह – **कर्मानधिकारादेवेति**।। **वैयर्थ्यमिति** ।। कर्मण्यनधिकारादेव तदङ्गकोपासनानधिकारादिति भावः । नन्वितिहासपुराणाभ्यामिति वाक्यस्येतिहासाद्यनुसारिण्येवार्थे वेदस्य तात्पर्यमित्येवं परत्वं किमर्थं कल्पनीयम् । वेदनैरपेक्ष्येणापीतिहासादिर्न बोधक इत्येवं परमपि किं न स्यादित्यत आह – **अनेकेति** ।। ननु पुराणादौ सर्ववेदार्थानुक्त्या वेदे चैकदेशस्योक्त्या कथं पुराणादिजन्यज्ञानस्य साफल्यं स्यात् । सर्ववेदार्थज्ञानस्यैव फलजनकत्वादित्यत उक्तमनेकेति – **श्रवणविधानादिति** ।। तथा च विहितश्रवणजन्यज्ञानस्य फलदत्वमावश्यकमिति भावः । ननु श्रवणस्य पापक्षयार्थत्वेन ज्ञानार्थत्वाभावात्पापक्षयस्यैव विहितश्रवणसाध्यत्वेन न तस्य फलवत्त्वमित्यभिप्रेत्य शङ्कते – **नच श्रवणं न ज्ञानार्थमिति** ।




ರಾಮಾನುಜರು ಅಪಶೂದ್ರಾಧಿಕರಣದ ರಚನೆಯನ್ನು ಹೀಗೆ ಮಾಡಿದ್ದಾರೆ -

ಪೂರ್ವಪಕ್ಷ - ಶೂದ್ರಾದಿಗಳಿಗೆ ಉಪನಯನಾದಿ ಸಂಸ್ಕಾರಗಳಿಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಮತ್ತು ಅಧ್ಯಯನವು ಸ್ವಾಧ್ಯಾಯದ ಸಂಸ್ಕಾರ ರೂಪವಾದ್ದರಿಂದ ಅದರಲ್ಲೂ ಅಧಿಕಾರವಿಲ್ಲ. ಭಾಷಾ ಪ್ರಬಂಧಾದಿಗಳಿಂದ ಪಡೆಯುವ ಜ್ಞಾನವು ಶ್ರೇಯಸ್ಸಾಧನವಾಗುವುದಿಲ್ಲ. ಆದ್ದರಿಂದ ಮಹಾಭಾರತಾದಿ ಗ್ರಂಥಗಳನ್ನು ಕೇಳಿ ತಿಳಿದು, ಅದರಿಂದ ಬ್ರಹ್ಮಜ್ಞಾನವನ್ನು ಪಡೆದು ಬ್ರಹೋಪಾಸನೆಯಲ್ಲಿ ತೊಡಗಬೇಕು.

ಪರಿಪೂರ್ಣಚಂದ್ರಿಕಾ

ಸಿದ್ಧಾಂತ - 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ಮಾತಿನಂತೆ ಇತಿಹಾಸ ಪುರಾಣಾದಿಗಳ ಪ್ರವೃತ್ತಿಯೇ ವೇದವನ್ನು ಅಧ್ಯಯನ ಮಾಡುವುದಕ್ಕಾಗಿ; ಇವುಗಳಲ್ಲಿ ಹೇಳಿದ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ವೇದಾಧ್ಯಯನ ಮಾಡಿ, ತನ್ಮೂಲಕ ಭಗವಂತನನ್ನು ಅರಿಯಬೇಕು ಹೊರತಾಗಿ, ಇತಿಹಾಸಪುರಾಣದಿಗಳನ್ನು ಸ್ವತಂತ್ರವಾಗಿ ಅಧ್ಯಯನ ಮಾಡಿ ಬ್ರಹ್ಮನನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಶೂದ್ರನಿಗೆ ಮಹಾಭಾರತಾದಿ ಗ್ರಂಥಗಳ ಅಧ್ಯಯನದಲ್ಲೂ ಅಧಿಕಾರವಿರುವುದಿಲ್ಲ.

ರಾಮಾನುಜರ ಈ ಅಧಿಕರಣಶರೀರವು ಅಸಾಧುವಾಗಿದೆ. ಮೊದಲು ಪೂರ್ವಪಕ್ಷ ಮಾಡುವಾಗ ವೇದದಲ್ಲಿ ಅಧಿಕಾರವಿಲ್ಲದ ಕಾರಣ ಯಾಗಾದಿಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಹೇಳಿದರು. ಆದರೆ ಅನೇಕ ಸ್ಮೃತಿಗಳನ್ನು ಓದಿ ಯಾಗಾದಿಕರ್ಮಗಳ ಜ್ಞಾನವನ್ನು ಸಂಪಾದನೆ ಮಾಡಬಹುದು. ಮತ್ತು ಸಂವರ್ಗವಿದ್ಯೆಯ ಪ್ರಕರಣವನ್ನು ನೋಡಿದಾಗ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದಷ್ಟೇ ತಿಳಿಯುತ್ತದೆ. ಇತಿಹಾಸಾದಿಗಳಲ್ಲಿ ಅಧಿಕಾರವಿಲ್ಲವೆಂದು ಅಲ್ಲಿ ಹೇಳಿಲ್ಲ. ಮತ್ತು ಇತಿಹಾಸಾದಿಗಳಿಂದ ಬ್ರಹ್ಮಜ್ಞಾನವನ್ನು ಪಡೆಯಬಾರದೆನ್ನಲು ಯಾವುದೇ ನಿಷೇಧವಾಕ್ಯಗಳು ಕಾಣಿಸುತ್ತಿಲ್ಲ. 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ವಾಕ್ಯವು ವೇದಗಳ ತಾತ್ಪರ್ಯವನ್ನು ಇತಿಹಾಸಾದಿಗಳಿಗೆ ಅನುಸಾರಿಯಾಗಿ ಅರಿಯಬೇಕೆನ್ನಲು ಹೊರಟದೆ ಹೊರತು, ವೇದವನ್ನು ಅಪೇಕ್ಷೆ ಪಡದೆ ಸ್ವತಂತ್ರವಾಗಿ ಇತಿಹಾಸಾದಿಗಳಿಂದ ತತ್ತ್ವಜ್ಞಾನವನ್ನು ಪಡೆಯಲೇಬಾರದೆಂದು ಹೇಳುವುದಕ್ಕಾಗಿ ಹೊರಟಿಲ್ಲ. ಆದ್ದರಿಂದ ಶೂದ್ರಾದಿಗಳು ಮಹಾಭಾರತಾದಿಗಳಿಂದ ಬ್ರಹ್ಮಜ್ಞಾನವನ್ನು ಪಡೆದು ಅದನ್ನು ಉಪಾಸನೆ ಮಾಡಬಹುದು. ಹೀಗೆ ಶೂದ್ರಾದಿಗಳು ತತ್ತ್ವಜ್ಞಾನವನ್ನು ಸಂಪಾದನೆ ಮಾಡಬೇಕೆಂದು ಹೇಳಲು ಆಧಾರವಿದೆ. ಮತ್ತು ಹಾಗೇ ಅವರು ಮಾಡುವುದರಿಂದ ಫಲವೂ ಸಹ ದೊರೆಯುತ್ತದೆಂದು 'ಶೂದ್ರಃಸುಖಮವಾಪ್ನುಯಾತ್' ಇತ್ಯಾದಿಗಳು ಹೇಳುತ್ತಿವೆ. ಮಹಾಭಾರತಾದಿ ಗ್ರಂಥಗಳ ಶ್ರವಣದಿಂದ ಶೂದ್ರಾದಿಗಳಿಗೆ ತತ್ತ್ವಜ್ಞಾನವು ದೊರೆತು ಅದರಿಂದ ಉಪಾಸನೆಯಲ್ಲಿ ತೊಡಗಬಹುದು. ಕೇವಲ ಪಾಪಕ್ಷಯಕ್ಕಾಗಿ ಈ ವಾಕ್ಯವು ಶೂದ್ರಾದಿಗಳಿಗೆ ಮಹಾಭಾರತಾದಿ ಗ್ರಂಥಗಳ ಪಠನವನ್ನು ಹೇಳುತ್ತಿಲ್ಲ.

ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥

ಇತ್ಯಾದಿ ಸ್ಮೃತಿಯಿಂದಲೂ ಮಹಾಭಾರತಾದಿ ಗ್ರಂಥಗಳ ನಿರ್ಮಾಣವಾಗಿದ್ದೇ ಶೂದ್ರರಿಗೋಸ್ಕರ ಎಂದು ತಿಳಿಯುತ್ತದೆ. ಆದ್ದರಿಂದ ವೇದದಿಂದ ಬ್ರಹ್ಮಜ್ಞಾನವನ್ನು ಪಡೆಯಲು ಶೂದ್ರಾದಿಗಳಿಗೆ ಅಧಿಕಾರವಿಲ್ಲದಿದ್ದರೂ ಇತಿಹಾಸಾದಿಗಳಿಂದ ಬ್ರಹ್ಮಜ್ಞಾನವನ್ನು ಪಡೆಯಲು ಅಧಿಕಾರವನ್ನು ಹೊಂದಿದ್ದಾರೆ. ಭವಗದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಸ್ಪಷ್ಟವಾಗಿ -

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ।
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ'

ಅಪಶೂದ್ರಾಧಿಕರಣ (೧-೩-೯)

ಏಲೈ ! ಪ್ರಾರ್ಥನೇ ಪಾಪ ಯೋನಿಯಲ್ಲಿ ಹುಟ್ಟಿದ್ದರೂ ಸ್ತ್ರೀಯರು, ವೈಶ್ಯರು, ಶೂದ್ರರು, ನನ್ನನ್ನು ತಿಳಿದು, ನನ್ನನ್ನೇ ಪಡೆಯುತ್ತಾರೆ. ಹೀಗಿರುವಾಗ ಪುಣ್ಯಾತ್ಮನಾದ ಬ್ರಾಹ್ಮಣರು ಭಕ್ತರಾದ ರಾಜರ್ಷಿಗಳು ನನ್ನನ್ನು ಹೊಂದದೇ ಇರುತ್ತಾರೇನು? ಎಂದು ಸ್ತ್ರೀ-ಶೂದ್ರಾದಿಗಳೂ ಸಹ ತನ್ನನ್ನು ತಿಳಿಯುತ್ತಾರೆಂದು ಹೇಳಿರುತ್ತಾನೆ. ಆದ್ದರಿಂದ ಸ್ತ್ರೀಯರಿಗೆ ಇತಿಹಾಸಾದಿ ಗ್ರಂಥಗಳಿಂದ ಭಗವತ್ತತ್ವವನ್ನು ಅರಿಯಲು ಅಧಿಕಾರವಿಲ್ಲವೆಂಬ ರಾಮಾನುಜರ ಸಿದ್ಧಾಂತವು ಅಸಾಧುವಾಗಿದೆ.



• • • • •

## ಅದ್ವೈತ ಹಾಗೂ ವಿಶಿಷ್ಟಾದ್ವೈತ ಮತದ ಪ್ರಥಮಸೂತ್ರಾರ್ಥ ವಿಮರ್ಶೆ

### तात्पर्यचन्द्रिका

**यच्चोक्तं परैः पौत्रायणस्य या शुक् सा रैक्केण शूद्रशब्देन सूच्यत इति सौत्रस्य सूच्यत इति पदस्यार्थ इति**

ಅನುವಾದ - ಅದ್ವೈತಿಗಳು ಪ್ರಥಮಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಪೌತ್ರಾಯಣನಿಗೆ ಯಾವ ಶೋಕವು ಪ್ರಾಪ್ತವಾಗಿದೆಯೋ, ಅದನ್ನು ರೈಕ್ವಮುನಿಯು 'ಶೂದ್ರ' ಶಬ್ದದಿಂದ ಸಂಬೋಧನೆ ಮಾಡಿ ಸೂಚನೆ ಮಾಡಿದ್ದಾರೆ. ಇದು ಸೂತ್ರದಲ್ಲಿರುವ 'ಸೂಚ್ಯತೇ' ಎಂಬ ಪದದ ಅರ್ಥ.

**तन्न । यौगिकेन शूद्रशब्देन शोकस्योक्ततया सूचनाभावात् ।**

ಇದು ತಪ್ಪು. ಸಂಬೋಧನೆ ಮಾಡಲ್ಪಟ್ಟ ಶೂದ್ರಶಬ್ದಕ್ಕೆ ನೇರವಾಗಿ ಯೌಗಿಕಾರ್ಥದಿಂದಲೇ ದುಃಖವನ್ನು ಹೊಂದಿರುತ್ತಿ ಎಂಬರ್ಥವನ್ನು ಹೇಳಲು ಬರುವಾಗ, ಸೂಚನೆ ಮಾಡಿದ್ದಾರೆ ಎಂದು ಹೇಳುವುದು ತಪ್ಪು.

**केचित्तु "शुचेर्दश्च" इत्युणादिसूत्रेण रप्रत्यये धातोश्च दीर्घे चकारस्य च दकारे कृते शूद्र इति भवति ।**

ರಾಮಾನುಜರ ಪ್ರಥಮಸೂತ್ರ ವ್ಯಾಖ್ಯಾನ ಹೀಗಿದೆ - 'ಶುಚ್' ಧಾತುವಿಗೆ 'ಶುಚೇರ್ದಶ್ಚ' ಎಂಬ ಉಣಾದಿಸೂತ್ರದಿಂದ 'ರ' ಪ್ರತ್ಯಯವು ಬರುತ್ತದೆ. 'ಧಾತೋಶ್ಚ' ಎಂಬ ಸೂತ್ರದಿಂದ ದೀರ್ಘ ಬಂದು 'ಶುಚ್' ಧಾತುವಿನ 'ಚ'ಕಾರಕ್ಕೆ 'ದ'ಕಾರ ಬಂದರೆ 'ಶೂದ್ರ' ಎಂಬ ರೂಪವು ಸಿದ್ಧವಾಗುತ್ತದೆ.

**तेन शोचितृत्वमेव शूद्रशब्दार्थ इति सूत्रे विवक्षितम् । नतु शुचा द्रवणं तस्यार्थ इति तदा द्रवणादित्याद्रवणोक्तिस्तु शोके लिङ्गतया । नतु शूद्रशब्दार्थतया ।**

ಹೀಗೆ ಹೇಳಿದ್ದರಿಂದ 'ಶೂದ್ರ' ಶಬ್ದಕ್ಕೆ ದುಃಖಪಟ್ಟವನು ಎಂಬಷ್ಟೇ ಅರ್ಥವನ್ನು ಸೂತ್ರದಿಂದ ವಿವಕ್ಷಿಸಿದಂತಾಯಿತು ಹೊರತು, ದುಃಖದಿಂದ ಮುನಿಯ ಬಳಿ ಹೊರಟಿದ್ದಾನೆ ಎಂಬರ್ಥವು ದೊರೆಯುವುದಿಲ್ಲ. ಹಾಗಾದರೆ ಸೂತ್ರಕಾರರು ಆದ್ರವಣವನ್ನು ಏಕೆ ಹೇಳಿದ್ದಾರೆಂದರೆ, ಶೂದ್ರಶಬ್ದದ ಅರ್ಥವೆಂಬ ದೃಷ್ಟಿಯಿಂದಲ್ಲ ಹೊರತಾಗಿ, ಶೋಕವಾಗಿದೆಯೆನ್ನಲು ಲಿಂಗವಾಗಿದೆಯೆಂಬ ದೃಷ್ಟಿಯಿಂದ.

**अनादरश्रवणवदाद्रवणस्यापि पञ्चमीनिर्देशेन प्रथमानिर्दिष्टायां शुचिहेतुत्वस्यैवान्याय्यत्वात् । अनादरश्रवणं हि शुचिकारणतया लिङ्गम् । आद्रवणं तु कार्यतयेत्याहुः ।**

ಅನಾದರಶ್ರವಣವನ್ನು ಪಂಚಮೀವಿಭಕ್ತಿಯಲ್ಲಿ ಹೇಳಿದಂತೆ ಆದ್ರವಣವನ್ನೂ ಕೂಡ ಪಂಚಮೀ ವಿಭಕ್ತಿಯಲ್ಲಿ ಹೇಳಲಾಗಿದೆ. ಪ್ರಥಮಾವಿಭಕ್ತಿಯಿಂದ ನಿರ್ದಿಷ್ಟವಾದ ಶೋಕಕ್ಕೆ ಇವೆರಡೂ ಹೇತುಗಳಾಗಿವೆ ಎಂದು ಹೇಳುವುದೇ ನ್ಯಾಯಸಮ್ಮತವಾದದ್ದು. ಅನಾದರಶ್ರವಣವು ಶೋಕಕ್ಕೆ ಕಾರಣತಯಾ ಲಿಂಗವಾಗಿದೆ. ಆದ್ರವಣವು ಶೋಕಕ್ಕೆ ಕಾರ್ಯತಯಾ ಲಿಂಗವಾಗಿದೆ ಎಂದಷ್ಟೇ ವ್ಯತ್ಯಾಸ.

(ಅಭಿಪ್ರಾಯವಿಷ್ಟು - 'ಶುಕ್' ಎಂಬುದು ಪ್ರಥಮಾವಿಭಕ್ತಿಯಲ್ಲಿರುವುದರಿಂದ ಸಾಧ್ಯವೆಂದು ತಿಳಿಯಬೇಕು. ಇದಕ್ಕೆ 'ಅನಾದರಶ್ರವಣ' ಮತ್ತು 'ಆದ್ರವಣ' ಎಂಬೆರಡು ಹೇತುಗಳಿವೆ. ಎರಡು ಲಿಂಗಗಳನ್ನೇಕೆ ಹೇಳಿದ್ದಾರೆಂದರೆ ಶೋಕವಾಗಿದೆಯೆನ್ನಲು ಅನಾದರಶ್ರವಣವು ಕಾರಣತಯಾ ಲಿಂಗವಾಗಿದೆ. 'ಪೌತ್ರಾಯಣಃ ಶೋಕವಾನ್ ಹಂಸಕೃತ ಅನಾದರ ಶ್ರವಣಕರ್ತೃತ್ವಾತ್' ಎಂದು ಅದರಂತೆ ಆದ್ರವಣವು ಕಾರ್ಯತಯಾ ಲಿಂಗವಾಗಿದೆ. ಅಂದರೆ 'ಪೌತ್ರಾಯಣಃ ಶೋಕವಾನ್ ಆದ್ರವಣಾತ್' ಆದ್ರವಣವು ಶೋಕದ ಕಾರ್ಯವಾದ್ದರಿಂದ ಪೌತ್ರಾಯಣನಿಗೆ ದುಃಖವಾಗಿದೆಯೆಂದು ಅನುಮಾನದ ಅಭಿಪ್ರಾಯ. ಹೀಗೆ ವ್ಯಾಖ್ಯಾನಿಸಬೇಕು ಹೊರತು, ಆದ್ರವಣವು ಶೂದ್ರಶಬ್ದದ ಅರ್ಥವೆಂದು ವ್ಯಾಖ್ಯಾನಿಸಬಾರದು.)

**तन्न । आद्रवणस्यापि शुचिहेतुत्वे च शब्दापातात् ।**

ರಾಮಾನುಜರ ಈ ವ್ಯಾಖ್ಯಾನವೂ ಕೂಡ ತಪ್ಪು. ಅನಾದರಶ್ರವಣದಂತೆ ಆದ್ರವಣವೂ ಕೂಡ ಹೇತುವಾಗಿದ್ದಲ್ಲಿ, ಸೂತ್ರದಲ್ಲಿ 'ಚ' ಶಬ್ದವಿರಬೇಕಿತ್ತು. ಆದರೆ 'ಚ' ಶಬ್ದವಿಲ್ಲದ ಕಾರಣ, ಎರಡು ಲಿಂಗಗಳನ್ನು ಸೂತ್ರಕಾರರು ವಿವಕ್ಷಿಸಿದ್ದಾರೆಂದು ವ್ಯಾಖ್ಯಾನಿಸಲು ಬರುವುದಿಲ್ಲ.

**पञ्चमी तु शुचा द्रवणाच्छूद्रो नतु चतुर्थजातियोगादित्यवश्याध्याहार्यप्रधानसाध्यान्वयात् ।**

ಆದ್ರವಣವು ಹೇತುವಲ್ಲದಿದ್ದರೆ, ಪಂಚಮೀವಿಭಕ್ತಿಯನ್ನು ಹೇಗೆ ಕೂಡಿಸಬೇಕು? ಎಂಬ ಗೊಂದಲಕ್ಕೆ ಅವಕಾಶವಿಲ್ಲ. ಸೂತ್ರದಲ್ಲಿ ಕೇಳಿಸುತ್ತಿರುವ 'ಅಸ್ಯ ಶುಕಕ್' ಎಂಬುದು

ಪ್ರಧಾನಸಾಧ್ಯವಲ್ಲ. ಪೌತ್ರಾಯಣನು ದುಃಖದಿಂದ ಬಂದಿದ್ದಾನೆಂಬ ಕಾರಣದಿಂದಷ್ಟೇ ಶೂದ್ರಶಬ್ದದಿಂದ ಪ್ರತಿಪಾದ್ಯನು ಹೊರತು, ಚತುರ್ಥಜಾತಿಯವನಾದ್ದರಿಂದಲ್ಲ ಎಂಬುದು ಪ್ರಧಾನವಾದ ಸಾಧ್ಯ. ಇದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಧ್ಯಾಹೃತವಾದ ಈ ಪ್ರಧಾನಸಾಧ್ಯದಲ್ಲಿ ಆದ್ರವಣವು ಹೇತುವಾಗುತ್ತದೆ. ಆದಕ್ಕಾಗಿ ಪಂಚಮೀವಿಭಕ್ತಿಯು ಸಾರ್ಥಕ.

**किं चात्र शूद्रशब्दस्यौणादिकरप्रत्ययान्ततायां न जात्यर्थत्वनिराससिद्धिः । जातिवाचिनोऽपि तदन्तत्वात् ।**

ಮತ್ತು ಶೂದ್ರಶಬ್ದಕ್ಕೆ ಔಣಾದಿಕೇ 'ರ' ಪ್ರತ್ಯಯವನ್ನು ಹೇಳಿ ನಿಷ್ಪನ್ನ ಮಾಡಿದಿರಿ. ಇದರಿಂದೇನೂ ಜಾತ್ಯರ್ಥತ್ವವನ್ನು ನಿರಾಕರಣೆ ಮಾಡಿದಂತಾಗಲಿಲ್ಲ. ಏಕೆಂದರೆ ಜಾತಿವಾಚಿಯಾದ ಶೂದ್ರಶಬ್ದವೂ ಸಹ ಔಣಾದಿಕೇ 'ರ'ಪ್ರತ್ಯಯಾಂತವೇ ಆಗಿರುತ್ತದೆ.

**तस्माद्रुग्द्रावणाद्रुद्र इतिवच्छुचाऽऽद्रवणाच्छूद्र इति नैरुक्तः शूद्रशब्दः ।**

ಆದ್ದರಿಂದ ಶೂದ್ರಶಬ್ದವು ನಿರುಕ್ತಿಬಲದಿಂದ ಸಿದ್ಧವಾಗಿದೆ ಹೊರತು, ವ್ಯಾಕರಣದಿಂದಲ್ಲ. ಯಾವರೀತಿಯಾಗಿ 'ರುಗ್‌ದ್ರಾವಣಾತ್' ಎಂದು ರುದ್ರಶಬ್ದವು ನಿಷ್ಪನ್ನವಾಗಿದೆಯೋ, ಅದರಂತೆ 'ಶುಚಾಆದ್ರವಣಾತ್' ಎಂಬ ನಿಷ್ಪತ್ತಿಯಿಂದ ಶೂದ್ರ ಶಬ್ದವೂ ನಿಷ್ಪನ್ನವಾಗಿದೆ. 'ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ' ಎಂಬ ಮಾತಿನಂತೆ ರೋಗಗಳನ್ನು ಪರಿಹಾರ ಮಾಡುತ್ತಾನೆಂಬ ಕಾರಣದಿಂದ ಪರಮಾತ್ಮನು 'ರುದ್ರ' ಎನಿಸಿದ್ದಾನೆ. ಇಲ್ಲಿಯೂ ಸಹ 'ರುಜಂ ದ್ರಾವಯತೇ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಿದಾಗ 'ರುಗ್‌ದ್ರ' ಎಂದಾಗಬೇಕು. ಆದರೂ 'ರುದ್ರ' ಎಂದೇ ಕರೆಯುತ್ತೇವೆ. ಅದರಂತೆ ಇಲ್ಲಿಯೂ ಸಹ 'ಶುಗ್‌ದ್ರ' ಎಂದಾಗಬೇಕು. ಆದರೆ ಪೃಷೋದರಾದಿಗಣದಲ್ಲಿ ಸೇರಿರುವ ಕಾರಣದಿಂದ 'ಗ'ಕಾರವು ಲೋಪವಾಗಿ 'ಶುಚ್' ಎಂಬ ಉಪಪದದಲ್ಲಿ 'ಉ' ಕಾರಕ್ಕೆ ದೀರ್ಘ ಬಂದು ಶೂದ್ರ ಎಂಬ ರೂಪವು ನಿಷ್ಪನ್ನವಾಗಿದೆ.

**प्रकाशः –**

एवं मतद्वयेऽप्यधिकरणशरीरं निरस्याद्यसूत्रार्थं तावन्निरस्यति – यच्चेत्यादिना ॥

ವಿವರಣೆ - ಇಲ್ಲಿಯ ತನಕ ಶಾಂಕರಭಾಷ್ಯದ ಪ್ರಕಾರ ಹಾಗೂ ರಾಮಾನುಜ ಭಾಷ್ಯದ ಪ್ರಕಾರ ಅಪಶೂದ್ರಾಧಿಕರಣವನ್ನು ಅನುವಾದ ಮಾಡಿ ನಿರಾಕರಣೆ ಮಾಡಲಾಯಿತು. ಈಗ ಪ್ರಥಮಸೂತ್ರಕ್ಕೆ ಅದ್ವೈತಭಾಷ್ಯದಲ್ಲಿ ಹಾಗೂ ರಾಮಾನುಜ ಭಾಷ್ಯದಲ್ಲಿ ಹೇಳಿದ ಅರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ.

**प्रकाशः – ''कम्वर एनम्'' इत्यादिवाक्यादस्य जानश्रुतेस्स्वस्मिन्ननादरश्रवणाद्या शुगुत्पन्ना सा रैकेण शुचा द्रवणाच्छूद्रेति शब्देन सूच्यते हि यस्मात्तस्मान्नायं शूद्रो जात्येत्यर्थः ।।**

'ಕಮ್ವರ ಏನಮ್' ಇತ್ಯಾದಿ ವಾಕ್ಯದಿಂದ ಜಾನಶ್ರುತಿಗೆ ತನ್ನ ಬಗ್ಗೆ ತಿರಸ್ಕಾರ ಮಾಡಿದ್ದು ಶ್ರುತವಾಗಿದೆ. ಇದರಿಂದ ಅವನಿಗೆ ಶೋಕವುಂಟಾಗಿದೆ. ಹಾಗಾಗಿ ಶೋಕದಿಂದಲೇ ರೈಕ್ವ ಮುನಿಯ ಬಳಿ ಹೋಗಿದ್ದಾನೆಂಬ ಕಾರಣದಿಂದ ಶೂದ್ರನೆನಿಸಿದ್ದಾನೆ. ಇದನ್ನು 'ಶೂದ್ರ' ಶಬ್ದವು ಸೂಚನೆ ಮಾಡುತ್ತಿದೆಯೆಂದು ಸೂತ್ರದಲ್ಲಿರುವ 'ಸೂಚ್ಯತೇ' ಎಂಬ ಪದವು ಹೇಳುತ್ತಿದೆ. ಆದ್ದರಿಂದ ಜಾತಿನಿಮಿತ್ತಕವಾಗಿ ಪೌತ್ರಾಯಣನು ಶೂದ್ರನೆನಿಸುವುದಿಲ್ಲ.

ಒಟ್ಟು ಅಭಿಪ್ರಾಯ - ರೈಕ್ವನು ಪೌತ್ರಾಯಣನನ್ನು 'ಶೂದ್ರ' ಎಂದು ಸಂಬೋಧನೆ ಮಾಡಿರುವುದು ಶೋಕಪೂರ್ಣನಾಗಿರುವುದೇ ಕಾರಣ. ಹಂಸಗಳು ಮಾಡಿರುವ ಅನಾದರವೇ ಇವನ ದುಃಖಕ್ಕೆ ಕಾರಣವಾಗಿವೆ. ಆದ್ದರಿಂದ 'ತದಾದ್ರವಣಾತ್' = 'ಶುಚಮ್ ಅಭಿದುದ್ರಾವ ಶುಚಾ ಅಭಿದುದ್ರುವೇ, ಶುಚಾ ರೈಕ್ವಮ್ ಅಭಿದುದ್ರಾವ ಇತಿ ಶೂದ್ರಃ' ಎಂಬ ಯೌಗಿಕಾರ್ಥದಲ್ಲಿ ಶೂದ್ರಶಬ್ದವು ಪೌತ್ರಾಯಣನಿಗೆ ಸಂಬಂಧಪಡುತ್ತದೆ ಹೊರತು, ಜಾತಿನಿಮಿತ್ತದಿಂದಲ್ಲ ಎಂದು.

**प्रकाशः – केचित्त्विति ।। अस्य शुश्रूषोर्जानश्रुतेर्ब्रह्मज्ञानवैकल्येन हंसोक्तानादर-वाक्यश्रवणात्तदा तदैव ब्रह्मविदो रैकस्य सकाशं प्रत्याद्रवणाच्छुगस्य सञ्जातेति सूच्यते हि यतोऽतः शूद्रेत्यामंत्र्यते । न वर्णावरत्वेनेत्यर्थः ।।**

ರಾಮಾನುಜರ ವ್ಯಾಖ್ಯಾನ ಹೀಗಿದೆ - ಸಂವರ್ಗವಿದ್ಯೆಯನ್ನು ಕೇಳಲು ಬಯಸಿದ ಜಾನಶ್ರುತಿಗೆ ಬ್ರಹ್ಮಜ್ಞಾನವನ್ನೇ ಪಡೆದಿಲ್ಲವೆಂಬ ಹಂಸಗಳ ಮಾತಿನಿಂದ ತಿರಸ್ಕಾರದ ಅರಿವಾಗುತ್ತದೆ. ಅನಂತರ ಬ್ರಹ್ಮಜ್ಞಾನಿಯಾದ ರೈಕ್ವನ ಬಳಿ ಹೋಗುತ್ತಾನೆ. ಆದಕಾರಣ ಇವನನ್ನು 'ಶೂದ್ರ' ಎಂದು ಅವರು ಸಂಬೋಧನೆ ಮಾಡಿದರೆ ಹೊರತು, ಜಾತಿನಿಮಿತ್ತದಿಂದಲ್ಲ.

ಅಸ್ಯ ಜಾನಶ್ರುತಿಗೆ ಅನಾದರ ಶ್ರವಣಾತ್ = ಅನಾದರ ವಾಕ್ಯವನ್ನು ಕೇಳಿದ್ದರಿಂದ, ತದಾ = ಆವಾಗಲೇ ಬ್ರಹ್ಮಜ್ಞಾನಿಯಾದ ರೈಕ್ವನ ಬಳಿ, ಆದ್ರವಣಾತ್ = ಹೋಗಿದ್ದರಿಂದ, ಅಸ್ಯ = ಪೌತ್ರಾಯಣನಿಗೆ, ಶುಕ್ = ಶೋಕವು ಉತ್ಪನ್ನವಾಗಿದೆಯೆಂದು ಸೂತ್ರಾರ್ಥ.




ಅದ್ವೈತಿಗಳ ಪ್ರಥಮ ಸೂತ್ರ ವ್ಯಾಖ್ಯಾನ ಹೀಗಿದೆ - ರೈಕ್ವ ಋಷಿಯು ಪೌತ್ರಾಯಣನನ್ನು 'ಅಹ ಹಾರೇತ್ವ ಶೂದ್ರ' ಎಂದು ಸಂಬೋಧನೆ ಮಾಡಿರುವುದರಿಂದ ಪೌತ್ರಾಯಣನು ಶೂದ್ರನೇ ಆಗಿದ್ದಾನೆ. ಆದ್ದರಿಂದ ಶೂದ್ರನಿಗೂ ಕೂಡ ವೇದವಿದ್ಯಾಧಿಕಾರವಿದೆ. ಯಜ್ಞಾದಿಕರ್ಮಗಳಲ್ಲಿ ನಿಷೇಧವಿರುವಂತೆ ವೇದವಿದ್ಯೆಯಲ್ಲಿ ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂಬ ನಿಷೇಧವಿರುವುದಿಲ್ಲವೆಂದು ಪೂರ್ವಪಕ್ಷ.

ಶೂದ್ರನಿಗೆ ವೇದವಿದ್ಯಾಧಿಕಾರವನ್ನು ಹೇಳಲು ಅರ್ಥಿತ್ವ , ಸಾಮರ್ಥ್ಯ, ವೈದುಷ್ಯ ಈ ಮೂರು ಆವಶ್ಯಕವಾಗಿವೆ. ಅರ್ಥಿತ್ವವಿದ್ದರೂ ಸಾಮರ್ಥ್ಯವಿಲ್ಲದ ಕಾರಣ ವೇದವಿದ್ಯೆಯಲ್ಲಿ ಅಧಿಕಾರವನ್ನು ಹೊಂದಲಾರನು. ಅಂದರೆ ಶೂದ್ರನಿಗೆ ಉಪನಯನವಿಲ್ಲದ ಕಾರಣ, ವೇದಾಧ್ಯಯನವನ್ನು ಮಾಡಲು ಅರ್ಹತೆಯನ್ನು ಹೊಂದಿಲ್ಲ. ಪೌತ್ರಾಯಣನನ್ನು ರೈಕ್ವ ಋಷಿಯು 'ಶೂದ್ರ' ಎಂದು ಸಂಬೋಧನೆ ಮಾಡಿದ್ದಾರೆ. ಕಾರಣವೇನೆಂದರೆ ಹಂಸಗಳ ಅನಾದರದಿಂದ ದುಃಖಗೊಂಡಿದ್ದಾನೆ. ಈ ದೃಷ್ಟಿಯಿಂದ 'ಶೂದ್ರ' ಶಬ್ದವು ರೈಕ್ವನಲ್ಲಿರುವ ಶೋಕವನ್ನು ಸೂಚನೆ ಮಾಡುತ್ತಿದೆ ಎಂದು.

ರಾಮಾನುಜಭಾಷ್ಯದಲ್ಲಿ ಪ್ರಥಮಸೂತ್ರವ್ಯಾಖ್ಯಾನ ಹೀಗಿದೆ - ಸೂತ್ರದಲ್ಲಿರುವ 'ಶೂದ್ರ' ಶಬ್ದವು 'ಶುಚೇರ್ದಶ್ಚ' ಎಂಬ ಸೂತ್ರದಲ್ಲಿ 'ರ' ಪ್ರತ್ಯಯಬಂದು 'ಶುಚ್' ಧಾತುವಿನ 'ಚ'ಕಾರಕ್ಕೆ 'ದ'ಕಾರ ಬಂದು 'ಶೂದ್ರ' ಎಂದಾಗಿದೆ. ಶೋಕದ ಆಳವನ್ನು ಸೂಚಿಸಲು 'ಶೂ' ಎಂದು ದೀರ್ಘಬಂದಿದೆ. ಇದರಿಂದ ಶೋಚಿತೃತ್ವವು ಶೂದ್ರಶಬ್ದದ ಅರ್ಥವಾಗಿದೆ ಹೊರತು, ಶೋಕದಿಂದ ಬಂದಿದ್ದಾನೆ ಎಂದರ್ಥವಲ್ಲ. ಈ ವಿಷಯದಲ್ಲಿ 'ತದಾದ್ರವಣಾತ್' ಮತ್ತು 'ಅನಾದರಶ್ರವಣಾತ್' ಎಂಬೆರಡು ಹೇತುಗಳನ್ನು ಸೂತ್ರವು ಹೇಳಿದೆ. ಅನಾದರಶ್ರವಣವು ಕಾರಣರೂಪವಾಗಿ ಲಿಂಗವಾಗಿದೆ. ಆದ್ರವಣವು ಕಾರ್ಯರೂಪವಾಗಿ ಲಿಂಗವಾಗಿದೆ.

ಇದು ತಪ್ಪು. ಅನಾದರಶ್ರವಣದಂತೆ ಆದ್ರವಣವು ಲಿಂಗವಾಗುವುದಾದಲ್ಲಿ, 'ಚ'ಶಬ್ದವನ್ನು ಸೂತ್ರಕಾರರು ಹೇಳಬೇಕಿತ್ತು. ಮತ್ತು ಒಂದೇ ಹೇತುವಿನಿಂದಲೇ ಸಾಧ್ಯವು ಸಿದ್ಧವಾಗುತ್ತಿರುವಾಗ ಮತ್ತೊಂದು ಹೇತುವು ಯಾವುದೇ ಅತಿಶಯವನ್ನು ಉಂಟುಮಾಡುತ್ತಿಲ್ಲ. ಪ್ರಧಾನವಾದ ಸಾಧ್ಯದಲ್ಲಿ ಆದ್ರವಣರೂಪ ಹೇತು ಅನ್ವಯವನ್ನೂ ಕೂಡ ಹೊಂದುವುದಿಲ್ಲ. ಆದ್ದರಿಂದ ಆದ್ರವಣವು ಹೇತುವೆಂದು ಹೇಳಬಾರದು. ಮತ್ತು ಶೂದ್ರಶಬ್ದವನ್ನು ಉಣಾದಿಸೂತ್ರದಿಂದ ನಿಷ್ಪತ್ತಿಮಾಡುವುದಾದರೆ ಜಾತ್ಯರ್ಥವಲ್ಲವೆಂದು ನಿರಾಕರಿಸುವುದು ಕಷ್ಟವಾಗುತ್ತದೆ. ಜಾತಿವಾಚಿಯಾದ ಶೂದ್ರಶಬ್ದವೂ ಸಹ 'ರ' ಪ್ರತ್ಯಯಾಂತವೇ ಆಗಿರುತ್ತದೆ. ಹಾಗಾಗಿ ರುದ್ರ ಮೊದಲಾದ ಶಬ್ದಗಳಂತೆ ಶೂದ್ರಶಬ್ದವನ್ನೂ ಕೂಡ ನಿರುಕ್ತದ ಪ್ರಕಾರ ನಿಷ್ಪತ್ತಿ ಮಾಡಬೇಕು.





ಪರಿಪೂರ್ಣಚಂದ್ರಿಕಾ

## तात्पर्यचन्द्रिका

**यच्चोक्तमुभाभ्यां अस्यामेव संवर्गविद्यायामुत्तरत्र ''अथ ह शौनकं च कापेयमभिप्रतारिणं च कार्क्षसेनिम्'' इत्यभिप्रतारिनामापुरुषः कीर्तितः ।**

ಅನುವಾದ - ಶಾಂಕರಭಾಷ್ಯದಲ್ಲಿ ಮತ್ತು ರಾಮಾನುಜ ಭಾಷ್ಯದಲ್ಲಿ 'ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್' ಎಂಬ ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡಿದ್ದಾರೆ -

ಇದೇ ಸಂವರ್ಗವಿದ್ಯೆಯಲ್ಲಿ ಮುಂದೆ 'ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾರ್ಕ್ಷಸೇನಿಮ್' ಎಂಬುದಾಗಿ 'ಅಭಿಪ್ರತಾರಿ' ಎಂಬ ಪುರುಷನನ್ನು ಉಲ್ಲೇಖ ಮಾಡಲಾಗಿದೆ. ಈ ವಾಕ್ಯವನ್ನು ನೋಡಿದಾಗ ಕಾರ್ಕ್ಷಸೇನಿ ಮಗನಾದ ಅಭಿಪ್ರತಾರಿಯು ಕಾಪೇಯಗೋತ್ರದಲ್ಲಿ ಹುಟ್ಟಿದ ಶೌನಕರ ಸಂಪರ್ಕದಲ್ಲಿದ್ದನು ಎಂದು ತಿಳಿಯುತ್ತದೆ.

**स चाभिप्रतारीचैत्ररथ इति तावद्वक्तव्यम् । कापेयाख्येन याजकेन योगात् ।**

ಈ ಅಭಿಪ್ರತಾರಿಯು ಚೈತ್ರರಥನು ಎಂದು ಹೇಳಬೇಕು. ಏಕೆಂದರೆ ಕಾಪೇಯಗೋತ್ರದಲ್ಲಿ ಹುಟ್ಟಿದ ಯಾಜಕರಾದ ಶೌನಕರ ಸಂಬಂಧವನ್ನು ಹೇಳಿರುವುದರಿಂದ.

**कापेयेन याज्यतया योगो हि श्रुत्यन्तरे ''एतेन वै चित्ररथं कापेया अयाजयन्'' इति चित्ररथस्यावगतः ।**

ಕ್ಷತ್ರಿಯಜಾತಿಯಲ್ಲಿ ಹುಟ್ಟಿದ ಚಿತ್ರರಥನು ಕಾಪೇಯಗೋತ್ರದ ಬ್ರಾಹ್ಮಣರಿಂದ ಯಾಗ ಮಾಡಿಸುತ್ತಿದ್ದಾನೆಂದು 'ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್' ಎಂಬುದಾಗಿ ಶ್ರುತ್ಯಂತರದಲ್ಲಿ ಹೇಳಲಾಗಿದೆ.

**नचैवं सत्यभिप्रतारीचित्ररथ एव स्यान्न तु चैत्ररथ इति शङ्क्यम् । तस्याभिप्रतारीति संज्ञाभेदेन चित्ररथादन्यत्वात् ।**

ಹಾಗಾದರೆ ಅಭಿಪ್ರತಾರಿಯು ಚಿತ್ರರಥನಾಗಿದ್ದಾನೆಂದು ಸಮರ್ಥಿಸಬೇಕೇ ಹೊರತು, ಚೈತ್ರರಥನಾಗಿದ್ದಾನೆಂದು ಶಂಕಿಸುವುದು ತಪ್ಪು. ಅಭಿಪ್ರತಾರಿ ಎಂದು ಬೇರೆ ಹೆಸರನ್ನು ಹೇಳಿರುವುದರಿಂದ, ಚಿತ್ರರಥನಿಗಿಂತ ಬೇರೆಯವನೆಂದು ಸ್ಪಷ್ಟವಾಗುತ್ತದೆ.

**चित्ररथादन्यस्य च चित्ररथयाजककापेययोगश्चैत्ररथत्वं विना न युक्तः । समानान्वयानां हि प्रायेण समानान्वयायाजका भवन्ति ।**

ಚಿತ್ರರಥನಿಗಿಂತ ಭಿನ್ನನಾಗಿದ್ದಾನೆ. ಮತ್ತು ಚಿತ್ರರಥನ ಪುರೋಹಿತರಾದ ಕಾಪೇಯ ಋಷಿಗಳ ಸಂಬಂಧವನ್ನು ಹೇಳಲಾಗಿದೆ. ಇದರಿಂದ ಅಭಿಪ್ರತಾರಿಯು ಚಿತ್ರರಥನ ವಂಶದಲ್ಲಿ ಬಂದಿರುವ ಚೈತ್ರರಥನಾಗಿದ್ದಾನೆಂದು ಒಪ್ಪಲೇಬೇಕು. ಹೀಗೊಪ್ಪದಿದ್ದರೆ 'ಚಿತ್ರರಥಾದನ್ಯತ್ವ ಮತ್ತು ಚಿತ್ರರಥ-ಯಾಜಕಕಾಪೇಯಯೋಗತ್ವಗಳೆರಡೂ ಯುಕ್ತವಾಗುವುದಿಲ್ಲ. ಏಕೆಂದರೆ ಒಂದೇ ವಂಶದಲ್ಲಿ ಬಂದವರು ಪ್ರಾಯಶಃ ಒಂದೇ ವಂಶದಲ್ಲಿ ಬಂದಿರುವ ಪುರೋಹಿತರನ್ನೇ ಯಾಜಕರನ್ನಾಗಿ ಸ್ವೀಕರಿಸುತ್ತಾರೆ.

**चैत्ररथस्य क्षत्रियत्वं च "तस्माच्चैत्ररथनामैकः क्षत्रपतिरजायत" इति श्रुत्यन्तरेऽवगतम् ।**

ಚೈತ್ರರಥನು ಕ್ಷತ್ರಿಯನಾಗಿದ್ದಾನೆಂಬುದು 'ತಸ್ಮಾತ್ ಚೈತ್ರರಥನಾಮೈಕಃ ಕ್ಷತ್ರಪತಿರಾಜಯತ' ಎಂಬ ಮತ್ತೊಂದು ಶ್ರುತಿಯಿಂದ ಸ್ಪಷ್ಟವಾಗಿ ತಿಳಿದಿದೆ. ಆದ್ದರಿಂದ 'ಕ್ಷತ್ರಿಯತ್ವಾವಗತೇ ಚೈತ್ರರಥೇನ ಲಿಂಗಾತ್' ಎಂಬ ಸೂತ್ರಕ್ಕೆ ಹೀಗರ್ಥ - 'ಅಭಿಪ್ರತಾರಿ' ಎಂಬ 'ಚೈತ್ರರಥ' ಎಂಬ ಕ್ಷತ್ರಿಯನ ಜೊತೆ ಸಮಭಿವ್ಯಹಾರವೆಂಬ ಲಿಂಗದ ಬಲದಿಂದ ಪೌತ್ರಾಯಣನೂ ಕೂಡ ಕ್ಷತ್ರಿಯನೇ ಆಗಿದ್ದಾನೆಂದು

**एवं चाभिप्रतारिनाम्ना चैत्ररथेन क्षत्रियेण सह समभिव्याहाराल्लिङ्गात्पौत्रायणोपि क्षत्रिय इति द्वितीयार्थ इति । तन्न । समभिव्याहारादित्यस्याध्याहार्यत्वात् । कापेय-मभिप्रतारिणमित्राभिप्रतारिणः कापेयेन सहपाठेऽपि याज्यत्वेन तद्योगाप्रतीतेश्च ।**

ಇದು ತಪ್ಪು. ಸೂತ್ರದಲ್ಲಿ 'ಸಮಭಿವ್ಯಾಹಾರತ್' ಎಂಬುದನ್ನು ಅಧ್ಯಾಹಾರ ಮಾಡುವ ಪ್ರಸಂಗ ಬರುತ್ತದೆ. ನಮ್ಮ ಪ್ರಕಾರ ವ್ಯಾಖ್ಯಾನ ಮಾಡಿದಾಗ ಸಮಭಿವ್ಯಾಹಾರ ಮಾಡುವ ದೋಷವಿಲ್ಲ. ಮತ್ತು ಕಾಪೇಯರ ಜೊತೆಗೆ ಅಭಿಪ್ರತಾರಿಯು ಸಹಪಠಿತನಾಗಿದ್ದ ಮಾತ್ರದಿಂದ ಕಾಪೇಯರು ಯಾಜ್ಯತ್ವೇನ ಅಭಿಪ್ರತಾರಿಯ ಜೊತೆಗೆ ಅನ್ವಯವನ್ನು ಹೊಂದಿದ್ದಾರೆಂದು ತಿಳಿಯಲು ಸಾಧ್ಯವಿಲ್ಲ.

**अस्तु वा याज्यत्वेन तदन्वयः । तथाप्यभिप्रतारिणो न चैत्ररथत्वसिद्धिः । प्रायेणेति वदता त्वयाप्यचैत्ररथानामपि कापेययाज्यत्वाङ्गीकारात् ।**

ಅಥವಾ ಕಾಪೇಯರು ಯಾಜ್ಯತ್ವೇನ ಅನ್ವಯವನ್ನು ಹೊಂದುತ್ತಾರೆಂದು ಒಪ್ಪೋಣ. ಆದರೂ ಸಹ ಅಭಿಪ್ರತಾರಿಯು ಚೈತ್ರರಥನಾಗಿದ್ದಾನೆಂದು ಸಿದ್ಧವಾಗುವುದಿಲ್ಲ. ಏಕೆಂದರೆ ಪ್ರಾಯಶಃ

ಸಮಾನವಂಶದವರು ಸಮಾನವಂಶದಲ್ಲಿರುವ ಯಾಜಕರನ್ನೇ ಅಂಗೀಕರಿಸುತ್ತಾರೆಂದು ನೀವೇ 'ಪ್ರಾಯೇಣ' ಎಂದು ಹೇಳಿರುತ್ತೀರಿ. ಆದ್ದರಿಂದ ಚೈತ್ರರಥನಾಗದಿದ್ದರೂ ಕಾಪೇಯರನ್ನು ಯಾಜ್ಯತ್ವೇನ ಅಂಗೀಕರಿಸಬಹುದು.

**अस्तु वाऽभिप्रतारिणः कापेययोगात्क्षत्रियत्वम् । तथापि न तत्समभिव्याहार-मात्रेण पौत्रायणस्य क्षत्रियत्वम् । कापेय एवानैकान्त्यात् ।**

ಅಥವಾ ಅಭಿಪ್ರತಾರಿಯು ಕಾಪೇಯರ ಸಂಪರ್ಕವನ್ನು ಹೊಂದಿರುವುದರಿಂದ ಕ್ಷತ್ರಿಯರಾಗಿದ್ದಾರೆಂದು ಒಪ್ಪೋಣ. ಆದರೂ ಸಹ ಕಾಪೇಯರ ಸಮಭಿವ್ಯಾಹಾರಮಾತ್ರದಿಂದ ಪೌತ್ರಾಯಣನು ಕ್ಷತ್ರಿಯನಾಗಬೇಕಾಗಿಲ್ಲ. ಏಕೆಂದರೆ ಪೌತ್ರಾಯಣನ ಸಮಭಿವ್ಯಾಹಾರ ಇರುವಂತಹ ಕಾಪೆಯರಲ್ಲೇ ಕ್ಷತ್ರಿಯತ್ವವು ಬಂದಿಲ್ಲ. ಆದ್ದರಿಂದ ಅನೇಕಾಂತ್ಯ ದೋಷವು ಬರುತ್ತದೆ.

**निश्चितब्राह्मण्येन कापेयेन रैक्केण वा समभिव्याहारात्पौत्रायणस्य ब्राह्मण्यापाताच्च ।**

ಮತ್ತು ಕಾಪೇಯರು ಬ್ರಾಹ್ಮಣರಾಗಿದ್ದಾರೆಂದು ನಿಶ್ಚಯವಾಗಿದೆ. ರೈಕ್ವ ಮುನಿಗಳೂ ಸಹ ಬ್ರಾಹ್ಮಣರೆಂದು ನಿಶ್ಚಯವಾಗಿದೆ. ಬ್ರಾಹ್ಮಣರಾದ ಕಾಪೇಯರ ಜೊತೆಗೆ ಅಥವಾ ರೈಕ್ವರ ಜೊತೆಗೆ ಸಮಭಿವ್ಯಾಹಾರವಿರುವ ಕಾರಣ ಪೌತ್ರಾಯಣನೇ ಬ್ರಾಹ್ಮಣನಾಗುವ ಪ್ರಸಂಗ ಬರುತ್ತದೆ.

**नच निश्चितब्राह्मण्येन कापेयेन समभिव्याहृतस्याभिप्रतारिणः क्षत्रियत्वव-न्निश्चितब्राह्मण्येन रैक्केण समभिव्याहारात्पौत्रायणस्यापि क्षत्रियत्वमिति वाच्यम् ।**

ನಿಶ್ಚಿತವಾದ ಬ್ರಾಹ್ಮಣ್ಯವುಳ್ಳ ಕಾಪೇಯರಿಂದ ಸಮಭಿವ್ಯಾಹಾರವಿರುವ ಕಾರಣ ಅಭಿಪ್ರತಾರಿಯು ಕ್ಷತ್ರಿಯನೆಂದು ಹೇಗೆ ನಿಶ್ಚಯವಾಗುತ್ತದೋ, ಅದರಂತೆ ನಿಶ್ಚಿತವಾದ ಬ್ರಾಹ್ಮಣ್ಯವುಳ್ಳ ರೈಕ್ವಮುನಿಗಳಿಂದ ಸಮಭಿವ್ಯಾಹಾರವಿರುವ ಕಾರಣ ಪೌತ್ರಾಯಣನೂ ಕೂಡ ಕ್ಷತ್ರಿಯನಾಗಬೇಕಲ್ಲವೇ? ಎಂದು ಪ್ರಶ್ನಿಸಬಾರದು.

**ब्राह्मणसमभिव्याहृतस्य क्षत्रियत्वनियमाभावात् । रैक्कसमभिव्याहारस्यैव लिङ्गतया वक्तव्यत्वेन चैत्ररथसमभिव्याहारस्य सूत्रे लिङ्गत्वोक्त्ययोगाच्च ।**

ಏಕೆಂದರೆ ಬ್ರಾಹ್ಮಣರ ಜೊತೆಗೆ ಇದ್ದ ಮಾತ್ರದಿಂದ ಕ್ಷತ್ರಿಯರೇ ಆಗಬೇಕೆಂಬ ನಿಯಮವಿಲ್ಲ. ಮತ್ತು ರೈಕ್ವಮುನಿಗಳ ಸಮಭಿವ್ಯಾಹಾರವನ್ನೇ ಲಿಂಗವನ್ನಾಗಿ ಹೇಳಲು ಬರುವಾಗ ಚೈತ್ರರಥ ಸಮಭಿವ್ಯಾಹಾರವೆಂಬ ಲಿಂಗವನ್ನು ಸೂತ್ರದಲ್ಲಿ ಹೇಳಿದ್ದು ಅಯುಕ್ತವಾಗುತ್ತದೆ.

**प्रकाशः –**

**शुचेर्दश्चेतीति** ।। उणादौ द्वितीयपादे ''स्फायितंचिवं चिशकिक्षिपिक्षुदिसृपि'' इत्यादिसूत्रोक्तप्रकारेण ''अमितम्यो दीर्घश्च'' इति सूत्रानन्तरात् ''शुचेर्दश्च'' इति सूत्रात्प्रक्रियामाहुरित्यर्थः ।

ವಿವರಣೆ - ಉಣಾದಿ ಪ್ರಕರಣದ ದ್ವಿತೀಯ ಪಾದದಲ್ಲಿ 'ಸ್ಫಾಯಿ ತಂ ಚಿವಂ ಚಿಶಕಿಕ್ಷಿಪಿಕ್ಷುದಿಸೃಪಿ' ಇತ್ಯಾದಿ ಸೂತ್ರದಿಂದ ತಕ್ರ, ವಕ್ರ, ಕ್ಷಿಪ್ರ ಮೊದಲಾದ ರೂಪಗಳನ್ನು ಸಾಧಿಸಲಾಗಿದೆ. ಈ ಸೂತ್ರದಲ್ಲಿ ಹೇಳಿದ ಪ್ರಕಾರದಂತೆ 'ಅಮಿತಮ್ಯೋ ದೀರ್ಘಶ್ಚ' ಎಂಬ ಸೂತ್ರವು ಆಮ್ರ, ತಾಮ್ರ ಮೊದಲಾದ ರೂಪಗಳನ್ನು ನಿಷ್ಪತ್ತಿ ಮಾಡಿದೆ. ಅನಂತರ 'ಶುಚೇರ್ದಶ್ಚ' ಎಂಬ ಸೂತ್ರವು ಪ್ರಸಕ್ತವಾಗುತ್ತದೆ. ಈ ಸೂತ್ರದಿಂದ 'ಶುಚ್' ಧಾತುವಿಗೆ 'ರ' ಪ್ರತ್ಯಯ ಬಂದು 'ಶೂದ್ರ' ಎಂಬ ರೂಪವು ನಿಷ್ಪನ್ನವಾಗಿದೆ.

**प्रकाशः –** ननु हेतुद्वयं व्यर्थमित्यत आह – **अनादरेति** ।। **प्रधानेति** ।। तथा च त्वत्पक्षे एकेन कृतकार्यत्वात्तत्रैव हेत्वन्तरत्वेऽतिशयालाभः प्रधानसाध्यानन्वयोऽध्याहारश्चेत्येते दोषा इति भावः ।।

ಸೂತ್ರದಲ್ಲಿ 'ತದನಾದರಶ್ರವಣಾತ್', 'ತದಾದ್ರವಣಾತ್' ಎಂಬೆರಡು ಹೇತುಗಳನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಅನಾದರಶ್ರವಣವತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅದ್ವೈತಿಗಳ ಸೂತ್ರವ್ಯಾಖ್ಯಾನವು ಸರಿಯಲ್ಲವೆಂದು 'ತನ್ನ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡಿದ್ದಾರೆ. ಮುಖ್ಯವಾಗಿ ಪ್ರಧಾನವಾದ ಸಾಧ್ಯದ ಜೊತೆಗೆ ಆದ್ರವಣರೂಪ ಹೇತುವಿಗೆ ಅನ್ವಯವನ್ನು ಮಾಡಲಾಗದು. ಆದ್ದರಿಂದ ಒಂದೇ ಹೇತುವಿನಿಂದಲೇ ಕಾರ್ಯವು ಸಿದ್ಧವಾಗುವಾಗ ಪುನಃ ಮತ್ತೊಂದು ಹೇತು ಹೇಳಿದ್ದು ವ್ಯರ್ಥವಾಗಿದೆ. ಮತ್ತು ಹೇತ್ವಂತರವನ್ನು ಹೇಳಿದ್ದರಿಂದ ಯಾವುದೇ ಅತಿಶಯವೂ ಸಹ ಲಾಭವಾಗಿಲ್ಲ. ಮತ್ತು ಅಧ್ಯಾಹಾರವನ್ನು ಮಾಡಿಕೊಳ್ಳಬೇಕಾಗುತ್ತದೆ. ಹೀಗೆ ಎರಡು ಹೇತುಗಳನ್ನು ವಿವಕ್ಷಿಸಿದ ಪಕ್ಷದಲ್ಲಿ ಅನೇಕ ದೋಷಗಳು ಬರುತ್ತವೆ.

**प्रकाशः – जातिवाचिनोऽपीति** ।। अत एव ''शुचेर्दश्च'' इत्यत्र वृत्तौ ''शोचतीति शूद्रो वृषल'' इत्युक्तमिति भावः ।।

ಶೋಕದಿಂದ ಬಂದಿದ್ದಾನೆಂಬರ್ಥದಲ್ಲಿ ಹೇಗೆ ಉಣಾದಿ ಸೂತ್ರದಿಂದ ರೂಪವನ್ನು ನಿಷ್ಪತ್ತಿ ಮಾಡುತ್ತೀರೋ ಅದರಂತೆ ಜಾತಿವಾಚಿಯಾದ 'ಶೂದ್ರ' ಶಬ್ದವನ್ನೂ ಸಹ ನಿಷ್ಪತ್ತಿ ಮಾಡಬಹುದು. ಆದ್ದರಿಂದಲೇ 'ಶುಚೇರ್ದಶ್ಚ' ಎಂಬ ಸೂತ್ರದ ವೃತ್ತಿಯಲ್ಲಿ 'ಶೋಚತೀತಿ ಶೂದ್ರಃ ವೃಷಲಃ' ಎಂದು ಶೂದ್ರಜಾತಿಯವನಲ್ಲಿಯೂ ಇದೇ 'ಶೂದ್ರ' ಶಬ್ದವು ರೂಢವಾಗುತ್ತದೆಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – रुद्रावणादिति ।। यथा ''रोदेर्णिलुक्च'' इति सूत्रेण रोदयतीति रुद्र इति व्युत्पादितत्वेऽपि ''रुजं द्रावयते यस्माद्रुद्रस्तस्माज्जनार्दन'' इति निरुक्ति-बलात्प्रकृतिप्रत्ययान्तरकल्पनेन रुद्रशब्दनिष्पत्तिस्तथेहापीत्यर्थः ।

'ರುದ್ರ' ಶಬ್ದವನ್ನು ನಿಷ್ಪತ್ತಿ ಮಾಡುವಂತೆ 'ಶೂದ್ರ' ಶಬ್ದವನ್ನೂ ಸಹ ನಿಷ್ಪತ್ತಿ ಮಾಡಬಹುದು. 'ರೋದೇರ್ಣಿಲುಕ್ಚ' ಎಂಬ ಸೂತ್ರದಿಂದ 'ರುದ್' ಧಾತುವಿಗೆ 'ಣಿಚ್' ಪ್ರತ್ಯಯ ಬಂದು 'ಲುಕ್' ಆಗುತ್ತದೆ. ಅನಂತರ 'ರ' ಪ್ರತ್ಯಯವು ಬಂದು 'ರುದ್ರ' ಎಂಬ ಶಬ್ದವು ನಿಷ್ಪನ್ನವಾಗಿದೆ. 'ರೋಧಯತಿ' ಎಂಬುದು ಇದರ ಅರ್ಥ. ಹೀಗೆ ವೈಯ್ಯಾಕರಣರು ರುದ್ರಶಬ್ದವನ್ನು ನಿಷ್ಪತ್ತಿ ಮಾಡುವಂತೆ ಪೌರಾಣಿಕರೂಢಿಯೂ ಸಹ ಇರುತ್ತದೆ. 'ರುಜ್' ಧಾತುವಿಗೆ 'ಚೋಷ್ಕುಃ' ಎಂಬ ಸೂತ್ರದಿಂದ 'ಗ'ಕಾರವು ಪ್ರಾಪ್ತವಾದರೆ, 'ರುಗ್' ಎಂದಾಗುತ್ತದೆ. ಅನಂತರ 'ಗ'ಕಾರವು ಲೋಪವಾದರೆ 'ರು' ಎಂದಷ್ಟೇ ಉಳಿಯುತ್ತದೆ. 'ದ್ರುಗತೌ' ಎಂಬ ಧಾತು ಅಂತರ್ಗತವಾದ ಣಿಜರ್ಥಕವಾಗಿದೆ. ಇದರ ಮೇಲೆ 'ಡ' ಪ್ರತ್ಯಯವು ಬಂದು 'ಟಿತ್ವಾತ್' 'ಉ'ಕಾರವು ಲೋಪವಾಗಿ 'ಡ'ಕಾರದಲ್ಲಿರುವ 'ಅ'ಕಾರವು ಸೇರಿದಾಗ, 'ರುದ್ರ' ಎಂದಾಗುತ್ತದೆ. ಹೀಗೆ ವೈಯ್ಯಾಕರಣರು ರುದ್ರಶಬ್ದವನ್ನು ನಿಷ್ಪತ್ತಿಮಾಡಿದ್ದರೂ ಕೂಡ ಪುನಃ ಪೌರಾಣಿಕರೂ 'ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ' ಎಂಬ ನಿರುಕ್ತಿಯ ಬಲದಿಂದ 'ರುದ್ರ'ಶಬ್ದವನ್ನು ನಿಷ್ಪತ್ತಿ ಮಾಡಿರುತ್ತಾರೆ. ಅದರಂತೆ 'ಶೂದ್ರ'ಶಬ್ದದ ನಿಷ್ಪತ್ತಿಯನ್ನೂ ಕೂಡ ತಿಳಿದುಕೊಳ್ಳಬೇಕು.

**प्रकाशः** –

वर्णागमो वर्णविपर्ययश्च द्वौ चापरौ वर्णविकारनाशौ ।
धातोस्तदर्थातिशयेन योगस्तदुच्यते पञ्चविधं निरुक्तम् ।।

इति ऋग्भाष्यटीकोक्तदिशा वर्णविकारादिना शुचा द्रवणादेव हेतोश्शूद्रशब्द-निष्पत्तिर्ध्येयेति भावः ।

ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌ ಚಾಪರೌ ವರ್ಣವಿಕಾರನಾಶೌ ।
ಧಾತೋಸ್ತದರ್ಥಾತಿಶಯೇನ ಯೋಗಃ ತದುಚ್ಯತೇ ಪಂಚವಿಧಂ ನಿರುಕ್ತಮ್ ॥

ವರ್ಣಾಗಮ, ವರ್ಣವಿಪರ್ಯಯ, ವರ್ಣವಿಕಾರ, ವರ್ಣನಾಶ, ಧಾತುವಿಗೆ ತನ್ನ ಅರ್ಥವನ್ನು ಬಿಟ್ಟು ಅತಿಶಯವಾದ ಅರ್ಥಯೋಗ, ಈ ಐದು ನಿರುಕ್ತ ಎನಿಸುತ್ತವೆ.

'ಹಸತೀತಿ ಹಂಸಃ' ಎಂಬುದು ವರ್ಣಾಗಮಕ್ಕೆ ಉದಾಹರಣೆಯಾಗಿದೆ. 'ಹಿಂಸತೀತಿ ಹಿಂಸಃ' ಎಂದಾಗದೇ 'ಸಿಂಹಃ' ಎಂದಾಗುತ್ತದೆ. ವರ್ಣವಿಪರ್ಯಯಕ್ಕೆ ಉದಾಹರಣೆ. 'ಶುಗ್ದ್ರ' ಎಂಬಲ್ಲಿ 'ಗ'ಕಾರವು ಲೋಪವಾಗಿ ದೀರ್ಘಬಂದು 'ಶೂದ್ರ' ಎಂದಾಗಿದೆ. ಇದು ವರ್ಣವಿಕಾರ ಹಾಗೂ ವರ್ಣನಾಶಗಳಿಗೆ ಉದಾಹರಣೆ. ಕೆಲವೊಮ್ಮೆ ಧಾತು ಉಪಸರ್ಗದ ಜೊತೆ ಸೇರಿದಾಗ ಅತಿಶಯವಾದ ಅರ್ಥವನ್ನು ನೀಡುತ್ತದೆ. ಹೀಗೆ ಒಟ್ಟು ಐದು ಬಗೆಯಲ್ಲಿ ನಿರುಕ್ತಗಳನ್ನು ತಿಳಿಯಬೇಕು.

ಹೀಗೆ ಋಗ್ಭಾಷ್ಯದ ಟೀಕೆಯಲ್ಲಿ ಹೇಳಿದ ಪ್ರಕಾರ ವರ್ಣವಿಕಾರಾದಿಗಳಲ್ಲಿ 'ಶುಚಾ ದ್ರವಣಾದೇವ' ಎಂಬ ಹೇತುವಿನಿಂದ ಶೂದ್ರಶಬ್ದವು ನಿಷ್ಪನ್ನವಾಗಿದೆಯೆಂದು ತಿಳಿಯಬೇಕು.

**प्रकाशः** – एतेन यदुक्तं श्रुतप्रकाशे ''औणादिकनिर्वाहापेक्षया नैरुक्तप्रक्रियया निर्वाहस्यामुख्यत्वान्न नैरुक्तनिर्वाहः कार्य'' इति तन्निरस्तम् । तथात्वे जातिवाचित्वानपायात् । सूत्राननुगुणत्वाच्चेति ।।

ಇದರಿಂದ ಶ್ರುತಪ್ರಕಾಶದ ಧೋರಣೆಯನ್ನು ನಿರಾಕರಿಸಿದಂತಾಯಿತು -

'ಔಣಾದಿಕನಿರ್ವಾಹಪೇಕ್ಷಯಾ ನೈರುಕ್ತಪ್ರಕ್ರಿಯಯಾ ನಿರ್ವಾಹಸ್ಯಾಮುಖ್ಯತ್ವಾನ್ನ ನೈರುಕ್ತನಿರ್ವಾಹಃ ಕಾರ್ಯಃ' ಔಣಾದಿಕ ಪ್ರತ್ಯಯಗಳನ್ನು ಹೇಳಿ, ರೂಪವನ್ನು ನಿಷ್ಪತ್ತಿ ಮಾಡುವುದಕ್ಕಿಂತ ನಿರುಕ್ತ ಮಾರ್ಗದಲ್ಲಿ ಶಬ್ದವನ್ನು ನಿರ್ವಾಹ ಮಾಡುವುದು ಅಮುಖ್ಯವಾಗಿದೆ. ಆದ್ದರಿಂದ ನಿರುಕ್ತಿಯ ಪ್ರಕಾರ ಶಬ್ದನಿಷ್ಪತ್ತಿಯನ್ನು ಮಾಡಬಾರದು ಎಂದು ಶ್ರುತಪ್ರಕಾಶದಲ್ಲಿ ಹೇಳಿದ್ದಾರೆ. ಇದನ್ನು ಈಗ ನಿರಾಕರಿಸಿಂದಾಯಿತು. ಔಣಾದಿಕ ಪ್ರತ್ಯಯಗಳನ್ನು ವಿವಕ್ಷಿಸಿದಾಗ 'ಶೂದ್ರ' ಶಬ್ದಕ್ಕೆ ಜಾತಿವಾಚಿತ್ವವನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗುತ್ತದೆ.

**प्रकाशः** – द्वितीयसूत्रार्थमपि प्रत्याह – **यच्चेति** ।। कापेययोगेऽपि चित्ररथत्वं कुत इत्यत आह – **कापेयेनेति** ।। **संज्ञाभेदेनेति** ।। ''अथैष ज्योतिः'' इत्यादौ संज्ञाभेदेन कर्मान्यत्वस्य द्वितीये स्थितत्वादिति भावः । एतावता तत्त्वं कुत इत्यत आह – **समानेति** ।।

ಅದ್ವೈತಮತದಲ್ಲಿ ಮತ್ತು ವಿಶಿಷ್ಟಾದ್ವೈತಮತದಲ್ಲಿ ಮಾಡಿರುವ ಪ್ರಥಮ ಸೂತ್ರವ್ಯಾಖ್ಯಾನವನ್ನು ಇಲ್ಲಿಯತನಕ ವಿಮರ್ಶೆ ಮಾಡಿದ್ದಾಯಿತು. ಪ್ರಕೃತ 'ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್' ಎಂಬ ಎರಡನೆಯ ಸೂತ್ರಾರ್ಥವನ್ನು ವಿಮರ್ಶೆ ಮಾಡಲು 'ಯಚ್ಚ' ಇತ್ಯಾದಿ ಗ್ರಂಥದಿಂದ ಅವರೇ ಹೇಳಿದ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡುತ್ತಿದ್ದಾರೆ. ಕಾಪೇಯಮುನಿಯ ಸಂಬಂಧಮಾತ್ರದಿಂದ ಚಿತ್ರರಥನೇ ಏಕಾಗಬೇಕು? ಎಂಬ ಪ್ರಶ್ನೆಗೆ ಉತ್ತರಿಸಲು 'ಕಾಪೇಯೇನ' ಎಂಬ ಮಾತು ಹೊರಟಿದೆ. 'ಅಥೈಷ ಜ್ಯೋತಿಃ' 'ಅಥೈಷ ವಿಶ್ವಜ್ಯೋತಿಃ' 'ಅಥೈಷ ಕರ್ಮಜ್ಯೋತಿಃ' ಇತ್ಯಾದಿ ಸ್ಥಳಗಳಲ್ಲಿ ಸಂಜ್ಞಾಭೇದದಿಂದ ಕರ್ಮಗಳೂ ಕೂಡ ಭಿನ್ನವಾಗಿವೆ ಎಂದು ನಿರ್ಣಯಿಸಿದಂತೆ ಇಲ್ಲೂ ಸಹ 'ಚಿತ್ರರಥ' ಎಂದು ಹೇಳದೆ, 'ಅಭಿಪ್ರತಾರಿ' ಎಂದು ಸಂಜ್ಞಾಭೇದವನ್ನು ಹೇಳಿದ್ದರಿಂದ ಬೇರೆ ವ್ಯಕ್ತಿಯೆಂದು ಸಿದ್ಧವಾಗುತ್ತದೆ. ಹೀಗೆ ಹೇಳಿದ ಮಾತ್ರದಿಂದ ಅಭಿಪ್ರತಾರಿಯು ಚಿತ್ರರಥನ ವಂಶದವನೆಂಬುದನ್ನು ನಿರ್ಣಯಿಸಲು 'ಸಮಾನ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – तथा चाभिप्रतारिणश्चित्ररथयाजककापेयेन याज्यतया योगस्तस्य चित्ररथान्वयजत्वेनेति चैत्ररथत्वमित्यर्थः ।

ಪರಿಪೂರ್ಣಚಂದ್ರಿಕಾ

ಆದ್ದರಿಂದ ಅಭಿಪ್ರತಾರಿಯು ಚಿತ್ರರಥನಿಗೆ ಯಾಜಕನಾದ ಕಾಪೇಯನ ಮೂಲಕ ಯಾಜ್ಯತಯಾ ಅನ್ವಯವನ್ನು ಹೇಳಿದ್ದರಿಂದ, ಅಭಿಪ್ರತಾರಿಗೆ ಚಿತ್ರರಥನ ವಂಶದಲ್ಲಿ ಹುಟ್ಟಿದ್ದಾನೆಂಬ ಚೈತ್ರರಥತ್ವವು ಸಿದ್ಧವಾಗುತ್ತದೆ ಎಂದರ್ಥ.

**प्रकाशः – भवत्वभिप्रतारी चैत्ररथः ततश्च किमित्यत आह – चैत्ररथस्येति ।।**

ಅಭಿಪ್ರತಾರಿಯು ಚಿತ್ರರಥನ ವಂಶದಲ್ಲಿ ಹುಟ್ಟಿದ ಕಾರಣದಿಂದ ಚೈತ್ರರಥನೆಂದಾಗಲಿ, ಇದರಿಂದೇನಾಯಿತು? ಎಂಬ ಪ್ರಶ್ನೆಗೆ 'ಚೈತ್ರರಥಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – द्वितीयेति ।।** यद्यपि रामानुजमते क्षत्रियत्वावगतेरित्येव द्वितीयम् । उत्तरत्रेत्यादितृतीयम् ।

ಪ್ರಶ್ನೆ - ರಾಮಾನುಜಭಾಷ್ಯದಲ್ಲಿ ಇದನ್ನು ಎರಡು ಸೂತ್ರವನ್ನಾಗಿ ಪರಿಗಣಿಸಿದ್ದಾರೆ. 'ಕ್ಷತ್ರಿಯತ್ವಾವಗತೇಶ್ಚ' ಎಂಬುದು ಒಂದು ಸೂತ್ರ. 'ಉತ್ತರತ್ರ ಚೈತ್ರರಥೇನ ಲಿಂಗಾತ್' ಎಂಬುದು ಮತ್ತೊಂದು ಸೂತ್ರ. ಪ್ರಥಮಸೂತ್ರದಲ್ಲಿ ಪೌತ್ರಾಯಣನು ಅನ್ನದಾನಾದಿಗಳನ್ನು ಮಾಡುವವನಾದ್ದರಿಂದ ಕ್ಷತ್ರಿಯನೆಂದು ತಿಳಿಯುತ್ತಾನೆಂದು ಸಮರ್ಥಿಸಲಾಗಿದೆ. ಎರಡನೆಯ ಸೂತ್ರದಲ್ಲಿ ಕಾಪೇಯಬ್ರಾಹ್ಮಣನಿಗೆ ಅಭಿಪ್ರತಾರಿಯೊಂದಿಗೆ ಸಂಬಂಧವನ್ನು ಹೇಳಿದ್ದರಿಂದ ಅಭಿಪ್ರತಾರಿಯು ಚೈತ್ರರಥನಾಗಿದ್ದಾನೆ. ಅಭಿಪ್ರತಾರಿಯು ಕ್ಷತ್ರಿಯನಾದ್ದರಿಂದ, ಅವನ ಸಂಬಂಧವನ್ನು ಪಡೆದ ಪೌತ್ರಾಯಣನೂ ಕೂಡ ಕ್ಷತ್ರಿಯನೇ ಆಗಿದ್ದಾನೆಂದು ಸಮರ್ಥಿಸಲಾಗಿದೆ. ಆದರೆ ಗ್ರಂಥಕಾರರು ಹೀಗೆ ಎರಡು ಸೂತ್ರಗಳನ್ನು ರಾಮಾನುಜರು ಪರಿಗಣಿಸಿದ್ದನ್ನು ಏಕೆ ಉಲ್ಲೇಖಿಸಿಲ್ಲ?

**प्रकाशः –** तथापि क्षत्रियत्वावगतेरित्यत्र हेत्वनुक्तेः उत्तरत्रेत्यत्रैव हेतूक्तेः ग्रामेशत्वादिलिङ्गाध्याहारेण योगविभागे ज्ञापकाभावात् हेत्वध्याहारस्य क्लिष्टत्वात् चैत्ररथेनेत्यस्य क्षत्रियत्वावगतौ हेत्वन्तरपरत्वे च शब्दापातेन च सर्वस्यापि द्वितीयत्वमेव युक्तमिति वा परमते द्वितीयत्वात्तदभिप्रायेण वा स्वमतरीत्या वा द्वितीयेत्युक्तमिति ध्येयम् ।

ಉತ್ತರ - ವಾಸ್ತವಿಕವಾಗಿ ರಾಮಾನುಜರು ಎರಡು ಸೂತ್ರಗಳನ್ನಾಗಿ ಪರಿಗಣಿಸಿರಬಹುದು. ಆದರೆ 'ಕ್ಷತ್ರಿಯತ್ವಾವಗತೇಃ' ಎಂಬಲ್ಲಿ ಹೇತುವನ್ನೇ ಹೇಳದ ಕಾರಣ 'ಉತ್ತರತ್ರ ಚೈತ್ರರಥೇನ' ಎಂಬಲ್ಲೇ ಹೇತುವನ್ನು ಹೇಳಿದ್ದರಿಂದ ಎರಡು ಸೂತ್ರಗಳನ್ನಾಗಿ ವಿಭಾಗ ಮಾಡಬಾರದೆಂದು ತಿಳಿಸಿದ್ದಾರೆ. ಮುಂದಿನ ಸೂತ್ರದಲ್ಲಿ ಗ್ರಾಮೇಶತ್ವಾದಿಲಿಂಗವನ್ನು ಅಧ್ಯಾಹಾರ ಮಾಡಿಕೊಂಡು ಪ್ರಥಮಸೂತ್ರವನ್ನು ವ್ಯಾಖ್ಯಾನ ಮಾಡಬೇಕು. ಮತ್ತು ಹೀಗೆ ಯೋಗವಿಭಾಗ ಮಾಡಲು ಯಾವುದೇ ಆಧಾರಗಳಿರುವುದಿಲ್ಲ. ಹಾಗೇ ಅಧ್ಯಾಹಾರ ಮಾಡುವುದೂ ಕೂಡ ಅತ್ಯಂತ ಕ್ಲಿಷ್ಟಕರವಾಗಿದೆ. ಮತ್ತು 'ಚೈತ್ರರಥೇನ' ಎಂಬುದರಿಂದ ಕ್ಷತ್ರಿಯತ್ವವನ್ನು

ತಿಳಿಯಲು ಹೇತ್ವಂತರವನ್ನು ಹೇಳುವುದಾದರೆ 'ಚ' ಶಬ್ದವಿರಬೇಕು. ಆದ್ದರಿಂದ ಎರಡನೆಯ ಸೂತ್ರವೆಂದೇ ಎಲ್ಲವನ್ನು ಪರಿಗಣಿಸಬೇಕು. ಅಥವಾ ಅದ್ವೈತಮತದಲ್ಲಿ ಎರಡನೆಯ ಸೂತ್ರವೆಂದು ಪರಿಗಣಿಸಿದ್ದರಿಂದ, 'ದ್ವಿತೀಯಾ' ಎಂದು ಹೇಳಿದ್ದಾರೆ. ಅಥವಾ ನಮ್ಮ ಮತದ ಪ್ರಕಾರ ಎರಡನೆಯ ಸೂತ್ರವೆಂದು ಪರಿಗಣಿಸಿದ್ದಾರೆ.

**प्रकाशः –** अत्र रैकान्वितस्य जानश्रुतेः क्षत्रियत्वनिर्धारणं क्षत्रियप्रायपाठाधीनम्। सोभिप्रतारिणः क्षत्रियत्वादधीनः । तदपि तस्य चैत्ररथत्वनिर्धारणाधीनम् । तच्च तस्य कापेययाज्यत्वावधारणाधीनमित्युक्तम् । तत्र किमपि निर्धारयितुमशक्यम् । निर्धारकाभावादिति क्रमेणाह – **कापेयमिति ।।**

ರೈಕ್ವನಿಂದ ಸಂಬಂಧಪಡದ ಜಾನಶ್ರುತಿಗೆ ಕ್ಷತ್ರಿಯಪ್ರಾಯಪಾಠದ ಅಧೀನವಾಗಿ ಕ್ಷತ್ರಿಯತ್ವವು ನಿರ್ಧಾರವಾಗಿದೆ. ಅದು ಅಭಿಪ್ರತಾರಿಯು ಕ್ಷತ್ರಿಯನಾಗಿದ್ದಾನೆಂಬುದರ ಅಧೀನವಾಗಿದೆ. ಅಭಿಪ್ರತಾರಿಯು ಕ್ಷತ್ರಿಯನಾಗಿದ್ದಾನೆಂಬುದು ಚಿತ್ರರಥನ ವಂಶದವನಾಗಿದ್ದಾನೆಂಬ ಕಾರಣದ ಅಧೀನವಾಗಿದೆ. ಚಿತ್ರರಥನು ಕ್ಷತ್ರಿಯನಾಗಿದ್ದಾನೆಂಬುದು ಕಾಪೇಯರು ಯಾಜ್ಯರಾಗಿದ್ದಾರೆಂಬ ನಿಶ್ಚಯದ ಅಧೀನವಾಗಿದೆ. ಇವುಗಳನ್ನು ನಿರ್ಧಾರ ಮಾಡುವುದು ಸುಲಭವಲ್ಲ. ನಿರ್ಧಾರಕ ಪ್ರಮಾಣವೇ ಕಾಣಸುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ ಕ್ರಮವಾಗಿ ಉತ್ತರಿಸಿದ್ದಾರೆ 'ಕಾಪೇಯಮ್' ಇತ್ಯಾದಿ ಗ್ರಂಥದಿಂದ.

ಒಟ್ಟು ನಿರ್ಧಾರಕವಾದ ಅನುಮಾನ ಪ್ರಮಾಣಗಳನ್ನು ಹೀಗೆ ತಿಳಿಯಬೇಕು - ಅಭಿಪ್ರತಾರಿ, ಚಿತ್ರರಥ ವಂಶಜಃ, ಚಿತ್ರರಥಾದನ್ಯತ್ವೇಸತಿ, ಯಾಜಕಕಾಪೇಯಯಾಜ್ಯತ್ವಾತ್ ಈ ಅನುಮಾನದಿಂದ ಅಭಿಪ್ರತಾರಿಯು ಚಿತ್ರರಥ ವಂಶದಲ್ಲೇ ಹುಟ್ಟಿದ್ದಾನೆಂದು ಸಿದ್ಧವಾಗುತ್ತದೆ. ಅನಂತರ 'ಅಭಿಪ್ರತಾರಿ ಕ್ಷತ್ರಿಯಃ ಚಿತ್ರರಥವಂಶಜತ್ವಾತ್' ಎಂಬ ಅನುಮಾನದಿಂದ ಅಭಿಪ್ರತಾರಿಯು ಕ್ಷತ್ರಿಯನೆಂದು ಸಿದ್ಧವಾಗುತ್ತದೆ. ಅನಂತರ 'ಅಯಂ ಪೌತ್ರಾಯಣಃ ಕ್ಷತ್ರಿಯಃ ಕ್ಷತ್ರಿಯಪ್ರಾಯಪಾಠಾತ್' ಎಂಬ ಅನುಮಾನದಿಂದ ಪೌತ್ರಾಯಣನು ಕ್ಷತ್ರಿಯನಾದ ಅಭಿಪ್ರತಾರಿಯ ಜೊತೆಗೆ ಸಹಪಠಿತನಾದ ಕಾರಣದಿಂದ ಕ್ಷತ್ರಿಯನಾಗಿದ್ದಾನೆಂದು ಸಿದ್ಧವಾಗುತ್ತದೆ.

**प्रकाशः –** कापेय एवेति ।। अभिप्रतारिसहपाठेऽपि कापेये क्षत्रियत्वाभावादिति भावः । ननु सन्दिग्धक्षत्रियभावस्यैव निश्चितधर्मान्तरोपेतान्यसहपाठेन तादृशत्वनिश्चयः । "विशये प्रायदर्शनात्" इत्युक्तम् । न चैवं कापेयः । येनातिप्रसङ्ग इत्यत आह – **निश्चितेति ।।**

ಅಭಿಪ್ರತಾರಿಯ ಜೊತೆಗೆ ಸಹಪಠಿತನಾಗಿದ್ದರೂ, ಕಾಪೇಯನು ಕ್ಷತ್ರಿಯನಾಗಿಲ್ಲವೆಂದು ಕಾಪೇಯನಲ್ಲೇ ವ್ಯಭಿಚಾರ ಬರುತ್ತದೆಂದು 'ಕಾಪೇಯ ಏವ' ಎಂಬ ವಾಕ್ಯದಿಂದ ಹೇಳಿದ್ದಾರೆ.

ಕ್ಷತ್ರಿಯನಾದ ಚೈತ್ರರಥನ ಸಂಬಂಧವಿರುವ ಮಾತ್ರದಿಂದ ಕಾಪೇಯನೂ ಕೂಡ ಕ್ಷತ್ರಿಯನೇ ಆಗಲಿ ಎಂಬ ಅನೈಕಾಂತ್ಯಕ್ಕೆ ಅವಕಾಶವಿಲ್ಲ. ಏಕೆಂದರೆ ಕಾಪೇಯನಲ್ಲಿ ಬ್ರಾಹ್ಮಣ್ಯದ ನಿಶ್ಚಯವಾಗಿದೆ.

ಪರಿಪೂರ್ಣಚಂದ್ರಿಕಾ

ಅಭಿಪ್ರತಾರಿಯಲ್ಲಿ ಕ್ಷತ್ರಿಯತ್ವವು ನಿಶ್ಚಯವಾಗಿಲ್ಲ. ಸಂದಿಗ್ಧವಾದ ಕ್ಷತ್ರಿಯತ್ವವುಳ್ಳ ಅಭಿಪ್ರತಾರಿಯುಳ್ಳ ನಿಶ್ಚಿತವಾದ ಬ್ರಾಹ್ಮಣ್ಯವೆಂಬ ಧರ್ಮವುಳ್ಳ, ಕಾಪೇಯನ ಸಹಪಾಠದಿಂದ ಅಭಿಪ್ರತಾರಿಯಲ್ಲಿ ಕ್ಷತ್ರಿಯತ್ವವು ನಿಶ್ಚಯವಾಗುತ್ತದೆ. 'ವಿಶಯೇ ಪ್ರಾಯದರ್ಶನಾತ್' ಸಂಶಯ ಬಂದಾಗ ಮಾತ್ರ ಪ್ರಾಯಪಾಠವನ್ನು ಅನುಸರಿಸಬೇಕು ಎಂದು ಹೇಳಿದ್ದರಿಂದ. ಆದರೆ ಕಾಪೇಯನ ವಿಷಯದಲ್ಲಿ ಹೀಗೆ ಸಂದೇಹವಿಲ್ಲದ ಕಾರಣ. ಕ್ಷತ್ರಿಯತ್ವದ ಸಹಪಠಿತನಾದ ಕಾರಣದಿಂದ ಕಾಪೇಯನು ಕ್ಷತ್ರಿಯನಾಗಬೇಕಾಗಿಲ್ಲ. ಹಾಗಾಗಿದ್ದಲ್ಲಿ ಅತಿಪ್ರಸಂಗವನ್ನು ಹೇಳಬಹುದಿತ್ತಲ್ಲವೇ? ಎಂಬ ಪ್ರಶ್ನೆಗೆ 'ನಿಶ್ಚತಬ್ರಾಹ್ಮಣ್ಯೇನ' ಎಂಬ ವಾಕ್ಯವು ಹೊರಟಿದೆ.

**प्रकाशः – ननु कापेयादिसहपाठेऽपि न पौत्रायणस्य ब्राह्मण्यम् । तत्सन्देहस्य तस्मिन्बीजाभावेनाभावादिति चेन्न । संवर्गविद्याश्रोतृत्वादेस्तद्बीजत्वसम्भवात्**

ಕಾಪೇಯಾದಿ ಋಷಿಯ ಜೊತೆಗೆ ಸಹಪಠಿತನಾದ ಕಾರಣದಿಂದ ಪೌತ್ರಾಯಣನು ಬ್ರಾಹ್ಮಣನಾಗಲು ಸಾಧ್ಯವಿಲ್ಲ. ಏಕೆಂದರೆ ಬ್ರಾಹ್ಮಣನಾಗಿದ್ದಾನೆಂಬ ಸಂದೇಹ ಬರಬೇಕಾದರೆ ಅದಕ್ಕೆ ಮೂಲಭೂತವಾದ ಕಾರಣವಿರಬೇಕಲ್ಲವೇ? ಎಂದು ಪ್ರಶ್ನಿಸಬಾರದು. 'ಸಂವರ್ಗವಿದ್ಯಾಶ್ರೋತೃತ್ವ' ಎಂಬುದೇ ಬ್ರಾಹ್ಮಣನಾಗಿದ್ದಾನೆನ್ನಲು ಬೀಜವಾಗಿದೆ. ಆದ್ದರಿಂದ ಅವನಲ್ಲಿಯೂ ಬ್ರಾಹ್ಮಣ್ಯದ ಸಂದೇಹ ಬಂದಾಗ, ಕಾಪೇಯಾದಿ ಸಹಪಾಠದಿಂದ ಪೌತ್ರಾಯಣನು ಬ್ರಾಹ್ಮಣನಾಗಬಹುದು.

**प्रकाशः – ननु तथापि ग्रामेशत्वादिना क्षत्रियलिङ्गेन ब्राह्मणसहपाठो बाध्यत इति चेत्तर्हि शूद्रश्रुत्या क्षत्रियसहपाठोऽपि बाध्यताम् । तद्यौगिकत्वस्याद्याप्यसिद्धेरिति भावः ।**

ಆದರೂ ಸಹ ಗ್ರಾಮೇಶತ್ವ ಮೊದಲಾದ ಕ್ಷತ್ರಿಯತ್ವ ಸಾಧಕವಾದ ಲಿಂಗಗಳಿರುವುದರಿಂದ, ಕಾಪೇಯರೆಂಬ ಬ್ರಾಹ್ಮಣರ ಜೊತೆ ಸಹಪಠಿತನಾಗಿದ್ದರೂ ಪೌತ್ರಾಯಣನು ಬ್ರಾಹ್ಮಣನಾಗುತ್ತಾನೆಂಬ ಸಂದೇಹಕ್ಕೆ ಆಸ್ಪದವಿರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದರೂ ಶೂದ್ರಶಬ್ದವಿರುವುದರಿಂದ, ಕ್ಷತ್ರಿಯಶಬ್ದದ ಸಹಪಾಠವೂ ಕೂಡ ಶೂದ್ರಶ್ರುತಿಯಿಂದ ಬಾಧಿತವಾಗಲಿ. ಶೂದ್ರಶಬ್ದವು ಜಾತಿವಾಚಕವಲ್ಲ, ಯೌಗಿಕವಾಗಿ ಬೇರೆ ಅರ್ಥವನ್ನೇ ಹೇಳುತ್ತಿದೆಯಲ್ಲವೇ?ಎಂಬ ಪ್ರಶ್ನೆಗೂ ಅವಕಾಶವಿಲ್ಲ. 'ಶೂದ್ರ' ಶಬ್ದವು ಯೌಗಿಕವೆಂದು ಇಲ್ಲಿಯ ತನಕ ಸಿದ್ಧವಾಗಿಲ್ಲ.

**प्रकाशः – ननु ब्राह्मणसहपाठः क्षत्रियत्वस्यैव लिङ्गं न ब्राह्मण्यस्येति शङ्कते – नचेति ।।**

ಬ್ರಾಹ್ಮಣರ ಜೊತೆಗೆ ಸಹಪಾಠವಿದ್ದಾಗ ಕ್ಷತ್ರಿಯತ್ವವೇ ಸಿದ್ಧವಾಗುತ್ತದೆ. ಹೊರತು, ಬ್ರಾಹ್ಮಣ್ಯವು ಸಿದ್ಧವಾಗುವುದಿಲ್ಲ. ಯಾವರೀತಿಯಾಗಿ ಮಾವುತನನ್ನು ನೋಡಿದಾಗ ಆನೆಯ ಸ್ಮರಣೆಯೇ ಹೇಗೆ ಬರುತ್ತದೋ, ಅದರಂತೆ ಬ್ರಾಹ್ಮಣರ ಜೊತೆಗೆ ಕ್ಷತ್ರಿಯನ ಸ್ಮರಣೆಯೇ ಬರುತ್ತದೆ. ಈ ಶಂಕೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಅಪಶೂದ್ರಾಧಿಕರಣ (೧-೩-೯)




ಅದ್ವೈತಿಗಳು 'ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್' ಎಂಬ ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಸಂವರ್ಗವಿದ್ಯಾ ಪ್ರಕರಣದಲ್ಲಿ 'ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಣಂ ಚ ಕಾರ್ಕ್ಷಸೇನಿಮ್' ಎಂದು ಪ್ರಸಕ್ತವಾಗಿದೆ. ಈ ವಾಕ್ಯವನ್ನು ನೋಡಿದಾಗ ಕಾಪೇಯಗೋತ್ರದಲ್ಲಿ ಹುಟ್ಟಿದ ಶೌನಕರ ಜೊತೆ ಕಾರ್ಕ್ಷಸೇನಿ ಮಗನಾದ ಅಭಿಪ್ರತಾರಿಗೆ ಸಂಬಂಧವು ತಿಳಿಯುತ್ತದೆ. ಈ ಅಭಿಪ್ರತಾರಿಯು ಚಿತ್ರರಥನ ವಂಶದಲ್ಲಿ ಬಂದವನೆಂದು ಹೇಳಬೇಕು. ಏಕೆಂದರೆ ಶೌನಕರು ಕಾಪೇಯ ಗೋತ್ರದಲ್ಲಿ ಬಂದಿರುತ್ತಾರೆ. ಅವರ ಸಂಬಂಧವನ್ನು ಅಭಿಪ್ರತಾರಿಗೆ ಹೇಳಲಾಗಿದೆ. ಚಿತ್ರರಥನೆಂಬ ಕ್ಷತ್ರಿಯನು ಹಿಂದೆ ಕಾಪೇಯರ ಮೂಲಕ ಯಾಗ ಮಾಡಿಸುತ್ತಿದ್ದಾನೆಂಬ ಉಲ್ಲೇಖವಿದೆ. 'ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್' ಎಂದು ಚಿತ್ರರಥನಿಗೆ ಕಾಪೇಯರೇ ಪುರೋಹಿತರಾಗಿದ್ದಾರೆಂದು ಹೇಳಲಾಗಿದೆ. ಚಿತ್ರರಥನಾದರೂ ಕೂಡ 'ತಸ್ಮಾತ್ ಚಿತ್ರರಥನಾಮೈಕಃ ಕ್ಷತ್ರಪತಿರಜಾಯತ' ಎಂಬ ವಾಕ್ಯದಿಂದ ಕ್ಷತ್ರಿಯನಾಗಿದ್ದಾನೆಂದು ಸ್ಪಷ್ಟವಾಗಿದೆ. ಕ್ಷತ್ರಿಯನಾದ ಚಿತ್ರರಥನಿಗೆ ಶೌನಕರು ಪುರೋಹಿತರಾದ ಮೇಲೆ ಚಿತ್ರರಥನ ವಂಶದಲ್ಲಿ ಬಂದಿರುವ ಅಭಿಪ್ರತಾರಿಯೂ ಕೂಡ ಕ್ಷತ್ರಿಯನೇ ಆಗಬೇಕು. ಈ ಅಭಿಪ್ರತಾರಿಗೆ ಸಂವರ್ಗವಿದ್ಯಾಸಂಬಂಧವನ್ನು ಹೇಳಲಾಗಿದೆ. ಅದೇ ವಿದ್ಯೆಯನ್ನು ಪೌತ್ರಾಯಣನಿಗೆ ಉಪದೇಶ ಮಾಡಿದ್ದರಿಂದ, ಪೌತ್ರಾಯಣನೂ ಕೂಡ ಕ್ಷತ್ರಿಯನೇ ಆಗುತ್ತಾನೆ. ಹೀಗೆ ಪೌತ್ರಾಯಣನು ಕ್ಷತ್ರಿಯನಾಗಿದ್ದಾನ್ನೆನ್ನಲು ಲಿಂಗವನ್ನು ಎರಡನೆಯ ಸೂತ್ರವು ಸಮರ್ಥನೆ ಮಾಡಿದೆ. ರಾಮಾನುಜರೂ ಸಹ ಇದೇ ಕ್ರಮದಲ್ಲೇ ಎರಡನೆಯ ಸೂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ.

ಇದು ತಪ್ಪು. ಏಕೆಂದರೆ ಸೂತ್ರದಲ್ಲಿ 'ಸಮಭಿವ್ಯಾಹಾರಾತ್' ಎಂಬುದನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ಮತ್ತು ಪೌತ್ರಾಯಣನಿಗೆ ಕ್ಷತ್ರಿಯತ್ವವನ್ನು ಸಮರ್ಥನೆ ಮಾಡಬೇಕೆಂದರೆ ಅಭಿಪ್ರತಾರಿಯ ಸಮಭಿವ್ಯಾಹಾರವು ನಿಶ್ಚಯವಾಗಬೇಕು. ಅಭಿಪ್ರತಾರಿಯು ಕ್ಷತ್ರಿಯನಾಗಿದ್ದರೆ ಮಾತ್ರ ಇವನ ಜೊತೆ ಸಹಪಠಿತನಾದ ಕಾರಣದಿಂದ ಪೌತ್ರಾಯಣನು ಕ್ಷತ್ರಿಯನಾಗಿದ್ದಾನೆಂದು ನಿರ್ಧಾರ ಮಾಡಬಹುದು. ಆದರೆ ಅಭಿಪ್ರತಾರಿಯು ಕ್ಷತ್ರಿಯನಾಗಿದ್ದಾನೆಂದು ನಿರ್ಧಾರವಾಗಬೇಕಾದರೆ ಚಿತ್ರರಥನ ವಂಶದಲ್ಲಿ ಹುಟ್ಟಿದ್ದಾನೆಂಬುದು ಮೊದಲು ನಿಶ್ಚಯವಾಗಬೇಕು. ಇದು ನಿಶ್ಚಯವಾಗಬೇಕಾದರೆ, ಚಿತ್ರರಥನಿಗೂ ಕಾಪೇಯರಿಗೂ ಯಾಜಕತ್ವೇನ ಸಂಬಂಧವಿದೆಯೆಂಬುದು ನಿರ್ಧಾರವಾಗಬೇಕು. ಆದರೆ ಶ್ರುತಿವಾಕ್ಯವನ್ನು ನೋಡಿದಾಗ ಕಾಪೇಯರಿಗೂ ಅಭಿಪ್ರತಾರಿಗೂ ಸಂಬಂಧವು ತಿಳಿಯುತ್ತಿದೆ ಹೊರತು, ಯಾಜಕತ್ವೇನ ಸಂಬಂಧವು ತಿಳಿಯುತ್ತಿಲ್ಲ. ಒಂದು ವೇಳೆ ಯಾಜಕತ್ವೇನ ಸಂಬಂಧವು ತಿಳಿದರೂ ಕೂಡ ಅಭಿಪ್ರತಾರಿಯು ಚಿತ್ರರಥನ ವಂಶದಲ್ಲೇ ಬಂದಿದ್ದಾನೆಂಬುದು ಸಿದ್ಧವಾಗುವುದಿಲ್ಲ.

ಏಕೆಂದರೆ ಚಿತ್ರರಥನ ವಂಶದಲ್ಲಿ ಬಾರದಿದ್ದರೂ ಕೂಡ ಅಂತಹವರಿಗೂ ಕಾಪೇಯರು ಪುರೋಹಿತರಾಗಬಹುದು. ಆದ್ದರಿಂದ ಕಾಪೇಯರು ಪುರೋಹಿತರಾಗಿದ್ದಾರೆಂಬ ಅಂಶದಿಂದಷ್ಟೇ ಅಭಿಪ್ರತಾರಿಯು ಕ್ಷತ್ರಿಯನಾಗಿದ್ದಾನೆಂದು ನಿರ್ಧಾರ ಮಾಡಲಾಗದು.

ಪರಿಪೂರ್ಣಚಂದ್ರಿಕಾ

ಒಂದು ವೇಳೆ. ಅಭಿಪ್ರತಾರಿಯು ಕ್ಷತ್ರಿಯನೆಂದು ನಿರ್ಧಾರವಾದರೂ ಕೂಡ ಅವನ ಸಂಬಂಧವಿರುವ ಮಾತ್ರದಿಂದ ಪೌತ್ರಾಯಣನು ಕ್ಷತ್ರಿಯನಾಗಬೇಕೆಂದೇನೂ ನಿಯಮವಿಲ್ಲ. ಏಕೆಂದರೆ ಅಭಿಪ್ರತಾರಿಯ ಜೊತೆ ಪೌತ್ರಾಯಣನು ಹೇಗೆ ಸಹಪಠಿತನಾಗಿದ್ದಾನೋ, ಅದರಂತೆ ಕಾಪೇಯರೂ ಕೂಡ ಸಹಪಠಿತರಾಗಿದ್ದಾರೆ. ಸಹಪಠಿತವಾದ ಮಾತ್ರದಿಂದ ಕ್ಷತ್ರಿಯನಾಗುವುದಾದರೆ, ಕಾಪೇಯರೂ ಕೂಡ ಕ್ಷತ್ರಿಯರಾಗಬೇಕಾದೀತು.

ಅಥವಾ ನಿಶ್ಚಿತಬ್ರಾಹ್ಮಣ್ಯವುಳ್ಳ ಕಾಪೇಯರ ಸಂಬಂಧವನ್ನು ಪೌತ್ರಾಯಣನಿಗೆ ಹೇಳಿರುವುದರಿಂದ ಪೌತ್ರಾಯಣನೇ ಬ್ರಾಹ್ಮಣನಾಗಬೇಕಾದೀತು. ಏಕೆಂದರೆ 'ವಿಶಯೇ ಪ್ರಾಯದರ್ಶನಾತ್' ಎಂದು ಹೇಳಿದ್ದರಿಂದ ಕಾಪೇಯರಲ್ಲಿ ಬ್ರಾಹ್ಮಣ್ಯದ ನಿಶ್ಚಯವಿದೆ. ಪೌತ್ರಾಯಣನಲ್ಲಿ ಮಾತ್ರ ಕ್ಷತ್ರಿಯತ್ವದ ಸಂದೇಹವಿದೆ. ಹೀಗೆ ನಿಶ್ಚಿತ ಬ್ರಾಹ್ಮಣ್ಯವುಳ್ಳ ಕಾಪೇಯರ ಜೊತೆ ಸಹಪಠಿತನಾದ್ದರಿಂದ ಪೌತ್ರಾಯಣನು ಬ್ರಾಹ್ಮಣನೇ ಆಗಬೇಕಾದೀತು. ಗ್ರಾಮೇಶತ್ವ ಮೊದಲಾದ ಬಾಧಕಲಿಂಗಗಳಿರುವುದರಿಂದ ನಿಶ್ಚಿತ- ಬ್ರಾಹ್ಮಣ್ಯವುಳ್ಳ ಕಾಪೇಯರ ಜೊತೆ ಸಹಪಠಿತನಾಗಿದ್ದರೂ ಪೌತ್ರಾಯಣನು ಬ್ರಾಹ್ಮಣನಾಗುವುದಿಲ್ಲವೆನ್ನುವುದಾದರೆ, ನೇರವಾಗಿ ಗ್ರಾಮೇಶತ್ವಲಿಂಗದಿಂದ ಪೌತ್ರಾಯಣನಿಗೆ ಕ್ಷತ್ರಿಯತ್ವವನ್ನು ಸಾಧಿಸಬಹುದಲ್ಲವೇ? ಇಷ್ಟೊಂದು ಶ್ರಮಪಟ್ಟು ವಕ್ರಮಾರ್ಗವನ್ನೇಕೆ ಅನುಸರಿಸುತ್ತೀರಿ.

ಮತ್ತು ಬ್ರಾಹ್ಮಣರ ಸಮಭಿವ್ಯಾಹಾರವಿರುವ ಕಾರಣ ಪೌತ್ರಾಯಣನು ಕ್ಷತ್ರಿಯನೇ ಆಗಿದ್ದಾನೆಂದು ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಸೂತ್ರಕಾರರು ರೈಕ್ವ ಶಬ್ದದ ಸಮಭಿವ್ಯಾಹಾರವನ್ನೇ ಲಿಂಗವನ್ನಾಗಿ ಹೇಳುತ್ತಿದ್ದರು. ಚಿತ್ರರಥ ಶಬ್ದದ ಸಮಭಿವ್ಯಾಹಾರವನ್ನು ಲಿಂಗವನ್ನಾಗಿ ಹೇಳಿದ್ದು ತಪ್ಪಾಗುತ್ತದೆ.

• • • • •

## ಉಳಿದ ಮೂರು ಸೂತ್ರಾರ್ಥಗಳ ವಿಮರ್ಶೆ

### तात्पर्यचन्द्रिका

**यच्चोक्तं तृतीये ''संस्कारपरामर्शात्'' इत्यस्य ''तं होपनिन्य'' इत्येतद्विषयवाक्यमिति**

ಅನುವಾದ - 'ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ' ಎಂಬ ಮೂರನೆಯ ಸೂತ್ರಕ್ಕೆ ಅದ್ವೈತಿಗಳು ಹೇಳುವ ಅರ್ಥ ಹೀಗಿದೆ - 'ತಂ ಹ ಉಪನಿನ್ಯೇ' ಎಂಬುದು ಈ ಸೂತ್ರದ ವಿಷಯವಾಕ್ಯ. ಇದರಲ್ಲಿ ಶೂದ್ರರಿಗೆ ಉಪನಯನಸಂಸ್ಕಾರವನ್ನು 'ಇಲ್ಲವೆಂದು ನಿಷೇಧ ಮಾಡಿದ್ದರಿಂದ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸಲಾಗಿದೆ.

**तन्न । अस्माकं मते ''अष्टवर्षं ब्राह्मणमुपनयीत तमध्यापयीत'' इत्यत्र तच्छब्देन प्रकृत संस्कारपरामर्शवत् ''तं होपनिन्य'' इत्यत्रोपनयनाख्यसंस्कारोक्ति मात्रसद्भावेऽपि तत्परामर्शाभावात् ।**

ಇದು ತಪ್ಪು. 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ' ಎಂಬುದನ್ನು ಮೂರನೆಯ ಸೂತ್ರದ ವಿಷಯವಾಕ್ಯವೆಂದು ಹೇಳಬೇಕು. ಆವಾಗ 'ತತ್'ಶಬ್ದದಿಂದ ಪ್ರಕೃತವಾದ ಉಪನಯನಸಂಸ್ಕಾರವನ್ನು ಪರಾಮರ್ಶ ಮಾಡಬಹುದು. ಆದರೆ 'ತಂ ಹ ಉಪನಿನ್ಯೇ' ಎಂಬ ವಾಕ್ಯದಿಂದ ಸಂಸ್ಕಾರವನ್ನು ಪರಾಮರ್ಶ ಮಾಡಲಾಗದು. ಕೇವಲ ಉಪನಯನವೆಂಬ ಸಂಸ್ಕಾರವನ್ನಷ್ಟೇ ಹೇಳಲಾಗಿದೆ. ಪರಾಮರ್ಶವನ್ನು ಹೇಳುವುದಾದರೂ ಹೇಗೆ ? ಆದ್ದರಿಂದ ಸೂತ್ರದಲ್ಲಿ 'ಪರಾಮರ್ಶಾತ್' ಎಂಬ ಪದಕ್ಕೆ ಅದ್ವೈತಮತದಲ್ಲಿ ಅರ್ಥವೇ ಇರುವುದಿಲ್ಲ.

**यच्चोक्तं चतुर्थे ''प्रवृत्तेः'' इत्यस्य ब्रह्मोपदेशे प्रवृत्तेरित्यर्थ इति**

'ತದಭಾವನಿರ್ಧಾರಣೇ ಚ ಪ್ರವೃತ್ತೇಃ' ಎಂಬುದು ನಾಲ್ಕನೆಯ ಸೂತ್ರ. 'ಪ್ರವೃತ್ತೇಃ' ಎಂಬುದಕ್ಕೆ ಸತ್ಯಕಾಮನು ಶೂದ್ರನಲ್ಲವೆಂದು ನಿರ್ಧರಿಸಿ, ಗೌತಮರು ಉಪನಯನದಲ್ಲಿ ಪ್ರವೃತ್ತಿ ಮಾಡಿದ್ದರಿಂದ ಎಂದರ್ಥ. ಇದರಿಂದಲೂ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಿದ್ಧವಾಗುತ್ತದೆನ್ನುತ್ತಾರೆ.

**तन्न । ''नैतदब्राह्मणो विवक्तुमर्हति समिधं सोम्यहरोपत्वानेष्य'' इतित्वयाप्युदाहृते वाक्य उपनयने प्रवृत्तेरेव साक्षाच्छ्रवणात् ।**

ಇದು ತಪ್ಪು. 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಹರೋಪತ್ವಾ ನೇಷ್ಯೇ' ಎಂಬುದನ್ನೇ ವಿಷಯವಾಕ್ಯವನ್ನಾಗಿ ನೀನೂ ಸಹ ಉದಾಹರಿಸುವ ವಾಕ್ಯದಲ್ಲಿ ಉಪನಯನದಲ್ಲಿ ಪ್ರವೃತ್ತಿಯೇ ನೇರವಾಗಿ ಕೇಳಿಸುತ್ತಿದೆ. ಹೀಗಿರುವಾಗ ಬ್ರಹ್ಮೋಪದೇಶದಲ್ಲಿ ಪ್ರವೃತ್ತಿ ಮಾಡುತ್ತಿರುವುದರಿಂದ ಉಪನಯನದಲ್ಲಿ ಬ್ರಾಹ್ಮಣರಿಗೆ ಮಾತ್ರ ಅಧಿಕಾರವೆಂದು ಸಾಧಿಸುವುದು ತಪ್ಪಾಗುತ್ತದೆ.

**यच्चोक्तं शूद्रस्य स्मृत्या श्रवणादिप्रतिषेधादिति पञ्चमार्थ इति**

'ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ' ಎಂಬುದು ಐದನೆಯ ಸೂತ್ರ. ಶೂದ್ರನಿಗೆ 'ಅಥಾಸ್ಯ ವೇದಂ' ಎಂಬ ಸ್ಮೃತಿಯು ಅಧ್ಯಯನಾದಿಗಳನ್ನು ನಿಷೇಧ ಮಾಡಿದೆ. ಆದ್ದರಿಂದಲೂ ವೇದಾಧ್ಯಯನ, ಅರ್ಥಜ್ಞಾನ ಇವುಗಳಲ್ಲಿ ಶೂದ್ರರಿಗೆ ಅಧಿಕಾರವಿರುವುದಿಲ್ಲ.

**तन्न । भाष्योक्ते श्रौतप्रतिषेधे सम्भवति स्मार्तप्रतिषेधपरत्वायोगात् । स्मृतेः श्रवणादिप्रतिषेधाच्चेति चशब्दस्य भिन्नक्रमत्वापाताच्चेति ।**

ಇದೂ ಸಹ ತಪ್ಪು. ಭಾಷ್ಯದಲ್ಲಿ ಹೇಳಿದಂತೆ ಶ್ರುತಿಯಿಂದಲೇ ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂದು ನಿಷೇಧ ಮಾಡಲು ಬರುವಾಗ ಸ್ಮೃತಿಯ ಮೂಲಕ ನಿಷೇಧವನ್ನು

ಸಮರ್ಥಿಸುವುದು ಯುಕ್ತವಲ್ಲ. ಮತ್ತು 'ಸ್ಮೃತೇಶ್ಚ' ಎಂಬಲ್ಲಿರುವ 'ಚ' ಶಬ್ದಕ್ಕೆ 'ಪ್ರತಿಷೇಧಾತ್' ಎಂಬಲ್ಲಿ ನೀವು ಅನ್ವಯ ಮಾಡಬೇಕಾದ್ದರಿಂದ ಭಿನ್ನಕ್ರಮವನ್ನು ಹೇಳಿದಂತಾಗುತ್ತದೆ. ನಮ್ಮಲ್ಲಿ ಶ್ರುತಿಯ ಜೊತೆಗೆ ಸ್ಮೃತಿಯನ್ನೂ ಕೂಡ ಹೇಳಿದ್ದರಿಂದ ಭಿನ್ನಕ್ರಮತ್ವೇನ ಅನ್ವಯ ಮಾಡುವ ಅವಶ್ಯಕತೆಯಿಲ್ಲ. ಆದ್ದರಿಂದ ಪರಮತೀಯರು ಮಾಡುವ ಎಲ್ಲಾ ಸೂತ್ರ ವ್ಯಾಖ್ಯಾನಗಳು ಅತ್ಯಂತ ಅಸಾಧುವಾಗಿವೆ.

**प्रकाशः –**

**यच्चेति** ।। उभाभ्यामिति सर्वत्र सम्बध्यते । ''उपत्वानेष्ये तं होपनिन्य'' इति जाबालस्य उपनयनसंस्कारपरामर्शात् ''न शूद्रे पातकं किञ्चिन्न च संस्कारमर्हति'' इति संस्काराभावाभिलापाच्चेति सूत्रार्थः ।।

ವಿವರಣೆ - 'ಉಭಾಭ್ಯಾಮ್' ಎಂಬುದನ್ನು ಎಲ್ಲೆಡೆ ಅನ್ವಯ ಮಾಡಿಕೊಳ್ಳಬೇಕು. ಆದ್ದರಿಂದ ಅದ್ವೈತ ಹಾಗೂ ವಿಶಿಷ್ಟಾದ್ವೈತ ಸೂತ್ರಾರ್ಥಗಳು ಒಂದೇ ರೀತಿಯಲ್ಲಿವೆ ಎಂದಂತಾಗುತ್ತದೆ.

'ಉಪತ್ವಾನೇಷ್ಯೇ ತಂ ಹೋಪನಿನ್ಯೇ' ಎಂಬಲ್ಲಿ ಜಾಬಾಲನಿಗೆ ಉಪನಯನಸಂಸ್ಕಾರದ ಪರಾಮರ್ಶವನ್ನು ಹೇಳಿದ್ದರಿಂದ 'ನ ಶೂದ್ರೇ ಪಾತಕಂ ಕಿಂಚಿನ್ನ ಚ ಸಂಸ್ಕಾರಮರ್ಹತಿ' ಎಂದು ಶೂದ್ರನಿಗೆ ಉಪನಯನಸಂಸ್ಕಾರವನ್ನು ನಿಷೇಧ ಮಾಡಿದ್ದರಿಂದಲೂ ವೇದಾಧ್ಯಯನದಲ್ಲಿ ಅಧಿಕಾರವಿಲ್ಲವೆಂದು ತಿಳಿಯುತ್ತದೆ. ಹೀಗೆ 'ಸಂಸ್ಕಾರಪರಮಾರ್ಶಾತ್ ತದಭಾವಾಭಿಲಾಪಾಚ್ಚ' ಎಂಬುದು ಮೂರನೆಯ ಸೂತ್ರದ ಅರ್ಥ.

**प्रकाशः – चतुर्थ इति** ।। ''नैतदब्राह्मणो विवक्तुमर्हति । समिधं सोम्या हर'' इति शूद्रत्वाभावनिर्धारणे जात एव तं प्रति ब्रह्मोपदेशो प्रवृत्तेरिति सूत्रार्थः ।।

'ತದಭಾವನಿರ್ಧಾರಣೇ ಚ ಪ್ರವೃತ್ತೇಃ' - 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ । ಸಮಿಧಂ ಸೋಮ್ಯಾಹರ' ಎಂಬುದಾಗಿ ಜಾಬಾಲನೆಂಬ ಕುಮಾರನು ಸತ್ಯವನ್ನು ಹೇಳಿದ ಮೇಲೆ ಅವನು ಬ್ರಾಹ್ಮಣನೇ ಆಗಿದ್ದಾನೆ ಹೊರತು, ಶೂದ್ರನಲ್ಲವೆಂದು ಗೌತಮರು ನಿಶ್ಚಯಿಸುತ್ತಾರೆ. ಅನಂತರವೇ ಬ್ರಹ್ಮೋಪದೇಶದಲ್ಲಿ ಪ್ರವೃತ್ತಿಮಾಡುತ್ತಾರೆ. ಇದರಿಂದಲೂ ಶೂದ್ರರಿಗೆ ಉಪನಯನ ಮತ್ತು ವೇದಗಳಲ್ಲಿ ಅಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ.

**प्रकाशः – यच्चोक्तमिति** ।। ''अथहास्य वेदं शृण्वतस्त्रपुजतुभ्यां श्रोत्रपरिपूरणं उदाहरणे शरीरभेद'' इति स्मृत्या शूद्रस्य वेदश्रवणादिप्रतिषेधाच्च न तस्याधिकार इत्यर्थः ।

ಅಪಶೂದ್ರಾಧಿಕರಣ (೧-೩-೯)

'ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ' - 'ಅಥಹಾಸ್ಯ ವೇದಂ ಶೃಣ್ವತಸ್ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ ಉದಾಹರಣೇ ಶರೀರಭೇದಃ' ಎಂಬ ಸ್ಮೃತಿಯಲ್ಲಿ ಶೂದ್ರನಿಗೆ ವೇದಶ್ರವಣವನ್ನು ನಿಷೇಧ ಮಾಡಲಾಗಿದೆ. ಆದ್ದರಿಂದಲೂ ಅಧ್ಯಯನಾದಿಗಳಲ್ಲಿ ಅವನಿಗೆ ಸರ್ವಥಾ ಅಧಿಕಾರವಿಲ್ಲವೆಂದು ಸಿದ್ಧವಾಗುತ್ತದೆ.

**प्रकाशः** – एतेन रामानुजरीतिदूषणेनैव तद्रीत्यविशिष्टं कस्यचिच्छैवस्य मतमपि प्रत्युक्तम् । सूत्रार्थोऽपि तथैव निरस्यः ।

ಹೀಗೆ ರಾಮಾನುಜಮತವನ್ನು ದೂಷಣೆ ಮಾಡುವ ಕ್ರಮದಲ್ಲಿಯೇ ರಾಮಾನುಜ ಮತವನ್ನೇ ಅನುಸರಿಸಿದ ಶೈವರಮತವನ್ನೂ ಕೂಡ ನಿರಾಕರಣೆ ಮಾಡಬೇಕು. ಸೂತ್ರಾರ್ಥಗಳನ್ನೂ ಕೂಡ ಅದೇ ಕ್ರಮದಲ್ಲೇ ನಿರಾಕರಣೆ ಮಾಡಬೇಕು.

**प्रकाशः** – यदत्रोक्तं द्वितीयसूत्रार्थदूषणेऽभिप्रतारिणः कापेयसम्बन्धः प्रतीयमानः श्रुत्यन्तरप्रसिद्धस्तद्याज्यत्वलक्षण एव पर्यवस्यतीति याज्यत्वेन तद्योगाप्रतीतेरिति दोषो नेति तन्न । तथा विशिष्यश्रुत्यन्तराभावात् । "चित्ररथं कापेया अयाजयन्" इत्यस्य सामान्यत्वात् । अन्यथाऽभिप्रतारिणः कापेययाज्यत्वे सिद्धे चैत्ररथत्वसिद्धिस्तत्सिद्धौ कापेययाज्यत्वसिद्धिरित्यन्योन्याश्रयापत्तेः ।

ಎರಡನೆಯ ಸೂತ್ರಾರ್ಥವನ್ನು ದೂಷಣೆ ಮಾಡುವಾಗ ಗ್ರಂಥಕಾರರು ಹೇಳಿದ ದೋಷ ತಮಗೆ ಬರುವುದಿಲ್ಲವೆಂದು ಶೈವರು ಸಮರ್ಥಿಸಿಕೊಳ್ಳುತ್ತಾರೆ. ಶ್ರುತಿಯಲ್ಲಿ ಅಭಿಪ್ರತಾರಿಗೆ ಕಾಪೇಯ ಋಷಿಯ ಸಂಬಂಧವಷ್ಟೇ ತಿಳಿಯುತ್ತಿದೆ. ಯಾಜ್ಯತ್ವೇನ ಯೋಗವು ತಿಳಿಯುತ್ತಿಲ್ಲ. ಹಾಗೇ ತಿಳಿದಿದ್ದಲ್ಲಿ ಚೈತ್ರರಥನೆಂದು ಸಾಧಿಸಬಹುದಿತ್ತು. ಗ್ರಂಥಕಾರರು ಹೇಳಿದ ಈ ದೋಷ ತಮಗೆ ಬರುವುದಿಲ್ಲ. ಏಕೆಂದರೆ 'ಚಿತ್ರರಥಂ ಕಾಪೇಯಾ ಅಯಾಜಯನ್' ಎಂಬ ಮತ್ತೊಂದು ಶ್ರುತಿಯಲ್ಲಿ ಚಿತ್ರರಥನಿಗೆ ಯಾಜ್ಯತ್ವೇನ ಸಂಬಂಧವು ಹೇಳಲಾಗಿದೆ. ಆ ಶ್ರುತ್ಯಂತರದ ಸಮಾಖ್ಯಾದಿಂದ ಪ್ರಕೃತ ಈ ಶ್ರುತಿಯಲ್ಲಿಯೂ ಯಾಜ್ಯತ್ವೇನ ಸಂಬಂಧವೇ ತಿಳಿಯುತ್ತದೆ.

ಇದು ತಪ್ಪು. ಅಭಿಪ್ರತಾರಿಗೆ ಕಾಪೇಯರ ಸಂಬಂಧವು ಯಾಜತ್ವೇನ ಇದೆ ಎನ್ನಲು ಶ್ರುತಿಪ್ರಮಾಣವಿಲ್ಲ. 'ಚಿತ್ರರಥಂ ಕಾಪೇಯಾ ಅಯಾಜಯನ್' ಎಂಬ ಶ್ರುತಿಯು ಸಾಮಾನ್ಯವಾಗಿ ಹೇಳುತ್ತಿದೆ ಹೊರತು, ಅಭಿಪ್ರತಾರಿಗೆ ಕಾಪೇಯರ ಯಾಜತ್ವೇನ ಸಂಬಂಧವನ್ನು ಹೇಳುತ್ತಿಲ್ಲ. ಹೀಗೊಪ್ಪದಿದ್ದರೆ, ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಏಕೆಂದರೆ ಅಭಿಪ್ರತಾರಿಯು ಚಿತ್ರರಥವಂಶದವನೆಂದು ಸಿದ್ಧವಾದರೆ, 'ಚಿತ್ರರಥಂ ಕಾಪೇಯಾ ಅಯಾಜಯನ್' ಎಂಬ ಶ್ರುತಿಬಲದಿಂದ ಅವನಿಗೆ ಕಾಪೇಯಯಾಜ್ಯತ್ವವು ಸಿದ್ಧವಾಗುತ್ತದೆ.

ಕಾಪೇಯಯಾಜ್ಯತ್ವವು ಸಿದ್ಧವಾದರೆ ಮಾತ್ರ ಚೈತ್ರರಥತ್ವವು ಸಿದ್ಧವಾಗುತ್ತದೆ. ಆದ್ದರಿಂದ ಸಾಮಾನ್ಯ ವಾಕ್ಯದ ಬಲದಿಂದ ಕಾಪೇಯಯಾಜ್ಯತ್ವವನ್ನು ಸಾಧಿಸಬಾರದು.

**प्रकाशः –** किञ्चात्र सहपाठस्यैव श्रवणेन सम्बन्धस्याप्रतीतेश्च । अत एव सहपाठेऽपीत्युक्तम् । भोजनार्थं सहोपविष्टावित्येव हि पाठस्सहपाठः । नच तावन्मात्रेण कश्चन सम्बन्धस्सिध्यति ।

ಆದ್ದರಿಂದಲೇ ಗ್ರಂಥಕಾರರು 'ಸಂಬಂಧೇಪಿ' ಎಂದು ಹೇಳದೇ, 'ಸಹಪಾಠೇಪಿ' ಎಂದು ಹೇಳಿದ್ದಾರೆ. ಸಹಪಾಠವೇ ಬೇರೆ, ಸಂಬಂಧವೇ ಬೇರೆ. ಊಟಕ್ಕೆ ದೇವದತ್ತ, ಯಜ್ಞದತ್ತ ಎಲ್ಲರೂ ಒಟ್ಟಿಗೆ ಕೂತಿದ್ದರು. ಎಂದು ಹೇಳಿದ ಮಾತ್ರಕ್ಕೆ ದೇವದತ್ತ, ಯಜ್ಞದತ್ತಾದಿಗಳಿಗೆ ಸಂಬಂಧವಿದೆಯೆಂದೇನೂ ತಿಳಿಯುವುದಿಲ್ಲ. ಅದರಂತೆ ಶ್ರುತಿಯಲ್ಲಿ ಸಹಪಾಠವಷ್ಟೇ ಕೇಳಿಸುತ್ತಿದೆ ಹೊರತು, ಸಂಬಂಧವು ಕೇಳಿಸುತ್ತಿಲ್ಲ. ಸಹಪಾಠವಿದ್ದ ಮಾತ್ರದಿಂದ ಯಾವುದೇ ಸಂಬಂಧವು ಸಿದ್ಧವಾಗುವುದಿಲ್ಲ. ಅಂದರೆ ಒಟ್ಟಿಗೆ ಊಟಕ್ಕೆ ಕುಳಿತ ಮಾತ್ರದಿಂದ ಸಂಬಂಧವಿರಬೇಕೆಂದೇನೂ ನಿಯಮವಿಲ್ಲ.

**प्रकाशः –** एतेनैव हस्तिहस्तिपयोस्सहस्थितयोर्दर्शनेऽयमस्य हस्तिप इतिवदत्राप्ययमस्य याजक इति ज्ञानं भवतीति निरस्तम् । याजकत्वप्रत्यायका-भावात् । अत एव याज्यत्वेनेत्युक्तमिति ।

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಆನೆ ಮತ್ತು ಮಾವುತ ಇಬ್ಬರು ಒಟ್ಟಿಗೆ ಇದ್ದಾಗ ಆನೆಯು ಮಾವುತನಿಂದ ಪಾಲಿತವಾಗಿದೆ. ಮಾವುತನು ಪಾಲಕನಾಗಿದ್ದಾನೆಂದು ಹೇಗೆ ತಿಳಿಯುತ್ತದೋ, ಅದರಂತೆ ಚೈತ್ರರಥ ಹಾಗೂ ಕಾಪೇಯರನ್ನು ಒಟ್ಟಿಗೆ ಹೇಳಿದಾಗ ಕಾಪೇಯರು ಪುರೋಹಿತರು, ಚೈತ್ರರಥನು ಯಾಜಕನೆಂದು ತಿಳಿಯುತ್ತದಲ್ಲವೇ? ಎಂಬ ಶಂಕೆಗೆ ಈಗ ಅವಕಾಶವಿಲ್ಲ. ಏಕೆಂದರೆ ಚೈತ್ರರಥನು ಯಾಜಕನಾಗಿದ್ದಾನೆಂದು ಹೇಳಲು ಯಾವುದೇ ಪದಗಳಿಲ್ಲ. ಸಂಬಂಧವನ್ನು ಇದೆಯೆಂದು ಒಪ್ಪಿಕೊಳ್ಳೋಣ. ತನ್ಮಾತ್ರದಿಂದ ಯಾಜ್ಯತ್ವೇನ ಸಂಬಂಧವಿದೆಯೆಂದು ನಿರ್ಧರಿಸಲು ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಶೈವರ ಅಭಿಪ್ರಾಯಗಳೆಲ್ಲವೂ ಅತ್ಯಂತ ಅಸಾಧುವಾಗಿದೆ.




'ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ' ಎಂಬ ಮೂರನೆಯ ಸೂತ್ರಕ್ಕೆ ಪರಮತೀಯರು ಹೀಗೆ ವ್ಯಾಖ್ಯಾನ ಮಾಡುತ್ತಾರೆ. 'ತಂ ಹೋಪನಿನ್ಯೇ' ಎಂಬುದು ವಿಷಯವಾಕ್ಯ. ಇದರಲ್ಲಿ ಉಪನಯನಸಂಸ್ಕಾರವನ್ನು ಬ್ರಾಹ್ಮಣನಿಗೆ ಹೇಳಿರುವುದರಿಂದ, ಶೂದ್ರರಿಗೆ ಉಪನಯನಸಂಸ್ಕಾರವಿಲ್ಲವೆಂದು ತಿಳಿಯುತ್ತದೆ. ಮತ್ತು 'ನಶೂದ್ರೇ ಪಾತಕಂ ಕಿಂಚಿತ್' ಎಂಬ ವಾಕ್ಯದಿಂದಲೂ ಶೂದ್ರನಿಗೆ ವೇದಾದಿವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಹೇಳಲಾಗಿದೆ.

ಇದು ತಪ್ಪು. ನಾವು ಹೇಳುವಂತೆ 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ' ಎಂಬುದನ್ನೇ ವಿಷಯವಾಕ್ಯವೆಂದು ಪರಿಗಣಿಸಿ, 'ತತ್' ಶಬ್ದದಿಂದ ಸಂಸ್ಕಾರದ ಪರಾಮರ್ಶವನ್ನು ನೇರವಾಗಿ ಹೇಳುವಂತೆ 'ತಂ ಹೋಪನಿನ್ಯೇ' ಎಂಬ ವಾಕ್ಯದಿಂದ ಸಂಸ್ಕಾರವನ್ನು ಪರಾಮರ್ಶ ಮಾಡಲಾಗದು. ಏಕೆಂದರೆ ನೇರವಾಗಿ ಉಪನಯನವನ್ನೇ ಹೇಳಿರುವಾಗ, ಪರಾಮರ್ಶ ಮಾಡಲು ಹೇಗೆ ಸಾಧ್ಯ ? ಆದ್ದರಿಂದ ಸೂತ್ರದಲ್ಲಿರುವ ಪರಾಮರ್ಶ ಶಬ್ದವು ಇವರ ಮತದಲ್ಲಿ ಅಸ್ವರಸವಾಗುತ್ತದೆ.

'ತದಭಾವನಿರ್ಧಾರಣೇ ಚ ಪ್ರವೃತ್ತೇಃ' ಎಂಬುದು ನಾಲ್ಕನೆಯ ಸೂತ್ರ. ಜಾಬಾಲನು ಹೇಳಿದ ಸತ್ಯವಚನವನ್ನು ಕೇಳಿದ ಗೌತಮರು ಶೂದ್ರನಲ್ಲವೆಂದು ನಿಶ್ಚಯ ಮಾಡಿ, ಉಪನಯನದಲ್ಲಿ ಪ್ರವೃತ್ತಿ ಮಾಡುತ್ತಾರೆ. ಇದರಿಂದಲೂ ಶೂದ್ರರಿಗೆ ಉಪನಯನ ಸಂಸ್ಕಾರವಿಲ್ಲವೆಂದು ನಿಶ್ಚಯವಾಗುತ್ತದೆ.

ಇದೂ ಕೂಡ ತಪ್ಪು. 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಾಹರೋಪತ್ವಾನೇಷ್ಯೇ' ಎಂದು ನೀನು ಉದಾಹರಿಸುವ ವಾಕ್ಯದಲ್ಲಿಯೂ ಉಪನಯನದಲ್ಲೇ ಪ್ರವೃತ್ತಿಮಾಡಿದ್ದಾರೆಂದು ತಿಳಿಯುತ್ತದೆ ಹೊರತು, ಬ್ರಹ್ಮೋಪದೇಶದಲ್ಲಿ ಪ್ರವೃತ್ತಿ ಮಾಡಿದ್ದಾರೆಂದು ತಿಳಿದು, ತನ್ಮೂಲಕ ಉಪನಯನದಲ್ಲಿ ಅಧಿಕಾರವಿದೆಯೆಂದು ಸಾಧಿಸುವುದು ತಪ್ಪಾಗುತ್ತದೆ.

'ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ' - ಎಂಬುದು ಐದನೆಯ ಸೂತ್ರ. ಶೂದ್ರನು ವೇದವನ್ನು ಶ್ರವಣಮಾಡಬಾರದೆಂದು 'ಅಥಹಾಸ್ಯ ವೇದಂ ಶೃಣ್ವತಃ' ಎಂಬ ಶ್ರುತಿಯು ನಿಷೇಧ ಮಾಡುತ್ತಿದೆ. ಶ್ರವಣವೇ ನಿಷಿದ್ಧವಾದ ಮೇಲೆ ಅದರ ಅರ್ಥಜ್ಞಾನಗಳು ಸರ್ವಥಾ ನಿಷಿದ್ಧವಾಗಿವೆ. ಆದ್ದರಿಂದಲೂ ಶೂದ್ರರಿಗೆ ವೇದವಿದ್ಯಾಧಿ-ಕಾರವಿರುವುದಿಲ್ಲ.

ಇದೂ ಕೂಡ ತಪ್ಪು. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಿಂದಲೇ ಶೂದ್ರರಿಗೆ ವೇದಾಧಿಕಾರವಿಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತಿರುವಾಗ ಸ್ಮೃತಿಯ ಆಧಾರದಿಂದ ನಿಷೇಧ ಮಾಡುವುದು ತಪ್ಪಾಗುತ್ತದೆ. ಮತ್ತು ಸೂತ್ರದಲ್ಲಿರುವ 'ಚ' ಶಬ್ದವು ಭಿನ್ನಕ್ರಮದಿಂದ ಅನ್ವಯಮಾಡುವ ಪ್ರಸಂಗ ಬರುತ್ತದೆ. ಆದ್ದರಿಂದ ಪರಮತೀಯರ ಸೂತ್ರಾರ್ಥಗಳೆಲ್ಲವೂ ಅತ್ಯಂತ ಅಸಾಧುವಾಗಿವೆ.

ಪರಿಪೂರ್ಣಚಂದ್ರಿಕಾ

## तात्पर्यचन्द्रिका

**टीकाक्षरार्थस्तु ।। सेदुराजेत्यादिवदिति ।। यथा स इत्यत्र छान्दसेन विसर्गलोपेन सेदिति गुणस्तथा हारः इत्वेत्यत्रापि हारेत्वेति गुण इत्यर्थः ।**

ಅನುವಾದ - ಟೀಕೆಯ ಕೆಲವು ಕಠಿಣಪದಗಳ ಅರ್ಥ ಹೀಗಿದೆ - 'ಸೇದುರಾಜ ಇತ್ಯಾದಿವತ್' ಎಂಬ ಟೀಕೆಯ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು -

'ಅಹ ಹಾರೇತ್ವ ಶೂದ್ರ' ಎಂಬ ಉಪನಿಷತ್ತಿನಲ್ಲಿ 'ಹಾರೇತ್ವ' ಎಂಬ ಪ್ರಯೋಗವು ಹೇಗೆ ಸರಿಯಾಗುತ್ತದೆ. ಏಕೆಂದರೆ 'ಹಾರಃ ಇತ್ವಾ' ಎಂದು ಪದವಿಭಾಗ ಮಾಡಬೇಕು. ವಿಸರ್ಗವು ಲೋಪವಾದರೆ 'ಹಾರ ಇತ್ವಾ' ಎಂದಾಗುತ್ತದೆ ಹೊರತು, ಪುನಃ ಗುಣ ಬಂದು 'ಹಾರೇತ್ವಾ' ಎಂಬ ರೂಪವು ನಿಷ್ಪನ್ನವಾಗುವುದಿಲ್ಲವಲ್ಲವೇ?

ಹೀಗೆ ಪ್ರಶ್ನಿಸಬಾರದು. 'ಸೇದುರಾಜಾ' ಇತ್ಯಾದಿ ಪದಪ್ರಯೋಗದಂತೆ ಇದೂ ಸಹ ಸಾಧುವಾಗುತ್ತದೆ. 'ಸಃ ಇತ್ ಉ ರಾಜ' ಎಂದು ಸೇದುರಾಜ ಎಂಬಲ್ಲಿ ಪದವಿಭಾಗ ಮಾಡಬೇಕು. 'ಸಃ ಇತ್'ಎಂಬಲ್ಲಿ ವಿಸರ್ಗವು ಲೋಪವಾದರೆ 'ಸ ಇತ್' ಎಂದಾಗಬೇಕು. ಆದರೆ ಛಾಂದಸವಾದ ವಿಸರ್ಗಲೋಪವನ್ನು ಆಶ್ರಯಿಸಿ ಗುಣವನ್ನು ಮಾಡಿ, 'ಸೇದುರಾಜ' ಎಂಬ ಪ್ರಯೋಗವು ಪ್ರಸಿದ್ಧವಾಗಿದೆ. ಅದರಂತೆ 'ಹಾರಃ ಇತ್ವ' ಎಂಬಲ್ಲಿಯೂ ಛಾಂದಸವಿಸರ್ಗಲೋಪವನ್ನು ಆಶ್ರಯಿಸಿ, ಗುಣವನ್ನು ಮಾಡಿ 'ಹಾರಇತ್ವಾ' ಎಂದು ಪ್ರಯೋಗವು ಯುಕ್ತವಾಗುತ್ತದೆ.

**यद्वा हारेत्वेत्येकं पदम् । व्यत्ययेन च द्विवचनस्यैकवचनमित्याह – हारेत्वानाविति ।।**

ಅಥವಾ 'ಹಾರಶ್ಚ ಇತ್ವಾಚ' 'ಹಾರೇತ್ವ' ಎಂದು ದ್ವಂದ್ವಸಮಾಸ ಮಾಡಬಹುದು. ಆವಾಗ 'ಹಾರೇತ್ವಾನೌ' ಎಂದಾಗಬೇಕಲ್ಲವೇ? ಎಂದರೆ ದ್ವಿವಚನಕ್ಕೆ ವ್ಯತ್ಯಯೇನ ಏಕವಚನವು ಪ್ರಾಪ್ತವಾಗಿದೆ ಎಂದು 'ಹಾರೇತ್ವಾನೌ' ಎಂಬ ಟೀಕೆಯಿಂದ ಹೇಳಿದ್ದಾರೆ.

**दीर्घस्वरार्थत्वेनाद्रवणादित्युक्तमिति ।।**

**संहितायां यत्र दैर्घ्यं पदे यत्र न विद्यते ।**
**उक्तार्थस्य महाधिक्यं श्रुतेस्तत्र विवक्षितम् ।।**

**इत्यादिवचनैः श्रुतौ शूद्रशब्दे ऊ इति दीर्घस्वरः शोकाधिक्यज्ञापनार्थ इति सूचयितुं सूत्र आद्रवणादित्युक्तमित्यर्थः ।।**

ಟೀಕೆಯಲ್ಲಿ 'ದೀರ್ಘಸ್ವರಾರ್ಥತ್ವೇನಾದ್ರವಣಾತ್ ಇತ್ಯುಕ್ತಮ್' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ -

ಸಂಹಿಯತಾಮ್ ಯತ್ರ ದೈರ್ಘ್ಯಂ ಪದೇ ಯತ್ರನ ವಿದ್ಯತೇ ।
ಉಕ್ತಾರ್ಥಸ್ಯ ಮಹಾಧಿಕ್ಯಂ ಶ್ರುತೇಸ್ತತ್ರ ವಿವಕ್ಷಿತಮ್ ॥

ಸಂಹಿತಾದಲ್ಲಿ ದೀರ್ಘವು ಬಂದರೆ ಅಥವಾ ಪದಪಾಠದಲ್ಲಿ ಹ್ರಸ್ವವಿದ್ದರೆ ಅರ್ಥದಲ್ಲಿ ಆಧಿಕ್ಯವು ಬರುತ್ತದೆಂದು ಋಗ್ಭಾಷ್ಯದಲ್ಲಿ ಹೇಳಿರುತ್ತಾರೆ. ಅದರಂತೆ ಶ್ರುತಿಯಲ್ಲಿರುವ ಶೂದ್ರಶಬ್ದದಲ್ಲಿ ಶುಚಾದ್ರವಣಂ ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ 'ಶುದ್ರ' ಎಂದಾಗಬೇಕು. 'ಶೂದ್ರ' ಎಂಬ ದೀರ್ಘವು ಅರ್ಥದ ಆಧಿಕ್ಯದಲ್ಲಿ ಬಂದಿದೆ. ಅಂದರೆ ಬಂದಿರುವಂತಹ ಪೌತ್ರಾಯಣನು ಅಧಿಕವಾದ ಶೋಕವುಳ್ಳವನಾಗಿದ್ದಾನೆ ಎಂಬುದನ್ನು ದೀರ್ಘವು ತಿಳಿಸುತ್ತಿದೆ. ಆದ್ದರಿಂದಲೇ ಸೂತ್ರದಲ್ಲಿಯೂ ಕೂಡ 'ತದದ್ರವಣಾತ್' ಎಂದೇ ಹೇಳಬಹುದಿತ್ತು. ಆದರೂ 'ತದಾದ್ರವಣಾತ್' ಎಂದು ದೀರ್ಘವನ್ನು ಹೇಳಿದ್ದಾರೆ. ಇದರಿಂದ 'ಶೂದ್ರ' ಎಂಬಲ್ಲಿರುವ ಊಕಾರವು ಆಧಿಕ್ಯಾರ್ಥದಲ್ಲಿದೆಯೆಂದು ಸೂಚನೆ ಮಾಡಿದಂತಾಯಿತು.

**ब्रह्माणनयोग्यानां त्रैवर्णिकानामिति ।। ''आर्जवं ब्राह्मणे साक्षाच्छूद्रोऽनार्जवलक्षण'' इति श्रुतिव्याख्यानरूपायां स्मृतौ ब्राह्मणप्रतियोगित्वेन शूद्रस्योपादानाच्छतावपि ब्राह्मणशब्दस्त्रैवर्णिकपर एवेत्यर्थः ।।**

ಟೀಕೆಯಲ್ಲಿ 'ಬ್ರಹ್ಮಾಣನಯೋಗ್ಯಾನಾಂ ತ್ರೈವರ್ಣಿಕಾನಾಮ್' ಎಂಬುದಾಗಿ ವೇದವನ್ನು ತಿಳಿಯಲು ತ್ರೈವರ್ಣಿಕರು ಯೋಗ್ಯರಾಗಿದ್ದಾರೆಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - 'ಆರ್ಜವಂ ಬ್ರಾಹ್ಮಣೇ ಸಾಕ್ಷಾತ್ ಶೂದ್ರೋಽನಾರ್ಜವಲಕ್ಷಣ' 'ಸತ್ಯ ಹೇಳುವಿಕೆ ಬ್ರಾಹ್ಮಣನ ಲಕ್ಷಣ, ಸುಳ್ಳು ಹೇಳುವಿಕೆ ಶೂದ್ರನ ಲಕ್ಷಣ' ಎಂಬುದಾಗಿ ಶ್ರುತಿಯನ್ನು ಸ್ಮೃತಿವಾಕ್ಯವು ವ್ಯಾಖ್ಯಾನ ಮಾಡುತ್ತಿದೆ. ಇಲ್ಲಿ ಬ್ರಾಹ್ಮಣನಿಗೆ ಪ್ರತಿಯೋಗಿಯಾಗಿ ಶೂದ್ರರನ್ನೇ ಸ್ಮೃತಿಯು ವಿವಕ್ಷಿಸಿದೆ. ಆದ್ದರಿಂದ ಶ್ರುತಿಯಲ್ಲೂ ಕೂಡ ಬ್ರಾಹ್ಮಣಶಬ್ದಕ್ಕೆ ತ್ರೈವರ್ಣಿಕರೆಂದೇ ಅಭಿಪ್ರಾಯಪಡಬೇಕು ಹೊರತು, ಕೇವಲ ಬ್ರಾಹ್ಮಣಜಾತಿಯವರನ್ನು ಮಾತ್ರ ಅಭಿಪ್ರಾಯ ಪಡಬಾರದು. ಆದ್ದರಿಂದ ತ್ರೈವರ್ಣಿಕರಿಗೂ ಕೂಡ ವೇದವನ್ನು ತಿಳಿಯುವ ಯೋಗ್ಯತೆಯಿರುತ್ತದೆಂದು ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

अविहितोपनयनानामेवेति ।। अविहितोपनयनत्वे सत्यनिषिद्धाध्ययनानामुत्तमस्त्रीतिर्यगादीनामेवापवादविषयता नतु निषिद्धाध्ययनानामित्यर्थः ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अपशूद्राधिकरणं सम्पूर्णम् ।।

ಟೀಕೆಯಲ್ಲಿ 'ಅವಿಹಿತೋಪನಯನಾನಾಮೇವ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಉತ್ತಮ ಸ್ತ್ರೀ ಮೊದಲಾದವರಿಗೆ ಉಪನಯನದಲ್ಲಿ ಅಧಿಕಾರವಿಲ್ಲದ್ದಿದರೂ ವೇದಾಧ್ಯಯನವನ್ನು ಹೇಗೆ ಹೇಳುತ್ತೀರಿ ಎಂದು ಪ್ರಶ್ನಿಸಬಾರದು. ಉಪನಯನವನ್ನು ಉತ್ತಮಸ್ತ್ರೀಯರಿಗೆ ವಿಧಾನ ಮಾಡದಿರಬಹುದು. ಆದರೆ ಉಪನಯನ ಮಾಡಬಾರದೆಂಬ ನಿಷೇಧ ವಚನವು ಸರ್ವಥಾ ಇರುವುದಿಲ್ಲ. ಅಧ್ಯಯನವನ್ನು ಮಾಡಬಾರದೆಂಬ ನಿಷೇಧವೂ ಸಹ ಇರುವುದಿಲ್ಲ. ಆದ್ದರಿಂದ ಉತ್ತಮಸ್ತ್ರೀಯರಿಗೆ ಉತ್ತಮತಿರ್ಯಗ್‌ಪ್ರಾಣಗಳಿಗೆ ವೇದಾಧ್ಯಯನದಲ್ಲಿ ಅಧಿಕಾರವಿರುತ್ತದೆ. ಅಂದರೆ ಕನ್ಯಾದಾನಾದಿಗಳನ್ನೇ ಉಪನಯನದ ಪ್ರತಿರೂಪವಾದ ಸಂಸ್ಕಾರವೆಂದು ಅಲ್ಲಿ ತಿಳಿಯಬೇಕು. ಆದರೆ ಶೂದ್ರಾದಿ ಜಾತಿಯಲ್ಲಿ ಹುಟ್ಟಿದ ವ್ಯಕ್ತಿಗಳಿಗೆ ಉಪನಯನಾದಿಸಂಸ್ಕಾರವನ್ನು ಮಾಡಬಾರದೆಂಬ ನಿಷೇಧವಿದೆ. ಆದ್ದರಿಂದ ಉಪನಯನಸಂಸ್ಕಾರದಲ್ಲಾಗಲೀ, ವೇದಾಧ್ಯಯನದಲ್ಲಾಗಲೀ ಶೂದ್ರಾದಿಗಳಿಗೆ ಸರ್ವಥಾ ಅಧಿಕಾರವಿರುವುದಿಲ್ಲವೆಂದು ಅಭಿಪ್ರಾಯ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಪಶೂದ್ರಾಧಿಕರಣವು ಸಂಪೂರ್ಣವಾಯಿತು.

**प्रकाशः –**

''हारे त्विति सेदुराजेत्यादिवद्विसर्गलोपेन भवति । हारेत्वानाविति व'' इति वाक्यद्वयं क्रमेण व्यनक्ति – **यथेति** ।।

ವಿವರಣೆ - ಟೀಕೆಯ ಕೆಲವು ಕಠಿಣಪದಗಳ ಅರ್ಥವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಹಾರೇ ತ್ವಿತಿ ಸೇದುರಾಜೇತ್ಯಾದಿವತ್ ವಿಸರ್ಗಲೋಪೇನ ಭವತಿ । ಹಾರೇತ್ವಾನೌ ಇತಿ ವ' ಎಂಬ ಎರಡು ವಾಕ್ಯಗಳನ್ನು ಕ್ರಮವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಯಥಾ' ಇತ್ಯಾದಿ ಗ್ರಂಥದಿಂದ.

**प्रकाशः** – ''सेदुराजाक्षयतिचर्षणीनाम्'' इत्यत्र स इदुराजेति वक्तव्ये पदकाले श्रूयमाणस्य विसर्गस्य लोपे ''आद्गुण'' इति गुणे च सति रूपमाश्रित्य सेदिति निर्देशस्तथेत्यर्थः ।

'ಸೇದುರಾಜಾಕ್ಷಯತಿಚರ್ಷಣೀನಾಮ್' ಎಂಬ ಶ್ರುತಿಯಲ್ಲಿ 'ಸಃ ಇತ್ ಉ ರಾಜ' ಎಂದು ಪದಪಾಠದಲ್ಲಿ ಪದಗಳನ್ನು ವಿಭಾಗಮಾಡಲಾಗುತ್ತದೆ. ಆವಾಗ ವಿಸರ್ಗವು ಲೋಪವಾದರೆ 'ಆದ್ಗುಣಃ' ಎಂಬ ಸೂತ್ರದಿಂದ ಪುನಃ ಗುಣವು ಪ್ರಾಪ್ತವಾಗಿ 'ಸೇದುರಾಜಾ' ಎಂಬ ಪ್ರಯೋಗವನ್ನು ಹೇಗೆ ಮಾಡಲಾಗುತ್ತದೋ, ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು ಎಂದರ್ಥ.

**प्रकाशः** – ननु ''सोऽचि लोपे चेत्पादपूरणम्'' इत्यनेन सुप्रत्ययस्यैव लोपो विहितो न विसर्गस्य । तत्कथं विसर्गलोपेनेत्युक्तिः । सत्यम् । पदकाले विसर्गस्यैव श्रवणेन संहिताकाले तस्यैवाश्रवणेन विसर्गलोपेनेत्युक्तावपि तत्रैव तात्पर्यादित्याहुः।

'ಸೋऽಚಿ ಲೋಪೇ ಚೇತ್‌ಪಾದಪೂರಣಮ್' ಎಂಬಲ್ಲಿ 'ಸು' ಪ್ರತ್ಯಯವನ್ನು ಲೋಪ ಮಾಡಿದಾಗ ಪಾದವು ಪೂರ್ತಿಯಾಗುತ್ತದೆಂಬ ಪಕ್ಷದಲ್ಲಿ ಮಾತ್ರ 'ಸು' ಪ್ರತ್ಯಯಕ್ಕೆ ಲೋಪವನ್ನು ಮಾಡಬೇಕು. ಹೊರತು, ವಿಸರ್ಗಲೋಪವನ್ನು ಹೇಳಿಲ್ಲ. ಹೀಗಿರುವಾಗ ಗ್ರಂಥಕಾರರು ವಿಸರ್ಗಲೋಪವನ್ನು ಹೇಗೆ ಹೇಳಿದರು?

ಹೌದು. ಆದರೆ 'ಸು' ಪ್ರತ್ಯಯಕ್ಕೆ ರುತ್ವ ಬಂದು ಮುಂದೆ ವಿಸರ್ಗ ಬರುವುದರಿಂದ ವಿಸರ್ಗವು ಲೋಪವಾಗುತ್ತದೆಂದರೆ 'ಸು' ಪ್ರತ್ಯಯವು ಲೋಪವಾಗುತ್ತದೆಂದೇ ಅರ್ಥ. ಅಂದರೆ ಪದವಿಭಾಗ ಮಾಡುವ ಕಾಲದಲ್ಲಿ ವಿಸರ್ಗವಷ್ಟೇ ಶ್ರುತವಾಗಿರುತ್ತದೆ. ಸಂಹಿತಾಕಾಲದಲ್ಲಿ ಆ ವಿಸರ್ಗವೇ ಶ್ರುತವಾಗಿರುವುದಿಲ್ಲ. ಆದ್ದರಿಂದ 'ವಿಸರ್ಗಲೋಪೇನ' ಎಂದು ಗ್ರಂಥಕಾರರ ಮಾತಿಗೆ ಸುಲೋಪವಾಗುತ್ತದೆ ಎಂಬುದರಲ್ಲೇ ತಾತ್ಪರ್ಯವೆಂದು ತಿಳಿಯಬೇಕು.

**प्रकाशः** – दीर्घेति वाक्यं दुर्गमत्वात्सप्रमाणं व्यनक्ति – **संहितायामिति** ।। ऊ इति दीर्घस्वर इति ।। शुद्रेत्येव पदकालेऽभिप्रेतत्वादित्यर्थः ।। **इत्युक्तमिति** ।। सूत्रे आङुच्चारणं कृतमित्यर्थः ।

'ದೀರ್ಘಸ್ವರಾರ್ಥತ್ವೇನ' ಎಂಬ ಟೀಕಾ ವಾಕ್ಯವು ದುರ್ಗಮವಾಗಿರುವುದರಿಂದ, ಪ್ರಮಾಣಬದ್ಧವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸಂಹಿತಾಯಾಮ್' ಎಂಬ ಶ್ಲೋಕದ ಮೂಲಕ. 'ಊ' ಎಂಬುದು ದೀರ್ಘಸ್ವರವಾಗಿದೆ. ಅಂದರೆ ಪದಪಾಠದ ಕಾಲದಲ್ಲಿ 'ಶೂದ್ರ' ಎಂದೇ ಇರುತ್ತದೆ. ಸಂಹಿತಾಪಾಠದ ಸಂದರ್ಭದಲ್ಲಿ 'ಶೂದ್ರ' ಎಂದಾಗುತ್ತದೆ ಎಂದು ವಿವಕ್ಷಿಸಬೇಕು. ಇತ್ಯುಕ್ತಮ್ ಎಂದರೆ ಆದ್ದರಿಂದಲೇ ಸೂತ್ರಕಾರರು ತದಾದ್ರವಣಾತ್' ಎಂಬಲ್ಲಿ 'ಆಙ್' ಎಂಬ ಉಪಸರ್ಗವನ್ನು ಉಚ್ಚಾರಣೆ ಮಾಡಿದ್ದಾರೆ ಎಂದರ್ಥ.

**प्रकाशः** – ''तदभाव'' इति सूत्रटीकायां ''नैतदब्राह्मणो विवक्तुमर्हति'' इति वाक्ये ब्राह्मणपदस्यैव श्रवणेन शूद्रत्वाभावनिर्णय एव प्रवृत्तेरिति भाष्यादि कथमित्याशंक्य ''ब्राह्मणपदेन ब्रह्माणनयोग्यानां त्रैवर्णिकानामुक्तेः'' इत्युक्तं वाक्यं रूढार्थत्यागेन यौगिकार्थग्रहणेन हेतुं वदन् व्याचष्टे – **आर्जवमिति** ।। अविहितेत्याद्यन्तिमं वाक्यमस्पष्टत्वाद्व्याचष्टे – **अविहितेति** ।। शिष्टं स्पष्टमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अपशूद्राधिकरणं सम्पूर्णम् ।।**

'ತದಭಾವನಿರ್ಧಾರಣೇ ಚ' ಎಂಬ ಸೂತ್ರದ ಟೀಕೆಯಲ್ಲಿ 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಎಂಬ ವಾಕ್ಯವನ್ನು ಉಲ್ಲೇಖ ಮಾಡಿದ್ದರಿಂದ ಗೌತಮರು ಬ್ರಾಹ್ಮಣನೆಂದೇ ನಿರ್ಧಾರ ಮಾಡಿದ್ದಾರೆಂದು ತಿಳಿಯುತ್ತದೆ. ಹೊರತು, ಶೂದ್ರನಲ್ಲವೆಂದು ನಿರ್ಧಾರ ಮಾಡಿದ್ದು ಕಾಣಸುವುದಿಲ್ಲ. ಆದ್ದರಿಂದ 'ಬ್ರಾಹ್ಮಣ್ಯನಿರ್ಧಾರಣೇನೇವ' ಎಂದೇ ಹೇಳಬೇಕಿತ್ತು. 'ಶೂದ್ರತ್ವಾಭಾವನಿರ್ಣಯೇನ' ಎಂದೇಕೆ ಹೇಳಿದರು? ಎಂದರೆ ಅದಕ್ಕಾಗಿ ಟೀಕೆಯಲ್ಲಿ ಬ್ರಾಹ್ಮಣಶಬ್ದಕ್ಕೆ 'ಬ್ರಹ್ಮಾಣನಯೋಗ್ಯಾನಾಂ' ಎಂಬರ್ಥವನ್ನು ಹೇಳಿದರು. ಆವಾಗ ಅಬ್ರಾಹ್ಮಣ ಶಬ್ದಕ್ಕೆ ತ್ರೈವರ್ಣಿಕರಲ್ಲದ ಶೂದ್ರ ಜಾತಿಯವನು ಎಂದರ್ಥವು ಲಭಿಸುತ್ತದೆ. ಆದ್ದರಿಂದ ಬ್ರಾಹ್ಮಣ ಶಬ್ದಕ್ಕೆ ಬ್ರಾಹ್ಮಣ ಜಾತಿಯವನು ಎಂಬ ರೂಢಾರ್ಥವನ್ನು ಬಿಟ್ಟು 'ಬ್ರಹ್ಮಾಣನಯೋಗ್ಯತ್ವ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಲು ಕಾರಣವನ್ನು ಹೇಳುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ 'ಆರ್ಜವಮ್' ಇತ್ಯಾದಿ ಗ್ರಂಥದಿಂದ. 'ಅವಿಹಿತ' ಇತ್ಯಾದಿಯಾದ ಕೊನೆಯ ವಾಕ್ಯವು ಸ್ಪಷ್ಟವಾಗಿ ಅರ್ಥವಾಗದ ಕಾರಣ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅವಿಹಿತೇ' ಇತ್ಯಾದಿ ಗ್ರಂಥದಿಂದ. ಅಂದರೆ ಶೂದ್ರಾದಿಗಳಿಗೆ ಉಪನಯನಾದಿಗಳಲ್ಲಿ ಅಧಿಕಾರವಿಲ್ಲವೆಂದು ನಿಷೇಧವಾಕ್ಯವಿದ್ದಂತೆ ಉತ್ತಮಸ್ತ್ರೀಯರಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲವೆಂಬ ನಿಷೇಧವಚನವು ಇರುವುದಿಲ್ಲ. ಉಳಿದ ಟೀಕೆಯ ಪದಗಳ ಅರ್ಥವು ಉಪನ್ಯಾಸಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ಸ್ಪಷ್ಟವಾಗಿದೆಯೆಂದು ತಿಳಿಯಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಪಶೂದ್ರಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಅಪಶೂದ್ರಾಧಿಕರಣ (೧-೩-೯)

**गुरुराजीयम् – अविहितोपनयनत्वे सतीति ।।** यद्यपि स्त्रीशूद्रब्रह्मबन्धूनां त्रयी न श्रुतिगोचरेत्यादिना शूद्रादेरिव स्त्रीणामप्यध्ययननिषेधेनानिषिद्धानामेवापवाद विषयत्वे स्त्रीणामप्यपवादविषयत्वमनुपपन्नम् । तथापि नाग्निर्न यज्ञः शूद्रस्येत्यादिशूद्रस्य विशेषतोऽध्ययननिषेधवत्स्त्रीमात्रस्यैवाध्ययननिषेधाभावात्तासाम-निषिद्धाध्ययनवत्त्वेनाप्यपवादविषयतोपपत्तिरिति भावः ।।

।। इति श्रीकेशवभट्टारकेण विरचितायां भावदीपिकायाम्
अपशूद्राधिकरणं सम्पूर्णम् ।। ९ ।।

# ಅಪಶೂದ್ರಾಧಿಕರಣ

(೧-೩-೯)

## ಭಾಗ -೩

ಅಣುಭಾಷ್ಯ, ತತ್ತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## अपशूद्राधिकरणम् (१।३।९)

**वेदैः न शूद्राद्यैः**

ಸ್ತ್ರೀ-ಶೂದ್ರ-ಬ್ರಹ್ಮಬಂಧುಗಳಿಗೆ ವೇದಾಧ್ಯಯನದ ಮುಖಾಂತರ ಜನಾರ್ದನನ ಉಪಾಸನೆಯಲ್ಲಿ ಅಧಿಕಾರವಿರುವುದಿಲ್ಲ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## अपशूद्राधिकरणम् (१।३।९)

ननु दैवतैरपीत्यपिशब्देन न केवलं मनुष्यैर्ज्ञेय इति समुचितम् । तदयुक्तम् । तथात्वे स्त्रीशूद्रब्रह्मबन्धुप्रभृतीनां द्विजातिवत् मनुष्यत्वाविशेषात् तैरपि वेदैर्ज्ञेयो जनार्दनः स्यात् । न चादर्शनविरोधः । 'अह हारे त्वा शूद्र गोभिः सह तवैवास्तु' 'इति छान्दोग्ये चतुर्थे संवर्गविद्यायां शूद्रस्य 'एतद्वैतदक्षरं गार्गि', 'एतस्य वा

अक्षरस्य प्रशासने गार्गि' इत्यादिवाजसनेये अक्षरविद्यायां स्त्रियश्च अधिकारदर्शनात्। नच तदिष्टम् । 'अवैष्णवस्य वेदेऽपि ह्यधिकारो न विद्यते । नच वर्णावरस्यापि' इत्यादिविरोधादित्यतः प्राप्तम् शुगस्य तदनादरश्रवणादित्यादिसूत्रपञ्चकम् । तदर्थो ज्ञेयो न वेदैः शूद्राद्यैरिति ।

ಶೂದ್ರರಿಗೆ, ಸ್ತ್ರೀಯರಿಗೆ, ಬ್ರಹ್ಮಬಂಧುಗಳಿಗೆ ವೇದದ ಮೂಲಕ ಜನಾರ್ದನನನ್ನು ಉಪಾಸನೆ ಮಾಡುವ ಅರ್ಹತೆ ಇರುವುದಿಲ್ಲ. ಈ ಮೂವರಿಗೆ ವೇದಾಧಿಕಾರವಿಲ್ಲವೆನ್ನಲು ಅನೇಕ ಶ್ರುತಿಸ್ಮೃತಿಗಳು ಆಧಾರವಾಗಿವೆ.

'ದೈವತ್ಯೈರಪಿ' ಎಂಬಲ್ಲಿರುವ 'ಅಪಿ' ಶಬ್ದದಿಂದ ಮನುಷ್ಯರಷ್ಟೇ ವೇದವಿದ್ಯಾಧಿಕಾರವನ್ನು ಹೊಂದಿರುವುದಲ್ಲ, ದೇವತೆಗಳೂ ಕೂಡ ವೇದವಿದ್ಯಾಧಿಕಾರವನ್ನು ಹೊಂದಿರುತ್ತಾರೆ ಎಂದು ಹಿಂದಿನ ದೇವತಾಧಿಕರಣದಲ್ಲಿ ಸಮರ್ಥಿಸಲಾಯಿತು. ಇದು ತಪ್ಪು. ಹಾಗಾದರೆ ಸ್ತ್ರೀಯರು, ಶೂದ್ರರು, ಬ್ರಹ್ಮಬಂಧುಗಳು ಬ್ರಾಹ್ಮಣರಂತೆ ಮನುಷ್ಯರೇ ಆಗಿರುತ್ತಾರೆ. ಇವರೂ ಸಹ ವೇದಗಳಿಂದ ಪರಮಾತ್ಮನನ್ನು ಉಪಾಸನೆ ಮಾಡಬೇಕಾದೀತು. ಶೂದ್ರಾದಿಗಳಿಗೆ ವೇದಾಧಿಕಾರವಿಲ್ಲವೆಂಬ ಶ್ರುತಿವಿರೋಧ ಬರುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ಏಕೆಂದರೆ, 'ಅಹ ಹಾರೇ ತ್ವಾ ಶೂದ್ರ ಗೋಭಿಃ ಸಹ ತವೈವಾಸ್ತು' ಎಂಬುದಾಗಿ ಛಾಂದೋಗ್ಯೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಶೂದ್ರನಿಗೂ ವೇದಾಧಿಕಾರವನ್ನು ಹೇಳಲಾಗಿದೆ. ಮತ್ತು, 'ಏತದ್ ವೈ ತದಕ್ಷರಂ ಗಾರ್ಗಿ' 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಇತ್ಯಾದಿಯಾಗಿ ಬೃಹದಾರಣ್ಯಕೋಪನಿಷತ್ತಿನ ಅಕ್ಷರವಿದ್ಯೆಯಲ್ಲಿ ಸ್ತ್ರೀಯರಿಗೂ ಕೂಡ ವೇದಾಧಿಕಾರವಿರುವುದು ಕಾಣಸುತ್ತಿದೆ. ಇದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ, 'ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ । ನ ಚ ವರ್ಣಾವರಸ್ಯಾಪಿ' ಇತ್ಯಾದಿ ಪ್ರಮಾಣವಚನದಿಂದ ವಿಷ್ಣುಭಕ್ತರಲ್ಲದವರಿಗೆ ವೇದದಲ್ಲೂ ಅಧಿಕಾರವಿಲ್ಲ, ವರ್ಣಾವರರಾದ ಶೂದ್ರ, ಸ್ತ್ರೀ ಮೊದಲಾದವರಿಗೂ ಕೂಡ ವೇದಾಧಿಕಾರವಿಲ್ಲವೆಂದು ತಿಳಿಯುತ್ತಿದೆ. ಈ ಆಶಂಕೆಯ ಪರಿಹಾರಕ್ಕಾಗಿ 'ಶುಗಸ್ಯ ತದನಾದರಶ್ರವಣಾತ್' ಇತ್ಯಾದಿಯಾದ ಐದು ಸೂತ್ರಗಳಿರುವ ಅಪಶೂದ್ರಾಧಿಕರಣವು ಹೊರಟಿದೆ. ಈ ಅಪಶೂದ್ರಾಧಿಕರಣದ ಸಾರವನ್ನು ಶ್ರೀಮದಾಚಾರ್ಯರು 'ಜ್ಞೇಯೋ ನ ವೇದೈಃ ಶೂದ್ರಾದ್ಯೈಃ' ಎಂಬುದರಿಂದ ಸಂಗ್ರಹಿಸಿದ್ದಾರೆ.

शूद्राद्यै वर्णावरादिभिः कर्तृभिर्वेदैः करणैः जनार्दनो ज्ञेयो न भवतीत्यर्थः । तेषां वेदाभावादिति भावः । शूद्रेत्युक्तया 'न संस्कारो न व्रतानि शूद्रस्य' इति श्रुतौ शूद्रस्य उपनयनसंस्काराभावोक्तेः, अध्ययनस्य 'अष्टवर्षं ब्राह्मणमुपनयीत । तमध्यापयीत' इत्युपनीतमात्रकर्तृकत्वोपगमात् शूद्रस्याप्युपनयनमुपेत्य अध्ययनोक्तौ 'अध्ययने जिह्वाच्छेदः' 'शूद्रस्य तथैवाध्ययनं कुतः' इत्यादिश्रुतिस्मृतिनिषेधादिति सूचितम् ।

ನೀಚವರ್ಣದವರಾದ ಶೂದ್ರಾದಿಗಳು ವೇದಗಳ ಮೂಲಕ ಜನಾರ್ದನನನ್ನು ಉಪಾಸನೆ ಮಾಡಬಾರದು ಎಂದು ಅಣುಭಾಷ್ಯದ ಅರ್ಥ. ಏಕೆಂದರೆ, ಶೂದ್ರರಿಗೆ ವೇದವೇ ಇರುವುದಿಲ್ಲ. ಶೂದ್ರ ಎಂದು ಹೇಳಿದ್ದರಿಂದ 'ನಾಗ್ನಿರ್ನ ಯಜ್ಞೋ ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ' ಎಂದು ಹೇಳಿದಂತೆ, ಶೂದ್ರನಿಗೆ ಉಪನಯನ ಸಂಸ್ಕಾರವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅಧ್ಯಯನವೂ ಕೂಡ ಶೂದ್ರರಿಗಿರುವುದಿಲ್ಲ. 'ಅಷ್ಟವರ್ಷಂ ಬ್ರಾಹ್ಮಣಮುಪನಯೀತ, ತಮಧ್ಯಾಪಯೀತ' ಎಂಬ ಪ್ರಮಾಣದಂತೆ ಉಪನಯನ ಸಂಸ್ಕಾರವನ್ನು ಹೊಂದಿದವರಿಗೆ ವೇದಾಧ್ಯಯನದಲ್ಲಿ ಅಧಿಕಾರವಿರುತ್ತದೆ. ಆದ್ದರಿಂದ, ಶೂದ್ರರಿಗೆ ವೇದಾಧಿಕಾರವಿಲ್ಲ. ಒಂದು ವೇಳೆ, ಶೂದ್ರರಿಗೂ ಕೂಡ ಉಪನಯನವನ್ನು ಅಂಗೀಕಾರ ಮಾಡಿ ಅಧ್ಯಯನ ಮಾಡಬಹುದೆಂದು ಹೇಳಿದರೆ, 'ಅಧ್ಯಯನೇ ಜಿಹ್ವಾಚ್ಛೇದಃ' ಶೂದ್ರರು ಅಧ್ಯಯನ ಮಾಡಿದರೆ ನಾಲಿಗೆಯನ್ನು ತುಂಡರಿಸಬೇಕು. 'ಶೂದ್ರಸ್ಯ ತಥೈವಾಧ್ಯಯನಂ ಕುತಃ' ಉಪನಯನವೇ ಇಲ್ಲವಾದ ಮೇಲೆ ಅಧ್ಯಯನವನ್ನಾದರೂ ಒಪ್ಪಲು ಹೇಗೆ ಸಾಧ್ಯ ? ಇವೇ ಮೊದಲಾದ ಶ್ರುತಿಸ್ಮೃತಿಗಳ ವಿರೋಧ ಬರುತ್ತದೆ. ಈ ವಿಷಯವನ್ನು ಅಣುಭಾಷ್ಯದಲ್ಲಿ 'ಶೂದ್ರೈಃ' ಎಂಬುದರಿಂದ ಸೂಚನೆ ಮಾಡಿದ್ದಾರೆ.

**श्रुतौ 'अह हारे त्वा शूद्र' इति पौत्रायणं प्रति रैकमुनिना संबोधनकारणं तु हंसकृतानादरश्रवणजातया शुचा मुनिं प्रनिं प्रति तत्त्वजिज्ञासया आद्रवणरूपयोगेन युक्तम् । शुग्द्रेति वाच्ये शोकाधिक्येन आध्रवणाद्धेतो तद्धार्दं जानता सर्वज्ञेन मुनिना शूद्रेति क्षत्रियस्यैव पौत्रायणस्य संबोधनं कृतम् । 'राजा पौत्रयणः शोकात् शूद्रेति मुनिनोदितः' इत्यादेरिति भावः ।**

ಛಾಂದೋಗ್ಯೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಬರುವ ಪ್ರಕರಣ ಹೀಗಿದೆ - ಪೌತ್ರಾಯಣ ರಾಜನನ್ನು ರೈಕ್ವ ಮುನಿಯು 'ಅಹ ಹಾರೇತ್ವಾ ಶೂದ್ರ' 'ಎಲೈ ಶೂದ್ರನೇ !' ಎಂದು ಸಂಬೋಧಿಸಿದ್ದಾರೆ. ಶೂದ್ರವರ್ಣದಲ್ಲಿ ಸೇರಿದವನೆಂಬ ಅಭಿಪ್ರಾಯದಿಂದ ಶೂದ್ರನೆಂದು ಸಂಬೋಧಿಸಿಲ್ಲ; ಹೊರತಾಗಿ, 'ಶುಚಾ ಆದ್ರವಣಾತ್ ಶೂದ್ರಃ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಿ, ಅಂದರೆ ದುಃಖದಿಂದ ಧಾವಿಸಿ ಬಂದಿದ್ದಾನೆ, ಎಂಬಭಿಪ್ರಾಯದಿಂದ 'ಶೂದ್ರ' ಎಂದಿದ್ದಾರೆ. ಎರಡು ಹಂಸ ಪಕ್ಷಿಗಳು ತನ್ನ ವಿಷಯದಲ್ಲಿ ಮಾಡಿದ ಅವಮಾನದ ಮಾತುಗಳನ್ನು ಕೇಳಿ ದುಃಖಿತನಾಗಿ ರೈಕ್ವ ಮುನಿಯ ಬಳಿ ತತ್ತ್ವಜಿಜ್ಞಾಸೆಯಿಂದ ಓಡಿ ಬಂದಿದ್ದಾನೆ. ಹೀಗೆ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ವಿವಕ್ಷಿಸಿ 'ಎಲೈ ಶೂದ್ರನೇ!' ಎಂದು ಸಂಬೋಧಿಸಿದ್ದಾರೆ. ಹಾಗಾದರೆ, 'ಶುದ್ರ' ಎಂದೇ ಹೇಳಬೇಕಿತ್ತು. ಆದರೂ ಅಧಿಕವಾದ ಶೋಕವನ್ನು ಹೊಂದಿದ್ದಾನೆಂದು ತಿಳಿಸುವುದಕ್ಕಾಗಿ, ಅವನ ಮನಸ್ಸಿನಲ್ಲಿರುವ ದುಃಖವನ್ನು ತಿಳಿದಿರುವ ಸರ್ವಜ್ಞರಾದ ರೈಕ್ವ ಮುನಿಗಳು ಪೌತ್ರಾಯಣ ರಾಜನು ಕ್ಷತ್ರಿಯನಾಗಿದ್ದರೂ ಕೂಡ 'ಎಲೈ ಶೂದ್ರನೇ' ಎಂದು ಸಂಬೋಧಿಸಿದ್ದಾರೆ. 'ರಾಜಾ ಪೌತ್ರಾಯಣಃ ಶೋಕಾದ್ ಶೂದ್ರೇತಿ ಮುನಿನೋದಿತಃ' ಎಂಬ ವಚನದಿಂದ ಇಲ್ಲಿಯ ಅರ್ಥವು ಸ್ಪಷ್ಟವಾಗುತ್ತದೆ.

वेदैर्ज्ञेयो नेति शूद्रे वेदाभावोक्तया 'यत्र वेदो रथस्तत्र' इति स्मृत्या वेदव्याप्तत्वात्, तथा शूद्रे वेदाभावेन रथाभावात् 'अश्वतरीरथ' इति वाक्यशेषोक्तस्वाभाविकरथसंबन्धित्वेन तस्य क्षत्रियत्वावगमादिति सूचितम् ।

'ವೇದೈರ್ಜ್ಞೇಯೋ ನ' ಎಂಬುದಾಗಿ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲವೆಂದು ಹೇಳಲಾಗಿದೆ. ಮತ್ತು 'ಯತ್ರ ವೇದೋ ರಥಸ್ತತ್ರ' ವೇದಾಧಿಕಾರವಿರುವವರಿಗೆ ಮಾತ್ರ ರಥದಲ್ಲಿ ಕೂಡುವ ಅರ್ಹತೆಯಿರುತ್ತದೆ. ಎಂಬ ಶ್ರುತಿಯಿಂದ ರಥವು ವೇದದಿಂದ ವ್ಯಾಪ್ತವಾಗಿದೆ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ, ಶೂದ್ರನಿಗೆ ವೇದಾಧಿಕಾರವಿಲ್ಲದ ಕಾರಣ, ರಥದಲ್ಲಿ ಕುಳಿತುಕೊಳ್ಳುವ ಅರ್ಹತೆ ಕೂಡ ಇರುವುದಿಲ್ಲ. ಆದರೆ, ಪೌತ್ರಾಯಣ ರಾಜನು 'ಅಶ್ವತರೀರಥ' ಎಂಬ ವಾಕ್ಯಶೇಷದಿಂದ ರಥದಲ್ಲಿ ಕುಳಿತುಕೊಂಡು ಬಂದಿದ್ದಾನೆ ಎಂಬುದರಿಂದ ಸ್ವಾಭಾವಿಕವಾದ ರಥಸಂಬಂಧವು ಹೇಳಲ್ಪಟ್ಟಿದೆ. ಇದರಿಂದ ಅವನು ಕ್ಷತ್ರಿಯನೆಂದು ಸ್ಪಷ್ಟವಾಗುತ್ತದೆ. ಇದನ್ನು ಅಣುಭಾಷ್ಯದಲ್ಲಿ 'ವೇದೈಃ' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ.

गार्गिप्रभृत्युत्तमस्त्रीणां तु निषेधश्रुत्यादौ शूद्रपदस्येव स्त्रीपदाभावेन तासां निषेधाभावात् । उपनयनप्रतिनिधिप्रदानाख्यसंस्कारभावाच्च न निषेध इत्यपि शूद्रपदोक्त्यैव सूचितम् ।

ಉತ್ತಮ ಸ್ತ್ರೀಯರಿಗೆ ವೇದಗಳಿಂದ ತಿಳಿದುಕೊಳ್ಳುವ ಅವಕಾಶವಿರುತ್ತದೆ. ಏಕೆಂದರೆ, ನಿಷೇಧದ ಶ್ರುತಿಯಲ್ಲಿ ಶೂದ್ರ ಪದವಿರುವಂತೆ ಸ್ತ್ರೀ ಪದವು ಇರುವುದಿಲ್ಲ. ಆದ್ದರಿಂದ ಗಾರ್ಗಿ ಮೊದಲಾದ ಉತ್ತಮ ಸ್ತ್ರೀಯರಿಗೆ ವೇದಾಧಿಕಾರದ ನಿಷೇಧವಿಲ್ಲ. ಅವರಿಗೆ ಉಪನಯನ ಸಂಸ್ಕಾರವಿಲ್ಲದಿದ್ದರೂ, ಅದಕ್ಕೆ ಪ್ರತಿನಿಧಿ ಯಾದ ವಿವಾಹಸಂಸ್ಕಾರವಿದೆ. ಇದನ್ನೂ ಸಹ ಅಣುಭಾಷ್ಯದಲ್ಲಿ 'ಶೂದ್ರೈಃ' ಶೂದ್ರರಿಗೆ ಮಾತ್ರ ಅಧಿಕಾರವಿರುವುದಿಲ್ಲ ಎಂಬುದರಿಂದ, ಉತ್ತಮ ಸ್ತ್ರೀಯರಿಗೆ ಅಧಿಕಾರವಿರುತ್ತದೆಂದು ಸೂಚಿಸಿದ್ದಾರೆ.

तर्हि योग्यानां सच्छूद्रादीनां अनुत्तमस्त्रीणां च मुक्त्यभावः स्यात् । विष्णुज्ञानाभावात् । न चेष्टापत्तिः । 'मां हि पार्थ व्यपाश्रित्य येऽपि स्युः पापयोनयः । स्त्रियो वैश्यास्तथा शूद्रास्तेऽपि यान्ति परां गतिम्' इत्यादिविरोधादित्यतोऽपि – ज्ञेयो न वेदैरित्यादि ।

ಹಾಗಾದರೆ, ಯೋಗ್ಯರಾದ ಸಜ್ಜನ ಶೂದ್ರರಿಗೆ ಮತ್ತು ಅನುತ್ತಮ ಸ್ತ್ರೀಯರಿಗೆ ಮೋಕ್ಷವೇ ಇಲ್ಲವೆಂದಂತಾಯಿತು. ಏಕೆಂದರೆ, ಅವರಿಗೆ ಭಗವಂತನ ಜ್ಞಾನವೇ ಬರುವುದಿಲ್ಲ. ಇಷ್ಟಾಪತ್ತಿ ಎನ್ನಬಾರದು. 'ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ । ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿ ಯಾಂತಿ ಪರಾಂ ಗತಿಮ್ ॥'

'ಎಲೈ ಅರ್ಜುನನೇ! ನೀಚ ಯೋನಿಯಲ್ಲಿ ಹುಟ್ಟಿದ್ದರೂ ನನ್ನನ್ನು ಆಶ್ರಯಿಸಿ ಸ್ತ್ರೀಯರು, ವೈಶ್ಯರು, ಶೂದ್ರರು ನನ್ನನ್ನು ಹೊಂದುತ್ತಾರೆ.' ಇತ್ಯಾದಿ ಗೀತಾವಾಕ್ಯದ ವಿರೋಧವು ಬರುತ್ತದೆ. ಈ ಪ್ರಶ್ನೆಗೂ 'ಜ್ಞೇಯೋ ನ ವೇದ್ಯೈಃ' ಎಂಬುದರಿಂದಲೇ ಉತ್ತರ ನೀಡಿದ್ದಾರೆ.

न समासोऽयम् । विभाषानुवृत्त्या नलोपस्य विकल्पितत्वात् नञ्समासो वा । न वेदैः अवेदैः वेदादन्यैरितिहासपुराणादिभिः शूद्राद्यैः जनार्दनः संसारार्दनो भगवानेको ज्ञेय इत्यर्थः ।

'ನವೇದ್ಯೈಃ' ಎಂಬುದು ನಸಮಾಸ. ವಿಕಲ್ಪವಾಗಿ ನಕಾರಕ್ಕೆ ಲೋಪ ಬರುವುದರಿಂದ ಪ್ರಕೃತ ಲೋಪವಾಗಿಲ್ಲ. ಆದ್ದರಿಂದ, 'ನವೇದ್ಯೈಃ' ಅಂದರೆ ವೇದವಲ್ಲದ ಇತಿಹಾಸ-ಪುರಾಣಗಳಿಂದ ಎಂದರ್ಥವಾಗುತ್ತದೆ. ಅಥವಾ 'ನ ವೇದ್ಯೈಃ' ಎಂಬುದು ಸಮಸ್ತ ಪದವಲ್ಲ. ಆವಾಗ, ವೇದಗಳಿಂದಲ್ಲ, ಆದರೆ ಇತಿಹಾಸ-ಪುರಾಣಗಳಿಂದ ಎಂಬರ್ಥವು ದೊರೆಯುತ್ತದೆ. ಆದ್ದರಿಂದ, ಶೂದ್ರರಿಗೆ, ಅನುತ್ತಮ ಸ್ತ್ರೀಯರಿಗೆ ವೇದಗಳಿಂದ ಜ್ಞಾನವನ್ನು ಪಡೆದುಕೊಳ್ಳುವ ಅಧಿಕಾರವಿಲ್ಲದಿದ್ದರೂ ಇತಿಹಾಸ-ಪುರಾಣಗಳಿಂದ ಸಂಸಾರಮೋಚಕನಾದ ಜನಾರ್ದನನನ್ನು ತಿಳಿದುಕೊಳ್ಳುವ ಅಧಿಕಾರವಿರುತ್ತದೆ. ಆದ್ದರಿಂದ ಯೋಗ್ಯರಾದ ಸಚ್ಛೂದ್ರರಿಗೂ, ಅನುತ್ತಮ ಸ್ತ್ರೀಯರಿಗೂ ಪರಮಾತ್ಮನ ಜ್ಞಾನವೇ ಇಲ್ಲದಂತಾಗಿ ಮೋಕ್ಷವೇ ದೊರೆಯುವುದಿಲ್ಲವೆಂಬ ಆಶಂಕೆಗೆ ಅವಕಾಶವಿಲ್ಲ.

शूद्राद्यैरित्युक्तया 'स्त्रीशूद्रब्रह्मबन्धूनां त्रयी न श्रुतिगोचरा' इत्यरभ्य 'इति भारतमाख्यानं कृपया मुनिना कृतम्' इत्यादिना भागवते, 'य इदं शृणुयान्नित्यं' इत्यारभ्य 'शूद्रः सुखमवाप्नुयात्' इत्यादिना सहस्रनामसु, स्त्रीशूद्रब्रह्मबन्धूनां तन्त्रज्ञानेऽधिकारिता' इत्यादिना तेषामपि मुक्तिहेतुज्ञानजनके वेदादन्यत्र अधिकारसत्वं सूचयति ।। ९ ।।

'ಶೂದ್ರಾದ್ಯೈಃ' ಎಂದು ಹೇಳಿದ್ದರಿಂದ 'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ' ಎಂಬಲ್ಲಿಂದ ಪ್ರಾರಂಭಿಸಿ 'ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್' ಇತ್ಯಾದಿ ಮಾತುಗಳಿಂದ ಭಾಗವತ ಪುರಾಣದಲ್ಲಿ ಮತ್ತು 'ಯ ಇದಂ ಶೃಣುಯಾನ್ನಿತ್ಯಂ' ಎಂಬಲ್ಲಿಂದ ಪ್ರಾರಂಭಿಸಿ 'ಶೂದ್ರಃ ಸುಖಮವಾಪ್ನುಯಾತ್' ಇಲ್ಲಿಯ ತನಕ ವಿಷ್ಣುಸಹಸ್ರನಾಮದಲ್ಲಿ, 'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇऽಧಿಕಾರಿತಾ' ಇತ್ಯಾದಿಯಾದ ಮಾತುಗಳಿಂದ ಸ್ತ್ರೀ, ಶೂದ್ರ, ಬ್ರಹ್ಮಬಂಧು ಇವರೆಲ್ಲರಿಗೂ ಮೋಕ್ಷಕ್ಕೆ ಹೇತುವಾದ ಜ್ಞಾನವನ್ನು ಪಠಿಸುವ ಗ್ರಂಥಗಳಲ್ಲಿ ಅಧಿಕಾರವಿದ್ದೇ ಇರುತ್ತದೆ. ಆದ್ದರಿಂದ

ಯೋಗ್ಯರಾದ ಸ್ತ್ರೀಯರು, ಶೂದ್ರರು, ಬ್ರಹ್ಮಬಂಧುಗಳು ಇತಿಹಾಸ ಪುರಾಣಗಳಿಂದ ಜನಾರ್ದನನನ್ನು ತಿಳಿದುಕೊಳ್ಳುವ ಅಧಿಕಾರವನ್ನು ಪಡೆದಿರುತ್ತಾರೆ. ಇದನ್ನು ಅಣುಭಾಷ್ಯದಲ್ಲಿ 'ಶೂದ್ರಾದ್ಯೈಃ' ಎಂಬ ಪದದಿಂದ ಸೂಚನೆ ಮಾಡಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ತ್ವಮಂಜರಿಯ ಕನ್ನಡಾನುವಾದದಲ್ಲಿ ಅಪಶೂದ್ರಾಧಿಕರಣವು ಮುಗಿಯಿತು.

* * *

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## अपशूद्राधिकरणम् (१।३।९)

।। ॐ शुगस्य तदनादरश्रवणात्तदाद्रवाणात्सूच्यते हि ॐ ।। १-३-३४ ।।

अत्र शूद्राणामधिकारो नेत्युच्यते । वेदविद्यास्विति प्रकृतम् । शूद्रस्येत्यर्थादन्वेति। अनधिकार इत्यस्ति । आद्यस्तच्छब्दः श्रुत्युक्तहंसपरः । अन्यः शुक्परः । तया शुचा आद्रवणान्निमित्ताच्छूद्रेत्युक्त पौत्रयणो गुनिना ''अह हारेत्वा शूद्र'' इत्यादि श्रुतौ, न रूढ्या । अतः शूद्रस्यानधिकार इत्यर्थः ।

ಅಪಶೂದ್ರಾಧಿಕರಣ (೧-೩-೯)

ಈ ಅಧಿಕರಣದಲ್ಲಿ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸಲಾಗಿದೆ. 'ವೇದವಿದ್ಯಾಸು' ಎಂಬ ಪದವು ಪ್ರಕೃತವಾಗಿದೆ. 'ಶೂದ್ರಸ್ಯ' ಎಂಬ ಪದವು ಅರ್ಥಾತ್ ಪ್ರಾಪ್ತವಾಗುತ್ತದೆ. 'ಅನಧಿಕಾರಃ' ಎಂಬ ಪದವು ಹಿಂದಿನ ಅಧಿಕರಣದಿಂದ ಅನುವೃತ್ತವಾಗಿದೆ. ಸೂತ್ರದಲ್ಲಿ ಎರಡು ಬಾರಿ 'ತತ್' ಎಂಬ ಪದವಿದೆ. ಮೊದಲಿರುವ 'ತತ್' ಪದವು ಶ್ರುತ್ಯುಕ್ತವಾದ ಹಂಸವನ್ನು ಹೇಳುತ್ತಿದೆ. ಎರಡನೆಯ 'ತತ್'ಶಬ್ದವು 'ಶುಕ್' ಅಂದರೆ ಶೋಕವನ್ನು ಹೇಳುತ್ತಿದೆ. 'ಅಹ ಹಾರೇ ತ್ವಾ ಶೂದ್ರ' ಇತ್ಯಾದಿ ಶ್ರುತಿಯಲ್ಲಿ 'ಶುಚಾ ಆದ್ರವಣ' 'ಶೋಕದಿಂದ ಕರಗುವಿಕೆ' ಎಂಬ ನಿಮಿತ್ತದಿಂದ ಪೌತ್ರಾಯಣನು ರೈಕ್ವ ಋಷಿಯಿಂದ ಶೂದ್ರನೆಂದು ಸಂಬೋಧಿಸಲ್ಪಟ್ಟಿದ್ದಾನೆ. ಹೊರತು, ರೂಢಿಯಿಂದಲ್ಲ. ಆದ್ದರಿಂದ, ಶೂದ್ರನಿಗೆ ವೇದಾಧಿಕಾರವಿಲ್ಲವೆಂದು ತಿಳಿಯುತ್ತದೆ.

शुगेवास्य किं निमित्तेत्यत उक्तम् शुगस्य तदनादरेति । ''कम्वर एनम्'' इत्यादिना हंसकृतानादरश्रवणादस्य पौत्रायणस्य शुगित्यर्थः । कथं ज्ञायते शुगस्य जातेत्य उक्तम् । सूच्यते हीति । हि यस्मात् ''सः सञिहान एव क्षत्तारमुवाच'' इति व्यग्रत्वोक्त्या सूच्यते । अतः शुगस्य ज्ञायतेत्यर्थः । शुचा द्रवतीति निरुक्तत्वात् गकारस्य दत्वे दीर्घे च शूद्र इति भवति । शुद्रेति वाच्ये श्रुतौ शूद्रेत्युक्तिः शोकाधिक्यज्ञएपनाय । अत एव सूत्रे तद्द्रवणादिति वाच्ये तदाद्रवणादित्युकारव्याख्यानमाङा कृतम् ॥

ಪೌತ್ರಾಯಣ ರಾಜನಿಗೆ ದುಃಖವುಂಟಾಗಲು ಕಾರಣವೇನು? ಎಂಬ ಪ್ರಶ್ನೆಗೆ 'ಶುಗಸ್ಯ ತದನಾದರ' ಎಂದು ಉತ್ತರಿಸಿದ್ದಾರೆ. 'ಕಂ ವರ ಏನಮ್' ಇತ್ಯಾದಿಯಾಗಿ ಹಂಸವು ಪೌತ್ರಾಯಣನ ವಿಷಯದಲ್ಲಿ ಅನಾದರವನ್ನು ತೋರ್ಪಡಿಸುತ್ತದೆ. ಅದನ್ನು ಕೇಳಿದ್ದರಿಂದ ಅಸ್ಯ = ಪೌತ್ರಾಯಣ ರಾಜನಿಗೆ, ಶುಕ್= ದುಃಖವು ಉಂಟಾಯಿತು ಎಂದರ್ಥ. ಪೌತ್ರಾಯಣನಿಗೆ ದುಃಖವುಂಟಾಯಿತೆನ್ನುವುದು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ಸೂಚ್ಯತೇ ಹಿ' ಎಂದು ಉತ್ತರಿಸಲಾಗಿದೆ. 'ಹಿ' ಯಾವ ಕಾರಣದಿಂದ ಆ ರಾಜನು ಎದ್ದ ಕೂಡಲೇ ಸಾರಥಿಯನ್ನು ಕುರಿತು ಹೇಳಿದನು. ಎಂಬುದಾಗಿ ರಾಜನ ವ್ಯಗ್ರತೆಯನ್ನು ಸೂಚಿಸಿದ್ದರಿಂದ ರಾಜನಿಗೆ ಶೋಕವುಂಟಾಯಿತೆಂದು ತಿಳಿಯುತ್ತದೆ.

'ಶುಚಾ ದ್ರವತಿ' ಎಂಬ ನಿರುಕ್ತಿಯಿದೆ. ಆದ್ದರಿಂದ 'ಶುಕ್' ಎಂಬಲ್ಲಿರುವ ಗಕಾರಕ್ಕೆ ದಕಾರಾದೇಶವು 'ಶು' ಎಂಬಲ್ಲಿನ ಉಕಾರಕ್ಕೆ ದೀರ್ಘ ಬಂದರೆ, 'ಶೂದ್ರ' ಎಂಬ ರೂಪವಾಗಿದೆ. 'ಶುದ್ರ' ಎಂದು ಹೇಳಬೇಕಿತ್ತು. ಆದರೆ 'ಶೂದ್ರ' ಎಂದು ಹೇಳಿದ್ದರಿಂದ ದುಃಖದ ಆಧಿಕ್ಯವನ್ನು ಪೌತ್ರಾಯಣನಲ್ಲಿ ಸೂಚಿಸಿದಂತಾಗುತ್ತದೆ. ಆದ್ದರಿಂದಲೇ ಸೂತ್ರದಲ್ಲಿಯೇ 'ತದ್‌ದ್ರವಣಾತ್' ಎಂದು ಹೇಳುವ ಬದಲು 'ತದಾದ್ರವಣಾತ್' ಉಕಾರದ ವ್ಯಾಖ್ಯಾನವನ್ನು 'ಆಙ್' ಎಂಬ ಉಪಸರ್ಗದಿಂದ ಮಾಡಲಾಗಿದೆ.

ननु श्रौतश्शूद्रशब्दो रूढः किं न स्यादित्यत आह -

**।। ॐ क्षत्रियत्वावगतेश्चोत्तरत्र चैत्ररथेन लिङ्गात् ॐ ।। १-३-३५ ।।**

अस्येत्यस्ति । आद्रवणादिति शूद्रस्यानधिकार इति च । चित्रश्चासौ रथश्च चित्ररथस्तस्येदं चैत्ररथम् । भावप्रधानश्चेदं, तेन । उत्तरत्रास्याद्रवणादुत्तरवाक्ये पौत्रायणस्याद्रवणोक्त्यनन्तरं "अयमश्वतरीरथः" इत्युत्तरवाक्ये श्रुतेन इत्यर्थः । चैत्ररथेन चैत्ररथत्वेन चित्ररथसम्बन्धित्वेन लिङ्गात् लिङ्गेनास्य पौत्रायणस्य क्षत्रियत्वावगतेश्च शूद्रशब्दो न रूढ इति शूद्रस्यानधिकार इत्यर्थः । अश्वतरीयुक्तरथश्चित्रपदार्थः । "रथस्त्वश्वतरीयुक्तश्चित्रः" इत्यादेः ।

ಶ್ರುತಿಯಲ್ಲಿರುವ ಶೂದ್ರ ಶಬ್ದವು ರೂಢಿಯಿಂದ ಶೂದ್ರಜಾತಿಯಲ್ಲಿ ಹುಟ್ಟಿದವನೆಂದು ಏಕೆ ಹೇಳಬಾರದು? ಎಂಬ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ.

ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್

ಹಿಂದಿನ ಸೂತ್ರದಿಂದ 'ಅರ್ಥೀ' ಎಂಬುದು ಅನುವೃತ್ತವಾಗುತ್ತದೆ. 'ಆದ್ರವಣಾತ್' 'ಶೂದ್ರಸ್ಯ' 'ಅನಧಿಕಾರಃ' ಎಂಬ ಪದಗಳು ಇಲ್ಲಿಯೂ ಅನುವೃತ್ತವಾಗುತ್ತವೆ. ಚಿತ್ರವಾಗಿರುವ ರಥವೇ ಚಿತ್ರರಥ. ಅದಕ್ಕೆ ಸಂಬಂಧಪಟ್ಟಿದ್ದು ಚೈತ್ರರಥ. ಚೈತ್ರರಥ ಶಬ್ದವು ಚಿತ್ರರಥಸಂಬಂಧಿತ್ವ, ಚಿತ್ರರಥದ ಸಂಬಂಧ ಎಂಬ ಭಾವಪ್ರಧಾನದಿಂದ ನಿರ್ದಿಷ್ಟವಾಗಿದೆ. ಹೀಗೆ ಹೇಳಿದ್ದರಿಂದ ಉತ್ತರತ್ರ = ಪೌತ್ರಾಯಣನಿಗೆ ಆದ್ರವಣವನ್ನು ಹೇಳುವ ವಾಕ್ಯದ ಮುಂದಿನ ವಾಕ್ಯದಲ್ಲಿ, ಅಂದರೆ ಪೌತ್ರಾಯಣನಿಗೆ ಆದ್ರವಣವನ್ನು ಹೇಳಿದ ನಂತರ, 'ಅಯಮಶ್ವತರೀರಥಃ' ಎಂಬ ಮುಂದಿನ ಮಾತಿನಲ್ಲಿ ಶ್ರುತವಾಗಿರುವ ಎಂದರ್ಥ. ಚೈತ್ರರಥೇನ ಲಿಂಗಾತ್ = ಚಿತ್ರರಥಸಂಬಂಧವೆಂಬ ಲಿಂಗದಿಂದ ಪೌತ್ರಾಯಣನಿಗೆ ಕ್ಷತ್ರಿಯತ್ವಾವಗತೇಶ್ಚ = ಕ್ಷತ್ರಿಯತ್ವವು ತಿಳಿದುಬರುವುದರಿಂದಲೂ ಶೂದ್ರಶಬ್ದವು ರೂಢವಲ್ಲದ ಕಾರಣ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲ ಎಂದು ಸೂತ್ರಾರ್ಥ. ಶೂದ್ರ ಶಬ್ದವು ರೂಢವಲ್ಲದ ಕಾರಣ ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂದು ತಿಳಿಯುತ್ತದೆ. 'ರಥಸ್ತ್ವಶ್ವತರೀಯುಕ್ತಃ ಚಿತ್ರಃ' ಇತ್ಯಾದಿ ಕೋಶವಿರುವುದರಿಂದ ಚಿತ್ರಪದಕ್ಕೆ ಹೇಸರಗತ್ತೆಗಳನ್ನು ಕಟ್ಟಿದ ರಥವೆಂದರ್ಥ.

रथेन लिङ्गेनेत्येव वाच्ये चित्रपदमपूर्वरथयोगात् क्षत्रियत्वसम्भावनार्थम्। चित्रेणेत्युक्तावपि तादृशरथेनेति सिद्धे रथोक्तिः स्पष्टार्था । चित्रेति वाच्ये चैत्रेत्युक्तिः "हारेत्वा तव" इत्युक्तमुख्यस्वाभाविकसम्बन्धं द्योतयितुम् । तेन रथित्वमात्रस्य

वैदिकमात्रेऽपि कथञ्चित् सम्भवाद्व्यभिचार इति न शङ्क्यम् । लिङ्गेनेति वाच्ये लिङ्गादित्युक्तिर्व्यत्ययात्, तृतीयापञ्चम्योर्हेतुरूपैकार्थत्वाद्वेति ।

'ರಥೇನ ಲಿಂಗೇನ' ಎಂದೇ ಹೇಳಬಹುದಿತ್ತು. ಆದರೂ ಸಹ ಅಪೂರ್ವವಾದ ರಥದ ಸಂಬಂಧದಿಂದ ಪೌತ್ರಾಯಣನು ಕ್ಷತ್ರಿಯನಾಗಿರಬಹುದು ಎಂಬ ಸಂಭಾವನೆಯನ್ನು ಮಾಡುವುದಕ್ಕಾಗಿ ಚಿತ್ರಪದವನ್ನು ಪ್ರಯೋಗಿಸಿದ್ದಾರೆ. 'ಚಿತ್ರೇನ' ಎಂದು ಹೇಳಿದ್ದರೂ ಅಂತಹ ಹೇಸರಗತ್ತೆಗಳನ್ನು ಕಟ್ಟಿದ ರಥವೆಂದು ಸ್ಪಷ್ಟವಾಗಿ ಅರ್ಥವಾಗುತ್ತದೆ. ಆದರೂ ಕೂಡ ಸ್ಪಷ್ಟತೆಗೋಸ್ಕರ ರಥಪದವನ್ನು ಪ್ರಯೋಗಿಸಿದ್ದಾರೆ. 'ಚಿತ್ರ' ಎಂದು ಹೇಳಿದ್ದರೆ ಸಾಕಾಗಿತ್ತು. ಆದರೂ 'ಚೈತ್ರ' ಎಂದು ಹೇಳಿದ್ದರಿಂದ, 'ಹಾರೇ ತ್ವಾ' ಎಂಬಲ್ಲಿ ಹೇಳಿರುವ ರಥದ ಸಂಬಂಧವು ಮುಖ್ಯವಾದ ಸ್ವಾಭಾವಿಕವಾದ ಸಂಬಂಧವಾಗಿದೆ ಎಂದು ತಿಳಿಸಲಾಗಿದೆ. ಆದ್ದರಿಂದಲೇ, ವೇದಾಧಿಕಾರವಿರುವ ತ್ರೈವರ್ಣಿಕರಿಗೂ ಕಥಂಚಿತ್ ರಥವಿರಬಹುದಾದ್ದರಿಂದ ರಥವಿದ್ದ ಮಾತ್ರಕ್ಕೆ ಪೌತ್ರಾಯಣನು ಕ್ಷತ್ರಿಯನಾಗಬೇಕಾಗಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. 'ಲಿಂಗೇನ' ಎಂದು ಹೇಳಬೇಕಾಗಿದ್ದರೂ 'ಲಿಂಗಾತ್' ಎಂಬುದಾಗಿ ವಿಭಕ್ತಿಯನ್ನು ವ್ಯತ್ಯಾಸ ಮಾಡಿ ಹೇಳಲಾಗಿದೆ. ಅಥವಾ ತೃತೀಯಾ ಮತ್ತು ಪಂಚಮೀ ವಿಭಕ್ತಿಗಳಿಗೆ ಹೇತು ಎಂಬ ಒಂದೇ ಅರ್ಥವಿರುವುದರಿಂದಲೂ 'ಲಿಂಗೇನ' ಎಂದು ಹೇಳುವ ಬದಲು 'ಲಿಂಗಾತ್' ಎಂದು ಹೇಳಿದ್ದಾರೆ.

उत्तरत्रेत्युक्तिस्तादृशरथबोधवाक्यद्योतनाय । यद्वा शूद्रेति सम्बोधनादुत्तरत्रेत्यर्थः। तेन शूद्रश्रुतितोऽपि लिङ्गस्य चरमत्वेन प्राबल्यं सूचयति । चशब्दः "श्रद्धादेयो बहुदायी" इत्यादिवाक्यशेषस्थलिङ्गान्तरसमुचयार्थ इत्यप्येके ॥

'ಉತ್ತರತ್ರ' ಎಂದು ಹೇಳಿರುವುದು ಅಂತಹ ರಥವನ್ನು ತಿಳಿಸುವ ವಾಕ್ಯವನ್ನು ಸೂಚಿಸುವುದಕ್ಕಾಗಿ. ಅಥವಾ, 'ಶೂದ್ರ' ಎಂದು ಸಂಬೋಧನೆ ಮಾಡಿದ ಅನಂತರ ಎಂದರ್ಥ. ಹೀಗೆ ಹೇಳಿದ್ದರಿಂದ ಶೂದ್ರಶ್ರುತಿಗಿಂತಲೂ ಲಿಂಗವು ಅನಂತರವಿರುವುದರಿಂದ ಲಿಂಗಕ್ಕೆ ಪ್ರಾಬಲ್ಯವನ್ನು ಸೂಚಿಸಲಾಗಿದೆ.

ಸೂತ್ರದಲ್ಲಿರುವ 'ಚ' ಶಬ್ದಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನ ಮಾಡಬಹುದು. 'ಶ್ರದ್ಧಾದೇಯೋ ಬಹುದಾಯೀ' ಇತ್ಯಾದಿ ವಾಕ್ಯಶೇಷದಲ್ಲಿರುವ ಮತ್ತೊಂದು ಲಿಂಗವನ್ನು ಸಮುಚ್ಚಯ ಮಾಡುವುದಕ್ಕಾಗಿಯೂ ಚಶಬ್ದವಿದೆಯೆಂದು ಕೆಲವರು ಹೇಳುತ್ತಾರೆ.

इतश्च शूद्रस्यानधिकार इत्याह -

**॥ ॐ संस्कारपरामर्शात्तदभावाभिलापाच्च ॐ ॥ १-३-३६ ॥**

अन्यार्थवचनं परामर्शः । अध्ययनाङ्गत्वेन "तमध्यापयीत" इत्युपनयनाख्य-संस्कारपरामर्शात् शूद्रस्य च "नाग्निर्न यज्ञो न संस्कारः" इति श्रुतौ

संस्काराभावाभिलापाच्च शूद्रस्य वेदविद्यानधिकार इत्यर्थः । यद्वा पूर्वसूत्रे रथस्य वेदव्याप्तत्वाद्वेदद्वारा लिङ्गत्वमभिमतम् । तद्द्वयं शूद्रेऽप्यस्त्वित्यतोऽयं योगः । वेदाङ्गसंस्काराभावाद्वेदाभावेन रथित्वं च नोति योज्यम् । शूद्रं नोपनयीतेति निषेधाभावादस्तु तस्यापि संस्कार इत्यतो वा ।

ಮತ್ತೊಂದು ಕಾರಣದಿಂದಲೂ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ. ಪರಾಮರ್ಶಃ = ಮತ್ತೊಂದರ ಉದ್ದೇಶದಿಂದ ಹೇಳುವಿಕೆ. 'ತಮಧ್ಯಾಪಯೀತ' ಎಂಬುದಾಗಿ ಉಪನಯನ ಎಂಬ ಸಂಸ್ಕಾರವನ್ನು ವೇದಾಧ್ಯಯನಕ್ಕೆ ಅಂಗವನ್ನಾಗಿ ಹೇಳಲಾಗಿದೆ. ಅದನ್ನು ಪರಾಮರ್ಶೆ ಮಾಡಿದ್ದರಿಂದ, ಎಂಬುದಾಗಿ 'ಪರಾಮರ್ಶಾತ್' ಎಂಬ ಪದದ ಅರ್ಥ. ಶೂದ್ರನಿಗೆ 'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' ಎಂಬ ಶ್ರುತಿಯಂತೆ ಸಂಸ್ಕಾರವಿಲ್ಲವೆಂದು ಹೇಳಿದ್ದರಿಂದ ವೇದವಿದ್ಯಾಧಿಕಾರವಿಲ್ಲವೆಂದು ತಿಳಿಯುತ್ತದೆ. ಇಷ್ಟು ಸೂತ್ರಾರ್ಥ.

ಅಥವಾ, ಮತ್ತೊಂದು ಬಗೆಯಲ್ಲಿಯೂ ವ್ಯಾಖ್ಯಾನ ಮಾಡಬಹುದು–ಹಿಂದಿನ ಸೂತ್ರದಲ್ಲಿ 'ಯಾರು ರಥಾರೂಢರಾಗಿರುತ್ತಾರೋ, ಅವರಿಗೆ ವೇದವಿದ್ಯಾಧಿಕಾರವಿರುತ್ತದೆ'. ಎಂಬ ವ್ಯಾಪ್ತಿಯನ್ನು ಹೇಳಲಾಯಿತು. ಪೌತ್ರಾಯಣ ರಾಜನು ರಥಾರೂಢನಾಗಿ ಬಂದಿರುವುದರಿಂದ ಕ್ಷತ್ರಿಯನೆಂದು ಸಾಧಿಸಬಹುದು. ರಥ ಹಾಗೂ ವೇದ ಶೂದ್ರನಿಗೂ ಇರಲಿ ಎಂಬ ಆಶಂಕೆಗೆ ಉತ್ತರಿಸುವುದಕ್ಕಾಗಿ ಈ ಸೂತ್ರವು ಹೊರಟಿದೆ. ವೇದಕ್ಕೆ ಅಂಗವಾದ ಉಪನಯನ ಸಂಸ್ಕಾರವಿಲ್ಲದ ಕಾರಣ, ಶೂದ್ರನಿಗೆ ವೇದವಿರುವುದಿಲ್ಲ. ಆದ್ದರಿಂದಲೇ ರಥವೂ ಕೂಡ ಇರುವುದಿಲ್ಲವೆಂದು ವಾಕ್ಯವನ್ನು ಯೋಜನೆ ಮಾಡಿಕೊಳ್ಳಬೇಕು. 'ಶೂದ್ರಂ ನೋಪನಯೀತ' ಶೂದ್ರನಿಗೆ ಉಪನಯನ ಮಾಡಬಾರದು ಎಂಬ ನಿಷೇಧವಾಕ್ಯವಿಲ್ಲದ ಕಾರಣ, ಅವನಿಗೂ ಉಪನಯನ ಸಂಸ್ಕಾರವನ್ನು ಮಾಡಬಹುದಲ್ಲವೇ? ಎಂಬ ಪ್ರಶ್ನೆಗೂ ಕೂಡ ಈ ಸೂತ್ರವೇ ಉತ್ತರಿಸಿದೆ ಎಂದು ತಿಳಿಯಬೇಕು. ಮತ್ತೊಂದು ಕಾರಣದಿಂದಲೂ ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಹೇಳುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ

इतश्च न संस्कार इति वाऽऽह -

**।। ॐ तदभावनिर्धारणे च प्रवृत्ते ॐ ।। १-३-३७ ।।**

चोऽवधारणे समुच्चये वा । तस्य प्रकृतशूद्रत्वस्याभावनिर्धारणे सत्येव प्रवृत्तेः । संस्कार इत्यस्ति । उपनयनसंस्कारे प्रवृत्तेश्च न निषेधाभाव इति वा न संस्कार इति वा योज्यम् । ''नैतदब्राह्मणो विवक्तुमर्हति'' इति सत्यकामे शूद्रत्वाभावं निश्चित्यैव तदुपनयने प्रवृत्तत्वात्तेन लिङ्गेन निषेधादिर्ज्ञायत इति भावः । अन्त्यपक्षे संस्काराभावे साध्ये नाग्निरिति प्रागुक्तश्रुत्या प्रवृत्तिरूपलिङ्गसमुच्चये चः ।।

ಚಶಬ್ದವು ಅವಧಾರಣ ಮತ್ತು ಸಮುಚ್ಚಯಾರ್ಥದಲ್ಲಿದೆ. 'ತಸ್ಯ' ಎಂದರೆ ಹಿಂದೆ ಪ್ರಸ್ತುತವಾದ ಶೂದ್ರತ್ವವಿಲ್ಲವೆಂದು ನಿಶ್ಚಯವಾದ ಮೇಲಷ್ಟೇ, ಉಪನಯನ ಸಂಸ್ಕಾರದಲ್ಲಿ ಪ್ರವೃತ್ತಿ ಮಾಡಲಾಗಿದೆ ಎಂದರ್ಥ. 'ಸಂಸ್ಕಾರಃ' ಎಂಬುದನ್ನು ಇಲ್ಲಿಯೂ ಪರಾಮರ್ಶ ಮಾಡಿಕೊಳ್ಳಬೇಕು. ಉಪನಯನ ಸಂಸ್ಕಾರದಲ್ಲಿ ಪ್ರವೃತ್ತಿ ಮಾಡುತ್ತಿರುವುದರಿಂದ ನಿಷೇಧವಿಲ್ಲವೆಂದಾಗಲಿ, ಸಂಸ್ಕಾರವಿಲ್ಲವೆಂದಾಗಲಿ ಸೇರಿಸಿಕೊಳ್ಳಬೇಕು. ನಿಷೇಧವಿಲ್ಲವೆಂದು ಸೇರಿಸಿದಾಗ, 'ನೈತದಬ್ರಾಹ್ಮಣೋ ವಿವಿಕ್ತುಮರ್ಹತಿ' 'ಬ್ರಾಹ್ಮಣನಲ್ಲದವನು ಈ ರೀತಿಯಾಗಿ ಸತ್ಯವನ್ನು ಹೇಳಲು ಸಾಧ್ಯವಿಲ್ಲ' ಎಂಬುದಾಗಿ ಸತ್ಯಕಾಮನು ಶೂದ್ರನಲ್ಲವೆಂದು ನಿಶ್ಚಯಿಸಿದ್ದಾರೆ. ಅನಂತರವೇ ಅವನಿಗೆ ಉಪನಯನ ಸಂಸ್ಕಾರವನ್ನು ಮಾಡಲು ನಿರ್ಧರಿಸಿ ಪ್ರವೃತ್ತಿ ಮಾಡಿದ್ದಾರೆ. ಈ ಕಾರಣದಿಂದ ಶೂದ್ರನಿಗೆ ಸಂಸ್ಕಾರನಿಷೇಧ ಮೊದಲಾದವುಗಳು ಇದೆ ಎಂದು ತಿಳಿಯುತ್ತದೆ.

ಎರಡನೆಯ ಪಕ್ಷದಲ್ಲಿ, ಅಂದರೆ ಸಂಸ್ಕಾರವಿಲ್ಲವೆಂಬ ಪಕ್ಷದಲ್ಲಿ ಶೂದ್ರನಿಗೆ ಸಂಸ್ಕಾರವಿಲ್ಲವೆಂದು ಸಾಧಿಸಲು ಹಿಂದೆ ಹೇಳಿದ 'ನಾಗ್ನಿಃ' ಎಂಬ ಶ್ರುತಿಯ ಜೊತೆಗೆ ಪ್ರವೃತ್ತಿರೂಪವಾದ ಲಿಂಗದ ಸಮುಚ್ಚಯವನ್ನು 'ಚ' ಶಬ್ದವು ಹೇಳುತ್ತಿದೆ.

संस्काराभावेऽपि विशिष्टबुद्ध्यादिमत्त्वाद् द्विजवदधिकारः स्यादित्यत आह -

**।। ॐ श्रवणाध्ययनार्थप्रतिषेधात्स्मृतेश्च ॐ ।। १-३-३८ ।।**

अर्थपदेनार्थावधारणमुच्यते । वेदश्रवणाध्ययनार्थावधारणानां ''श्रवणे त्रपुजतुभ्याम्'' इत्यादिना प्रतिषेधात् ''नाग्निर्न यज्ञः शूद्रस्य'' इत्यादिस्मृतेश्च शूद्रस्यानाधिकार इत्यर्थः । श्रुतौ शूद्रपदानुक्तेः पृथक् स्मृत्युक्तिः ।। ९ ।।

ಶೂದ್ರನಿಗೆ ಸಂಸ್ಕಾರವಿಲ್ಲದಿರಬಹುದು. ಆದರೂ ಕೂಡ, ವಿಶಿಷ್ಟಬುದ್ಧ್ಯಾದಿಗಳು ಇರುವುದರಿಂದ ದ್ವಿಜರಂತೆ ವೇದವಿದ್ಯಾಧಿಕಾರವನ್ನು ಹೊಂದಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರವು ಹೊರಟಿದೆ.

ಅರ್ಥಪದವು ಅರ್ಥದ ನಿಶ್ಚಯವನ್ನು ಹೇಳುತ್ತಿದೆ. ವೇದಶ್ರವಣ, ವೇದಾಧ್ಯಯನ, ವೇದಾರ್ಥನಿರ್ಣಯ ಇವುಗಳನ್ನು 'ಶ್ರವಣೇ ತ್ರಪುಜತುಭ್ಯಾಂ' ಇತ್ಯಾದಿ ವಾಕ್ಯಗಳಿಂದ ಶೂದ್ರನಿಗೆ ನಿಷೇಧ ಮಾಡಲಾಗಿದೆ. 'ನಾಗ್ನಿರ್ನ ಯಜ್ಞಃ ಶೂದ್ರಸ್ಯ' ಇತ್ಯಾದಿ ಸ್ಮೃತಿಗಳೂ ಕೂಡ ಶೂದ್ರನಿಗೆ

ವೇದವಿದ್ಯಾಧಿಕಾರವಿಲ್ಲವೆಂದು ದೃಢಪಡಿಸಿ ಹೇಳುತ್ತಿದೆ. ಶ್ರುತಿಯಲ್ಲಿ ಶೂದ್ರಪದವನ್ನು ಹೇಳದಿರುವುದರಿಂದ ಪ್ರತ್ಯೇಕವಾಗಿ ಸ್ಮೃತಿಯನ್ನು ಪ್ರಮಾಣವನ್ನಾಗಿ ಉಲ್ಲೇಖಿಸಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅಪಶೂದ್ರಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## अपशूद्राधिकरणम् (१।३।९)

।। ॐ शुगस्य तदनादरश्रवणात्तदाद्रवणात्सूच्यते हि ॐ ।। ९ ।।

।। ॐ क्षत्रियत्वावगतेश्चोत्तरत्र चैत्ररथेन लिङ्गात् ॐ ।।

।। ॐ संस्कारपरामर्शात्तदभावाभिलापाच्च ॐ ।।

।। ॐ तदभावनिर्धारणे च प्रवृत्तेः ॐ ।।

।। ॐ श्रवणाध्ययनार्थप्रतिषेधात्स्मृतेश्च ॐ ।।

अत्र पूर्वसिद्धान्तन्यायेन पूर्वपक्षप्रवृत्तेः आपवादिकीसङ्गतिः । शूद्रादेः ब्रह्मविद्यायामधिकारः अस्ति उत नेति सन्देहः । विशिष्टबुद्ध्यादिमत्त्वात् देवादिवत् शूद्रस्यापि आस्ति वेदविद्यायामधिकारः इति पूर्वः पक्षः ।।

ಈ ಅಧಿಕರಣವು ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯವನ್ನು ಅನುಸರಿಸಿ ಪೂರ್ವಪಕ್ಷವನ್ನು ಮಾಡುತ್ತಿದೆ. ಆದ್ದರಿಂದ ಆಪವಾದಿಕೀಸಂಗತಿಯನ್ನು ತಿಳಿಯಬೇಕು. ಶೂದ್ರ ಮೊದಲಾದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೋ? ಇಲ್ಲವೋ? ಎಂಬುದೇ ಸಂಶಯ. ವಿಶಿಷ್ಟಬುದ್ಧ್ಯಾದಿ-

ಗಳಿರುವುದರಿಂದ ದೇವತೆ ಮೊದಲಾದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವಂತೆ ಶೂದ್ರರಿಗೂ ಕೂಡ ವಿಶಿಷ್ಟಬುದ್ಧ್ಯಾದಿಗಳಿರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರವಿರುತ್ತದೆಂದು ಪೂರ್ವಪಕ್ಷ.

**नच ''उपनयीत तमध्यापयीत'' इत्युपनीतस्यैव अध्ययनविधानात् शूद्रस्य च अनुपनीततया अध्ययनहीनत्वात् तद्वतएव ''अध्ययनमात्रवतः'' (ब्र.सू.३-४-१२) इति तृतीये अधिकारित्वोक्तेः उक्तं न युक्तमिति वाच्यम् ।**

'ಉಪನಯೀತ । ತಮಧ್ಯಾಪಯೀತ ।' ಎಂಬ ಶ್ರುತಿಯು ಉಪನಯನವನ್ನು ಮಾಡಿಕೊಂಡವನಿಗೆ ಮಾತ್ರ ವೇದಾಧ್ಯಯನವನ್ನು ವಿಧಾನ ಮಾಡುತ್ತಿದೆ. ಶೂದ್ರನಿಗೆ ಉಪನಯನಸಂಸ್ಕಾರವು ಇಲ್ಲವಾದ ಕಾರಣ ವೇದಾಧ್ಯಯನವು ಕೂಡ ಯುಕ್ತವಾಗುವುದಿಲ್ಲ. ಉಪನಯನಸಂಸ್ಕಾರವಿದ್ದವನಿಗೆ ಮಾತ್ರ ಅಧ್ಯಯನವಿರುತ್ತದೆಂದು 'ಅಧ್ಯಯನಮಾತ್ರವತಃ' (ಬ್ರ.ಸೂ. ೩-೪-೧೨) ಎಂಬ ಮೂರನೇ ಅಧ್ಯಾಯದ ಸೂತ್ರದಲ್ಲಿ ಹೇಳಲಾಗಿದೆ. ಆದ್ದರಿಂದ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು.

**वैदिकसंवर्गविद्याश्रोतारं पौत्रायणं प्रति ''अह हारे त्वा शूद्रे''ति (छा.४-२.३) वर्णावरे रूढशूद्रपदेन रैक्वस्य संबोधनेन विदुरादेः वेदार्थावधारणादिरूपेण च लिङ्गेन, शूद्रेऽपि उपनयनाध्ययनयोर्वा, अनुपनीतस्यैवाध्ययनमिति वा, अनधीयानस्य लिखितनिरीक्षणादिनैव वा अर्थज्ञानस्य कल्पनादिति ॥**

ಛಾಂದೋಗ್ಯೋಪನಿಷತ್ತಿನ ಸಂವರ್ಗವಿದ್ಯೆಯಲ್ಲಿ ಪೌತ್ರಾಯಣರಾಜನಿಗೆ ರೈಕ್ವ ಋಷಿಗಳು 'ಅಹ ಹಾರೇ ತ್ವಾ ಶೂದ್ರ' ಎಂದು ಹೇಳಿರುತ್ತಾರೆ. ಇಲ್ಲಿರುವ ಶೂದ್ರಪದವು ರೂಢಿಯಿಂದ ಶೂದ್ರಜಾತಿಯವನೆಂದು ಹೇಳುತ್ತದೆ. 'ಎಲೈ ಶೂದ್ರನೇ' ಎಂದು ರೈಕ್ವರು ಸಂಬೋಧನೆ ಮಾಡಿದ್ದರಿಂದ ಶೂದ್ರರಿಗೂ ಅಧಿಕಾರವಿದೆ ಎಂದಂತಾಯಿತು. ಮತ್ತು ವಿದುರ ಮೊದಲಾದವರಲ್ಲಿ ವೇದಾರ್ಥಜ್ಞಾನವಿರುವುದನ್ನು ಕೇಳಿದ್ದೇವೆ. ವೇದಾರ್ಥದ ಅವಧಾರಣೆ ಇರಬೇಕಾದರೆ, ವೇದಾಧ್ಯಯನವೂ ಕೂಡ ಅವರಲ್ಲಿ ಇರಬೇಕು. ಮತ್ತು ಶೂದ್ರರಿಗೂ ಉಪಯನ ಮತ್ತು ಅಧ್ಯಯನಗಳನ್ನು ಹೇಳಬಹುದು. ಅಥವಾ ಉಪನಯನವಾಗದಿದ್ದರೂ ಅಧ್ಯಯನವನ್ನು ಹೇಳಬಹುದು. ಅಥವಾ, ಅಧ್ಯಯನ ಮಾಡದಿದ್ದರೂ ಬರೆದದ್ದನ್ನು ನೋಡಿ ತಿಳಿಯಬಹುದು. ಹೀಗೆ ಶೂದ್ರನಿಗೂ ವೇದಾರ್ಥದ ಜ್ಞಾನವನ್ನು ಕಲ್ಪಿಸಬಹುದು. ಆದ್ದರಿಂದ ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆಂದು ಪೂರ್ವಪಕ್ಷ.

सिद्धान्तस्तु ।। ''अयमश्वतरीरथः'' इति वाक्यशेषोक्तरथवत्त्वस्य ''यत्र वेदो रथस्तत्र न वेदो यत्र नो रथः'' इति स्मृत्या (ब्रह्मवैवर्त.पु.) रथस्य वेदव्याप्तत्वेन शूद्रे तदभावेन अभावात् क्षत्रिये तस्य स्वाभाविकत्वाच्च ।

ಸಿದ್ಧಾಂತ ಹೀಗಿದೆ - 'ಅಯಮಶ್ವತರೀರಥಃ' ಎಂಬ ವಾಕ್ಯಶೇಷದಿಂದ ಪೌತ್ರಾಯಣರಾಜನಿಗೆ ಹೇಸರಗತ್ತೆಗಳಿಂದ ಕೂಡಿರುವಂತಹ ರಥದ ಸಂಬಂಧವು ತಿಳಿಯುತ್ತದೆ. 'ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ' ವೇದಾಧಿಕಾರವಿದ್ದವರಿಗೆ ಮಾತ್ರ ರಥದಲ್ಲಿ ಕುಳಿತುಕೊಳ್ಳುವ ಅರ್ಹತೆಯಿರುತ್ತದೆ. ವೇದಾಧಿಕಾರವಿಲ್ಲದವರಿಗೆ ರಥದಲ್ಲಿ ಕುಳಿತುಕೊಳ್ಳುವ ಅರ್ಹತೆಯಿರುವುದಿಲ್ಲ. ಎಂಬ ಸ್ಮೃತಿ(ಯುಕ್ತಿ)ಯಿಂದ ರಥವು ವೇದವ್ಯಾಪ್ತವೆಂದು ತಿಳಿಯುತ್ತದೆ. ಒಂದು ವೇಳೆ ಪೌತ್ರಾಯಣನು ಶೂದ್ರನಾದರೆ ರಥಾರೂಢನಾಗಿ ಬರುತ್ತಲೇ ಇರಲಿಲ್ಲ. ಆದರೆ, ಕ್ಷತ್ರಿಯನಿಗೆ ರಥದ ಆರೋಹಣವು ಸ್ವಾಭಾವಿಕವಾಗಿ ಸಿದ್ಧವಾಗುತ್ತದೆ.

तेन पौत्रायणस्य क्षत्रियत्वावगमेन बाधकेन शूद्रशब्दस्य रूढार्थस्य त्याज्यतया हंसकृतानादरश्रवणजातशोकेन मुनिं प्रति आद्रवणस्य वाक्यशेषे श्रवणेन शुचा द्रवणरूपयोगेन उपपत्त्या शूद्राधिकारासाधकत्वात् नास्ति शूद्रस्याधिकारः ।

ಹೀಗೆ, ಪೌತ್ರಾಯಣರಾಜನು ಕ್ಷತ್ರಿಯನೆಂದು ಸ್ಪಷ್ಟವಾಗುತ್ತದೆ. ಈ ಬಾಧಕದಿಂದ ಶೂದ್ರಶಬ್ದಕ್ಕೆ 'ಶೂದ್ರಜಾತಿಯವನು' ಎಂಬ ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಸ್ವೀಕರಿಸಬೇಕು. ಹಂಸಪಕ್ಷಿಗಳು ಪೌತ್ರಾಯಣರಾಜನನ್ನು ತಿರಸ್ಕಾರ ಮಾಡುತ್ತವೆ. ಅದರಿಂದ ದುಃಖಿತನಾದ ಪೌತ್ರಾಯಣನು ರೈಕ್ವ ಮುನಿಯ ಬಳಿ ಓಡಿ ಬರುತ್ತಾನೆ. 'ಶೋಕೇನ ಆದ್ರವಣಾತ್ ಶೂದ್ರಃ' ಎಂಬ ಯೌಗಿಕಾರ್ಥವು ವಾಕ್ಯಶೇಷದಲ್ಲಿ ಕೇಳಿಸುತ್ತಿದೆ. ಆದ್ದರಿಂದ, ಪೌತ್ರಾಯಣನು ಶೂದ್ರನಾಗುವುದಿಲ್ಲ. ಕ್ಷತ್ರಿಯನೇ ಆಗಿರುತ್ತಾನೆ. ಅವನಿಗೆ ವೇದಾಧಿಕಾರವನ್ನು ಹೇಳುವುದು ತಪ್ಪಾಗುವುದಿಲ್ಲ. ಆದ್ದರಿಂದ ಶೂದ್ರರಿಗೆ ವೇದಾಧಿಕಾರವಿದೆ ಎನ್ನಲು ಈ ಸಂವರ್ಗವಿದ್ಯೆಯು ಆಧಾರವಾಗುವುದಿಲ್ಲ.

अध्ययनस्य उपनयनसापेक्षत्वात् शूद्रस्य च ''नाग्निर्न यज्ञो न क्रिया संस्कारो न व्रतानि शूद्रस्य '' इति श्रुत्या (पैङ्गि श्रु.) उपनयमसंस्काराभावाच्च ।

ಮತ್ತು ವೇದಾಧ್ಯಯನವು ಉಪನಯನಸಂಸ್ಕಾರವನ್ನು ಅಪೇಕ್ಷಿಸುತ್ತದೆ. ಆದರೆ, ಶೂದ್ರನಿಗೆ 'ನಾಗ್ನಿರ್ನ ಯಜ್ಞೋ ನ ಕ್ರಿಯಾ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ' ಎಂಬ ಶ್ರುತಿಯಿಂದ ಉಪನಯನಸಂಸ್ಕಾರವಿಲ್ಲವೆಂದು ಸ್ಪಷ್ಟವಾಗಿ ಪೈಂಗಿಶ್ರುತಿಯು ಹೇಳಿದೆ.

ಅಪಶೂದ್ರಾಧಿಕರಣ (೧-೩-೯)

"नैतदब्राह्मणो विवक्तुमर्हति" (छां. ४-५-५) इति सत्यकामस्य अशूद्रत्वं निर्धार्यैव तदुपनयने गौतमस्य प्रवृत्तत्वेन तद्रूपाल्लिङ्गात् ।

'ನೈತದಬ್ರಾಹ್ಮಣೋ ವಿವಿಕ್ತುಮರ್ಹತಿ' ಸತ್ಯವನ್ನು ಹೇಳುವವನು ಅಬ್ರಾಹ್ಮಣನಾಗಲು ಸಾಧ್ಯವಿಲ್ಲ ಎಂಬುದಾಗಿ ಸತ್ಯಕಾಮನು ಶೂದ್ರನಲ್ಲವೆಂದು ನಿರ್ಧಾರ ಮಾಡಿಯೇ ಉಪನಯನಸಂಸ್ಕಾರವನ್ನು ಗೌತಮಋಷಿಗಳು ಮಾಡಿರುತ್ತಾರೆ. ಇದರಿಂದ ಶೂದ್ರರಿಗೆ ಉಪನಯನಸಂಸ್ಕಾರವಿಲ್ಲವೆಂದು ಸ್ಪಷ್ಟವಾಗುತ್ತದೆ.

"श्रवणे त्रपुजतुभ्यां श्रोत्रपरिपूरणं अध्ययने जिह्वाच्छेदः अर्थावधारणे हृदयविदारणम्" (गौतमधर्मसूत्र) इति शूद्रस्य वेदश्रवणादेर्निषिद्धतया विशिष्टबुद्ध्यादिमत्वे सति अनिषिद्धत्वरूपस्य अधिकारप्रयोजकस्याभावात्, लिखितनिरीक्षणेनापि अर्थावधारणायोगात् ।

'ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರ್ಣಂ ಅಧ್ಯಯನೇ ಜಿಹ್ವಾಚ್ಛೇದಃ ಅರ್ಥಾವಧಾರಣೇ ಹೃದಯವಿದಾರಣಮ್' 'ಶೂದ್ರರು ವೇದವನ್ನು ಶ್ರವಣ ಮಾಡಿದರೆ ಅರಗನ್ನು ಕಾಯಿಸಿ ಕಿವಿಗೆ ಹಾಕಬೇಕು. ಅಧ್ಯಯನವನ್ನು ಮಾಡಿದರೆ ನಾಲಿಗೆಯನ್ನು ತುಂಡರಿಸಬೇಕು. ಅರ್ಥವನ್ನು ತಿಳಿದರೆ ಹೃದಯವನ್ನು ವಿದಾರಣೆ ಮಾಡಬೇಕು.' ಎಂಬುದಾಗಿ ಗೌತಮಸೂತ್ರದಲ್ಲಿ ಶೂದ್ರನಿಗೆ ವೇದಶ್ರವಣಾದಿಗಳನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ, ವೇದವಿದ್ಯಾಧಿಕಾರಕ್ಕೆ ಪ್ರಯೋಜಕವಾದದ್ದು ಕೇವಲ ವಿಶಿಷ್ಟಬುದ್ಧ್ಯಾದಿಗಳಷ್ಟೇ ಅಲ್ಲ. ಅನಿಷಿದ್ಧತ್ವವೂ ಕೂಡ ಪ್ರಯೋಜಕವಾಗಿದೆ. ಹಾಗಾಗಿ, 'ವಿಶಿಷ್ಟಬುದ್ಧ್ಯಾದಿಮತ್ತ್ವೇ ಸತಿ ಅನಿಷಿದ್ಧತ್ವಂ' ಎಂಬ ಅಧಿಕಾರ-ಪ್ರಯೋಜಕ ಧರ್ಮವು ಶೂದ್ರರಿಗೆ ಇರುವುದಿಲ್ಲ. ಮತ್ತು ಕೇವಲ ಬರೆದದ್ದನ್ನು ಓದಿಕೊಂಡು ಅರ್ಥವನ್ನು ತಿಳಿದುಕೊಳ್ಳುವುದು ಸುಲಭದ ಮಾತಲ್ಲ.

विदुरादेर्जन्मान्तरोत्पन्नज्ञानत्वेन इतरशूद्रवैलक्षण्याच्च नास्ति शूद्रे वेदविद्याधिकार इति ॥

ವಿದುರ ಮೊದಲಾದವರು ಆ ಜನ್ಮದಲ್ಲಿ ವೇದವನ್ನು ಓದಿಯೇ ಇಲ್ಲ. ಹೊರತಾಗಿ ಜನ್ಮಾಂತರದ ಸಂಸ್ಕಾರದಿಂದ ತತ್ತ್ವಜ್ಞಾನವನ್ನು ಪಡೆದಿರುತ್ತಾರೆ. ಮತ್ತು, ಉಳಿದ ಶೂದ್ರರಿಗಿಂತ ವಿದುರ ಮೊದಲಾದವರು ವಿಲಕ್ಷಣರಾಗಿದ್ದಾರೆ. ಒಟ್ಟಾರೆ, ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲವೆಂಬುದು ಸಿದ್ಧವಾಯಿತು.

फलं तु शूद्रस्य देवादिवत् विशिष्टबुद्ध्यादिन्यायेन अधिकारे सति तन्निषेधक-श्रुत्यादिविरोधप्राप्त्या मनुष्याधिकारित्वं शास्त्रस्य सामान्यतः उक्तं तत्प्रमाणविरुद्धमिति पूर्वपक्षे, सिद्धान्ते सामान्योक्तेः शूद्रेतरविषयत्वान्न विरोधः इति ।। ९ ।।

ಈ ಅಧಿಕರಣದ ಫಲಫಲಿಭಾವ ಹೀಗಿದೆ. ಶೂದ್ರನಿಗೆ ದೇವಾದಿಗಳಂತೆ ವಿಶಿಷ್ಟಬುದ್ಧ್ಯಾದಿಗಳಿರುವುದರಿಂದ ವೇದವಿದ್ಯಾಧಿಕಾರವು ಪ್ರಾಪ್ತವಾಗುತ್ತದೆ. ಆದ್ದರಿಂದ, ಶೂದ್ರಾದಿಗಳಿಗೆ ವೇದಾಧಿಕಾರವಿಲ್ಲವೆಂದು ನಿಷೇಧ ಮಾಡುವಂತಹ ಶ್ರುತ್ಯಾದಿ ವಿರೋಧವು ಪ್ರಾಪ್ತವಾಗುತ್ತದೆ. ಆವಾಗ, ವೇದಶಾಸ್ತ್ರಕ್ಕೆ ಮನುಷ್ಯಸಾಮಾನ್ಯರು ಅಧಿಕಾರಿಗಳಾಗಿರುತ್ತಾರೆಂದು ಹೇಳಿದ್ದು, ಪ್ರಮಾಣವಿರುದ್ಧವಾಗಿದೆ ಎಂಬುದು ಪೂರ್ವಪಕ್ಷದ ಫಲ. ಸಿದ್ಧಾಂತದಲ್ಲಿ, ಮನುಷ್ಯಸಾಮಾನ್ಯರು ಅಧಿಕಾರಿಗಳಾಗಿರುತ್ತಾರೆಂದು ಹೇಳಿದ ಮಾತ್ರದಿಂದ ಶೂದ್ರರಿಗೂ ಅಧಿಕಾರವನ್ನು ಹೇಳಿದಂತಾಗುವುದಿಲ್ಲ. ಶೂದ್ರರನ್ನು ಬಿಟ್ಟು ಉಳಿದ ಮನುಷ್ಯರಿಗೆ ವೇದಾಧಿಕಾರವನ್ನು ಸೂತ್ರವು ಹೇಳಿದೆ. ಆದ್ದರಿಂದ, ಯಾವುದೇ ಪ್ರಮಾಣಗಳ ವಿರೋಧಕ್ಕೆ ಅವಕಾಶವಿಲ್ಲವೆಂಬುದು ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅಪಶೂದ್ರಾಧಿಕರಣವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# सूत्रार्थरत्नावळिः

## अपशूद्राधिकरणम् (१।३।९)

।। अत्र त्रिवर्णेतरस्य शूद्रस्य वेदोक्तब्रह्मविद्याधिकारो निराक्रियते ।।

**ॐ।। शुगस्य तदनादरश्रवणात् तदाद्रवणात् सूच्यते हि ।।ॐ १-३-३४।।**

ननु शूद्राणां वेदविद्याधिकारो भवेत् । 'आह हारे त्वे'ति श्रुतेः । मनुष्यत्वात् । भगवता सूत्रकृताऽधिकारप्रयोजकत्वेन मनुष्याधिकारत्वादित्यनेन मनुष्यत्वस्याभिधानात् । अन्यथाऽविशेषात् त्रैवर्णिकस्यापि तन्न स्यात् । शूद्रस्य विशिष्टबुद्ध्यादेः सत्वात् । तस्य पौत्रायणस्य वैदिकसंवर्गविद्याध्ययनदर्शनादिति प्राप्ते, सूत्रितम् –

ಅಪಶೂದ್ರಾಧಿಕರಣ (೧-೩-೯)

ॐ।। शुगस्य तदनादरश्रवणात् तदाद्रवणात् सूच्यते हि – इति । अस्यार्थः – अस्य पौत्रायणाख्यस्य राज्ञः । तदनादरश्रवणात् 'हंसकृत कम्वर एनम्' इत्यनादरश्रवणान्निमित्तात् । शुक् शोकः । तथाऽपि कुतः शोकः? इत्यत उक्तम् – सूच्यते हीति ।। हि यस्मात् । 'स हि सञ्जिहान एव' इत्युत्तरवाक्येन सूच्यते तथा ज्ञायते । तस्माच्छोकः । अस्मादेव निमित्तात् । राजा रैक्केन ऋषिणा शूद्रेति सम्बोधितः । नतु वर्णावरत्वाभिप्रायेणेत्यर्थः । तथा च नैतज्ज्ञापकबलेन शूद्रस्य वेदविद्याधिकारो मन्तव्य इति भावः ।।

एवञ्च संस्कारविधुरत्वात् । अध्ययनादेः संस्कार सापेक्षत्वात् । नाग्निः' (पैङ्गिश्रुतौ) इत्यनेन शूद्रस्य संस्कारनिषेधपरत्वात् । ततश्च त्रिवर्णेतरस्य शूद्रस्य ब्रह्मविद्याधिकारनिषेध इति सिद्धम् ।।*।।

ॐ।। क्षत्रियत्वावगतेश्चोत्तरत्र चैत्ररथेन लिङ्गात् ।।ॐ १-३-३५

ननु शूद्रस्य रूढार्थ एवाङ्गीकार्यः । योगाद् रूढेः प्राबल्यात् । पौत्रायणनिदर्शनेनैव शूद्रस्य वेदाधिकार सिद्धेः । शूद्रस्यापि पौत्रायणस्य वैदिकसंवर्गविद्याध्ययनदर्शनात् । नच पौत्रायणः शूद्र एव नेति वाच्यम् । 'अहहारे त्वा शूद्र' इति सम्बोधितत्वेन तस्य शूद्रत्वादिति प्राप्ते तन्निरासार्थं सूत्रमाह –

ॐ।। क्षत्रियत्वावगतेश्चोत्तरत्र चैत्ररथेन लिङ्गात् - इति ।। अस्यार्थः । चः लिङ्गान्तरसमुच्चये । उत्तरत्र 'अयमश्वतरीरथ' इत्युत्तरवाक्ये । श्रुतेनेति शेषः । चैत्ररथेन चित्रशब्दादश्वतरीत्युक्तरथसम्बन्धित्वरूपेण लिङ्गात् । लिङ्गेन च ज्ञापकेन चास्य । क्षत्रियत्वावगतेश्च क्षत्रियत्वज्ञानात् । न पौत्रायणं शूद्र इत्यर्थः ।

एवञ्च पौत्रायणस्य शूद्रत्वे प्रमाणाभावात् । शूद्रशब्देन सम्बोधनस्याप्रामाण्यात् । नच शूद्रशब्देन सम्बोधनमेव तत्र प्रमाणम् । शोकाद्द्रवणयोगेन तत्र शूद्रशब्दस्य प्रवृत्तत्वेन तस्य रूढिलभ्यवर्णावरकत्वासाधकत्वात् । किञ्च नासौ पौत्रायणः शूद्रः । महतां क्षत्रियत्वानुभवात् । अन्येषामयमश्वतरीरथ इति चैत्ररथेन लिङ्गेन तत्र क्षत्रियत्वावगतेश्च । ततश्च शूद्रस्य वेदानधिकारत्वं सिद्धम् ।।*।।

ॐ।। संस्कारपरामर्शात् तदभावाभिलापाच्च ।। ॐ १-३-३६

ननु शूद्रस्य वेदाधिकारः स्यात् । तस्यापि रथित्वसम्भवात् । रथस्य यत्र वेद इति (ब्रह्मवैवर्ते) वेदव्याप्यत्वात् शूद्रे च तदभावाद्रथस्याप्यभाव इति शङ्काऽनुदयात् । शूद्रेऽपि वेदाधिकाराङ्गीकारात् – इति प्राप्ते तत्परिहाराय सूत्रं पठति –

ॐ।। संस्कारपरामर्शात् तदभावाभिलापाच्चेति । अस्यार्थः – साध्यसमुच्चये चशब्दः । संस्कारपरामर्शात् 'अष्टवर्षं ब्राह्मणमुपनयीत । तमध्यापयीत' इति तच्छब्देन उपनयनाख्यसंस्कारयुक्तस्य वचनात् । तदभावाभिलापात् शूद्रस्य 'नाग्निर्न यज्ञः' (पैङ्गिश्रुतौ) संस्काराभावाभिधानात् । न तस्य वेदविद्याधिकार इत्यर्थः ।

एवञ्चाध्ययनार्थं संसारसापेक्षत्वावगमात् । शूद्रस्य संस्काराभावस्योक्तत्वात् । उत्तमस्त्रीणां तु न शूद्रवत् सपत्नीम् (मन्त्रप्रश्न १-१६) इत्यादिष्वधिकारदर्शनात् । स्त्रीणां प्रदानकर्मैवेति व्यासस्मृतेः । तथा च शूद्रस्य वेदानधिकार इति सिद्धम् ।।*।।

ॐ।। तदभावनिर्धारणे च प्रवृत्तेः ।।ॐ १-३-३७

नन्वथाऽपि शूद्रस्य वेदाधिकारो युक्तः । शूद्रं नोपनीयेतेति निषेधाभावेन तस्यापि संस्कारसम्भवात् । 'नाग्निः' इति (पैङ्गि) श्रुतौ तु संस्काराभावस्यैवोक्तत्वेन सर्वथा न कार्यमिति निषेधाभावान्न तद्विरोध इति प्राप्ते, सूत्रितम् –

ॐ।। तदभावनिर्धारणे च प्रवृत्तेरिति । अस्यार्थः – चोऽवधारणे । तदभावनिर्धारणे सत्यकामाख्य पुरुषस्य शूद्रत्वाभावनिश्चये सत्येव । प्रवृत्तेः गौतमस्य तदुपनयने प्रवृत्तत्वात् । अस्मात् ज्ञापकान्न शूद्रस्य संस्कारो युज्यत इत्यर्थः ।

एवञ्च विपक्षे बाधकोक्तिरूपतया व्यतिरेकव्याप्त्युक्तिरूपतया वा सत्यकामस्य शूद्रत्वाभावनिर्णायकत्वेन गौतमस्य प्रवृत्त्युपपत्तेः । 'नैतद् ब्राह्मणः' (छां.४-४) इति श्रुतेः संस्कारनिषेधज्ञापकलिङ्गाच्च । ततश्च शूद्रस्य वेदानधिकारत्वं सिद्धम् ।।*।।

## ॐ।। श्रवणाध्ययनार्थप्रतिषेधात् स्मृतेश्च ।।ॐ १-३-३८

ननु 'विशेषात्' इत्युक्तरीत्या शूद्रस्यापि विशिष्टबुद्ध्यादिमत्त्वेनाधिकारः सिद्ध्येत् । अन्यथा तेन देवताद्यधिकारसिद्धिरपि न स्यादिति प्राप्ते, सूत्रमाह –

ॐ।। श्रवणाध्ययनार्थप्रतिषेधात् स्मृतेश्चेति । अस्यार्थः – श्रवणाध्ययनार्थप्रतिषेधात् शूद्रस्य वेदश्रवणतदध्ययनतदर्थावधारणानां श्रवणे त्रपुजतुभ्यां श्रोत्रपरिपूरणमिति (गौतमधर्म. १२-४-७) श्रुतौ प्रतिषिद्धत्वात्। स्मृतेः 'नाग्निर्न यज्ञः शूद्रस्य' इति निषेधकस्मृतेश्च न तस्य वेदविद्याधिकार इत्यर्थः ।

एवञ्च शूद्रस्य वेदश्रवणाध्ययनार्थावधारणानां प्रतिषिद्धत्वात् । तथा च निषिद्धत्वे सति विशिष्टबुद्ध्यादिमत्त्वस्यैव वेदाधिकारप्रयोजकत्वेनाभिमतत्वात् तस्य च शूद्रेऽभावात् । स्मृत्या च तस्यैवाध्ययननिषेधावगमात् । विदुरादीनामुत्पन्नज्ञानविशेषवत्त्वात् निषेधविषयत्वाभावेनापवादविषयत्वात् । ततश्च शूद्रादीनामधिकाराभावात् शूद्रादिभिर्वेदविद्याविज्ञेयो न भवति भगवान् हरिरिति सिद्धम् ।।*।।

।। इति सूत्रार्थरत्नावळ्यां अपशूद्राधिकरणम् ।।

# ಕಂಪನಾಧಿಕರಣ

(೧-೩-೧೦)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಕಂಪನಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಜಗಚೇಷ್ಟಕನಾದ ಮಹಾವಿಷ್ಣುವೇ 'ವಜ್ರ' ; ಆಯುಧವಲ್ಲ

**।। अथ कम्पनाधिकरणम् ।।**

**सू - ।। ॐ कम्पनात् ॐ ।। ३९।।**

ಸೂತಾರ್ಥ -- 'ಮಹದ್ಭಯಂ ವಜ್ರಮುದ್ಯತಂ' ಎಂಬಲ್ಲಿ ಶ್ರುತವಾದ 'ವಜ್ರ' ಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆ ಹೊರತು ಇಂದ್ರಾಯುಧವನ್ನಲ್ಲ. ಏಕೆಂದರೆ 'ಜಗತ್ಸರ್ವಂ ಪ್ರಾಣೇ ಏಜತಿ ನಿಃಸೃತಮ್' ಎಂಬುದಾಗಿ ಜಗಚ್ಚೇಷ್ಟಕತ್ವವೆಂಬ ಬ್ರಹ್ಮನ ಅಸಾಧಾರಣಧರ್ಮವನ್ನು ಹೇಳಿರುವುದರಿಂದ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಕಂಪನಾಧಿಕರಣವು ಸಮಾಪ್ತವಾಯಿತು ॥

## ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

# ಸೂತ್ರದೀಪಿಕಾ

सूत्रदीपिका – ''महद्भयं वज्रम्'' इति वज्रशब्दवाच्यो विष्णुरेव नत्विन्द्रायुधम्। कुतः? कम्पनाथ ''सर्वमेजति'' इति कम्पनशब्दितसर्वचेष्टकत्वलिङ्ग-श्रवणादित्यर्थः ।।१।।

ಅರ್ಥ -- 'ಮಹದ್ಭಯಂ ವಜ್ರಮುದ್ಯತಂ' ಎಂಬಲ್ಲಿರುವ ವಜ್ರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು ಇಂದ್ರಾಯುಧವಲ್ಲ. ಏಕೆಂದರೆ ಕಂಪನಾತ್ = ಸರ್ವಮೇಜತಿ ಎಂಬುದಾಗಿ 'ಕಂಪನ' ಶಬ್ದದಿಂದ ಸರ್ವಚೇಷ್ಟಕತ್ವವೆಂಬ ಲಿಂಗವು ಶ್ರುತವಾದ್ದರಿಂದ.

॥ ಸೂತ್ರದೀಪಿಕೆಯಲ್ಲಿ ಕಂಪನಾಧಿಕರಣವು ಸಮಾಪ್ತವಾಯಿತು ॥

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

भाष्यम् – यदिदं किञ्च जगत्सर्वं प्राण एजति निस्सृतम् । महद्भयं वज्रमुद्यतं य एतद्विदुरमृतास्ते भवन्ति (कठ. २-३-२.) इत्युद्यतवज्रज्ञानान्मोक्षः श्रूयते इति ।

ಅನುವಾದ – 'ಸಮಸ್ತ ಜಗತ್ತು ಯಾರಿಂದ ನಿರ್ಮಾಣವಾಗಿದೆಯೋ, ಅಂತಹ ಪ್ರಾಣನಿಗೂ ಕೂಡ ನಿಯಾಮಕವಾದ ಭಯಂಕರವಾದ ಉದ್ಯತವಾದ ವಜ್ರ. ಇದನ್ನು ತಿಳಿದವರು ಮುಕ್ತರಾಗುತ್ತಾರೆ' ಹೀಗೆ ಉದ್ಯತವಾದ ವಜ್ರದ ಜ್ಞಾನದಿಂದ ಮೋಕ್ಷವಾಗುತ್ತದೆಂದು ಕಾಠಕಶ್ರುತಿಯು ಹೇಳುತ್ತಿದೆ. ಅದಕ್ಕಾಗಿ ಸೂತ್ರಕಾರರು 'ಕಂಪನಾತ್' ಎಂಬ ಸೂತ್ರವನ್ನು ರಚನೆ ಮಾಡಿದ್ದಾರೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಶ್ರುತ್ಯಾದಿಸಂಗತಿ ಹಾಗೂ ವಿಷಯಾದಿಗಳನ್ನು ಮೊದಲು ಸೂಚನೆ ಮಾಡುತ್ತಿದ್ದಾರೆ –

ಯದಿದಂ ಕಿಂಚ = ಕಣ್ಣಿಗೆ ಕಾಣಿಸುತ್ತಿರುವ ಯಾವ ಈ, ಜಗತ್ ಸರ್ವಂ = ಸಮಸ್ತ ಬ್ರಹ್ಮಾಂಡವು, ಪ್ರಾಣೇ = ಪ್ರಾಣನಿಂದ, ಏಜತಿ = ಚೇಷ್ಟೆಯನ್ನು ಹೊಂದಿದೆಯೋ, ಮತ್ತು, ನಿಃಸೃತಂ = ಪ್ರಾಣನಿಂದ ಹುಟ್ಟಿದೆಯೋ, ತತ್ = ಅಂತಹ, ಮಹದ್ ಭಯಂ = ಮಹಾಭಯಜನಕವಾದ, ಉದ್ಯತಂ = ಮೇಲಕ್ಕೆ ಎದ್ದಿರುವ, ವಜ್ರಂ = ವಜ್ರಾಯುಧವನ್ನು, ಯಃ = ಯಾರು, ವಿದುಃ = ತಿಳಿಯುತ್ತಾರೋ, ತೇ = ಅವರು, ಅಮೃತಾಃ = ಮುಕ್ತರು, ಭವಂತಿ = ಆಗುತ್ತಾರೆ, ಇತಿ = ಹೀಗೆ, ಉದ್ಯತವಜ್ರಜ್ಞಾನಾತ್ = ಎತ್ತಲ್ಪಟ್ಟ ವಜ್ರಾಯುಧದ ಜ್ಞಾನದಿಂದ, ಮೋಕ್ಷಃ = ಮೋಕ್ಷವು, ಶ್ರೂಯತೇ = ಶ್ರುತವಾಗಿದೆ. ಇತಿ = ಹೀಗೆ.(೧)

---

(१) **भाष्यदीपिका – अत्राधिकरणे वज्रनाम समन्वीयते** । श्रुत्यादिसङ्गतिं विषयादिकं च सूचयति – **यदिदमिति** ।। अत्र त्रैवर्णिकानां वेदाद् ब्रह्मज्ञानं मोक्षदमिति पूर्वोक्तमयुक्तम् । यतो **'यदिदम्'** इति श्रुतौ उद्यतवज्रज्ञानान्मोक्षः श्रूयत इति वाक्योपस्कारेण योजना । अनेन पूर्वाधिकरणे त्रैवर्णिकानां वेदाद् ब्रह्मज्ञानं मोक्षदमिति यदभिप्रेतं तस्य चाऽनन्दमयाधिकरणे **'नेतरः'** इत्यनेनोक्तस्य मोक्षजनकज्ञानविषयत्वस्य विष्णोरन्यत्राऽक्षेपात् तेनास्याऽक्षेपिकी सङ्गतिरुक्ता भवति । वज्रशब्दो विषय इति सूचितम् । वज्रश्रुतेः कुलिशे रूढिबलात् तथा **'उद्यतायुधदोर्दण्डाः'** इत्यादिस्मृतौ **'तेनेन्द्रो वज्रमुदयच्छत्'** इति श्रुतौ चाऽयुधे प्रसिद्धोद्यतत्वलिङ्गबलाचेन्द्रायुधमेवेदं वज्रमिति सयुक्तिकपूर्वपक्षः सूचितः । श्रुतौ प्राण इति सप्तम्यन्तं पदम् । स्थितमिति शेषः । प्राण इत्यस्य निमित्तसप्तमीत्वं वा विभक्तिविपरिणामं वाऽऽश्रित्य आवृत्त्या निस्सृतमित्यनेनापि सम्बन्धः । यदित्यस्याऽवृत्तिरध्याहारो वा । यदिति श्रवणात् तदिति लभ्यते ।

तथा चायं सिद्धान्ते श्रुत्यर्थः – **'यत्किञ्च'** यत्किञ्चिद् दृष्टं श्रुतं यत् सर्वं जगत् **'प्राणे'** प्राणनान्निमित्तात् प्राणशब्दवाच्ये हरौ स्थितं प्राणान्निस्सृतं ततो जातं च तदिदं सर्वं जगत् **'यस्मादेजति'** यत्प्रेरणया चेष्टते तन्महनीयत्वात् पूज्यत्वात् **'महत्'** भीषयतीति भयं दुष्टानां भयङ्करम् **'उद्यतं'** सर्वप्रयत्नवत् **'उद्यतत्वं च प्रयत्नवत्त्वम्'** उत्पूर्वस्य यमेस्तदर्थत्वात्, इति चन्द्रिकोक्तेः । यती प्रयत्न इत्यस्येदं रूपम्, उच्छब्द उत्कर्षवाचीत्यपि केचित् । **'वज्रं'** दोषवर्जनाद् अप्रियवर्जनाद् वा तच्छब्दवाच्यम् । एतद्ये **'विदुः'** अपरोक्षतो जानन्ति ते **'अमृताः'** मुक्ताः भवन्तीति ।

यद्वा – **प्राण** इति प्रथमान्तं पदं, तथा च प्राणो मुख्यप्राणः । इदं दृष्टं किञ्चान्यच्छ्रुतं सर्वं **जगच्च** यस्मान्निस्सृतं यस्मादेजति च तदेतद्वज्रं ये विदुरित्यर्थः । अथवा –

भाष्यम् – अतोऽब्रवीत् –

ॐ ॥ कम्पनात् ॥ ॐ ॥३९॥

'एजति' इति कम्पनवचादुद्यतवज्रो भगवानेव ।

ಅನುವಾದ - ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಶ್ರುತಿಯಲ್ಲಿ 'ಏಜತಿ' ಎಂಬುದಾಗಿ ಜಗತ್ತಿನ ಕಂಪನಕ್ಕೆ ಕಾರಣವನ್ನಾಗಿ ಹೇಳಲ್ಪಟ್ಟ 'ಉದ್ಯತ ವಜ್ರ' ಎಂದರೆ ಷಡ್ಗುಣೈಶ್ವರ್ಯಸಂಪನ್ನನಾದ ಮಹಾವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ಸಮರ್ಥಿಸುವ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ –

ಅತಃ = ಈ ಆಕ್ಷೇಪವು ಬರುತ್ತಿರಲು, ಅಬ್ರವೀತ್ = ಸೂತ್ರಕಾರರು ಉತ್ತರಿಸುತ್ತಿದ್ದಾರೆ, ಏಜತೀತಿ = ಶ್ರುತಿಯಲ್ಲಿ ಏಜತಿ ಎಂಬುದಾಗಿ, ಕಂಪನವಚನಾತ್ = ಜಗತ್ತಿನ ಕಂಪನವನ್ನು ಹೇಳಿದ್ದರಿಂದ, ಉದ್ಯತವಜ್ರಃ = ಎತ್ತಲ್ಪಟ್ಟ ವಜ್ರಾಯುಧವು, ಭಗವಾನೇವ = ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನೇ ಆಗಿದ್ದಾನೆ.(१)

---

यदित्यस्याऽवृत्तिस्तत्र प्रथमस्य जगद्विशेषणत्वं, द्वितीयस्य मुख्यप्राणपरत्वम्, तृतीयस्य वज्रपरत्वम् । स इति लभ्यते । तस्य प्रथमान्तप्राणपदेनान्वयः । तथा च यत्किञ्चिज्जगत्सर्वं यद्यस्मान्निस्सृतं स मुख्यप्राणः । यस्मादेजति तद्वज्रं ये विदुरित्यर्थः। अत्र प्रथमव्याख्याने मुख्यप्राणस्य जगदन्तर्गतत्वेन भगवत्प्रेर्यत्वं द्वितीये जगत्साम्येन, तृतीये तु मुख्यप्राणस्यैव साक्षाद्भगवत्प्रेर्यत्वं जगतस्तु मुख्यप्राणप्रेर्यत्वमिति भेदः । पूर्वपक्षी तु इन्द्रायुधमेव वज्रपदेनोक्तम् । उद्यतत्वमुद्यमनकर्मत्वं तस्यैव लिङ्गमिति मन्यते ॥

(१) भाष्यदीपिका – सिद्धान्तयत्सूत्रमवतार्य व्याचष्टे – अत इति ॥ 'कम्पनवचनात्' इत्येतद्रूपात् सर्वजगच्चेष्टकत्ववचनादित्यर्थः । यद्वा – कम्पनस्य मुख्यप्राणस्य एजतीति कम्पनवचनाच्चेष्टकत्वोक्तेरित्यर्थः । वचनादित्यनेन कम्पनपदं तद्वचनपरमित्युक्तं भवति। नच श्रुतौ वाक्यभेदाङ्गीकारे कम्पकत्वं वज्रे नोच्यत इति वाच्यम् । कम्पकत्वनिमित्तभयङ्करत्वस्य वज्रेऽभिधानाद् वाक्यभेदायोगात् । उद्यतवज्र इति सूत्रे शेषोक्तिः । समन्वयसूत्रादनुवृत्तस्य तदित्यस्योद्देश्यवज्रपदानुसारात् प्राणपदानुसाराद्वा भगवानिति व्याख्यानं कृतम् । सावधारणं चैतत् । तेन तुशब्दार्थो दर्शितः । यद्यपि वज्रो भगवानेवेत्येतावदेव वक्तव्यं, न तूद्यत इति वज्रविशेषणमपि । तथाऽपि पूर्वपक्ष्युक्तोद्यतत्वलिङ्गस्य प्रयत्नवत्त्वरूपोद्यतत्वार्थतया सावकाशत्वज्ञापनाय उद्यतेत्युक्तम् ।

**भाष्यम् – 'को ह्येवान्यात्कः प्राण्यात् । यदेष आकाश आनन्दो न स्यात्'' (तै. २-७) इति हि श्रुतिः ।**

ಅನುವಾದ - 'ಕೋ ಹ್ಯೇವಾನ್ಯಾತ್' ಎಂಬ ತೈತ್ತಿರೀಯ ಶ್ರುತಿಯು ವಿಷ್ಣುವೇ ಜಗತ್ತಿಗೆ ಪ್ರೇರಕನಾಗಿದ್ದಾನೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಶ್ರುತಿ ಹಾಗೂ ಲಿಂಗಗಳಿಂದ ಪೂರ್ವಪಕ್ಷ ಮಾಡಿದರೆ, ಕೇವಲ ಲಿಂಗದ ಬಲದಿಂದ ಹೇಗೆ ನಿರ್ಣಯವನ್ನು ಮಾಡುತ್ತೀರಿ? ಎಂದು ಪ್ರಶ್ನಿಸಬಾರದು. 'ಜಗಚ್ಚೇಷ್ಟಕತ್ವ' ಎಂಬ ಲಿಂಗವು ವಿಷ್ಣುವಿನಲ್ಲಿ ನಿರವಕಾಶವಾಗಿದೆ ಎಂಬುದನ್ನು ಶ್ರುತಿಯಿಂದ ಸಮರ್ಥನೆ ಮಾಡುತ್ತಿದ್ದಾರೆ –

'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂಬುದಾಗಿ ತೈತ್ತಿರೀಯ ಶ್ರುತಿಯಲ್ಲಿ ವಿಷ್ಣುವೇ ಜಗತ್ತಿನ ಪ್ರೇರಕನೆಂದು ಹೇಳಲಾಗಿದೆ.(१)

**भाष्यम् – 'प्राणस्य प्राणमुत चक्षुषश्चक्षुः' (बृ. ६-४-१८.) इति च**

ಅನುವಾದ - 'ಪ್ರಾಣಸ್ಯ ಪ್ರಾಣಂ' ಎಂಬುದಾಗಿ ಬೃಹದಾರಣ್ಯಕ ಶ್ರುತಿಯು ಪ್ರಾಣನಿಗೂ ಕೂಡ ವಿಷ್ಣು ಪ್ರೇರಕನಾಗಿದ್ದಾನೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಜಗಚ್ಚೇಷ್ಟಕತ್ವವು ಸರ್ವಜಗಚ್ಚೇಷ್ಟಕತ್ವವು ವಿಷ್ಣುವಿನಲ್ಲಿ ಮಾತ್ರ ಇರುವಂತೆ ಸರ್ವಜಗತ್‌ಪ್ರವರ್ತಕರಾದ ಪ್ರಾಣದೇವರನ್ನೂ ಕೂಡ ಚೇಷ್ಟನೆ ಮಾಡುವಂತ ಲಿಂಗವು ಕೇವಲ ವಿಷ್ಣುವಿನಲ್ಲೇ ಇದೆ ಎಂದು ಸಮರ್ಥಿಸಲು ಶ್ರುತಿಯನ್ನು ಪ್ರಮಾಣವನ್ನಾಗಿ ನೀಡುತ್ತಿದ್ದಾರೆ –

ಪ್ರಾಣಸ್ಯ = ಪ್ರಾಣದೇವರಿಗೆ, ಪ್ರಾಣಂ = ಚೇಷ್ಟಕನು, ಉತ = ಮತ್ತು, ಚಕ್ಷುಷಃ = ಚಕ್ಷುರಭಿಮಾನಿ ದೇವತೆಗಳಿಗೆ, ಚಕ್ಷುಃ = ದರ್ಶನಶಕ್ತಿಪ್ರದನು, ಇತಿ ಚ = ಹೀಗೆ ಬೃಹದಾರಣ್ಯಕೋಪನಿಷತ್ತು ಹೇಳುತ್ತಿದೆ.(२)

---

(१) **भाष्यदीपिका** – ननु श्रुतिलिङ्गाभ्यां पूर्वपक्षिते कथं लिङ्गमात्रेण निर्णय इत्यतो लिङ्गस्य निरवकाशत्वादेवेत्याशयेन श्रुतेः प्रथमद्वितीयव्याख्यानानुसारेण वज्रे श्रुतस्य प्राणतदितरसाधारण्येन सामान्यतो जगच्चेष्टकत्वलिङ्गस्य विष्णोरन्यत्र निरवकाशत्वं श्रुत्या दर्शयति – **को हीति** ।। हिशब्दो हेतौ यत इत्यर्थे प्रसिद्धौ वा । अस्तीति शेषः। अतो लिङ्गस्य नान्यत्र सावकाशत्वं शङ्क्यमिति वाक्यशेषः ।

(२) **भाष्यदीपिका** –यदा सामान्यतः सर्वजगच्चेष्टकत्वमेव विष्ण्वेकनिष्ठं तदा किमु वक्तव्यं श्रुतेः तृतीयव्याख्यानरीत्या वज्रे श्रुतस्य सर्वजगत्प्रवर्तकप्राणचेष्टकत्वलिङ्गस्य विष्ण्वेकनिष्ठत्वं जगच्चेष्टकत्वस्य सर्वथाऽन्यत्रायोगादिति भावेन तत्र श्रुतिं दर्शयति – **प्राणस्येति** ।। चो

**भाष्यम् – नभस्वतोऽपि सर्वास्स्युः चेष्टा भगवतो हरेः ।**
**किमुतान्यस्य जगतो यस्य चेष्टा नभस्वतः ॥ इति च स्कान्दे ।**

ಅನುವಾದ - ಯಾವ ವಾಯುದೇವರ ಕ್ರಿಯೆಯಿಂದ ಈ ಜಗತ್ತು ಕ್ರಿಯಾಶೀಲವಾಗಿದೆಯೋ, ಅಂತಹ ವಾಯುದೇವರ ಕ್ರಿಯೆಯೂ ಕೂಡ ಪರಮಾತ್ಮನ ಅಧೀನವಾಗಿದೆ. ಹೀಗಿರುವಾಗ, ಇತರರ ಕ್ರಿಯೆಗಳೆಲ್ಲವೂ ಹರಿಯ ಅಧೀನವೆಂದು ಪ್ರತ್ಯೇಕವಾಗಿ ಹೇಳಬೇಕೇನು? ಎಂದು ಸ್ಕಾಂದ ಪುರಾಣದ ಮಾತಿದೆ.

ಪ್ರತಿಪದಾರ್ಥ -- ಶ್ರುತ್ಯುಕ್ತವಾದ ಪ್ರಾಣಚೇಷ್ಟಕತ್ವವನ್ನು ಹೇತುವನ್ನಾಗಿ ಮಾಡಿಕೊಂಡು, ಸಕಲಜಗಚ್ಚೇಷ್ಟಕತ್ವವು ವಿಷ್ಣುವಿನಲ್ಲಿ ಸಿದ್ಧವಾಗುತ್ತಿದೆ ಎಂದು ಕೈಮುತ್ಯ ನ್ಯಾಯದಿಂದ ಸಿದ್ಧಮಾಡುತ್ತಿದ್ದಾರೆ.

ಭಗವತಃ = ಷಡ್ಗುಣೈಶ್ವರ್ಯಸಂಪನ್ನನಾದ, ಹರೇಃ = ವಿಷ್ಣುವಿನ ದೆಸೆಯಿಂದ, ನಭಸ್ವತೋಽಪಿ = ವಾಯುವಿಗೂ ಕೂಡ, ಸರ್ವಾಃ = ಸಕಲ ವಿಧವಾದ, ಚೇಷ್ಟಾಃ = ವ್ಯಾಪಾರಗಳು, ಸ್ಯುಃ = ನಡೆಯುತ್ತವೋ, ಮತ್ತು, ಅನ್ಯಸ್ಯ ಜಗತಃ = ಉಳಿತ ಜಗತ್ತಿಗೆ, ಅವನಿಂದಲೇ ಚೇಷ್ಟೆಯು ನಡೆಯುತ್ತದೆಂದು, ಕಿಮುತ = ಪ್ರತ್ಯೇಕ ಹೇಳಬೇಕೇನು? ಇತಿ ಚ = ಹೀಗೆ, ಸ್ಕಾಂದೇ = ಸ್ಕಾಂದ ಪುರಾಣದಲ್ಲಿ ಹೇಳಲಾಗಿದೆ.(१)

---

यस्मादित्यर्थे । पूर्वश्रुतिसमुच्चये वा । श्रुतिरित्यनुषज्यते । उक्तलिङ्गस्यान्यत्र निरवकाशत्वं ज्ञापयतीति वाक्यशेषः ।

यद्वा, यद् जगत्प्रवर्तकप्राणचेष्टकत्वादिलिङ्गं कम्पनादित्यनेनाभिसंहितं, तस्य विष्णुनिष्ठत्वासिद्धिपरिहाराय तत्र श्रुतिं प्रमाणयति – **प्राणस्येति** ॥ **'प्राणस्य'** सर्वचेष्टकमुख्यप्राणस्य **'प्राणं'** प्रकृष्टचेष्टकत्वरूपप्राणत्वप्रदम् 'उत' तथा 'चक्षुषश्चक्षुः' दर्शनकरणत्वरूपचक्षुष्ट्वप्रदं परमात्मानं ये विदुस्ते ब्रह्म **'निचिक्युः'** प्राप्नुयुरिति वाजसनेयश्रुत्यर्थः ।

(१) **भाष्यदीपिका** – श्रुतेः प्रथमव्याख्यायामपि कैमुत्यव्यक्तिकरणाय श्रुत्युक्तप्राणचेष्टकत्वं हेतूकृत्य प्रवृत्तां स्मृतिमाह – **नभस्वत इति** ॥ **'अपि'** जगत्प्रेरकस्यापि **'नभस्वतो'** वायोर्यदा सर्वाः चेष्टाः **'भगवतो'** ज्ञानादिगुणपूर्णाद्धरेर्भवन्ति । तदा किमुतान्यस्य प्रेर्यस्य वायुभिन्नस्य जगतश्चेष्टा हरेर्भवन्तीति वक्तव्यम् । कुत एतत् ? यतो यस्य जगतः चेष्टा नभस्वतो न भवन्त्यत इति वचनार्थः । **स्कान्द** इत्यनन्तरमुक्तमिति शेषः । अतोऽपि लिङ्गस्य नान्यत्रावकाश इति भावः ।

**भाष्यम् – चक्रं चङ्क्रमाणादेष वर्जनाद्वज्रमुच्यते । खण्डनात्खड्ग एवैष हेतिनामा स्वयं हरिः । इति ब्रह्मवैवर्ते ॥३९॥**

**॥ इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये कम्पनाधिकरणम्॥ १० ॥**

ಅನುವಾದ - ಶ್ರೀಹರಿಯು ಸಮಸ್ತ ಜೀವರನ್ನು ಸಂಸಾರಾವಸ್ಥೆಯಲ್ಲಿ ಚಕ್ರದಂತೆ ತಿರುಗಿಸುತ್ತಾನೆ. ಆದ್ದರಿಂದಲೇ ಅವನನ್ನು ಜ್ಞಾನಿಗಳು 'ಚಕ್ರ' ಎಂದು ಕರೆಯುತ್ತಾರೆ. ದೋಷದೂರನಾದ್ದರಿಂದ 'ವಜ್ರ' ಎಂದು ಕರೆಯುತ್ತಾರೆ. ದುಷ್ಟರನ್ನು ನಿರಾಕರಿಸುತ್ತಾನಾದ್ದರಿಂದ 'ಖಡ್ಗ' ಎಂದು ಕರೆಯುತ್ತಾರೆ. ಹೀಗೆ ಆಯುಧಗಳ ಹೆಸರುಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗಿದ್ದಾನೆ.

ಪ್ರತಿಪದಾರ್ಥ -- ಉದ್ಧೃತತತ್ವಲಿಂಗವು ವಿಷ್ಣುವಿನಲ್ಲಿ ಸಾವಕಾಶವಾದರೂ, ವಜ್ರಶ್ರುತಿಯು ನಿರವಕಾಶವಾದ್ದರಿಂದ, ಸ್ವಭಾವತಃ ಪ್ರಬಲವೂ ಆದ್ದರಿಂದ, ವಿಷ್ಣುವೇ ವಜ್ರನಾಗಿದ್ದಾನೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ವಜ್ರಶ್ರುತಿಯು ನಿರವಕಾಶವೇ ಆಗಿಲ್ಲವೆಂದು ಉತ್ತರಿಸುತ್ತಿದ್ದಾರೆ –

(१)ಏಷಃ = ಈ ಪರಮಾತ್ಮನೇ, ಚಂಕ್ರಮಣಾತ್ = ಸಂಸಾರಾವಸ್ಥೆಯಲ್ಲಿರುವ

(१) **भाष्यदीपिका** – ननूद्यतत्वलिङ्गस्य विष्णौ सावकाशत्वेऽपि वज्रश्रुतेर्निरवकाशत्वात् स्वभावतः प्रबलत्वाच्च कथं निरवकाशेनापि सर्वचेष्टकत्वलिङ्गेन वज्रो विष्णुरेवेति निर्णय इत्यतः श्रुतेर्निरवकाशत्वस्यैवासिद्धेरित्याशयेन पूर्वपक्ष्यभिमतवज्रश्रुतेरपि विष्णाववकाशं स्मृत्या दर्शयति – **चक्रमिति** ॥ **'एषः'** भगवान् **'चङ्क्रमणात्'** संसारे जीवपरिभ्रामकत्वाच्चक्रम्। यथोक्तं तत्त्वप्रदीपे – **चङ्क्रामयतीति चक्रमिति** ॥ एवं **'वर्जनात्'** दैत्यैर्दूरादेव वर्ज्यते, न सन्मुखीक्रियत इति, सत्तर्कदीपावलीरीत्या दुष्टैर्वर्ज्यत्वात्, सर्वदोषवर्जनाद्वा वज्रमित्युच्यते। **'खण्डनात्'** दुष्टाङ्गच्छेदनाद् दमनाच्च खड्ग एष इत्यर्थः । एवशब्देन तदभेदो व्यावर्त्यते । ततः किम्, एष इति च कः इत्यत आह – **हेतीति** ॥ एवं हरिः **'स्वयं'** साक्षाद् अन्यसम्बन्धमन्तरेण **'हेतिनामा'** हेतीनां चक्रादिसर्वायुधानां यानि नामानि मुख्यवाच्यतया तद्वानित्यर्थः । हेतीति सामान्यग्रहणेन भाष्ये वज्रपदमन्यस्याप्युपलक्षकमित्युक्तं भवति । ब्रह्मवैवर्त इत्यनन्तरम् उक्तमिति शेषः । अतो न श्रुतिविरोधोऽपीति भावः । **'उच्यते हेतिनामा'** इत्यनेन वज्रादिशब्दानां विष्णौ विद्वद्रूढिरप्यस्तीति सूचितम् । तेन वर्जनादित्युक्तयोगस्य रूढेर्दौर्बल्याद् अयोग इति निरस्तम् । न चैवं काठकभाष्ये – वज्रवद्

ಜೀವರನ್ನು ತಿರುಗಿಸುವುದರಿಂದ, ಚಕ್ರಂ = ಚಕ್ರಶಬ್ದ ವಾಚ್ಯನು, ವರ್ಜನಾತ್ = ಸಕಲ ದೋಷವಿದೂರನಾದ, ವಜ್ರಃ = ವಜ್ರಶಬ್ದವಾಚ್ಯನು, ಖಂಡನಾತ್ = ಶತ್ರುಗಳನ್ನು ನಾಶ ಮಾಡುವ ಕಾರಣದಿಂದ, ಖಡ್ಗಃ = ಖಡ್ಗ ಶಬ್ದವಾಚ್ಯನು. ಏವೈಷ = ಇವನೇ, ಹೇತಿನಾಮಾ = 'ಹೇತಿ' ಎಂಬ ಆಯುಧವಾಚಕ ಶಬ್ದದಿಂದಲೂ ಪ್ರತಿಪಾದ್ಯನು. ಇಂತಹ ಸ್ವಯಂ = ತಾನೇ, ಹರಿಃ = ಶ್ರೀಹರಿಯು, ಇತಿ = ಹೀಗೆ, ಬ್ರಹ್ಮವೈವರ್ತೇ = ಬ್ರಹ್ಮವೈವರ್ತಪುರಾಣದಲ್ಲಿ ಹೇಳಲಾಗಿದೆ.

ಇಲ್ಲಿಗೆ ಕಂಪನಾಧಿಕರಣವು ಮುಗಿಯಿತು.

## श्रीपद्मनाभतीर्थविरचितसत्तर्कदीपावळिः

### ॥ ॐ कम्पनात् ॐ ॥

**'ऊर्ध्वं प्राणमुन्नयति' इत्यत्र विष्णुः प्रतिपाद्यत इति यदुक्तम्, तद् दृढीकर्तुं तत्प्रकरणस्थं वाक्यमुदाहृत्य विचारयति – यदिदमित्यादिना ॥ नात्र वज्रशब्दाभिधेयायुधविशेषः प्रतिपाद्यते । 'भयाद् अग्निस्तपति, भयात्तपति सूर्यः' इत्युत्तरवाक्यविरोधात् । 'भीषास्माद् वातः पवते' इत्यादौ विष्णुभयाद्धि सर्वकम्पनं श्रूयते । अतो दैत्यैर्दूरादेव वर्ज्यते, परिह्रियते, न सम्मुखीक्रियत इति वज्रशब्दाभिधेयो विष्णुरित्यनवद्यम् ॥ ३९॥**

**॥ इति सत्तर्कदीपावळ्याम् कम्पनाधिकरणम् ॥**

---

भयदं चेति वज्रशब्दस्य विष्णौ गौणत्वोक्तिविरोध इति वाच्यम् । तत्र तद्वाक्यस्य यथाकथञ्चिद् ब्रह्मपरत्वसिद्धिरित्यत्रैव तात्पर्यात् । ब्रह्मपरत्वस्य गौण्याऽपि सिद्धेः गौणत्वे तात्पर्याभावात् । अत्र तु समन्वयसूत्रप्रतिज्ञातमुख्यार्थत्वाय तात्पर्यतो योगरूढ्योरेवोक्तत्वात् । सूत्रार्थस्तु स्पष्टः ।

'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಶ್ರುತಿಯಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ಹಿಂದೆ ಸಮರ್ಥಿಸಲಾಯಿತು. ಅದನ್ನು ಸ್ಪಷ್ಟಪಡಿಸುವುದಕ್ಕಾಗಿ ಅದೇ ಪ್ರಕರಣದಲ್ಲಿರುವ ವಾಕ್ಯವನ್ನು ಉದಾಹರಿಸಿ ಈ ಅಧಿಕರಣದಲ್ಲಿ ವಿಚಾರ ಮಾಡುತ್ತಿದ್ದಾರೆ, 'ಯದಿದಮ್' ಇತ್ಯಾದಿ ಭಾಷ್ಯದಿಂದ. 'ಯದಿದಂ ಕಿಂಚ' ಎಂಬ ಕಾಠಕೋಪನಿಷತ್ತಿನ ವಜ್ರಶಬ್ದವು ಆಯುಧವಿಶೇಷವನ್ನು ಪ್ರತಿಪಾದನೆ ಮಾಡುವುದಿಲ್ಲ. ಏಕೆಂದರೆ 'ಭಯಾದಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ' ಎಂಬುದಾಗಿ ಮುಂದಿನ ವಾಕ್ಯದ ವಿರೋಧ ಬರುತ್ತದೆ. ಏಕೆಂದರೆ, 'ಭೀಷಾಸ್ಮಾದ್ ವಾತಃ ಪವತೇ' ಇತ್ಯಾದಿ ಶ್ರುತಿಯಲ್ಲಿ ವಿಷ್ಣುವಿನ ಭಯದಿಂದಷ್ಟೇ ಎಲ್ಲರೂ ನಡಗುತ್ತಾರೆ ಎಂದು ಕೇಳಿಸುತ್ತಿದೆ. ಆದ್ದರಿಂದ, ದೈತ್ಯರಿಂದ ದೂರದಿಂದಲೇ ವರ್ಜ್ಯನಾಗಿದ್ದಾನೆ ಎನ್ನುವ ಕಾರಣದಿಂದ ವಜ್ರಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಮುಗಿಯಿತು ॥

**तत्वप्रकाशिका –**

**॥ ॐ कम्पनात् ॐ ॥**

**अत्र लोकप्रसिद्ध्या भगवल्लिङ्गेन च साधारणवज्रनाम्नो हरौ समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयति ।। यदिदमिति ।।**

ಈ ಅಧಿಕರಣದಲ್ಲಿ ವಜ್ರಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಲೋಕಪ್ರಸಿದ್ಧಿಯಿಂದ ಆಯುಧವಿಶೇಷವನ್ನು ಪ್ರತಿಪಾದನೆ ಮಾಡಿದರೆ, ಮೋಕ್ಷಸಾಧನಜ್ಞಾನವಿಷಯತ್ವವೆಂಬ ಧರ್ಮದಿಂದ ಪರಮಾತ್ಮನ ಲಿಂಗವೂ ಆಗಿದೆ. ಹೀಗೆ, ಉಭಯಸಾಧಾರಣವಾದ ವಜ್ರಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುವುದರಿಂದ ಶಾಸ್ತ್ರಸಂಗತಿ-ಅಧ್ಯಾಯಸಂಗತಿ-ಪಾದಸಂಗತಿಗಳು ಇರುತ್ತವೆಂದು ತಿಳಿಯಬೇಕು. ಶ್ರುತಿಸಂಗತಿ-ಅಧಿಕರಣಸಂಗತಿ ಹಾಗೂ ವಿಷಯಾದಿಗಳನ್ನು 'ಯದಿದಮ್' ಇತ್ಯಾದಿ ಭಾಷ್ಯದಿಂದ ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – तमेवं विद्वानित्यादौ भगवज्ज्ञानादेव मोक्ष इत्युक्तम् । काठके तु यदिदं किञ्चेति वज्रज्ञानान्मोक्षः श्रूयते ।**

'ತಮೇವಂ ವಿದ್ವಾನ್' ಇತ್ಯಾದಿ ಶ್ರುತಿಯಲ್ಲಿ ಭಗವಂತನ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳಲಾಗಿದೆ. ಆದರೆ, ಕಾಠಕೋಪನಿಷತ್ತಿನಲ್ಲಿ 'ಯದಿದಂ ಕಿಂಚ' ಇತ್ಯಾದಿಯಾಗಿ ವಜ್ರಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಲಾಗಿದೆ.

**तत्वप्रकाशिका – तस्यच विष्णोरन्यत्वेऽन्यज्ञानान्मो (क्षापत्ते) क्षोपपत्तेरवश्यं निर्णेयत्वम् । स वज्रोऽत्र विषयः ।**

ಆ ವಜ್ರನು ವಿಷ್ಣುವಿಗಿಂತ ಬೇರೆಯಾದರೆ ಅನ್ಯಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಒಪ್ಪಬೇಕು. ಆದ್ದರಿಂದ ಅವಶ್ಯವಾಗಿ ವಜ್ರಶಬ್ದಪ್ರತಿಪಾದ್ಯರು ಯಾರು? ಎಂಬುದನ್ನು ನಿರ್ಣಯಿಸಬೇಕು. ಹಾಗಾಗಿ ವಜ್ರಶಬ್ದವೇ ಈ ಅಧಿಕರಣದ ವಿಷಯವಾಗಿದೆ.

**तत्वप्रकाशिका – किं विष्णुरिन्द्रायुधं वेति सन्देहः । उक्तसाधारण्यं सन्देहबीजम् । इन्द्रायुधमेवेदं वज्रमिति पूर्वः पक्षः ।**

ವಜ್ರವೆಂದರೆ ವಿಷ್ಣುವೋ, ಅಥವಾ ಇಂದ್ರಾಯುಧವೋ? ಎಂಬುದು ಸಂದೇಹ. ಉಭಯತ್ರ ಪ್ರಸಿದ್ಧಿಯಿರುವುದೇ ಸಂಶಯಬೀಜ. ವಜ್ರಶಬ್ದವಾಚ್ಯವಾದದ್ದು ಇಂದ್ರಾಯುಧವೆಂದು ಪೂರ್ವಪಕ್ಷ.

**तत्वप्रकाशिका – वज्रश्रुतेस्तत्ररूढत्वादुद्यतत्वलिङ्गाच्च । तद्धि आयुध एवोपपद्यते ।**

ವಜ್ರಶಬ್ದವು ಇಂದ್ರಾಯುಧದಲ್ಲಿ ರೂಢವಾಗಿದೆ. ಮತ್ತು ಉದ್ಯತತ್ವವೆಂಬ ಲಿಂಗವೂ ಸಹ ಇಂದ್ರಾಯುಧದಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಇಂದ್ರಾಯುಧವೇ ವಜ್ರಶಬ್ದಪ್ರತಿಪಾದ್ಯ.

**तत्वप्रकाशिका – नच वज्रज्ञानेन मोक्षाक्तेर्विष्णुरिति वाच्यम् । लिङ्गमात्रात् श्रुतिलिङ्गयोः प्राबल्यात् ।**

ಈ ಶ್ರುತಿಯಲ್ಲಿ ವಜ್ರಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಲಾಗಿದೆ. ಆದ್ದರಿಂದ ವಿಷ್ಣುವನ್ನು ವಜ್ರಶಬ್ದಪ್ರತಿಪಾದ್ಯನೆಂದು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಮೋಕ್ಷಸಾಧನಜ್ಞಾನ-ವಿಷಯತ್ವವೆಂಬ ಕೇವಲ ಒಂದು ಲಿಂಗಕ್ಕಿಂತ ಶ್ರುತಿಲಿಂಗಗಳೆರಡೂ ಇರುವುದರಿಂದ ಇದೇ ಪ್ರಬಲವಾಗುತ್ತದೆ. ಆದ್ದರಿಂದ ವಜ್ರಾಯುಧವೇ ವಜ್ರಶಬ್ದಪ್ರತಿಪಾದ್ಯವೆಂದು ಹೇಳಬೇಕು.

**तत्वप्रकाशिका – नच लिङ्गस्य निरवकाशतया प्राबल्यम् । श्रुतिलिङ्गयोरपि तथात्वात् ।**

ಇನ್ನು ಮೋಕ್ಷಸಾಧನಜ್ಞಾನವಿಷಯತ್ವವೆಂಬ ಲಿಂಗವು ನಿರವಕಾಶವಾದ್ದರಿಂದ ಶ್ರುತಿಲಿಂಗಗಳಿಗಿಂತಲೂ ಪ್ರಬಲವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಲಿಂಗಗಳೆರಡೂ ಕೂಡ ನಿರವಕಾಶವೇ ಆಗಿವೆ.

**तत्वप्रकाशिका – अतो वज्रमिन्द्रायुधमेवेति न विष्णुज्ञानादेव मोक्ष इति भावः ।**

ಆದ್ದರಿಂದ ವಜ್ರವೆಂದರೆ ಇಂದ್ರಾಯುಧವೆಂದೇ ಹೇಳಬೇಕು. ವಿಷ್ಣುಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳಿದ್ದು ತಪ್ಪಾಗುತ್ತದೆ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – यत्किञ्च सर्वं जगत्प्राणे स्थितं प्राणान्निःसृतं तदिदं जगद्यस्मादेजति यत्प्रेरणया चेष्टते तन्महद्भयंकरं वज्रं ये विदुस्तेऽमृता भवन्तीत्यर्थः।**

ಶ್ರುತ್ಯರ್ಥ ಹೀಗಿದೆ. ಯಾವ ಈ ಜಗತ್ತು ಪ್ರಾಣನಲ್ಲೇ ಇರುತ್ತದೋ, ಪ್ರಾಣನಿಂದಲೇ ಉತ್ಪನ್ನವಾಗುತ್ತದೋ, ಅಂತಹ ಸಕಲ ವಿಶ್ವವೂ ಯಾರ ಪ್ರೇರಣೆಯಿಂದ ವ್ಯಾಪಾರ ಮಾಡುತ್ತದೋ, ಅಂತಹ ಮಹಾಭಯಂಕರವಾದ ವಜ್ರವನ್ನು ಯಾರು ತಿಳಿಯುತ್ತಾರೋ, ಅವರು ಮುಕ್ತರಾಗುತ್ತಾರೆ ಎಂದು.

**तत्वप्रकाशिका – प्राणः सर्वमिदं किञ्च जगच्च यस्मान्निःसृतं चेष्टते चेति वा । सर्वं जगद्यस्मान्निःसृतं स प्राणो यस्माच्चेष्टत इति वा ।**

ಅಥವಾ ಪ್ರಾಣ ಮತ್ತು ಪ್ರಪಂಚವು ಯಾರಿಂದ ಹುಟ್ಟಿದೆಯೋ, ಮತ್ತು ಚೇಷ್ಟೆ ಮಾಡುತ್ತದೆಯೋ ಎಂದರ್ಥ. ಅಥವಾ ಸಕಲ ಜಗತ್ತು ಯಾರಿಂದ ಹುಟ್ಟಿತೋ, ಆ ಪ್ರಾಣನು ಯಾರಿಂದ ವ್ಯಾಪಾರ ಮಾಡುತ್ತಾನೋ, ಎಂದೂ ಸಹ ಅರ್ಥೈಸಬಹುದು.

**तत्वप्रकाशिका – सिद्धान्तयत्सूत्रमतार्य व्याचष्टे – अत इति ।। अयं वज्रो भगवानेव । वज्रस्य सर्वजगच्चेष्टकत्वश्रवणात् । न चोद्यतत्वलिङ्गविरोधः । उद्यमित्वार्थतयोपपत्तेरिति भावः ।**

ಸಿದ್ಧಾಂತ ಸ್ಥಾಪನೆ ಮಾಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತಃ' ಇತ್ಯಾದಿಯಾಗಿ. ಶ್ರುತಿಯಲ್ಲಿರುವ ವಜ್ರಶಬ್ದದಿಂದ ಭಗವಂತನೇ ಪ್ರತಿಪಾದ್ಯನು. ಏಕೆಂದರೆ, ಸರ್ವಜಗಚ್ಚೇಷ್ಟಕತ್ವವೆಂಬ ಧರ್ಮವು ವಜ್ರನಲ್ಲಿ ಶ್ರುತವಾಗಿದೆ. ವಜ್ರಶಬ್ದಕ್ಕೆ ವಿಷ್ಣುವೆಂಬರ್ಥವನ್ನು ಮಾಡಿದರೆ, ಉದ್ಯತತ್ವವೆಂಬ ಲಿಂಗದ ವಿರೋಧ ಬರುತ್ತದೆಂದು ಹೇಳಬಾರದು. ಏಕೆಂದರೆ 'ಉದ್ಯತ' ಎಂದರೆ 'ಉದ್ಯಮಿತ್ವ' ಎಂದರ್ಥವಾಗುತ್ತದೆ.

**तत्वप्रकाशिका – लिङ्गमात्रेण कथमयं निश्चयः । लिङ्गस्य निरवकाशत्वादेवेत्याह – को हीति ।।**

'ಮೋಕ್ಷಸಾಧನಜ್ಞಾನಾಶ್ರಯತ್ವ' ಎಂಬ ಕೇವಲ ಲಿಂಗಕ್ಕಿಂತಲೂ ವಜ್ರಶಬ್ದಕ್ಕೆ ವಿಷ್ಣುವೆಂದು ನಿಶ್ಚೈಸುವುದು ಹೇಗೆ? ಎಂದರೆ, ಲಿಂಗವು ನಿರವಕಾಶವಾಗಿರುವುದರಿಂದ ಎಂಬಭಿಪ್ರಾಯದಿಂದ 'ಕೋ ಹಿ' ಎಂಬ ಪ್ರಮಾಣವನ್ನು ಉಲ್ಲೇಖಿಸುತ್ತಿದ್ದಾರೆ.

**तत्वप्रकाशिका – यदा सामान्यतो जगच्चेष्टकत्वमेव विष्ण्वेकनिष्ठं तदा सुतरां वज्रस्योक्तं सर्वप्रवर्तकप्राणचेष्टकत्वं तदेकनिष्ठमिति भावेनाऽऽह – प्राणस्येति ।।**

ಸಾಮಾನ್ಯತಃ ಜಗಚ್ಚೇಷ್ಟಕತ್ವವು ವಿಷ್ಣುವಿಗೆ ಮಾತ್ರ ಇದೆ ಎಂದು ಸಿದ್ಧವಾದ ಮೇಲೆ ಶ್ರುತಿಯಲ್ಲಿ ವಜ್ರನಿಗೆ ಹೇಳಲ್ಪಟ್ಟ ಸರ್ವಪ್ರವರ್ತಕತ್ವ, ಪ್ರಾಣಚೇಷ್ಟಕತ್ವಗಳೂ ಕೂಡ ವಿಷ್ಣುವಿನಲ್ಲಿ ಮಾತ್ರ ಬರುತ್ತವೆಂದು ಸ್ಪಷ್ಟಪಡಿಸಲು 'ಪ್ರಾಣಸ್ಯ' ಇತ್ಯಾದಿ ವಾಕ್ಯವು ಹೊರಟಿದೆ.

**तत्वप्रकाशिका – ननूद्यतत्वलिङ्गस्य सावकाशत्वेऽपि वज्रश्रुतेर्निरवकाशत्वान्निरवकाशेनापि लिङ्गेन कथं निर्णय इत्यतः श्रुतेरपि विष्णाववकाशं स्मृत्या दर्शयति – चक्रमिति ।।**

'ಉದ್ಯತತ್ವ' ಎಂಬ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿದ್ದರೂ ಈ ಮಂತ್ರದಲ್ಲಿ ಶ್ರುತವಾದ ವಜ್ರಶ್ರುತಿಯು ನಿರವಕಾಶವಾಗಿರುವುದರಿಂದ ಮೋಕ್ಷಸಾಧನಜ್ಞಾನಾಶ್ರಯತ್ವವೆಂಬ ನಿರವಕಾಶ-ಲಿಂಗದಿಂದ ವಜ್ರಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ, ಎಂದು ಹೇಗೆ ನಿರ್ಧರಿಸುವುದು? ಎಂಬ ಪ್ರಶ್ನೆಗೆ ಸ್ಮೃತಿಯ ಆಧಾರದಿಂದ ವಿಷ್ಣುವಿನಲ್ಲಿ ವಜ್ರಶಬ್ದವು ಸಾವಕಾಶವಾಗಿದೆ ಎಂದು ತೋರಿಸುತ್ತಿದ್ದಾರೆ, 'ಚಕ್ರಮ್' ಇತ್ಯಾದಿಯಾಗಿ.

**तत्वप्रकाशिका – नच योगस्य रूढेदौर्बल्यादनिर्णय इति वाच्यम् । स्मृत्युक्तत्वेन विद्वद्रूढरपि सत्त्वम् । आयुधानामहं वज्रम् । वज्रं प्रहरणोत्तमम् इति च ।**

ರೂಢಿಗಿಂತಲೂ ಯೋಗವು ದುರ್ಬಲವಾದ್ದರಿಂದ ಹೇಗೆ ನಿರ್ಣಯಿಸುತ್ತೀರಿ? ಎಂದು ಪ್ರಶ್ನಿಸಬಾರದು. ಸ್ಮೃತಿಯಲ್ಲಿ ಹಾಗೆ ಹೇಳಿರುವುದರಿಂದ ವಿದ್ವದ್ರೂಢಿಯು ಇರುತ್ತದೆಂದು ತಿಳಿಯಬೇಕು. ಮತ್ತು, 'ಆಯುಧಾನಾಮಹಂ ವಜ್ರಮ್' 'ವಜ್ರಂ ಪ್ರಹರಣೋತ್ತಮಮ್' ಹೀಗೆ ವಜ್ರಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆನ್ನಲು ಪ್ರಮಾಣವಿರುತ್ತದೆ.

ಕಂಪನಾಧಿಕರಣ (೧-೩-೧೧)

**तत्वप्रकाशिका – नन्वेवं सावकाशत्वे श्रुतिलिङ्गयोर्य एतद्विदुरित्युक्तलिङ्गं विहाय किं लिङ्गान्तरग्रहणेन । मैवम् । तदविहायैव लिङ्गान्तरस्याप्युक्तत्वात् । एतदन्यत्राप्यनुसन्धेयम् । अतो विष्णुरेव वज्र इति तज्ज्ञानादेव मोक्ष इति सिद्धम् ॥ ३९ ॥**

**॥ इति श्रीमज्जयतीर्थभिक्षुविरचितायां तत्वप्रकाशिकायाम् कम्पनाधिकरणम् ॥**

ವಜ್ರಶ್ರುತಿ ಹಾಗೂ ಉದ್ಧೃತತತ್ವಲಿಂಗಗಳೆರಡು ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಆದರೆ, 'ಯ ಏತದ್ವಿದುರಮೃತಾಸ್ತೇ ಭವಂತಿ' ಎಂಬ ಪ್ರಮಾಣದಿಂದ ಹೇಳಲ್ಪಟ್ಟ ಮೋಕ್ಷಸಾಧನಜ್ಞಾನವಿಷಯತ್ವವೆಂಬ ಲಿಂಗವನ್ನು ಬಿಟ್ಟು 'ಜಗದ್ವ್ಯಾಪಾರಕಾರಿತ್ವ' ಎಂಬ ಮತ್ತೊಂದು ಲಿಂಗವನ್ನು ಏಕೆ ಸ್ವೀಕರಿಸಿದರು? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. 'ಮೋಕ್ಷಸಾಧನಜ್ಞಾನಾಶ್ರಯತ್ವ' ಎಂಬ ಲಿಂಗವನ್ನು ಬಿಡದೆ ಬೇರೆ ಲಿಂಗವನ್ನು ಸ್ವೀಕರಿಸಿದ್ದಾರೆಂದು. ಇದರಂತೆ ಬೇರೆ ಕಡೆ ಎಲ್ಲೆಲ್ಲಿ ಭಾಷ್ಯಕಾರರು ಸೂತ್ರದಲ್ಲಿ ಹೇಳದ ಮತ್ತೊಂದು ಲಿಂಗವನ್ನು ಹೇಳಿರುತ್ತಾರೋ, ಅಲ್ಲಿ ಇದೇ ನಿರ್ಣಯವನ್ನು ಹೇಳಬೇಕು. ಆದ್ದರಿಂದ ವಜ್ರಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಮುಗಿಯಿತು

**भावदीपः –**

**॥ ॐ कम्पनात् ॐ ॥**

न्यायविवरणेऽनुक्तेर्भाष्यदिशा स्वयं साधारण्यमाह – **लोकेति** ॥ एवं हि प्राणाकाशाद्याद्यपादीयनाम्नामप्येवं स्यादिति चोद्यनिरासादि तु चन्द्रिकायां व्यक्तम् । सङ्गतिपरत्वेन तावद् भाष्यं व्याचष्टे – **तमेवमिति** ॥ 'नेतरोऽनुपपत्तेः' इति सूत्रभाष्ये उक्तमित्यर्थः । शेषोऽयम् ।

ನ್ಯಾಯವಿವರಣದಲ್ಲಿ ವಜ್ರಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಹೇಳಿರುವುದಿಲ್ಲ. ಅದಕ್ಕೋಸ್ಕರ ಭಾಷ್ಯದ ರೀತಿಯಲ್ಲಿ ಸ್ವತಃ ಟೀಕಾಕಾರರು ಉಭಯಸಾಧಾರಣ್ಯವನ್ನು ವಜ್ರಶಬ್ದಕ್ಕೆ ಸಮರ್ಥನೆ ಮಾಡುತ್ತಿದ್ದಾರೆ– 'ಲೋಕಪ್ರಸಿದ್ಧ್ಯಾ' ಇತ್ಯಾದಿಯಾಗಿ. ವಜ್ರಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವು ಬಂದಂತೆ, ಪ್ರಥಮ ಪಾದದಲ್ಲಿ

ಸಮನ್ವಯ ಮಾಡಿದ ಆಕಾಶ ಮೊದಲಾದ ಪದಗಳಿಗೂ ಉಭಯತ್ರ ಪ್ರಸಿದ್ಧತ್ವವು ಬರಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ತಾತ್ಪರ್ಯಚಂದ್ರಿಕೆಯಲ್ಲಿಯೇ ಉತ್ತರವನ್ನು ನೀಡಿದ್ದಾರೆ. ಸಂಗತಿಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತಮೇವಂ ವಿದ್ವಾನ್' ಇತ್ಯಾದಿ ಟೀಕೆಯು ಹೊರಟಿದೆ. 'ಇತ್ಯುಕ್ತಂ' ಎಂದರೆ 'ನೇತರೋಽನುಪಪತ್ತೇಃ' ಎಂಬ ಸೂತ್ರದ ಭಾಷ್ಯದಲ್ಲಿ ಭಗವದ್‌ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳಲಾಗಿದೆ. ಹೀಗೆ ಶೇಷಪೂರಣ ಮಾಡಿಕೊಳ್ಳಬೇಕು.

**भावदीपः** – उद्यतवज्रेति पदद्वयभावमाह – **तस्य चेति** ।। वज्रश्रुतेरुद्यतत्व-लिङ्गाचेन्द्रायुधत्व इत्यर्थः । अध्याहृतवाक्यभावमाह – **अन्यज्ञानेति**।। इति सङ्गतिसम्भवान्निर्णेयत्वं तस्येत्यन्वयः । पूर्वपक्षतद्युक्तितत्फलोक्तिपरत्वेनापि भाष्यं व्याचष्टे – **इन्द्रायुधमिति** ।।

ಶ್ರುತಿಯಲ್ಲಿರುವ 'ಉದ್ಯತ' ಮತ್ತು 'ವಜ್ರ' ಎಂಬೆರಡು ಪದಗಳ ಅಭಿಪ್ರಾಯವನ್ನು 'ತಸ್ಯ ಚ' ಎಂದು ಹೇಳಿದ್ದಾರೆ. ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳು ಇಂದ್ರಾಯುಧವೇ ಪ್ರತಿಪಾದ್ಯವೆಂದು ಸಮರ್ಥನೆ ಮಾಡುತ್ತಿವೆ ಎಂದು ಇದರ ಅರ್ಥ. 'ತಮೇವಂ ವಿದ್ವಾನ್' ಇತ್ಯಾದಿಯಾಗಿ ಅಧ್ಯಾಹಾರ ಮಾಡಿಕೊಂಡ ವಾಕ್ಯದ ಅಭಿಪ್ರಾಯವನ್ನು 'ಅನ್ಯಜ್ಞಾನಾತ್' ಎಂಬುದರಿಂದ ಹೇಳಿದ್ದಾರೆ. ಹೀಗೆ ಸಂಗತಿಯು ಉಪಪನ್ನವಾಗುವುದರಿಂದ ವಜ್ರಶಬ್ದದ ಅರ್ಥವನ್ನು ಅವಶ್ಯವಾಗಿ ನಿರ್ಣಯಿಸಬೇಕೆಂದು ವಾಕ್ಯದ ಅನ್ವಯ ತಿಳಿಯಬೇಕು. ಪೂರ್ವಪಕ್ಷ ಹಾಗೂ ಪೂರ್ವಪಕ್ಷಯುಕ್ತಿ, ಪೂರ್ವಪಕ್ಷ ಫಲಗಳನ್ನು ಭಾಷ್ಯದ ವಾಕ್ಯದಿಂದ ತೋರಿಸುತ್ತಿದ್ದಾರೆ, 'ಇಂದ್ರಾಯುಧಂ' ಇತ್ಯಾದಿಯಾಗಿ.

**भावदीपः** – वज्रशब्द उद्यतत्वलिङ्गं चेति तादृग्द्वयमिति न्यायविवरणानुरोधेनो द्यतवज्रेति पदद्वयं श्रुतिलिङ्गरूपयुक्तिपरत्वेन व्याचष्टे – **वज्रश्रुतेरिति** ।। योगवृत्त्या श्रुतिर्विष्णावस्त्वित्यत आह – **तत्र रूढत्वादिति** ।। तथात्वे सर्वशब्दानां सर्वत्र यौगिकत्वसम्भवेनाव्यवस्थानात् प्राणाकाशादिशब्देष्वपि हरौ योगवृत्तिरिह पूर्वपक्षे न सम्मतेति भावः ।

'ವಜ್ರಶಬ್ದಃ ಉದ್ಯತತ್ವಲಿಂಗಂ ಚೇತಿ ತಾದೃಗ್‌ದ್ವಯಂ' ಎಂಬುದಾಗಿ ನ್ಯಾಯವಿವರಣದಲ್ಲಿ ಹೇಳಿರುತ್ತಾರೆ. ಅದಕ್ಕನುಸಾರಿಯಾಗಿ 'ಉದ್ಯತ' ಮತ್ತು 'ವಜ್ರ' ಎಂಬೆರಡು ಪದಗಳು ಶ್ರುತಿ ಹಾಗೂ ಯುಕ್ತಿರೂಪವಾಗಿ ಶ್ರುತವಾಗಿವೆ ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ – 'ವಜ್ರಶ್ರುತೇಃ' ಇತ್ಯಾದಿಯಾಗಿ. ವಜ್ರಶ್ರುತಿಯನ್ನು ಯೌಗಿಕವಾಗಿ ವಿಷ್ಣುವಿನಲ್ಲಿ ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ತತ್ರ ರೂಢತ್ವಾತ್' ಎಂದು ಉತ್ತರಿಸಿದ್ದಾರೆ.

ಹಾಗೆ ವಿಷ್ಣುವಿನಲ್ಲಿ ಯೌಗಿಕಾರ್ಥವನ್ನು ಹೇಳುವುದಾದರೆ ಸಕಲ ಶಬ್ದಗಳೂ ಎಲ್ಲೆಡೆಯೂ ಯೌಗಿಕವಾಗಿ ಉಪಪನ್ನವಾಗಬಹುದಾದ್ದರಿಂದ ಈ ಶಬ್ದವು ಇದೇ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತದೆಂಬ ವ್ಯವಸ್ಥೆಯನ್ನೇ ಕೂಡಿಸಲಾಗದು. ಆದ್ದರಿಂದ, ವಜ್ರಶ್ರುತಿಪ್ರಕರಣದಲ್ಲಿ ಕೇಳಿಸುತ್ತಿರುವ ಪ್ರಾಣ, ಆಕಾಶ ಮೊದಲಾದ ಶಬ್ದಗಳಿಗೂ ಸಹ ಶ್ರೀಹರಿಯಲ್ಲಿ ಯೋಗವೃತ್ತಿಯನ್ನು ಹೇಳುವುದು ಪೂರ್ವಪಕ್ಷಕಾರರಿಗೆ ಸಮ್ಮತವಲ್ಲವೆಂದು ತಿಳಿಯಬೇಕು.

**भावदीपः** – लिङ्गस्यापि निरवकाशत्वमाह – **तद्धीति** ।। तेनेन्द्रो वज्रमुद्यच्छन्। उद्यतायुधदोर्दण्डा इत्यादावायुधे प्रसिद्धत्वादिति हेरर्थः । श्रुतिलिङ्गोपयोक्तेरुपयोगं वक्तुमाह – **नचेति** ।। द्वयोरपि निरवकाशत्वोक्तेः फलमाह – **नच लिङ्गस्येति** ।। एतेन तादृग्द्वयमित्येतद् विवृतं ध्येयम् । फलोक्त्योपसंहरति – **अत इति** ।। निरवकाशश्रुतिलिङ्गाभावादित्यर्थः ।

'ಉದ್ಯತತ್ವ' ಎಂಬ ಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥಿಸಲು 'ತದ್ಧಿ:' ಎಂಬ ವಾಕ್ಯವು ಹೊರಟಿದೆ. ಆದ್ದರಿಂದ 'ಇಂದ್ರೋ ವಜ್ರಮುದ್ಯಚ್ಛನ್' 'ಉದ್ಯತಾಯುಧದೋರ್ದಂಡಾಃ' ಇತ್ಯಾದಿ ಸ್ಥಳಗಳಲ್ಲಿ ವಜ್ರಶಬ್ದವು ಆಯುಧದಲ್ಲಿಯೇ ಪ್ರಸಿದ್ಧವಾಗಿದೆ. ಇದನ್ನು 'ತದ್ಧಿ' ಎಂಬಲ್ಲಿರುವ 'ಹಿ' ಪದವು ಹೇಳುತ್ತಿದೆ ಎಂದಂತಾಯಿತು. ಶ್ರುತಿ ಹಾಗೂ ಲಿಂಗಗಳನ್ನು ಹೇಳಿದ್ದರ ಉಪಯೋಗವನ್ನು ತೋರಿಸಲು 'ನಚ' ಎಂಬ ವಾಕ್ಯವು ಹೊರಟಿದೆ. ಎರಡೂ ಸಹ ನಿರವಕಾಶವಾದ್ದರಿಂದ ಏನು ಸಿದ್ಧವಾಯಿತು? ಎಂಬುದನ್ನು 'ನಚ ಲಿಂಗಸ್ಯ' ಎಂಬ ವಾಕ್ಯದಿಂದ ಹೇಳಿದ್ದಾರೆ. ಇದರಿಂದ 'ತಾದೃಗ್ದ್ವಯಂ' ಎಂಬ ನ್ಯಾಯವಿವರಣವನ್ನು ವಿವರಿಸಿದಂತಾಯಿತು.

ಪೂರ್ವಪಕ್ಷದ ಫಲವನ್ನು ಉಪಸಂಹಾರ ಮಾಡುತ್ತಿದ್ದಾರೆ, 'ಅತಃ' ಎಂಬ ವಾಕ್ಯದಿಂದ. ನಿರವಕಾಶವಾದ ಶ್ರುತಿ ಹಾಗೂ ಲಿಂಗಗಳಿರುವುದರಿಂದ ಎಂದು 'ಅತಃ' ಶಬ್ದಕ್ಕೆ ಅರ್ಥ.

**भावदीपः** – श्रुतित्वनिरवकाशत्वाभ्यां प्रबलवज्रश्रुत्यैव निरवकाशस्वभावदुर्बललिङ्गबाधः सुशकः । तथाप्यभ्युचयतया लिङ्गोक्तिः कम्पकत्वरूपसिद्धान्तलिङ्गस्य वज्रनिष्ठताद्योतनाय । 'प्राणाख्ये तु हरौ सर्वमेजत्यस्माच्च निःसृतम् । वज्रवद् भयदं चैव स्वधर्मस्यातिलङ्घने ।।' इति काठकभाष्यानुरोधेन 'को हि' इति वक्ष्यमाणवाक्यानुगुणं श्रुत्यर्थमाह – **यत्किञ्चेति** ।।

ವಜ್ರಶ್ರುತಿಯು ನಿರವಕಾಶ ಪ್ರಯುಕ್ತವಾಗಿ ಮತ್ತು ಸ್ವಾಭಾವಿಕವಾಗಿ ಪ್ರಬಲವಾಗಿದೆ. ಇದರಿಂದ ದುರ್ಬಲವಾದ ಲಿಂಗವು ಬಾಧಿತವಾಗುವುದೆಂದು ಹೇಳಬಹುದು. ಆದರೂ ಸಹ, 'ಅಭ್ಯುಚ್ಚಯ' ಯುಕ್ತಿಗಾಗಿ ಲಿಂಗವನ್ನು ಹೇಳಿರುತ್ತಾರೆ. ಅಂದರೆ, 'ಕಂಪಕತ್ವ' ಎಂಬ ಸಿದ್ಧಾಂತಲಿಂಗಕ್ಕೆ ವಜ್ರನಿಷ್ಠತ್ವವನ್ನು

ತೋರಿಸುವುದಕ್ಕಾಗಿ. 'ಪ್ರಾಣಾಖ್ಯೇ ತು ಹರೌ ಸರ್ವಂ ಏಜತ್ಯಸ್ಮಾಚ್ಚ ನಿಃಸೃತಮ್ । ವಜ್ರವತ್ ಭಯದಂ ಚೈವ ಸ್ವಧರ್ಮಸ್ಯಾತಿಲಂಘನೇ ॥' ಎಂದು ಕಾಠಕಭಾಷ್ಯದಲ್ಲಿ ಹೇಳಿದಂತೆ 'ಕೋ ಹಿ' ಎಂಬ ಮುಂದಿನ ವಾಕ್ಯಕ್ಕೆ ಅನುಗುಣವಾಗಿ ಶ್ರುತಿಯ ಅರ್ಥವನ್ನು 'ಯತ್ಕಿಂಚ ಸರ್ವಂ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ.

**भावदीपः** – स्थितमित्युक्त्या तद्भाष्योक्तस्मृतावपि शेष इति दर्शितम् । स्मृतावस्मादिति पदं पूर्वत्रोत्तरत्र चान्वेतीति मत्वा श्रुतौ प्राणपदस्याऽवृत्तिविपरिणामाभ्यामर्थमाह – **प्राणादिति** ।। यदित्युक्तिलब्धोक्तिः – **तदिति** ।। यदित्यस्याऽवृत्त्या वा यत्तच्छब्दावध्याहृत्य वाऽर्थमाह – **यस्मादिति** ।।

'ಸ್ಥಿತಂ' ಎಂದು ಹೇಳಿದ್ದರಿಂದ ಕಾಠಕಭಾಷ್ಯದ ಸ್ಮೃತಿಯಲ್ಲಿಯೂ ಇದನ್ನು ಶೇಷಪೂರಣ ಮಾಡಿಕೊಳ್ಳಬೇಕೆಂದು ಹೇಳಿದಂತಾಯಿತು. ಸ್ಮೃತಿಯಲ್ಲಿರುವ 'ಅಸ್ಮಾತ್' ಎಂಬ ಪದವು ಮೊದಲು ಮತ್ತು ಅನಂತರ ಅನ್ವಯವನ್ನು ಹೊಂದುತ್ತದೆಂದು ವಿವಕ್ಷಿಸಿ ಶ್ರುತಿಯಲ್ಲಿರುವ ಪ್ರಾಣಪದಕ್ಕೆ ಆವೃತ್ತಿ ಹಾಗೂ ವಿಪರಿಣಾಮಗಳಿಂದ ಅರ್ಥವನ್ನು ಹೇಳುತ್ತಿದ್ದಾರೆ 'ಪ್ರಾಣ' ಇತ್ಯಾದಿಯಾಗಿ. 'ಯತ್' ಎಂಬುದರಿಂದ 'ತತ್' ಎಂಬುದು ತಿಳಿಯುತ್ತದೆ. 'ಯತ್' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳುವುದರಿಂದ 'ಯತ್ತತ್' ಶಬ್ದಗಳನ್ನು ಅಧ್ಯಾಹಾರ ಮಾಡಿ ಅರ್ಥವನ್ನು ಹೇಳಿದ್ದಾರೆ 'ಯಸ್ಮಾದ್' ಇತ್ಯಾದಿಯಾಗಿ.

**भावदीपः** – प्राणस्य प्राणमिति वक्ष्यमाणश्रुत्यनुरोधेन क्रमेणार्थान्तरद्वयमाह – **प्राण इत्यादिना** ।। यद्वा द्वितीयोऽपि को हीति वाक्यानुगुणः । तृतीयस्तु प्राणस्येत्यादि श्रुतिस्मृत्यनुगुण इति ध्येयम् । एजतीत्यादिभाष्यं व्याचष्टे – **अयमिति** ।। प्रागुक्तमाद्यं श्रुत्यर्थमुपेत्याह – **वज्रस्येति** ।।

'ಪ್ರಾಣಸ್ಯ ಪ್ರಾಣಮ್' ಎಂಬ ಮುಂದೆ ಹೇಳುವ ಶ್ರುತಿಗೆ ಅನುಸಾರಿಯಾಗಿ ಕ್ರಮವಾಗಿ ಎರಡು ಅರ್ಥಗಳನ್ನು ಹೇಳುತ್ತಿದ್ದಾರೆ, 'ಪ್ರಾಣಃ' ಇತ್ಯಾದಿಯಾಗಿ. ಅಥವಾ, ಎರಡನೆಯ ಅರ್ಥವು 'ಕೋ ಹಿ' ಎಂಬ ವಾಕ್ಯಕ್ಕೆ ಅನುಗುಣವಾಗಿದೆ. ಮೂರನೆಯ ಅರ್ಥವು 'ಪ್ರಾಣಸ್ಯ' ಇತ್ಯಾದಿ ಶ್ರುತಿಸ್ಮೃತಿಗೆ ಅನುಗುಣವಾಗಿದೆ ಎಂದು ತಿಳಿಯಬೇಕು. 'ಏಜತಿ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಅಯಂ ವಜ್ರಃ' ಇತ್ಯಾದಿಯಾಗಿ ಹೇಳಿದ್ದಾರೆ. ಹಿಂದೆ ಹೇಳಿದ ಮೊದಲನೆಯ ಶ್ರುತ್ಯರ್ಥವನ್ನು ಅಂಗೀಕರಿಸಿ 'ವಜ್ರಸ್ಯ' ಎಂಬ ವಾಕ್ಯವು ಹೊರಟಿದೆ.

**भावदीपः** – उद्यमित्वमेवोद्यतत्वमिति न्यायविवरणदिशोद्यतवज्र इत्युक्तोद्यतपद-प्रयोगतात्पर्यमाह – **नचेति** ।। उत्पूर्वस्य 'यती प्रयत्ने' इत्यस्य कर्तर्यकारप्रत्यये

सति उद्यतः उत्कृष्टप्रयत्नवानित्यर्थ इत्यर्थः । को हीति श्रुत्यर्थस्तु तद्धेतुसूत्रे प्रागेवोक्त इति भावः ।। सर्वप्रवर्तकेति ।।

'ಉದ್ಯಮಿತ್ವಮೇವ ಉದ್ಯತತ್ವಮ್' ಎಂಬ ನ್ಯಾಯವಿವರಣಕ್ಕೆ ಅನುಸಾರಿಯಾಗಿ 'ಉದ್ಯತವಜ್ರ' ಎಂಬಲ್ಲಿ ಹೇಳಿದ ಉದ್ಯತಪದಪ್ರಯೋಗದ ತಾತ್ಪರ್ಯವನ್ನು 'ನಚ' ಎಂಬ ಟೀಕೆಯಿಂದ ಹೇಳುತ್ತಿದ್ದಾರೆ. 'ಉತ್' ಎಂಬ ಉಪಸರ್ಗದಿಂದ ಕೂಡಿದ 'ಯತೀ ಪ್ರಯತ್ನೇ' ಎಂಬ ಧಾತುವಿಗೆ ಕರ್ತ್ರರ್ಥದಲ್ಲಿ 'ತಕಾರವು' ಬಂದು 'ಉದ್ಯತ' ಎಂಬ ಪದವು ನಿಷ್ಪನ್ನವಾಗಿದೆ. ಉತ್ಕೃಷ್ಟವಾದ ಪ್ರಯತ್ನವುಳ್ಳವನು ಎಂದು ಇದರ ಅರ್ಥ. 'ಕೋ ಹಿ' ಎಂಬ ಶ್ರುತಿಯ ಅರ್ಥವನ್ನು 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿಯೇ ಹೇಳಿದ್ದಾಗಿದೆ.

भावदीपः – यद्यपि श्रुतौ प्राणमिति द्वितीयान्तद्वितीयप्राणस्य 'प्राणादयो वाक्यशेषाद्' इत्यग्रे वक्ष्यमाणदिशा विष्णुत्वेऽपि प्राणस्येत्यस्य न सर्वप्रवर्तकत्वं श्रुतम् । तथा नभस्वत इति स्मृत्यनुरोधाद् 'यस्मिन् पञ्च पञ्चजनाः' इति प्रतिशरीरस्थत्वोक्त्या सर्वप्रवर्तकत्वमार्थिकमित्यभिप्रेत्य सर्वप्रवर्तकप्राणेत्युक्तम् । वज्रशब्दस्योद्यतत्वस्य च विष्णावेवावकाश इति न्यायविवरणे द्वयोः सावकाशत्वमुक्त्वा उद्यमित्वमेवोद्यतत्वमिति लिङ्गस्य तद् विवृतम् । श्रुतेः सावकाशत्वस्य तत्राविवृतत्वाच्चक्रमित्यादिभाष्यं श्रुतेः सावकाशत्वविवरणपरतया व्याख्याति – नन्वित्यादिना।।

ವಾಸ್ತವಿಕವಾಗಿ ಶ್ರುತಿಯಲ್ಲಿ 'ಪ್ರಾಣಂ' ಎಂದು ದ್ವಿತೀಯಾವಿಭಕ್ತ್ಯಂತವಾದ ಪ್ರಾಣಶಬ್ದವು ಶ್ರುತವಾಗಿದೆ. ಇದು 'ಪ್ರಾಣಾದಯೋ ವಾಕ್ಯಶೇಷಾತ್' ಎಂಬುದಾಗಿ ಮುಂದೆ ಹೇಳುವ ಪ್ರಕಾರ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ. ಆದರೆ, ಪ್ರಾಣನಿಗೆ ಸರ್ವಪ್ರವರ್ತಕತ್ವವು ಶ್ರುತಿಯಲ್ಲಿ ಕೇಳಿಸುತ್ತಿಲ್ಲ. ಅದರಂತೆ, 'ನತು ಸ್ವತಃ' ಎಂಬ ಸ್ಮೃತಿಗನುಸಾರಿಯಾಗಿ 'ಯಸ್ಮಿನ್ ಪಂಚ ಪಂಚಜನಾಃ' ಎಂಬ ಶ್ರುತಿಯಲ್ಲಿ ಪ್ರತಿಶರೀರದಲ್ಲಿಯೂ ಇರುತ್ತಾನೆಂದು ಹೇಳಿದ್ದರಿಂದ ಸರ್ವಪ್ರವರ್ತಕತ್ವವು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದಲೇ, ಇಲ್ಲಿ ಸರ್ವಪ್ರವರ್ತಕನು ಪ್ರಾಣ ಎಂದು ಹೇಳಲಾಗಿದೆ. ವಜ್ರಶಬ್ದ ಹಾಗೂ ಉದ್ಯತತ್ವ ಲಿಂಗಗಳಿಗೆ ವಿಷ್ಣುವಿನಲ್ಲಿ ಅವಕಾಶವಿದೆಯೆಂದು ನ್ಯಾಯವಿವರಣದಲ್ಲಿ ಸಾವಕಾಶತ್ವವನ್ನು ಹೇಳಿರುತ್ತಾರೆ. ಮತ್ತು, 'ಉದ್ಯಮಿತ್ವವೇ ಉದ್ಯತತ್ವ ಎನಿಸುತ್ತದೆ ಎಂಬುದಾಗಿ ಎಲ್ಲ ವಿಧವಾದ ವ್ಯಾಪಾರಗಳನ್ನು ಮಾಡಿಸುತ್ತಾನಾದ್ದರಿಂದ 'ಉದ್ಯತತ್ವ' ಎಂಬ ಲಿಂಗವು ಪರಮಾತ್ಮನಲ್ಲೇ ಬರುತ್ತದೆಂದು ಹೇಳಲಾಗಿದೆ. ಶ್ರುತಿಗೆ ಸಾವಕಾಶತ್ವವನ್ನು ನ್ಯಾಯವಿವರಣದಲ್ಲಿ ವಿವರಿಸಿಲ್ಲ. ಆದ್ದರಿಂದ, 'ಚಕ್ರಂ' ಇತ್ಯಾದಿ ಭಾಷ್ಯವು ಶ್ರುತಿಗೆ ಸಾವಕಾಶತ್ವವನ್ನು ಹೇಳುತ್ತಿದೆ ಎಂದು ವ್ಯಾಖ್ಯಾನ ಮಾಡಲು 'ನನು' ಇತ್ಯಾದಿ ಟೀಕೆಯು ಹೊರಟಿದೆ.

ಪರಿಪೂರ್ಣಚಂದ್ರಿಕಾ

**भावदीपः –** वर्जनात् सर्वदोषवर्जनादिति स्मृतावर्थः । यत्तु काठकभाष्ये वज्रवद् भयदं चेति गौणत्वमुक्तम्, तत् तावताऽपि तद्वाक्यस्य ब्रह्मपरत्वसिद्धेः । इह तु समन्वयसूत्रे प्रतिज्ञातमुख्यार्थत्वाय योग एवोक्त इत्युक्तं चन्द्रिकायाम् । अत एव भाष्यद्वये श्रुतेः सावकाशताया द्वेधा विवृतत्वान्न्यायविवरणेनैतद् विवृतम् ।

'ವರ್ಜನಾತ್' ಎಂದರೆ ಸಕಲ ದೋಷಗಳಿಂದ ರಹಿತನಾಗಿದ್ದಾನೆಂದರ್ಥ. ಕಾಠಕಭಾಷ್ಯದಲ್ಲಿ 'ವಜ್ರವದ್ ಭಯದಂ ಚ' ಎಂದು ವಜ್ರಶಬ್ದಕ್ಕೆ ಗೌಣಾರ್ಥವನ್ನು ಹೇಳಲಾಗಿದೆ. ಆ ಅರ್ಥವನ್ನು ವಿವಕ್ಷಿಸಿದರೂ ಬ್ರಹ್ಮಪರತ್ವವೇ ಸಿದ್ಧವಾಗುತ್ತದೆ. ಪ್ರಕೃತ, ಸಮನ್ವಯಸೂತ್ರದಲ್ಲಿ ಸಕಲ ಶಬ್ದಗಳೂ ಪರಮಾತ್ಮನನ್ನೇ ಮುಖ್ಯವಾಗಿ ಹೇಳುತ್ತವೆಂದು ಪ್ರತಿಜ್ಞೆ ಮಾಡಿದ್ದರಿಂದ ಕಾಠಕಭಾಷ್ಯದ ಅರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಸ್ವೀಕರಿಸಿದ್ದಾರೆಂಬ ವಿಚಾರವು ಚಂದ್ರಿಕೆಯಲ್ಲಿ ಸ್ಪಷ್ಟವಾಗಿದೆ. ಆದ್ದರಿಂದಲೇ, ಕಾಠಕ ಭಾಷ್ಯ ಹಾಗೂ ಬ್ರಹ್ಮಸೂತ್ರ ಭಾಷ್ಯದಲ್ಲಿ ಶ್ರುತಿಗೆ ಸಾವಕಾಶತ್ವವನ್ನು ಎರಡು ಬಗೆಯಲ್ಲಿ ಹೇಳಿದ್ದರಿಂದ ನ್ಯಾಯವಿವರಣಕ್ಕನುಸಾರಿಯಾಗಿ ಇಲ್ಲಿ ವಿವರಣೆ ಮಾಡಿದ್ದಾರೆ.

**भावदीपः –** स्मृत्या योगप्रदर्शनस्य कृत्यमाह – नचेत्यादिना ।। विद्वद्रूढेरिति।। 'विद्वद्रूढिर्वैदिका स्यात् सा योगादेव लभ्यते' । इत्युक्तेरिति भावः । एतच्च कर्मनिर्णयटीकायां 'रूढियोगौ विना कश्चिन्नैवार्थो वेदगो भवेद्' इत्यस्य न केवलं रूढो नापि केवलयौगिकोऽस्तीत्यर्थ इतीतरेतरद्वन्द्वमाश्रित्य रूढियोगरूपवृत्तिद्वय-समुच्चयपरत्वेन व्याख्यातत्वात्तदनुरोधेन रूढिमपि वक्तुमुक्तम् ।

ಸ್ಮೃತಿಯಿಂದ ಯೌಗಿಕಾರ್ಥವನ್ನು ಸ್ವೀಕರಿಸಲು ಕಾರಣವನ್ನು 'ನಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ವಿದ್ವದ್ರೂಢೇಃ' ಎಂಬುದರ ಅಭಿಪ್ರಾಯ ಹೀಗಿದೆ. 'ವಿದ್ವದ್ರೂಢಿರ್ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ' ಎಂಬಂತೆ ವಿಷ್ಣುವಿನಲ್ಲಿ ಯೋಗಶಕ್ತಿಯಿಂದಲೇ ವಿದ್ವದ್ರೂಢಿಯಿದೆಯೆಂದು ಸಿದ್ಧವಾಗುತ್ತದೆ. ಇದನ್ನು ಕರ್ಮನಿರ್ಣಯಟೀಕೆಯಲ್ಲಿ 'ರೂಢಿಯೋಗೌ ವಿನಾ ಕಶ್ಚಿತ್ ನೈವಾರ್ಥೋ ವೇದಗೋ ಭವೇತ್' ಎಂದು ಕೇವಲ ರೂಢ್ಯರ್ಥವನ್ನು ಅಥವಾ ಕೇವಲ ಯೌಗಿಕಾರ್ಥವನ್ನು ವಿವಕ್ಷಿಸಬಾರದು. 'ರೂಢಿಯೋಗೌ' ಎಂಬಲ್ಲಿ ಇತರೇತರದ್ವಂದ್ವಸಮಾಸವನ್ನು ಆಶ್ರಯಿಸಿ ರೂಢಿವೃತ್ತಿ ಹಾಗೂ ಯೋಗವೃತ್ತಿ ಎರಡನ್ನು ವಿವಕ್ಷಿಸಬೇಕೆಂದು ವ್ಯಾಖ್ಯಾನಿಸಲಾಗಿದೆ. ಅದಕ್ಕನುಸಾರಿಯಾಗಿ, ರೂಢ್ಯರ್ಥವನ್ನೂ ಕೂಡ ಹೇಳಬೇಕು. ಆದ್ದರಿಂದ, ಮಹಾವಿಷ್ಣುವಿನಲ್ಲಿ ವಿದ್ವದ್ರೂಢಿಯೂ ಸಹ ಇರುತ್ತದೆಂದು ಇಲ್ಲಿ ಹೇಳಿದ್ದಾರೆ.

**भावदीपः –** वस्तुतस्तु श्रुत्यर्थनिर्णयार्थत्वात् स्मृतेस्तत्र निरूपितोऽर्थो ग्राह्यो वेदवाक्ये तदभावे तु लौकिक इति चन्द्रिकोक्तदिशा केवलश्रौतस्मार्तयोगस्यापि

निरवकाशत्वेन अज्ञरूढितोऽपि प्राबल्यम् । अन्यथा स्मृत्यादौ वैदिकपदानां योगोक्तिरनर्था स्यादिति ध्येयम् ।

ವಾಸ್ತವಿಕವಾದ ವಿಚಾರ ಹೀಗಿದೆ. ಸ್ಮೃತಿಗಳು ಶ್ರುತ್ಯರ್ಥದ ನಿರ್ಣಯಕ್ಕೋಸ್ಕರ ಹೊರಟಿರುತ್ತವೆ. ವೇದವಾಕ್ಯದಲ್ಲಿ ಸ್ಮೃತಿಯಲ್ಲಿ ಹೇಳಿದ ಅರ್ಥವನ್ನು ಸ್ವೀಕರಿಸಬೇಕು. ಸ್ಮೃತಿಯಿಲ್ಲದಿದ್ದಾಗ ಲೋಕಸಿದ್ಧವಾದ ಅರ್ಥವನ್ನೇ ವಿವಕ್ಷಿಸಬೇಕು, ಎಂದು ಚಂದ್ರಿಕೆಯಲ್ಲಿ ಹೇಳಿದಂತೆ ಸ್ಮೃತಿಸಿದ್ಧವಾದ ಯೌಗಿಕಾರ್ಥವೂ ಕೂಡ ನಿರವಕಾಶವೇ ಆಗಿದೆ. ಆದ್ದರಿಂದ, ಅಜ್ಞರೂಢಿಗಿಂತಲೂ ಪ್ರಬಲವೆಂದು ಹೇಳಿದಂತಾಯಿತು. ಅಂದರೆ, ಸ್ಮೃತಿಸಿದ್ಧವಾದ ಯೋಗಾರ್ಥದಿಂದ ಅಜ್ಞರೂಢಿಗೆ ಬಾಧವು ಬರುತ್ತದೆ. ಒಂದು ವೇಳೆ ಸ್ಮೃತಿಸಿದ್ಧವಾದ ಯೋಗದಿಂದ ಅಜ್ಞರೂಢಿಗೆ ಬಾಧವನ್ನು ಹೇಳದಿದ್ದರೆ, ಸ್ಮೃತ್ಯಾದಿಗಳಲ್ಲಿ ವೈದಿಕ ಪದಗಳಿಗೆ ಯೌಗಿಕಾರ್ಥವನ್ನು ಹೇಳಿದ್ದೇ ವ್ಯರ್ಥವಾಗಬೇಕಾದೀತು.

**भावदीपः** – न केवलमार्थिकी रूढिः प्रयोगसिद्धा चेति भावेन प्रयोगमाह – **आयुधानामिति ।। गीतायाम् । वज्रमिति स्थलान्तरे ।। नन्वेवमिति।।** पूर्वं श्रुतिलिङ्गयोर्निरवकाशत्व एव अमृतत्वहेतुवदनत्वलिङ्गमाक्षिप्तम् । तयोस्सावकाशत्वेनेतर इत्यत्र ब्रह्मधर्मतया निर्णीतस्याक्षेपकाभावात् सिद्धान्ते साधकं भवत्येवेति भावः ।।

ವಿಷ್ಣುವಿನಲ್ಲಿ ವಜ್ರಶಬ್ದವು ಆರ್ಥಿಕವಾಗಿ ರೂಢವಾಗಿದೆ ಎಂದಷ್ಟೇ ಅಲ್ಲ. ಪ್ರಯೋಗಸಿದ್ಧವೂ ಆಗಿದೆ ಎಂಬ ಅಭಿಪ್ರಾಯದಿಂದ 'ಆಯುಧಾನಾಮಹಂ ವಜ್ರಮ್' ಎಂದು ಹೇಳಿದ್ದಾರೆ. ಇದು ಗೀತೆಯಲ್ಲಿ ಬರುವ ವಾಕ್ಯ. ಹಿಂದೆ ಶ್ರುತಿ ಹಾಗೂ ಲಿಂಗಗಳೆರಡಕ್ಕೂ ನಿರವಕಾಶತ್ವವಿದ್ದರೆ ಮಾತ್ರ ಅಮೃತತ್ವಕ್ಕೆ ಹೇತುವಾದ ವೇದನತ್ವಲಿಂಗವು ಅರ್ಥಾತ್ ಸಿದ್ಧವಾಗುತ್ತದೆಂದು ಹೇಳಲಾಯಿತು. ಶ್ರುತಿ ಹಾಗೂ ಲಿಂಗಗಳೆರಡು ಸಾವಕಾಶವಾದರೆ 'ನೇತರಃ' ಎಂಬ ಸೂತ್ರದಲ್ಲಿ ಬ್ರಹ್ಮಧರ್ಮವೆಂದು ನಿರ್ಣೀತವಾದ್ದರಿಂದ ಆಕ್ಷೇಪ ಮಾಡಲು ಬರುವುದಿಲ್ಲ. ಆದ್ದರಿಂದ, ಸಿದ್ಧಾಂತದಲ್ಲಿ ಇವುಗಳು ಸಾಧಕವೇ ಆಗುತ್ತವೆಂದು ತಿಳಿಯಬೇಕು.

**भावदीपः – अन्यत्रापीति ।।** 'शब्दादेव' इत्यत्र विश्वेदेवोपास्यत्वम् 'अन्तस्तद्धर्मोपदेशाद्' इत्यादिष्वदृश्यत्वमहाभोगत्वादिकमित्यर्थः । यथा वा 'आकाशोऽर्थान्तरत्वादि' इत्यत्र ब्रह्मश्रुतेरत्यागेन लिङ्गान्तरोक्तिः । एवं तत्र तत्र ।

'ಅನ್ಯತ್ರಾಪಿ' ಎಂದರೆ 'ಶಬ್ದಾದೇವ' ಎಂಬಲ್ಲಿ ವಿಶ್ವೇದೇವೋಪಾಸ್ಯತ್ವವು, 'ಅಂತಸ್ತದ್ಧರ್ಮೋಪದೇಶಾತ್' ಎಂಬಲ್ಲಿ ಅದೃಶ್ಯತ್ವ, ಮಹಾಭೋಗತ್ವಾದಿಗಳು ಇವುಗಳೂ ಸಹ ವಿವಕ್ಷಿತವಾಗಿವೆ ಎಂದರ್ಥ. ಯಾವ ರೀತಿಯಾಗಿ 'ಆಕಾಶೋಽರ್ಥಾಂತರತ್ವಾದಿ' ಎಂಬ ಸೂತ್ರದಲ್ಲಿ ಬ್ರಹ್ಮಶ್ರುತಿಯನ್ನು ಬಿಡದೆ ಮತ್ತೊಂದು ಲಿಂಗವನ್ನು ಸ್ವೀಕರಿಸಿದ್ದಾರೋ, ಅದರಂತೆ. ಹೀಗೆ ಬೇರೆ ಸೂತ್ರಗಳಲ್ಲಿಯೂ ತಿಳಿದುಕೊಳ್ಳಬೇಕು.

ಪರಿಪೂರ್ಣಚಂದ್ರಿಕಾ

**भावदीपः** – अत एव चन्द्रिकायाम् – आनन्दमयनयमारभ्य प्रतिनयं तत्तत्प्रकरणस्थाने कश्रुतिलिङ्गाद्युपदर्शनं कृतम् । प्रपञ्चितं चास्माभिः सङ्क्षेपभाष्यविवृतौ प्रतिनयम् । एतेन 'भूमा' इत्यत्र पूर्वपक्षिणाऽऽक्षिप्तस्यैव सम्प्रसादपदोक्तपूर्णसुखत्वस्य भूमा विष्णुरित्यत्र हेतुत्वम् ।

ಆದ್ದರಿಂದಲೇ, ಚಂದ್ರಿಕೆಯಲ್ಲಿ ಆನಂದಮಯಾಧಿಕರಣದಿಂದ ಪ್ರಾರಂಭಿಸಿ ಪ್ರತಿಯೊಂದು ಅಧಿಕರಣದಲ್ಲಿಯೂ ಆಯಾ ಪ್ರಕರಣಗಳಲ್ಲಿರುವ ಅನೇಕ ಶ್ರುತಿಲಿಂಗಾದಿಗಳನ್ನು ತೋರಿಸುತ್ತಾರೆ. ನಾವೂ ಸಹ ತತ್ತ್ವಮಂಜರಿಯಲ್ಲಿ ಪ್ರತಿಯೊಂದು ಅಧಿಕರಣದಲ್ಲಿಯೂ ಇದನ್ನು ವಿವರಿಸಿದ್ದೇವೆ. ಹೀಗೆ ಹೇಳಿದ್ದರಿಂದ 'ಭೂಮಾಸಂಪ್ರಸಾದಾತ್' ಎಂಬ ಸೂತ್ರದಲ್ಲಿ ಪೂರ್ವಪಕ್ಷಿಯಿಂದ ಆಕ್ಷೇಪ ಮಾಡಲ್ಪಟ್ಟ ಸಂಪ್ರಸಾದಪದದಿಂದ ತಿಳಿಯುವ ಪೂರ್ಣಸುಖತ್ವವನ್ನು ವಿಷ್ಣುವೇ ಭೂಮನಾಗಿದ್ದಾನೆನ್ನಲು ಹೇತುವನ್ನಾಗಿ ಬಳಸಲಾಗಿದೆ.

**भावदीपः** – 'द्युभ्वाद्यायतनम्' इत्यत्राऽऽक्षिप्तपरविद्याविषयत्वेन 'प्रकरणाद्' इति प्रकरणस्य वैष्णवत्वोज्जीवनमित्यादि समाहितं ध्येयम् । **फलोक्त्योपसंहरति – अत इति** ।। निरवकाशलिङ्गभावादित्यर्थः । इति हेतोरित्यर्थः ।। ३९ ।।

।। इति श्रीराघवेन्द्रयतिकृते भावदीपे कम्पनाधिकरणम् ।।

'ದ್ಯುಭ್ವಾದ್ಯಾಯತನಂ' ಎಂಬಲ್ಲಿ ಆಕ್ಷೇಪ ಮಾಡಲ್ಪಟ್ಟ ಪರವಿದ್ಯಾವಿಷಯತ್ವವೇ 'ಪ್ರಕರಣಾತ್' ಎಂಬ ಸೂತ್ರದಲ್ಲಿ ವಿಷ್ಣುಲಿಂಗವೆಂದು ವಿವಕ್ಷಿಸಿ ಸಮಾಧಾನವನ್ನು ಹೇಳಲಾಗಿದೆ. ಫಲವನ್ನು ಹೇಳುವ ಮೂಲಕ ಉಪಸಂಹಾರ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ. ನಿರವಕಾಶಲಿಂಗವಿರುವುದರಿಂದ ಎಂದು 'ಅತಃ' ಶಬ್ದಕ್ಕೆ ಅರ್ಥ. 'ಇತಿ' ಪದವು ಹೇತ್ವರ್ಥದಲ್ಲಿದೆ.

ಇಲ್ಲಿಗೆ ಕಂಪನಾಧಿಕರಣವು ಮುಗಿಯಿತು.

वाक्यार्थमञ्जरी –

**।। ॐ कम्पनात् ॐ ।।**

भगवल्लिङ्गेनेति ।। मोक्षसाधनज्ञानविषयत्वरूपेणेत्यर्थः ।। उद्यतत्वेति ।। उद्धृत्य धृतत्वेनेत्यर्थः ।। तद्धीति ।। तेनेन्द्रो वज्रमुदयच्छत् । 'उद्यदायुधदोर्दण्डाः' इत्यादावायुधे प्रसिद्धिं हिशब्देन दर्शयति – **प्राणे स्थितं प्राणान्निःसृतमिति** ।। प्राण

इति सप्तमीमङ्गीकृत्य तद्बलात् स्थितमित्यध्याहृत्य निःसृतशब्दानुरोधात् प्राणादित्यध्याहृत्य निमित्तसप्तमीत्वं वा विवक्षयित्वा यस्मादित्यर्थत्वेन यदित्यावृत्त्य यदिदं किञ्चेति वाक्यं योजितमिति ज्ञातव्यम् ।। **सर्वं जगदिति** ।। तृतीयव्याख्याने यदित्यस्यावृत्तिः यच्छब्दबलात्प्राणवाचकतया स इति तच्छब्दलाभ इति द्रष्टव्यम् । अत्र 'को ह्येवान्याद्' इति भाष्ये उदाहरिष्यमाणश्रुत्यनुसारेणाद्यव्याख्यानद्वयं 'प्राणस्य प्राणं नभस्वतोऽपि सर्वाः स्युः' इति प्रमाणानुसारेण तृतीयव्याख्यानं द्रष्टव्यम् ।। **ॐ कम्पनात् ॐ** ।। 'वज्रमुद्यतम्' इत्युक्तवज्रो भगवानेव एजतीति जगच्चेष्टकत्वरूपकम्पनवचनादित्यर्थः ।। **उद्यमित्वेति** ।। उत्कृष्टप्रयत्नवत्त्वेत्यर्थः । तस्य उत्पूर्वस्य यते रूपत्वादिति भावः । शङ्कते – **लिङ्गमात्रेणेति** ।। परिहरति – **लिङ्गस्येति** ।। भाष्ये चङ्क्रमणात् पादविक्षेपाद् वर्जनाद्दोषवर्जनात् प्रयोगं चाह – **आयुधानामिति** ।। प्रहरणोत्तमम् आयुधोत्तमम् ।। श्रुतिलिङ्गयोः सावकाशत्व इति।। तथाच पूर्वपक्षप्रापकाभावेन मोक्षजनकज्ञानविषयत्वस्य अन्यगतत्वशङ्कायोगेन सिद्धान्तनिर्णायकत्वासम्भवात्र तत्त्यागेन चेष्टकत्वग्रहणं युक्तमिति भावः ।। **एतदन्यत्राप्यनुसन्धेयमिति** ।। यत्र पूर्वाधिकरणसिद्धसमन्वयश्रुतिलिङ्गादेः विष्णुनिष्ठत्वाक्षेपः पूर्वपक्षप्रापकश्रुत्यादेः सिद्धान्ते विष्णाववकाशाभिधानं च तत्र पूर्वाधिकरणसिद्धस्य श्रुतिलिङ्गादेराक्षेपायोगेन विष्णुमात्रनिष्ठत्वानपायात् सिद्धान्तनिर्णायकत्वं सम्भवतीत्यनुसन्धेयमित्यर्थः । यथा 'अत एव प्राणः' इत्यादौ प्राणादिशब्दानां विष्णाववकाशे महाभोग इत्युक्तपूर्णानन्दत्वादेरिति ।। ३९ ।।

**।। इति श्रीशर्कराश्रीनिवासविरचितायां वाक्यार्थमञ्जर्याम् कम्पनाधिकरणम् ।।**

ಕಂಪನಾಧಿಕರಣ

(೧-೩-೧೦)

---

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

इति सप्तमीमङ्गीकृत्य तद्बलात् स्थितमित्यध्याहृत्य निःसृतशब्दानुरोधात् प्राणादित्यध्याहृत्य निमित्तसप्तमीत्वं वा विवक्षयित्वा यस्मादित्यर्थत्वेन यदित्यावृत्त्य यदिदं किञ्चेति वाक्यं योजितमिति ज्ञातव्यम् ।। **सर्वं जगदिति** ।। तृतीयव्याख्याने यदित्यस्यावृत्तिः यच्छब्दबलात्प्राणवाचकतया स इति तच्छब्दलाभ इति द्रष्टव्यम् । अत्र 'को ह्येवान्याद्' इति भाष्ये उदाहरिष्यमाणश्रुत्यनुसारेणाद्यव्याख्यानद्वयं 'प्राणस्य प्राणं नभस्वतोऽपि सर्वाः स्युः' इति प्रमाणानुसारेण तृतीयव्याख्यानं द्रष्टव्यम् ।। **ॐ कम्पनात् ॐ** ।। 'वज्रमुद्यतम्' इत्युक्तवज्रो भगवानेव एजतीति जगच्चेष्टकत्वरूपकम्पनवचनादित्यर्थः ।। उद्यमित्वेति ।। उत्कृष्टप्रयत्नवत्त्वेत्यर्थः । तस्य उत्पूर्वस्य यते रूपत्वादिति भावः । शङ्कते – **लिङ्गमात्रेणेति** ।। परिहरति – **लिङ्गस्येति** ।। भाष्ये चङ्क्रमणात् पादविक्षेपाद् वर्जनाद्दोषवर्जनात् प्रयोगं चाह – **आयुधानामिति** ।। **प्रहरणोत्तमम्** आयुधोत्तमम् ।। श्रुतिलिङ्गयोः सावकाशत्व इति।। तथाच पूर्वपक्षप्रापकाभावेन मोक्षजनकज्ञानविषयत्वस्य अन्यगतत्वशङ्कायोगेन सिद्धान्तनिर्णायकत्वासम्भवान्न तत्त्यागेन चेष्टकत्वग्रहणं युक्तमिति भावः ।। **एतदन्यत्राप्यनुसन्धेयमिति** ।। यत्र पूर्वाधिकरणसिद्धसमन्वयश्रुतिलिङ्गादेः विष्णुनिष्ठत्वाक्षेपः पूर्वपक्षप्रापकश्रुत्यादेः सिद्धान्ते विष्णाववकाशाभिधानं च तत्र पूर्वाधिकरणसिद्धस्य श्रुतिलिङ्गादेराक्षेपायोगेन विष्णुमात्रनिष्ठत्वानपायात् सिद्धान्तनिर्णायकत्वं सम्भवतीत्यनुसन्धेयमित्यर्थः । यथा 'अत एव प्राणः' इत्यादौ प्राणादिशब्दानां विष्णाववकाशो महाभोग इत्युक्तपूर्णानन्दत्वादेरिति ।। ३९ ।।

**।। इति श्रीशर्कराश्रीनिवासविरचितायां वाक्यार्थमञ्जर्याम् कम्पनाधिकरणम् ।।**

ಪರಿಪೂರ್ಣಚಂದ್ರಿಕಾ

ಕಂಪನಾಧಿಕರಣ

(೧-೩-೧೦)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ कम्पनाधिकरणम्

### ವಜ್ರಶಬ್ದದ ಸಮನ್ವಯವು ಅಸಂಗತವಲ್ಲ

**ॐ कंपनात् ॐ ।। यद्यप्यस्य वज्रशब्दस्य वक्ष्यमाणस्य स्वप्नद्रष्टृत्वलिङ्गस्य च लोकतोऽन्यत्रप्रसिद्धिरस्ति । ब्रह्मलिङ्गैर्ब्रह्मण्यपि प्रसिद्धिश्चेदाकाशादिशब्दानामपि सा स्यात् । ''आयुधानामहं वज्रम्'' इति प्रयोगात्सा चेत्प्राणादिशब्दानामपि सा स्यात् । ''ईशानःप्राणदःप्राणः'' इत्यादिप्रयोगात् ।**

ಅನುವಾದ - 'ಓಂ ಕಂಪನಾತ್ ಓಂ' ಎಂಬುದಾಗಿ ಕಂಪನಾಧಿಕರಣವು ಪ್ರಾರಂಭವಾಗುತ್ತಿದೆ.

ಪ್ರಶ್ನೆ - ಈ ಅಧಿಕರಣದಲ್ಲಿ 'ವಜ್ರ' ಎಂಬ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಮುಂದಿನ ಜ್ಯೋತಿರಧಿಕರಣದಲ್ಲಿ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಾರೆ. ಈ ವಜ್ರ ಶಬ್ದ ಹಾಗೂ ಸ್ವಪ್ನಾದಿದ್ರಷ್ಟೃತ್ವಲಿಂಗವು ಲೋಕತಃ ಅನ್ಯತ್ರಪ್ರಸಿದ್ಧವಾಗಿವೆ. ಬ್ರಹ್ಮನ ಲಿಂಗಗಳು ಶ್ರುತವಾದ್ದರಿಂದ ಬ್ರಹ್ಮನಲ್ಲಿಯೂ ಕೂಡ ಪ್ರಸಿದ್ಧವಾಗಿವೆ. ಆದಕಾರಣ ಉಭಯತ್ರಪ್ರಸಿದ್ಧವೆನಿಸುತ್ತವೆ. ಹಾಗಾಗಿ ಮೂರನೆಯ ಪಾದದಲ್ಲಿ ವಜ್ರಶಬ್ದವನ್ನು ಹಾಗೂ ಸ್ವಪ್ನಾದಿದ್ರಷ್ಟೃತ್ವಲಿಂಗವನ್ನು ಸಮನ್ವಯ ಮಾಡುತ್ತಿರುವುದು. ಸಂಗತವಾಗಿದೆಯೆಂದು ನೀವು ಹೇಳಬೇಕು. ಹೀಗೆ ಹೇಳುವುದಾದರೆ ಆಕಾಶಾದಿಶಬ್ದಗಳೂ ಸಹ ಉಭಯತ್ರಪ್ರಸಿದ್ಧವೆನಿಸಬೇಕಾದೀತು. ಏಕೆಂದರೆ ಆಕಾಶಾದಿಶಬ್ದಗಳು ಲೋಕತಃ ಅನ್ಯತ್ರಪ್ರಸಿದ್ಧವಾಗಿವೆ. ಪರೋವರೀಯಸ್ತ್ವಾದಿಲಿಂಗಗಳ ಬಲದಿಂದ ಬ್ರಹ್ಮನಲ್ಲಿಯೂ ಕೂಡ ಪ್ರಸಿದ್ಧವಾಗಿವ. ಹೀಗೆ ವಜ್ರಾದಿಶಬ್ದಗಳಂತೆ ಆಕಾಶಾದಿಶಬ್ದಗಳೂ ಕೂಡ ಉಭಯತ್ರಪ್ರಸಿದ್ಧವೆಂದಾಗಿ ಪ್ರಥಮಪಾದದಲ್ಲಿ ಅವುಗಳ ಸಮನ್ವಯಮಾಡಿದ್ದು ತಪ್ಪಾಗಬೇಕಲ್ಲವೇ?

'ಆಯುಧಾನಾಮಹಂ ವಜ್ರಮ್' ಇತ್ಯಾದಿ ಪ್ರಯೋಗಗಳ ಬಲದಿಂದ ವಜ್ರಶಬ್ದವು ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆಯೆಂದು ಹೇಳುತ್ತೇವೆ ಹೊರತು, ಬ್ರಹ್ಮನ ಲಿಂಗಗಳಿಂದಲ್ಲ ಎಂದು ಉತ್ತರಿಸುವುದಾದರೆ, ಪ್ರಾಣಾದಿಶಬ್ದಗಳು ಉಭಯತ್ರಪ್ರಸಿದ್ಧವಾಗಬೇಕಾದೀತು. ಏಕೆಂದರೆ ಲೋಕತಃ ಪ್ರಾಣಾದಿಶಬ್ದಗಳು ಅನ್ಯತ್ರಪ್ರಸಿದ್ಧವಾಗಿವೆ. ಅದರಂತೆ 'ಈಶಾನಃಪ್ರಾಣದಃಪ್ರಾಣಃ' ಇತ್ಯಾದಿ ಪ್ರಯೋಗಗಳಿರುವುದರಿಂದ ಮಹಾವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ.

**तथापि नामलिङ्गपादन्यायसाम्येन वज्रादिनाम्नां स्वप्रद्रष्टृत्वादिलिङ्गानां च ब्रह्मण्यपि प्रयोगस्योक्तप्रायत्वादुभयत्रप्रसिद्धता ।**

ಉತ್ತರ - ಹೌದು, ಆದರೆ ಪ್ರಥಮಪಾದದಲ್ಲಿ ನಾಮಾತ್ಮಕಶಬ್ದಗಳನ್ನೆಲ್ಲಾ ಸಮನ್ವಯ ಮಾಡಿದ್ದರಿಂದ 'ವಜ್ರ' ಎಂಬ ನಾಮಾತ್ಮಕಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದಂತಾಗಿದೆ. ಲಿಂಗಪಾದದಲ್ಲಿ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವನ್ನು ಸಮನ್ವಯ ಮಾಡಿದ್ದಾಗಿದೆ. ಪ್ರಕೃತ ಲೋಕತಃ ಅನ್ಯತ್ರರೂಢವೂ ಆಗಿರುವ ಕಾರಣ, ಉಭಯಪ್ರಸಿದ್ಧವಾಗಿದೆಯೆಂಬ ದೃಷ್ಟಿಯಿಂದ ಈ ಪಾದದಲ್ಲಿ ಸಮನ್ವಯ ಮಾಡುತ್ತಿದ್ದಾರೆ.

**न चैवं तृतीयपादवैयर्थ्यम् । स्वतः सिद्धोभयप्रसिद्धीनां पादद्वयापादितोभय-प्रसिद्धीनां च स्वतोऽनवसेयावधारणानां ब्रह्मण्येव समन्वय इत्यवधारणार्थत्वात्-तृतीयस्य ।**

ಹಾಗಾದರೆ ನಾಮಪಾದ ಹಾಗೂ ಲಿಂಗಪಾದಗಳಿಂದಲೇ ಎಲ್ಲಾ ಶಬ್ದಗಳನ್ನು ಸಮನ್ವಯ ಮಾಡಿದಂತಾಗಿದೆ. ಪುನಃ ಈ ಪಾದ ಹೊರಟಿದ್ದೇ ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಕೆಲವು ಶಬ್ದಗಳು ಉಭಯತ್ರಪ್ರಸಿದ್ಧವೆಂದು ಸ್ವತಃಸಿದ್ಧವಾಗಿವೆ. ಇನ್ನು ಕೆಲವು ಶಬ್ದಗಳು ನಾಮಪಾದ ಹಾಗೂ ಲಿಂಗಪಾದಗಳಿಂದ ವಿಷ್ಣುವಿನಲ್ಲಿ ಸಮನ್ವಯಗೊಂಡಿದ್ದರಿಂದ ಉಭಯತ್ರಪ್ರಸಿದ್ಧವಾಗಿವೆ. ಇಂತಹ ಉಭಯತ್ರಪ್ರಸಿದ್ಧವಾದ ಶಬ್ದಗಳು ಯಾವ ವಸ್ತುವನ್ನು ಪ್ರತಿಪಾದನೆ ಮಾಡುತ್ತವೆಂದು ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಈ ಮೂರನೆಯ ಪಾದವು ಬ್ರಹ್ಮನಲ್ಲೇ ಸಮನ್ವಯವಾಗುತ್ತವೆಂದು ನಿರ್ಧಾರಮಾಡಿ ಸಾಧನೆ ಮಾಡುತ್ತದೆ. ಆದ್ದರಿಂದ ಮೂರನೆಯಪಾದವು ಹೊರಟಿದ್ದು ಅತ್ಯಂತ ಸಾರ್ಥಕವಾಗಿದೆ.

**नचैवं नामपादन्यायैरादित्यादिनाम्नामपि ब्रह्मणि प्रयोगस्योक्तप्रायत्वात्त-त्साहित्येन सर्वगतत्वादिलिङ्गानामप्युभयत्रप्रसिद्धता स्यादिति वाच्यम् ।**

ಪ್ರಶ್ನೆ - ನಾಮಪಾದದಿಂದ ಆದಿತ್ಯಾದಿನಾಮಗಳನ್ನೂ ಬ್ರಹ್ಮನಲ್ಲಿ ಸಮನ್ವಯ ಮಾಡಿದಂತಾಗಿದೆ. ಇಂತಹ ಆದಿತ್ಯಾದಿನಾಮಾತ್ಮಕಶಬ್ದಗಳ ಸಾಹಿತ್ಯದಿಂದ ಸರ್ವಗತತ್ವಾದಿಲಿಂಗಗಳೂ ಕೂಡ

ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಏಕೆಂದರೆ ಲೋಕತಃ ಈ ಲಿಂಗಗಳು ಅನ್ಯತ್ರಪ್ರಸಿದ್ಧವಾಗಿವೆ. ಆದಿತ್ಯಾದಿನಾಮಗಳ ಸಾಹಿತ್ಯದಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ.

**ततः पूर्वं नामपादे लिङ्गसमन्वयस्यानुक्ततया सर्वपुरुषाभिमुख्यादिभिरादित्ये प्रसिद्धैर्लिङ्गैरादित्यशब्दस्यान्यत्रप्रसिद्धेरुज्जीवनादित्युक्तत्वात् ।**

ಉತ್ತರ - ಇದು ತಪ್ಪು. ಏಕೆಂದರೆ ಹಿಂದಿನ ನಾಮಪಾದದಲ್ಲಿ ಲಿಂಗಸಮನ್ವಯವನ್ನು ಮಾಡಿಲ್ಲ. ಹಾಗಾಗಿ ಸರ್ವಪುರುಷಾಭಿಮುಖ್ಯ ಎಂಬ ಲಿಂಗವು ಪರಮಾತ್ಮನಲ್ಲಿ ಸಿದ್ಧವಾಗಿಲ್ಲ. ಸೂರ್ಯಾದಿಗಳಲ್ಲಿ ಪ್ರಸಿದ್ಧವಾದ ಇಂತಹ ಲಿಂಗಗಳ ಸಾಹಿತ್ಯದಿಂದ ಆದಿತ್ಯಶಬ್ದವೇ ಅನ್ಯತ್ರಪ್ರಸಿದ್ಧವಾಗುತ್ತವೆ. ಇಂತಹ ಆದಿತ್ಯಶಬ್ದದ ಬಲದಿಂದ ಸರ್ವಗತತ್ವ ಎಂಬ ಲಿಂಗವು ವಿಷ್ಣುವಿನಲ್ಲಿಬರುತ್ತದೆಂದು ಸಾಧಿಸಲಾಗದು. ಆದ್ದರಿಂದ ಸರ್ವಗತತ್ವಾದಿಲಿಂಗಗಳು ಅನ್ಯತ್ರಪ್ರಸಿದ್ಧವಾಗುತ್ತವೆ. ಅವುಗಳ ಸಮನ್ವಯಕ್ಕಾಗಿ ಎರಡನೆಯ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಲಿಂಗಗಳು ಉಭಯತ್ರ-ಪ್ರಸಿದ್ಧವೆನಿಸುವುದಿಲ್ಲ.

**वज्रे प्रसिद्धैरुद्यतत्वादिलिङ्गैस्तु न वज्रादिशब्दस्यान्यत्रप्रसिद्ध्युज्जीवनम् । इतः पूर्वं लिङ्गपाद उद्यतत्वादिलिङ्गानामपि समन्वयस्योक्तप्रायत्वात् ।**

ವಜ್ರದಲ್ಲಿ ಪ್ರಸಿದ್ಧವಾದ ಉದ್ಯತತ್ವಾದಿಲಿಂಗಗಳಿಂದ ವಜ್ರಾದಿಶಬ್ದಗಳೂ ಕೂಡ ಅನ್ಯತ್ರಪ್ರಸಿದ್ಧ-ವಾಗಿವೆಯೆಂದು ಸಾಧಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಈ ಪಾದಕ್ಕಿಂತ ಹಿಂದಿನ ಲಿಂಗಪಾದದಲ್ಲಿ ಉದ್ಯತತ್ವಾದಿಲಿಂಗಗಳನ್ನೂ ಕೂಡ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾಗಿದೆ. ಅಂತಹ ಉದ್ಯತತ್ವಾದಿಲಿಂಗಗಳಿಂದ ವಜ್ರಶಬ್ದವು ಲೋಕದಲ್ಲಿ ಪ್ರಸಿದ್ಧವಾಗಿದೆಯೆಂದು ಸಾಧಿಸಲು ಸಾಧ್ಯವಿಲ್ಲ.

**नचैवं बीजाभावात्पूर्वपक्षानुदयः । सावकाशलिङ्गैरप्यनवधारणपूर्वपक्ष-सम्भवात् । अत एवोक्तमनुव्याख्याने ''आहोभयगतत्वं च स्यादतो लिङ्गशब्दयोः । इति संशयनुत्त्यर्थं'' इति ।**

ಉದ್ಯತತ್ವಾದಿಲಿಂಗಗಳನ್ನು ಹಿಂದೆ ಪರಮಾತ್ಮನಲ್ಲಿ ಸಮನ್ವಯ ಮಾಡಿದ್ದರಿಂದ ಪೂರ್ವಪಕ್ಷ ಹುಟ್ಟಲು ಸಾಧ್ಯವಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಸಾವಕಾಶವಾದ ಲಿಂಗಗಳಿಂದಲೂ ಕೂಡ ಅನವಧಾರಣರೂಪವಾದ (ನಿಶ್ಚಯಮಾಡಲು ಸಾಧ್ಯವಿಲ್ಲವೆಂಬ) ಪೂರ್ವಪಕ್ಷವನ್ನು ಮಾಡಬಹುದು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಆಹೋಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ । ಇತಿ ಸಂಶಯನುತ್ತ್ಯರ್ಥಮ್' ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**''लोकप्रसिद्ध्या भगवल्लिङ्गेन च साधारण'' इति टीकापि नामलिङ्गपादन्यायेन भगवल्लिङ्गैस्तत्परतायाः सिद्धप्रायत्वाल्लोकतश्चान्यत्रप्रसिद्धत्वात्साधारण्यमित्यभिप्राया ।**

'ಲೋಕಪ್ರಸಿದ್ಧ್ಯಾ ಭಗವಲ್ಲಿಂಗೇನ ಚ ಸಾಧಾರಣಃ' ಲೋಕಪ್ರಸಿದ್ಧಿಯಿಂದ ಹಾಗೂ ಭಗವಂತನಲ್ಲಿರುವ ಲಿಂಗದಿಂದ ಸಾಧಾರಣವಾದ ನಾಮ ಹಾಗೂ ಲಿಂಗಗಳನ್ನು ಈ ಪಾದದಲ್ಲಿ ಸಮನ್ವಯ ಮಾಡುತ್ತಿದ್ದಾರೆಂಬ ಟೀಕೆಯನ್ನೂ ಕೂಡ ನಾಮಪಾದ ಹಾಗೂ ಲಿಂಗಪಾದಗಳ ನ್ಯಾಯದಿಂದ ಭಗವಂತನಲ್ಲಿ ಪ್ರಸಿದ್ಧವಾಗಿವೆ. ಆದ್ದರಿಂದ ನಾಮಾತ್ಮಕಶಬ್ದಗಳಿಗೆ ಹಾಗೂ ಲಿಂಗಾತ್ಮಕಶಬ್ದಗಳಿಗೆ ಭಗವತ್ಪರತ್ವವು ಸಿದ್ಧಪ್ರಾಯವಾಗಿದೆ. ಆದರೂ ಲೋಕತಃ ಅನ್ಯತ್ರಪ್ರಸಿದ್ಧ-ವಾದ್ದರಿಂದ ಭಗವನ್ಮಾತ್ರಪರತ್ವವು ಹೇಗೆ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸಲು ಈ ಪಾದವು ಹೊರಟಿದೆ.

**यद्वा यथा ''यदष्टाकपाल'' इत्याद्यर्थवादादेरवान्तरसङ्गतिवशादर्थवादादि-रूपस्वस्थानातिक्रमः तथा वज्रादिशब्दानामन्यत्रप्रसिद्ध्यादिमतामप्यवान्तरसङ्गति-लोभात्स्वस्थानातिक्रमः ।**

ಅಥವಾ ವಜ್ರಶಬ್ದದ ಸಮನ್ವಯವು ಇಲ್ಲಿ ಅಸಂಗತವಲ್ಲವೆನ್ನಲು ಮತ್ತೊಂದು ಕಾರಣ ಹೀಗಿದೆ - ಪೂರ್ವಮೀಮಾಂಸೆಯಲ್ಲಿ 'ಯದಷ್ಟಾಕಪಾಲಃ' ಇತ್ಯಾದಿಯಾದ ಅರ್ಥವಾದಾದಿವಾಕ್ಯಗಳಿಗೆ ಅರ್ಥವಾದಪಾದದಲ್ಲಷ್ಟೇ ವಿಚಾರ ಮಾಡುವುದು ಸಂಗತವಾಗುತ್ತದೆ. ಆದರೂ ಸಹ ಅವಾಂತರಸಂಗತಿಯ ಲೋಭದಿಂದ ಅರ್ಥವಾದಾಧಿಕರಣದಲ್ಲಿ ವಿಚಾರ ಮಾಡದೇ ನಾಮಪಾದದಲ್ಲಿ ವಿಚಾರ ಮಾಡಿದ್ದಾರೆ. ಆದರಂತೆ ವಜ್ರಾದಿಶಬ್ದಗಳು ಅನ್ಯತ್ರಪ್ರಸಿದ್ಧವೇ ಆಗಿದ್ದರೂ. ಹಿಂದಿನ ಅಧಿಕರಣದಿಂದ ಆವಾಂತರಸಂಗತಿಯಿರುವ ಕಾರಣ ಆ ಲೋಭದಿಂದಷ್ಟೇ ಪ್ರಥಮಪಾದದಲ್ಲಿ ನಿವೇಶ ಮಾಡದೇ ಇಲ್ಲಿ ಸಮನ್ವಯ ಮಾಡುತ್ತಿದ್ದಾರೆ.

**प्रायिकत्वाच्च पादव्यवस्था । वक्ष्यति हि चतुर्थाद्ये भाष्यकारः ''प्रायिकत्वाच्चाध्यायानां पादानां च न विरोध'' इति ।**

ಅಥವಾ ವಜ್ರಶಬ್ದವು ಅನ್ಯತ್ರಪ್ರಸಿದ್ಧವಾಗಿದೆಯೆಂದು ವಿವಕ್ಷಿಸಿದ್ದರೂ ಕೂಡ ಈ ಪಾದದಲ್ಲಿ ಸಮನ್ವಯ ಮಾಡುವುದು ತಪ್ಪಲ್ಲ. ಏಕೆಂದರೆ ನಾಲ್ಕನೆಯ ಅಧ್ಯಾಯದ ಪ್ರಥಮಪಾದದಲ್ಲಿ ಭಾಷ್ಯಕಾರರು 'ಪ್ರಾಯಿಕತ್ವಾಚ್ಚಾಧ್ಯಾಯಾನಾಂ ಪಾದಾನಾಂ ಚ ನ ವಿರೋಧಃ' ಎಂದು ಹೇಳಿದ್ದಾರೆ. ಅಂದರೆ ಸಾಧನಾಧ್ಯಾಯದಲ್ಲಿ ಹೇಳುವ ವಿಚಾರವನ್ನು ಫಲಾಧ್ಯಾಯದಲ್ಲಿ ಏಕೆ ಹೇಳುತ್ತಿದ್ದೀರಿ? ಎಂದು ಪ್ರಶ್ನಿಸಿಕೊಂಡು ಎಲ್ಲಾ ಅಧ್ಯಾಯಗಳಲ್ಲಿಯೂ ಎಲ್ಲಾ ವಿಚಾರವು ಪ್ರಸಕ್ತವಾಗುತ್ತದೆ. ಆದರಂತೆ ಪಾದದಲ್ಲಿಯೂ ಕೂಡ. ಆದರೂ ಸಹ ಹೆಚ್ಚಾಗಿ ಸಮನ್ವಯ ಮಾಡುವ ವಿಷಯವನ್ನು ವಿವಕ್ಷಿಸಿ,

ಅಧ್ಯಾಯವ್ಯವಸ್ಥೆ ಹಾಗೂ ಪಾದವ್ಯವಸ್ಥೆಗಳನ್ನು ಮಾಡಲಾಗಿದೆ. ಆದ್ದರಿಂದ ನಾಲ್ಕನೆಯ ಅಧ್ಯಾಯದಲ್ಲಿ ಹೆಚ್ಚಾಗಿ ಫಲವನ್ನೇ ಸಮನ್ವಯ ಮಾಡುತ್ತಿರುವುದರಿಂದ 'ಫಲಾಧ್ಯಾಯ' ಎಂದು ಕರೆಯಲಾಗಿದೆ ಎಂದು ಉತ್ತರಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ ಮೂರನೆಯ ಪಾದದಲ್ಲಿ ಹೆಚ್ಚಾಗಿ ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. 'ವಜ್ರ' ಮೊದಲಾದ ನಾಮಾತ್ಮಕಶಬ್ದ ಸಮನ್ವಯವನ್ನು ಮಾಡುವ ಮಾತ್ರದಿಂದ ಉಭಯತ್ರಪ್ರಸಿದ್ಧ ಸಮನ್ವಯಕ್ಕೇನೂ ವಿರೋಧಬರುವುದಿಲ್ಲ.

**यद्वा पादद्वयेऽनुदाहृतानामपि नाम्नां लिङ्गानां च तत्रोक्तन्यायेन विष्णुपरतासिद्धप्रायेति दर्शयितुमन्यत्रप्रसिद्धस्यापि वज्रनाम्नः स्वप्नादिद्रष्टृत्वलिङ्गस्य चेहोक्तिः ।**

ಅಥವಾ ಹೊಸತೊಂದು ಪ್ರಮೇಯವನ್ನು ತಿಳಿಸಲು ಅನ್ಯತ್ರಪ್ರಸಿದ್ಧವಾದ ಶಬ್ದವನ್ನು ಇಲ್ಲಿ ಸಮನ್ವಯ ಮಾಡಿದ್ದಾರೆ. ಹಿಂದಿನೆರಡು ಪಾದಗಳಲ್ಲಿ ಕೆಲವು ನಾಮಗಳ ಸಮನ್ವಯವನ್ನು ಕೆಲವು ಲಿಂಗಗಳ ಸಮನ್ವಯವನ್ನಷ್ಟೇ ಕಂಠತಃ ಮಾಡಿದ್ದಾರೆ. ಅದೇ ನ್ಯಾಯದಿಂದ ಸಕಲ ನಾಮಾತ್ಮಕವಾದ ಸಕಲ ಲಿಂಗಾತ್ಮಕವಾದ ಶಬ್ದಗಳ ಸಮನ್ವಯವನ್ನೂ ಕೂಡ ವಿಷ್ಣುವಿನಲ್ಲಿ ಮಾಡಿದಂತಾಗುತ್ತದೆಂದು ತಿಳಿಸಬೇಕಾಗಿದೆ. ಅದಕ್ಕೋಸ್ಕರ 'ವಜ್ರ' ಎಂಬ ಶಬ್ದವು 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವು ಅನ್ಯತ್ರಪ್ರಸಿದ್ಧವಾಗಿದ್ದರೂ ಕೂಡ ಉಭಯತ್ರಪ್ರಸಿದ್ಧ ಪಾದದಲ್ಲಿ ಸಮನ್ವಯ ಮಾಡಿದ್ದಾರೆ. ಅಂದರೆ ಇವುಗಳೂ ಸಹ ಸಮಾನನ್ಯಾಯದಿಂದ ಹಿಂದಿನ ಪಾದಗಳಲ್ಲಿಯೇ ವಿಷ್ಣುವಿನಲ್ಲಿ ಸಿದ್ಧವಾಗಿವೆ. ಆದ್ದರಿಂದ ಉಭಯತ್ರಪ್ರಸಿದ್ಧವೆನಿಸಿವೆ ಎಂದಭಿಪ್ರಾಯ.

ಈ ಎಲ್ಲಾ ಕಾರಣಗಳಿಂದ ಕಂಪನಾಧಿಕರಣವು ತೃತೀಯಪಾದದಲ್ಲಿ ಸಂಗತವಾಗುತ್ತದೆ.

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः – ॐ कंपनात् ॐ** ।। अस्य विचारस्यास्मिन्पादेऽन्तर्भावं समर्थयितुमाक्षिपति – **यद्यपीति** ।।

ವಿವರಣೆ - 'ಓಂ ಕಂಪನಾತ್ ಓಂ' ಎಂಬುದಾಗಿ ಕಂಪನಾಧಿಕರಣವು ಪ್ರಾರಂಭವಾಗಿದೆ. ಈ ಅಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ. ಈ ಅಧಿಕರಣಕ್ಕೆ ಪಾದಾಂತರ್ಭಾವಸಂಗತಿಯನ್ನು ಸಮರ್ಥನೆ ಮಾಡಲು ಆಕ್ಷೇಪ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ.

ಪರಿಪೂರ್ಣಚಂದ್ರಿಕಾ

**प्रकाशः** –''यदिदं किञ्च जगत्सर्वं प्राण एजति निस्सृतम् । महद्भयं वज्रमुद्यतम्'' इति वाक्यस्थवज्रशब्दस्येत्यर्थः । एकन्यायनिर्णेयत्वादाह – **वक्ष्यमाणस्येति** ।। ''सुषुप्त्युत्क्रान्त्योर्भेदेन'' इत्यत्रेत्यर्थः । तथा चाद्यपाद एव निवेशस्स्यादिति भावः ।

'ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ಭಯಂ ವಜ್ರಮುದ್ಯತಮ್' ಎಂಬ ವಾಕ್ಯದಲ್ಲಿರುವ 'ವಜ್ರ' ಎಂಬ ನಾಮಾತ್ಮಕ ಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಾರೆಂದು ತಿಳಿಯಬೇಕು. ಈ ಅಧಿಕರಣದಲ್ಲಿ ವಜ್ರಶಬ್ದವು ಯಾವ ನ್ಯಾಯದಿಂದ ಸಮನ್ವಯವಾಗುತ್ತದೋ, ಅದೇ ನ್ಯಾಯದಿಂದಲೇ ಮುಂದಿನ ಅಧಿಕರಣದಲ್ಲಿರುವ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವೂ ಸಹ ಸಮನ್ವಯವಾಗುತ್ತದೆ. ಆದ್ದರಿಂದಲೇ ಎರಡು ಅಧಿಕರಣಗಳಿಗೆ ಒಟ್ಟಿಗೆ ಪಾದಾಂತರ್ಭಾವಸಂಗತಿಯನ್ನು ಸಮರ್ಥನೆ ಮಾಡುವುದಕ್ಕಾಗಿ 'ವಕ್ಷ್ಯಮಾಣಸ್ಯ' ಎಂಬುದಾಗಿ ಹೇಳಿದ್ದಾರೆ. 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರದಲ್ಲಿ ಸಮನ್ವಯ ಮಾಡುವ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವನ್ನು 'ವಕ್ಷ್ಯಮಾಣಸ್ಯ' ಎಂದು ಹೇಳಿದ್ದಾರೆ. ಒಟ್ಟಾರೆ ಕಂಪನಾಧಿಕರಣವನ್ನು ಪ್ರಥಮಪಾದದಲ್ಲಿ ನಿವೇಶನ ಮಾಡಬೇಕಿತ್ತು ಎಂಬುದು ಆಕ್ಷೇಪದ ಅಭಿಪ್ರಾಯ.

**प्रकाशः** – टीकायां ''लोकप्रसिद्ध्या भगवल्लिङ्गेन च साधारणवज्रनाम्न'' इत्युक्तमाशंक्याह – **ब्रह्मेति** ।।

ಟೀಕೆಯಲ್ಲಿ 'ಲೋಕಪ್ರಸಿದ್ಧ್ಯಾ ಭಗವಲ್ಲಿಂಗೇನ ಚ ಸಾಧಾರಣವಜ್ರನಾಮ್ನಃ' ಲೋಕಪ್ರಸಿದ್ಧಿಯಿಂದ ಮತ್ತು ಭಗವಲ್ಲಿಂಗದಿಂದ 'ವಜ್ರ' ಎಂಬ ನಾಮಾತ್ಮಕಶಬ್ದವು ಸಾಧಾರಣವಾಗಿದೆಯೆಂದು ಹೇಳಿದ್ದಾರೆ. ಅದನ್ನು 'ಬ್ರಹ್ಮ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

**प्रकाशः** – ''आकाश इति होवाच'' इत्याद्यपादविषयाकाशप्राणादिशब्दानामित्यर्थः । **प्रयोगात् गीतायाम्** ।। **ईशान इति** ।। **सहस्रनामस्वित्यर्थः** ।

'ಆಕಾಶ ಇತಿ ಹೋವಾಚ' ಎಂಬ ಪ್ರಥಮಪಾದದ ಆಕಾಶಾಧಿಕರಣದ ವಿಷಯವಾಕ್ಯದಲ್ಲಿ 'ಆಕಾಶ' ಎಂಬ ಶಬ್ದವನ್ನು ಸಮನ್ವಯ ಮಾಡಿದ್ದಾರೆ. ಅದೂ ಸಹ ಇದರಂತೆ ಉಭಯತ್ರಪ್ರಸಿದ್ಧವಾಗುತ್ತದಲ್ಲವೇ? ಎಂದರ್ಥ. 'ಪ್ರಯೋಗಾತ್' ಎಂದರೆ ಗೀತೆಯಲ್ಲಿ ಪ್ರಯೋಗಿಸಲಾಗಿದೆ ಎಂದರ್ಥ. 'ಈಶಾನಃ' ಎಂಬುದು ವಿಷ್ಣುಸಹಸ್ರನಾಮದಲ್ಲಿ ಪ್ರಯೋಗಿಸಲಾಗಿದೆ ಎಂದರ್ಥ.

**प्रकाशः** – साक्षादनुक्तेराह – **उक्तप्रायत्वादिति** ।। **स्वत इति** ।। श्रुत्यादिसाम्येनेत्यर्थः ।।

ನೇರವಾಗಿ ವಜ್ರಶಬ್ದವನ್ನಾಗಲೀ, ಸ್ವಪ್ನಾದಿದ್ರಷ್ಟೃತ್ವಲಿಂಗವನ್ನಾಗಲೀ ಮೊದಲೆರಡು ಪಾದಗಳಲ್ಲಿ ಸಮನ್ವಯ ಮಾಡದಿರಬಹುದು. ಆದರೆ ಬೇರೆ ಶಬ್ದಗಳ ಸಮನ್ವಯದಿಂದ ಇವುಗಳ ಸಮನ್ವಯವನ್ನೂ ಸಹ

ಮಾಡಿದಂತಾಗಿದೆ ಎಂಬ ಅಭಿಪ್ರಾಯದಿಂದ 'ಉಕ್ತಪ್ರಾಯತ್ವಾತ್' ಎಂದು ಹೇಳಿದ್ದಾರೆ. 'ಸ್ವತಃ' ಎಂದರೆ ಶ್ರುತ್ಯಾದಿಗಳು ಎರಡೂ ಕಡೆ ಸಮಾನವಾದ್ದರಿಂದ ಎಂದರ್ಥ.

**प्रकाशः – पादद्वयेति ।।** लोकतोऽन्यत्रप्रसिद्धिः पादद्वयेन च ब्रह्मण्यापादितेत्युभयत्रप्रसिद्धानामित्यर्थः ।

'ಪಾದದ್ವಯಾಪಾದಿತ ಉಭಯತ್ರಪ್ರಸಿದ್ಧಿನಾಂ' ಎಂದರೆ ಲೋಕತಃ ಅನ್ಯತ್ರಪ್ರಸಿದ್ಧವಾದ ಮತ್ತು ಹಿಂದಿನ ಎರಡು ಪಾದಗಳಿಂದ ಬ್ರಹ್ಮನಲ್ಲಿ ಆಪಾದಿತವಾದ್ದರಿಂದ ಉಭಯತ್ರಪ್ರಸಿದ್ಧವಾದ ಎಂದರ್ಥ.

**प्रकाशः –** एकदेश आपादितप्रसिद्धित्वादापादितोभयेत्युक्तम् । स्वतः न्यायमन्तरेण । उक्तसमाधावतिप्रसङ्गमाशंक्य प्रागुक्तं स्मारयति ।। **न चैवमिति ।। सर्वगतत्वेति ।।** लिङ्गपादोक्तानामित्यर्थः ।

ಏಕದೇಶವು ಆಪಾದಿತವಾಗಿ ಪ್ರಸಿದ್ಧವಾದ್ದರಿಂದ 'ಆಪಾದಿತೋಭಯ' ಎಂದಿದ್ದಾರೆ 'ಸ್ವತಃ' ಎಂದರೆ ನ್ಯಾಯವನ್ನು ಅಪೇಕ್ಷೆ ಪಡದೆ ಎಂದರ್ಥ. ಹಿಂದೆ ಹೇಳಿದ ಸಮಾಧಾನದಲ್ಲಿ ಅತಿಪ್ರಸಂಗವನ್ನು ಆಶಂಕಿಸಿ, ಹಿಂದೆ ಹೇಳಿದ ಉತ್ತರವನ್ನೇ ಸ್ಮರಣೆಗೆ ತರುತ್ತಿದ್ದಾರೆ 'ನಚೈವಮ್' ಇತ್ಯಾದಿ ಗ್ರಂಥದಿಂದ. 'ಸರ್ವಗತತ್ವಾದಿಲಿಂಗಾನಾಂ' ಎಂದರೆ ಲಿಂಗಪಾದದಲ್ಲಿ ಹೇಳಿದ ಸರ್ವಗತತ್ವವೇ ಮೊದಲಾದ ಲಿಂಗಗಳು ಎಂದರ್ಥ.

**प्रकाशः –** तर्ह्यत्राप्येवं स्यादित्यत आह – **वज्र इति ।।** लिङ्गानामन्यथासिद्धौ कोट्यन्तरप्रापकाभावमाशंक्याह – **न चैवमिति ।। आहेति ।।** व्याख्यातमेतत् ।

ಹಾಗಾದರೆ ಸರ್ವಗತತ್ವಾದಿಲಿಂಗಗಳಂತೆ 'ವಜ್ರ' ಶಬ್ದದಲ್ಲಿಯೂ ಸಹ ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ವಜ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಲಿಂಗಗಳು ಅನ್ಯಥಾಸಿದ್ಧವಾದಾಗ ಪೂರ್ವಪಕ್ಷಕೋಟಿಗೆ ಪ್ರಾಪಕವಾದ ಲಿಂಗಗಳೇ ಇಲ್ಲವೆಂದು ಆಶಂಕಿಸುತ್ತಿದ್ದಾರೆ 'ನಚೈವಮ್' ಇತ್ಯಾದಿ ಗ್ರಂಥದಿಂದ. 'ಆಹೋಭಯಗತತ್ವಂಚ' ಎಂಬ ಅನುವ್ಯಾಖ್ಯಾನ ಶ್ಲೋಕವನ್ನು ತೃತೀಯಪಾದದ ಪ್ರಾರಂಭದಲ್ಲಿಯೇ ವ್ಯಾಖ್ಯಾನ ಮಾಡಿದ್ದೇವೆ.

**प्रकाशः –** संशयपूर्वपक्षस्यापि विष्णुरेवेत्यवधारणविरोधफलकत्वं प्रागन्तर्नय एवावोचामेति भावः ।

ಸಂಶಯರೂಪವಾದ ಪೂರ್ವಪಕ್ಷವನ್ನೇಕೆ ಮಾಡಬೇಕು? ಎಂದು ಪ್ರಶ್ನಿಸಬಾರದು. ವಿಷ್ಣುವೇ ವಜ್ರಾದಿಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಇತ್ಯಾದಿಯಾದ ಅವಧಾರಣಪೂರಕವಾದ ಸಿದ್ಧಾಂತಕ್ಕೆ ಸಂಶಯರೂಪವಾದ ಪೂರ್ವಪಕ್ಷವು ವಿರೋಧವೇ ಆಗಿರುತ್ತದೆ. ಆದ್ದರಿಂದ ಇಂತಹ ಪೂರ್ವಪಕ್ಷವನ್ನೂ ಕೂಡ ನಿರಾಕರಣೆ ಮಾಡಬೇಕೆಂದು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣದಲ್ಲಿ ಸ್ಪಷ್ಟಪಡಿಸಿದ್ದೇವೆ.

ಪರಿಪೂರ್ಣಚಂದ್ರಿಕಾ

**प्रकाशः** – अस्मिन्पक्षे विष्णुरेवेत्यवधारणं युक्तमयुक्तं वेति प्रतिनयं संशयो बोध्यः ।

ಹೀಗೆ ಸಂಶಯರೂಪವಾದ ಪೂರ್ವಪಕ್ಷವನ್ನು ಯಾವ ಅಧಿಕರಣದಲ್ಲಿ ಮಾಡಲಾಗುತ್ತದೋ, ಅಲ್ಲಿ 'ವಿಷ್ಣುರೇವ ಇತ್ಯವಧಾರಣಂ ಯುಕ್ತಮಯುಕ್ತಂ ವಾ' ವಿಷ್ಣುವೇ ಇಂತಹ ಶಬ್ದ ಪ್ರತಿಪಾದ್ಯನಾಗಿದ್ದಾನೆಂಬುದು ಯುಕ್ತವೋ, ಅಯುಕ್ತವೋ? ಎಂಬ ಬಗೆಯಲ್ಲಿ ಸಂಶಯವನ್ನು ತೋರಿಸಬೇಕು ಹೊರತು, ವಿಷ್ಣು ಇಂತಹ ಶಬ್ದದಿಂದ ಪ್ರತಿಪಾದ್ಯನೋ, ಅಲ್ಲವೋ? ಎಂಬ ಸಂಶಯವನ್ನು ತೋರಿಸಬಾರದು.

**प्रकाशः** – ननु ''द्युभ्वाद्याश्रयो विष्णोरितर एव । अयं प्राणशब्दो वायुवाच्येवोत्क्रमणलिङ्गात् । एतदक्षरं मध्यमं श्रीतत्त्वमेव'' इत्यादिना टीकायां प्रत्यधिकरणमवधारणेन पूर्वपक्षो विरुध्यत इति चेन्न ।

ಶಂಕೆ - ಹಿಂದಿನ ಪಾದದಲ್ಲಿ ಎಲ್ಲಾ ವಿಧವಾದ ಲಿಂಗಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾಯಿತು. ಹಾಗಾದರೆ ಈ ಪಾದದಲ್ಲಿ ಲಿಂಗಗಳ ಆಧಾರದಿಂದಲೇ ವಿಷ್ಣುವಲ್ಲ, ಬೇರೆ ಪದಾರ್ಥವೇ ಆಯಾ ಲಿಂಗ ಹಾಗೂ ನಾಮಗಳಿಂದ ಪ್ರತಿಪಾದ್ಯವಾಗಿದೆಯೆಂದು ಪೂರ್ವಪಕ್ಷ ಮಾಡುವುದು ಹೇಗೆ ಸರಿಯಾಗುತ್ತದೆ. ದ್ಯುಭ್ವಾದ್ಯಧಿಕರಣದಲ್ಲಿ ದ್ಯುಭ್ವಾದ್ಯಾಶ್ರಯವಾದದ್ದು ವಿಷ್ಣುವಿಗಿಂತ ಭಿನ್ನವಾದ ಪದಾರ್ಥವೇ ಆಗಿದೆ ಎಂದು ಹೇಳುತ್ತಾರೆ ಮತ್ತು ಭೂಮಾಧಿಕರಣದಲ್ಲಿ ಪ್ರಾಣಶಬ್ದವಾಚ್ಯರಾದವರು ಮುಖ್ಯಪ್ರಾಣದೇವರೇ ಆಗಿದ್ದಾರೆ ಏಕೆಂದರೆ ಉತ್ಕ್ರಮಣಲಿಂಗವಿರುವುದರಿಂದ ಎಂದು ಹೇಳಿದ್ದಾರೆ. 'ಏತದಕ್ಷರಂ ಮಧ್ಯಮಂ ಶ್ರೀತತ್ವಮೇವ' ಎಂಬಲ್ಲಿಯೂ ಕೂಡ ಶ್ರೀತತ್ವವೇ ಅಕ್ಷರಶಬ್ದವಾಚ್ಯವಾದದ್ದು ಎಂದು ಪ್ರತಿಪಾದನೆ ಮಾಡಿದ್ದಾರೆ. ಹೀಗೆ ದ್ಯುಭ್ವಾದ್ಯಾಶ್ರಯೋ ವಿಷ್ಣೋರಿತರ ಏವ । ಅಯಂ ಪ್ರಾಣಶಬ್ದೋ ವಾಯುವಾಚ್ಯೇವೋತ್ಕ್ರಮಣಲಿಂಗಾತ್ । ಏತದಕ್ಷರಂ ಮಧ್ಯಮಂ ಶ್ರೀತತ್ತ್ವಮೇವ' ಇತ್ಯಾದಿ ಟೀಕೆಯಲ್ಲಿ ಹೇಳಿದ್ದಾರೆ. ಆದ್ದರಿಂದ ಪ್ರತ್ಯಧಿಕರಣದಲ್ಲಿಯೂ ಅವಧಾರಣಪೂರಕವಾಗಿ ಪೂರ್ವಪಕ್ಷ ಮಾಡುವುದು ತಪ್ಪಲ್ಲವೇ?

**प्रकाशः** – अत्रत्यानां नामलिङ्गानां प्राक् साक्षादसमन्वितत्वाभिप्रायेण वा प्राक्पादीयन्यायविषयाणामशेषाणां नामलिङ्गानां समन्वयेऽप्येषां तन्न्यायाविषयत्वाभिप्रायेण वा निरवकाशत्वमुपेत्य पूर्वपक्षोक्तेरिति भावः ।

ಸಮಾಧಾನ - ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ನಾಮಾತ್ಮಕವಾದ ಶಬ್ದಗಳು ಹಾಗೂ ಲಿಂಗಾತ್ಮಕವಾದ ಶಬ್ದಗಳು ಹಿಂದಿನೆರಡು ಪಾದಗಳಲ್ಲಿ ಸಮನ್ವಯವಾಗಿಲ್ಲ. ಈ ಅಭಿಪ್ರಾಯದಿಂದ ಆಯಾಲಿಂಗಗಳ ಬಲದಿಂದ ಅವಧಾರಣಪೂರಕವಾದ ಪೂರ್ವಪಕ್ಷವನ್ನು ಮಾಡಿದ್ದಾರೆ. ಅಥವಾ ಹಿಂದಿನ ಎರಡು ಪಾದಗಳಲ್ಲಿ ಪ್ರಸಕ್ತವಾದ ನ್ಯಾಯಗಳಿಗೆ ವಿಷಯವಾದ ಎಲ್ಲಾ ಬಗೆಯ ನಾಮಲಿಂಗಾತ್ಮಕಶಬ್ದಗಳು ಸಮನ್ವಯವಾಗಿದ್ದರೂ ಆಯಾ ನ್ಯಾಯಗಳಿಗೆ ವಿಷಯವಾಗದ ಶಬ್ದಗಳ ಸಮನ್ವಯವು ಸಿದ್ಧವಾಗಿಲ್ಲ. ಅಂತಹ ಲಿಂಗಗಳ ಬಲದಿಂದ ಇಲ್ಲಿ ಅವಧಾರಣಪೂರ್ವಪಕ್ಷವನ್ನು ಮಾಡಿರುತ್ತಾರೆ. ಅಥವಾ

ಆಯಾಲಿಂಗಗಳಿಗೆ ಪೂರ್ವಪಕ್ಷ ವಿಷಯದಲ್ಲಿ ನಿರವಕಾಶತ್ವದ ಅಭಿಮಾನವನ್ನು ಮಾಡಿ, ಪೂರ್ವಪಕ್ಷವನ್ನು ಮಾಡಿರುತ್ತಾರೆ. ಹೀಗೆ ಮೂರು ಬಗೆಯ ಸಮಾಧಾನಗಳನ್ನು ತಿಳಿದುಕೊಳ್ಳಬೇಕು.

**प्रकाशः –** ननु यद्युक्तरीत्या ब्रह्मतदन्ययोरापादितस्वारसिकप्रयोगसाधारण्येनोभयप्रसिद्धता तर्हि टीकायां ब्राह्मलिङ्गैर्ब्रह्मणि लोकतोऽन्यत्र चेत्येवमुभयप्रसिद्ध्युक्तिर्विरुध्यते । अतिप्रसङ्गश्चास्मिन्पक्षे प्रागभ्यधायीत्यतस्तामप्येवमेव नयति – **लोकेति** ।।

ಒಂದುವೇಳೆ ವಜ್ರಶಬ್ದವು ಬ್ರಹ್ಮ ಹಾಗೂ ಬೇರೆ ಪದಾರ್ಥದಲ್ಲಿ ಆಪಾದಿತವಾದ ಮತ್ತು ಸ್ವಾರಸಿಕವಾದ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧವಾಗಿದೆಯೆಂದು ಹೇಳುವುದಾದರೆ ಟೀಕಾವಿರೋಧವು ಬರುತ್ತದೆ. ಏಕೆಂದರೆ ಟೀಕೆಯಲ್ಲಿ ಬ್ರಹ್ಮನ ಲಿಂಗದಿಂದ ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ. ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿದೆಯೆಂದು ಉಭಯತ್ರಪ್ರಸಿದ್ಧಿಯಾಗಿದೆಯೆಂದು ಹೇಳಿದ್ದಾರೆ. ಅದರ ವಿರೋಧವೂ ಬರುತ್ತದೆ. ಮತ್ತು ಆಕಾಶಾದಿಪದಗಳೂ ಕೂಡ ಉಭಯತ್ರಪಸಿದ್ಧವಾಗಬೇಕಾದೀತೆಂಬ ಅತಿಪ್ರಸಂಗವನ್ನು ಈ ಹಿಂದೆಯೇ ಹೇಳಲಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಟೀಕಾವಾಕ್ಯವನ್ನೂ ಕೂಡ ಇದರಂತೆ ವ್ಯಾಖ್ಯಾನ ಮಾಡುತ್ತಿದ್ದಾರೆ 'ಲೋಕ' ಇತ್ಯಾದಿ ಗ್ರಂಥದಿಂದ.

**प्रकाशः –** आकाशादिशब्दे तु नैवम् । ततः पूर्वं लिङ्गानामसमन्वितत्वादिति भावः ।

'ಆಕಾಶ' ಮೊದಲಾದ ಶಬ್ದಗಳಲ್ಲಿ ಹೀಗೆ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಗದು. ಏಕೆಂದರೆ ಪ್ರಥಮಪಾದದಲ್ಲೇ ಆಕಾಶಾದಿಶಬ್ದಗಳು ಪ್ರಸಕ್ತವಾಗಿವೆ. ಅದಕ್ಕಿಂತ ಹಿಂದೆ ಯಾವುದೇ ಲಿಂಗಗಳನ್ನೂ ಕೂಡ ಸಮನ್ವಯ ಮಾಡಿರುವುದಿಲ್ಲ.

**प्रकाशः –** एवं टीकोक्तं साधारण्यं समर्थ्यान्यत्रप्रसिद्धत्वेऽप्यत्र निवेशो युक्त इति भावेनात्र निवेशे निमित्तद्वयमाह – **यद्वेत्यादिना** ।।

ಇಲ್ಲಿಯ ತನಕ ಟೀಕೆಯಲ್ಲಿ ಹೇಳಿದಂತೆ ವಜ್ರಾದಿಶಬ್ದಗಳಿಗೆ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಅನ್ಯತ್ರಪ್ರಸಿದ್ಧವೆಂದು ಒಪ್ಪಿದರೂ ಈ ಪಾದದಲ್ಲಿ ಕಂಪನಾಧಿಕರಣವನ್ನು ನಿವೇಶ ಮಾಡಿದ್ದು ಯುಕ್ತವೇ ಆಗಿದೆ ಎಂಬ ಅಭಿಪ್ರಾಯದಿಂದ ಎರಡು ನಿಮಿತ್ತಗಳನ್ನು ಹೇಳುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥದಿಂದ.

**प्रकाशः – यदष्टाकपाल इति** ।। ''वैश्वानरं द्वादशकपालं निर्वपेत्'' इति वैश्वानरवाक्ये श्रुतस्य ''यदष्टाकपालो भवति'' इत्यादेर्गुणविधिनामधेयत्वार्थवादत्वविचारस्यार्थवादपाद एव निवेशो कर्तव्ये नामधेयत्वरूपावान्तरसङ्गतिलोभान्नाम-

धेयपादे ''पूर्ववन्तोऽविधानार्थास्तत्सामर्थ्यं समाम्नाय'' इति द्वादशाधिकरणे स विचारः कृतस्तथेहापि ।

'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್' ಎಂಬ ವೈಶ್ವಾನರವಾಕ್ಯದಲ್ಲಿ 'ಯದಷ್ಟಾಕಪಾಲೋ ಭವತಿ' ಎಂಬ ವಾಕ್ಯವು ಶ್ರುತವಾಗಿದೆ. ಇದು ಗುಣವಿಧಾಯಕವೋ, ನಾಮಧೇಯವೋ, ಅಥವಾ ಅರ್ಥವಾದವೋ? ಎಂದು ಸಂಶಯ ಬಂದಾಗ ಅರ್ಥವಾದವೇ ಆಗಿದೆಯೆಂದು ನಿರ್ಣಯಿಸಲಾಗಿದೆ. ಆದ್ದರಿಂದ ಇದನ್ನು ಪೂರ್ವಮೀಮಾಂಸೆಯ ಅರ್ಥವಾದಪಾದದಲ್ಲಿ ನಿವೇಶ ಮಾಡಬೇಕಿತ್ತು. ಆದರೂ ಸಹ ನಾಮಧೇಯತ್ವವೆಂಬ ಅವಾಂತರಸಂಗತಿಯ ಲೋಭದಿಂದ ನಾಮಧೆಯಪಾದದಲ್ಲಿ ನಿವೇಶ ಮಾಡಿದ್ದಾರೆ. 'ಪೂರ್ವವಂತೋಽವಿಧಾನಾರ್ಥಾಸ್ತತ್ ಸಾಮರ್ಥ್ಯಂ ಸಮಾಮ್ನಾಯಃ' (೧-೪-೧೨) ಎಂಬ ಅಧಿಕರಣದಲ್ಲಿ ಈ ವಿಚಾರವು ಪ್ರಸಕ್ತವಾಗಿದೆ. ಅದರಂತೆ ಪ್ರಕೃತ ಕಂಪನಾಧಿಕರಣ ಹಾಗೂ ಸುಷುಪ್ತ್ಯಧಿಕರಣಗಳು ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳನ್ನು ಸಮನ್ವಯ ಮಾಡುತ್ತಿದ್ದರೂ ಸಹ ಹಿಂದಿನ ಅಧಿಕರಣದಿಂದ ಸಂಗತಿಯು ದೊರೆಯುವ ಕಾರಣದಿಂದ ಈ ಪಾದದಲ್ಲಿ ನಿವೇಶ ಮಾಡಿದ್ದಾರೆಂದು ತಿಳಿಯಬೇಕು.

**प्रकाशः** – यथा पूर्वत्र वाक्यशेषस्थशूचद्रवणरूपयोगबलेन शूद्रशब्दः यौगिक इत्युक्तं तथा ''वर्जनाद्वज्रमुच्यते'' इत्यादिस्मृतिगतयोगबलाद्वज्रादिशब्दोऽपि यौगिक एवेत्येवंरूपावान्तरसङ्गतिलोभादत्र निवेश इत्यर्थः ।।

ಹಿಂದಿನ ಅಧಿಕರಣದ ವಾಕ್ಯಶೇಷದಲ್ಲಿ 'ಶುಚ ದ್ರವಣ' ಎಂಬ ಯೋಗದ ಬಲದಿಂದ ಶೂದ್ರಶಬ್ದವು ಯೌಗಿಕವಾಗಿದೆಯೆಂದು ಹೇಗೆ ಹೇಳಲಾಯಿತೋ, ಅದರಂತೆ ಇಲ್ಲಿಯೂ ಸಹ 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಯಲ್ಲಿರುವ 'ವಜ್ರ' ಶಬ್ದದ ಯೋಗದ ಬಲದಿಂದ ವಜ್ರಾದಿಶಬ್ದಗಳೂ ಕೂಡ ಯೌಗಿಕವೇ ಆಗಿವೆಯೆಂದು ಅವಾಂತರಸಂಗತಿಯನ್ನು ಹೇಳಬಹುದು. ಈ ಅವಾಂತರಸಂಗತಿಯನ್ನು ತೋರಿಸುವ ಲೋಭದಿಂದ ಇಲ್ಲಿಯೇ ಕಂಪನಾಧಿಕರಣವನ್ನು ನಿವೇಶಿಸಿದ್ದಾರೆ.

**प्रकाशः** – **इति दर्शयितुमिति** ।। अत्र निवेशे ह्युभयप्रसिद्धता सूच्यते । सा च न विष्णुपरतां विना सिध्यति । सा चोक्तदिशा प्राक्तनन्यायमन्तरा न सिद्धेत्यर्थः । नामलिङ्गपादन्यायेनोभयत्रप्रसिद्धतायामतिप्रसङ्गमाशंक्यैकस्समाधिरुक्तः ।

'ವಜ್ರ' ಶಬ್ದವನ್ನು ಇಲ್ಲಿ ಸಮನ್ವಯ ಮಾಡುತ್ತಿರುವುದರಿಂದ, ಉಭಯತ್ರಪ್ರಸಿದ್ಧತ್ವವು ಸೂಚಿತವಾಗಿದೆ. ವಿಷ್ಣುಪರತ್ವವಿಲ್ಲದೇ, ಉಭಯತ್ರಪ್ರಸಿದ್ಧವೆಂದು ಸಿದ್ಧವಾಗುವುದಿಲ್ಲ. ವಿಷ್ಣುಪರತ್ವವಾದರೂ ಸಹ ಹಿಂದಿನ ಪಾದದ ನ್ಯಾಯವಿಲ್ಲದೇ ಸಿದ್ಧವಾಗುವುದಿಲ್ಲ. ಆದ್ದರಿಂದ ನಾಮಪಾದ ಹಾಗೂ ಲಿಂಗಪಾದಗಳ ನ್ಯಾಯದಿಂದ ಉಭಯತ್ರಪ್ರಸಿದ್ಧವೆಂದು ಸಿದ್ಧವಾದ ಮೇಲೆ ಅತಿಪ್ರಸಂಗವನ್ನು ಆಶಂಕಿಸಿ ಸಮಾಧಾನವನ್ನು ಹೇಳುತ್ತಿದ್ದಾರೆ. ಇದರಿಂದ ಹಿಂದಿನ ಎರಡು ಪಾದಗಳಲ್ಲಿ ಸಕಲವಿಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ

ಸಮನ್ವಯವನ್ನು ಮಾಡಿದ್ದಾರೆಂದು ಸೂಚಿಸಲು ವಜ್ರಶಬ್ದದ ಸಮನ್ವಯವನ್ನು ಇಲ್ಲಿ ಮಾಡಿದ್ದಾರೆಂದು ತಿಳಿಯಬೇಕು.

ಪಾಂಡುರಂಗಿಕೇಶವಾಚಾರ್ಯವಿರಚಿತ

# ಗುರುರಾಜೀಯಮ್ (ಭಾವದೀಪ)

**गुरुराजीयम् – ॐ कंपनात् ॐ ।।** टीकोक्तं भगवल्लिङ्गेन भगवत्परत्वमनुपपन्नम् । आकाशादिशब्दानामप्युभयत्र प्रसिद्धतापातादित्यतस्तस्याभिप्रायं वक्तुं शङ्कते – **यद्यपीत्यादिना ।।** वज्रशब्दस्य स्वप्नद्रष्टृत्वादिलिङ्गस्य च साक्षात्समन्वयानुक्तावपि नामान्तरसमन्वयेन वज्रशब्दस्यापि नामत्वेन तत्साजात्येन तत्समन्वयस्याप्युक्तत्वात् लिङ्गत्वेन सजातीयलिङ्गान्तरसमन्वयोक्त्या स्वप्नद्रष्टृत्वादिलिङ्गस्याप्युक्तत्वादित्य- भिप्रायेण प्रायशब्दः । यदि नामलिङ्गपादन्यायेन वज्रादिशब्दानां स्वप्नद्रष्टृत्वादिलिङ्गानां च ब्रह्मणि प्रयोगाद्ब्रह्मणि लोकतश्चान्यत्रेत्युभयसाधारण्यं तर्हि लिङ्गेन च भगव- त्परत्वादुभयत्र प्रसिद्ध्यापत्त्या टीकोक्तप्रकारस्य यथाश्रुतस्यासम्भवात्तत्राप्ययमेवार्थोऽ- नुसन्धेय इति भावेनाह – **लोकप्रसिद्ध्येति ।।** नन्वेवं भगवल्लिङ्गेन भगवत्परत्व- मित्यादिटीकाया नामलिङ्गपादन्यायेन भगवल्लिङ्गैस्तत्परतायाः सिद्धप्रायत्वादित्य- भिप्रायकल्पने टीकाया गौणत्वं स्यात् । अतष्टीकास्वारस्यानुरोधेन पक्षान्तरमाह **यद्वेति ।।**




ಕಂಪನಾಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. ಮುಂದಿನ ಸುಷುಪ್ತ್ಯಧಿಕರಣದಲ್ಲಿ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವನ್ನು ಸಮನ್ವಯ ಮಾಡುತ್ತಾರೆ. ಪ್ರಥಮ ಪಾದದಲ್ಲಿ 'ವಜ್ರ' ಎಂಬ ಶಬ್ದದ ಸಮನ್ವಯವು ಅಲ್ಲಿರುವ ಸಮಾನನ್ಯಾಯಗಳಿಂದ ಮಹಾವಿಷ್ಣುವಿನಲ್ಲಿ ಒಮ್ಮೆ ಸಮನ್ವಯಗೊಂಡಿದೆ. ಸ್ವಪ್ನಾದಿದ್ರಷ್ಟೃತ್ವಲಿಂಗವೂ ಸಹ ದ್ವಿತೀಯಪಾದದ ಸಮಾನನ್ಯಾಯದಿಂದ ವಿಷ್ಣುವಿನಲ್ಲಿ ಸಮನ್ವಯಗೊಂಡಿದೆ. ಆದರೆ ಇಂದ್ರದೇವರ ವಜ್ರಾಯುಧದಲ್ಲಿಯೂ ಸಹ 'ವಜ್ರ' ಶಬ್ದದ ಪ್ರಯೋಗವಿದೆ. ಜೀವನಲ್ಲಿಯೂ ಸ್ವಪ್ನದ್ರಷ್ಟೃತ್ವಲಿಂಗವು ಪ್ರಸಿದ್ಧವಾಗಿವೆ. ಆ ಕಾರಣದಿಂದ ಈ 'ವಜ್ರ' ಶಬ್ದ ಹಾಗೂ ಸ್ವಪ್ನದ್ರಷ್ಟೃತ್ವ ಲಿಂಗಗಳೆರಡೂ ಉಭಯತ್ರಪ್ರಸಿದ್ಧವೆನಿಸುತ್ತವೆ. ಈ ಪಾದದಲ್ಲಿ ಕೆಲವು ಸ್ವತಃಸಿದ್ಧವಾದ ಉಭಯತ್ರಶಬ್ದಗಳಾಗಿರುತ್ತದೆ. ಇನ್ನು ಕೆಲವು ಪಾದದ್ವಯಾಪಾದಿತವಾಗಿ ಉಭಯತ್ರಪ್ರಸಿದ್ಧವಾಗಿರುತ್ತವೆ. ಅಂತು ಯಾವುದೇ ಒಂದು ವಸ್ತುವನ್ನು ನಿರ್ಧಾರವಾಗಿ ಪ್ರತಿಪಾದನೆ ಮಾಡಲು

ಆ ಶಬ್ದಗಳಿಗೆ ಸಾಮರ್ಥ್ಯವಿರುವುದಿಲ್ಲ. ಅಂತಹ ಶಬ್ದಗಳು ಬ್ರಹ್ಮನನ್ನು ಮಾತ್ರ ಪ್ರತಿಪಾದಿಸುತ್ತವೆಂದು ಸಮರ್ಥನೆ ಮಾಡಲು ತೃತೀಯಪಾದವು ಹೊರಟಿದೆ. ಹೀಗೆ ಹೇಳಿದ್ದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಿರುವ ಆಕಾಶಾದಿಶಬ್ದಗಳೂ ಕೂಡ ಉಭಯತ್ರಪ್ರಸಿದ್ಧವಾಗಲಿ ಎಂಬ ಆಶಂಕೆಗೆ ಅವಕಾಶವಿಲ್ಲ.

'ವಜ್ರ' ಶಬ್ದವು 'ಉದ್ಯತತ್ವ' ಎಂಬ ಲಿಂಗದಿಂದ ಇಂದ್ರಾಯುಧದಲ್ಲಿ ಪ್ರಸಿದ್ಧವಾಗಿದೆ. ಹಾಗಾಗಿ ಅನ್ಯತ್ರಪ್ರಸಿದ್ಧವಾಗಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಈಗಾಗಲೇ ಹಿಂದಿನ ಲಿಂಗಪಾದದಲ್ಲಿ 'ಉದ್ಯತತ್ವ' ಎಂಬ ಲಿಂಗವೂ ಕೂಡ ಸಮಾನನ್ಯಾಯದಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಗಿದೆ. ಇಂತಹ ಲಿಂಗವು ವಿಷ್ಣುವನ್ನು ಬಿಟ್ಟು ಬೇರೆಕಡೆ ಬರುವುದಿಲ್ಲ. ಇದರ ಬಲದಿಂದ ವಜ್ರಾದಿಶಬ್ದಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಜ್ರಶಬ್ದವು ಲಿಂಗದ ಬಲದಿಂದಲೂ ಅನ್ಯತ್ರಪ್ರಸಿದ್ಧವೆಂದು ಸಿದ್ಧವಾಗುವುದಿಲ್ಲ. ಆದರೆ ಹಿಂದಿನ ಪಾದದಲ್ಲಿ ಸಮನ್ವಯ ಮಾಡಿದ ಆದಿತ್ಯಾದಿಶಬ್ದಗಳು ಅನ್ಯತ್ರಪ್ರಸಿದ್ಧವಾಗುತ್ತವೆ. ಏಕೆಂದರೆ ಅದಕ್ಕಿಂತ ಹಿಂದಿನ ಪಾದದಲ್ಲಿ ಲಿಂಗಸಮನ್ವಯವನ್ನು ಮಾಡದ ಕಾರಣ ಸರ್ವಪುರುಷಾಭಿಮುಖ್ಯ ಮೊದಲಾದ ಲಿಂಗಗಳೇ ಅನ್ಯತ್ರಪ್ರಸಿದ್ಧವಾಗಿವೆ. ಅದರ ಬಲದಿಂದ ಆದಿತ್ಯಾದಿಶಬ್ದಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತದೆ. ಹೀಗೆ ಅನ್ಯತ್ರಪ್ರಸಿದ್ಧವಾದ ಆದಿತ್ಯಾದಿಶಬ್ದಗಳ ಬಲದಿಂದ ಸರ್ವಗತತ್ವಾದಿಲಿಂಗಗಳು ಅನ್ಯತ್ರಪ್ರಸಿದ್ಧವೇ ಆಗುತ್ತವೆ ಹೊರತು, ವಜ್ರಶಬ್ದದಂತೆ ಉಭಯತ್ರಪ್ರಸಿದ್ಧವಾಗಲಿ ಎಂದು ಆಕ್ಷೇಪ ಮಾಡಲಾಗದು.

ಅಥವಾ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ವಜ್ರ' ಶಬ್ದವಾಗಲೀ, ಸುಷುಪ್ತ್ಯಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವಾಗಲಿ ಅನ್ಯತ್ರಪ್ರಸಿದ್ಧವೆಂದೇ ವಿವಕ್ಷಿಸೋಣ. ಆದರೂ ಕೂಡ ಉಭಯತ್ರಪ್ರಸಿದ್ಧವಾದ ಪಾದದಲ್ಲಿ ಸಮನ್ವಯ ಮಾಡುವುದು ಅಸಂಗತವಲ್ಲ. ಶ್ರೀಮದಾಚಾರ್ಯರು ನಾಲ್ಕನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಪ್ರಾಯಿಕತ್ವಾಚ್ಚ ಅಧ್ಯಾಯಾನಾಂ ಪಾದಾನಾಂಚ ನ ವಿರೋಧಃ' ಪ್ರತಿಯೊಂದು ಅಧ್ಯಾಯಗಳು ಹಾಗೂ ಪಾದಗಳಲ್ಲಿ ಆಯಾ ವಿಷಯಗಳನ್ನು ಹೆಚ್ಚಾಗಿ ಸಮನ್ವಯ ಮಾಡುವುದರಿಂದಷ್ಟೇ ಅಧ್ಯಾಯವ್ಯವಸ್ಥೆ ಹಾಗೂ ಪಾದವ್ಯವಸ್ಥೆಗಳಿರುತ್ತವೆಂದು ಹೇಳಿರುತ್ತಾರೆ. ಅದರಂತೆ ಮೂರನೇಯ ಪಾದದಲ್ಲಿಯೂ ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳನ್ನು ಹೆಚ್ಚಾಗಿ ಸಮನ್ವಯ ಮಾಡುವ ಕಾರಣದಿಂದ, ನಾಮಲಿಂಗಪಾದ ಎಂದು ಕರೆಸಿಕೊಳ್ಳುತ್ತದೆ. ತನ್ಮಾತ್ರದಿಂದ ಅನ್ಯತ್ರಪ್ರಸಿದ್ಧವಾದ ಶಬ್ದವನ್ನು ಸಮನ್ವಯ ಮಾಡಲೇಬಾರದೆಂಬ ನಿಯಮವೇನೂ ಇರುವುದಿಲ್ಲ. ಅಥವಾ ಅನ್ಯತ್ರಪ್ರಸಿದ್ಧವಾದ ಶಬ್ದವನ್ನು ಇಲ್ಲಿ ಸಮನ್ವಯ ಮಾಡಿದ್ದರಿಂದ ಹೊಸದೊಂದು ಸಮನ್ವಯವನ್ನು ತಿಳಿಸಿದ್ದಾರೆ - ಹಿಂದಿನೆರಡು ಪಾದಗಳಲ್ಲಿ ಕೆಲವು ನಾಮಾತ್ಮಕವಾದ ಹಾಗೂ ಲಿಂಗಾತ್ಮಕವಾದ ಶಬ್ದಗಳನ್ನಷ್ಟೇ ಸಮನ್ವಯ ಮಾಡಿದ್ದಾರೆ. ಎಲ್ಲವನ್ನೂ ಕೂಡ ಕಂಠತಃ ಹೇಳಿಲ್ಲ. ಹೇಳದ ನಾಮಲಿಂಗಶಬ್ದಗಳೂ ಕೂಡ ಸಮಾನನ್ಯಾಯದಿಂದ ಮಹಾವಿಷ್ಣುವಿನಲ್ಲಿ ಸಮನ್ವಯಗೊಂಡಿವೆ. ಆದ್ದರಿಂದಲೇ ವಜ್ರಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಮಹಾವಿಷ್ಣುವಿನಲ್ಲಿ ಸಮಾನನ್ಯಾಯದಿಂದ ವಜ್ರಶಬ್ದವು ಸಮನ್ವಯವಾಗದಿದ್ದಲ್ಲಿ, ಉಭಯತ್ರಪ್ರಸಿದ್ಧವೆಂದು ಹೇಳಲು ಹೇಗೆ ತಾನೆ ಸಾಧ್ಯವಾಗುತ್ತಿತ್ತು. ಈ ಎಲ್ಲಾ ಕಾರಣಗಳಿಂದ 'ವಜ್ರ' ಶಬ್ದದ ಸಮನ್ವಯವನ್ನು ತೃತೀಯಪಾದದಲ್ಲೇ ಮಾಡುತ್ತಿರುವುದು ಅತ್ಯಂತ ಸಂಗತವಾಗಿರುತ್ತದೆ. ಅದರಂತೆ ಸುಷುಪ್ತ್ಯಧಿಕರಣದ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗಸಮನ್ವಯವೂ ಕೂಡ ಸುಸಂಗತವಾಗಿದೆ.



ಕಂಪನಾಧಿಕರಣ (೧-೩-೧೦)

## ವಜ್ರಶಬ್ದವು ಅನ್ಯತ್ರಪ್ರಸಿದ್ಧವೋ ಅಥವಾ ಉಭಯತ್ರಪ್ರಸಿದ್ಧವೋ ಎಂಬುದರ ಬಗ್ಗೆ ಹಲವು ಊಹೆಗಳು

### तात्पर्यचन्द्रिका

**केचित्तु आदित्यादिशब्दानां नामपादन्यायेनोभयत्रप्रसिद्धतायामपि समन्वेतव्यानां सर्वगतत्वादीनां न सा । अन्यत्रप्रसिद्धसाहचर्येणान्यत्रप्रसिद्धिवदुभयत्रप्रसिद्धसाहचर्येणोभयत्रप्रसिद्धेरनुक्तत्वात् । सर्वगतत्वादीनामन्यत्रप्रसिद्धता त्वन्यत्रप्रसिद्धलिङ्गसाहचर्यादित्याहुः ।**

ಅನುವಾದ - ಕೆಲವರು ಕಂಪನಾಧಿಕರಣಕ್ಕೆ ಸಂಗತಿಯನ್ನು ಹೀಗೆ ಹೇಳುತ್ತಾರೆ - 'ಆದಿತ್ಯ' ಮೊದಲಾದ ಶಬ್ದಗಳು ನಾಮಪಾದದ ನ್ಯಾಯದಿಂದ ಮಹಾವಿಷ್ಣುವಿನಲ್ಲಿ ಸಮನ್ವಯವಾಗಿವೆ. ಲೋಕತಃ ಸೂರ್ಯಾದಿಗಳಲ್ಲಿ ಪ್ರಸಿದ್ಧವಾಗಿರುವ ಕಾರಣ ಉಭಯತ್ರಪ್ರಸಿದ್ಧವೆನಿಸುತ್ತವೆ. ಆದರೆ ಆದಿತ್ಯಾದಿಶಬ್ದಗಳ ಸಾಹಚರ್ಯಮಾತ್ರದಿಂದ ಸರ್ವಗತತ್ವಾದಿಲಿಂಗಗಳು ಉಭಯತ್ರಪ್ರಸಿದ್ಧವಾಗುವುದಿಲ್ಲ. ಏಕೆಂದರೆ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಾಹಚರ್ಯದಿಂದ ಮತ್ತೊಂದು ಶಬ್ದವು ಅನ್ಯತ್ರಪ್ರಸಿದ್ಧವಾಗಬಹುದು. ಆದರೆ ಉಭಯತ್ರಪ್ರಸಿದ್ಧವಾದ ಶಬ್ದದ ಸಾಹಚರ್ಯದಿಂದ ಮತ್ತೊಂದು ಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆಂದು ಎಲ್ಲಿಯೂ ಹೇಳಿಲ್ಲ. ಹಾಗಾದರೆ ಸರ್ವಗತತ್ವ ಮೊದಲಾದ ಲಿಂಗಗಳು ಹೇಗೆ ಅನ್ಯತ್ರಪ್ರಸಿದ್ಧವಾದವು ಎಂದರೆ ಅನ್ಯತ್ರಪ್ರಸಿದ್ಧವಾದ 'ಸರ್ವಪುರುಷಾಭಿಮುಖ್ಯಮ್' ಮೊದಲಾದ ಲಿಂಗಗಳ ಸಾಹಚರ್ಯದಿಂದಷ್ಟೇ ಅನ್ಯತ್ರಪ್ರಸಿದ್ಧ ಎನಿಸಿದೆ. ಆದರೆ ಈ ಅಧಿಕರಣದಲ್ಲಿ 'ಉದ್ಯತತ್ವ' ಎಂಬ ಲಿಂಗವು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದರಿಂದ ಅದನ್ನು ಅನ್ಯತ್ರಪ್ರಸಿದ್ಧವೆಂದು ಹೇಳಲಾಗದು. ಆದರ ಸಾಹಚರ್ಯದಿಂದ 'ವಜ್ರ' ಶಬ್ದವೂ ಕೂಡ ಅನ್ಯತ್ರಪ್ರಸಿದ್ಧವಾಗುವುದಿಲ್ಲ.

**अन्येतु भयंकरत्वादीनामुभयत्रप्रसिद्धानेकलिङ्गानां समन्वयार्थमन्यत्रप्रसिद्धवज्रनामसमन्वयः । तथाचान्तरधिकरणवत्फलतः पादसङ्गतिः ।**

ಬೇರೆ ಕೆಲವರು ಹೀಗೆ ಹೇಳುತ್ತಾರೆ - 'ಮಹದ್ಭಯಂ ವಜ್ರಮುದ್ಯತಂ' ಎಂಬಲ್ಲಿ ಶ್ರುತವಾದ ಭಯಂಕರತ್ವ ಮೊದಲಾದ ಲಿಂಗಗಳನ್ನು ಈಗಾಗಲೇ ಹಿಂದಿನ ಪಾದದಲ್ಲಿ ಸಮನ್ವಯ ಮಾಡಿದ್ದರಿಂದ ಉಭಯತ್ರಪ್ರಸಿದ್ಧವಾಗಿವೆ. ಇಂತಹ ಭಯಂಕರತ್ವ, ಉದ್ಯತತ್ವ ಮೊದಲಾದ ಉಭಯತ್ರಪ್ರಸಿದ್ಧವಾದ ಅನೇಕ ಲಿಂಗಗಳ ಸಮನ್ವಯಕ್ಕೋಸ್ಕರ 'ವಜ್ರ' ಎಂಬ ಒಂದು ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಯಾವರೀತಿಯಾಗಿ ಪ್ರಥಮಪಾದದಲ್ಲಿ

ಅಂತಸ್ಥತ್ವಾಧಿಕರಣವು ಲಿಂಗಸಮನ್ವಯವನ್ನು ಮಾಡುತ್ತಿದ್ದರೂ ಅನೇಕ ನಾಮಗಳ ಸಮನ್ವಯಕ್ಕೋಸ್ಕರ ಹೊರಟಿದ್ದರಿಂದ ಪ್ರಥಮಪಾದದಲ್ಲಿ ಸಂಗತವಾಗಿದೆಯೋ, ಅದರಂತೆ ಈ ಅಧಿಕರಣವೂ ಸಹ ಉಭಯತ್ರಪ್ರಸಿದ್ಧವಾದ ಅನೇಕ ಲಿಂಗಗಳ ಸಮನ್ವಯಕ್ಕೋಸ್ಕರ ಅನ್ಯತ್ರಪ್ರಸಿದ್ಧವಾದ ಒಂದು 'ವಜ್ರ' ಎಂಬ ನಾಮಾತ್ಮಕಶಬ್ದವನ್ನು ಸಮನ್ವಯ ಮಾಡಲು ಹೊರಟಿದೆ. ಇದು ಅಸಂಗತವಾಗುವುದಿಲ್ಲ.

**यद्वा वज्रशब्दस्वप्नद्रष्टृत्वादेरुभयत्रप्रसिद्धभयंकरत्वचेतनत्वादिलिङ्गसाहचर्या-दुभयत्र प्रसिद्धिः ।**

ಅಥವಾ ವಜ್ರಶಬ್ದವು ಉಭಯತ್ರಪ್ರಸಿದ್ಧವಾದ ಭಯಂಕರತ್ವವೆಂಬ ಲಿಂಗದ ಸಾಹಚರ್ಯದಿಂದ ಉಭಯತ್ರಪ್ರಸಿದ್ಧವಾಗಿದೆ. ಸುಷುಪ್ತ್ಯಧಿಕರಣದಲ್ಲಿ ಸಮನ್ವಯ ಮಾಡುವ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವು ಉಭಯತ್ರಪ್ರಸಿದ್ಧವಾದ 'ಚೇತನತ್ವ' ಎಂಬ ಲಿಂಗದ ಸಾಹಚರ್ಯದಿಂದ ಉಭಯತ್ರಪ್ರಸಿದ್ಧವಾಗಿದೆ.

**अथवा यथा "व्रीहीनवहन्ति तण्डुलान्पिनष्टि" इत्यादौ "व्रीहीन्प्रोक्षति" इत्यादाविव द्वितीयाश्रुत्यैव गुणकर्मत्वसिद्धेः पुनर्विचारवैयर्थ्यपरिहाराय द्वितीयामतंत्रीकृत्य गुणकर्मत्वप्रधानकर्मत्वचिन्ता तथा वज्रादिशब्दानामन्यत्र-प्रसिद्धिमतंत्रीकृत्य विचारः ।**

ಅಥವಾ ಪೂರ್ವಮೀಮಾಂಸೆಯಲ್ಲಿ 'ವ್ರೀಹೀನವಹಂತಿ ತಂಡುಲಾನ್ಪಿನಷ್ಟಿ' ಇತ್ಯಾದಿ ಸ್ಥಳಗಳಲ್ಲಿ ಶ್ರುತವಾದ ದ್ವಿತೀಯಾವಿಭಕ್ತಿಯಿಂದಲೇ ಗುಣಕರ್ಮತ್ವವು ಸಿದ್ಧವಾಗುತ್ತದೆ. ಉದಾ:- 'ವ್ರೀಹೀನ್ ಪ್ರೋಕ್ಷತಿ' ಎಂಬಲ್ಲಿ ಕೇಳಿಸುತ್ತಿರುವ ದ್ವಿತೀಯಾವಿಭಕ್ತಿಯಿಂದಲೇ 'ವ್ರೀಹಿ' ಎಂಬುದು 'ಶೇಷಿ' ಎನಿಸುತ್ತದೆ. ಪ್ರೋಕ್ಷಣವು ವ್ರೀಹಿಗೆ ಮಾಡುವ ಸಂಸ್ಕಾರವಿಶೇಷರೂಪವಾದ್ದರಿಂದ 'ಶೇಷ' ಎನಿಸುತ್ತದೆ. ಎಲ್ಲೆಡೆಯೂ ದ್ವಿತೀಯಾವಿಭಕ್ತಿಯು ಗುಣಕರ್ಮತ್ವವನ್ನೇ ಹೇಳುತ್ತದೆ. ಅದರಂತೆ 'ವ್ರೀಹೀನವಹಂತಿ ತಂಡುಲಾನ್ಪಿನಷ್ಟಿ' ಎಂಬಲ್ಲಿಯೂ ವ್ರೀಹಿ ಮತ್ತು ತಂಡುಲಗಳು ಶೇಷಿಯೆಂದು ಅವಹನನ ಮತ್ತು ಪೇಷಣಗಳು ವ್ರೀಹಿಗೆ ಮಾಡುವ ಸಂಸ್ಕಾರ ವಿಶೇಷರೂಪವಾದ್ದರಿಂದ ಶೇಷವೆಂದು ಕರೆಸಿಕೊಳ್ಳುತ್ತವೆ. ಹೀಗೆ ದ್ವಿತೀಯಾಶ್ರುತಿಯಿಂದಲೇ ಸ್ಪಷ್ಟವಾಗಿ ವಿಷಯವು ತಿಳಿಯುವಾಗ ಇದರ ಬಗ್ಗೆ ಪುನಃ ವಿಚಾರ ಮಾಡುವುದು ವ್ಯರ್ಥ. ಆದರೂ ದ್ವಿತೀಯಾಶ್ರುತಿಯನ್ನು ಪರಿಗಣಿಸದೆ ಅವಹನನಾದಿಗಳು ಗುಣಕರ್ಮಗಳೋ ಅಥವಾ ಪ್ರಧಾನಕರ್ಮಗಳೋ? ಎಂಬ ವಿಚಾರವನ್ನು ಪ್ರತ್ಯೇಕವಾದ ಅಧಿಕರಣದಲ್ಲಿ ಮಾಡಿರುತ್ತಾರೆ. ಅದರಂತೆ ವಜ್ರಶಬ್ದ ಹಾಗೂ ಸ್ವಪ್ನದ್ರಷ್ಟೃತ್ವಲಿಂಗಗಳು ಅನ್ಯತ್ರಪ್ರಸಿದ್ಧವೇ ಆಗಿವೆ. ಆದರೂ ಅದನ್ನು ಪರಿಗಣಿಸದೇ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಿ, ಈ ಪಾದದಲ್ಲಿ ಸಮನ್ವಯ ಮಾಡುತ್ತಿದ್ದಾರೆ.

ಕಂಪನಾಧಿಕರಣ (೧-೩-೧೦)

**अथवा प्राणशब्दसमन्वयस्योक्तत्वादुभयत्र प्रसिद्धप्राणशब्दसाहित्याद्वज्रशब्दस्याप्युभयत्र प्रसिद्धतेत्याहुः ।**

ಅಥವಾ ಪ್ರಾಣಶಬ್ದದ ಸಮನ್ವಯವನ್ನು ಪ್ರಥಮಪಾದದಲ್ಲೇ ಮಾಡಿರುವುದರಿಂದ ಅದು ಉಭಯತ್ರಪ್ರಸಿದ್ಧವಾಗಿದೆ. ಅಂತಹ ಉಭಯತ್ರಪ್ರಸಿದ್ಧವಾದ ಪ್ರಾಣಶಬ್ದದ ಸಾಹಚರ್ಯದಿಂದ ವಜ್ರಶಬ್ದವೂ ಕೂಡ ಉಭಯತ್ರಪ್ರಸಿದ್ಧವಾಗಿದೆ. ಇಷ್ಟು ಕೆಲವರ ಅಭಿಪ್ರಾಯ.

**प्रकाशः –**

समाध्यन्तराण्यपि मतभेदोपन्यासमुखेनाह – **केचित्त्वित्यादिना** ।।

ವಿವರಣೆ - ಕಂಪನಾಧಿಕರಣವು ಉಭಯತ್ರಪ್ರಸಿದ್ಧವಾದ ಶಬ್ದವನ್ನೇ ಸಮನ್ವಯ ಮಾಡುತ್ತಿದೆಯೆಂದು ಮೊದಲು ಉತ್ತರಿಸಿದರು. ಅನಂತರ ಅನ್ಯತ್ರಪ್ರಸಿದ್ಧವಾದ ಶಬ್ದಸಮನ್ವಯವನ್ನು ಮಾಡುವುದಾದರೂ ಅಸಾಂಗತ್ಯವಿಲ್ಲವೆಂದು ಸಮರ್ಥಿಸಿದರೂ, ಪ್ರಕೃತ ಬೇರೆ ಮತದವರ ಸಮಾಧಾನಗಳು ಎಂಬ ಅಭಿಪ್ರಾಯದಿಂದ ತಾವೇ ಊಹಿಸಿದ ಬೇರೆ ಸಮಾಧಾನಗಳನ್ನು **'ಕೇಚಿತ್ತು'** ಇತ್ಯಾದಿ ಗ್ರಂಥಗಳಿಂದ ಹೇಳುತ್ತಿದ್ದಾರೆ.

**प्रकाशः** – अत्रेदमरुचिबीजम् । अन्यत्र **प्रसिद्धलिङ्गसाहचर्यादन्यत्रप्रसिद्धत्वे** द्युभ्वाद्यायतनत्वादीनामपि तथात्वं स्यात् । **तत्रोक्तरीत्या कथञ्चित्समाधानेऽपि** संवत्सरसारत्वादिलिङ्गानामादित्यविशेषणतया **सर्वगतत्वविशेषणत्वाभावेन प्रागुक्त**रीतेरेवानुसर्तव्यत्वादिति ।।

ಪ್ರಥಮಪಕ್ಷದಲ್ಲಿ ಅಸ್ವಾರಸ್ಯವಿದೆ - ಅನ್ಯತ್ರಪ್ರಸಿದ್ಧವಾದ **ಲಿಂಗಗಳ ಸಾಹಚರ್ಯದಿಂದ** ಶಬ್ದವು ಅನ್ಯತ್ರಪ್ರಸಿದ್ಧವಾಗುತ್ತದೆಂದು ಹೇಳುವುದಾದರೆ ದ್ಯುಭ್ವಾದ್ಯಾಯತನತ್ವಾದಿಗಳೂ ಕೂಡ ಅನ್ಯತ್ರಪ್ರಸಿದ್ಧವೆಂದಂತಾಗಿ ಈ ಪಾದದಲ್ಲಿ ಮಾಡಿದ ಸಮನ್ವಯವು ಅಸಂಗತವಾಗಬೇಕಾದೀತು. ಇನ್ನು ದ್ಯುಭ್ವಾದ್ಯಧಿಕರಣದಲ್ಲಿ ಹೇಳಿದ ಸಮಾಧಾನವನ್ನು ವಿವಕ್ಷಿಸಿ ಉತ್ತರಿಸುವುದಾದರೆ, ಸಂವತ್ಸರಸಾರತ್ವಾದಿ ಲಿಂಗಗಳೂ ಸಹ ಆದಿತ್ಯನಲ್ಲಿ ವಿಶೇಷಣವಾಗಿವೆ ಹೊರತು, ಸರ್ವಗತತ್ವಲಿಂಗದಲ್ಲಿ ವಿಶೇಷಣವಾಗಿಲ್ಲ. ಆದ್ದರಿಂದ ಹಿಂದೆ ಹೇಳಿದಂತೆಯೇ ಅನುಸರಿಸಬೇಕು.

**प्रकाशः – अन्येत्विति** ।। आहुरित्यन्वयः । **भयशब्दस्यार्थो भयङ्करत्वेति** । साक्षात्सङ्गत्यभावादाह – **यद्वेति** ।। सर्वगतत्वादावतिप्रसङ्गादाह – **अथवेति** ।।

'ಅನ್ಯೇತು' ಎಂಬುದಕ್ಕೆ 'ಆಹುಃ' ಎಂಬಲ್ಲಿ ಅನ್ವಯ. **'ಮಹದ್ಭಯಮ್'** ಎಂಬ ಶ್ರುತಿಯಲ್ಲಿರುವ ಭಯಶಬ್ದದ ಅರ್ಥವನ್ನು 'ಭಯಂಕರತ್ವ' ಎಂದು ಹೇಳಿದ್ದಾರೆ. ಈ ಪಕ್ಷದಲ್ಲಿ ನೇರವಾದ ಸಂಗತಿಯನ್ನು

ಹೇಳದ ಕಾರಣ 'ಯದ್ವಾ' ಎಂದು ಮತ್ತೊಂದು ಪಕ್ಷವನ್ನು ಹೇಳಿದ್ದಾರೆ. ಈ ಪಕ್ಷದಲ್ಲಿಯೂ ಸರ್ವಗತತ್ವಾದಿಗಳು ಉಭಯತ್ರಪ್ರಸಿದ್ಧವಾಗಬೇಕಾದೀತು ಎಂಬ ಅತಿಪ್ರಸಂಗ ಬರುವ ಕಾರಣ 'ಅಥವಾ' ಎಂದು ಮತ್ತೊಂದು ಪಕ್ಷವನ್ನು ಹೇಳಿದ್ದಾರೆ.

**प्रकाशः** – ''व्रीहीन्प्रोक्षति'' इत्यादिकं किं गुणकर्मोत प्रधानकर्मेति विशये ''सक्तूञ्जुहोति'' इत्यादौ व्यभिचारेण द्वितीयायास्साध्यत्ववाचित्वाभावात् ''व्रीहिभिःप्रोक्षति'' इति व्रीहिसाधनकप्रोक्षणविधानात्प्रधानकर्मेति प्राप्ते

'ಧರ್ಮಮಾತ್ರೇ ತು ಕರ್ಮ ಸ್ಯಾತ್' (೨-೧-೫)[1]

'ವ್ರೀಹೀನ್ ಪ್ರೋಕ್ಷತಿ' ಇತ್ಯಾದಿ ಸ್ಥಳಗಳಲ್ಲಿ ಪ್ರೋಕ್ಷಣಾದಿಗಳು ಗುಣಕರ್ಮವೋ, ಅಥವಾ ಪ್ರಧಾನಕರ್ಮವೋ ಎಂದು ಸಂಶಯ.

---

(१) **भाट्टसङ्ग्रहः** –

**अथ पञ्चमं सम्मार्जनादीनामप्रधानताधिकरणम् (सूत्राणि१-१२)**

**धर्ममात्रे तु कर्म स्यादनिर्वृत्तेः प्रयाजवत् ॥९॥**

**(तुल्यश्रुतित्वाद्वेतरैः स धर्मः स्यात् ॥१०॥ द्रव्योपदेश इति चेत् ॥११॥ न तदर्थत्वाल्लोकवत्तस्य च शेषभूतत्वात् ॥१२॥)**

अत्र 'यैस्तु द्रव्यं न चिकीर्ष्यते' इत्यादिनोक्तस्यापवादादापवादिकी वा पूर्ववैषम्येण शङ्कनात् प्रत्युदाहरणरूप वा **सङ्गतिः**। दर्शपूर्णमासप्रकरणे श्रुतं 'स्रुचः सम्मार्ष्टि' 'पुरोडाशं पर्यग्नि करोति' इत्यादि । तत्र सम्मार्जनादि प्रधानकर्मेति गुणकर्मेति **सन्देहे** युक्तं पूर्वत्र व्रीहीषु तुषविमोकरूपदृष्टसंस्काररूपोपकारस्य सत्त्वादवघातस्य गुणकर्मत्वम् । 'यैस्तु द्रव्यं चिकीर्ष्यते' इत्युक्तलक्षणसत्त्वात् । स्रुगादिषु तु सम्मार्जनादिना आधेयातिशस्य कस्यचितभावात् न गुणकर्मत्वम् । गुणकर्मलक्षणाभावात् । अतः प्रयाजादिवत् प्रधानकर्मैव, तल्लक्षणसत्त्वादिति **प्राप्तम्** । तदुक्तं **सूत्रे, धर्ममात्रे** दृष्टोपकाररहिते **कर्म**स्वरूपमात्रे श्रुते **कर्म स्यात्** प्रधानकर्मैव स्यात् । कुतः? **अनिर्वृत्तेः** दृष्टस्य कस्याप्युपकारस्यानिष्पादनात् **प्रयाजकर्मवदि**ति ।

**सिद्धान्तस्तु** 'कर्तुरीप्सिततमं कर्म' इति ईप्सिततमे विहितकर्मसंज्ञां निमित्तीकृत्य प्रवृत्तया 'कर्मणि द्वितीया' इति सूत्रोक्तया पुमर्थहेतुक्रत्वङ्गतयेऽप्सिततमत्ववाचिन्या द्वितीयाश्रुत्या स्रुचः साध्यत्वावगमात् 'सम्मार्जनेन स्रुचं भावयेत्' इति स्रुगर्थत्वात् सम्मार्गस्य गुणकर्मत्वमेव । स्रुचि दृष्टोपकारस्य कस्यचिदभावेऽदृष्टः कश्चित्संस्कारूपः कल्पनीय इति । **फलन्तु** स्रुच इति बहुत्वश्रवणेप्येकस्या एव सम्मार्गः पूर्वपक्षे । **सिद्धान्ते** तु प्रतिसाधनं संस्कारावृत्तेः सर्वासामपीति ।

**॥ इति पञ्चमं संमार्जनादीनामप्रधानताधिकरणम् ॥**

ಕಂಪನಾಧಿಕರಣ (೧-೩-೧೦)

ಪೂರ್ವಪಕ್ಷ - 'ಸಕ್ತೂನ್‌ಜುಹೋತಿ' ಎಂಬಲ್ಲಿ 'ಸಕ್ತು' ಎಂಬುದು ಪ್ರಧಾನಹೋಮದ ಅಂಗವೆಂದರೆ, ಸಕ್ತುವನ್ನು ಹೋಮಮಾಡುವುದೇ ಸಂಸ್ಕಾರ ಎಂದಂತಾಯಿತು. ಆವಾಗ ದ್ವಿತೀಯಾವಿಭಕ್ತಿಯು ಸಾಧ್ಯತ್ವವಾಚಕವಾಗುತ್ತದೆ. 'ಸಕ್ತೂನ್‌ಜುಹೋತಿ' ಎಂಬಲ್ಲೇ ಇದಕ್ಕೆ ವ್ಯಭಿಚಾರವಿದೆ. ಆದ್ದರಿಂದ 'ಸಕ್ತೂನ್ ಜುಹೋತಿ' ಎಂದರೆ 'ಸಕ್ತೂಃ ಜುಹೋತಿ' ಎಂದು ವಿಭಕ್ತಿಯನ್ನು ವಿಪರಿಣಾಮ ಮಾಡಿಕೊಂಡು ಸಕ್ತುಗಳ ಮೂಲಕ, ಹೋಮವನ್ನು ಮಾಡುತ್ತಾನೆ ಎಂದು ಹೇಗೆ ಹೇಳುತ್ತೇವೋ, ಅದರಂತೆ 'ವ್ರೀಹಿನ್ ಪ್ರೋಕ್ಷತಿ' ಎಂಬಲ್ಲಿಯೂ 'ವ್ರೀಹಿಭಿಃ ಪ್ರೋಕ್ಷತಿ' ಎಂದೇ ಹೇಳಬೇಕು. ಆವಾಗ ವ್ರೀಹಿಯೇ ಸಾಧನವಾಗಿವುಳ್ಳ ಪ್ರೋಕ್ಷಣಾದಿಸಂಸ್ಕಾರವನ್ನು ವಿಧಾನ ಮಾಡಿದಂತಾಗುತ್ತದೆ. ವ್ರೀಹಿಯು ಗುಣಕರ್ಮವಾಗುತ್ತದೆ. ಪ್ರೋಕ್ಷಣವು ಪ್ರಧಾನಕರ್ಮವಾಗುತ್ತದೆ.

**ಪ್ರಕಾಶಃ** – ''कर्तुरीप्सिततमं कर्म'' इति साध्यत्वमात्रे द्वितीयास्मरणाद्गुणकर्मेति ''धर्ममात्रेतु कर्मस्यात्'' इति द्वितीयाध्यायाद्यपादीयपञ्चमाधिकरणे सिद्धत्वेन ''तानि द्वैधम्'' इति चतुर्थेऽधिकरणे ''व्रीहीनवहन्ति'' इत्युदाहृत्य गुणकर्मत्वादिचिन्ता व्यर्था ।

ಸಿದ್ಧಾಂತ - ವ್ಯಭಿಚಾರವಿರಬಹುದು ಆದರೆ ದ್ವಿತೀಯಾವಿಭಕ್ತಿಯು ಸಾಧ್ಯತ್ವದಲ್ಲಷ್ಟೇ ಕೇಳಿಸುತ್ತದೆ. 'ಕರ್ತುರೀಪ್ಸಿತತಮಂ ಕರ್ಮ' ಎಂಬ ಪಾಣಿನಿಸೂತ್ರವು ಕರ್ತೃವಿಗೆ ಹೊಂದಲು ಅಪೇಕ್ಷಿತವಾದದಷ್ಟೇ ಕರ್ಮಸಂಜ್ಞೆಯನ್ನು ಹೊಂದುತ್ತದೆಂದು ಹೇಳುತ್ತಿದೆ. ಆದ್ದರಿಂದ ಸಂಸ್ಕೃತವಾದ ವ್ರೀಹಿಯೇ ಸಾಧ್ಯವಾಗುತ್ತದೆ. ಅಂದರೆ ವ್ರೀಹಿಯು ಪ್ರಧಾನ ಕರ್ಮವೆಂದು, ಪ್ರೋಕ್ಷಣವು ಗುಣಕರ್ಮವೆಂದು ಹೇಳಬೇಕು.

ಹೀಗೆ ಐದನೆಯ ಅಧಿಕರಣದಲ್ಲಿರುವ 'ಧರ್ಮಮಾತ್ರೇತು ಕರ್ಮ ಸ್ಯಾತ್' ಎಂಬ ಸೂತ್ರದಲ್ಲಿ ಸಿದ್ಧಾಂತ ಮಾಡಲಾಗಿದೆ. ದ್ವಿತೀಯಾವಿಭಕ್ತಿಯಿಂದಲೇ ಗುಣಕರ್ಮತ್ವವು ಸಿದ್ಧವಾಗುತ್ತದೆಂದು ಸಾಧಿಸಲಾಗುತ್ತದೆ. ಆದರೂ ಸಹ 'ತಾನಿ ದ್ವೈಧಮ್' ಎಂಬ ನಾಲ್ಕನೆಯ ಅಧಿಕರಣದಲ್ಲಿ 'ವ್ರೀಹಿನವಹಂತಿ' ಎಂಬುದನ್ನು ಉದಾಹರಿಸಿ ಗುಣಕರ್ಮವೋ, ಪ್ರಧಾನಕರ್ಮವೋ ? ಎಂಬ ವಿಚಾರವನ್ನು ಮಾಡಿದ್ದಾರೆ. ಇದು ವ್ಯರ್ಥ.

**ಪ್ರಕಾಶಃ** – द्वितीययैव गुणकर्मत्वसिद्धेरित्याशङ्कापरिहाराय द्वितीयामनादृत्य यथा सा चिन्ता कृता तथेहापीत्यर्थः ।

ದ್ವಿತೀಯಾವಿಭಕ್ತಿಯಿಂದಲೇ ಗುಣಕರ್ಮತ್ವವು ಸಿದ್ಧವಾಗುತ್ತಿದ್ದರೂ ದ್ವಿತೀಯಾಶ್ರುತಿಯನ್ನು ಪರಿಗಣಿಸದೇ ಹೇಗೆ ನಾಲ್ಕನೆಯ ಅಧಿಕರಣವು ಹೊರಟಿದೆಯೋ, ಅದರಂತೆ ಇಲ್ಲಿಯೂ ಸಹ ಅನ್ಯತ್ರಪ್ರಸಿದ್ಧವಾಗಿದೆಯೆಂಬ ವಿಚಾರವನ್ನು ಮರೆತು, ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಿ, ವಜ್ರಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ.

**ಪ್ರಕಾಶಃ** – यथावा सिद्धान्ते चतुर्थपादे ज्योतिराद्यधिकरणेषु ज्योतिराकाशादिशब्देषु तदधीनत्वन्याये स्थितेपि तमतन्त्रीकृत्य तद्गतत्वादिना विचारस्तद्वत् ।

ಅಥವಾ ಸಿದ್ಧಾಂತದ ಪ್ರಕಾರ ಇದೇ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಜ್ಯೋತಿರಾದ್ಯಧಿಕರಣಗಳಲ್ಲಿ ಜ್ಯೋತಿ, ಆಕಾಶ ಮೊದಲಾದ ಶಬ್ದಗಳನ್ನು ತದಧೀನತ್ವನ್ಯಾಯದಿಂದ ವಿಷ್ಣುವಿನಲ್ಲಿ ಒಮ್ಮೆ ಸಮನ್ವಯ ಮಾಡಿದ್ದರೂ ಸಹ ಅದನ್ನು ಪರಿಗಣಿಸದೆ, ತದ್ಗತತ್ವವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ಪುನಃ ವಾಕ್ಯ-ಪದ ಮೊದಲಾದವುಗಳ ಸಮನ್ವಯವನ್ನು ಮಾಡಿರುತ್ತಾರೆ. ಆದರಂತೆ ಇಲ್ಲಿಯೂ ಸಹ ತಿಳಿಯಬೇಕು.

**प्रकाशः** – अगतिकोऽयं परिहार इत्यत आह – **अथवेति** ।। अत्र टीकाविरोधो वोभयत्रप्रसिद्धसाहचर्येण तथात्वस्य लक्षणे प्रागुक्तत्वादिति वाऽरुचिबीजमाहुः ।

ಬೇರೆ ಗತಿಯಿಲ್ಲದಿದ್ದಾಗ ಮಾತ್ರ ಹೀಗೆ ಪರಿಹಾರವನ್ನು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ 'ಅಥವಾ' ಎಂಬ ಮತ್ತೊಂದು ಪಕ್ಷವನ್ನು ಆಶ್ರಯಿಸಿದ್ದಾರೆ. ಈ ಪಕ್ಷದಲ್ಲಿಯೂ ಟೀಕೆಯಲ್ಲಿ ವಜ್ರಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಹೇಳಿದ್ದಾರೆ. 'ಅಥವಾ' ಎಂಬ ಪಕ್ಷದಲ್ಲಿ ಅನ್ಯತ್ರಪ್ರಸಿದ್ಧವೆಂದು ಹೇಳಿದ್ದರಿಂದ ಟೀಕಾವಿರೋಧ ಬರುತ್ತದೆಂದು ತಿಳಿಯಬೇಕು. ಮತ್ತು ಉಭಯತ್ರಪ್ರಸಿದ್ಧವಾದ ಸಾಹಚರ್ಯದಿಂದ ವಜ್ರಶಬ್ದವೂ ಕೂಡ ಉಭಯತ್ರಪ್ರಸಿದ್ಧವಾಗಿದೆಯೆಂದು ಹಿಂದೆ ಹೇಳಲಾಗಿದೆ. ಆದ್ದರಿಂದ 'ಅಥವಾ' ಎಂಬ ಪಕ್ಷದಲ್ಲಿಯೂ ಕೂಡ ಅರುಚಿಯಿದೆ.

**गुरुराजीयम्** – केचित्तु स्वयूथ्याः । अयं भावः । नामलिङ्गपादन्यायेनैव वज्रादिशब्दानामुभयत्रप्रसिद्धत्वमित्युक्तम् । तदयुक्तम् । नामपादन्यायेनादित्यादिनाम्नामपि ब्रह्मणि प्रयोगस्योक्तप्रायत्वात्तत्साहित्येन सर्वगतत्वादीनामुभयत्रप्रसिद्धत्वापत्तिरिति । अत आह – **आदित्यादिशब्दानामिति** ।। न सा उभयत्रप्रसिद्धता नेत्यर्थः । ननु सर्वगतत्वादीनां स्वत एवोभयत्रप्रसिद्ध्यभावादुभयत्रप्रसिद्धत्वाभावेऽन्यत्रप्रसिद्धादित्यश्रुतिसाहित्येनोभयत्रप्रसिद्धत्वमपि किं न स्यादित्यत आह – **अन्यत्रेति** ।। नन्वेवमादित्यशब्दस्योभयत्रप्रसिद्धत्वेन तत्साहचर्येणान्यत्रप्रसिद्ध्यभावात्स्वतश्चान्यत्रप्रसिद्ध्यभावादन्यत्रप्रसिद्धतैव न स्यादित्यत आह – **सर्वगतत्वादीनामिति** ।। लिङ्गसाहचर्यात् संवत्सर एव प्रध्वंसयन्नित्यादिनोक्तसंवत्सराधिपतित्वरूपसंवत्सरसारत्वरूपान्यत्रप्रसिद्धलिङ्गसाहचर्यादित्यर्थः । आहुरित्यस्वरसोद्भावनम् । तद्बीजं तु संवत्सरसारत्वादिलिङ्गानामादित्यविशेषणतयैव प्रतीत्या सर्वगतविशेषणत्वाप्रतीत्या लिङ्गसाहचर्येणान्यत्रप्रसिद्ध्यसम्भवेनादित्यशब्दसाहचर्येणैवान्यत्रप्रसिद्धत्वे वक्तव्ये नामपादन्यायेन तस्योभयपरत्वेन सर्वगतत्वादीनामप्युभयत्रप्रसिद्धत्वं स्यादेवेति पादासङ्गतिरेवेति । अन्ये स्वयूथ्याः । साक्षात्सङ्गतिसम्भवे फलतः सङ्गतिकल्पनम-युक्तमित्यभिप्रेत्य पक्षान्तरमाह – **यद्वेति** ।।



## ಸಾರ

'ಮಹದ್ಭಯಂ ವಜ್ರಮುದ್ಯತಮ್' ಎಂಬ ಶ್ರುತಿಯಲ್ಲಿ ಉದ್ಯತತ್ವ, ಭಯಂಕರತ್ವ ಮೊದಲಾದ ಲಿಂಗಗಳು ಶ್ರುತವಾಗಿವೆ. ಇವುಗಳು ಉಭಯತ್ರಪ್ರಸಿದ್ಧವಾದ ಕಾರಣ, ಇದರ ಸಾಹಚರ್ಯದಿಂದ ಜೊತೆಗಿರುವ ವಜ್ರಶಬ್ದವೂ ಕೂಡ ಉಭಯತ್ರಪ್ರಸಿದ್ಧವೇ ಆಗುತ್ತದೆ. ಇದು ಟೀಕೆಯಲ್ಲಿ ಹೇಳಿದ ಪಕ್ಷ. ಆದರೆ ಕೆಲವರು ಅನ್ಯತ್ರಪ್ರಸಿದ್ಧವಾದ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳುವಂತೆ ಉಭಯತ್ರಪ್ರಸಿದ್ಧಿಯ ಸಾಹಚರ್ಯದಿಂದ ಉಭಯತ್ರಪ್ರಸಿದ್ಧವಾದ ಶಬ್ದವನ್ನು ಸಮನ್ವಯ ಮಾಡಲಾಗದು. ಸರ್ವಗತತ್ವಾದಿಗಳೆಲ್ಲವೂ ಅನ್ಯತ್ರಪ್ರಸಿದ್ಧವಾದ ಸರ್ವಪುರುಷಾಭಿಮುಖ್ಯಾದಿಲಿಂಗಗಳ ಸಾಹಚರ್ಯದಿಂದಷ್ಟೇ ಅನ್ಯತ್ರಪ್ರಸಿದ್ಧವೆನಿಸುತ್ತದೆ ಎನ್ನುತ್ತಾರೆ. ಈ ಪಕ್ಷವು ಟೀಕೆಗೆ ವಿರುದ್ಧವಾಗಿದೆ.

ಇನ್ನು ಕೆಲವರು 'ಮಹದ್ಭಯಂ ವಜ್ರಮುದ್ಯತ್ಯಮ್' ಎಂಬಲ್ಲಿ ಶ್ರುತವಾದ ಲಿಂಗವು ಭಯಂಕರತ್ವ, ಉದ್ಯತತ್ವ ಮೊದಲಾದ ಅನೇಕ ಲಿಂಗಗಳ ಸಮನ್ವಯವು ಈ ಅಧಿಕರಣದ ಉದ್ದೇಶವಾಗಿದೆ. ಅದಕ್ಕಾಗಿ ಅನ್ಯತ್ರಪ್ರಸಿದ್ಧವಾದ 'ವಜ್ರ' ಎಂಬ ಒಂದು ನಾಮಾತ್ಮಕಶಬ್ದವನ್ನು ಸಮನ್ವಯ ಮಾಡಲಾಗಿದೆ. ಅಂತಸ್ಥತ್ವಾಧಿಕರಣಕ್ಕೆ ಪ್ರಥಮಪಾದದಲ್ಲಿ ಸಂಗತಿಯಿರುವಂತೆ ಈ ಅಧಿಕರಣಕ್ಕೂ ಕೂಡ ಸಂಗತಿಯಿರುತ್ತದೆ.

ಅಥವಾ ಉಭಯತ್ರಪ್ರಸಿದ್ಧವಾದ ಭಯಂಕರತ್ವ ಎಂಬ ಲಿಂಗದ ಸಾಹಚರ್ಯದಿಂದ ವಜ್ರಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಅಥವಾ ವಜ್ರಶಬ್ದವು ಅನ್ಯತ್ರಪ್ರಸಿದ್ಧವಾಗಿದ್ದರೂ ಕೂಡ ಅದನ್ನು ಪರಿಗಣಿಸದೆ ಉಭಯತ್ರಪ್ರಸಿದ್ಧವೆಂದಷ್ಟೇ ಪರಿಗಣಿಸಿ ಇಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಅಥವಾ ಪ್ರಾಣಶಬ್ದವು ಉಭಯತ್ರಪ್ರಸಿದ್ಧವಾದ್ದರಿಂದ ಅದರ ಸಾಹಚರ್ಯದಿಂದ ವಜ್ರಶಬ್ದವೂ ಕೂಡ ಉಭಯತ್ರ ಪ್ರಸಿದ್ಧವಾಗಿದೆಯೆಂದು ಹೇಳುತ್ತಾರೆ.



● ● ● ● ●

### ಸಂಶಯಕೋಟಿಗಳು

## तात्पर्यचन्द्रिका

**अत्र पूर्ववैषम्येण वा पूर्वाक्षेपेण वा पूर्वपक्षोत्थानादनन्तरसङ्गतिः । अत्र ''वज्रमुद्यतं'' इति श्रुतौ वज्रः किमिंद्रायुधं किं वा विष्णुरिति चिन्ता ।**

ಅನುವಾದ - 'ಮಹದ್ಭಯಂ ವಜ್ರಮುದ್ಯತಮ್' ಎಂಬುದು ಈ ಅಧಿಕರಣದ ವಿಷಯವಾಗಿದೆ. ಇಲ್ಲಿ ಕೇಳಿಸುತ್ತಿರುವ 'ವಜ್ರ' ಶಬ್ದವು ಇಂದ್ರಾಯುಧವನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ವಿಷ್ಣುವನ್ನೋ ಎಂಬುದು ಪ್ರಧಾನ ಸಂಶಯ.

ಪರಿಪೂರ್ಣಚಂದ್ರಿಕಾ

तदर्थं किं वज्रश्रुत्योद्यतत्वलिङ्गानुसारेण कंपकत्वादिब्रह्मलिङ्गं नेयमुत विपरीतमिति ।

ಅದರ ಪರಿಹಾರಕ್ಕಾಗಿ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳಿಗೆ ಅನುಸಾರಿಯಾಗಿ ಕಂಪಕತ್ವವೇ ಮೊದಲಾದ ಬ್ರಹ್ಮಲಿಂಗಗಳನ್ನು ಸಾವಕಾಶ ಮಾಡಬೇಕೋ, ಅಥವಾ ಕಂಪಕತ್ವಾದಿಬ್ರಹ್ಮಲಿಂಗಳಿಗೆ ಅನುಸಾರಿಯಾಗಿ ವಜ್ರಶ್ರುತಿ, ಉದ್ಯತತ್ವಲಿಂಗಗಳನ್ನು ಸಾವಕಾಶ ಮಾಡಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''वर्जनाद्वज्रम्'' इति स्मार्तेन योगेन श्रौतवज्रशब्दस्य रूढित्यागादिकं न युक्तमुत युक्तमिति ।**

ಅದಕ್ಕಾಗಿ 'ವರ್ಜನಾದ್ವಜ್ರಮ್' ಎಂಬ ಸ್ಮೃತಿಸಿದ್ಧವಾದ ಯೋಗದಿಂದ ಶ್ರುತಿಯಲ್ಲಿರುವ ವಜ್ರಶಬ್ದಕ್ಕೆ ರೂಢ್ಯರ್ಥವನ್ನು ತ್ಯಾಗ ಮಾಡುವುದು ಅಯುಕ್ತವಾಗುತ್ತದೋ, ಅಥವಾ ಯುಕ್ತವಾಗುತ್ತದೋ ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

एवं पादान्तर्भावपरटीकां समर्थ्य ''तमेवं विद्वान्'' इत्यादिटीका फलपरेति भावेन पूर्वानन्तर्ये हेतुद्वयमाह – **अत्रेति** ।। पूर्वत्र योगस्य वाक्यशेषस्थतया रूढित्यागेऽपीह तदभावान्न वज्रशब्दे रूढित्याग इति वैषम्येणेत्यर्थः । तथाच प्रत्युदाहरणरूपासङ्गतिरिति । पूर्वत्र त्रैवर्णिकानां वेदाद्ब्रह्मज्ञानं मोक्षदमित्युक्तम् । तन्न युक्तम् । ''य एतद्विदुरमृता'' इति वज्रज्ञानान्मोक्षश्रवणादित्याक्षेपिकी वा इत्यग्रे स्फुटमिति भावः ।

**प्रकाशः** – विषयसंशयटीकां व्यनक्ति ।। **अत्रेति** ।।

ಇಲ್ಲಿಯ ತನಕ ಪ್ರತ್ಯುದಾಹರಣ ಎಂಬ ಸಂಗತಿಯನ್ನು ಅಥವಾ ಆಕ್ಷೇಪಿಕೀಸಂಗತಿಯನ್ನು ಕಂಪನಾಧಿಕರಣಕ್ಕೆ ತೋರಿಸಿದ್ದಾಯಿತು. ಪ್ರಕೃತ ಈ ಅಧಿಕರಣದ ವಿಷಯವಾಕ್ಯವನ್ನು ಹಾಗೂ ಸಂಶಯಕೋಟಿಗಳನ್ನು ಪ್ರತಿಪಾದನೆ ಮಾಡುವ ಟೀಕಾವಾಕ್ಯಗಳನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – काठके षष्ठवल्ल्यां श्रूयते

''ऊर्ध्वमूलोऽवाक्शाख
एषोऽश्वत्थस्सनातनः ।
तदेव शुक्रं तद्ब्रह्म तदेवामृतमुच्यते ।
तस्मिंल्लोकाश्श्रितास्सर्वे तदु नात्येति कश्चन । एतद्वैतत् ।

ಕಾಠಕೋಪನಿಷತ್ತಿನ ಮೂರನೆಯ ವಲ್ಲಿಯಲ್ಲಿ ಬರುವ ಪ್ರಕರಣ ಹೀಗಿದೆ -

ಊರ್ಧ್ವಮೂಲೋಽವಾಕ್‌ಶಾಖಃ
ಏಷೋಽಶ್ವತ್ಥಃ ಸನಾತನಃ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ।
ತಸ್ಮಿನ್‌ಲ್ಲೋಕಾಃಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ।

ಜಗತ್ತೆಂಬ ವೃಕ್ಷಕ್ಕೆ ಮೂಲಪುರುಷನು ಆಶ್ರಯನಾಗಿದ್ದಾನೆ. ಉಳಿದ ದೇವತೆಗಳು ಶಾಖೆಗಳಾಗಿದ್ದಾರೆ. ಶೀಘ್ರಗಮನಶಕ್ತಿಯುಳ್ಳ ಆ ಪುರುಷನು ವೃಕ್ಷದಲ್ಲೆಡೆ ವ್ಯಾಪಿಸಿದ್ದಾನೆ. ಅವನಿಗೆ ಪ್ರಳಯಕಾಲದಲ್ಲಿ ಇದೇ ಆಹಾರವಾಗುತ್ತದೆ. ಆದರೂ ಸಹ ಜಗತ್ತು ಪ್ರವಾಹತಃ ಅನಾದಿನಿತ್ಯವೆನಿಸಿದೆ. ಹೀಗೆ ಸಮಸ್ತ ಪ್ರಪಂಚಕ್ಕೆ ಆಧಾರನಾದ ಮೂಲಪುರುಷನು ದುಃಖರಹಿತನಾಗಿದ್ದಾನೆ, ಗುಣಪೂರ್ಣನಾಗಿದ್ದಾನೆ, ನಿತ್ಯಮುಕ್ತನಾಗಿದ್ದಾನೆ. ಅವನಲ್ಲಿ ಎಲ್ಲ ಲೋಕಕಗಳು ಆಶ್ರಯಿಸಿವೆ. ಅವನನ್ನು ಮೀರಲು ಯಾರಿಗೂ ಸಾಧ್ಯವಿಲ್ಲ.

**प्रकाशः** –

यदिदं किञ्च जगत्सर्वं प्राण एजति निस्सृतम् ।
महद्भयं वज्रमुद्यतं य एतद्विदुरमृतास्ते भवन्ति ।

ಯದಿದಂ ಕಿಂಚ ಜಗತ್‌ಸರ್ವಂ ಪ್ರಾಣ ಏಜತಿ ನಿಃಸೃತಮ್।
ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ।

ಈ ಜಗತ್ತು ಸರ್ವಪ್ರೇರಕನಿಂದ ಹುಟ್ಟಿದೆ. ಅವನಿಂದ ಭಯರಹಿತವಾಗುತ್ತದೆ. ಯಾರು ಕರ್ತವ್ಯ-ಮೂಢರೋ, ಅವರಿಗೆ ಭಯಂಕರವಾದ ವಜ್ರಾಯುಧನಾಗಿದ್ದಾನೆ. ಅವನ ಮಹಿಮೆಯನ್ನು ಯಾರು ತಿಳಿಯುತ್ತಾರೋ, ಅವರು ಮುಕ್ತರಾಗುತ್ತಾರೆ.

**प्रकाशः** –

भयादस्याग्निस्तपति भयात्तपति सूर्यः ।
भयादिन्द्रश्च वायुश्च मृत्युर्धावति पञ्चमः ।।

इत्यादि ।

ಪರಿಪೂರ್ಣಚಂದ್ರಿಕಾ

ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ।

ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ॥

ಅವನ ಭಯದಿಂದಲೇ ಅಗ್ನಿಯು ಸುಡುತ್ತಾನೆ. ಆ ಮೂಲಪುರುಷನ ಭಯದಿಂದಲೇ ಸೂರ್ಯನು ಜಗತ್ತಿಗೆ ಪ್ರಕಾಶಕನಾಗಿದ್ದಾನೆ. ಅವನ ಭಯದಿಂದಲೇ ಇಂದ್ರನು ಮಳೆಯನ್ನು ಸುರಿಸುತ್ತಾನೆ. ಅವನ ಭಯದಿಂದಲೇ ವಾಯು ಮತ್ತು ಯಮನು ತಮ್ಮ ಕರ್ತವ್ಯದಲ್ಲಿ ನಿರತರಾಗಿದ್ದಾರೆ.

ಇತ್ಯಾದಿಯಾಗಿ ಕಾಠಕೋಪನಿಷತ್ತಿನ ಪ್ರಕರಣವು ಇಲ್ಲಿ ವಿಚಾರ ಮಾಡಲು ಅರ್ಹವಾಗಿದೆ.

**प्रकाशः** – तत्रत्यवज्रशब्दो विषय इत्यर्थः । प्राणशब्दो विषय इति तु निरसिष्यत इति भावः ।। **कम्पकत्वेति** ।। एजतीत्यनेनोक्तं सर्वचेष्टकत्वमित्यर्थः ।

ಈ ಶ್ರುತಿಯಲ್ಲಿರುವ ವಜ್ರಶಬ್ದವು ಮುಖ್ಯವಾಗಿ ವಿಚಾರಕ್ಕೆ ಅರ್ಹವಾಗಿದೆ. ಶ್ರುತಿಯಲ್ಲಿ ಪ್ರಾಣಶಬ್ದವು ಇರುವುದರಿಂದ, ಅದನ್ನೇ ಮುಖ್ಯವಾಗಿ ಏಕೆ ವಿಚಾರ ಮಾಡಬಾರದು ಎಂಬ ಶಂಕೆಯನ್ನು ಈ ಮುಂದೆ ನಿರಾಕರಿಸಲಾಗುತ್ತದೆ. 'ಕಂಪಕತ್ವ' ಎಂದರೆ 'ಏಜತಿ' ಎಂಬ ಶ್ರುತಿಯಿಂದ ಹೇಳಲ್ಪಟ್ಟ 'ಸರ್ವಚೇಷ್ಟಕತ್ವ' ಎಂದರ್ಥ.

**प्रकाशः** – यदि दुर्बलस्मार्तयोगेन रूढेस्त्यागादि न युक्तं तदा श्रुत्याद्यनुसारेण कम्पकत्वादिकं लिङ्गं नेयमिति वज्रशब्दार्थ इन्द्रायुधमेव । यदा तु युक्तं तदा विष्णुरेवेति स्पष्टः फलफलिभाव इति भावः ।

ಪೂರ್ವಪಕ್ಷದ ಫಲಫಲಿಭಾವ - ಒಂದು ವೇಳೆ ದುರ್ಬಲವಾದ ಸ್ಮೃತಿಸಿದ್ಧವಾದ ಯೋಗದ ಬಲದಿಂದ ರೂಢ್ಯರ್ಥವನ್ನು ಬಿಡುವುದು ಯುಕ್ತವಾಗುವುದಿಲ್ಲ. ಆದ್ದರಿಂದ ವಜ್ರಶ್ರುತಿಗೆ ಅನುಸಾರಿಯಾಗಿ ಕಂಪಕತ್ವಾದಿ ಲಿಂಗಗಳನ್ನು ಸಾವಕಾಶ ಮಾಡಬೇಕು. ಆದ್ದರಿಂದ ವಜ್ರಶಬ್ದಕ್ಕೆ ಇಂದ್ರಾಯುಧವೆಂದೇ ಅರ್ಥ.

ಸಿದ್ಧಾಂತದ ಫಲಫಲಿಭಾವ - ಒಂದು ವೇಳೆ ಸ್ಮೃತಿಸಿದ್ಧವಾದ ಯೋಗದ ಬಲದಿಂದ ವಜ್ರಶಬ್ದಕ್ಕೆ ರೂಢ್ಯರ್ಥವನ್ನು ಬಿಡಬೇಕೆಂದು ಸಿದ್ಧವಾದರೆ, ಆವಾಗ ವಿಷ್ಣುವೇ ವಜ್ರಶಬ್ದ ಪ್ರತಿಪಾದ್ಯನಾಗುತ್ತಾನೆ. ಹೊರತು, ಇಂದ್ರಾಯುಧವಾಗುವುದಿಲ್ಲ.




'ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ।' ಎಂಬ ಕಾಠಕೋಪನಿಷತ್ತಿನ ಶ್ರುತಿವಾಕ್ಯವು ಈ ಅಧಿಕರಣಕ್ಕೆ ವಿಷಯವಾಗಿದೆ. ಸಮಸ್ತ ಜಗತ್ತು ಪ್ರಾಣಶಬ್ದವಾಚ್ಯನಾದ ಯಾವ ಭಗವಂತನನ್ನು ಆಶ್ರಯಿಸಿದೆಯೋ, ಯಾರಿಂದ ಹುಟ್ಟಿದೆಯೋ, ಮತ್ತು ಕ್ರಿಯಾಶೀಲವಾಗಿದೆಯೋ, ಅಂತಹ ಶ್ರೇಷ್ಠನಾದ, ದುಷ್ಟಭಯಂಕರನಾದ, ದೋಷವರ್ಜಿತನಾದ ಸರ್ವಪ್ರೇರಕನಾದ ಭಗವಂತನನ್ನು ಯಾರೂ ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೋ, ಅವರು ಮೋಕ್ಷವನ್ನೇ ಪಡೆಯುತ್ತಾರೆ ಎಂದು ಈ ಶ್ರುತಿಗೆ ಸಿದ್ಧಾಂತಪರವಾದ ಅರ್ಥ. ಇಲ್ಲಿ 'ಉದ್ಯತವಜ್ರ' ಎಂದರೆ ಎತ್ತಲ್ಪಟ್ಟಿರುವ ವಜ್ರವೆಂದು ಅದರ ಜ್ಞಾನದಿಂದಲೇ

ಮೋಕ್ಷವು ದೊರೆಯುತ್ತದೆಂದು ಪೂರ್ವಪಕ್ಷ. 'ಯ ಏಜತಿ' ಎಂಬುದಾಗಿ ವಜ್ರಶಬ್ದವನ್ನು ಸರ್ವಜಗಚ್ಚೇಷ್ಟಕನೆಂದು ಹೇಳಿರುವುದರಿಂದ ಬ್ರಹ್ಮನೇ ವಜ್ರಶಬ್ದ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧಾಂತ.

ಸ್ಮೃತಿಗೆ ಅನುಸಾರಿಯಾಗಿ ಶ್ರುತಿಯನ್ನು ಅರ್ಥೈಸಿ ವ್ಯಾಖ್ಯಾನ ಮಾಡುವುದು ಸರಿಯಲ್ಲ. ಆದ್ದರಿಂದ ವಜ್ರಶಬ್ದಕ್ಕೆ ಇಂದ್ರಾಯುಧವೆಂಬ ರೂಢ್ಯರ್ಥವನ್ನು ಬಿಡಬಾರದು. ವಜ್ರಶ್ರುತಿಯ ಆಧಾರದಿಂದ ಭಗವಂತನಲ್ಲಿ ಪ್ರಸಿದ್ಧವಾದ ಕಂಪಕತ್ವಾದಿಲಿಂಗಗಳನ್ನೇ ಸಾವಕಾಶ ಮಾಡಬೇಕು ಎಂಬುದು ಪೂರ್ವಪಕ್ಷಕಾರರ ಧೋರಣೆ.

ಸ್ಮೃತಿಗೆ ಅನುಸಾರಿಯಾಗಿ ಶ್ರುತಿಯನ್ನು ಅರ್ಥೈಸಬೇಕಾದ್ದರಿಂದ ರೂಢ್ಯರ್ಥವನ್ನು ಬಿಟ್ಟು, ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಆವಾಗ ವಜ್ರಶಬ್ದಕ್ಕೆ ವಿಷ್ಣುವೆಂಬರ್ಥವೇ ಸಿದ್ಧವಾಗುತ್ತದೆಂಬುದು ಸಿದ್ಧಾಂತಿಗಳ ಧೋರಣೆ.





## ವಜ್ರಾಯುಧವೇ ವಜ್ರಶ್ರುತಿ ಪ್ರತಿಪಾದ್ಯವೆಂದು ಪೂರ್ವಪಕ್ಷ

## तात्पर्यचन्द्रिका

**नन्वत्र ''वज्रमुद्यतम्'' इति वाक्यात्पूर्वं ''तदेव शुक्रं तद्ब्रह्म तदेवामृतम्'' इति, उत्तरत्र च ''भयादस्याग्निस्तपति भयात्तपति सूर्यः'' इति श्रवणाद्ब्रह्मप्रकरणमिदम् ।**

ಅನುವಾದ - ಪ್ರಶ್ನೆ - ಪೂರ್ವಪಕ್ಷವು ಹುಟ್ಟಲು ಸಾಧ್ಯವೇ ಇಲ್ಲ. ಏಕೆಂದರೆ 'ವಜ್ರಮುದ್ಯತಮ್' ಎಂಬ ವಿಷಯವಾಕ್ಯದ ಹಿಂದೆ 'ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮ್' ಎಂಬುದಾಗಿ ಶೋಕರಾಹಿತ್ಯ, ಅಮೃತತ್ವ ಮೊದಲಾದ ಮತ್ತು ಬ್ರಹ್ಮಶಬ್ದ ಮೊದಲಾದ ವಿಷ್ಣುವಿನ ಲಿಂಗಗಳೇ ಕೇಳಿಸುತ್ತಿವೆ. ಮುಂದೆಯೂ ಕೂಡ 'ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ' ಅಗ್ನಿ, ಸೂರ್ಯ ಮೊದಲಾದವರೆಲ್ಲರೂ ಕೂಡ ಹೆದರುತ್ತಾರೆ ಎಂಬುದಾಗಿ ಭಗವಲ್ಲಿಂಗಗಳೇ ಶ್ರುತವಾಗಿವೆ. ಆದ್ದರಿಂದ ಮಧ್ಯದಲ್ಲಿರುವ 'ವಜ್ರಮುದ್ಯತಮ್' ಎಂಬ ವಾಕ್ಯವು ಬ್ರಹ್ಮಪರವೇ ಆಗುತ್ತದಲ್ಲವೇ?

**वज्रवाक्य एव च ''य एतद्विदुरमृतास्ते भवन्ति'' इत्यादिनिर्णीतानि ब्रह्मलिङ्गानि सन्ति । वज्रशब्दस्त्वाकाशादिशब्दवद्ब्रह्मणि यौगिकोऽस्तु । तस्मान्न पूर्वपक्षोदय इति चेत्**

ಅಷ್ಟೇ ಅಲ್ಲದೇ ವಜ್ರವಾಕ್ಯದಲ್ಲಿಯೂ ಕೂಡ 'ಯ ಏತದ್ವಿದುರಮೃತಾಸ್ತೇ ಭವಂತಿ' ಇತ್ಯಾದಿಯಾಗಿ ನಿರ್ಣೀತವಾದ 'ಮೋಕ್ಷಹೇತುಜ್ಞಾನವಿಷಯತ್ವ' ಮೊದಲಾದ ಬ್ರಹ್ಮಲಿಂಗಗಳೇ ಇರುತ್ತವೆ. ಆದ್ದರಿಂದ ವಜ್ರಶ್ರುತಿಗೆ ಆಕಾಶಾದಿಶಬ್ದಗಳಂತೆ ಯೌಗಿಕಾರ್ಥವನ್ನು ಮಾಡಿ ಬ್ರಹ್ಮನಲ್ಲಿ ಕೂಡಿಸಬೇಕು. ಆದ್ದರಿಂದ ಪೂರ್ವಪಕ್ಷದ ಉದಯವು ಹೇಗಾಗುತ್ತದೆ.

ಪರಿಪೂರ್ಣಚಂದ್ರಿಕಾ

**उच्यते । यदि क्लृप्तरूढित्यागेन योगकल्पना तर्हि यस्य कस्यापि शब्दस्य यत्र क्वचनार्थे योगस्य सुवचत्वादर्थव्यवस्था न स्यात् । तथाच कम्पकत्वादिब्रह्मलिङ्गान्यपि कथञ्चिदिन्द्रायुधेऽपि स्युः ।**

ಉತ್ತರ - ಒಂದು ವೇಳೆ ವಜ್ರಶಬ್ದಕ್ಕೆ ಇಂದ್ರನ ಆಯುಧವೆಂಬ ರೂಢ್ಯರ್ಥವನ್ನು ಬಿಟ್ಟು, ವಿಷ್ಣುವೆಂಬ ಯೌಗಿಕಾರ್ಥವನ್ನು ಕಲ್ಪನೆ ಮಾಡುವುದಾದರೆ, ಯಾವುದೇ ಶಬ್ದಗಳಿಗೂ ಬೇರೆ ಯಾವುದೇ ಅರ್ಥದಲ್ಲಿಯೂ ಯೌಗಿಕಾರ್ಥವನ್ನು ಹೇಳಬಹುದಾದ್ದರಿಂದ ಈ ಶಬ್ದವು ಇದೇ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆಂಬ ಅರ್ಥವ್ಯವಸ್ಥೆಯೇ ಹಾಳಾಗಬೇಕಾದೀತು. ಆದ್ದರಿಂದ 'ವಜ್ರ' ಶಬ್ದಕ್ಕೆ ಇಂದ್ರಾಯುಧವೆಂಬ ಅರ್ಥವನ್ನು ಸ್ವೀಕರಿಸಿ, ಕಂಪಕತ್ವವೇ ಮೊದಲಾದ ಬ್ರಹ್ಮನ ಲಿಂಗಗಳನ್ನು ಹೇಗಾದರೂ ಇಂದ್ರನ ವಜ್ರಾಯುಧದಲ್ಲಿ ಕೂಡಿಸಬೇಕು.

**पूर्वसूत्रे तु शूद्रशब्देऽवयवार्थस्य शुचा द्रवणस्य वाक्यशेषस्थत्वाद्रूढित्यागः ।**

ಹಾಗಾದರೆ ಹಿಂದಿನ ಅಧಿಕರಣದಲ್ಲಿ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಿ ವ್ಯಾಖ್ಯಾನಿಸಲಾಗಿದೆಯಲ್ಲವೇ? ಎಂದು ಶಂಕಿಸಬಾರದು. ಅಲ್ಲಿ, ರೂಢ್ಯರ್ಥವನ್ನು ಬಿಡಬೇಕೆನ್ನಲು ವಾಕ್ಯಶೇಷದಲ್ಲಿ 'ಶುಚಾದ್ರವಣಮ್' ಎಂಬುದಾಗಿ ಶೂದ್ರಶಬ್ದವನ್ನು ನಿಷ್ಪತ್ತಿ ಮಾಡಲಾಗಿದೆ. ವಾಕ್ಯಶೇಷದ ಆಧಾರದಿಂದ ರೂಢ್ಯರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಸ್ವೀಕರಿಸಿದ್ದು, ನ್ಯಾಯಸಮ್ಮತವಾಗಿದೆ. ಪ್ರಕೃತ ಅಂತಹ ವಾಕ್ಯಶೇಷವಿಲ್ಲದ ಕಾರಣ, ವಜ್ರಶಬ್ದಕ್ಕೆ 'ವಜ್ರಾಯುಧ' ಎಂಬ ಅರ್ಥವನ್ನೇ ಸ್ವೀಕರಿಸಬೇಕು.

**एतेनाज्यादिशब्दप्रतिबन्दी निरस्ता । तत्र ''यदाजिमीयुस्तदाज्यानामाज्यत्वम्'' इति श्रुतावेव योगोक्तेः ।**

ಪ್ರಶ್ನೆ - ಆಜ್ಯಶಬ್ದಕ್ಕೆ ಘೃತದಲ್ಲಿ ರೂಢಿಯಿದೆ. ಆದರೆ 'ಘೃತ' ಎಂಬರ್ಥವನ್ನು ವಿವಕ್ಷಿಸದೆ, ಯೌಗಿಕಾರ್ಥವನ್ನು ಸ್ವೀಕರಿಸಿ, ಯುದ್ಧಕ್ಕೆ ಹೋಗುವಾಗ ಹೇಳಬೇಕಾದ ಮಂತ್ರವೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯಿಸಲಾಗಿದೆ. ಅದರಂತೆ ಇಲ್ಲಿಯೂ ಕೂಡ ವಜ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಬಹುದಲ್ಲವೇ?

ಉತ್ತರ - ಈ ಆಜ್ಯಾದಿ ಶಬ್ದದ ಪ್ರತಿಬಂಧಿಯೂ ಕೂಡ ಈಗ ನಿರಸ್ತವಾಯಿತು. ಏಕೆಂದರೆ ಆಜ್ಯಶ್ರುತಿಯಲ್ಲಿಯೇ ಸ್ಪಷ್ಟವಾಗಿ 'ಯದಾಜಿಮೀಯುಸ್ತದಾಜ್ಯಾನಾಮಾಜ್ಯತ್ವಮ್' ಎಂಬುದಾಗಿ ಯುದ್ಧಕ್ಕೆ ಹೋಗುವ ಪ್ರಸಂಗದಲ್ಲಿ ಪಠಿಸಬೇಕಾದ ಮಂತ್ರವಾದ್ದರಿಂದ ಇದಕ್ಕೆ ಆಜ್ಯವೆಂದು ಹೆಸರು ಎನ್ನಲಾಗಿದೆ. ಹೀಗೆ ಶ್ರುತಿಯಲ್ಲಿಯೇ ಯೋಗಾರ್ಥವನ್ನು ಹೇಳಿದ್ದರಿಂದ ಅಲ್ಲಿ ರೂಢ್ಯರ್ಥಕ್ಕೆ ಅವಕಾಶವೇ ಇಲ್ಲ.

**ज्योतिरुपक्रमादित्यत्र तु वाक्यस्यान्यपरत्वे सत्येव पदसमन्वयार्थं योगो वक्ष्यते । इह तु सिद्धान्ते वाक्यसमन्वय एवेष्टः ।**

ಪ್ರಶ್ನೆ - ಜ್ಯೋತಿರುಪಕ್ರಮಾಧಿಕರಣದಲ್ಲಿ ಪ್ರತಿಯೊಂದು ಶಬ್ದಗಳಿಗೂ ಯೌಗಿಕಾರ್ಥವನ್ನು ಸ್ವೀಕರಿಸಿ, ವಿಷ್ಣುವೆಂಬರ್ಥವನ್ನು ಸಾಧಿಸಲಾಗಿದೆ. ಅದರಂತೆ ಇಲ್ಲಿಯೂ ಕೂಡ ವಜ್ರಶಬ್ದಕ್ಕೆ ಯೌಗಿಕಾರ್ಥವನ್ನು ವಿವಕ್ಷಿಸಿ ವಿಷ್ಣುವೆಂಬರ್ಥವನ್ನು ಹೇಳಬಹುದಲ್ಲವೇ?

ಉತ್ತರ - ಜ್ಯೋತಿರುಕ್ರಮಾಧಿಕರಣದ ದೃಷ್ಟಾಂತವೂ ಸರಿಯಿಲ್ಲ. ಅಲ್ಲಿ ಶ್ರುತಿಯಲ್ಲಿರುವ ವಾಕ್ಯಗಳಿಗೆ ಅನ್ಯಪರತ್ವವನ್ನು ಒಪ್ಪಿಕೊಂಡು, ಪದಗಳಿಗೆ ಮಾತ್ರ ಯೌಗಿಕಾರ್ಥವನ್ನು ಸಾಧಿಸುವ ಮೂಲಕ ಪದಸಮನ್ವಯ ಮಾಡಲಾಗಿದೆ. ಆದರೆ ಪ್ರಕೃತ ಈ ಅಧಿಕರಣದ ಸಿದ್ಧಾಂತದಲ್ಲಿ ವಾಕ್ಯಸಮನ್ವಯವನ್ನೇ ಮಾಡುತ್ತಿದ್ದಾರೆ. ಅಂದರೆ ಅನ್ಯತ್ರ ವಾಕ್ಯಕ್ಕೆ ತಾತ್ಪರ್ಯವನ್ನು ಒಪ್ಪಿ, ಆಯಾ ಪದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದು ಜ್ಯೋತಿರುಪಕ್ರಮಾಧಿಕರಣದ ಅಭಿಪ್ರಾಯ. ಆದರೆ ಪ್ರಕೃತ ಸಮಗ್ರವಾಕ್ಯವೇ ವಿಷ್ಣುಪರವೆಂದು ಸಮನ್ವಯ ಮಾಡುತ್ತಿರುವುದರಿಂದ, ದೃಷ್ಟಾಂತವು ವಿಷಮವಾಗಿದೆ.

**वर्जनाद्वज्रमित्यादिस्मृतिः श्रुतितो दुर्बला न श्रुतेरूढित्यागापादिका ।**

ಪ್ರಶ್ನೆ - 'ವರ್ಜನಾದ್‌ವಜ್ರಮುಚ್ಯತೇ ಎಂಬ ಶ್ರುತಿಗೆ ಅನುಸಾರಿಯಾಗಿ ವಜ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಬೇಕಲ್ಲವೇ?

ಉತ್ತರ - ಸ್ಮೃತಿಯು ಶ್ರುತಿಗಿಂತ ದುರ್ಬಲವಾಗಿದೆ. ಅಂತಹ ದುರ್ಬಲಸ್ಮೃತಿಯು ಶ್ರುತಿಯ ರೂಢ್ಯರ್ಥವನ್ನು ತ್ಯಾಗಮಾಡಬೇಕೆನ್ನಲು ಆಧಾರವಾಗುವುದಿಲ್ಲ.

**आकाशादिशब्देषु तु तन्निरवकाशलिङ्गाभावात्त्यागः । अत्र तूद्यतत्वलिङ्गं लोके ''उद्यतायुधदोर्दण्डा'' इत्यादिस्मृतौ ''तेनेन्द्रो वज्रमुदयच्छत्'' इत्यादिश्रुतौ चायुधे प्रसिद्धम् । नच लोकवेदप्रसिद्धत्यागेन तदप्रसिद्धकल्पना युक्ता ।**

ಆಕಾಶಾದಿಶಬ್ದಗಳಲ್ಲಿ ನಿರವಕಾಶವಾದ ಲಿಂಗಗಳಿಲ್ಲದ ಕಾರಣ ರೂಢ್ಯರ್ಥವನ್ನು ಸ್ವೀಕರಿಸಬಹುದು. ಆದರೆ ಪ್ರಕೃತ ಉದ್ಯತತ್ವ ಮೊದಲಾದ ಲಿಂಗಗಳು ಇರುವ ಕಾರಣ ರೂಢ್ಯರ್ಥವನ್ನು ಸ್ವೀಕರಿಸಲು ಬರುವುದಿಲ್ಲ. ಅಂದರೆ ಉದ್ಯತತ್ವಲಿಂಗವು ಲೋಕದಲ್ಲಿ ಆಯುಧದಲ್ಲಿರುವುದು ಪ್ರಸಿದ್ಧವಾಗಿದೆ. 'ಉದ್ಯತಾಯುಧದೋರ್ದಂಡಾಃ' ಇತ್ಯಾದಿ ಸ್ಮೃತಿಯಲ್ಲಿ ಹಾಗೂ 'ತೇನೇಂದ್ರೋ ವಜ್ರಮುದಯಚ್ಛತ್' ಎಂಬ ಶ್ರುತಿಯಲ್ಲಿಯೂ ಕೂಡ ಆಯುಧದಲ್ಲಿಯೇ ಪ್ರಸಿದ್ಧವಾಗಿದೆ. ಲೋಕ ಹಾಗೂ ವೇದಗಳಲ್ಲಿ ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಅಪ್ರಸಿದ್ಧವಾದ ಅರ್ಥವನ್ನು ಕಲ್ಪನೆ ಮಾಡುವುದು ಸರ್ವಥಾ ಯುಕ್ತವಾಗುವುದಿಲ್ಲ.

ಪರಿಪೂರ್ಣಚಂದ್ರಿಕಾ

**एवञ्च निरवकाशलिङ्गसाहित्याद्वज्रश्रुतिरपि निरवकाशा । एतदेवाभिप्रेत्योक्तं न्यायविवरणे ''वज्रशब्द उद्यतत्वलिङ्गं च'' इति । टीकायामपि 'श्रुतिलिङ्गयोरपि तथात्वम्' इति ।।**

ಆದ್ದರಿಂದ ನಿರವಕಾಶವಾದ ಲಿಂಗಗಳ ಸಾಹಿತ್ಯದಿಂದ ವಜ್ರಶ್ರುತಿಯೂ ಕೂಡ ನಿರವಕಾಶವೇ ಆಗುತ್ತದೆ. ಈ ಅಭಿಪ್ರಾಯದಿಂದ ನ್ಯಾಯವಿವರಣದಲ್ಲಿ 'ವಜ್ರಶಬ್ದ ಉದ್ಯತತ್ವಲಿಂಗಂಚ' ಎಂಬುದಾಗಿ ಲಿಂಗದ ಜೊತೆಗೆ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ಟೀಕೆಯಲ್ಲಿಯೂ ಕೂಡ 'ಶ್ರುತಿಲಿಂಗಯೋರಪಿ ತಥಾತ್ವಮ್' ಉದ್ಯತತ್ವವೆಂಬ ಲಿಂಗದ ಜೊತೆ ಇರುವುದರಿಂದ ಶ್ರುತಿಯು ರೂಢಾರ್ಥವನ್ನೇ ಹೇಳುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

**यद्वा रूढित्यागेऽव्यवस्थापत्त्या लिङ्गनिरपेक्षैव श्रुतिर्निरवकाशा ।**

ಅಥವಾ ಕಾಠಕಪ್ರಕರಣದ ಹಿಂದಿನ-ಮುಂದಿನವಾಕ್ಯಗಳೆಲ್ಲವೂ ವಿಷ್ಣುಪರವೇ ಆಗಲೀ, ಆದರೆ 'ಮಹದ್ಭಯಮ್ ವಜ್ರಮುದ್ಯತಮ್' ಎಂಬ ವಾಕ್ಯ ಮಾತ್ರ ವಜ್ರಾಯುಧವನ್ನೇ ಪ್ರತಿಪಾದನೆ ಮಾಡಲಿ. ಏಕೆಂದರೆ ವಜ್ರಶಬ್ದಕ್ಕೆ ರೂಢ್ಯರ್ಥವನ್ನು ತ್ಯಾಗ ಮಾಡಿದರೆ, ಅನೇಕ ಅವ್ಯವಸ್ಥೆಗಳು ಉಂಟಾಗುತ್ತವೆ. ಹಾಗಾಗಿ ಯಾವುದೇ ಲಿಂಗಗಳನ್ನು ಅಪೇಕ್ಷೆ ಪಡದೆ, ಶ್ರುತಿಯು ಸ್ವತಃ ನಿರವಕಾಶವಾಗಿರುತ್ತದೆ. 'ಉದ್ಯತತ್ವ' ಎಂಬ ಲಿಂಗದ ಅಪೇಕ್ಷೆಯೂ ಇಲ್ಲದೆ, ವಜ್ರಶ್ರುತಿಯು ನೇರವಾಗಿ ವಜ್ರಾಯುಧವನ್ನು ಪ್ರತಿಪಾದನೆ ಮಾಡುತ್ತದೆ.

**आकाशादिशब्दानामपि योग इहाक्षिप्यते ।**

ಆಕಾಶಾದಿ ಶಬ್ದಗಳೂ ಕೂಡ ರೂಢಿಯಿಂದ ಭೂತಾಕಾಶಾದಿಗಳನ್ನೇ ಪ್ರತಿಪಾದನೆ ಮಾಡಲಿ, ಹೊರತು ವಾಕ್ಯಶೇಷದಲ್ಲಿರುವ ಲಿಂಗಗಳ ಆಧಾರದಿಂದ ವಿಷ್ಣುವನ್ನು ಪ್ರತಿಪಾದನೆ ಮಾಡುವುದು ಬೇಡವೆಂದೇ ನಮ್ಮ ಅಭಿಪ್ರಾಯವಾಗಿದೆ.

**अमृतत्वहेतुवेदनविषयत्वं तु श्रुतिबलाद्वज्रेऽप्यस्तु । टीकायामस्य निरवकाशत्वाङ्गीकारस्तु वज्रश्रुतिलिङ्गयोर्निरवकाशत्वज्ञानात्प्रागस्य सावकाशत्वज्ञानाभावाभिप्रायः ।**

ಇನ್ನು 'ಮಹದ್ಭಯಂ ವಜ್ರಮುದ್ಯತಮ್' ಎಂಬ ವಾಕ್ಯದಲ್ಲೇ ಕೇಳಿಸುತ್ತಿರುವ ಅಮೃತತ್ವ-ಹೇತುವೇದನವಿಷಯತ್ವವೂ ಕೂಡ ವಜ್ರಾಯುಧದಲ್ಲಿಯೇ ಬರುತ್ತದೆಂದು ಶ್ರುತಿಯ ಬಲದಿಂದ ಹೇಳುತ್ತೇವೆ. ಅಂದರೆ ವಿಷ್ಣುಪರವಾದ ಈ ಲಿಂಗವು ವಜ್ರಾಯುಧದಲ್ಲಿ ಸಾವಕಾಶವಾಗಿದೆ. ಹಾಗಾದರೆ ಈ ಟೀಕೆಯಲ್ಲಿ ಅಮೃತತ್ವಹೇತುವೇದನವಿಷಯತ್ವವನ್ನು ನಿರವಕಾಶವೆಂದು ಅಂಗೀಕಾರ-

ಮಾಡಿದ್ದಾರಲ್ಲವೇ? ಎಂದರೆ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳು ನಿರವಕಾಶವಾಗಿವೆ ಎಂಬ ಜ್ಞಾನಬರುವ ಮೊದಲು, ಅಮೃತತ್ವಹೇತುವೇದನ ವಿಷಯತ್ವವೆಂಬ ಲಿಂಗವು ಸಾವಕಾಶವಾಗಿದೆಯೆಂದು ತಿಳಿದಿರುವುದಿಲ್ಲ. ಯಾವಾಗ ವಜ್ರಶ್ರುತಿ ಹಾಗೂ ಲಿಂಗಗಳು ನಿರವಕಾಶವಾಗಿವೆಯೆಂದು ತಿಳಿಯುತ್ತದೋ, ಅನಂತರ ಇದೂ ಸಹ ಸಾವಕಾಶವಾಗಿದೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ ನಿರವಕಾಶತ್ವವನ್ನು ಹೇಳಿರುತ್ತಾರೆ.

**अन्यथा ''वज्रज्ञानान्मोक्ष'' इति भाष्यविरोधात् । सर्वथा निरवकाशस्य बाधायोगाच्च ।**

ಒಂದು ವೇಳೆ ಅಮೃತತ್ವಹೇತುವೇದನವಿಷಯತ್ವವನ್ನು ಸಾವಕಾಶವೆಂದು ಒಪ್ಪದಿದ್ದರೆ, 'ವಜ್ರಜ್ಞಾನಾನ್ಮೋಕ್ಷಃ' ವಜ್ರಾಯುಧದ ಜ್ಞಾನದಿಂದಲೇ ಮೋಕ್ಷವಾಗುತ್ತದೆ ಎಂಬ ಭಾಷ್ಯದ ಮಾತಿಗೆ ವಿರೋಧ ಬರುತ್ತದೆ. ಮತ್ತು ನಿರವಕಾಶವಾದ ಲಿಂಗಕ್ಕೆ ಬಾಧವನ್ನು ಹೇಳುವುದು ಸರ್ವಥಾ ಯುಕ್ತವಾಗುವುದಿಲ್ಲ.

**एजृकम्पन इति धातुजेन एजतीत्यनेनोक्तं कम्पकत्वं तु भयहेतुत्वाद्वज्र एव युक्तम् । ब्रह्मप्रकरणमपि श्रुत्यादिबाधितम् ।**

'ಏಜೃಕಂಪನೇ' ಎಂಬ ಧಾತುವಿನಿಂದ ನಿಷ್ಪನ್ನವಾದ 'ಏಜತಿ' ಎಂಬುದರಿಂದ ತಿಳಿಯಲ್ಪಟ್ಟ ಕಂಪಕತ್ವವೆಂಬ ಧರ್ಮವೂ ಕೂಡ ಭಯಕಾರಣವಾದ ವಜ್ರಾಯುಧದಲ್ಲೇ ಯುಕ್ತವಾಗುತ್ತದೆ. ಹಿಂದಿನ-ಮುಂದಿನ ಬ್ರಹ್ಮಪ್ರಕರಣವು ಈ ಶ್ರುತಿಯಿಂದ ಬಾಧಿತವಾಗಿದೆಯೆಂದು ಹೇಳಬೇಕು.

**तस्माद्वज्रज्ञानस्यापि मोक्षहेतुत्वात् त्रैवर्णिकानां वेदाद्ब्रह्मज्ञानं मोक्षदमिति पूर्वोक्तमयुक्तमिति पूर्वःपक्षः ।**

ಆದ್ದರಿಂದ ವಜ್ರಜ್ಞಾನವೂ ಕೂಡ ಮೋಕ್ಷಹೇತುವಾಗಿದೆ ಎಂದಂತಾಯಿತು. ಹೀಗಿರುವಾಗ ಹಿಂದಿನ ಅಧಿಕರಣದಲ್ಲಿ ತ್ರೈವರ್ಣಿಕರಿಗೆ ವೇದದಿಂದ ಬರುವಂತಹ ಬ್ರಹ್ಮಜ್ಞಾನವೇ ಮೋಕ್ಷಹೇತುವಾಗಿದೆ ಎಂದು ಸಿದ್ಧಾಂತ ಮಾಡಿದ್ದು, ತಪ್ಪಾಯಿತು. ಇಷ್ಟು ಪೂರ್ವಪಕ್ಷ.

**प्रकाशः —**

अत्र टीकायां ''इन्द्रायुधमेवेदं वज्रम् । वज्रश्रुतेस्तत्र रूढत्वात् । उद्यतत्वलिङ्गाच्च'' इत्यादिना ग्रन्थेन श्रुतिलिङ्गाभ्यां पूर्वपक्षमुक्त्वा तत्र निरवकाश-विष्णुलिङ्गविरोधमाशंक्य श्रुतिलिङ्गयोरपि निरवकाशत्वेन प्राबल्यमाश्रित्य

**पूर्वपक्षोज्जीवनं कृतम् । तत्र ''वज्रज्ञानेन'' इत्येकलिङ्गोक्तिरुपलक्षणमिति भावेन ''नच वज्रज्ञानेन मोक्षोक्तेर्विष्णुरिति वाच्यम्'' इत्यादि टीकां विवृण्वन्छतिलिङ्गयोर्निरवकाशत्वं च व्यनक्ति ।। नन्वत्रेत्यादिना ।।**

ವಿವರಣೆ - ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ. ಈ ಅಧಿಕರಣದ ಟೀಕೆಯಲ್ಲಿ 'ಇಂದ್ರಾಯುಧಮೇವೇದಂ ವಜ್ರಮ್ । ವಜ್ರಶ್ರುತೇರಸ್ತತ್ರ ರೂಢತ್ವಾತ್ । ಉದ್ಯತತ್ವಲಿಂಗಾಚ್ಚ' ವಜ್ರಶಬ್ದದಿಂದ ಇಂದ್ರಾಯುಧವೇ ಪ್ರತಿಪಾದ್ಯವಾಗಿದೆ. ವಜ್ರಶ್ರುತಿಯು ಅಲ್ಲಿ ರೂಢವಾಗಿದೆ. ಜೊತೆಗೆ ಉದ್ಯತತ್ವಲಿಂಗವೂ ಇದೆ. ಇತ್ಯಾದಿಯಾಗಿ ಹೇಳಲಾಗಿದೆ. ಇದರಿಂದ ಶ್ರುತಿ ಹಾಗೂ ಲಿಂಗಗಳಿಂದ ಪೂರ್ವಪಕ್ಷ ಮಾಡಿದಂತಾಯಿತು. ಹೀಗಿರುವಾಗ ನಿರವಕಾಶವಾದ ವಿಷ್ಣುಲಿಂಗದ ವಿರೋಧವು ಪೂರ್ವಪಕ್ಷಕ್ಕೆ ಬರುತ್ತದಲ್ಲವೇ? ಎಂದು ಆಶಂಕಿಸಿ, ಪೂರ್ವಪಕ್ಷಕ್ಕೆ ಆಧಾರವಾಗಿ ಹೇಳಲ್ಪಟ್ಟ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳೂ ಕೂಡ ನಿರವಕಾಶವೇ ಆಗಿರುವ ಕಾರಣ ಪ್ರಬಲವಾಗಿವೆ ಎಂಬುದಾಗಿ ಪೂರ್ವಪಕ್ಷವನ್ನು ಉಜ್ಜೀವನ ಮಾಡಿದ್ದಾರೆ. ಅಲ್ಲಿ 'ವಜ್ರಜ್ಞಾನೇನ' ಎಂಬುದಾಗಿ ಒಂದೇ ಲಿಂಗವನ್ನು ಹೇಳಿದ್ದರೂ ಅದನ್ನು ಉಪಲಕ್ಷಣವಾಗಿ ತಿಳಿದು ಬ್ರಹ್ಮಶ್ರುತಿ, ಶೋಕರಾಹಿತ್ಯ, ಅವಿನಾಶಿತ್ವ ಮೊದಲಾದವುಗಳನ್ನು ಇಟ್ಟುಕೊಂಡು ಇಂತಹ ಅನೇಕ ಲಿಂಗಗಳಿಂದ ಬ್ರಹ್ಮನೇ ವಜ್ರಶಬ್ದ ಪ್ರತಿಪಾದ್ಯನಾಗಬೇಕೆಂದು ಪ್ರಶ್ನಿಸಲಾಗಿದೆ. ಈ ಅಭಿಪ್ರಾಯದಿಂದ 'ನಚ ವಜ್ರಜ್ಞಾನೇನ ಮೋಕ್ಷೋಕ್ತೇಃ ವಿಷ್ಣುರಿತಿ ವಾಚ್ಯಮ್' ಇತ್ಯಾದಿ ಟೀಕೆಯು ಹೊರಟಿದೆಯೆಂದು ವ್ಯಾಖ್ಯಾನ ಮಾಡುವವರಾಗಿ ಪೂರ್ವಪಕ್ಷದಲ್ಲಿ ಹೇಳಲಾದ ಶ್ರುತಿ ಹಾಗೂ ಲಿಂಗಗಳಿಗೆ ನಿರವಕಾಶತ್ವವನ್ನು ಸ್ಪಷ್ಟಪಡಿಸಲು 'ನನ್ವತ್ರ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – ''भवन्तीत्यादि'' इत्यादिपदेन ''प्राण एजति निस्सृतम्'' इत्युक्तकम्पकत्वजगज्जनकत्वादिलिङ्गपरिग्रहः । श्रुत्यर्थस्तु टीकायां व्यक्तः ।**

'ಭವಂತೀತ್ಯಾದಿ' ಎಂಬಲ್ಲಿರುವ ಆದಿಪದದಿಂದ 'ಪ್ರಾಣ ಏಜತಿ ನಿಃಸೃತಮ್' ಎಂಬಲ್ಲಿ ಹೇಳಲ್ಪಟ್ಟ 'ಕಂಪಕತ್ವ', 'ನಿಃಸೃತಮ್' ಎಂಬುದರಿಂದ ತಿಳಿಯುವ ಜಗಜ್ಜನಕತ್ವ ಮೊದಲಾದ ಲಿಂಗಗಳನ್ನು ವಿವಕ್ಷಿಸಬೇಕು. ಈ ಶ್ರುತ್ಯರ್ಥವು ಟೀಕೆಯಲ್ಲಿಯೇ ಸ್ಪಷ್ಟವಾಗಿದೆ.

**प्रकाशः – तस्मान्नपूर्वपक्षोदय इति ।। एतेन यदुक्तं श्रुतप्रकाशे नास्याधिकरणान्तरत्वम् । निर्णीतब्रह्मप्रकरणगतत्वेन पूर्वपक्षानुदयादिति । तदप्युट्टंकितं भवति । श्रुतिनिरवकाशत्वं तावदाह – यदीति ।।**

'ತಸ್ಮಾನ್ನಪೂರ್ವಪಕ್ಷೋದಯಃ' ಎಂದು ಹೇಳಿದ್ದರಿಂದ ಶ್ರುತಪ್ರಕಾಶದ ಅಭಿಪ್ರಾಯವನ್ನು ನಿರಾಕರಿಸಿದಂತಾಯಿತು. ಶ್ರುತಪ್ರಕಾಶದಲ್ಲಿ ಇದನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿಲ್ಲ. ನಿರ್ಣೀತವಾದ ಬ್ರಹ್ಮಪ್ರಕರಣದಲ್ಲೇ ವಜ್ರಶ್ರುತಿಯಿರುವುದರಿಂದ ಪೂರ್ವಪಕ್ಷ ಹುಟ್ಟಲು ಸಾಧ್ಯವೇ ಇಲ್ಲವೆಂದು ಹೇಳಲಾಗಿದೆ. ಆದರೆ ಪೂರ್ವಪಕ್ಷವು ಹೇಗೆ ಹುಟ್ಟುತ್ತದೆಂದು ಮುಂದೆ ಸಮರ್ಥಿಸುತ್ತಿರುವುದರಿಂದ ಶ್ರುತಪ್ರಕಾಶದ

ಅಭಿಪ್ರಾಯವು ನಿರಾಕೃತವಾಯಿತು. ವಜ್ರಶ್ರುತಿಯು ನಿರವಕಾಶವಾಗಿದೆಯೆಂದು 'ಯದಿ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः – तथाचेति ।।** श्रुतेर्यौगिकत्वायोगेन रूढतयेन्द्रायुधादन्यत्रानवकाशत्वे सतीत्यर्थः ।। **कथञ्चिदिति ।।** भयहेतुत्वादिना वज्रेऽपि युक्तानीत्यर्थः । तर्हि पूर्वसिद्धान्तविरोध इत्यत आह – **पूर्वसूत्रेत्विति ।।**

'ತಥಾಚ' ಎಂದರೆ ಶ್ರುತಿಯನ್ನು ಯೌಗಿಕವೆಂದು ಕೂಡಿಸಲಾಗದ ಕಾರಣ, ರೂಢವೆಂದೇ ಹೇಳಬೇಕಾದ್ದರಿಂದ ಇಂದ್ರನ ಆಯುಧದಲ್ಲಿಯೇ ವಜ್ರಶಬ್ದವು ಯುಕ್ತವಾಗುತ್ತದೆ. ಬೇರೆ ಕಡೆ ಅವಕಾಶವನ್ನು ಹೊಂದದ ಕಾರಣ ಎಂದರ್ಥ. 'ಕಥಂಚಿತ್' ಎಂದರೆ ಭಯಹೇತುತ್ವಾದಿಗಳಿಂದ ವಜ್ರಾಯುಧದಲ್ಲಿಯೂ ಜಗಚ್ಚೇಷ್ಟಕತ್ವಾದಿಗಳು ಯುಕ್ತವಾಗುತ್ತವೆ ಎಂದರ್ಥ. ಹಾಗಾದರೆ ಹಿಂದಿನ ಅಧಿಕರಣದ ಸಿದ್ಧಾಂತಕ್ಕೆ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಪೂರ್ವಸೂತ್ರೇ ತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – वाक्यशेषेति ।।** "सह सञ्जिहान एव क्षत्तारमुवाच" इत्यादिवाक्यशेषस्थत्वादित्यर्थः । एतेन पूर्ववैषम्येणेत्येतद्विवृणोति ।

'ವಾಕ್ಯಶೇಷ' ಎಂದರೆ 'ಸಹ ಸಂಜಿಹಾನ ಏವ ಕ್ಷತ್ತಾರಮುವಾಚ' ಎಂಬ ವಾಕ್ಯಶೇಷದಿಂದ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಹಿಂದಿನ ಅಧಿಕರಣದಲ್ಲಿ ಅಂಗೀಕರಿಸಲಾಗಿತ್ತು ಎಂದರ್ಥ. ಇದರಿಂದ ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ವ್ಯತ್ಯಾಸವಿದೆಯೆಂದು ವಿವರಿಸುತ್ತಿದ್ದಾರೆ.

**प्रकाशः –** "आज्यैस्स्तुवत" इत्यत्राज्यशब्दस्य "दधिकुरुत" इत्यत्र दधिशब्दस्य "तस्योपनिषत्सत्यम्" इत्यादौ सत्यादिशब्दस्य यौगिकत्वं प्रसिद्धमितीहापि तथा स्यादित्यत आह – **एतेनेति ।।**

'ಆಜ್ಯೈಃಸ್ತುವತೇ' ಎಂಬಲ್ಲಿರುವ 'ಆಜ್ಯ' ಶಬ್ದಕ್ಕೆ ದಧಿ ಕುರುತ' ಎಂಬಲ್ಲಿರುವ 'ದಧಿ' ಶಬ್ದಕ್ಕೆ 'ತಸ್ಯೋಪನಿಷತ್‌ಸತ್ಯಮ್' ಎಂಬಲ್ಲಿರುವ 'ಸತ್ಯ' ಶಬ್ದಕ್ಕೆ ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನೇ ಅಂಗೀಕರಿಸಿದ್ದು ಪ್ರಸಿದ್ಧವಾಗಿದೆ. ಅದರಂತೆ ಇಲ್ಲಿಯೂ ಕೂಡ 'ವಜ್ರ' ಶಬ್ದಕ್ಕೆ ಯೌಗಿಕಾರ್ಥವನ್ನೇ ಸ್ವೀಕರಿಸಬೇಕಲ್ಲವೇ? ಎಂಬ ಪ್ರಶ್ನೆಗೆ 'ಏತೇನ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः –** "यदाजिमीयुस्तदाज्यानामाज्यत्वं यदेनमधिनोत्तद्दध्नो दधित्वं सदिति मर्त्यं तीत्यमृतं ते उभेयच्छति" इत्यादिश्रुतावित्यर्थः । विवृतमेतत्प्रागत्ताधिकरणे ।

'ಯದಾಜಿಮೀಯುಸ್ತದಾಜ್ಯನಾಮಾಜ್ಯತ್ವಂ' ಎಂಬ ಶ್ರುತಿಯ ಬಲದಿಂದ 'ಆಜ್ಯ' ಶಬ್ದಕ್ಕೆ ಯುದ್ಧದ ಪ್ರಾರಂಭದಲ್ಲಿ ಉಪಯೋಗಿಸಬೇಕಾದ ಮಂತ್ರಗಳೆಂಬ ಯೌಗಿಕಾರ್ಥವನ್ನು ಸ್ವೀಕರಿಸಲಾಗಿದೆ. ಅದರಂತೆ

'ಯದೇನಮಧಿನೋತ್ತದ್ದಧ್ನೋ ದಧಿತ್ವಂ' ಪುಷ್ಟೀಕರಿಸುತ್ತದೆಂಬ ವಿವಕ್ಷೆಯಿಂದ ಬೇರೆ ಪದಾರ್ಥವನ್ನು 'ದಧಿ' ಎಂದು ಕರೆಯಲಾಗಿದೆ. ಮತ್ತು 'ಸತ್' = ಮುಕ್ತರನ್ನು, ತಿ = ಸಂಸಾರಿಗಳನ್ನು, ಯ = ನಿಯಮನ ಮಾಡುತ್ತಾನೆ ಎಂಬ ಅರ್ಥವನ್ನು ವಿವಕ್ಷಿಸಿ, 'ಸದಿತಿ ಮರ್ತ್ಯಂ ತೀತ್ಯಮೃತಂ ತೇ ಉಭೇ ಯಚ್ಛತಿ' ಎಂಬ ಶ್ರುತಿಯು ಸತ್ಯಶಬ್ದಕ್ಕೆ ಯೌಗಿಕಾರ್ಥವನ್ನು ಹೇಳಿದೆ. ಇದನ್ನು ಹಿಂದೆ ಅತ್ತೃತ್ವಾಧಿಕರಣದಲ್ಲಿ ವಿವರಿಸಿದ್ದಾಗಿದೆ. ಆದ್ದರಿಂದ ಆಜ್ಯಾದಿಶಬ್ದಗಳಿಗೆ ಯೌಗಿಕಾರ್ಥವನ್ನು ಸ್ವೀಕರಿಸಬಹುದಾದರೂ ವಜ್ರಶಬ್ದಕ್ಕೆ ಇಂತಹ ಆಧಾರಗಳಿಲ್ಲದ ಕಾರಣ ಯೌಗಿಕಾರ್ಥವನ್ನು ಸ್ವೀಕರಿಸಲಾಗದು.

**प्रकाशः** – ननु ''वसन्ते वसन्ते ज्योतिषा यजेत'' इत्यादौ वाक्यशेषस्थयोगाभावेऽपि ज्योतिरादिशब्दो यौगिक इति वक्ष्यत इत्यतस्तद्वैषम्यमाह – **ज्योतिरिति** ।।

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿ ವಾಕ್ಯಶೇಷದಲ್ಲಿ ಯೌಗಾರ್ಥವನ್ನು ಹೇಳದಿದ್ದರೂ ಜ್ಯೋತಿರಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಯೌಗಿಕಾರ್ಥವನ್ನು ಅಂಗೀಕರಿಸಿದ್ದು, ಜ್ಯೋತಿರಾದ್ಯಧಿ-ಕರಣದಲ್ಲಿ ಮುಂದೆ ಸಮರ್ಥಿಸುತ್ತಾರೆ. ಅದರಂತೆ ಇಲ್ಲಿಯೂ ಕೂಡ ವಾಕ್ಯಶೇಷದಲ್ಲಿ ಯೌಗಿಕಾರ್ಥವನ್ನು ಹೇಳದ್ದಿದರೂ ಜ್ಯೋತಿರಾದಿಶಬ್ದಗಳಂತೆ ಯೌಗಾರ್ಥವನ್ನೇ ಸ್ವೀಕರಿಸಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಜ್ಯೋತಿರುಪಕ್ರಮಾಧಿಕರಣದಲ್ಲಿ ಪದಸಮನ್ವಯವು ಉದ್ದಿಷ್ಟವಾಗಿದೆ. ಪ್ರಕೃತ ಈ ಅಧಿಕರಣದಲ್ಲಿ ವಾಕ್ಯಸಮನ್ವಯವೂ ಉದ್ದಿಷ್ಟವಾದ್ದರಿಂದ ವೈಷಮ್ಯವಿದೆಯೆಂದು 'ಜ್ಯೋತಿಃ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः** – नन्विहापि स्मृतौ योगश्श्रूयत इत्यत आह – **वर्जनादिति** ।। ननु यथाऽऽकाशादिशब्देष्वनन्तत्वादिब्रह्मलिङ्गाद्बाधकाद्रूढित्यागस्तथेहापि स्मृतेर्दुर्बलत्वेऽपि कंपकत्वादिलिङ्गाद्रूढित्यागोस्त्वित्यत आह – **आकाशेति** ।।

ಪ್ರಕೃತ ಸ್ಮೃತಿಯ ಆಧಾರದಿಂದ ಯೋಗಾರ್ಥವು ಶ್ರುತವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ವರ್ಜನಾತ್' ಎಂದು ಉತ್ತರಿಸಿದ್ದಾರೆ.

ಯಾವರೀತಿಯಾಗಿ ಆಕಾಶಾದಿ ಶಬ್ದಗಳಲ್ಲಿ ಅನಂತತ್ವಾದಿ ಬ್ರಹ್ಮನ ಲಿಂಗಗಳು ಬಾಧಕವಾಗಿರುವುದರಿಂದ ರೂಢ್ಯರ್ಥವನ್ನು ಬಿಡಲಾಗಿದೆಯೋ, ಅದರಂತೆ ಇಲ್ಲಿಯೂ ಕೂಡ ಸ್ಮೃತಿಯು ದುರ್ಬಲವಾಗಿದ್ದರೂ ಕಂಪಕತ್ವಾದಿಲಿಂಗಗಳು ಬ್ರಹ್ಮವಿಷಯಕವಾಗಿರುವುದರಿಂದ ವಜ್ರಾಯುಧವೆಂಬ ರೂಢ್ಯರ್ಥವನ್ನು ಬಿಡಬೇಕಲ್ಲವೇ ? ಎಂಬ ಪ್ರಶ್ನೆಗೆ 'ಆಕಾಶ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – ''आकाश इति होवाच'' इत्यादिगतेष्वाकाशप्राणादिप्रापक-निरवकाशलिङ्गाभावादित्यर्थः । लिङ्गं प्रसिद्धमित्यन्वयः ।

''उद्यतायुधदोर्दण्डाः पतितस्वशिरोक्षिभिः ।
पश्यन्तः पातयन्तिस्म कबन्धा अप्यरीन्युधि''

इति भारतादिस्मृतावित्यर्थः ॥

'ಆಕಾಶ ಇತಿ ಹೋವಾಚ' ಇತ್ಯಾದಿ ಪ್ರಕರಣಗಳಲ್ಲಿ ಆಕಾಶ ಪ್ರಾಣಾದಿಪ್ರಾಪಕವಾದ ನಿರವಕಾಶಲಿಂಗಗಳಿರುವುದಿಲ್ಲ ಎಂದರ್ಥ. ಉದ್ಯತತ್ವಾದಿಲಿಂಗಗಳು ಆಯುಧದಲ್ಲಿ ಪ್ರಸಿದ್ಧವಾಗಿದೆ.

'ಉದ್ಯತಾಯುಧದೋರ್ದಂಡಾಃ ಪತಿತಸ್ವಶಿರೋಕ್ಷಿಭಿಃ ।
ಪಶ್ಯಂತಃ ಪಾತಯಂತಿಸ್ಮ ಕಬಂಧಾ ಅಪ್ಯರೀನ್ಯುಧಿ'

ಯುದ್ಧದ ಸಂದರ್ಭದಲ್ಲಿ ತಲೆ ಕತ್ತರಿಸಿ, ದೂರದಲ್ಲಿ ಬಿದ್ದಾಕ್ಷಣ, ಆ ತಲೆಯಲ್ಲಿರುವ ಕಣ್ಣುಗಳಿಂದಲೇ ನೋಡುತ್ತಾ ದೇಹದಿಂದ ಆಯುಧವನ್ನು ಎತ್ತಿ ಶತ್ರುವನ್ನು ಸಂಹಾರ ಮಾಡುತ್ತಿದ್ದರು ಎಂಬುದಾಗಿ 'ಮಹಾಭಾರತ' ಎಂಬ ಸ್ಮೃತಿಯಲ್ಲಿ ಪ್ರಸಿದ್ಧವಾಗಿದೆ.

**प्रकाशः – एवञ्चेति ॥ ज्योतिश्चरणेत्यत्र पूर्वपक्षे ज्योतिश्श्रुतिः प्रकरणेनेवेति** भावः । टीकोक्तेर्मूलमाह – **एतदेवेति ॥**

ಆದ್ದರಿಂದ 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಅಧಿಕರಣದ ಪೂರ್ವಪಕ್ಷದಲ್ಲಿ ಅಗ್ನಿಪ್ರಕರಣದಿಂದ ಜ್ಯೋತಿಃಶ್ರುತಿಯು ಹೇಗೆ ಅಗ್ನಿಯನ್ನೇ ಪ್ರತಿಪಾದಿಸುತ್ತದೆಂದು ಸಮರ್ಥಿಸಲಾಯಿತೋ, ಅದರಂತೆ ಇಲ್ಲಿಯೂ ಕೂಡ ಉದ್ಯತತ್ವ ಎಂಬ ಲಿಂಗದ ಆಧಾರದಿಂದ ವಜ್ರಶಬ್ದವು ಆಯುಧವನ್ನೇ ಪ್ರತಿಪಾದಿಸುತ್ತದೆಂದು ಪೂರ್ವಪಕ್ಷವನ್ನು ಮಾಡಿದಂತಾಯಿತು. ಟೀಕಾಮಾತನ್ನು ಮೂಲಾರೂಢ ಮಾಡುತ್ತಿದ್ದಾರೆ 'ಏತದೇವ' ಇತ್ಯಾದಿಯಾಗಿ.

**प्रकाशः – श्रुतिनिरवकाशत्वं लिङ्गनिरवकाशत्वाधीनमित्येतदेवेत्यर्थः** । अन्यथा स्मार्तयोगस्य दुर्बलतया श्रुतिबाधकत्वायोगेऽपि निरवकाशभगवल्लिङ्गेनाकाशादि-श्रुतेरिव बाधसम्भवेन कल्प्यावकाशतया निरवकाशत्वायोगादिति भावः ॥ **टीकायामिति ॥** एतदेवाभिप्रेत्योक्तमित्यनुषङ्गः ।

ವಜ್ರಶ್ರುತಿಯ ನಿರವಕಾಶತ್ವವು 'ಉದ್ಯತತ್ವ' ಎಂಬ ಲಿಂಗನಿರವಕಾಶತ್ವದ ಅಧೀನವಾಗಿರುವುದರಿಂದಲೇ ಎಂಬುದು 'ಏತದೇವ' ಎಂಬ ಪದದ ಅರ್ಥ. ಹೀಗೊಪ್ಪದಿದ್ದರೆ ಶ್ರುತಿಸಿದ್ಧವಾದ ಯೋಗವು ದುರ್ಬಲವಾದ್ದರಿಂದ, ಶ್ರುತಿಗೆ ಬಾಧಕವಾಗದಿದ್ದರೂ ನಿರವಕಾಶವಾದ ಭಗವಲ್ಲಿಂಗಗಳು ಶ್ರುತಿಯಲ್ಲಿರುವುದರಿಂದ ಆಕಾಶಾದಿ ಶ್ರುತಿಗಳು ಬಾಧಿತವಾದಂತೆ ವಜ್ರಶ್ರುತಿಗಳೂ ಸಹ ಬಾಧಿತವಾಗುತ್ತವೆಂದು ಕಲ್ಪಿಸಬಹುದು. ಆವಾಗ ನಿರವಕಾಶತ್ವವನ್ನು ಹೇಳಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ 'ಉದ್ಯತತ್ವ' ಎಂಬ ಲಿಂಗ ನಿರವಕಾಶದ ಅಧೀನವಾಗಿದೆಯೆಂದು ಹೇಳಿದಾಗ ವಜ್ರಶ್ರುತಿಗೆ ಪ್ರಾಬಲ್ಯ

ಬರುತ್ತದೆ. 'ಟೀಕಾಯಾಮ್' ಎಂಬಲ್ಲಿ 'ಏತದೇವಾಭಿಪ್ರೇತ್ಯ ಉಕ್ತಮ್' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು.

**प्रकाशः** – एवं वज्रश्रुतेर्निरवकाशत्वं निरवकाशलिङ्गाधीनतयोपपाद्य पूर्ववैषम्येण पूर्वपक्ष उक्तः । इदानीं न्यायविवरणस्थचशब्दस्वारस्यं टीकास्थद्विवचनस्वारस्यं चानुरुध्य लिङ्गनिरपेक्षमेव निरवकाशत्वं वदन् पूर्वाक्षेपेण पूर्वपक्षमाह – **यद्वेति** ।।

ಇಲ್ಲಿಯ ತನಕ ವಜ್ರಶ್ರುತಿಯು ನಿರವಕಾಶವಾದ ಲಿಂಗದ ಅಧೀನವಾದ್ದರಿಂದ ನಿರವಕಾಶವಾಗಿದೆಯೆಂದು ಉಪಪಾದನೆ ಮಾಡಿ, ಹಿಂದಿನ ಅಧಿಕರಣಕ್ಕಿಂತ ವಿಲಕ್ಷಣವಾದ ಪೂರ್ವಪಕ್ಷವನ್ನು ತೋರಿಸಲಾಯಿತು. ಈಗ ನ್ಯಾಯವಿವರಣದಲ್ಲಿ 'ವಜ್ರಶ್ರುತಿ, ಉದ್ಯತತ್ವಲಿಂಗಂಚ' ಎಂಬುದಾಗಿ 'ಚ' ಶಬ್ದವಿದೆ. ಒಂದು ವೇಳೆ ಶ್ರುತಿಯು ಲಿಂಗವನ್ನು ಅಪೇಕ್ಷೆ ಪಡುವುದಾದರೆ, ಇಲ್ಲಿರುವ 'ಚ' ಶಬ್ದವು ಅಸ್ವರಸವಾಗುತ್ತದೆ. ಮತ್ತು ಟೀಕೆಯಲ್ಲಿ 'ಶ್ರುತಿಲಿಂಗಯೋಃ' ಎಂಬುದಾಗಿ ದ್ವಿವಚನವನ್ನು ಪ್ರಯೋಗಿಸಿದ್ದಾರೆ. ಇದೂ ಸಹ ಪರಸ್ಪರ ಅಧೀನವಾದಲ್ಲಿ, ಅಸ್ವರಸವಾಗುತ್ತದೆ. ಹಾಗಾಗಿ ಲಿಂಗವನ್ನು ಅಪೇಕ್ಷೆ ಪಡದೆ ಶ್ರುತಿಯೇ ಸ್ವತಃ ನಿರವಕಾಶವಾಗಿದೆಯೆಂದು ಸಮರ್ಥನೆ ಮಾಡುತ್ತಾ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವ ಮೂಲಕ ಪೂರ್ವಪಕ್ಷ ಮಾಡುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥದಿಂದ.

**प्रकाशः** – नन्वाकाशादिशब्दानामिवेश्वरलिङ्गैश्श्रुतिबाधः किं नेत्यत आह – **आकाशादीति** ।। ब्रह्मलिङ्गादेस्सावकाशत्वमाह – **अमृतत्वेति** ।। **अस्येति** ।। य एतद्विदुरमृता इत्युक्तलिङ्गस्येत्यर्थः ।

ಆಕಾಶಾದಿ ಶಬ್ದಗಳಂತೆ ಇಲ್ಲಿಯೂ ಸಹ ಭಗವಲ್ಲಿಂಗಗಳಿಂದ ವಜ್ರಶ್ರುತಿಯು ಬಾಧಿತವಾಗಬೇಕಲ್ಲವೇ? ಎಂಬ ಪ್ರಶ್ನೆಗೆ 'ಆಕಾಶಾದಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಬ್ರಹ್ಮಲಿಂಗಗಳಿಗೆ ಸಾವಕಾಶತ್ವವನ್ನು 'ಅಮೃತತ್ವ' ಇತ್ಯಾದಿಯಾಗಿ ಸಮರ್ಥನೆ ಮಾಡಿದ್ದಾರೆ. 'ಅಸ್ಯ' ಎಂದರೆ 'ಯ ಏತದ್ವಿದುರಮೃತಾ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಲಿಂಗಕ್ಕೆ ಎಂದರ್ಥ.

**प्रकाशः** – वज्रस्य ये श्रुतिलिङ्गे तयोरित्यर्थः । एतेन पूर्वपक्षानुदय इति श्रुतप्रकाशोक्तं निरस्तम् । प्रापकाणामुक्तत्वादिति ।

ವಜ್ರಾಯುಧದ ವಿಷಯದಲ್ಲಿ ಯಾವ ಶ್ರುತಿ ಹಾಗೂ ಲಿಂಗಗಳನ್ನು ಹೇಳಿದರೋ, ಅವೆರಡಕ್ಕೆ ನಿರವಕಾಶತ್ವವನ್ನು ತಿಳಿಯುವ ಮೊದಲು ಎಂದು ಅರ್ಥ. ಇದರಿಂದ ಶ್ರುತಪ್ರಕಾಶದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ಆಕ್ಷೇಪ ಮಾಡಿದ್ದನ್ನು ನಿರಾಕರಿಸಿದಂತಾಯಿತು. ಏಕೆಂದರೆ ಅನೇಕ ಬಗೆಯಲ್ಲಿ ಪೂರ್ವಪಕ್ಷಪ್ರಾಪಕಲಿಂಗಗಳನ್ನು ಸಮರ್ಥಿಸಲಾಗಿದೆ. ಇಷ್ಟು ಪೂರ್ವಪಕ್ಷ.

गुरुराजीयम् – एतेनेत्यनेन परामृष्टं हेतुमाह – **तत्रेति** ।। **ज्योतिरुपक्रमादित्यत्रत्विति** ।। तथाचान्यत्र प्रसिद्धिविरोधो नेति भावः – **इहत्विति** ।। तथाच प्रकृतेऽन्यपरत्वाभावादन्यत्र प्रसिद्धिविरोध इति भावः । ननु च योगस्य स्मृत्युक्तत्वेन प्रबलत्वात्तेन वज्रश्रुतिबाधेन रूढित्यागोऽस्त्वित्यत आह – **वर्जनादिति** ।। नन्वेवं श्रुतेः प्रबलत्वे आकाशादिश्रुतेः प्रबलत्वेन तत्रापि रूढित्यागो न स्यादित्यत आह – **आकाशादीति** ।। नन्वेवमुक्तरीत्या श्रुतेः स्वतो निरवकाशत्वाभावेऽपि निरवकाशलिङ्गसाहित्येन निरवकाशत्वोक्तौ टीकाविरोधः । टीकायां श्रुतिलिङ्गयोरपि तथात्वादिति लिङ्गानिरपेक्षाया एव श्रुतेर्निरवकाशत्वोक्तेरित्यरुच्याऽऽह – **यद्वेति** ।। नन्वेवमाकाशश्रुते रूढित्यागेऽव्यवस्थापत्त्या रूढित्यागासम्भवाद्ब्रह्मपरत्वं न स्यादित्यत आह – **आकाशादीति** ।। ननु य एवं विदुरमृता इति वाक्योक्तामृतत्वहेतुवेदनविषयत्वस्य साकाशत्वमङ्गीकृत्य पूर्वपक्षे टीकाविरोधः । तत्र नच लिङ्गस्य निरवकाशतया प्राबल्यमित्याशंक्य लिङ्गस्य निरवकाशत्वमङ्गीकृत्यैव श्रुतिलिङ्गयोरपि तथात्वादित्यनेन पूर्वपक्षीयश्रुतिलिङ्गयोरपि निरवकाशत्वेन पूर्वपक्षसम्भवादित्युक्तत्वादित्यत आह – **टीकायामिति** ।। **अन्यथेति** ।। टीकाया यथाश्रुतार्थत्व इत्यर्थः ।




'ಮಹದ್ಭಯಂ ವಜ್ರಮುದ್ಯತಂ' ಎಂಬ ಕಾಠಕೋಪನಿಷತ್ತಿನಲ್ಲಿ ಭಯಂಕರವಾದ ಎತ್ತಲ್ಪಟ್ಟ ವಜ್ರಾಯುಧವನ್ನು ವರ್ಣಿಸಲಾಗಿದೆ. ಶ್ರುತಿಯಲ್ಲಿರುವ 'ವಜ್ರ' ಎಂಬ ನಾಮಾತ್ಮಕ ಶಬ್ದವು ಇಂದ್ರನ ವಜ್ರಾಯುಧವನ್ನೇ ಪ್ರತಿಪಾದನೆ ಮಾಡುತ್ತದೆ. ವಜ್ರಶಬ್ದವು ವಜ್ರಾಯುಧದಲ್ಲಿ ರೂಢವಾದ ನಾಮ. ರೂಢವಾದ ಪದಗಳಿಗೆಲ್ಲಾ ಯೌಗಿಕಾರ್ಥವನ್ನು ಸ್ವೀಕರಿಸಿ, ವಿಷ್ಣುವಿನಲ್ಲಿ ಸಮನ್ವಯ ಮಾಡುವುದಾದರೆ, ಜಗತ್ತಿನಲ್ಲಿ ಈ ಶಬ್ದವು ಈ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆಂಬ ವ್ಯವಸ್ಥೆ ಹಾಳಾಗುತ್ತದೆ. ವಾಸ್ತವಿಕವಾಗಿ 'ವಜ್ರಮುದ್ಯತಮ್' ಎಂಬ ಶ್ರುತಿಯ ಹಿಂದಿನ-ಮುಂದಿನ ಪ್ರಕರಣಗಳಲ್ಲಿ ಕಂಪಕತ್ವವೇ ಮೊದಲಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರಬಹುದು. ಆದರೆ ರೂಢವಾದ ಶ್ರುತಿಯ ಬಲದಿಂದ 'ಉದ್ಯತತ್ವ' ಎಂಬ ಲಿಂಗದ ಬಲದಿಂದ ಆ ಎಲ್ಲಾ ಬ್ರಹ್ಮನ ಲಿಂಗಗಳನ್ನು ಇಂದ್ರಾಯುಧದಲ್ಲೇ ಸಾವಕಾಶ ಮಾಡಬೇಕು. ಕಾರಣವಿಲ್ಲದೇ ರೂಢಾರ್ಥವನ್ನು ಬಿಡಬಾರದು.

ಹಿಂದಿನ ಅಧಿಕರಣದಲ್ಲಿ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಿದ್ದು ತಪ್ಪಲ್ಲ. ಏಕೆಂದರೆ ಶ್ರುತಿಯೇ ಸ್ವತಃ ವಾಕ್ಯಶೇಷದಲ್ಲಿ ಯೋಗಾರ್ಥವನ್ನು ಶೂದ್ರಶಬ್ದಕ್ಕೆ ಹೇಳಿದೆ. ಆದರಂತೆ ಇಲ್ಲಿ ವಜ್ರಶಬ್ದಕ್ಕೆ ಶ್ರುತಿಯು ಯೋಗಾರ್ಥವನ್ನೇನೂ ಹೇಳುತ್ತಿಲ್ಲ. ಹಾಗಾದರೆ ಜ್ಯೋತಿರುಪಕ್ರಮಾಧಿಕರಣದ ನ್ಯಾಯದಂತೆ 'ಜ್ಯೋತಿಃ'

ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಿದಂತೆ ಇಲ್ಲಿಯೂ ಸಹ ವಾಕ್ಯಶೇಷದ ಆಧಾರವಿಲ್ಲದಿದ್ದರೂ ವಿಷ್ಣುವಿನಲ್ಲಿ ವಜ್ರಶಬ್ದವನ್ನು ಸಮನ್ವಯ ಮಾಡಬಹುದಲ್ಲವೇ? ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಆದರೆ ಜ್ಯೋತಿರುಪಕ್ರಮಾಧಿಕರಣದಲ್ಲಿ ಪದಸಮನ್ವಯವೇ ಮುಖ್ಯಉದ್ದೇಶ. ಈ ಅಧಿಕರಣದಲ್ಲಿ ವಾಕ್ಯಸಮನ್ವಯವು ಉದ್ದೇಶವಾಗಿದೆ. ಅಲ್ಲಿ ವಾಕ್ಯಕ್ಕೆ ಅನ್ಯಪರತ್ವವನ್ನು ಒಪ್ಪಿ ಪದಗಳನ್ನು ಮಾತ್ರ ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ ಇಲ್ಲೇನೂ ಹಾಗೇ ಮಾಡುತ್ತಿಲ್ಲ. ಆಕಾಶಾದ್ಯಧಿಕರಣದಲ್ಲಿ ನಿರವಕಾಶವಾದ ಲಿಂಗಗಳಿಲ್ಲದ ಕಾರಣ ಭೂತಾಕಾಶವೆಂಬರ್ಥವನ್ನು ಬಿಡಬೇಕಾಯಿತು. ಆದರೆ ಇಲ್ಲಿ ಉದ್ಯತತ್ವವೆಂಬ ಲಿಂಗವು ವಜ್ರಾಯುಧದಲ್ಲೇ ಪ್ರಸಿದ್ಧವಾದ್ದರಿಂದ ಶ್ರುತಿಗೆ ರೂಢಾರ್ಥವನ್ನೇನೂ ಬಿಡಬೇಕಾಗಿಲ್ಲ. ಆದ್ದರಿಂದ ನಿರವಕಾಶವಾದ ಉದ್ಯತತ್ವವೆಂಬ ಲಿಂಗದ ಸಹಕಾರದಿಂದ ವಜ್ರಶ್ರುತಿಯೂ ಕೂಡ ನಿರವಕಾಶವಾಗುತ್ತದೆ. ವಿಷ್ಣುವಿನಲ್ಲಿರುವ ಲಿಂಗಗಳೆಲ್ಲವೂ ವಜ್ರಾಯುಧದಲ್ಲೇ ಸಾವಕಾಶವಾಗುತ್ತವೆ.

ಅಥವಾ ವಿಷ್ಣುಲಿಂಗಗಳನ್ನು ವಜ್ರಾಯುಧದಲ್ಲಿ ಸಾವಕಾಶ ಮಾಡುವುದೇ ಬೇಡ. ಅಂದರೆ ಕಾಠಕದ ಹಿಂದಿನ-ಮುಂದಿನವಾಕ್ಯಗಳೆಲ್ಲವೂ ವಿಷ್ಣುಪರವೇ ಆಗಲಿ. 'ಮಹದ್ಭಯಂ ವಜ್ರಮುದ್ಯತಮ್' ಎಂಬ ವಾಕ್ಯವಷ್ಟೇ ವಜ್ರಾಯುಧವನ್ನು ಪ್ರತಿಪಾದನೆ ಮಾಡುತ್ತದೆ. ಅಂದರೆ ವಜ್ರಶ್ರುತಿಯು ಉದ್ಯತತ್ವವೆಂಬ ಲಿಂಗವನ್ನೂ ಕೂಡ ಅಪೇಕ್ಷೆ ಪಡದೆ ಸ್ವತಃ ನಿರವಕಾಶವಾಗಿ ವಜ್ರಾಯುಧವನ್ನು ಪ್ರತಿಪಾದನೆ ಮಾಡುತ್ತದೆ. ಶ್ರುತಿಯಲ್ಲಿರುವ ಮೋಕ್ಷಹೇತುಜ್ಞಾನವಿಷಯತ್ವವನ್ನೂ ಇದರ ಬಲದಿಂದ ವಜ್ರಾಯುಧದಲ್ಲೇ ಕೂಡಿಸಬೇಕು. ಏಕೆಂದರೆ ನಿರವಕಾಶವಾದ ಶ್ರುತಿಗೆ ಬಾಧ ಹೇಳುವುದು ತಪ್ಪಾಗುತ್ತದೆ. ಕಂಪಕತ್ವವೂ ಕೂಡ ಭಯಕಾರಣವಾದ ವಜ್ರಾಯುಧದಲ್ಲಿ ಯುಕ್ತವಾಗುತ್ತದೆ. ಹಾಗಾಗಿ ವಜ್ರಾಯುಧದ ಜ್ಞಾನದಿಂದ ಮೋಕ್ಷವಾಗುವಾಗ ಹಿಂದಿನ ಅಧಿಕರಣದಲ್ಲಿ ತ್ರೈವರ್ಣಿಕರಿಗೆ ಬ್ರಹ್ಮಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಿದ್ದು ಅಯುಕ್ತವಾಗಿದೆಯೆಂಬುದು ಈ ಅಧಿಕರಣದ ಎರಡನೆಯ ಪೂರ್ವಪಕ್ಷ.

• • • • •

## 'ಸರ್ವಚೇಷ್ಟಕತ್ವ' ಲಿಂಗದಿಂದ ವಿಷ್ಣುವೇ ವಜ್ರಶಬ್ದ ಪ್ರತಿಪಾದ್ಯನೆಂದು ಸಿದ್ಧಾಂತ

### तात्पर्यचन्द्रिका

**सिद्धान्तस्तु ।। जगत्सर्वं प्राण एजतीत्युक्तं सर्वचेष्टकत्वं "कोह्येवान्यात्" इति भाष्योक्तश्रुत्यादिभिर्विष्ण्वेकनिष्ठम् ।**

ಅನುವಾದ - ಸಿದ್ಧಾಂತ ಹೀಗಿದೆ - 'ಜಗತ್‌ಸರ್ವಂ ಪ್ರಾಣ ಏಜತಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಚೇಷ್ಟಕತ್ವವು 'ಕೋಹ್ಯೇವಾನ್ಯಾತ್' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳ ಆಧಾರದಿಂದ ವಿಷ್ಣುವಿನಲ್ಲಿ ಮಾತ್ರ ಇರುತ್ತವೆ.

**नच "तेनेन्द्रो वज्रमुदयच्छत्" इति श्रुतौ "वर्जनाद्वज्रम्" इति स्मृतौ विष्णौ वज्रशब्दार्थ इवोद्यतशब्दो निरुक्तः ।**

'ತೇನೇಂದ್ರೋ ವಜ್ರಮುದಯಚ್ಛತ್' ಎಂಬ ಶ್ರುತಿಯಲ್ಲಿ ಇರುವ ವಜ್ರಶಬ್ದವು 'ವರ್ಜನಾದ್ವಜ್ರಮ್' ಎಂಬ ಸ್ಮೃತಿಯ ಆಧಾರದಿಂದ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತದೆ. ಅದೇ ಶ್ರುತಿಯಲ್ಲಿರುವ ಉದ್ಯತತ್ವವೆಂಬ ಲಿಂಗವು ಇಂದ್ರಾಯುಧವನ್ನು ಹೇಳುತ್ತದೆನ್ನಲು ನಮ್ಮಂತೆ ನಿಮಗೆ ನಿರುಕ್ತಿಯನ್ನು ತೋರಿಸಲಾಗದು. ಆದ್ದರಿಂದ 'ಉದ್ಯತತ್ವ' ಎಂಬ ಲಿಂಗದ ಆಧಾರದಿಂದ ವಜ್ರಶ್ರುತಿಗೆ ಆಯುಧವೆಂಬರ್ಥವನ್ನು ಮಾಡಲು ಸಾಧ್ಯವಿಲ್ಲ.

**नच ''कोह्येवान्यात्'' इत्यत्र जगच्चेष्टकत्वमिवान्यत्रोद्यतत्वं निषिद्धम् ।**

ಮತ್ತು 'ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್' ಎಂಬ ಶ್ರುತಿಯಲ್ಲಿ ಯಾವ ಜಗಚೇಷ್ಟಕತ್ವವೆಂಬ ಧರ್ಮವು ಭಗತ್ಪರವಾಗಿ ಶ್ರುತವಾಗಿದೆಯೋ, ಇದು ಬೇರೆ ಪದಾರ್ಥಗಳಲ್ಲಿ ಬರುವುದಿಲ್ಲವೆಂದು ಸ್ವತಃ ಶ್ರುತಿಯೇ ನಿಷೇಧ ಮಾಡುತ್ತಿದೆ. ಆದರಂತೆ ಉದ್ಯತತ್ವವೆಂಬ ಲಿಂಗವು ಬೇರೆಲ್ಲಿಯೂ ಬರುವುದಿಲ್ಲವೆನ್ನಲು ನಿಷೇಧವಾಕ್ಯವು ಇರುವುದಿಲ್ಲ. ಆದ್ದರಿಂದ ನಿರವಕಾಶತ್ವವನ್ನು ನಿಮ್ಮಿಂದ ಸಮರ್ಥಿಸಲಾಗದು.

**यद्यप्यमृतत्वहेतुवेदनविषयत्वमपि ''नेतरोनुपपत्तेः'' इत्यादौ निर्णीतं ब्रह्मलिङ्गमिहास्ति । तथापि तस्य पूर्वपक्षिणाऽऽक्षिप्तत्वान्न तं प्रति सूत्रादौ हेतूकृतम् ।**

ಪ್ರಶ್ನೆ - ಸೂತ್ರಕಾರರು ಜಗಚೇಷ್ಟಕತ್ವವೆಂಬ ಹೇತುವನ್ನು ಬ್ರಹ್ಮನ ಲಿಂಗವನ್ನಾಗಿ ಪರಿಗಣಿಸಿದ್ದಾರೆ. ಆದರೆ ಅಮೃತತ್ವಹೇತುವೇದನವಿಷಯತ್ವವನ್ನೂ ಕೂಡ 'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ಬ್ರಹ್ಮನ ಲಿಂಗವೆಂದು ಸಾಧಿಸಿದ್ದಾಗಿದೆ. ಇದನ್ನೇ ಹೇತುವನ್ನಾಗಿ ಹೇಳಬಹುದಿತ್ತಲ್ಲವೇ?

ಉತ್ತರ - ಪ್ರಕೃತ ಪೂರ್ವಪಕ್ಷಿಯು ಅಮೃತತ್ವಹೇತುವೇದನವಿಷಯತ್ವವೆಂಬ ಲಿಂಗವನ್ನೂ ಕೂಡ ವಜ್ರಾಯುಧದಲ್ಲಿ ಸಾವಕಾಶ ಮಾಡುತ್ತಿದ್ದಾನೆ. ಅಂತಹ ಪೂರ್ವಪಕ್ಷಿಗೆ ಸೂತ್ರದಲ್ಲಿ ಅದನ್ನೇ ಹೇತುವನ್ನಾಗಿ ಹೇಳಲು ಸಾಧ್ಯವಿಲ್ಲ.

**नच वज्रश्रुतिविरोधः ।**

**श्रुत्यर्थनिर्णयार्थत्वात्स्मृतेस्तत्र निरूपितः ।**
**अर्थो ग्राह्यो वेदवाक्ये तदयोगे तु लौकिकः ।। १ ।।**

ಹಾಗಾದರೆ ವಜ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸುವುದಾದಲ್ಲಿ, ವಜ್ರಶ್ರುತಿಯ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

ಶ್ರುತ್ಯರ್ಥನಿರ್ಣಯಾರ್ಥತ್ವಾತ್ ಸ್ಮೃತೇಸ್ತತ್ರ ನಿರೂಪಿತಃ ।
ಅರ್ಥೋ ಗ್ರಾಹ್ಯೋ ವೇದವಾಕ್ಯೇ ತದಯೋಗೇ ತು ಲೌಕಿಕಃ ॥೧॥

ಪರಿಪೂರ್ಣಚಂದ್ರಿಕಾ

ಸಕಲ ಸ್ಮೃತಿಗಳೆಲ್ಲವೂ ಶ್ರುತ್ಯರ್ಥದ ನಿರ್ಣಯಕ್ಕೋಸ್ಕರವೇ ಹೊರಟಿವೆ. ಆದ್ದರಿಂದ ಸ್ಮೃತಿಗೆ ಅನುಕೂಲವಾದ ಅರ್ಥವನ್ನೇ ಶ್ರುತಿಗೂ ಹೇಳಬೇಕು. ಒಂದುವೇಳೆ ಹಾಗಾಗದಿದ್ದಲ್ಲಿ ಮಾತ್ರ ಬೇರೆ ಲೌಕಿಕಾರ್ಥಗಳನ್ನು ಶ್ರುತಿಗೆ ಹೇಳಬೇಕು. ಪ್ರಕೃತ ವಜ್ರಶಬ್ದಕ್ಕೆ 'ವರ್ಜನಾದ್ವಜ್ರಮ್' ಎಂಬ ಸ್ಮೃತಿಯು ವಿಷ್ಣುವೇ ಎಂಬರ್ಥವನ್ನು ಹೇಳುತ್ತಿರುವಾಗ ವಜ್ರಶ್ರುತಿಯು ಅದಕ್ಕನುಗುಣವಾಗಿ ಶ್ರುತಿಯನ್ನು ಅರ್ಥೈಸಬೇಕಾದ್ದರಿಂದ ವಜ್ರಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ.

**यथा ''यू स्त्र्याख्यौ नदी'' इत्यादि संज्ञाकरणस्य कार्यार्थत्वात् ''आण् नद्या'' इत्यादिषु कार्यप्रदेशेषु कृत्रिमनद्या एव ग्रहणम् । यत्र तु ''नदीपौर्णमास्याग्रहायणीभ्य'' इत्यादौ तदयोगस्तत्राकृत्रिमाया लोकसिद्धनद्याः कृत्रिमाकृत्रिमयोः कृत्रिमे कार्यसम्प्रत्ययात् ।**

ಸ್ಮೃತಿಗೆ ಅನುಸಾರಿಯಾಗಿ ಶ್ರುತಿಯನ್ನು ಅರ್ಥೈಸಬೇಕೆನ್ನಲು ಉದಾಹರಣೆ ಹೀಗಿದೆ - 'ಯೂ ಸ್ತ್ರ್ಯಾಖ್ಯೌ ನದೀ' ಎಂಬ ಪಾಣಿನಿಸೂತ್ರವು ಈಕಾರಾಂತ ಮತ್ತು ಊಕಾರಂತವಾದ ಶಬ್ದಗಳಿಗೆ 'ನದೀ' ಎಂಬ ಸಂಜ್ಞೆಯನ್ನು ಹೇಳಿದೆ. ಹೀಗೆ ಸಂಜ್ಞೆಯನ್ನು ಏಕೆ ಮಾಡಲಾಗಿದೆಯೆಂದರೆ ಮುಂದೆ ಕಾರ್ಯವನ್ನು ವಿಧಾನ ಮಾಡುವುದಕ್ಕಾಗಿ. 'ಆಣ್ ನದ್ಯಾ' ಎಂಬ ಸೂತ್ರದಲ್ಲಿ 'ನದೀ' ಸಂಜ್ಞೆಯನ್ನು ಹೊಂದಿರುವಂತಹ ಶಬ್ದಗಳಿಗೆ 'ಆಟ್' ಆಗಮವನ್ನು ಹೇಳಲಾಗಿದೆ. ಈ ಸೂತ್ರದಲ್ಲಿ 'ನದೀ' ಎಂಬ ಶಬ್ದಕ್ಕೆ ನದಿಯಪ್ರವಾಹವನ್ನು ವಿವಕ್ಷಿಸಬಾರದು. ಹೊರತಾಗಿ, ಕೃತ್ರಿಮವಾದ ನದಿಯನ್ನೇ ವಿವಕ್ಷಿಸಬೇಕು. ಅಂದರೆ ಈದಂತ ಊದಂತಶಬ್ದಗಳಿಗೆ ಯಾವ ನದಿಯೆಂಬ ಹೆಸರನ್ನಿಟ್ಟಿದ್ದಾರೋ, ಅದನ್ನೇ ವಿವಕ್ಷಿಸಬೇಕು. ಒಂದು ವೇಳೆ ಕೃತ್ರಿಮವಾದ ಅರ್ಥವನ್ನು ವಿವಕ್ಷಿಸಲು ಬಾರದಿದ್ದಾಗ ಅಕೃತ್ರಿಮವಾದ ಅರ್ಥವನ್ನು ಸ್ವೀಕರಿಸಬೇಕು. ಆದ್ದರಿಂದ 'ನದೀಪೌರ್ಣಮಾಸ್ಯಾಗ್ರಹಾಯಣೀಭ್ಯಃ' ಎಂಬ ಸೂತ್ರದಲ್ಲಿ 'ನದೀ' ಶಬ್ದಕ್ಕೆ ನದಿಸಂಜ್ಞೆಯೆಂಬರ್ಥವಲ್ಲ. ಹೊರತಾಗಿ ಲೋಕಪ್ರಸಿದ್ಧವಾದ ನದೀಪ್ರವಾಹವನ್ನೇ ಇಟ್ಟುಕೊಳ್ಳಬೇಕು. ಏಕೆಂದರೆ 'ಕೃತ್ರಿಮಾಕೃತ್ರಿಮಯೋಃ ಕೃತ್ರಿಮೇ ಕಾರ್ಯಸಂಪ್ರತ್ಯಯಾತ್' ಕೃತ್ರಿಮ ಹಾಗೂ ಅಕೃತ್ರಿಮಗಳಲ್ಲಿ ಕೃತ್ರಿಮವಾದ ಅರ್ಥವು ಕಾರ್ಯಕ್ಕೋಸ್ಕರ ವಿವಕ್ಷಿಸಲಾಗುತ್ತದೆ ಎಂಬ ನಿಯಮವಿರುವುದರಿಂದ.

**तथाऽत्रापि श्रुत्युपबृंहकेषु ''वर्जनाद्वज्रमुच्यते । आसमन्तात्काशते यदाकाशः, प्राणः प्रणयनादेष'' इत्यादिस्मृतिवाक्येष्वन्वर्थसंज्ञाकरणस्य श्रुत्यर्थनिर्णयार्थत्वात् ''महद्भयं वज्रम्'' इत्यादौ स्मृत्युक्तयोग एव ग्राह्यः । यत्र तु वज्रबाहुरित्यादौ तदयोगस्तत्र रूढिः ।**

ಇದರಂತೆ ಪ್ರಕೃತದಲ್ಲಿಯೂ ಶ್ರುತ್ಯರ್ಥದ ನಿರ್ಣಯಕ್ಕೋಸ್ಕರ 'ವರ್ಜನಾದ್ವಜ್ರಮುಚ್ಯತೇ । ಆಸಮಂತಾತ್ಕಾಶತೇ ಯದಾಕಾಶಃ, ಪ್ರಾಣಃ ಪ್ರಾಣಯದೇಷಃ' ಇತ್ಯಾದಿ ಸ್ಮೃತಿವಾಕ್ಯಗಳು ಹೊರಟಿವೆ. ಇವೆಲ್ಲವೂ ಅನ್ವರ್ಥವಾದ ಸಂಜ್ಞಾವಿಧಾಯಕಗಳಾಗಿವೆ. ಏಕೆಂದರೆ ಮುಂದೆ ಇಂತಹ ಸಂಜ್ಞೆಗಳನ್ನು ವಿವಕ್ಷಿಸಿ, ಶ್ರುತಿಯು ಕಾರ್ಯವನ್ನು ವಿಧಾನ ಮಾಡುತ್ತದೆ. ಹೀಗೆ ಸ್ಮೃತಿಗಳೆಲ್ಲವೂ ಶ್ರುತ್ಯರ್ಥದ ನಿರ್ಣಯಕ್ಕಾಗಿ ಹೊರಟಿರುವುದರಿಂದ 'ಮಹದ್ಭಯಂ ವಜ್ರಮ್' ಎಂಬ ಶ್ರುತಿಯಲ್ಲಿಯೂ ಸ್ಮೃತಿಯಲ್ಲಿ ಹೇಳಲ್ಪಟ್ಟ ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಹೊರತಾಗಿ, ಸ್ಮೃತಿಗೆ ವಿರುದ್ಧವಾಗಿ ವಜ್ರಾಯುಧವೆಂಬ ಅರ್ಥವನ್ನು ಹೇಳಬಾರದು. ಇನ್ನು ಯಾವ ವಜ್ರಬಾಹು ಇತ್ಯಾದಿ ಸ್ಥಳದಲ್ಲಿ ಶ್ರುತ್ಯುಕ್ತವಾದ ಯೋಗವು ಅಯುಕ್ತವಾಗುತ್ತದೋ ಅಂತಹ ಸ್ಥಳದಲ್ಲಿ ರೂಢ್ಯರ್ಥವನ್ನೇ ಸ್ವೀಕರಿಸಬೇಕು.

**प्रकाशः –**

भगवल्लिङ्गस्य निरवकाशत्वाद्वज्रश्रुतिलिङ्गयोस्सावकाशत्वात्तेन तयोर्बाध इति भावेन प्रवृत्तां ''अयं वज्रो भगवानेव'' इत्यादि सिद्धान्तटीकां विवृण्वन् लिङ्गनिरवकाशत्वपरं ग्रन्थं तावद्व्यनक्ति – जगत्सर्वमिति ।।

ವಿವರಣೆ - ಸಿದ್ಧಾಂತವನ್ನು ಪ್ರಾರಂಭಮಾಡುತ್ತಿದ್ದಾರೆ. ವಿಷ್ಣುವಿನ ಲಿಂಗಗಳು ನಿರವಕಾಶವಾಗಿವೆ. ವಜ್ರ ಶ್ರುತಿ ಹಾಗೂ ಉದ್ಯತತ್ವಲಿಂಗಗಳು ಸಾವಕಾಶವಾಗಿವೆ. ಆದ್ದರಿಂದ ಕಂಪಕತ್ವವೆಂಬ ವಿಷ್ಣುವಿನ ಲಿಂಗದಿಂದ ಪೂರ್ವಪಕ್ಷಶ್ರುತಿ ಹಾಗೂ ಲಿಂಗಗಳು ಬಾಧಿತವಾಗುತ್ತವೆ. ಈ ಅಭಿಪ್ರಾಯದಿಂದ 'ಅಯಂ ವಜ್ರೋ ಭಗವಾನೇವ' ಇತ್ಯಾದಿ ಟೀಕೆಯು ಹೊರಟಿದೆ. ಇದರಿಂದ ವಿವರಿಸುವವರಾಗಿ, ಕಂಪಕತ್ವಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥನೆ ಮಾಡುವ ಗ್ರಂಥವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಜಗತ್ ಸರ್ವಮ್' ಇತ್ಯಾದಿ ಗ್ರಂಥದಿಂದ.

**प्रकाशः** – जगत्सर्वं प्राणे स्थितं यस्मादेजति चेष्टते । यत्प्रेरणया वर्तते । तद्वज्रमिति सर्वचेष्टकत्वं ''कोह्येवान्यात्कः प्राण्यात्'' इत्यादिश्रुतिभिः -

नभस्वतोऽपि सर्वास्स्युश्चेष्टा भगवतो हरेः ।
किमुतान्यस्य जगतो यस्य चेष्टा नभस्वतः ।।

इत्यादिस्मृतिभिश्च विष्णुमात्रगतमित्यर्थः ।

'ಪ್ರಾಣೇ ಏಜತಿ' ಎಂಬ ಶ್ರುತಿಗೆ ಹೀಗರ್ಥ - ಸಮಸ್ತ ಜಗತ್ತು ಪ್ರಾಣನನ್ನು ಆಶ್ರಯಿಸಿ ಅವನ ಪ್ರೇರಣೆಯಿಂದಲೇ ಚೇಷ್ಟೆಯಲ್ಲಿ ತೊಡಗಿದೆ. ಅಂತಹ ಪ್ರಾಣನೇ ವಜ್ರನಾಗಿದ್ದಾನೆ. ಹೀಗೆ ವಜ್ರನಲ್ಲಿ ಸರ್ವಚೇಷ್ಟಕತ್ವವು 'ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್' ಇತ್ಯಾದಿ ಶ್ರುತಿಗಳಿಂದ ಮತ್ತು

ನಭಸ್ವತೋಽಪಿ ಸರ್ವಾಃ ಸ್ಯುಶ್ಚೇಷ್ಟಾ ಭಗವತೋ ಹರೇಃ।
ಕಿಮುತಾನ್ಯಸ್ಯ ಜಗತೋ ಯಸ್ಯ ಚೇಷ್ಟಾ ನಭಸ್ವತಃ ॥

ವಾಯುದೇವರಿಂದ ಜಗತ್ತಿನ ಚೇಷ್ಟೆಗಳೆಲ್ಲವೂ ನಡೆಯುತ್ತಿದೆ. ಅಂತಹ ವಾಯುದೇವರ ಚೇಷ್ಟೆಯೇ ಭಗವದಧೀನವಾಗಿರುವಾಗ ಜಗತ್ತಿನ ಚೇಷ್ಟೆಯು ಭವಗದಧೀನವೆಂದು ಪ್ರತ್ಯೇಕ ಹೇಳಬೇಕೇನು.

ಇತ್ಯಾದಿ ಸ್ಮೃತಿಗಳಿಂದಲೂ ಕೇವಲ ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು ಸಿದ್ಧವಾಗುತ್ತದೆ.

**प्रकाशः** – ''कोह्येवान्यात्कः प्राण्याद्यदेष आकाश आनन्दो न स्यात्'' इत्याकाशशब्दश्च ''आकाशस्तल्लिङ्गात्'' इत्युक्तन्यायेन विष्णुपर इति भावः ।

'ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್' ಎಂಬಲ್ಲಿ ಶ್ರುತವಾದ ಆಕಾಶ ಶಬ್ದವು 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರನ್ಯಾಯದಿಂದ ವಿಷ್ಣುಪರವಾಗಿದೆಯೆಂದು ತಿಳಿಯಬೇಕು.

**प्रकाशः** – ननूद्यतत्वलिङ्गमपि निरवकाशमित्युक्तमिति चेत्किमुद्यतशब्द आयुधे निरुक्त इति तन्निरुक्तेर्वक्ष्यमाणवज्रश्रुतिनिरुक्तेरिव निरवकाशत्वमुच्यतेऽथायुधादन्यत्र तस्य निषेधात् । नाद्य इत्याह – **नचेति** ॥

ಹಿಂದೆ ಪೂರ್ವಪಕ್ಷ ಮಾಡುವಾಗ 'ಉದ್ಯತತ್ವ' ಎಂಬ ಲಿಂಗವೂ ಕೂಡ ನಿರವಕಾಶವಾಗಿದೆಯೆಂದು ಹೇಳಲಾಗಿದೆ. ಹೀಗಿರುವಾಗ ಸರ್ವಚೇಷ್ಟಕತ್ವವು ಮಾತ್ರ ನಿರವಕಾಶವೆಂದು ಪರಿಗಣಿಸಿ, ಸಿದ್ಧಾಂತ ಸ್ಥಾಪನೆಯನ್ನು ಹೇಗೆ ಮಾಡುತ್ತೀರಿ?

ಇದು ಸರಿಯಲ್ಲ. ಯಾವಕಾರಣದಿಂದ ಉದ್ಯತತ್ವಲಿಂಗವನ್ನು ನಿರವಕಾಶವೆನ್ನುತ್ತಿದ್ದೀರಿ. 'ಉದ್ಯತ' ಶಬ್ದವು ಆಯುಧದಲ್ಲಿ ನಿರುಕ್ತಿಯಿಂದ ಲಭ್ಯವಾಗಿದೆಯೆಂದು ವಿವಕ್ಷಿಸಿ, ಅಂತಹ ನಿರುಕ್ತಿಯು ಮುಂದೆ ಹೇಳುವ ವಜ್ರಶ್ರುತಿಯ ನಿರುಕ್ತಿಯಂತೆ ನಿರವಕಾಶವಾಗಿದೆಯೆಂದೋ, ಅಥವಾ ಉದ್ಯತಶಬ್ದವು ಆಯುಧವನ್ನು ಬಿಟ್ಟು ಬೇರೆ ವಸ್ತುವನ್ನು ಪ್ರತಿಪಾದನೆ ಮಾಡುವುದಿಲ್ಲವೆಂಬ ನಿಷೇಧವಾಕ್ಯವಿದೆಯೆಂದೋ? ಮೊದಲನೆಯ ಪಕ್ಷವು ತಪ್ಪೆಂದು 'ನಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – द्वितीयं प्रत्याह – **नच कोहीति** ॥ क इत्याक्षेपे । यद्ययमाकाशशब्दितो विष्णुरुद्रिक्तानन्दो न स्यान्न जगच्चेष्टयेत् । तर्हि को ह्येवान्यात् । न कोऽपीत्यन्यत्र यथा जगच्चेष्टकत्वं निषिद्धं तथा वज्रादन्यत्रोद्यतत्वं श्रुत्यादौ न निषिद्धम् । येन वज्रादन्यत्रानवकाशं भवेदित्यर्थः ।

ಎರಡನೆಯ ಪಕ್ಷವನ್ನು 'ನಚ ಕೋಹಿ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. 'ಕಃ' ಎಂಬುದು ಆಕ್ಷೇಪಾರ್ಥದಲ್ಲಿದೆ. ಒಂದು ವೇಳೆ ಆಕಾಶಶಬ್ದಪ್ರತಿಪಾದ್ಯನಾದ ವಿಷ್ಣು, ಆನಂದಮಯನಾಗದಿದ್ದಲ್ಲಿ, ಸರ್ವಜಗತ್ತಿಗೆ ಚೇಷ್ಟಕನಾಗಲು ಸಾಧ್ಯವಾಗುತ್ತಿರಲಿಲ್ಲ. ಇವನು ಸರ್ವಜಗಚ್ಚೇಷ್ಟಕನಾಗದಿದ್ದಲ್ಲಿ, ಬೇರೆ

ಯಾರು ತಾನೇ ಚೇಷ್ಟಕರಾಗುತ್ತಿದ್ದರು. ಬೇರೆ ಯಾರೂ ಸಹ ಚೇಷ್ಟಕರೇ ಇಲ್ಲ. ಹೀಗೆ ಶ್ರುತಿಯು ಜಗಚೇಷ್ಟಕತ್ವವನ್ನು ಬೇರೆಯವರಲ್ಲಿ ನಿಷೇಧ ಮಾಡಿದಂತೆ ಉದ್ಯತತ್ವಲಿಂಗವು ವಜ್ರವನ್ನು ಬಿಟ್ಟು ಬೇರೆ ಕಡೆ ಬರುವುದಿಲ್ಲವೆಂದು ಶ್ರುತಿಯು ನಿಷೇಧ ಮಾಡುತ್ತಿಲ್ಲ. ಹಾಗಾಗಿದ್ದಲ್ಲಿ ವಜ್ರವನ್ನು ಬಿಟ್ಟು ಬೇರೆ ಕಡೆ ಅವಕಾಶವಿಲ್ಲವೆಂದು ಹೇಳಬಹುದಿತ್ತು.

**प्रकाशः** – ननु ''य एतद्विदुरमृतास्ते भवन्ति'' इति मुक्तिहेतुज्ञानविषयत्व-स्यानन्दमयाधिकरणे आनन्दमय इतरो विरिञ्चादिर्न भवति । ''ब्रह्मविदाप्नोति परम्'' इत्युक्तस्यानन्दमयज्ञानान्मोक्षस्यानुपपत्तेरित्युक्ततया विष्णुलिङ्गतया निर्णीतस्य विषयवाक्य एव श्रुतस्य सूत्रणं कुतो न कृतम् । अन्यथा तस्य ''नेतर'' इत्यत्र हेतूकरणायोगादित्याशङ्क्य समाधत्ते – **यद्यपीति** ।।

ಶಂಕೆ - 'ಯ ಏತದ್ವಿದುರಮೃತಾಸ್ತೇ ಭವಂತಿ' ಎಂಬ ಶ್ರುತಿಯಲ್ಲಿ ಮುಕ್ತಿಹೇತುಜ್ಞಾನವಿಷಯತ್ವವನ್ನು ಬ್ರಹ್ಮನ ಲಿಂಗವೆಂದು ಆನಂದಮಯಾಧಿಕರಣದ 'ನೇತರೋನುಪಪತ್ತೇಃ' ಎಂಬ ಸೂತ್ರವು ಸಮರ್ಥನೆ ಮಾಡಿದೆ. ಆನಂದಮಯನು ಇತರಃ = ವಿರಿಂಚಾದಿಗಳು, ನ = ಅಲ್ಲ. ಏಕೆಂದರೆ 'ಅನುಪಪತ್ತೇಃ' = ಬ್ರಹ್ಮವಿದಾಪ್ನೋತಿ ಪರಮ್' ಎಂಬಲ್ಲಿ ಆನಂದಮಯನ ಜ್ಞಾನದಿಂದ ಮೋಕ್ಷವಾಗುತ್ತದೆಂಬುದು ಅನುಪಪನ್ನವಾದೀತು. ಹೀಗೆ ಮುಕ್ತಿಹೇತುಜ್ಞಾನವಿಷಯತ್ವವನ್ನು ಕೇವಲ ವಿಷ್ಣುಲಿಂಗವೆಂದು ಆನಂದಮಯಾಧಿಕರಣದ 'ನೇತರೋನುಪಪತ್ತೇಃ' ಎಂಬ ಸೂತ್ರವು ಸಮರ್ಥನೆ ಮಾಡಿದೆ. ನಿರ್ಣೀತವಾದ ಈ ಲಿಂಗವು ಪ್ರಕೃತ ವಿಷಯವಾಕ್ಯದಲ್ಲೂ ಶ್ರುತವಾಗಿವೆ. ಇದನ್ನೇ ಸೂತ್ರಕಾರರು ಉಲ್ಲೇಖಿಸಬಹುದಿತ್ತಲ್ಲವೇ? ಮುಕ್ತಿಹೇತುಜ್ಞಾನವಿಷಯತ್ವವು ಭಗವಲ್ಲಿಂಗವಾಗದಿದ್ದಲ್ಲಿ 'ನೇತರಃ' ಎಂಬ ಸೂತ್ರದಲ್ಲಿಯೂ ಇದನ್ನು ಹೇತುವನ್ನಾಗಿ ಮಾಡಿದ್ದು, ತಪ್ಪಾಗಬೇಕಾದೀತು.

ಸಮಾಧಾನ - ಈ ಆಶಂಕೆಗೆ ಸಮಾಧಾನ ನೀಡಲು 'ಯದ್ಯಪಿ' ಇತ್ಯಾದಿ ಗ್ರಂಥವು ಹೊರಟಿದೆ. ಪೂರ್ವಪಕ್ಷಿಯು ಮುಕ್ತಿಹೇತುಜ್ಞಾನವಿಷಯತ್ವವನ್ನೂ ಕೂಡ ಆಕ್ಷೇಪ ಮಾಡಿದ್ದರಿಂದ ಅದನ್ನು ಸೂತ್ರಕಾರರು ಉಲ್ಲೇಖಿಸಿಲ್ಲ ಎಂದಭಿಪ್ರಾಯ.

**प्रकाशः** – नन्वेषा शङ्का न युक्तेव । अल्पाक्षरे सूत्रे सर्वस्यापि साधकस्य साक्षादुपादानायोगेनोपलक्षणयैकस्योपादाने कार्ये प्रथमश्रुतत्वात् ''प्राण एजति'' इत्याद्युदाहरणविशेषद्योतकत्वादल्पाक्षरत्वात्कंपनलिङ्गस्योपादानमुचितम् ।

ಆಶಂಕೆ - ಗ್ರಂಥಕಾರರು ಮುಕ್ತಿಹೇತುಜ್ಞಾನವಿಷಯತ್ವವನ್ನು ಸೂತ್ರದಲ್ಲಿ ಉಲ್ಲೇಖಿಸಬಹುದಿತ್ತಲ್ಲವೇ? ಎಂದು ಪ್ರಶ್ನಿಸಿಕೊಂಡು ಉತ್ತರಿಸಿದ್ದಾರೆ. ಈ ಪ್ರಶ್ನೆಯೇ ತಪ್ಪು. ಏಕೆಂದರೆ ಅಲ್ಪಾಕ್ಷರವೆನಿಸಿದ ಸೂತ್ರಗಳಲ್ಲಿ ಎಲ್ಲಾ ವಿಧವಾದ ಸಾಧಕಲಿಂಗಗಳನ್ನು ಹೇಳಲು ಸಾಧ್ಯವಿಲ್ಲ. ಉಪಲಕ್ಷಣಯಾ ಒಂದನ್ನು ಮಾತ್ರ

ಹೇಳಬಹುದು. ಹೀಗಿರುವಾಗ 'ಪ್ರಾಣ ಏಜತಿ ನಿಃಸೃತಮ್' ಎಂಬ ವಿಷಯವಾಕ್ಯದಲ್ಲಿ ಮೊದಲು ಜಗಚೇಷ್ಟಕತ್ವಲಿಂಗವೇ ಶ್ರುತವಾಗಿವೆ. ಅನಂತರ 'ಯ ಏತದ್ವಿದುಃ' ಇತ್ಯಾದಿಯಾಗಿ ಮುಕ್ತಿಹೇತು-ಜ್ಞಾನವಿಷಯತ್ವವು ಶ್ರುತವಾಗಿವೆ. ಪ್ರಥಮಶ್ರುತವಾದದ್ದನ್ನು ಸೂತ್ರಕಾರರು ಉಲ್ಲೇಖ ಮಾಡಿದ್ದಾರೆ.

**प्रकाशः – नच मुक्तिहेतुवेदनत्वं पूर्वत्र ''नेतर'' इति सूत्रोपात्तं ''तमेवं विद्वानमृत इह भवति । नान्यः पंथा'' इति श्रुत्यन्तरे विष्ण्वेकनिष्ठतयाऽवधारितं चेति वाच्यम् ।**

ಶಂಕೆ - ಮುಕ್ತಿಹೇತುಜ್ಞಾನವಿಷಯತ್ವವನ್ನು ಹಿಂದೆ ನೇತರೋನುಪಪತ್ತೇಃ' ಎಂಬ ಸೂತ್ರದಲ್ಲಿ ಹೇತುವನ್ನಾಗಿ ಹೇಳಿದ್ದಾರೆ. ಈ ಹೇತು 'ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ' ಇತ್ಯಾದಿಯಾದ ಶ್ರುತಿಯಲ್ಲಿ ಕೇವಲ ವಿಷ್ಣುನಿಷ್ಠವೆಂದು ನಿರ್ಧಾರವಾಗಿದೆ. ಹೀಗೆ ಶ್ರುತ್ಯಂತರದಲ್ಲಿ ನಿರ್ಧಾರಿತವಾದದ್ದನ್ನೇ ಸೂತ್ರಕಾರರು ಹೇತುವನ್ನಾಗಿ ಹೇಳುವುದು ಉಚಿತವಲ್ಲವೇ?

**प्रकाशः – कंपकत्वमपि ''तद्धेतुव्यपदेशाच्च'' इति सूत्रोपात्तं ''कोह्येवान्यात्क'' इति श्रुत्यन्तरे विष्ण्वेकनिष्ठतयाऽवधारितं चेत्यपि साम्यात् । तथापि विषयवाक्य एव श्रुतत्वाच्छंका युक्तेति भावः ।।**

ಸಮಾಧಾನ - ಕಂಪಕತ್ವವೂ ಕೂಡ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿ ಹೇತುವನ್ನಾಗಿ ವಿವಕ್ಷಿಸಲಾಗಿದೆ. ಇದನ್ನು 'ಕೋಹ್ಯೇವಾನ್ಯಾತ್ಕಃ' ಎಂಬ ಶ್ರುತ್ಯಂತರವು ಕೇವಲ ವಿಷ್ಣುನಿಷ್ಠವೆಂದು ನಿರ್ಧಾರ ಮಾಡಿದೆ. ಆದ್ದರಿಂದ ಮುಕ್ತಿಹೇತುವೇದನತ್ವದಂತೆ ಕಂಪಕತ್ವಲಿಂಗವೂ ಸಹ ಸಮಾನವಾಗಿದೆ. ಆದರೂ ವಿಷಯವಾಕ್ಯದಲ್ಲೇ ಕಂಪಕತ್ವಲಿಂಗವು ಶ್ರುತವಾದ್ದರಿಂದ ಗ್ರಂಥಕಾರರು ಮಾಡಿದ ಶಂಕೆಯು ಯುಕ್ತವಾಗಿದೆ. ಈಗಾಗಲೇ ಹೇಳಿದಂತೆ ಸೂತ್ರದಲ್ಲಿ ಅಲ್ಪಾಕ್ಷರತ್ವಕ್ಕಾಗಿ ಮತ್ತು ಪ್ರಥಮಶ್ರುತವಾದ್ದರಿಂದ ವಾಕ್ಯವಿಶೇಷದ್ಯೋತಕವಾದ್ದರಿಂದ ಕಂಪಕತ್ವವನ್ನೇ ಸೂತ್ರಕಾರರು ಪರಿಗಣಿಸಿದ್ದಾರೆ.

**प्रकाशः – आक्षिप्तत्वान्न तं प्रतीति ।। यद्यप्याक्षिप्तमपि हेतूकर्तुं शक्यम् । तथापि पूर्ववाद्यभिमतसाधकस्य सावकाशत्वोक्तयनन्तरमेव तस्य हेतूकरणमुचितम्। आक्षेपकहेतोः प्राबल्यखण्डनात् ।**

ಮುಕ್ತಿಹೇತುವೇದನತ್ವವನ್ನು ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ. ಆದ್ದರಿಂದ ಸೂತ್ರಕಾರರು ಅದನ್ನು ಹೇತುವನ್ನಾಗಿ ವಿವಕ್ಷಿಸಿಲ್ಲವೆಂದು ಗ್ರಂಥಕಾರರು ಉತ್ತರಿಸಿದ್ದಾರೆ. ವಿಚಾರ ಮಾಡಿದರೆ ಪೂರ್ವಪಕ್ಷಿಯು ಆಕ್ಷೇಪವನ್ನು ಮಾಡಿದರೇನು, ಬಿಟ್ಟರೇನು? ಅವನು ಆಕ್ಷೇಪಮಾಡಿದ್ದನ್ನೂ ಕೂಡ ಹೇತುವನ್ನಾಗಿ ಮಾಡಬಹುದು. ಆದರೂ ಯಾವಕಾರಣದಿಂದ ಪೂರ್ವಪಕ್ಷಿಯು ಅಂತಹ ಹೇತುವನ್ನು ಸಾವಕಾಶವೆನ್ನುತ್ತಾರೋ, ಅದಕ್ಕೆ ಪೂರಕವಾದ ಶ್ರುತಿಲಿಂಗಗಳನ್ನು ನಾವು ಮೊದಲು ಸಾವಕಾಶಗಳೆಂದು ಸಮರ್ಥನೆ ಮಾಡಬೇಕು. ಅನಂತರವೇ ಆಕ್ಷಿಪ್ತವಾದದ್ದನ್ನು ಹೇತುವನ್ನಾಗಿ ಮಾಡಲು ಸಾಧ್ಯ. ಏಕೆಂದರೆ

ಆಕ್ಷೇಪಕ್ಕೆ ಕಾರಣಗಳಾದ ಶ್ರುತಿಲಿಂಗಗಳನ್ನು ನಿರವಕಾಶತ್ವಪ್ರಯುಕ್ತವಾಗಿ ಪ್ರಾಬಲ್ಯವನ್ನು ಹೇಳಲಾಗದೆಂದು ಸಮರ್ಥನೆ ಮಾಡುವುದರಿಂದ.

**प्रकाशः** – अत एवात्र टीकायां ''नन्वेवं सावकाशत्वे श्रुतिलिङ्गयोर्य एतद्विदुरित्युक्तलिङ्गं विहाय किं लिङ्गान्तरग्रहणेन । मैवम् । तदविहायैव लिङ्गान्तरस्याप्युक्तत्वात्'' इत्युक्तम् ।

ಆದ್ದರಿಂದಲೇ ಟೀಕೆಯಲ್ಲಿ 'ನನ್ವೇವಂ ಸಾವಕಾಶತ್ವೇ ಶ್ರುತಿಲಿಂಗಯೋರ್ಯ ಏತದ್ವಿದುರಿತ್ಯುಕ್ತಲಿಂಗಂ ವಿಹಾಯ ಕಿಂ ಲಿಂಗಾಂತರಗ್ರಹಣೇನ । ಮೈವಮ್ ತದವಿಹಾಯ್ಯೆವ ಲಿಂಗಾಂತರಸ್ಯಾಪ್ಯುಕ್ತತ್ವಾತ್' ಶ್ರುತಿ ಹಾಗೂ ಲಿಂಗಗಳು ಸಾವಕಾಶವಾಗಿರುವಾಗ 'ಏತದ್ವಿದುಃ' ಎಂಬಲ್ಲಿ ಶ್ರುತವಾದ ಲಿಂಗವನ್ನು ಬಿಟ್ಟು, ಲಿಂಗಾಂತರಗ್ರಹಣವನ್ನೇಕೆ ಮಾಡಬೇಕು? ಇದು ತಪ್ಪು. ಹೀಗೆ ಸಾವಕಾಶವಾಗುವುದಾದರೆ ಶ್ರುತಿಲಿಂಗಗಳನ್ನು ಬಿಡದೆ, ಬೇರೆ ಲಿಂಗಗಳನ್ನೂ ಕೂಡ ವಿವಕ್ಷಿಸಲಾಗಿದೆ ಎಂದು ಹೇಳಿದ್ದಾರೆ.

**प्रकाशः** – तथाच परोक्तश्रुतिलिङ्गयोरितः पूर्वं सूत्रे सावकाशताया अव्युत्पादनात्तत्सावकाशताव्युत्पादनबीजं पूर्ववाद्यनाक्षिप्तं कम्पकत्वमेव हेतूकृतम् । नतु तदाक्षिप्तमिति भावः ।

एतेन टीकाविरोधोऽपि प्रत्युक्तः ।

ಆದ್ದರಿಂದ ಪೂರ್ವಪಕ್ಷಕಾರರು ಶ್ರುತಿ ಹಾಗೂ ಲಿಂಗಗಳನ್ನು ಈ ಸೂತ್ರಕ್ಕಿಂತ ಮೊದಲೆಲ್ಲೂ ಕೂಡ ಸಾವಕಾಶವೆಂದು ಸಮರ್ಥನೆ ಮಾಡದ ಕಾರಣ, ಈಗಲೇ ಅವುಗಳಿಗೆ ಸಾವಕಾಶತ್ವವನ್ನು ಸಮರ್ಥನೆ ಮಾಡಬೇಕು. ಅದಕ್ಕಾಗಿ ಪೂರ್ವಪಕ್ಷಿಯು ಆಕ್ಷೇಪ ಮಾಡದ ಕಂಪಕತ್ವವನ್ನೇ ಲಿಂಗವನ್ನಾಗಿ ಸೂತ್ರಕಾರರು ಉಲ್ಲೇಖಿಸಿದ್ದಾರೆ ಹೊರತು, ಪೂರ್ವಪಕ್ಷಕಾರನು ಆಕ್ಷೇಪ ಮಾಡಿದ ಮುಕ್ತಿಹೇತುವೇದನತ್ವವನ್ನು ಹೇತುವನ್ನಾಗಿ ಉಲ್ಲೇಖಿಸಿಲ್ಲ.

ಹೀಗೆ ಹೇಳಿದ್ದರಿಂದ ಟೀಕಾವಿರೋಧವನ್ನು ಪರಿಹರಿಸಿದಂತಾಯಿತು. ಟೀಕೆಯಲ್ಲಿ 'ತದವಿಹಾಯ್ಯೆವ ಲಿಂಗಾಂತರಸ್ಯಾಪ್ಯುಕ್ತತ್ವಾತ್' ಎಂದು ಮುಕ್ತಿಹೇತುವೇದನತ್ವವನ್ನು ಬಿಡದೆ, ಮತ್ತೊಂದು ಲಿಂಗವನ್ನು ಸೂತ್ರಕಾರರು ಹೇಳಿದ್ದಾರೆಂದು ವಿವಕ್ಷಿಸಿದ್ದಾರೆ. ಪ್ರಕೃತ ಗ್ರಂಥಕಾರರು 'ನ ಸಂಪ್ರತಿ ಸೂತ್ರಾದೌ ಹೇತೂಕೃತಂ' ಎಂಬುದಾಗಿ ಮುಕ್ತಿಹೇತುವೇದನತ್ವವನ್ನು ಸೂತ್ರಕಾರರು ಹೇತುವೆಂದು ಪರಿಗಣಿಸಿಯೇ ಇಲ್ಲವೆಂದು ವಿವಕ್ಷಿಸಿದ್ದಾರೆ. ಆದ್ದರಿಂದ ಟೀಕೆಗೂ, ಗ್ರಂಥಕ್ಕೂ ಪರಸ್ಪರ ವಿರೋಧ ಬಂದಂತೆ ಕಾಣುತ್ತದೆ. ಆದರೆ ಇಲ್ಲಿಯ ತನಕ ವಿಚಾರ ಮಾಡಿದಂತೆ ಪೂರ್ವಪಕ್ಷಕಾರನ ಶ್ರುತಿಲಿಂಗಗಳಿಗೆ ಸಾವಕಾಶತ್ವವನ್ನು ಸಮರ್ಥಿಸುವುದಕ್ಕಾಗಿ, ಕಂಪಕತ್ವವನ್ನು ಮುಖ್ಯವಾದ ಹೇತುವನ್ನಾಗಿ ಪರಿಗಣಿಸಿದ್ದಾರೆ. ಇದು ಸಿದ್ಧವಾದ ಮೇಲೆ ಮುಕ್ತಿಹೇತುವೇದನತ್ವವನ್ನೂ ಕೂಡ ಲಿಂಗವನ್ನಾಗಿ ಪರಿಗಣಿಸಬಹುದೆಂದು ಗ್ರಂಥಕಾರರ ಅಭಿಪ್ರಾಯವಾಗಿದೆ. ಆದ್ದರಿಂದ ಪರಸ್ಪರ ವಿರೋಧಕ್ಕೆ ಅವಕಾಶವಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – अत्र टीकायां ''श्रुतेर्निरवकाशत्वान्निरवकाशेनापि लिङ्गेन कथं निर्णय इत्यतश्श्रुतेरपि विष्णाववकाशं स्मृत्या दर्शयति चक्रमिति'' इति स्मृतिमवतार्य ''नच योगस्य रूढेर्दौर्बल्यादनिर्णय इति वाच्यम् । स्मृत्युक्तत्वेन विद्वद्रूढेरपि सत्त्वात्'' इति समाहितम् ।

ಪ್ರಕೃತ ಟೀಕೆಯಲ್ಲಿ 'ಶ್ರುತೇಃ ನಿರವಕಾಶತ್ವಾತ್ ನಿರವಕಾಶೇನಾಪಿ ಲಿಂಗೇನ ಕಥಂ ನಿರ್ಣಯ ಇತ್ಯತಃ ಶ್ರುತೇರಪಿ ವಿಷ್ಣಾವವಕಾಶಂ ಸ್ಮೃತ್ಯಾ ದರ್ಶಯತಿ ಚಕ್ರಮಿತಿ' ಶ್ರುತಿಯು ನಿರವಕಾಶವಾಗಿದೆ. ಲಿಂಗವೂ ನಿರವಕಾಶವಾಗಿದೆ. ಹೀಗಿರುವಾಗ ನಿರವಕಾಶವಾದ ಕಂಪಕತ್ವಲಿಂಗದಿಂದ ವಿಷ್ಣುವೇ ವಜ್ರನೆಂದು ಹೇಗೆ ನಿರ್ಣಯಿಸುತ್ತೀರಿ? ಎಂದರೆ ಶ್ರುತಿಯು ಸಾವಕಾಶವಾಗಿದೆ ಹೊರತು, ನಿರವಕಾಶವಾಗಿಲ್ಲ ಎಂದು ಸ್ಮೃತಿಯ ಆಧಾರದಿಂದ ತೋರಿಸುತ್ತಿದ್ದಾರೆ. ಹೀಗೆ ಸ್ಮೃತಿಗೆ ಅವತಾರಿಕೆ ನೀಡಿ, 'ನಚ ಯೋಗಸ್ಯ ರೂಢೇರ್ದೌರ್ಬಲ್ಯಾದನಿರ್ಣಯ ಇತಿ ವಾಚ್ಯಮ್ । ಸ್ಮೃತ್ಯುಕ್ತತ್ವೇನ ವಿದ್ವದ್ರೂಢೇರಪಿ ಸತ್ತ್ವಾತ್' ಯೋಗವು ರೂಢಿಗಿಂತಲೂ ದುರ್ಬಲವಾಗಿದೆ. ಆದ್ದರಿಂದ ಯೋಗದಿಂದ ಹೇಗೆ ನಿರ್ಣಯಿಸುತ್ತೀರಿ ? ಎಂದು ಪ್ರಶ್ನಿಸಬಾರದು. ಸ್ಮೃತಿಯಲ್ಲಿ ವಜ್ರಶಬ್ದದ ನಿಷ್ಪತ್ತಿಯನ್ನು ಹೇಳಿದ್ದರಿಂದ ವಿದ್ವದ್ರೂಢಿಯಿದೆಯೆಂದು ಸಿದ್ಧವಾಯಿತು. ಲೌಕಿಕರೂಢಿಗಿಂತಲೂ ವಿದ್ವದ್ರೂಢಿಯು ಪ್ರಬಲವಾದ್ದರಿಂದ ವಜ್ರಶಬ್ದಕ್ಕೆ ವಿಷ್ಣುವೆಂಬರ್ಥವೇ ಸಾಧುವಾಗಿದೆ ಎಂಬ ಸಮಾಧಾನವನ್ನೂ ಕೂಡ ಟೀಕೆಯಲ್ಲೇ ಹೇಳಿದ್ದಾರೆ.

**प्रकाशः** – तत्समाधानमुपलक्षणम् । स्मृत्या योगप्रदर्शनस्य विद्वद्रूढिसूचनमिव निरवकाशत्वेनाज्ञरूढितोऽपि प्राबल्यसूचनमपि प्रयोजनमिति भावेन प्रागुक्त-श्रुतिविरोधशङ्कामनूद्य स्मृत्युक्तयोगस्यानवकाशत्वमुपपादयति – नचेत्यादिना ॥

ಟೀಕೆಯಲ್ಲಿ ಹೇಳಿದ ಈ ಸಮಾಧಾನವು ಕೇವಲ ಉಪಲಕ್ಷಣವಾಗಿದೆ. ಸ್ಮೃತಿಯಿಂದ ವಜ್ರಶಬ್ದದ ಯೋಗಾರ್ಥ ಪ್ರದರ್ಶನವು ವಿದ್ವದ್ರೂಢಿಗೆ ಹೇಗೆ ಸೂಚಕವಾಗಿದೆಯೋ, ಅದರಂತೆ ನಿರವಕಾಶವಾದ ಪ್ರಯುಕ್ತ ಅಜ್ಞರೂಢಿಗಿಂತಲೂ ಕೂಡ ಪ್ರಬಲವಾಗಿದೆಯೆಂಬುದಕ್ಕೂ ಸೂಚಕವಾಗಿದೆ. ಈ ಅಭಿಪ್ರಾಯದಿಂದ ಹಿಂದೆ ಹೇಳಿದ ಶ್ರುತಿವಿರೋಧದ ಆಶಂಕೆಯನ್ನು ಅನುವಾದಮಾಡಿ ಸ್ಮೃತ್ಯುಕ್ತವಾದ ಯೋಗಕ್ಕೆ ನಿರವಕಾಶತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – श्रुत्यर्थेति श्लोकात्पूर्वं ''वज्रश्रुतेस्स्मृत्युक्तयोगेन विष्णौ सावकाशत्वात् । नचैवं पूर्वोक्तदिशाऽर्थान्यवस्था । श्रुतितस्स्मृतिर्दुर्बला सती न श्रुतेरूढित्यागापादिकाच इत्युक्तमिति वाच्यम् यत'' इत्येतावद्योज्यम् ॥

'ಶ್ರುತ್ಯರ್ಥ' ಎಂಬ ಗ್ರಂಥಕಾರರ ಶ್ಲೋಕಕ್ಕಿಂತ ಮೊದಲು 'ವಜ್ರಶ್ರುತೇಃ ಸ್ಮೃತ್ಯುಕ್ತಯೋಗೇನ ವಿಷ್ಣೌ ಸಾವಕಾಶತ್ವಾತ್ । ನಚೈವಂ ಪೂರ್ವೋಕ್ತದಿಶಾऽರ್ಥಾವ್ಯವಸ್ಥಾ । ಶ್ರುತಿತಃ ಸ್ಮೃತಿರ್ದುರ್ಬಲಾ ಸತೀ ನ

ಶ್ರುತೇರೂಢಿತ್ಯಾಗಾಪಾದಿಕಾಚ ಇತ್ಯುಕ್ತಮಿತಿ ವಾಚ್ಯಮ್ ಯತ' ಇಷ್ಟು ವಾಕ್ಯವನ್ನು ಯೋಜನೆ ಮಾಡಿಕೊಳ್ಳಬೇಕು. ಸ್ಮೃತಿಯಲ್ಲಿ ಹೇಳಿದ ಯೋಗಿಕಾರ್ಥದಿಂದ ವಜ್ರಶ್ರುತಿಯು ವಿಷ್ಣುವಿನಲ್ಲಿ ಸಾವಕಾಶವಾಯಿತು. ಹಾಗಾದರೆ ಹಿಂದೆ ಹೇಳಿದಂತೆ ಈ ಶಬ್ದಕ್ಕೆ ಇದೇ ಅರ್ಥವೆಂಬ ವ್ಯವಸ್ಥೆಯೇ ತಪ್ಪಾದೀತು. ಏಕೆಂದರೆ ಶ್ರುತಿಗಿಂತಲೂ ಸ್ಮೃತಿಯು ದುರ್ಬಲವಾದ್ದರಿಂದ ಶ್ರುತಿಯ ರೂಢಾರ್ಥತ್ಯಾಗಕ್ಕೆ ಸ್ಮೃತಿಯು ಆಪಾದಕವಾಗುವುದಿಲ್ಲ ಎಂದು ಹಿಂದೆ ಪೂರ್ವಪಕ್ಷ ಮಾಡಲಾಗಿದೆ. ಇದು ತಪ್ಪು. ಏಕೆಂದರೆ ಇಷ್ಟನ್ನು ಶೇಷಪೂರಣ ಮಾಡಿಕೊಂಡಾಗ ವಾಕ್ಯವು ಪೂರ್ಣವಾಗುತ್ತದೆ.

**प्रकाशः – श्रुत्यर्थनिर्णयार्थत्वात्स्मृतेरिति ॥** ''इतिहासपुराणाभ्यां वेदं समुपबृंहयत्'' इत्युक्तेरिति भावः । एतेन स्मृतेर्निरवकाशत्वमुच्यते । अर्थाव्यवस्थां निराह – **तत्र निरूपितोऽर्थो ग्राह्य इति ॥** स्मृतौ निरूपित इत्यर्थः । तर्हि ''वज्रहस्तः पुरन्दर'' इत्यादावपि रूढार्थो न स्यादित्यत आह – **तदयोग इति ॥**

'ಶ್ರುತ್ಯರ್ಥನಿರ್ಣಯಾರ್ಥತ್ವಾತ್ ಸ್ಮೃತೇಃ' ಎಂದು ಗ್ರಂಥದಲ್ಲಿ ಹೇಳಿದೆ. 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರಂಹಯತ್' ಇತಿಹಾಸ ಹಾಗೂ ಪುರಾಣಗಳಿಂದ ವೇದದ ಅರ್ಥವನ್ನು ತಿಳಿಯಬೇಕು ಎಂಬ ಮಾತಿನ ಆಧಾರದಿಂದ ಸ್ಮೃತಿಗಳು ಶ್ರುತ್ಯರ್ಥನಿರ್ಣಯಕ್ಕೋಸ್ಕರವೆಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಸ್ಮೃತಿಗೆ ನಿರವಕಾಶತ್ವವನ್ನು ಹೇಳಿದಂತಾಯಿತು. ಅರ್ಥಾವ್ಯವಸ್ಥೆಯನ್ನು 'ತತ್ರ ನಿರೂಪಿತೋಽರ್ಥೋ ಗ್ರಾಹ್ಯಃ' ಎಂಬುದರಿಂದ ನಿರಾಕರಿಸಿದ್ದಾರೆ. ಅಂದರೆ ಸ್ಮೃತಿಯಲ್ಲಿ ನಿರೂಪಣೆ ಮಾಡಿದ ಅರ್ಥವನ್ನೇ ಸ್ವೀಕರಿಸಬೇಕು ಎಂದರ್ಥ. ಹಾಗಾದಲ್ಲಿ 'ವಜ್ರಹಸ್ತಃ ಪುರಂದರಃ' ಇತ್ಯಾದಿ ಸ್ಥಳದಲ್ಲಿಯೂ ರೂಢಾರ್ಥವನ್ನು ಸ್ವೀಕರಿಸದೇ ಇರಬೇಕಾದೀತು ಎಂಬ ಪ್ರಶ್ನೆಗೆ 'ತದಯೋಗೇ' ಎಂದು ಉತ್ತರಿಸಿದ್ದಾರೆ.

**प्रकाशः –** दृष्टान्तोक्तिपूर्वं श्लोकं व्याचष्टे – **यथेति ॥** ईच ऊच यणादेशः । यू । ईकारान्तमूकारान्तं शब्दरूपं स्त्र्याख्यं स्त्रीत्वाभिधायकम् । स्त्रीलिङ्गमिति यावत् । नदीसंज्ञं भवतीति सूत्रार्थः । स्त्र्याख्याविति वाच्य इयङादेशेन स्त्रियाख्याविति निर्देशश्छान्दस इत्याहुः ।

ದೃಷ್ಟಾಂತವನ್ನು ಹೇಳುವ ಮೂಲಕ ಶ್ಲೋಕವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಯಥಾ' ಇತ್ಯಾದಿ ಗ್ರಂಥದಿಂದ. 'ಯೂ ಸ್ತ್ರ್ಯಾಖ್ಯೌ ನದೀ' ಎಂಬ ಸೂತ್ರದಲ್ಲಿ ಈಚ ಊಚ ಯೂ ಎಂದು ತಿಳಿಯಬೇಕು. ಈ ಮತ್ತು ಊಗಳಿಗೆ ಯಣಾದೇಶ ಬಂದು ಯೂ ಎಂದಾಗಿದೆ. ಅಂದರೆ ಈಕಾರಾಂತವಾದ, ಊಕಾರಾಂತವಾದ ಶಬ್ದಸ್ವರೂಪವು ಸ್ತ್ರೀತ್ವವನ್ನು ವಿವಕ್ಷಿಸಿದಾಗ 'ನದೀ' ಸಂಜ್ಞೆಯನ್ನು ಹೊಂದುತ್ತದೆಂದು ಸೂತ್ರ ಹೇಳುತ್ತಿದೆ. ವಸ್ತುತಃ ಗ್ರಂಥದಲ್ಲಿ 'ಸ್ತ್ರಿಯಾಖ್ಯೌ' ಎಂದು ಹೇಳಿದ್ದಾರೆ. 'ಸ್ತ್ರಿ ಆಖ್ಯೌ' ಎಂದಿರಬೇಕಾದರೆ

ಯಣಾದೇಶಬಂದರೆ 'ಸ್ತ್ರ್ಯಖ್ಯೌ' ಎಂದೇ ಆಗಬೇಕು. ಆದರೂ 'ಸ್ತ್ರೀ ಆಖ್ಯೌ' ಎಂಬಲ್ಲಿ ಇಯಙಾದೇಶವನ್ನು ಹೇಳಿ, 'ಸ್ತ್ರಿಯಾಖ್ಯೌ' ಎಂದು ನಿರ್ದೇಶಿಸಿದ್ದು ಛಾಂದಸ ಪ್ರಯೋಗವೆಂದು ತಿಳಿಯಬೇಕು.

**प्रकाशः –** आदिपदेन "वृद्धिरादैच्" "अदेङ्गुण" इत्यादिग्रहः – **आण्नद्या इत्यादिष्विति ।।** नदीसंज्ञकेकारोकारान्तात् परस्य ङिद्वचनस्याडागमो भवतीत्यर्थः । **कुमार्यै यवाग्वै** इत्याद्युदाहरणम् । आदिपदेन "मृजेर्वृद्धिः । मिदेर्गुणः । मार्ष्टिमेद्यति" इति ।।

ಆದಿಪದದಿಂದ 'ವೃದ್ಧಿರಾದೈಚ್' 'ಅದೇಙ್ಗುಣಃ' ಇತ್ಯಾದಿಗಳನ್ನು ವಿವಕ್ಷಿಸಬೇಕು. 'ಆಣ್‌ನದ್ಯಾ ಇತ್ಯಾದಿಷು' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ನದೀಸಂಜ್ಞೆಯಿರುವಂತಹ ಈಕಾರ ಮತ್ತು ಊಕಾರಂತವಾದ ಶಬ್ದಸ್ವರೂಪದ ಪರದಲ್ಲಿ ನಿಮಿತ್ತವಾಗಿರುವ ಚತುರ್ಥೀ, ಪಂಚಮಿ, ಷಷ್ಠೀ, ಸಪ್ತಮೀ ವಿಭಕ್ತಿಗಳ ಏಕವಚನಕ್ಕೆ ಆಡಾಗಮವು ಬರುತ್ತದೆಂದರ್ಥ. ಆದ್ದರಿಂದ 'ಕುಮಾರ್ಯೈ' 'ಯವಾಗ್ವೈ' ಇತ್ಯಾದಿರೂಪಗಳು ಸಿದ್ಧವಾಗುತ್ತವೆ. ಆದಿಪದದಲ್ಲಿ 'ಮೃಜೇರ್ವೃದ್ಧಿಃ । ಮಿದೇರ್ಗುಣಃ' ಎಂಬುದನ್ನು ವಿವಕ್ಷಿಸಬೇಕು. ಮೃಜುಧಾತುವಿಗೆ ವೃದ್ಧಿಬಂದರೆ ಮಾರ್ಷ್ಟಿ ಎಂದಾಗುತ್ತದೆ. 'ಮಿದ್' ಧಾತುವಿಗೆ ಗುಣ ಬಂದರೆ 'ಮೇದ್ಯತಿ' ಎಂದಾಗುತ್ತದೆ.

**प्रकाशः – कृत्रिमेति ।।** साङ्केतिकनद्याः । नतु प्रसिद्धनदीशब्दमात्रस्येत्यर्थः ।। **नदीति ।।** नदी पौर्णमासी आग्रहायणी इत्येवमन्तादव्ययीभावाद्विकल्पेनाटच्प्रत्यय इत्यर्थः ।

'ಕೃತ್ರಿಮ' ಎಂದರೆ ಸಾಂಕೇತಿಕವಾದ ನದಿಯನ್ನು ವಿವಕ್ಷಿಸಬೇಕೆಂದರ್ಥ ಹೊರತು, ಪ್ರಸಿದ್ಧವಾದ ನದಿಪ್ರವಾಹವನ್ನು ವಿವಕ್ಷಿಸಬಾರದೆಂದರ್ಥ. 'ನದೀ ಪೌರ್ಣಮಾಸೀ ಆಗ್ರಹಾಯಣೀ' ಎಂಬ ಶಬ್ದಗಳು ಕೊನೆಯಲ್ಲಿದ್ದಾಗ ಅವ್ಯಯೀಭಾವಸಮಾಸ ಮಾಡುವ ಸಂದರ್ಭದಲ್ಲಿ ವಿಕಲ್ಪವಾಗಿ 'ಟಚ್' ಪ್ರತ್ಯಯವು ಬರುತ್ತದೆಂದು ಹೇಳಲಾಗಿದೆ.

**प्रकाशः –** उपनदं उपनदि । उपपौर्णमासं उपपौर्णमासि । उपाग्रहायणं उपाग्रहायणीत्युदाहरणम् ।

'ನದೀ ಪೌರ್ಣಮಾಸೀ' ಎಂಬ ಸೂತ್ರಕ್ಕೆ ಉದಾಹರಣೆಗಳು ಹೀಗಿವೆ - 'ನದ್ಯಾ ಸಮೀಪಂ ಉಪನದಂ' ಎಂದು ಅವ್ಯಯೀಭಾವಸಮಾಸದಲ್ಲಿ ಅಸ್ವಪದವಿಗ್ರಹವನ್ನು ಮಾಡಬೇಕು. ಇಲ್ಲಿರುವ ನದಿಶಬ್ದದಿಂದ ಪ್ರವಾಹರೂಪವಾದ ನದಿಯನ್ನೇ ವಿವಕ್ಷಿಸಬೇಕು. ಅಂದರೆ ನದಿಯ ಸಮೀಪ ಎಂದರ್ಥವಾಗುತ್ತದೆ. ಅದರಂತೆ

'ಉಪಪೌರ್ಣಮಾಸಂ', 'ಉಪಪೌರ್ಣಮಾಸಿ' 'ಉಪಾಗ್ರಹಾಯಣಂ', 'ಉಪಾಗ್ರಹಾಯಣೀ' ಎಂಬ ಪ್ರಯೋಗಗಳು ಸಿದ್ಧವಾಗುತ್ತವೆ.

**प्रकाशः –** टचि टकारादेः ''चुटू'' इत्यादिना लोपे ''यस्य'' इतीकारलोपे च उपनदमिति रूपम् । अन्यदा तु ''ह्रस्वो नपुंसके प्रातिपदिकस्य'' इतीकारस्य ह्रस्वे सत्युपनदीत्यादि ।।

'ಟಚ್' ಪ್ರತ್ಯಯದಲ್ಲಿ ಟಕಾರವು 'ಚುಟೂ' ಎಂಬ ಸೂತ್ರದಿಂದ ಲೋಪವಾಗುತ್ತದೆ. ಚಕಾರವು 'ಹಲಂತ್ಯಂ' ಎಂಬ ಸೂತ್ರದಿಂದ ಲೋಪವಾಗುತ್ತದೆ. ಕೇವಲ 'ಅ' ಎಂದಷ್ಟೇ ಉಳಿಯುತ್ತದೆ. 'ನದೀ' ಎಂಬಲ್ಲಿರುವ ಈಕಾರವು 'ಯಸ್ಯೇತಿಚ' ಎಂಬ ಸೂತ್ರದಿಂದ ಲೋಪವಾಗುತ್ತದೆ. ಈ ಕಾರವು ಲೋಪವಾಗಿ ಪ್ರತ್ಯಯದ ಆಕಾರವು ಸೇರಿದಾಗ 'ಉಪನದಂ' ಎಂಬ ರೂಪವು ಸಿದ್ಧವಾಗುತ್ತದೆ. ಒಂದು ವೇಳೆ 'ಟಚ್' ಪ್ರತ್ಯಯವು ಬರದಿದ್ದರೆ, 'ಉಪನದೀ' ಎಂಬಲ್ಲಿ 'ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ' ಎಂಬ ಸೂತ್ರದಿಂದ ದೀರ್ಘಾಂತವಾದ ಪ್ರಾತಿಪದಿಕದಲ್ಲಿ ನಪುಂಸಕಲಿಂಗವು ಹ್ರಸ್ವಾಂತವಾಗುತ್ತದೆ ಎಂದು ಹೇಳಲಾಗಿದೆ. ಆದ್ದರಿಂದ 'ಉಪನದಿ' ಎಂದೇ ಆಗುತ್ತದೆ.

**प्रकाशः –** तदयोग इति ।। नदीपदेन कृत्रिमनदीग्रहणायोग इत्यर्थः । तत्र नदीपदेन नदीसंज्ञकशब्दस्यैव ग्रहणे पौर्णमास्यादिशब्दस्यापीकारान्तस्त्रीलिङ्गतया नदीसंज्ञकशब्दत्वेन नदीशब्देनैव ग्रहणसम्भवात् पृथग्ग्रहणमयुक्तमिति तत्साहचर्याल्लोकप्रसिद्धनदीशब्दस्यैव ग्रहणम् ।

ಗ್ರಂಥದಲ್ಲಿ 'ತದಯೋಗೇ' ಎಂದರೆ 'ನದೀ' ಪದದಲ್ಲಿ ಕೃತ್ರಿಮನದಿಯನ್ನು ತೆಗೆದುಕೊಳ್ಳಬಾರದು ಎಂದರ್ಥ. ಒಂದು ವೇಳೆ ಕೃತ್ರಿಮನದಿಯನ್ನು ತೆಗೆದುಕೊಂಡರೆ 'ಗೌರ್ಯಾ ಸಮೀಪೇ ಉಪಗೌರಿ ಅಥವಾ ಉಪಗೌರಮ್' ಎಂದೂ ಸಹ ಪ್ರಯೋಗ ಮಾಡಬೇಕಾದೀತು. ಆದರೆ ಲೋಕದಲ್ಲಿ ಇಂತಹ ಪ್ರಯೋಗವೇನೂ ಕಾಣಿಸುವುದಿಲ್ಲ. ಆದ್ದರಿಂದ 'ನದೀ' ಪದದಿಂದ ಪ್ರವಾಹರೂಪವಾದ ನದಿಯನ್ನೇ ತೆಗೆದುಕೊಳ್ಳಬೇಕು ಹೊರತು, ನದೀಸಂಜ್ಞಕವಾದ ಈಕಾರಾಂತ, ಊಕಾರಾಂತ ಶಬ್ದವನ್ನು ತೆಗೆದುಕೊಳ್ಳಬಾರದು. ನದಿಪದದಿಂದ ನದೀಸಂಜ್ಞಕವಾದ ಶಬ್ದಗಳನ್ನು ತೆಗೆದುಕೊಂಡರೆ, ಅದರಲ್ಲಿಯೇ 'ಪೌರ್ಣಮಾಸೀ ಆಗ್ರಹಾಯಣೀ' ಇತ್ಯಾದಿ ಶಬ್ದಗಳೂ ಸಹ ಸೇರಿಕೊಂಡವು. ಏಕೆಂದರೆ ಇವುಗಳೂ ಸಹ ಈಕಾರಾಂತವಾದ ಸ್ತ್ರೀಲಿಂಗಶಬ್ದಗಳಾಗಿವೆ. ಆವಾಗ ಪ್ರತ್ಯೇಕವಾಗಿ ಪೌರ್ಣಮಾಸೀ ಮತ್ತು ಆಗ್ರಹಾಯಣೀ ಎಂಬ ಶಬ್ದಗಳನ್ನು ಹೇಳಿದ್ದು ತಪ್ಪಾಗುತ್ತದೆ. ಇದರಿಂದ ನದಿಶಬ್ದದಿಂದ, ನದಿಶಬ್ದವನ್ನೇ ತೆಗೆದುಕೊಳ್ಳಬೇಕು ಹೊರತು, ನದೀಸಂಜ್ಞಕವಾದ ಶಬ್ದಗಳನ್ನು ತೆಗೆದುಕೊಳ್ಳಬಾರದು ಎಂದು.

ಪರಿಪೂರ್ಣಚಂದ್ರಿಕಾ

**प्रकाशः** – तदुक्तं महाभाष्ये ''बहुगणवतुडति संख्या'' इत्यत्र ''यदि तर्हि कृत्रिमाकृत्रिमयोः कृत्रिमे संप्रत्ययो भवति नदीपौर्णमास्याग्रहायणीभ्य इत्यत्रापि प्रसज्येत । पौर्णमास्याग्रहायणीग्रहणसामर्थ्यान्न भविष्यति'' इति ।

ಇದನ್ನೇ ಮಹಾಭಾಷ್ಯದಲ್ಲಿ 'ಬಹುಗಣವತುಡತಿ ಸಂಖ್ಯಾ' ಇತ್ಯತ್ರ 'ಯದಿ ತರ್ಹಿ ಕೃತ್ರಿಮಾಕೃತ್ರಿಮಯೋಃ ಕೃತ್ರಿಮೇ ಸಂಪ್ರತ್ಯಯೋ ಭವತಿ ನದೀಪೌರ್ಣಮಾಸ್ಯಾಗ್ರಹಾಯಣೀಭ್ಯ ಇತ್ಯತ್ರಾಪಿ ಪ್ರಸಜ್ಯೇತ । ಪೌರ್ಣಮಾಸ್ಯಾಗ್ರಹಾಣೀಗ್ರಹಣಸಾಮರ್ಥ್ಯಾನ್ನ ಭವಿಷ್ಯತಿ' ಎಂದು ಹೇಳಿದ್ದಾರೆ. ಅಂದರೆ ಒಂದುವೇಳೆ 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರ ಸಂದರ್ಭದಲ್ಲಿ ಕೃತ್ರಿಮ ಮತ್ತು ಅಕೃತ್ರಿಮಗಳು ಪ್ರಸಕ್ತವಾದಾಗ ಕೃತ್ರಿಮವನ್ನೇ ಸ್ವೀಕರಿಸುವುದಾದರೆ, 'ನದೀಪೌರ್ಣಮಾಸೀ ಆಗ್ರಹಾಯಣೀ' ಎಂಬಲ್ಲಿಯೂ ಬರಬೇಕಾದೀತು ಎಂದರೆ ಇದು ತಪ್ಪು. ಯಾವಕಾರಣದಿಂದ 'ಪೌರ್ಣಮಾಸೀ ಆಗ್ರಹಾಯಣೀ' ಮೊದಲಾದವುಗಳನ್ನು ಸೂತ್ರದಲ್ಲಿ ಪ್ರತ್ಯೇಕವಾಗಿ ಪರಿಗಣಿಸಿದ್ದಾರೋ, ಇದರಿಂದ ಕೃತ್ರಿಮದಲ್ಲಿ ಕಾರ್ಯಸಂಪ್ರತ್ಯಯವು ಇರುವುದಿಲ್ಲ. ಅಕೃತ್ರಿಮದಲ್ಲೇ ಕಾರ್ಯಸಂಪ್ರತ್ಯಯಯಿರುತ್ತದೆಂದು ತಿಳಿಸಲಾಗಿದೆ.

**प्रकाशः** – नन्वाण्नद्या इत्यादौ कृत्रिमग्रहणे को हेतुरित्यतो बहुगणसूत्रे महाभाष्योक्तन्यायमाह – **कृत्रिमेति** ।।

'ಆಣ್‌ನದ್ಯಾ' ಎಂಬ ಸೂತ್ರದಲ್ಲಿ ಕೃತ್ರಿಮವಾದ ಅರ್ಥವನ್ನೇ ಸ್ವೀಕರಿಸಬೇಕೆನ್ನಲು ಕಾರಣವೇನು ? ಎಂಬ ಸೂತ್ರಕ್ಕೆ ಬಹುಗಣಸೂತ್ರದ ಮಹಾಭಾಷ್ಯದಲ್ಲಿ ಹೇಳಿದ ನ್ಯಾಯವೇ ಆಧಾರವೆಂದು 'ಕೃತ್ರಿಮ' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः** – **वर्जनादिति** ।।

चक्रं चंक्रमणादेष वर्जनाद्वज्रमुच्यते ।
खण्डनात्खड्ग एवैष हेतिनामा हरिस्स्वयम् ।।

इति ब्रह्मवैवर्तवाक्यम् ।

आसमन्तादित्यादिस्मृतीतु प्रागाकाशनयादावुदाहृते । आकाशादिशब्दानामपि योग इहाक्षिप्यत इत्यस्य समाधानायैतत् ।

ಚಕ್ರಂ ಚಂಕ್ರಮಣಾದೇಷ ವರ್ಜನಾದ್‌ವಜ್ರಮುಚ್ಯತೇ ।
ಖಂಡನಾತ್ ಖಡ್ಗ ಏವೈಷ ಹೇತಿನಾಮಾ ಹರಿಃ ಸ್ವಯಮ್ ।।

ಎಂಬ ಬ್ರಹ್ಮವೈವರ್ತಪುರಾಣದಲ್ಲಿ ವಜ್ರಶಬ್ದಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಲಾಗಿದೆ. ಆಕಾಶಶಬ್ದಪ್ರತಿಪಾದ್ಯತ್ವವನ್ನು 'ಆಸಮಂತಾತ್‌ಕಾಶತೇ' ಎಂಬ ಸ್ಮೃತಿಯಿಂದ ಆಕಾಶಾಧಿ-
ಕಂಪನಾಧಿಕರಣ (೧-೩-೧೦)

ಕರಣದಲ್ಲಿ ಸಮರ್ಥಿಸಲಾಗಿದೆ. ಆಕಾಶಾದಿಶಬ್ದಗಳೂ ಕೂಡ ಯೌಗಿಕವೇ ಆಗಲಿ ಎಂದು ಪೂರ್ವಪಕ್ಷಕಾರರು ಆಕ್ಷೇಪಿಸಿದ್ದರು. ಅದಕ್ಕೆ ಈಗ ಸಮಾಧಾನವನ್ನು ನೀಡಿದಂತಾಯಿತು.

**गुरुराजीयम्** – ननु तेनेन्द्रो वज्रमुदयच्छदिति श्रुतावुद्यतशब्दस्य वज्रे प्रसिद्धत्वादुद्यतत्वमपि निरवकाशमित्यत आह – **नचेति** ।। अत्र वर्जनाद्वज्रमित्युक्तिस्तु पूर्वपक्षीयश्रुतेरपि विष्णौ सावकाशत्वप्रदर्शनार्थमिति बोध्यम्। वर्जनाद्वज्रमिति स्मृतौ वज्रशब्दस्य निरुक्तत्वात्तन्निर्वचनस्य च वज्रशब्देन सर्वत्र विष्णोरेव ग्रहणार्थत्वाद्वज्रशब्दस्य विष्णुपरत्वसम्भवेऽपि तेनेन्द्रो वज्रमुदयच्छदिति श्रुतौ तदनिर्वचनेनोद्यतशब्देन तद्ग्रहणायोगादिति भावः । ननु कोह्येवान्यादित्यत्र जगच्चेष्टकत्वस्य भगवदनिर्वचनेऽपि तन्मात्रनिष्ठत्वसिद्धिवत् तेनेन्द्र इति श्रुतौ तदनिर्वचनेऽपि तन्मात्रनिष्ठत्वसिद्धिरित्यत आह – **नच कोहीति** ।। तथाच नैतत्प्रतिबन्दीति भावः । ननूद्यतशब्दार्थस्योद्यतत्वस्य वज्रादन्यत्र निषिद्धत्वात्कथं विष्णौ सावकाशत्वमित्यतो वाह – **नच कोहीति** ।। कोह्येवान्यादित्यत्र जगच्चेष्टकत्वमिवेत्युक्त्या सिद्धान्तीयलिङ्गस्य निरवकाशत्वमुक्तं भवति ।। **आक्षिप्तत्वादिति** ।। नन्वाक्षेपोऽपि तस्यैव कुतः । अव्यवहितपूर्वाधिकरणे तस्यैव प्रसक्तत्वादिति भावः । पूर्वोक्तवज्रशब्दस्य भगवति सावकाशत्वमुपपादयितुं शङ्कते – **नचेति** ।। आडामादिकार्यार्थत्वादित्यर्थः । इत्यादिष्वित्यत्रादिपदेन ङेराम्नद्याम्नीभ्य इत्यस्य सङ्ग्रहः । तदयोगः आडामादिकार्यार्थत्वायोगः । नद्याः ग्रहणमिति सम्बन्धः। नन्वेवं वज्रशब्दस्य यौगिकत्वेन वज्रबाहुरित्यादावपि योग एव ग्राह्य इत्यत आह – **यत्रत्विति** ।। तदयोगःस्मृत्युक्तयोगायोगः ।




'ಪ್ರಾಣ ಏಜತಿ ನಿಃಸೃತಮ್' ಎಂಬ ವಿಷಯವಾಕ್ಯದಲ್ಲಿ ಸರ್ವಚೇಷ್ಟಕತ್ವ ಲಿಂಗವು ಸ್ಪಷ್ಟವಾಗಿ ಕೇಳಿಸುತ್ತಿದೆ. ಈಗಾಗಲೇ ಆನಂದಮಯಾಧಿಕರಣದಲ್ಲಿ ಸರ್ವಚೇಷ್ಟಕತ್ವವನ್ನು ವಿಷ್ಣುವಿನ ಅಸಾಧಾರಣ ಧರ್ಮವೆಂದು ಸಮರ್ಥಿಸಿದ್ದಾಗಿದೆ. ಅದರ ಆಧಾರದಿಂದ ವಜ್ರಶಬ್ದವು ಈಗ ವಿಷ್ಣುಪರವೆಂದು ಸಿದ್ಧವಾಗುತ್ತದೆ. ಇನ್ನು 'ಉದ್ಯತತ್ವ' ಎಂಬ ಲಿಂಗದ ಆಧಾರದಿಂದ ವಜ್ರಶ್ರುತಿಯು ವಜ್ರಾಯುಧ ಪರವಾಗಿದೆಯೆಂದು ಹಿಂದೆ ಮಾಡಿದ ಪೂರ್ವಪಕ್ಷಕ್ಕೆ ಈಗ ಆಸ್ಪದವಿಲ್ಲ. ಏಕೆಂದರೆ 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಯು ವಜ್ರಶಬ್ದದ ನಿರುಕ್ತಿಯನ್ನು ವಿಷ್ಣುವಿನಲ್ಲಿ ಹೇಳಿದಂತೆ ಪೂರ್ವಪಕ್ಷಕಾರರು ಉದ್ಯತಶಬ್ದದ ನಿರುಕ್ತಿಯನ್ನು ಆಯುಧದಲ್ಲಿ ತೋರಿಸಿಲ್ಲ. ಮತ್ತು ಸರ್ವಚೇಷ್ಟಕತ್ವವು

ಬೇರೆಯವರಲ್ಲಿ ಬರುವುದಿಲ್ಲವೆಂದು 'ಕೋಹ್ಯೇವಾನ್ಯಾತ್ಕಃ' ಇತ್ಯಾದಿ ಶ್ರುತಿಯು ಸಾಧನೆ ಮಾಡುವಂತೆ ಉದ್ಯತತ್ವಲಿಂಗವು ಬೇರೆಯವರಲ್ಲಿ ಬರುವುದಿಲ್ಲವೆಂದು ಸಾಧಿಸಲು ಪೂರ್ವಪಕ್ಷಕಾರರು ಯಾವುದೇ ಶ್ರುತಿಗಳನ್ನು ಆಧಾರವನ್ನಾಗಿ ತೋರಿಸಿಲ್ಲ.

ಸ್ಮೃತಿಗಳೆಲ್ಲವೂ ಶ್ರುತ್ಯರ್ಥದ ನಿರ್ಣಯಕ್ಕೋಸ್ಕರ ಹೊರಟಿದೆ. ಆದ್ದರಿಂದ ಸ್ಮೃತಿಗೆ ಅನುಸಾರಿಯಾಗಿಯೇ ಶ್ರುತಿಯನ್ನು ಅರ್ಥೈಸಬೇಕು ಹೊರತು, ಅದಕ್ಕೆ ವಿರುದ್ಧವಾಗಿ ಅರ್ಥೈಸುವುದು ತಪ್ಪಾಗುತ್ತದೆ. ಆದ್ದರಿಂದ ಪ್ರಕೃತ 'ವರ್ಜನಾದ್ವಜ್ರಮುಚ್ಯತೇ' ಎಂಬ ಶ್ರುತಿಯು ವಜ್ರಶಬ್ದದ ನಿರುಕ್ತಿಯನ್ನು ಹೇಳುತ್ತಿರುವಾಗ ಅದರ ಆಧಾರದಿಂದ ಶ್ರುತಿಯಲ್ಲಿರುವ ವಜ್ರಶಬ್ದಕ್ಕೆ ವಿಷ್ಣುಪರತ್ವವನ್ನೇ ಹೇಳಬೇಕು. ಆಸಮಂತಾತ್ ಕಾಶತೇ ಯದಾಕಾಶಃ' ಎಂಬ ಸ್ಮೃತಿಯು ಆಕಾಶಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಿದೆ. 'ಪ್ರಾಣಃ ಪ್ರಣಯನಾದೇಷಃ' ಎಂಬ ಶ್ರುತಿಯು ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಿದೆ. ಅದರಂತೆ ಇಲ್ಲಿಯೂ ಕೂಡ 'ವರ್ಜನಾದ್ವಜ್ರಮ್' ಎಂಬ ಸ್ಮೃತಿಯು ವಜ್ರಶಬ್ದದ ನಿರ್ವಚನವನ್ನು ವಿಷ್ಣುವಿನಲ್ಲಿ ಮಾಡುತ್ತಿರುವುದರಿಂದ ಅದಕ್ಕನುಸಾರಿಯಾಗಿಯೇ ಶ್ರುತ್ಯರ್ಥವನ್ನು ಸ್ವೀಕರಿಸಬೇಕು. ಆದ್ದರಿಂದ ಸ್ಮೃತಿಯು ಶ್ರುತಿಗಿಂತ ದುರ್ಬಲವಾಗಿದೆ ಎಂಬ ಪೂರ್ವಪಕ್ಷವಾಗಲೀ, ಅಥವಾ ಯೋಗಕ್ಕಿಂತಲೂ ರೂಢಿಯು ಪ್ರಬಲವಾಗಿದೆಯೆಂಬ ಪೂರ್ವಪಕ್ಷವಾಗಲೀ, ಯುಕ್ತವಾಗುವುದಿಲ್ಲವೆಂದು ಸಮರ್ಥನೆ ಮಾಡಿದಂತಾಯಿತು.



• • • • •

## ಪೂರ್ವಪಕ್ಷದಲ್ಲಿ ಹೇಳಿದ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳು ಸಾವಕಾಶವಾಗಿವೆ

## तात्पर्यचन्द्रिका

**''यदाजिमीयुः'' इत्यादिनिर्वचनं तु प्रकरणविशेषस्थत्वात्तत्प्रकरणस्थेन ''आज्यैः स्तुवत'' इत्यादिनैवाज्यशब्देनान्वेति ।**

ಅನುವಾದ - ಸ್ಮೃತಿಯಲ್ಲಿ ಹೇಳಲ್ಪಟ್ಟ ವಜ್ರಶಬ್ದದ ನಿರ್ವಚನವನ್ನು ಶ್ರುತಿಯಲ್ಲಿರುವ ವಜ್ರಶಬ್ದದಲ್ಲಿ ಅನ್ವಯ ಮಾಡಬೇಕೆಂದು ಹೇಳುತ್ತಿದ್ದೀರಿ. ಇದು ಹೇಗೆ ಸರಿ? ಆಯಾ ಪ್ರಕರಣಗಳಲ್ಲಿ ಮಾಡಿದ ನಿರ್ವಚನವು ಅದೇ ಪ್ರಕರಣದಲ್ಲಿರುವ ಮತ್ತೊಂದು ಶಬ್ದದ ಜೊತೆಗೆ ಅನ್ವಯವಾಗುತ್ತದೆ ಹೊರತು, ಎಲ್ಲೋ ಇರುವ ಶಬ್ದದಲ್ಲಿ ಅನ್ವಯವಾಗಲು ಸಾಧ್ಯವಿಲ್ಲ. ಉದಾಹರಣೆ : ಪೂರ್ವಮೀಮಾಂಸೆಯಲ್ಲಿ 'ಯದಾಜಿಮೀಯುಃ ತದಾಜ್ಯಾನಾಂ ಆಜ್ಯತ್ವಂ' ಎಂಬುದಾಗಿ 'ಆಜ್ಯ' ಶಬ್ದವನ್ನು ಯುದ್ಧದ ಮಂತ್ರಗಳಲ್ಲಿ ನಿರ್ವಚನ ಮಾಡಲಾಗಿದೆ. ಈ ನಿರ್ವಚನವು ಯಾವ ಪ್ರಕರಣದಲ್ಲಿ ಮಾಡಲಾಗಿದೆಯೋ, ಅದೇ ಪ್ರಕರಣದಲ್ಲೇ ಇರುವ 'ಆಜ್ಯೈಃ ಸ್ತುವತೇ' ಎಂಬಲ್ಲಿ ಅನ್ವಯ ಮಾಡಲಾಗುತ್ತದೆ. 'ಆಜ್ಯೈಃ ಸ್ತುವತೇ' ಎಂದರೆ ಯುದ್ಧಮಂತ್ರಗಳಿಂದ ಸ್ತೋತ್ರಮಾಡುತ್ತಾನೆ ಎಂಬರ್ಥವು ಲಭಿಸುತ್ತದೆ.

**यथा ''पदे जुहोति'' इति वाक्यविहितं पदं होमविशेषप्रकरणस्थत्वात्तेनैव होमेन तद्वत् ।**

ಉದಾಹರಣೆ : 'ಪದೇ ಜುಹೋತಿ' ಎಂಬ ವಾಕ್ಯವು ಅಶ್ವಮೇಧ ಪ್ರಕರಣದಲ್ಲಿ ವಿಹಿತವಾಗಿದೆ. ಇದು ಅದೇ ಪ್ರಕರಣದಲ್ಲಿರುವ ಪದಹೋಮದಲ್ಲಷ್ಟೇ ಅನ್ವಯವಾಗುತ್ತದೆ ಹೊರತು, ಬೇರೆಡೆ ಅನ್ವಯವಾಗುವುದಿಲ್ಲ.

**वर्जनाद्वज्रमिति निर्वचनं त्वनारभ्याधीतत्वाद्योग्यवैदिकशब्दमात्रेणान्वेति ।**

ಆದರೆ ವಜ್ರಶಬ್ದ ಹೀಗಲ್ಲ. 'ವರ್ಜನಾದ್ವಜ್ರಮುಚ್ಯತೇ' ಎಂಬ ನಿರ್ವಚನವು ಅನಾರಭ್ಯಾಧೀತ-ವೆನಿಸುವುದರಿಂದ ಯೋಗ್ಯವಾದ ಸಕಲ ವೈದಿಕ ಮಂತ್ರಗಳಲ್ಲಿಯೂ ಅನ್ವಯವನ್ನು ಹೊಂದುತ್ತದೆ. ಅಂದರೆ ಯಾವುದೇ ಒಂದು ಕರ್ಮಕ್ಕೆ ಅಥವಾ ವಾಕ್ಯವಿಶೇಷಕ್ಕೆ ಸಂಬಂಧಪಟ್ಟಂತೆ 'ವರ್ಜನಾದ್ವಜ್ರಮುಚ್ಯತ್ಯೇ' ಎಂಬ ನಿರ್ವಚನವನ್ನು ಹೇಳಿಲ್ಲ. ಸಾಮಾನ್ಯವಾಗಿ ಸ್ಮೃತಿಯು ವಜ್ರಶಬ್ದ, ಚಕ್ರಶಬ್ದ ಇವುಗಳ ನಿಷ್ಪತ್ತಿಯನ್ನು ಹೇಳುತ್ತಿದೆ. ಹಾಗಾಗಿ ಶ್ರುತಿ-ಸ್ಮೃತಿಗಳಲ್ಲಿ ಎಲ್ಲಿಯೇ ವಜ್ರಶಬ್ದವಿದ್ದರೂ ಅಲ್ಲೆಲ್ಲಾ ಇದೇ ಅರ್ಥವನ್ನೇ ಸ್ವೀಕರಿಸಬೇಕು. ಹಿಂದೆ ನೀಡಿದ 'ಯದಾಜಿಮೀಯುಃ' ಇತ್ಯಾದಿ ನಿರ್ವಚನಗಳು 'ಆಜ್ಯೈಃ ಸ್ತುವತೇ' ಎಂಬ ವಾಕ್ಯವಿಶೇಷವನ್ನು ಅಥವಾ ಕರ್ಮವಿಶೇಷವನ್ನು ಉದ್ದೇಶಿಸಿ, ಹೊರಟಿದ್ದರಿಂದ ಅದು ಅನಾರಭ್ಯಾಧೀತವೆನಿಸುವುದಿಲ್ಲ. ಹೊರತು, ಆರಾಭ್ಯಾಧೀತವೇ ಆಗುತ್ತದೆ.

**यथा ''आहवनीये जुहोति'' इत्यनारभ्याधीतवाक्यविहित आहवनीयो होममात्रेण तद्वत् ।**

'ಆಹವನೀಯೇ ಜುಹೋತಿ' ಎಂಬ ವಾಕ್ಯವು ಸಕಲ ಹೋಮಗಳಲನ್ನು ಆಹವನೀಯಾಗ್ನಿಯಲ್ಲಿ ಮಾಡಬೇಕೆಂದು ವಿಧಾನ ಮಾಡುತ್ತಿದೆ. ಇದು ಯಾವುದೇ ಒಂದು ಕರ್ಮವಿಶೇಷವನ್ನಾಗಲೀ, ವಾಕ್ಯವಿಶೇಷವನ್ನಾಗಲೀ ಉದ್ದೇಶಿಸಿ ಹೊರಟಿಲ್ಲವಾದ್ದರಿಂದ, ಅನಾರಭ್ಯಾಧೀತವೆನಿಸುತ್ತದೆ. ಇದರಿಂದ ಸಕಲ ಹೋಮಗಳಲ್ಲಿಯೂ ಆಹವನೀಯವು ಅನ್ವಯವನ್ನು ಹೊಂದುತ್ತದೆ. ಅದರಂತೆ ಪ್ರಕೃತ ವಜ್ರಶಬ್ದವನ್ನು ತಿಳಿಯಬೇಕು.

**यद्यपि स्मृतिर्दुर्बला तथापि श्रुतिविरुद्धविषये प्रवृत्त्यभावान्निरुक्तयादिवच्च श्रुत्यर्थनिर्णायकत्वेन तदनुग्राहकत्वात्, ज्योतिरधिकरण उदाहरिष्यमाणं यद्वज्रश्रुत्य-विरुद्धं श्रुत्यन्तरं तन्मूलत्वसम्भवाच्च वज्रश्रुतिबाधिका ।**

ವಿಚಾರಮಾಡಿದರೆ ಶ್ರುತಿಗಿಂತಲೂ ಸ್ಮೃತಿಯು ದುರ್ಬಲವಾಗಿದೆ. ಆದರೂ ಪ್ರಕೃತ ಮೂರುಕಾರಣಗಳಿಂದ ವಜ್ರಸ್ಮೃತಿಗೆ ಅನುಕೂಲವಾಗಿ ಶ್ರುತಿಯನ್ನು ಅರ್ಥೈಸಬೇಕು.

೧. 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಯು ಶ್ರುತಿಗೆ ವಿರುದ್ಧವಾದ ಅರ್ಥವನ್ನೇನೂ ಹೇಳುತ್ತಿಲ್ಲ.

೨. ನಿರುಕ್ತ್ಯಾದಿಗಳಂತೆ ಶ್ರುತ್ಯರ್ಥನಿರ್ಣಾಯಕವಾಗಿ ಶ್ರುತಿಗೆ ಅನುಗ್ರಾಹಕವೇ ಆಗಿವೆ.

೩. ಮುಂದಿನ ಜ್ಯೋತಿರಧಿಕರಣದಲ್ಲಿ ಉದಾಹರಿಸುವ ವಜ್ರಶ್ರುತಿಗೆ ವಿರುದ್ಧವಾಗದ ಶ್ರುತ್ಯಂತರ ಮೂಲಕವೂ ಆಗಿದೆ. ಈ ಮೂರು ಕಾರಣಗಳಿಂದ ವಜ್ರಶ್ರುತಿಯು ಸ್ಮೃತಿಗೆ ಬಾಧಕವಾಗುವುದಿಲ್ಲ.

**न चेह रूढित्यागोऽपि । विद्वद्रूढेरपि सत्त्वात् । एतेनाव्यवस्था निरस्ता । स्मृत्यादेरेव व्यवस्थापकत्वात् ।**

ಸ್ಮೃತಿಗೆ ಅನುಸಾರಿಯಾಗಿ ವಜ್ರಶ್ರುತಿಯನ್ನು ತಿಳಿದಾಗ ರೂಢ್ಯರ್ಥವನ್ನು ಬಿಟ್ಟಂತಾಗುವುದಿಲ್ಲ. ವಿದ್ವದ್ರೂಢಿಯೂ ಕೂಡ ಇರುತ್ತದೆ. ಇದರಿಂದ ಶಬ್ದದ ಅವ್ಯವಸ್ಥಾಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ ಇಂತಹ ಸ್ಮೃತ್ಯಾದಿಗಳೇ ಈ ಶಬ್ದವು ಇದೇ ಅರ್ಥವನ್ನು ಪ್ರತಿಪಾದನೆ ಮಾಡುತ್ತದೆಂಬ ವ್ಯವಸ್ಥೆಯನ್ನು ಮಾಡುತ್ತವೆ.

**उद्यतत्वं च प्रयत्नवत्त्वम् । उत्पूर्वस्य यतेस्तदर्थत्वात् । लोकप्रयोगाच्च । तस्माच्छ्रुतिलिङ्गे सावकाशे ।**

ಪೂರ್ವಪಕ್ಷಕಾರರು ಹೇಳಿದ ಉದ್ಯತತ್ವಲಿಂಗವೂ ಕೂಡ ಸಾವಕಾಶವಾಗಿದೆ. ಏಕೆಂದರೆ ಉದ್ಯತತ್ವ ಶಬ್ದಕ್ಕೆ ಪ್ರಯತ್ನಶೀಲನಾಗಿದ್ದಾನೆಂದರ್ಥ. 'ಉತ್' ಉಪಸರ್ಗದಿಂದ ಕೂಡಿರುವ 'ಯತೀಪ್ರಯತ್ನೇ' ಎಂಬ ಧಾತುವಿನಿಂದ ಉದ್ಯತ ಶಬ್ದವು ನಿಷ್ಪನ್ನವಾಗಿದೆ. ಇದಕ್ಕೆ ಪ್ರಯತ್ನಶೀಲನೆಂದೇ ಅರ್ಥ. ಲೋಕದಲ್ಲಿಯೂ ಕೂಡ ಈ ಅರ್ಥದಲ್ಲಿಯೇ ಉದ್ಯತ ಶಬ್ದವನ್ನು ಪ್ರಯೋಗಿಸುತ್ತಾರೆ. ಹಾಗಾಗಿ ಪೂರ್ವಪಕ್ಷಕಾರರು ಹೇಳಿದ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳು ಸಾವಕಾಶವಾದವು.

**तदुक्तं न्यायविवरणे ''वज्रशब्दस्योद्यतत्वस्य च विष्णावेवावकाशः । उद्यमित्वमेवोद्यतत्वम्'' इति ।**

ಇದನ್ನೇ ನ್ಯಾಯವಿವರಣೆಯಲ್ಲಿ 'ವಜ್ರಶಬ್ದಸ್ಯೋದ್ಯತತ್ವಸ್ಯ ಚ ವಿಷ್ಣಾವೇವಾವಕಾಶಃ । ಉದ್ಯಮಿತ್ವಮೇವೋದ್ಯತತ್ವಮ್' ವಜ್ರಶಬ್ದ ಹಾಗೂ ಉದ್ಯತತ್ವಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಉದ್ಯಮಿತ್ವವೇ ಉದ್ಯತತ್ವವೆನಿಸುವುದರಿಂದ ಎಂದು ಹೇಳಿದ್ದಾರೆ.

**यत्तु काठकभाष्ये ''वज्रवद्भयदंचैव स्वधर्मस्यातिलंघने'' इति वज्रशब्दस्य गौणत्वमुक्तं तत्तावतापि तद्वाक्यस्य ब्रह्मपरत्वसिद्धेः । इह तु समन्वयसूत्रप्रतिज्ञात-मुख्यार्थत्वाय योग एवोक्त इति ॥**

ಆದರೆ ಕಾಠಕಭಾಷ್ಯದಲ್ಲಿ 'ವಜ್ರವದ್ಭಯದಂಚೈವ ಸ್ವಧರ್ಮಸ್ಯಾತಿಲಂಘನಾ' ಎಂಬುದಾಗಿ ವಜ್ರಾಯುಧದಂತೆ ಪರಮಾತ್ಮನೂ ಕೂಡ ಸ್ವಧರ್ಮವನ್ನು ಮೀರುವವರಿಗೆ ಭಯಂಕರನಾಗಿದ್ದಾನೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಇದರಿಂದ ವಜ್ರಶಬ್ದಕ್ಕೆ ಗೌಣಾರ್ಥವನ್ನು ಹೇಳಿದಂತಾಯಿತಲ್ಲವೇ ? ಎಂಬ ಆಶಂಕೆಗೆ ಅವಕಾಶವಿದೆ. ಆದರೆ ಗೌಣಾರ್ಥವನ್ನು ಸ್ವೀಕರಿಸಿದರೂ ವಾಕ್ಯವು ಬ್ರಹ್ಮಪರವಾಗುತ್ತದೆಂದು ಸಾಧಿಸುವುದೇ ಕಾಠಕಭಾಷ್ಯದ ಉದ್ದೇಶವಾಗಿದೆ. ಆದರೆ ಪ್ರಕೃತ ಸಮನ್ವಯ ಸೂತ್ರದಲ್ಲಿ 'ಸಂ' ಎಂಬ ಉಪಸರ್ಗದಿಂದ ಸಕಲ ಪದಗಳು ಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು ಹೇಳಲಾಗಿದೆ. ಅದಕ್ಕನುಗುಣವಾಗಿ ವಜ್ರಶಬ್ದಕ್ಕೆ ಯೌಗಿಕಾರ್ಥವನ್ನು ಇಲ್ಲಿ ಹೇಳಿದ್ದಾರೆ. ಆದ್ದರಿಂದ ಕಾಠಕಭಾಷ್ಯದಿಂದ ವಿರೋಧಕ್ಕೆ ಅವಕಾಶವಿಲ್ಲ.

**प्रकाशः –**

नन्वस्तु स्मार्तो योगश्श्रुतौ ग्राह्य इति । वज्रमुद्यतमित्यादौ ग्राह्य इति कुतः । ''यदाजिमीयुः'' इति वाक्योक्तो योगो यथा ''आज्यैः स्तुवत'' इति स्वप्रकरणगतशब्द एव गृह्यते तथात्राऽपि कस्मिंश्चित्स्वप्रकरणगत एव शब्दविशेषे गृह्यतामित्यत आह – **यदाजिमिति** ॥

ವಿವರಣೆ - ಶಂಕೆ - ಸ್ಮೃತಿಯಲ್ಲಿ ಹೇಳಲ್ಪಟ್ಟ ಯೋಗವನ್ನು ಶ್ರುತಿಯಲ್ಲಷ್ಟೇ ಸ್ವೀಕರಿಸಬಹುದು. 'ವಜ್ರಮುದ್ಯತಮ್' ಇತ್ಯಾದಿ ಶ್ರುತಿಯಲ್ಲಿ ಅದನ್ನು ಸ್ವೀಕರಿಸಬೇಕೆಂದು ಏಕೆ ಹೇಳುತ್ತೀರಿ? ಏಕೆಂದರೆ 'ಯದಾಜಿಮೀಯುಃ' ಎಂಬ ಶ್ರುತಿವಾಕ್ಯದಲ್ಲಿ 'ಆಜ್ಯ' ಶಬ್ದದ ಯೋಗವು ಹೇಳಲ್ಪಟ್ಟಿದೆ. ಇದನ್ನು ಅದೇ ಪ್ರಕರಣದಲ್ಲಿರುವ 'ಆಜ್ಯೈಃ ಸ್ತುವತೇ' ಎಂಬಲ್ಲಿ ಸ್ವೀಕರಿಸಲಾಗುತ್ತದೆ. ಹೊರತು, ಬೇರೆಲ್ಲೋ ಇರುವ ಆಜ್ಯಶಬ್ದದಲ್ಲಿ ಈ ನಿರ್ವಚನವನ್ನು ಸ್ವೀಕರಿಸುವುದಿಲ್ಲ. ಅದರಂತೆ ಪ್ರಕೃತ ವಜ್ರಶಬ್ದದ ನಿರುಕ್ತಿಯು ಯಾವ ಸ್ಮೃತಿ ಸಂದರ್ಭದಲ್ಲಿ ಹೇಳಲ್ಪಟ್ಟಿದೆಯೋ, ಅದೇ ಪ್ರಕರಣದಲ್ಲಿರುವ ಯಾವುದಾದರೂ ಶಬ್ದವಿಶೇಷದಲ್ಲಿ ಸ್ವೀಕರಿಸಬಹುದು ಹೊರತು, ಶ್ರುತಿಯಲ್ಲಿರುವ ವಜ್ರಶಬ್ದದಲ್ಲಿ ಅದನ್ನು ಅನ್ವಯ ಮಾಡುವುದು ತಪ್ಪಲ್ಲವೇ?

ಉತ್ತರ - ಈ ಶಂಕೆಗ 'ಯದಾಜಿಮೀಯುಃ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ज्योतिष्टोमीयस्तोत्रप्रकणविशेषस्थत्वादित्यर्थः – **होमविशेषेति** ॥ ''अश्वस्य पदे जुहोति'' इत्यश्वमेधप्रकरणे विहितत्वात्तत्रत्यपदहोमेनैव सम्बध्यते । नत्वन्येनेत्यर्थः ॥ **अनारभ्येति** ॥ किञ्चित्कर्मादिकं वाक्यविशेषं वा प्रक्रम्यापठितत्वादिति भावः ॥

'ಯದಾಜಿಮೀಯುಃ' ಎಂಬ ವಾಕ್ಯ ಜ್ಯೋತಿಷ್ಟೋಮಿಯ ಸ್ತೋತ್ರ ಪ್ರಕರಣದಲ್ಲೇ ಇರುವುದರಿಂದ, ಅಲ್ಲೇ ಇರುವ 'ಆಜ್ಯೈಃ ಸ್ತುವತೇ' ಎಂಬಲ್ಲಿ ಅನ್ವಯವನ್ನು ಹೊಂದುತ್ತದೆ ಎಂದರ್ಥ. ಉದಾಹರಣೆ - 'ಅಶ್ವಸ್ಯ ಪದೇ ಜುಹೋತಿ' ಎಂಬುದಾಗಿ ಅಶ್ವಮೇಧ ಪ್ರಕರಣದಲ್ಲಿ ಹೇಳಲಾಗಿದೆ. ಕುದುರೆಯ ಹೆಜ್ಜೆಯಲ್ಲಿ ಹೋಮಿಸಬೇಕೆಂದು ಈ ವಾಕ್ಯದ ಅಭಿಪ್ರಾಯ. ಇದೂ ಸಹ ಅಶ್ವಮೇಧಪ್ರಕರಣದಲ್ಲೇ ಇರುವ ಪದಹೋಮದಲ್ಲಿಯೇ ಅನ್ವಯವನ್ನು ಹೊಂದುತ್ತದೆ ಹೊರತು, ಬೇರೆಡೆ ಅನ್ವಯವನ್ನು ಹೊಂದುವುದಿಲ್ಲ.[೧] 'ಅನಾರಭ್ಯ ಅಧೀತತ್ವಾತ್' ಎಂದರೆ ಯಾವುದಾದರೂ ಕರ್ಮವನ್ನು ಅಥವಾ ವಾಕ್ಯವಿಶೇಷವನ್ನು ಅವಲಂಬಿಸಿ ಪಠಿತವಾಗದ್ದು ಎಂದರ್ಥ. ಪ್ರಕೃತ 'ಯದಾಜಿಮೀಯುಃ' ಎಂಬ ನಿರ್ವಚನವು ಮುಂದಿರುವ 'ಆಜ್ಯೈಃ ಸ್ತುವತೇ' ಎಂಬ 'ಆಜ್ಯ' ಶಬ್ದವನ್ನು ವಿವಕ್ಷಿಸಿ ಹೇಳಿರುವುದರಿಂದ, 'ಆರಭ್ಯಾಧೀತ' ಎನಿಸುತ್ತದೆ. ಆದರೆ 'ವರ್ಜನಾದ್ವಜ್ರಮುದ್ಯತೇ' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟ ವಜ್ರಶಬ್ದದ ನಿಷ್ಪತ್ತಿಯು ಯಾವುದೇ ಒಂದು ಪ್ರಕರಣವಿಶೇಷದ ಅರ್ಥಸಿದ್ಧಿಗಾಗಿ ಹೇಳಿದ್ದಲ್ಲ. ಸಾಮಾನ್ಯವಾಗಿ ವಜ್ರಶಬ್ದವನ್ನು ನಿರ್ವಚನ ಮಾಡಲಾಗಿದೆ. ಆದ್ದರಿಂದ ಇದು ಎಲ್ಲೆಡೆಯೂ ಅನ್ವಯವನ್ನು ಹೊಂದುತ್ತದೆ.

**प्रकाशः – होममात्रेणेति ।।** अत एव दशमाष्टमपादे ''अविशेषेण यच्छास्त्रमन्याय्यत्वाद्विकल्पस्य तत्सन्दिग्धमाराद्विशेषशिष्टंस्यात्'' इति नवमेऽधिकरणे ''यदाहवनीये'' इत्यस्य सामान्यत्वेन ''पदे जुहोति'' इति विशेषशास्त्रेण बाध उक्त इति भावः ।

ಆದ್ದರಿಂದಲೇ ಪೂರ್ವಮೀಮಾಂಸೆಯ 'ಅವಿಶೇಷಣ ಯಚ್ಛಾಸ್ತ್ರಮನ್ಯಾಯ್ಯತ್ವಾತ್ ವಿಕಲ್ಪಸ್ಯ ತತ್ ಸಂದಿಗ್ಧಮ್ ಆರಾದ್ವಿಶೇಷಶಿಷ್ಟಂಸ್ಯಾತ್' (೧೦-೮-೯)[೨] ಎಂಬ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದೆ.

(೧) ಅಗ್ನಿಯಲ್ಲಿ ದ್ರವ್ಯದ ಪ್ರಕ್ಷೇಪವೇ ಹೋಮವೆನಿಸುತ್ತದೆ. ಹಾಗಾದರೆ 'ಪದೇ ಜುಹೋತಿ' ಇತ್ಯಾದಿ ಸ್ಥಳದಲ್ಲಿ ಕುದುರೆ ಹೆಜ್ಜೆಯಿಟ್ಟಲ್ಲಿ ಹೋಮಿಸಬೇಕು ಎಂದು ಹೇಳಿದಾಗ, ಅಲ್ಲಿ ಅಗ್ನಿಯನ್ನು ಇಟ್ಟು ಹೋಮಿಸಬೇಕೋ? ಎಂಬ ಸಂಶಯವು ಬರುತ್ತದೆ. ಅದಕ್ಕಾಗಿ ಅಗ್ನಿಯಲ್ಲಿ ದ್ರವ್ಯದ ಪ್ರಕ್ಷೇಪವು ಹೋಮವೆನಿಸುವುದಿಲ್ಲ. ವಿಹಿತಸ್ಥಳದಲ್ಲಿ ಹವಿಸ್ಸಿನ ಪ್ರಕ್ಷೇಪವೇ ಹೋಮವೆನ್ನಬೇಕು. ಆದ್ದರಿಂದ ಕುದುರೆಯ ಹೆಜ್ಜೆ ಇಟ್ಟ ಸ್ಥಳದಲ್ಲಿ ದ್ರವ್ಯವನ್ನು (ಹವಿಸ್ಸನ್ನು) ಪ್ರಕ್ಷೇಪ ಮಾಡಿದರೆ ಸಾಕು. ಅಗ್ನಿಯಲ್ಲೇ ಹವಿಸ್ಸನ್ನು ಪ್ರಕ್ಷೇಪ ಮಾಡಬೇಕೆಂದೇನೂ ನಿಯಮವಿಲ್ಲ. ಹೀಗೆ ಮೀಮಾಂಸಕರು ವಿಹಿತಸ್ಥಳದಲ್ಲಿ ಹವಿಸ್ಸಿನ ಪ್ರಕ್ಷೇಪವನ್ನು ಹೋಮ ಎನ್ನುತ್ತಾರೆ.

(२) **भाट्टसङ्ग्रहः –**

**अथाष्टमं वर्त्महोमादिभिराहवनीयस्य बाधाधिकरणम् (सूत्राणि १६)**

**अविशेषेण यच्छास्त्रमन्याय्यत्वाद्विकल्पस्य तत्सन्दिग्धमाराद्विशेषशिष्टं स्यात् ।।९६।।**

पूर्ववैषम्येण शङ्कनात्सङ्गतिः । ज्योतिष्टोमे सोमक्रये श्रूयते ''पदे जुहोति'' इति । तथा हविर्धानप्रवर्तने ''वर्त्मनि जुहोति'' इति, ''गार्हपत्ये पत्नीसंयाजान् जुहोति'' इत्यादि । तत्र किं पदादिना ''आहवनीये जुहोति'' इत्यनारभ्यश्रुताहवनीयस्य बाधोऽस्ति, उत विकल्प इति **सन्देहे**, सामान्यविशेषशास्त्रयोस्तुल्यबलत्वाद्विकल्प इति **पूर्वपक्षः** ।

ಕಂಪನಾಧಿಕರಣ (೧-೩-೧೦)

'ಯದಾವಹನೀಯೇ' ಜುಹೋತಿ ಎಂಬುದು ಎಲ್ಲಾ ಹೋಮಗಳನ್ನು ಆಹವನೀಯಾಗ್ನಿಯಲ್ಲೇ ಮಾಡಬೇಕೆಂದು ಸಾಮಾನ್ಯವಾಗಿ ವಿಧಾನ ಮಾಡುತ್ತಿದೆ. ಆದರೆ 'ಪದೇ ಜುಹೋತಿ' ಎಂಬ ವಾಕ್ಯವು ಇದಕ್ಕೆ ಅಪವಾದವಾಗಿ ಆಹವನೀಯಾಗ್ನಿಯನ್ನು ಬಿಟ್ಟು ಕುದುರೆ ಹೆಜ್ಜೆ ಇಟ್ಟ ಸ್ಥಳದಲ್ಲಿ ಹೋಮಿಸಬೇಕೆಂದು ವಿಧಾನ ಮಾಡುತ್ತಿದೆ. ಸಾಮಾನ್ಯವಚನಕ್ಕೆ ವಿಶೇಷವಚನದಿಂದ ಬಾಧವನ್ನು ಹೇಳಬಹುದಾದ್ದರಿಂದ, ಆಹವನೀಯಾಗ್ನಿಯನ್ನು ಬಿಟ್ಟು ಪದದಲ್ಲಿಯೇ ಹೋಮ ಮಾಡಬೇಕೆಂದು ಈ ಅಧಿಕರಣದಲ್ಲಿ ತೀರ್ಮಾನಿಸಲಾಗಿದೆ. ಆದ್ದರಿಂದ 'ಆಹವನೀಯೇ ಜುಹೋತಿ' ಎಂಬ ವಾಕ್ಯವು ಅನಾರಭ್ಯಾಧೀತ-ವಾಗುವುದರಿಂದ ಸಕಲ ಹೋಮಗಳಲ್ಲಿ ಅನ್ವಯವನ್ನು ಹೊಂದುವಂತೆ 'ವರ್ಜನಾದ್ವಜ್ರಮ್' ಎಂಬ ನಿರ್ವಚನವೂ ಕೂಡ ಅನಾರಭ್ಯಾಧೀತವಾಗಿರುವ ಕಾರಣ ಶ್ರುತಿಯಲ್ಲೆಲ್ಲೆಡೆಯೂ ಇರುವ ವಜ್ರಶಬ್ದವು ಅನ್ವಯವನ್ನು ಹೊಂದುತ್ತದೆ.

**प्रकाशः –** नन्‌ तृतीयस्याद्यपादे ''गुणानां च परार्थत्वादसम्बन्धस्समत्वात्स्यात्'' इति द्वादशेऽधिकरणे शाबरभाष्ये शास्त्रदीपिकायां च ''यदाहवनीय'' इति वाक्यं पवमानेष्टिसन्निधावाम्नायत इति मत्वा पवमानेष्टीनामाहवनीयाद्यग्निनिष्पादकत्व-माधानसमकक्षतया प्रतिपादितम् । तत्कथमनारभ्याधीतेत्युक्तिः ।

सामान्यशास्त्रस्य विशेषशास्त्रेण ''ऐन्द्र्या गार्हपत्यम्'' इति शास्त्रेण मन्त्रलिङ्गकल्प्यशास्त्रस्येव, शरशास्त्रेण कुशप्रापकशास्त्रस्येव च मन्थरगामिनः शीघ्रगामिना बाध एव । न विकल्प इति वाच्यम् । लिङ्गकल्प्यस्य चोदकशास्त्रस्य च द्वयोः कल्प्यत्वेन प्रत्यक्षश्रुतैन्द्रीशरशास्त्राभ्यां बाधेऽपिह सामान्यविशेषास्त्रयोर्द्वयोरपि प्रत्यक्षत्वेन शीघ्रमन्थरभावकृतविशेषाभावा-ज्जुहोतिशब्दाविशेषेण विशेषेष्वप्याहवनीयस्य विहिततया व्रीहियववदेकविषयत्वात्पूर्वत्र विकल्पाभावेपीह विकल्पस्यैव युक्तत्वादिति । **सिद्धान्तस्तु,** होमसामान्ये श्रुतस्याहवनीयस्य पत्नीसंयाजादिहोमविशेषु लक्षणयैव प्राप्तिः । न श्रुत्या । तथा च सामान्यशास्त्रेण यात्पत्नीसंयाजादिविशेषेषु लक्षणयाऽऽहवनीयः प्राप्यते तावदेव गार्हपत्यादिशास्त्रं श्रुत्योपात्तपत्नी संयाजादिषु गार्हपत्यं प्रापयदाहवनीयं रुणद्धीति विशेषेण सामान्यस्य बाधः । किञ्च सामान्यशास्त्रं विशेषशास्त्रादन्यत्र सावकाशम् । विशेषशास्त्रं तु निरवकाशम्। अतोऽपि तेन तस्य बाधो, न विकल्पः । तदाह **सूत्रे, अविशेषेण यच्छास्त्रं** सामान्यविषयं यच्छास्त्रं तस्यारात् दूरे **विशेषशिष्टं विशेषशास्त्रं** स्यात् । विशेषशास्त्रविषये सामान्यशास्त्रं न स्यादिति यावत् । कुतः ? **संदिग्धं हि तत्** सामान्यशास्त्रं विशेषविषयं भवति न वेति संदेहास्पदम् । अतो निःसन्दिग्धविशेषशास्त्रापेक्षया विलम्बितप्रवृत्तिकञ्च । नच विलम्ब्यापि प्रवर्ततामिति वाच्यम् । **विकल्पस्यान्याय्यत्वादिति । फलं तु,** पदादावेव विशेषहोमानुष्ठानम् ।

**इत्यष्टमं वर्त्महोमादिभिराहवनीयस्य बाधाधिकरणम् (सूत्रम् १६)**

ಪರಿಪೂರ್ಣಚಂದ್ರಿಕಾ

ಆಶಂಕೆ - 'ಗುಣಾನಾಂ ಚ ಪರಾರ್ಥತ್ವಾದಸಂಬಂಧಃ ಸಮತ್ವಾತ್ ಸ್ಯಾತ್' (೩-೧-೧೨)[1] ಈ ಪೂರ್ವಮೀಮಾಂಸೆಯ ಈ ಅಧಿಕರಣವನ್ನು ಶಾಬರಭಾಷ್ಯ ಹಾಗೂ ಶಾಸ್ತ್ರದೀಪಿಕಾ ಗ್ರಂಥಗಳು ಹೀಗೆ ವಿಚಾರ ಮಾಡಿವೆ -

'ಪವಮಾನೇಷ್ಟಿ' ಪ್ರಕರಣದಲ್ಲಿ 'ಯದಾಹವನೀಯೇ ಜುಹೋತಿ' ಎಂಬ ವಾಕ್ಯವಿದೆ. ಆದ್ದರಿಂದ ಪವಮಾನೇಷ್ಟಿಗೆ ಮಾತ್ರ ಆಹವನೀಯಹೋಮವು ಸಂಬಂಧಪಟ್ಟಿದೆ. ಹಾಗಾಗಿ ಆಹವನೀಯ ಹೋಮವು ಆರಭ್ಯಾಧೀತವೇ ಆಯಿತು. ಏಕೆಂದರೆ ಆಹವನೀಯಾದಿಗಳು ಸಂಸ್ಕೃತಾಗ್ನಿಕವಾದ್ದರಿಂದ ಅಗ್ನ್ಯಾಧಾನವು ಆಹವನೀಯಾದಿಗಳಿಗೆ ನಿಷ್ಪಾದಕವಾಗಿದೆ. ಪ್ರಕೃತ ಪವಮಾನೇಷ್ಟಿಯಲ್ಲಿ 'ಯದಾಹವನೀಯೇ ಜುಹೋತಿ' ಎಂದು ಹೇಳಿದ್ದು, ಆಹವನೀಯದ ನಿಷ್ಪತ್ತಿಯ ಅನಂತರ ಹೇಳಿದ್ದಲ್ಲ. ಹೊರತಾಗಿ, ಆಹವನೀಯ ನಿಷ್ಪತ್ತಿಗೋಸ್ಕರ ಹೇಳಲಾಗಿದೆ. ಅಂದರೆ ಮೊದಲು 'ಆಹವನೀಯೇ ಜುಹೋತಿ' ಎಂದು ಹೇಳಿದ್ದು

(१) **भाट्टसङ्ग्रहः —**

**अथ द्वादशं गुणानां मिथोऽसंबन्धाधिकरणम्**

**गुणानाञ्च परार्थत्वादसम्बन्धः समत्वात् स्यात् ॥२२॥**

पूर्ववैषम्येण शङ्कनात् **सङ्गतिः** । आधानप्रकरणे दारुपात्रं होमार्थवच्छ्रूयते 'वारणो यज्ञावचरो, वैकङ्कतो यज्ञावचरः' इति । यज्ञोऽवचर्यते अनुष्ठीयत इति यज्ञावचरो यज्ञपात्रम् । जातावेकवचनम् । **वारणवैकङ्कतशब्दौ** दारुविशेषविकारावाचिनौ । तानि किमाधानाङ्ग-पवमानेष्ट्यङ्गम्, उत सर्वयज्ञाङ्गं इति **सन्देहः** । उपवीतस्य सामधेन्यङ्गत्वाभावेऽपि वारणादिपात्राणि प्रकरेणानऽधानेऽन्वितानि सन्ति तत्र प्रयोजनाभावात् 'अनार्थक्यात्तदङ्गेषु' इत्युक्तन्यायात् तदङ्गपवमानेष्टिद्रव्यभूतेषु त्रिषु हिविष्षु निविशन्त इति **प्राप्तम्** । आधानस्य द्वितीयासंयुक्ताग्निसंस्कारतया फलवत्त्वेन तत्सन्निधौ 'प्रजापतिर्वाचः सत्यमपश्यत्' इत्यनुवाके 'त्रीणि हर्वींषि निर्वपति, अग्नये पवमानाय अग्नये पावकाय अग्नये शुचये' इत्याम्नातानामफलानां पवमानेष्टीनां 'फलवत्सन्निधावफलं तदङ्गम्' इति न्यायेनाऽधानाङ्गत्वादिति । **सिद्धान्तस्तु** अग्निमुद्दिश्याऽधानं यथा विहितं तथा पवमानहर्वींष्यपि । 'यदाहवनीये जुहोति, तेन सोऽस्याभीष्टः प्रीतः' इति पवमानेष्टि-सन्निधावाम्नातस्याहवनीयस्य द्वितीयार्थसप्तम्यन्ताऽहवनीयपदबोध्यस्योद्देशने पवमानहविर्होम विधानादग्निसंस्कारात्वेन विहितानां पवमानेष्टीनामाधानेन सह नास्त्यङ्गाङ्गिभावः । किन्तु समप्राधान्यमेवेति विनियोजकप्रकरणाभावात् 'यज्ञावचरः' इति वाक्येन दर्शपूर्णमासादि-सर्वयज्ञाङ्गानि पात्राणीति । यथा हि **सूत्रम्, गुणानां** पवमानहविषां **परार्थत्वात्** अग्न्यर्थत्वेनाऽधानसमत्वात् **असम्बन्धः** आधानेन अङ्गत्वेन सम्बन्धो न स्यादिति । **फलन्तु,** पवमानेष्ट्यङ्गत्वसर्वयज्ञाङ्गत्वरूपं **पूर्वोत्तरपक्षयोः** ।

**इति द्वादशं गुणानां मिथोऽसम्बन्धाधिकरणम्**

ಕಂಪನಾಧಿಕರಣ (೧-೩-೧೦)

ಭಾವಿಸಂಜ್ಞಾಕರಣಾಭಿಪ್ರಾಯದಿಂದ. ಆದ್ದರಿಂದ ಅನಾರಭ್ಯಾಧೀತವೆಂದು ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ಎಲ್ಲಾ ಹೋಮಗಳಿಗೂ ಇದು ಸಂಬಂಧಪಟ್ಟಿದೆ ಎಂದು ಹೇಳಲು ಹೇಗೆ ಸಾಧ್ಯ? ಪವಮಾನೇಷ್ಟಿಯಲ್ಲಿ ಆಧಾನವು ಹೇಗೆ ಆಹವನೀಯಾಗ್ನಿಗೆ ನಿಷ್ಪಾದಕವೋ, ಅದರಂತೆ ಈ ಹೋಮವೂ ಕೂಡ ಆಹವನೀಯಾಗ್ನಿಗ ನಿಷ್ಪಾದಕವಾಯಿತು ಎಂದು ಲಭ್ಯವಾಯಿತಲ್ಲವೇ?

**प्रकाशः** – सत्यम् ।

अनारभ्यविधानेन सत्यं नाग्न्यर्थता भवेत् ।
तत्तुल्यं वाक्यमस्त्यन्यत्पवमानेष्टिसन्निधौ ।।

इत्युक्तया वाक्यद्वयसत्त्वोपगमेनानारभ्याधीते विवादाभावात् ।

ಸಮಾಧಾನ - 'ಯದಾಹವನೀಯೇ ಜುಹೋತಿ' ಎಂಬ ವಾಕ್ಯವು ಎರಡು ಕಡೆ ಉಕ್ತವಾಗಿದೆ. ಪವಮಾನೇಷ್ಟಿ ಪ್ರಕರಣದಲ್ಲಿರುವ 'ಆಹವನೀಯೇ ಜುಹೋತಿ' ಎಂಬ ವಾಕ್ಯವು ಆರಭ್ಯಾಧೀತವಾಗಿದೆ. ಬೇರೆ ಕಡೆ ಇರುವ 'ಆಹವನೀಯೇ ಜುಹೋತಿ' ಎಂಬ ವಾಕ್ಯವು ಅನಾರಭ್ಯಾಧೀತವಾಗಿದೆ. ಪ್ರಕೃತ ಗ್ರಂಥಕಾರರು ವಿವಕ್ಷಿಸಿರುವ ವಾಕ್ಯವು. ಬೇರೆಡೆ ಉಕ್ತವಾದದ್ದೆಂದು ತಿಳಿಯಬೇಕು. ಆದ್ದರಿಂದಲೇ ಪೂರ್ವಮೀಂಮಾಸಕರ ಶ್ಲೋಕ ಹೀಗಿದೆ -

ಅನಾರಭ್ಯವಿಧಾನೇನ ಸತ್ಯಂ ನಾಗ್ನ್ಯರ್ಥತಾ ಭವೇತ್ ।
ತತ್ತುಲ್ಯಂ ವಾಕ್ಯಮಸ್ತ್ಯನ್ಯತ್ಪವಮಾನೇಷ್ಟಿಸನ್ನಿಧೌ ॥

'ಆಹವನೀಯೇ ಜುಹೋತಿ' ಎಂಬ ಸಾಮಾನ್ಯವಾಕ್ಯವು ಆಹವನೀಯಾಗ್ನಿಗೆ ನಿಷ್ಪಾದಕವಲ್ಲ. ಇದು ಅನಾರಭ್ಯಾಧೀತವಾಕ್ಯವೆನಿಸಿದೆ. ಆದರೆ ಈ ವಾಕ್ಯಕ್ಕೆ ತುಲ್ಯವಾದ ಮತ್ತೊಂದು ವಾಕ್ಯವು ಪವಮಾನೇಷ್ಟಿ ಪ್ರಕರಣದಲ್ಲಿ ಶ್ರುತವಾಗಿದೆ. ಇದು ಅಗ್ನಿಗೆ ನಿಷ್ಪಾದಕವಾದ್ದರಿಂದ ಆರಭ್ಯಾಧೀತವಾಗಿದೆ.

ಹೀಗೆ ಹೇಳಿದ್ದರಿಂದ 'ಅನಾರಭ್ಯಾಧೀತ' ವಿಷಯದಲ್ಲಿ ಯಾವುದೇ ವಿವಾದವಿರುವುದಿಲ್ಲ.

**प्रकाशः** – अत एव तार्तीये सप्तमे पादे ''ते सर्वार्थाः प्रयुक्तत्वादग्नश्च स्वकालत्वात्'' इत्येकोनविंशेऽधिकरणे ''यदाहवनीये'' इत्यस्य सर्वहोमार्थत्वमुक्तम् ।

ಆದ್ದರಿಂದಲೇ 'ತೇ ಸರ್ವಾರ್ಥಾಃ ಪ್ರಯುಕ್ತತ್ವಾದಗ್ನಶ್ಚ ಸ್ವಕಾಲತ್ವಾತ್' (೩-೭-೧೯)

---

(१) **भाट्टसङ्ग्रहः** –

**अथैकोनविंशमाध्वर्यवादिष्वेवाध्वर्य्वादीनां कर्तृतानियमाधिकरणम्**

**विंशमग्नेः प्रकृतिविकृतिसर्वार्थताधिकणञ्च (सूत्राणि ३९-४०)**

**ते सर्वार्थाः प्रयुक्तत्वात्, अग्नयश्च स्वकालत्वात् ।।३९।।**

**(तत्संयोगात्कर्मणो व्यवस्था स्यात्संयोगस्यार्थवत्त्वात् ।।४०।।)**

ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ 'ಯದಾವಹನೀಯೇ ಜುಹೋತಿ' ಎಂಬುದನ್ನು ಸಕಲ ಹೋಮಗಳ ನಿಷ್ಪಾದನೆಗಾಗಿ ವಿಧಿಸಲಾಗಿದೆ.

**प्रकाशः** – नन्वथापि श्रुतिस्मृत्योर्विरोधे श्रुतिमूलकत्वेन स्मृतेर्दुर्बलतयोपजीव्यश्रुतिबाधकत्वायोगस्य पूर्वतन्त्रे ''धर्मस्य शब्दमूलत्वादशब्दमनपेक्षं स्यात्'' इत्यादौ प्रथमे निर्णीतत्वेन न स्मृत्यनुसारेण वज्रश्रुते रूढार्थत्याग इत्याशंक्य निराह – यद्यपीति ॥

यदर्थमतीतैः **शास्त्रफल**मित्यादिभिरेकादशनयैर्नानाकतृसमावेशः क्रतुषु चिन्तितस्तदिसमारभ्यत इत्यवसर**सङ्गतिः** । तेषामध्वर्युप्रभृतीनां कार्यं लिङ्गप्रकरणाभ्यामव्यवस्थितमुत समाख्यया व्यवस्थितमिति **सन्देहः** । सर्वेषां कर्मकृतौ शक्तिसत्त्वाज्ज्योतिष्टोमादिक्रतुप्रकरणस्य सर्वसाधारण्यात्समाख्यातो बलवद्भ्यां लिङ्गप्रकरणाभ्यामव्यवस्थितं कार्यम् । आध्वर्यवादिसमाख्या तु पक्षे प्राप्तानुवाद इति **प्राप्तम्** । तदाह सूत्रे । ते अध्वर्युप्रभृतयः **सर्वार्थाः** । कुत? **प्रयुक्तत्वात्** सर्वकार्यार्थं वृतत्वादिति । एवं स्थिते पूर्वपक्षे, **तत्संयोगात्कर्मणो व्यवस्था स्यात् संयोगस्यार्थवत्त्वादिति** सूत्रेण सिद्धान्तयिष्यन् सर्वार्थपदानुवृत्तिलिप्सया मध्ये **चिन्तान्तरमारभते** । **अग्नयश्च स्वकालत्वादिति** । अनारभ्यवादेन 'यदाहवनीये जुहोति' इति विहिताग्नयः किं प्रकृतावाम्नातहोमार्था उत प्रकृतिविकृत्युभयत्राऽम्नातहोमार्था इति **सन्देहे** पूर्वत्र षष्ठांघ्र्याद्यनये **सर्वार्थमप्रकरणादि**त्यत्रोक्तदिशा जुह्वाः पर्णमयत्वं यथा एवं प्रकृत्याम्नातहोमार्था इति **प्राप्ते सिद्धान्तः**. **अग्नयश्चेत्यादि** । **अग्नयश्च सर्वार्था** इत्यनुषङ्गः । **स्वकालत्वात्** स्वतन्त्रत्वाम्नानात् अप्रकरणाधीतत्वादिति यावदिति । नचैवं पर्णमयत्वस्य विकृत्यर्थत्वे तत्रोक्तद्विरुक्तिदोष इवात्रापि द्विरुक्तिदोषप्रसक्तिः । वैषम्यात् । विकृतिषु सर्वत्रातिदेशतो जुहूप्राप्तिमपेक्ष्य पर्णताविधौ ह्यतिदेशतो जुह्वा सह पर्णताया अपि प्राप्त्या पुनरनेन पर्णतविधौ द्विरुक्तिदोष उक्तः । इह तु कचिद्विकृतिषु 'चतुरवत्तं जुहोति' इति प्रकृतौ विहितस्य होमस्यातिदेशतोऽग्न्याधारतस्यैव प्राप्त्या द्विरुक्तिदोषापातेन तदनुप्रवेशायोगेपि, यत्र सांग्रहणेष्ट्यादौ 'आमनमस्यामनस्य देवा इति तिस्र आहुतीर्जुहोति' इति द्वारभूतहोमस्य प्रकृताविवोपदेशतः प्राप्तिस्तत्र होमप्राप्त्यर्थमतिदेशानपेक्षणात् पश्चादवतरतोप्यतिदेशस्य प्रथमत एवोपदेशसिद्धाऽहवनीयप्रापणविमुखत्वात् तद्विकृतिसाधारण्येपि द्विरुक्तिदोषाभावान्न प्रकृतिमात्रसाधारण्यम् । किन्तूक्तदिशोऽभयसाधारण्यमिति । **फलन्तु** आहवनीयाश्रितगुणकामप्रसिः ।

**इत्येकोनविंशमाध्वर्यवादिष्वेवाध्वर्य्वादीनां कर्तृतानियमाधिकरणम्**

**विंशमग्नेः प्रकृतिविकृतिसर्वार्थताधिकरणञ्च**

ಕಂಪನಾಧಿಕರಣ (೧-೩-೧೧)

ಆಶಂಕೆ - ಶ್ರುತಿ ಹಾಗೂ ಸ್ಮೃತಿಗಳಿಗೆ ಪರಸ್ಪರ ವಿರೋಧ ಬಂದಾಗ ಸ್ಮೃತಿಯು ಶ್ರುತಿಗಿಂತಲೂ ದುರ್ಬಲವಾಗಿರುತ್ತದೆ. ಆದ್ದರಿಂದ ಶ್ರುತಿಯು ಹೇಳುವಂತೆ ಸ್ಮೃತಿಯನ್ನು ವ್ಯಾಖ್ಯಾನ ಮಾಡಬೇಕು. ಶ್ರುತಿಯನ್ನು ಉಪಜೀವಿಸಿರುವ ಸ್ಮೃತಿಯು ಶ್ರುತಿಗೆ ಬಾಧಕವಾಗಲು ಸಾಧ್ಯವಿಲ್ಲ. ಈ ವಿಚಾರವನ್ನು ಪೂರ್ವಮೀಮಾಂಸೆಯ 'ಧರ್ಮಸ್ಯ ಶಬ್ದಮೂಲತ್ವಾದಶಬ್ದಮನಪೇಕ್ಷಂ ಸ್ಯಾತ್' ಎಂಬ ಪ್ರಥಮಾಧ್ಯಾಯದಲ್ಲಿ ನಿರ್ಣಯಿಸಲಾಗಿದೆ. ಹೀಗಿರುವಾಗ 'ವರ್ಜನಾದ್ವಜ್ರಮುಜ್ಯತೇ' ಎಂಬ ಸ್ಮೃತಿಗೆ ಅನುಸಾರಿಯಾಗಿ 'ವಜ್ರಮುದ್ಯತಮ್' ಎಂಬ ಸ್ಮೃತಿಯನ್ನು ವ್ಯಾಖ್ಯಾನ ಮಾಡಿ ರೂಢಾರ್ಥವನ್ನು ತ್ಯಾಗ ಮಾಡುವುದು ತಪ್ಪಲ್ಲವೇ?

ಉತ್ತರ - ಈ ಆಶಂಕೆಯನ್ನು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಸ್ಮೃತಿಯ ವಿರುದ್ಧವಿಷಯದಲ್ಲಿ ಶ್ರುತಿಯ ಪ್ರವೃತ್ತಿಯಿರುವುದಿಲ್ಲ. ಮತ್ತು ಶ್ರುತ್ಯರ್ಥನಿರ್ಣಾಯಕವಾದ್ದರಿಂದ ಶ್ರುತಿಗೆ ಅನುಗ್ರಾಹಕವಾಗಿದೆ. ಮತ್ತು ಮುಂದಿನ ಜ್ಯೋತಿರಧಿಕರಣದಲ್ಲಿ ಉದಾಹರಿಸುವ ಶ್ರುತಿಮೂಲಕವೂ ಆಗಿದೆ. ಈ ಮೂರು ಕಾರಣಗಳಿಂದ ಪ್ರಕೃತ 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಗೆ ಅನುಕೂಲವಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಿದ್ದಾರೆ.

**प्रकाशः – श्रुतीति ।।** वृजी वर्जन इत्यस्माद्रप्रत्यये ऋकारस्य चाकारे वज्रमिति सिद्धेर्यौगिकार्थस्यापि श्रुत्यर्थत्वेन तद्विरुद्धप्रतिपादनाभावादित्यर्थः ।।

ಶ್ರುತಿಯಲ್ಲಿರುವ ವಜ್ರಶಬ್ದವೂ ಕೂಡ ಯೌಗಿಕವೇ ಆಗಿದೆ. 'ವೃಜೀ ವರ್ಜನೇ' ಎಂಬ ಧಾತುವಿನ ಮೇಲೆ 'ರ' ಪ್ರತ್ಯಯವು ಬಂದಾಗ 'ವಜ್ರ' ಎಂದಾಗುತ್ತದೆ. 'ವರ್ಜ' ಎಂಬಲ್ಲಿರುವ 'ಋ'ಕಾರಕ್ಕೆ ರೇಫ ಬಂದಾಗ 'ವಜ್ರ' ಎಂಬ ಶಬ್ದವು ನಿಷ್ಪನ್ನವಾಗಿದೆ. ಹೀಗೆ ಶ್ರುತಿಯಲ್ಲಿರುವ ವಜ್ರಶಬ್ದವು ಯೌಗಿಕಾರ್ಥವಾದ್ದರಿಂದ, ಸ್ಮೃತಿಯು ತದ್ವಿರುದ್ಧವಾದ ಅರ್ಥವನ್ನೇನೂ ಪ್ರತಿಪಾದನೆ ಮಾಡುತ್ತಿಲ್ಲ.

**प्रकाशः – श्रुत्यन्तरमिति ।।** ''एष इमं लोकमभ्यार्चत्'' इत्युपक्रम्य ''तावा एतास्सर्वा ऋचस्सर्वे वेदास्सर्वे घोषा एकैव व्याहृतिः प्राण एव'' इति सर्वशब्दानां योगवृत्त्या भगवत्परत्वप्रतिपादकं श्रुत्यन्तरम् । तन्मूलत्वसम्भवादित्यर्थः ।। **बाधिकेति ।।** स्मृतिरित्यन्वयः ।

ಮತ್ತು ವಜ್ರಶ್ರುತಿಯು ಶ್ರುತ್ಯಂತರ ಮೂಲಕವೇ ಆಗಿದೆ. 'ಏಷ ಇಮಂ ಲೋಕಮಭ್ಯಾರ್ಚತ್' ಎಂದು ಪ್ರಾರಂಭವಾಗಿ 'ತಾವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ' ಎಂಬ ಶ್ರುತಿಯು ಸಕಲಶಬ್ದಗಳಿಗೆ ಯೌಗಿಕಾರ್ಥವನ್ನು ಹೇಳುವ ಮೂಲಕ, ಭಗವತ್ಪರತ್ವವನ್ನು ಸಮರ್ಥನೆ ಮಾಡುತ್ತಿದೆ. ಇದರಿಂದ ವಜ್ರಶಬ್ದವೂ ಕೂಡ ಯೌಗಿಕವೆಂದು ಭಗವತ್ಪರವೆನಿಸುತ್ತದೆ. ಈ

ಶ್ರುತಿಯ ಆಧಾರದಿಂದ ಸ್ಮೃತಿಯು ಯೌಗಿಕಾರ್ಥವನ್ನು ಹೇಳುವ ಕಾರಣ ಶ್ರುತಿಮೂಲಕವೇ ಆಗಿದೆ. 'ಬಾಧಿಕಾ' ಎಂಬಲ್ಲಿ ಸ್ಮೃತಿಯೆಂಬುದನ್ನು ಅನ್ವಯ ಮಾಡಿಕೊಳ್ಳಬೇಕು.

**प्रकाशः** – ननु कर्मनिर्णयटीकायां ''रूढियोगौ विना कश्चिन्नैवार्थो वेदगो भवेत्'' इत्यस्य ''न केवलं रूढः । नापि केवलं यौगिकोऽस्तीत्यर्थ'' इतीतरेतरद्वंद्वमाश्रित्य रूढियोगरूपवृत्तिद्वयसमुच्चयपरत्वेन व्याख्यातत्वात्कथं केवलो यौगिको वैदिकवज्रशब्दो व्याख्यायत इत्यतष्टीकोक्तमपि समाधिमाह – नचेति ।।

ಆಶಂಕೆ - ಕರ್ಮನಿರ್ಣಯ ಟೀಕೆಯಲ್ಲಿ 'ರೂಢಿಯೋಗೌ ವಿನಾ ಕಶ್ಚಿತ್‌ನ್ನೈವಾರ್ಥೋ ವೇದಗೋ ಭವೇತ್' ಎಂಬ ಬ್ರಹ್ಮತರ್ಕದ ಮಾತನ್ನು ಉಲ್ಲೇಖಿಸಿ, ಹೀಗೆ ವ್ಯಾಖ್ಯಾನ ಮಾಡಿದ್ದಾರೆ - 'ನ ಕೇವಲಂ ರೂಢಃ । ನಾಪಿ ಕೇವಲಂ ಯೌಗಿಕೋಽಸ್ತೀತ್ಯರ್ಥಃ' ಎಂದು. ಅಂದರೆ ವೇದದಲ್ಲಿ ರೂಢಾರ್ಥ ಮತ್ತು ಯೌಗಿಕಾರ್ಥಗಳನ್ನು ಬೇರೆ ಗೌಣಾರ್ಥವನ್ನಾಗಲೀ, ಲಾಕ್ಷಣಿಕಾರ್ಥವನ್ನಾಗಲೀ ಸ್ವೀಕರಿಸಬಾರದು ಎಂಬ ಬ್ರಹ್ಮತರ್ಕದ ಮಾತಿಗೆ ವ್ಯಾಖ್ಯಾನ ಮಾಡುತ್ತಾ ಕೇವಲ ರೂಢಾರ್ಥವನ್ನು ಹೇಳಬಾರದು. ಕೇವಲ ಯೌಗಿಕಾರ್ಥವನ್ನು ಹೇಳಬಾರದು. 'ರೂಢಿಯೋಗೌ' ಎಂಬಲ್ಲಿ ಇತರೇತರದ್ವಂದ್ವಸಮಾಸವನ್ನು ಮಾಡಿದಾಗ ಪರಸ್ಪರ ಸಾಪೇಕ್ಷಿತವಾದ ರೂಢಿಯೋಗವೆಂಬ ವೃತ್ತಿಯನ್ನು ವೈದಿಕಶಬ್ದಗಳಿಗೆ ಹೇಳಬೇಕೆಂದು ವ್ಯಾಖ್ಯಾನ ಮಾಡಿದ್ದಾರೆ. ಅಂದರೆ ವೇದಗಳಲ್ಲಿರುವ ಯಾವುದೇ ಶಬ್ದಗಳನ್ನು ತೆಗೆದುಕೊಂಡರೂ ರೂಢಿಸಹಿತವಾದ ಯೋಗವನ್ನಾಗಲೀ, ಯೋಗಸಹಿತವಾದ ರೂಢಿಯನ್ನಾಗಲೀ ಹೇಳಬೇಕು. ಬೇರೆ ವೃತ್ತಿಯನ್ನು ಹೇಳಬಾರದು ಎಂದು ಇದರ ಅಭಿಪ್ರಾಯ. ಹೀಗಿರುವಾಗ ಪ್ರಕೃತ ನೀವು ವೈದಿಕವಾದ ವಜ್ರಶಬ್ದಕ್ಕೆ ಕೇವಲ ಯೌಗಿಕಾರ್ಥವನ್ನು ಹೇಗೆ ಸ್ವೀಕರಿಸುತ್ತೀರಿ?

ಸಮಾಧಾನ - ಈ ಆಶಂಕೆಗೆ ಟೀಕೆಯಲ್ಲಿ ಹೇಳಿದ ಸಮಾಧಾನವನ್ನೇ 'ನಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಇಲ್ಲಿಯೂ ಸಹ ರೂಢ್ಯರ್ಥದ ಜೊತೆಗೆ ವೈದಿಕಾರ್ಥವನ್ನು ಹೇಳಲಾಗಿದೆ ಎಂದಭಿಪ್ರಾಯ.

**प्रकाशः** – ''विद्वद्रूढिर्वैदिका स्यात्सा योगादेव लभ्यत'' इत्युक्तेस्स्मृतौ योगोक्त्यैव सा लब्धा । ''आयुधानामहं वज्रं वज्रं प्रहरणोत्तमम्'' इत्यादिप्रयोगाच्चेति भावः ।।

'ವಿದ್ವದ್ರೂಢಿರ್ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ' ಎಂಬ ಶ್ರೀಮದಾಚಾರ್ಯರ ಮಾತಿನಿಂದ ಸ್ಮೃತಿಯಲ್ಲಿ ಹೇಳಿದ ಯೋಗಾರ್ಥದಿಂದಲೇ ವಿದ್ವದ್ರೂಢಿಯೂ ಕೂಡ ಲಭ್ಯವಾಯಿತು. 'ಆಯುಧಾನಾಮಹಂ ವಜ್ರಂ ವಜ್ರಂ ಪ್ರಹರಣೋತ್ತಮಮ್' ಎಂಬಲ್ಲಿ ಸ್ಪಷ್ಟವಾಗಿ ಮಹಾವಿಷ್ಣುವನ್ನೇ ವಜ್ರ ಎನ್ನಲಾಗಿದೆ. ಇದರಿಂದ ರೂಢಿಯನ್ನೂ ಕೂಡ ತೋರಿಸಿದಂತಾಯಿತು.

ಕಂಪನಾಧಿಕರಣ (೧-೩-೧೧)

**प्रकाशः – स्मृत्यादेरिति ।।** यत्र वाचनिको योगस्तत्रैव रूढित्यागेनान्यार्थ-कल्पना । नान्यत्र । येनाव्यवस्था स्यादित्यर्थः । एतेनोपनिषद्भाष्यादिषु स्मार्तयोगेन श्रुत्यर्थनिर्णयोऽपि समर्थितो द्रष्टव्यः ।

ಎಲ್ಲಿ ವಾಚನಿಕವಾದ ಯೋಗವಿರುತ್ತದೋ, ಅಲ್ಲಿ ಮಾತ್ರ ರೂಢ್ಯರ್ಥವನ್ನು ಬಿಟ್ಟು ಅನ್ಯಾರ್ಥವನ್ನು ಕಲ್ಪನೆ ಮಾಡಬೇಕು. ಬೇರೆ ಕಡೆ ಹಾಗೆ ಮಾಡಬಾರದು. ಆದ್ದರಿಂದ ಈ ಶಬ್ದವು ಇದೇ ಅರ್ಥವನ್ನು ಪ್ರತಿಪಾದನೆ ಮಾಡುತ್ತದೆಂಬ ವ್ಯವಸ್ಥೆಯು ಹಾಳಾಗುವುದಿಲ್ಲ. ಇದರಿಂದ ಉಪನಿಷದ್ಭಾಷ್ಯಾದಿಗಳಲ್ಲಿ ಕೆಲವೆಡೆ ಸ್ಮೃತಿಯಲ್ಲಿ ಹೇಳಿದ ಯೋಗವನ್ನು ವಿವಕ್ಷಿಸಿ, ಶ್ರುತಿಗಳ ಅರ್ಥವನ್ನು ನಿರ್ಣಯಿಸಿದ್ದೂ ಕೂಡ ಸಾಧುವಾಗಿದೆಯೆಂದು ಸಮರ್ಥಿಸಿದಂತಾಯಿತು.

**प्रकाशः –** "न चोद्यतत्वलिङ्गविरोधः । उद्यमित्वार्थतयोपपत्तेः" इति टीकां विवृण्वन् लिङ्गमपि सावकाशयति **।। उद्यतत्वं चेति ।।**

'ನಚ ಉದ್ಯತತ್ವಲಿಂಗವಿರೋಧಃ । ಉದ್ಯಮಿತ್ವಾರ್ಥತಯಾ ಉಪಪತ್ತೇಃ' 'ಉದ್ಯತತ್ವ' ಎಂಬ ಲಿಂಗದ ವಿರೋಧಕ್ಕೆ ಅವಕಾಶವಿಲ್ಲ. 'ಉದ್ಯತ' ಶಬ್ದಕ್ಕೆ ನಿರಂತರ ಪ್ರಯತ್ನಶೀಲನಾಗಿದ್ದಾನೆಂಬ ಅರ್ಥವನ್ನು ಪರಮಾತ್ಮನಲ್ಲಿ ಹೇಳಬಹುದು ಎಂಬ ಟೀಕಾಮಾತನ್ನು ವಿವರಿಸುವವರಾಗಿ, ಉದ್ಯತತ್ವಲಿಂಗವನ್ನು ಸಾವಕಾಶವೆನ್ನುತ್ತಿದ್ದಾರೆ 'ಉದ್ಯತತ್ವಂ ಚ' ಇತ್ಯಾದಿ ವಾಕ್ಯದಿಂದ.

**प्रकाशः – यतेरिति ।।** नेदं यम उपरम इत्यस्य रूपम् । किन्तु उत्पूर्वस्य यतीप्रयत्न इत्यस्य पचाद्यचि कृते रूपमित्यर्थः । क्वचिदुत्पूर्वस्य यमेरिति पाठः । तत्र यमेः कर्तरि निष्ठाप्रत्यये "अनुदात्तोपदेशवनतितनोत्यादीनामनुनासिकलोपो खलिङ्क्ति" इति मकारलोपे रूपम् । अस्मिन्पक्ष उद्यमित्वमेवेति व्याख्यानं न्यायविवरणस्थमनुकूलितं भवति ।

ಶ್ರುತಿಯಲ್ಲಿರುವ 'ಉದ್ಯತಂ' ಎಂಬ ಪದವು 'ಯಮ ಉಪರಮೇ' ಎಂಬ ಧಾತುವಿನಿಂದ ನಿಷ್ಪನ್ನವಾದದ್ದಲ್ಲ. ಹೊರತಾಗಿ 'ಉತ್' ಎಂಬ ಉಪಸರ್ಗಪೂರ್ವಕವಾದ 'ಯತೀ ಪ್ರಯತ್ನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಉತ್' - 'ಯತಿ' ಎಂದಿರಬೇಕಾದರೆ, 'ನಂದಿಗ್ರಹೀ ಪಚಾದಿಭ್ಯಃ' ಇತ್ಯಾದಿ ಎಂಬ ಸೂತ್ರದಿಂದ ಪಚಾದಿಗಳು ಆಕೃತಿಗಣವಾದ್ದರಿಂದ 'ಅಚ್' ಪ್ರತ್ಯಯವು ಪ್ರಾಪ್ತವಾಗುತ್ತದೆ. ಆವಾಗ 'ಉತ್‌ಯತಿ ಅ' ಎಂದಿರಬೇಕಾದರೆ, ಧಾತುವಿನ 'ಈ'ಕಾರವು ಅನುಬಂಧವಾದ ಕಾರಣ ಲೋಪವಾಗುತ್ತದೆ. ಆದ್ದರಿಂದ 'ಉದ್ಯತ' ಎಂಬ ರೂಪವು ನಿಷ್ಪನ್ನವಾಯಿತು. ಕೆಲವು ಪುಸ್ತಕಗಳಲ್ಲಿ 'ಉತ್‌ಪೂರ್ವಸ್ಯ ಯಮೇಃ ಎಂಬ ಪಾಠವಿದೆ. ಆವಾಗ 'ಉದ್ಯತ' ಎಂಬ ಶಬ್ದವನ್ನು ಹೀಗೆ ನಿಷ್ಪತ್ತಿ ಮಾಡಬೇಕು. 'ಯದು' ಧಾತುವಿಗೆ ಕರ್ತ್ರರ್ಥದಲ್ಲಿ 'ನಿಷ್ಠಾ' ಪ್ರತ್ಯಯವು ಬರುತ್ತದೆ. ಆವಾಗ 'ಉದ್ಯಮ್ - ತ' ಎಂದಿರಬೇಕಾದರೆ, 'ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ' ಇತ್ಯಾದಿ ಸೂತ್ರದಿಂದ ಮಕಾರವು

ಲೋಪವಾಗಿ 'ಉದ್ಯತ' ಎಂಬ ಶಬ್ದವು ನಿಷ್ಪನ್ನವಾಗಿದೆ. ಈ ಪಕ್ಷದಲ್ಲಿ 'ಉದ್ಯಮಿತ್ವಮೇವ' ಎಂದು ವ್ಯಾಖ್ಯಾನ ಮಾಡಿದಂತಾಯಿತು. ನ್ಯಾಯವಿವರಣದಲ್ಲಿ ಉದ್ಯಮಿತ್ವವನ್ನೇ 'ಉದ್ಯತ' ಎನ್ನಲಾಗಿದೆ. ಅದನ್ನು ಈಗ ಉಪಪಾದನೆ ಮಾಡಿದಂತಾಯಿತು.

**प्रकाशः – प्रयत्नवति रूढिं चाह – लोकेति ।।** ''ननु गुरव इदानीमुद्यताहि प्रवक्तुम्'' इत्यादाविति भावः ।

ಪ್ರಯತ್ನವುಳ್ಳವನು ಎಂಬರ್ಥದಲ್ಲಿ 'ಉದ್ಯತ' ಶಬ್ದವು ರೂಢವಾಗಿದೆಯೆಂದು 'ಲೋಕಪ್ರಯೋಗಾಚ್ಚ' ಎಂಬುದರಿಂದ ಹೇಳಿದ್ದಾರೆ. **ಮಧ್ವವಿಜಯದಲ್ಲಿ** 'ಅಲಮಲಮನುವಾದೇನಾನುವಾಚ್ಯೇದ ಪಶ್ಚಾತ್ ನನು ಗುರವ ಇದನೀಮುದ್ಯತಾಹಿ ಪ್ರವಕ್ತುಮ್' ಎಂಬಲ್ಲಿ ಪ್ರಯತ್ನವುಳ್ಳವರು ಎಂಬರ್ಥದಲ್ಲಿ 'ಉದ್ಯತ' ಶಬ್ದವನ್ನು ಪ್ರಯೋಗಿಸಿದ್ದಾರೆ.

**प्रकाशः – टीकोक्तेर्मूलमाह – तदुक्तमिति ।।** श्रुतिसावकाशत्वं ''वर्जनाद्वज्रमुच्यते'' इति भाष्य एव विवृतमिति लिङ्गसावकाशत्वमेव व्यनक्ति – **उद्यमित्वमेवेति ।।**

ಟೀಕಾಮಾತನ್ನು **ಮೂಲಾರೂಢ** ಮಾಡುತ್ತಿದ್ದಾರೆ 'ತದುಕ್ತಮ್' ಇತ್ಯಾದಿಯಾಗಿ ವಜ್ರಶ್ರುತಿಯು ಸಾವಕಾಶವಾಗಿದೆಯೆಂದು **'ವರ್ಜನಾದ್ವಜ್ರಮುಚ್ಯತೇ'** ಎಂಬ ಭಾಷ್ಯದಲ್ಲೇ ಹೇಳಿರುವ ಕಾರಣ 'ಉದ್ಯತತ್ವ' ಎಂಬ ಲಿಂಗದ ಸಾವಕಾಶತ್ವನ್ನಷ್ಟೇ ಸ್ಪಷ್ಟಪಡಿಸುತ್ತಿದ್ದಾರೆ 'ಉದ್ಯಮಿತ್ವಮೇವ' ಎಂಬ ವಾಕ್ಯದಿಂದ.

**प्रकाशः – योगरूढिभ्यां विष्णौ वज्रशब्दे व्याख्यायमाने भाष्यान्तरविरोधमाशंक्याह – यत्त्विति ।। मुख्येति ।। संशाब्दसूचितेति** भावः ।

ಯೋಗ ಹಾಗೂ **ರೂಢಿಗಳಿಂದ** ವಿಷ್ಣುವಿನಲ್ಲಿ ವಜ್ರಶಬ್ದವು ಯುಕ್ತವಾಗುತ್ತದೆ ಎಂದು ವ್ಯಾಖ್ಯಾನ ಮಾಡುವವರಾಗಿ, **ಕಾಠಕಭಾಷ್ಯದ ವಿರೋಧವನ್ನು** ಆಶಂಕಿಸುತ್ತಿದ್ದಾರೆ 'ಯತ್' ಇತ್ಯಾದಿ ಗ್ರಂಥದಿಂದ. 'ಮುಖ್ಯ' ಎಂದರೆ **'ತತ್ತುಸಮನ್ವಯಾತ್'** ಎಂಬ ಸೂತ್ರದಲ್ಲಿ 'ಸಂ' ಶಬ್ದದಿಂದ ಸೂಚಿತವಾದ ಮುಖ್ಯವೃತ್ತಿಯೆಂದರ್ಥ.

**प्रकाशः – सूत्रार्थस्तु कम्पनादिति** हेतूक्त्यैव विषयविशेषस्य सूचनात्सूचितवज्रं **विष्णुरेव सर्वचेष्टकत्वश्रवणादिति स्पष्टः ।**

'ಓಂ ಕಂಪನಾತ್ ಓಂ' **ಎಂಬ ಸೂತ್ರಾರ್ಥವು** ಸ್ಪಷ್ಟವಾದ್ದರಿಂದ ಗ್ರಂಥಕಾರರು ಪ್ರತ್ಯೇಕವಾಗಿ ಹೇಳಿಲ್ಲ. 'ಕಂಪನಾತ್' ಎಂಬ **ಹೇತುವಚನದಿಂದಲೇ** ವಿಷಯವಾಕ್ಯವನ್ನು ಸೂಚಿಸಿದಂತಾಯಿತು. ಶ್ರುತಿಯಲ್ಲಿ ಹೇಳಿದ ವಜ್ರಶಬ್ದವು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ ಅದೇ ಶ್ರುತಿಯಲ್ಲಿ ಸರ್ವಚೇಷ್ಟಕತ್ವವು ಹೇಳಲ್ಪಟ್ಟಿದ್ದರಿಂದ ಎಂದು.

ಕಂಪನಾಧಿಕರಣ (೧-೩-೧೦)

**प्रकाशः**– अत्र ''य एतद्विदुः'' इति विषयवाक्य एव श्रुतस्य मुक्तिहेतुवित्तिविषयत्वस्य हेतुत्वेनानुपादानं तु वज्रश्रुत्युद्यततत्वलिङ्गाभ्यां निरवकाशाभ्यां पूर्वपक्षे तस्याक्षिप्तत्वद्योतनाय वा कंपकत्वस्य प्राथमिकत्वाद्वा वाक्यविशेषद्योतकत्वाद्वेति ।

ಸೂತ್ರದಲ್ಲಿ ಮುಕ್ತಿಹೇತುಜ್ಞಾನವಿಷಯತ್ವವನ್ನೇ ಹೇತುವನ್ನಾಗಿ ಹೇಳಬಹುದಿತ್ತು. 'ಯ ಏತದ್ವಿದುಃ' ಎಂಬ ವಿಷಯವಾಕ್ಯದಲ್ಲೇ ಇದು ಶ್ರುತವಾಗಿದೆ. ಆದರೂ ಇದನ್ನು ಬಿಟ್ಟು ಕಂಪಕತ್ವವನ್ನೇ ಹೇತುವನ್ನಾಗಿ ಮಾಡಿದ್ದಾರೆ. ಕಾರಣವೇನೆಂದರೆ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳು ನಿರವಕಾಶವಾದ್ದರಿಂದ ಪೂರ್ವಪಕ್ಷವು ಹೊರಟಿದೆಯೆಂದು ತೋರಿಸಬೇಕಾಗಿದೆ. ಮತ್ತು ಕಂಪಕತ್ವವು ಶ್ರುತಿಯಲ್ಲಿ 'ಪ್ರಾಣ ಏಜತಿ' ಎಂಬುದಾಗಿ ಪ್ರಾರಂಭದಲ್ಲಿ ಶ್ರುತವಾಗಿದೆ. ಆದ್ದರಿಂದ ಮುಕ್ತಿಹೇತುಜ್ಞಾನವಿಷಯತ್ವವನ್ನು ಬಿಟ್ಟು ಕಂಪಕತ್ವವನ್ನು ಹೇತುವನ್ನಾಗಿ ಹೇಳಿದ್ದು ಅರ್ಥಪೂರ್ಣವಾಗಿದೆ.

**गुरुराजीयम्** – ननु वर्जनाद्वज्रमुच्यत इति स्मृत्या योगस्योक्तत्वात्तदनुसारेण वज्रशब्दस्य भगवत्परत्वे यदाजिमीयुस्तदाज्यानामाज्यत्वमिति वाक्य आज्यशब्दस्य योगस्यैवोक्तत्वात्सर्वत्राप्याज्यशब्दस्य स्तोत्रपरत्वापत्त्या आज्येन जुहोतीत्यादावपि तत्परत्वापत्त्या प्रसिद्धाज्यपरत्वं न स्यादित्यत आह – **यदाजिमीयुरिति** ।। तथा च यदाजिमीयुरिति निर्वचनस्य सार्वत्रिकाज्यशब्दविषयत्वाभावात्तत्प्रकरणस्थाज्य-शब्दविषयत्वमेवेति नातिप्रसङ्गः । तत्प्रकरणस्थस्य तत्प्रकरणस्थेनैवान्वय इत्यत्र पूर्वतन्त्रीयं दृष्टान्तमाह – **यथेति** ।। नन्वेवं यदाजिमीयुरिति निर्वचनस्य प्रकरण-विशेषस्थत्वात्प्रकरणविशेषस्थेनाज्यैः स्तुवत इत्यादिनैवाज्यशब्देनान्वयवत् वर्जनाद्वज्रमुख्यत इति निर्वचनं यत्प्रकरणविशेषस्थं तत्प्रकरणस्थवज्रशब्देनैवान्वेतीति कथं वज्रशब्दस्य सर्वत्र भगवत्परत्वमित्यत आह – **वर्जनादिति** ।। वज्रबाहुरित्यादि-व्यावृत्त्यर्थं योग्येति ।। अनारभ्याधीतत्वात् अन्यप्रकरणेऽपठितत्वादित्यर्थः । अनारभ्याधीतत्वेऽपि कथं वैदिकशब्दमात्रेणान्वय इत्यतस्तत्र पूर्वतन्त्रीयं दृष्टान्तमाह – **यथेति** ।।

ननु च वर्जनाद्वज्रमुच्यत इत्यादिस्मृतेर्वज्रश्रुत्यपेक्षया दुर्बलत्वान्न श्रुते रूढित्यागापादकत्वमित्यत आह – **यद्यपीति** ।। बाध्यबाधकभावे न प्राबल्यदौर्बल्यमात्रं प्रयोजकम् । किन्तु विरोधविशिष्टम् । प्रकृते च विरोधाभावान्न बाध्यबाधकभाव इत्याह – **तथापीति** ।। ज्योतिरधिकरणे ज्योतिरुपक्रमादित्यधिकरणे। उदाहरिष्यमाणं एष इमं लोकमभ्यार्चदि-त्युदाहरिष्यमाणम् । एवं वज्रशब्दस्यान्यत्र रूढिमभ्युपेत्य स्मृत्युक्तं योगमङ्गीकृत्य वज्रश्रुतिविरोधः परिहृतः । इदानीं च वज्रशब्दस्य भगवत्येव रूढत्वात्तत्परत्वेन रूढित्यागोऽपीऽत्याह – **न चेति** ।।

नापीत्यर्थः । ननु यदि क्लृप्तरूढिपरित्यागेन योगकल्पना तर्हि यस्य कस्यापि शब्दस्य यत्र क्वचनार्थे योगस्य सुवचत्वादर्थव्यवस्था न स्यात् । तथाच कंपकत्वादिब्रह्म-लिङ्गान्यपि कथञ्चिदिन्द्रायुधे स्युरित्यत आह – **एतेनेति** ।। एतेनेत्यनेन परामृष्टं हेतुमाह – **स्मृत्यादेरिति** ।। ननूद्यतत्वं न ब्रह्मणि युक्तम् । तस्य लोके उद्यतायुधदोर्दण्डा इति स्मृतौ तेनेन्द्रो वज्रमुदयच्छदित्यादिश्रुतौ चायुधे प्रसिद्धत्वादित्यत आह – **उद्यतत्वं चेति** ।। नन्वेवं वज्रशब्दस्य भगवति मुख्यत्वोपपादने काठकभाष्यविरोधः । तत्र वज्रशब्दस्य भगवति गौणत्वोक्तेरित्यत आह – **यत्त्विति** ।। योग एवेत्यनेन न विद्वद्रूढिनिरासः । किन्तु गौणत्वस्येति बोध्यम् ।।

।। इति श्रीकेशवभट्टारकेण विरचितायां भावदीपिकायाम्
कम्पनाधिकरणं सम्पूर्णम् ।। १० ।।




'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಗೆ ಅನುಸಾರಿಯಾಗಿ 'ಮಹದ್ಭಯಂ ವಜ್ರಮುಚ್ಯತಮ್' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೆಂದು ಸಿದ್ಧಾಂತ ಮಾಡಲಾಗಿದೆ. ಆದರೆ ಸ್ಮೃತಿಯ ಸಂದರ್ಭವೇ ಬೇರೆ, ಶ್ರುತಿಯ ಸಂದರ್ಭವೇ ಬೇರೆ, ಎಲ್ಲೋ ಸ್ಮೃತಿಯಲ್ಲಿ ಹೇಳಿದ ನಿರ್ವಚನವನ್ನು ಶ್ರುತಿಯಲ್ಲಿ ವಿವಕ್ಷಿಸಲು ಹೇಗೆ ಸಾಧ್ಯ? 'ಯದಾಜಿಮೀಯುಃ ತದಾಜ್ಯಾನಾಂ ಆಜ್ಯತ್ವಂ' ಎಂಬುದಾಗಿ ಶ್ರುತಿಯು ಆಜ್ಯಶಬ್ದವನ್ನು ಯುದ್ಧದ ಮಂತ್ರಗಳೆಂದು ನಿರ್ವಚನ ಮಾಡುತ್ತಿದೆ. ಈ ನಿರ್ವಚನವು ಅದೇ ಪ್ರಕರಣದಲ್ಲಿರುವ 'ಆಜ್ಯೈಃ ಸ್ತುವತೇ' ಎಂಬಲ್ಲಿ ಅನ್ವಯವನ್ನು ಹೊಂದುತ್ತದೆ. ಹೊರತು, ಎಲ್ಲೋ ಇರುವ ಆಜ್ಯಶಬ್ದದಲ್ಲಿ ಅನ್ವಯವನ್ನು ಹೊಂದುವುದಿಲ್ಲ. ಹೀಗಿರುವಾಗ ಸ್ಮೃತಿಯ ಆಧಾರದಿಂದ ಶ್ರುತಿಯನ್ನು ಹೇಗೆ ವ್ಯಾಖ್ಯಾನ ಮಾಡುವುದು ಹೇಗೆ ಸರಿ? ಎಂಬ ಗೊಂದಲವು ಬರುತ್ತದೆ. ಇದಕ್ಕೆ ಉತ್ತರವಿಷ್ಟು. 'ಆರಭ್ಯಾಧೀತ' 'ಅನರಾಭ್ಯಾಧೀತ' ಎಂಬುದಾಗಿ ಎರಡು ಬಗೆಯ ನಿರ್ವಚನಗಳಿವೆ. ಯಾವುದಾದರೂ ಕರ್ಮವನ್ನು ಅಥವಾ ವಾಕ್ಯವಿಶೇಷವನ್ನು ಉದ್ದೇಶಿಸಿ, ನಿರ್ವಚನ ಮಾಡಿದರೆ, ಅದು ಆರಭ್ಯಾಧೀತವೆನಿಸುತ್ತದೆ. ಯಾವುದೇ ಕರ್ಮವಿಶೇಷವನ್ನು ಅಥವಾ ವಾಕ್ಯವಿಶೇಷವನ್ನು ಉದ್ದೇಶಿಸದೆ ಸಾಮಾನ್ಯವಾಗಿ ಮಾಡುವ ನಿರ್ವಚನವು ಅನಾರಭ್ಯಾಧೀತವೆನಿಸುತ್ತದೆ. ಆ ಪ್ರಕರಣ ಬಿಟ್ಟು ಎಲ್ಲಾಕಡೆಯೂ ಕೂಡ ಅನ್ವಯವನ್ನು ಹೊಂದಬಹುದು. ಪ್ರಕೃತ ಸ್ಮೃತಿಯಲ್ಲಿ ಹೇಳಿದ ವಜ್ರಶಬ್ದದ ನಿರ್ವಚನವು ಅನಾರಭ್ಯಾಧೀತ ಎನಿಸುವುದರಿಂದ ಆ

ಸ್ಮೃತಿ ಪ್ರಕರಣದಲ್ಲಷ್ಟೇ ಅಲ್ಲದೇ, ಬೇರೆ ಶ್ರುತ್ಯಾದಿಗಳಲ್ಲಿಯೂ ಅನ್ವಯವನ್ನು ಹೊಂದುತ್ತದೆ. 'ಯದಾಜಿಮೀಯುಃ ತದಾಜ್ಯಾನಾಂ ಆಜ್ಯತ್ವಂ' ಎಂಬ ನಿರ್ವಚನವು 'ಆಜ್ಯೈಃ ಸ್ತುವತೇ' ಎಂಬಲ್ಲಿರುವ ಆಜ್ಯಶಬ್ದವನ್ನು ಉದ್ದೇಶಿಸಿ, ಹೊರಟಿದ್ದರಿಂದ ಆರಭ್ಯಾಧೀತವಾಗಿದೆ. ಬೇರೆ ಕಡೆ ಇದಕ್ಕೆ ಅನ್ವಯ ಮಾಡಲು ಬರುವುದಿಲ್ಲ. ಈ ವ್ಯತ್ಯಾಸವನ್ನು ಗಮನಿಸಬೇಕು.

ಶ್ರುತಿಗಿಂತಲೂ ಸ್ಮೃತಿಯು ದುರ್ಬಲ. ಹೀಗಿರುವಾಗ ಸ್ಮೃತಿಯ ಆಧಾರದಿಂದ ಶ್ರುತಿಯನ್ನು ಅರ್ಥೈಸುವುದು ಹೇಗೆ ಸರಿ? ಎಂಬುದು ಮುಂದಿನ ಪ್ರಶ್ನೆ. ಆದರೆ ಮೂರು ಕಾರಣಗಳಿಂದ ಇಲ್ಲಿ ಸ್ಮೃತಿಗೆ ಅನುಗುಣವಾಗಿ ಸ್ಮೃತಿಯನ್ನು ವ್ಯಾಖ್ಯಾನಿಸಬಹುದೆಂದು ತಿಳಿಯುತ್ತದೆ. ಶ್ರುತಿವಿರುದ್ಧವಾದ ವಿಷಯದಲ್ಲಿ ಸ್ಮೃತಿಯು ಪ್ರವೃತ್ತಿ ಮಾಡುತ್ತಿಲ್ಲ. ಮತ್ತು ಶ್ರುತ್ಯರ್ಥನಿರ್ಣಾಯಕವಾಗಿ ಸ್ಮೃತಿಗಳು ಶ್ರುತಿಗೆ ಅನುಗ್ರಾಹಕವಾಗಿವೆ. ಅಷ್ಟೇ ಅಲ್ಲದೇ ಮುಂದಿನ ಜ್ಯೋತಿರಧಿಕರಣದಲ್ಲಿ ಉದಾಹರಿಸುವ ಶ್ರುತ್ಯಂತರ ಮೂಲಕವೂ ಆಗಿದೆ. ಆದ್ದರಿಂದ 'ವರ್ಜನಾದ್ವಜ್ರಮುಚ್ಯತೇ' ಎಂಬ ಸ್ಮೃತಿಗೆ ಅನುಗುಣವಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬಹುದು.

ಪೂರ್ವಪಕ್ಷಕಾರರು ಹೇಳಿದ ಉದ್ಯತತ್ವಲಿಂಗವೂ ಕೂಡ ಸಾವಕಾಶವಾಗಿದೆ. ಉತ್ಪೂರ್ವಕವಾದ 'ಯತೀ ಪ್ರಯತ್ನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಉದ್ಯತಶಬ್ದಕ್ಕೆ ಪ್ರಯತ್ನಶೀಲನೆಂದರ್ಥ. ಪರಮಾತ್ಮನು ನಿರಂತರ ಪ್ರಯತ್ನಶೀಲನಾದ ಕಾರಣ ಉದ್ಯತತ್ವವು ಮುಖ್ಯವಾಗಿ ಅವನಲ್ಲೇ ಬರುತ್ತದೆ. ಹಾಗಾಗಿ ಪೂರ್ವಪಕ್ಷಕಾರರು ಹೇಳಿದ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳೆರಡೂ ಸಾವಕಾಶವಾದವು. ಮಹಾವಿಷ್ಣುವಿನಲ್ಲಿಯೇ ಉದ್ಯತತ್ವ, ಕಂಪಕತ್ವ ಮೊದಲಾದ ಲಿಂಗಗಳು ಬರುವುದರಿಂದ ಅವನೇ ವಜ್ರಶಬ್ದಪ್ರತಿಪಾದ್ಯನೆಂದು ಸಿದ್ಧವಾಯಿತು.



## तात्पर्यचन्द्रिका

**अन्येतु ।। प्राण एजतीति वाक्यस्थ प्राणः प्रसिद्धेर्वायुरिति प्राप्ते ब्रह्मैवेति सिद्धान्त इत्याहुः ।**

ಅನುವಾದ - ಶಾಂಕರ ಭಾಷ್ಯದಲ್ಲಿ ಕಂಪನಾಧಿಕರಣದ ರಚನೆ ಹೀಗಿದೆ - 'ಪ್ರಾಣ ಏಜತಿ' ಎಂಬ ಕಾಠಕೋಪನಿಷತ್ತಿನ ವಾಕ್ಯವೇ ಅಧಿಕರಣಕ್ಕೆ ವಿಷಯವಾಗಿದೆ. ಇಲ್ಲಿರುವ ಪ್ರಾಣಶಬ್ದವು ಪ್ರಸಿದ್ಧವಾದ ವಾಯುವನ್ನು ಪ್ರತಿಪಾದನೆ ಮಾಡುತ್ತದೆಂದು ಪೂರ್ವಪಕ್ಷ. ಬ್ರಹ್ಮನೇ ಪ್ರಾಣಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ.

**तन्न । प्रागनुक्तसमन्वये उद्यतत्वरूपपूर्वपक्षबीजयुक्ते च वज्रशब्दे सति असकृदुक्तसमन्वयस्य बीजशून्यस्य च प्राणशब्दस्य समन्वयोक्त्ययोगात् ।**

ಅದ್ವೈತಿಗಳ ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ ವಜ್ರಶಬ್ದದ ಸಮನ್ವಯ ಮಾಡುವುದೇ ಎಲ್ಲ ರೀತಿಯಿಂದಲೂ ಸೂಕ್ತವಾಗಿದೆ. ಇದುವರೆಗೂ ಯಾವುದೇ ಅಧಿಕರಣಗಳಲ್ಲಿ ವಜ್ರಶಬ್ದದ ಸಮನ್ವಯವನ್ನು ಮಾಡಿರುವುದಿಲ್ಲ. ಮತ್ತು ಇದರ ಸಮನ್ವಯಕ್ಕಾಗಿ ಉದ್ಯತತ್ವವೆಂಬ ಪೂರ್ವಪಕ್ಷಬೀಜವು ಪ್ರಬಲವಾಗಿರುತ್ತದೆ. ಇಂತಹ ವಜ್ರಶಬ್ದದ ಸಮನ್ವಯವನ್ನು ಬಿಟ್ಟು ಅನೇಕ ಬಾರಿ ಸಮನ್ವಯ ಮಾಡಿರುವ ಪ್ರಾಣಶಬ್ದದ ಸಮನ್ವಯವನ್ನು ಪುನಃ ಈ ಅಧಿಕರಣದಲ್ಲಿ ಮಾಡುವುದು ಯುಕ್ತವಲ್ಲ. ಮತ್ತು ಪ್ರಾಣಶಬ್ದ ಸಮನ್ವಯಕ್ಕಾಗಿ ಪ್ರಬಲವಾದ ಪೂರ್ವಪಕ್ಷ ಬೀಜವೂ ಕೂಡ ಇರುವುದಿಲ್ಲ.

**किञ्च ब्रह्मलिङ्गत्वेन सूत्रोक्तं कम्पकत्वं त्वदुक्तममृतत्वहेतुवेदनत्वं च भयंकरत्वेनोक्ते ''य एतद्विदुः'' इति नपुंसकलिङ्गनिर्दिष्टे च वज्र एवेति तत्रैव चिन्ता युक्ता ।**[१]

---

(१) शाङ्करभाष्यम् —

कम्पनात् ॥ ३९ ॥

जगत्कम्पनकृत् प्राणोऽशनिर्वायुरुतेश्वरः ।
अशनिर्भयहेतुत्वाद् वायुर्वा देहचालनात् ॥
वेदनादमृतत्वोक्तेरीशोऽन्तर्यामिरूपतः ।
भयहेतुश्चालनं तु सर्वशक्तियुतत्वतः ॥

ಕಂಪನಾಧಿಕರಣ (೧-೩-೧೦)

अवसितः प्रासङ्गिकोऽधिकारविचारः । प्रकृतामेवेदानीं वाक्यार्थविचारणां प्रवर्तयिष्यामः । 'यदिदं किञ्च जगत्सर्वं प्राण एजति निःसृतम् । महद्भयं वज्रमुद्यतं य एतद् विदुरमृतास्ते भवन्ति ।।' इति । एतद्वाक्यं 'एजृ कम्पने' इति धात्वर्थानुगमाल्लक्षितम् । अस्मिन् वाक्ये सर्वमिदं जगत्प्राणाश्रयं स्पन्दते, महच्च किञ्चिद्भयकारणं वज्रशब्दितमुद्यतम्, तद्विज्ञानाच्चामृतत्वप्राप्तिरिति श्रूयते । तत्र कोऽसौ प्राणः? किं तद्भयानकं वज्रम्? इत्यप्रतिपत्तेर्विचारे क्रियमाणे प्राप्तं तावत्प्रसिद्धेः पञ्चवृत्तिर्वायुः प्राण इति । प्रसिद्धेरेव चाशनिर्वज्रं स्यात् । वायोश्चेदं माहात्म्यं सङ्कीर्त्यते । कथम्? सर्वमिदं जगत्पञ्चवृत्तौ वायौ प्राणशब्दिते प्रतिष्ठायैजति । वायुनिमित्तमेव च महद्भयानकं वज्रमुद्यम्यते । वायौ हि पर्जन्यभावेन विवर्तमाने विद्युत्स्तनयित्नुवृष्ट्यशनयो विवर्तन्त इत्याचक्षते । वायुविज्ञानादेव चेदममृतत्वम्। तथाहि श्रुत्यन्तरम् 'वायुरेव वृष्टिर्वायुः समष्टिरप पुनर्मृत्युं जयति य एवं वेद' इति । तस्माद्वायुरयमिह प्रतिपत्तव्य इति । एवं प्राप्ते ब्रूमः, ब्रह्मैवेदमिह प्रतिपत्तव्यम्। कुतः? पूर्वोत्तरालोचनात् । पूर्वोत्तरयोर्हि ग्रन्थभागयोर्ब्रह्मैव निर्दिश्यमानमुपलभामहे । इहैव कथमकस्मादन्तराले वायुं निर्दिश्यमानं प्रतिपद्येमहि । पूर्वत्र तावत् 'तदेव शुक्रं तद् ब्रह्म तदेवामृतमुच्यते । तस्मिँल्लोकाः श्रिताः सर्वे तदु नात्येति कश्चन ।।' इति ब्रह्म निर्दिष्टम्, तदेवेहापि सन्निधानात् जगत्सर्वं प्राण एजतीति च लोकाश्रयवत्त्वप्रत्यभिज्ञानान्निर्दिष्टमिति गम्यते । प्राणशब्दोऽप्ययं परमात्मन्येव प्रयुक्तः 'प्राणस्य प्राणम्' इति दर्शनात् । एजयितृत्वमपीदं परमात्मन एवोपपद्यते, न वायुमात्रस्य । तथाचोक्तम् –'न प्राणेन नापानेन मर्त्यो जीवति कश्चन । इतरेण तु जीवन्ति यस्मिन्नेतावुपाश्रितौ ।।' इति । उत्तरत्रापि 'भयादस्याग्निस्तपति भयात्तपति सूर्यः । भयादिन्द्रश्च वायुश्च मृत्युर्धावति पञ्चमः ।।' इति ब्रह्मैव निर्देक्ष्यते, न वायुः । सवायुकस्य जगतो भयहेतुत्वाभिधानात् । तदेवेहापि सन्निधानान्महद्भयम्, वज्रमुद्यतमिति च भयहेतुत्वप्रत्यभिज्ञानान्निर्दिष्टमिति गम्यते । वज्रशब्दोऽप्ययं भयहेतुत्वसामान्यात्प्रयुक्तः । यथाहि वज्रमुद्यतं ममैव शिरसि निपतेद् यद्यहमस्य शासनं न कुर्यामित्यनेन भयेन जनो नियमेन राजादिशासने प्रवर्तत एवमिदमग्निवायुसूर्यादिकं जगदस्मादेव ब्रह्मणो बिभ्यन्नियमेन स्वव्यापारे प्रवर्तत इति भयानकं वज्रोपमितं ब्रह्म । तथाच ब्रह्मविषयं श्रुत्यन्तरम् 'भीषास्माद् वातः पवते । भीषोदेति सूर्यः । भीषास्मादग्निश्चेन्द्रश्च । मृत्युर्धावति पञ्चमः ।।' इति अमृतत्वफलश्रवणादपि ब्रह्मैवेदमिति गम्यते । ब्रह्मज्ञानाद्ध्यमृतत्वप्राप्तिः । 'तमेव विदित्वातिमृत्युमेति नान्यः पन्था विद्यतेऽयनाय' इति मन्त्रवर्णात् । यत्तु वायुविज्ञानात् क्वचिदतत्त्वमभिहितं तदापेक्षिकम् । तत्रैव प्रकरणान्तरकरणेन परमात्मानमभिधाय 'अतोऽन्यदार्तम्' इति वाय्वादेरार्तत्वाभिधानात् । प्रकरणादप्यत्र परमात्मनिश्चयः ।

ಮತ್ತು ಬ್ರಹ್ಮನಲಿಂಗವೆಂದು ಸೂತ್ರದಲ್ಲಿ ಹೇಳಲ್ಪಟ್ಟ ಕಂಪಕತ್ವವಾಗಲೀ, ಅದ್ವೈತಿಗಳೇ ಹೇಳಿರುವ ಅಮೃತತ್ವಹೇತುವೇದನತ್ವವಾಗಲೀ, ಭಯಂಕರವೆಂದು ವರ್ಣಿಸಲ್ಪಟ್ಟ 'ಏತದ್ವಿದುಃ' ಎಂಬ ಶ್ರುತಿಯಿಂದ ನಪುಂಸಕಲಿಂಗದಿಂದ ನಿರ್ದಿಷ್ಟವಾದದ್ದು ವಜ್ರವೇ ಆಗುತ್ತದೆ ಹೊರತು, ಪ್ರಾಣನಾಗಲು ಸಾಧ್ಯವಿಲ್ಲ. ಇಂತಹ ವಜ್ರದಲ್ಲಿಯೇ ವಿಚಾರವು ಅತ್ಯಂತ ಸಮಂಜಸವಾಗುತ್ತದೆ.

**प्रकाशः –**

**अन्येत्विति ।। ''यदिदं किञ्च जगत्सर्वं प्राण एजति निस्सृतम्'' इत्यत्र सप्तम्यन्तः प्राणशब्दः किं वायुरुत ब्रह्मेति संशये**

ವಿವರಣೆ - ಅದ್ವೈತಿಗಳ ಅಧಿಕರಣಶರೀರವನ್ನು 'ಅನ್ಯೇತು' ಎಂಬ ವಾಕ್ಯದಿಂದ ಸಂಗ್ರಹಿಸಿದ್ದಾರೆ. 'ಯದಿದಂ ಕಿಂಚ ಜಗತ್‌ಸರ್ವಂ ಪ್ರಾಣ ಏಜತಿ ನಿಃಸೃತಮ್' ಎಂಬ ಕಾಠಕೋಪನಿಷತ್ತಿನ ವಾಕ್ಯದಲ್ಲಿ ಸಪ್ತಮ್ಯಂತವಾದ ಪ್ರಾಣಶಬ್ದವು ಶ್ರುತವಾಗಿದೆ. ಇದು ಪ್ರಸಿದ್ಧವಾದ ವಾಯುವನ್ನು ಪ್ರತಿಪಾದನೆ ಮಾಡುತ್ತಿದೆಯೋ ಅಥವಾ ಬ್ರಹ್ಮನನ್ನೋ ? ಎಂದು ಸಂಶಯ.

**प्रकाशः – पञ्चवृत्तिराध्यात्मिको वायुरेव । तत्र प्राणशब्दस्य प्रसिद्धेः । वज्रशब्दस्य चाशनौ प्रसिद्धत्वादशनेश्च धूमज्योतिस्सलिलसंवलितबाह्यवायुरूपत्वाद्बाह्यवायुर्वाऽत्र प्राणशब्दार्थः । अमृतत्वहेतुवित्तिविषयत्वं चापेक्षिकत्वादिना कथञ्चिन्नेयमिति प्राणवज्रश्रुत्यनुरोधाद्वायुरेव ।**

ಪ್ರಾಣ, ಅಪಾನ, ವ್ಯಾನ ಮೊದಲಾದ ಹೆಸರನ್ನು ಪಡೆದ ದೇಹದ ಒಳಗಿರುವ ವಾಯುವೇ ಇಲ್ಲಿ ಪ್ರಾಣಶಬ್ದಪ್ರತಿಪಾದ್ಯವಾಗಿದೆ. ಏಕೆಂದರೆ ದೇಹದ ಒಳಗಿರುವ ವಾಯುವನ್ನು ಪ್ರಾಣವೆಂದು ಲೋಕದಲ್ಲಿ ಎಲ್ಲರೂ ಕೂಡ ಕರೆಯುತ್ತಾರೆ. 'ವಜ್ರ' ಶಬ್ದವೂ ಕೂಡ ಪ್ರಾಣನನ್ನೇ ಪ್ರತಿಪಾದನೆ ಮಾಡುತ್ತಿದೆ. ಏಕೆಂದರೆ ಲೋಕದಲ್ಲಿ ಮಿಂಚನ್ನು 'ವಜ್ರ' ಎನ್ನುತ್ತಾರೆ. ಧೂಮ, ಜ್ಯೋತಿ, ಸಲಿಲ ಇವುಗಳಿಂದ ಕೂಡಿರುವ ಬಾಹ್ಯವಾಯುವೇ ಮಿಂಚಾಗಿ ಪರಿಣಾಮವಾಗಿದೆ. ಹಾಗಾಗಿ ಬಾಹ್ಯವಾದ ವಾಯುವೂ ಕೂಡ ಇಲ್ಲಿ ಪ್ರಾಣಶಬ್ದ ಪ್ರತಿಪಾದ್ಯವಾಗಬಹುದು. ಅಮೃತತ್ವಹೇತುವೇದನವಿಷಯತ್ವವು ಇಂತಹ ವಾಯುವಿನಲ್ಲಿ ಗೌಣವಾಗಿ ಕೂಡಿಸಬೇಕು. ಅಮೃತ ಎಂದರೆ ದೀರ್ಘಾಯುಷಿಗಳಾಗಿರುತ್ತಾರೆ ಎಂದು 'ಕಥಂಚಿತ್' ಪ್ರಾಣಶ್ರುತಿ ಹಾಗೂ ವಜ್ರಶ್ರುತಿಗಳಿಗೆ ಅನುಸಾರಿಯಾಗಿ ವಾಯುವಿನಲ್ಲಿ ಉಪಪಾದನೆ ಮಾಡಬೇಕು.

**प्रकाशः –** ''तदेव शुक्रं तद्ब्रह्म'' इति ''भयादस्याग्निस्तपति'' इति च प्राचीनपराचीनवचनसन्दष्टतया प्रतीयमानं तदेकवाक्यत्वं ''अन्यत्र धर्मादन्यत्राधर्मात्'' इति ब्रह्मप्रकरणं च प्राणवज्रश्रुतिबलाद्बाध्यत इति प्राप्ते

'अन्यत्र धर्मादन्यत्राधर्मादन्यत्रास्मात् कृताकृतात् । अन्यत्र भूताच्च भव्याच्च यत्तत् पश्यसि तद्वद ।।' इति परमात्मनः पृष्टत्वात् ।। ३९ ।।

'ತದೇವ ಶುಕ್ರಂ ತದ್ಬ್ರಹ್ಮ' ಎಂಬ ಹಿಂದಿನ ಶ್ರುತಿಯಿಂದ 'ಭಯಾದಸ್ಯಾಗ್ನಿಸ್ತಪತಿ' ಎಂಬ ಮುಂದಿನ ಶ್ರುತಿಯಿಂದ ಸಂದಷ್ಟವಾದ ಕಾರಣ ಒಂದೇ ವಸ್ತುವನ್ನು ಈ ಪ್ರಕರಣವು ಪ್ರತಿಪಾದನೆ ಮಾಡುತ್ತದೆಂದು ಏಕವಾಕ್ಯತ್ವವು ತಿಳಿಯುತ್ತದೆ. ಮತ್ತು 'ಅನ್ಯತ್ರ ಧರ್ಮಾತ್ ಅನ್ಯಾತ್ರಾಧರ್ಮಾತ್' ಎಂಬುದು ಬ್ರಹ್ಮಪ್ರಕರಣವೇ ಆಗಿದೆ. ಆದರೆ ಪ್ರಬಲವಾದ ಪ್ರಾಣಶ್ರುತಿ ಹಾಗೂ ವಜ್ರಶ್ರುತಿಗಳು ಈ ಏಕವಾಕ್ಯತ್ವವನ್ನು ಹಾಗೂ ಬ್ರಹ್ಮಪ್ರಕರಣಗಳನ್ನು ಬಾಧಿಸುತ್ತವೆ. ಹಾಗಾಗಿ ಶರೀರದ ಒಳಗಿರುವ ವಾಯು, ಪ್ರಾಣಶಬ್ದ ಪ್ರತಿಪಾದ್ಯವಾಗಬಹುದು. ಅಥವಾ ಬಾಹ್ಯವಾಯುವು ಪ್ರಾಣಶಬ್ದ ಪ್ರತಿಪಾದ್ಯವಾಗಬಹುದು ಎಂದು ಎರಡು ಬಗೆಯ ಪೂರ್ವಪಕ್ಷಗಳನ್ನು ತಿಳಿಯಬೇಕು.

**प्रकाशः** – सवायुकस्य जगतः ''एजति'' इति कम्पनात् कम्पयितृत्वश्रवणात् अमृतत्वहेतुज्ञानविषयत्वाच्च तयोर्ब्रह्मलिङ्गत्वाद्ब्रह्मैव प्राणः ।

ಸಿದ್ಧಾಂತ - ಬ್ರಹ್ಮನೇ ಪ್ರಾಣಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. 'ಏಜತಿ' ಎಂಬ ಶ್ರುತಿಯು ವಾಯುಸಹಿತವಾದ ಸಮಸ್ತ ಜಗತ್ತನ್ನು ಚೇಷ್ಟೆ ಮಾಡುತ್ತಾನೆಂದು ಹೇಳುತ್ತಿದೆ. ಅಂತಹ ಚೇಷ್ಟಕನಲ್ಲಿ ಅಮೃತತ್ವಹೇತುಜ್ಞಾನವಿಷಯತ್ವವು ಶ್ರುತವಾಗಿದೆ. ಹೀಗೆ ಕಂಪಯಿತೃತ್ವ ಮತ್ತು ಅಮೃತಹೇತುಜ್ಞಾನ-ವಿಷಯತ್ವಗಳೆರಡೂ ಬ್ರಹ್ಮನ ಲಿಂಗಗಳಾದ್ದರಿಂದ ಬ್ರಹ್ಮನೇ ಪ್ರಾಣನು.

**प्रकाशः** – वज्रशब्दश्च शासकत्वेन भयहेतौ ब्रह्मणि गौणवृत्त्योपपन्न इति न पूर्वापरवाक्यैकवाक्यत्वप्रकरणे बाधनीये ।

ವಜ್ರಶಬ್ದವಾದರೂ ಶಾಸಕನಾದ ಬ್ರಹ್ಮನು ಭಯಕ್ಕೆ ಕಾರಣನಾದ್ದರಿಂದ, ಗೌಣವಾಗಿ ಕೂಡುತ್ತದೆ. ಆದ್ದರಿಂದ ಏಕವಾಕ್ಯತ್ವ ಹಾಗೂ ಪ್ರಕರಣಗಳನ್ನು ವಜ್ರಶಬ್ದವು ಬಾಧಿಸುವುದಿಲ್ಲ.

**प्रकाशः** – अत एव ''जगत्सर्वम्'' इति सर्वशब्दसङ्कोचोऽप्ययुक्त इति सिद्धान्तः ।

ಆದ್ದರಿಂದಲೇ 'ಜಗತ್‌ಸರ್ವಮ್' ಎಂಬಲ್ಲಿ ಸರ್ವಶಬ್ದಕ್ಕೆ ಸಂಕೋಚ ಮಾಡಿ, ಅರ್ಥೈಸುವುದೂ ಕೂಡ ತಪ್ಪಾಗುತ್ತದೆ.

**प्रकाशः** – सूत्रार्थस्तु ''शब्दादेव'' इति सूत्रात् मण्डूकप्लुत्या शब्दात् प्रमित इति पदद्वयमनुकृष्यते । तथाच कम्पनात् जगत्सर्वमेजतीति कृत्स्नकम्पयितृत्वश्रवणात्। सर्वशब्दादत्र परमात्मैव प्रमित इति ।

ಅದ್ವೈತಿಗಳ ಸೂತ್ರಾರ್ಥ ಹೀಗಿದೆ - 'ಶಬ್ದಾದೇವ' ಎಂಬ ಸೂತ್ರದಿಂದ ಮಂಡೂಕಪ್ಲುತಿಯಾಗಿ 'ಶಬ್ದಾತ್ ಪ್ರಮಿತಃ' ಎಂಬೆರಡು ಪದಗಳು ಇಲ್ಲಿ ಅನುವೃತ್ತವಾಗುತ್ತವೆ. ಆದ್ದರಿಂದ ಸಮಸ್ತ ಜಗತ್ತಿಗೆ ಭಯಪಡಿಸುತ್ತಾನಾದ್ದರಿಂದ ಬ್ರಹ್ಮನು ಪ್ರಾಣಶಬ್ದ ಪ್ರತಿಪಾದ್ಯನಾಗಿದ್ದಾನೆ ಮತ್ತು ಸರ್ವಶಬ್ದವಿರುವುದರಿಂದಲೂ ಪರಮಾತ್ಮನೇ ಪ್ರಾಣಶಬ್ದ ಪ್ರತಿಪಾದ್ಯನೆಂದು ಪ್ರಮಿತನಾಗಿದ್ದಾನೆ ಎಂದು...

ಪರಿಷ್ಕಾರಚಂದ್ರಿಕಾ

**प्रकाशः –** विषयानौचित्येन दूषयति – प्रागिति ।। असकृदुक्तेति ।। तथाच ब्रह्मण्यपि प्रसिद्धिरस्तीति प्राणवज्रश्रुतिबलाद्वाक्यं प्रकरणं च भङ्क्त्वा वायुः पञ्चवृत्तिराध्यात्मिको बाह्यवायुश्चात्र प्रतिपाद्यत इति भामत्युक्तिरयुक्तेति भावः ।

ಅದ್ವೈತಿಗಳ ಅಧಿಕರಣಶರೀರವನ್ನು ನಿರಾಕರಣೆ ಮಾಡುತ್ತಿದ್ದಾರೆ. ಮೊದಲು ಅವರು ಈ ಅಧಿಕರಣದಲ್ಲಿ ಮಾಡುತ್ತಿರುವ ಸಮನ್ವಯಶಬ್ದವೇ ಅನುಚಿತವಾಗಿದೆಯೆಂದು 'ಪ್ರಾಗ್‌ಅನುಕ್ತಸಮನ್ವಯೇ' ಇತ್ಯಾದಿ ಗ್ರಂಥದಿಂದ ದೂಷಿಸುತ್ತಿದ್ದಾರೆ. 'ಅಸಕೃದುಕ್ತ ಸಮನ್ವಯಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - ಈಗಾಗಲೇ ಪ್ರಥಮಪಾದದಲ್ಲಿ ಪ್ರಾಣಶಬ್ದವನ್ನು ಸಮನ್ವಯ ಮಾಡಿದ್ದಾಗಿದೆ. ಹೀಗೆ ಹೇಳಿದ್ದರಿಂದ ಭಾಮತಿಯ ಮಾತನ್ನು ಅಯುಕ್ತವೆಂದು ನಿರಾಕರಿಸಿದಂತಾಯಿತು. ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - 'ಬ್ರಹ್ಮಣ್ಯಪಿ ಪ್ರಸಿದ್ಧಿರಸ್ತೀತಿ ಪ್ರಾಣವಜ್ರಶ್ರುತಿಬಲಾದ್ವಾಕ್ಯಂ ಪ್ರಕರಣಂ ಚ ಭಂಕ್ತ್ವಾ ವಾಯುಃ ಪಂಚವೃತ್ತಿರಾಧ್ಯಾತ್ಮಿಕೋ ಬಾಹ್ಯವಾಯುಶ್ಚಾತ್ರ ಪ್ರತಿಪಾದ್ಯತೇ' ಬ್ರಹ್ಮನಲ್ಲಿಯೂ ಪ್ರಸಿದ್ಧಿಯಿರುವ ಕಾರಣ ಪ್ರಾಣಶ್ರುತಿ ಹಾಗೂ ವಜ್ರಶ್ರುತಿಗಳ ಬಲದಿಂದ ವಾಕ್ಯ ಹಾಗೂ ಪ್ರಕರಣಗಳು ಬಾಧಿತವಾಗಿ, ಶರೀರದೊಳಗಿರುವ ವಾಯು ಅಥವಾ ಹೊರಗಿರುವ ಬಾಹ್ಯವಾಯು ಪ್ರಾಣಶಬ್ದಪ್ರತಿಪಾದ್ಯವಾಗುತ್ತದೆ ಎಂಬ ಭಾಮತಿಯ ಮಾತು ಸರಿಯಲ್ಲ.

**प्रकाशः –** प्राणशब्दस्य विषयत्वं निरस्य वज्रशब्दे तु तद्युक्तमित्याह – किञ्चेति ।।

ಈ ಅಧಿಕರಣಕ್ಕೆ ಪ್ರಾಣಶಬ್ದವು ವಿಷಯವಾಗಿದೆಯೆಂಬುದನ್ನು ನಿರಾಕರಣೆ ಮಾಡಿ, ವಜ್ರಶಬ್ದವೇ ವಿಷಯವೆಂದು ಹೇಳಬೇಕೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ನಿರೂಪಣೆಮಾಡುತ್ತಿದ್ದಾರೆ.

**प्रकाशः –** सूत्रार्थोप्ययुक्तः । हेतूक्त्या समन्वीयमानस्योक्तदिशा सद्बीजस्य शब्दविशेषस्याध्याहारेण वज्रं ब्रह्म कम्पनादित्यन्वयसम्भवे क्लेशायोगात् । सर्वशब्दस्य साक्षाद्ब्रह्मप्रापकत्वाभावेनास्वारस्याच्चेति भावः ।।

ಅದ್ವೈತಿಗಳ ಸೂತ್ರಾರ್ಥವೂ ಕೂಡ ಅಯುಕ್ತವಾಗಿದೆ. ಏಕೆಂದರೆ ವಜ್ರಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆಂದು ಹೇಳಿದಾಗ, ಶ್ರುತಿಯಲ್ಲಿ ಅನೇಕ ಲಿಂಗಗಳಿರುತ್ತವೆ. ಮತ್ತು ಸೂತ್ರದಲ್ಲಿ 'ವಜ್ರಮ್ ತತ್' ಎಂದಷ್ಟೇ ವಿವಕ್ಷಿಸಿದರೆ ಸಾಕು. ಆದರೆ ನಿಮ್ಮ ಪ್ರಕಾರ 'ಶಬ್ದಾದೇವ ಪ್ರಮಿತಃ' ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇದರಿಂದ ಪ್ರಾಣಶಬ್ದವನ್ನು ಸಮನ್ವಯ ಮಾಡಬೇಕು. ಇದು ಅತ್ಯಂತ ಕ್ಲೇಶಕರವಾಗಿದೆ. ಮತ್ತು ಸರ್ವಶಬ್ದದ ಬಲದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ನೇರವಾಗಿ ಸಾಧಿಸುವುದು ಅಸ್ವರಸವಾಗಿದೆ. ಆದ್ದರಿಂದ ಅದ್ವೈತಿಗಳ ಅಧಿಕರಣಶರೀರ ಹಾಗೂ ಸೂತ್ರಾರ್ಥಗಳು ಅಯುಕ್ತವಾಗಿವೆ.



## ಸಾರ

ಕಾಠಕೋಪನಿಷತ್ತಿನ 'ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್' ಎಂಬ ವಾಕ್ಯವನ್ನು ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ಶರೀರದ ಒಳಗಿರುವ ಪ್ರಾಣಾಪಾನಾದಿ ಹೆಸರುಗಳನ್ನು ಹೊಂದಿರುವ ಪ್ರಾಣವಾಯುವೇ ಈ ವಾಕ್ಯದಿಂದ ಪ್ರತಿಪಾದ್ಯವಾಗಿದೆ. ಪ್ರಾಣವಾಯು ಐದುರೂಪಗಳಿಂದ ಜಗತ್ತಿನ ಚೇತನವರ್ಗವನ್ನು ಕ್ರಿಯಾಶೀಲಗೊಳಿಸುತ್ತದೆ. ಅಥವಾ ಧೂಮ, ಜ್ಯೋತಿ, ಸಲಿಲ ಇವುಗಳ ಸನ್ನಿಪಾತದಿಂದ ಬಾಹ್ಯವಾಯುವೇ ಮಿಂಚಿನ ರೂಪವನ್ನು ತಾಳಿ, ವಜ್ರಾಯುಧದಂತೆ ಜಗತ್ತಿಗೆ ಭಯವನ್ನು ನೀಡುತ್ತದೆ. ಆದ್ದರಿಂದ 'ಮಹದ್ಭಯಂ ವಜ್ರಮುದ್ಯತಮ್' ಎಂಬ ಉಪನಿಷತ್ತು ಬಾಹ್ಯವಾಯುವನ್ನು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಆಧ್ಯಾತ್ಮಿಕವಾದ ವಾಯುವಾಗಲೀ, ಬಾಹ್ಯವಾಯುವಾಗಲೀ ಮಂತ್ರಪ್ರತಿಪಾದ್ಯವೆಂದು ಪೂರ್ವಪಕ್ಷ.

ಸಿದ್ಧಾಂತ – 'ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ' ಎಂಬ ವಾಕ್ಯವು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆ. ಮುಂದಿನ ಮಂತ್ರದಲ್ಲಿಯೂ 'ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ' ಎಂಬುದಾಗಿ ಬ್ರಹ್ಮನಲಿಂಗವೇ ಶ್ರುತವಾಗಿದೆ. ಹಿಂದಿನ-ಮುಂದಿನ ಈ ಎರಡು ಮಂತ್ರಗಳ ಮಧ್ಯದಲ್ಲಿ 'ಪ್ರಾಣ ಏಜತಿ' ಎಂಬ ಮಂತ್ರವಿದೆ. ಇದೂ ಸಹ ಬ್ರಹ್ಮನನ್ನೇ ಪ್ರತಿಪಾದನೆ ಮಾಡಬೇಕು. ಸೂತ್ರದಲ್ಲಿರುವ ಹೇಳಿರುವ ಕಂಪಕತ್ವವು ಬ್ರಹ್ಮನ ಧರ್ಮವಾಗಿದೆ. 'ಪ್ರಾಣಸ್ಯ ಪ್ರಾಣಂ' ಎಂಬ ಇದೇ ಉಪನಿಷತ್ತು ಬ್ರಹ್ಮನಿಗೆ ಸರ್ವಜಗಚೇಷ್ಟಕತ್ವವನ್ನು ಹೇಳುತ್ತಿದೆ. ವಜ್ರಾಯುಧಕ್ಕೆ ಎಲ್ಲರೂ ಹೆದರುವಂತೆ, ಇಂತಹ ಬ್ರಹ್ಮನನ್ನು ನೋಡಿ ಎಲ್ಲರೂ ಹೆದರುತ್ತಾರೆ. ಆದ್ದರಿಂದ ಅವನೇ ಶಬ್ದವಾಚ್ಯನು. 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಿಂದ 'ಶಬ್ದಾದೇವ ಮತ್ತು ಪ್ರಮಿತಃ' ಎಂಬೆರಡು ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅಂದರೆ ಸರ್ವಶಬ್ದದ ಬಲದಿಂದ ಮತ್ತು ಕಂಪಕತ್ವಲಿಂಗದಿಂದ ಬ್ರಹ್ಮನೇ ಪ್ರಾಣಶಬ್ದವಾಚ್ಯನೆಂದು ಸೂತ್ರದ ಅರ್ಥ.

ಅದ್ವೈತಿಗಳ ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ ಸೂತ್ರದಲ್ಲಿ 'ಕಂಪನಾತ್' ಎಂದು ಹೇಳಿದ್ದರಿಂದ ಭಯಕ್ಕೆ ಕಾರಣವಾದುದು ವಜ್ರವೆಂದು ಶ್ರುತಿಯು 'ಮಹದ್ಭಯಂ ವಜ್ರಮುದ್ಯತಮ್' ಎಂದು ಹೇಳುತ್ತಿದೆ. ಆದ್ದರಿಂದ ಸೂತ್ರದಲ್ಲಿ ಹೇಳಿದ ಸಿದ್ಧಾಂತ ಯುಕ್ತಿಯು ವಜ್ರನಲ್ಲೇ ಅನ್ವಯವಾಗುತ್ತದೆ ಹೊರತು, ಪ್ರಾಣನಲ್ಲಿ ಅನ್ವಯವಾಗುವುದಿಲ್ಲ. ಆದ್ದರಿಂದ ವಜ್ರಶಬ್ದದ ಸಮನ್ವಯವೇ ಅತ್ಯಂತ ಸ್ವರಸ. ಮತ್ತು ಪ್ರಾಣಶಬ್ದದ ಸಮನ್ವಯವನ್ನು ಈಗಾಗಲೇ ಮಾಡಿದ್ದರಿಂದ ಪುನಃ ಅದನ್ನೇ ಸಮನ್ವಯ ಮಾಡುವುದರಲ್ಲಿ ಅರ್ಥವಿಲ್ಲ. ಅಷ್ಟೇ ಅಲ್ಲದೇ ಉದ್ಯತತ್ವ ಎಂಬ ಪೂರ್ವಪಕ್ಷ ಬೀಜವು ವಜ್ರನಲ್ಲೇ ಯುಕ್ತವಾಗುತ್ತದೆ ಹೊರತು, ಪ್ರಾಣನಲ್ಲಿ ಯುಕ್ತವಾಗುವುದಿಲ್ಲ. 'ಅಮೃತತ್ವಹೇತುವೇದನತ್ವ' ಎಂಬ ಸಿದ್ಧಾಂತಲಿಂಗವೂ ಕೂಡ ವಜ್ರದಲ್ಲೇ ಯುಕ್ತವಾಗುತ್ತದೆ. ಆದ್ದರಿಂದ ವಜ್ರಶಬ್ದದ ಸಮನ್ವಯವನ್ನು ಬಿಟ್ಟು ಪ್ರಾಣಶಬ್ದ ಸಮನ್ವಯವನ್ನು ಮಾಡುವುದು ಅಸಾಧುವಾಗಿದೆ.





## तात्पर्यचन्द्रिका

**केचित्तु ।। ''शब्दादेव प्रमित'' इत्यत्र ब्रह्मपरत्वेन निर्णीतयोः ''अङ्गुष्ठमात्रः पुरुषो मध्य आत्मनि तिष्ठति । अङ्गुष्ठमात्रः पुरुषोऽतरात्मा सदा जनानाम्'' इति वाक्ययोर्मध्यस्थे ''यदिदं किञ्च'' इति वाक्येऽन्यपरत्वशङ्काऽयोगान्नेदं सूत्रमधिकरणान्तरम् ।**[१]

ಅನುವಾದ - ರಾಮಾನುಜರು ಇದನ್ನು ಪ್ರತ್ಯೇಕ ಅಧಿಕರಣವೆಂದೇ ಪರಿಗಣಿಸಿಲ್ಲ. ಮುಂದಿನ 'ಜ್ಯೋತಿರ್ದರ್ಶನಾತ್' ಎಂಬುದರ ಜೊತೆಗೆ ಈ ಸೂತ್ರವನ್ನು ಸೇರಿಸಿದ್ದಾರೆ. ಏಕೆಂದರೆ 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ 'ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ' ಎಂಬ ವಾಕ್ಯವನ್ನು 'ಅಂಗುಷ್ಠಮಾತ್ರಃ ಪುರುಷೋಂತರಾತ್ಮಾ ಸದಾ ಜನಾನಾಮ್' ಎಂಬ ವಾಕ್ಯವನ್ನು ಬ್ರಹ್ಮಪರವೆಂದು ಸಮನ್ವಯ ಮಾಡಿದ್ದಾಗಿದೆ. ಈ ಎರಡು ವಾಕ್ಯಗಳ ಮಧ್ಯದಲ್ಲಿರುವ 'ಯದಿದಂ ಕಿಂಚ' ವಾಕ್ಯವೂ ಕೂಡ ಬ್ರಹ್ಮಪರವೇ ಆಗಬೇಕು. ಅನ್ಯಪರವಾಗಿದೆಯೆಂಬ ಆಶಂಕೆಯೇ ಹುಟ್ಟುವುದಿಲ್ಲ. ಹೀಗಿರುವಾಗ ಈ ಅಧಿಕರಣವನ್ನು ಪ್ರತ್ಯೇಕವೆಂದು ಏಕೆ ಪರಿಗಣಿಸಬೇಕು?

---

(१) **रामानुजभाष्यम् –**

तदेवं प्रसक्तानुप्रसक्ताधिकारकथां परिसमाप्य प्रकृतस्याङ्गुष्ठप्रमितस्य भूभव्येशितृत्वावगतपर ब्रह्मभावोत्तम्भनं हेत्वन्तरमाह –

**कम्पनात् ।। ४० ।।**

'अङ्गुष्ठमात्रः पुरुषो मध्य आत्मनि तिष्ठति' 'अङ्गुष्ठमात्रः पुरुषोऽन्तरात्मा' इत्यनयोर्वाक्ययोर्मध्ये 'यदिदं किञ्च जगत् सर्वं प्राण एजति निस्सृतम् । महद् भयं वज्रमुद्यतं य एतद् विदुरमृतास्ते भवन्ति । भयादस्याग्निस्तपति भयात्तपति सूर्यः । भयादिन्द्रश्च वायुश्च मृत्युर्धावति पञ्चमः ।।' इति कृत्स्नस्य जगतोऽग्निसूर्यादीनां चास्मिन्नङ्गुष्ठमात्रे पुरुषे प्राणशब्दनिर्दिष्टे स्थितायानां सर्वेषां ततो निस्सृतानां तस्मात् सञ्जातमहाभयनिमित्तं एजनं कम्पनं श्रूयते । तच्छासनातिवृत्तौ किं भविष्यतीति महतो भयाद् वज्रादिवोद्यतात् कृत्स्नं जगत् कम्पत इत्यर्थः । 'भयादस्याग्निस्तपति' इत्यनेनैकार्थ्यात् 'महद् भयं वज्रमुद्यतम्' इति पञ्चम्यर्थे प्रथमा । अयं च परस्य ब्रह्मणः स्वभावः 'एतस्य वा अक्षरस्य प्रशासने गार्गि सूर्याचन्द्रमसौ विधृतौ तिष्ठतः' 'भीषाऽस्माद् वातः पवते भीषोदेति सूर्यः । भीषाऽस्मादग्निश्चेन्द्रश्च मृत्युर्धावति पञ्चमः ।।' इति परस्य ब्रह्मणः पुरुषोत्तमस्यैवंविधैश्वर्यावगतेः ।।

**किंत्वङ्गुष्ठमात्रस्य ब्रह्मत्वे हेत्वन्तरं सत् ''शब्दादेव प्रमितः'' इत्येतदधिकरणशेष इत्याहुः ।**

ಆದ್ದರಿಂದ ಬ್ರಹ್ಮನು ಅಂಗುಷ್ಠಸ್ವರೂಪನಾಗಿದ್ದಾನೆಂದು 'ಶಬ್ದಾದೇವ ಪ್ರಮಿತ' ಎಂಬ ಸೂತ್ರವು ಪ್ರತಿಪಾದನೆ ಮಾಡಿದೆ. ಅದೇ ವಿಷಯದಲ್ಲೇ ಮತ್ತೊಂದು ಹೇತುವನ್ನು ಹೇಳುವುದಕ್ಕಾಗಿ ಈ ಅಧಿಕರಣವು ಹೊರಟಿದೆ. ಹಾಗಾಗಿ 'ಶಬ್ದಾದೇವ ಪ್ರಮಿತಃ' ಎಂಬ ಪ್ರಮಿತಾಧಿಕರಣದ ಶೇಷವೆಂದು ಹೇಳಬೇಕು.

**तन्न । श्रुत्यादिना प्रकरणबाधेन पूर्वपक्षोदयस्योक्तत्वात् ।**

ಇವರ ಮತವು ಅಯುಕ್ತವಾಗಿದೆ. ಏಕೆಂದರೆ ಶ್ರುತಿಯಿಂದ ಪ್ರಕರಣವು ಬಾಧಿತವಾಗಬಹುದು. ಹಾಗಾಗಿ ಹಿಂದಿನ-ಮುಂದಿನ ಪ್ರಕರಣಗಳು ಬ್ರಹ್ಮಪರವಾಗಿದ್ದರೂ ವಜ್ರಶ್ರುತಿಯ ಬಲದಿಂದ ವಜ್ರವೇ ಪ್ರತಿಪಾದ್ಯವಾಗಿರುತ್ತದೆಂಬ ಪೂರ್ವಪಕ್ಷವನ್ನು ನಾವು ಹಿಂದೆಯೇ ಸಮರ್ಥನೆ ಮಾಡಿದ್ದೇವೆ.

**अङ्गुष्ठवाक्यद्वयमध्य एव ''ऊर्ध्वमूलोऽवाक्शाख एषोऽश्वत्थः सनातन'' इति प्रपञ्चवाक्यदर्शनाच्च ।**

ಅಷ್ಟೇ ಅಲ್ಲದೆ, ಅಂಗುಷ್ಠವಾಕ್ಯದ್ವಯಗಳ ಮಧ್ಯದಲ್ಲೇ 'ಊರ್ಧ್ವಮೂಲೋಽವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ' ಎಂಬ ವಾಕ್ಯವಿದೆ. ಇದು ಪ್ರಪಂಚವನ್ನು ಕುರಿತು ಹೇಳುತ್ತದೆಂದು ನೀವೂ ಕೂಡ ಒಪ್ಪಿದ್ದೀರಿ? ಇದು ಹೇಗೆ ಸಾಧ್ಯ ?

**''शब्दादेव'' इत्येतदानन्तर्यस्य च शब्दस्य च प्रसङ्गाच्च ।**

ಮತ್ತು 'ಶಬ್ದಾದೇವ ಪ್ರಮಿತಃ' ಎಂಬ ಅಧಿಕರಣಕ್ಕೆ ಇದು ಶೇಷವಾಗಿದ್ದಲ್ಲಿ ಅದರ ಜೊತೆ ಈ ಸೂತ್ರವನ್ನು ಹೇಳಬೇಕಿತ್ತು.

**सूत्रे हेतुमात्रोक्तावपि ''अभिव्यक्तेः'' इत्यादाविव योग्यस्य साध्यस्याध्याहारसम्भवाच्च ।। टीकाक्षरार्थस्तु स्पष्टः ।।**

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् कम्पनाधिकरणं सम्पूर्णम् ।।

ಪರಿಪೂರ್ಣಚಂದ್ರಿಕಾ

ಸೂತ್ರದಲ್ಲಿ ಹೇತುವನ್ನಷ್ಟೇ ಹೇಳಿದ್ದರಿಂದ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಇತ್ಯಾದಿ ಸೂತ್ರಗಳಲ್ಲಿ ಯೋಗ್ಯವಾದ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ನೀವೇ ಹೇಗೆ ಹೇಳುತ್ತೀರೋ ಅದರಂತೆ ಈ ಸೂತ್ರದಲ್ಲಿಯೂ ವಜ್ರಶಬ್ದಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂಬ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬಹುದು.

ಟೀಕೆಯ ಕಠಿಣಪದಾರ್ಥಗಳನ್ನು ಉಪನ್ಯಾಸಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ಸ್ಪಷ್ಟಪಡಿಸಲಾಗಿದೆ.

ಇಲ್ಲಿಗೆ ವ್ಯಾಸತೀರ್ಥಶ್ರೀಪಾದಂಗಳವರಿಂದ ರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಸಂಪೂರ್ಣವಾಯಿತು.

**प्रकाशः –**

**केचित्त्विति** ।। श्रुतप्रकाशोक्तमनुवदति ।। **शब्दादेवेति** ।। नन्वेवं परमात्मपरत्वस्य प्रागेव निश्चयात्सूत्रवैयर्थ्यमित्याशङ्क्याह – **हेत्वन्तरमिति** ।। **प्रपञ्चेति** ।। तथाच तद्वदेव ''यदिदं किञ्च'' इति वाक्यं तन्मध्यस्थमप्यन्यपरमिति पूर्वपक्षोयुक्त इति भावः ।।

ವಿವರಣೆ - ರಾಮಾನುಜಭಾಷ್ಯದ ಅಧಿಕರಣಶರೀರವನ್ನು 'ಕೇಚಿತ್ತು' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. ಶ್ರುತಪ್ರಕಾಶದಲ್ಲಿ ಹೇಳಿದ್ದನ್ನು 'ಶಬ್ದಾದೇವ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡಿದ್ದಾರೆ. ಹಾಗಾದರೆ ಪರಮಾತ್ಮ ಪರತ್ವವು ಸಿದ್ಧವಾಗಿರುವಾಗ ಈ ಸೂತ್ರವು ವ್ಯರ್ಥವಲ್ಲವೆ? ಎಂಬ ಆಶಂಕೆಗೆ 'ಹೇತ್ವಂತರಮ್' ಎಂಬುದರಿಂದ ಉತ್ತರಿಸಿದ್ದಾರೆ. ಆದ್ದರಿಂದ 'ಯದಿದಂ ಕಿಂಚ' ಎಂಬ ವಾಕ್ಯವು ಬ್ರಹ್ಮಪರವಾಕ್ಯಗಳ ಮಧ್ಯದಲ್ಲಿದ್ದರೂ ಕೂಡ ಅನ್ಯಪರವಾಗಿದೆಯೆಂಬ ಪೂರ್ವಪಕ್ಷವು ಯುಕ್ತವಾಗುತ್ತದೆಂದು 'ಪ್ರಪಂಚ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**प्रकाशः – चशब्दस्येति** ।। ननु सूत्रे चशब्दाभावोऽनन्तरपूर्वाधिकरणशेषत्व-भ्रमानुदयार्थः । नत्वधिकरणान्तरत्वादिति श्रुतप्रकाश एव समाधानमुक्तमिति चेन्न ।

'ಕಂಪನಾತ್' ಎಂಬ ಸೂತ್ರವು 'ಶಬ್ದಾದೇವ ಪ್ರಮಿತಃ' ಎಂಬುದಕ್ಕೆ ಶೇಷವಾಗಿದ್ದಲ್ಲಿ ಹೇತ್ವಂತರವನ್ನು ಇದು ಹೇಳುತ್ತಿರುವ ಕಾರಣ, 'ಚ' ಶಬ್ದವನ್ನು ಸೂತ್ರದಲ್ಲಿ ಹೇಳಬೇಕಿತ್ತೆಂದು ಪ್ರಶ್ನಿಸಬಾರದು. ಏಕೆಂದರೆ ಹಿಂದಿನ ಅಪಶೂದ್ರಾಧಿಕರಣದ ಜೊತೆಗೆ ಈ ಸೂತ್ರವು ಶೇಷವಾಗಿದೆಯೆಂಬ ಭ್ರಮೆಯು ಹುಟ್ಟಬಾರದೆಂದು

ಸೂತ್ರಕಾರರು 'ಚ' ಶಬ್ದವನ್ನು ಹೇಳಿರುವುದಿಲ್ಲ. ಹೊರತು, ಬೇರೆ ಅಧಿಕರಣವೆಂಬ ದೃಷ್ಟಿಯಿಂದ 'ಚ' ಶಬ್ದವನ್ನು ಹೇಳಿಲ್ಲವೆಂದಲ್ಲ. ಈ ಸಮಾಧಾನವನ್ನು ಶ್ರುತಪ್ರಕಾಶದಲ್ಲಿ ಹೇಳಿದ್ದಾರಲ್ಲವೇ?

**प्रकाशः –** चशब्दाभावेपि व्यवहितशेषत्वापेक्षया सन्निहितशेष-त्वस्यैव प्रथमप्रतीतेः । अर्थानन्वयादनन्तरशेषत्वाभावे चावश्यकचशब्दप्रयोगेपि तत एव तच्छेषत्वप्रतीतेरभावोपपत्तेरिति भावः ।

ಉತ್ತರ - ಸೂತ್ರದಲ್ಲಿ 'ಚ' ಶಬ್ದವನ್ನು ಹೇಳದಿದ್ದರೂ ಕೂಡ ವ್ಯವಹಿತವಾದ ಯಾವುದೋ ಸೂತ್ರಕ್ಕೆ ಶೇಷವೆಂದು ಹೇಳುವುದಕ್ಕಿಂತ ಸನ್ನಿಹಿತವಾದ ಹಿಂದಿನ ಅಧಿಕರಣದ ಸೂತ್ರಕ್ಕೆ ಶೇಷವೆಂದು ಹೇಳುವುದೇ ಪ್ರಥಮಪ್ರತೀತವಾಗುತ್ತದೆ. 'ಚ' ಶಬ್ದವನ್ನು ಸೂತ್ರದಲ್ಲಿ ಹಾಕಿದರೂ ಕೂಡ ಹಿಂದಿನ ಅಪಶೂದ್ರಾಧಿಕರಣದ ಅರ್ಥದ ಜೊತೆಗೆ ಅನ್ವಯನ್ನು ಹೊಂದುವುದಿಲ್ಲ. ಆದ್ದರಿಂದ ಅವ್ಯವಹಿತವಾದ ಅಪಶೂದ್ರಾಧಿಕರಣಕ್ಕೆ ಇದು ಶೇಷವಾಗುವುದಿಲ್ಲ. ಹೀಗಿರುವಾಗ 'ಚ' ಶಬ್ದವನ್ನು ಹಾಕಿಲ್ಲವೆಂಬ ಕಾರಣದಿಂದ 'ಶಬ್ದಾದೇವ ಪ್ರಮಿತ' ಎಂಬ ಸೂತ್ರಕ್ಕೆ ಶೇಷವಾಗುತ್ತದೆಂಬ ನಿಲುವು ಸರಿಯಿಲ್ಲ.

**प्रकाशः – ननु सूत्रे समन्वीयमानशब्दानुक्तेः कथमधिकरणान्तरत्वमित्यत आह – सूत्र इति ।।**

ಸೂತ್ರದಲ್ಲಿ ಸಮನ್ವಯವನ್ನು ಮಾಡಬೇಕಾದ ಶಬ್ದವನ್ನೇ ಹೇಳದ ಕಾರಣ ಇದನ್ನು ಪ್ರತ್ಯೇಕ ಅಧಿಕರಣವೆಂದು ಹೇಗೆ ಪರಿಗಣಿಸುತ್ತೀರಿ? ಎಂಬ ಪ್ರಶ್ನೆಗೆ 'ಸೂತ್ರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –**यथात्वन्मतेऽभिव्यक्तेरुपासकानामभिव्यक्तयर्थप्रादेशमात्रत्वं परमात्मन इति साध्यमध्याह्रियते तथाऽत्रापि वज्रं ब्रह्मेति साध्यमध्याहार्यमित्यर्थः ।।

ಯಾವರೀತಿಯಾಗಿ ನಿಮ್ಮ ಮತದಲ್ಲಿ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಪ್ರಾದೇಶಮಾತ್ರತ್ವಮ್ ಪರಮಾತ್ಮನಃ' ಎಂಬ ಸಾಧ್ಯವನ್ನು ಅಧ್ಯಾಹಾರ ಮಾಡುತ್ತೀರೋ, ಅದರಂತೆ ನಾವೂ ಸಹ 'ವಜ್ರಂ ಬ್ರಹ್ಮ' ಎಂಬ ಸಾಧ್ಯವನ್ನು ಅಧ್ಯಾಹಾರ ಮಾಡುತ್ತೇವೆ.

**प्रकाशः – साध्यस्येति ।।** परमतरीत्या साध्यधर्मविशिष्टस्य पक्षस्येत्यर्थः । स्वमते तु साध्यबोधकस्य तत्पदस्य सर्वत्रानुवर्तनाद्वज्रमिति पक्षस्याध्याहार इति ध्येयम् ।

'ಸಾಧ್ಯಸ್ಯ' ಎಂದರೆ ಸಾಧ್ಯಧರ್ಮವಿಶಿಷ್ಟವಾದ ಪಕ್ಷವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದರ್ಥ. ಇದು ಅದ್ವೈತ ಮತದ ಪ್ರಕಾರ. ನಮ್ಮ ಮತದಲ್ಲಿ ಕೇವಲ 'ವಜ್ರಂ' ಎಂಬುದನ್ನಷ್ಟೇ ಅಧ್ಯಾಹಾರ ಮಾಡಿಕೊಂಡರೆ ಸಾಕು. 'ತತ್' ಎಂಬುದು ಎಲ್ಲಾ ಸೂತ್ರಗಳಲ್ಲಿ ಅನುವೃತ್ತವಾಗುತ್ತಿದೆ. ಆದ್ದರಿಂದ 'ವಜ್ರಂ' ಎಂಬ ಪಕ್ಷವನ್ನಷ್ಟೇ ಅಧ್ಯಾಹಾರವೆಂದು ನಮ್ಮ ಪ್ರಕಾರ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः**– एतेन भामतीरीतिमनुसरतः कस्यचिच्छैवस्य मतमपि प्रत्युक्तं बोध्यम् । ''नभस्वतोऽपि सर्वाः स्युश्चेष्टाभगवतो हरेः'' इति ''वर्जनाद्वज्रम्'' इत्यादिस्मृतिविरोधेन शिव इति सिद्धान्तस्यायुक्तत्वाच्चेति ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे कम्पनाधिकरणं सम्पूर्णम् ॥**

ಹೀಗೆ ಅದ್ವೈತಮತವನ್ನು ಖಂಡನೆ ಮಾಡಿದ್ದರಿಂದ ಶೈವರ ಮತವನ್ನೂ ಕೂಡ ಖಂಡನೆ ಮಾಡಿದಂತಾಯಿತು. ಭಾಮತಿಯ ರೀತಿಯನ್ನೇ ಶೈವರೂ ಸಹ ಅನುಸರಿಸಿದ್ದಾರೆ. ಪ್ರಾಣಶಬ್ದದಿಂದ ಶಿವನೇ ವಾಚ್ಯನಾಗುತ್ತಾನೆಂಬುದು ಇವರ ಸಿದ್ಧಾಂತ. ಆದರೆ 'ನಭಸ್ವತೋऽಪಿ ಸರ್ವಾಃ ಸ್ಯುಶ್ಚೇಷ್ಟಾಭಗವತೋ ಹರೇಃ' ಎಂಬ ಸ್ಮೃತಿಯಿಂದ ಮತ್ತು 'ವರ್ಜನಾದ್ವಜ್ರಮುಚ್ಯತೇ' ಎಂಬ ಶ್ರುತಿಯಿಂದ ವಿರೋಧ ಬರುವ ಕಾರಣ ಶ್ರೀಹರಿಯೇ 'ವಜ್ರ' ಶಬ್ದಪ್ರತಿಪಾದ್ಯನಾಗುತ್ತಾನೆ ಹೊರತು ಶಿವನಲ್ಲ. ಆದ್ದರಿಂದ ಶೈವರ ಅಭಿಪ್ರಾಯವು ಅಯುಕ್ತವಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ರಾಮಾನುಜ ಭಾಷ್ಯದಲ್ಲಿ 'ಕಂಪನಾತ್' ಮತ್ತು 'ಜ್ಯೋತಿರ್ದರ್ಶನಾತ್' ಎಂಬೆರಡು ಸೂತ್ರಗಳು 'ಶಬ್ದಾದೇವ ಪ್ರಮಿತಃ' ಎಂಬ ಪ್ರಮಿತಾಧಿಕರಣಕ್ಕೆ ಶೇಷವಾಗಿದೆ ಎನ್ನುತ್ತಾರೆ. ಪ್ರಾಸಂಗಿಕವಾಗಿ ವೇದವಿದ್ಯಾಧಿಕಾರವನ್ನು ದೇವತೆಗಳಿಗೆ ಸಮರ್ಥನೆ ಮಾಡಿ, ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲವೆಂದೂ ಕೂಡ ಸಮರ್ಥನೆ ಮಾಡಿರುತ್ತಾರೆ. ಪುನಃ ಅಂಗುಷ್ಠಮಾತ್ರನಾದ ಪುರುಷನು ಬ್ರಹ್ಮನೇ ಆಗಿದ್ದಾನೆನ್ನಲು 'ಕಂಪನಾತ್' ಎಂಬ ಸೂತ್ರವು ಹೊರಟಿದೆ. 'ಯದಿದಂ ಕಿಂಚ' ಎಂಬ ವಾಕ್ಯವೇ ಈ ಅಧಿಕರಣಕ್ಕೆ ವಿಷಯವಾಗಿದೆ. 'ಅಂಗುಷ್ಠಮಾತ್ರಃ ಪುರುಷಃ' ಎಂಬ ವಾಕ್ಯ ಹಾಗೂ 'ಅಂಗುಷ್ಠಮಾತ್ರಃ ಪುರುಷೋऽಂತರಾತ್ಮ' ಎಂಬ ವಾಕ್ಯಗಳ ನಡುವೆ 'ಯದಿದಂ ಕಿಂಚ' ಎಂಬ ವಾಕ್ಯವಿದೆ. ಈ ವಾಕ್ಯದಲ್ಲಿ ಅಂಗುಷ್ಠಪರಿಮಾಣನಾದ ಪುರುಷನನ್ನು 'ಪ್ರಾಣ' ಎಂದು ಕರೆದು, ಅಂತಹ ಪ್ರಾಣನಿಂದ ಭಯಗೊಂಡು

ಜಗತ್ತು ಕಂಪಿಸುತ್ತದೆಂದು ಹೇಳಲಾಗಿದೆ. ಇದು ಬ್ರಹ್ಮನ ಧರ್ಮವಾದ್ದರಿಂದ ಅಂಗುಷ್ಠಪರಿಮಾಣವುಳ್ಳ ಪುರುಷನು ಬ್ರಹ್ಮನೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

ಇವರ ಅಭಿಪ್ರಾಯ ಸರಿಯಿಲ್ಲ. ಏಕೆಂದರೆ ಒಂದು ವೇಳೆ ಇದು ವಾಮನಾಧಿಕರಣದ ಶೇಷವಾಗಿದ್ದಲ್ಲಿ ಅದರ ಜೊತೆ ಹೇಳಬೇಕಿತ್ತು. ಮತ್ತು ಅಂಗುಷ್ಠಪರಿಮಾಣವುಳ್ಳ ಪುರುಷನನ್ನು ಉಲ್ಲೇಖ ಮಾಡುವ ಎರಡು ವಾಕ್ಯಗಳಲ್ಲಿ 'ಊರ್ಧ್ವಮೂಲೋऽವಾಕ್‌ಶಾಖ ಏಷೋऽಶ್ವತ್ಥಃ ಸನಾತನ' ಎಂಬ ವಾಕ್ಯವಿದೆ. ಇದು ಪ್ರಪಂಚವನ್ನೇ ಪ್ರತಿಪಾದನೆ ಮಾಡುತ್ತದೆ. ಅದರಂತೆ 'ಮಹದ್ಭಯಂ ವಜ್ರಮುದ್ಯತಮ್' ಎಂಬ ವಾಕ್ಯವೂ ಕೂಡ ವಜ್ರನನ್ನು ಏಕೆ ಪ್ರತಿಪಾದನೆ ಮಾಡಬಾರದು? ಮತ್ತು 'ಶಬ್ದಾದೇವ' ಎಂಬ ಸೂತ್ರಕ್ಕೆ ಇದು ಶೇಷವಾದಲ್ಲಿ, 'ಚ' ಶಬ್ದವನ್ನು ಸೂತ್ರಕಾರರು ಹೇಳಬೇಕಿತ್ತು. ಮತ್ತು ಸೂತ್ರದಲ್ಲಿ ಹೇತುವನ್ನಷ್ಟೇ ಹೇಳಿದ್ದರೂ ಕೂಡ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಇತ್ಯಾದಿ ಸೂತ್ರಗಳಲ್ಲಿ ನೀವು ಹೇಗೆ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳುತ್ತಿರೋ ಅದರಂತೆ ಇಲ್ಲೂ ಕೂಡ 'ವಜ್ರ' ಶಬ್ದಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂಬ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.



# ಕಂಪನಾಧಿಕರಣ

(೧-೩-೧೦)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## कम्पनाधिकरणम् (१।३।१०)

**कम्पकः**

'ಕಂಪಕ' ಎಂದರೆ ಜಗಚ್ಚೇಷ್ಟಕವಾದ ಮಹಾವಿಷ್ಣುವೇ ವಜ್ರಪದದಿಂದ ಪ್ರತಿಪಾದ್ಯನಾಗಿದ್ದಾನೆ..

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## कम्पनाधिकरणम् (१।३।१०)

ननु देवतैरपि मोक्षार्थं ज्ञेयो जनार्दन इत्ययुक्तम् । 'यदिदं किञ्च जगत्सर्वं प्राण एजति निःसृतम् । महद्भयं वज्रमुद्यतं य एतद्विदुरमृतास्ते भवन्ति' इति काठके वज्रज्ञानादेव मोक्षोक्तेः । वज्रस्य चेन्द्रायुधे निरूढवज्रश्रुत्या 'तेनेन्द्रो वज्रमुदयच्छत्' इत्यादौ आयुधे प्रसिद्धोद्यतत्वलिङ्गेन चेन्द्रायुधत्वादित्यतः प्राप्तम् - कम्पनादिति । तदर्थः - शूद्रेतिकम्पक इति ।

ದೇವತಾಧಿಕರಣದಲ್ಲಿ ಮೋಕ್ಷಕ್ಕೋಸ್ಕರ ದೇವತೆಗಳೂ ಕೂಡ ಜನಾರ್ದನನನ್ನು ಉಪಾಸನೆ ಮಾಡಬೇಕೆಂದು ಹೇಳಲಾಯಿತು. ಇದು ತಪ್ಪು. ಏಕೆಂದರೆ, 'ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ ಭಯಂ ವಜ್ರಮುದ್ಯತಂ ಯ ಏತದ್ ವಿದುರಮೃತಾಸ್ತೇ ಭವಂತಿ ॥' ಇತ್ಯಾದಿಯಾದ ಕಾಠಕೋಪನಿಷತ್ತಿನಲ್ಲಿ ಯಾರು ವಜ್ರವನ್ನು ತಿಳಿಯುತ್ತಾರೋ, ಅವರಿಗೆ ಮೋಕ್ಷವು ದೊರೆಯುತ್ತದೆಂದು ಹೇಳಲಾಗಿದೆ. ಹೀಗಿರುವಾಗ ವಿಷ್ಣುವಿನ ಜ್ಞಾನದಿಂದ ಮೋಕ್ಷವೆಂದು ಹೇಳುವುದು ಸರಿಯಾಗುವುದಿಲ್ಲ.

ವಜ್ರಶಬ್ದವು ಇಂದ್ರಾಯುಧವಾದ ವಜ್ರದಲ್ಲಿ ರೂಢವಾಗಿರುವುದರಿಂದ ಮತ್ತು 'ತೇನೇಂದ್ರೋ ವಜ್ರಮುದಯಚ್ಛತ್' ಎಂಬಲ್ಲಿ ಇಂದ್ರಾಯುಧದಲ್ಲಿ ಪ್ರಸಿದ್ಧವಾದ 'ಉದ್ಯತತ್ವ' ಎಂಬ ಲಿಂಗವನ್ನು ಹೇಳಿರುವುದರಿಂದಲೂ ವಜ್ರಶಬ್ದವು ಇಂದ್ರಾಯುಧವನ್ನೇ ಪ್ರತಿಪಾದನೆ ಮಾಡುತ್ತದೆ. ಹೀಗಿರುವಾಗ, ವಿಷ್ಣುವಿನ ಜ್ಞಾನದಿಂದ ಮೋಕ್ಷವೆಂದು ಹೇಳಿದ್ದು ಹೇಗೆ ಸರಿ? ಈ ಆಶಂಕೆಗೆ 'ಕಂಪನಾತ್' ಎಂಬ ಸೂತ್ರದಿಂದ ಕೂಡಿದ ಕಂಪನಾಧಿಕರಣವು ಹೊರಟಿದೆ. ಇದರ ಸಾರವನ್ನೇ ಅಣುಭಾಷ್ಯದಲ್ಲಿ 'ಕಂಪಕಃ' ಎಂಬ ಪದದಿಂದ ಸಂಗ್ರಹಿಸಿದ್ದಾರೆ.

**उपलक्षणमेतत् । पूर्ववदनुषङ्गः । यदिदं सर्वं प्राणे स्थितं प्राणादेजति च । एजृ कम्पन इति धातोरेजतीत्याद्युक्तकम्पकादिः जगच्चेष्टकादिर्जनार्दनः । कस्माल्लोकप्रसिद्ध्या विष्णुलिङ्गेन च तदन्यत्र च वाचकैः वज्रोद्यतमहद्भयप्राणादिसर्वशब्दैः एको जनार्दन एव मुख्यतो वर्जनाद्वज्रमित्यादियोगरूढिभ्यां वाच्यः । न त्विन्द्रायुधम् ।**

ಉಪಲಕ್ಷಣತಯಾ ಇದನ್ನು ತಿಳಿಯಬೇಕು. ಹಿಂದಿನಂತೆ, ಇಲ್ಲಿಯೂ ಕೂಡ 'ಏಕೋ ಜನಾರ್ದನಃ' 'ತದನ್ಯತ್ರ ಚ ವಾಚಕೈಃ' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಈ ಜಗತ್ತೆಲ್ಲವೂ ಪ್ರಾಣಶಬ್ದಪ್ರತಿಪಾದ್ಯನಾದ ಪರಮಾತ್ಮನನ್ನು ಆಶ್ರಯಿಸಿದೆ. ಪ್ರಾಣನಾಮಕನಾದ ಪರಮಾತ್ಮನಿಂದಲೇ ಚಲಿಸುತ್ತಿದೆ. ಈ ಜಗಚ್ಚೇಷ್ಟಕತ್ವವನ್ನು ಮಾಡುತ್ತಿರುವವನು ಜನಾರ್ದನನೇ ಆಗಿದ್ದಾನೆ. 'ಏಜೃ ಕಂಪನೇ' ಎಂಬ ಧಾತುವಿನಿಂದ 'ಏಜತಿ' ಎಂಬ ಕ್ರಿಯಾಪದವು ನಿಷ್ಪನ್ನವಾಗಿದೆ. ಆದ್ದರಿಂದ, ಜಗಚ್ಚೇಷ್ಟಕತ್ವ ಎಂಬ ಅರ್ಥವು ದೊರೆಯುತ್ತದೆ. ಆದ್ದರಿಂದ ಲೋಕಪ್ರಸಿದ್ಧಿಯಿಂದ ಬೇರೆ ಪದಾರ್ಥಗಳನ್ನು ವಿಷ್ಣುಲಿಂಗದಿಂದ ವಿಷ್ಣುವನ್ನು ಪ್ರತಿಪಾದನೆ ಮಾಡುವಂತಹ ಉಭಯತ್ರ ಪ್ರಸಿದ್ಧವಾದ ವಜ್ರ, ಉದ್ಯತ, ಮಹದ್ ಭಯ, ಪ್ರಾಣ ಇತ್ಯಾದಿ ಸಕಲ ಶಬ್ದಗಳಿಂದ ಒಬ್ಬನೇ ಜನಾರ್ದನನು ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. 'ವರ್ಜನಾದ್ ವಜ್ರಃ' ಎಂಬ ಯೋಗದಿಂದಲೂ ವಿದ್ವದ್ರೂಢಿಯಿಂದಲೂ ವಜ್ರಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ, ಹೊರತು ಇಂದ್ರಾಯುಧವಲ್ಲ.

कुतः । कम्पको विष्णुः लिङ्गैः सर्वैर्युतो हि । लम्पकत्वतदुपलक्षितमुक्तिहेतुवेदनत्व – 'तदेव शुक्रं तद्ब्रह्म तदेवामृतं इति पूर्ववाक्योक्तामृतत्व ब्रह्मश्रुति-भयादस्याग्निस्तपति' इत्याद्युत्तरवाक्योक्ताग्न्यादिभयङ्करत्वादिलिङ्गैः युतत्वस्य विष्णौ श्रुत्यादिसिद्धत्वादित्यर्थः ।

ವಜ್ರಶಬ್ದದಿಂದ ವಿಷ್ಣುವೇ ಏಕೆ ಪ್ರತಿಪಾದ್ಯನಾಗಿದ್ದಾನೆ? ಎಂದರೆ, ಕಂಪಕನಾದವನು ಮಹಾವಿಷ್ಣುವೇ ಎಂಬ ವಿಷಯದಲ್ಲಿ ಅನೇಕ ಲಿಂಗಗಳಿರುತ್ತವೆ. ಜಗಚ್ಚೇಷ್ಟಕತ್ವ ಇದರಿಂದ ಉಪಲಕ್ಷಿತವಾದ ಮುಕ್ತಿಹೇತುಜ್ಞಾನವಿಷಯತ್ವ, 'ತದೇವ ಶುಕ್ರಂ ತದ್ ಬ್ರಹ್ಮ ತದೇವಾಮೃತಮ್' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಅಮೃತತ್ವ, ಬ್ರಹ್ಮಶ್ರುತಿ, 'ಭಯಾದಗ್ನಿಸ್ತಪತಿ' ಎಂಬ ಮುಂದಿನ ವಾಕ್ಯದಲ್ಲಿ ಬಂದಿರುವ ಅಗ್ನ್ಯಾದಿಭಯಂಕರತ್ವ ಇವೇ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ. ಆದ್ದರಿಂದ ವಜ್ರಶಬ್ದಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ಅವನ ಜ್ಞಾನವೇ ಮೋಕ್ಷಕ್ಕೆ ಸಾಧನವಾಗುತ್ತದೆ.

अत्र जनार्दन इत्यत्र जनेत्यनादित्वोक्त्या पूर्वार्धोक्तसर्वजनकत्वादि अर्दनेत्यंशे च 'य एताद्विदुः' इत्युक्तमुक्तिहेतुत्वं युक्तं तस्मिन्निति सूचितम् ।

ಪ್ರಕೃತ 'ಜನಾರ್ದನ' ಎಂಬಲ್ಲಿ 'ಜನ' ಎಂಬುದರಿಂದ ವಿಷ್ಣುವಿನ ಅನಾದಿತ್ವವು ಉಕ್ತವಾಗಿದೆ. 'ಅರ್ದನ' ಎಂಬುದರಿಂದ ಸಕಲ ಪದಾರ್ಥಗಳಿಗೆ ಜನಕನಾಗಿದ್ದಾನೆ ಎಂದು, ಅವನ ಜ್ಞಾನದಿಂದ ಮೋಕ್ಷವು ದೊರೆಯುತ್ತದೆಂದು ಶ್ರುತಿಯಲ್ಲಿರುವ ಎಲ್ಲ ವಿಚಾರಗಳನ್ನು 'ಜನಾರ್ದನಃ' ಎಂಬ ಒಂದೇ ಪದದಲ್ಲಿ ವ್ಯಕ್ತಪಡಿಸಿದ್ದಾರೆ.

अत्र यौगिकसमन्वेयवज्रशब्दार्थे वर्जित इति निर्देष्टव्ये कम्पक इति तत्साधकलिङ्गोक्तिः सूत्रोपात्तत्वाद्वा, वज्रनाम्नो वैष्णवत्वाद्वा, कम्पकत्वस्य विष्ण्वायत्तत्वाद्वेति ।

ಈ ಅಧಿಕರಣದಲ್ಲಿ ಯೌಗಿಕವಾದ ವಜ್ರಶಬ್ದದ ಸಮನ್ವಯವು ಪ್ರಸಕ್ತವಾಗಿದೆ. ಇದರ ಸಮನ್ವಯವನ್ನು ಅಣುಭಾಷ್ಯದಲ್ಲಿ 'ಕಂಪಕಃ' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ 'ವರ್ಜಿತಃ' ಎಂದೇ ಹೇಳಿದ್ದರೆ ಸ್ಪಷ್ಟವಾಗುತ್ತಿತ್ತು. ಆದರೂ 'ಕಂಪಕಃ' ಎಂದೇ ಹೇಳಲು ಕಾರಣವೇನೆಂದರೆ ಸೂತ್ರದಲ್ಲಿ 'ಕಂಪನಾತ್' ಎಂದು ಕಂಪಕತ್ವಧರ್ಮವನ್ನು ನಿರ್ದೇಶ ಮಾಡಿದ್ದರಿಂದ ಅದಕ್ಕನುಸಾರಿಯಾಗಿ 'ಕಂಪಕಃ' ಎಂದು ಹೇಳಿದ್ದಾರೆ. ಅಂದರೆ, ಕಂಪಕತ್ವವು ವಿಷ್ಣುವಿನ ಅಧೀನವಾಗಿದೆ ಎಂದು ತೋರಿಸುವುದು ಮುಖ್ಯ ಉದ್ದೇಶ.

ಅಥವಾ, ವಜ್ರಶಬ್ದವು ವಿದ್ವದ್ರೂಢಿಯಿಂದ ವಿಷ್ಣುವಿನ ನಾಮವಾಗಿದೆ. ಕಂಪಕತ್ವವು ಭಗವದಧೀನವಾಗಿದೆ ಎಂದು ತಿಳಿಸಲೂ ಕೂಡ 'ವರ್ಜಿತಃ' ಎಂದು ಹೇಳದೆ 'ಕಂಪಕಃ' ಎಂದು ಹೇಳಿರುತ್ತಾರೆ.

सूत्रे कम्पकत्वोक्तावपि लिङ्गैरित्यनेकलिङ्गोक्तिः तस्य उपलक्षणत्वसूचनाय । उक्तं च भाष्यटीकायां अत्रैव नये 'तदविहायैव लिङ्गान्तरस्याप्युक्तत्वात्' इति 'तदन्यत्राप्यनुसन्धेयं' इति च ।। १० ।।

ಸೂತ್ರದಲ್ಲಿ ಕಂಪಕತ್ವಲಿಂಗವನ್ನಷ್ಟೇ ಹೇಳಿದ್ದರೂ ಅದು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ಅನೇಕ ಲಿಂಗಗಳಲ್ಲೂ 'ಲಿಂಗೈಃ ಸರ್ವೈರ್ಯುತಃ' ಎಂದು ಸಂಗ್ರಹಿಸಿದ್ದಾರೆ. ತತ್ವಪ್ರಕಾಶಿಕೆಯಲ್ಲಿಯೂ ಸೂತ್ರದಲ್ಲಿ ಹೇಳಿದ ಲಿಂಗವನ್ನು ಉಪಲಕ್ಷಣವನ್ನಾಗಿ ಇಟ್ಟುಕೊಂಡು 'ತದಭಿಧಾಯ್ಯೈವ ಲಿಂಗಾಂತರಸ್ಯಾಪ್ಯುಕ್ತತ್ವಾತ್' ಬೇರೆ ಲಿಂಗಗಳನ್ನು ಕೂಡ ತಿಳಿದುಕೊಳ್ಳಬೇಕು ಎಂದು ಈ ಅಧಿಕರಣದಲ್ಲಿ ಹೇಳಿರುತ್ತಾರೆ. ಮತ್ತು, ಈ ಕ್ರಮವನ್ನು ಬೇರೆ ಅಧಿಕರಣಗಳಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕೆಂದು ಹೇಳಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## कम्पनाधिकरणम् (१।३।१०)

।। ॐ कम्पनात् ॐ ।। १-३-३९ ।।

अत्र वज्रनाम समन्वीयते । योग्यतया वज्र इत्यन्वेति । तत्तु इत्यस्ति । ''महद्भयं वज्रमुद्यतम्'' इत्युक्तवज्रो ब्रह्मैव । न त्विन्द्रायुधम् । कम्पनात् ''जगत्सर्वं प्राण एजति निःसृतम्'' इति कम्पनवचनात् जगच्चेष्टकत्वलिङ्गादित्यर्थः ।। १० ।।

ಈ ಅಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡುತ್ತಿದ್ದಾರೆ. 'ವಜ್ರ' ಎಂಬ ಪದವು ಇಲ್ಲಿ ಅನ್ವಯವನ್ನು ಹೊಂದುತ್ತದೆ. 'ತತ್ತು' ಎಂಬ ಪದಗಳೂ ಕೂಡ ಅನುವೃತ್ತವಾಗಿವೆ. 'ಮಹದ್ ಭಯಂ ವಜ್ರಮುದ್ಯತಮ್' ಎಂಬ ಶ್ರುತಿಯಲ್ಲಿ ಉಕ್ತವಾದ ವಜ್ರಶಬ್ದವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ, ಹೊರತು ಇಂದ್ರಾಯುಧವನ್ನಲ್ಲ. ಕಂಪನಾತ್ = 'ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್' ಇತ್ಯಾದಿಯಾಗಿ ಕಂಪನವನ್ನು ಹೇಳಿರುವುದರಿಂದ. 'ಕಂಪನ' ಎಂದರೆ 'ಜಗಚ್ಚೇಷ್ಟಕತ್ವ' ಎಂದರ್ಥ. ಇದು ಬ್ರಹ್ಮನ ಅಸಾಧಾರಣ ಧರ್ಮವಾಗಿದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## कम्पनाधिकरणम् (१।३।१०)

।। ॐ कम्पनात् ॐ ।। १० ।।

अत्र वज्रशब्दस्य पूर्वत्र शूद्रशब्दस्येव वाक्यशेषे क्लृप्तयोगाभावात् योगवृत्त्या न विष्णुवाचित्वमिति शङ्कनात्प्रत्युदाहरणसङ्गतिः । ''यदिदं किञ्च जगत्सर्वं प्राण एजति निःसृतम् । महद्भयं वज्रमुद्यतं य एतद्विदुः अमृतास्ते भवन्ति ।'' इति (का.२-३-२) काठके श्रुतो वज्रः किं इन्द्रायुधं उत विष्णुरिति सन्देहः । इन्द्रायुधमिति पूर्वः पक्षः ।।

ಈ ಅಧಿಕರಣದಲ್ಲಿ 'ವಜ್ರ' ಎಂಬ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮರ್ಥನೆ ಮಾಡಲಾಗಿದೆ. ಹಿಂದಿನ ಅಧಿಕರಣದಲ್ಲಿ ಶೂದ್ರ ಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಬೇಕು. ಏಕೆಂದರೆ, ವಾಕ್ಯಶೇಷದಲ್ಲಿ ಶೂದ್ರಶಬ್ದಕ್ಕೆ ಯೌಗಿಕಾರ್ಥವನ್ನೇ ಸ್ವೀಕರಿಸಬೇಕೆಂದು ಸಮರ್ಥಿಸಲಾಗಿದೆ. ಅದರಂತೆ, ವಜ್ರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಬೇಕೆನ್ನಲು ವಾಕ್ಯಶೇಷವಿಲ್ಲ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಪ್ರತ್ಯುದಾಹರಣಸಂಗತಿಯನ್ನು ತಿಳಿಯಬೇಕು.

'ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಮ್ । ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ' ಎಂಬುದಾಗಿ ಕಾಠಕೋಪನಿಷತ್ತಿನಲ್ಲಿ ವಜ್ರಶಬ್ದವು ಶ್ರುತವಾಗಿದೆ. ಇದು ದೇವೇಂದ್ರನ ವಜ್ರಾಯುಧವನ್ನು ಪ್ರತಿಪಾದನೆ ಮಾಡುತ್ತಿದೆಯೋ? ಅಥವಾ ಮಹಾವಿಷ್ಣುವನ್ನೋ? ದೇವೇಂದ್ರನ ವಜ್ರಾಯುಧವನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು ಪೂರ್ವಪಕ್ಷ.

वज्रशब्दस्य तत्र रूढत्वात् । वाक्यशेषे पूर्वत्रेव विष्णौ क्लृप्तयोगाभावात् ''वर्जनाद्वज्र'' मिति (ब्र.वै.पु) स्मृतेश्च वज्रश्रुतितः दुर्बलत्वात् ।

ವಜ್ರಶಬ್ದವು ದೇವೇಂದ್ರನ ಆಯುಧದಲ್ಲಿ ರೂಢವಾಗಿದೆ. ವಾಕ್ಯಶೇಷದಲ್ಲಿ ಹಿಂದಿನ ಅಧಿಕರಣದಲ್ಲಿ ಶೂದ್ರಶಬ್ದಕ್ಕೆ ಹೇಳಿದಂತೆ ಯೌಗಿಕಾರ್ಥವನ್ನು ಹೇಳಿರುವುದಿಲ್ಲ. ಮತ್ತು, 'ವರ್ಜನಾದ್ ವಜ್ರಮ್' ಎಂಬ ಬ್ರಹ್ಮವೈವರ್ತಪುರಾಣದ ವಚನವು ವಿಷ್ಣುವನ್ನು ಹೇಳುವುದಾದರೂ ಇಂದ್ರಾಯುಧವನ್ನು ಪ್ರತಿಪಾದನೆ ಮಾಡುವಂತಹ ವಜ್ರಶ್ರುತಿಗಿಂತ ದುರ್ಬಲವಾಗಿದೆ.

क्लृप्तरूढित्यागेन यौगिकतया विष्णुग्रहणे च अर्थान्तरेऽपि योगस्य सुवचत्वेन शब्दार्थाव्यवस्थाप्रसङ्गाच्च उद्यतत्वलिङ्गाच्च तस्य च ''उद्यतायुधदोर्दण्डाः'' (महाभारत) इत्यादिस्मृतौ ''तेनेन्द्रो वज्रमुदयच्छत्'' इति श्रुतौ च आयुधे प्रसिद्धत्वात् श्रुतिलिङ्गाभ्यां च मुक्तिहेतुवेदनत्वादिब्रह्मलिङ्गानां बाधादिति ॥

ಪ್ರಮಾಣಸಿದ್ಧವಾದ ರೂಢ್ಯರ್ಥವನ್ನು ಬಿಟ್ಟು ಯೋಗವೃತ್ತಿಯಿಂದ ವಿಷ್ಣುವೆಂಬರ್ಥವನ್ನು ಸ್ವೀಕರಿಸುವುದಾದರೆ ಬೇರೆ ಅರ್ಥಗಳಲ್ಲಿಯೂ ಯೋಗಾರ್ಥವನ್ನು ಮಾಡಬಹುದು. ಹಾಗೆ ಮಾಡಿದರೆ, ಶಬ್ದಾರ್ಥದ ವ್ಯವಸ್ಥೆಯೇ ಹಾಳಾಗುತ್ತದೆ. ಮತ್ತು, 'ಉದ್ಯತತ್ವ' ಎಂಬ ಲಿಂಗವು ಇಂದ್ರಾಯುಧವೇ ವಜ್ರವೆಂದು ಸಮರ್ಥಿಸುತ್ತಿದೆ. 'ಉದ್ಯತಾಯುಧದೋರ್ದಂಡಾಃ' ಎಂಬ ಮಹಾಭಾರತದ ವಚನದಲ್ಲಿ ಮತ್ತು 'ತೇನೇಂದ್ರೋ ವಜ್ರಮುದಯಚ್ಛತ್' ಎಂಬ ಶ್ರುತಿಯಲ್ಲಿ 'ಉದ್ಯತತ್ವ' ಎಂಬ ಲಿಂಗವು ಆಯುಧದಲ್ಲಿ ಪ್ರಸಿದ್ಧವಾಗಿದೆ. ಹೀಗೆ ಶ್ರುತಿ ಮತ್ತು ಲಿಂಗಗಳ ಆಧಾರದಿಂದ 'ಮೋಕ್ಷಹೇತುಭೇದನತ್ವ' ಎಂಬ ಬ್ರಹ್ಮನ ಲಿಂಗಗಳು ಬಾಧಿತವಾಗುತ್ತವೆ. ಹಾಗಾಗಿ, ವಜ್ರಶಬ್ದದಿಂದ ಮಹಾವಿಷ್ಣು ಪ್ರತಿಪಾದ್ಯನಾಗುವುದಿಲ್ಲ. ದೇವೇಂದ್ರನ ವಜ್ರಾಯುಧವೇ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ.

सिद्धान्तस्तु ॥ ''जगत्सर्वं प्राण एजति'' प्राणनिमित्तं कम्पते इति श्रुतसर्वचेष्टकत्वस्य ''को ह्येवान्यात्कः प्राण्यात्'' (तै.२-७) इत्यादिश्रुतिस्मृतिभिः विष्णोरन्यत्रानवकाशात् ।

ಸಿದ್ಧಾಂತ ಹೀಗಿದೆ - 'ಜಗತ್ ಸರ್ವಂ ಪ್ರಾಣ ಏಜತಿ' ಸಮಸ್ತ ಜಗತ್ತು ಪ್ರಾಣನಿಂದ ವ್ಯಾಪಾರ ಮಾಡುತ್ತಿದೆ ಎಂಬುದಾಗಿ ಸಕಲ 'ಜಗಚ್ಚೇಷ್ಟಕತ್ವ' ಎಂಬ ಲಿಂಗವು ಶ್ರುತವಾಗಿದೆ. 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಇತ್ಯಾದಿಯಾದ ತೈತ್ತಿರೀಯ ಶ್ರುತಿ ಹಾಗೂ ಸ್ಮೃತಿಗಳಿಂದ 'ಸರ್ವಜಗಚ್ಚೇಷ್ಟಕತ್ವ' ಎಂಬ ಧರ್ಮವು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಕೂಡ ಬರುವುದಿಲ್ಲವೆಂದು ಸಿದ್ಧವಾಗಿದೆ.

ಪರಿಪೂರ್ಣಚಂದ್ರಿಕಾ

**वज्रश्रुतेश्च श्रुत्युपबृंहकस्मृत्युक्तेन** निरवकाशयोगेन ''आयुधानामहं वज्रं'' इति (भ,गी.१०-२८) **प्रयोगाच्च** विष्णौ सावकाशत्वात् ।

**ವಜ್ರಶ್ರುತಿಯಾದರೂ** ಶ್ರುತಿಗೆ ಇತಿಕರ್ತವ್ಯತಾರೂಪವಾದ ಸ್ಮೃತಿಯ ಆಧಾರದಿಂದ ಸಾವಕಾಶವಾಗಿದೆ. ನಿರವಕಾಶವಾದ ಯೋಗದ ಬಲದಿಂದ 'ಆಯುಧಾನಾಮಹಂ ವಜ್ರಮ್' ಎಂಬ ಗೀತೆಯ **ಮಾತಿನಿಂದಲೂ** ವಿಷ್ಣುವಿನಲ್ಲೇ ವಜ್ರಶಬ್ದವು ಯುಕ್ತವಾಗುತ್ತದೆ. ಇಂದ್ರಾಯುಧವಾಚಕವಾದ ಶ್ರುತಿಯು ಸಾವಕಾಶವಾಗುತ್ತದೆ.

**योगस्य स्मार्तत्वादेव** अव्यवस्थानापत्तेः । उद्यतत्वलिङ्गस्य च उत्पूर्वस्य **यतेरूपतया उत्कृष्टप्रयत्नवत्त्वरूपतया** विष्णावपि सम्भवात् इदं वज्रं विष्णुरेवेति ।।

ಮತ್ತು ಮಹಾವಿಷ್ಣುವಿನಲ್ಲಿ ಹೇಳುತ್ತಿರುವ ಯೌಗಿಕಾರ್ಥವು ಸ್ಮೃತಿಸಿದ್ಧವಾದ್ದರಿಂದ ಶಬ್ದಾರ್ಥದ ಅವ್ಯವಸ್ಥೆಗೆ **ಅವಕಾಶವಿರುವುದಿಲ್ಲ**. 'ಉದ್ಯತಸ್ತು' ಎಂಬ ಲಿಂಗವಾದರೋ ಉತ್ಕೃಷ್ಟಪ್ರಯತ್ನವತ್ವ ಎಂಬ ಧರ್ಮವನ್ನು ಹೇಳುತ್ತಿದೆ. ಇದು ಮಹಾವಿಷ್ಣುವಿನಲ್ಲೇ ಯುಕ್ತವಾಗುತ್ತದೆ. ಆದ್ದರಿಂದ, ವಜ್ರಶಬ್ದವು **ಮಹಾವಿಷ್ಣುವನ್ನೇ** ಪ್ರತಿಪಾದಿಸುತ್ತದೆಂದು ಸಿದ್ಧವಾಯಿತು.

**फलं तु विष्णोः मुक्तिहेतुवेदनत्वाक्षेपः तत्समाधिश्च** ।। १० ।।

ಈ ಅಧಿಕರಣದ ಫಲಫಲಿಭಾವ ಹೀಗಿದೆ - ವಿಷ್ಣುವಿಗೆ ಮೋಕ್ಷಹೇತುಜ್ಞಾನವಿಷಯತ್ವ ಎಂಬುದನ್ನು ಆಕ್ಷೇಪ ಮಾಡುವುದು ಪೂರ್ವಪಕ್ಷದ ಫಲ. ಅದರ ನಿರಾಕರಣೆಯು ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಕಂಪನಾಧಿಕರಣವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# सूत्रार्थरत्नावळिः

## कम्पनाधिकरणम् (१।३।१०)

अत्र वज्रनाम ब्रह्मणि समन्वीयते ।।

**ॐ।। कम्पनात् ।।ॐ १-३-३९**

ननु 'यदिदं किम्?' (कठ. ६-२) इत्यत्रोक्तं वज्रमिन्द्रायुधमेव स्यात् । वज्रश्रुतेः । उद्यतत्वलिङ्गाच्च । तद्ध्यायुध एवोपपद्यते । नच वज्रज्ञानेन मोक्षोक्तेर्विष्णुरिति वाच्यम् । लिङ्गमात्रात् श्रुतिलिङ्गयोः प्राबल्यात् । नच लिङ्गस्य निरवकाशतया प्राबल्यम् । श्रुतिलिङ्गयोरपि निरवकाशत्वात् । न चैवं सति मोक्षजनकज्ञानविषयत्वलिङ्गस्य विष्ण्वैकनिष्ठत्वविघातादस्य वज्रस्येन्द्रायुधत्वं नानिष्टमिति वाच्यम् । फलोपहितस्य मोक्षजनकज्ञानविषयत्वलिङ्गस्याविघातेऽपि तद्योग्यत्वरूपलिङ्गस्य विष्ण्वैकनिष्ठत्वविघातात् । ततश्च वज्रमिन्द्रायुधमेवेति, न विष्णुज्ञानादेव मोक्षः इति प्राप्ते, सूत्रमाह –

ॐ।। कम्पनादिति ।। अस्यार्थः – 'महद्भयं वज्रम्' इति वज्रशब्दवाच्यो विष्णुरेव । न त्विन्द्रायुधम् । कुतः? कम्पनात् 'सर्वं प्राण एजति' (कठ. ६-२) इति कम्पनशब्दितसर्वचेष्टकावलिङ्गश्रवणादित्यर्थः ।

एवं च 'एजति' इति कम्पनवचनात् । 'अमृतास्त' (कठ. ६-२) इति फलोपहित मोक्षजनकज्ञानविषयत्वाभिधानात् । न चोद्यतत्वलिङ्गविरोधः । उद्यतत्वलिङ्गस्योद्यमित्त्वार्थत्वेन सावकाशत्वात् । नच वज्रश्रुतिविरोधः । वज्रश्रुतेरपि 'वर्जनाद् वज्र इति उच्यते' इति वचनात् सावकाशत्वात् । ततश्च 'विष्णुरेव वज्रः' इति 'तस्यैव मोक्षजनकज्ञानयोग्यता' इति सिद्धम् ।।*।।

।। इति सूत्रार्थरत्नावळ्यां कम्पनाधिकरणम् ।।

# ಜ್ಯೋತಿರಧಿಕರಣ

(೧-೩-೧೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಜ್ಯೋತಿರಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ನಮ್ಮ ಹೃದಯದ ಜ್ಯೋತಿ ಮಹಾವಿಷ್ಣು, ಜೀವನಲ್ಲ

॥ अथ ज्योतिरधिकरणम् ॥

**सू – ॥ ॐ ज्योतिर्दर्शनात् ॐ ॥ ४० ॥**

ಸೂತ್ರಾರ್ಥ - 'ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ', ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿರುವ 'ಜ್ಯೋತಿ' ಮಹಾವಿಷ್ಣುವೇ ಆಗಿದ್ದಾನೆ ಹೊರತು ಜೀವನಲ್ಲ. ಏಕೆಂದರೆ ವಿಷ್ಣುರೇವ ಜ್ಯೋತಿಃ ಎಂಬುದಾಗಿ ವಿಷ್ಣುಪರವಾದ ಶ್ರುತಿ ಇರುವುದರಿಂದ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಜ್ಯೋತಿರಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** 'योऽयमन्तर्ज्योतिः' इति ज्योतिशब्दवाच्यो विष्णुरेव न जीवः। कुतः? दर्शनात् 'विष्णुरेव ज्योतिः' इति श्रुतेरित्यर्थः ॥१॥

ಪರಿಪೂರ್ಣಚಂದ್ರಿಕಾ

ಅರ್ಥ -- ಜ್ಯೋತಿಃ = 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬಲ್ಲಿ ಶ್ರುತವಾದ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ ಹೊರತು ಜೀವನಲ್ಲ. ಏಕೆಂದರೆ ದರ್ಶನಾತ್ = 'ವಿಷ್ಣುರೇವ ಜ್ಯೋತಿಃ', 'ವಿಷ್ಣುರೇವ ಬ್ರಹ್ಮ' ಎಂಬುದಾಗಿ ವಿಷ್ಣುವಿಷಯಕಶ್ರುತಿ ಇರುವುದರಿಂದ.

॥ ಸೂತ್ರದೀಪಿಕೆಯಲ್ಲಿ ಜ್ಯೋತಿರಧಿಕರಣವು ಸಮಾಪ್ತವಾಯಿತು ॥

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – हृदय आहितं ज्योतिः परमात्मेत्युक्तम् । तत्र 'योऽयं विज्ञानमयः प्राणेषु हृद्यन्तर्ज्योतिः पुरुष' (बृ.उ. ६-३-७) इत्यत्र 'उभौ लोकावनुसञ्चरति' (बृ. उ. ६-३-७) इति वचनाज्जीव इति प्रतीयते इति ।**

ಅನುವಾದ - ಪ್ರಥಮಪಾದದ ಜ್ಯೋತಿರಧಿಕರಣದಲ್ಲಿ ಹೃದಯದಲ್ಲಿರುವ ಜ್ಯೋತಿಯೆಂದರೆ ಪರಮಾತ್ಮನೇ ಆಗಿದ್ದಾನೆಂದು ಸಮರ್ಥಿಸಲಾಯಿತು. ಆದರೆ, ಅದೇ ಜ್ಯೋತಿಯ ಬಗ್ಗೆ ಬೃಹದಾರಣ್ಯಕೋಪನಿಷತ್ತು 'ಇಂದ್ರಿಯಗಳಲ್ಲಿ ಮತ್ತು ಹೃದಯದಲ್ಲಿ ಇರುವ ವಿಜ್ಞಾನಮಯನಾದ ಪುರುಷನು ಜ್ಯೋತಿಯಾಗಿದ್ದಾನೆ' ಎಂದು ಹೇಳುತ್ತಿದೆ. ಈ ಜ್ಯೋತಿಯು 'ಭೂಲೋಕ ಹಾಗೂ ಸ್ವರ್ಗಲೋಕಗಳಲ್ಲಿ ಸಂಚಾರ ಮಾಡುತ್ತದೆ' ಎಂದು ಹೇಳಿದ್ದರಿಂದ ಜೀವನೇ ಜ್ಯೋತಿಯಾಗಬೇಕೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ 'ಜ್ಯೋತಿ' ಎಂಬ ನಾಮಾತ್ಮಕ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಮೊದಲು ಶ್ರುತ್ಯಾದಿಸಂಗತಿ ಮತ್ತು ವಿಷಯಾದಿಗಳನ್ನು ತೋರಿಸುತ್ತಿದ್ದಾರೆ –

ಹೃದಯೇ ಆಹಿತಂ = ಹೃದಯ ಗುಹೆಯಲ್ಲಿರುವ, ಜ್ಯೋತಿಃ = ಜ್ಯೋತಿಯು, ಪರಮಾತ್ಮಾ = ಪರಮಾತ್ಮನೇ ಆಗಿದ್ದಾನೆಂದು, ಇತಿ = ಹೀಗೆ, ಉಕ್ತಮ್ = ಪ್ರಥಮ ಪಾದದ ಜ್ಯೋತಿರಧಿಕರಣದಲ್ಲಿ ಹೇಳಲಾಗಿದೆ, ತತ್ರ = ಅಲ್ಲಿ ಇದೇ ಜ್ಯೋತಿಯ ಬಗ್ಗೆ, ಯೋಽಯಂ =ಯಾವ ಪ್ರಸಿದ್ಧವಾದ, ವಿಜ್ಞಾನಮಯಃ = ವಿಜ್ಞಾನಮಯನೇ, ಪ್ರಾಣೇಷು = ಇಂದ್ರಿಯಗಳಲ್ಲಿ, ಹೃದಿ = ಹೃದಯದಲ್ಲಿ, ಅಂತಃ = ಇರುವ, ಪುರುಷಃ = ಪುರುಷನೇ, ಜ್ಯೋತಿಃ = ಜ್ಯೋತಿಯಾಗಿರುತ್ತಾನೆ, ಇತ್ಯತ್ರ = ಈ ವಿಷಯದಲ್ಲಿ, ಮುಂದೆ, ಉಭೌ ಲೋಕೌ = ಭೂಲೋಕ ಹಾಗೂ

ಸ್ವರ್ಗಲೋಕಗಳಲ್ಲಿ, ಅನುಸಂಚರತಿ = ಸಂಚರಿಸುತ್ತದೆ. ಇತಿ ವಚನಾತ್ = ಹೀಗೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದ್ದರಿಂದ, ಜೀವಃ ಇತಿ = ಜೀವನೇ ಜ್ಯೋತಿಯಾಗಿದ್ದಾನೆ ಎಂದು, ಪ್ರತೀಯತೇ = ತೋರುತ್ತದೆ. ಇತಿ = ಇಷ್ಟು ಪೂರ್ವಪಕ್ಷ.[(१)]

---

(१) **भाष्यदीपिका** – अत्राधिकरणे उभयत्र प्रसिद्धज्योतिर्नाम **समन्वीयते** । श्रुत्यादिसङ्गतिं विषयादिकं च दर्शयति – **हृदय इति** ।। यद्धृदये **'आहितं'** निहितं ज्योतिः तच्छब्दवाच्यं स परमात्मेति ज्योतिर्नयेऽभिहितमित्यर्थः । ततः किमित्यत आह – **तत्रेति** ।। ज्योतिर्विषय इत्यर्थः । इतिशब्दात् परं श्रूयत इति शेषः । ततोऽपि किमित्यत आह – **अत्रेति** ।। एतद्वाक्य इत्यर्थः । श्रुतं ज्योतिरित्यनुषज्यते । तथा चात्र श्रुतं ज्योतिः तच्छब्दवाच्यो ज्ञानात्मको जीव एवेति प्रतीयते । कुतः ? **'स समानः सन्नुभौ लोकावनुसञ्चरति'** इति वचनाद् इत्यादिर्जीवलिङ्गाभिधायकवाक्यशेषादिति योजना । अनेन **'हृद्यन्तर्ज्योतिः'** इति वाजसनेयवाक्योक्तज्योतिषो विष्णुत्वाक्षेपमुखेन पूर्वोक्तस्यापि तदाक्षेपात् तेनास्याऽक्षेपिकी सङ्गतिरुक्ता भवति । वाजसनेयोक्तं ज्योतिर्विषयः, जीव एवेदं ज्योतिरिति पूर्वपक्षश्च सूचितः । वाजसनेयके हि अयं पुरुषः 'किंज्योतिः' किंज्ञानसाधनः जीवस्य ज्ञानसाधनं किमिति जनकेन पृष्टो याज्ञवल्क्यः **'आदित्यज्योतिः सम्राडिति होवाच'** (बृ.६.३.२) इत्यनेन हे 'सम्राट्' सार्वभौम जनकराज ! आदित्याख्यज्ञानसाधनकोऽयं पुरुष इत्युवाच। एवङ्क्रमेण प्रश्नोत्तराभ्यां जाग्रद्दशायामादित्यचन्द्राग्निवाचां मध्ये पूर्वपूर्वास्तमये उत्तरोत्तरज्योतिष्ट्वं जीवस्याभिधाय पुनः सुप्तिस्वप्नयोरादित्यादिषु चतुर्ष्वस्तमितेषु **'किंज्योतिरयं पुरुषः'** (बृ.६.३.२.) इति जनकेन पृष्टो याज्ञवल्क्यः **'आत्मैवास्य ज्योतिर्भवति'** इति तयोर्जीवस्य स्वप्रकाशपरमात्मज्योतिष्ट्वमुक्त्वा पुनः **'कतमात्मा'** (बृ.६.३.७) इति ज्योतिष्ट्वेनोक्त आत्मा कतमः कीदृश इति पृष्टो **'योऽयम्'** इत्यनेन जीवदेहेन्द्रियादिविविक्तः परमात्मेत्युत्तरमाहेत्युक्तम् । यो **'विज्ञानमयः'** विज्ञानपूर्णः **'प्राणेषु'** इन्द्रियेष्वन्तः हृद्यन्तश्च नियन्तृत्वेन वर्तमानो **'ज्योतिः'** जीवस्य बुद्ध्यादिद्योतकः **'पुरुषः'** पूर्णषड्गुणोऽस्ति । सोऽयमात्मेत्यर्थः । तस्य महिमानमाह – **स इति** ।। **'सः'** आत्मा परमात्मा **'समानः'** अविकारः सदैकरूपः सन् **'उभौ लोकौ'** भूलोकद्युलोकौ जाग्रत्सुषुप्ती वा प्रतिजीवमादाय तमनुसञ्चरतीत्यर्थः । पूर्वपक्षी तु, आत्मपदं स इति पदं च जीवपरम् उभयलोकसञ्चरणमपि कर्माधीनं विवक्षितं, तच्च लिङ्गं कर्मवशात् तस्यैवेति मन्यते ।

**भाष्यम् – अत उच्यते –**

**ॐ ज्योतिर्दर्शनात् ॐ ॥ ४० ॥**

**'विष्णुरेव ज्योतिर्विष्णुरेव ब्रह्मा विष्णुरेवाऽऽत्मा विष्णुरेव बलं विष्णुरेव यशो विष्णुरेवाऽऽनन्द' इति दर्शनाच्चतुर्वेदशिखायां ज्योतिर्विष्णुरेव ।**

**ಅನುವಾದ - ಈ ಆಕ್ಷೇಪಕ್ಕೆ ಉತ್ತರಿಸಲು ಸೂತ್ರಕಾರರು ಹೇಳುತ್ತಿದ್ದಾರೆ. ವಿಷ್ಣುವೇ ಜ್ಯೋತಿ, ವಿಷ್ಣುವೇ ಆತ್ಮಾ, ವಿಷ್ಣುವೇ ಬ್ರಹ್ಮ, ವಿಷ್ಣುವೇ ಬಲ, ವಿಷ್ಣುವೇ ಯಶಸ್ಸು, ವಿಷ್ಣುವೇ ಆನಂದನು ಆಗಿದ್ದಾನೆಂದು ಹೇಳಿದ್ದರಿಂದ, ಇಲ್ಲಿ ಹೇಳಿದ ಜ್ಯೋತಿಯು ವಿಷ್ಣುವೇ ಆಗಿದ್ದಾನೆಂದು ಚತುರ್ವೇದ ಶಿಖೆಯು ಹೇಳುತ್ತಿದೆ.**

(१)ಪ್ರತಿಪದಾರ್ಥ -- ಸಿದ್ಧಾಂತಸ್ಥಾಪನೆಗಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ –

ವಿಷ್ಣುರೇವ = ವಿಷ್ಣುವೇ, ಜ್ಯೋತಿಃ = ಜ್ಯೋತಿಯು, ವಿಷ್ಣುರೇವ = ವಿಷ್ಣುವೇ, ಆತ್ಮಾ = ಆತ್ಮನು, ವಿಷ್ಣುರೇವ = ವಿಷ್ಣುವೇ, ಬ್ರಹ್ಮಾ = ಗುಣಪರಿಪೂರ್ಣನಾದ ಬ್ರಹ್ಮಶಬ್ದವಾಚ್ಯನು, ವಿಷ್ಣುರೇವ = ವಿಷ್ಣುವೇ, ಬಲಂ = ಬಲರೂಪನು, ವಿಷ್ಣುರೇವ = ವಿಷ್ಣುವೇ, ಯಶಃ = ಯಶೋರೂಪನು, ವಿಷ್ಣುರೇವ = ವಿಷ್ಣುವೇ, ಆನಂದ = ಆನಂದಮಯರೂಪನು, ಇತಿ = ಹೀಗೆ, ಚತುರ್ವೇದಶಿಖಾಯಾಂ = ಚತುರ್ವೇದಶಿಖೆಯೆಂಬ ವೇದಭಾಗದಲ್ಲಿ, ದರ್ಶನಾತ್ = ಕಾಣಸುತ್ತಿರುವುದರಿಂದ, ಜ್ಯೋತಿಃ = ಜ್ಯೋತಿಃಶಬ್ದವಾಚ್ಯನಾದವನು, ವಿಷ್ಣುರೇವ = ಮಹಾವಿಷ್ಣುವೇ ಆಗಿದ್ದಾನೆ.

---

(१) **भाष्यदीपिका** – सिद्धान्तयत्सूत्रमवतार्य दर्शनपदोक्तश्रुत्युदाहरणपूर्वकं व्याचष्टे – अत इति ॥ **'विष्णुरेव ज्योतिः.. विष्णुरेवाऽनन्दः'** इति चतुर्वेदशिखायामिति 'दर्शनात्' विष्णुरेव मुख्यतो ज्योतिश्शब्दित इत्युक्तत्वात् 'ज्योतिः' तच्छब्दवाच्यो विष्णुरेव, न जीव इत्यर्थः । विष्णुरेवेत्यनेन तत्त्वित्यनुवृत्तस्यार्थ उक्तः । श्रुत्यर्थस्तु स्पष्टः । विशेषस्तु – बलं बलप्रदः । **'स वै बलं बलिनां चापरेषाम्'** (भाग.७) इति च भागवते । विष्णुरेव यशः **'तस्य नाम महद्यशः'** (महाना.१.१०) इति श्रुतिरिति तत्त्वप्रदीपेऽभिहितम् । ब्रह्मादिशब्दवज्ज्योतिश्शब्दोऽपि विष्ण्वेकनिष्ठ इति ज्ञापनाय समग्रवाक्योदाहरणम् । अत एव श्रुतावेवकारः ।

**भाष्यम् – 'प्राज्ञेनाऽऽत्मनाऽन्वारूढ उत्सर्जयाति' (बृ.उ. ६-५-३५) इति वचनात्तस्यापि लोकसञ्चरणमस्त्येव ॥४०॥**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये ज्योतिरधिकरणम्।। ११।।**

ಅನುವಾದ - ಜೀವನು ಪರಮಾತ್ಮನನ್ನು ಆಶ್ರಯಿಸಿ ಮರಣ ಸಂದರ್ಭದಲ್ಲಿ ದೇಹವನ್ನು ಬಿಟ್ಟು ಲೋಕಾಂತರಕ್ಕೆ ತೆರಳುತ್ತಾನೆ. ಹೀಗೆ ಹೇಳಿದ್ದರಿಂದ, ಪರಮಾತ್ಮನಿಗೂ ಕೂಡ ಲೋಕಸಂಚಾರವಿದೆ ಎಂದು ತಿಳಿಯುತ್ತದೆ.?

ಪ್ರತಿಪದಾರ್ಥ -- ವಿಷ್ಣುವೇ ಜ್ಯೋತಿಯಾದರೆ, ಉಭಯಲೋಕಸಂಚರಣವೆಂಬ ಲಿಂಗವಿರೋಧ ಬರುತ್ತದಲ್ಲವೇ? ಎಂಬ ಆಶಂಕೆಗೆ, ಸೂತ್ರದಲ್ಲಿರುವ 'ದರ್ಶನಾತ್' ಎಂಬ ಪದದಿಂದ ತಿಳಿಯುವ ಶ್ರುತಿಯಿಂದಲೇ ಉತ್ತರಿಸುತ್ತಿದ್ದಾರೆ –

ಪ್ರಾಜ್ಞೇನ ಆತ್ಮನಾ = ಪ್ರಾಜ್ಞರೂಪಿಯಾದ ಪರಮಾತ್ಮನನ್ನು, **ಅನ್ವಾರೂಢಃ** = ಆಶ್ರಯಿಸಿದವನಾಗಿ, ಉತ್ಸರ್ಜದ್ = ದೇಹವನ್ನು ಬಿಟ್ಟು, ಯಾತಿ = ಹೊರಡುತ್ತಾನೆ. ಇತಿ = ಹೀಗೆ, ವಚನಾತ್ = ವಾಜಸನೇಯಶ್ರುತಿಯ ವಾಕ್ಯವಿರುವುದರಿಂದ, ತಸ್ಯಾಪಿ = ವಿಷ್ಣುವಿಗೂ ಕೂಡ, ಲೋಕಸಂಚರಣಂ = ಉಭಯ ಲೋಕಸಂಚಾರವು, ಅಸ್ತ್ಯೇವ = ಇರುತ್ತದೆ. ಆದ್ದರಿಂದ, ವಿಷ್ಣುವೇ ಜ್ಯೋತಿಃಶಬ್ದದಿಂದ ಪ್ರತಿಪಾದ್ಯನಾದನು.(१)

ಇಲ್ಲಿಗೆ ಜ್ಯೋತಿರಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

---

(१) **भाष्यदीपिका** – ज्योतिर्विष्णुश्चेत् तर्ह्युभयलोकसञ्चरणलिङ्गविरोध इति शङ्कामपि सौत्रदर्शनपदोक्तश्रुत्या परिहरति – **प्राज्ञेनेति** ।। **'इति वचनात्'** इति वाजसनेयश्रुतिवाक्यात् **'तस्यापि'** परमात्मनोऽपि **लोकसञ्चरणमस्त्येवेत्यर्थः** । न केवलं जीवस्येत्यपेरर्थः । न तदभाव इत्येवशब्दार्थः । तथा च लिङ्गं सावकाशमिति न तद्विरोध इति भावः । शारीर आत्मा जीवो मरणकाले **'प्राज्ञेन'** प्रकर्षेण आसमन्ताद् ज्ञेन, प्रज्ञ एव प्राज्ञः, तेन वा परमात्मना **'अन्वारूढः'** अधिष्ठितो जीवमारुह्य गच्छति भगवानिति बृहद्भाष्योक्तेः तद्वाहनभूतः **'उत्सर्जत्'** प्राक्तनदेहमुत्सृजन् देहान्तरं लोकान्तरं च **'याति'** गच्छतीति वाजसनेयश्रुत्यर्थः । सूत्रार्थस्तु स्पष्टः ।

।। इति ज्योतिरधिकरणम् ।। ११ ।।

## श्रीपद्मनाभतीर्थविरचितसत्तर्कदीपावळिः

॥ ॐ ज्योतिर्दर्शनात् ॐ ॥

ननु 'हृद्यन्तर्ज्योतिः पुरुष आत्मा, अतो जीवो भवितुमर्हति समानः सन्नुभौ लोकावनुसञ्चरन्ति' इति वाक्यशेषाद् 'अतो हृदय आहितं ज्योतिः परमात्मा' इति यदुक्तम्, तन्न सिद्ध्यतीति न वक्तव्यम् । 'विष्णुरेव ज्योतिः' इत्यादिश्रुतिविरोधात्। लोकद्वयसञ्चरणं तु परेशस्याप्यस्ति स्वेच्छावशादकर्मबद्धस्य । तथाहि श्रुतिः – 'प्राज्ञेनात्मनान्वारूढ उत्सर्जद् याति' इति । 'तदेतद् हृदय आहितम्' इत्यादिना ॥

॥ इति सत्तर्कदीपावळ्याम् ज्योतिरधिकरणम् ॥

ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮನೇ ಆಗಿದ್ದಾನೆಂದು ಹಿಂದೆ ಸಮರ್ಥಿಸಲಾಯಿತು. ಆದರೆ ಉಭಯಲೋಕದ ಅನುಸಂಚಾರವನ್ನು ವಾಕ್ಯಶೇಷದಲ್ಲಿ ಹೇಳಿರುವುದರಿಂದ ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮನೆಂದು ಹೇಳಿದ್ದು ತಪ್ಪು. ಜೀವನೇ ಆಗಬೇಕು ಎಂದು ಪೂರ್ವಪಕ್ಷ.

ಸಿದ್ಧಾಂತ. ವಿಷ್ಣುವೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಶ್ರುತಿಯ ವಿರೋಧ ಬರುತ್ತದೆ. ಲೋಕದ್ವಯಸಂಚಾರವನ್ನು ಪರಮಾತ್ಮನಲ್ಲಿಯೂ ಸಹ ಕೂಡಿಸಬಹುದು. ಯಾವುದೇ ಕರ್ಮಬಂಧನವಿಲ್ಲದೆ ಸ್ವೇಚ್ಛೆಯಿಂದ ಎಲ್ಲೆಡೆಯೂ ಪರಮಾತ್ಮನು ಸಂಚರಿಸುತ್ತಾನೆ. ಆದ್ದರಿಂದಲೇ ಶ್ರುತಿಯು 'ಶರೀರೇ ಆತ್ಮಾ ಪ್ರಾಜ್ಞೇನಾತ್ಮನಾ ಅನ್ವಾರೂಢಃ ಉತ್ಸರ್ಜದ್ ಯಾತಿ, ತದೇತದ್ ಹೃದಯ ಆಹಿತಮ್' ಎಂಬುದಾಗಿ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು ॥

### तत्वप्रकाशिका –

॥ ॐ ज्योतिर्दर्शनात् ॐ ॥

अत्र जीवेशयोर्ज्ञानरूपत्वेन हृदयाहितत्वेन च साधारणस्य ज्योतिर्नाम्नो विष्णौ समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च दर्शयति – हृदय इति ॥

ಈ ಅಧಿಕರಣದಲ್ಲಿ ಜೀವ ಮತ್ತು ಪರಮಾತ್ಮ ಇಬ್ಬರೂ ಕೂಡ ಜ್ಞಾನಸ್ವರೂಪರಾದ್ದರಿಂದ ಮತ್ತು ಹೃದಯದಲ್ಲಿರುವವರಾದ್ದರಿಂದ 'ಜ್ಯೋತಿಃ' ಎಂಬ ಶಬ್ದವು ಉಭಯಸಾಧಾರಣವಾಯಿತು. ಇಂತಹ ನಾಮಾತ್ಮಕಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದಲೇ ಶಾಸ್ತ್ರಸಂಗತಿ-ಅಧ್ಯಾಯಸಂಗತಿ-ಪಾದಸಂಗತಿಗಳಿರುತ್ತವೆ. ಶ್ರುತಿಸಂಗತಿ-ಅಧಿಕರಣಸಂಗತಿ ಮತ್ತು ವಿಷಯಾದಿಗಳನ್ನು 'ಹೃದಯೇ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

**तत्वप्रकाशिका – 'ज्योतिश्चरणाभिधानात्' इति हृदयाहितं ज्योतिः परमात्मेत्युक्तम् । वाजसनेयके च तत् श्रूयते ।। योऽयमिति ।।**

'ಜ್ಯೋತಿಶ್ಚರಣಾಭಿಧಾನಾತ್' ಎಂಬ ಪ್ರಥಮಪಾದದಲ್ಲಿ ಬಂದಿರುವಂತಹ ಸೂತ್ರದಲ್ಲಿ ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮನೇ ಆಗಿದ್ದಾನೆಂದು ಹೇಳಲಾಗಿದೆ. ಆದರೆ, ಬೃಹದಾರಣ್ಯಕೋಪನಿಷತ್ತಿನಲ್ಲಿ ಆ ಜ್ಯೋತಿಯು 'ಯೋಽಯಂ' ಇತ್ಯಾದಿ ವಾಕ್ಯಗಳಿಂದ ವರ್ಣಿಸಲ್ಪಟ್ಟಿದೆ.

**तत्वप्रकाशिका – तच्च यदि विष्णोरन्यत्स्यात्तदा पूर्वोक्तमप्यन्यत्प्रसज्यत सत्यवश्यं निर्णेयम् । तज्ज्योतिर्विषयः ।**

ಈ ಜ್ಯೋತಿಯು ವಿಷ್ಣುವಿಗಿಂತ ಬೇರೆಯದ್ದಾದರೆ ಹಿಂದೆ ಹೇಳಲ್ಪಟ್ಟ ಜ್ಯೋತಿಯೂ ಸಹ ವಿಷ್ಣುವಿಗಿಂತ ಭಿನ್ನವೇ ಆಗುತ್ತದೆ. ಆದ್ದರಿಂದ, ಈ 'ಜ್ಯೋತಿಃ' ಶಬ್ದದಿಂದ ಯಾರು ಪ್ರತಿಪಾದ್ಯರೆಂಬುದನ್ನು ಅವಶ್ಯವಾಗಿ ನಿರ್ಣಯಿಸಬೇಕು. ಬೃಹದಾರಣ್ಯಕದಲ್ಲಿರುವ ಈ ಜ್ಯೋತಿಸ್ಸೇ ವಿಷಯವಾಗಿದೆ.

**तत्वप्रकाशिका – किं विष्णुर्जीवो वेति सन्देहः । उक्तसाधारण्यं सन्देहबीजम्। जीव एवेदं ज्यातिरिति पूर्वः पक्षः ।**

ಜ್ಯೋತಿಃಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೋ ಅಥವಾ ಜೀವನೋ ? ಎಂದು ಸಂದೇಹ. ಜ್ಞಾನರೂಪತ್ವ-ಹೃದಯೇಆಹಿತತ್ವ ಮೊದಲಾದ ಸಮಾನಧರ್ಮವಿರುವಿಕೆಯೇ ಸಂದೇಹ ಬೀಜ. ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ.

**तत्वप्रकाशिका – 'स समानः सन्नुभौ लोकावनुसञ्चरति' इति जीवलिङ्गात्। तस्य हि कर्मवशादुभयलोकसञ्चरणं युक्तम्**

'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' 'ಸಕಲರ ಹೃದಯದಲ್ಲಿ ಜ್ಯೋತಿಯು ಸಮಾನವಾಗಿ ಭೂಲೋಕದಲ್ಲಿ ಮತ್ತು ಸ್ವರ್ಗಲೋಕದಲ್ಲಿ ಸಂಚರಿಸುತ್ತದೆ. ಎಂದು, ಜೀವನಲಿಂಗವೇ

ಶ್ರುತವಾಗಿದೆ. ಕರ್ಮಾಧೀನವಾಗಿ ಮಾಡುವ ಉಭಯಲೋಕಸಂಚಾರವು ಜೀವನಲ್ಲಿ ಮಾತ್ರ ಯುಕ್ತವಾಗುತ್ತದೆ.

**तत्वप्रकाशिका – 'इमं लोकमतिक्रामति मृत्यो रुपाणि' 'स वा अयं पुरुषो जायमानः शरीरमभिसम्पद्यमानः पाप्मभिः संसृज्यते । स उत्क्रामन् म्रियमाणः पाप्मनो विजहाति' 'उभयानपि पाप्मन आनन्दांश्च पश्यति स यत्र पस्वपिति' । स्वप्नान्त उच्चावचमीयमानो' 'भयानि पश्यन्' इत्यादिजीवलिङ्गाच्च ।**

'ಇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ' ಆ ಜ್ಯೋತಿಯು ಮೃತ್ಯುಸ್ವರೂಪವಾದ ಲೋಕವನ್ನು ಕುರಿತು ಜಾಗ್ರದವಸ್ಥೆಯಲ್ಲಿ ಅತಿಕ್ರಮಣ ಮಾಡುತ್ತದೆ, ಅಥವಾ ಭೂಲೋಕವನ್ನು ಅತಿಕ್ರಮಣ ಮಾಡುತ್ತದೆ. 'ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ । ಸ ಉತ್ಕ್ರಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ' ಆ ಜ್ಯೋತಿರೂಪನಾದ ಪುರುಷನು ಹುಟ್ಟಿದ ಮೇಲೆ, ಅಂದರೆ ಶರೀರದಿಂದ ಯುಕ್ತನಾದ ಮೇಲೆ ಪಾಪದಿಂದ ಯುಕ್ತನಾಗುತ್ತಾನೆ. ಮತ್ತು, ಶರೀರದಿಂದ ಹೊರ ಹೋದಾಗ ಪಾಪವನ್ನು ತ್ಯಾಗ ಮಾಡುತ್ತಾನೆ. 'ಉಭಯಾನಪಿ ಪಾಪ್ಮನಃ ಆನಂದಾಂಶ್ಚ ಪಶ್ಯತಿ ಸ ಯತ್ರ ಪ್ರಸ್ವಪಿತಿ' ಆ ಜ್ಯೋತಿಪುರುಷನು ಪಾಪ ಮತ್ತು ಆನಂದ ಇವೆರಡನ್ನು ನೋಡುತ್ತಾನೆ. ಆ ಜ್ಯೋತಿಪುರುಷನು ಎಲ್ಲಿ ಮಲಗುತ್ತಾನೋ 'ಸ್ವಪ್ನಾಂತ ಉಚ್ಚಾವಚಮೀಯಮಾನಃ' ಆ ಜ್ಯೋತಿಯು ಸ್ವಪ್ನದಲ್ಲಿ ನಾನಾಪ್ರಕಾರವಾದ ಕೆಟ್ಟ ಹಾಗೂ ಒಳ್ಳೆಯ ದೇಹಗಳಲ್ಲಿ ಪ್ರವಿಷ್ಟನಾಗುತ್ತಾನೆ. 'ಭಯಾನಿ ಪಶ್ಯನ್' ಭಯಗಳನ್ನು ನೋಡುತ್ತಾನೆ. ಇತ್ಯಾದಿಯಾಗಿ ಜೀವನ ಲಿಂಗವೇ ಎಲ್ಲೆಡೆಯಲ್ಲಿ ಕೇಳಿಸುತ್ತಿದೆ.

**तत्वप्रकाशिका – किञ्च 'किं ज्योतिरयं पुरुषः? इत्यादित्यज्योतिः सम्राडिति होवाच' इत्यादिना यस्य पुरुषस्याऽऽदित्यादिज्योतिष्ट्वमुक्तं तस्यैव 'आत्मैवास्य ज्योतिर्भवति' इति सु(षु)प्त्यादावात्मज्योतिष्ट्वोक्तौ 'कतम आत्मा' इति तदात्मप्रश्ने ज्योतिरुच्यते ।**

ಮತ್ತು 'ಕಿಂ ಜ್ಯೋತಿರಯಂ ಪುರುಷಃ' 'ಇತ್ಯಾದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚ' ಇತ್ಯಾದಿ ಪ್ರಕರಣದಲ್ಲಿ ಜನಕರಾಜರು ಯಾಜ್ಞವಲ್ಕ್ಯರನ್ನು ಕುರಿತು ಪ್ರಶ್ನಿಸುತ್ತಾರೆ. ಜೀವಾತ್ಮರಿಗೆ ಯಾರ ತೇಜಸ್ಸಿನಿಂದ ಜ್ಞಾನ ಪ್ರಾಪ್ತವಾಗುತ್ತದೆ? ಎಂದು. ಆವಾಗ, ಯಾಜ್ಞವಲ್ಕ್ಯರು ಹೀಗೆ ಉತ್ತರಿಸುತ್ತಾರೆ. 'ಎಲೈ ರಾಜನೇ ! ಆದಿತ್ಯಪ್ರಕಾಶದಿಂದ ಜೀವನಿಗೆ ಜ್ಞಾನ ಪ್ರಾಪ್ತವಾಗುತ್ತದೆ' ಎಂದು. ಈ ವಾಕ್ಯದಿಂದ ಪುರುಷನಿಗೆ ಆದಿತ್ಯಾದಿಪದಾರ್ಥಜ್ಞಾನವು ಸಾಧನವೆಂದು ತಿಳಿಸಿ, ಮುಂದೆ ಆ ಪುರುಷನಿಗೆ 'ಆತ್ಮೈವಾಸ್ಯ ಜ್ಯೋತಿಃ' ಆತ್ಮನೇ ಜ್ಯೋತಿಯಾಗಿದ್ದಾನೆಂದು ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಹೇಳಲಾಗಿದೆ.

ಈ ಅಧಿಕರಣದಲ್ಲಿ ಜೀವ ಮತ್ತು ಪರಮಾತ್ಮ ಇಬ್ಬರೂ ಕೂಡ ಜ್ಞಾನಸ್ವರೂಪರಾದ್ದರಿಂದ ಮತ್ತು ಹೃದಯದಲ್ಲಿರುವವರಾದ್ದರಿಂದ 'ಜ್ಯೋತಿಃ' ಎಂಬ ಶಬ್ದವು ಉಭಯಸಾಧಾರಣವಾಯಿತು. ಇಂತಹ ನಾಮಾತ್ಮಕಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದಲೇ ಶಾಸ್ತ್ರಸಂಗತಿ-ಅಧ್ಯಾಯಸಂಗತಿ-ಪಾದಸಂಗತಿಗಳಿರುತ್ತವೆ. ಶ್ರುತಿಸಂಗತಿ-ಅಧಿಕರಣಸಂಗತಿ ಮತ್ತು ವಿಷಯಾದಿಗಳನ್ನು 'ಹೃದಯೇ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

**तत्वप्रकाशिका – 'ज्योतिश्चरणाभिधानात्' इति हृदयाहितं ज्योतिः परमात्मेत्युक्तम् । वाजसनेयके च तत् श्रूयते ।। योऽयमिति ।।**

'ಜ್ಯೋತಿಶ್ಚರಣಾಭಿಧಾನಾತ್' ಎಂಬ ಪ್ರಥಮಪಾದದಲ್ಲಿ ಬಂದಿರುವಂತಹ ಸೂತ್ರದಲ್ಲಿ ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮನೇ ಆಗಿದ್ದಾನೆಂದು ಹೇಳಲಾಗಿದೆ. ಆದರೆ, ಬೃಹದಾರಣ್ಯಕೋಪನಿಷತ್ತಿನಲ್ಲಿ ಆ ಜ್ಯೋತಿಯು 'ಯೋಽಯಂ' ಇತ್ಯಾದಿ ವಾಕ್ಯಗಳಿಂದ ವರ್ಣಿಸಲ್ಪಟ್ಟಿದೆ.

**तत्वप्रकाशिका – तच्च यदि विष्णोरन्यत्स्यात्तदा पूर्वोक्तमप्यन्यत्प्रसज्यत सत्यवश्यं निर्णेयम् । तज्ज्योतिर्विषयः ।**

ಈ ಜ್ಯೋತಿಯು ವಿಷ್ಣುವಿಗಿಂತ ಬೇರೆಯದ್ದಾದರೆ ಹಿಂದೆ ಹೇಳಲ್ಪಟ್ಟ ಜ್ಯೋತಿಯೂ ಸಹ ವಿಷ್ಣುವಿಗಿಂತ ಭಿನ್ನವೇ ಆಗುತ್ತದೆ. ಆದ್ದರಿಂದ, ಈ 'ಜ್ಯೋತಿಃ' ಶಬ್ದದಿಂದ ಯಾರು ಪ್ರತಿಪಾದ್ಯರೆಂಬುದನ್ನು ಅವಶ್ಯವಾಗಿ ನಿರ್ಣಯಿಸಬೇಕು. ಬೃಹದಾರಣ್ಯಕದಲ್ಲಿರುವ ಈ ಜ್ಯೋತಿಸ್ಸೇ ವಿಷಯವಾಗಿದೆ.

**तत्वप्रकाशिका – किं विष्णुर्जीवो वेति सन्देहः । उक्तसाधारण्यं सन्देहबीजम्। जीव एवेदं ज्योतिरिति पूर्वः पक्षः ।**

ಜ್ಯೋತಿಃಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೋ ಅಥವಾ ಜೀವನೋ ? ಎಂದು ಸಂದೇಹ. ಜ್ಞಾನರೂಪತ್ವ-ಹೃದಯೇಆಹಿತತ್ವ ಮೊದಲಾದ ಸಮಾನಧರ್ಮವಿರುವಿಕೆಯೇ ಸಂದೇಹ ಬೀಜ. ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ.

**तत्वप्रकाशिका – 'स समानः सन्नुभौ लोकावनुसञ्चरति' इति जीवलिङ्गात्। तस्य हि कर्मवशादुभयलोकसञ्चरणं युक्तम्**

'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' 'ಸಕಲರ ಹೃದಯದಲ್ಲಿ ಜ್ಯೋತಿಯು ಸಮಾನವಾಗಿ ಭೂಲೋಕದಲ್ಲಿ ಮತ್ತು ಸ್ವರ್ಗಲೋಕದಲ್ಲಿ ಸಂಚರಿಸುತ್ತದೆ. ಎಂದು, ಜೀವನಲಿಂಗವೇ

ಶ್ರುತವಾಗಿದೆ. ಕರ್ಮಾಧೀನವಾಗಿ ಮಾಡುವ ಉಭಯಲೋಕಸಂಚಾರವು ಜೀವನಲ್ಲಿ ಮಾತ್ರ ಯುಕ್ತವಾಗುತ್ತದೆ.

**तत्वप्रकाशिका – 'इमं लोकमतिक्रामति मृत्यो रूपाणि' 'स वा अयं पुरुषो जायमानः शरीरमभिसम्पद्यमानः पाप्मभिः संसृज्यते । स उत्क्रामन् म्रियमाणः पाप्मनो विजहाति' 'उभयानपि पाप्मन आनन्दांश्च पश्यति स यत्र पस्वपिति' । स्वप्नान्त उच्चावचमीयमानो' 'भयानि पश्यन्' इत्यादिजीवलिङ्गाच्च ।**

'ಇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ' ಆ ಜ್ಯೋತಿಯು ಮೃತ್ಯುಸ್ವರೂಪವಾದ ಲೋಕವನ್ನು ಕುರಿತು ಜಾಗ್ರದವಸ್ಥೆಯಲ್ಲಿ ಅತಿಕ್ರಮಣ ಮಾಡುತ್ತದೆ, ಅಥವಾ ಭೂಲೋಕವನ್ನು ಅತಿಕ್ರಮಣ ಮಾಡುತ್ತದೆ. 'ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ । ಸ ಉತ್ಕ್ರಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ' ಆ ಜ್ಯೋತಿರೂಪನಾದ ಪುರುಷನು ಹುಟ್ಟಿದ ಮೇಲೆ, ಅಂದರೆ ಶರೀರದಿಂದ ಯುಕ್ತನಾದ ಮೇಲೆ ಪಾಪದಿಂದ ಯುಕ್ತನಾಗುತ್ತಾನೆ. ಮತ್ತು, ಶರೀರದಿಂದ ಹೊರ ಹೋದಾಗ ಪಾಪವನ್ನು ತ್ಯಾಗ ಮಾಡುತ್ತಾನೆ. 'ಉಭಯಾನಪಿ ಪಾಪ್ಮನಃ ಆನಂದಾಂಶ್ಚ ಪಶ್ಯತಿ ಸ ಯತ್ರ ಪ್ರಸ್ವಪಿತಿ' ಆ ಜ್ಯೋತಿಪುರುಷನು ಪಾಪ ಮತ್ತು ಆನಂದ ಇವೆರಡನ್ನು ನೋಡುತ್ತಾನೆ. ಆ ಜ್ಯೋತಿಪುರುಷನು ಎಲ್ಲಿ ಮಲಗುತ್ತಾನೋ 'ಸ್ವಪ್ನಾಂತ ಉಚ್ಚಾವಚಮೀಯಮಾನಃ' ಆ ಜ್ಯೋತಿಯು ಸ್ವಪ್ನದಲ್ಲಿ ನಾನಾಪ್ರಕಾರವಾದ ಕೆಟ್ಟ ಹಾಗೂ ಒಳ್ಳೆಯ ದೇಹಗಳಲ್ಲಿ ಪ್ರವಿಷ್ಟನಾಗುತ್ತಾನೆ. 'ಭಯಾನಿ ಪಶ್ಯನ್' ಭಯಗಳನ್ನು ನೋಡುತ್ತಾನೆ. ಇತ್ಯಾದಿಯಾಗಿ ಜೀವನ ಲಿಂಗವೇ ಎಲ್ಲೆಡೆಯಲ್ಲಿ ಕೇಳಿಸುತ್ತಿದೆ.

**तत्वप्रकाशिका – किञ्च 'किं ज्योतिरयं पुरुषः? इत्यादित्यज्योतिः सम्राडिति होवाच' इत्यादिना यस्य पुरुषस्याऽऽदित्यादिज्योतिष्ट्वमुक्तं तस्यैव 'आत्मैवास्य ज्योतिर्भवति' इति सु(षु)प्त्यादावात्मज्योतिष्ट्वोक्तौ 'कतम आत्मा' इति तदात्मप्रश्ने ज्योतिरुच्यते ।**

ಮತ್ತು 'ಕಿಂ ಜ್ಯೋತಿರಯಂ ಪುರುಷಃ' 'ಇತ್ಯಾದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚ' ಇತ್ಯಾದಿ ಪ್ರಕರಣದಲ್ಲಿ ಜನಕರಾಜರು ಯಾಜ್ಞವಲ್ಕ್ಯರನ್ನು ಕುರಿತು ಪ್ರಶ್ನಿಸುತ್ತಾರೆ. ಜೀವಾತ್ಮರಿಗೆ ಯಾರ ತೇಜಸ್ಸಿನಿಂದ ಜ್ಞಾನ ಪ್ರಾಪ್ತವಾಗುತ್ತದೆ? ಎಂದು. ಆವಾಗ, ಯಾಜ್ಞವಲ್ಕ್ಯರು ಹೀಗೆ ಉತ್ತರಿಸುತ್ತಾರೆ. 'ಎಲೈ ರಾಜನೇ ! ಆದಿತ್ಯಪ್ರಕಾಶದಿಂದ ಜೀವನಿಗೆ ಜ್ಞಾನ ಪ್ರಾಪ್ತವಾಗುತ್ತದೆ' ಎಂದು. ಈ ವಾಕ್ಯದಿಂದ ಪುರುಷನಿಗೆ ಆದಿತ್ಯಾದಿಪದಾರ್ಥಜ್ಞಾನವು ಸಾಧನವೆಂದು ತಿಳಿಸಿ, ಮುಂದೆ ಆ ಪುರುಷನಿಗೆ 'ಆತ್ಮೈವಾಸ್ಯ ಜ್ಯೋತಿಃ' ಆತ್ಮನೇ ಜ್ಯೋತಿಯಾಗಿದ್ದಾನೆಂದು ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಹೇಳಲಾಗಿದೆ.

ಮುಂದೆ ಜನಕರಾಜರು 'ಕತಮ ಆತ್ಮಾ' ಯಾರು ಈ ಆತ್ಮಾ? ಎಂದು ಪ್ರಶ್ನಿಸಿದಾಗ, 'ಹೃದ್ಯಂತರ್ಜ್ಯೋತಿಃ' ಎಂದು ಉತ್ತರಿಸಿದ್ದಾರೆ.

ಈ ಪ್ರಕರಣವನ್ನು ಗಮನಿಸಿದಾಗ, ಜ್ಯೋತಿಯೆಂದರೆ ಜೀವನೇ ಆಗಬೇಕು. ಏಕೆಂದರೆ, ಹಿಂದೆ ಪುರುಷರೂಪನಾದ ಜ್ಯೋತಿಗೆ ಆದಿತ್ಯಜ್ಯೋತಿಷ್ಟ್ವವನ್ನು ಹೇಳಲಾಗಿದೆ.

ಆದಿತ್ಯಾದಿ ಜ್ಯೋತಿಷ್ಟ್ವವು ವಿಷ್ಣುವಿನಲ್ಲಿ ಕೂಡುವುದಿಲ್ಲ. ಏಕೆಂದರೆ, ವಿಷ್ಣುವಿನ ವಿಷಯದಲ್ಲಿ 'ನ ತತ್ರ ಸೂರ್ಯೋ ಭಾತಿ' ಪರಮಾತ್ಮನನ್ನು ಸೂರ್ಯಾದಿಗಳು ಪ್ರಕಾಶ ಪಡಿಸಲಾರರು ಎಂಬುದಾಗಿ ಸೂರ್ಯಪ್ರಕಾಶಕತ್ವವನ್ನು ನಿಷೇಧಿಸಲಾಗಿದೆ.

**तत्वप्रकाशिका – नच वाच्यं यस्यादित्यादिज्योतिष्ट्वमुक्तं स जीव एवास्तु तस्य चात्मैवास्येत्यत्र परमात्मज्योतिष्ट्वमुच्यते । तदात्मप्रश्ने च ज्योतिराम्नानात् परमात्मैव ज्योतिरिति ।**

ಇನ್ನು ಆದಿತ್ಯಾದಿಜ್ಯೋತಿಷ್ಟ್ವವನ್ನು ಯಾರಿಗೆ ಹೇಳಲಾಗಿದೆಯೋ, ಅವನು ಜೀವನೇ ಆಗಲಿ. ಅಂತಹ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ವಾಕ್ಯದಲ್ಲಿ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳಲಾಗಿದೆ. ಏಕೆಂದರೆ, ಇಲ್ಲಿ ಆತ್ಮನ ಬಗ್ಗೆ ಜನಕರು ಪ್ರಶ್ನಿಸಿದಾಗ, ಯಾಜ್ಞವಲ್ಕ್ಯರು 'ಹೃದ್ಯಂತರ್ಜ್ಯೋತಿಃ' ಎಂದು ಉತ್ತರಿಸಿದ್ದರಿಂದ ಪರಮಾತ್ಮನೇ ಜ್ಯೋತಿಯಾಗುತ್ತಾನೆ.

**तत्वप्रकाशिका – जीवस्य परमात्मज्योतिष्ट्वस्यैवायोगात् । तथात्वे परमामनोऽस्तमयादिशून्यस्य जाग्रत्यपि ज्योतिष्ट्वप्राप्त्या तदा 'आदित्येनैवायं ज्योतिषाऽऽस्ते' 'चन्द्रमसैवायं ज्योतिषाऽऽस्ते' इत्यवधारणानुपपत्तेः ।**

ಇದು ತಪ್ಪು. ಏಕೆಂದರೆ, ಇಲ್ಲಿ ಜೀವನಿಗೆ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳುವುದು ಕೂಡುವುದಿಲ್ಲ. ಒಂದು ವೇಳೆ ಜೀವನಿಗೆ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳುವುದಾದರೆ, ಪರಮಾತ್ಮನಿಗೆ ನಾಶ ಮೊದಲಾದವುಗಳು ಇಲ್ಲದ ಕಾರಣ, ಜಾಗ್ರದವಸ್ಥೆಯಲ್ಲಿಯೂ ಕೂಡ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳಬೇಕಾಗುತ್ತದೆ. ಆವಾಗ, 'ಆದಿತ್ಯೇನೈವಾಯಂ ಜ್ಯೋತಿಷಾಸ್ತೇ' ಸೂರ್ಯರೂಪವಾದ ಜ್ಯೋತಿಯಿಂದಲೇ ಇರುತ್ತಾನೆ. 'ಚಂದ್ರಮಸೈವಾಯಂ ಜ್ಯೋತಿಷಾಸ್ತೇ' ಚಂದ್ರರೂಪ ಜ್ಯೋತಿಯಿಂದಷ್ಟೇ ಇರುತ್ತಾನೆ, ಇತ್ಯಾದಿಯಾಗಿ ಅವಧಾರಣಾಪೂರ್ವಕವಾದ ವಚನವು ತಪ್ಪಾಗಬೇಕಾಗುತ್ತದೆ.

**तत्वप्रकाशिका – तदा विशिष्याऽऽत्मज्योतिष्ट्वोक्त्यनुपपत्तेश्च । अत्रायं पुरुषः स्वयं ज्योतिर्भवतीत्यस्यैवार्थस्य प्रत्यभिज्ञानाच्च । अतो जीव एवेदं ज्योतिरिति प्रागुक्तमपि स एवेति भावः ।**

ಮತ್ತು ಸುಷುಪ್ತ್ಯವಸ್ಥೆಯಲ್ಲಿಯೂ ಪರಮಾತ್ಮನೇ ಜ್ಯೋತಿಯೆಂದು ಹೇಳಿದ್ದು ಉಪಪನ್ನವಾಗುವುದಿಲ್ಲ. ಏಕೆಂದರೆ, ಪರಮಾತ್ಮಜ್ಯೋತಿಯು ನಿರಂತರವಾಗಿರುವುದರಿಂದ ಸುಷುಪ್ತ್ಯವಸ್ಥೆಯಲ್ಲಿ ಇದ್ದಾನೆಂದು ಹೇಳಲು ಕಾರಣವಿಲ್ಲ.

ಅಷ್ಟೇ ಅಲ್ಲದೆ, 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ಈ ಪ್ರಕರಣದಲ್ಲೇ ಮುಂದೆ 'ತತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ' ಸ್ವಪ್ನಾವಸ್ಥೆಯಲ್ಲಿ ಜೀವನು ಸ್ವಯಂಪ್ರಕಾಶನಾಗಿರುತ್ತಾನೆ ಎಂಬ ಅರ್ಥದ ಪ್ರತ್ಯಭಿಜ್ಞಾನವೇ ಬರುತ್ತದೆ. ಆದ್ದರಿಂದ ಜೀವನೇ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನು. 'ಜ್ಯೋತಿಶ್ಚರಣಾಭಿಧಾನಾತ್' ಎಂದು ಪ್ರಥಮಪಾದದಲ್ಲಿ ಹೇಳಲ್ಪಟ್ಟ ಜ್ಯೋತಿಯೂ ಕೂಡ ಜೀವನೇ ಆಗುತ್ತಾನೆಂದು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। विष्णुरेवेदं ज्योतिर्नतु जीवः ।**

ಸಿದ್ಧಾಂತಸ್ಥಾಪನೆಗಾಗಿ ಸೂತ್ರವನ್ನು ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತ' ಇತ್ಯಾದಿಯಾಗಿ. ವಿಷ್ಣುವೇ ಈ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನು, ಜೀವ ಎಂದಲ್ಲ.

**तत्वप्रकाशिका – ज्योति श्रुतेर्विष्ण्वेकवाचित्वश्रवणादित्यर्थः । ज्योतिः-र्विष्णुश्चेदुभयलोकसञ्चरणलिङ्गविरोध इत्यत आह – प्राज्ञेनेति ।।**

ಏಕೆಂದರೆ, 'ಜ್ಯೋತಿಃ' ಎಂಬ ಶಬ್ದವು ಶ್ರುತಿಯಲ್ಲೆಲ್ಲೆಡೆ ಕೇವಲ ವಿಷ್ಣುಪರವೇ ಆಗಿರುತ್ತದೆ. ಜ್ಯೋತಿಯು ವಿಷ್ಣುವಾದರೆ, ಉಭಯಲೋಕಸಂಚಾರವೆಂಬ ಜೀವಲಿಂಗವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಜ್ಞೇನ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – जीवमादायेश्वरस्यैवोभयलोकसञ्चरणोक्तेर्न तद्विरोध इत्यर्थः।**

ಪರಮಾತ್ಮನು ಜೀವನನ್ನು ಕರೆದುಕೊಂಡು ಉಭಯ ಲೋಕಗಳನ್ನು ಸಂಚಾರ ಮಾಡುತ್ತಾನೆಂದು ಶ್ರುತಿಯ ಅಭಿಪ್ರಾಯ. ಹಾಗಾಗಿ, ಶ್ರುತಿವಿರೋಧಕ್ಕೆ ಅವಕಾಶವಿಲ್ಲ.

**तत्वप्रकाशिका – न चेमं लोकमतिक्रामति मृत्यो रूपाणीत्याद्युक्तलिङ्गविरोधः। द्रष्टुश्चक्षुष इत्यादिवदन्तर्णीतणिच्त्वेनोपपत्तेः ।**

'ಇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ' ಇತ್ಯಾದಿ ಶ್ರುತಿಯಲ್ಲಿ ಲೋಕವನ್ನು ಅತಿಕ್ರಮಣ ಮಾಡಿ ಹೋಗುತ್ತಾನೆಂದು ಜೀವಲಿಂಗವನ್ನು ಹೇಳಿದ್ದಾರಲ್ಲವೇ? ಆದ್ದರಿಂದ 'ಜ್ಯೋತಿಃ'

ಮುಂದೆ ಜನಕರಾಜರು 'ಕತಮ ಆತ್ಮಾ' ಯಾರು ಈ ಆತ್ಮಾ? ಎಂದು ಪ್ರಶ್ನಿಸಿದಾಗ, 'ಹೃದ್ಯಂತರ್ಜ್ಯೋತಿಃ' ಎಂದು ಉತ್ತರಿಸಿದ್ದಾರೆ.

ಈ ಪ್ರಕರಣವನ್ನು ಗಮನಿಸಿದಾಗ, ಜ್ಯೋತಿಯೆಂದರೆ ಜೀವನೇ ಆಗಬೇಕು. ಏಕೆಂದರೆ, ಹಿಂದೆ ಪುರುಷರೂಪನಾದ ಜ್ಯೋತಿಗೆ ಆದಿತ್ಯಜ್ಯೋತಿಷ್ಟ್ವವನ್ನು ಹೇಳಲಾಗಿದೆ.

ಆದಿತ್ಯಾದಿ ಜ್ಯೋತಿಷ್ಟ್ವವು ವಿಷ್ಣುವಿನಲ್ಲಿ ಕೂಡುವುದಿಲ್ಲ. ಏಕೆಂದರೆ, ವಿಷ್ಣುವಿನ ವಿಷಯದಲ್ಲಿ 'ನ ತತ್ರ ಸೂರ್ಯೋ ಭಾತಿ' ಪರಮಾತ್ಮನನ್ನು ಸೂರ್ಯಾದಿಗಳು ಪ್ರಕಾಶ ಪಡಿಸಲಾರರು ಎಂಬುದಾಗಿ ಸೂರ್ಯಪ್ರಕಾಶಕತ್ವವನ್ನು ನಿಷೇಧಿಸಲಾಗಿದೆ.

**तत्वप्रकाशिका – नच वाच्यं यस्यादित्यादिज्योतिष्ट्वमुक्तं स जीव एवास्तु तस्य चात्मैवास्येत्यत्र परमात्मज्योतिष्ट्वमुच्यते । तदात्मप्रश्ने च ज्योतिराम्नानात् परमात्मैव ज्योतिरिति ।**

ಇನ್ನು ಆದಿತ್ಯಾದಿಜ್ಯೋತಿಷ್ಟ್ವವನ್ನು ಯಾರಿಗೆ ಹೇಳಲಾಗಿದೆಯೋ, ಅವನು ಜೀವನೇ ಆಗಲಿ. ಅಂತಹ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ವಾಕ್ಯದಲ್ಲಿ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳಲಾಗಿದೆ. ಏಕೆಂದರೆ, ಇಲ್ಲಿ ಆತ್ಮನ ಬಗ್ಗೆ ಜನಕರು ಪ್ರಶ್ನಿಸಿದಾಗ, ಯಾಜ್ಞವಲ್ಕ್ಯರು 'ಹೃದ್ಯಂತರ್ಜ್ಯೋತಿಃ' ಎಂದು ಉತ್ತರಿಸಿದ್ದರಿಂದ ಪರಮಾತ್ಮನೇ ಜ್ಯೋತಿಯಾಗುತ್ತಾನೆ.

**तत्वप्रकाशिका – जीवस्य परमात्मज्योतिष्ट्वस्यैवायोगात् । तथात्वे परमामनोऽस्तमयादिशून्यस्य जाग्रत्यपि ज्योतिष्ट्वप्राप्त्या तदा 'आदित्येनैवायं ज्योतिषाऽऽस्ते' 'चन्द्रमसैवायं ज्योतिषाऽऽस्ते' इत्यवधारणानुपपत्तेः ।**

ಇದು ತಪ್ಪು. ಏಕೆಂದರೆ, ಇಲ್ಲಿ ಜೀವನಿಗೆ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳುವುದು ಕೂಡುವುದಿಲ್ಲ. ಒಂದು ವೇಳೆ ಜೀವನಿಗೆ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳುವುದಾದರೆ, ಪರಮಾತ್ಮನಿಗೆ ನಾಶ ಮೊದಲಾದವುಗಳು ಇಲ್ಲದ ಕಾರಣ, ಜಾಗ್ರದವಸ್ಥೆಯಲ್ಲಿಯೂ ಕೂಡ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳಬೇಕಾಗುತ್ತದೆ. ಆವಾಗ, 'ಆದಿತ್ಯೇನೈವಾಯಂ ಜ್ಯೋತಿಷಾಸ್ತೇ' ಸೂರ್ಯರೂಪವಾದ ಜ್ಯೋತಿಯಿಂದಲೇ ಇರುತ್ತಾನೆ. 'ಚಂದ್ರಮಸೈವಾಯಂ ಜ್ಯೋತಿಷಾಸ್ತೇ' ಚಂದ್ರರೂಪ ಜ್ಯೋತಿಯಿಂದಷ್ಟೇ ಇರುತ್ತಾನೆ, ಇತ್ಯಾದಿಯಾಗಿ ಅವಧಾರಣಾಪೂರ್ವಕವಾದ ವಚನವು ತಪ್ಪಾಗಬೇಕಾಗುತ್ತದೆ.

**तत्वप्रकाशिका – तदा विशिष्याऽऽत्मज्योतिष्ट्वोक्त्यनुपपत्तेश्च । अत्रायं पुरुषः स्वयं ज्योतिर्भवतीत्यस्यैवार्थस्य प्रत्यभिज्ञानाच्च । अतो जीव एवेदं ज्योतिरिति प्रागुक्तमपि स एवेति भावः ।**

ಮತ್ತು ಸುಷುಪ್ತ್ಯವಸ್ಥೆಯಲ್ಲಿಯೂ ಪರಮಾತ್ಮನೇ ಜ್ಯೋತಿಯೆಂದು ಹೇಳಿದ್ದು ಉಪಪನ್ನವಾಗುವುದಿಲ್ಲ. ಏಕೆಂದರೆ, ಪರಮಾತ್ಮಜ್ಯೋತಿಯು ನಿರಂತರವಾಗಿರುವುದರಿಂದ ಸುಷುಪ್ತ್ಯವಸ್ಥೆಯಲ್ಲಿ ಇದ್ದಾನೆಂದು ಹೇಳಲು ಕಾರಣವಿಲ್ಲ.

ಅಷ್ಟೇ ಅಲ್ಲದೆ, 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ಈ ಪ್ರಕರಣದಲ್ಲೇ ಮುಂದೆ 'ತತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ' ಸ್ವಪ್ನಾವಸ್ಥೆಯಲ್ಲಿ ಜೀವನು ಸ್ವಯಂಪ್ರಕಾಶನಾಗಿರುತ್ತಾನೆ ಎಂಬ ಅರ್ಥದ ಪ್ರತ್ಯಭಿಜ್ಞಾನವೇ ಬರುತ್ತದೆ. ಆದ್ದರಿಂದ ಜೀವನೇ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನು. 'ಜ್ಯೋತಿಶ್ಚರಣಾಭಿಧಾನಾತ್' ಎಂದು ಪ್ರಥಮಪಾದದಲ್ಲಿ ಹೇಳಲ್ಪಟ್ಟ ಜ್ಯೋತಿಯೂ ಕೂಡ ಜೀವನೇ ಆಗುತ್ತಾನೆಂದು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। विष्णुरेवेदं ज्योतिर्नतु जीवः ।**

ಸಿದ್ಧಾಂತಸ್ಥಾಪನೆಗಾಗಿ ಸೂತ್ರವನ್ನು ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತ' ಇತ್ಯಾದಿಯಾಗಿ. ವಿಷ್ಣುವೇ ಈ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನು, ಜೀವ ಎಂದಲ್ಲ.

**तत्वप्रकाशिका – ज्योति श्रुतेर्विष्ण्वेकवाचित्वश्रवणादित्यर्थः । ज्योतिः-र्विष णुश्चेदुभयलोकसञ्चरणलिङ्गविरोध इत्यत आह – प्राज्ञेनेति ।।**

ಏಕೆಂದರೆ, 'ಜ್ಯೋತಿಃ' ಎಂಬ ಶಬ್ದವು ಶ್ರುತಿಯಲ್ಲೆಲ್ಲೆಡೆ ಕೇವಲ ವಿಷ್ಣುಪರವೇ ಆಗಿರುತ್ತದೆ. ಜ್ಯೋತಿಯು ವಿಷ್ಣುವಾದರೆ, ಉಭಯಲೋಕಸಂಚಾರವೆಂಬ ಜೀವಲಿಂಗವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಜ್ಞೇನ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – जीवमादायेश्वरस्यैवोभयलोकसञ्चरणोक्तेर्न तद्विरोध इत्यर्थः।**

ಪರಮಾತ್ಮನು ಜೀವನನ್ನು ಕರೆದುಕೊಂಡು ಉಭಯ ಲೋಕಗಳನ್ನು ಸಂಚಾರ ಮಾಡುತ್ತಾನೆಂದು ಶ್ರುತಿಯ ಅಭಿಪ್ರಾಯ. ಹಾಗಾಗಿ, ಶ್ರುತಿವಿರೋಧಕ್ಕೆ ಅವಕಾಶವಿಲ್ಲ.

**तत्वप्रकाशिका – न चेमं लोकमतिक्रामति मृत्यो रूपाणीत्याद्युक्तलिङ्गविरोधः। द्रष्टुश्चक्षुष इत्यादिवदन्तर्णीतणिच्त्वेनोपपत्तेः ।**

'ಇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ' ಇತ್ಯಾದಿ ಶ್ರುತಿಯಲ್ಲಿ ಲೋಕವನ್ನು ಅತಿಕ್ರಮಣ ಮಾಡಿ ಹೋಗುತ್ತಾನೆಂದು ಜೀವಲಿಂಗವನ್ನು ಹೇಳಿದ್ದಾರಲ್ಲವೇ? ಆದ್ದರಿಂದ 'ಜ್ಯೋತಿಃ'

ಶಬ್ದಕ್ಕೆ ವಿಷ್ಣು ಎಂಬ ಅರ್ಥ ಹೇಳಿದರೆ ವಿರೋಧ ಬರುತ್ತದೆ, ಎಂದು ಪ್ರಶ್ನಿಸಬಾರದು. ಏಕೆಂದರೆ, ಈ ಶ್ರುತಿಯಲ್ಲಿ 'ಅತಿಕ್ರಾಮತಿ' ಎಂಬ ಶಬ್ದವು ಅಂತರ್ಣೀತವಾದ 'ಣಿಚ್' ಪ್ರತ್ಯಯಾಂತವಾಗಿದೆ. 'ದ್ರಷ್ಟುಶ್ಚಕ್ಷುಷಃ' ಎಂಬ ಶ್ರುತಿಯಲ್ಲಿರುವ 'ದ್ರಷ್ಟುಃ' ಎಂಬ ಶಬ್ದವು ಹೇಗೆ ಅಂತರ್ಣೀತವಾದ 'ಣಿಚ್' ಪ್ರತ್ಯಯಾಂತವಾಗಿದೆಯೋ, ಅದರಂತೆ ಇಲ್ಲಿಯೂ ಸಹ ತಿಳಿಯಬೇಕು.

ಹಾಗಾದರೆ, ಜ್ಯೋತಿಪುರುಷನಿಗೆ ಆದಿತ್ಯಾದಿಜ್ಯೋತಿಷ್ಟ್ವವನ್ನು ಹೇಳಿದ್ದರ ವಿರೋಧ ಬರುತ್ತದಲ್ಲವೇ? ಎಂದು ಕೇಳಿದರೆ, ಆದಿತ್ಯಾದಿ ಜ್ಯೋತಿರ್ಯುಕ್ತನಾದ 'ಅಯಂ ಪುರುಷಃ' ಎಂಬ ವಾಕ್ಯಪ್ರತಿಪಾದ್ಯನಾದ ಪುರುಷನು ಜೀವನೇ ಆಗಿದ್ದಾನೆಂದು ನಾವು ಒಪ್ಪುತ್ತೇವೆ. ಅಂದರೆ ಅತಿಕ್ರಾಮತಿ ಎಂಬ ಪದವು ಅತ್ರಿಕಾಮಯತಿ ಎಂಬ ಅರ್ಥದಲ್ಲಿರುತ್ತದೆ.

**तत्वप्रकाशिका – न चादित्यादिज्योतिष्ट्वविरोधः । आदित्यादिज्योतिष्मतोऽयं पुरुष इत्युक्तस्य जीवत्वेनाभ्युपगमात् ।**

ಹಾಗಾದರೆ ಆದಿತ್ಯಾದಿಜ್ಯೋತಿಷ್ಟ್ವದ ವಿರೋಧ ಬರುತ್ತದಲ್ಲವೇ? ಎನ್ನಬಾರದು. ಆದಿತ್ಯಾದಿ ಜ್ಯೋತಿಷ್ಟ್ವತ್ವೇನ ವರ್ಣಿತನಾದ ಪುರುಷನೇ ಮುಂದೆ 'ಅಯಂ ಪುರುಷಃ' ಎಂಬ ವಾಕ್ಯದಲ್ಲಿ ಹೇಳಿದ ಪುರುಷನು ಜೀವನೇ ಆಗಿದ್ದಾನೆಂಬುದನ್ನು ನಾವು ಒಪ್ಪುತ್ತೇವೆ.

**तत्वप्रकाशिका – नच तस्यैव स्वयंज्योतिष्ट्वेनोक्तस्य ज्योतिष्ट्वमुच्यत इति वाच्यम् । 'आत्मैवास्य ज्योतिर्भवति' इति 'कतम आत्मा' इत्यात्मशब्दोदितस्य विष्णुत्वात् नचैवं सत्यवाधारणविरोधः । अवधारणस्य बाह्यज्योतिषां मध्ये सूर्यादीनां प्राधान्यज्ञापनार्थत्वेनोपपत्तेः । अन्यव्यावर्तकत्वस्य वागादिसत्त्वेना-योगात् ।**

ಆದಿತ್ಯಾದಿ ಜ್ಯೋತಿಷ್ಟ್ವದಿಂದ ವರ್ಣಿತನಾದ ಜ್ಯೋತಿಪುರುಷನೇ ಮುಂದೆ, 'ಅತ್ರಾಯಂ ಜ್ಯೋತಿರ್ಭವತಿ' ಎಂಬಲ್ಲಿ ಜ್ಯೋತಿಷ್ಟ್ವತ್ವೇನ ವರ್ಣಿತನಾಗಿದ್ದಾನೆ. ಈ ಹಿಂದಿನ ಮುಂದಿನ ವಾಕ್ಯಗಳನ್ನು ಗಮನಿಸಿದಾಗ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂಬ ಮಧ್ಯದಲ್ಲಿರುವ ವಾಕ್ಯದಿಂದಲೂ ಜೀವನನ್ನೇ ಸ್ವೀಕರಿಸಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ, 'ಆತ್ಮೈವಾಸ್ಯ ಜ್ಯೋತಿರ್ಭವತಿ' 'ಕತಮ ಆತ್ಮಾ' ಎಂಬಲ್ಲಿ ಆತ್ಮಶಬ್ದವಿರುವುದರಿಂದ ಇಲ್ಲಿ ಪ್ರತಿಪಾದ್ಯನಾದ ಜ್ಯೋತಿಃಪದಾರ್ಥವು ವಿಷ್ಣುವೇ ಆಗಿದ್ದಾನೆ.

ಹಾಗಾದರೆ, ಜೀವನಿಗೆ ಆತ್ಮಜ್ಯೋತಿಷ್ಟ್ವವು ಯಾವಾಗಲೂ ಇರುವುದರಿಂದ ಶ್ರುತಿಯಲ್ಲಿ 'ಆದಿತ್ಯೇನೈವ' 'ಚಂದ್ರಮಸೈವ' ಎಂಬುದಾಗಿ ಅವಧಾರಣವನ್ನು ಹೇಳಿದ್ದು ತಪ್ಪಲ್ಲವೇ? ಎಂದು

ಪ್ರಶ್ನಿಸಬಾರದು. ಬಾಹ್ಯವಾದ ತೇಜಸ್ಸುಗಳ ಮಧ್ಯದಲ್ಲಿ ಸೂರ್ಯ-ಚಂದ್ರ ಮೊದಲಾದವರಿಗೆ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ ಹಾಗೆ ಅವಧಾರಣವನ್ನು ಶ್ರುತಿಯು ಹೇಳಿದೆ. ಹೊರತು, ಅವಧಾರಣವು ಅನ್ಯಪದಾರ್ಥಗಳ ವ್ಯಾವೃತ್ತಿಗೋಸ್ಕರವೆಂದರೆ ಸೂರ್ಯ-ಚಂದ್ರಾದಿಗಳಿರುವಾಗಲೂ ವಾಗಾದಿ ಇಂದ್ರಿಯಗಳು ಜ್ಞಾನಸಾಧನವಾಗಿರುವುದರಿಂದ ಅವಧಾರಣವು ಅಯುಕ್ತವಾಗುತ್ತದೆ.

**तत्वप्रकाशिका – नच विशिष्टोक्तिविरोधः । ज्योतिरन्तराभाष्योवाभिप्रायेणोपपत्तेः । तदुक्तम् । 'भावेऽभावेऽपि सूर्यादेर्जीवानां विष्णुरेव हि । ज्योतिस्तथाप्यभावे तु तज्ज्ञेयं हि विशेषतः' । इति । नच प्रत्यभिज्ञाविरोधः । 'अत्रायं भगवान्विष्णुर्जीवस्य स्वयमेव तु । ज्योतिर्विशेषतो भूयान्नैवान्यज्जोतिरत्र यत्' इत्युक्तरीत्योपपत्तेः ।**

ಇನ್ನು ಪರಮಾತ್ಮವಿಷಯಕವಾದ ಜ್ಯೋತಿಷ್ಟ್ವವು ಜೀವನಿಗೆ ನಿರಂತರ ಇರುವುದಾದರೆ ಸುಷುಪ್ತಿಕಾಲದಲ್ಲಿ ಇರುತ್ತಾನೆಂದು ಹೇಳಲು ಏನು ಕಾರಣ? ಎಂಬ ಶಂಕೆಯೂ ಸಹ ಸರಿಯಲ್ಲ. ಸುಷುಪ್ತಿಕಾಲದಲ್ಲಿ ಸೂರ್ಯಾದಿ ತೇಜಸ್ಸುಗಳು ಇರುವುದಿಲ್ಲ. ಅದನ್ನು ಸೂಚಿಸುವ ಅಭಿಪ್ರಾಯದಿಂದ, 'ಆತ್ಮೈವಾಸ್ಯ ಜ್ಯೋತಿಃ' ಎಂದು ಹೇಳಿರುತ್ತಾರೆ. ಇದನ್ನೇ 'ಭಾವೇ ಅಭಾವೇ ಸೂರ್ಯಾದೇರ್ಜೀವಾನಾಂ ವಿಷ್ಣುರೇವ ಹಿ । ಜ್ಯೋತಿಸ್ತಥಾಪ್ಯಭಾವೇ ತು ತದ್ ಜ್ಞೇಯಂ ಹಿ ವಿಶೇಷತಃ ॥ ಸೂರ್ಯನು ಇದ್ದರೂ ಇಲ್ಲದಿದ್ದರೂ ಜೀವನಿಗೆ ಜ್ಞಾನಸಾಧನವೆನಿಸಿದ ವಿಷ್ಣು ಇದ್ದೇ ಇರುತ್ತಾನೆ. ಆದರೂ ಸಹ ಸೂರ್ಯಾದಿಗಳಿಲ್ಲದಿರುವಾಗ ವಿಷ್ಣುರೂಪವಾದ ಜ್ಯೋತಿಯೇ ವಿಶೇಷವಾಗಿ ಜ್ಞಾನಸಾಧನವಾಗಿರುತ್ತದೆ, ಎಂದು ಬೃಹದಾರಣ್ಯಕದ ಭಾಷ್ಯದಲ್ಲಿ ಹೇಳಿರುತ್ತಾರೆ.

**तत्वप्रकाशिका – नन्वेवं बाधकाभावात्कथं लिङ्गानामन्यार्थता श्रुतिमात्रस्य बहुलिङ्गानुसारेणामुख्यार्थत्वोपपत्तेरिति ।**

'ಅಯಂ ಪುರುಷಃ ಸ್ವಯಂಜ್ಯೋತಿರ್ಭವತಿ' ಎಂಬ ವಾಕ್ಯದಲ್ಲಿ ಸ್ವಯಂಶಬ್ದದಿಂದ ಜೀವನನ್ನೇ ಸ್ವೀಕರಿಸಬೇಕಲ್ಲವೇ? ಆಗ ಪ್ರತ್ಯಭಿಜ್ಞಾನದಿಂದ 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿರುವ ಆತ್ಮಶಬ್ದದಿಂದಲೂ ಜೀವನನ್ನೇ ತಿಳಿಯಬೇಕಾಗುತ್ತದೆ. ಒಂದು ವೇಳೆ ಪರಮಾತ್ಮನನ್ನು ಸ್ವೀಕರಿಸಿದರೆ ಪ್ರತ್ಯಭಿಜ್ಞಾನಕ್ಕೆ ವಿರೋಧ ಬರುತ್ತದೆಂದು ಶಂಕಿಸಬಾರದು. ಏಕೆಂದರೆ, 'ಅತ್ರಾಯಂ ಭಗವಾನ್ ವಿಷ್ಣುರ್ಜೀವಸ್ಯ ಸ್ವಯಮೇವ ತು । ಜ್ಯೋತಿರ್ವಿಶೇಷತೋ ಭೂಯಾನ್ನೈವಾನ್ಯಜ್ಜ್ಯೋತಿರತ್ರ ಯತ್ ॥' ಸುಷುಪ್ತ್ಯವಸ್ಥೆಯಲ್ಲಿ ಸ್ವತಃ ವಿಷ್ಣುವೇ ಜೀವನಿಗೆ ಜ್ಯೋತಿಯಾಗಿರುತ್ತಾನೆ. ಆ ಅವಸ್ಥೆಯಲ್ಲಿ ಭಗವಂತನನ್ನು ಬಿಟ್ಟು ಜೀವನಿಗೆ ಮತ್ತೊಂದು ಜ್ಯೋತಿಯಿರುವುದಿಲ್ಲ. ಆದ್ದರಿಂದ ಸ್ವಯಂಪದದಿಂದ ವಿಷ್ಣುವೇ ಆಗಿರುತ್ತಾನೆಂದು ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿರುತ್ತಾರೆ. ಆದ್ದರಿಂದ ಪ್ರತ್ಯಭಿಜ್ಞಾವಿರೋಧಕ್ಕೆ ಅವಕಾಶವಿಲ್ಲ.

ಜ್ಯೋತಿರಧಿಕರಣ (೧-೩-೧೧)

**तत्वप्रकाशिका – मैवम् । जीवपक्षे बहुबाधकसद्भावात् प्रसिद्धत्वेन 'कतम आत्मा' इति प्रश्नायोगात् सुखदुःखविशेषवत्त्वेनोभयलोकसञ्चरणे समानत्वायोगात् स्वाप्नपदार्थकर्तृत्वाभावात्स्वप्नेन शारीरमित्यादिमन्त्रासङ्गतेश्च । तस्मादिदं प्रागुक्तं च ज्योतिर्विष्णुरेवेति सिद्धम् ।। ४० ।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**
**ज्योतिरधिकरणम् ।।**

ಯಾವುದೇ ಬಾಧಕಗಳಿಲ್ಲದಿರುವಾಗ ಲಿಂಗಗಳಿಗೆ ಅನ್ಯಾರ್ಥ ಮಾಡುವುದು ಹೇಗೆ ಸಮಂಜಸವಾಗುತ್ತದೆ? ಕೇವಲ ಶ್ರುತಿಗೆ ಬಹುಲಿಂಗಗಳ ವಿರೋಧ ಬಂದಾಗ ಅಮುಖ್ಯಾರ್ಥವನ್ನು ಮಾಡುವುದು ಸಾಧುವಾಗುತ್ತದಲ್ಲವೇ? ಪ್ರಕೃತ 'ವಿಷ್ಣುರೇವಾಯಂ ಜ್ಯೋತಿಃ' ಎಂಬ ಒಂದೇ ಶ್ರುತಿಗೆ ಉಭಯಲೋಕಸಂಚಾರ ಮೊದಲಾದ ಅನೇಕ ಲಿಂಗಗಳ ವಿರೋಧ ಬರುವುದರಿಂದ ಗೌಣಾರ್ಥವನ್ನು ಮಾಡಬೇಕು.

ಈ ಶಂಕೆಯೂ ಸಹ ಸರಿಯಲ್ಲ. ಏಕೆಂದರೆ, ಜೀವಪಕ್ಷದಲ್ಲಿ ಅನೇಕ ಬಾಧಕಗಳಿರುವುದು ಪ್ರಸಿದ್ಧವಾಗಿದೆ. ಅವು ಹೀಗಿವೆ - 'ಕತಮ ಆತ್ಮಾ' ಎಂದು ಜನಕರಾಜರು ಮಾಡಿರುವಂತಹ ಪ್ರಶ್ನೆಯೇ ಸಮಂಜಸವಾಗುವುದಿಲ್ಲ. ಕರ್ಮಾನುಸಾರಿಯಾಗಿ ಜೀವನಿಗೆ ಸುಖ-ದುಃಖಾದಿಗಳ ಭೋಗವು ಉಂಟಾಗುವುದರಿಂದ ಉಭಯಲೋಕಸಂಚಾರವು ಅವನಿಗೆ ಕೂಡುವುದಿಲ್ಲ. ಕರ್ಮಾನುಸಾರಿಯಾಗಿ ಸುಖ-ದುಃಖಗಳು ಪ್ರಾಪ್ತವಾಗುವುದರಿಂದ ಉಭಯಲೋಕಸಂಚಾರದಲ್ಲಿ ಸುಖ-ದುಃಖಗಳ ಸಮಪ್ರಾಪ್ತಿ ಕೂಡುವುದಿಲ್ಲ. ಅದರಂತೆ, 'ಅಥರಥಾನ್ ರಥಯೋಗಾನ್ ಸೃಜತೇ' ಎಂಬಲ್ಲಿ ಸ್ವಾಪ್ನಪದಾರ್ಥಕರ್ತೃತ್ವವು ಜೀವನಿಗೆ ಇಲ್ಲದ ಕಾರಣ ಜೀವನನ್ನು ತೆಗೆದುಕೊಳ್ಳಲು ಬರುವುದಿಲ್ಲ. ಮತ್ತು 'ಸ್ವಾಪ್ನೇನ ಶಾರೀರಮ್' ಇತ್ಯಾದಿ ಶ್ರುತಿಯಲ್ಲಿ ಜೀವನನ್ನು ಸ್ವೀಕರಿಸಿದರೆ ಬಾಧಕವಿರುತ್ತದೆ. ಆದ್ದರಿಂದ, 'ವಿಷ್ಣುರೇವಾಯಂ ಜ್ಯೋತಿಃ' ಎಂಬಲ್ಲಿರುವ 'ಜ್ಯೋತಿಃ' ಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ಸ್ಪಷ್ಟವಾಗುತ್ತದೆ. ಈ ಅರ್ಥದಲ್ಲಿ ಯಾವುದೇ ಬಾಧಕಗಳಿರುವುದಿಲ್ಲ. ಜೀವ ಎಂಬ ಅರ್ಥವನ್ನು ಸ್ವೀಕರಿಸಿದರೆ ಮಾತ್ರ ಅನೇಕ ಬಾಧಕಗಳಿರುತ್ತವೆ. ಆದ್ದರಿಂದ 'ಹೃದ್ಯಂತರ್ಜ್ಯೋತಿಃ' ಎಂಬಲ್ಲಿರುವ 'ಜ್ಯೋತಿಃ' ಶಬ್ದಕ್ಕೆ ಮಹಾವಿಷ್ಣುವೆಂಬ ಅರ್ಥವನ್ನೇ ಸ್ವೀಕರಿಸಬೇಕೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು

ಪರಿಪೂರ್ಣಚಂದ್ರಿಕಾ

**भावदीपः –**

।। ॐ ज्योतिर्दर्शनात् ॐ ।।

अत्र न्यायविवरणे साधारण्यबीजाऽनुक्तेः योऽयमिति भाष्योक्तवाक्यानुरोधेन द्वेधा साधारण्यं स्वयमाह – **अत्र जीवेति** ।। ज्योतिःपदप्रवृत्तिनिमित्तं हि प्रकाशत्वं ज्ञानत्वमपि प्रकाशत्वमेवेति भावः ।

ಈ ಅಧಿಕರಣದ ನ್ಯಾಯವಿವರಣದಲ್ಲಿ 'ಜ್ಯೋತಿಸ್' ಶಬ್ದಕ್ಕೆ ಉಭಯಸಾಧಾರಣ್ಯದ ಬೀಜವನ್ನು ಹೇಳಿಲ್ಲ. ಆದರೆ 'ಯೋಽಯಂ' ಎಂಬ ಭಾಷ್ಯದಲ್ಲಿ ಈ ಸಾಧಾರಣ್ಯವು ಸೂಚಿತವಾಗಿದೆ. ಅದನ್ನು ಅನುಸರಿಸಿ ಟೀಕಾರಾಯರು ಎರಡು ಬಗೆಯ ಸಾಧಾರಣ್ಯವನ್ನು ಹೇಳುತ್ತಿದ್ದಾರೆ, 'ಅತ್ರ ಜೀವ' ಇತ್ಯಾದಿ ಟೀಕೆಯಿಂದ. 'ಜ್ಯೋತಿಸ್' ಶಬ್ದದ ಪ್ರವೃತ್ತಿನಿಮಿತ್ತವು 'ಪ್ರಕಾಶತ್ವ'. ಜ್ಞಾನತ್ವವೂ ಸಹ ಪ್ರಕಾಶತ್ವರೂಪವೇ ಆಗಿದೆ.

**भावदीपः –** अग्न्यादौ ज्योतिःपदप्रसिद्धावपि इह तस्य पूर्वपक्षकोटित्वाप्रसक्तेः प्रवृत्तिनिमित्तसाम्यमेवोक्तम् । सङ्गतिपरतया भाष्यं व्याचष्टे – **ज्योतिरिति** ।। तत्रेत्येतत्प्रथमान्तं व्याचष्टे – **तत् श्रूयत इति** ।।

ಅಗ್ನಿ ಮೊದಲಾದವರಲ್ಲಿ 'ಜ್ಯೋತಿಃ' ಎಂಬ ಪದವು ಪ್ರಸಿದ್ಧವಾಗಿದ್ದರೂ ಸಹ, ಪ್ರಕೃತ ಅಗ್ನ್ಯಾದಿಗಳು ಪೂರ್ವಪಕ್ಷಕೋಟಿಯಲ್ಲಿ ಅಪ್ರಸಕ್ತರಾದ್ದರಿಂದ ಪ್ರವೃತ್ತಿನಿಮಿತ್ತಸಾಮ್ಯವನ್ನಷ್ಟೇ ಹೇಳಿದ್ದಾರೆ. ಸಂಗತಿಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ, 'ಜ್ಯೋತಿಃ' ಇತ್ಯಾದಿಯಾಗಿ. 'ತತ್ರ' ಎಂಬುದು ಪ್ರಥಮಾಂತವಾಗಿದೆ ಎಂದು 'ತಚ್ಛ್ರೂಯತೇ' ಎಂಬಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः –** षष्ठेऽध्याये ज्योतिर्ब्राह्मणे 'योऽयम्' इत्यत्र वाक्य इत्यर्थः । उभौ लोकावित्यादेस्तात्पर्यम् – **तच्चेति** ।। उभयलोकसञ्चरणाद्यदि जीवः स्यादित्यर्थः ।

'ತಚ್ಛ್ರೂಯತೇ' ಎಂದರೆ ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದ 'ಯೋಽಯಂ' ಎಂಬ ವಾಕ್ಯದಲ್ಲಿ ಶ್ರುತವಾಗಿದೆ ಎಂದರ್ಥ. 'ಉಭೌ ಲೋಕೌ' ಇತ್ಯಾದಿ ಶ್ರುತಿಯ ತಾತ್ಪರ್ಯವನ್ನು 'ತಚ್ಚ' ಎಂಬ ಟೀಕೆಯಿಂದ ಹೇಳಿದ್ದಾರೆ. ಉಭಯಲೋಕಸಂಚಾರವಿರುವುದರಿಂದ ಜೀವನು 'ಜ್ಯೋತಿಸ್' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ ಎಂದರ್ಥ.

**भावदीपः –** उक्तमित्यन्तस्य तात्पर्यमाह – **तदेति** ।। इति सङ्गतिसम्भवादित्यर्थः। पूर्वपक्षतद्युक्त्यादिपरतयाऽपि भाष्यं व्याख्यातुं तत्र तत् जीव इति षष्ठेऽध्याये प्रतीयत इति प्रतिज्ञार्थमाह – **जीव एवेति** ।।

'ಉಕ್ತಂ' ಎಂಬಲ್ಲಿಯ ತನಕ ಇರುವ ಭಾಷ್ಯದ ತಾತ್ಪರ್ಯವನ್ನು 'ತದಾ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. ಯುಕ್ತವಾಗುವುದರಿಂದ ಎಂದು ಇದರ ಅರ್ಥ. ಪೂರ್ವಪಕ್ಷ ಹಾಗೂ ಪೂರ್ವಪಕ್ಷಯುಕ್ತಿ ಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತತ್ರ ತತ್ ಜೀವಃ' ಎಂಬ ಆರನೇ ಅಧ್ಯಾಯದಲ್ಲಿ ತೋರುತ್ತಿದೆ ಎಂದು ಪ್ರತಿಜ್ಞಾರ್ಥವನ್ನು 'ಜೀವ ಏವ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः –** सञ्चरतीत्यत्र कर्तृवाचकं दर्शयन्नुभावित्यादिभाष्यं व्याचष्टे – स समान इति ।। निराकाङ्क्षाणि पदानि वाक्यमित्युक्तदिशाऽस्य वाक्यत्वेऽपि तद्बोध्यस्यासाधारणधर्मत्वाल्लिङ्गादित्युक्तम् ।

'ಸಂಚರತಿ' ಎಂಬಲ್ಲಿ ಕರ್ತೃವಾಚಕವಾದ ಪದವನ್ನು ತೋರಿಸುತ್ತಾ 'ಉಭೌ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ, 'ತತ್ಸಮಾನಃ' ಇತ್ಯಾದಿಯಾಗಿ. ನಿರಾಕಾಂಕ್ಷಿತವಾದ ಪದಗಳ ಸಮೂಹವೇ ವಾಕ್ಯವೆನಿಸುತ್ತದೆ ಎಂದು ಹಿಂದೆ ಹೇಳಿದಂತೆ, ಇದೂ ಸಹ ವಾಕ್ಯವೇ ಆಗುತ್ತದೆ. ಆದರೆ, ತದ್‌ಬೋಧ್ಯವಾದ ಅರ್ಥವು ಅಸಾಧಾರಣಧರ್ಮವಾದ್ದರಿಂದ ಲಿಂಗವೆಂದು ಹೇಳಿದ್ದಾರೆ.

**भावदीपः –** आदित्यादिज्योतिष्ट्वमुभयलोकसञ्चरणं 'आदित्येनैवायं ज्योतिषाऽस्ते' इत्यवधारणमित्यादीनां परमात्मन्यवकाशाभावो बहुतादृक्त्वमिति न्यायविवरणोक्तमनवकाशत्वमस्य व्यनक्ति – तस्य हीति ।।

ಆದಿತ್ಯಾದಿಜ್ಯೋತಿಷ್ಟ್ವ ಹಾಗೂ ಉಭಯಲೋಕಸಂಚಾರವು 'ಆದಿತ್ಯೇನೈವಾಯಂ ಜ್ಯೋತಿಷಾ ಆಸ್ತೇ' ಎಂಬಲ್ಲಿ ಕೇಳಿಸುವ ಅವಧಾರಣವು ಪರಮಾತ್ಮನಲ್ಲಿ ಕೂಡುವುದಿಲ್ಲ. 'ಬಹುತಾದೃಕ್ತ್ವ' ಎಂಬ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ನಿರವಕಾಶತ್ವವನ್ನು ಕೂಡ ಇದಕ್ಕೆ ಸಮರ್ಥಿಸುತ್ತಿದ್ದಾರೆ, 'ತಸ್ಯ ಹಿ' ಇತ್ಯಾದಿ ಟೀಕೆಯಿಂದ.

**भावदीपः –** ब्रह्म तु कर्मातीतम् अन्यत्र धर्मादन्यत्राधर्मादित्यादेः । 'भूमा सम्प्रसादाद्' इत्यत्रोक्तदिशोत्क्रमणक्रियावदणुत्वयुक्ते हरौ सञ्चरणक्रियोपपत्तावपि कर्माधीनं यदुभयलोकसञ्चरणं तज्जीव एव युक्तं नतु हराविति भावः ।

'ಅನ್ಯತ್ರ ಧರ್ಮಾತ್, ಅನ್ಯತ್ರಾಧರ್ಮಾತ್' ಎಂಬ ಶ್ರುತಿ ಇರುವುದರಿಂದ ಬ್ರಹ್ಮನು ಎಲ್ಲಾ ವಿಧವಾದ ಕರ್ಮಗಳಿಂದ ಅತೀತನಾಗಿದ್ದಾನೆ. 'ಭೂಮಾ ಸಂಪ್ರಸಾದಾತ್' ಎಂಬಲ್ಲಿ ಹೇಳಿದಂತೆ 'ಉತ್ಕ್ರಮಣ' ಎಂಬ ಕ್ರಿಯೆಯುಳ್ಳವನಾದ್ದರಿಂದ ಅಣುತ್ವಧರ್ಮವನ್ನು ಹೊಂದಿದ ಶ್ರೀಹರಿಯಲ್ಲಿ ಉಭಯಲೋಕಸಂಚಾರವೆಂಬ ಕ್ರಿಯೆಯನ್ನು ಹೇಳಬಹುದು. ಆದರೆ ಕರ್ಮಾಧೀನವಾದ ಉಭಯಲೋಕಸಂಚಾರವನ್ನು ಶ್ರುತಿಯು ಹೇಳುತ್ತಿರುವುದರಿಂದ, ಇದು ಪರಮಾತ್ಮನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ, ಜೀವನೇ 'ಜ್ಯೋತಿಃ' ಎಂಬ ಪದದಿಂದ ಪ್ರತಿಪಾದ್ಯನು, ಹೊರತು ಶ್ರೀಹರಿಯಲ್ಲ.

ಪರಿಪೂರ್ಣಚಂದ್ರಿಕಾ

**भावदीपः** – भाष्यमुपलक्षणं मत्वाऽन्यत्रोक्तादिपदोपात्तलिङ्गानि चाह – **इममिति** ।। पृथिवीलोकं मृत्युसाधनमिति वा मृत्युसाधनानि चेति वाऽप्नोतीत्यर्थः। जीवस्यानादिनित्यत्वाज्जायमानत्वम्रियमाणत्वे व्यनक्ति । शरीरमभिसम्पद्यमान उत्क्रामन्निति च । उभयानित्यस्य व्याख्या, पाप्मनः पापफलानि दुःखानि पुण्यफलान्यानन्दांश्च पश्यत्यनुभवतीति । स्वप्नान्ते स्वप्नदेशे ईयमानः प्राप्नुवन् । लिङ्गानां हरावनवकाशत्वं स्पष्टमिति भावः ।

ಭಾಷ್ಯದಲ್ಲಿ ಹೇಳಿದ್ದು ಕೇವಲ ಉಪಲಕ್ಷಣವಾಗಿದೆ. ಬೇರೆ ಕಡೆ ಹೇಳಿದ ಆದಿಪದದಿಂದ ಸ್ವೀಕರಿಸಲ್ಪಟ್ಟ ಲಿಂಗಗಳನ್ನೂ ಕೂಡ ಇಲ್ಲಿ ವಿವಕ್ಷಿಸಬೇಕೆಂದು 'ಇಮ್' ಇತ್ಯಾದಿ ಟೀಕೆಯಿಂದ ಹೇಳಿದ್ದಾರೆ. 'ಇಮಂ' ಎಂದರೆ ಪೃಥ್ವಿಲೋಕವನ್ನು ಅಥವಾ ಮೃತ್ಯುಸಾಧನವನ್ನು ಎಂದರ್ಥ. ಅಥವಾ ಮೃತ್ಯುಸಾಧನಗಳನ್ನು ಎಂದೂ ಹೇಳಬಹುದು. 'ಅತಿಕ್ರಾಮತಿ' ಎಂದರೆ ಹೊಂದುತ್ತಾನೆ ಎಂದರ್ಥ. ಜೀವನು ಅನಾದಿನಿತ್ಯನಾದ್ದರಿಂದ, 'ಜಾಯಮಾನತ್ವ' ಮತ್ತು 'ಮ್ರಿಯಮಾಣತ್ವ'ಗಳನ್ನು ಶರೀರಮಭಿಸಂಪದ್ಯಮಾನಃ 'ಉತ್ಕ್ರಾಮನ್' ಎಂಬ ಎರಡು ಪದಗಳಿಂದ ಹೇಳಲಾಗಿದೆ. 'ಉಭಯಾನಪಿ' ಎಂಬುದರ ವ್ಯಾಖ್ಯಾನ ಹೀಗಿದೆ - 'ಪಾಪ್ಮನಃ' ಪಾಪಫಲಗಳಾದ ದುಃಖಗಳನ್ನು, ಪುಣ್ಯಫಲವೆನಿಸಿದ ಆನಂದವನ್ನೂ ಕೂಡ ಪಶ್ಯತಿ = ಅನುಭವಿಸುತ್ತಾನೆ. ಸ್ವಪ್ನಾಂತೇ = ಸ್ವಪ್ನದೇಶದಲ್ಲಿ, ಈಯಮಾನಃ = ಹೊಂದುತ್ತಾ ಎಂದು ಇದರರ್ಥ. ಇದರಿಂದ, ಲಿಂಗಗಳು ಶ್ರೀಹರಿಯಲ್ಲಿ ಯುಕ್ತವಾಗುವುದಿಲ್ಲವೆಂದು ಸ್ಪಷ್ಟವಾಗುತ್ತದೆ.

**भावदीपः** – आदित्यादिज्योतिष्ट्वमितीममंशम् अन्यत्रोक्तम् 'आत्मैवास्य ज्योतिः' इत्यत्र इदंशब्दस्य जीवार्थत्वसाधकतया व्यनक्ति – **किञ्चेति** ।।

'ಆದಿತ್ಯಾದಿಜ್ಯೋತಿಷ್ಟ್ವಮ್' ಎಂಬ ಅಂಶವು ಬೇರೆ ಕಡೆ ಸ್ಪಷ್ಟಪಡಿಸಲಾಗಿದೆ. 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ 'ಇದಂ'ಶಬ್ದಕ್ಕೆ ಜೀವ ಎಂಬ ಅರ್ಥವನ್ನೇ ವಿವಕ್ಷಿಸಬೇಕೆಂದು 'ಕಿಂಚ' ಇತ್ಯಾದಿ ಟೀಕೆಯಿಂದ ಸ್ಪಷ್ಟಪಡಿಸುತ್ತಿದ್ದಾರೆ.

**भावदीपः** – अयं पुरुषः जीवः किं ज्योतिः ज्ञानसाधनं यस्येति व्युत्पत्त्या जनकराजेन जीवस्य ज्ञानसाधने पृष्टे सति याज्ञवल्क्यः आदित्यज्योतिः सम्राडिति होवाचेत्युत्तरमुक्त्वा आदित्येनैवाऽयं ज्योतिषाऽस्ते पल्ययते कर्म कुरुते विपल्येतीत्युपपाद्य अस्तमित आदित्ये किं ज्योतिरेवायं पुरुष इति चन्द्रमा एवास्य ज्योतिर्भवतीत्यादिना आदित्यचन्द्राग्निवाचां पूर्वपूर्वास्तमये उत्तरोत्तरस्य ज्ञानसाधनत्वरूपं ज्योतिष्ट्वं प्रश्नोत्तराभ्यां यस्य जीवस्य जाग्रद्दशायामुक्तं तस्यास्तमित आदित्ये याज्ञवल्क्यचन्द्रमस्यस्तमिते शान्तेऽग्नौ शान्तायां वाचि किं

ज्योतिरयं पुरुष इतिप्रश्ने आत्मैवास्य ज्योतिर्भवतीति सुप्तिस्वप्नयोः स्वप्रकाशत्व-रूपात्मज्योतिष्ट्वोक्तौ कतम आत्मेति ज्योतिष्ट्वेनोक्तात्मविषयप्रश्ने कृते सति 'योऽयं विज्ञानमयः प्राणेषु हृद्यं तज्ज्योतिः' इत्युच्यत इत्यर्थः ।

ಬೃಹದಾರಣ್ಯಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಬರುವ ಪ್ರಕರಣ ಹೀಗಿದೆ - ಯಾಜ್ಞವಲ್ಕ್ಯರನ್ನು 'ಕಿಂ ಜ್ಯೋತಿರಯಂ ಪುರುಷಃ' ಜನಕರಾಜನು ಜೀವನಿಗೆ ಜ್ಞಾನಸಾಧನವಾದದ್ದು ಯಾವುದು? ಎಂದು ಪ್ರಶ್ನಿಸುತ್ತಾರೆ. ಆವಾಗ, ಯಾಜ್ಞವಲ್ಕ್ಯರು 'ಆದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚ' ಆದಿತ್ಯನೇ ಜ್ಞಾನಸಾಧನನಾಗಿದ್ದಾನೆ ಎಂದು ಉತ್ತರವನ್ನು ನೀಡುತ್ತಾರೆ. ಏಕೆಂದರೆ, 'ಆದಿತ್ಯೇನೈವಾಯಂ ಜ್ಯೋತಿಷಾಽಸ್ತೇ, ಪಲ್ಯಯತೇ, ಕರ್ಮ ಕುರುತೇ, ವಿಪಲ್ಯೇತೇತಿ' ಆದಿತ್ಯನ ಸಹಾಯದಿಂದಲೇ ಜೀವನು ಬೇಕಾದಲ್ಲಿ ಕುಳಿತುಕೊಳ್ಳುತ್ತಾನೆ. ಬೇಕಾದಲ್ಲಿ ಹೋಗುತ್ತಾನೆ. ಕೆಲಸಗಳನ್ನು ಮಾಡುತ್ತಾನೆ. ಹಿಂತಿರುಗಿ ಬರುತ್ತಾನೆ. ಆದ್ದರಿಂದ ಆದಿತ್ಯನೇ ಜ್ಞಾನಸಾಧನನಾಗಿದ್ದಾನೆ. ಎಂದು ಯಾಜ್ಞವಲ್ಕ್ಯರು ಉತ್ತರಿಸುತ್ತಾರೆ. ಪುನಃ ಜನಕರಾಜರು ಪ್ರಶ್ನಿಸುತ್ತಾರೆ. 'ಅಸ್ತಮಿತೇ ಆದಿತ್ಯೇ ಯಾಜ್ಞವಲ್ಕ್ಯ ಕಿಂ ಜ್ಯೋತಿರೇವಾಯಂ ಪುರುಷಃ ಇತಿ ಚಂದ್ರಮಾ ಏವಾಸ್ಯ ಜ್ಯೋತಿರ್ಭವತೀತಿ' 'ಎಲೈ ಯಾಜ್ಞವಲ್ಕ್ಯರೇ! ಆದಿತ್ಯನು ಅಸ್ತಂಗತನಾದಾಗ ಜೀವನಿಗೆ ಜ್ಞಾನಸಾಧನವಾದದ್ದು ಯಾವುದು? ಯಾಜ್ಞವಲ್ಕ್ಯರು ಉತ್ತರಿಸುತ್ತಾರೆ. ಚಂದ್ರನೇ ಇವನಿಗೆ ಜ್ಞಾನಸಾಧನನು. ಜ್ಞಾನಸಾಧನನಾದ ಚಂದ್ರನಿಂದಲೇ ಜೀವನು ಬೇಕಾದಲ್ಲಿ ಕುಳಿತುಕೊಳ್ಳುತ್ತಾನೆ. ಬೇಕಾದ ಕಡೆ ಹೋಗುತ್ತಾನೆ. ಕೆಲಸಗಳನ್ನು ಮಾಡುತ್ತಾನೆ. ಹಿಂತಿರುಗಿ ಬರುತ್ತಾನೆ. ಆದ್ದರಿಂದ ಚಂದ್ರನೇ ಜ್ಞಾನಸಾಧನನೆಂದು ಉತ್ತರಿಸುತ್ತಾರೆ. ಪುನಃ ಜನಕರಾಜರು ಸೂರ್ಯ ಹಾಗೂ ಚಂದ್ರರಿಬ್ಬರೂ ಅಸ್ತವಾದಾಗ ಜೀವನಿಗೆ ಜ್ಞಾನಸಾಧನವಾದದ್ದು ಯಾವುದು? ಎಂದು ಪ್ರಶ್ನಿಸುತ್ತಾರೆ. ಆವಾಗ ಯಾಜ್ಞವಲ್ಕ್ಯರು ಅಗ್ನಿಯೇ ಇವನಿಗೆ ಜ್ಞಾನಸಾಧನನಾಗುತ್ತಾನೆ. ಜ್ಞಾನಸಾಧನವಾದ ಅಗ್ನಿಯಿಂದಲೇ ಜೀವನು ಎಲ್ಲ ವ್ಯಾಪಾರಗಳನ್ನು ಮಾಡುತ್ತಾನೆಂದು ಉತ್ತರಿಸುತ್ತಾರೆ. ಪುನಃ ಜನಕರಾಜರು ಸೂರ್ಯ, ಚಂದ್ರ, ಅಗ್ನಿ ಎಲ್ಲರೂ ಅಸ್ತರಾದಾಗ ಜೀವರಿಗೆ ಜ್ಞಾನಸಾಧನವಾದದ್ದು ಯಾವುದು ಎಂದು ಪ್ರಶ್ನಿಸುತ್ತಾರೆ. ಆವಾಗ, ಯಾಜ್ಞವಲ್ಕ್ಯರು ಮಾತು ಇವನಿಗೆ ಮುಖ್ಯವಾದ ಜ್ಞಾನಸಾಧನ. ಜ್ಞಾನಸಾಧನವಾದ ಮಾತಿನಿಂದಲೇ ಎಲ್ಲ ವ್ಯಾಪಾರಗಳನ್ನು ಮಾಡುತ್ತಾನೆಂದು ಉತ್ತರಿಸುತ್ತಾರೆ. ಪುನಃ ಯಾಜ್ಞವಲ್ಕ್ಯರು ಸೂರ್ಯ, ಚಂದ್ರ, ಅಗ್ನಿ, ಮಾತು ಯಾವುದೂ ಇಲ್ಲದಿದ್ದಾಗ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಜ್ಞಾನಸಾಧನವಾದದ್ದು ಯಾವುದು? ಎಂದು ಪ್ರಶ್ನಿಸುತ್ತಾರೆ. ಆವಾಗ, ಯಾಜ್ಞವಲ್ಕ್ಯರು 'ಆತ್ಮೈವಾಸ್ಯ ಜ್ಯೋತಿರ್ಭವತಿ, ಆತ್ಮನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿಯಾಗಿ ಆತ್ಮನೇ ಇವನಿಗೆ ಮುಖ್ಯವಾದ ಜ್ಞಾನಸಾಧನವಾಗುತ್ತಾನೆ. ಆತ್ಮನ ಸಹಾಯದಿಂದಲೇ ಎಲ್ಲ ವ್ಯಾಪಾರಗಳನ್ನು ಮಾಡುತ್ತಾನೆಂದು ಉತ್ತರಿಸುತ್ತಾನೆ. ಆದ್ದರಿಂದ ಜ್ಯೋತಿಃಸ್ವರೂಪನೆಂದು ಹೇಳಲ್ಪಟ್ಟ ಆತ್ಮನು ಯಾರು? ಎಂಬ ಪ್ರಶ್ನೆಗೆ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂದು ಉತ್ತರಿಸಿದ್ದಾರೆ. 'ಆತ್ಮಾ' ಎಂದರೆ ಯಾರು? ಎಂಬ ಪ್ರಶ್ನೆಗೆ ಯಾವಾತನು ಪೂರ್ಣಜ್ಞಾನಸ್ವರೂಪನೋ, ಇಂದ್ರಿಯ ಮತ್ತು ಹೃದಯಗಳ ಒಳಗೆ ಇದ್ದು ಜೀವನ ಬುದ್ಧಿಗೆ ಪ್ರೇರಕನಾಗಿದ್ದಾನೋ, ಅವನೇ ಆತ್ಮನೆಂದು ಉತ್ತರವನ್ನು ನೀಡಿದ್ದಾರೆ. ಆದ್ದರಿಂದ ಜೀವನೇ ಇಲ್ಲಿ ಪ್ರತಿಪಾದ್ಯನೆಂದು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

**भावदीपः** – अस्य लिङ्गस्यान्यत्रोक्तं हरावनवकाशत्वं व्यनक्ति – **नहीति** ।। न तत्रेत्येतद् विष्णुपरमित्यनुकृतिनये व्यक्तम् । एवं लोकसञ्चरणादेरादित्यादि-ज्योतिष्ट्वस्य चानवकाशत्वमुपपाद्य आदित्येनैव ज्योतिषाऽस्ते इत्यवधारणमित्यंश-मात्मपदस्य स्वरूपार्थकत्वसाधनपरतया व्याख्यातुमाह – **नच वाच्यमिति** ।।

ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಲಿಂಗಗಳು ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಸ್ಪಷ್ಟಪಡಿಸುತ್ತಾರೆ 'ನಹಿ' ಇತ್ಯಾದಿ ಟೀಕೆಯಿಂದ. 'ನ ತತ್ರ' ಇತ್ಯಾದಿ ಶ್ರುತಿಯು ವಿಷ್ಣುಪರವಾಗುತ್ತದೆಂದು ಅನುಕೃತ್ಯಧಿಕರಣದಲ್ಲಿ ಸ್ಪಷ್ಟಪಡಿಸಲಾಗಿದೆ.

ಇಲ್ಲಿಯ ತನಕ ಲೋಕಸಂಚರಣಾದಿ ಕ್ರಿಯೆಗಳು ಆದಿತ್ಯಾದಿ ಜ್ಯೋತಿಷ್ಟ್ವಗಳು ನಿರವಕಾಶವಾಗಿವೆ ಎಂಬುದನ್ನು ಉಪಪಾದನೆ ಮಾಡಿ 'ಆದಿತ್ಯೇನೈವ ಜ್ಯೋತಿಷಾऽऽಸ್ತೇ' ಎಂಬಲ್ಲಿರುವ ಅವಧಾರಣವು ಮತ್ತು ಆತ್ಮಪದವು ನಿರವಕಾಶವಾಗಿವೆ ಎಂದು ಸಮರ್ಥಿಸಲು ವ್ಯಾಖ್ಯಾನ ಮಾಡುತ್ತಿದ್ದಾರೆ, 'ನಚ ವಾಚ್ಯಮ್' ಇತ್ಯಾದಿ ಟೀಕೆಯಿಂದ.

**भावदीपः** – तदा जाग्रद्दशायामित्यर्थः ।। **अवधारणानुपपत्तेरिति** ।। किन्त्वादित्येन ज्योतिषेति वा आदित्येन चेति वा स्यादित्यर्थः । तदा सुप्त्यादिदशायामित्यर्थः । परमात्मनोऽस्तमयादिशून्यस्य जाग्रत्यपि ज्योतिष्ट्वप्राप्त्ये-त्यनुकर्षः । एतेनावधारणमित्यादीनामिति न्यायविवरणस्थादिपदस्योक्तरूपयुक्त्यन्तर-सङ्ग्राहकत्वरूपमर्थान्तरमुक्तं भवति ।

'ತದಾ' ಎಂದರೆ ಜಾಗ್ರದವಸ್ಥೆಯಲ್ಲಿ ಎಂದರ್ಥ. 'ಅವಧಾರಣಾऽನುಪಪತ್ತೇಃ' ಎಂದರೆ 'ಆದಿತ್ಯೇನ ಜ್ಯೋತಿಷಾ' ಎಂದಾಗಲಿ, 'ಆದಿತ್ಯೇನ ಚ' ಎಂದು ಶ್ರುತಿಯು ಇರಬೇಕಿತ್ತು. 'ತದಾ' ಎಂದರೆ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಎಂದರ್ಥ. ಪರಮಾತ್ಮನಿಗೆ ಅಸ್ತಮಯಾದಿಗಳಿಲ್ಲದ ಕಾರಣ ಜಾಗ್ರದವಸ್ಥೆಯಲ್ಲಿಯೂ ಜ್ಯೋತಿಷ್ಟ್ವವು ಪ್ರಾಪ್ತವಾಗುವುದರಿಂದ ಎಂಬುದನ್ನು ಅನುಕರ್ಷಣೆ ಮಾಡಿಕೊಳ್ಳಬೇಕು. ಹೀಗೆ ಹೇಳಿದ್ದರಿಂದ 'ಅವಧಾರಣಮಿತ್ಯಾದೀನಾಂ' ಎಂಬ ನ್ಯಾಯವಿವರಣದಲ್ಲಿರುವ ಆದಿಪದಕ್ಕೆ ಹಿಂದೆ ಹೇಳಿದ ಎಲ್ಲ ಯುಕ್ತಿಗಳನ್ನು ಸಂಗ್ರಹಿಸಬೇಕೆಂಬ ಅರ್ಥಾಂತರವನ್ನು ಹೇಳಿದಂತಾಯಿತು.

**भावदीपः** – नन्वात्मशब्दस्य परमात्मार्थत्व इव स्वरूपार्थत्वेऽप्यवधारणस्य विशिष्य सुप्त्यादौ स्वयं ज्योतिष्ट्वोक्तेश्चानुपपत्तिसाम्यात् जीवस्यापि स्वगत-ज्ञानहेतुस्वरूपस्वात्मज्योतिष्ट्वस्य सुप्त्यादाविव जाग्रत्यपि सत्त्वाद् ब्रह्मैव कुतो नाऽत्मेत्यतोऽन्यत्रस्थाऽदिपदोक्तयुक्त्यन्तरेणात्मपदस्य स्वरूपार्थत्वमाह – **अत्रायं पुरुष इति** ।।

ಆತ್ಮಶಬ್ದವು 'ಪರಮಾತ್ಮ' ಎಂಬ ಅರ್ಥವನ್ನು ಹೇಳುವಂತೆ, 'ಸ್ವರೂಪ' ಎಂಬರ್ಥದಲ್ಲಿಯೂ ಕೂಡ ಪ್ರಸಿದ್ಧವಾಗಿರುತ್ತದೆ. ಮತ್ತು ಅವಧಾರಣಕ್ಕೆ ಸುಷುಪ್ತ್ಯಾದಿ ಅವಸ್ಥೆಯಲ್ಲಿ ಜ್ಯೋತಿಷ್ಟ್ವರೂಪವನ್ನು ಹೇಳಿದ್ದರಿಂದ ಅನುಪಪತ್ತಿಯು ಎರಡೂ ಪಕ್ಷಗಳಲ್ಲಿಯೂ ಸಮಾನವಾಗಿದೆ. ಮತ್ತು, ಜೀವನಲ್ಲೂ ಕೂಡ ಸ್ವಗತವಾದ ಜ್ಞಾನಹೇತು ಎನಿಸಿದ ಸ್ವಾತ್ಮಜ್ಯೋತಿಷ್ಟ್ವವು ಸುಷುಪ್ತ್ಯಾದಿ ಅವಸ್ಥೆಗಳಲ್ಲಿರುವಂತೆ ಜಾಗ್ರದವಸ್ಥೆಗಳಲ್ಲಿಯೂ ಇರುತ್ತದೆ. ಆದ್ದರಿಂದ, ಬ್ರಹ್ಮನೇ ಏಕೆ ಆತ್ಮಪದದಿಂದ ವಾಚ್ಯವಾಗಬಾರದು? ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಇದನ್ನು ಆದಿಪದದಿಂದ ಬೇರೆ ಕಡೆ ಹೇಳಿರುವ ಯುಕ್ತ್ಯಂತರದಿಂದ ನಿರಾಕರಿಸಬೇಕು. ಆತ್ಮಪದಕ್ಕೆ ಸ್ವರೂಪ ಎಂಬ ಅರ್ಥವನ್ನೇ ಹೇಳಬೇಕು ಎಂದು 'ಅತ್ರಾಯಂ ಪುರುಷಃ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ.

**भावदीपः** – आत्मप्रश्नोत्तरोपसंहारपरे अत्रायं पुरुषः स्वयं ज्योतिरिति वाक्येऽभिहितार्थस्येह स्वयं शब्दपर्यायात्मशब्देन प्रत्यभिज्ञानादात्मशब्दः स्वरूपपरो न परमात्मपर इत्यर्थः । फलोक्त्योपसंहरति – **अत इति** ।।

ಆತ್ಮನ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳನ್ನು ಹೇಳಿದ ಪ್ರಕರಣವು ಉಪಸಂಹಾರವಾಗುವಾಗ 'ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ' ಎಂದು ಹೇಳಲಾಗಿದೆ. ಈ ವಾಕ್ಯದಲ್ಲಿ ಯಾವ ಸ್ವಯಂ ಶಬ್ದವು ಕೇಳಿಸುತ್ತಿದೆಯೋ, ಅದಕ್ಕೆ ಪರ್ಯಾಯಶಬ್ದವಾದ ಆತ್ಮಶಬ್ದದಿಂದ ಪ್ರತ್ಯಭಿಜ್ಞೆಯನ್ನು ಮಾಡುತ್ತಿರುವ ಕಾರಣ, ಆತ್ಮಶಬ್ದವು ಸ್ವರೂಪಪರವೇ ಆಗುತ್ತದೆ ಹೊರತು, ಪರಮಾತ್ಮಪರವಾಗುವುದಿಲ್ಲ ಎಂದು 'ಅತ್ರಾಯಂ ಪುರುಷಃ' ಎಂಬ ವಾಕ್ಯದ ಅಭಿಪ್ರಾಯವಾಗಿದೆ. ಪೂರ್ವಪಕ್ಷದ ಫಲವನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ. 'ಅತಃ' ಇತ್ಯಾದಿಯಾಗಿ.

'ಅತಃ' ಎಂದರೆ ನಿರವಕಾಶ ಲಿಂಗಾದಿಗಳು ಇರುವುದರಿಂದ ಎಂದರ್ಥ.

**भावदीपः** – निरवकाशलिङ्गादिभावादित्यर्थः । उक्तमित्यन्तभाष्यतात्पर्यम् – **प्रागुक्तमिति** ।। विष्णुरेवेत्यन्तभाष्यमाकाङ्क्षाक्रमेण व्याख्याति – **विष्णुरेवेति** ।। 'प्राज्ञेन' इति श्रुतौ जीवः प्राज्ञेनान्वारूढः प्राक्तनदेहं त्यजन् यातीति जीवस्यैव सञ्चरणप्रतीत्या श्रुतेः प्रकृतानानुगुण्यं निरस्यंल्लोकसञ्चरणं तु जीवमादाय तस्यैवादुःखेन स्वातन्त्र्यादिति न्यायविवरणानुरोधेन भाष्यं व्याचष्टे – **जीवमादायेति** ।।

'ಉಕ್ತಂ' ಎಂಬಲ್ಲಿಯ ತನಕ ಭಾಷ್ಯದ ತಾತ್ಪರ್ಯವನ್ನು 'ಪ್ರಾಗುಕ್ತಂ' ಎಂದು ಹೇಳಿದ್ದಾರೆ. 'ವಿಷ್ಣುರೇವ' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಆಕಾಂಕ್ಷಾಕ್ರಮದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ 'ವಿಷ್ಣುರೇವ' ಇತ್ಯಾದಿಯಾಗಿ. 'ಪ್ರಾಜ್ಞೇನಾತ್ಮನಾ' ಎಂಬ ಶ್ರುತಿಯಲ್ಲಿ ಜೀವನು ಪ್ರಾಜ್ಞನಾಮಕನಾದ ಪರಮಾತ್ಮನ ಜೊತೆಗೆ ಕೂಡಿಕೊಂಡು ಹಿಂದಿನ ದೇಹವನ್ನು ಬಿಡುತ್ತಾ ಲೋಕಸಂಚಾರವನ್ನು ಮಾಡುತ್ತಾನೆ ಎಂದು ಶ್ರುತಿಯು

ಹೇಳುತ್ತಿದೆ. ಹೀಗೆ ಹೇಳಿದಾಗ, ಶ್ರುತಿಗೆ ಅನಾನುಗುಣ್ಯದೋಷವೂ ಕೂಡ ಬರುವುದಿಲ್ಲ. ಉಭಯಲೋಕಸಂಚಾರವನ್ನು ಪರಮಾತ್ಮನಲ್ಲಿಯೂ ಕೂಡಿಸಬಹುದು. ಜೀವನನ್ನು ತೆಗೆದುಕೊಂಡು ಪರಮಾತ್ಮನು ಉಭಯಲೋಕದ ಸಂಚಾರವನ್ನು ಮಾಡುತ್ತಾನೆ. ಸ್ವಾತಂತ್ರ್ಯವಿರುವ ಕಾರಣ, ಜೀವನಿಗೆ ಆಗುವಂತಹ ಸುಖದುಃಖಗಳ ಅನುಭವ ಪರಮಾತ್ಮನಿಗೆ ಆಗುವುದಿಲ್ಲ. ಹೀಗೆ ನ್ಯಾಯವಿವರಣದಲ್ಲಿ ಹೇಳಿದ್ದನ್ನೇ ಅನುಸರಿಸಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ - 'ಜೀವಮಾದಾಯ' ಇತ್ಯಾದಿಯಾಗಿ.

**भावदीपः** – बृहदारण्यकभाष्योक्तं समाधिमाह – **द्रष्टुरिति** ।। दर्शयितुरित्यर्थः। 'एतेनेमं लोकमतिक्रामयति जनयति मारयति' इत्यादिरूपेण विषयवाक्ये अर्थो दर्शितः । अयं पुरुष इति संसारी आत्मशब्दोदित एव विष्णुः । अत आदित्यादिज्योतिष्ट्वं संसारिण एव आदित्येनैवेत्यवधारणं बाह्यज्योतिःषु प्राधान्यापेक्षया इत्यादिन्यायविवरणं भिन्नभिन्नशङ्कानिरासकतया खण्डशोऽत्र योजयति – **नचादित्यादीत्यादिना** ।।

ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದ ಸಮಾಧಾನವನ್ನು 'ದ್ರಷ್ಟುಃ' ಇತ್ಯಾದಿಯಾಗಿ ಹೇಳಿದ್ದಾರೆ. 'ದ್ರಷ್ಟುಃ' ಎಂದರೆ ನೋಡಲು ಇಚ್ಛಿಸುವ ಎಂದರ್ಥ. ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ಇಮಂ ಲೋಕಮತಿಕ್ರಾಮಯತಿ' ಇತ್ಯಾದಿಯಾದ ನ್ಯಾಯವಿವರಣದ ವಾಕ್ಯವನ್ನು ಬೇರೆ ಬೇರೆ ಆಶಂಕೆಯನ್ನು ನಿರಾಸ ಮಾಡುತ್ತದೆಂಬ ದೃಷ್ಟಿಯಿಂದ ಖಂಡಶಃ ಇಲ್ಲಿ ಯೋಜನೆ ಮಾಡುತ್ತಿದ್ದಾರೆ, 'ನಚ ಆದಿತ್ಯಾದಿ' ಇತ್ಯಾದಿ ಟೀಕೆಯಿಂದ.

**भावदीपः** – उच्यते 'आत्मैवाऽस्येति वाक्य इत्यर्थः । अन्यत्रोक्तादिपदोपात्तयुक्तिं वक्तुं तदा विशिष्येत्यादिना प्रागुक्तमनुवदति – **नच विशिष्येति** ।। **तदुक्तमिति** ।। वाजसनेयभाष्य इत्यर्थः । तद्भाष्यरीत्यैवाऽदिपदोक्तं युक्त्यन्तरं प्रागुक्तशङ्का-निवर्तकतयाऽह – **नच प्रत्यभिज्ञेति** ।। **उक्तरीत्येति** ।। अत्र सुप्त्यादावयं पुरुषो विष्णुर्जीवस्य स्वयं ज्योतिरित्युपसंहारस्य स्मृत्यैव व्याख्यानेन आत्मापि विष्णुरेवेत युपपत्तेरित्यर्थः ।

'ಉಚ್ಯತೇ' ಎಂದರೆ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿ ಹೇಳಲಾಗಿದೆ ಎಂದರ್ಥ. ಬೇರೆ ಕಡೆ ಹೇಳಿದ ಯುಕ್ತಿಗಳನ್ನು ಆದಿಪದದಿಂದ ಸಂಗ್ರಹಿಸಿದ್ದಾರೆ. ಅದನ್ನು ಹೇಳುವುದಕ್ಕಾಗಿ, 'ತದಾ ವಿಶಿಷ್ಯ' ಇತ್ಯಾದಿ ವಾಕ್ಯಗಳಿಂದ ಹಿಂದೆ ಹೇಳಿದ್ದನ್ನು ಅನುವಾದ ಮಾಡುತ್ತಿದ್ದಾರೆ 'ನಚ ವಿಶಿಷ್ಯ' ಇತ್ಯಾದಿ ಟೀಕಾವಾಕ್ಯದಿಂದ.

'ತದುಕ್ತಂ' ಎಂದರೆ ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ಹೇಳಲಾಗಿದೆ ಎಂದರ್ಥ. ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿದಂತೆ, ಆದಿಪದದಿಂದ ತಿಳಿಸಿದ ಯುಕ್ತ್ಯಂತರವನ್ನು ಹಿಂದೆ ಹೇಳಿದ ಆಶಂಕೆಯ ಪರಿಹಾರಕವಾಗಿ 'ನಚ ಪ್ರತ್ಯಭಿಜ್ಞಾ' ಇತ್ಯಾದಿ ವಾಕ್ಯವು ಹೇಳಲು ಹೊರಟಿದೆ. 'ಉಕ್ತರೀತ್ಯಾ' ಎಂದರೆ ಹಿಂದೆ

ಹೇಳಿದ ಪ್ರಕಾರ ಸುಷುಪ್ತ್ಯವಸ್ಥೆಯಲ್ಲಿ ವಿಷ್ಣು ಜೀವನಿಗೆ ಸ್ವಯಂ ಜ್ಯೋತಿಃಸ್ವರೂಪನಾಗಿದ್ದಾನೆಂದು ಸ್ಮೃತಿಯಲ್ಲಿ ವ್ಯಾಖ್ಯಾನ ಮಾಡಿದಂತೆ 'ಆತ್ಮ' ಎಂಬ ಶಬ್ದದಿಂದಲೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

**भावदीपः** – बृहद्भाष्योक्तजीवपरत्वबाधकान्यपि न्यायविवरणस्थादिपदसङ्गृहीतानीति भावेन तानि शङ्कोत्तराभ्यां विशदयति – **नन्वेवमिति** ।। श्रुतिमात्रस्य ज्योतिःश्रुतिमात्रस्येत्यर्थः । विष्णुरेवेदं ज्योतिरिति श्रुत्या विष्णौ मुख्यः स्यादपीत्यर्थः ।। **स्वाप्नेति** ।। 'अथ रथान् रथयोगान् पथः सृजते' इत्यादिनोक्त इत्यर्थः ।।

ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ಹೇಳಿದ ಜೀವಪರತ್ವಬಾಧಕವಾದ ಲಿಂಗಗಳು, ನ್ಯಾಯವಿವರಣದಲ್ಲಿರುವ ಆದಿಪದದಿಂದ ಸಂಗ್ರಹಿಸಲ್ಪಟ್ಟಿದೆ ಎಂಬ ಅಭಿಪ್ರಾಯದಿಂದ ಪ್ರಶ್ನೆ ಹಾಗೂ ಉತ್ತರಗಳಿಂದ ಆ ಲಿಂಗಗಳನ್ನು ಸ್ಪಷ್ಟಪಡಿಸುತ್ತಿದ್ದಾರೆ, 'ನನ್ವಯಂ' ಇತ್ಯಾದಿ ಗ್ರಂಥದಿಂದ. 'ಶ್ರುತಿಮಾತ್ರಸ್ಯ' ಎಂದರೆ 'ಜ್ಯೋತಿಃ' ಶ್ರುತಿ ಮಾತ್ರಕ್ಕೆ ಎಂದರ್ಥ. 'ವಿಷ್ಣುರೇವೇದಂ ಜ್ಯೋತಿಃ' ಎಂಬ ಶ್ರುತಿಯಿಂದ 'ಜ್ಯೋತಿಸ್' ಎಂಬ ಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಆದರೂ ಸಹ ಎಂದರ್ಥ. 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಇತ್ಯಾದಿ ವಾಕ್ಯದಲ್ಲಿ ಪರಮಾತ್ಮನೇ ಸ್ವಪ್ನಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆಂದು ಹೇಳಲಾಗಿದೆ.

**भावदीपः – स्वप्नेनेति** ।। स्वप्नेन शारीरमभिप्रहत्यासुप्तः सुप्तानभिचाकशीतीत्याद्युदाहृतमन्त्रे जीवस्य स्वप्नसम्बन्धं कृत्वा स्वयमसुप्त एव तान् पश्यतीत्युक्तार्थस्य जीवेऽनुपपत्तेरित्यर्थः । फलोक्त्योपसंहरति – **तस्मादिति** ।। ज्योतिःश्रुतिरूपसाधकभावाद् बाधकाभावाद् जीवपरत्वे बहुबाधकभावाच्चेत्यर्थः ।। ४० ।।

।। इति श्रीराघवेन्द्रयतिकृते भावदीपे ज्योतिरधिकरणम् ।।

'ಸ್ವಪ್ನೇನ ಶರೀರಂ ಅಭಿಪ್ರಹತ್ಯ ಅಸುಪ್ತಃ ಸುಪ್ತಾನ್ ಅಭಿಚಾಕಶೀತಿ' ಇತ್ಯಾದಿಯಾಧ ಮಂತ್ರದಲ್ಲಿ ಜೀವನಿಗೆ ಪರಮಾತ್ಮನು ಸ್ವಪ್ನಸಂಬಂಧವನ್ನು ಮಾಡಿ ತಾನು ಅಸುಪ್ತನಾಗಿಯೇ ಜೀವನನ್ನು ನೋಡುತ್ತಿರುತ್ತಾನೆಂದು ಶ್ರುತಿಯ ಅರ್ಥ. ಇದು ಜೀವನಲ್ಲಿ ಯುಕ್ತವಾಗುವುದಿಲ್ಲ. ಸಿದ್ಧಾಂತದ ಫಲವನ್ನು ಹೇಳುವ ಮೂಲಕ ಅಧಿಕರಣವನ್ನು ಉಪಸಂಹಾರ ಮಾಡುತ್ತಿದ್ದಾರೆ, 'ತಸ್ಮಾತ್' ಇತ್ಯಾದಿ ಟೀಕೆಯಿಂದ.

'ಜ್ಯೋತಿಃಶ್ರುತಿ' ಎಂಬ ಸಾಧಕ ಪ್ರಮಾಣವಿರುವುದರಿಂದ ಮತ್ತು ಬಾಧಕ ಪ್ರಮಾಣವಿಲ್ಲದ ಕಾರಣ, ಜೀವಪರವೆನ್ನಲು ಅನೇಕ ಬಾಧಕಗಳಿರುವುದರಿಂದಲೂ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗುತ್ತಾನೆ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು ॥

ಪರಿಪೂರ್ಣಚಂದ್ರಿಕಾ

**वाक्यार्थमञ्जरी –**

**।। ॐ ज्योतिर्दर्शनात् ॐ ।।**

ज्योतिः शब्दप्रवृत्तिनिमित्तं प्रकाशत्वं ज्ञानमपि प्रकाशरूपमिति भावः ।। **योऽयमिति** ।। कतम आत्मेत्यस्येदमुत्तरम् । यो विज्ञानमयः विज्ञानपूर्ण। प्राणेष्विन्द्रियेष्वन्तः हृद्यन्तश्च वर्तमानः ज्योतिर्जीवस्य बुद्ध्यादिद्योतनेन प्रवृत्तिहेतुः पुरुषः पूर्णषड्गुणः अयमात्मा तस्यैव महिमान्तरम् – **स इति** ।। स आत्मा समानः सन् अविकारात् सदैकप्रकारः सन् उभौ लोकौ भूलोकद्युलोकौ जाग्रत्सुषुप्ती वा जीवमादायानुसञ्चरतीत्यर्थः । लिङ्गान्तराण्याह – **इमं लोकमित्यादिना** ।। **स हि स्वप्नो भूत्वेति** पूर्ववाक्यं 'स आत्मा स्वप्नो भूत्वा स्वापको भूत्वा जीवस्य स्वप्नमानयन् मृत्यो रूपाणि बहुपापैकहेतुत्वान्मृत्युरूपात्मकमिमं लोकं जाग्रदाख्यमतिक्रामति तारयति । हि प्रसिद्धम् । यद्वा 'स आत्मा स्वप्नो भूत्वाऽन्तरिक्षलोकान्तर्गतो भूत्वा मृत्यो रूपाणि बहुमृत्युसरूपात्मकं पापहेतुभूतं चेमं लोकं भूलोकमतिक्रामति जीवमन्तरिक्षगं कुर्वन् तारयति स जीवं प्रति ज्योतिष्ट्वेनोक्तः अयं समानः सन्नित्यादिनोक्तः पुरुषो जायमानो वैतस्यैव व्याख्यानं शरीरमभिसम्पद्यमान इति जीवगतशरीराभिसम्पत्तिनियामकः सन् पाप्मभिः संसृज्यते जीवेन पापानि कारयित्वा तत्फलदानाय तानि गृह्णाति स आत्मा म्रियमाणः न मरणमात्रमत्र विवक्षितम्, किन्तु उत्क्रमन् ऊर्ध्वं गच्छन् जीवगतोत्क्रमणनियामकः सन् पाप्मनो विजहाति जीवकृतपापफलं न ददातीत्यर्थः ।। **उभयानिति** ।। उभयानित्यस्यैव विवरणम् – **पाप्मन आनन्दांश्चेति** ।। स भगवान् जाग्रदवस्थायां जीवानुभूयमानानि पापफलानि दुःखानि सुप्तावनुभूयमानानन्दांश्च पश्यतीत्यर्थः । जीवस्य पूर्वोक्तात्मज्योतिष्ट्वं कदेत्युच्यते – **स यत्रेति** ।। स आत्मा यत्र यदा स्वपिति जीवं प्रस्वापयति, तदेत्यर्थः । तस्यैव महिमान्तरमुच्यते – **स्वप्नान्त इति** ।। देवः स्वप्नान्ते स्वप्नावस्थायामुच्चावचमीयमानः वासनारूपेषूच्चनीचेषु गजपिपीलिकादिषु प्रविशन् स्वस्य बहूनि रूपाणि कुरुत इत्यर्थः ।। **भयानिति** ।। स भगवान् जीवस्य भयानि पश्यन्नपि जक्षदिवास्त इति पूर्वेणान्वयः ।। **किं ज्योतिरिति** ।। हे याज्ञवल्क्य, अयं पुरुषः संसारी किं ज्योतिर्यस्यासौ किंज्योतिरस्य पुरुषस्य प्रवृत्त्यादिव्यापारे स्वयमसमर्थत्वेन किञ्चिज्ज्योतिरपेक्षितं किं तज्ज्योतिरिति जनकेन पृष्टो याज्ञवल्क्यो हे सम्राड्, राजन् अयं पुरुषः आदित्य एव ज्योतिर्यस्यासावादित्यज्योतिरित्युवाचेत्यर्थः ।। **तस्यैवेति** ।। अस्येतीदं शब्दस्य प्रकृजीवपरामर्शकत्वादिति भावः ।। **आत्मज्योतिष्ट्वोक्ताविति** ।।

**स्वप्रकाशत्वोक्ताविर्त्यर्थः** ।। **तदात्मेति** ।। ज्योतिष्ट्वेनोक्तात्मेत्यर्थः ।। **तदा विशिष्येति** ।। सुषुप्तौ विशेषेणेत्यर्थः ।। **अत्रायं पुरुष इति** ।। आत्मप्रश्नोपसंहारेणायं पुरुषं स्वयंज्योतिरिति वाक्ये नात्मैवास्य ज्योतिरित्युक्तस्यैवार्थस्य प्रत्यभिज्ञानादित्यर्थः । तथाचात्रायं पुरुष इति वाक्ये स्वयं शब्दानुरोधेन स्वप्रकाशत्वस्यैवोक्त्या तत्समर्थनार्थत्वायात्मैवास्य ज्योतिरित्यस्यापि स्वप्रकाशात्वार्थकत्वे आत्मप्रश्नोत्तरस्यज्योतिःशब्दस्य जीवपरत्वमेवेति भावः ।। **ॐ ज्योतिर्दर्शनात् ॐ** ।। हृद्यन्तर्ज्योतिरित्युक्तज्योतिर्विष्णुरेव कुतः दर्शनात् ज्योतिः श्रुतेर्विष्णुमात्रवाचित्वप्रतिपादकविष्णुरेव ज्योतिरिति श्रुतेरित्यर्थः । श्रुतावुत्सृजन् पूर्वदेहं त्यजन् द्रष्टुश्चक्षुष इति स्वातन्त्र्यस्नेहयोरन्तर्णिजिति सूत्रं स्वातन्त्र्यस्नेहयो-र्विवक्षितयोः सतोर्णिजन्तर्गतो नतु प्रयुज्यत इति सूत्रार्थः । तथाच यथा द्रष्टुश्चक्षुषो नातिजिह्वेत्यत्र द्रष्टुरित्यस्य दर्शयितुरित्यर्थः । तथेहापि स्वातन्त्र्यस्य विवक्षितत्वात् णिचोऽन्र्ततत्वेनातिक्रामतो इत्यादेरतिक्रामयतीत्याद्यर्थत्वमिति भावः ।। **वागादिसत्त्वेनेति** ।। जागरावस्थायामपि ज्ञानकारणानां वागादीनां सत्त्वेन ज्ञानकारणान्तरव्यवच्छेदकत्वायोगादित्यर्थः, तदुक्तम् बृहद्भाष्ये – **भाव इति** ।। यद्यपि जाग्रति सूर्यादिर्भावे सत्त्वे सुषुप्तावभावेऽपि स्वयं साक्षाद् विष्णुरेव जीवानां ज्योतिस्तथापि सूर्याद्यभावे सति तद्विष्णोर्ज्योतिष्ट्वं विशेषतो ज्ञेयमित्यर्थः ।। **अत्रेति** ।। अत्र सुप्तौ भगवान् स्वयं विष्णुरेव जीवस्य ज्योतिः जाग्रद्यपि तथात्वात् किं विशिष्योच्यत इत्युक्तम् – **विशेषत इति** ।। तदेव कथमित्यत उक्तम् – **नैवेति** ।। यद् यस्मादत्र सुप्तावन्यज्ज्योतिनास्तीत्यर्थः ।। **इत्युक्तेति** ।। बृहद्भाष्योक्तेत्यर्थः । तथात्रायं पुरुषः स्वयं ज्योतिरित्यत्र स्वयंशब्दस्य परमात्मपरत्वेन परमात्मज्योतिष्ट्वमेवोच्यते, न जीवस्य स्वप्रकाशत्वमिति नैतदनुरोधेनात्मैवास्य ज्योतिरित्यस्य स्वप्रकाशार्थमिति भावः । एवमन्यार्थतेति सम्बन्धः । अतो बाधकाभावस्य पूर्वमनुक्तेरेवमिति परामर्शायोग इति न शङ्क्यम् – **स्वाप्नपदार्थेति** ।। अथ रथान् रथयोगान् पथः सृजत इत्यनेनोक्त इत्यर्थः ।। **असङ्गतेरिति** ।। ज्योतिषो जीवत्वे तत्र भगवत्प्रतिपादकमन्त्रोदाहरणासङ्गतेरित्यर्थः। तदेते श्लोका भवन्ति 'स्वप्नेन शारीरमभिप्रहत्या सुप्तः सुप्तानभिचाकशीति' इत्यस्यायमर्थः । तत् तत्र पूर्वोक्तार्थे एते वक्ष्यमाणाः श्लोकाः मन्त्राः प्रमाणत्वेन भवन्ति । के ते हिरण्मयः परमात्मा स्वप्नेन सुषुप्त्या शारीरं जीवमभिप्रहत्य संयोज्य स्वयमसुप्तः सुप्तान् शारीरानभिचाकशीति पश्यतीति ।। ४० ।।

।। इति श्रीशर्कराश्रीनिवासविरचितायां वाक्यार्थमञ्जर्याम् ज्योतिरधिकरणम् ।।

ಪರಿಪೂರ್ಣಚಂದ್ರಿಕಾ

ಜ್ಯೋತಿರಧಿಕರಣ

(೧-೩-೧೧)

---

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ ज्योतिरधिकरणम्

### ಪಾದಸಂಗತಿ ಹಾಗೂ ಅಧಿಕರಣ ಸಂಗತಿ ವಿಚಾರ

ॐ ज्योतिर्दर्शनात् ॐ ॥

**ज्योतिश्शब्दस्याग्न्यादौ लोकतः प्रसिद्धत्वेऽपि संशयकोट्योर्जीवेशयोर्ज्ञानरूपत्वेन प्रवृत्तिनिमित्तप्रकाशत्वस्य साम्यादुभयत्रप्रसिद्धता ।**

ಅನುವಾದ – 'ಓಂ ಜ್ಯೋತಿರ್ದರ್ಶನಾತ್ ಓಂ' ಎಂಬುದಾಗಿ ಜ್ಯೋತಿರಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಜ್ಯೋತಿಃ' ಎಂಬ ನಾಮಾತ್ಮಕವಾದ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ.

ಪ್ರಶ್ನೆ – 'ಜ್ಯೋತಿಃ' ಎಂಬ ಶಬ್ದವು ನಾಮಾತ್ಮಕವಾಗಿದೆ. ಮತ್ತು ಅಗ್ನಿ ಮೊದಲಾದವರಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾಗಿದೆ. ಹಾಗಾಗಿ ಪ್ರಥಮಪಾದದಲ್ಲೇ ಈ ಅಧಿಕರಣವನ್ನು ಸೇರಿಸಬೇಕಿತ್ತಲ್ಲವೇ?

ಉತ್ತರ – ಜ್ಞಾನರೂಪತ್ವವು 'ಜೋತಿಃ' ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಇದು ಸಂಶಯಕೋಟಿಗಳಾದ ಜೀವ ಹಾಗೂ ಈಶ್ವರನಲ್ಲಿ ಮಾತ್ರ ಸಾಧಾರಣವಾಗಿದೆ. ಹೊರತು ಅಗ್ನ್ಯಾದಿಗಳಲ್ಲಿ ಬರುವುದಿಲ್ಲ. ಈ ಜ್ಞಾನರೂಪತ್ವವೇ ಪ್ರವೃತ್ತಿನಿಮಿತ್ತವೆನಿಸಿದ ಪ್ರಕಾಶತ್ವರೂಪವಾಗಿದೆ. ಇದು ಜೀವೇಶ್ವರರಲ್ಲಿ ಸಮಾನವಾದ್ದರಿಂದ 'ಜ್ಯೋತಿಃ' ಎಂಬ ಶಬ್ದವು ಉಭಯತ್ರಪ್ರಸಿದ್ಧವೆನಿಸುತ್ತದೆ.

**यद्यपि ज्ञानकारणप्रश्नोत्तरे ''आदित्येनैवायं ज्योतिषाऽऽस्ते वाचैवायं ज्योतिषाऽऽस्त'' इत्यादौ ज्योतिश्शब्दो न ज्ञानपरः ।**

ಪ್ರಶ್ನೆ - 'ಜ್ಯೋತಿಃ' ಶಬ್ದಕ್ಕೆ ಜ್ಞಾನರೂಪತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲಾಗದು. 'ಕಿಂ ಜ್ಯೋತಿರಯಂ ಪುರುಷಃ' ಎಂಬುದಾಗಿ ಜ್ಞಾನಸಾಧನದ ಬಗ್ಗೆ ಪ್ರಶ್ನಿಸಲಾಗಿದೆ. ಆವಾಗ ''ಆದಿತ್ಯೇನೈವಾಯಂ ಜ್ಯೋತಿಷಾऽऽಸ್ತೇ'' ''ವಾಚೈವಾಯಂ ಜ್ಯೋತಿಷಾऽऽಸ್ತೇ'' ಎಂಬುದಾಗಿ ಉತ್ತರಿಸಲಾಗಿದೆ. ಆದ್ದರಿಂದ ಜ್ಞಾನಕಾರಣವೆಂದೇ 'ಜ್ಯೋತಿಃ' ಎಂಬ ಶಬ್ದಕ್ಕೆ ಅರ್ಥವನ್ನು ಹೇಳಬೇಕು. ಇಂತಹ ಜ್ಞಾನಕಾರಣತ್ವವು ಆದಿತ್ಯಾದಿಗಳಲ್ಲಿಯೂ ಕೂಡ ಬರುವ ಕಾರಣ, ಅನ್ಯತ್ರಪ್ರಸಿದ್ಧವೇ ಆಗಬೇಕಲ್ಲವೇ?

**तथापि ''कतम आत्म'' इत्यात्मप्रश्नोत्तरे ''योऽयं विज्ञानमयः प्राणेषु हृद्यन्तर्ज्योतिः'' इत्यत्र तत्परः ।**

ಉತ್ತರ - 'ಆದಿತ್ಯೇನೈವಾಯಂ ಜ್ಯೋತಿಷಾऽऽಸ್ತೇ' ಇತ್ಯಾದಿಯಾದ ಹಿಂದಿನ ಪ್ರಕರಣದಲ್ಲಿರುವ 'ಜ್ಯೋತಿಃ' ಶಬ್ದಕ್ಕೆ ಜ್ಞಾನವೆಂದರ್ಥವಲ್ಲ. ಆದರೆ 'ಕತಮ ಆತ್ಮ' ಎಂಬುದಾಗಿ ಆತ್ಮವಿಷಯಕವಾದ ಪ್ರಶ್ನೆಗೆ 'ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂದು ಉತ್ತರಿಸಲಾಗಿದೆ. ಇಲ್ಲಿರುವ 'ಜ್ಯೋತಿಃ' ಶಬ್ದಕ್ಕೆ ಜ್ಞಾನವೆಂದೇ ಅರ್ಥ. ಪ್ರಕೃತ 'ಯೋऽಯಂ ವಿಜ್ಞಾನಮಯಃ' ಎಂಬ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ. 'ಆದಿತ್ಯೇನೈವಾಯಂ ಜ್ಯೋತಿಷಾऽऽಸ್ತೇ' ಇತ್ಯಾದಿ ಸ್ಥಳದಲ್ಲಿರುವ 'ಜ್ಯೋತಿಃ' ಶಬ್ದದ ವಿಚಾರವನ್ನು ಈ ಅಧಿಕರಣದಲ್ಲಿ ಮಾಡುತ್ತಿಲ್ಲ. ಕೇವಲ 'ಯೋऽಯಂ ವಿಜ್ಞಾನಮಯಃ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಎಂಬ ಶಬ್ದದ ವಿಚಾರವನ್ನಷ್ಟೇ ಮಾಡಲಾಗಿದೆ. ಇಲ್ಲಿರುವ 'ಜ್ಯೋತಿಃ' ಎಂಬ ಶಬ್ದಕ್ಕೆ ಜ್ಞಾನಸಾಧನವೆಂಬರ್ಥವನ್ನು ವಿವಕ್ಷಿಸಲಾಗದು.

**अत एव भाष्ये ''योऽयम्'' इत्यादि वाक्यमेवोदाहृतम् । तस्मात्पादसङ्गतिः। पूर्वसिद्धान्तन्यायेन पूर्वपक्षप्रवृत्तेरनन्तरसङ्गतिः ।**

ಆದ್ದರಿಂದಲೇ ಭಾಷ್ಯದಲ್ಲಿ 'ಯೋऽಯಂ ವಿಜ್ಞಾನಮಯಃ' ಎಂಬ ವಾಕ್ಯವನ್ನೇ ಉದಾಹರಿಸಿರುತ್ತಾರೆ. ಆದ್ದರಿಂದ ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಮಾಡಲು ಹೊರಟಿರುವ, ಮೂರನೆಯ ಪಾದದಲ್ಲಿ ಜ್ಯೋತಿರಧಿಕರಣವು ಸಂಗತವಾಗಿದೆ. ಪ್ರಥಮಪಾದದಲ್ಲಿ ಇದು ಅಂತರ್ಭಾವವಾಗುವುದಿಲ್ಲ. ಮತ್ತು ಹಿಂದಿನ ಅಧಿಕರಣದ ನಿರವಕಾಶವಾದ ಲಿಂಗಬಲದಿಂದ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗುತ್ತಾನೆಂಬ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಪೂರ್ವಪಕ್ಷವು ಹೊರಟಿರುವುದರಿಂದ ಆನಂತರ್ಯಸಂಗತಿಯು ಇರುತ್ತದೆ.

**यद्वा ''शब्दादेव'' इत्यत्र प्राणव्यवस्थापकत्वादिलिङ्गमात्रात् पूर्वःपक्षः । ''कम्पनात्'' इत्यत्र तु वज्रश्रुत्युद्यत्वलिङ्गाभ्यां सः । अत्र तु निरवकाशबहुलिङ्गैः स इत्यवान्तरसङ्गतिः ।**

ಅಥವಾ 'ಶಬ್ದಾದೇವ ಪ್ರಮಿತಃ' ಎಂಬ ವಾಮನಾಧಿಕರಣದಲ್ಲಿ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳ ಆಧಾರದಿಂದಷ್ಟೇ ಪೂರ್ವಪಕ್ಷ ಮಾಡಲಾಯಿತು. 'ಕಂಪನಾತ್' ಎಂಬ ಕಂಪನಾಧಿಕರಣದಲ್ಲಿ ವಜ್ರಶ್ರುತಿ ಹಾಗೂ ಉದ್ಯತತ್ವಲಿಂಗಗಳ ಆಧಾರದಿಂದ ಪೂರ್ವಪಕ್ಷ ಮಾಡಲಾಯಿತು. ಪ್ರಕೃತ ಈ ಜ್ಯೋತಿರಧಿಕರಣದಲ್ಲಿ ನಿರವಕಾಶವಾದ ಅನೇಕ ಲಿಂಗಗಳ ಆಧಾರದಿಂದ ಪೂರ್ವಪಕ್ಷ ಮಾಡಲಾಗುತ್ತಿದೆ. ಹೀಗೆ ಸೋಪಾನಾರೋಹಣಕ್ರಮದಿಂದ ಅವಾಂತರಸಂಗತಿಯೂ ಕೂಡ ಇರುತ್ತದೆ.

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः – ।। ॐ ज्योतिर्दर्शनात् ॐ ।। अस्य नामपादे निवेशशङ्कां निरस्यन् ''जीवेशयोर्ज्ञानरूपत्वेन हृदयाहितत्वेन च साधारणस्य'' इत्यादिटीकोक्तां पादसङ्गतिं समर्थयते ।। ज्योतिरिति ।।**

ವಿವರಣೆ – 'ಓಂ ಜ್ಯೋತಿರ್ದರ್ಶನಾತ್ ಓಂ' ಎಂಬುದಾಗಿ ಜ್ಯೋತಿರಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣವು ನಾಮಪಾದದಲ್ಲಿಯೇ ಸೇರಬೇಕಿತ್ತಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸುವವರಾಗಿ 'ಜೀವೇಶಯೋರ್ಜ್ಞಾನರೂಪತ್ವೇನ ಹೃದಯಾಹಿತತ್ವೇನ ಚ ಸಾಧಾರಣಸ್ಯ' 'ಜೀವ ಹಾಗೂ ಈಶ್ವರರಿಬ್ಬರು ಜ್ಞಾನಸ್ವರೂಪರಾಗಿ ಹೃದಯದಲ್ಲಿ ಕುಳಿತಿದ್ದಾರೆ. ಆದ್ದರಿಂದ ಜ್ಞಾನರೂಪತ್ವ ಹಾಗೂ ಹೃದಯಾಹಿತತ್ವ ಎಂಬ ಪ್ರವೃತ್ತಿನಿಮಿತ್ತವು ಇಬ್ಬರಲ್ಲಿಯೂ ಸಾಧಾರಣವಾಗಿದೆ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ ಪಾದಸಂಗತಿಯನ್ನು ಸಮರ್ಥಿಸುತ್ತಿದ್ದಾರೆ 'ಜ್ಯೋತಿಃ' ಇತ್ಯಾದಿವಾಕ್ಯದಿಂದ.

**प्रकाशः – अग्न्यादाविति ।। अन्यत्रप्रसिद्धत्वं नाम न ब्रह्मणोन्यत्र यत्र क्वचित्प्रसिद्धत्वम् । किन्तु पूर्वपक्ष्यभिमतेऽन्यत्र ।**

'ಅಗ್ನ್ಯಾದೌ ಲೋಕತಃ ಅನ್ಯತ್ರಪ್ರಸಿದ್ಧತ್ವೇಪಿ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಅನ್ಯತ್ರಪ್ರಸಿದ್ಧ ಶಬ್ದಗಳೆಂದರೆ ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಾದರೂ ಪ್ರಸಿದ್ಧವಾಗಿದ್ದರೆ ಸಾಕಾಗುವುದಿಲ್ಲ; ಪೂರ್ವಪಕ್ಷಿಗಳಿಗೆ ಅಭಿಪ್ರೇತವಾದ ಬೇರೆ ಸ್ಥಳದಲ್ಲಿ ಪ್ರಸಿದ್ಧವಾಗಿರಬೇಕು. ಒಂದುವೇಳೆ ಬೇರೆಕಡೆ ಪ್ರಸಿದ್ಧವಾಗಿದ್ದರೆ ಸಾಕು ಎಂದು ವಿವಕ್ಷಿಸಿದಲ್ಲಿ 'ಜ್ಯೋತಿಃ' ಎಂಬ ಶಬ್ದವೂ ಕೂಡ ಅಗ್ನಿ ಆದಿತ್ಯ ಮೊದಲಾದವರಲ್ಲಿ ಪ್ರಸಿದ್ಧವಾದ್ದರಿಂದ ಅನ್ಯತ್ರಪ್ರಸಿದ್ಧವಾಗುತ್ತಿತ್ತು.

**प्रकाशः – न चाग्निसूर्यादिरत्र पूर्वपक्ष्यभिमतः । प्रबलतत्प्रापकाभावात् । अग्न्यादित्यादिज्योतिषामस्तमयमुक्त्वा ''आत्मैवास्य ज्योतिः'' इत्याद्युक्तेश्च ।**

प्रसिद्धजीवलिङ्गबाहुल्याच्च । येन नामपादे निवेशस्स्यादिति भावः ।। संशयेति ।। पूर्वोत्तरपक्ष्यभिमतयोरित्यर्थः ।

ಅಗ್ನಿ, ಸೂರ್ಯ ಮೊದಲಾದವರು ಪೂರ್ವಪಕ್ಷಿಗಳಿಗೆ ಅಭಿಮತವಾದವರೇ ಅಲ್ಲ. ಏಕೆಂದರೆ ಅಗ್ನಿ, ಸೂರ್ಯ ಮೊದಲಾದವರು 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆನ್ನಲು ಪ್ರಬಲವಾದ ಯುಕ್ತಿಗಳು ಕಾಣಿಸುತ್ತಿಲ್ಲ. ಮತ್ತು ಅಗ್ನಿ, ಆದಿತ್ಯ ಮೊದಲಾದವರ ಜ್ಯೋತಿಗೆ ಅಸ್ತಮಯತ್ವವನ್ನು ಹೇಳಿ, 'ಆತ್ಮೈವಾಸ್ಯ ಜ್ಯೋತಿಃ' ಎಂದು ಆತ್ಮನ ಜ್ಯೋತಿಯು ಎಂದೂ ಅಸ್ತಮಯವಾಗುವುದಿಲ್ಲವೆಂದು ಉಪನಿಷತ್ತು ಬಣ್ಣಿಸಿದೆ. ಅಸ್ತಮಯವಾದ ಜ್ಯೋತಿಸ್ವರೂಪರಾದ ಆದಿತ್ಯಾದಿಗಳ ಬಗ್ಗೆ ವಿಚಾರ ಮಾಡುವುದು ತಪ್ಪಾಗುತ್ತದೆ. 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ ಅಸ್ತಮಯವಾಗದ ಜ್ಯೋತಿಯನ್ನು ಆತ್ಮನಲ್ಲಿ ಹೇಳಿರುವ ಕಾರಣ ಆತ್ಮಶಬ್ದ ಪ್ರತಿಪಾದ್ಯರಾದವರು ಯಾರು? ಎಂಬುದನ್ನು ವಿಚಾರ ಮಾಡಬೇಕಾಗುತ್ತದೆ. ಏಕೆಂದರೆ ಉಪನಿಷತ್ತಿನ ಹಿಂದಿನ-ಮುಂದಿನ ಪ್ರಕರಣಗಳಲ್ಲಿ ಪ್ರಸಿದ್ಧವಾದ ಅನೇಕ ಜೀವಲಿಂಗಗಳಿವೆ. ಈ ಕಾರಣದಿಂದ ಜೀವನು ಮಾತ್ರ ಪೂರ್ವಪಕ್ಷಿಗಳಿಗೆ ಅಭಿಪ್ರೇತನಾಗಿದ್ದಾನೆ ಹೊರತು, ಅಗ್ನಿಸೂರ್ಯಾದಿಗಳಲ್ಲ. ಒಂದುವೇಳೆ ಅಗ್ನಿ-ಸೂರ್ಯಾದಿಗಳೂ ಕೂಡ ವಿವಕ್ಷಿತರಾಗಿದ್ದಲ್ಲಿ, ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯ ಮಾಡಲು ಹೊರಟಿರುವ ನಾಮಪಾದದಲ್ಲಿ ಈ ಅಧಿಕರಣವನ್ನು ಸೇರಿಸಬಹುದಿತ್ತು.

ಗ್ರಂಥದಲ್ಲಿ 'ಸಂಶಯಕೋಟ್ಯೋಃ' ಎಂಬ ಪದಕ್ಕೆ ಪೂರ್ವಪಕ್ಷಿ ಹಾಗೂ ಸಿದ್ಧಾಂತಪಕ್ಷಿಗಳಿಗೆ ಅಭಿಪ್ರೇತವಾದ ಎರಡು ಕೋಟಿಗಳಲ್ಲಿ ಎಂದರ್ಥ.

**प्रकाशः** – ननु जीवेशयोर्ज्ञानरूपत्वेऽपि कुतो ज्योतिर्नाम्नस्साधारण्य-मित्यतष्टीकाभिप्रायमाह – **प्रवृत्तीति** ।।

ಪ್ರಶ್ನೆ - ಜೀವ ಹಾಗೂ ಈಶ್ವರರಿಬ್ಬರೂ ಜ್ಞಾನಸ್ವರೂಪರೇ ಆಗಿದ್ದಾರೆ. ಆದರೂ ಸಹ 'ಜ್ಯೋತಿಃ' ಎಂಬ ನಾಮಾತ್ಮಕಶಬ್ದವು ಅವರಿಬ್ಬರಲ್ಲಿ ಮಾತ್ರ ಸಾಧಾರಣವಾಗಿದೆಯೆಂದು ಉಭಯತ್ರಪ್ರಸಿದ್ಧತ್ವವನ್ನು ಹೇಗೆ ಸಮರ್ಥಿಸುತ್ತೀರಿ?

ಉತ್ತರ - ಈ ಪ್ರಶ್ನೆಗೆ ಟೀಕೆಯಲ್ಲಿ ಹೇಳಿದ ಉತ್ತರವನ್ನೇ ಸ್ಪಷ್ಟಪಡಿಸುತ್ತಿದ್ದಾರೆ 'ಪ್ರವೃತ್ತಿನಿಮಿತ್ತಪ್ರಕಾಶತ್ವಸ್ಯ' ಎಂಬುದಾಗಿ. ಅಂದರೆ 'ಜೋತಿಃ' ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಕಾಶತ್ವವು ಜ್ಞಾನರೂಪವಾಗಿದೆ; ಇದು ಇವರಿಬ್ಬರಲ್ಲಿ ಮಾತ್ರ ಸಾಧಾರಣವಾಗಿದೆ.

**प्रकाशः** – ननु तमोविरोधित्वं ज्योतिष्ट्वम् । तच्च तमसा सह स्थिते व्याप्ते हरावयुक्तमित्यत उक्तं **प्रकाशत्वस्येति** ।। ज्ञानत्वरूपस्येत्यर्थः ।

ಶಂಕೆ - 'ಜ್ಯೋತಿಃ' ಶಬ್ದಕ್ಕೆ 'ತಮೋವಿರೋಧಿ' ಎಂದರ್ಥ. ಆದ್ದರಿಂದ ತಮೋವಿರೋಧಿತ್ವವೇ 'ಜ್ಯೋತಿಃ' ಶಬ್ದದ ಪ್ರವೃತಿನಿಮಿತ್ತವಾಗಿದೆ. ಎಲ್ಲೆಡೆ ವ್ಯಾಪ್ತನಾದ ಶ್ರೀಹರಿಯು ತಮಸ್ಸಿನ ಜೊತೆಗೂ ಕೂಡ ಇರುತ್ತಾನೆ. ತಮಸ್ಸಿನ ಜೊತೆಗೆ ನೆಲೆಸಿರುವ ಶ್ರೀಹರಿಯು ತಮೋವಿರೋದಿಯಾಗಲು ಹೇಗೆ ಸಾಧ್ಯ?

ಆದ್ದರಿಂದ 'ತಮೋವಿರೋಧಿತ್ವ' ಎಂಬ 'ಜ್ಯೋತಿಃ' ಶಬ್ದದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಹೇಗೆ ಬರುತ್ತದೆ?

ಸಮಾಧಾನ - ಈ ಶಂಕೆಗೆ ಗ್ರಂಥದಲ್ಲಿ 'ಪ್ರಕಾಶತ್ವಸ್ಯ ಸಾಮ್ಯಾತ್' ಎಂದು ಉತ್ತರಿಸಿದ್ದಾರೆ. ಅಂದರೆ ಪ್ರಕಾಶತ್ವವೇ 'ಜ್ಯೋತಿಃ' ಶಬ್ದದ ಪ್ರವೃತ್ತಿನಿಮಿತ್ತ ಹೊರತು, ತಮೋವಿರೋಧಿತ್ವವಲ್ಲ. ಈ ಪ್ರಕಾಶತ್ವವಾದರೂ ಜ್ಞಾನರೂಪವಾದ್ದರಿಂದ ಪರಮಾತ್ಮನಲ್ಲಿ ಯುಕ್ತವಾಗುತ್ತದೆ.

**प्रकाशः – इदमेवात्र प्रकरणेऽभिमतं ज्योतिष्ट्वम् । नत्वन्यत् । अतः काप्येवंरूपसाधारण्यस्य मूलकृदनुक्तत्वेऽपि टीकायामुक्तिर्भाष्योक्तविषयवाक्यमूलेति भावेनाह – यद्यपीत्यादिना ।।**

ಇಂತಹ ಜ್ಞಾನತ್ವವನ್ನೇ ಇಲ್ಲಿ ಪ್ರವೃತ್ತಿನಿಮಿತ್ತವೆಂದು ಹೇಳಬೇಕು. ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದ್ಯವಾದ ಜ್ಯೋತಿಷ್ಟ್ವವು ಇದೇ ಆಗಿದೆ ಹೊರತು, ಬೇರೆ ಅಲ್ಲ. ಆದರೆ ಶ್ರೀಮದಾಚಾರ್ಯರು ಎಲ್ಲಿಯೂ ಕೂಡ ಜ್ಞಾನತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿರುವುದಿಲ್ಲ. ಆದರೆ ಟೀಕಾರಾಯರು ಇದನ್ನು ಪ್ರವೃತ್ತಿನಿಮಿತ್ತವೆಂದು ಹೇಳಿರುತ್ತಾರೆ. ಭಾಷ್ಯದಲ್ಲಿ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವನ್ನೇ ಈ ಅಧಿಕರಣಕ್ಕೆ ವಿಷಯವೆಂದು ಪರಿಗಣಿಸಿ, 'ಆದಿತ್ಯೇನೈವಾಯಂ ಜ್ಯೋತಿಷಾऽऽಸ್ತೇ' ಇತ್ಯಾದಿ ವಾಕ್ಯಗಳನ್ನು ವಿಷಯವೆಂದು ಪರಿಗಣಿಸದೆ ಇರುವಿಕೆಯೇ ಪ್ರಕಾಶತ್ವವು ಪ್ರವೃತ್ತಿನಿಮಿತ್ತವಾಗಿದೆಯೆನ್ನುವುದಕ್ಕೆ ಸೂಚಕವಾಗಿದೆ. ಅದರ ಆಧಾರದಿಂದ ಟೀಕೆಯಲ್ಲಿ ಜ್ಞಾನತ್ವವೆನಿಸಿದ ಪ್ರಕಾಶತ್ವವನ್ನು ಪ್ರವೃತ್ತಿನಿಮಿತ್ತವೆಂದಿದ್ದಾರೆ. ಅದನ್ನು ಗ್ರಂಥಕಾರರು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः – ज्ञानत्वरूपप्रकाशत्वस्य वृत्तिरूपज्ञाने सत्त्वेऽपि पूर्वत्र मुख्यप्रेरकत्वस्य प्राणेशमात्रसाधारण्यमिवानादिनित्ये स्वरूपज्ञाने मुख्यं प्रकाशत्वमिति वा अन्यसाधारण्येऽप्यदोष इति वा तात्पर्यं बोध्यम् ।**

ಪ್ರಶ್ನೆ - ಜ್ಞಾನತ್ವರೂಪವಾದ ಪ್ರಕಾಶತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿ, ಜೀವೇಶ್ವರರಲ್ಲಿ ಮಾತ್ರ, ಸಾಧಾರಣವಾಗಿದೆಯೆಂದು ಹೇಗೆ ಹೇಳುತ್ತೀರಿ? ವೃತ್ತಿರೂಪವಾದ ಜ್ಞಾನದಲ್ಲಿಯೂ ಕೂಡ ಈ ಪ್ರವೃತ್ತಿನಿಮಿತ್ತವು ಇದೆಯಲ್ಲವೇ?

ಉತ್ತರ - ಹಾಗಾಗುವುದಿಲ್ಲ. ಏಕೆಂದರೆ ಹಿಂದೆ ವಾಮನಾಧಿಕರಣದಲ್ಲಿ ಪ್ರೇರಕತ್ವವನ್ನು ಪ್ರಾಣಶಬ್ದದ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಲಾಗಿತ್ತು. ಈ ಪ್ರೇರಕತ್ವವು ಸೂರ್ಯ-ಚಂದ್ರ ಮೊದಲಾದವರಲ್ಲಿಯೂ ಕೂಡ ಬರುತ್ತದಲ್ಲವೇ? ಎಂದು ಪ್ರಶ್ನಿಸಿದಾಗ, ಮುಖ್ಯಪ್ರೇರಕತ್ವವೇ ಪ್ರವೃತ್ತಿನಿಮಿತ್ತವಾಗುತ್ತದೆ ಹೊರತು, ಕೇವಲ ಪ್ರೇರಕತ್ವವನ್ನು ಪ್ರವೃತ್ತಿನಿಮಿತ್ತವೆಂದು ಪರಿಗಣಿಸಬಾರದು. ಈ ಮುಖ್ಯಪ್ರೇರಕತ್ವವು ಮುಖ್ಯಪ್ರಾಣದೇವರಲ್ಲಿ ಮತ್ತು ಪರಮಾತ್ಮನಲ್ಲಿ ಮಾತ್ರ ಸಾಧಾರಣವಾಗಿದೆ. ಅದರಂತೆ ಪ್ರಕೃತ ಕೇವಲ ಪ್ರಕಾಶತ್ವವು ಪ್ರವೃತ್ತಿನಿಮಿತ್ತವಲ್ಲ. ಮುಖ್ಯಪ್ರಕಾಶತ್ವವೇ ಪ್ರವೃತ್ತಿನಿಮಿತ್ತವಾಗಿದೆ. ಕೇವಲ ಪ್ರಕಾಶತ್ವವು ವೃತ್ತಿಜ್ಞಾನ ಮೊದಲಾದವುಗಳಲ್ಲಿ ಇದ್ದರೂ

ಕೂಡ ಮುಖ್ಯಪ್ರಕಾಶತ್ವವು ಜೀವೇಶ್ವರರಲ್ಲಿ ಮಾತ್ರ ಬರುತ್ತದೆ. ಹಾಗಾಗಿ ಕೇವಲಪ್ರಕಾಶತ್ವವು ಅನ್ಯಸಾಧಾರಣವಾದರೂ ಕೂಡ ದೋಷವಿಲ್ಲ.

**प्रकाशः – पूर्वत्रेव प्रयोगसाम्येन तथात्वं तु नोक्तम् । सम्प्रतिपन्नप्रयोगाभावात् । प्रयोगान्वेषणापेक्षयास्यान्तरङ्गत्वाच्च ।**

ಪ್ರಶ್ನೆ - ಹಿಂದಿನ ಅಧಿಕರಣದಲ್ಲಿ ಪ್ರಯೋಗಸಾಮ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಯಿತು. ಅದರಂತೆ ಇಲ್ಲಿಯೂ ಸಹ 'ಜ್ಯೋತಿಃ' ಶಬ್ದವು ಜೀವ ಹಾಗೂ ಈಶ್ವರರಲ್ಲಿ ಸಮಾನವಾದ 'ಜ್ಯೋತಿಃ' ಶಬ್ದದ ಪ್ರಯೋಗವು ಜೀವ ಹಾಗೂ ಈಶ್ವರರಲ್ಲಿ ಸಮಾನವಾಗಿದೆ. ಈ ಕಾರಣದಿಂದಲೂ ಕೂಡ ಉಭಯತ್ರಪ್ರಸಿದ್ಧತ್ವವನ್ನು ಹೇಳಬಹುದಿತ್ತಲ್ಲವೇ?

ಉತ್ತರ - ಹಿಂದಿನ ಅಧಿಕರಣದಂತೆ ಇಲ್ಲಿ ಹೇಳಲಾಗದು. ಏಕೆಂದರೆ ಪರಮಾತ್ಮನಲ್ಲಾಗಲೀ ಅಥವಾ ಜೀವನಲ್ಲಾಗಲೀ 'ಜೋತಿಃ' ಶಬ್ದದ ಪ್ರಯೋಗವು ಕಾಣಸುತ್ತಿಲ್ಲ. ಮತ್ತು ಪ್ರಯೋಗವನ್ನು ಅನ್ವೇಷಣ ಮಾಡಿ ತನ್ಮೂಲಕವಾಗಿ ಉಭಯತ್ರಪ್ರಸಿದ್ಧತ್ವವನ್ನು ತಿಳಿದುಕೊಳ್ಳುವುದಕ್ಕಿಂತ ಪ್ರವೃತ್ತಿನಿಮಿತ್ತದಿಂದ ಉಭಯತ್ರಪ್ರಸಿದ್ಧತ್ವವನ್ನು ತಿಳಿದುಕೊಳ್ಳುವುದು ಅಂತರಂಗವಾಗಿದೆ. ಬಹಿರಂಗಕ್ಕಿಂತ ಅಂತರಂಗವೇ ಪ್ರಬಲವಾದ ಕಾರಣ ಇಲ್ಲಿ ಪ್ರವೃತ್ತಿನಿಮಿತ್ತದಿಂದ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡಿದ್ದಾರೆ.

**प्रकाशः – पूर्वोक्त्यन्यत्रप्रसिद्धिभ्यां तथात्वं तु न सम्भवति । पूर्वोक्तेराक्षेपात्। अन्यत्र जीवे प्रसिद्ध्यभावाच्च ।**

ಪ್ರಶ್ನೆ - ಹಿಂದೆ ಪ್ರಥಮಪಾದದಲ್ಲಿ 'ಜ್ಯೋತಿಃ' ಎಂಬ ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದ್ದಾಗಿದೆ. ಆದರೆ ಬೇರೆ ಜೀವನಲ್ಲಿಯೂ ಕೂಡ ಆ 'ಜ್ಯೋತಿ' ಶಬ್ದವು ಪ್ರಸಿದ್ಧವಾಗಿದೆ. ಹೀಗೆ ಪೂರ್ವೋಕ್ತಿ ಹಾಗೂ ಅನ್ಯತ್ರಪ್ರಸಿದ್ಧಿ ಇವುಗಳಿಂದಲೂ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಬಹುದಿತ್ತಲ್ಲವೇ?

ಉತ್ತರ - ಇದೂ ಸಹ ತಪ್ಪು. ಏಕೆಂದರೆ ಈ ಅಧಿಕರಣದಲ್ಲಿ ಪೂರ್ವೋಕ್ತಿಯನ್ನೇ ಆಕ್ಷೇಪ ಮಾಡಿದ್ದಾರೆ ಅಂದರೆ ಹಿಂದೆ ಸಮನ್ವಯ ಮಾಡಿದ ಜ್ಯೋತಿಶಬ್ದವನ್ನೂ ಕೂಡ ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಪೂರ್ವೋಕ್ತಿಯನ್ನು ವಿವಕ್ಷಿಸಲಾಗದು. ಮತ್ತು ಈಗಾಗಲೇ ಹೇಳಿದಂತೆ ಜೀವನಲ್ಲಿ 'ಜ್ಯೋತಿಃ' ಶಬ್ದದ ಪ್ರಸಿದ್ಧಿಯೂ ಕೂಡ ಇರುವುದಿಲ್ಲ. ಹಾಗಾಗಿ ಪೂರ್ವೋಕ್ತಿ ಮತ್ತು ಅನ್ಯತ್ರಪ್ರಸಿದ್ಧಿಗಳಿಂದ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡದೇ, ಕೇವಲ ಪ್ರವೃತ್ತಿನಿಮಿತ್ತದಿಂದಷ್ಟೇ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡಿರುತ್ತಾರೆ.

**प्रकाशः – उत्तरनये तु पूर्वोक्तेरनाक्षेपात्तथात्वं युक्तमिति भावः ।**

ಪ್ರಶ್ನೆ - ಹಾಗಾದರೆ ಮುಂದಿನ ಆಕಾಶಾಧಿಕರಣದಲ್ಲಿ ಪೂರ್ವೋಕ್ತಿ ಹಾಗೂ ಅನ್ಯತ್ರಪ್ರಸಿದ್ಧಿಗಳಿಂದಲೇ ಉಭಯತ್ರಪ್ರಸಿದ್ಧತ್ವವನ್ನು ಆಕಾಶಶಬ್ದಕ್ಕೆ ಹೇಳಿದ್ದಾರಲ್ಲವೇ?

ಉತ್ತರ - ಅಲ್ಲಿ ಪ್ರಥಮಪಾದದಲ್ಲಿ ಮಾಡಿರುವ ಆಕಾಶಶಬ್ದದ ಸಮನ್ವಯವನ್ನು ಆಕ್ಷೇಪ ಮಾಡಿಲ್ಲ. ಮತ್ತು ಆಕಾಶಶಬ್ದವು ಭೂತಾಕಾಶದಲ್ಲಿ ಪ್ರಸಿದ್ಧವೂ ಆಗಿದೆ. ಆ ಕಾರಣದಿಂದ ಮುಂದಿನ ಅಧಿಕರಣದಲ್ಲಿ ಪೂರ್ವೋಕ್ತ ಹಾಗೂ ಅನ್ಯತ್ರಪ್ರಸಿದ್ಧಿಗಳಿಂದ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡುವುದು ಸಮಂಜಸವಾಗಿದೆ. ಆದರೆ ಇಲ್ಲಿ ಅದು ಯುಕ್ತವಾಗುವುದಿಲ್ಲ.

**प्रकाशः** – एवं पादसङ्गतिपरटीकां विवृत्येदानीं ''ज्योतिश्चरणाभिधानात्'' इत्यादिटीका फलोक्तिपरेति भावेन ''ज्योतिर्विष्णुश्चेदुभयलोकसञ्चरणलिङ्गविरोध'' इति टीकया सूचितामापवादिकीं सङ्गतिमाह – **पूर्वसिद्धान्तेति** ॥

ಇಲ್ಲಿಯತನಕ ಜ್ಯೋತಿರಧಿಕರಣಕ್ಕೆ ಸಮರ್ಥಿಸುವ ಟೀಕೆಯನ್ನು ವಿವರಿಸಿದ್ದಾಯಿತು. ಪ್ರಕೃತ 'ಜ್ಯೋತಿಶ್ಚರಣಾಭಿಧಾನಾತ್' ಇತ್ಯಾದಿ ಟೀಕೆಯು ಕೇವಲ ಅಧಿಕರಣದ ಫಲವನ್ನಷ್ಟೇ ಹೇಳಲು ಹೊರಟಿದೆ ಎಂಬ ಅಭಿಪ್ರಾಯದಿಂದ 'ಜ್ಯೋತಿರ್ವಿಷ್ಣುಶ್ಚೇದುಭಯಲೋಕಸಂಚರಣಲಿಂಗವಿರೋಧಃ' ಜ್ಯೋತಿಯು ವಿಷ್ಣುವಾದಲ್ಲಿ, ಉಭಯಲೋಕಸಂಚಾರವೆಂಬ ಲಿಂಗದ ವಿರೋಧವು ಬರುತ್ತದೆ ಎಂಬ ಟೀಕೆಯಿಂದ ಸೂಚಿತವಾದ ಆಪವಾದಿಕೀಸಂಗತಿಯನ್ನು ತೋರಿಸುತ್ತಿದ್ದಾರೆ 'ಪೂರ್ವಸಿದ್ಧಾಂತ' ಇತ್ಯಾದಿ ಗ್ರಂಥದಿಂದ.

**प्रकाशः** – ''बहुतादृत्त्वम्'' इति न्यायविवरणमनुरुध्य ''इत्यादि जीवलिङ्गाच'' इति टीकायां निरवकाशबहुजीवलिङ्गोक्त्या सूचितां सोपानारोहणक्रमरूपसङ्गतिमाह – **यद्वेति** ॥

'ಬಹುತಾದೃಕ್ತ್ವಮ್' ಎಂಬ ನ್ಯಾಯವಿವರಣದಲ್ಲಿ ಅನೇಕ ಲಿಂಗಗಳಿಂದ ಈ ಅಧಿಕರಣದ ಪೂರ್ವಪಕ್ಷವು ಹೊರಟಿದೆಯೆಂದು ಹೇಳಿರುತ್ತಾರೆ. ಮತ್ತು 'ಇತ್ಯಾದಿಜೀವಲಿಂಗಾಚ್ಚ' ಎಂಬ ಟೀಕೆಯಲ್ಲಿ ಆದಿಪದದಿಂದ ನಿರವಕಾಶವಾದ ಬಹುಲಿಂಗಗಳನ್ನು ಪೂರ್ವಪಕ್ಷಯುಕ್ತಿಯನ್ನಾಗಿ ಸೂಚಿಸಿದ್ದಾರೆ. ಆದ್ದರಿಂದ ಹಿಂದಿನ ಅಧಿಕರಣಗಳಿಂದ ಈ ಅಧಿಕರಣಕ್ಕೆ ಸೋಪಾನಾರೋಹಣನ್ಯಾಯದಿಂದ ಸಂಗತಿಯು ಇರುತ್ತದೆಂದು 'ಯದ್ವಾ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – मध्येऽधिकारतद्धानिविचारौ प्रासङ्गिकाविति भावः ।

ಗ್ರಂಥದಲ್ಲಿ ವಾಮನಾಧಿಕರಣದ ಅನಂತರ ಕಂಪನಾಧಿಕರಣದ ಸಂಗತಿಯನ್ನು ಹೇಳಿದ್ದಾರೆ. ಮಧ್ಯದಲ್ಲಿರುವ ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳನ್ನು ಏಕೆ ಬಿಟ್ಟರು? ಎಂದರೆ 'ಅಧಿಕಾರಾಶ್ಚ ತದ್ಧಾನಿಃ ಪ್ರಸಂಗಾದೇವ ಚಿಂತಿತೌ' ಎಂಬಂತೆ ದೇವತೆಗಳಿಗೆ ವೇದವಿದ್ಯಾಧಿಕಾರವಿದೆ. ಶೂದ್ರರಿಗೆ ವೇದವಿದ್ಯಾಧಿಕಾರವಿಲ್ಲ ಎಂಬ ವಿಚಾರವು ಪ್ರಾಸಂಗಿಕವಾಗಿ ಬಂದಿರುವುದರಿಂದು ಆ ಎರಡು ಅಧಿಕರಣಗಳಿಗೆ ಸಂಗತಿಯನ್ನು ತೋರಿಸಬೇಕಾಗಿಲ್ಲ. ಆದ್ದರಿಂದ ಗ್ರಂಥಕಾರರು ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳನ್ನು ಬಿಟ್ಟು ವಾಮನಾಧಿಕರಣದಿಂದ ನೇರವಾಗಿ ಕಂಪನಾಧಿಕರಣಕ್ಕೆ ಸಂಗತಿಯನ್ನು ತೋರಿಸಿರುತ್ತಾರೆ.

ಪರಿಪೂರ್ಣಚಂದ್ರಿಕಾ

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – ।। ॐ ज्योतिर्दर्शनात् ॐ ।।** टीकोक्तं ज्ञानरूपत्वेन ज्योतिश्शब्दस्य साधारण्यमयुक्तम् । तस्य लोकतोऽग्न्यादौ प्रसिद्धत्वेनान्यत्रप्रसिद्धत्वात् । अन्यथा ज्योतिश्चरणाभिधानादित्यत्रापि ज्योतिश्शब्दस्योभयत्रप्रसिद्धत्वं स्यादित्यतष्टीकोक्तं ज्ञानरूपत्वेन साधारण्यमुपपादयति ।। **ज्योतिश्शब्दस्येति ।। अत एवेति ।।** अन्तर्ज्योतिरित्यत्र ज्योतिश्शब्दस्य ज्ञानपरतया भाष्यकृदभिप्रेतत्वादेवेत्यर्थः ।। **पूर्वसिद्धान्तन्यायेनेति ।।** निरवकाश लिङ्गबलादेव विष्णुरेव ज्योतिरित्यादि-श्रुतिसिद्धार्थत्याग इति न्यायेनेत्यर्थः ।




ಈ ಅಧಿಕರಣದಲ್ಲಿ 'ಜ್ಯೋತಿಃ' ಎಂಬ ನಾಮಾತ್ಮಕ ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಪ್ರಕಾಶತ್ವವು 'ಜ್ಯೋತಿಃ' ಶಬ್ದದ ಪ್ರವೃತ್ತಿನಿಮಿತ್ತ. ಜ್ಞಾನರೂಪವಾಗಿರುವಿಕೆಯೆಂದು ಇದರರ್ಥ. ಇದು ಕೇವಲ ಜೀವ ಹಾಗೂ ಈಶ್ವರರಲ್ಲಿ ಮಾತ್ರವಿರುತ್ತದೆ. ಆ ಕಾರಣದಿಂದಲೇ 'ಜ್ಯೋತಿಃ' ಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆ. ಅಗ್ನಿ, ಆದಿತ್ಯ ಮೊದಲಾದವರಲ್ಲಿ ಜ್ಞಾನಸ್ವರೂಪವಾಗಿರುವಿಕೆ ಎಂಬ ಪ್ರವೃತ್ತಿನಿಮಿತ್ತವು ಬರುವುದಿಲ್ಲವಾದ್ದರಿಂದ ಅವರನ್ನು ಇಲ್ಲಿ 'ಜ್ಯೋತಿ' ಎಂದು ಪರಿಗಣಿಸಲಾಗದು.

ಬೃಹದಾರಣ್ಯಕೋಪನಿಷತ್ತಿನಲ್ಲಿ ಇರುವ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ ಹೊರತು, ಅದೇ ಪ್ರಕರಣದ ಹಿಂದಿನ 'ಆದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿ ವಾಕ್ಯಗಳು ಈ ಅಧಿಕರಣದ ವಿಷಯಗಳಲ್ಲ. ಏಕೆಂದರೆ ಆದಿತ್ಯಾದಿಗಳ ಜ್ಯೋತಿಗೆ ಅಸ್ತಮಯವಾಗುವಿಕೆಯನ್ನು ಹೇಳಿ ಕೊನೆಯಲ್ಲಿ ಆತ್ಮನ ಜ್ಯೋತಿಯು ಅಸ್ತಮಯವಾಗುವುದಿಲ್ಲವೆಂದು ಹೇಳಿದ್ದಾರೆ. ಆದ್ದರಿಂದ ಹಿಂದಿನ ಜ್ಯೋತಿಶಬ್ದಗಳ ವಿಚಾರವನ್ನು ಮಾಡಬೇಕಾಗಿಲ್ಲ. ಕೊನೆಯಲ್ಲಿರುವ ಆತ್ಮಜ್ಯೋತಿಯ ಬಗ್ಗೆ ವಿಚಾರ ಮಾಡುವುದು ಅನಿವಾರ್ಯವಾಗಿದೆ. ಆತ್ಮಜ್ಯೋತಿಯು ವಿಚಾರಕ್ಕೆ ವಿಷಯವಾದ್ದರಿಂದಲೇ, ಜ್ಞಾನರೂಪತ್ವವೇ 'ಜ್ಯೋತಿಃ' ಶಬ್ದದ ಪ್ರವೃತ್ತಿನಿಮಿತ್ತವಾಗುತ್ತದೆ ಹೊರತು, ಜ್ಞಾನಸಾಧನತ್ವವು ಪ್ರವೃತ್ತಿನಿಮಿತ್ತವಾಗುವುದಿಲ್ಲ. ಒಂದು ವೇಳೆ ಜ್ಞಾನಸಾಧನತ್ವವು ಪ್ರವೃತ್ತಿನಿಮಿತ್ತವಾಗಿದ್ದಲ್ಲಿ, ಆದಿತ್ಯಾದಿಗಳಲ್ಲಿಯೂ ಜ್ಯೋತಿಶ್ಶಬ್ದವು ಪ್ರಸಿದ್ಧವಾದ ಕಾರಣ, ಅನ್ಯತ್ರಪ್ರಸಿದ್ಧವಾಗುತ್ತಿತ್ತು. ಪ್ರಥಮಪಾದದಲ್ಲಿ ಈ ಅಧಿಕರಣವನ್ನು ಸೇರಿಸಬೇಕಾದ ಪ್ರಸಂಗ ಬರುತ್ತಿತ್ತು.

ಈ ಅಧಿಕರಣವು ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನು ಅವಲಂಬಿಸಿ ಹೊರಟಿದೆ. ಅಂದರೆ ನಿರವಕಾಶವಾದ ಲಿಂಗಗಳ ಬಲದಿಂದ ವಿಷ್ಣುವು ಜ್ಯೋತಿಯಾಗುವುದಿಲ್ಲವೆಂದು ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಆನಂತರ್ಯಸಂಗತಿಯನ್ನು ತಿಳಿಯಬೇಕು. ಅಥವಾ ಹಿಂದೆ ವಾಮನಾಧಿಕರಣದಲ್ಲಿ ಕೇವಲ ಪ್ರಾಣವ್ಯವಸ್ಥಾಪಕತ್ವವೆಂಬ ಲಿಂಗದಿಂದ ಪೂರ್ವಪಕ್ಷ ಮಾಡಿದರೂ, ಕಂಪನಾಧಿಕರಣದಲ್ಲಿ ವಜ್ರಶ್ರುತಿ ಸಹಿತವಾದ ಉದ್ಯತತ್ವಲಿಂಗದಿಂದ ಪೂರ್ವಪಕ್ಷ ಮಾಡಿದರು. ಈಗ ನಿರವಕಾಶವಾದ ಅನೇಕ ಲಿಂಗಗಳಿಂದ ಪೂರ್ವಪಕ್ಷ ಮಾಡುತ್ತಿದ್ದಾರೆ. ಹಿಂದಿನ ಅಧಿಕರಣಗಳ ಪೂರ್ವಪಕ್ಷಕ್ಕಿಂತ ಈ ಅಧಿಕರಣದ ಪೂರ್ವಪಕ್ಷವು ಹೆಚ್ಚು ಬಲಿಷ್ಠವಾದ್ದರಿಂದ ಸೋಪಾನಾರೋಹಣ ಕ್ರಮದಿಂದ ಆನಂತರ್ಯಸಂಗತಿಯು ಇರುತ್ತದೆ.

• • • • •

## ಸಂಶಯ ಪರಂಪರೆ

## तात्पर्यचन्द्रिका

**तत्र ''हृद्यन्तर्ज्योतिः'' इत्यात्मप्रश्नोत्तरस्थं ज्योतिः किं जीवः किं वा ब्रह्मेति चिन्ता ।**

ಅನುವಾದ - 'ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬುದಾಗಿ ಆತ್ಮನ ಬಗ್ಗೆ ಪ್ರಶ್ನಿಸಿದಾಗ, ಉಪನಿಷತ್ತು ಉತ್ತರಿಸಿದೆ. ಇಲ್ಲಿರುವ ಜ್ಯೋತಿಯು ಜೀವನೋ, ಅಥವಾ ಬ್ರಹ್ಮನೋ ? ಎಂಬುದು ಪ್ರಧಾನ ಸಂಶಯ.

**तदर्थं ''कतम आत्मा'' इत्यात्मप्रश्ने ततः पूर्वस्मिन् ''आत्मैवास्य ज्योतिः'' इति वाक्ये च श्रुत आत्मशब्दः किमस्येति निर्दिष्टजीवस्वरूपपरः किं वा परमात्मपर इति ।**

ಈ ಸಂಶಯವು ಪರಿಹಾರವಾಗಬೇಕೆಂದರೆ 'ಕತಮ ಆತ್ಮಾ' ಎಂಬ ಆತ್ಮವಿಷಯಕವಾದ ಪ್ರಶ್ನೆಯ ಹಿಂದಿರುವ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿ ಶ್ರುತವಾದ ಆತ್ಮಶಬ್ದವು 'ಕಿಮಸ್ಯ' ಎಂಬಲ್ಲಿ ನಿರ್ದೇಶಿಸಲ್ಪಟ್ಟ ಜೀವಸ್ವರೂಪವನ್ನು ಪ್ರತಿಪಾದನೆ ಮಾಡುತ್ತದೆಯೋ, ಅಥವಾ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತದೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''अत्रायं पुरुषः स्वयं ज्योतिः'' इत्यात्मप्रश्नोत्तरोपसंहारस्थपुरुषादिशब्दाः किं ''किं ज्योतिरयं पुरुष'' इति ज्ञानप्रश्नोपक्रमपुरुषादिशब्देनैकार्था उत भिन्नार्था इति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ 'ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬುದಾಗಿ ಆತ್ಮವಿಷಯಕವಾದ ಪ್ರಶ್ನೆಗೆ ಉತ್ತರಿಸುವ ಉಪಸಂಹಾರವಾಕ್ಯದಲ್ಲಿರುವ ಪುರುಷ ಮೊದಲಾದ ಶಬ್ದಗಳು 'ಕಿಂ ಜ್ಯೋತಿರಯಂ ಪುರುಷಃ' ಎಂಬ ಜ್ಞಾನಸಾಧನದ ಬಗ್ಗೆ ಪ್ರಶ್ನಿಸುವ ಪ್ರಾರಂಭದಲ್ಲಿರುವ ಪುರುಷಾದಿಶಬ್ದಗಳ ಜೊತೆಗೆ ಸಮಾನವಾದ ಅರ್ಥವನ್ನು ಹೊಂದಿವೆಯೋ, ಅಥವಾ ಭಿನ್ನವಾದ ಅರ್ಥಗಳನ್ನು ಹೊಂದಿವೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थमुपसंहारस्थपुरुषादिशब्दानां किमुपक्रमप्रकृतपरत्वाद्यर्थं ब्रह्मरूप-मुख्यार्थत्याग उत मुख्यार्थत्वाय प्रकृतपरत्वादित्याग इति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಉಪಸಂಹಾರದಲ್ಲಿರುವ ಪುರುಷಾದಿ ಶಬ್ದಗಳಿಗೆ ಉಪಕ್ರಮ ಹಾಗೂ ಪ್ರಕೃತಪರತ್ವಕ್ಕೋಸ್ಕರ ಬ್ರಹ್ಮನೆಂಬ ಮುಖ್ಯಾರ್ಥವನ್ನು ತ್ಯಾಗಮಾಡಬೇಕೋ, ಅಥವಾ ಬ್ರಹ್ಮನೆಂಬ ಮುಖ್ಯಾರ್ಥಕ್ಕಾಗಿ ಪ್ರಕೃತ ಪರತ್ವಾದಿಗಳನ್ನೇ ತ್ಯಾಗಮಾಡಬೇಕೋ ಎಂಬ ಸಂಶಯವು ಪರಿಹಾರವಾಗಬೇಕು.

**यद्याद्यस्तदा जीवपरोपक्रमोपसंहारमध्यस्थात्मशब्दस्य जीवपरत्वाज्जायमान-त्वादिलिङ्गाच्चात्मप्रश्नोत्तरस्थं ज्योतिर्जीव एव ।**

ಒಂದು ವೇಳೆ ಈ ಸಂಶಯ ಪರಂಪರೆಗಳಲ್ಲಿ ಮೊದಲನೆಯ ಪಕ್ಷವನ್ನು ಸ್ವೀಕರಿಸುವುದಾದರೆ, ಜೀವಪರವಾದ ಉಪಕ್ರಮ ಹಾಗೂ ಉಪಸಂಹಾರಗಳ ಮಧ್ಯದಲ್ಲಿರುವ ಆತ್ಮಶಬ್ದಕ್ಕೂ ಕೂಡ ಜೀವಪರತ್ವವನ್ನೇ ಒಪ್ಪಬೇಕು. ಈ ವಿಷಯದಲ್ಲಿ ಜಾಯಮಾನತ್ವಾದಿ ಲಿಂಗಗಳು ಆಧಾರವಾಗಿರುವುದರಿಂದ ಆತ್ಮವಿಷಯಕವಾದ ಪ್ರಶ್ನೆಗೆ ಉತ್ತರಿಸುವ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯವೂ ಕೂಡ ಜೀವಪರವೇ ಆಗುತ್ತದೆ ಎಂಬುದು ಪೂರ್ವಪಕ್ಷ.

**यदि तु द्वितीयस्तदोपसंहारानुसारेणात्मशब्दस्य मुख्यार्थभूतपरमात्मपरत्वाद्ब्रह्म परवाक्यमध्यस्थानां जायमानादिशब्दानामन्तर्भावितण्यन्तत्वेन ब्रह्मण्यपि सम्भवाज्ज्योतिश्शब्दस्य ब्रह्मणि मुख्यत्वाच्च ज्योतिर्ब्रह्मैव ।**

ಒಂದುವೇಳೆ ಸಂಶಯಪರಂಪರೆಗಳಲ್ಲಿ ಎರಡನೆಯ ಪಕ್ಷವನ್ನು ಒಪ್ಪುವುದಾದರೆ ಉಪಸಂಹಾರಕ್ಕೆ ಅನುಗುಣವಾಗಿ ಆತ್ಮಶಬ್ದಕ್ಕೆ ಮುಖ್ಯಾರ್ಥನೆನಿಸಿದ ಪರಮಾತ್ಮನ ಪರತ್ವವನ್ನೇ ಒಪ್ಪಬೇಕು. ಹಿಂದಿನ ಮುಂದಿನ ವಾಕ್ಯಗಳು ಬ್ರಹ್ಮಪರವಾದ್ದರಿಂದ, ಅವುಗಳ ಮಧ್ಯದಲ್ಲಿರುವ ಜಾಯಮಾನತ್ವಾದಿ ಶಬ್ದಗಳು ಅಂತರ್ಗತವಾದ ಣಿಚ್ ಪ್ರತ್ಯಯಾಂತವಾದರೂ ಕೂಡ ಬ್ರಹ್ಮನಲ್ಲಿ ಸಾವಕಾಶವಾಗುತ್ತದೆ. ಹಾಗಾಗಿ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಿಂದ ಬ್ರಹ್ಮನೇ ಮುಖ್ಯನಾಗಿ ಪ್ರತಿಪಾದ್ಯನಾಗುತ್ತಾನೆ. ಹೀಗೆ 'ಜ್ಯೋತಿಃ' ಶಬ್ದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ ಎಂಬುದು ಸಿದ್ಧಾಂತದ ಫಲ.

ಜ್ಯೋತಿರಧಿಕರಣ (೧-೩-೧೧)

**प्रकाशः –**

विषयसंशयटीकां व्यनक्ति ।। **तत्रेति ।। एवं सङ्गतौ सत्यामित्यर्थः** । यद्वा "आदित्येनैव ज्योतिषास्ते" इत्यादिना श्रुतज्योतिश्शब्देषु मध्य इत्यर्थः । एतेन "तज्ज्योतिः" इति टीकास्थ तच्छब्दार्थो विवृतः ।

ವಿವರಣೆ - ಜ್ಯೋತಿರಧಿಕರಣಕ್ಕೆ ಆನಂತರ್ಯಸಂಗತಿ ಹಾಗೂ ಅವಾಂತರಸಂಗತಿಗಳನ್ನು ತೋರಿಸಿದ್ದಾಯಿತು. ಪ್ರಕೃತ ಈ ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು ಪ್ರತಿಪಾದನೆ ಮಾಡುವಂತಹ ಟೀಕಾವಾಕ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ತತ್ರ' ಇತ್ಯಾದಿ ಗ್ರಂಥದಿಂದ. 'ತತ್ರ' ಎಂದರೆ ಹೀಗೆ ಸಂಗತಿಯು ಇರುವ ಕಾರಣದಿಂದ ಎಂದರ್ಥ. ಅಥವಾ 'ಆದಿತ್ಯೇನೈವ ಜ್ಯೋತಿಷಾಸ್ತೇ' ಇತ್ಯಾದಿಯಾಗಿ ಶ್ರುತವಾದ ಅನೇಕ 'ಜ್ಯೋತಿಃ' ಶಬ್ದದ ಮಧ್ಯದಲ್ಲಿ ಎಂದರ್ಥ. 'ತತ್ರ' ಎಂಬುದಕ್ಕೆ ಎರಡನೆಯ ಅರ್ಥವನ್ನು ವಿವಕ್ಷಿಸಿದಾಗ ಟೀಕೆಯಲ್ಲಿರುವ 'ತತ್ ಜ್ಯೋತಿಃ' ಎಂಬ 'ತತ್' ಶಬ್ದಕ್ಕೆ 'ಹೃದ್ಯಂತರ್ಜ್ಯೋತಿಃ' ಎಂಬಲ್ಲಿ ಶ್ರುತವಾದ ಎಂಬರ್ಥವನ್ನು ಹೇಳಿದಂತಾಯಿತು.

**प्रकाशः –** वाजसनेये षष्ठेऽध्याये ज्योतिर्ब्राह्मणे "याज्ञवल्क्य किं ज्योतिरयं पुरुष" इत्यादिजनकप्रश्नं प्रत्यादित्यचन्द्राग्निवाग्रूपेषु ज्योतिष्षु पूर्वपूर्वास्तमय उत्तरोत्तरं पुरुषस्य ज्ञानकारणशब्दितं ज्योतिरभिधाय "अस्तमित आदित्ये, याज्ञवल्क्य चन्द्रमस्यस्तमिते, शान्तेऽग्नौ, शान्तायां वाचि, किं ज्योतिरेवायं पुरुष" इति प्रश्ने "आत्मैवास्य ज्योतिर्भवतीत्यात्मनैवायं ज्योतिषाऽऽस्ते पल्ययते कर्म कुरुते विपल्येति" इत्यात्मनो ज्योतिष्ट्वमुक्त्वोपपाद्य च "कतम आत्म" इति पुनः प्रश्ने कृते परिहरति याज्ञवल्क्यः "योऽयं विज्ञानमयः प्राणेषु हृद्यन्तर्ज्योतिः पुरुषस्ससमानस्सन्नुभौ लोकावनुसञ्चरति ध्यायतीव लेलायतीव स हि स्वप्नो भूत्वेमं लोकमतिक्रामति मृत्यो रूपाणि । स वा अयं पुरुषो जायमानः शरीरमभिसम्पद्यमानः पाप्मभिस्संसृज्यते स उत्क्रामन्म्रियमाणः पाप्मनो विजहाति । तस्य वा एतस्य पुरुषस्य द्वे एव स्थाने भवन इदं च परलोकस्थानं च सन्ध्यं तृतीयं स्वप्नस्थानं तस्मिन्सन्ध्ये स्थाने तिष्ठन्नेते उभे स्थाने पश्यतीदं च परलोकस्थानं च । अथ यथाक्रमोऽयं परलोकस्थाने भवति तमतिक्रममाक्रम्योभयान्पाप्मन आनन्दांश्च पश्यति सयत्र प्रस्वपिति । अस्य लोकस्य सर्वावतो मात्रामुपादाय स्वयं विहत्य स्वयं निर्माय स्वेन भासा स्वेन ज्योतिषा प्रस्वपित्यत्रायं पुरुषः स्वयं ज्योतिर्भवति" इत्युक्त्वा "न तत्र रथा" इत्यादिना स्वाप्नपदार्थसृष्टिं चाभिधाय "तदेते श्लोका"

इत्यादिनोक्तार्थे श्लोकानुदाहृत्यान्ते ''यानि ह्येव जाग्रत्पश्यति तानि सुप्त इत्यत्रायं पुरुषस्स्वयं ज्योतिः'' इत्याद्याह ।।

(೧)ಯಾಜ್ಞವಲ್ಕ್ಯ ಕಿಂಜ್ಯೋತಿರಯಂ ಪುರುಷ ಇತಿ । ಆದಿತ್ಯ ಜ್ಯೋತಿಃ ಸಮ್ರಾಳ್ ಇತಿ ಹೋವಾಚ । ಆದಿತ್ಯೇನೈವಾಯಂ ಜ್ಯೋತಿಷಾ ಆಸ್ತೇ । ಪಲ್ಯಯತೇ । ಕರ್ಮಕುರುತೇ । ವಿಪಲ್ಯೇತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।

'ಯಾಜ್ಞವಲ್ಕ್ಯರೇ, ಈ ಸಂಸಾರ ಜೀವನಿಗೆ ಜ್ಞಾನಸಾಧನ ಯಾವುದು'? ಎಂಬ ಜನಕರಾಜರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸಿದರು - ರಾಜನೇ, ಸೂರ್ಯನೇ ಮುಖ್ಯವಾಗಿ ಜ್ಞಾನಸಾಧನ. ಈ ಸಂಸಾರಜೀವನು ತನಗೆ ಜ್ಞಾನಸಾಧನವಾದ ಈ ಆದಿತ್ಯನ ಸಹಾಯದಿಂದಲೇ ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದ ಕಡೆ ಹೋಗುತ್ತಾನೆ. ಕೆಲಸಗಳನ್ನು ಮಾಡುತ್ತಾನೆ. ಹಿಂದಿರುಗಿ ಬರುತ್ತಾನೆ. ಆದ್ದರಿಂದ ಆದಿತ್ಯನೇ ಜ್ಞಾನಸಾಧನ! ಇದುವೇ ಸತ್ಯ.

ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಕಿಂಜ್ಯೋತಿರೇವಾಯಂ ಪುರುಷ ಇತಿ । ಚಂದ್ರಮಾ ಏವಾಸ್ಯ ಜ್ಯೋತಿರ್ಭವತೀತಿ । ಚಂದ್ರಮಸೈವಾಯಂ ಜ್ಯೋತಿಷಾ ಆಸ್ತೇ । ಪಲ್ಯಯತೇ । ಕರ್ಮ ಕುರುತೇ । ವಿಪಲ್ಯೇತಿ ಇತಿ । ಏವಮೇವ ಏತದ್ ಯಾಜ್ಞವಲ್ಕ್ಯ ।

ಯಾಜ್ಞವಲ್ಕ್ಯರೇ ! ಆದಿತ್ಯನು ಅಸ್ತಮಿಸಿದಾಗ ಸಂಸಾರಿ ಜೀವನ ಜ್ಞಾನ ಸಾಧನ ಯಾವುದು? ಎಂಬ ಪ್ರಶ್ನೆಗೆ ಉತ್ತರಿಸಿದರು - ಚಂದ್ರನೇ ಇವನಿಗೆ ಮುಖ್ಯವಾಗಿ ಜ್ಞಾನಸಾಧನ, ಜ್ಞಾನಸಾಧನನಾದ ಚಂದ್ರನಿಂದಲೇ ಈ ಜೀವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದ ಕಡೆ ಹೋಗುತ್ತಾನೆ, ಕೆಲಸಗಳನ್ನು ಮಾಡುತ್ತಾನೆ, ಹಿಂದಿರುಗಿ ಬರುತ್ತಾನೆ. ಆದ್ದರಿಂದ ಚಂದ್ರನೇ ಜ್ಞಾನಸಾಧನ. ಇದುವೇ ಸತ್ಯ.

ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ ಕಿಂಜ್ಯೋತಿರೇವಾಯಂ ಪುರುಷ ಇತಿ । ಅಗ್ನಿರೇವಾಸ್ಯ ಜ್ಯೋತಿರ್ಭವತೀತಿ । ಅಗ್ನಿನೈವಾಯಂ ಜ್ಯೋತಿಷಾ ಆಸ್ತೇ । ಪಲ್ಯಯತೇ । ಕರ್ಮ ಕುರುತೇ । ವಿಪಲ್ಯೇತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।

ಯಾಜ್ಞವಲ್ಕ್ಯರೇ ! ಸೂರ್ಯನು ಅಸ್ತಮಿಸಿದಾಗ, ಚಂದ್ರನು ಅಸ್ತವಾದಾಗ ಈ ಸಂಸಾರಿ ಜೀವನ ಜ್ಞಾನಸಾಧನ ಯಾವುದು ? ಎಂಬ ಜನಕರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸಿದರು - ಅಗ್ನಿಯು ಆಗ ಇವನಿಗೆ ಮುಖ್ಯವಾಗಿ ಜ್ಞಾನಸಾಧನ, ಜ್ಞಾನಸಾಧನವಾದ ಅಗ್ನಿಯಿಂದಲೇ ಈ ಜೀವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದ ಕಡೆ ಹೋಗುತ್ತಾನೆ ಕೆಲಸಗಳನ್ನು ಮಾಡುತ್ತಾನೆ. ಹಿಂದಿರುಗಿ ಬರುತ್ತಾನೆ. ಆದ್ದರಿಂದ ಅಗ್ನಿಯೇ ಜ್ಞಾನಸಾಧನ. ಇದುವೇ ಸ

ಅಸ್ತಮಿತ ಆದಿತೆಯೇ ಯಾಜ್ಞವಲ್ಕ್ಯ ಚಂಪ್ರಮಸ್ಯಸ್ತಮಿತೇ ಶಾಂತೇ ಅಗ್ನೌ ಕಿಂಜ್ಯೋತಿರೇವಾಯಂ ಪುರುಷ ಇತಿ । ವಾಗೇವಾಸ್ಯ ಜ್ಯೋತಿರ್ಭವತೀತಿ । ವಾಚೈವಾಯಂ ಜ್ಯೋತಿಷಾ ಆಸ್ತೇ । ಪಲ್ಯಯತೇ

(೧) ಓದುಗರ ಅನುಕೂಲಕ್ಕಾಗಿ ಉಪನಿಷತ್ತಿನಲ್ಲಿರುವ ಸಿದ್ಧಾಂತ ಪರವಾದ ಅರ್ಥವನ್ನು ಇಲ್ಲಿ ನೀಡಲಾಗಿದೆ.

ಜ್ಯೋತಿರಧಿಕರಣ (೧-೩-೧೧)

ಕರ್ಮ ಕುರುತೇ । ವಿಪಲ್ಯೇತೀತಿ । ತಸ್ಮಾದ್ ವೈ ಸಮ್ರಾಳ್ ಅಪಿ ಯತ್ರ ಸ್ವಃ ಪಾಣಿರ್ನ ವಿನಿರ್ಜ್ಞಾಯತೇಽಥ ಯತ್ರ ವಾಗುಚ್ಚರತಿ ಉಪೈವ ತತ್ರ ಹ್ಯೇತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।

ಯಾಜ್ಞವಲ್ಕ್ಯರೇ ! ಸೂರ್ಯನು ಅಸ್ತನಾದಾಗ, ಚಂದ್ರನು ಅಸ್ತನಾದಾಗ, ಅಗ್ನಿಯು ಆರಿದಾಗ ಸಂಸಾರಿಜೀವನ ಜ್ಞಾನಸಾಧನ ಯಾವುದು ? ಎಂಬ ಜನಕರಾಜರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸಿದರು - ಆಗ ಮಾತೇ ಇವನಿಗೆ ಮುಖ್ಯವಾಗಿ ಜ್ಞಾನಸಾಧನ. ಜ್ಞಾನಸಾಧನವಾದ ಮಾತಿನ ಸಹಾಯದಿಂದಲೇ ಇವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ, ಬೇಕಾದಕಡೆ ಹೋಗುತ್ತಾನೆ, ಕೆಲಸಗಳನ್ನು ಮಾಡುತ್ತಾನೆ, ಹಿಂದಿರುಗಿ ಬರುತ್ತಾನೆ. ಆದ್ದರಿಂದ ರಾಜನೇ ! ಎಲ್ಲಿ ತನ್ನ ಕೈಯೂ ಸ್ಪಷ್ಟವಾಗಿ ಕಾಣಿಸುವುದಿಲ್ಲವೋ ಅಂತಹ ಕತ್ತಲಿನ ಸ್ಥಳದಲ್ಲಿ ಜನರು ಮಾತು ಕೇಳಿ ಬರುವ ಕಡೆಗೇ ಹೋಗುತ್ತಾರೆ. ಆದ್ದರಿಂದ ಮಾತೇ ಜ್ಞಾನಸಾಧನ. ಇದುವೇ ಸತ್ಯ.

ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ ಶಾಂತೇ ಅಗ್ನೌಶಾಂತಾಯಾಂ ವಾಚಿ ಕಿಂಜ್ಯೋತಿರೇವಾಯಂ ಪುರುಷ ಇತಿ । ಆತ್ಮೈವಾಸ್ಯ ಜ್ಯೋತಿರ್ಭವತೀತಿ । ಆತ್ಮನೈವಾಯಂ ಜ್ಯೋತಿಷಾ ಆಸ್ತೇ ಪಲ್ಯಯತೇ । ಕರ್ಮ ಕುರುತೇ । ವಿಪಲ್ಯೇತೀತಿ ।

ಯಾಜ್ಞವಲ್ಕ್ಯರೇ, ಸೂರ್ಯನು ಅಸ್ತನಾದಾಗ, ಚಂದ್ರನು ಅಸ್ತನಾದಾಗ ಅಗ್ನಿಯು ಆರಿದಾಗ, ಮಾತೂ ಇಲ್ಲದಾಗ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಈ ಸಂಸಾರಿಜೀವನ ಜ್ಞಾನಸಾಧನ ಯಾವುದು ? ಎಂಬ ಜನಕರಾಜರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸಿದರು - ಆಗ ಪರಮಾತ್ಮನೇ ಇವನಿಗೆ ಮುಖ್ಯವಾಗಿ ಜ್ಞಾನಸಾಧನ, ಪರಮಾತ್ಮನ ಸಹಾಯದಿಂದಲೇ ಇವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದ ಕಡೆ ಹೋಗುತ್ತಾನೆ, ಕೆಲಸಗಳನ್ನು ಮಾಡುತ್ತಾನೆ, ಹಿಂದಿರುಗಿ ಬರುತ್ತಾನೆ.

ಕತಮ ಆತ್ಮಾ ಇತಿ । ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ । ಪುರುಷಃ ಸ ಸಮಾನಃ ಸನ್ ಉಭೌ ಲೋಕೌ ಅನುಸಂಚರತಿ । ಧ್ಯಾಯತೀವ । ಲೇಲಾಯತೀವ । ಸ ಹಿ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ ಮೃತ್ಯೋಃ ರೂಪಾಣಿ ।

ಆತ್ಮ ಎಂದರೆ ಯಾರು ? ಎಂಬ ಜನಕರಾಜರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸಿದರು - ಯಾರು ಪೂರ್ಣಜ್ಞಾನ ಸ್ವರೂಪನೋ ಇಂದ್ರಿಯಗಳ ಮತ್ತು ಹೃದಯದ ಒಳಗೆ ಇದ್ದು ಜೀವನ ಬುದ್ಧಿಗೆ ಪ್ರೇರಣೆ ಕೊಡುವನೋ, ಷಡ್ಗುಣಪೂರ್ಣನೋ ಅವನು ಆತ್ಮ. ಅವನು ವಿಕಾರರಹಿತನಾದ್ದರಿಂದ ಏಕಪ್ರಕಾರನಾಗಿದ್ದು ಜೀವನನ್ನು ಭೂಲೋಕ-ಸ್ವರ್ಗಲೋಕಗಳಿಗೂ, ಜಾಗ್ರದವಸ್ಥೆ-ಸುಷುಪ್ತ್ಯವಸ್ಥೆಗಳಿಗೂ ಒಯ್ಯುತ್ತ ಸಂಚರಿಸುತ್ತಾನೆ. ಜೀವನಿಂದ ಅಲ್ಪವಿಷಯ ಪದಾರ್ಥಗಳ ಆಲೋಚನೆ ಮಾಡಿಸುವ ಸ್ವಾತಂತ್ರ್ಯ ಅವನದು. ಜೀವನಿಂದ ವಿಷಯ ಸುಖವನ್ನು ಸ್ವಲ್ಪವೇ ಸ್ವೀಕರಿಸುವಂತೆಯೂ ಮಾಡುತ್ತಾನೆ. ಜೀವನಿಗೆ ನಿದ್ದೆ ಉಂಟುಮಾಡಿ, ಬಹು ಪಾಪ ಕಾರ್ಯಕ್ಕೆ ಕಾರಣವಾದ ಜಾಗ್ರದವಸ್ಥೆಯನ್ನು ತಪ್ಪಿಸುತ್ತಾನೆ. ಜೀವನನ್ನು ಅಂತರಿಕ್ಷಕ್ಕೊಯ್ದು ಪಾಪಕರ್ಮಯುಕ್ತವಾದ ಭೂಲೋಕದಿಂದ ಪಾರುಮಾಡುತ್ತಾನೆ.

ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂ ಸೃಜ್ಯತೇ । ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿ ಜಹಾತಿ ।

ಪರಿಪೂರ್ಣಚಂದ್ರಿಕಾ

ಈ ಹರಿಯು ಜೀವನನ್ನು ಹುಟ್ಟಿಸಿ, ಅಂದರೆ ಅವನಿಗೆ ಶರೀರ ಸಂಬಂಧ ಉಂಟುಮಾಡಿ, ಪಾಪಕರ್ಮಗಳನ್ನು ಅವನಿಂದ ಮಾಡಿಸುತ್ತಾನೆ. ಫಲಕೊಡುವುದಕ್ಕಾಗಿ ಅವನ ಆ ಪಾಪಗಳನ್ನು ತಾನು ಎತ್ತಿಕೊಳ್ಳುತ್ತಾನೆ. ಜೀವನಿಗೆ ಮರಣ ಉಂಟುಮಾಡಿ, ಅಂದರೆ ಮುಕ್ತಿಯನ್ನು ಕೊಟ್ಟು ಅವನ ಪಾಪಗಳನ್ನು ನಿಷ್ಫಲಗೊಳಿಸುತ್ತಾನೆ.

ಸಂಸಾರಿಜೀವನು ಹುಟ್ಟಿ, ಅಂದರೆ ಶರೀರ ಸಂಬಂಧವನ್ನು ಪಡೆದು ಪಾಪ ಸಂಬಂಧವನ್ನು ಹೊಂದುತ್ತಾನೆ. ಮರಣಹೊಂದಿ, ಅಂದರೆ ಮೋಕ್ಷ ಪಡೆದು ಪಾಪಗಳನ್ನು ಬಿಡುತ್ತಾನೆ.

ತಸ್ಯ ವಾ ಏತಸ್ಯ ಪುರುಷಸ್ಯ ದ್ವೇ ಏವ ಸ್ಥಾನೇ ಭವತಃ ಇದಂ ಚ ಪರಲೋಕಸ್ಥಾನಂ ಚ । ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ । ತಸ್ಮಿನ್ ಸಂಧ್ಯೇ ಸ್ಥಾನೇ ತಿಷ್ಠನ್ ಏತೇ ಉಭೇ ಸ್ಥಾನೇ ಪಶ್ಯತೀದಶಂ ಚ ಪರಲೋಕಸ್ಥಾನಂ ಚ । ಅಥ ಯಥಾಕ್ರಮೋऽಯಂ ಪರಲೋಕಸ್ಥಾನೇ ಭವತಿ ತಮಾಕ್ರಮಮಾಕ್ರಮ್ಯ ಉಭಯಾನ್ ಪಾಪ್ಮನ ಆನಂದಾಂಶ್ಚ ಪಶ್ಯತಿ । ಸ ಯತ್ರ ಪ್ರಸ್ವಪಿತಿ ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮುಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ ಪ್ರ ಸ್ವಪಿತಿ । ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ ।

ಈ ಪರಮಾತ್ಮನಿಗೆ ಎರಡೇ ಸ್ಥಾನಗಳು, ಭೂಲೋಕ ಮತ್ತು ಸ್ವರ್ಗ. ಜಾಗ್ರತ್ ಮತ್ತು ಸುಷುಪ್ತಿ. ಸಂಸಾರ ಮತ್ತು ಮೋಕ್ಷ. ಮೂರನೆಯದಾದ ಅಂತರಿಕ್ಷವು, ಭೂಲೋಕ-ಸ್ವರ್ಗಗಳ ಸಂಧಿಯಲ್ಲಿಯೂ, ಸ್ವಪ್ನವು ಜಾಗ್ರತ್-ಸುಷುಪ್ತಿಗಳ ಸಂಧಿಯಲ್ಲಿಯೂ, ಜೀವನ್ಮುಕ್ತಿಯು ಸಂಸಾರ ಮತ್ತು ಮೋಕ್ಷಸಂಧಿಯಲ್ಲಿಯೂ ಬರುವುದರಿಂದ ಪ್ರತ್ಯೇಕ ಹೇಳಿಲ್ಲ. ಶ್ರೀಹರಿಯು ಅಂತರಿಕ್ಷವೆಂಬ ಸಂಧಿಸ್ಥಾನದಲ್ಲಿ ನಿಂತು ಭೂಲೋಕ-ಸ್ವರ್ಗಲೋಕಗಳನ್ನು, ಸ್ವಪ್ನವೆಂಬ ಸಂಧಿಸ್ಥಾನದಲ್ಲಿ ನಿಂತು ಜಾಗ್ರತ್ ಸುಷುಪ್ತಿಗಳನ್ನೂ ಜೀವನ್ಮುಕ್ತಿ ಎಂಬ ಸಂಧಿ ಸ್ಥಾನದಲ್ಲಿ ನಿಂತು ಸಂಸಾರ ಮೋಕ್ಷಗಳನ್ನೂ ನೋಡುತ್ತಾನೆ. ಜಾಗ್ರತ್ ಸ್ಥಾನದಿಂದ ಸುಷುಪ್ತಿಸ್ಥಾನಕ್ಕೆ ಹೋಗುವಾಗ ಮಾರ್ಗದಲ್ಲಿ ಸ್ವಪ್ನಸ್ಥಾನದಲ್ಲಿ ನಿಂತು, ಜೀವನು ಜಾಗ್ರದವಸ್ಥೆಯಲ್ಲಿ ಮಾಡುವ ಪಾಪಕರ್ಮಗಳ ಫಲವಾದ ದುಃಖಗಳನ್ನು ಸುಷುಪ್ತಿಯಲ್ಲಿ ಜೀವನು ಅನುಭವಿಸುವ ಸ್ವರೂಪಾನಂದಗಳನ್ನೂ ನೋಡುತ್ತಾನೆ. ಈ ಲೋಕದಿಂದ ಪರಲೋಕಕ್ಕೆ ಹೋಗುವಾಗ ಮಾರ್ಗದಲ್ಲಿ ಅಂತರಿಕ್ಷ ಸ್ಥಾನದಲ್ಲಿ ನಿಂತು ಜೀವನು ಈ ಲೋಕದಲ್ಲಿ ಮಾಡುವ ಪಾಪಕರ್ಮಗಳ ಫಲವಾದ ದುಃಖಗಳನ್ನೂ, ಸ್ವರ್ಗದ ಸುಖಗಳನ್ನೂ ನೋಡುತ್ತಾನೆ. ಸಂಸಾರದಿಂದ ಮೋಕ್ಷಕ್ಕೆ ಹೋಗುವಾಗ ಮಾರ್ಗದಲ್ಲಿ ಜೀವನ್ಮುಕ್ತಿಯಲ್ಲಿ ನಿಂತು ಸಂಸಾರದಲ್ಲಿರುವ ಪಾಪಫಲವಾದ ದುಃಖಗಳನ್ನು ಮೋಕ್ಷದ ಸ್ವರೂಪಾನಂದವನ್ನೂ ನೋಡುತ್ತಾನೆ. ಶ್ರೀಹರಿಯು ಯಾವಾಗ ಈ ಜೀವನ ಎಲ್ಲ ಜ್ಞಾನವನ್ನು ಮತ್ತು ಇಂದ್ರಿಯಶಕ್ತಿಯನ್ನು ತನ್ನೊಳಗೇ ತೆಗೆದುಕೊಂಡು, ತಾನೇ ಅವನನ್ನು ಬಾಹ್ಯಕ್ರಿಯಾರಹಿತನನ್ನಾಗಿಸಿ, ತಾನೇ ಸ್ವಪ್ನದಲ್ಲಿ ವಾಸನಾಮಯವಾದ ಪದಾರ್ಥಗಳನ್ನೂ ನಿರ್ಮಿಸಿ, ತನ್ನ ಸ್ವರೂಪವೇ ಆದ ಬಾಹ್ಯಪ್ರಕಾಶದಿಂದ ಮತ್ತು ಅಂತರಂಗ ಪ್ರಕಾಶದಿಂದ ಜೀವನಿಗೆ ನಿದ್ರೆ ಉಂಟುಮಾಡುತ್ತಾನೋ ಯಾವಾಗ ಜೀವನ ಎಲ್ಲ ಜ್ಞಾನವನ್ನೂ, ಇಂದ್ರಿಯಾಭಿಮಾನಿ ದೇವತೆಗಳನ್ನೂ ಸೆಳೆದುಕೊಂಡು ತಾನೇ ಅವನನ್ನು ಭೂಲೋಕ ವ್ಯಾಪಾರ ರರಹಿತನನ್ನಾಗಿ ಮಾಡಿ, ಅಂತರಿಕ್ಷ ಅಥವಾ ಸ್ವರ್ಗದಲ್ಲಿ ಅವನಿಗೆ ಭೋಗಪದಾರ್ಥಗಳನ್ನು ನಿರ್ಮಿಸಿ ತನ್ನ ಬಾಹ್ಯ ಅಂತರಂಗ ಪ್ರಕಾಶಗಳಿಂದ ಅವನಿಗೆ ಅಂತರಿಕ್ಷ-ಸ್ವರ್ಗಸುಖಗಳನ್ನು ನೀಡುವನೋ ಮತ್ತು ಯಾವಾಗ ಜೀವನ ಎಲ್ಲ ಜ್ಞಾನಗಳನ್ನೂ

ಇಂದ್ರಿಯಾಭಿಮಾನಿದೇವತೆಗಳನ್ನು ಸೆಳೆದುಕೊಂಡು ತಾನೆ ಅವನನ್ನು ಸಾಂಸಾರಿಕ ವ್ಯಾಪಾರ ರಹಿತನನ್ನಾಗಿ ಮಾಡಿ ಮುಕ್ತಿಯಲ್ಲಿ ಭೋಗ ಪದಾರ್ಥಗಳನ್ನು ನಿರ್ಮಿಸಿ ತನ್ನ ಪ್ರಕಾಶಗಳಿಂದ ಅವನಿಗೆ ಮೋಕ್ಷ ಸುಖ ನೀಡುವನೋ ಆಗ ಶ್ರೀಹರಿಯೇ ಜೀವನಿಗೆ ಜ್ಞಾನಪ್ರದನಾಗುತ್ತಾನೆ.

ನ ತತ್ರ ರಥಾಯೋಗಾ ನ ಪಂಥಾನೋ ಭವಂತಿ । ಅಥ ರಥಾನ್ ರಥಯೋಗಾನ್ ಪಥಃ ಸೃಜತೇ । ನ ತತ್ರಾನಂದಾ ಮುದಃ ಪ್ರಮುದೋ ಭವಂತಿ । ಅಥಾನಂದಾನ್ ಮುದಃ ಪ್ರಮುದಃ ಸೃಜತೇ । ನ ತತ್ರ ವೇಶಾಂತಾಃ ಪುಷ್ಕರಿಣ್ಯಃ ಸ್ರವಂತ್ಯೋ ಭವಂತಿ । ಅಥ ವೇಶಾಂತಾನ್ ಪುಷ್ಕರಿಣ್ಯಃ ಸ್ರವಂತ್ಯಃ ಸೃಜತೇ । ಸ ಹಿ ಕರ್ತಾ ।

ಸ್ವಪ್ನದಲ್ಲಿಯೂ, ಅಂತರಿಕ್ಷ ಸ್ವರ್ಗಗಳಲ್ಲಿಯೂ, ಮುಕ್ತಿಯಲ್ಲಿಯೂ ಮೊದಲಿಗೆ ರಥಗಳು ಇರುವುದಿಲ್ಲ. ಕುದುರೆಗಳಿರುವುದಿಲ್ಲ. ಮಾರ್ಗಗಳಿರುವುದಿಲ್ಲ. ತತ್ಕಾಲದಲ್ಲಿ ಜೀವಕರ್ಮಾನುಸಾರ ರಥಗಳನ್ನೂ, ಕುದುರೆಗಳನ್ನೂ, ಮಾರ್ಗಗಳನ್ನೂ ಶ್ರೀಹರಿಯು ಸೃಷ್ಟಿಸುತ್ತಾನೆ. ಅಲ್ಲಿ ಮೊದಲಿಗೆ ಸ್ವರೂಪ ಸುಖವಾಗಲೀ, ಭೋಗಸಾಮಗ್ರಿಗಳಿಂದ ಲಭಿಸುವ ಸಾಮಾನ್ಯ ಸುಖಗಳಾಗಲೀ, ಅಂತಹ ಉತ್ಕೃಷ್ಟ ಸುಖಗಳಾಗಲೀ ಇರುವುದಿಲ್ಲ. ತತ್ಕಾಲದಲ್ಲಿ ಆ ಸ್ವರೂಪಸುಖಗಳನ್ನೂ, ಭೋಗಸಾಮಗ್ರಿಗಳಿಂದ ಹುಟ್ಟಿದ ಸಾಮಾನ್ಯ ಸುಖವನ್ನೂ, ಅಂತಹ ಉತ್ಕೃಷ್ಟ ಸುಖವನ್ನೂ ಸೃಷ್ಟಿ ಮಾಡುತ್ತಾನೆ. ಅಲ್ಲಿ ಮೊದಲಿಗೆ ವೇಶ್ಯಾಗೃಹಗಳು, ಸರೋವರಗಳು ನದಿಗಳು ಇರುವುದಿಲ್ಲ. ತತ್ಕಾಲದಲ್ಲಿ ವೇಶ್ಯಾಗೃಹಗಳನ್ನೂ, ಸರೋವರಗಳನ್ನೂ, ನದಿಗಳನ್ನೂ ಸೃಷ್ಟಿಸುತ್ತಾನೆ. ಇಷ್ಟೇ ಅಲ್ಲ. ಎಲ್ಲಕ್ಕೂ ಶ್ರೀಹರಿಯು ಕರ್ತಾ ಎನ್ನುವುದು ಪ್ರಮಾಣಸಿದ್ಧ.

**प्रकाशः** – तत्र बीजयुक्तं विषयमाह – **हृदीति** ।। आत्मप्रश्नं प्रति परिहारवाक्यस्थमित्यर्थः । वाक्यान्तरस्थं तु विषय इत्येतन्निरसिष्यत इति भावः । ततः कतम इति वाक्यात् ।। **आत्मेति** ।। कतम इत्यात्मप्रश्नस्य यदुत्तरं तदुपसंहारस्थमित्यर्थः ।।

ಕಾರಣದಿಂದ ಕೂಡಿರುವ ವಿಷ್ಣುವಾಕ್ಯವನ್ನು 'ಹೃದ್ಯಂತರ್ಜ್ಯೋತಿಃ' ಎಂಬುದಾಗಿ ಹೇಳಿದ್ದಾರೆ. ಆತ್ಮವಿಷಯಕವಾದ ಪ್ರಶ್ನೆಗೆ ಪರಿಹಾರ ನೀಡುವ ವಾಕ್ಯದಲ್ಲಿರುವ 'ಜ್ಯೋತಿಃ' ಶಬ್ದವು ಎಂದರ್ಥ. 'ಆದಿತ್ಯೇನೈವ ಜ್ಯೋತಿಷಾऽऽಸ್ತೇ' ಇತ್ಯಾದಿ ವಾಕ್ಯಗಳಲ್ಲಿರುವ 'ಜ್ಯೋತಿಃ' ಎಂಬ ಶಬ್ದವು ಈ ಅಧಿಕರಣದ ವಿಷಯವಲ್ಲವೆಂಬುದನ್ನು ಮುಂದೆ ನಿರಾಕರಿಸುತ್ತಾರೆ. 'ತತಃ' ಎಂದರೆ 'ಕತಮ ಆತ್ಮಾ' ಎಂಬ ವಾಕ್ಯದ ಎಂದರ್ಥ. 'ಆತ್ಮೈವಾಸ್ಯ ಜ್ಯೋತಿಃ' ಎಂಬುದು 'ಕತಮ ಆತ್ಮಾ' ಎಂಬ ಆತ್ಮವಿಷಯಕವಾದ ಪ್ರಶ್ನೆಗೆ ಉತ್ತರ ನೀಡುವ ಉಪಸಂಹಾರವಾಕ್ಯವಾಗಿದೆ ಎಂದರ್ಥ.

**प्रकाशः** – **ज्ञानेति** ।। ज्ञानकारणप्रश्नोपक्रमस्थेत्यर्थः ।। **उपक्रमेति** ।। उपक्रमे प्रकृतं यज्जीवरूपं तत्परत्वार्थमित्यर्थः ।

ಪರಿಪೂರ್ಣಚಂದ್ರಿಕಾ

'ಜ್ಞಾನಪ್ರಶ್ನ' ಎಂದರೆ ಜ್ಞಾನಕಾರಣದ ಬಗ್ಗೆ ಪ್ರಶ್ನಿಸುವ ಉಪಕ್ರಮದಲ್ಲಿರುವ ಎಂದರ್ಥ. 'ಉಪಕ್ರಮ' ಎಂದರೆ ಪ್ರಾರಂಭದಲ್ಲಿ ಪ್ರಕೃತನಾದ ಯಾವ ಜೀವನಿದ್ದಾನೋ, ಅವನನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಎಂದರ್ಥ.

**प्रकाशः** – एतेन चिन्ताद्वयं सूचितम् । भिन्नार्था इति चिन्तानन्तरं किमुपसंहारस्थाः पुरुषादिशब्दा उपक्रमप्रकृतपरा उत ब्रह्मपराः । तदर्थं प्रकृतपरत्वानुग्रहाय मुख्यार्थत्याग उत मुख्यार्थानुग्रहाय प्रकृतपरत्वत्याग इति चिन्ताचतुष्टयस्य फलफलिभावमस्फुटत्वाद्व्यनक्ति ।। **यद्याद्य इति** ।।

ಹೀಗೆ ಹೇಳಿದ್ದರಿಂದ ಮತ್ತೆರಡು ಸಂಶಯಗಳನ್ನು ಸೂಚಿಸಿದಂತಾಯಿತು. 'ಭಿನ್ನಾರ್ಥಾಃ' ಎಂಬ ಸಂಶಯದ ನಂತರ ಉಪಸಂಹಾರದಲ್ಲಿರುವ ಪುರುಷಾದಿಶಬ್ದಗಳಿಗೆ ಉಪಕ್ರಮ ಪರತ್ವವನ್ನು ಹಾಗೂ ಪ್ರಕೃತ ಪರತ್ವವನ್ನು ಒಪ್ಪಬೇಕೊ, ಅಥವಾ ಬ್ರಹ್ಮಪರತ್ವವನ್ನು ಒಪ್ಪಬೇಕೋ? ಎಂಬ ಸಂಶಯವನ್ನು ಅದಕ್ಕಾಗಿ, ಪ್ರಕೃತಪರತ್ವವನ್ನು ವಿವಕ್ಷಿಸಲು ಮುಖ್ಯಾರ್ಥವನ್ನೋ ತ್ಯಾಗಮಾಡಬೇಕೋ, ಅಥವಾ ಮುಖ್ಯಾರ್ಥವನ್ನು ಸ್ವೀಕರಿಸಲು ಪ್ರಕೃತಪರತ್ವವನ್ನು ತ್ಯಾಗಮಾಡಬೇಕೋ ? ಎಂಬ ಸಂಶಯವು ಪರಿಹಾರವಾಗಬೇಕು.

ಈ ನಾಲ್ಕು ಸಂಶಯಕೋಟಿಗಳ ಫಲಫಲಿಭಾವವು ಅಸ್ಪಷ್ಟವಾದ್ದರಿಂದ ಸ್ವತಃ ಗ್ರಂಥಕಾರರೇ 'ಯದ್ಯಾದ್ಯಃ' ಇತ್ಯಾದಿಯಾಗಿ ಹೇಳಿದ್ದಾರೆ.

**प्रकाशः** – उपक्रमोपसंहारयोरेकार्थत्वपक्ष इत्यर्थः । ननूपक्रमादिवशादवगतमप्येकवाक्यत्वं श्रुतिबलाद्भंजनीयमित्यत आह – **जायमानत्वेति** ।। तत्तु निरवकाशमिति भावः ।

'ಯದ್ಯಾದ್ಯಃ' ಎಂದರೆ ಉಪಕ್ರಮ ಹಾಗೂ ಉಪಸಂಹಾರಗಳಿಗೆ ಏಕಾರ್ಥತ್ವವನ್ನು ಒಪ್ಪಿದ ಪಕ್ಷದಲ್ಲಿ ಎಂದರ್ಥ. ಉಪಕ್ರಮದ ಬಲದಿಂದ, ಏಕವಾಕ್ಯತ್ವವು ತಿಳಿದರೂ ಕೂಡ ಶ್ರುತಿಬಲದಿಂದ ಅದನ್ನು ಬಿಡಬೇಕಲ್ಲವೇ? ಎಂಬ ಪ್ರಶ್ನೆಗೆ 'ಜಾಯಮಾನತ್ವ' ಎಂದು ಉತ್ತರಿಸಿದ್ದಾರೆ. ಜಾಯಮಾನತ್ವಲಿಂಗವಾದರೂ ನಿರವಕಾಶವಾಗಿದೆಯೆಂದು ತಿಳಿಯಬೇಕು.

**प्रकाशः** – ननु वाक्येन कथं लिङ्गबाध इत्यतस्सावकाशत्वादिति भावेनाह – **अन्तर्भावितेति** ।। वैपरीत्यं किं न स्यादित्यत आह – **ज्योतिरिति** ।।

ವಾಕ್ಯದಿಂದ ಲಿಂಗವು ಹೇಗೆ ಬಾಧವಾಗುತ್ತದೆ ? ಎಂಬ ಪ್ರಶ್ನೆಗೆ ಸಾವಕಾಶವಾದ್ದರಿಂದ ಎಂದು ಉತ್ತರಿಸುತ್ತಿದ್ದಾರೆ 'ಅಂತರ್ಭಾವಿತ' ಇತ್ಯಾದಿಯಾಗಿ. ವಿಪರೀತವಾಗಿ ಏಕೆ ಹೇಳಬಾರದು ? ಎಂಬ ಪ್ರಶ್ನೆಗೆ 'ಜ್ಯೋತಿಃ' ಎಂದು ಉತ್ತರಿಸಿದ್ದಾರೆ.




'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂಬ ಬೃಹದಾರಣ್ಯಕದಲ್ಲಿರುವ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಜನಕಮಹಾರಾಜರು ಯಾಜ್ಞವಲ್ಕ್ಯಮಹರ್ಷಿಗಳನ್ನು ಕುರಿತು ಪ್ರಶ್ನಿಸುತ್ತಾರೆ. ಜೀವನಿಗೆ ಜ್ಞಾನಸಾಧನವಾದದ್ದು ಯಾವುದು ಎಂದು? ಅದಕ್ಕೆ ಯಾಜ್ಞವಲ್ಕ್ಯರು ಉತ್ತರಿಸುವಾಗ ಆದಿತ್ಯ, ಚಂದ್ರ ಅಗ್ನಿ ಮತ್ತು ಮಾತು ಇವುಗಳಲ್ಲಿ ಹಿಂದಿನದ್ದು ಅಸ್ತಮಯವಾದಾಗ ಮುಂದಿನವುಗಳು ಜಾಗ್ರತ್ಕಾಲದಲ್ಲಿ ಜೀವನಿಗೆ ಜ್ಞಾನಸಾಧನಗಳಾಗುತ್ತವೆ ಎನ್ನುತ್ತಾರೆ. ಆದರೆ ಸುಷುಪ್ತಿ ಮತ್ತು ಸ್ವಪ್ನಾವಸ್ಥೆಗಳಲ್ಲಿ ಆದಿತ್ಯ, ಚಂದ್ರ, ಅಗ್ನಿ, ವಾಕ್ ನಾಲ್ಕೂ ಕೂಡ ಅಸ್ತವಾಗುವುದರಿಂದ ಆ ಸಂದರ್ಭದಲ್ಲಿ ಜೀವನಿಗೆ ಜ್ಞಾನಸಾಧನವಾದದ್ದು ಯಾವುದು? ಎಂದು ಪುನಃ ಜನಕರಾಜರು ಯಾಜ್ಞವಲ್ಕ್ಯಮಹರ್ಷಿಗಳನ್ನು ಪ್ರಶ್ನಿಸುತ್ತಾರೆ. ಆವಾಗ ಯಾಜ್ಞವಲ್ಕ್ಯರು ಆತ್ಮನೇ ಜ್ಞಾನಸಾಧನನೆಂದು ಉತ್ತರಿಸುತ್ತಾರೆ. ಪುನಃ ಜನಕರಾಜರು ಆತ್ಮನೆಂದರೆ ಯಾರು? ಎಂದು ಪ್ರಶ್ನಿಸಿದಾಗ ಯಾಜ್ಞವಲ್ಕ್ಯರು 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಉತ್ತರಿಸುತ್ತಾರೆ. ಅಂದರೆ ಯಾವ ಆತ್ಮನಿದ್ದಾನೋ, ಅವನು ವಿಜ್ಞಾನಮಯನಾಗಿದ್ದಾನೆ. ಇಂದ್ರಿಯ ಹಾಗೂ ಮನಸ್ಸುಗಳಿಗೆ ನಿಯಾಮಕನಾಗಿದ್ದಾನೆ. ಹೃದಯಗುಹೆಯಲ್ಲಿ ಸ್ಥಿತನಾಗಿದ್ದಾನೆ. ಇವನು ಪೂರ್ಣಷಡ್ಗುಣನಾದ ಚೇತನನಾಗಿದ್ದಾನೆಂದು ಹೇಳುತ್ತಾರೆ. ಈ ವಾಕ್ಯವೇ ಅಧಿಕರಣದ ವಿಷಯವಾಗಿದೆ.

ಇಲ್ಲಿರುವ ಆತ್ಮಶಬ್ದಕ್ಕೆ ಜೀವನೆಂದರ್ಥವೋ, ಅಥವಾ ಬ್ರಹ್ಮನೆಂದರ್ಥವೋ? ಉಪಕ್ರಮ ಹಾಗೂ ಉಪಸಂಹಾರಗಳಲ್ಲಿ ಜೀವನ ಬಗ್ಗೆ ವಿಚಾರ ಬಂದಿರುವುದರಿಂದ ಆತ್ಮಶಬ್ದವು ಜೀವಪರವೇ ಆಗುತ್ತದೆ. ಜಾಯಮಾನತ್ವ ಮೊದಲಾದ ಲಿಂಗಗಳು ಕೇಳಿಸುತ್ತಿರುವುದರಿಂದ 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಶಬ್ದದಿಂದಲೂ ಜೀವನೇ ಪ್ರತಿಪಾದ್ಯನಾಗುತ್ತಾನೆಂಬುದು ಈ ಅಧಿಕರಣದ ಪೂರ್ವಪಕ್ಷ.

ಆತ್ಮಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನು. ಏಕೆಂದರೆ ಉಪಸಂಹಾರದಲ್ಲಿ ಪರಮಾತ್ಮನ ಬಗ್ಗೆ ಪ್ರಸಕ್ತಿಯಿರುವುದರಿಂದ ಆತ್ಮಶಬ್ದಕ್ಕೆ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನೆಂದು ಈಗಾಗಲೇ ಸಿದ್ಧವಾಗಿರುವುದರಿಂದ ಬ್ರಹ್ಮಪರವಾದ ವಾಕ್ಯಗಳ ಮಧ್ಯದಲ್ಲಿರುವ 'ಜಾಯಮಾನತ್ವ' ಎಂಬ ಲಿಂಗವನ್ನು ಪರಮಾತ್ಮನಲ್ಲಿ ಸಾವಕಾಶಮಾಡಬಹುದಾದ್ದರಿಂದ 'ಹೃದ್ಯಂತರ್ಜ್ಯೋತಿಃ' ಎಂಬ ಲ್ಲಿರುವ ಜ್ಯೋತಿಶಬ್ದದಿಂದ ಮುಖ್ಯವಾಗಿ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆಂಬುದು ಈ ಅಧಿಕರಣದ ಸಿದ್ಧಾಂತ.



## तात्पर्यचन्द्रिका

**पूर्वपक्षस्तु ।। पूर्वत्र यथा निरवकाशलिङ्गबलाद्वज्रश्रुतेर्लोकप्रसिद्धार्थत्यागस्तथेहापि "स समानःसन्नुभौ लोकावनुसञ्चरति । सवा अयं पुरुषो जायमानः शरीरमभिसम्पद्यमानः पाप्मभिः संसृज्यते । स उत्क्रामन्म्रियमाणः पाप्मोविजहाति" इत्यादि-जीवलिङ्गबलादेव "विष्णुरेवज्योतिः" इत्यादिश्रुतिप्रसिद्धार्थत्यागः ।**

ಅನುವಾದ - ಅಧಿಕರಣದ ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ನಿರವಕಾಶವಾದ ಲಿಂಗದ ಬಲದಿಂದ ವಜ್ರಶ್ರುತಿಗೆ ಇಂದ್ರಾಯುಧವೆಂಬ ಲೋಕಪ್ರಸಿದ್ಧಾರ್ಥವನ್ನು ಬಿಡಬೇಕೆಂದು ಸಿದ್ಧಾಂತ ಮಾಡಲಾಯಿತು. ಹಾಗಾದರೆ 'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ । ಸವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ । ಉತ್ಕ್ರಾಮನ್‌ಮ್ರಿಯಮಾಣಃ ಪಾಪ್ಮೋವಿಜಹಾತಿ' ಎಂಬಲ್ಲಿ ಉಭಯಲೋಕ ಸಂಚಾರ, ಮ್ರಿಯಮಾಣತ್ವ, ಜಾಯಮಾನತ್ವ ಮೊದಲಾದ ನಿರವಕಾಶವಾದ ಅನೇಕ ಜೀವನಲಿಂಗಗಳು ಶ್ರುತವಾದ್ದರಿಂದ, 'ವಿಷ್ಣುರೇವ ಜ್ಯೋತಿಃ' ಇತ್ಯಾದಿ ಶ್ರುತಿಪ್ರಸಿದ್ಧವಾದ 'ಜ್ಯೋತಿಃ' ಶಬ್ದದ ಅರ್ಥವನ್ನು ಬಿಟ್ಟು, ಜೀವನೇ 'ಜ್ಯೋತಿಃ' ಶಬ್ದದ ಅರ್ಥನಾಗಿದ್ದಾನೆಂದು ಹೇಳಬೇಕು.

**यद्यपि जायमानत्वं द्युभ्वाद्यधिकरणन्यायेन उत्क्रमणं च भूमाधिकरणन्यायेन सावकाशम् ।**

ಪ್ರಶ್ನೆ - ದ್ಯುಭ್ವಾದ್ಯಧಿಕರಣದಲ್ಲಿ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದಾಗಿದೆ. ಭೂಮಾಧಿಕರಣದಲ್ಲಿ ಉತ್ಕ್ರಮಣಲಿಂಗವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಿದ್ದಾಗಿದೆಯಲ್ಲವೇ?

**तथापि म्रियमाणत्वादिकं निरवकाशम् । भाष्य उभयलोकसंचरणोक्तिस्तु कर्माधीनलोकद्वयसञ्चरणं न ब्रह्मणि युक्तमित्यभिप्राया ।**

ಆದರೆ ಮ್ರಿಯಮಾಣತ್ವಾದಿಗಳನ್ನು ಸಾವಕಾಶ ಮಾಡಿಲ್ಲ. ನಿರವಕಾಶವಾದ ಈ ಮ್ರಿಯಮಾಣತ್ವದ ಆಧಾರದಿಂದ ಜಾಯಮಾನತ್ವಾದಿಗಳೂ ಕೂಡ ಜೀವಪರವೇ ಆಗುತ್ತವೆಂದು ಸಮರ್ಥಿಸಬೇಕು. ಭಾಷ್ಯದಲ್ಲಿ ಉಭಯಲೋಕಸಂಚಾರವನ್ನು ಹೇಳಿದ್ದಾರಲ್ಲವೇ? ಎಂದರೆ ಅದು ಕರ್ಮಾಧೀನವಾದ ಲೋಕದ್ವಯದ ಸಂಚಾರಾಭಿಪ್ರಾಯದಿಂದ ಹಾಗೆ ಹೇಳಿದ್ದಾರೆ. ಕರ್ಮಾಧೀನವಾದ ಲೋಕದ್ವಯವಾದ ಸಂಚಾರವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವೆಂದು ಅಭಿಪ್ರಾಯ ಹೊರತು, ಸಂಚಾರವೇ

ಅಯುಕ್ತವೆಂಬ ಅಭಿಪ್ರಾಯದಿಂದಲ್ಲ. ಹಾಗಾಗಿದ್ದಲ್ಲಿ ಉಭಯಲೋಕಸಂಚಾರವೆಂಬ ಲಿಂಗವೂ ಕೂಡ ನಿರವಕಾಶವಾಗುತ್ತಿತ್ತು.

**नतु सञ्चरणमेवायुक्तमित्यभिप्राया । अत एवोक्तं टीकायां ''जीवस्य हि कर्मवशादुभयलोकसंचरणं युक्तम्'' इति ।**

ಆದ್ದರಿಂದಲೇ ಟೀಕೆಯಲ್ಲಿ 'ಜೀವಸ್ಯ ಹಿ ಕರ್ಮವಶಾದುಭಯಲೋಕಸಂಚರಣಂ ಯುಕ್ತಮ್' ಜೀವನಿಗೆ ಕರ್ಮಾಧೀನವಾದ ಉಭಯಲೋಕಸಂಚಾರವು ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

**किञ्च ''किंज्योतिरयंपुरुष'' इति प्रश्ने ''आदित्यज्योतिरादित्येनैवायं ज्योतिषाऽऽस्ते'' इत्यादिना यस्य जागरण आदित्यादिज्योतिष्ट्वमुक्तं स तावज्जीवः ।**

ಮತ್ತು 'ಕಿಂಜ್ಯೋತಿರಯಂಪುರುಷಃ' ಎಂದು ಪ್ರಶ್ನಿಸಿದಾಗ, 'ಆದಿತ್ಯಜ್ಯೋತಿರಾದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿ ವಾಕ್ಯಗಳಿಂದ ಉತ್ತರಿಸಿದ್ದಾರೆ. ಯಾವಾತನು ಜಾಗ್ರತನಾಗಿದ್ದಾಗ ಆದಿತ್ಯಾದಿಗಳನ್ನೇ ಜ್ಯೋತಿಯಾಗಿ ಉಳ್ಳವನೋ ಎಂದು ಹೇಳಿದ್ದರಿಂದ ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

**नह्यादित्यादिज्योतिष्ट्वं विष्णोर्युक्तम् । ''न तत्र सूर्यो भाति'' इत्यादेः । तदुक्तं न्यायविवरणे ''आदित्यादिज्योतिष्ट्वमुभयलोकसञ्चरणमादित्येनैवायं ज्योतिषास्ते इत्यवधारणमित्यादीनां परमात्मन्यवकाशाभाव'' इति ।**

ಆದಿತ್ಯಾದಿಗಳಿಂದ ವಿಷ್ಣು ಪ್ರಕಾಶಿತನಾಗಲು ಸಾಧ್ಯವಿಲ್ಲ. ಏಕೆಂದರೆ 'ನ ತತ್ರ ಸೂರ್ಯೋಭಾತಿ' ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ಪ್ರಕಾಶಕರಲ್ಲವೆಂದು ಹೇಳುತ್ತಿದೆ. ಇದನ್ನೇ ನ್ಯಾಯವಿವರಣದಲ್ಲಿ 'ಆದಿತ್ಯಾದಿಜ್ಯೋತಿಷ್ಟ್ವಮುಭಯಲೋಕಸಂಚರಣಮಾದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ ಇತ್ಯವಧಾರಣಮಿತ್ಯಾದೀನಾಂ ಪರಮಾತ್ಮನ್ಯವಕಾಶಾಭಾವಃ' ಆದಿತ್ಯಾದಿಗಳೇ ಜ್ಯೋತಿಯಾಗಿರುವಿಕೆಯು, ಉಭಯಲೋಕಸಂಚಾರವು 'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣವು ಪರಮಾತ್ಮನಲ್ಲಿ ಸರ್ವಥಾ ಬರುವುದಿಲ್ಲ ಎಂದು ಹೇಳಿದ್ದಾರೆ.

**तस्यैव च जीवस्य ''आत्मैवास्य ज्योतिः'' इति वाक्ये स्वाप्नादौ स्वप्रकाशत्वरूपमात्मज्योतिष्ट्वमुक्तम् ।**

ಇಂತಹ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿ ಸ್ವಪ್ನ, ಸುಷುಪ್ತಿ, ಪ್ರಳಯಕಾಲಗಳಲ್ಲಿ ಸ್ವಪ್ರಕಾಶರೂಪವಾದ ಆತ್ಮಜ್ಯೋತಿಷ್ಟ್ವವು ಹೇಳಲ್ಪಟ್ಟಿದೆ. ಅಂದರೆ ಸ್ವಪ್ನಾದ್ಯವಸ್ಥೆಗಳಲ್ಲಿ ಜೀವನು ತನ್ನಿಂದಲೇ ಪ್ರಕಾಶಿತನಾಗಿದ್ದಾನೆ.

**अस्येतीदंशब्दस्य प्रकृतजीवपरत्वात् । आत्मशब्दस्य च स्वरूपार्थत्वात् । ज्योतिश्शब्दस्य च ज्ञानार्थत्वात् ।**

ಏಕೆಂದರೆ 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ 'ಅಸ್ಯ' ಎಂಬುದಾಗಿ 'ಇದಂ' ಶಬ್ದದಿಂದ ಜೀವನೇ ಪ್ರಕೃತನಾಗಿದ್ದಾನೆ. ಆತ್ಮಶಬ್ದವು ಸ್ವರೂಪ ಎಂಬರ್ಥದಲ್ಲಿದೆ. 'ಜ್ಯೋತಿಃ' ಎಂಬ ಶಬ್ದವು ಜ್ಞಾನ ಎಂಬರ್ಥವನ್ನು ಹೇಳುತ್ತಿದೆ.

**अस्मिंश्चात्मनि ''कतम आत्मा'' इति पृष्टे उच्यमानमिदं ज्योतिर्जीव एव । अन्यथा प्रश्नोत्तरयोर्वैयधिकरण्यापातात् ।**

ಇಂತಹ ಆತ್ಮನ ವಿಷಯದಲ್ಲಿ 'ಕತಮ ಆತ್ಮಾ' ಎಂದು ಪ್ರಶ್ನಿಸಿದಾಗ, ಉತ್ತರವಾಕ್ಯದಲ್ಲಿರುವ ಜ್ಯೋತಿಯು ಜೀವನೇ ಆಗುತ್ತಾನೆ. ಜೀವನಾಗದೇ ಬ್ರಹ್ಮನಾಗುವುದಾದಲ್ಲಿ, ಪ್ರಶ್ನೆಯು ಜೀವವಿಷಯಕವು, ಉತ್ತರವು ಬ್ರಹ್ಮವಿಷಯಕವೆಂದಾಗಿ, ವೈಯಧಿಕರಣ್ಯದೋಷವು ಬರಬೇಕಾದೀತು.

**ननु यस्यादित्यादिज्योतिष्ट्वमुक्तं सजीव एवास्तु । आत्मैवास्येति वाक्य इदंशब्दोऽपि जीवपर एवास्तु । आत्मशब्दस्तु ''गौणश्चेन्नात्मशब्दात्'' इत्यादिन्यायेन परमात्मपरः ।**

ಆಕ್ಷೇಪ - 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ ಆದಿತ್ಯಾದಿಗಳನ್ನೇ ಜ್ಯೋತಿಯಾಗಿವುಳ್ಳ ಯಾವ ವ್ಯಕ್ತಿಯು ಪ್ರತಿಪಾದ್ಯನಾಗಿದ್ದಾನೋ, ಅವನು ಜೀವನೇ ಆಗಲಿ. 'ಆತ್ಮೈವಾಸ್ಯೇಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಇದಂ' ಶಬ್ದವೂ ಕೂಡ ಜೀವಪರವೇ ಆಗಲಿ. ಆದರೆ ಅಲ್ಲಿರುವ ಆತ್ಮಶಬ್ದವೂ ಸಹ 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಪರಮಾತ್ಮಪರವಾಗಲಿ.

**ज्योतिश्शब्दश्च ''वाचैवायं ज्योतिषाऽऽस्ते'' इत्यादिपूर्ववाक्य इव ज्ञानहेतुपरः । तथाचास्य जीवस्य परमात्माज्ञानहेतुरित्युक्ते स एव परमात्मा ''कतम आत्मा'' इति पृष्ट इति न वैयधिकरण्यम् ।**

'ಜ್ಯೋತಿಃ' ಶಬ್ದವೂ ಕೂಡ 'ವಾಚೈವಾಯಂ ಜ್ಯೋತಿಷಾಸ್ತೇ' ಎಂಬ ಹಿಂದಿನ ವಾಕ್ಯದಿಂದ ಜ್ಞಾನಸಾಧನ ಎಂಬರ್ಥವನ್ನೇ ಹೇಳುತ್ತಿದೆ. ಆದ್ದರಿಂದ ಈ ಜೀವನಿಗೆ ಪರಮಾತ್ಮನು ಜ್ಞಾನಹೇತುವಾಗಿದ್ದಾನೆ ಎಂಬುದಾಗಿ ಶ್ರುತಿಗೆ ಅರ್ಥ. ಪ್ರಕೃತನಾದ ಪರಮಾತ್ಮನ ಬಗ್ಗೆ 'ಕತಮ ಆತ್ಮಾ' ಎಂದು ಜನಕರಾಜರು ಪ್ರಶ್ನಿಸಿದ್ದಾರೆ. ಆದಕ್ಕನುಗುಣವಾಗಿ ಪರಮಾತ್ಮನೇ 'ಜ್ಯೋತಿಃ' ಎನಿಸಿದ್ದಾನೆಂದು ಯಾಜ್ಞವಲ್ಕ್ಯರು ಉತ್ತರಿಸಿದ್ದಾರೆ. ಹೀಗಿರುವಾಗ ಪ್ರಶ್ನೆ ಹಾಗೂ ಉತ್ತರಗಳಿಗೆ ವೈಯಧಿಕರಣ್ಯದೋಷವು ಬರಲು ಹೇಗೆ ಸಾಧ್ಯ ?

ಅಯುಕ್ತವೆಂಬ ಅಭಿಪ್ರಾಯದಿಂದಲ್ಲ. ಹಾಗಾಗಿದ್ದಲ್ಲಿ ಉಭಯಲೋಕಸಂಚಾರವೆಂಬ ಲಿಂಗವೂ ಕೂಡ ನಿರವಕಾಶವಾಗುತ್ತಿತ್ತು.

**नतु सञ्चरणमेवायुक्तमित्यभिप्राया । अत एवोक्तं टीकायां "जीवस्य हि कर्मवशादुभयलोकसंचरणं युक्तम्" इति ।**

ಆದ್ದರಿಂದಲೇ ಟೀಕೆಯಲ್ಲಿ 'ಜೀವಸ್ಯ ಹಿ ಕರ್ಮವಶಾದುಭಯಲೋಕಸಂಚರಣಂ ಯುಕ್ತಮ್' ಜೀವನಿಗೆ ಕರ್ಮಾಧೀನವಾದ ಉಭಯಲೋಕಸಂಚಾರವು ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

**किञ्च "किंज्योतिरयंपुरुष" इति प्रश्ने "आदित्यज्योतिरादित्येनैवायं ज्योतिषाऽऽस्ते" इत्यादिना यस्य जागरण आदित्यादिज्योतिष्ट्वमुक्तं स तावज्जीवः ।**

ಮತ್ತು 'ಕಿಂಜ್ಯೋತಿರಯಂಪುರುಷಃ' ಎಂದು ಪ್ರಶ್ನಿಸಿದಾಗ, 'ಆದಿತ್ಯಜ್ಯೋತಿರಾದಿತ್ಯೇನೈವಾಯಂ ಜ್ಯೋತಿಷಾऽऽಸ್ತೇ' ಇತ್ಯಾದಿ ವಾಕ್ಯಗಳಿಂದ ಉತ್ತರಿಸಿದ್ದಾರೆ. ಯಾವಾತನು ಜಾಗ್ರತನಾಗಿದ್ದಾಗ ಆದಿತ್ಯಾದಿಗಳನ್ನೇ ಜ್ಯೋತಿಯಾಗಿ ಉಳ್ಳವನೋ ಎಂದು ಹೇಳಿದ್ದರಿಂದ ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

**नह्यादित्यादिज्योतिष्ट्वं विष्णोर्युक्तम् । "न तत्र सूर्यो भाति" इत्यादेः । तदुक्तं न्यायविवरणे "आदित्यादिज्योतिष्ट्वमुभयलोकसञ्चरणमादित्येनैवायं ज्योतिषास्ते इत्यवधारणमित्यादीनां परमात्मन्यवकाशाभाव" इति ।**

ಆದಿತ್ಯಾದಿಗಳಿಂದ ವಿಷ್ಣು ಪ್ರಕಾಶಿತನಾಗಲು ಸಾಧ್ಯವಿಲ್ಲ. ಏಕೆಂದರೆ 'ನ ತತ್ರ ಸೂರ್ಯೋಭಾತಿ' ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ಪ್ರಕಾಶಕರಲ್ಲವೆಂದು ಹೇಳುತ್ತಿದೆ. ಇದನ್ನೇ ನ್ಯಾಯವಿವರಣದಲ್ಲಿ 'ಆದಿತ್ಯಾದಿಜ್ಯೋತಿಷ್ಟ್ವಮುಭಯಲೋಕಸಂಚರಣಮಾದಿತ್ಯೇನೈವಾಯಂ ಜ್ಯೋತಿಷಾऽऽಸ್ತೇ ಇತ್ಯವಧಾರಣಮಿತ್ಯಾದೀನಾಂ ಪರಮಾತ್ಮನ್ಯವಕಾಶಾಭಾವಃ' ಆದಿತ್ಯಾದಿಗಳೇ ಜ್ಯೋತಿಯಾಗಿರುವಿಕೆಯು, ಉಭಯಲೋಕಸಂಚಾರವು 'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣವು ಪರಮಾತ್ಮನಲ್ಲಿ ಸರ್ವಥಾ ಬರುವುದಿಲ್ಲ ಎಂದು ಹೇಳಿದ್ದಾರೆ.

**तस्यैव च जीवस्य "आत्मैवास्य ज्योतिः" इति वाक्ये स्वाप्नादौ स्वप्रकाशत्वरूपमात्मज्योतिष्ट्वमुक्तम् ।**

ಇಂತಹ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿ ಸ್ವಪ್ನ, ಸುಷುಪ್ತಿ, ಪ್ರಳಯಕಾಲಗಳಲ್ಲಿ ಸ್ವಪ್ರಕಾಶರೂಪವಾದ ಆತ್ಮಜ್ಯೋತಿಷ್ಟ್ವವು ಹೇಳಲ್ಪಟ್ಟಿದೆ. ಅಂದರೆ ಸ್ವಪ್ನಾದ್ಯವಸ್ಥೆಗಳಲ್ಲಿ ಜೀವನು ತನ್ನಿಂದಲೇ ಪ್ರಕಾಶಿತನಾಗಿದ್ದಾನೆ.

**अस्येतीदंशब्दस्य प्रकृतजीवपरत्वात् । आत्मशब्दस्य च स्वरूपार्थत्वात् । ज्योतिश्शब्दस्य च ज्ञानार्थत्वात् ।**

ಏಕೆಂದರೆ 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ 'ಅಸ್ಯ' ಎಂಬುದಾಗಿ 'ಇದಂ' ಶಬ್ದದಿಂದ ಜೀವನೇ ಪ್ರಕೃತನಾಗಿದ್ದಾನೆ. ಆತ್ಮಶಬ್ದವು ಸ್ವರೂಪ ಎಂಬರ್ಥದಲ್ಲಿದೆ. 'ಜ್ಯೋತಿಃ' ಎಂಬ ಶಬ್ದವು ಜ್ಞಾನ ಎಂಬರ್ಥವನ್ನು ಹೇಳುತ್ತಿದೆ.

**अस्मिंश्चात्मनि ''कतम आत्मा'' इति पृष्टे उच्यमानमिदं ज्योतिर्जीव एव । अन्यथा प्रश्नोत्तरयोर्वैयधिकरण्यापातात् ।**

ಇಂತಹ ಆತ್ಮನ ವಿಷಯದಲ್ಲಿ 'ಕತಮ ಆತ್ಮಾ' ಎಂದು ಪ್ರಶ್ನಿಸಿದಾಗ, ಉತ್ತರವಾಕ್ಯದಲ್ಲಿರುವ ಜ್ಯೋತಿಯು ಜೀವನೇ ಆಗುತ್ತಾನೆ. ಜೀವನಾಗದೇ ಬ್ರಹ್ಮನಾಗುವುದಾದಲ್ಲಿ, ಪ್ರಶ್ನೆಯು ಜೀವವಿಷಯಕವು, ಉತ್ತರವು ಬ್ರಹ್ಮವಿಷಯಕವೆಂದಾಗಿ, ವೈಯಧಿಕರಣ್ಯದೋಷವು ಬರಬೇಕಾದೀತು.

**ननु यस्यादित्यादिज्योतिष्ट्वमुक्तं सजीव एवास्तु । आत्मैवास्येति वाक्य इदंशब्दोऽपि जीवपर एवास्तु । आत्मशब्दस्तु ''गौणश्चेन्नात्मशब्दात्'' इत्यादिन्यायेन परमात्मपरः ।**

ಆಕ್ಷೇಪ - 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ ಆದಿತ್ಯಾದಿಗಳನ್ನೇ ಜ್ಯೋತಿಯಾಗಿವುಳ್ಳ ಯಾವ ವ್ಯಕ್ತಿಯು ಪ್ರತಿಪಾದ್ಯನಾಗಿದ್ದಾನೋ, ಅವನು ಜೀವನೇ ಆಗಲಿ. 'ಆತ್ಮೈವಾಸ್ಯೇಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಇದಂ' ಶಬ್ದವೂ ಕೂಡ ಜೀವಪರವೇ ಆಗಲಿ. ಆದರೆ ಅಲ್ಲಿರುವ ಆತ್ಮಶಬ್ದವೂ ಸಹ 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಪರಮಾತ್ಮಪರವಾಗಲಿ.

**ज्योतिश्शब्दश्च ''वाचैवायं ज्योतिषाऽऽस्ते'' इत्यादिपूर्ववाक्य इव ज्ञानहेतुपरः । तथाचास्य जीवस्य परमात्माज्ञानहेतुरित्युक्ते स एव परमात्मा ''कतम आत्मा'' इति पृष्ट इति न वैयधिकरण्यम् ।**

'ಜ್ಯೋತಿಃ' ಶಬ್ದವೂ ಕೂಡ 'ವಾಚೈವಾಯಂ ಜ್ಯೋತಿಷಾಸ್ತೇ' ಎಂಬ ಹಿಂದಿನ ವಾಕ್ಯದಿಂದ ಜ್ಞಾನಸಾಧನ ಎಂಬರ್ಥವನ್ನೇ ಹೇಳುತ್ತಿದೆ. ಆದ್ದರಿಂದ ಈ ಜೀವನಿಗೆ ಪರಮಾತ್ಮನು ಜ್ಞಾನಹೇತು-ವಾಗಿದ್ದಾನೆ ಎಂಬುದಾಗಿ ಶ್ರುತಿಗೆ ಅರ್ಥ. ಪ್ರಕೃತನಾದ ಪರಮಾತ್ಮನ ಬಗ್ಗೆ 'ಕತಮ ಆತ್ಮಾ' ಎಂದು ಜನಕರಾಜರು ಪ್ರಶ್ನಿಸಿದ್ದಾರೆ. ಅದಕ್ಕನುಗುಣವಾಗಿ ಪರಮಾತ್ಮನೇ 'ಜ್ಯೋತಿಃ' ಎನಿಸಿದ್ದಾನೆಂದು ಯಾಜ್ಞವಲ್ಕ್ಯರು ಉತ್ತರಿಸಿದ್ದಾರೆ. ಹೀಗಿರುವಾಗ ಪ್ರಶ್ನೆ ಹಾಗೂ ಉತ್ತರಗಳಿಗೆ ವೈಯಧಿಕರಣ್ಯದೋಷವು ಬರಲು ಹೇಗೆ ಸಾಧ್ಯ ?

**नच वाच्यं ब्रह्मणो जागरणेऽपि जीवज्ञानहेतुत्वेन तदादित्येनैवेत्याद्यवधारणं, स्वप्नादौ विशिष्य ब्रह्मणो ज्ञानहेतुत्वोक्तिश्चायुक्तेति । जीवपक्षेऽपि साम्यात् । जीवस्यापि स्वगतज्ञानहेतुत्वेनावधारणायोगात् ।**

ಇನ್ನು ಬ್ರಹ್ಮನು ಸ್ವಪ್ನಾದಿಗಳಲ್ಲಷ್ಟೇ ಅಲ್ಲದೇ ಜಾಗ್ರದವಸ್ಥೆಯಲ್ಲಿಯೂ ಕೂಡ ಜೀವನ ಜ್ಞಾನಕ್ಕೆ ಕಾರಣನಾಗಿದ್ದಾನೆ. ಹೀಗಿರುವಾಗ 'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣವು ಹೇಗೆ ಕೂಡುತ್ತದೆ ? ಮತ್ತು ಸ್ವಪ್ನಾದ್ಯವಸ್ಥೆಗಳಲ್ಲಿ ಬ್ರಹ್ಮನು ಜ್ಞಾನಹೇತುವಾಗಿದ್ದಾನೆಂದು ವಿಶೇಷವಾಗಿ ಹೇಳಲು ಕಾರಣವೇನು? ಎಂದು ಪ್ರಶ್ನಿಸಬಹುದು. ಆದರೆ ಈ ಪ್ರಶ್ನೆಯು ಜೀವನೇ ಜ್ಯೋತಿಯೆಂಬ ಪಕ್ಷದಲ್ಲಿಯೂ ಕೂಡ ಸಮಾನವಾಗಿದೆ. ಏಕೆಂದರೆ ಜೀವನ ಜ್ಞಾನಕ್ಕೆ ಪರಮಾತ್ಮನು ಹೇಗೆ ಕಾರಣನಾಗಿದ್ದಾನೋ, ಅದರಂತೆ ತನ್ನಲ್ಲಿರುವ ಜ್ಞಾನಕ್ಕೆ ತಾನೂ ಸಹ ಕಾರಣನೇ ಆಗಿದ್ದಾನೆ. ಹೀಗಿರುವಾಗ 'ಆದಿತ್ಯೇನೈವ' ಎಂಬ ಅವಧಾರಣವಾಗಲೀ, ಸ್ವಪ್ನಕಾಲದಲ್ಲಿ ವಿಶೇಷವಾಗಿ ಜ್ಞಾನಹೇತುವಾಗಿದ್ದಾನೆನ್ನಲು ಕಾರಣವಾಗಲೀ ಇರುವುದಿಲ್ಲ.

**जागरणेऽपि स्वप्रकाशत्वेन विशिष्योक्त्ययोगाच्च । तस्माद्ब्रह्मैव ज्योतिरिति चेत्**

ಮತ್ತು ಜಾಗ್ರತ್ಕಾಲದಲ್ಲಿಯೂ ಕೂಡ ಜೀವನು ಸ್ವಪ್ರಕಾಶಿತನಾದ್ದರಿಂದ ವಿಶೇಷವಾಗಿ ಜಾಗ್ರತ್ಕಾಲದಲ್ಲಿ ಅವನು ಜ್ಞಾನಹೇತುವಾಗಿದ್ದಾನೆಂದು ಹೇಳುವುದೂ ಕೂಡ ತಪ್ಪಾಗುತ್ತದೆ. ಆದ್ದರಿಂದ ಬ್ರಹ್ಮನೇ ಜ್ಯೋತಿಯೆಂದು ಹೇಳಬೇಕಲ್ಲವೇ?

**उच्यते । किं ज्योतिरयं पुरुष इति ज्ञानसाधनप्रश्नोपक्रमस्थस्य जीवस्यात्र ''अयं पुरुषः स्वयं ज्योतिः'' इत्यात्मप्रश्नोत्तरोपसंहारे पुरुषादिशब्दैः प्रत्यभिज्ञानात्तन्मध्यस्थं ''आत्मैवास्य ज्योतिः'' इत्येतदपि जीवपरमेव ।**

ಸಮಾಧಾನ - ಈ ಆಕ್ಷೇಪ ತಪ್ಪು. ಏಕೆಂದರೆ 'ಕಿಂ ಜ್ಯೋತಿರಯಂ ಪುರುಷಃ' ಎಂದು ಜ್ಞಾನಸಾಧನೆಯ ಬಗ್ಗೆ ಪ್ರಶ್ನಿಸುವ ಪ್ರಾರಂಭದಲ್ಲಿರುವ ವಾಕ್ಯವು ಜೀವಪರವಾಗಿದೆ. ಅವನು 'ಅಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಉತ್ತರ ನೀಡುವ ಉಪಸಂಹಾರ ವಾಕ್ಯದಲ್ಲಿಯೂ ಪ್ರಸಕ್ತನಾಗಿದ್ದಾನೆ. ಅಂದರೆ ಉಪಕ್ರಮದಲ್ಲಿ ಪ್ರಸಕ್ತನಾದ ಜೀವನೇ ಪುರುಷಾದಿ ಶಬ್ದಗಳಿಂದ ಉಪಸಂಹಾರ ವಾಕ್ಯದಲ್ಲಿ ಪ್ರತ್ಯಭಿಜ್ಞಾಯಮಾನನಾಗಿದ್ದಾನೆ. ಹಾಗಾಗಿ ಮಧ್ಯದಲ್ಲಿರುವ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯವೂ ಕೂಡ ಜೀವನನ್ನೇ ಪ್ರತಿಪಾದಿಸಬೇಕು. ಉಪಕ್ರಮ ಹಾಗೂ ಉಪಸಂಹಾರಗಳು ಜೀವನನ್ನು ಪ್ರತಿಪಾದನೆ ಮಾಡಿ, ಮಧ್ಯದಲ್ಲಿರುವ ವಾಕ್ಯ ಮಾತ್ರ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತದೆಂಬುದು ಬಹಳ ತಪ್ಪಾಗುತ್ತದೆ.

ಪರಿಪೂರ್ಣಚಂದ್ರಿಕಾ

**अत एवोपसंहारवाक्यस्यायं पुरुषः परमात्माऽस्य जीवस्य स्वयमेव ज्योतिरित्यर्थ इति निरस्तम् । पुरुषादिशब्दानां तैःप्रकृतजीवपरत्वत्यागेन तैरप्रकृतब्रह्मपरत्वायोगात् । अस्येत्यस्याध्याहारापाताच्च ।**

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯು ನಿರಸ್ತವಾಯಿತು - ಉಪಸಂಹಾರ ವಾಕ್ಯದಲ್ಲಿರುವ ಪುರುಷನು ಪರಮಾತ್ಮನೇ ಆಗಿದ್ದಾನೆ. ಇವನು ಜೀವನ ಜ್ಞಾನಕ್ಕೆ ಕಾರಣನಾಗಿದ್ದಾನೆ ಎಂಬ ಆಶಂಕೆಯೂ ತಪ್ಪು. ಏಕೆಂದರೆ ಪುರುಷಾದಿಶಬ್ದಗಳೂ ಶ್ರುತಿಯಲ್ಲಿವೆ. ಇಂತಹ ಪುರುಷಾದಿ ಶಬ್ದಗಳಿಂದ ಪ್ರಕೃತವಾದ ಜೀವಪರತ್ವವನ್ನು ಬಿಟ್ಟು, ಪುರುಷಾದಿಶಬ್ದಗಳಿಂದ ಅಪ್ರಕೃತವಾದ ಬ್ರಹ್ಮಪರತ್ವವನ್ನು ಒಪ್ಪುವುದು ಅಯುಕ್ತವಾಗುತ್ತದೆ. ಮತ್ತು 'ಅಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ಜೀವನಿಗೆ ಪರಮಾತ್ಮನು ಜ್ಯೋತಿರೂಪನಾಗಿದ್ದಾನೆನ್ನಲು 'ಅಸ್ಯ' ಎಂಬ ಪದದ ಅಧ್ಯಾಹಾರವು ಅನಿವಾರ್ಯ.

**किञ्च उपसंहारस्थस्वयंशब्दानुसारात् "आत्मैवास्य" इत्यत्राप्यात्मशब्दः स्वरूपपरः । नतु ब्रह्मपरः ।**

ಮತ್ತು ಉಪಸಂಹಾರದಲ್ಲಿರುವ 'ಸ್ವಯಂ' ಶಬ್ದಕ್ಕೆ ಅನುಸಾರಿಯಾಗಿ 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿರುವ ಆತ್ಮಶಬ್ದಕ್ಕೂ ಕೂಡ ಸ್ವರೂಪ ಎಂಬರ್ಥವನ್ನೇ ಹೇಳಬೇಕು. ಅದಕ್ಕೆ ವಿರುದ್ಧವಾಗಿ ಬ್ರಹ್ಮ ಎಂಬರ್ಥವನ್ನು ಹೇಳಬಾರದು.

**तस्मादात्मप्रश्नोत्तरे अपि जीवविषये एवेति जीव एवेदं ज्योतिः ।**

ಹಾಗಾಗಿ ಆತ್ಮವಿಷಯಕವಾದ ಪ್ರಶ್ನೆ ಹಾಗೂ ಉತ್ತರ ವಾಕ್ಯಗಳು ಜೀವವಿಷಯಕವೇ ಆಗಿವೆ. ಆದ್ದರಿಂದ 'ಜ್ಯೋತಿಃ' ಶಬ್ದದಿಂದಲೂ ಜೀವನೇ ಪ್ರತಿಪಾದ್ಯನಾಗುತ್ತಾನೆ.

**यद्यप्यत्रानन्दमयाधिकरणे दहराधिकरणे च ब्रह्मपरत्वेन निर्णीतं विज्ञानमयत्वं हृद्गतत्वं चास्ति तथापि पूर्वपक्षेऽतीतज्योतिरधिकरणस्येव तयोरप्याक्षेपात्पूर्वपक्षोदयः ॥**

ವಾಸ್ತವಿಕವಾಗಿ ಆನಂದಮಯಾಧಿಕರಣದಲ್ಲಿ ವಿಜ್ಞಾನಮಯತ್ವವನ್ನು ಬ್ರಹ್ಮನ ಧರ್ಮವೆಂದು, ದಹರಾಧಿಕರಣದಲ್ಲಿ ಹೃದ್ಗತತ್ವವನ್ನು ಬ್ರಹ್ಮನ ಧರ್ಮವೆಂದು ಸಿದ್ಧಾಂತ ಮಾಡಿದ್ದಾಗಿದೆ. ಆದರೂ ಸಹ ಹಿಂದೆ ಜ್ಯೋತಿರಧಿಕರಣದಲ್ಲಿ ಮಾಡಿದ ಪೂರ್ವಪಕ್ಷದಂತೆ ಇಲ್ಲಿಯೂ ಕೂಡ ಆ ವಿಜ್ಞಾನಮಯತ್ವ ಹಾಗೂ ಹೃದ್ಗತತ್ವಧರ್ಮಗಳನ್ನೂ ಕೂಡ ಆಕ್ಷೇಪ ಮಾಡುತ್ತಿರುವುದರಿಂದ, ಪೂರ್ವಪಕ್ಷದ ಉದಯವಾಗಿದೆ.

**प्रकाशः –**

आद्यचिन्तास्थपूर्वकोटिं विवृण्वन् ''जीव एवेदं ज्योतिः'' इत्यादिपूर्वपक्षटीकां व्यनक्ति ।। **पूर्वत्रेति** ।।

ವಿವರಣೆ - 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಎಂಬ ಪದದಿಂದ ಪ್ರತಿಪಾದ್ಯನಾದವನು ಜೀವನೋ ಅಥವಾ ಬ್ರಹ್ಮನೋ? ಎಂಬುದು ಮೊದಲಿನ ಸಂಶಯ ಕೋಟಿ. ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ವಿವರಿಸುವವರಾಗಿ ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದ್ದಾರೆ 'ಪೂರ್ವತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – एतेन पूर्वसिद्धान्तन्यायेनेत्येतद्विवृतम् ।। **प्रसिद्धेति** ।। ज्योतिरादिशब्दस्येति शेषः । विष्ण्वर्थत्वत्याग इत्यर्थः । केन **प्रसिद्धे**त्यत उक्तं **विष्णुरेवेति** ।।

ಇದರಿಂದ 'ಪೂರ್ವಸಿದ್ಧಾಂತನ್ಯಾಯೇನ' ಎಂಬ ಟೀಕೆಯನ್ನು ವಿವರಿಸಿದಂತಾಯಿತು. 'ಪ್ರಸಿದ್ಧ' ಎಂಬಲ್ಲಿ 'ಜ್ಯೋತಿರಾದಿಶಬ್ದಸ್ಯ' 'ಜ್ಯೋತಿರಾದಿ' ಶಬ್ದಗಳಿಗೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು ಅಂದರೆ 'ಜ್ಯೋತಿಃ' ಮೊದಲಾದ ಶಬ್ದಗಳಿಗೆ 'ವಿಷ್ಣು' ಎಂಬರ್ಥವನ್ನು ಬಿಡಬೇಕು ಎಂದರ್ಥ. 'ವಿಷ್ಣು' ಎಂಬರ್ಥವು 'ಜ್ಯೋತಿಃ' ಶಬ್ದಕ್ಕೆ ಯಾವುದರಿಂದ ಪ್ರಸಿದ್ಧವಾಗಿದೆ ಎಂಬ ಪ್ರಶ್ನೆಗೆ 'ವಿಷ್ಣುರೇವಜ್ಯೋತಿಃ' ಎಂಬ ಶ್ರುತಿಯಿಂದ ಪ್ರಸಿದ್ಧವಾಗಿದೆಯೆಂದು ಹೇಳಿದ್ದಾರೆ.

**प्रकाशः** – एतेन ''विष्णुरेव ज्योतिः'' इति श्रुत्या ज्योतिश्श्रुतेर्विष्णौ प्रसिद्धेः कथं जीव इति टीकोक्तिरिति प्रत्युक्तम् । पूर्वन्यायेन निरवकाशलिङ्गबलेन श्रुतिबाधोपपत्तेरिति ।

ಹೀಗೆ ಹೇಳಿದ್ದರಿಂದ 'ವಿಷ್ಣುರೇವ ಜ್ಯೋತಿಃ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಪ್ರಸಿದ್ಧವಾಗಿರುವಾಗ 'ಜ್ಯೋತಿಃ' ಎಂಬ ಶಬ್ದಕ್ಕೆ ಜೀವನೆಂಬರ್ಥವನ್ನು ಟೀಕೆಯಲ್ಲಿ ಹೇಳಿದ್ದು ಹೇಗೆ ಸರಿ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದಿಂದ ನಿರವಕಾಶವಾದ ಲಿಂಗಬಲದಿಂದ ಶ್ರುತಿಯು ಬಾಧಿತವಾಗುತ್ತದೆ. ಹಾಗಾಗಿ ವಿಷ್ಣುವಿನಲ್ಲಿ ಪ್ರಸಿದ್ಧವಾದ 'ಜ್ಯೋತಿಃ' ಶ್ರುತಿಯು ಜೀವಲಿಂಗದಿಂದ ಬಾಧಿತವಾಯಿತು.

**प्रकाशः** – टीकोक्तलिङ्गानि न बाधकानीत्याशङ्क्याह – **यद्यपीति** ।। **म्रियमाणत्वेति** ।। तस्य देहवियोगरूपत्वेन नित्यदेहे भगवत्ययोगादिति भावः ।

ಟೀಕೆಯಲ್ಲಿ ಹೇಳಲ್ಪಟ್ಟ ಜೀವನ ಲಿಂಗಗಳು ಹೇಗೆ ಬಾಧಕವಾಗುತ್ತವೆ? ಎಂದು ಆಶಂಕಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ. ಮ್ರಿಯಮಾಣತ್ವವೆಂಬ ಲಿಂಗವು ನಿರವಕಾಶವಾಗಿವೆ. ಏಕೆಂದರೆ

ಮ್ರಿಯಮಾಣತ್ವವು ದೇಹವಿಯೋಗರೂಪವಾಗಿದೆ. ನಿತ್ಯವಾದ ದೇಹವುಳ್ಳ ಪರಮಾತ್ಮನಲ್ಲಿ ಇಂತಹ ದೇಹ ವಿಯೋಗವೆಂಬ ಮ್ರಿಯಮಾಣತ್ವವನ್ನು ಸರ್ವಥಾ ಹೇಳಲಾಗದು.

**प्रकाशः** – ननु भाष्ये लोकसञ्चरणस्य जीवलिङ्गत्वोक्त्या भगवत्यपरिच्छिन्ने क्रियामात्रमपि नेति प्रतीयत इत्युत्क्रमणमपि निरवकाशमिति गम्यत इत्यत आह **– भाष्य इति ।।**

ಭಾಷ್ಯದಲ್ಲಿ ಉಭಯಲೋಕಸಂಚಾರವನ್ನು ಜೀವನ ಲಿಂಗವೆಂದು ಹೇಳಿದ್ದಾರೆ. ಅಪರಿಚ್ಛಿನ್ನನಾದ ಭಗವಂತನಲ್ಲಿ ಕ್ರಿಯೆಯೇ ಯುಕ್ತವಾಗುವುದಿಲ್ಲ. ಆದ್ದರಿಂದ ಉಭಯಲೋಕಸಂಚಾರವನ್ನಂತೂ ಸುತರಾಂ ಹೇಳಲು ಸಾಧ್ಯವಿಲ್ಲ. ಹಾಗಾಗಿ ಉಭಯಲೋಕಸಂಚಾರವೆಂಬ ಉತ್ಕ್ರಮಣಲಿಂಗವೂ ಕೂಡ ನಿರವಕಾಶವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಭಾಷ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – टीकायाः सावकाशस्यापि जायमानत्वादेर्जीवलिङ्गतयोक्तिस्तु निरवकाशजीवलिङ्गान्तरसाहचर्याज्जायमानत्वादिकमपीह जीवे प्रसिद्धमेव ग्राह्यम् । नतु विष्णुधर्मभूतमित्यभिप्रायेति भावः ।

ಹಿಂದೆ ಜಾಯಮಾನತ್ವಾದಿ ಲಿಂಗಗಳನ್ನು ಪ್ರಾದುರ್ಭಾವಾಭಿಪ್ರಾಯದಿಂದ ಸಾವಕಾಶ ಮಾಡಿದ್ದರು. ಪ್ರಕೃತ ನಿರವಕಾಶವಾದ 'ಮ್ರಿಯಮಾಣತ್ವ' ಮೊದಲಾದ ಲಿಂಗಾಂತರಗಳ ಸಾಹಚರ್ಯದಿಂದ ಆ ಜಾಯಮಾನತ್ವಾದಿಲಿಂಗಗಳೂ ಕೂಡ ನಿರವಕಾಶವೇ ಆಗಿವೆ ಎಂದು ಸಮರ್ಥನೆ ಮಾಡುತ್ತಿದ್ದಾರೆ. ಹಾಗಾಗಿ ಟೀಕೆಯಲ್ಲಿ ಜಾಯಮಾನತ್ವಾದಿ ಲಿಂಗಗಳು ಸಾವಕಾಶವಾಗಿದ್ದರೂ ಕೂಡ ಜೀವನ ಲಿಂಗವೆಂದು ಹೇಳಿದ್ದಾರೆ. ಹೊರತು, ವಿಷ್ಣುವಿನ ಧರ್ಮವೆಂದು ಹೇಳಿರುವುದಿಲ್ಲ.

**प्रकाशः** – ''आदित्यादिज्योतिष्ट्वम्'' इति न्यायविवरणैकदेशप्रपञ्चनपरां ''किञ्च'' इत्यादिटीकां ''न तत्र सूर्यो भातीत्यादेः'' इत्यन्तां विवृणोति ।। **किञ्चेति ।।**

'ಆದಿತ್ಯಾದಿಜ್ಯೋತಿಷ್ಟ್ವಮ್' ಎಂಬ ನ್ಯಾಯವಿವರಣದ ಏಕದೇಶವನ್ನು ವಿವರಿಸುವ 'ಕಿಂಚ' ಎಂಬಲ್ಲಿಂದ ಪ್ರಾರಂಭಿಸಿ 'ನ ತತ್ರ ಸೂರ್ಯೋ ಭಾತೀತ್ಯಾದೇಃ' ಎಂಬಲ್ಲಿಯ ತನಕ ಇರುವ ಟೀಕೆಯನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः** – टीकोक्तेर्मूलमाह – **तदुक्तमिति ।।** इत्यादीनामित्यादिपदेन प्रागुक्त-जायमानत्वादिलिङ्गजातं गृह्यते । सर्वेषामवकाशाभाव उपपादितः । अस्तु स जीवः। ततः किमित्यत आह – **तस्यैव चेति ।।**

**प्रकाशः –**

आद्यचिन्तास्थपूर्वकोटिं विवृण्वन् ''जीव एवेदं ज्योतिः'' इत्यादिपूर्वपक्षटीकां व्यनक्ति ।। **पूर्वत्रेति** ।।

ವಿವರಣೆ - 'ಹೃದ್ಯಂತರ್ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಎಂಬ ಪದದಿಂದ ಪ್ರತಿಪಾದ್ಯನಾದವನು ಜೀವನೋ ಅಥವಾ ಬ್ರಹ್ಮನೋ? ಎಂಬುದು ಮೊದಲಿನ ಸಂಶಯ ಕೋಟಿ. ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ವಿವರಿಸುವವರಾಗಿ ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದ್ದಾರೆ 'ಪೂರ್ವತ್ರ' ಇತ್ಯಾದಿ ಗ್ರಂಥದಿಂದ.

**प्रकाशः –** एतेन पूर्वसिद्धान्तन्यायेनेत्येतद्विवृतम् ।। **प्रसिद्धेति** ।। ज्योतिरादिशब्दस्येति शेषः । विष्ण्वर्थत्वत्याग इत्यर्थः । केन प्रसिद्धेत्यत उक्तं विष्णुरेवेति ।।

ಇದರಿಂದ 'ಪೂರ್ವಸಿದ್ಧಾಂತನ್ಯಾಯೇನ' ಎಂಬ ಟೀಕೆಯನ್ನು ವಿವರಿಸಿದಂತಾಯಿತು. 'ಪ್ರಸಿದ್ಧ' ಎಂಬಲ್ಲಿ 'ಜ್ಯೋತಿರಾದಿಶಬ್ದಸ್ಯ' 'ಜ್ಯೋತಿರಾದಿ' ಶಬ್ದಗಳಿಗೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು ಅಂದರೆ 'ಜ್ಯೋತಿಃ' ಮೊದಲಾದ ಶಬ್ದಗಳಿಗೆ 'ವಿಷ್ಣು' ಎಂಬರ್ಥವನ್ನು ಬಿಡಬೇಕು ಎಂದರ್ಥ. 'ವಿಷ್ಣು' ಎಂಬರ್ಥವು 'ಜ್ಯೋತಿಃ' ಶಬ್ದಕ್ಕೆ ಯಾವುದರಿಂದ ಪ್ರಸಿದ್ಧವಾಗಿದೆ ಎಂಬ ಪ್ರಶ್ನೆಗೆ 'ವಿಷ್ಣುರೇವಜ್ಯೋತಿಃ' ಎಂಬ ಶ್ರುತಿಯಿಂದ ಪ್ರಸಿದ್ಧವಾಗಿದೆಯೆಂದು ಹೇಳಿದ್ದಾರೆ.

**प्रकाशः –** एतेन ''विष्णुरेव ज्योतिः'' इति श्रुत्या ज्योतिश्श्रुतेर्विष्णौ प्रसिद्धेः कथं जीव इति टीकोक्तिरिति प्रत्युक्तम् । पूर्वन्यायेन निरवकाशलिङ्गबलेन श्रुतिबाधोपपत्तेरिति ।

ಹೀಗೆ ಹೇಳಿದ್ದರಿಂದ 'ವಿಷ್ಣುರೇವ ಜ್ಯೋತಿಃ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಪ್ರಸಿದ್ಧವಾಗಿರುವಾಗ 'ಜ್ಯೋತಿಃ' ಎಂಬ ಶಬ್ದಕ್ಕೆ ಜೀವನೆಂಬರ್ಥವನ್ನು ಟೀಕೆಯಲ್ಲಿ ಹೇಳಿದ್ದು ಹೇಗೆ ಸರಿ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಹಿಂದಿನ ಅಧಿಕರಣದ ಸಿದ್ಧಾಂತ ನ್ಯಾಯದಿಂದ ನಿರವಕಾಶವಾದ ಲಿಂಗಬಲದಿಂದ ಶ್ರುತಿಯು ಬಾಧಿತವಾಗುತ್ತದೆ. ಹಾಗಾಗಿ ವಿಷ್ಣುವಿನಲ್ಲಿ ಪ್ರಸಿದ್ಧವಾದ 'ಜ್ಯೋತಿಃ' ಶ್ರುತಿಯು ಜೀವಲಿಂಗದಿಂದ ಬಾಧಿತವಾಯಿತು.

**प्रकाशः –** टीकोक्तलिङ्गानि न बाधकानीत्याशङ्क्याह – **यद्यपीति** ।। **म्रियमाणत्वेति** ।। तस्य देहवियोगरूपत्वेन नित्यदेहे भगवत्ययोगादिति भावः ।

ಟೀಕೆಯಲ್ಲಿ ಹೇಳಲ್ಪಟ್ಟ ಜೀವನ ಲಿಂಗಗಳು ಹೇಗೆ ಬಾಧಕವಾಗುತ್ತವೆ? ಎಂದು ಆಶಂಕಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ. ಮ್ರಿಯಮಾಣತ್ವವೆಂಬ ಲಿಂಗವು ನಿರವಕಾಶವಾಗಿವೆ. ಏಕೆಂದರೆ

ಮ್ರಿಯಮಾಣತ್ವವು ದೇಹವಿಯೋಗರೂಪವಾಗಿದೆ. ನಿತ್ಯವಾದ ದೇಹವುಳ್ಳ ಪರಮಾತ್ಮನಲ್ಲಿ ಇಂತಹ ದೇಹ ವಿಯೋಗವೆಂಬ ಮ್ರಿಯಮಾಣತ್ವವನ್ನು ಸರ್ವಥಾ ಹೇಳಲಾಗದು.

**प्रकाशः** – ननु भाष्ये लोकसञ्चरणस्य जीवलिङ्गत्वोक्त्या भगवत्यपरिच्छिन्ने क्रियामात्रमपि नेति प्रतीयत इत्युत्क्रमणमपि निरवकाशमिति गम्यत इत्यत आह **– भाष्य इति ॥**

ಭಾಷ್ಯದಲ್ಲಿ ಉಭಯಲೋಕಸಂಚಾರವನ್ನು ಜೀವನ ಲಿಂಗವೆಂದು ಹೇಳಿದ್ದಾರೆ. ಅಪರಿಚ್ಛಿನ್ನನಾದ ಭಗವಂತನಲ್ಲಿ ಕ್ರಿಯೆಯೇ ಯುಕ್ತವಾಗುವುದಿಲ್ಲ. ಆದ್ದರಿಂದ ಉಭಯಲೋಕಸಂಚಾರವನ್ನಂತೂ ಸುತರಾಂ ಹೇಳಲು ಸಾಧ್ಯವಿಲ್ಲ. ಹಾಗಾಗಿ ಉಭಯಲೋಕಸಂಚಾರವೆಂಬ ಉತ್ಕ್ರಮಣಲಿಂಗವೂ ಕೂಡ ನಿರವಕಾಶವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಭಾಷ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – टीकायाः सावकाशस्यापि जायमानत्वादेर्जीवलिङ्गतयोक्तिस्तु निरवकाशजीवलिङ्गान्तरसाहचर्याज्जायमानत्वादिकमपीह जीवे प्रसिद्धमेव ग्राह्यम् । नतु विष्णुधर्मभूतमित्यभिप्रायेति भावः ।

ಹಿಂದೆ ಜಾಯಮಾನತ್ವಾದಿ ಲಿಂಗಗಳನ್ನು ಪ್ರಾದುರ್ಭಾವಾಭಿಪ್ರಾಯದಿಂದ ಸಾವಕಾಶ ಮಾಡಿದ್ದರು. ಪ್ರಕೃತ ನಿರವಕಾಶವಾದ 'ಮ್ರಿಯಮಾಣತ್ವ' ಮೊದಲಾದ ಲಿಂಗಾಂತರಗಳ ಸಾಹಚರ್ಯದಿಂದ ಆ ಜಾಯಮಾನತ್ವಾದಿಲಿಂಗಗಳೂ ಕೂಡ ನಿರವಕಾಶವೇ ಆಗಿವೆ ಎಂದು ಸಮರ್ಥನೆ ಮಾಡುತ್ತಿದ್ದಾರೆ. ಹಾಗಾಗಿ ಟೀಕೆಯಲ್ಲಿ ಜಾಯಮಾನತ್ವಾದಿ ಲಿಂಗಗಳು ಸಾವಕಾಶವಾಗಿದ್ದರೂ ಕೂಡ ಜೀವನ ಲಿಂಗವೆಂದು ಹೇಳಿದ್ದಾರೆ. ಹೊರತು, ವಿಷ್ಣುವಿನ ಧರ್ಮವೆಂದು ಹೇಳಿರುವುದಿಲ್ಲ.

**प्रकाशः** – ''आदित्यादिज्योतिष्ट्वम्'' इति न्यायविवरणैकदेशप्रपञ्चनपरां ''किञ्च'' इत्यादिटीकां ''न तत्र सूर्यो भातीत्यादेः'' इत्यन्तां विवृणोति ॥ **किञ्चेति ॥**

'ಆದಿತ್ಯಾದಿಜ್ಯೋತಿಷ್ಟ್ವಮ್' ಎಂಬ ನ್ಯಾಯವಿವರಣದ ಏಕದೇಶವನ್ನು ವಿವರಿಸುವ 'ಕಿಂಚ' ಎಂಬಲ್ಲಿಂದ ಪ್ರಾರಂಭಿಸಿ 'ನ ತತ್ರ ಸೂರ್ಯೋ ಭಾತೀತ್ಯಾದೇಃ' ಎಂಬಲ್ಲಿಯ ತನಕ ಇರುವ ಟೀಕೆಯನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः** – टीकोक्तेर्मूलमाह – **तदुक्तमिति ॥** इत्यादीनामित्यादिपदेन प्रागुक्त-जायमानत्वादिलिङ्गजातं गृह्यते । सर्वेषामवकाशाभाव उपपादितः । अस्तु स जीवः। ततः किमित्यत आह – **तस्यैव चेति ॥**

ಟೀಕಾಮಾತನ್ನು ಮೂಲಾರೂಢ ಮಾಡುತ್ತಿದ್ದಾರೆ 'ತದುಕ್ತಮ್' ಇತ್ಯಾದಿ ಗ್ರಂಥದಿಂದ. 'ಇತ್ಯಾದೀನಾಮ್' ಎಂಬಲ್ಲಿರುವ ಆದಿಪದದಿಂದ ಹಿಂದೆ ಹೇಳಲ್ಪಟ್ಟ ಜಾಯಮಾನತ್ವಾದಿ ಲಿಂಗಗಳ ಸಮೂಹವನ್ನು ಸ್ವೀಕರಿಸಬೇಕು. ಈ ಲಿಂಗಗಳು ಪರಮಾತ್ಮನಲ್ಲಿ ಅವಕಾಶವನ್ನು ಹೊಂದಿಲ್ಲವೆಂದು ಉಪಪಾದಿಸಿದ್ದಾಗಿದೆ. ಜೀವನೇ ಈ ಶ್ರುತಿಪ್ರಕರಣದಿಂದ ಪ್ರತಿಪಾದ್ಯನಾಗಲೀ, ಅದರಿಂದೇನಾಯಿತು? ಎಂಬ ಪ್ರಶ್ನೆಗೆ 'ತಸ್ಯೈವ ಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

**प्रकाशः** – तत्कुत इत्यत आह – **अस्येति** ।। **अस्मिन्निति** ।। स्वप्रकाशत्वेनोक्त इत्यर्थः । इदं हृद्यन्तर्ज्योतिरुच्यमानम् । एतेन द्वितीयचिन्तास्थपूर्वपक्षकोटिर्विवृता।

ಸ್ವಪ್ನಾದ್ಯವಸ್ಥೆಗಳಲ್ಲಿ ಸ್ವಪ್ರಕಾಶನಾಗಿದ್ದಾನೆಂದು ಏಕೆ ಒಪ್ಪಬೇಕು? ಎಂಬ ಪ್ರಶ್ನೆಗೆ 'ಅಸ್ಯೇತಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಅಸ್ಮಿನ್' ಎಂದರೆ ಸ್ವಪ್ರಕಾಶತ್ವೇನ ಪ್ರತಿಪಾದ್ಯನಾದ ಎಂದರ್ಥ. 'ಇದಂ' ಎಂದರೆ ಹೃದಯದಲ್ಲಿರುವ ಜ್ಯೋತಿಯೆಂದು ಹೇಳಲ್ಪಟ್ಟವನು ಎಂದರ್ಥ. ಹೀಗೆ ಹೇಳಿದ್ದರಿಂದ ಎರಡನೆಯ ಸಂಶಯಕೋಟಿಯಲ್ಲಿರುವ ಪೂರ್ವಪಕ್ಷವನ್ನು ವಿವರಿಸಿದಂತಾಯಿತು.

**प्रकाशः** – ''नच वाच्यं यस्यादित्यादिज्योतिष्ट्वमुक्तम्'' इत्यादिटीकां व्यनक्ति ।। **नन्विति** ।। टीकायामेतच्छङ्कानिवर्तकत्वेन न्यायविवरणोक्तावधारणं योजयित्वा ''अयं पुरुषः स्वयं ज्योतिर्भवतीत्यस्यैवार्थस्य प्रत्यभिज्ञानाच्च'' इति युक्त्यन्तरं चोक्तम् ।

'ನಚ ವಾಚ್ಯಂ ಯಸ್ಯಾದಿತ್ಯಾದಿಜ್ಯೋತಿಷ್ಟ್ವಮುಕ್ತಮ್' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ನನು' ಇತ್ಯಾದಿ ಗ್ರಂಥದಿಂದ. 'ಆತ್ಮ' ಶಬ್ದಕ್ಕೆ ಪರಮಾತ್ಮನೆಂಬರ್ಥವನ್ನು ಒಪ್ಪಿದರು, 'ಜ್ಯೋತಿಃ' ಎಂಬ ಶಬ್ದವು ಜ್ಞಾನಹೇತುವನ್ನೇ ಪ್ರತಿಪಾದನೆ ಮಾಡಲಿ ಎಂದು ಸಿದ್ಧಾಂತಿಯು ಆಶಂಕಿಸಿದ್ದನು. ಅದಕ್ಕೆ ಪರಮಾತ್ಮ ಪರತ್ವವನ್ನು ಒಪ್ಪಲು ಸಾಧ್ಯವೇ ಇಲ್ಲವೆಂದು ಉತ್ತರಿಸುತ್ತಿದ್ದಾರೆ. ಏಕೆಂದರೆ ಪರಮಾತ್ಮನು ಯಾವಾಗಲೂ ಜ್ಞಾನಸಾಧನವಾಗಿರುವಾಗ 'ಆದಿತ್ಯೇನೈವ' ಎಂಬಲ್ಲಿರುವ ಏವಕಾರವು ಯುಕ್ತವಾಗುವುದಿಲ್ಲ. ಮತ್ತು ವಿಶೇಷವಾಗಿ ಸುಷುಪ್ತಿಕಾಲದಲ್ಲಿ ಮಾತ್ರ ಜ್ಞಾನಹೇತುವಾಗಿದ್ದಾನೆಂದು ಕೂಡುವುದಿಲ್ಲ ಎಂದು ಉತ್ತರಿಸಿ, ಅನಂತರ ಉಪಕ್ರಮದಲ್ಲಿ ಪ್ರಸಕ್ತನಾದ ಜೀವನೇ ಉಪಸಂಹಾರದಲ್ಲಿ ಪ್ರತ್ಯಭಿಜ್ಞಾಯಮಾನನಾಗುತ್ತಿರುವುದರಿಂದಲೂ ಪರಮಾತ್ಮನನ್ನು ವಿವಕ್ಷಿಸಲಾಗದೆಂದು ಉತ್ತರಿಸಲಾಗಿದೆ. ಹೀಗೆ ಮೊದಲು ಅವಧಾರಣಾನುಪಪತ್ತಿಯನ್ನು ಉತ್ತರವನ್ನಾಗಿ ಹೇಳಿ, ಅನಂತರ ಉಪಕ್ರಮದ ವಿರೋಧವನ್ನು ಹೇಳುವ ಮೂಲಕ ಉತ್ತರವನ್ನು ನೀಡಲು ಏನು ಕಾರಣ? ಎಂದರೆ ಮೊದಲು ನೀಡಿದ ಉತ್ತರವು ಸಮಂಜಸವಾಗಿಲ್ಲ. ಏಕೆಂದರೆ ಅವಧಾರಣಾನುಪಪತ್ತಿಯು ಬ್ರಹ್ಮಪಕ್ಷದಲ್ಲಿರುವಂತೆ ಜೀವಪಕ್ಷದಲ್ಲಿಯೂ ಕೂಡ ಸಮಾನವಾಗಿದೆ. ಬ್ರಹ್ಮನು ನಿರಂತರವಾಗಿ ಜ್ಞಾನಸಾಧನವಾದಂತೆ ಜೀವನೂ ಸಹ ನಿರಂತರ ಜ್ಞಾನಸಾಧನನಾಗಿದ್ದಾನೆ. ಹೀಗಿರುವಾಗ ವಿಶೇಷವಾಗಿ ಸುಷುಪ್ತ್ಯವಸ್ಥೆಯಲ್ಲಿ ಜ್ಞಾನಸಾಧನನಾಗಿದ್ದಾನೆಂದು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಅವಧಾರಣಾನುಪಪತ್ತಿಯು ಬ್ರಹ್ಮಪಕ್ಷದಂತೆ ಜೀವಪಕ್ಷದಲ್ಲಿಯೂ ಕೂಡ ಸಮಾನವಾಗಿದೆ. ಅದಕ್ಕೋಸ್ಕರ

ಮತ್ತೊಂದು ದೃಢವಾದ ಯುಕ್ತಿಯನ್ನು ಹೇಳಲು ಹೊರಟಿದ್ದಾರೆ. ಉಪಕ್ರಮ ಹಾಗೂ ಉಪಸಂಹಾರಗಳಿಗೆ ಏಕವಾಕ್ಯತ್ವವನ್ನು ಅವಶ್ಯವಾಗಿ ಹೇಳಬೇಕು. ಆದ್ದರಿಂದ ಮಧ್ಯದಲ್ಲಿರುವ ಆತ್ಮಶಬ್ದವೂ ಕೂಡ ಜೀವಪರವೇ ಆಗುತ್ತದೆಂದು ಹೇಳುವುದು ಪ್ರಬಲವಾದ ಯುಕ್ತಿಯಾಗಿದೆ. ಆದ್ದರಿಂದಲೇ ಟೀಕೆಯಲ್ಲಿ ಮೊದಲು ಅವಧಾರಣ ಪಕ್ಷವನ್ನು ಹೇಳಿ, ಅನಂತರ ಪ್ರಬಲವಾದ ಯುಕ್ತಿಯನ್ನು ಹೇಳಿರುತ್ತಾರೆ.

**प्रकाशः –** तत्र युक्त्यन्तरोक्तेरवधारणं नातीवशङ्कानिवर्तने क्षममिति हृदयमिति भावेन टीकोक्तावधारणयोजनां विवृण्वन्नस्याक्षमतामाह – **नच वाच्यमिति** ।। अयुक्तेतीत्यनेनान्वयः । टीकोक्तां प्रत्यभिज्ञानयुक्तिं व्यनक्ति ।। **किं ज्योतिरिति** ।। न्यायविवरणे त्वादिपदोक्तप्रत्यभिज्ञानादिनिरवकाशलिङ्गसत्त्वादभ्युच्चयत्वेनावधारणं युक्तमिति भावः ।

'ನಚ ವಾಚ್ಯಮ್' ಎಂಬುದಕ್ಕೆ 'ಅಯುಕ್ತಾ' ಎಂಬಲ್ಲಿ ಅನ್ವಯ ಮಾಡಬೇಕು. ಟೀಕೆಯಲ್ಲಿ ಹೇಳಿದ 'ಪ್ರತ್ಯಭಿಜ್ಞಾನ' ಎಂಬ ಮುಖ್ಯವಾದ ಯುಕ್ತಿಯನ್ನು 'ಕಿಂ ಜ್ಯೋತಿಃ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ನ್ಯಾಯವಿವರಣದಲ್ಲಿ ಅವಧಾರಣವನ್ನು ಯುಕ್ತಿಯನ್ನಾಗಿ ಹೇಳಿದ್ದಾರಲ್ಲವೇ? ಎಂದರೆ ಆದಿಪದದಿಂದ ಹೇಳಲ್ಪಟ್ಟ ಪ್ರತ್ಯಭಿಜ್ಞಾನಾದಿ ನಿರವಕಾಶಲಿಂಗಗಳನ್ನು ಹೇಳಿ, ಅಭ್ಯುಚ್ಚಯಯುಕ್ತಿಗೋಸ್ಕರ ಮಾತ್ರ ಅವಧಾರಣಯುಕ್ತಿಯನ್ನು ಹೇಳಿರುತ್ತಾರೆಂದು ತಿಳಿಯಬೇಕು.

**प्रकाशः –** एतेन तृतीयचिन्तास्थपूर्वपक्षकोटिर्विवृता । अत एवेत्युक्तमेवाह – **पुरुषादीति** ।। तैः पुरुषादिशब्दैः प्रकृतो यो जीवस्तत्त्यागेनेत्यर्थः ।

ಹೀಗೆ ಹೇಳಿದ್ದರಿಂದ ಉಪಕ್ರಮ ಹಾಗೂ ಉಪಸಂಹಾರಗಳಿಗೆ ಏಕವಾಕ್ಯತ್ವವನ್ನು ಹೇಳಬೇಕೆಂಬ ಮೂರನೆಯ ಸಂಶಯಕೋಟಿಯಲ್ಲಿ ಇರುವ ಪೂರ್ವಪಕ್ಷವನ್ನು ವಿವರಿಸಿದಂತಾಯಿತು. 'ಅತ ಏವ' ಎಂಬುದನ್ನೇ 'ಪುರುಷಾದಿ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. 'ತೈಃ' ಎಂದರೆ ಪುರುಷಾದಿಶಬ್ದಗಳಿಂದ ಎಂದರ್ಥ. ಪುರುಷಾದಿ ಶಬ್ದಗಳಿಂದ ಪ್ರಕೃತನಾದ ಜೀವಪರತ್ವವನ್ನು ಬಿಟ್ಟು, ಅಪ್ರಕೃತನಾದ ಪರಮಾತ್ಮ ಪರತ್ವವನ್ನು ಹೇಳಬಾರದು ಎಂದರ್ಥ.

**प्रकाशः –** सापेक्षत्वात्समासः । देवदत्तस्य गुरुकुलमिति यथा । युक्त्यन्तरं च स्वयमाह – **किञ्चेति** ।। **अतीतेति** ।। भाष्यादिकमुपलक्षणमिति भावः ।

ಗ್ರಂಥದಲ್ಲಿ 'ತೈಃ ಪ್ರಕೃತಜೀವಃ ಪರತ್ವತ್ಯಾಗೇನ' ಎಂದು ಹೇಳಿದ್ದಾರೆ. ಯಾವುದರಿಂದ 'ಪ್ರಕೃತ' ಎಂದು ಪ್ರಶ್ನೆ ಬಂದಾಗ 'ತೈಃ' ಎಂಬ ಪದವು ಉತ್ತರಿಸುತ್ತಿದೆ. ಆದ್ದರಿಂದ 'ಪ್ರಕೃತ' ಎಂಬ ಪದವು ಸಾಪೇಕ್ಷಿತವಾಯಿತು. ಸಾಮರ್ಥ್ಯವಿಲ್ಲದ 'ತತ್' ಶಬ್ದದ ಜೊತೆಗೆ ಅನ್ವಯವನ್ನು ಮಾಡುವುದು ಹೇಗೆ ಸಾಧ್ಯ? ಎಂದರೆ, 'ದೇವದತ್ತಸ್ಯ ಗುರುಕುಲಮ್' ಎಂಬಲ್ಲಿ ಗುರುಶಬ್ದಕ್ಕೆ ದೇವದತ್ತ ಪದದ ಜೊತೆಗೆ ಅನ್ವಯ ಮಾಡಿದಂತೆ ಇಲ್ಲಿಯೂ ಕೂಡ ತಿಳಿಯಬೇಕು. ಮತ್ತೊಂದು ಯುಕ್ತಿಯನ್ನು ಸ್ವತಃ ಗ್ರಂಥಕಾರರೇ 'ಕಿಂಚ' ಇತ್ಯಾದಿ

ಗ್ರಂಥದಿಂದ ಹೇಳುತ್ತಿದ್ದಾರೆ. 'ಅತೀತಜ್ಯೋತಿರಧಿಕರಣಸ್ಯೈವ' ಎಂಬಲ್ಲಿ ಭಾಷ್ಯ ಹಾಗೂ ಟೀಕೆಗಳನ್ನೂ ಕೂಡ ಉಪಲಕ್ಷಣವನ್ನಾಗಿ ತಿಳಿಯಬೇಕು.




'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿರುವ ಜ್ಯೋತಿಯು ಜೀವನೇ ಆಗಿದ್ದಾನೆಂಬುದು ಪೂರ್ವಪಕ್ಷ. ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದ ಜ್ಯೋತಿಯು ವಿಷ್ಣುವಲ್ಲ. ಏಕೆಂದರೆ ಉಭಯಲೋಕಸಂಚಾರವನ್ನು ಕರ್ಮಾಧೀನವಾಗಿ ಮಾಡುತ್ತಾನೆ. ಹುಟ್ಟು-ಸಾವು ಮೊದಲಾದ ಧರ್ಮಗಳಿಂದ ಕೂಡಿದ್ದಾನೆ ಇತ್ಯಾದಿಯಾಗಿ ಅವನ ವರ್ಣನೆಯಿದೆ. ಪರಮಾತ್ಮನಲ್ಲಿ ಜಾಯಮಾನತ್ವ, ಮ್ರಿಯಮಾಣತ್ವ, ಉಭಯಲೋಕಸಂಚಾರ ಈ ಯಾವ ಲಿಂಗಗಳೂ ಕೂಡ ಉಪಪನ್ನವಾಗುವುದಿಲ್ಲ. ಈಗಾಗಲೇ ಹಿಂದಿನ ದ್ಯುಭ್ವಾದ್ಯಧಿಕರಣದಲ್ಲಿ ಜಾಯಮಾನತ್ವಲಿಂಗವನ್ನು ಭೂಮಾಧಿಕರಣದಲ್ಲಿ ಉತ್ಕ್ರಮಣಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿರಬಹುದು. ಆದರೆ ಮ್ರಿಯಮಾಣತ್ವವನ್ನಂತೂ ಎಲ್ಲಿಯೂ ಸಮನ್ವಯ ಮಾಡಿಲ್ಲ. ಈ ಮ್ರಿಯಮಾಣತ್ವ ಲಿಂಗದ ಆಧಾರದಿಂದ ಜಾಯಮಾನತ್ವಾದಿಲಿಂಗಗಳಗೂ ಕೂಡ ಜೀವನಲ್ಲಿ ನಿರವಕಾಶವಾಗುತ್ತದೆ.

ಮತ್ತು 'ಕಿಂ ಜ್ಯೋತಿರಯಂ ಪುರುಷಃ' ಎಂದು ಜನಕರಾಜರು ಪ್ರಶ್ನಿಸಿದಾಗ 'ಆದಿತ್ಯಜ್ಯೋತಿರಾದಿತ್ಯೇನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿಯಾಗಿ ಯಾಜ್ಞವಲ್ಕ್ಯರು ಉತ್ತರಿಸಿದ್ದಾರೆ. ಅಂದರೆ ಆದಿತ್ಯಾದಿಗಳು ಯಾರಿಗೆ ಪ್ರಕಾಶಕರಾಗಿದ್ದಾರೋ, ಅವನನ್ನೇ 'ಜ್ಯೋತಿ' ಎಂದು ತಿಳಿ ಎಂದಿದ್ದಾರೆ. 'ನ ತತ್ರ ಸೂರ್ಯೋಭಾತಿ' ಎಂಬ ಶ್ರುತಿಯು ಸೂರ್ಯಾದಿಗಳು ಪರಮಾತ್ಮನಿಗೆ ಪ್ರಕಾಶಕರಲ್ಲ ಎಂದು ಹೇಳುತ್ತಿರುವಾಗ ಪ್ರಕೃತ 'ಆದಿತ್ಯಜ್ಯೋತಿಃ' ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ಆದಿತ್ಯಾದಿಗಳು ಪ್ರಕಾಶಕರಾಗಿದ್ದಾರೆಂದು ಹೇಳಲು ಹೇಗೆ ಸಾಧ್ಯ ? ಹಾಗಾಗಿ ಜೀವನೇ ಇಲ್ಲಿ ಪ್ರತಿಪಾದ್ಯನಾಗಬೇಕು. ಮತ್ತು ಅಂತಹ ಜೀವನಿಗೆ 'ಆತ್ಮೈವಾಸ್ಯ ಜ್ಯೋತಿಃ' ಎಂಬುದಾಗಿ ಸ್ವಪ್ನ, ಸುಷುಪ್ತಿ, ಪ್ರಳಯಕಾಲದಲ್ಲಿ ಸ್ವಪ್ರಕಾಶತ್ವವನ್ನು ಹೇಳಲಾಗಿದೆ. 'ಅಸ್ಯ' ಎಂಬುದಾಗಿ ಜೀವನು ಪ್ರಕೃತನಾದ ಕಾರಣ, ಆತ್ಮಶಬ್ದಕ್ಕೆ ಕೇವಲ ಸ್ವರೂಪನೆಂದಷ್ಟೇ ಅರ್ಥೈಸಬೇಕು. 'ಜ್ಯೋತಿಃ' ಎಂಬ ಶಬ್ದಕ್ಕೆ ಜ್ಞಾನವೆಂದು ಅರ್ಥೈಸಬೇಕು. ಇಂತಹ ಸ್ವಪ್ರಕಾಶನಾದ ಆತ್ಮನು ಪ್ರಸಕ್ತನಾದಾಗ ಜನಕರಾಜರು 'ಕತಮ ಆತ್ಮಾ' ಎಂದು ಪ್ರಶ್ನಿಸಿದ್ದಾರೆ. ಆದಕ್ಕನುಗುಣವಾಗಿ ಯಾಜ್ಞವಲ್ಕ್ಯರು ಜೀವನ ಬಗ್ಗೆಯೇ ಉತ್ತರಿಸಿದ್ದಾರೆ ಹೊರತು, ಪರಮಾತ್ಮನ ಬಗ್ಗೆ ಉತ್ತರಿಸುವುದು ವ್ಯಧಿಕರಣವಾಗುತ್ತದೆ.

'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿರುವ 'ಇದಂ' ಶಬ್ದವು ಜೀವಪರವೇ ಆಗಲಿ. ಆದರೆ ಆತ್ಮಶಬ್ದವು 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಸೂತ್ರದಂತೆ ಪರಮಾತ್ಮ ಪರವಾಗಬಹುದು. ಆದ್ದರಿಂದ ಪರಮಾತ್ಮನು ಪ್ರಸಕ್ತನಾದ ಕಾರಣ ಅವನ ಬಗ್ಗೆ ಯಾಜ್ಞವಲ್ಕ್ಯರು ಉತ್ತರಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಾರಂಭದಲ್ಲಿ 'ಕಿಂ ಜ್ಯೋತಿರಯಂ ಪುರುಷಃ' ಎಂದು ಜ್ಞಾನಸಾಧನನಾದ ಜೀವನೇ ಪ್ರಕೃತನಾಗಿದ್ದಾನೆ. ಕೊನೆಯಲ್ಲಿ 'ಅಯಂ ಪುರುಷ ಸ್ವಯಂ ಜ್ಯೋತಿಃ' ಎಂದು ಪುರುಷಾದಿಶಬ್ದಗಳಿಂದ

ಪ್ರಾರಂಭದಲ್ಲಿ ಪ್ರಕೃತನಾದ ಜೀವನೇ ಪ್ರತ್ಯಭಿಜ್ಞಾಯಮಾನನಾಗಿದ್ದಾನೆ. ಹೀಗೆ ಉಪಕ್ರಮ ಹಾಗೂ ಉಪಸಂಹಾರಗಳೆರಡರಲ್ಲಿಯೂ ಜೀವನೇ ಪ್ರತಿಪಾದ್ಯನಾಗಿರವಾಗ ಮಧ್ಯದಲ್ಲಿರುವ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯವೂ ಕೂಡ ಜೀವಪರವೇ ಆಗುತ್ತದೆ. ಹೀಗೆ ಪುರುಷಾದಿಶಬ್ದಗಳಿಂದ ಪ್ರಕೃತನಾದ ಜೀವನನ್ನು ಬಿಟ್ಟು, ಪುರುಷಾದಿ ಶಬ್ದಗಳಿಂದ ಅಪ್ರಕೃತನಾದ ಬ್ರಹ್ಮಪರತ್ವವನ್ನು ಒಪ್ಪುವುದು ತಪ್ಪಾಗುತ್ತದೆಂದು ಪೂರ್ವಪಕ್ಷ.



• • • • •

## 'ಜ್ಯೋತಿಃ' ಶಬ್ದದಿಂದ ನಾರಾಯಣನೇ ಮುಖ್ಯಪ್ರತಿಪಾದ್ಯನೆಂದು ಸಿದ್ಧಾಂತ

### तात्पर्यचन्द्रिका

**सिद्धान्तस्तु ।। ''विष्णुरेव ज्योतिः'' इति भाष्योदाहृतश्रुताववधारणात्, ''नारायणपरो ज्योतिः परंज्योतिरुपसम्पद्य तं देवा ज्योतिषां ज्योतिः'' इत्यादि श्रुतिषु परत्वादिविशेषणाच्च ज्योतिश्शब्दो विष्णावेव मुख्यः ।**

ಅನುವಾದ - ಸಿದ್ಧಾಂತ ಹೀಗಿದೆ - 'ವಿಷ್ಣುರೇವ ಜ್ಯೋತಿಃ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯು ಅವಧಾರಣಪೂರ್ವಕವಾಗಿ ವಿಷ್ಣುವೊಬ್ಬನೇ ಜ್ಯೋತಿಯಾಗಿದ್ದಾನೆಂದು ಹೇಳುತ್ತಿದೆ. ಮತ್ತು 'ನಾರಾಯಣಪರೋ ಜ್ಯೋತಿಃ' ಎಂಬ ಶ್ರುತಿಯು ಮತ್ತು 'ಪರಂಜ್ಯೋತಿರುಪಸಂಪದ್ಯ ತಂ ದೇವಾ ಜ್ಯೋತಿಷಾಂ ಜ್ಯೋತಿಃ' ಇತ್ಯಾದಿ ಶ್ರುತಿಗಳಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ 'ಜ್ಯೋತಿಃ' ಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿ ಸಮನ್ವಯವಾಗುತ್ತದೆ.

**स च ''हृद्यन्तर्ज्योतिः'' इत्यात्मप्रश्नोत्तरोपक्रमे ''सुप्त इत्यत्रायं पुरुषः स्वयं ज्योतिः'' इत्युपसंहारे ''स्वपित्यत्रायं पुरुषः स्वयं ज्योतिः'' इति मध्ये च श्रुतः ।**

ಇಂತಹ ವಿಷ್ಣುವು 'ಹೃದ್ಯಂತರ್ಜ್ಯೋತಿಃ' ಎಂಬುದಾಗಿ ಆತ್ಮವಿಷಯಕವಾದ ಪ್ರಶ್ನೆಗೆ ಉತ್ತರಿಸುವಂತಹ ಉಪಕ್ರಮದಲ್ಲಿ 'ಸುಪ್ತ ಇತ್ಯತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಉಪಸಂಹಾರದಲ್ಲಿ ಮತ್ತು 'ಸ್ವಪಿತ್ಯತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬುದಾಗಿ ಮಧ್ಯದಲ್ಲಿಯೂ ಕೂಡ ಪ್ರತಿಪಾದ್ಯನಾಗಿದ್ದಾನೆ.

**तथा च ज्ञानसाधनप्रश्नोपक्रमादन्तरङ्गेणात्मप्रश्नोत्तरोपक्रमेण तदुपसंहारेण च विष्णुपरत्वेन निर्णीतवाक्यमध्यपतितानि ''म्रियमाण'' इत्यादीनि उपांशुयाजादि-वाक्यमध्यपातिविष्ण्वादिवाक्यवत्तदनुसारेण नेयानि ।**

ಜ್ಞಾನಸಾಧನದ ಬಗ್ಗೆ ಪ್ರಶ್ನಿಸಿದಾಗ ಉತ್ತರನೀಡುವ ಉಪಕ್ರಮವಾಕ್ಯಕ್ಕಿಂತಲೂ ಆತ್ಮವಿಷಯಕವಾದ ಪ್ರಶ್ನೆಗೆ ಉತ್ತರನೀಡುವ ಉಪಕ್ರಮವಾಕ್ಯವು ಅಂತರಂಗವಾಗಿದೆ. ಇಂತಹ ಉಪಕ್ರಮದಿಂದ ಮತ್ತು ವಿಷ್ಣುವಿಷಯಕವಾದ ಉಪಸಂಹಾರವಾಕ್ಯದಿಂದ ಸಕಲ ವಾಕ್ಯಗಳಲ್ಲೂ ವಿಷ್ಣುಪರವಾಗಿದೆಯೆಂದು ನಿರ್ಣಯವಾಗುತ್ತದೆ. ಇಂತಹ ನಿರ್ಣೀತವಾದ ವಾಕ್ಯಗಳ ಮಧ್ಯದಲ್ಲಿ ಇರುವಂತಹ 'ಮ್ರಿಯಮಾಣಃ' ಇತ್ಯಾದಿ ವಾಕ್ಯಗಳನ್ನು ವಿಷ್ಣುಪರವಾಗಿಯೇ ಅರ್ಥೈಸಬೇಕು. ಯಾವರೀತಿಯಾಗಿ ಪೂರ್ವಮೀಮಾಂಸೆಯಲ್ಲಿ ಉಪಾಂಶುಯಾಗದ ವಾಕ್ಯಗಳ ಮಧ್ಯದಲ್ಲಿರುವ ವಿಷ್ಣ್ವಾದಿವಾಕ್ಯಗಳನ್ನು ಅರ್ಥವಾದ ಪರವೆಂದು ವ್ಯಾಖ್ಯಾನಿಸಲಾಗುತ್ತದೋ, ಅದರಂತೆ ಇಲ್ಲಿಯೂ ಸಹ ಹಿಂದಿನ-ಮುಂದಿನ ವಾಕ್ಯಗಳೆಲ್ಲವೂ ವಿಷ್ಣುಪರವಾದ್ದರಿಂದ ಮಧ್ಯದಲ್ಲಿ 'ಮ್ರಿಯಮಾಣಃ' ಇತ್ಯಾದಿ ಶ್ರುತಿಯನ್ನೂ ಕೂಡ ವಿಷ್ಣುಪರವಾಗಿಯೇ ವ್ಯಾಖ್ಯಾನಿಸಬೇಕು.

**तथाहि –**

**म्रियमाणादिलिङ्गानामन्तर्गतणिजर्थता ।**
**अश्वप्रतिग्रहेष्ट्यादौ गृह्णीयादिति शब्दवत् ॥ १ ॥**

ಮ್ರಿಯಮಾಣಾದಿಲಿಂಗಾನಾಮಂತರ್ಗತಣಿಜರ್ಥತಾ ।
ಅಶ್ವಪ್ರತಿಗ್ರಹೇಷ್ಟ್ಯಾದೌ ಗೃಹ್ಣೀಯಾದಿತಿ ಶಬ್ದವತ್ ॥೧॥

ಪೂರ್ವಮೀಮಾಂಸೆಯ ಅಶ್ವಪ್ರತಿಗ್ರಹೇಷ್ಟಿಯಲ್ಲಿ 'ಗೃಹ್ಣೀಯಾತ್' ಎಂಬ ಪದಕ್ಕೆ ಅಂತರ್ಭಾವಿತವಾದ ಣಿಜರ್ಥವನ್ನು ಮಾಡಿ, 'ಪ್ರತಿಗ್ರಾಹಯೇತ್' ಎಂದು ಅರ್ಥೈಸಿದಂತೆ ಪ್ರಕೃತ ಮ್ರಿಯಮಾಣಾದಿ ಲಿಂಗಗಳನ್ನೂ ಕೂಡ ಅಂತರ್ಭಾವಿತ ಣಿಜರ್ಥಪರವಾಗಿ ವ್ಯಾಖ್ಯಾನ ಮಾಡಬೇಕು. (ಶ್ರುತಿಯಲ್ಲಿರುವ ಮ್ರಿಯಮಾಣ ಶಬ್ದವನ್ನು ನೋಡಿದಾಗ ಸಾಯುವವನು ಎಂಬರ್ಥವು ತೋರುತ್ತದೆ. ಅಂತರ್ಭಾವಿತ ಣಿಜರ್ಥವನ್ನು ಮಾಡಿದಾಗ ಸಾಯಿಸುವವನು ಎಂಬರ್ಥವು ದೊರೆಯುತ್ತದೆ. ಅದರಂತೆ 'ಗೃಹ್ಣಿಯಾತ್' ಎಂಬುದೂ ಕೂಡ.)

**यदा ''प्रजापतिर्वरुणायाश्वमनयत्'' इत्याद्युपक्रममात्रानुसारेण ''यावतोऽश्वान् प्रतिगृह्णीयादित्यत्र प्रतिगृह्णीयादित्यस्य प्रतिग्राहयेदित्यन्तर्भावितणिजर्थता तदाहि किमु वाच्यमिहोपक्रमोपसंहारमध्यपरामर्शानुसारेण म्रियमाणादिशब्दानामन्तर्भावित-णिजर्थतेति ।**

ಪೂರ್ವಮೀಮಾಂಸೆಯಲ್ಲಿ 'ಪ್ರಜಾಪತಿರ್ವರುಣಾಯಾಶ್ವಮನಯತ್' ಎಂಬ ಉಪಕ್ರಮ ವಾಕ್ಯ ಮಾತ್ರಕ್ಕೆ ಅನುಸಾರಿಯಾಗಿ 'ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್' ಎಂಬಲ್ಲಿರುವ 'ಪ್ರತಿಗೃಹ್ಣೀಯಾತ್' ಎಂಬ ಪದಕ್ಕೆ ಅಂತರ್ಭಾವಿತವಾದ ಣಿಜರ್ಥವನ್ನು ಅಂಗೀಕರಿಸಿ, 'ಪ್ರತಿಗ್ರಾಹಯೇತ್' ಎಂದು

ಅರ್ಥೈಸಲಾಗಿದೆ. ಹೀಗಿರುವಾಗ ಉಪಕ್ರಮ, ಉಪಸಂಹಾರ ಹಾಗೂ ಮಧ್ಯದಲ್ಲಿ ಎಲ್ಲಡೆಯೂ ವಿಷ್ಣುವೇ ಪ್ರಕೃತನಾಗಿದ್ದಾನೆ. ಈ ಎಲ್ಲ ವಾಕ್ಯಗಳಿಗೆ ಅನುಸಾರಿಯಾಗಿ ಮ್ರಿಯಮಾಣಾದಿ ಶಬ್ದಗಳಿಗೆ ಅಂತರ್ಭಾವಿತವಾದ ಣಿಜರ್ಥತ್ವವನ್ನೇ ಅಂಗೀಕರಿಸಬೇಕೆಂದು ಪ್ರತ್ಯೇಕ ಹೇಳಬೇಕೇನು?

**दर्शिताश्च बृहदारण्यकभाष्येऽन्तर्भावितण्यर्था बहवः प्रयोगाः ''जज्ञे बहुज्ञं परमाभ्युदारं,**

ಬೃಹದಾರಣ್ಯಕಭಾಷ್ಯದಲ್ಲಿಯೂ ಕೂಡ ಅಂತರ್ಭಾವಿತ ನಿಜರ್ಥವುಳ್ಳ ಅನೇಕ ಪ್ರಯೋಗಗಳನ್ನು ತೋರಿಸಿದ್ದಾರೆ. 'ಜಜ್ಞೇ ಬಹುಜ್ಞಂ ಪರಮಾಭ್ಯುದಾರಂ' ಬಹುಜ್ಞಾನಿಯಾದ ಉದಾರಿಯಾದ ಮಗನನ್ನು ಹುಟ್ಟಿಸಿದಳು ಎಂದು ಇದರ ಅರ್ಥ. ಅಂದರೆ ಇಲ್ಲಿರುವ 'ಜಜ್ಞೇ' ಎಂಬ ಧಾತುವಿಗೆ ಹುಟ್ಟಿದನು ಎಂಬರ್ಥವಲ್ಲ. ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಿ, 'ಜನಯಾಮಾಸ' ಎಂದು ವ್ಯಾಖ್ಯಾನಿಸಲಾಗಿದೆ.

**तदेतन्मे विजानीहि यथाहं मन्दधीर्हरे ।**
**सुखं बुध्येय दुर्बोधं योषा भवदनुग्रहात् ॥**

**द्रष्टुश्चक्षुषोनास्ति जिह्वा''** इत्यादयः ।

ಇದರಂತೆ

'ತದೇತನ್ಮೇ ವಿಜಾನೀಹೀ ಯಥಾಹಂ ಮಂದಧೀರ್ಹರೇ ।
ಸುಖಂ ಬುಧ್ಯೇಯ ದುರ್ಬೋಧಂ ಯೋಷಾ ಭವದನುಗ್ರಹಾತ್ ॥

ಎಲೈ ! ಶ್ರೀಹರಿಯೇ ಮಂದಮತಿಯಾದ, ಸ್ತ್ರೀಯಾದ ನನಗೆ ತಿಳಿಯಲು ಕಷ್ಟಕರವಾದ ಪ್ರಮೇಯವನ್ನು ಭಗವಂತನ ಅನುಗ್ರಹದಿಂದ ಸುಖವಾಗಿ ತಿಳಿಯುವಂತೆ ನನಗೆ ಉಪದೇಶಿಸು ಎಂದು ದೇವಹೂತಿಯು ಕಪಿಲನ ಬಳಿ ಪ್ರಾರ್ಥಿಸುತ್ತಾಳೆ. ಇಲ್ಲಿ 'ವಿಜಾನೀಹಿ' ಎಂಬ ಧಾತುವಿಗೆ ತಿಳಿಯುತ್ತೇನೆ ಎಂದರ್ಥವಲ್ಲ. ಅಂತರ್ಭಾವಿತವಾದ ಣಿಜರ್ಥತ್ವವನ್ನು ಒಪ್ಪಿ ತಿಳಿಸು ಎಂದು ವ್ಯಾಖ್ಯಾನಿಸಲಾಗಿದೆ. ಇದರಂತೆ 'ದ್ರಷ್ಟುಶ್ಚಕ್ಷುಷೋ ನಾಸ್ತಿ ಜಿಹ್ವಾ' ಎಂಬಲ್ಲಿ ಆತ್ಮನೇ ದ್ರಷ್ಟುವಾಗಿದ್ದಾನೆ ಹೊರತು ಚಕ್ಷುರಿಂದ್ರಿಯವಲ್ಲ. ಆದ್ದರಿಂದ 'ದ್ರಷ್ಟುಃ' ಎಂಬ ಪದಕ್ಕೆ ನೋಡುವಂತೆ ಮಾಡುವ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಲಾಗಿದೆ.

**उक्तश्च प्रयोजककर्तर्यपि कर्तृत्वमात्र विवक्षायामण्यन्तप्रयोगस्तंत्रसारे प्रतिग्रहेष्टिनये ।**

ಪೂರ್ವಮೀಮಾಂಸೆಯ 'ತಂತ್ರಸಾರ' ಎಂಬ ಗ್ರಂಥದಲ್ಲಿ ಪ್ರತಿಗ್ರಹೇಷ್ವ್ಯಧಿಕರಣದ ವ್ಯಾಖ್ಯಾನ ಸಂದರ್ಭದಲ್ಲಿ ಹೀಗೆ ಹೇಳಲಾಗಿದೆ - 'ಪ್ರಯೋಜಕ ಕರ್ತೃವಿನಲ್ಲಿಯೂ ಕರ್ತೃತ್ವವಿರುವ ಕಾರಣ 'ಅಣ್ಯಂತ' ಪ್ರಯೋಗಗಳನ್ನು ಮಾಡಬಹುದು' ಎಂದು

('ರಾಮಃ ವನಂ ಗಚ್ಛತಿ' ಎಂಬಲ್ಲಿ ರಾಮನು ಕರ್ತೃವಾಗಿದ್ದಾನೆ. 'ದಶರಥಃ ರಾಮಂ ಗಮಯತಿ' ಎಂಬಲ್ಲಿ ಮುಖ್ಯವಾದ ಗಮನಕರ್ತೃವಾದವನು ರಾಮನಾಗಿದ್ದಾನೆ. ದಶರಥನು ಪ್ರಯೋಜಕ ಕರ್ತೃವಾಗಿದ್ದಾನೆ. ದಶರಥನು ಪ್ರಯೋಜಕ ಕರ್ತೃವಾಗಿದ್ದರೂ ಕೂಡ ಕರ್ತೃತ್ವ ಸಾಮಾನ್ಯವಂತೂ ಇರುತ್ತದೆಂಬುದು ಇಲ್ಲಿಯ ಅಭಿಪ್ರಾಯ.) ಆದ್ದರಿಂದ ಮ್ರಿಯಮಾಣತ್ವಾದಿ ಲಿಂಗಗಳು ಅಂತರ್ಭಾವಿತವಾದ ಣಿಜರ್ಥವುಳ್ಳವುಗಳಾಗಿವೆ ಎಂದು ಸಿದ್ಧವಾಯಿತು.

**''लोकावनुसञ्चरति'' इत्यादौ तु नान्तर्भावितण्यर्थता । ''लोकसञ्चरणं तु जीवमादाय तस्यैवादुःखेन स्वातन्त्र्यात्'' इति न्यायविवरणोक्तेः ।**

'ಲೋಕಾವನುಸಂಚರತಿ' ಎಂಬ ಶ್ರುತಿಯು ಉಭಯಲೋಕಸಂಚಾರವನ್ನು ಹೇಳುತ್ತಿದೆ. ಇದಕ್ಕೆ ಅಂತರ್ಭಾವಿತ ಣಿಜರ್ಥತ್ವವನ್ನು ಹೇಳಿ ವ್ಯಾಖ್ಯಾನ ಮಾಡುವ ಅವಶ್ಯಕತೆಯಿಲ್ಲ. ಸ್ವತಃ ಪರಮಾತ್ಮನೇ ಜೀವನನ್ನು ತೆಗೆದುಕೊಂಡು ಎರಡು ಲೋಕಗಳನ್ನು ಸಂಚಾರ ಮಾಡುತ್ತಾನೆಂದು ವ್ಯಾಖ್ಯಾನ ಮಾಡಬಹುದು. 'ಲೋಕಸಂಚರಣಂ ತು ಜೀವಮಾದಾಯ ತಸ್ಯೈವಾದುಃಖೇನ ಸ್ವಾತಂತ್ರ್ಯಾತ್' ಜೀವನನ್ನು ತೆಗೆದುಕೊಂಡು ಲೋಕಸಂಚಾರವನ್ನು ಮಾಡಿದರೂ ಸಹ ಪರಮಾತ್ಮನಿಗೆ ಸ್ವಾತಂತ್ರ್ಯವಿರುವ ಕಾರಣ ದುಃಖವಾಗುವುದಿಲ್ಲ ಎಂದು ನ್ಯಾಯವಿವರಣದಲ್ಲಿ ಹಾಗೇ ಹೇಳಿದ್ದಾರೆ.

**''पाप्मभिः संसृज्यते'' इत्यादात्रपि तथा । ''फलदानाय पापानां ग्रहः संसर्ग उच्यत'' इत्यादिबृहदारण्यकभाष्योक्तेः ।**

'ಪಾಪ್ಮಭಿಃ ಸಂಸೃಜ್ಯತೇ' ಎಂಬ ಶ್ರುತಿಗೂ ಕೂಡ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಿ ವ್ಯಾಖ್ಯಾನ ಮಾಡಬೇಕಾಗಿಲ್ಲ. ಏಕೆಂದರೆ 'ಫಲದಾನಾಯ ಪಾಪಾನಾಂ ಗ್ರಹಃ ಸಂಸರ್ಗ ಉಚ್ಯತೇ' ಇತ್ಯಾದಿಯಾಗಿ ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿದಂತೆ ಜೀವರಿಗೆ ಪಾಪ-ಪುಣ್ಯಗಳನ್ನು ನೀಡಲು ಅವುಗಳ ಸಂಪರ್ಕವನ್ನು ಪರಮಾತ್ಮನಿಗೆ ಹೇಳಲಾಗಿದೆ. ಅಂದರೆ ಪಾಪ-ಪುಣ್ಯಗಳು ಫಲೋನ್ಮುಖಿಗಳಾಗುವಂತೆ ಪರಮಾತ್ಮನು ಪ್ರೇರಣೆ ಮಾಡುತ್ತಾನೆ. ಹೀಗೆ ಹೇಳಿದ ಮಾತ್ರಕ್ಕೆ ಪರಮಾತ್ಮನಲ್ಲಿ ಯಾವ ಉಚ್ಚತ್ವ-ನೀಚತ್ವಗಳು ಉಂಟಾಗುವುದಿಲ್ಲ.

**अत्र ''यस्य ज्योतिरयं विष्णुः स परामृश्यते तथा'' इत्यादिबृहदारण्यकभाष्योक्तरीत्या यदा म्रियमाणत्वादिकं जीवगतं तदात्रापि न ण्यर्थान्तर्भावः ।**

'ಯಸ್ಯ ಜ್ಯೋತಿರಯಂ ವಿಷ್ಣುಃ ಸ ಪರಾಮೃಶ್ಯತೇ ತಥಾ' ಯಾವ ಜೀವನಿಗೆ ವಿಷ್ಣು ಜ್ಞಾನಸಾಧನನಾಗಿದ್ದಾನೋ, ಅಂತಹ ಜೀವನನ್ನು ಇಲ್ಲಿ ಪರಾಮರ್ಶ ಮಾಡಬೇಕು ಇತ್ಯಾದಿಯಾಗಿ ಬೃಹದಾರಣ್ಯಕಭಾಷ್ಯದಲ್ಲಿ ಶ್ರುತಿಯನ್ನು ವ್ಯಾಖ್ಯಾನ ಮಾಡಿದ್ದಾರೆ. ಈ ವ್ಯಾಖ್ಯಾನವನ್ನು ವಿವಕ್ಷಿಸಿದಾಗ ಮ್ರಿಯಮಾಣತ್ವಾದಿಗಳಿಗೆ ಅಂತರ್ಭಾವಿತವಾದ ಣಿಜರ್ಥತ್ವವನ್ನು ಒಪ್ಪಬೇಕಾಗಿಲ್ಲ. ಅಂದರೆ ಮ್ರಿಯಮಾಣತ್ವಾದಿ ಧರ್ಮಗಳುಳ್ಳ ಯಾವಜೀವನಿದ್ದಾನೋ, ಅಂತಹ ಜೀವನಿಗೆ ಜ್ಞಾನಸಾಧನನಾದವನು ಪರಮಾತ್ಮನೆಂದೇ ವ್ಯಾಖ್ಯಾನ ಮಾಡಲು ಬರುತ್ತದೆ.

**किन्तु**

**यदा तु भगवानुक्तस्तदा स्वातन्त्र्यतो विभुः ।**
**म्रियमाणो जायमान इत्युक्तस्तन्नियामकः ।।**

**इति तत्रोक्तभगवद्गतत्वपक्ष एवेति द्रष्टव्यम् ।**

ಆದರೆ

ಯದಾ ತು ಭಗವಾನುಕ್ತಃ ತದಾ ಸ್ವಾತಂತ್ರ್ಯತೋ ವಿಭುಃ ।
ಮ್ರಿಯಮಾಣೋ ಜಾಯಮಾನ ಇತ್ಯುಕ್ತಸ್ತನ್ನಿಯಾಮಕಃ ॥

ಎಲ್ಲಾ ವಾಕ್ಯಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನಾದಾಗ 'ಮ್ರಿಯಮಾಣಃ', 'ಜಾಯಮಾನಃ' ಇತ್ಯಾದಿ ಶಬ್ದಗಳಿಗೆ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಿ, ಅವುಗಳಿಗೆ ನಿಯಾಮಕನಾಗಿದ್ದಾನೆಂದು ವ್ಯಾಖ್ಯಾನ ಮಾಡಬೇಕು. ಆದ್ದರಿಂದ ಮ್ರಿಯಮಾಣತ್ವಾದಿಗಳು ಭಗವಂತನಲ್ಲಿವೆ ಎಂಬ ಪಕ್ಷದಲ್ಲಿ ಮಾತ್ರ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಬೇಕು.

**आदित्येनैवेत्यवधारणं तु बाह्यज्योतिषु प्राधान्यापेक्षयेति न्यायविवरण एवोक्तम् । अत्रेति विशिष्योक्तिरपि स्वप्नादौ ज्योतिरन्तराभावाभिप्राया ।**

'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣವಾದರೂ ಬಾಹ್ಯಜ್ಯೋತಿಗಳ ನಡುವೆ ಆದಿತ್ಯನು ಪ್ರಧಾನನಾಗಿದ್ದಾನೆಂಬ ಅಭಿಪ್ರಾಯದಿಂದಷ್ಟೇ ಹೊರತು, ವಿಷ್ಣು ಜ್ಞಾನಸಾಧನನೇ ಅಲ್ಲವೆಂಬ ಅಭಿಪ್ರಾಯದಿಂದಲ್ಲ. ಇದನ್ನು ನ್ಯಾಯವಿವರಣದಲ್ಲಿಯೇ ಹೇಳಿರುತ್ತಾರೆ. ಮತ್ತು 'ಅತ್ರ' ಎಂಬ ವಿಶೇಷವಾದ ವಚನವೂ ಕೂಡ ಸ್ವಪ್ನಾದ್ಯವಸ್ಥೆಗಳಲ್ಲಿ ಬೇರೆ ಜ್ಞಾನಸಾಧನಗಳಿರುವುದಿಲ್ಲ ಪರಮಾತ್ಮನಷ್ಟೇ ಜ್ಞಾನಸಾಧನನಾಗಿರುತ್ತಾನೆಂಬ ಅಭಿಪ್ರಾಯದಿಂದ.

**प्रकाशः –**

श्रुत्यादौ ज्योतिश्शब्दस्य विष्ण्वेकवाचित्वोक्तेर्मुख्यार्थत्यागे बाधकाभावाज्जीवलिङ्गानां च ब्रह्मपरोपक्रमोपसंहारप्रतीतैकवाक्यमध्यपतिततया ब्रह्मण्येव कथञ्चिन्नेयत्वादिदं ज्योतिर्विष्णुरेवेति भावेन ''विष्णुरेवेदं ज्योतिः'' इत्यादिसिद्धान्तटीकां विवृण्वन् सिद्धान्तयति ।। **सिद्धान्तस्त्विति** ।।

ವಿವರಣೆ - ವಿಷ್ಣುವೇ 'ಜ್ಯೋತಿಃ' ಎಂಬ ಶಬ್ದದಿಂದ ಮುಖ್ಯಪ್ರತಿಪಾದ್ಯನೆಂದು ಸಿದ್ಧಾಂತ ಮಾಡುತ್ತಿದ್ದಾರೆ. ಅನೇಕ ಶ್ರುತಿಗಳಲ್ಲಿ ವಿಷ್ಣುನೊಬ್ಬನೇ 'ಜ್ಯೋತಿಃ' ಶಬ್ದದಿಂದ ಮುಖ್ಯಪ್ರತಿಪಾದ್ಯನೆಂದು ಹೇಳಲಾಗಿದೆ. ಮುಖ್ಯವಾದ ವಿಷ್ಣುವೆಂಬರ್ಥವನ್ನು ಬಿಡಲು ಯಾವುದೇ ಬಾಧಕ ಪ್ರಮಾಣಗಳಿರುವುದಿಲ್ಲ. ಮತ್ತು ಜೀವವಿಷಯಕವಾದ ಲಿಂಗಗಳೆಲ್ಲವೂ ವಿಷ್ಣುಪರವಾದ ಉಪಕ್ರಮೋಪಸಂಹಾರಗಳಿಂದ ತಿಳಿಯುತ್ತಿರುವ ಏಕವಾಕ್ಯತ್ವ ಪ್ರಕರಣದ ಮಧ್ಯದಲ್ಲಿ ಹೇಳಲ್ಪಟ್ಟಿವೆ. ಅಂತಹ ಲಿಂಗಗಳೆಲ್ಲವನ್ನು ಬ್ರಹ್ಮನಲ್ಲೇ ಕಥಂಚಿತ್ ಕೂಡಿಸಬೇಕು. ಆದ್ದರಿಂದ ವಿಷ್ಣುವೊಬ್ಬನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನು. ಈ ಅಭಿಪ್ರಾಯದಿಂದ 'ವಿಷ್ಣುರೇವೇದಂ ಜ್ಯೋತಿಃ' ಇತ್ಯಾದಿ ಟೀಕೆಯೂ ಹೊರಟಿದೆ. ಅದನ್ನು ವಿವರಿಸುವವರಾಗಿ ಸಿದ್ಧಾಂತ ಸ್ಥಾಪನೆ ಮಾಡುತ್ತಿದ್ದಾರೆ 'ಸಿದ್ಧಾಂತಸ್ತು' ಇತ್ಯಾದಿ ಗ್ರಂಥದಿಂದ.

**प्रकाशः – अवधारणादिति** ।। यद्यसौ भगवति मुख्यो न स्यात्तदाऽन्ययोगव्यवच्छेदकावधारणं न स्यात् । आदित्यादौ ज्योतिश्शब्दवृत्तेर्दर्शनात् । मुख्यत्वे त्वन्यत्रामुख्यत्वाभिप्रायेण विष्णुरेव ज्योतिरित्यवधारणं सङ्गच्छत इत्यर्थः।

ಒಂದು ವೇಳೆ 'ಜ್ಯೋತಿಃ' ಎಂಬ ಶಬ್ದಕ್ಕೆ ಭಗವಂತನಲ್ಲಿ ಮುಖ್ಯಾರ್ಥತ್ವವನ್ನು ಒಪ್ಪದಿದ್ದರೆ ಆವಾಗ ಅನ್ಯಯೋಗವ್ಯವಚ್ಛೇದವಾದ ಅವಧಾರಣವೇ ಯುಕ್ತವಾಗುವುದಿಲ್ಲ. ಏಕೆಂದರೆ ಆದಿತ್ಯಾದಿಗಳಲ್ಲಿಯೂ ಕೂಡ 'ಜ್ಯೋತಿಃ' ಶಬ್ದದ ಪ್ರವೃತ್ತಿಯು ಕಾಣಿಸುತ್ತಿದೆ. ಮುಖ್ಯಾರ್ಥತ್ವವನ್ನು ಒಪ್ಪಿದಾಗ ಆದಿತ್ಯಾದಿಗಳಲ್ಲಿ ಅಮುಖ್ಯವಾದ ಜ್ಯೋತಿಷ್ಟ್ವವು ಇರುತ್ತದೆ. ವಿಷ್ಣುವಿನಲ್ಲಿ ಮುಖ್ಯವಾದ ಜ್ಯೋತಿಷ್ಟ್ವವು ಇರುತ್ತದೆಂದು ಅವಧಾರಣವನ್ನು ಕೂಡಿಸಬಹುದು.

**प्रकाशः** – मुख्यत्वे युक्त्यन्तरमाह – **नारायणेति** ।। **परत्वादीति** ।। ज्योतिषां ज्योतिष्ट्वविशेषणाच्चेत्यादिपदार्थः ।

ನಾರಾಯಣನೇ ಮುಖ್ಯವಾದ ಜ್ಯೋತಿಯೆನಿಸಿದ್ದಾನೆ ಎನ್ನಲು ಮತ್ತೊಂದು ಯುಕ್ತಿಯನ್ನು 'ನಾರಾಯಣ' ಇತ್ಯಾದಿಯಾಗಿ ಹೇಳಿದ್ದಾರೆ. ಪರತ್ವವಿಶೇಷಣದಿಂದ ಮುಖ್ಯವಾದ ಜ್ಯೋತಿ ಪರಮಾತ್ಮನೆಂದು ತಿಳಿಯುತ್ತದೆ. ಆದಿಪದದಿಂದ 'ಜ್ಯೋತಿಷಾಂ ಜ್ಯೋತಿಃ' ಎಂಬುದಾಗಿ ಜ್ಯೋತಿಯಲ್ಲಿ ಜ್ಯೋತಿಯನ್ನೇ ವಿಶೇಷಣವನ್ನಾಗಿ ಇರುವುದನ್ನು ವಿವಕ್ಷಿಸಬೇಕು. ಎಲ್ಲ ಜ್ಯೋತಿಗಳ ನಡುವೆ ಇವನೇ ಮುಖ್ಯವಾದ ಜ್ಯೋತಿಯೆಂದು ಇದರ ಅಭಿಪ್ರಾಯ.

**प्रकाशः** – ननूक्तं जीवलिङ्गबलादेव मुख्यार्थत्याग इति तत्राह – **स चेति** ।। विष्ण्वेकवाची ज्योतिश्शब्द इत्यर्थः ।

ಮುಖ್ಯವಾದ ಜ್ಯೋತಿ ಪರಮಾತ್ಮನೆಂಬುದನ್ನು ಪೂರ್ವಪಕ್ಷಿಯು ಅಲ್ಲಗಳೆಯುತ್ತಿಲ್ಲ, ಹೊರತಾಗಿ ಪ್ರಕೃತ ಶೃತಿಯಲ್ಲಿ ಜೀವನ ಲಿಂಗಗಳು ಅನೇಕ ಕೇಳಿಸುತ್ತಿರುವುದರಿಂದ, ಪರಮಾತ್ಮನೆಂಬ ಮುಖ್ಯಾರ್ಥವನ್ನು ತ್ಯಾಗ ಮಾಡಬೇಕೆಂದು ಪೂರ್ವಪಕ್ಷಿಯ ಅಭಿಪ್ರಾಯ. ಈ ಪ್ರಶ್ನೆಗೆ 'ಸಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಸಚ' ಎಂದರೆ ವಿಷ್ಣುವೊಬ್ಬನನ್ನೇ ಪ್ರತಿಪಾದನೆ ಮಾಡುವ 'ಜ್ಯೋತಿಃ' ಎಂಬ ಶಬ್ದವು ಎಂದರ್ಥ. ಇದು ಉಪಕ್ರಮ ಹಾಗೂ ಉಪಸಂಹಾರಗಳಲ್ಲಿ ಪ್ರಸಕ್ತವಾಗಿದೆ. ಆದ್ದರಿಂದ ವಿಷ್ಣುವೊಬ್ಬನೇ ಪ್ರತಿಪಾದ್ಯನು.

**प्रकाशः** – नन्वस्त्वेवम् । ''किं ज्योतिरयं पुरुष'' इति जीवोपक्रमस्यापि सत्त्वात्कथं निर्णय इत्यत आह – **तथाचेति** ।।

ಪರಮಾತ್ಮನಲ್ಲಿ ಉಪಕ್ರಮ ಉಪಸಂಹಾರಗಳಿರುವಂತೆ ಜೀವವಿಷಯದಲ್ಲಿಯೂ ಕೂಡ ಉಪಕ್ರಮ ಉಪಸಂಹಾರಗಳೇ ಆಧಾರವಾಗಿವೆ. 'ಕಿಂ ಜ್ಯೋತಿರಯಂ ಪುರುಷಃ' ಎಂಬುದಾಗಿ ಉಪಕ್ರಮವಾಕ್ಯವು ಜೀವನನ್ನೇ ಪ್ರತಿಪಾದನೆ ಮಾಡುತ್ತಿದೆ. ಹೀಗಿರುವಾಗ ಯಾವ ಉಪಕ್ರಮ ಉಪಸಂಹಾರಗಳನ್ನು ಆಧರಿಸಿ ನಿರ್ಣಯಿಸಬೇಕು? ಎಂಬ ಪ್ರಶ್ನೆಗೆ 'ತಥಾಚ' ಎಂಬುದರಿಂದ ಉತ್ತರಿಸಿದ್ದಾರೆ. ಅಂದರೆ ಜೀವಪರವಾದ ಉಪಕಮಾದಿಗಳಿಗಿಂತಲೂ ವಿಷ್ಣುಪರವಾದ ಉಪಕ್ರಮಾದಿಗಳು ಅಂತರಂಗವಾದ ಕಾರಣ ಪ್ರಬಲವಾಗಿವೆ.

**प्रकाशः** – **उपांशुयाजेति** ।। प्रपञ्चितमेतदधिकरणशरीरमाद्यसूत्रे । ''विष्णुरुपांशु यष्टव्य'' इत्यादिवाक्यमर्थवादत्वेन यथोपांशु याजशेषत्वेन नियतं तद्वदित्यर्थः । उत्तरार्धोक्तदृष्टान्तव्यक्तिपूर्वं पूर्वार्धोक्तदार्ष्टान्तिके विशेषमाह – **यदेत्यादिना** ।। **प्रजापतिरिति** ।। विवृतमेतत्समन्वयाधिकरणे ।

'ಉಪಾಂಶುಯಾಜಂ ಅಂತರಾ ಯಜೇತಿ' ಎಂಬ ಈ ವಾಕ್ಯವನ್ನು ಜಿಜ್ಞಾಸಾಧಿಕರಣದಲ್ಲಿ ವಿವರಿಸಿದ್ದಾಗಿದೆ. 'ವಿಷ್ಣುರುಪಾಂಶು ಯಷ್ಟವ್ಯ ಅಜಾಮಿತ್ವಾಯ' ಎಂಬ ವಾಕ್ಯವು ಅರ್ಥವಾದ ರೂಪವಾಗಿದೆ. ಉಪಾಂಶುಯಾಗಕ್ಕೆ ಶೇಷಭೂತವಾಗಿ ಇದನ್ನು, ವ್ಯಾಖ್ಯಾನ ಮಾಡಬೇಕು ಎಂದು ನಿರ್ಣಯಿಸಿದಂತೆ ಇಲ್ಲಿಯೂ ಕೂಡ ವಿಷ್ಣುಪರವಾದ ವಾಕ್ಯಗಳ ಮಧ್ಯದಲ್ಲಿರುವ ಮ್ರಿಯಮಾಣತ್ವಾದಿಗಳನ್ನು ವಿಷ್ಣುಪರವಾಗಿ ವ್ಯಾಖ್ಯಾನಿಸಬೇಕು.

'ಮ್ರಿಯಾಮಾಣಾದಿ' ಎಂಬ ಶ್ಲೋಕದಲ್ಲಿ ಉತ್ತರಾರ್ಧವು ದೃಷ್ಟಾಂತವನ್ನು ಹೇಳುತ್ತಿದೆ. ಪೂರ್ವಾರ್ಧವು ದಾರ್ಷ್ಟಾಂತಿಕವನ್ನು ಹೇಳುತ್ತಿದೆ. ಉತ್ತರಾರ್ಧದಲ್ಲಿ ಹೇಳಿರುವ ದೃಷ್ಟಾಂತವನ್ನು ಸ್ಪಷ್ಟಪಡಿಸುತ್ತಾ ಪೂರ್ವಾರ್ಧದಲ್ಲಿ ಹೇಳಿರುವ ದಾರ್ಷ್ಟಾಂತಿಕದಲ್ಲಿ ವಿಶೇಷವನ್ನು ಹೇಳುತ್ತಿದ್ದಾರೆ 'ಯದಾ' ಇತ್ಯಾದಿ ಗ್ರಂಥದಿಂದ. 'ಪ್ರಜಾಪತಿಃ ವರುಣಾಯ ಅಶ್ವಮನಯತ್' ಎಂಬ ಪೂರ್ವಮೀಮಾಂಸೆಯ ವಾಕ್ಯವನ್ನು ಸಮನ್ವಯಾಧಿಕರಣದಲ್ಲೇ ವಿವರಿಸಿದ್ದಾಗಿದೆ.

**प्रकाशः** – ननु प्रयोगाधीना ह्यर्थकल्पनेत्यत आह – **दर्शिताश्चेति** ।। जज्ञे जनयामास । विजानीहि विज्ञापय । द्रष्टुः दर्शयितुः । एतेन ''न चेमं लोकमतिक्रामति मृत्योरूपाणीत्याद्युक्तलिङ्गविरोधः । द्रष्टुश्चक्षुष इत्यादिवदन्तर्णीतणिच्त्वेनोपपत्तेः'' इति टीका हेतूक्तिपूर्वं विवृता भवति ।।

ಪ್ರಯೋಗಾಧೀನವಾಗಿ ಅರ್ಥವನ್ನು ಕಲ್ಪನೆ ಮಾಡಬೇಕು. ಪ್ರಕೃತ ಮ್ರಿಯಮಾಣಾತ್ವಾದಿ ಶಬ್ದಗಳಿಗೆ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಿ, ಅರ್ಥೈಸಬೇಕೆನ್ನಲು ಅಂತಹ ಪ್ರಯೋಗಗಳು ಕಂಡಿವೆಯೇನು? ಎಂಬ ಪ್ರಶ್ನೆಗೆ 'ದರ್ಶಿತಾಶ್ಚ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ. 'ಜಜ್ಞೇ' ಎಂದರೆ 'ಜನಯಾಮಾಸ = ಹುಟ್ಟಿಸಿದಳು' ಎಂದರ್ಥ. 'ವಿಜಾನೀಹಿ' ಎಂದರೆ 'ತಿಳಿಸು ಎಂದು' 'ದ್ರಷ್ಟುಃ' ಎಂದರೆ 'ನೋಡುವಂತೆ ಮಾಡುವ' ಎಂದು ಅರ್ಥವನ್ನು ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ನ ಚೇಮಂ ಲೋಕಮತಿಕ್ರಾಮತಿ ಮೃತ್ಯೋಃ ರೂಪಾಣಿ ಇತ್ಯಾದ್ಯುಕ್ತಲಿಂಗವಿರೋಧಃ । ದ್ರಷ್ಟುಶ್ಚಕ್ಷುಷ ಇತ್ಯಾದಿವದಂತರ್ಣೀತಣಿಚ್ತ್ವೇ-ನೋಪಪತ್ತೇಃ' ಎಂಬ ಟೀಕಾವಾಕ್ಯವನ್ನು ಕಾರಣಪುರಸ್ಸರವಾಗಿ ವ್ಯಾಖ್ಯಾನ ಮಾಡಿದಂತಾಯಿತು.

**प्रकाशः** – **प्रतिग्रहेष्टिनय इति** ।। ''अचोदितं च कर्मभेदात्'' इति तृतीयाध्यायस्य चतुर्थपाद एकादशाधिकरण इत्यर्थः । अधिकरणशरीरं तु समन्वयसूत्रे विवृतम् ।

ಪ್ರತಿಗ್ರಹೇಷ್ಟ್ಯಧಿಕರಣದಲ್ಲಿ ಅಂದರೆ 'ಅಚೋದಿತಂ ಚ ಕರ್ಮಭೇದಾತ್' ಎಂಬ ಮೂರನೇ ಅಧ್ಯಾಯದ ನಾಲ್ಕನೆಯ ಪಾದದ ಹನ್ನೊಂದನೆಯ ಅಧಿಕರಣದಲ್ಲಿ ಎಂದರ್ಥ. ಇದನ್ನು ಸಮನ್ವಯಸೂತ್ರದಲ್ಲಿಯೇ ವಿವರಿಸಿದ್ದಾಗಿದೆ.

**प्रकाशः** – ''यावतोऽश्वान् प्रतिगृह्णीयात्तावतो वारुणांश्चतुष्कपालान्निर्वपेत्'' इत्यत्र गृह्णीयादित्यस्य ग्राहयेदित्यर्थमुक्त्वा तत्र प्रयोगोऽप्युक्त इत्यर्थः ।

'ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್ ತಾವತೋ ವಾರುಣಾಂಶ್ಚತುಷ್ಕಪಾಲಾನ್ ನಿರ್ವಪೇತ್' ಎಂಬಲ್ಲಿ 'ಗೃಹ್ಣೀಯಾತ್' ಎಂಬ ಪದಕ್ಕೆ 'ಗ್ರಾಹಯೇತ್' ಎಂಬ ಅರ್ಥವನ್ನು ಸ್ವೀಕರಿಸಲಾಗಿದೆ. ಅಂದರೆ ಮಹೋದರ ರೋಗ ಪರಿಹಾರಕ್ಕಾಗಿ ಪ್ರಜಾಪತಿಯು ಯಜ್ಞವನ್ನು ಮಾಡಿದ್ದಾನೆ. ಅದರಿಂದ ಅವನಿಗೆ ರೋಗವು ಪರಿಹಾರವಾಗಿದೆ ಎಂಬ ವಿಷಯವು ಉಪಕ್ರಮದಲ್ಲಿ ಪ್ರಸಕ್ತವಾಗಿದೆ. ಅನಂತರ 'ಯಾವತೋ ಅಶ್ವಾನ್' ಎಂಬ ವಾಕ್ಯವು ಪ್ರಸಕ್ತವಾಗಿದೆ. ಅಂದರೆ ಎಷ್ಟು ಅಶ್ವಗಳನ್ನು ತೆಗೆದುಕೊಳ್ಳುತ್ತಾನೋ ಅಷ್ಟು ಪ್ರತಿಗ್ರಹೇಷ್ಟಿಯನ್ನು ಆಚರಿಸಬೇಕೆಂದು ಈ ವಾಕ್ಯವು ವಿಧಿಸುತ್ತಿದೆ. ಇಲ್ಲಿ 'ಪ್ರತಿಗೃಹ್ಣೀಯಾತ್' ಎಂಬ ಪದವನ್ನು ನೋಡಿದಾಗ ಯಾರು ಅಶ್ವವನ್ನು ತೆಗೆದುಕೊಳ್ಳುತ್ತಾನೋ ಅವನೇ ಪ್ರತಿಗ್ರಹೇಷ್ಟಿಯನ್ನು ಮಾಡಬೇಕೆಂಬ ಭ್ರಾಂತಿಯು ಬರುತ್ತದೆ. ಆದರೆ ಉಪಕ್ರಮದಲ್ಲಿ ಪ್ರಜಾಪತಿಯು ಯಜ್ಞಮಾಡುತ್ತಾನೆಂದು ಪ್ರಸಕ್ತವಾಗಿದೆ.

ಅದಕ್ಕಾಗಿ 'ಪ್ರತಿಗೃಹ್ಣೀಯಾತ್' ಎಂಬುದಕ್ಕೆ 'ಪ್ರತಿಗ್ರಾಹಯೇತ್' ಎಂಬರ್ಥವನ್ನು ಹೇಳಬೇಕು. ಅಂದರೆ ಕೊಡುತ್ತಾನೆ ಎಂಬರ್ಥವು ದೊರೆಯುತ್ತದೆ. ಇದರಿಂದ ಧಾತ್ರವಿಗಷ್ಟೇ ಇಷ್ಟಿಯನ್ನು ವಿಧಾನ ಮಾಡಲಾಗಿದೆ ಹೊರತು, ಪ್ರತಿಗೃಹೀತೃವಿಗೆ ಇಷ್ಟಿಯನ್ನು ವಿಧಿಸುತ್ತಿಲ್ಲವೆಂದು ಉಪಕ್ರಮಕ್ಕೆ ಅನುಗುಣವಾಗಿ ಉಪಸಂಹಾರವನ್ನು ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – ननु लोकसञ्चरणलिङ्गविरोध इत्यतः ''जीवमादायेश्वरस्यैवोभयलोकसञ्चरणोक्तेर्न तद्विरोध'' इति टीकां विवृण्वंस्तन्मूलमाह – **लोकाविति** ।।

ಹಾಗಾದರೆ ಲೋಕಸಂಚಾರ ಎಂಬ ಲಿಂಗದ ವಿರೋಧವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಜೀವಮಾದಾಯೇಶ್ವರಸ್ಯೈವ ಉಭಯಲೋಕಸಂಚರಣೋಕ್ತೇಃ ನ ತದ್ವಿರೋಧಃ' ಇತ್ಯಾದಿ ಟೀಕಾಮಾತಿನಿಂದ ಉತ್ತರಿಸುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ 'ಲೋಕೌ' ಇತ್ಯಾದಿ ಗ್ರಂಥದಿಂದ.

**प्रकाशः** – म्रियमाणादावपि ण्यर्थता त्वर्थविशेष एवेत्याह – **अत्रेति** ।। स परामृश्यते स जायमान इत्यादौ तच्छब्देनेत्यर्थः ।

'ಮ್ರಿಯಮಾಣಾದಿ' ಶಬ್ದಗಳಿಗೆ ಅಂತರ್ಭಾವಿತ ಣಿಜರ್ಥತ್ವವನ್ನು ಹಿಂದಿನ ಪಕ್ಷದಲ್ಲಷ್ಟೇ ಹೇಳಲಾಗಿತ್ತು. ಒಂದು ವೇಳೆ ಜೀವನ ಬಗ್ಗೆ ಪ್ರಕರಣವು ಹೇಳಿ ಅಂತಹ ಜೀವನಿಗೆ ಪರಮಾತ್ಮನು ಜ್ಞಾನಸಾಧನನಾಗಿದ್ದಾನೆಂದು ಹೇಳುವಾಗ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಬೇಕಾಗಿಲ್ಲ. ಗ್ರಂಥದಲ್ಲಿರುವ 'ಅತ್ರ' ಇತ್ಯಾದಿ ವಾಕ್ಯಕ್ಕೆ ಹೀಗರ್ಥ - 'ಸವಾಯಂ ಪುರುಷಃ ಜಾಯಮಾನಃ' ಎಂಬಲ್ಲಿರುವ 'ತತ್' ಶಬ್ದದಿಂದ ಜೀವನೇ ಪರಾಮೃಶ್ಯನಾಗಿದ್ದಾನೆ ಎಂದು.

**प्रकाशः** – नन्वथाप्यादित्येनैवेत्यवधारणं स्वप्नादौ विशिष्य ब्रह्मणो ज्ञानहेतुत्वोक्तिश्चायुक्ता । नच जीवपक्षेऽप्येतद्दोषसाम्यापादनमात्रेण स्वपक्षे स दोषः परिहृतो भवतीत्यतो ''नचैवं सत्यवधारणविरोध'' इत्यादिटीकार्थं मूलोक्त्या व्यनक्ति ।। **आदित्येनैवेति** ।।

ಆದರೂ ಸಹ 'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣವು ಸ್ವಪ್ನಾದ್ಯವಸ್ಥೆಗಳಲ್ಲಿ ವಿಶೇಷವಾಗಿ ಬ್ರಹ್ಮನನ್ನು ಹೇಳುವಿಕೆಯು ಅಯುಕ್ತವಾಗುತ್ತದಲ್ಲವೇ? ಈ ದೋಷವು ಜೀವನ ಪಕ್ಷದಲ್ಲಿಯೂ ಸಮಾನವಾದ್ದರಿಂದ ಸ್ವಪಕ್ಷದಲ್ಲಿ ಆ ದೋಷವು ಪರಿಹಾರವಾದಂತಾಯಿತಲ್ಲವೇ? ಎಂಬ ಪ್ರಶ್ನೆಗೆ 'ನಚೈವಂ ಸತ್ಯವಧಾರಣವಿರೋಧಃ' ಇತ್ಯಾದಿ ಟೀಕೆಯ ಅರ್ಥವನ್ನು ಮೂಲವನ್ನು ಹೇಳುವ ಮೂಲಕ ಸ್ಪಷ್ಟ ಮಾಡುತ್ತಿದ್ದಾರೆ 'ಆದಿತ್ಯೇನೈವ' ಇತ್ಯಾದಿ ಗ್ರಂಥದಿಂದ.

**प्रकाशः** – ''नच विशिष्योक्तिविरोध'' इत्यादिटीकां व्यनक्ति ।। **अत्रेतीति** ।। टीकायामेव तदुक्तमिति संमत्युक्तेर्नात्र मूलोक्तिः ।

'ನಚ ವಿಶಿಷ್ಯೋಕ್ತಿವಿರೋಧಃ' ಇತ್ಯಾದಿ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಟೀಕೆಯಲ್ಲಿಯೇ 'ತದುಕ್ತಮ್' ಎಂದು ಮೂಲಾರೂಢ ಮಾಡಿದ್ದರಿಂದ ಪ್ರಕೃತ ಗ್ರಂಥಕಾರರು ಹೇಳಿದ ವಿಚಾರವನ್ನು ಮೂಲಾರೂಢ ಮಾಡಿರುವುದಿಲ್ಲ.

**गुरुराजीयम् – उपक्रमानुसारेणेति ।।** नन्वेतदयुक्तम् । समन्वयाधिकरणे तंत्रसारे -

मैत्रायणीयशाखायां दात्रुपक्रमतोऽप्यृते ।
कर्माङ्गत्ववशादेव दातुरिष्टिः प्रतीयते ।।

इत्युपक्रमं विनैव दातुरिष्टिरित्युक्तत्वादिति ह्युक्तम् । अत्रोपक्रममात्रानुसारेण प्रतिगृह्णीयादित्यस्यान्तर्णीतण्यर्थतोच्यते । तथाच पूर्वोत्तरविरोध इति चेन्न । अस्य भट्टसिद्धान्तानुवादरूपत्वात् । समन्वयाधिकरणे च तन्मतापवादकताभिधानान्न दोषः । द्रष्टुश्चक्षुष इत्यादिवदिति टीकास्थादिपदसङ्ग्राह्यमाह – **जज्ञ इत्यादिना ।।**

जज्ञे बहुज्ञं परमाभ्युदारं यद्वीपमध्ये सुतमात्मभाजम् ।
पराशराद्गन्धवती महर्षिस्तस्मै नमो ज्ञानतमोनुदाय ।। इति ।

टीकायां न चेमं लोकमतिक्रामति मृत्योरूपाणीत्याद्युक्तलिङ्गविरोधे शङ्किते सर्वेषामन्तर्भावितण्यर्थत्वेन परिहारोभिमत इति प्रतीयते । तदयुक्तम् । तथासति न्यायविवरणबृहद्भाष्यविरोधापत्तेरित्यतोऽभिप्रायमाह–**लोकावनुसञ्चरतीत्यादाविति ।।** तथा अन्तर्भावितण्यर्थतेत्यर्थः । ननु "यस्य ज्योतिरयं विष्णुः स परामृश्यते तथा" इत्यादि बृहद्भाष्योक्तरीत्या म्रियमाणत्वस्यापि जीवगतत्वादन्तर्भावितण्यर्थत्वोक्तिरयुक्तेत्यत आह – **अत्रेति ।। तत्रोक्तेति ।।** बृहद्भाष्योक्तेत्यर्थः । ननु ब्रह्मणो ज्योतिष्ट्वे आदित्येनैवेत्यवधारणायोग इत्यत आह – **आदित्येनैवेति ।।** ननु ब्रह्मणो जागरणेऽपि जीवज्ञानहेतुत्वेन स्वप्नादावत्रायं पुरुषः स्वयं ज्योतिर्भवतीति विशिष्य ब्रह्मणो ज्ञानहेतुत्वोक्तिरयुक्तेत्यत आह – **अत्रेतीति ।।** ननु किं ज्योतिरयं पुरुष इति ज्ञानसाधनप्रश्नोपक्रमस्थस्य जीवस्यायं पुरुषः स्वयं ज्योतिरित्यात्मप्रश्नोत्तरोपसंहारे पुरुषादिशब्दैः प्रत्यभिज्ञानविरोध इत्याशङ्क्ते ।। **न चेति ।।** तथा लाक्षणिको न हीत्यर्थः ।

ಪರಿಪೂರ್ಣಚಂದ್ರಿಕಾ




ಉಪನಿಷತ್ತು 'ವಿಷ್ಣುರೇವ ಜ್ಯೋತಿಃ' ವಿಷ್ಣು ಒಬ್ಬನೇ ಜ್ಯೋತಿಯೆನಿಸಿದ್ದಾನೆಂದು ಬೇರೆಯವರನ್ನು ನಿರಾಕರಣೆ ಮಾಡಿ, ಅವಧಾರಣಪೂರಕವಾಗಿ ವಿಷ್ಣುವನ್ನು ಜ್ಯೋತಿಯೆಂದು ಹೇಳುತ್ತಿದೆ. ಮತ್ತು 'ನಾರಾಯಣ ಪರಂಜ್ಯೋತಿಃ ಪರಂಜ್ಯೋತಿರುಪಸಂಪದ್ಯ' ಇತ್ಯಾದಿ ಶ್ರುತಿಗಳಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಿರುವ ಕಾರಣ, ವಿಷ್ಣುವೇ 'ಜ್ಯೋತಿಃ' ಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಬೃಹದಾರಣ್ಯಕದಲ್ಲಿರುವ 'ಹೃದ್ಯಂತರ್ಜ್ಯೋತಿಃ' ಎಂಬ ಉಪಕ್ರಮ 'ಸ್ವಯಂ ಜ್ಯೋತಿಃ' ಎಂಬ ಉಪಸಂಹಾರ ವಾಕ್ಯ 'ಸ್ವಪಿತಿ ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಮಧ್ಯದಲ್ಲಿರುವ ವಾಕ್ಯ, ಇವುಗಳಲ್ಲಿಯೂ ಇರುವಂತಹ 'ಜ್ಯೋತಿಃ' ಶಬ್ದವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ. ಮೊದಲು ಕೊನೆಯಲ್ಲಿ, ಮಧ್ಯದಲ್ಲಿ ಎಲ್ಲೆಡೆಯು ಪರಮಾತ್ಮನೇ ಪ್ರತಿಪಾದ್ಯನಾಗಿರುವಾಗ ಮಧ್ಯದಲ್ಲಿರುವ ಲಿಂಗಗಳನ್ನು ಪರಮಾತ್ಮನಲ್ಲಿ ಸಾವಕಾಶ ಮಾಡಬೇಕು.

ಶ್ರುತಿಯಲ್ಲಿರುವ 'ಮ್ರಿಯಮಾಣ' ಎಂಬ ಪದಕ್ಕೆ ಅಂತರ್ಭಾವಿತ ಣಿಜರ್ಥತ್ವವನ್ನು ಒಪ್ಪಿ, ಸಾಯಿಸುವವನು ಎಂಬರ್ಥವನ್ನು ಹೇಳಬೇಕು. ಇದರಂತೆ ಜಾಯಮಾನ ಶಬ್ದಕ್ಕೆ ಹುಟ್ಟಿಸುವವನು ಎಂದು ಅರ್ಥೈಸಿ, ಎಲ್ಲ ಲಿಂಗಗಳನ್ನು ಪರಮಾತ್ಮನಲ್ಲಿಯೇ ಕೂಡಿಸಬೇಕು. 'ಲೋಕಾವನುಸಂಚರತಿ' ಎಂಬಲ್ಲಿ ಹೇಳಿದ ಉಭಯಲೋಕಸಂಚಾರವನ್ನು ಮಾತ್ರ, ಅಂತರ್ಭಾವಿತಣಿಜರ್ಥತ್ವವನ್ನು ಹೇಳಿ, ಸಮನ್ವಯ ಮಾಡಬೇಕಾಗಿಲ್ಲ. ಹೊರತಾಗಿ, ಸ್ವತಃ ಪರಮಾತ್ಮನೇ ಜೀವನನ್ನು ತೆಗೆದುಕೊಂಡು, ಉಭಯಲೋಕದ ಸಂಚಾರವನ್ನು ಮಾಡುತ್ತಾನೆ. ಆದರೆ ಸ್ವಾತಂತ್ರ್ಯವಿರುವ ಕಾರಣ, ಅವನಿಗೆ ಯಾವುದೇ ದುಃಖಾದಿಗಳ ಲೇಪವು ಉಂಟಾಗುವುದಿಲ್ಲ. ಇದರಂತೆ 'ಪಾಪ್ಮಭಿಃ ಸಂಸೃಜ್ಯತೇ' ಎಂಬ ಶ್ರುತಿಗೂ ಕೂಡ ಪರಮಾತ್ಮನು ಜೀವನಿಗೆ ಪುಣ್ಯ-ಪಾಪಾದಿಗಳನ್ನು ಫಲೋನ್ಮುಖವಾಗುವಂತೆ ಮಾಡುತ್ತಾನೆ ಹೊರತು, ಆ ಪುಣ್ಯಾಪಾಪಗಳ ಸಂಪರ್ಕದಿಂದ ತನ್ನಲ್ಲೇನೂ ಉಚ್ಚತ್ವ-ನೀಚತ್ವಗಳು ಉಂಟಾಗುವುದಿಲ್ಲ. ಆದ್ದರಿಂದ ಸಮಗ್ರ 'ಜ್ಯೋತಿರ್ಬ್ರಾಹ್ಮಣ' ಪ್ರಕರಣವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆಂದು ಸಿದ್ಧವಾಗುತ್ತದೆ.

• • • • •

## ವಿಷ್ಣುಪಕ್ಷದಲ್ಲಿ ಸಾಧಕ ಪ್ರಮಾಣ. ಜೀವಪಕ್ಷದಲ್ಲಿ ಬಾಧಕ ಪ್ರಮಾಣ

### तात्पर्यचन्द्रिका

**नच प्रत्यभिज्ञाविरोधः । यतः -**

**समानशब्दप्रकृतादर्थान्तरपरत्वतः ।**
**तेनाप्रकृतमुख्यार्थपरतैव गरीयसी ।। १ ।।**

ಅನುವಾದ - ಉಪಸಂಹಾರದಲ್ಲಿರುವ 'ಪುರುಷ' ಶಬ್ದದಿಂದ ಉಪಕ್ರಮದಲ್ಲಿರುವ ಜೀವನ ಪ್ರತ್ಯಭಿಜ್ಞಾಯಮಾನನಾಗುತ್ತಿದ್ದಾನೆ. ಪ್ರಕೃತ ಪರಮಾತ್ಮಪರತ್ವವನ್ನು ಒಪ್ಪಿದರೆ ಪ್ರತ್ಯಭಿಜ್ಞೆಯ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ -

ಸಮಾನಶಬ್ದಪ್ರಕೃತಾದರ್ಥಾಂತರಪರತ್ವತಃ ।
ತೇನಾಪ್ರಕೃತಮುಖ್ಯಾರ್ಥಪರತೈವ ಗರೀಯಸೀ ॥

ಸಮಾನ ಶಬ್ದದಿಂದ ಪ್ರಕೃತವಾದದ್ದನ್ನು ಹಾಗೂ ಮುಖ್ಯವಾದದ್ದನ್ನು ಎರಡನ್ನೂ ವಿವಕ್ಷಿಸಲು ಬರುತ್ತಿರುವಾಗ ಪ್ರಕೃತವಾದ ಅರ್ಥಕ್ಕಿಂತಲೂ ಅಪ್ರಕೃತವಾದ ಮುಖ್ಯಾರ್ಥವೇ ಶ್ರೇಷ್ಠವಾಗಿರುತ್ತದೆ.

**पुरुषशब्दो हि पुरुषोत्तमे मुख्य इत्युक्तं गायत्र्यधिकरणे ।**

ಶ್ರುತಿಯಲ್ಲಿರುವ ಪುರುಷಶಬ್ದವು ಪುರುಷೋತ್ತಮನಾದ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆ. ಆದ್ದರಿಂದ ಪುರುಷಶಬ್ದಕ್ಕೆ ಜೀವನು ಪ್ರಕೃತನಾಗಿದ್ದರೂ ಮುಖ್ಯನಾದ ಅರ್ಥ ಪರಮಾತ್ಮನೇ ಆಗಿದ್ದಾನೆ. ಪುರುಷಶಬ್ದಕ್ಕೆ ಪರಮಾತ್ಮನೇ ಮುಖ್ಯಾರ್ಥನಾಗಿದ್ದಾನೆಂಬ ವಿಚಾರವು ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಲ್ಪಟ್ಟಿದೆ.

**एवं चोपसंहारस्थयोर्ज्योतिपुरुषशब्दयोरुपक्रमस्थपुरुषादिशब्दप्रकृतजीव रूपामुख्यार्थपरत्वादपि पुरुषादिशब्दाप्रकृतब्रह्मपरतैव ज्यायसी । मुख्यार्थलाभात् ।**

ಆದ್ದರಿಂದ ಉಪಸಂಹಾರದಲ್ಲಿರುವ ಜ್ಯೋತಿ ಹಾಗೂ ಪುರುಷಶಬ್ದಗಳಿಗೆ ಉಪಕ್ರಮದಲ್ಲಿರುವ ಪುರುಷಾದಿಶಬ್ದಗಳಿಂದ ಪ್ರಕೃತನಾದ ಜೀವನೆಂಬ ಅಮುಖ್ಯಾರ್ಥವನ್ನು ವಿವಕ್ಷಿಸುವುದಕ್ಕಿಂತಲೂ ಪುರುಷಾದಿಶಬ್ದಗಳಿಂದ ಅಪ್ರಕೃತನಾದ ಬ್ರಹ್ಮಪರತ್ವವನ್ನು ವಿವಕ್ಷಿಸುವುದೇ ಅತ್ಯಂತ ಶ್ರೇಷ್ಠವಾಗಿದೆ. ಏಕೆಂದರೆ ಶಬ್ದಕ್ಕೆ ಮುಖ್ಯಾರ್ಥತ್ವವನ್ನು ಹೇಳಿ, ನ್ಯಾಯವನ್ನು ಒದಗಿಸಿದಂತಾಗುತ್ತದೆ.

**नहि गङ्गायां घोष इत्यत्र गङ्गाशब्दो लाक्षणिक इति गङ्गायां मत्स्य इत्यादावपि तथा ।**

'ಗಂಗಾಯಾಂ ಘೋಷಃ' ಎಂಬಲ್ಲಿ 'ಗಂಗಾ' ಶಬ್ದಕ್ಕೆ ಲಾಕ್ಷಣಿಕವಾದ ಗೌಣಾರ್ಥವನ್ನು ಮಾಡಿದ ಮಾತ್ರಕ್ಕೆ 'ಗಂಗಾಯಾಂ ಮತ್ಸ್ಯಃ' ಎಂಬಲ್ಲಿರುವ 'ಗಂಗಾ' ಶಬ್ದಕ್ಕೂ ಕೂಡ ಗೌಣಾರ್ಥವನ್ನೇ ಮಾಡಬೇಕೆಂದೇನಿಲ್ಲ. 'ಪ್ರವಾಹ' ಎಂಬ ಮುಖ್ಯಾರ್ಥವನ್ನೇ ಹೇಳಬೇಕು. ಅದರಂತೆ ಪ್ರಕೃತದಲ್ಲಿಯೂ ಕೂಡ ಪ್ರಾರಂಭದಲ್ಲಿ ಪುರುಷಶಬ್ದಕ್ಕೆ ಜೀವನೆಂಬ ಅರ್ಥವನ್ನು ಹೇಳಿದ ಮಾತ್ರಕ್ಕೆ ಕೊನೆಯಲ್ಲಿರುವ ಪುರುಷಶಬ್ದಕ್ಕೂ ಅಮುಖ್ಯಾರ್ಥವನ್ನು ಮಾಡಬೇಕೆಂದೇನೂ ಇಲ್ಲ. ಮುಖ್ಯವಾದ ಪರಮಾತ್ಮನೇ ಪುರುಷಶಬ್ದದ ಅರ್ಥವಾಗುತ್ತಾನೆ.

**न हीदमादिशब्दानामिव पुरुषादिशब्दानां प्रकृतपरत्वं व्युत्पन्नम् ।**

ಮತ್ತು 'ಇದಮ್' ಮೊದಲಾದ ಶಬ್ದಗಳಿಗೆ ಪ್ರಕೃತಪರತ್ವವನ್ನೇ ಅವಶ್ಯವಾಗಿ ಹೇಳಬೇಕೆಂಬ ನಿಯಮವಿದ್ದಂತೆ, 'ಪುರುಷ' 'ಜ್ಯೋತಿ' ಮೊದಲಾದ ಶಬ್ದಗಳಿಗೆ ಪ್ರಕೃತಪರತ್ವವನ್ನೇ ಹೇಳಬೇಕೆಂಬ ನಿಯಮವೂ ಕೂಡ ಇರುವುದಿಲ್ಲ.

ಪರಿಪೂರ್ಣಚಂದ್ರಿಕಾ

**ब्रह्मापि ''हिरण्मयः पुरुष'' इत्यादौ पुरुषशब्देन प्रकृतम् ।**

ವಿಚಾರ ಮಾಡಿದರೆ 'ಹಿರಣ್ಮಯಃ ಪುರುಷಃ' ಎಂಬುದಾಗಿ ಬ್ರಹ್ಮನೂ ಕೂಡ ಹಿಂದೆ ಪುರುಷಶಬ್ದದಿಂದ ಪ್ರಕೃತನೇ ಆಗಿದ್ದಾನೆ. ಅಂತಹ ಪ್ರಕೃತನಾದ ಬ್ರಹ್ಮಪರತ್ವವನ್ನು ಉಪಸಂಹಾರದಲ್ಲಿರುವ ಪುರುಷಶಬ್ದಕ್ಕೆ ಹೇಳಿದರೆ ಏನೂ ಬಾಧಕವಿಲ್ಲ.

**उपसंहारादिस्थस्येदंशब्दस्य प्रकृतपरत्वेऽपि नोपक्रमस्थेदंशब्दोक्तव्यवहित-जीवपरता । किं त्वव्यवहितप्रकृतब्रह्मपरता ।**

ಉಪಸಂಹಾರ ವಾಕ್ಯದಲ್ಲಿರುವ 'ಇದಂ' ಶಬ್ದವು ಪ್ರಕೃತವಾದದ್ದನ್ನೇ ಪರಾಮರ್ಶ ಮಾಡುತ್ತಿದೆಯೆಂದು ಒಪ್ಪೋಣ. ಆದರೆ ದೂರದ ಉಪಕ್ರಮವಾಕ್ಯದಲ್ಲಿರುವ 'ಇದಂ' ಶಬ್ದ ಪ್ರತಿಪಾದ್ಯವಾದದ್ದನ್ನು ಪರಾಮರ್ಶ ಮಾಡುತ್ತಿದೆಯೆಂದು ಒಪ್ಪಿ ಜೀವಪರತ್ವವನ್ನು ಸಮರ್ಥಿಸಬೇಕಾಗಿಲ್ಲ. ಹೊರತಾಗಿ ಹತ್ತಿರದಲ್ಲೇ ಪ್ರಕೃತನಾದ ಬ್ರಹ್ಮನನ್ನು ಪರಾಮರ್ಶ ಮಾಡುತ್ತಿದೆಯೆಂದು ಹೇಳಬೇಕು.

**यतः -**

**स्वशब्देनापि यद्दूरे प्रकृतत्वं ततोपि च ।**
**अन्यशब्देनाविदूरे प्रकृतत्वं प्रयोजकम् ।। १ ।।**

ಏಕೆಂದರೆ -

ಸ್ವಶಬ್ದೇನಾಪಿ ಯದ್ದೂರೇ ಪ್ರಕೃತತ್ವಂ ತತೋಽಪಿ ಚ ।
ಅನ್ಯಶಬ್ದೇನಾವಿದೂರೇ ಪ್ರಕೃತತ್ವಂ ಪ್ರಯೋಜಕಮ್ ॥೧॥

ಪರಾಮರ್ಶ ಮಾಡುವಂತಹ ಯಾವುದೇ ಶಬ್ದಗಳಿದ್ದರೂ ದೂರದಲ್ಲಿ ಯಾವುದು ಪ್ರಕೃತವಾಗಿದೆಯೋ, ಅದಕ್ಕಿಂತಲೂ ಹತ್ತಿರದಲ್ಲಿರುವ ಅರ್ಥವನ್ನೇ ಪರಾಮರ್ಶ ಮಾಡುತ್ತದೆ. ಹೊರತು, ದೂರದಲ್ಲಿರುವುದನ್ನು ಪರಾಮರ್ಶ ಮಾಡುವುದಿಲ್ಲ. ಪರಾಮರ್ಶಕ್ಕೆ ಹತ್ತಿರದಲ್ಲಿ ಪ್ರಕೃತವಾಗಿರುವಿಕೆಯೇ ಪ್ರಯೋಜಕವಾಗಿದೆ.

**इदमादिशब्देन परामर्शे हि तेन शब्देन दूरे प्रकृतत्वादपि शब्दान्तरेण समीपे प्रकृतत्वं प्रयोजकम् । समीपस्थस्य बुद्ध्यविच्छेदात् । व्यवहितस्य च तद्विच्छेदात् । इदंशब्दस्य च बुद्धिस्थपरत्वात् ।**

'ಇದಂ' ಮೊದಲಾದ ಶಬ್ದಗಳಿಂದ ಪರಾಮರ್ಶ ಮಾಡುವ ಸಂದರ್ಭದಲ್ಲಿ ದೂರದಲ್ಲಿ ಪ್ರಕೃತವಾದದ್ದನ್ನು ಪರಾಮರ್ಶ ಮಾಡುವುದಕ್ಕಿಂತ ಬೇರೆ ಶಬ್ದದಿಂದ ಹತ್ತಿರದಲ್ಲಿ ಪ್ರಕೃತವಾದದ್ದನ್ನೇ

ಪರಾಮರ್ಶ ಮಾಡಬೇಕು. ದೂರದಲ್ಲಿ ಪ್ರಕೃತವಾಗಿರುವಿಕೆಯು ಪ್ರಯೋಜಕವಾಗುವುದಕ್ಕಿಂತ ಶಬ್ದಾಂತರದಿಂದ ಹತ್ತಿರದಲ್ಲಿ ಪ್ರಕೃತವಾಗಿರುವಿಕೆಯೇ ಪರಾಮರ್ಶಕ್ಕೆ ಪ್ರಯೋಜಕವಾಗಿದೆ. ಏಕೆಂದರೆ ಸಮೀಪದಲ್ಲಿ ಪ್ರಸಕ್ತವಾದದ್ದೇ ಬುದ್ಧಿಯಲ್ಲಿರುತ್ತದೆ. ವ್ಯವಹಿತವಾದದ್ದು, ಬುದ್ಧಿಯಲ್ಲಿರುವುದಿಲ್ಲ. ಏಕೆಂದರೆ 'ಇದಂ' ಶಬ್ದವು ಬುದ್ಧಿಯಲ್ಲಿರುವುದನ್ನಷ್ಟೇ ಪರಾಮರ್ಶ ಮಾಡುತ್ತದೆ ಹೊರತು, ಬುದ್ಧಿಯಲ್ಲಿ ಇಲ್ಲದೇ ದೂರದಲ್ಲಿ ಪ್ರಕೃತವಾದದ್ದನ್ನು ಪರಾಮರ್ಶ ಮಾಡುವುದಿಲ್ಲ.

**''स्वप्नेन शारीरमभिप्रहत्यासुप्तः सुप्तानभिचाकशीति'' इति ब्रह्मवाक्यं च ''किं ज्योतिरयं पुरुष'' इति जीववाक्यात्सन्निहितम् ।**

'ಸ್ವಪ್ನೇನ ಶಾರೀರಮಭಿಪ್ರಹೃತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಎಂಬ ವಾಕ್ಯವು ಉಪಸಂಹಾರ ವಾಕ್ಯಕ್ಕಿಂತ ಹಿಂದೆ ಪ್ರಸಕ್ತವಾಗಿದೆ. ಇದು 'ಕಿಂ ಜ್ಯೋತಿರಯಂ ಪುರುಷಃ' ಎಂಬ ಉಪಕ್ರಮದಲ್ಲಿ ಜೀವನನ್ನು ಪ್ರತಿಪಾದನೆ ಮಾಡುವ ವಾಕ್ಯಕ್ಕಿಂತಲೂ ಉಪಸಂಹಾರವಾಕ್ಯಕ್ಕೆ ತೀರಾ ಹತ್ತಿರದಲ್ಲಿದೆ. 'ಸ್ವಪ್ನೇನ' ಎಂಬ ವಾಕ್ಯದಿಂದ ಪ್ರಕೃತನಾದ ಬ್ರಹ್ಮನನ್ನೇ ಉಪಸಂಹಾರವಾಕ್ಯದಲ್ಲಿರುವ 'ಇದಂ' ಶಬ್ದವು ಪರಾಮರ್ಶ ಮಾಡುತ್ತದೆ.

**न चाध्याहारः । स्वप्नादौ जीवस्य भगवानेव ज्ञानहेतुर्नत्वादित्यादिरिति भावेन ''आत्मैवास्य ज्योतिः'' इत्युक्त्वा तस्मिन्नेवात्मनि प्रश्नोत्तराभ्यां निरूपिते तर्हि ज्योतिश्शब्दोक्तज्ञानसाधनत्वं कथमित्यपेक्षायां ''स्वयं विहत्य'' इत्यादिना स्वाप्नपदार्थस्रष्टृत्वतद्दर्शयितृत्वादिकमुक्त्वा ''अत्रायं पुरुषः स्वयं ज्योतिः'' इत्युक्तेऽस्येत्यनेन प्रकृतस्य जीवस्यैवान्वयात् ।**

ಪೂರ್ವಪಕ್ಷ ಮಾಡುವಾಗ ಒಂದು ವೇಳೆ 'ಜ್ಯೋತಿಃ' ಎಂಬ ಶಬ್ದವು ಪರಮಾತ್ಮಪರವಾದಲ್ಲಿ 'ಅಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಆಕ್ಷೇಪಿಸಲಾಗಿತ್ತು. ಅದೂ ಸಹ ಸರಿಯಲ್ಲ. ಏಕೆಂದರೆ ಸ್ವಪ್ನಾದ್ಯವಸ್ಥೆಗಳಲ್ಲಿ ಜೀವನಿಗೆ ಪರಮಾತ್ಮನೊಬ್ಬನೇ ಜ್ಞಾನಕಾರಣನಾಗಿರುತ್ತಾನೆ ಹೊರತು, ಅಗ್ನಿ, ಆದಿತ್ಯ ಮೊದಲಾದವರು ಯಾರೂ ಸಹ ಕಾರಣರಾಗಿಲ್ಲ ಎಂಬ ಅಭಿಪ್ರಾಯದಿಂದ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯವು ಹೊರಟಿದೆ. ಹೀಗೆ ಆತ್ಮನ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳನ್ನು ನಿರೂಪಣೆ ಮಾಡಿದ ಮೇಲೆ 'ಜ್ಯೋತಿಃ' ಎಂಬ ಶಬ್ದದಿಂದ ಹೇಳಲ್ಪಟ್ಟ ಜ್ಞಾನಸಾಧನತ್ವವನ್ನು ಯಾವ ಬಗೆಯಲ್ಲಿ ವಿವಕ್ಷಿಸಬೇಕು ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ 'ಸ್ವಯಂ ವಿಹೃತ್ಯ' ಇತ್ಯಾದಿ ವಾಕ್ಯಗಳಿಂದ ಉತ್ತರಿಸಲಾಗಿದೆ. ಅಂತಹ ಪರಮಾತ್ಮನು ಜೀವನ ಸ್ವಾಪ್ನಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆ. ಅವುಗಳನ್ನು ಜೀವನಿಗೆ ತೋರಿಸುತ್ತಾನೆ. ಇತ್ಯಾದಿ ಕ್ರಮದಲ್ಲಿ ಜ್ಞಾನಸಾಧನತ್ವವನ್ನು ಉಪನಿಷತ್ತು ವರ್ಣಿಸಿದೆ. ಇಷ್ಟು ನಿರೂಪಣೆ ಆದ ಮೇಲೆ, 'ಅತ್ರಾಯಂ ಪುರುಷಃ ಸ್ವಯಂ ಜೋತಿಃ' ಎಂಬ

ವಾಕ್ಯವು ಪ್ರಸಕ್ತವಾಗಿದೆ. ಆವಾಗ ಇಲ್ಲಿರುವ 'ಅಸ್ಯ' ಎಂಬ ಪದದಿಂದ ಜೀವನೇ ಪ್ರಕೃತನಾಗಿ ಅನ್ವಿತನಾಗುತ್ತಾನೆ. ಆದ್ದರಿಂದ ಅಧ್ಯಾಹಾರವನ್ನು ಮಾಡಿಕೊಳ್ಳಬೇಕಾಗಿಲ್ಲ.

**''आत्मैवास्य ज्योतिः'' इति वाक्यस्थात्मशब्दार्थस्य च ''अत्रायं पुरुषः स्वयम्'' इत्यत्र पुरुषशब्देनावधारणस्य च स्वयंशब्देनोक्तत्वादैकार्थ्यं च ।**

ಪೂರ್ವಪಕ್ಷ ಮಾಡುವಾಗ ಆತ್ಮಶಬ್ದದ ಅರ್ಥವನ್ನೇ 'ಸ್ವಯಂ' ಶಬ್ದದಿಂದ ಹೇಳುವ ಕಾರಣ ಜೀವಪಕ್ಷದಲ್ಲಿ ಐಕ್ಯಾರ್ಥವನ್ನು ಹೇಳಿದಂತಾಗುತ್ತದೆಂದು ಸಮರ್ಥಿಸಲಾಗಿತ್ತು. ಇದೂ ಸಹ ತಪ್ಪು. ಬ್ರಹ್ಮಪಕ್ಷದಲ್ಲಿಯೂ ಕೂಡ ಐಕ್ಯಾರ್ಥವನ್ನು ಸುಲಭವಾಗಿ ಹೇಳಬಹುದು - 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿರುವ ಆತ್ಮಶಬ್ದದ ಅರ್ಥವನ್ನೇ 'ಅತ್ರಾಯಂ ಪುರುಷಃ ಸ್ವಯಮ್' ಎಂಬಲ್ಲಿರುವ ಪುರುಷಶಬ್ದದಿಂದ ಹೇಳಲಾಗಿದೆ. 'ಆತ್ಮೈವ' ಎಂಬಲ್ಲಿರುವ ಅವಧಾರಣದ ಅರ್ಥವನ್ನೇ ಸ್ವಯಂ ಶಬ್ದದಿಂದ ಹೇಳಲಾಗಿದೆ. ಹೀಗೆ 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಿಂದ ಐಕ್ಯಾರ್ಥವು ಸುಲಭವಾಗಿ ಉಪಪನ್ನವಾಗುತ್ತದೆ.

**जीवपक्षे तु कतम इति प्रश्नायोगः । जीवस्य प्रत्यक्षसिद्धत्वात् ।**

ಜೀವನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಪಕ್ಷದಲ್ಲಿ 'ಕತಮ' ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಏಕೆಂದರೆ ಜೀವನು ಹುಟ್ಟು-ಸಾವು ಮೊದಲಾದ ಧರ್ಮಗಳಿಂದ ಕೂಡಿದ್ದಾನೆಂಬುದು ಪ್ರತ್ಯಕ್ಷಸಿದ್ಧವೇ ಆಗಿದೆ. ಇದನ್ನೇ ಪುನಃ ಉಪನಿಷತ್ತು ಹೇಳುವುದರಲ್ಲಿ ಅರ್ಥವಿಲ್ಲ.

**''किं ज्योतिरयं पुरुषः'' इति प्रश्नसमये संशयधर्मित्वेन निश्चिते तस्मिन्पुनः प्रश्नायोगाच्च । स्वरूपशब्दस्य सम्बन्धिशब्दत्वेन प्रतिसम्बन्धिनिरूप्यत्वादस्येत्यनेन निर्दिष्टस्य प्रतिसम्बन्धिन एव प्रष्टव्यतया घटस्य स्वरूपमित्यादौ सुप्रसिद्धे प्रतिसम्बन्धिपरतन्त्रे च स्वरूपे प्रश्नायोगाच्च ।**

'ಕಿಂ ಜ್ಯೋತಿರಯಂ ಪುರುಷಃ' ಎಂದು ಪ್ರಶ್ನಿಸುವಾಗ ಸಂಶಯಧರ್ಮಿತ್ವೇನ ಪುರುಷನು ನಿಶ್ಚಿತನೇ ಆಗಿರುತ್ತಾನೆ. ಪುನಃ ಅವನು ಎಂತಹವನು ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಸ್ವರೂಪ ಶಬ್ದವೂ ಕೂಡ ಸಂಬಂಧಿಶಬ್ದವಾಗಿದೆ. ಆದ್ದರಿಂದ ಪ್ರತಿಸಂಬಂಧಿಯನ್ನು ಅಪೇಕ್ಷಿಸುತ್ತದೆ ಹೊರತು, ಸ್ವರೂಪವನ್ನೇ ಪುನಃ ಅಪೇಕ್ಷಿಸುವುದಿಲ್ಲ. 'ಅಸ್ಯ' ಎಂಬ ಪದದಿಂದ ನಿರ್ದಿಷ್ಟನಾದ ವ್ಯಕ್ತಿಗೆ ಪ್ರತಿಸಂಬಂಧಿಯು ಯಾರೋ? ಅವನ ಬಗ್ಗೆ ಪ್ರಶ್ನಿಸಬೇಕು ಹೊರತು, ಪುನಃ ಸ್ವರೂಪದ ಬಗ್ಗೆ ಪ್ರಶ್ನಿಸುವುದು ತಪ್ಪಾಗುತ್ತದೆ. 'ಘಟಸ್ಯ ಸ್ವರೂಪಮ್' ಎಂದು ಹೇಳಿದಾಗ ಸ್ವರೂಪವು ಎಂತಹದ್ದೆಂದು ಪುನಃ ಯಾರೂ ಪ್ರಶ್ನಿಸುವುದಿಲ್ಲ. ಹೊರತಾಗಿ, ಘಟಕ್ಕೆ ಪ್ರತಿಸಂಬಂಧಿಯ ಬಗ್ಗೆ ಮಾತ್ರ ಪ್ರಶ್ನಿಸುತ್ತಾರೆ.

**नहि प्रदीपस्य स्वरूपं प्रकाश इत्युक्ते किं स्वरूपमिति ज्ञातस्वरूपशब्दार्थः पृच्छति ।**

'ಪ್ರದೀಪಸ್ಯ ಸ್ವರೂಪಂ ಪ್ರಕಾಶಃ' ದೀಪದ ಸ್ವರೂಪ ಪ್ರಕಾಶವಾಗುವಿಕೆ ಎಂದು ಹೇಳಿದಾಗ ಸ್ವರೂಪ ಎಂದರೆ ಏನು? ಎಂಬುದಾಗಿ ಸ್ವರೂಪದ ಬಗ್ಗೆ ಮೊದಲೇ ಅರಿವು ಇರುವವನು ಪುನಃ ಪ್ರಶ್ನಿಸುವುದಿಲ್ಲ.

**तस्मात् ''किं ज्योतिरयं पुरुषः'' इत्यत्र पुरुषशब्दस्य जीवपरत्वेऽपि ''आत्मैवास्य ज्योतिः'' इत्यत्रात्मशब्दो ब्रह्मपरः । तदुक्तं न्यायविवरणे ''अयं पुरुषः संसारी । आत्मशब्दोदित एव विष्णुः । अत एवादित्यादिज्योतिष्ट्वं संसारिण एव'' इति ।**

ಆದ್ದರಿಂದ 'ಕಿಂ ಜ್ಯೋತಿರಯಂ ಪುರುಷಃ' ಎಂಬಲ್ಲಿ ಪುರುಷಶಬ್ದವು ಜೀವಪರವಾದರೂ, 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿರುವ ಆತ್ಮಶಬ್ದವು ಬ್ರಹ್ಮಪರವಾಗುತ್ತದೆ. ಇದನ್ನೇ ನ್ಯಾಯವಿವರಣದಲ್ಲಿ 'ಅಯಂ ಪುರುಷಃ ಸಂಸಾರೀ । ಆತ್ಮಶಬ್ದೋದಿತ ಏವ ವಿಷ್ಣುಃ । ಅತ ಏವಾದಿತ್ಯಾದಿಜ್ಯೋತಿಷ್ಟ್ವಂ ಸಂಸಾರಿಣ ಏವ' ಈ ಪುರುಷನು ಸಂಸಾರಿಯಾದ ಜೀವನು. ಆತ್ಮಶಬ್ದಪ್ರತಿಪಾದ್ಯನಾದವನೇ ಮಹಾವಿಷ್ಣು. ಆದ್ದರಿಂದಲೇ ಆದಿತ್ಯಾದಿಜ್ಯೋತಿಷ್ಟ್ವವು ಸಂಸಾರಿಜೀವನಲ್ಲಿ ಮಾತ್ರ ಬರುತ್ತದೆ ಎಂದು ಹೇಳಿದ್ದಾರೆ.

**किञ्च जीवपक्ष उभयलोकसञ्चरणे सुखदुःखविशेषवत्त्वेन समानता, ''स्वयं विहृत्य'' इत्यादिवाक्योक्तं स्वातन्त्र्यं, ''अथ रथान् रथयोगान्पथःसृजत'' इत्यादिवाक्योक्तं स्वाप्नपदार्थस्रष्टृत्वं, ''स्वप्नेन'' इत्यादि मन्त्रश्च न युक्त इति बृहदारण्यकभाष्य एवोक्तम् ।**

ಮತ್ತು ಉಭಯಲೋಕಸಂಚಾರವನ್ನು ಮಾಡುವ ಜೀವನಿಗೆ ಸುಖ-ದುಃಖಗಳ ಅನುಭವವಾಗುತ್ತದೆ. ಹೀಗಿರುವಾಗ ಜೀವಪಕ್ಷದಲ್ಲಿ ಶ್ರುತಿ ಹೇಳಿರುವ ಸಮಾನತ್ವವನ್ನು ಹೇಳಲು ಹೇಗೆ ಸಾಧ್ಯ? ಮತ್ತು 'ಸ್ವಯಂ ವಿಹೃತ್ಯ' ಎಂಬಲ್ಲಿ ಸ್ವಾತಂತ್ರ್ಯವು ಉಕ್ತವಾಗಿದೆ. ಇದೂ ಸಹ ಜೀವನಲ್ಲಿ ಕೂಡುವುದಿಲ್ಲ. 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂಬ ವಾಕ್ಯದಲ್ಲಿ ಸ್ವಾಪ್ನಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆಂದು ಹೇಳಲಾಗಿದೆ. 'ಸ್ವಾಪ್ನಪದಾರ್ಥಸ್ರಷ್ಟೃತ್ವವು' ಪರಮಾತ್ಮನಲ್ಲಿ ಮಾತ್ರ ಯುಕ್ತವಾಗುತ್ತದೆ ಹೊರತು, ಜೀವನಲ್ಲಲ್ಲ. 'ಸ್ವಪ್ನೇನ' ಇತ್ಯಾದಿ ಮಂತ್ರಗಳೂ ಕೂಡ ಅಯುಕ್ತವಾಗಿವೆ. ಹೀಗೆ ಬೃಹದಾರಣ್ಯಕಭಾಷ್ಯದಲ್ಲಿಯೇ ಜೀವನು 'ಜೋತಿಃ' ಶಬ್ದ ಪ್ರತಿಪಾದ್ಯನಾಗಿದ್ದಾನೆ ಎಂಬ ಪಕ್ಷದಲ್ಲಿ ದೋಷಗಳನ್ನು ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः –**

"नच प्रत्यभिज्ञाविरोधः" इत्यादिटीकार्थं स्वयमुपपत्त्युक्त्या व्यनक्ति ।। न चेत्यादिना ऐकार्थ्यं चेत्यन्तेन ।। यत इत्यस्य गरीयसीत्यनेनान्वयः ।। **अर्थान्तरेति** ।। अमुख्यार्थांतरेत्यर्थः । तेन समानशब्देन ।

ವಿವರಣೆ - 'ನಚ ಪ್ರತ್ಯಭಿಜ್ಞಾವಿರೋಧಃ' ಇತ್ಯಾದಿ ಟೀಕೆಯ ಅರ್ಥವನ್ನು ಸ್ವತಃ ಯುಕ್ತಿಬದ್ಧವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ನಚ' ಎಂಬಲ್ಲಿಂದ ಪ್ರಾರಂಭಿಸಿ, 'ಐಕಾರ್ಥ್ಯಂ ಚ' ಎಂಬಲ್ಲಿಯ ತನಕ. 'ಯತಃ' ಎಂಬುದಕ್ಕೆ 'ಗರೀಯಸಿ' ಎಂಬಲ್ಲಿ ಅನ್ವಯ ಮಾಡಬೇಕು. 'ಅರ್ಥಾಂತರ' ಎಂದರೆ 'ಅಮುಖ್ಯವಾದ ಜೀವನೆಂಬ ಅರ್ಥಾಂತರ' ಎಂದರ್ಥ. 'ತೇನ' ಎಂದರೆ ಸಮಾನಶಬ್ದದಿಂದ ಎಂದರ್ಥ.

**प्रकाशः** – श्लोकं व्याचष्टे ।। **पुरुषेति** ।। **एवं चेति** ।। अत्रोक्तरीत्या ज्योतिश्शब्दस्य पूर्वोक्तरीत्या पुरुषशब्दस्य च विष्णौ मुख्यत्वे सतीत्यर्थः ।

ಗ್ರಂಥಕಾರರು ತಮ್ಮ ಶ್ಲೋಕವನ್ನು ಸ್ವತಃ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪುರುಷಶಬ್ದಃ' ಇತ್ಯಾದಿ ವಾಕ್ಯದಿಂದ. 'ಏವಂಚ' ಎಂದರೆ ಇಲ್ಲಿ ಹೇಳಿದಂತೆ ಜ್ಯೋತಿಶ್ಶಬ್ದವು ಮತ್ತು ಹಿಂದೆ ಹೇಳಿದಂತೆ ಪುರುಷಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿ ಬರುವುದರಿಂದ ಎಂದರ್ಥ.

**प्रकाशः** – नन्वत्र "अयं पुरुष" इतीदं शब्दसामानाधिकरण्यात् प्रकृतपरत्वमावश्यकमित्यत आह – **ब्रह्मापीति** ।।

ಶಂಕೆ - ಶ್ರುತಿಯಲ್ಲಿ ಕೇವಲ ಪುರುಷಶಬ್ದವು ಪ್ರಕೃತವಾಗಿಲ್ಲ. ಹೊರತಾಗಿ 'ಅಯಂ ಪುರುಷಃ' ಎಂದು ಇದಂ ಶಬ್ದದ ಸಮಾನಾಧಿಕರಣವಾದ ಪುರುಷ ಶಬ್ದವು ಪ್ರಕೃತವಾಗಿದೆ. ಆದ್ದರಿಂದ ಜೀವನನ್ನೇ ಇಟ್ಟುಕೊಳ್ಳಬೇಕಲ್ಲವೇ?

ಉತ್ತರ - ಈ ಪ್ರಶ್ನೆಗೆ 'ಬ್ರಹ್ಮಾಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಬ್ರಹ್ಮನೂ ಕೂಡ ಪ್ರಕೃತನಾಗಿದ್ದಾನೆ.

**प्रकाशः** – "तदेते श्लोका भवन्ति" इत्युक्त्या "स्वप्नेन शारीरमभिप्रहत्या-सुप्तस्सुप्तानभिचाकशीति । शुक्रमादाय पुनरेति स्थानं हिरण्मयः पुरुष एकहंस" इत्युदाहृतश्लोके प्रकृतमित्यर्थः ।

'ತದೇತೇ ಶ್ಲೋಕಾ ಭವಂತಿ' ಎಂದು ಹೇಳಿದ್ದರಿಂದ, 'ಸ್ವಪ್ನೇನ ಶಾರೀರಮಭಿಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ । ಶುಕ್ರಮಾದಾಯ ಪುನರೇತಿ ಸ್ಥಾನಂ ಹಿರಣ್ಮಯಃ ಪುರುಷ ಏಕಹಂಸ' ಎಂಬ ಉದಾಹರಿಸಿದ ಶ್ಲೋಕದಲ್ಲಿ ಬ್ರಹ್ಮನೂ ಕೂಡ ಪ್ರಕೃತನಾಗಿದ್ದಾನೆ ಎಂದರ್ಥ.

**प्रकाशः** – ननु ''किं ज्योतिरयं पुरुष'' इत्यत्रायमिति समानशब्देन प्रकृतजीवपरत्वमेव स्वरसम् । नत्वतादृशहिरण्मयादिशब्दप्रकृतब्रह्मपरत्वमित्यत आह – **उपसंहारेति** ।।

ಶಂಕೆ – 'ಕಿಂ ಜ್ಯೋತಿರಯಂ ಪುರುಷಃ' ಎಂಬಲ್ಲಿ 'ಅಯಂ' ಎಂಬ ಸಮಾನ ಶಬ್ದದಿಂದ ಪ್ರಕೃತನಾದ ಜೀವನನ್ನೇ ವಿವಕ್ಷಿಸುವುದು ಸ್ವರಸವಾಗುತ್ತದೆ. ಹೊರತು, ಹಾಗೇ ಪ್ರಕೃತನಲ್ಲದ ಹಿರಣ್ಮಯಾದಿ ಶಬ್ದಗಳಿಂದ ಪ್ರಕೃತನಾದ ಬ್ರಹ್ಮನೆಂಬ ಅರ್ಥವನ್ನು ವಿವಕ್ಷಿಸುವುದು ಹೇಗೆ ಸರಿಯಾಗುತ್ತದೆ?

ಉತ್ತರ – ಈ ಶಂಕೆಗೆ 'ಉಪಸಂಹಾರ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಉಪಸಂಹಾರವಾಕ್ಯದ ಸಮೀಪದಲ್ಲಿ ಬ್ರಹ್ಮನೇ ಪ್ರಕೃತನಾಗಿರುವುದರಿಂದ ಅವನನ್ನೇ 'ಇದಂ' ಶಬ್ದವು ಪರಾಮರ್ಶ ಮಾಡುತ್ತಿದೆ.

**प्रकाशः** – यतोऽविदूरे प्रकृतत्वं प्रयोजकं अतोऽव्यवहितब्रह्मपरतेत्यन्वयः । पद्यं हेतूक्त्या व्याचष्टे ।। **इदमिति** ।।

ಏಕೆಂದರೆ ಪರಾಮರ್ಶಕ್ಕೆ ಹತ್ತಿರದಲ್ಲಿ ಪ್ರಕೃತವಾಗಿರುವಿಕೆಯೇ ಪ್ರಯೋಜಕಧರ್ಮ. ಆದ್ದರಿಂದ ಅತ್ಯಂತ ಸಮೀಪದಲ್ಲಿ ಬ್ರಹ್ಮನು ಪ್ರಕೃತನಾದ್ದರಿಂದ, ಅವನನ್ನು ಪರಾಮರ್ಶಿಸುವುದೇ ಸೂಕ್ತವಾಗಿದೆ. ಗ್ರಂಥಕಾರರು ತಮ್ಮ ಪದ್ಯವನ್ನು ಕಾರಣಪುರಸ್ಸರವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಇದಂ' ಇತ್ಯಾದಿ ವಾಕ್ಯದಿಂದ.

**प्रकाशः** – नन्वयं पुरुषः परमात्माऽस्य जीवस्य स्वयमेव ज्योतिरित्यर्थवर्णनेऽस्येत्यध्याहारदोष इत्युक्तमित्याशंक्याह – **नचेति** ।।

ಶಂಕೆ – ಈ ಪುರುಷನು ಪರಮಾತ್ಮನೇ ಆಗಿದ್ದಾನೆ. ಏಕೆಂದರೆ ಈ ಜೀವನಿಗೆ ಸ್ವತಃ ಜ್ಞಾನಸಾಧನನಾದ್ದರಿಂದ ಎಂದು ವ್ಯಾಖ್ಯಾನ ಮಾಡಿದಾಗ, ಶ್ರುತಿಯಲ್ಲಿ 'ಅಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕಲ್ಲವೇ? ಎಂಬ ಆಶಂಕೆಗೆ 'ನಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यदप्युक्तं पूर्वपक्षिणा किञ्चेत्यादि तत्राह – **आत्मैवेति** ।। तथाचात्मशब्दो न स्वरूपपरः । किन्तु ब्रह्मपर इत्यर्थः ।

ಹಿಂದೆ ಪೂರ್ವಪಕ್ಷಿಯು 'ಕಿಂಚ' ಇತ್ಯಾದಿ ವಾಕ್ಯದಿಂದ ಜೀವಪಕ್ಷದಲ್ಲಿ ಐಕಾರ್ಥ್ಯವು ಬರುತ್ತದೆ. ಬ್ರಹ್ಮನ ಪಕ್ಷದಲ್ಲಿ ಬರುವುದಿಲ್ಲವೆಂದು ಆಕ್ಷೇಪ ಮಾಡಿದ್ದನು. ಅದಕ್ಕೆ 'ಆತ್ಮೈವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಆತ್ಮಶಬ್ದಕ್ಕೆ ಸ್ವರೂಪ ಎಂದರ್ಥವೇ ಅಲ್ಲ; ಬ್ರಹ್ಮ ಎಂದರ್ಥ. ಆದ್ದರಿಂದ ಬ್ರಹ್ಮಪಕ್ಷದಲ್ಲಿಯೇ ಐಕಾರ್ಥ್ಯ ಬರುತ್ತದೆ ಹೊರತು, ಜೀವ ಪಕ್ಷದಲ್ಲಲ್ಲ.

**प्रकाशः** – ननु कुत एवम् । बहुलिङ्गबलाज्जीव एवात्मशब्दार्थोऽस्त्वित्यतो विष्णुपरत्वेन निर्णीतवाक्यमध्यपतितत्वेन लिङ्गानामन्यथानयनं स्वयमुक्त्वा

''जीवपक्षे बहुबाधकसद्भावात्'' इत्यादिटीकां विवृण्वन्बाधकान्तरमाह – **जीवपक्षत्विति ।।**

ಶಂಕೆ - ಶ್ರುತಿಯಲ್ಲಿ ಜೀವನ ಲಿಂಗಗಳೇ ಬಹಳವಾಗಿ ಕೇಳಿಸುತ್ತಿರುವುದರಿಂದ ಜೀವನೇ ಆತ್ಮಶಬ್ದ ಪ್ರತಿಪಾದ್ಯನಾಗಬೇಕಲ್ಲವೇ?

ಉತ್ತರ - ಈಗಾಗಲೇ ಹೇಳಿದಂತೆ ಹಿಂದಿನ ಮುಂದಿನ ವಾಕ್ಯಗಳೆಲ್ಲವೂ ವಿಷ್ಣುಪರವೇ ಆಗಿವೆ. ನಿರ್ಣೀತವಾದ ವಿಷ್ಣುಪ್ರತಿಪಾದಕ ವಾಕ್ಯಗಳ ಮಧ್ಯದಲ್ಲಿ ಇರುವಂತಹ ಜಾಯಮಾನತ್ವ, ಮ್ರಿಯಮಾಣತ್ವ ಮೊದಲಾದ ಲಿಂಗಗಳನ್ನು ವಿಷ್ಣುವಿನಲ್ಲೇ ಸಾವಕಾಶ ಮಾಡಬೇಕು ಎಂದು ಇಲ್ಲಿಯ ತನಕ ಸಮರ್ಥನೆ ಮಾಡಿದ್ದಾಯಿತು. ಈಗ 'ಜೀವಪಕ್ಷೇ ಬಹುಬಾಧಕಸದ್ಭಾವಾತ್' ಜೀವಪಕ್ಷದಲ್ಲಿ ಅನೇಕ ಬಾಧಕಗಳೂ ಕೂಡ ಇರುತ್ತವೆ. ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ ಅನೇಕ ಬಾಧಕಗಳನ್ನು ಹೇಳುತ್ತಿದ್ದಾರೆ - 'ಜೀವಪಕ್ಷೇತು' ಇತ್ಯಾದಿ ಗ್ರಂಥದಿಂದ.

**प्रकाशः** – स्वरूपशब्दस्य स्वरूपपरत्वेनाङ्गीकृतस्यात्मशब्दस्येत्यर्थः । नन्वादित्यादिज्योतिष्ट्वेन जीवस्य प्रकृतत्वात्कथं तत्त्याग इत्यत आह – **तस्मादिति ।।** प्रश्नायोगरूपबाधकादित्यर्थः ।

ಸ್ವರೂಪಶಬ್ದವು ಶ್ರುತಿಯಲ್ಲಿ ಇಲ್ಲದಿದ್ದರೂ; ಅದೇ ಅರ್ಥದಲ್ಲಿ ಆತ್ಮಶಬ್ದವಿದೆ. ಅದನ್ನು ಇಲ್ಲಿ ಸ್ವರೂಪಶಬ್ದದಿಂದ ಹೇಳುತ್ತಿದ್ದಾರೆ.

ಆದಿತ್ಯಾದಿಗಳು ಜೀವರಿಗೆ ಮಾತ್ರ ಪ್ರಕಾಶಕರಾದ್ದರಿಂದ, ಪ್ರಕೃತನಾದ ಜೀವನನ್ನು ಹೇಗೆ ಬಿಡುತ್ತೀರಿ ? ಎಂಬ ಪ್ರಶ್ನೆಗೆ 'ತಸ್ಮಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಪ್ರತ್ಯಕ್ಷಸಿದ್ಧನಾದ ಜೀವನ ಬಗ್ಗೆ ಪುನಃ ಪ್ರಶ್ನೆಯು ಕೂಡುವುದಿಲ್ಲವೆಂಬ ಬಾಧಕವಿರುವ ಕಾರಣ, 'ಆದಿತ್ಯಾದಿಜ್ಯೋತಿಷ್ಟ್ವೇನ' ಜೀವನೇ ಪ್ರಕೃತನಾದರೂ ಆತ್ಮಶಬ್ದದಿಂದ ಪ್ರಕೃತನಾಗಿಲ್ಲವೆಂದು ತಿಳಿಯಬೇಕು.

**प्रकाशः** – एतेन ''आत्मशब्दोदितस्य विष्णुत्वात्'' इति टीकोक्तेः ''जीवपक्षे बहुबाधकसद्भावात्'' इत्याद्युत्तरटीकावाक्योक्तबाधकानुसन्धानेन सबीजत्वं बोध्यमित्युक्तं भवति ।

ಹೀಗೆ ಹೇಳಿದ್ದರಿಂದ - 'ಆತ್ಮಶಬ್ದೋದಿತಸ್ಯ ವಿಷ್ಣುತ್ವಾತ್' ಎಂಬ ಟೀಕೆಯಲ್ಲಿ ಆತ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂದು ಹೇಳಿದ್ದಾರೆ. ಈ ವಿಷಯದಲ್ಲಿ 'ಜೀವಪಕ್ಷೇ ಬಹುಬಾಧಕಸದ್ಭಾವಾತ್' ಎಂಬ ಮುಂದಿನ ಟೀಕಾ ಮಾತಿನಲ್ಲಿ ಜೀವಪಕ್ಷದಲ್ಲಿ ಅನೇಕ ಬಾಧಕಗಳನ್ನು ಹೇಳಿದ್ದಾರೆ. ಅವುಗಳನ್ನು ಅನುಸಂಧಾನ ಮಾಡಿಕೊಂಡು, ಆತ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು ಎಂದು ಹೇಳಿದಂತಾಯಿತು.

ಜ್ಯೋತಿರಧಿಕರಣ (೧-೩-೧೧)

**प्रकाशः – मूलमप्याह – तदुक्तमिति ।।** ''प्रश्नायोगात्'' इति टीकां विवृत्य तत्प्रसङ्गात् ''आदित्यादि ज्योतिष्मत'' इत्यादिटीकावाक्यं च विवृत्य तन्मूलं चोक्त्वा ''सुखदुःखविशेषवत्त्वेन'' इत्यादिटीकां व्यनक्ति ।। **किं चेत्यादिना** ।। **बृहदिति** ।। एतेन बाधकोक्तिपरटीकाबृहदारण्यकभाष्यमूलेत्युक्तं भवति ।

ಟೀಕೆಯಲ್ಲಿ ಜೀವಪಕ್ಷದಲ್ಲಿ ಬಾಧಕಗಳನ್ನು ಹೇಳಿದ್ದಾರೆ ಅದಕ್ಕೆ ಮೂಲವನ್ನು 'ತದುಕ್ತಮ್' ಎಂಬ ಗ್ರಂಥದಿಂದ ತೋರಿಸಿದ್ದಾರೆ. 'ಪ್ರಶ್ನಾಯೋಗಾತ್' ಎಂಬ ಟೀಕೆಯನ್ನು ವಿವರಣೆ ಮಾಡಿ, ಪ್ರಾಸಂಗಿಕವಾಗಿ 'ಆದಿತ್ಯಾದಿ ಜ್ಯೋತಿಷ್ಮತಃ' ಇತ್ಯಾದಿ ಟೀಕಾವಾಕ್ಯವನ್ನೂ ಕೂಡ ವಿವರಿಸಿ, ಅದನ್ನು ಮೂಲಾರೂಢಮಾಡಿ, 'ಸುಖದುಃಖವಿಶೇಷವತ್ತ್ವೇನ' ಇತ್ಯಾದಿ ಟೀಕೆಯನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಬೃಹದಾರಣ್ಯಕಭಾಷ್ಯ ಎಂದು ಹೇಳಿದ್ದರಿಂದ ಬಾಧಕೋಕ್ತಿಪರವಾದ ಟೀಕೆಯು ಬೃಹದಾರಣ್ಯಕಭಾಷ್ಯದ ಮೂಲಕವಾಗಿದೆ ಎಂದು ಹೇಳಿದಂತಾಯಿತು.

**गुरुराजीयम्** – ननु भवत्पक्षेऽपि मुख्यार्थत्याग एव । पुरुषादिशब्दानां प्रकृतपरत्वव्युत्पन्नत्वरूपमुख्यार्थत्यागादित्यत आह – **नहीति** ।। अस्तु वा पुरुषादिशब्दानामपि प्रकृतपरत्वव्युत्पन्नत्वम् । तथापि नास्मत्पक्षे मुख्यार्थत्यागः। हिरण्मयः पुरुष इत्यादौ पुरुषशब्देन प्रकृतब्रह्मपरत्वात्यागादित्याह – **ब्रह्मापीति** ।। अध्याहारः अस्येत्यस्येति शेषः । यच्चोक्तमुपसंहारस्थस्वयंशब्दानुसारेणात्मैवास्येत्यत्राप्यात्मशब्दः स्वपरो नतु ब्रह्मपर इति । तद्दूषयति – **आत्मैवेति** ।। स्वपक्षे बाधकमुद्धृत्य परपक्षे बाधकमाह – **जीवपक्षेत्विति** ।।

।। इति श्रीकेशवभट्टारकेण विरचितायां भावदीपिकायाम्
ज्योतिरधिकरणं सम्पूर्णम् ।।११।।




ಶ್ರುತಿಯಲ್ಲಿರುವ ಪುರುಷಶಬ್ದವು ಪುರುಷೋತ್ತಮನಾದ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆಂಬ ವಿಚಾರವನ್ನು ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಲಾಗಿದೆ. ಮತ್ತು ಉಪಕ್ರಮದಲ್ಲಿ ಜೀವನು ಪ್ರಕೃತನಾದ್ದರಿಂದ ಉಪಸಂಹಾರದಲ್ಲಿಯೂ ಅವನನ್ನೇ ಪರಾಮರ್ಶ ಮಾಡಬೇಕೆಂದು ಪೂರ್ವಪಕ್ಷದಲ್ಲಿ ಹೇಳಲಾಗಿತ್ತು. ಇದೂ ಸಹ ತಪ್ಪು. ಪ್ರಕೃತ ಪರತ್ವವನ್ನು ಆಶ್ರಯಿಸುವುದಕ್ಕಿಂತ ಮುಖ್ಯಪರತ್ವವನ್ನು ಆಶ್ರಯಿಸುವುದೇ

ಶ್ರೇಷ್ಠ. ಅಂದರೆ ಜ್ಯೋತಿ ಹಾಗೂ ಪುರುಷ ಶಬ್ದಗಳಿಗೆ ಪರಮಾತ್ಮ ಎಂಬ ಅರ್ಥವನ್ನು ಹೇಳಿದಾಗ ಮುಖ್ಯಾರ್ಥತ್ವವನ್ನು ಇಟ್ಟುಕೊಂಡಂತಾಗುತ್ತದೆ. ಆದರೆ ಜೀವನೆಂಬರ್ಥವನ್ನು ವಿವಕ್ಷಿಸಿದಾಗ, ಕೇವಲ ಪ್ರಕೃತಪರತ್ವವನ್ನು ಇಟ್ಟುಕೊಂಡಂತಾಗುತ್ತದೆ ಹೊರತು, ಮುಖ್ಯಾರ್ಥತ್ವವನ್ನು ಇಟ್ಟುಕೊಂಡಂತಾಗುವುದಿಲ್ಲ. ಮತ್ತು ಬ್ರಹ್ಮನೂ ಸಹ 'ಹಿರಣ್ಮಯಃಪುರುಷಃ' ಎಂಬಲ್ಲಿ ಹಿಂದೆ ಪ್ರಕೃತನಾಗಿದ್ದಾನೆ. ವಿಚಾರ ಮಾಡಿದರೆ ಜೀವನು ಉಪಕ್ರಮದಲ್ಲಿ ಪ್ರಕೃತನಾಗಿರಬಹುದು. ಆದರೆ ಬ್ರಹ್ಮನು ಉಪಕ್ರಮವಾಕ್ಯಕ್ಕಿಂತ ಅತ್ಯಂತ ಸಮೀಪದಲ್ಲೇ ಪ್ರಕೃತನಾಗಿದ್ದಾನೆ. ಪರಾಮರ್ಶ ಮಾಡುವಂತಹ 'ಇದಂ' ಮೊದಲಾದ ಶಬ್ದಗಳು ಬುದ್ಧಿಯಲ್ಲಿ ಸನ್ನಿಹಿತವಾದದ್ದನ್ನೇ ಪರಾಮರ್ಶ ಮಾಡುತ್ತವೆ ಹೊರತು, ದೂರದಲ್ಲಿರುವುದನ್ನು ಪರಾಮರ್ಶ ಮಾಡುವುದಿಲ್ಲ. ಪ್ರಕೃತ 'ಸ್ವಪ್ನೇನ ಶಾರೀರಮಭಿಪ್ರಹೃತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಎಂಬ ಹಿಂದಿನ ವಾಕ್ಯದಲ್ಲಿ ಪರಮಾತ್ಮನೇ ಸನ್ನಿಹಿತನಾದ್ದರಿಂದ, ಅವನನ್ನೇ ಪರಾಮರ್ಶ ಮಾಡಬೇಕು.

'ಅಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕಾಗಿಲ್ಲ. ಸ್ವಪ್ನಾದ್ಯವಸ್ಥೆಗಳಲ್ಲಿ ಜೀವನಿಗೆ ಪರಮಾತ್ಮನೇ ಜ್ಞಾನಕಾರಣನಾದ್ದರಿಂದ, 'ಆತ್ಮೈವಾಸ್ಯಜ್ಯೋತಿಃ' ಎಂಬಲ್ಲಿ ಅವಧಾರಣವನ್ನು ಶ್ರುತಿಯು ಹೇಳಿದೆ. ಇಂತಹ ಆತ್ಮನ ಬಗ್ಗೆ ಪ್ರಶ್ನೋತ್ತರಗಳನ್ನು ಮಾಡಿದ ಮೇಲ 'ಜ್ಯೋತಿಃ' ಶಬ್ದದಿಂದ ಜ್ಞಾನಸಾಧನತ್ವವನ್ನು ಹೇಳಿ, ಹೇಗೆ ಜ್ಞಾನಸಾಧನನಾಗಿದ್ದಾನೆ? ಎಂಬ ಪ್ರಶ್ನೆಗೆ 'ಸ್ವಯಂ ವಿಹೃತ್ಯ' ಇತ್ಯಾದಿ ವಾಕ್ಯದಿಂದ ಸ್ವಪ್ನಪದಾರ್ಥಗಳನ್ನು ಸೃಷ್ಟಿಸುವ ಮೂಲಕ ಜ್ಞಾನಸಾಧನನಾಗಿದ್ದಾನೆಂದು ಉತ್ತರಿಸಲಾಗಿದೆ. ಆದ್ದರಿಂದ 'ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ ಎಂಬಲ್ಲಿ 'ಅಸ್ಯ' ಎಂಬ ಪದದಿಂದ ಜೀವನೇ ಅನ್ವಿತನಾಗುತ್ತಾನೆ. ಮತ್ತು 'ಆತ್ಮೈವಾಸ್ಯಜ್ಯೋತಿಃ' ಎಂಬ ವಾಕ್ಯದಲ್ಲಿರುವ ಆತ್ಮಶಬ್ದದ ಅರ್ಥವನ್ನು 'ಅತ್ರಾಯಂ ಪುರುಷ ಸ್ವಯಂ' ಎಂಬಲ್ಲಿ ಪುರುಷ ಶಬ್ದವು ಹೇಳುತ್ತಿದೆ. ಅವಧಾರಣದ ಅರ್ಥವನ್ನು 'ಸ್ವಯಂ' ಶಬ್ದವು ಹೇಳುತ್ತಿರುವುದರಿಂದ, ಪರಮಾತ್ಮ ಪರತ್ವ ಪಕ್ಷದಲ್ಲಿಯೇ ಐಕಾರ್ಥ್ಯವು ಇರುತ್ತದೆ.

ವಿಚಾರ ಮಾಡಿದರೆ ಜೀವಪಕ್ಷದಲ್ಲಿ ಪ್ರಶ್ನೆಯೇ ಕೂಡುವುದಿಲ್ಲ. ಜೀವನು ಹುಟ್ಟು-ಸಾವು ಮೊದಲಾದವುಗಳಿಂದ ಯುಕ್ತನಾಗಿದ್ದಾನೆಂಬುದು ಪ್ರತ್ಯಕ್ಷದಿಂದಲೇ ಸಿದ್ಧವಾಗುವಾಗ ಅದನ್ನೇ ಶ್ರುತಿಯು ಪುನಃ ಹೇಳುವುದರಲ್ಲಿ ಅರ್ಥವಿಲ್ಲ. ಮತ್ತು ಜೀವಪಕ್ಷದಲ್ಲಿ ಸುಖ-ದುಃಖಗಳಿಗೆ ಆಶ್ರಯನಾದ ಕಾರಣ ಸಮಾನತ್ವವಾಗಲೀ, 'ಸ್ವಯಂವಿಹೃತ್ಯ' ಎಂಬಲ್ಲಿ ಹೇಳಲ್ಪಟ್ಟ ಸ್ವಾತಂತ್ರ್ಯವಾಗಲೀ, 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂಬಲ್ಲಿ ಹೇಳಲ್ಪಟ್ಟ ಸ್ವಾಪ್ನಪದಾರ್ಥಸ್ರಷ್ಟೃತ್ವವಾಗಲೀ ಕೂಡುವುದಿಲ್ಲ. ಆದ್ದರಿಂದ ಬೃಹದಾರಣ್ಯಕೋಪನಿಷತ್ತಿನ ಜ್ಯೋತಿರ್ಬ್ರಾಹ್ಮಣದಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು ಜೀವನಲ್ಲ.



● ● ● ● ●

## तात्पर्यचन्द्रिका

अन्येतु ।। एष सम्प्रसादोऽस्माच्छरीरात्समुत्थाय परञ्ज्योतिरुपसम्पद्य स्वेन रूपेणाभिनिष्पद्यत'' इति वाक्यस्थं ज्योतिरादित्यः ।[1]

ಅನುವಾದ - ಅದ್ವೈತಿಗಳ ಅಧಿಕರಣ ಶರೀರವು ಹೀಗಿದೆ - 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಇಲ್ಲಿ ಹೇಳಲ್ಪಟ್ಟ ಜ್ಯೋತಿಯು ಆದಿತ್ಯನೇ ಆಗಿದ್ದಾನೆಂದು ಪೂರ್ವಪಕ್ಷ.

(१) **शाङ्करभाष्यम् –**

**ज्योतिर्दर्शनात् ॥ ४० ॥**

**परं ज्योतिस्तु सूर्यस्य मण्डलं ब्रह्म वा भवेत् ।**
**समुत्थायोपसम्पद्येत्युक्त्या स्याद् रविमण्डलम् ॥**
**समुत्थानं त्वंपदार्थशुद्धिर्वाक्यार्थबोधनम् ।**
**सम्पत्तिरुत्तमत्वोक्तेर्ब्रह्म स्यादक्षिसाक्षितः ॥**

'एष सम्प्रसादोऽस्माच्छरीरात् समुत्थाय परं ज्योतिरुपसम्पद्य स्वेन रूपेणाभिनिष्पद्यते' इति श्रूयते, किं ज्योतिःशब्दं चक्षुर्वि,यतमोपहं तेजः? किंवा परं ब्रह्म? इति । किं तावत्प्राप्तम्? प्रसिद्धमेव तेजो ज्योतिःशब्दमिति । कुतः? तत्र ज्योतिःशब्दस्य रूढत्वात् । 'ज्योतिश्चरणाभिधानात्' इत्यत्र हि प्रकरणाज्ज्योतिःशब्दः स्वार्थं परित्यज्य ब्रह्मणि वर्तते । नचेह द्वत् किञ्चित्स्वार्थपरित्यागे कारणं दृश्यते । तथाच नाडीखण्डे 'अथ यत्रैतदस्माच्छरीरादुत्क्रामयत्यथैतैरेव रश्मिभिरूर्ध्वमाक्रमते' इति मुमुक्षोरादित्यप्राप्तिरभिहिता । तस्मात् प्रसिद्धमेव तेजो ज्योतिःशब्दमिति । एवं प्राप्ते ब्रूमः – परमेव ब्रह्म ज्योतिःशब्दम् । कस्मात्? दर्शनात् । तस्य हीह प्रकरणे वक्तव्यत्वेनानुवृत्तिर्दृश्यते, 'य आत्माऽपहतपाप्मा' इत्यपहतपाप्मत्वादिगुणकस्यात्मनः प्रकरणादावन्वेष्टव्यत्वेन विजिज्ञासितव्यत्वेन च प्रतिज्ञानात् । 'एतं त्वेव ते भूयोऽनुव्याख्यास्यामि' इति चानुसन्धानात् । 'अशरीरं वाव सन्तं न प्रियाप्रिये स्पृशतः' इति चाशरीरतायै ज्योतिःसम्पत्तेरस्याभिधानात् । ब्रह्मभावाच्चान्यत्राशरीरतानुपपत्तेः 'परं ज्योतिः' 'स उत्तमः पुरुषः' इति च विशेषणात् । यत्तूक्तं मुमुक्षोरादित्यप्राप्तिरभिहितेति । नासावात्यन्तिको मोक्षो गत्युत्क्रान्तिसम्बन्धात् । नह्यात्यन्तिके मोक्षे गत्युत्क्रान्ती स्त इति वक्ष्यामः ।। ४० ।।

**यद्यपीदं प्रकरणं दहराधिकरणे ब्रह्मपरमित्युक्तम् । तथापि ''समुत्थाय'' इत्यादिश्रुत्या प्रकरणबाध इहाशङ्क्यते । ज्योतिषो ब्रह्मत्वे हि ब्रह्मभावरूपायास्तत्सम्पत्तेरुत्क्रान्त्यनपेक्षत्वात्समुत्थायेति श्रुतिबाधः ।**

ವಾಸ್ತವಿಕವಾಗಿ ಶ್ರುತಿಯ ಈ ಪ್ರಕರಣವು ಬ್ರಹ್ಮಪರವಾಗಿದೆಯೆಂದು ದಹರಾಧಿಕರಣದಲ್ಲಿ ನಿರ್ಣಯಿಸಲಾಗಿದೆ. ಆದರೂ ಸಹ 'ಸಮುತ್ಥಾಯ' ಎಂಬ ಶ್ರುತಿಯಿಂದ ಬ್ರಹ್ಮಪ್ರಕರಣವು ಬಾಧಿತವಾಗುತ್ತದೆಂದು ಇಲ್ಲಿ ಆಕ್ಷೇಪಿಸಬಹುದು. ಏಕೆಂದರೆ ಈ ಶ್ರುತಿಯಲ್ಲಿರುವ 'ಜ್ಯೋತಿಃ' ಎಂಬ ಶಬ್ದವು ಬ್ರಹ್ಮಪರವಾದಲ್ಲಿ, ಅನೇಕ ಬಾಧಕಗಳಿವೆ. ಬ್ರಹ್ಮಭಾವರೂಪವಾದ ಮೋಕ್ಷಕ್ಕೋಸ್ಕರ ಶರೀರದ ತ್ಯಾಗವು ಬೇಕಾಗಿಲ್ಲ. ಜ್ಯೋತಿಯು ಬ್ರಹ್ಮನಾದಲ್ಲಿ 'ಸಮುತ್ಥಾಯ' ಎಂಬ ಶ್ರುತಿಯು ಕೂಡುವುದಿಲ್ಲ.

**स्वरूपनिष्पत्त्यतिरिक्ताया ब्रह्मसम्पत्तेरभावात्सम्पद्येति पूर्वकालार्थक्त्वा श्रुतिबाधश्च ।**

ಮತ್ತು 'ಉಪಸಂಪದ್ಯ' ಎಂಬಲ್ಲಿ 'ಕ್ತ್ವಾ' ಪ್ರತ್ಯಯಕ್ಕೆ 'ಲ್ಯಪ್' ಪ್ರತ್ಯಯವು ಆದೇಶವಾಗಿ ಬಂದಿದೆ. 'ಸಮಾನಕರ್ತೃಕಯೋಃ ಪೂರ್ವಕಾಲೇ ತು' ಎಂಬಂತೆ ಸಮಾನಕರ್ತೃಕವಾದ ಹಿಂದಿನ ಮುಂದಿನ ಕಾಲಗಳಲ್ಲಿ ನಡೆಯುವ ಕ್ರಿಯೆಗಳ ನಡುವೆ, ಹಿಂದಿನ ಕಾಲದ ಕ್ರಿಯಾವಾಚಿಯಾದ ಧಾತುವಿನ ಮುಂದೆ ತ್ವ ಪ್ರತ್ಯಯವು ಬರುತ್ತದೆಂದು ಹೇಳಲಾಗಿದೆ. ಹಾಗಾಗಿ 'ಉಪಸಂಪದ್ಯ' ಎಂದರೆ ಬ್ರಹ್ಮಭಾವವನ್ನು ಹೊಂದಿ, ಎಂಬರ್ಥವು ದೊರೆಯುತ್ತದೆ. ಪುನಃ 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂದು ಹೇಳುವುದು ಪುನರುಕ್ತವಾಗಿದೆ. ಏಕೆಂದರೆ ಸ್ವರೂಪನಿಷ್ಪತ್ತಿಗಿಂತ ಅತಿರಿಕ್ತವಾದ ಬ್ರಹ್ಮಸಂಪತ್ತಿಯು ಇರುವುದಿಲ್ಲ. ಆದ್ದರಿಂದ 'ಉಪಸಂಪದ್ಯ' ಎಂಬ ಪೂರ್ವಕಾಲವಾಚಿಯಾದ ತ್ವ ಶ್ರುತಿಯ ಬಾಧವು ಬರುತ್ತದೆ.

**ज्योतिष आदित्यत्वे तु शरीरादुत्क्रम्यादित्यसमीपं गत्वा कार्यब्रह्मलोकं प्राप्य क्रमेण मुक्तो भवतीत्यर्थोपपत्तेर्न श्रुतिबाध इति प्राप्ते**

'ಜ್ಯೋತಿಃ' ಎಂಬ ಶಬ್ದದಿಂದ ಆದಿತ್ಯನು ಪ್ರತಿಪಾದ್ಯನೆಂದು ಹೇಳಿದಾಗ, ಈ ದೋಷಗಳು ಬರುವುದಿಲ್ಲ. ಏಕೆಂದರೆ ಶರೀರವನ್ನು ತ್ಯಾಗ ಮಾಡಿ, ಆದಿತ್ಯನ ಬಳಿ ಹೋಗಿ, ಅನಂತರ ಕಾರ್ಯರೂಪನಾದ ಬ್ರಹ್ಮನ ಲೋಕವನ್ನು ಹೊಂದುತ್ತಾನೆ. ಕ್ರಮವಾಗಿ ಮುಂದೆ ಮೋಕ್ಷವನ್ನು ಹೊಂದುತ್ತಾನೆಂಬ ಅರ್ಥವನ್ನು ಶ್ರುತಿಗೆ ಹೇಳಬಹುದು. ಹಾಗಾಗಿ ಶ್ರುತಿಬಾಧವು ಬರುವುದಿಲ್ಲ.

**स्यादेतदेवं यद्यत्रोक्तो मोक्षः सगुणः स्यात् । अयं तु निर्गुणः ।''य आत्मापहतपाप्म'' इत्यादिना निर्गुणं ब्रह्मोक्त्वा तज्ज्ञानफलस्यैवोच्यमानत्वात् ।**

ಸಿದ್ಧಾಂತ - ನೀವು ಹೇಳಿದ್ದು ಯುಕ್ತವಾಗುತ್ತಿತ್ತು. ಒಂದು ವೇಳೆ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಮೋಕ್ಷವು, ಸಗುಣವಿಷಯಕವಾಗಿದ್ದಲ್ಲಿ ಯುಕ್ತವಾಗುತ್ತಿತ್ತು. ಆದರೆ ಶ್ರುತಿಯು ನಿರ್ಗುಣನನ್ನೇ ಪ್ರತಿಪಾದನೆ ಮಾಡುತ್ತಿದೆ. 'ಯ ಆತ್ಮಾಽಪಹತಪಾಪ್ಮಾ' ಇತ್ಯಾದಿಯಾಗಿ ಹಿಂದೆ ನಿರ್ಗುಣನ ಬಗ್ಗೆ ಹೇಳಿ, 'ಪರಂಜ್ಯೋತಿರುಪಸಂಪದ್ಯ' ಇತ್ಯಾದಿಯಾಗಿ ನಿರ್ಗುಣಬ್ರಹ್ಮನ ಜ್ಞಾನವನ್ನು ಪಡೆಯುವುದರಿಂದ ಲಭಿಸುವಂತಹ ಫಲವನ್ನು ಶ್ರುತಿಯು ಹೇಳುತ್ತಿದೆ.

**तथाच शरीरादुत्थानं नाम श्रवणादिकम् । स्वरूपाभिनिष्पत्तिस्तु तज्जन्यः साक्षात्कारः । सम्पत्तिस्तु तत्साध्यो ब्रह्मभावः ।**

ನಿರ್ಗುಣಬ್ರಹ್ಮಭಾವಕ್ಕೆ ಯಾವುದೂ ಸಹ ಪ್ರತಿಬಂಧಕವಲ್ಲ. ಹಾಗಾಗಿ ದೇಹದಿಂದ ಉತ್ಕ್ರಮಣವನ್ನು ಶ್ರುತಿಯು ಏಕೆ ಹೇಳಿದೆ ? ಎಂಬ ಪೂರ್ವಪಕ್ಷಿಗಳ ಆಶಂಕೆಗೂ ಅವಕಾಶವಿಲ್ಲ. ಏಕೆಂದರೆ 'ಅಸ್ಮಾತ್ ಶರೀರಾತ್ ಸಮುತ್ಥಾಯ' ಎಂದರೆ ಶ್ರವಣ, ಮನನ ನಿಧಿಧ್ಯಾಸನಗಳನ್ನು ಮಾಡಿ, 'ಪರಂಜ್ಯೋತಿರುಪಸಂಪದ್ಯ' ಎಂದರೆ ಬ್ರಹ್ಮಭಾವವನ್ನು ಪಡೆದು, 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಸಾಕ್ಷಾತ್ಕಾರವನ್ನು ಹೊಂದುತ್ತಾನೆ ಎಂದರ್ಥ.

**क्त्वाश्रुतिस्तु ''मुखं व्यादाय स्वपिति'' इत्यादिवदिति सिद्धान्त इत्याहुः ।**

ಬ್ರಹ್ಮಭಾವವನ್ನು ಪಡೆದ ಮೇಲೆ, ಸಾಕ್ಷಾತ್ಕಾರವನ್ನು ಪಡೆಯಲು ಹೇಗೆ ಸಾಧ್ಯ? ಎಂದರೆ, ಶ್ರುತಿಯು ಪೂರ್ವೋತ್ತರ ಕಾಲಗಳನ್ನು ವಿವಕ್ಷಿಸಿಯೇ ಇಲ್ಲ. ಹೇಗೆಂದರೆ 'ಮುಖಂ ವ್ಯಾದಾಯ ಸ್ವಪಿತಿ' ಎಂಬಲ್ಲಿ ಮೊದಲು ಬಾಯಿತೆಗೆದು ಅನಂತರ ನಿದ್ರೆ ಮಾಡುತ್ತಾನೆ ಎಂದೇನೂ ಅರ್ಥವಲ್ಲ. ಹೊರತು, ಮಲಗಿದ ಮೇಲೆ ಬಾಯಿ ತೆಗೆಯುತ್ತಾನೆ ಎಂದೇ ಅರ್ಥ. ಅದರಂತೆ ಇಲ್ಲಿಯೂ ಕೂಡ ತಿಳಿದುಕೊಳ್ಳಬೇಕು. ಆದ್ದರಿಂದ 'ಜ್ಯೋತಿಃ' ಶಬ್ದದಿಂದ ನಿರ್ಗುಣ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತವೆಂದು ಅದ್ವೈತಿಗಳು ಹೇಳುತ್ತಾರೆ.

**तन्न । ''नारायणपरोज्योतिः'' इत्यादिश्रुतिषु ''परं ज्योतिः परं धाम पवित्रं परमं भवान्'' इत्यादिस्मृतिषु च परशब्दसहितस्य ज्योतिश्शब्दस्य परब्रह्मण्येव प्रसिद्धत्वेन संशयपूर्वपक्षयोरनुदयात् ।**

ಅದ್ವೈತಿಗಳ ಈ ಅಧಿಕರಣಶರೀರ ಅಸಾಧುವಾಗಿದೆ. ಏಕೆಂದರೆ 'ನಾರಾಯಣಪರೋಜ್ಯೋತಿಃ' ಇತ್ಯಾದಿ ಶ್ರುತಿಗಳಲ್ಲಿ 'ಪರಂ ಜ್ಯೋತಿಃ ಪರಂ ಧಾಮ ಪವಿತ್ರಂ ಪರಮಂ ಭವಾನ್' ಇತ್ಯಾದಿ ಸ್ಮೃತಿಗಳಲ್ಲಿಯೂ ಪರಶಬ್ದದಿಂದ ಕೂಡಿರುವ 'ಜ್ಯೋತಿಸ್' ಶಬ್ದವು ಪರಬ್ರಹ್ಮನಲ್ಲೇ ಪ್ರಸಿದ್ಧವಾಗಿದೆ. ಪ್ರಕೃತ 'ಏಷಃ ಸಂಪ್ರಸಾದೋ' ಎಂಬ ಶ್ರುತಿಯಲ್ಲಿಯೂ 'ಪರಂ ಜ್ಯೋತಿಃ' ಎಂಬ ಪದವೇ

ಶ್ರುತವಾದ್ದರಿಂದ ಪರಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಮೊದಲೇ ನಿಶ್ಚಿತವಾಗಿರುತ್ತದೆ. ಹೀಗಿರುವಾಗ ಸಂಶಯವಾಗಲೀ, ಪೂರ್ವಪಕ್ಷವಾಗಲೀ ಹುಟ್ಟಲು ಸಾಧ್ಯವೇ ಇಲ್ಲ.

**किञ्च –**

**पूर्वं यत्सत्यकामादि पश्चाद्यत्क्रीडनादिकम् ।**
**तद्द्वयं निर्गुणे मोक्षे सर्वथा नोपपद्यते ।। १ ।।**

**अस्माद्वाक्यात्पूर्वत्र ''य आत्मापहतपाप्म'' इत्यारभ्य ''सत्यकामः सत्यसंकल्प'' इति सविशेषब्रह्मणः श्रवणादुत्तरत्र च ''स्वेन रूपेणाभिनिष्पद्यते । सतत्र पर्येति जक्षन् क्रीडन् रममाणः स्त्रीभिर्वा यानैर्व'' इति सगुणमोक्षस्य श्रवणान्न निर्गुणोऽयं मोक्षः ।**

ಮತ್ತು

ಪೂರ್ವಂ ಯತ್ ಸತ್ಯಕಾಮಾದಿ ಪಶ್ಚಾದ್ಯತ್ ಕ್ರೀಡಾನಾದಿಕಮ್ ।
ತದ್ವಯಂ ನಿರ್ಗುಣೇ ಮೋಕ್ಷೇ ಸರ್ವಥಾ ನೋಪಪದ್ಯತೇ ।।೧।।

ಈ ಶ್ರುತಿಯ ಹಿಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ ಸತ್ಯಕಾಮತ್ವಾದಿಗಳು ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ ಕ್ರೀಡನಾದಿಗಳು ನಿರ್ಗುಣ ಬ್ರಹ್ಮಭಾವವೆಂಬ ಮೋಕ್ಷದಲ್ಲಿ ಸರ್ವಥಾ ಕೂಡುವುದಿಲ್ಲ.

'ಏಷಃ ಸಂಪ್ರಸಾದಃ' ಎಂಬ ವಾಕ್ಯಕ್ಕಿಂತ ಹಿಂದೆ 'ಯ ಆತ್ಮಾಪಹತಪಾಪ್ಮಾ' ಎಂದು ಪ್ರಾರಂಭವಾಗಿ, ಸತ್ಯಕಾಮಃ, ಸತ್ಯಸಂಕಲ್ಪಃ ಇತ್ಯಾದಿಯಾಗಿ ಸವಿಶೇಷಬ್ರಹ್ಮನ ವಿಚಾರವೇ ಪ್ರಸ್ತುತವಾಗಿದೆ. ಮುಂದೆಯೂ ಸಹ 'ಸ್ವೇನ ರೂಪೇನ ಅಭಿನಿಷ್ಪದ್ಯತೇ । ಸತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ' ಇತ್ಯಾದಿಯಾಗಿ ಸಗುಣಬ್ರಹ್ಮನ ಮೋಕ್ಷವೇ ಶ್ರುತವಾಗಿದೆ. ಹೊರತು, ನಿರ್ಗುಣಮೋಕ್ಷವು ಎಲ್ಲಿಯೂ ಸಹ ಪ್ರಸಕ್ತವಾಗಿಲ್ಲ.

**अपहतपाप्मत्वादिकं तु सगुणेऽप्यस्ति । ''य एषोन्तरादित्ये हिरण्मयः पुरुष'' इति श्रुते सगुणे ''सर्वेभ्यः पाप्मभ्य उदित'' इति पापातीतत्वश्रवणात् । सत्यकाम इत्यादिकं तु न निर्गुणे ।**

ಅಪಹತಪಾಪ್ಮತ್ವಾದಿಗಳನ್ನು ಸಗುಣಬ್ರಹ್ಮನಲ್ಲಿಯೂ ಕೂಡಿಸಬಹುದು. ಏಕೆಂದರೆ 'ಯ ಏಷೋಂತರಾದಿತ್ಯೇ ಹಿರಣ್ಮಯಃ ಪುರುಷ' ಇತ್ಯಾದಿಯಾಗಿ ಹಿರಣ್ಮಯಾದಿ ಗುಣಗಳಿಂದ ಸಹಿತನಾದ ಸಗುಣಬ್ರಹ್ಮನ ಬಗ್ಗೆ 'ಸರ್ವೇಭ್ಯಃ ಪಾಪ್ಮಭ್ಯ ಉದಿತ' ಎಂಬುದಾಗಿ ಪಾಪರಾಹಿತ್ಯವನ್ನು ಶ್ರುತಿಯೇ

ಹೇಳುತ್ತಿದೆ. ಮತ್ತು 'ಸತ್ಯಕಾಮಃ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಸತ್ಯಕಾಮತ್ವಾದಿಗುಣಗಳು ನಿರ್ಗುಣನಲ್ಲಿ ಸರ್ವಥಾ ಕೂಡುವುದಿಲ್ಲ.

**किञ्चैवं सति सर्वपदानां लक्षणा स्यात् । "शरीरात्समुत्थाय" इत्यस्य श्रवणादौ "उपसम्पद्य" इत्यस्यैक्ये "स्वेन रूपेणाभिनिष्पद्यते" इत्यस्य च साक्षात्कारे योगरूढ्योरभावात् ।**

ಮತ್ತು ಒಂದು ವೇಳೆ ನಿರ್ಗುಣ ಬ್ರಹ್ಮನು ಪ್ರತಿಪಾದ್ಯನಾದಲ್ಲಿ, ಶ್ರುತಿಯಲ್ಲಿರುವ ಸಕಲ ಪದಗಳಿಗೂ ಲಕ್ಷಣಾ ಮಾಡುವ ಪ್ರಸಂಗ ಬರುತ್ತದೆ. 'ಶರೀರಾತ್ ಸಮುತ್ಥಾಯ' ಎಂಬುದಕ್ಕೆ ಶ್ರವಣಾದಿಗಳಲ್ಲಿ 'ಉಪಸಂಪದ್ಯ' ಎಂಬ ಪದಕ್ಕೆ ಐಕ್ಯದಲ್ಲಿ, 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬುದಕ್ಕೆ ಸಾಕ್ಷಾತ್ಕಾರದಲ್ಲಿ ಯೌಗಿಕಾರ್ಥವಾಗಲೀ, ರೂಢಾರ್ಥವಾಗಲೀ ಹೇಳಲು ಸರ್ವಥಾ ಬರುವುದಿಲ್ಲ.

**प्रकाशः –**

**अन्येत्यिति** ।। किं ज्योतिरादित्योऽथ ब्रह्मेति संशये ज्योतिःश्रुतेरादित्ये रूढत्वादादित्य इति पूर्वः पक्षः ।

ವಿವರಣೆ - ಅದ್ವೈತಿಗಳ ಅಧಿಕರಣ ಶರೀರವನ್ನು ವಿಮರ್ಶಿಸಲು ಮೊದಲು ಅನುವಾದ ಮಾಡುತ್ತಿದ್ದಾರೆ 'ಅನ್ಯೇತು' ಇತ್ಯಾದಿ ಗ್ರಂಥದಿಂದ. 'ಏಷ ಸಂಪ್ರಸಾದೋ' ಎಂಬ ಶ್ರುತಿಯಲ್ಲಿರುವ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾದವನು ಆದಿತ್ಯನೋ, ಅಥವಾ ಬ್ರಹ್ಮನೋ ? ಎಂದು ಸಂಶಯ. ಜ್ಯೋತಿ ಶ್ರುತಿಯು ಆದಿತ್ಯನಲ್ಲಿ ರೂಢವಾದ್ದರಿಂದ ಆದಿತ್ಯನೇ ಪ್ರತಿಪಾದ್ಯನೆಂದು ಪೂರ್ವಪಕ್ಷ.

**प्रकाशः –** ननु "ज्योतिषां ज्योतिः" इति ब्रह्मण्यपि ज्योतिश्शब्दोऽस्ति । प्रकरणं च ब्रह्मपरम् । तथाच कथमादित्य इत्युक्तिरित्याशङ्क्य भामत्युक्तं समाधिमनुवदति ।। **यद्यपीति** ।।

'ಜ್ಯೋತಿಷಾಂ ಜ್ಯೋತಿಃ' ಎಂಬ ಶ್ರುತಿಯಲ್ಲಿ ಬ್ರಹ್ಮನೂ ಕೂಡ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಪ್ರಕರಣವಂತೂ ಬ್ರಹ್ಮಪರವೇ ಆಗಿದೆ. ಹೀಗಿರುವಾಗ ಆದಿತ್ಯನು ಪ್ರಕೃತ ಪ್ರತಿಪಾದ್ಯನೆಂದು ಹೇಗೆ ಆಶಂಕಿಸುತ್ತೀರಿ? ಎಂಬ ಆಶಂಕೆಗೆ ಭಾಮತಿಯಲ್ಲಿ ಹೇಳಿದ ಸಮಾಧಾನವನ್ನೇ ಅನುವಾದ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ವಾಕ್ಯದಿಂದ.

**प्रकाशः – श्रुत्येति** ।। समुत्थायेति प्रकृतिश्रुत्येत्यर्थः । उत्थानं नामोद्गमनम् । उत्क्रमणमिति यावत् । तद्ब्रह्मज्योतिः पक्षे न युक्तमित्याह – **ज्योतिष इति** ।।

'ಶ್ರುತ್ಯಾ' ಎಂದರೆ 'ಸಮುತ್ಥಾಯ' ಎಂಬಲ್ಲಿರುವ 'ಸಮ್ ಉತ್' ಎಂಬ ಎರಡು ಉಪಸರ್ಗಗಳಿಂದ ಕೂಡಿರುವ 'ಷ್ಠಾ' ಧಾತುವಿನಿಂದ ಕೂಡಿರುವ ಪ್ರಕೃತಿ ಶ್ರುತಿಯಿಂದ ಎಂದರ್ಥ. 'ಉತ್ಥಾನಂ' ಎಂದರೆ 'ಉದ್ಗಮನ' ಎಂದರ್ಥ. ಉತ್ಕ್ರಮಣ' ಎಂದಭಿಪ್ರಾಯ. ಇದು ಬ್ರಹ್ಮನೇ 'ಜ್ಯೋತಿಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಪಕ್ಷದಲ್ಲಿ ಯುಕ್ತವಾಗುವುದಿಲ್ಲವೆಂದು 'ಜ್ಯೋತಿಷಃ' ಎಂಬುದರಿಂದ ಹೇಳಿದ್ದಾರೆ.

**प्रकाशः – क्त्वाश्रुतीति ।। ब्रह्मण एव स्वरूपत्वात्स्वरूपं प्राप्य स्वरूपं** प्राप्नोतीत्यसङ्गतिप्रसङ्गादिति भावः । उपलक्षणमेतत् । ज्योतिश्शब्दस्य तेजसि मुख्यत्वाद्ब्रह्मणि जघन्यता । ज्योतिश्श्रुतिबाधश्च स्यादित्यपि ध्येयम् । यथोक्तं ''तिसृभिश्श्रुतिभिः प्रकरणबाधात्'' इति ।

ಕ್ತ್ವಾಶ್ರುತಿಯ ವಿರೋಧವೂ ಕೂಡ ಬರುತ್ತದೆ. ಜೀವನು ಬ್ರಹ್ಮನ ಸ್ವರೂಪವೇ ಆಗಿರುವುದರಿಂದ, ಬ್ರಹ್ಮಸ್ವರೂಪವನ್ನು ಹೊಂದಿ, ಪುನಃ ಸ್ವರೂಪವನ್ನು ಹೊಂದುತ್ತಾನೆಂದು ಹೇಳುವುದು ಅಸಂಗತವಾಗುತ್ತದೆ. ಉಪಲಕ್ಷಣಯಾ ಮತ್ತೊಂದು ದೋಷವನ್ನು ತಿಳಿಯಬೇಕು. 'ಜ್ಯೋತಿಃ' ಶಬ್ದವು ತೇಜಸ್ಸಿನಲ್ಲಿ ಮುಖ್ಯವಾಗಿರುವುದರಿಂದ ಬ್ರಹ್ಮನಲ್ಲಿ ಅಮುಖ್ಯವಾಗಿರುವುದರಿಂದ ಜ್ಯೋತಿಶ್ರುತಿಯ ಬಾಧವೂ ಬರುತ್ತದೆ. ಆದ್ದರಿಂದ 'ಜ್ಯೋತಿಃ' ಎಂಬ ಶಬ್ದಕ್ಕೆ ಬ್ರಹ್ಮನು ಪ್ರತಿಪಾದ್ಯನೆಂದು ಹೇಳಿದರೆ, ಪ್ರಕೃತಿಶ್ರುತಿ, ಪ್ರತ್ಯಯಶ್ರುತಿ, ಜ್ಯೋತಿಶ್ರುತಿಗಳ ವಿರೋಧವೂ ಬರುತ್ತದೆ. ಇದನ್ನೇ ಭಾಮತಿಯಲ್ಲಿ 'ತಿಸೃಭಿಃ ಶ್ರುತಿಭಿಃ ಪ್ರಕರಣಬಾಧಾತ್' ಬ್ರಹ್ಮಪ್ರಕರಣವು ಮೂರು ಬಗೆಯ ಶ್ರುತಿಗಳಿಂದ ಬಾಧಿತವಾಗುತ್ತದೆ ಎನ್ನಲಾಗಿದೆ.

**प्रकाशः** – उपसंपद्येत्यस्यार्थमाह – **आदित्यसमीपमिति** ।। तस्य तात्पर्यमाह – **कार्येति** ।। आदित्यसमीपे ब्रह्मलोके स्थित्वा तत्रोत्पन्नज्ञानान्मुक्तो भवतीत्यर्थः।।

'ಉಪಸಂಪದ್ಯ' ಎಂಬುದರ ಅರ್ಥವನ್ನು 'ಆದಿತ್ಯಸಮೀಪಂ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಅದರ ತಾತ್ಪರ್ಯವನ್ನು 'ಕಾರ್ಯ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಆದಿತ್ಯನ ಸಮೀಪದಲ್ಲಿ ಬ್ರಹ್ಮಲೋಕವಿದೆ. ಅಲ್ಲಿ ಇದ್ದು, ಬ್ರಹ್ಮನ ಜ್ಞಾನವನ್ನು ಪಡೆದು, ಅನಂತರ ಮೋಕ್ಷವನ್ನು ಪಡೆಯುತ್ತಾನೆ ಎಂದು ಶ್ರುತಿಯ ಅರ್ಥ.

**प्रकाशः – स्यादेतदेवमिति** ।। यद्यत्र गौणमोक्षश्श्रुतः स्यात्तदा शरीरादुत्क्रम्यार्चिरादिनाऽऽदित्यसमीपं गत्वा क्रमेण मुक्तो भवतीत्यर्थःस्यात् । न चैवमित्यर्थः । ननु ज्योतिरुपसंपत्तेरभिनिष्पत्तिरूपसाक्षात्कारसाध्यत्वादभिनिष्पद्य ज्योतिरुपसम्पद्यत इति वक्तव्यम् । नतु ज्योतिरुपसम्पद्याभिनिष्पद्यत इतीत्याशङ्क्य दहराधिकरणे भामत्युक्तमर्थमाह – **क्त्वाश्रुतिस्त्विति** ।।

'ಸ್ಯಾದೇತದೇವಮ್' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಒಂದು ವೇಳೆ ಶ್ರುತಿಯಲ್ಲಿ ಗೌಣವಾದ ಮೋಕ್ಷವು ಪ್ರತಿಪಾದ್ಯವಾಗಿದ್ದಲ್ಲಿ ಆವಾಗ ಶರೀರವನ್ನು ಬಿಟ್ಟು, ಅರ್ಚಿರಾದಿಮಾರ್ಗ ಮುಖಾಂತರ

ಆದಿತ್ಯಲೋಕವನ್ನು ಹೊಂದಿ, ಆದರ ಹತ್ತಿರ ಇರುವ ಬ್ರಹ್ಮಲೋಕವನ್ನು ಹೊಂದಿ, ಕ್ರಮವಾಗಿ ನಿರ್ಗುಣಮೋಕ್ಷವನ್ನು ಹೊಂದುತ್ತಾನೆಂದು ಅರ್ಥೈಸಬಹುದಿತ್ತು. ಆದರೆ ಶ್ರುತಿಯಲ್ಲಿ ಹಾಗೆ ಹೇಳಿಯೇ ಇಲ್ಲ ಎಂದು.

'ಜ್ಯೋತಿರುಪಸಂಪದ್ಯ' ಎಂಬಲ್ಲಿ ಅಭಿನಿಷ್ಪತ್ತಿರೂಪವಾದ ಸಾಕ್ಷಾತ್ಕಾರವು ಸಾಧನವಾಗಿದೆ. ಬ್ರಹ್ಮಭಾವವು ಸಾಧ್ಯವಾಗಿದೆ. 'ಸ್ವರೂಪೇಣಅಭಿನಿಷ್ಪದ್ಯ' ಎಂಬುದಾಗಿ ಸಾಕ್ಷಾತ್ಕಾರವನ್ನು ಪಡೆದು, ಅನಂತರ 'ಪರಂಜ್ಯೋತಿರುಪಸಂಪದ್ಯ' ಎಂಬುದರಿಂದ ಬ್ರಹ್ಮಭಾವವನ್ನು ಹೊಂದುತ್ತಾನೆ ಎಂದು ಹೇಳಬೇಕಿತ್ತು ಹೊರತು, 'ಉಪಸಂಪದ್ಯಅಭಿನಿಷ್ಪದ್ಯತೇ' ಎಂದು ಹೇಳುವುದು ತಪ್ಪಾಗುತ್ತದಲ್ಲವೇ? ಎಂದರೆ ಕ್ತ್ವಾ ಶ್ರುತಿಯು 'ಮುಖಂವ್ಯಾದಾಯ ಸ್ವಪಿತಿ' ಎಂಬ ಪ್ರಯೋಗದಂತೆ ಯುಕ್ತವಾಗುತ್ತದೆಂದು ತಿಳಿಯಬೇಕು.

**प्रकाशः –** उपसम्पद्येत्यत्र ल्यबादेशस्य स्थानिरूपक्त्वाश्रुतिरित्यर्थः । व्यादाय विवृत्य । तत्र यथा व्यादानस्य पश्चात्तनत्वेऽपि क्त्वाप्रत्ययस्तद्वदित्यर्थः ।।

'ಉಪಸಂಪದ್ಯ' ಎಂಬಲ್ಲಿ ಕ್ತ್ವಾ ಪ್ರತ್ಯಯಕ್ಕೆ 'ಲ್ಯಪ್' ಪ್ರತ್ಯಯವು ಆದೇಶವಾಗಿ ಬಂದಿದೆ. ಸ್ಥಾನಿಯಾದದ್ದು ಕ್ತ್ವಾ ಪ್ರತ್ಯಯವಾದ್ದರಿಂದ ಗ್ರಂಥದಲ್ಲಿ ಕ್ತ್ವಾ ಶ್ರುತಿಯೆಂದೇ ವ್ಯವಹರಿಸಿದ್ದಾರೆ. 'ವ್ಯಾದಾಯ' ಎಂದರೆ ಅಗಲಿಸಿ ಎಂದರ್ಥ. ಮಲಗಿದ ಮೇಲೆ ಬಾಯಿಯನ್ನು ಅಗಲಿಸುತ್ತಾನೆ. ಆದರೆ 'ಮುಖಂ ವ್ಯಾದಾಯ ಸ್ವಪಿತಿ' ಬಾಯಿಯನ್ನು ತೆಗೆದು ಮಲಗುತ್ತಾನೆಂಬ ವ್ಯವಹಾರವು ಹೇಗೆ ಇರುತ್ತದೋ, ಅದರಂತೆ ಸಾಕ್ಷಾತ್ಕಾರ ಹಾಗೂ ಬ್ರಹ್ಮಭಾವಗಳಲ್ಲಿಯೂ ತಿಳಿಯಬೇಕು ಎಂದರ್ಥ.

**प्रकाशः – परशब्देति ।।** एतेनार्चिराद्यपेक्षया परत्वात्परज्योतिष्ट्वमादित्यस्य युक्तमिति कल्पतरूक्तं निरस्तम् । कथञ्चित्परसम्पादने प्रसिद्धिबाधापत्तेः ।

ಹೀಗೆ ಹೇಳಿದ್ದರಿಂದ ಅರ್ಚಿರಾದಿಮಾರ್ಗಗಳಿಗಿಂತಲೂ ಮೇಲೆ ಇರುವುದರಿಂದ ಪರಜ್ಯೋತಿಷ್ಟ್ವವು ಆದಿತ್ಯನಲ್ಲಿ ಮಾತ್ರ ಯುಕ್ತವಾಗುತ್ತದೆ ಎಂಬ ಕಲ್ಪತರುವಿನ ಮಾತನ್ನು ನಿರಾಕರಣೆ ಮಾಡಿದಂತಾಯಿತು. ಶ್ರುತಿಯಲ್ಲಿ ಕೇವಲ ಪರಶಬ್ದವಷ್ಟೇ ಇರುತ್ತದೆ ಹೊರತು, ಅರ್ಚಿರಾದಿಮಾರ್ಗಗಳಿಗಿಂತಲೂ ಪರವಾಗಿದೆಯೆಂದು ಇರುವುದಿಲ್ಲ. ಆದ್ದರಿಂದ ಪ್ರಸಿದ್ಧಾರ್ಥವನ್ನು ಬಿಟ್ಟು ಅಪ್ರಸಿದ್ಧಾರ್ಥವನ್ನು ಹೇಳುವುದು ತಪ್ಪಾಗುತ್ತದೆ.

**प्रकाशः –** ननूक्तं समुत्थायेत्यादिश्रुतिबलात्संशयाद्युत्थानमिति चेन्न । तस्याब्रह्मपरत्वेऽप्युपपत्तेः । ''भोक्त्रापत्तेरविभागश्चेत्स्याल्लोकवत्'' इत्यादौ ब्रह्मभाव रूपसम्पत्तेर्निरसिष्यमाणत्वात् सिद्धान्तेऽपि मुख्यार्थसम्भवाच्चेति भावः ।

'ಸಮುತ್ಥಾಯ' ಎಂಬ ಶ್ರುತಿಯ ಬಲದಿಂದ ಸಂಶಯಪೂರ್ವಪಕ್ಷಾದಿಗಳೆಲ್ಲವೂ ಹುಟ್ಟುತ್ತವೆಂದು ಸಮರ್ಥಿಸಿದ್ದೇವಲ್ಲವೇ? ಎಂಬ ಪ್ರಶ್ನೆಯು ತಪ್ಪು. ಏಕೆಂದರೆ 'ಸಮುತ್ಥಾಯ' ಎಂಬ ಶ್ರುತಿಯು

ಬ್ರಹ್ಮಪರವಾದರೂ ಕೂಡ ಯುಕ್ತವಾಗುತ್ತದೆ. ಆದ್ದರಿಂದ 'ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್' ಇತ್ಯಾದಿಯಾಗಿ ನಾವು ಬ್ರಹ್ಮಭಾವರೂಪವಾದ ಮೋಕ್ಷಸಂಪತ್ತಿಯನ್ನು ನಿರಾಕರಿಸುವವರಿದ್ದೇವೆ. ಆದ್ದರಿಂದ ಸಿದ್ಧಾಂತದಲ್ಲಿಯೂ ಕೂಡ ಮುಖ್ಯಾರ್ಥವನ್ನೇ ಶ್ರುತಿಗೆ ಹೇಳಲು ಬರುತ್ತದೆ.

**प्रकाशः** – स्वमते तु ''स तेजसि सूर्ये सम्पन्न'' इति समाख्ययाऽस्य ज्योतिषोऽन्यपरत्वमाशंक्य समाधास्यते चतुर्थे ''आत्मा प्रकरणात्'' इत्यत्रेति भावः ।

ನಮ್ಮ ಮತದಲ್ಲಿ 'ಸ ತೇಜಸಿ ಸೂರ್ಯೇ ಸಂಪನ್ನ' ಎಂಬ ಸಮಾಖ್ಯಾಶ್ರುತಿಯಿಂದ 'ಪರಂಜ್ಯೋತಿಃ' ಎಂಬ ಶಬ್ದವು ಅನ್ಯಪರವಾಗುತ್ತದೆಂದು ಆಶಂಕಿಸಿ 'ಆತ್ಮಾ ಪ್ರಕರಣಾತ್' ಎಂಬ ಸೂತ್ರದಲ್ಲಿ ಸಮಾಧಾನ ನೀಡಲಾಗುತ್ತದೆ.

**प्रकाशः** – यदप्यस्य वाक्यस्य निर्गुणमुक्तिपरत्वमुपेत्य सिद्धान्तकरणं तदपि नेत्याह – **किञ्चेति** ।। श्लोकं विवृणोति ।। **अस्मादिति** ।। परञ्जोतिरिति वाक्यादित्यर्थः ।

ಈ ವಾಕ್ಯವು ನಿರ್ಗುಣಮುಕ್ತಿಪರವಾಗಿದೆ ಎಂಬುದನ್ನು ಒಪ್ಪಿ, ಏನು ಸಿದ್ಧಾಂತ ಮಾಡಿದ್ದಾರೋ, ಅದೂ ಸಹ ತಪ್ಪೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಶ್ಲೋಕವನ್ನು ಸ್ವತಃ ತಾವೇ ವಿವರಿಸುತ್ತಿದ್ದಾರೆ 'ಅಸ್ಮಾತ್' ಇತ್ಯಾದಿ ವಾಕ್ಯದಿಂದ. 'ಅಸ್ಮಾತ್' ಎಂದರೆ 'ಪರಂಜ್ಯೋತಿಃ' ಎಂಬ ವಾಕ್ಯಕ್ಕಿಂತ ಎಂದರ್ಥ.

**प्रकाशः** – ननु य आत्माऽपहतपाप्मेत्याद्यपहतपाप्मत्वादिश्रवणान्निर्गुणत्वमस्येति तद्बलात्सत्यकामत्वादिकं कथञ्चिन्नेयमित्यतो वैपरीत्यमेवोचितमित्याह – **अपहतेति**।। **न निर्गुण इति** ।। क्वाप्यश्रुतेर्व्याहतेश्चेति भावः ।

'ಯ ಆತ್ಮಾऽಪಹತಪಾಪ್ಮ' ಇತ್ಯಾದಿ ಶ್ರುತಿಯಲ್ಲಿ ಅಪಹತಪಾಪ್ಮತ್ವಾದಿ ಗುಣಗಳು ಶ್ರುತವಾಗಿದೆ. ಇದರಿಂದ ನಿರ್ಗುಣಬ್ರಹ್ಮನೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಇದರ ಬಲದಿಂದ ಸತ್ಯಕಾಮತ್ವಾದಿಗಳನ್ನೂ ಕೂಡ ಕಥಂಚಿತ್ ನಿರ್ಗುಣನಲ್ಲಿ ಸಮನ್ವಯ ಮಾಡಬೇಕಲ್ಲವೇ? ಎಂಬ ಪ್ರಶ್ನೆಗೆ, ಸತ್ಯಕಾಮತ್ವಾದಿ ಶ್ರುತಿಯ ಆಧಾರದಿಂದ ಅಪಹತಪಾಪ್ಮತ್ವಾದಿಗಳನ್ನೇ ಕಥಂಚಿತ್ ಸಗುಣಬ್ರಹ್ಮನಲ್ಲಿ ಸಮರ್ಥನೆ ಮಾಡಬಹುದೆಂಬ ವೈಪರೀತ್ಯವನ್ನು 'ಅಪಹತ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ನ ನಿರ್ಗುಣಃ' ಎಂದರೆ ಎಲ್ಲಿಯೂ ಸಹ ನಿರ್ಗುಣಬ್ರಹ್ಮನನ್ನು ಶ್ರುತನೇ ಆಗಿಲ್ಲ. ಹಾಗೇ ನಿರ್ಗುಣನು ಪ್ರತಿಪಾದ್ಯನಾದಲ್ಲಿ ವ್ಯಾಹತಿದೋಷವು ಬರುತ್ತದೆಂದು ಅಭಿಪ್ರಾಯ. ಬ್ರಹ್ಮನು ನಿರ್ಗುಣನೆಂದು ಹೇಳಿ, ಸತ್ಯಕಾಮತ್ವಾದಿಗುಣಗಳುಳ್ಳವನೆಂದು ಹೇಳಿದರೆ ವ್ಯಾಹತಿದೋಷವು ಬರುತ್ತದೆ.

**प्रकाशः** – यदपि समुत्थायेत्यादेरन्यार्थवर्णनेनोपपत्तिकथनं तदप्ययुक्तमित्याह – **किञ्चेति ।। लक्षणेति ।।** उपलक्षणमेतत् । ''व्यादाय स्वपिति संमील्य हसतीत्युपसङ्ख्यानम्'' इत्युक्तेर्व्यादायेत्यस्य निर्वाहेऽपीह तथा निर्वाहकाभावात् क्त्वाश्रुतिपीडनम् ।

ಮತ್ತು 'ಸಮುತ್ಥಾಯ' ಇತ್ಯಾದಿ ಶ್ರುತಿಗೆ ಅನ್ಯಾರ್ಥವನ್ನು ಹೇಳುವ ಮೂಲಕ ಯಾವ ಉಪಪತ್ತಿಯನ್ನು ಹೇಳಿದ್ದೀರೋ, ಅದೂ ಸಹ ಅಯುಕ್ತವಾಗಿದೆಯೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನ ಮಾಡಿದ್ದಾರೆ. 'ಲಕ್ಷಣಾಸ್ಯಾತ್' ಎಂಬುದು ಕೇವಲ ಉಪಲಕ್ಷಣವಾಗಿದೆ. ಅಂದರೆ 'ವ್ಯಾದಾಯ ಸ್ವಪಿತಿ ಸಂಮೀಲ್ಯ ಹಸತೀತ್ಯುಪಸಂಖ್ಯಾನಮ್' ಎಂದು ವೈಯ್ಯಾಕರಣರು 'ವ್ಯಾದಾಯ' ಮೊದಲಾದ ಪ್ರಯೋಗಗಳನ್ನು ನಿರ್ವಾಹ ಮಾಡಿದ್ದಾರೆ. ಆದರಂತೆ ಪ್ರಕೃತ 'ಉಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂಬ ಪ್ರಯೋಗಕ್ಕೆ ನಿರ್ವಾಹಕವಾದ ಪ್ರಮಾಣ ಯಾವುದೂ ಇರುವುದಿಲ್ಲ. ಆದ್ದರಿಂದ 'ಕ್ತ್ವಾ' ಶ್ರುತಿಯನ್ನು ನೀವು ಪೀಡಿಸುತ್ತಿದ್ದೀರಿ.

**प्रकाशः** – किञ्च ''उत्तराच्चेदाविर्भूतस्वरूपस्त्वि'' इति सूत्रेणैव ''यत्तत्परं ज्योतिरुपसंपत्तव्यं श्रुतं तत्परं ब्रह्म । तच्चापहतपाप्मत्वादिधर्मकम् । तदेव जीवस्य पारमार्थिकं रूपम्'' इत्यादिनाऽस्य ब्रह्मपरत्वं त्वयैव समर्थितमिति तेन गतार्थताच ।

ಮತ್ತು 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು' ಎಂಬ ಸೂತ್ರದಲ್ಲಿಯೇ 'ಯತ್ತತ್ಪರಂ ಜ್ಯೋತಿರುಪಸಂಪತ್ತವ್ಯಂ ಶ್ರುತಂ ತತ್ಪರಂ ಬ್ರಹ್ಮ । ತಚ್ಚಾಪಹತಪಾಪ್ಮತ್ವಾದಿಧರ್ಮಕಮ್ । ತದೇವ ಜೀವಸ್ಯ ಪಾರಮಾರ್ಥಿಕಂ ರೂಪಮ್' ಯಾವ ಪರಂಜ್ಯೋತಿಯನ್ನು ಉಪಸಂಪತ್ತಿ ಮಾಡಬೇಕೆಂದು ಶ್ರುತವಾಗಿದೆಯೋ, ಅವನೇ ಪರಬ್ರಹ್ಮನು ಅಪಹತಪಾಪ್ಮತ್ವಾದಿಗುಣಗಳಿಂದ ಕೂಡಿದವನು. ಅವನೇ ಜೀವನ ಪಾರಮಾರ್ಥಿಕಸ್ವರೂಪನು ಇತ್ಯಾದಿಯಾಗಿ 'ಪರಂಜ್ಯೋತಿ' ಎಂದರೆ ಪರಬ್ರಹ್ಮನೇ ಆಗಿದ್ದಾನೆಂದು ನೀವೇ ಸಮರ್ಥಿಸಿದ್ದೀರಿ. ಆ ಸೂತ್ರದಿಂದ ಈ ಸೂತ್ರಕ್ಕೆ ಗತಾರ್ಥತ್ವದೋಷವು ಬರುತ್ತದೆ. ಮತ್ತು ಸಮುತ್ಥಾನಾದಿ ಶ್ರುತಿಗೆ ಬೇರೆ ರೀತಿಯಲ್ಲೇ ಅರ್ಥೈಸಬಹುದು. 'ಸಮುತ್ಥಾನ' ಎಂದರೆ ಶ್ರವಣ-ಮನನಾದಿಗಳು ಎಂಬರ್ಥವನ್ನು ಅಲ್ಲಿಯೂ ಕೂಡ ನೀವು ಸಮರ್ಥಿಸಿದ್ದೀರಿ. ಹೀಗಿರುವಾಗ ಈ ಅಧಿಕರಣ ಹೊರಟದ್ದೇ ವ್ಯರ್ಥ.

**प्रकाशः** – समुत्थानादिश्रुतेश्चान्यथैवोपपत्तेः । समुत्थानं श्रवणादिकमित्यादिनिर्वाहस्य त्वया तत्रैव कृतत्वाच्च । इह परब्रह्मोपसत्त्याऽऽविर्भूतस्वरूप विषयत्वसमर्थनमुपजीव्यदहराकाशस्य परमात्मत्वं तत्र समर्थितमिति चेत्तर्हि

''उत्तराचेत्'' इति सूत्रानन्तर्यमेतस्य स्यात् । हेतुप्रयोगानन्तरमेव हेत्वसिद्धे-निरसनीयत्वादित्यपि ध्येयम् ।

ಇನ್ನು ಪರಬ್ರಹ್ಮನನ್ನು ಉಪಸತ್ತಿ ಮಾಡುವುದರಿಂದ ಸ್ವರೂಪವು ಆವಿರ್ಭೂತವಾಗುತ್ತದೆಂಬ ವಿಷಯವನ್ನು ಸಮರ್ಥನೆ ಮಾಡಬೇಕು. ಇದನ್ನು ಉಪಜೀವಿಸಿಕೊಂಡು ದಹರಾಕಾಶವು ಪರಮಾತ್ಮನೇ ಆಗಿದ್ದಾನೆಂದು ದಹರಾಧಿಕರಣದಲ್ಲಿ ಸಮರ್ಥನೆ ಮಾಡಲಾಗಿದೆ. ಆದ್ದರಿಂದ ಪುನರುಕ್ತಿ ದೋಷ ಬರುವುದಿಲ್ಲವೆಂದು ಉತ್ತರಿಸಬೇಕು. ಹಾಗಾದಲ್ಲ 'ಉತ್ತರಾಚೇದಾವಿರ್ಭೂತಸ್ವರೂಪಸ್ತು' ಎಂಬುದನ್ನು ಮೊದಲು ಹೇಳಿ, ಈ ಜ್ಯೋತಿರಧಿಕರಣವನ್ನು ಹೇಳಬೇಕಾಗಿತ್ತು. ಏಕೆಂದರೆ ಹೇತುವನ್ನು ಪ್ರಯೋಗಿಸಿದ ಅನಂತರವಷ್ಟೇ ಹೇತುಸಿದ್ಧಿಯನ್ನು ನಿರಾಕರಣೆ ಮಾಡಬೇಕು.




ಛಾಂದೋಗ್ಯೋಪನಿಷತ್ತಿನಲ್ಲಿರುವ 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪ-ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯವನ್ನು ವಿಷಯವನ್ನಾಗಿ ಅದ್ವೈತಿಗಳು ಹೇಳುತ್ತಾರೆ. ಇಲ್ಲಿರುವ 'ಜ್ಯೋತಿಃ' ಶಬ್ದದಿಂದ ಪ್ರಸಿದ್ಧನಾದ ಸೂರ್ಯಜ್ಯೋತಿಯೇ ಪ್ರತಿಪಾದ್ಯನು. ಏಕೆಂದರೆ ಮರಣದ ಅನಂತರ ಪ್ರತಿಯೊಬ್ಬ ಜೀವರೂ ಸೂರ್ಯರಶ್ಮಿಯ ಮೂಲಕ ಸೂರ್ಯನನ್ನು ಹೊಂದುತ್ತಾರೆಂದು ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದ, ಸೂರ್ಯನೇ ಇಲ್ಲಿ ಪ್ರತಿಪಾದ್ಯನು ಎಂದು ಪೂರ್ವಪಕ್ಷ.

ಈ ಪ್ರಕರಣದಲ್ಲಿ ಪ್ರತಿಪಾದ್ಯನಾಗಿ ಪ್ರಸ್ತುತನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ 'ಯ ಆತ್ಮಾಪಹತಪಾಪ್ಮ' ಇತ್ಯಾದಿಯಾಗಿ ನಿರ್ಗುಣಬ್ರಹ್ಮನನ್ನು ಹೇಳಿ, ಆ ನಿರ್ಗುಣ ಬ್ರಹ್ಮನ ಜ್ಞಾನವನ್ನು ಹೊಂದುವುದರಿಂದ, ಬ್ರಹ್ಮಭಾವವನ್ನು ಹೊಂದುತ್ತಾನೆಂಬ ಫಲವು ಹೇಳಲ್ಪಟ್ಟಿದೆ. ಸೂರ್ಯನನ್ನು ಹೊಂದುವಿಕೆಯು ಆತ್ಯಂತಿಕ ಮೋಕ್ಷವಾಗವುದಿಲ್ಲ. ಗತಿ ಹಾಗೂ ಉತ್ಕ್ರಾಂತಿಗಳಿಂದ ಸೂರ್ಯನ ಲೋಕವು ದೊರೆಯುತ್ತದೆ. ಇದು ಗೌಣವಾದ ಮೋಕ್ಷವೇ ಹೊರತು, ಪಾರಮಾರ್ಥಿಕ ಮೋಕ್ಷವಲ್ಲ. ಪ್ರಕೃತ ಜ್ಯೋತಿಯ ರೂಪವನ್ನು ಪಡೆದವರಿಗೆ 'ಅಶರೀರವಾವಸಂತಂ' ಎಂದು ಬ್ರಹ್ಮಭಾವವನ್ನು ಹೇಳಿದ್ದರಿಂದ, ಪರಂಜ್ಯೋತಿಶಬ್ದದಿಂದ ಪ್ರತಿಪಾದ್ಯನಾದವನು ಪರಬ್ರಹ್ಮನೇ ಆಗಿದ್ದಾನೆಂದು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಈ ವಾಕ್ಯದಲ್ಲಿ ನಿರ್ಗುಣ ಬ್ರಹ್ಮಭಾವವು ಪ್ರತಿಪಾದ್ಯವೇ ಆಗಿಲ್ಲ. ಇದರ ಹಿಂದೆ 'ಯ ಆತ್ಮಾಪಹತಪಾಪ್ಮ' ಎಂದು ಪ್ರಾರಂಭ ಮಾಡಿ, 'ಸತ್ಯಕಾಮಃ ಸತ್ಯಸಂಕಲ್ಪಃ' ಮೊದಲಾದ ವಾಕ್ಯಗಳಿಂದ ಸಗುಣಬ್ರಹ್ಮನ ನಿರೂಪಣೆಯೇ ಶ್ರುತವಾಗಿದೆ. ಅನಂತರವೂ ಸಹ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂದು ಸಗುಣಮೋಕ್ಷದ ಪ್ರಸ್ತಾಪವೇ ಇದೆ. ಹೀಗಿರುವಾಗ ನಿರ್ಗುಣಮೋಕ್ಷವು ಇಲ್ಲಿ ಪ್ರತಿಪಾದ್ಯನಾಗಲು ಸಾಧ್ಯವೇ ಇಲ್ಲ.



## ಜ್ಯೋತಿರಧಿಕರಣ (೧-೩-೧೧)

## ಸೂತ್ರಾರ್ಥ ವಿಮರ್ಶೆ

### तात्पर्यचन्द्रिका

**यच्चोक्तं सौत्रस्य दर्शनादित्यस्येह प्रकरणे ब्रह्मणो वक्तव्यत्वेनानुवृत्तेर्दर्शनादित्यर्थ इति । तन्न । तथात्वे आवश्यकत्वेनानुवृत्तेरित्येव वक्तव्यत्वात् ।।**

ಅನುವಾದ - ಅದ್ವೈತಿಗಳ ಸೂತ್ರವ್ಯಾಖ್ಯಾನ ಹೀಗಿದೆ - 'ದರ್ಶನಾತ್' ಎಂಬ ಪದಕ್ಕೆ ಈ ಪ್ರಕರಣದಲ್ಲಿ ಬ್ರಹ್ಮನು ಪ್ರಸಕ್ತನಾದ್ದರಿಂದ, ಬ್ರಹ್ಮವಾಚಕವಾದ ಪದವನ್ನು ಅನುವೃತ್ತಿಮಾಡಿಕೊಳ್ಳುವುದು ಕಂಡಿದೆ ಎಂದರ್ಥವೆನ್ನುತ್ತಾರೆ. ಇದು ತಪ್ಪು. ಹಾಗಾದಲ್ಲಿ ಸೂತ್ರದಲ್ಲಿ 'ಅನುವೃತ್ತೇಃ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು.

**केचित्तु ।। इदं सूत्रं ''शब्दादेव प्रमितः'' इत्येतदधिकरणशेषभूतं सत् अङ्गुष्ठमात्रस्य ब्रह्मत्वे हेत्वन्तरपरम् । नत्वधिकरणान्तरम् । ''ज्योतिश्चरणाभिधानात्'' इत्यत्रैव ज्योतिश्शब्दसमन्वयोक्तेः । अङ्गुष्ठमात्रप्रकरणे ''न तत्र सूर्यो भाति'' इति ब्रह्मरूपज्योतिर्दर्शनादिति च सूत्रार्थ इत्याहुः ।**[१]

ರಾಮಾನುಜರು ಹೀಗೆ ಹೇಳುತ್ತಾರೆ - ಈ ಸೂತ್ರವು 'ಶಬ್ದಾದೇವ ಪ್ರಮಿತಃ' ಎಂಬ ವಾಮನಾಧಿಕರಣಕ್ಕೆ ಶೇಷಭೂತವಾಗಿದೆ. ಬ್ರಹ್ಮನು ಅಂಗುಷ್ಠಮಾತ್ರದಲ್ಲಿ ಇರುತ್ತಾನೆ ಎನ್ನಲು ಇದು ಮತ್ತೊಂದು ಹೇತುವನ್ನು ನಿರೂಪಣೆ ಮಾಡಲು ಹೊರಟಿದೆ. ಹೊರತಾಗಿ, ಪ್ರತ್ಯೇಕ ಅಧಿಕರಣವೆಂದು

(१) **रामानुजभाष्यम् –**

**ज्योतिर्दर्शनात् ।। ४१ ।।**

तयोरेवाङ्गुष्ठप्रमितविषययोर्वाक्ययोर्मध्ये परब्रह्मासाधारणं सर्वतेजसां छादकं सर्वतेजसां कारणभूतमनुग्राहकं चाङ्गुष्ठप्रमितस्य ज्योतिर्दृश्यते 'न तत्र सूर्यो भाति न चन्द्रतारकं नेमा विद्युतो भान्ति कुतोऽयमग्निः । तमेव भान्तमनुभाति सर्वं तस्य भासा सर्वमिदं विभाति।।' इति । अयमेव श्लोक आथर्वणे परं ब्रह्माधिकृत्य श्रूयते । परज्योतिष्ट्वं च सर्वत्र परस्य ब्रह्मणः श्रूयते । यथा 'परं ज्योतिरुपसम्पद्य स्वेन रूपेणाभिनिष्पद्यते' 'तं देवा ज्योतिषां ज्योतिरायुर्होपासतेऽमृतम्' 'अथ यदतः परो दिवो ज्योतिर्दीप्यते' इत्यादिषु ।। अतोऽङ्गुष्ठप्रमितः परं ब्रह्म ।। ४१ ।।

ಪರಿಗಣಿಸಬಾರದು. ಏಕೆಂದರೆ 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿಯೇ 'ಜ್ಯೋತಿಃ' ಎಂಬ ಶಬ್ದದ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಿದ್ದಾಗಿದೆ. ಅಂಗುಷ್ಠಮಾತ್ರ ಪರಿಮಾಣವುಳ್ಳವನಾಗಿದ್ದಾನೆ ಎಂದು ಸಮರ್ಥಿಸುವ ಶ್ರುತಿಪ್ರಕರಣದಲ್ಲಿ 'ನ ತತ್ರ ಸೂರ್ಯೋ ಭಾತಿ' ಎಂಬ ಶ್ರುತಿಯು ಬ್ರಹ್ಮನೇ ಜ್ಯೋತಿಯಾಗಿದ್ದಾನೆನ್ನಲು ಹೇತುವನ್ನು ಸಾಧಿಸಲು ಹೊರಟಿದೆ. ಕಾಠಕೋಪನಿಷತ್ತಿನಲ್ಲಿ ಅಂಗುಷ್ಠಪರಿಮಾಣವುಳ್ಳ ಪುರುಷನ ಜ್ಯೋತಿಯು 'ನ ತತ್ರ ಸೂರ್ಯೋ ಭಾತಿ' ಎಂಬುದಾಗಿ ಸರ್ವತೇಜೋಭಿಭಾವಕವನ್ನು ಹೇಳಲಾಗಿದೆ. ಅಂತಹ ಜ್ಯೋತಿಯು ಪರಬ್ರಹ್ಮನೇ ಆಗಿದ್ದಾನೆಂದು 'ಪರಂಜ್ಯೋತಿರುಪಸಂಪದ್ಯ' ಮುಂತಾದ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ.

**तन्न । तच्छेषत्वे तदानन्तर्यस्य चशब्दस्य चापातात् । ''न तत्र'' इति श्रुतौ च ज्योतिःपदाभावेन सूत्रस्य श्रुत्यननुगमप्रसङ्गाच्च ।**

ಪ್ರಮಿತಾಧಿಕರಣಕ್ಕೆ ಈ ಸೂತ್ರವು ಶೇಷವಾದಲ್ಲಿ, ಅದರ ಅನಂತರವೇ ಇದನ್ನು ಪಠಿಸಬೇಕಿತ್ತು. ಮಧ್ಯದಲ್ಲಿ ಇಷ್ಟೊಂದು ಸೂತ್ರಗಳು ವ್ಯವಹಿತವಾಗಿದ್ದು ತಪ್ಪಾಗಬೇಕಾದೀತು. ಮತ್ತು 'ನ ತತ್ರ ಸೂರ್ಯೋ ಭಾತಿ' ಎಂಬ ಶ್ರುತಿಯಲ್ಲಿ 'ಜ್ಯೋತಿಃ' ಎಂಬ ಪದವೇ ಇಲ್ಲದ ಕಾರಣ ಸೂತ್ರವು ಶ್ರುತಿಗೆ ಅನುಗುಣವೂ ಕೂಡ ಆಗುವುದಿಲ್ಲ.

**सूत्रान्तरेष्विव ज्योतिर्दर्शनपदयोः प्रतिज्ञाहेतुरूपत्वसम्भवे हेतुमात्रत्वायोगात्।**

ಮತ್ತು ಹಿಂದಿನ ಸೂತ್ರಗಳಂತೆ ಈ ಸೂತ್ರದಲ್ಲಿ 'ಜ್ಯೋತಿಃ ಬ್ರಹ್ಮದರ್ಶನಾತ್' ಎಂದು ಸ್ಪಷ್ಟವಿರುವಾಗ ಹೇತುಮಾತ್ರ ಪರವಾಗಿ ವ್ಯಾಖ್ಯಾನ ಮಾಡುವುದು ತಪ್ಪಾಗುತ್ತದೆ.

**''आकाशस्तल्लिङ्गात्'' ''अत एव प्राणः'' इत्यत्रोक्तसमन्वययोरप्याकाशप्राण-शब्दयोस्त्वयाऽपि ''दहर उत्तरेभ्यः प्राणस्तथानुगमात्'' इत्यत्र पुनः समन्वयस्या-ङ्गीकृतत्वाच्चेति ।। टीकाक्षरार्थस्तु स्पष्टः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् ज्योतिरधिकरणं सम्पूर्णम् ।।**

'ಆಕಾಶಸ್ತಲ್ಲಿಂಗಾತ್' 'ಅತ ಏವ ಪ್ರಾಣ' ಇತ್ಯಾದಿ ಸೂತ್ರಗಳಲ್ಲಿ ಸಮನ್ವಯ ಮಾಡಿದ ಆಕಾಶ, ಪ್ರಾಣ ಮೊದಲಾದ ಶಬ್ದಗಳನ್ನು ಪುನಃ 'ದಹರ ಉತ್ತರೇಭ್ಯಃ' 'ಪ್ರಾಣಸ್ತಥಾನುಗಮಾತ್' ಇತ್ಯಾದಿ ಸೂತ್ರಗಳಲ್ಲಿ ಸಮನ್ವಯ ಮಾಡಲಾಗಿದೆಯೆಂದು ನೀವೂ ಸಹ ಒಪ್ಪಿರುತ್ತೀರಿ. ಆದ್ದರಿಂದ

ರ್ಾಮಾನುಜರ ಮತ ಅಸಾಧುವಾಗಿದೆ. ಟೀಕೆಯ ಕಠಿಣ ಪದಾರ್ಥಗಳು ಉಪನ್ಯಾಸ ಮುಖದಿಂದ ವ್ಯಾಖ್ಯಾನ ಮಾಡುವಾಗಲೇ ಸ್ಪಷ್ಟವಾಗಿರುತ್ತದೆ.

ಇಲ್ಲಿಗೆ ಶ್ರೀ ವ್ಯಾಸತೀರ್ಥಶ್ರೀಪಾದಂಗಳವರು ರಚಿಸಲ್ಪಟ್ಟ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಸಂಪೂರ್ಣವಾಯಿತು.

**प्रकाशः –**

सूत्रार्थोऽप्ययुक्त एवेत्याह – **यच्चेति** ।। ज्योतिश्शब्दं ब्रह्मेति प्रतिज्ञार्थः ।। **अनुवृत्तेरिति** ।। ''प्राणस्तथानुगमात्'' इतिवदिति भावः ।।

ವಿವರಣೆ - ಅದ್ವೈತಿಗಳ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆಯೆಂದು 'ಯಚ್ಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. 'ಜ್ಯೋತಿಃ' ಶಬ್ದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಎಂಬುದು ಪ್ರತಿಜ್ಞೆಯ ಅರ್ಥ. 'ಅನುವೃತ್ತೇಃ' ಎಂದರೆ 'ಪ್ರಾಣಸ್ತಥಾನುಗಮಾತ್' ಎಂಬಲ್ಲಿ ಹೇಗೆ 'ಅನುಗಮಾತ್' ಎಂಬ ಪದವನ್ನು ಪ್ರಯೋಗಿಸಿದ್ದಾರೋ ಅದರಂತೆ ಇಲ್ಲೂ ಕೂಡ ಹೇಳಬೇಕಿತ್ತು.

**प्रकाशः – केचित्त्विति** ।। पूर्वशेषत्वे कथं सूत्रार्थ इत्यतस्तमनुवदति । अङ्गुष्ठमात्रप्रकरण इति ।। ''न तत्र सूर्योभाति'' इत्यारभ्य ''तस्य भासा सर्वमिदं विभाति'' इति सर्वेषां छादकस्य निरवधिकातिशयस्य भाशब्दाभिहितस्य परब्रह्मभूतस्य ज्योतिषो दर्शनाच्चाङ्गुष्ठप्रमितः परमात्मेति सूत्रार्थ इत्यर्थः । यदुक्तं समन्वितस्य समन्वयो नेति तत्राह – **आकाश इति** ।।

ಹಿಂದಿನ ಪ್ರಮಿತಾಧಿಕರಣಕ್ಕೆ ಇದು ಶೇಷವಾದಲ್ಲಿ, ಈ ಸೂತ್ರದ ಅರ್ಥವೇನು? ಎಂಬ ಪ್ರಶ್ನೆಗೆ ರಾಮಾನುಜರ ಸೂತ್ರವ್ಯಾಖ್ಯಾನವನ್ನೇ ಅನುವಾದ ಮಾಡುತ್ತಿದ್ದಾರೆ 'ಅಂಗುಷ್ಠಮಾತ್ರಪ್ರಕರಣೇ' ಇತ್ಯಾದಿಯಾಗಿ. 'ನ ತತ್ರ ಸೂರ್ಯೋ ಭಾತಿ' ಎಂಬಲ್ಲಿಂದ ಪ್ರಾರಂಭ ಮಾಡಿ, 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಇತ್ಯಾದಿಯಾಗಿ ಅಂಗುಷ್ಠಮಾತ್ರ ಪುರುಷನ ಜ್ಯೋತಿಯು ಸಕಲ ತೇಜಸ್ಸುಗಳಿಗೆ ಅಭಿಭಾವಕವಾಗಿದೆ ಎಂದು ಹೇಳಲಾಗಿದೆ. ಅಂತಹ ಜ್ಯೋತಿಯು ಪರಬ್ರಹ್ಮನೇ ಆಗಿದ್ದಾನೆಂದು ಉಪನಿಷತ್ತುಗಳು ತಿಳಿಸುತ್ತಿವೆ ಎಂದು ಸೂತ್ರದ ಅರ್ಥ. ಹಿಂದೆ ಸಮನ್ವಯ ಮಾಡಲ್ಪಟ್ಟ ಶಬ್ದಗಳನ್ನೇ ಪುನಃ ಸಮನ್ವಯ ಮಾಡುವುದು ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಆಕಾಶಸ್ತಲ್ಲಿಂಗಾತ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –** ननु तत्र प्रापकविशेषसत्त्वात्पूर्वपक्षादिसम्भवात्पुनरुक्तिः । इह तु समुत्थानादिश्रुतेरन्यथोपपत्तेः परञ्ज्योतिश्शब्दस्य विष्णावेव प्रसिद्धेर्न पुनरुक्तिर्युक्तेति चेत्तर्ह्यनेकप्रापकयुक्तास्मदीयोदाहरणमेवाद्रियताम् । नतु पूर्वशेषत्वम् । क्लिष्टत्वादिति भावः ।

ಆಕಾಶಾದಿ ಶಬ್ದಗಳ ಸಮನ್ವಯ ವಿಷಯದಲ್ಲಿ ವಿಶೇಷ ಪ್ರಾಪಕಗಳಿರುವ ಕಾರಣ, ಪೂರ್ವಪಕ್ಷಾದಿಗಳು ಹುಟ್ಟುತ್ತದಾದ್ದರಿಂದ ಪುನರುಕ್ತಿಯು ತಪ್ಪಾಗುವುದಿಲ್ಲ. ಆದರೆ ಸಮುತ್ಥಾನಾದಿ ಶ್ರುತಿಗಳನ್ನು ಅನ್ಯಥಾ ವ್ಯಾಖ್ಯಾನ ಮಾಡಬಹುದಾದ್ದರಿಂದ, 'ಪರಂಜ್ಯೋತಿಃ' ಶಬ್ದವು ವಿಷ್ಣುವಿನಲ್ಲೇ ಪ್ರಸಿದ್ಧವಾದ್ದರಿಂದ ಇಲ್ಲಿ ಪುನರುಕ್ತಿ ಯುಕ್ತವಾಗುವುದಿಲ್ಲವಲ್ಲವೇ? ಎಂಬ ಪ್ರಶ್ನೆ ತಪ್ಪು. ಅನೇಕ ಯುಕ್ತಿಗಳಿಂದ ಕೂಡಿರುವ ನಾವು ಹೇಳುವ ವಿಷಯವಾಕ್ಯವನ್ನೇ ಉದಾಹರಿಸುವುದು ಸೂಕ್ತವಾಗುತ್ತದೆ. ಹೀಗಿರುವಾಗ ಹಿಂದಿನ ಪ್ರಮಿತಾಧಿಕರಣಕ್ಕೆ ಈ ಸೂತ್ರವು ಶೇಷಭೂತವಾಗಿದೆಯೆಂದು ಕ್ಲಿಷ್ಟಕಲ್ಪನೆಯನ್ನು ಏಕೆ ಮಾಡಬೇಕು?

**प्रकाशः –** यत्तु कश्चिदाह ''परञ्ज्योतिरुपसम्पद्य'' इत्यत्र परञ्ज्योतिर्नारायणो वा शिवो वेति संशये ''स उत्तमः पुरुष'' इति वाक्यशेषे ''देवकीनन्दनश्शौरिश्श्रीपतिः पुरुषोत्तम'' इत्यादौ नारायणे प्रसिद्धपुरुषोत्तमशब्दश्रवणान्नारायण एवेति प्राप्ते ज्योतिश्शिव एव । तत्प्राप्तानामनिवृत्तिदर्शनात् । शिवादन्यत्प्राप्तानाम-निवृत्तेरभावात् ।

ಶೈವರ ಅಧಿಕರಣ ಶರೀರ ಹೀಗಿದೆ - 'ಪರಂಜ್ಯೋತಿರುಪಸಂಪದ್ಯ' ಎಂಬಲ್ಲಿ 'ಪರಂಜ್ಯೋತಿ' ಶಬ್ದದಿಂದ ಪ್ರತಿಪಾದ್ಯನಾದವನು ನಾರಾಯಣನೋ, ಅಥವಾ ಶಿವನೋ? ಎಂದು ಸಂಶಯ.

'ಸ ಉತ್ತಮಃ ಪುರುಷಃ' ಎಂಬ ವಾಕ್ಯಶೇಷದಲ್ಲಿ 'ದೇವಕೀನಂದನಃ ಶೌರಿಃ ಶ್ರೀಪತಿಃ ಪುರುಷೋತ್ತಮಃ' ಎಂಬಲ್ಲಿ ಹೇಳಿದಂತೆ ನಾರಾಯಣನಲ್ಲಿಯೇ ಪುರುಷೋತ್ತಮಶಬ್ದವು ಶ್ರುತವಾಗಿದೆ. ಆದ್ದರಿಂದ ನಾರಾಯಣನೇ 'ಜ್ಯೋತಿಃ' ಶಬ್ದ ಪ್ರತಿಪಾದ್ಯನೆಂದು ಪೂರ್ವಪಕ್ಷ.

'ಜ್ಯೋತಿಃ' ಶಬ್ದದಿಂದ ಶಿವನೇ ಪ್ರತಿಪಾದ್ಯನಾಗುತ್ತಾನೆ ಹೊರತು, ನಾರಾಯಣನಲ್ಲ. ಏಕೆಂದರೆ ಯಾವಾತನು ಶಿವನನ್ನು ಹೊಂದುತ್ತಾನೋ, ಪುನಃ ಅವನಿಗೆ ನಿವೃತ್ತಿ ಇರುವುದಿಲ್ಲವೆಂದು ಶ್ರುತಿಯು ಹೇಳುತ್ತಿದೆ. ಶಿವನನ್ನು ಬಿಟ್ಟು ಯಾರನ್ನೂ ಹೊಂದಿದರೂ ಕೂಡ ಪುನಃ ನಿವೃತ್ತಿಯು ಇದ್ದೇ ಇರುತ್ತದೆ.

**प्रकाशः –** पुरुषोत्तमशब्दो नारायणे रूढोऽपि शिवे यौगिक इति ।

'ಪುರುಷೋತ್ತಮ' ಶಬ್ದವು ನಾರಾಯಣನಲ್ಲಿ ರೂಢವಾಗಿದ್ದರೂ, ಶಿವನಲ್ಲಿ ಯೌಗಿಕವಾಗಿರುವುದರಿಂದ ಯುಕ್ತವಾಗುತ್ತದೆಂದು ಸಿದ್ಧಾಂತ.

ಜ್ಯೋತಿರಧಿಕರಣ (೧-೩-೧೧)

**प्रकाशः** – तन्न । परशब्दसहितज्योतिश्शब्दस्य पूर्वोक्तदिशा पुरुषोत्तमशब्दस्य च ''उत्तमः पुरुषस्त्वन्य'' इति ''प्रथितः पुरुषोत्तम'' इत्यादिना विष्णावेव प्रसिद्धत्वेन संशयस्य शिव इति सिद्धान्तस्य चानुत्थानात् । शिवासाधारण-लिङ्गाद्यभावाच्च । ''यद्गत्वा न निवर्तन्ते तद्धाम परमं मम'' इत्यादिना विष्णुं प्राप्तानामनिवृत्तेर्दर्शनाच्च । दहराधिकरण एवास्य विष्णुपरत्वेनोक्तत्वाच्च ।

ಶೈವರ ಈ ಅಧಿಕರಣಶರೀರ ಅಸಾಧುವಾಗಿದೆ - ಏಕೆಂದರೆ ಪುರುಷಶಬ್ದದಿಂದ ಕೂಡಿರುವ 'ಜ್ಯೋತಿಃ' ಶಬ್ದವು ಪುರುಷೋತ್ತಮ ಶಬ್ದವು 'ಉತ್ತಮಃ ಪುರುಷಸ್ತ್ವನ್ಯಃ' ಮತ್ತು 'ಪ್ರಥಿತಃ ಪುರುಷೋತ್ತಮಃ' ಇತ್ಯಾದಿ ಶ್ರುತಿಗಳಿಂದ ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾಗಿದೆ. ಹೀಗಿರುವಾಗ ಸಂಶಯವಾಗಲೀ, ಅಥವಾ ಶಿವನೇ ಪುರುಷಾದಿಶಬ್ದಗಳಿಂದ ಪ್ರತಿಪಾದ್ಯವಾಗಿದ್ದಾನೆಂಬ ಸಿದ್ಧಾಂತವಾಗಲೀ ಹುಟ್ಟಲು ಸಾಧ್ಯವಿಲ್ಲ. ಮತ್ತು ಶಿವನೇ ಪರಂಜ್ಯೋತಿ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ಅಸಾಧಾರಣವಾದ ಲಿಂಗಗಳೂ ಕೂಡ ಇರುವುದಿಲ್ಲ. 'ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ' ಇತ್ಯಾದಿ ಸ್ಮೃತಿಗಳ ಆಧಾರದಿಂದ ಯಾವಾತನು ವಿಷ್ಣುವನ್ನು ಹೊಂದುತ್ತಾನೋ, ಅವನು ಪುನಃ ಸಂಸ್ಕಾರಕ್ಕೆ ಬರುವುದಿಲ್ಲವೆಂದೂ ಕೂಡ ಹೇಳಲಾಗಿದೆ. ಮತ್ತು ದಹರಾಧಿಕರಣದಲ್ಲಿಯೇ ಇದು ವಿಷ್ಣುಪರವಾಗಿದೆಯೆಂದು ಸಮರ್ಥಿಸಿದ್ದಾಗಿದೆ.

**प्रकाशः** –

यं प्राप्यते निजानन्दमाप्नुवन्ति स केशवः ।
तं प्राप्य रमते मुक्तस्त्रीभिर्यानैश्च बन्धुभिः ।।

इत्यादिव्याख्यानरूपस्मृतिविरोधाच्च ।

ಯಂ ಪ್ರಾಪ್ಯತೇ ನಿಜಾನಂದಮಾಪ್ನುವಂತಿ ಸ ಕೇಶವಃ।
ತಂ ಪ್ರಾಪ್ಯ ರಮತೇ ಮುಕ್ತಃ ಸ್ತ್ರೀಭಿರ್ಯಾನೈಶ್ಚ ಬಂಧುಭಿಃ॥

ಯಾವಾತನನ್ನು ಹೊಂದಿ ನಿಜವಾದ ಸಂಪೂರ್ಣ ಆನಂದರೂಪವಾದ ಮೋಕ್ಷವನ್ನೇ ಪಡೆಯುತ್ತಾರೋ, ಅವನೇ ಕೇಶವನಾಗಿದ್ದಾನೆ. ಅವನನ್ನು ಹೊಂದಿರುವಂತಹ ಮುಕ್ತರೆಲ್ಲರೂ ಸ್ತ್ರೀಯರ ಜೊತೆಗೆ ಬಂಧುಗಳ ಜೊತೆಗೆ ರಮಿಸುತ್ತಾರೆ. ಇತ್ಯಾದಿಯಾಗಿ ಶ್ರುತಿಯನ್ನು ವ್ಯಾಖ್ಯಾನಿಸುವ ಸ್ಮೃತಿಗಳ ವಿರೋಧವೂ ಕೂಡ ಬರುತ್ತದೆ.

**प्रकाशः** – यदपि पुरुषोत्तमशब्दस्यात्र श्रवणात्तेन पूर्वपक्षकरणं कथमित्याशङ्क्य कृत्वाचिन्तेयमित्युक्तम् । तन्न । व्यर्थत्वात् । गत्यन्तरसम्भवाच्च ।

ಇನ್ನು 'ಪುರುಷೋತ್ತಮ' ಶಬ್ದವು ಶ್ರುತಿಯಲ್ಲಿರುವುದರಿಂದ, ಆದರ ಆಧಾರದಿಂದಲೇ ಪೂರ್ವಪಕ್ಷ ಮಾಡಲು ಹೇಗೆ ಸಾಧ್ಯ? ಎಂದು ಆಶಂಕಿಸಿ, ಕೃತ್ವಾಚಿಂತೆಯಿಂದ ಪೂರ್ವಪಕ್ಷ ಮಾಡಬಹುದೆಂದು ಸಮರ್ಥನೆ ಮಾಡಿದ್ದೂ ಕೂಡ ಸರಿಯಲ್ಲ. ಹಾಗೇ ಕೃತ್ವಾಚಿಂತೆಯನ್ನು ತೋರಿಸುವುದರಿಂದ ಏನೂ ಪ್ರಯೋಜನವಿಲ್ಲ. ಮತ್ತು ಬೇರೆ ರೀತಿಯಲ್ಲಿಯೇ ಪೂರ್ವಪಕ್ಷ ಮಾಡಲು ಬರುತ್ತದೆ.

**प्रकाशः** –"उत्तमः पुरुषः" इत्यस्यैव "उत्तमः पुरुषस्त्वन्यः परमात्मेत्युदाहृत" इति, "यस्मात्क्षरमतीतोहमक्षरादपि चोत्तमः ।

अतोस्मिलोके वेदे च प्रथितः पुरुषोत्तम" इति गीतायां,

ब्रह्माशिवस्सुरेशाद्याश्शरीरक्षरणात्क्षराः ।
लक्ष्मीरक्षरदेहत्वादक्षराततत्परोहरिः ।। इति श्रुतौ

ब्रह्मशेषसुपर्णेशशक्रसूर्यगुहादयः ।
सर्वे क्षरा अक्षरातु श्रीरेका तत्परो हरिः ।।

इति स्कान्दे च पुरुषशब्दितक्षरपदेन शिवादीनुक्त्वा तत्परत्वेन योगवृत्त्या विष्णोरेवाभिधानेन शिवस्य योगेनाप्युत्तमपुरुषत्वायोगाच्च ।

ಮತ್ತು 'ಉತ್ತಮಃ ಪುರುಷಃ' ಎಂಬ ಮಾತಿಗೆ 'ಉತ್ತಮಃ ಪುರುಷಃ ತ್ವನ್ಯಃ ಪರಮಾತ್ಮೇದ್ಯುದಾಹೃತಃ' ಎಂಬ ಮಾತಿಗೆ 'ಯಸ್ಮಾತ್ ಕ್ಷರಮತೀತೋಹಮಕ್ಷರಾದಪಿ ಚೋತ್ತಮಃ । ಅತೋಸ್ಮಿಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ' ಯಾವ ಕಾರಣದಿಂದ ನಾನು ಕ್ಷರ ಹಾಗೂ ಅಕ್ಷರ ಪುರುಷರಿಗಿಂತ ಶ್ರೇಷ್ಠನಾಗಿದ್ದೇನೋ ಆ ಕಾರಣದಿಂದ ಲೋಕದಲ್ಲಿ ಹಾಗೂ ವೇದದಲ್ಲಿ 'ಪುರುಷೋತ್ತಮ' ಎಂದು ಕರೆಯಲ್ಪಟ್ಟಿದ್ದೇನೆ ಎಂಬ ಭಗವದ್ಗೀತೆಯಲ್ಲಿ ಮತ್ತು

ಬ್ರಹ್ಮಾ ಶಿವಃಸುರೇಶಾದ್ಯಃ ಶರೀರಕ್ಷರಣಾತ್ ಕ್ಷರಾಃ ।
ಲಕ್ಷ್ಮೀರಕ್ಷರದೇಹತ್ವಾದಕ್ಷರಾತತ್ಪರೋ ಹರಿಃ । ಇತಿ ಶ್ರುತೌ

ಬ್ರಹ್ಮ, ಶಿವ, ಇಂದ್ರ ಮೊದಲಾದವರ ಶರೀರವು ನಾಶವಾಗುವುದರಿಂದ, ಇವರೆಲ್ಲರೂ ಕ್ಷರಪುರುಷರೆನಿಸಿದ್ದಾರೆ. ಲಕ್ಷ್ಮೀದೇವಿಯ ಶರೀರಕ್ಕೆ ನಾಶವಿಲ್ಲದ ಕಾರಣ, ಅಕ್ಷರಳೆನಿಸಿದ್ದಾಳೆ. ಅಂತಹ ಲಕ್ಷ್ಮೀದೇವಿಯಗಿಂತಲೂ ಕೂಡ ಶ್ರೀಹರಿಯು ಉತ್ತಮನಾಗಿದ್ದಾನೆ ಎಂಬುದಾಗಿ ಶ್ರುತಿಯಲ್ಲಿ ಪರಮಾತ್ಮನನ್ನೇ ಪುರುಷೋತ್ತಮ ಎನ್ನಲಾಗಿದೆ. ಮತ್ತು

ಬ್ರಹ್ಮಶೇಷಸುಪರ್ಣೇಶಶಕ್ರಸೂರ್ಯಗುಹಾದಯಃ ।
ಸರ್ವೇ ಕ್ಷರಾ ಅಕ್ಷರಾತು ಶ್ರೀರೇಕಾ ತತ್ಪರೋ ಹರಿಃ ॥

ಜ್ಯೋತಿರಧಿಕರಣ (೧-೩-೧೧)

ಬ್ರಹ್ಮ, ಶೇಷ, ಸುಪರ್ಣ, ಶಕ್ರ, ಸೂರ್ಯ, ಗುಹಾ ಮೊದಲಾದವರೆಲ್ಲರೂ ಕ್ಷರ ಪುರುಷರು. ಲಕ್ಷ್ಮೀದೇವಿ ಮಾತ್ರ ಅಕ್ಷರಳೆನಿಸಿದ್ದಾಳೆ. ಅವಳಿಗಿಂತಲೂ ಶ್ರೀಹರಿಯು ಉತ್ತಮನಾಗಿದ್ದಾನೆಂದು ಸ್ಕಂದಪುರಾಣದಲ್ಲಿಯೂ ಪುರುಷ ಶಬ್ದ ಪ್ರತಿಪಾದ್ಯರಾದ ರುದ್ರಾದಿಗಳನ್ನು ಕ್ಷರ ಪದದಿಂದ ಹೇಳಿ, ಅಂತಹ ರುದ್ರಾದಿಗಳಿಗಿಂತಲೂ ವಿಷ್ಣುವೇ ಶ್ರೇಷ್ಠನಾಗಿದ್ದಾನೆಂದು ಪುರುಷೋತ್ತಮತ್ವವನ್ನು ಸಮರ್ಥಿಸಲಾಗಿದೆ. ಆದ್ದರಿಂದ ಯೋಗವೃತ್ತಿಯಿಂದಲೂ ಕೂಡ ಶಿವನಲ್ಲಿ ಪುರುಷೋತ್ತಮ ಶಬ್ದವನ್ನು ಸಮರ್ಥಿಸಲು ಸಾಧ್ಯವಿಲ್ಲ.

**प्रकाशः** – यदपि कृष्णस्य शिवशक्त्यवतारत्वादि कल्पनं तदप्रामाणिकमनेकप्रमाणविरुद्धं च । सूत्रे परञ्ज्योतिरिति निर्देशापाताच्चेति ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे ज्योतिरधिकरणं सम्पूर्णम् ।।११।।**

ಮತ್ತು ಶ್ರೀಕೃಷ್ಣನು ಶಿವ ಹಾಗೂ ಶಕ್ತಿಗಳ ಅವತಾರರೂಪನಾಗಿದ್ದಾನೆಂಬ ಕಲ್ಪನೆಯೂ ಅಪ್ರಾಮಾಣಿಕವಾಗಿದೆ. ಅನೇಕ ಪ್ರಮಾಣಗಳಿಂದ ವಿರುದ್ಧವೂ ಆಗಿದೆ. ಮತ್ತು ಸೂತ್ರದಲ್ಲಿ 'ಪರಂಜ್ಯೋತಿಃ' ಎಂಬ ಶಬ್ದವನ್ನೇ ಶೈವರ ಪ್ರಕಾರ ನಿರ್ದೇಶ ಮಾಡಬೇಕಾಗುತ್ತದೆ. ಆದ್ದರಿಂದ ಶೈವರ ಅಧಿಕರಣ ಶರೀರದಲ್ಲಿ ಏನೂ ಹುರುಳಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಜ್ಯೋತಿರಧಿಕರಣ

(೧-೩-೧೧)

## ಭಾಗ -೩

ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## ज्योतिरधिकरणम् (१।३।११)

**कम्पकः**

ಜೀವನನ್ನು ಕರೆದುಕೊಂಡು ಉಭಯಲೋಕ ಸಂಚಾರ ಮಾಡುವವನು ಪರಮಾತ್ಮನೇ ಆಗಿದ್ದಾನೆ. ಆದ್ದರಿಂದ 'ಜ್ಯೋತಿಃ' ಎಂಬ ಪದದಿಂದ ಪ್ರತಿಪಾದ್ಯನಾಗಿದ್ದಾನೆ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## ज्योतिरधिकरणम् (१।३।११)

अत्र ज्योतिराकाशनयाभ्यां समन्वेययौगिकज्योतिराकाशपदोक्तयोः ज्ञानप्रकाशरूपत्व सर्वभूतावकाशदातृत्वगुणयोः नामपादीयज्योतिराकाशनयार्थसङ्ग्राहकज्योतिःखवदादिपदैः विष्णौ लब्धत्वान्नेह पुनस्तयोः सङ्ग्रहः कृतः ।

ಅಣುಭಾಷ್ಯದಲ್ಲಿ ಕಂಪನಾಧಿಕರಣದ ಸಾರವನ್ನು 'ಕಂಪಕಃ' ಎಂದು ಸಂಗ್ರಹಿಸಿದ್ದಾರೆ. ಮುಂದಿನ ಜ್ಯೋತಿರಧಿಕರಣದ ಮತ್ತು ಆಕಾಶಾಧಿಕರಣದ ಸಂಗ್ರಹಕ್ಕಾಗಿ ಪ್ರತ್ಯೇಕ ಪದಗಳಿರುವುದಿಲ್ಲ. ಏಕೆಂದರೆ ಪ್ರಥಮ ಪಾದದಲ್ಲಿ ಜ್ಯೋತಿರಧಿಕರಣ ಹಾಗೂ ಆಕಾಶಾಧಿಕರಣಗಳು ಈಗಾಗಲೇ ಪ್ರಸಕ್ತವಾಗಿವೆ. ಅಲ್ಲಿಯ ಅಣುಭಾಷ್ಯದಲ್ಲಿ 'ಜ್ಯೋತಿಃ' ಎಂದು 'ಖವತ್' ಎಂದು ಜ್ಯೋತಿರಧಿಕರಣವನ್ನು ಮತ್ತು ಆಕಾಶಾಧಿ-

ಕರಣವನ್ನು ಸಂಗ್ರಹಿಸಿದ್ದರು. ಆ ಪದಗಳಿಂದಲೇ ಈ ಅಧಿಕರಣಗಳ ಸಾರವೂ ಸಹ ಸಂಗ್ರಹಿತವಾಗುತ್ತವೆ. ಏಕೆಂದರೆ 'ಜ್ಯೋತಿಃ' ಪದಕ್ಕೆ ಜ್ಞಾನಪ್ರಕಾಶರೂಪತ್ವವು ಪ್ರವೃತ್ತಿನಿಮಿತ್ತವಾಗಿದೆ. ಆಕಾಶಪದಕ್ಕೆ ಸರ್ವಭೂತಾವಕಾಶದಾತೃತ್ವವು ಪ್ರವೃತ್ತನಿಮಿತ್ತವಾಗಿದೆ. 'ಜ್ಯೋತಿ' ಮತ್ತು 'ಆಕಾಶ' ಪದಗಳಿಂದ ಜ್ಞಾನಪ್ರಕಾಶರೂಪತ್ವ ಮತ್ತು ಸರ್ವಭೂತವಕಾಶದಾತೃತ್ವವೆಂಬ ಧರ್ಮಗಳನ್ನು ಸಮನ್ವಯ ಮಾಡಿದಂತಾಗುತ್ತದೆ. ಪ್ರಕೃತ ಮೂರನೆಯ ಪಾದದಲ್ಲಿರುವ ಜ್ಯೋತಿರಧಿಕರಣ ಹಾಗೂ ಆಕಾಶಾಧಿ-ಕರಣಗಳ ಸಾರವನ್ನೂ ಕೂಡ ಈ ಪದಗಳಿಂದಲೇ ಸಂಗ್ರಹಿಸಿದಂತಾಗುತ್ತದೆ. ಆದ್ದರಿಂದ ಪ್ರತ್ಯೇಕವಾಗಿ ಈ ಅಧಿಕರಣಗಳ ಸಾರವನ್ನು ಇಲ್ಲಿ ಹೇಳಿರುವುದಿಲ್ಲ.

यद्वा 'ज्योतिरित्याद्यैः इत्यत्र 'ज्योतिर्हृदय आहितं यत्' इत्युक्तहृदयाहितं ज्योतिः विष्णुरित्युक्तम् । वाजसनेये षष्ठे 'प्राणेषु हृद्यन्तर्ज्योतिः' इति श्रुतहृत्स्थज्योतिषः। 'स समानः सन्नुभौ लोकावनुसञ्चरति' इत्यादिनोक्त-कर्माधीनोभयलोक सञ्चरणादिलिङ्गैः जीवत्वात् प्राक्तनमपि स एवेत्यतः प्राप्तम् ज्योतिर्दर्शनादिति । तस्यप्यर्थः । कम्पक इति ।

ಅಥವಾ ನಾಮಪಾದದಲ್ಲಿರುವ 'ಜ್ಯೋತಿರಿತ್ಯಾದ್ಯೈಃ' ಎಂಬ ಮಾತಿನಿಂದ 'ಜ್ಯೋತಿರ್ಹೃದಯ ಆಹಿತಂ ಯತ್' ಇತ್ಯಾದಿ ಶ್ರುತಿಯಲ್ಲಿ ನಿರೂಪಿತವಾದ ಹೃದಯದಲ್ಲಿರುವ ಜ್ಯೋತಿಯು ವಿಷ್ಣುವೇ ಆಗಿದ್ದಾನೆಂದು ಸಮನ್ವಯ ಮಾಡಲಾಗಿದೆ. ಇದು ತಪ್ಪು. ಏಕೆಂದರೆ ಬೃಹದಾರಣ್ಯಕದ ಆರನೆಯ ಅಧ್ಯಾಯದಲ್ಲಿ 'ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ಶ್ರುತಿಯಲ್ಲಿ ಹೃದಯದಲ್ಲಿರುವ ಜ್ಯೋತಿಯು ನಿರೂಪಿತವಾಗಿದೆ. ಇದು 'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' ಎಂಬುದಾಗಿ ಕರ್ಮಾನುಸಾರವಾಗಿ ಉಭಯಲೋಕಗಳನ್ನು ಸಂಚಾರ ಮಾಡುತ್ತದೆಂದು ಹೇಳಿರುವುದರಿಂದ ಜೀವನೇ ಆಗಬೇಕು. ಕರ್ಮಾನುಸಾರವಾದ ಉಭಯಲೋಕ ಸಂಚಾರವು ಜೀವನ ಧರ್ಮವೇ ಆಗಿದೆ. ಹೀಗೆ ಹೃದಯದಲ್ಲಿರುವ ಜ್ಯೋತಿಯು ಜೀವನೆಂದು ಸಿದ್ಧವಾದರೆ ನಾಮಪಾದದಲ್ಲಿ ಸಮನ್ವಯ ಮಾಡಿರುವ ಹೃದಯಸ್ಥಜ್ಯೋತಿಯೂ ಕೂಡ ಜೀವನೇ ಆಗುತ್ತಾನೆಂದು ಹೇಳಬೇಕು ಹೊರತು, ವಿಷ್ಣುವಲ್ಲ. ಈ ಆಶಂಕೆಯನ್ನು ಪರಿಹರಿಸಲು 'ಜ್ಯೋತಿರ್ದರ್ಶನಾತ್' ಎಂಬ ಸೂತ್ರವು ಹೊರಟಿದೆ. ಇದರ ಅರ್ಥವನ್ನು 'ಕಂಪಕಃ' ಎಂಬುದರಿಂದಲೇ ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ.

पूर्ववदनुषङ्गः । जीवकः इत्यग्रेतनं पदमिहाप्यन्वेति । ल्यब्लोपनिमित्ता पञ्चमी एको जनार्दनोऽजन्मोचकत्वाभ्यां स्वतन्त्रो विष्णुः । जीवतो जीवमादाय कम्पक. चेष्टकः 'स समान' इति वाक्योक्तोभयलोकसञ्चारकर्ता । न त्वस्वतन्त्रो जीवः। उक्तञ्च न्यायविवरणे । 'लोकसञ्चरणं जीवमादाय, तस्यैवादुःखेन स्वातन्त्र्यात्' इति ।

ಇಲ್ಲಿಯೂ ಕೂಡ ಹಿಂದಿನಂತೆ ಅನುಷಂಗ ಮಾಡಿಕೊಳ್ಳಬೇಕು. 'ಜೀವಕಃ' ಎಂಬ ಮುಂದಿರುವ ಪದವನ್ನು ಅನ್ವಯ ಮಾಡಿಕೊಳ್ಳಬೇಕು. 'ಜೀವತಃ' ಎಂಬಲ್ಲಿರುವ ಪಂಚಮಿವಿಭಕ್ತಿಯು ಲ್ಯಬ್‌ಲೋಪ ನಿಮಿತ್ತಾರ್ಥಕವಾಗಿದೆ. ಒಬ್ಬನೇ ಜನಾರ್ದನನು ಜನ್ಮರಹಿತನೂ ಮೋಚಕನೂ ಆಗಿರುವುದರಿಂದ ಸ್ವತಂತ್ರನಾಗಿದ್ದಾನೆ. ಇವನು ಜೀವನನ್ನು ಕರೆದುಕೊಂಡು, 'ಸ ಸಮಾನಃ' ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ ಉಭಯಲೋಕಸಂಚಾರವನ್ನು ಮಾಡುತ್ತಾನೆ ಹೊರತು, ಅಸ್ವತಂತ್ರನಾದ ಜೀವನು ಸ್ವತಃ ಸಂಚಾರ ಮಾಡಲು ಸಮರ್ಥನಾಗಿಲ್ಲ. ಇದನ್ನೇ ನ್ಯಾಯವಿವರಣದಲ್ಲಿ ಹೀಗೆ ಹೇಳಿದ್ದಾರೆ. 'ಲೋಕಸಂಚರಣಂ ಜೀವಮಾದಾಯ, ತಸ್ಯೈವಾದುಃಖೇನ ಸ್ವಾತಂತ್ರ್ಯಾತ್' 'ದುಃಖರಹಿತನಾದ ಸ್ವತಂತ್ರನಾದ ಪರಮಾತ್ಮನೇ ಜೀವನನ್ನು ಕರೆದುಕೊಂಡು ಸಂಚಾರ ಮಾಡುತ್ತಾನೆ' ಎಂದು.

तत्तस्मात् । ज्ञानरूपवृत्तिहेतुसाम्येन तदन्यत्र च वाचकैः एतत्प्रकरणस्थज्योतिः-शब्दस्वयमात्मादिशब्दैः मुख्यतो जनार्दन एव वाच्यः । तथा 'जायमानः' 'शरीरमभिम्पद्यमानः' इत्यादिनोक्तजायमानत्वम्रियमाणत्वादिलिङ्गैः सर्वैः अन्तर्णीत-णिजर्थतया युतश्च । कुतः । कम्पको विष्णुः ।

ಜ್ಞಾನರೂಪವಾದ ಪ್ರವೃತ್ತಿಹೇತುವು ಸಮಾನವಾಗಿರುವುದರಿಂದ, ಉಭಯತ್ರಪ್ರಸಿದ್ಧವೆನಿಸಿದ ಬೃಹದಾರಣ್ಯಕದ ಪ್ರಕರಣದಲ್ಲಿರುವ 'ಜ್ಯೋತಿಃ' ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಏಕೆಂದರೆ ಪ್ರಕರಣದಲ್ಲಿರುವ ಆತ್ಮ ಮೊದಲಾದ ಶಬ್ದಗಳು ಮುಖ್ಯವಾಗಿ ಜನಾರ್ದನನ್ನೇ ಪ್ರತಿಪಾದನೆ ಮಾಡುತ್ತಿವೆ. ಅದರಂತೆ 'ಜಾಯಮಾನಃ' 'ಶರೀರಮಭಿಸಂಪದ್ಯಮಾನಃ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಜಾಯಮಾನತ್ವ ಮ್ರಿಯಮಾಣತ್ವಾದಿಲಿಂಗಗಳೂ ಕೂಡ ವಿಷ್ಣುಪರವಾಗಿಯೇ ಇವೆ. ಜಾಯಮಾನತ್ವ, ಮ್ರಿಯಮಾಣತ್ವ ಮೊದಲಾದ ಲಿಂಗಗಳನ್ನು ಣಿಜರ್ಥದಲ್ಲಿ ವಿವಕ್ಷಿಸಿ ಮತ್ತೊಬ್ಬರಿಗೆ ಜನ್ಮವನ್ನು ನೀಡುತ್ತಾನೆಂದು ಅರ್ಥೈಸಬೇಕು. ಆದ್ದರಿಂದ ಪರಮಾತ್ಮನಲ್ಲಿ ಈ ಲಿಂಗಗಳು ಅಸಾಧಾರಣವಾಗಿ ಉಪಪನ್ನವಾಗುತ್ತವೆ. ಏಕೆಂದರೆ ಸಕಲ ಚೇಷ್ಟಕನು ಪರಮಾತ್ಮನಾದ್ದರಿಂದ.

'विष्णुरेवेदं ज्योतिः','तद्देवा ज्योतिषां ज्योतिः' इत्यादि-श्रुतिषु ज्योतिःशब्दस्य विष्ण्वेकवाचित्वसिद्धेरिति । तथा 'आत्मैवास्य ज्योतिः' 'कतम आत्मा योऽयं विज्ञानमयः प्राणेषु' इति जीवस्य सुप्त्यादौ ज्ञानहेतुत्वरूपज्योतिष्ट्वेनोक्तात्मनो जीवस्वरूपत्वे तस्य प्रसिद्धत्वेन 'कतर आत्मा' इति प्रश्नायोगात् विष्णुत्वस्यैव वाच्यत्वाच्चेति हेरर्थः।

ವಿಷ್ಣುವೇ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' 'ಇತ್ಯಾದಿ ಶ್ರುತಿಯಲ್ಲಿ 'ಜ್ಯೋತಿಃ' ಶಬ್ದವು ಕೇವಲ ವಿಷ್ಣುವನ್ನೇ ಪ್ರತಿಪಾದಾನೆ ಮಾಡುತ್ತಿದೆ.

ಪರಿಪೂರ್ಣಚಂದ್ರಿಕಾ

ಆದರಂತೆ 'ಆತ್ಮೈವಾಸ್ಯ ಜ್ಯೋತಿಃ' 'ಕತಮ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು' ಇತ್ಯಾದಿಗಳಲ್ಲಿ ಪ್ರಸಕ್ತವಾದ ಆತ್ಮಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ 'ಜ್ಯೋತಿಃ' ಶಬ್ದವೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ. ಜೀವನಿಗೆ ಸುಷುಪ್ತಿಕಾಲದಲ್ಲಿ ಜ್ಞಾನವನ್ನು ನೀಡುತ್ತಾನೆಂದು ಹೇಳಿದ 'ಜ್ಯೋತಿಃ' ಎಂಬ ಶಬ್ದದಿಂದ ಜೀವನೇ ಪ್ರತಿಪಾದ್ಯನಾಗಿದ್ದಾನೆ. ಜೀವನು ಪ್ರಸಿದ್ಧನಾಗಿರುವುದರಿಂದ 'ಕತರ ಆತ್ಮಾ' ಎಂಬ ಮುಂದಿನ ಪ್ರಶ್ನೆ ತಪ್ಪಾಗುತ್ತದೆ. ಆದ್ದರಿಂದ ವಿಷ್ಣುವೇ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯನೆಂದು ಹೇಳಬೇಕು. ಇದು 'ಹಿ' ಶಬ್ದದಿಂದ ಸೂಚಿತವಾಗಿದೆ.

जनार्दनेत्यत्र जनेत्यजत्वोक्त्या आदित्यादिज्योतिर्मात्रस्यास्तमयेन जीवस्य सुप्त्यादौ ज्ञानाहेतुत्वेऽपि हरेरूदयास्तमयादिशून्यस्य तदा जीवज्ञानहेतुत्वरूपं ज्योतिष्ट्वं युक्तम् ।

'ಜನಾರ್ದನ' ಎಂಬಲ್ಲಿ 'ಜನ' ಶಬ್ದವು ಅಜತ್ವವನ್ನು ಸೂಚನೆ ಮಾಡುತ್ತಿದೆ. ಇದರಿಂದ 'ಆದಿತ್ಯಾದಿ ಜ್ಯೋತಿರ್ಮಯ' ವಸ್ತುಗಳು ಅಸ್ತವನ್ನು ಹೊಂದುತ್ತವೆ. ಆದ್ದರಿಂದ ಸುಷುಪ್ತಿಕಾಲದಲ್ಲಿ ಜೀವನಿಗೆ ಜ್ಞಾನಪ್ರದಗಳಾಗುವುದಿಲ್ಲ. ಹೊರತಾಗಿ ಉದಯ ಮತ್ತು ಅಸ್ತಮಯಾದಿಗಳಿಂದ ಶೂನ್ಯನಾದ ಪರಮಾತ್ಮನೇ ಸುಷುಪ್ತಿ ಕಾಲದಲ್ಲಿ ಜೀವರಿಗೆ ಜ್ಞಾನಪ್ರದನಾಗಿದ್ದಾನೆ. ಆದಕಾರಣ ವಿಷ್ಣುವೇ ಜ್ಯೋತಿಯಾಗಬೇಕು.

अर्दनेति संसारार्दकत्वोक्तया दुःखाभोगसूचकत्वेन 'स समानः सन्' इत्युक्त-समानत्वेनैवोभयलोकसञ्चरणं हरेरेव युक्तम् । नतु संसारिणो अस्वतन्त्रजीवस्येत्यपि सूचितम् ।। ११ ।।

'ಜನಾರ್ದನ' ಎಂಬಲ್ಲಿರುವ 'ಅರ್ದನ' ಪದವು ಸಂಸಾರವನ್ನು ಪರಿಹರಿಸುತ್ತಾನೆಂದು ಹೇಳುತ್ತಿದೆ. ಇದರಿಂದ 'ಸ ಸಮಾನಃ' ಎಂಬ ಶ್ರುತಿಯಲ್ಲಿ ಸಮಾನವಾಗಿ ಉಭಯಲೋಕಸಂಚಾರ ಮಾಡುವುದನ್ನು ಹೇಳಲಾಗಿದೆ. ಸಂಸಾರಿಯಾದ ಜೀವನು ಪರತಂತ್ರನಾದ್ದರಿಂದ ಉಭಯಲೋಕಸಂಚಾರವು ಸ್ವತಃ ಕೂಡುವುದಿಲ್ಲ. ಸುಖ-ದುಃಖಾದಿಗಳಿಂದ ವಿದೂರನಾದ ಶ್ರೀಹರಿಯು ಸಮಾನವಾಗಿ ಉಭಯಲೋಕವನ್ನು ಸಂಚಾರ ಮಾಡುತ್ತಾನೆ. ಇಂತಹ ವಿಷ್ಣುವೇ ಜೀವನನ್ನು ಹೊತ್ತುಕೊಂಡು ಉಭಯಲೋಕ ಸಂಚಾರ ಮಾಡುತ್ತಾನೆಂಬುದು ಶ್ರುತಿಯ ಅಭಿಪ್ರಾಯ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಮುಗಿಯಿತು.

ಜ್ಯೋತಿರಧಿಕರಣ (೧-೩-೧೧)

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## ज्योतिरधिकरणम् (१।३।११)

।।ॐ ज्योतिर्दर्शनात् ॐ ।। १-३-४० ।।

अत्र ज्योतिर्नाम समन्वीयते । ''योऽयं विज्ञानमयः प्राणेषु हृद्यन्तर्ज्योतिः'' इत्युक्तं ज्योतिर्ब्रह्मैव । नतु जीवः । कुतः ? दर्शनात् ''विष्णुरेव ज्योतिर्विष्णुरेव ब्रह्म'' इति श्रुतेरित्यर्थः । प्राक् समन्वितत्वेऽप्युभयत्र प्रसिद्धत्वेन पृथगुक्तिः । एवमग्रेऽपि ।। ११ ।।

ಈ ಅಧಿಕರಣದಲ್ಲಿ 'ಜ್ಯೋತಿಃ' ಎಂಬ ನಾಮಾತ್ಮಕಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬ ಬೃಹದಾರಣ್ಯಕದ ವಾಕ್ಯವು ಅಧಿಕರಣದ ವಿಷಯವಾಗಿದೆ. ಇಲ್ಲಿ ಹೇಳಲ್ಪಟ್ಟ 'ಜ್ಯೋತಿಸ್ಸು' ಬ್ರಹ್ಮನೇ ಹೊರತು, ಜೀವನಲ್ಲ. ಏಕೆಂದರೆ 'ದರ್ಶನಾತ್' = ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಬ್ರಹ್ಮ, ವಿಷ್ಣುವೇ ಜ್ಯೋತಿಯಾಗಿದ್ದಾನೆ. ವಿಷ್ಣುವೇ ಬ್ರಹ್ಮನಾಗಿದ್ದಾನೆ ಎಂಬ ಶ್ರುತಿಯು ಪ್ರಮಾಣವಾಗಿರುವುದರಿಂದ.

ಇದೇ ಪ್ರಥಮಾಧ್ಯಾಯದ ಪ್ರಥಮ ಪಾದದಲ್ಲಿ 'ಜ್ಯೋತಿಃ' ಎಂಬ ಶಬ್ದವನ್ನು ಸಮನ್ವಯ ಮಾಡಿದ್ದಾಗಿತ್ತು. ಆದರೂ ಸಹ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಜ್ಯೋತಿಸ್ಸು' ಉಭಯತ್ರಪ್ರಸಿದ್ಧವಾಗಿದೆ. ಆದ್ದರಿಂದ ಒಮ್ಮೆ ಸಮನ್ವಯ ಮಾಡಿದ್ದರೂ ಪುನಃ ಸಮನ್ವಯದ ಆವಶ್ಯಕತೆಯಿದೆ. ಇದರಂತೆ ಮುಂದಿನ ಆಕಾಶಾದ್ಯಧಿಕರಣಗಳಲ್ಲಿಯೂ ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಸಮಾಪ್ತವಾಯಿತು.

ಪರಿಪೂರ್ಣಚಂದ್ರಿಕಾ

श्री राघवेन्द्रतीर्थविरचिता

# श्रीन्यायमुक्तावळिः

## ज्योतिरधिकरणम् (१।३।११)

।। ॐ ज्योतिर्दर्शनात् ॐ ।। ११ ।।

अत्र पूर्वत्रेव निरवकाशजीवलिङ्गात् ज्योतिःशब्दस्य ''विष्णुरेव ज्योतिः'' इति श्रुतिप्रसिद्धार्थत्यागेन पूर्वपक्षप्रवृत्तेः आपवादिकी सङ्गतिः ।

ಈ ಅಧಿಕರಣದಲ್ಲಿ 'ಜ್ಯೋತಿಃ' ಎಂಬ ಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಹಿಂದಿನ ಅಧಿಕರಣದಂತೆ, ಈ ಅಧಿಕರಣದಲ್ಲಿ ನಿರವಕಾಶವಾದ ಜೀವನ ಲಿಂಗವಿರುವುದರಿಂದ 'ವಿಷ್ಣುರೇವ ಜ್ಯೋತಿಃ' ಎಂಬ ಶ್ರುತಿಯಲ್ಲಿ ಪ್ರಸಿದ್ಧವಾದ 'ಜ್ಯೋತಿಃ' ಶಬ್ದದ ಅರ್ಥವನ್ನು ಪರಿತ್ಯಾಗ ಮಾಡಿ, ಪೂರ್ವಪಕ್ಷವು ಹೊರಡುತ್ತಿರುವುದರಿಂದ ಅಪವಾದಿಕೀ ಸಂಗತಿಯನ್ನು ತಿಳಿಯಬೇಕು.

काण्वश्रुतौ षष्ठेऽध्याये ''योऽयं विज्ञानमयः प्राणेषु हृद्यन्तर्ज्योतिः'' इति (बृ.६-३-७)श्रुतं ज्योतिः किं जीवः उत ब्रह्मेति सन्देहः । जीव इति पूर्वः पक्षः ।

ಕಾಣ್ವಶ್ರುತಿಯ ಆರನೆಯ ಅಧ್ಯಾಯದಲ್ಲಿ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎಂಬಲ್ಲಿ ಶ್ರುತವಾದ ಜ್ಯೋತಿಯು ಜೀವನೋ? ಅಥವಾ ಬ್ರಹ್ಮನೋ? ಎಂದು ಸಂದೇಹ. ಜೀವನು ಎಂದು ಪೂರ್ವಪಕ್ಷ.

''स समानस्सन् उभौ लोकावनुसञ्चरति'' (बृ. ६-३-७) ''सवाऽयं पुरुषो जायमानः शरीरमभिसम्पद्यमानः पाप्मभिः संसृज्यते । स उत्क्रामन् म्रियमाणः पाप्मनो विजहाति'' इति (बृ.६-३-८) कर्मायत्तलोकसञ्चरणादिजीवलिङ्ग-बाहुल्यात्।

'ಸ ಸಮಾನಃ ಸನ್ ಉಭೌ ಲೋಕೌ ಅನುಸಂಚರತಿ' 'ಸ ವಾऽಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ' 'ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ' ಎಂಬುದಾಗಿ ಕರ್ಮಾಧೀನವಾಗಿ ಉಭಯಲೋಕಸಂಚಾರವನ್ನು ಶ್ರುತಿಯು ಹೇಳುತ್ತಿದೆ. ಇವೆಲ್ಲವೂ ಜೀವನ ಲಿಂಗಗಳೇ ಆಗಿವೆ.

किञ्च ''किं ज्योतिरयं पुरुषः'' इति प्रश्ने(बृ.६-३-२) ''आदित्येनैव ज्योतिषाऽऽस्ते'' इत्यादिना आदित्यचन्द्राग्निवागात्मसु पूर्वपूर्वास्तमये उत्तरोत्तरस्य ज्ञानहेतुत्वरूपज्योतिष्ट्वमुक्त्वा ''कतम आत्मा'' इति प्रश्ने (बृ.६-३-७) योऽयमित्यस्योक्तत्वात् आदित्यादिज्योतिष्ट्वेनोक्तस्य च न तत्र सूर्यो भातीत्यादेः विष्णुत्वायोगेन जीवत्वावश्यंभावाच्च ।

ಮತ್ತು 'ಕಿಂ ಜ್ಯೋತಿರಯಂ ಪುರುಷಃ' ಎಂದು ಬೃಹದಾರಣ್ಯಕದಲ್ಲಿ ಪ್ರಶ್ನೆ ಮಾಡಿದಾಗ, 'ಆದಿತ್ಯೇನೈವ ಜ್ಯೋತಿಷಾ ಆಸ್ತೇ' ಇತ್ಯಾದಿಯಾಗಿ ಆದಿತ್ಯ, ಚಂದ್ರ, ಅಗ್ನಿ, ವಾಕ್, ಆತ್ಮ ಇವರುಗಳಲ್ಲಿ ಹಿಂದಿನವರು ಅಸ್ತಮಯರಾದ ಮೇಲೆ ಮುಂದಿನವರು ಜ್ಞಾನಕ್ಕೆ ಕಾರಣರಾದ್ದರಿಂದ ಜ್ಯೋತಿಃಸ್ವರೂಪರಾಗಿದ್ದಾರೆಂದು ಹೇಳಲಾಗಿದೆ. ನಂತರ 'ಕತಮ ಆತ್ಮಾ' ಎಂದು ಪ್ರಶ್ನಿಸಿದಾಗ, 'ಯೋऽಯಂ ವಿಜ್ಞಾನಮಯಃ' ಎಂದು ಉತ್ತರಿಸಲಾಗಿದೆ. ಆದ್ದರಿಂದ, ಆದಿತ್ಯಾದಿ ಜ್ಯೋತಿಷ್ಟ್ವೇನ ಹೇಳಲ್ಪಟ್ಟವರಿಗೆ 'ನ ತತ್ರ ಸೂರ್ಯೋ ಭಾತಿ' ಇತ್ಯಾದಿ ವಾಕ್ಯಪ್ರತಿಪಾದ್ಯವಾದ ವಿಷ್ಣುತ್ವವು ಯುಕ್ತವಾಗುವುದಿಲ್ಲ. ಆದ್ದರಿಂದ, ಜೀವತ್ವವನ್ನೇ ಅವಶ್ಯವಾಗಿ ಹೇಳಬೇಕು.

आत्मशब्देन परमात्मग्रहणे सति अस्तमयादिहीनात्मज्योतिष्ट्वस्य जीवे सार्वकालिकत्वेन आदित्येनैव ज्योतिषेत्यादौ अवधारणायोगादिति ।।

ಆತ್ಮಶಬ್ದದಿಂದ ಪರಮಾತ್ಮನನ್ನು ಸ್ವೀಕರಿಸಿದರೆ ಅರ್ಥಮಯಾದಿಗಳಿಲ್ಲದ ಆತ್ಮಜ್ಯೋತಿಷ್ಟ್ವವು ಜೀವನಲ್ಲಿ ಸಾರ್ವಕಾಲಿಕವಾಗಿ ಇರುವುದರಿಂದ 'ಆದಿತ್ಯೇನೈವ ಜ್ಯೋತಿಷಾ' ಎಂಬಲ್ಲಿ ಹೇಳಲ್ಪಟ್ಟ ಅವಧಾರಣವು ಯುಕ್ತವಾಗುವುದಿಲ್ಲ. ಆದ್ದರಿಂದ, ಆದಿತ್ಯಾದಿ ಜೀವರುಗಳೇ 'ಜ್ಯೋತಿಃ' ಎಂಬ ಶಬ್ದದಿಂದ ಪ್ರತಿಪಾದ್ಯರೆಂದು ಪೂರ್ವಪಕ್ಷ.

सिद्धान्तस्तु ।। ''विष्णुरेव ज्योतिः विष्णुरेव ब्रह्म'' (चतुर्वेदशिखा) इति श्रुत्या ज्योतिःशब्दस्य विष्ण्वेकवाचित्वात्तस्य हृद्यन्तर्ज्योतिरिति उपक्रमे ''अत्रायं पुरुषः स्वयं ज्योतिः'' इति (बृ.६-३-९) उपसंहारे च श्रुतत्वेन ताभ्यां। विष्णुपरत्वेन निर्णीतवाक्यमध्यपतितत्वेन जीवलिङ्गानां अन्तर्णीतण्यर्थकत्वकल्पनया हरौ सावकाशत्वात् लोकद्वयसञ्चारस्य जीवमादाय ईशस्यैव स्वातन्त्र्येणोपपत्तेः,

आत्मशब्दितेशस्य ज्योतिष्ट्वेऽपि जीवस्य बाह्यज्योतिःप्राधान्यज्ञापनाय आदित्ये-नैवेत्यवधारणोपपत्तेः विष्णुरेवेदं ज्योतिरिरिति ।।

ವಿಷ್ಣುವೇ ಜ್ಯೋತಿಯಾಗಿದ್ದಾನೆ. ಏಕೆಂದರೆ, 'ವಿಷ್ಣುರೇವ ಜ್ಯೋತಿಃ' 'ವಿಷ್ಣುರೇವ ಬ್ರಹ್ಮ' ಎಂಬ ಚತುರ್ವೇದ ಶಿಕ್ಷೆಯಲ್ಲಿ ಜ್ಯೋತಿಃಶಬ್ದವು ವಿಷ್ಣ್ವೇಕವಾಚ್ಯವೆಂದು ಹೇಳಲಾಗಿದೆ. 'ಹೃದ್ಯಂತರ್ಜ್ಯೋತಿಃ' ಎಂದು ಪ್ರಾರಂಭದಲ್ಲಿ ಹೇಳಿ, 'ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ' ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಉಪಸಂಹಾರವಿದೆ. ಈ ಉಪಕ್ರಮ ಮತ್ತು ಉಪಸಂಹಾರಗಳು ವಿಷ್ಣುಪರವೆಂದು ನಿರ್ಣಯವಾಗಿದೆ. ಇವುಗಳ ಮಧ್ಯದಲ್ಲಿ ಇರುವಂತಹ ಸಕಲ ಜೀವಲಿಂಗಗಳು ವಿಷ್ಣುಪರವೇ ಆಗುತ್ತವೆ. ಹೊರತು, ಜೀವಪರವಾಗುವುದಿಲ್ಲ. ಆದ್ದರಿಂದ, ಜೀವನ ಲಿಂಗಗಳೆಲ್ಲವೂ ಶ್ರೀಹರಿಯಲ್ಲಿ ಸಾವಕಾಶವಾಗಿವೆ.

ಕರ್ಮಾಧೀನವಾಗಿ ಉಭಯಲೋಕಸಂಚಾರವನ್ನು ಶ್ರುತಿಯು ಹೇಳಿರಬಹುದು. ಆದರೆ, ಪರಮಾತ್ಮನು ಜೀವನನ್ನು ಹಿಡಿದುಕೊಂಡು ಸ್ವತಂತ್ರವಾಗಿ ಉಭಯಲೋಕಗಳನ್ನು ಸಂಚಾರ ಮಾಡುತ್ತಾನೆಂದು ಶ್ರುತಿಯ ಅಭಿಪ್ರಾಯ. ಮತ್ತು ಆತ್ಮಶಬ್ದಪ್ರತಿಪಾದ್ಯನಾದ ಪರಮಾತ್ಮನೇ ಜ್ಯೋತಿಯೆನಿಸಿದ್ದಾನೆ. ಜೀವನು ಬಾಹ್ಯವಾಗಿ ಮಾತ್ರ ಜ್ಯೋತಿಯೆನಿಸುತ್ತಾನೆ. ಈ ವಿವಕ್ಷೆಯಿಂದ 'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣವನ್ನು ಶ್ರುತಿಯು ಹೇಳಿದೆ. ಆದ್ದರಿಂದ ವಿಷ್ಣುವೇ ಜ್ಯೋತಿಯೆಂದು ನಿರ್ಣಯವಾಯಿತು.

फलं तु हृदयाहितत्वमुखेन ज्योतिश्चरणेति सूत्राक्षेपः समाधिश्चेति ।। ११ ।।

ಅಧಿಕರಣದ ಫಲ-ಫಲಿ ಭಾವ ಹೀಗಿದೆ. ಹೃದಯಾಹಿ ತತ್ವವೆಂಬ ಲಿಂಗದಿಂದ 'ಜ್ಯೋತಿಶ್ಚರಣ' ಎಂಬ ಸೂತ್ರವನ್ನು ಆಕ್ಷೇಪ ಮಾಡುವುದೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಜ್ಯೋತಿರಧಿಕರಣವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# सूत्रार्थरत्नावळिः

## ज्योतिरधिकरणम् (१।३।११)

अत्रोभयप्रसिद्धज्योतिर्नाम ब्रह्मणि समन्वीयते

**ॐ।। ज्योतिर्दर्शनात् ।।ॐ १-३-४०।।**

ननु जीव एवेदं ज्योतिः । 'स समान' इति जीवलिङ्गात् । 'इमं लोकम्' इति श्रुतेश्च । किञ्चास्यादित्यज्योतिः इत्यादिनाऽऽत्मज्योतिष्ट्वमुक्त्वा 'कतम आत्मा' इति प्रश्ने ज्योतिराम्नायते। नच तद्विष्णोः सम्भवति । 'न तत्र सूर्यो भाति' इत्यादेः । नच यस्यादित्यादिज्योतिष्ट्वमुक्तं स जीव एवास्त्विति । तस्यैवेत्यत्र परमात्मज्योतिष्ट्वमुक्त्वा 'कतम आत्मा' इति प्रश्ने ज्योतिषाम्नानाज्ज्योतिर्विष्णुरिति । तथा सति परमात्मन उदयास्तमादिशून्यत्वेन सदा सद्भावात् । आदित्येनैवायमित्याद्यवधारणं न स्यात् । अत्रायं पुरुषः स्वयं ज्योतिर्भवतीत्यस्यैवार्थस्य प्रत्यभिज्ञानाच्च । तस्मादिदं ज्योतिर्जीव एवेति प्राचीनब्रह्मत्वोपादनमयुक्तमिति प्राप्ते, सूत्रमाह –

ॐ।। ज्योतिर्दर्शनादिति ।। अस्यार्थः – 'योऽयमन्तर्ज्योतिः' इति ज्योतिःशब्दवाच्यो विष्णुरेव । न जीवः । कुतः? दर्शनात् विष्णुरेव ज्योतिरिति (चतुर्वेदशिखायाम्) श्रुतेरित्यर्थः ।

एवञ्च विष्णुरेवेदं ज्योतिः । ज्योतिःश्रुतेर्विष्णुवाचित्वात् । मुख्यार्थसम्भव एवामुख्यार्थस्य ग्राह्यत्वात् । नच विष्णुपक्ष उभयलोकसञ्चरणानुपपत्तेरमुख्येऽपि जीवरूपोऽर्थो ग्राह्यः । तस्यापि 'प्राज्ञेनात्मना' इति, तस्मिन् प्रमाणसिद्धत्वेन मुख्यार्थग्रहणे बाधकाभावात् । नच 'इमं लोकम्' इत्याद्युक्तलिङ्गविरोधः । अन्तर्णीतणिच्त्वेन तेषामपि सावकाशत्वोपपत्तेः । न चादित्यादिज्योतिष्ट्वविरोधः । तस्य जीवत्वाङ्गीकारात् । नच तस्यैव स्वयं ज्योतिष्ट्वेनोक्तस्य ज्योतिष्ट्वमुच्यत इति वाच्यम् । आत्मैवास्य ज्योतिरित्युक्तस्यात्मनः कतम आत्मेति प्रश्ने ज्योतिष्ट्वाभिधानेन जीवस्य प्रसिद्धत्वेन प्रश्नायोग्यतया ज्योतिष्ट्वाभिधानात् । न चावधारणानुपपत्तिः । तस्य बाह्यज्योतिषु तस्य प्राधान्यज्ञापनार्थत्वात् । अन्यव्यावर्तकत्वस्य वागादिसत्वेनायोगात् । विशिष्यभवगतो ज्योतिष्ट्ववचनं तु स्वापे ज्योतिरन्तराभावाभिप्रायेणेति द्रष्टव्यम् । तस्मादिदं ज्योतिर्विष्णुरिति, 'ज्योतिश्चरणाभिधानात्' इति प्राग्व्युत्पादितविष्णुत्वं न बाधितमिति सिद्धम् ।।*।।

।। इति सूत्रार्थरत्नावळ्यां ज्योतिरधिकरणम् ।।

ಪರಿಪೂರ್ಣಚಂದ್ರಿಕಾ

# ಆಕಾಶಾಧಿಕರಣ

(೧-೩-೧೨)

---

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಆಕಾಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಲೋಕವಿಲಕ್ಷಣನಾದ ಶ್ರೀಹರಿಯೇ 'ಆಕಾಶ'

**॥ अथ आकाशाधिकरणम् ॥**

**सू – ॥ ॐ आकाशोऽर्थान्तरत्वादिव्यपदेशात् ॐ ॥ ४१ ॥**

ಸೂತ್ರಾರ್ಥ - 'ಆಕಾಶೋ ವೈ ನಾಮ' ಎಂಬಲ್ಲಿರುವ ಆಕಾಶ ಶಬ್ದದಿಂದಲೂ ಬ್ರಹ್ಮನೇ ಪ್ರತಿಪಾದ್ಯನು ಹೊರತು ಅವ್ಯಾಕೃತಾಕಾಶವಲ್ಲ ಏಕೆಂದರೆ ನಾಮರೂಪ ರಾಹಿತ್ಯವೆಂಬ ವಿಲಕ್ಷಣಧರ್ಮವನ್ನು ಹೇಳಿದ್ದರಿಂದ, ಬ್ರಹ್ಮತ್ವ, ಅಮೃತತ್ವ ಮೊದಲಾದ ಧರ್ಮಗಳೂ ಶ್ರುತವಾದ್ದರಿಂದ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಆಕಾಶಾಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

# ಸೂತ್ರದೀಪಿಕಾ

सूत्रदीपिका – 'आकाशो ह वै नाम' इति श्रुत्युक्ताकाशो विष्णुरेव । न त्वव्याकृताकाशः । कुतः? अर्थान्तरत्वादिव्यपदेशात् । 'ते यदन्तरा' इति वाक्ये विष्णोर्नामरूपराहित्याख्यविलक्षणार्थत्वस्य आदिशब्दगृहीतब्रह्मत्वामृतत्वयोश्च उक्तत्वादित्यर्थः ।।१।।

ಅರ್ಥ -- ಆಕಾಶಃ = 'ಆಕಾಶೋ ಹ ವೈ ನಾಮ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶ' ಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನು ಹೊರತು ಅವ್ಯಾಕೃತ ಆಕಾಶವಲ್ಲ. ಏಕೆಂದರೆ 'ಅರ್ಥಾಂತರಾತ್ ವ್ಯಪದೇಶಾತ್' = 'ತೇ ಯದಂತರಾ' ಎಂಬುದಾಗಿ ಛಾಂದೋಗ್ಯದ ವಾಕ್ಯದಲ್ಲಿ ವಿಷ್ಣುವಿಗೆ ನಾಮರೂಪರಾಹಿತ್ಯವೆಂಬ ವಿಲಕ್ಷಣಧರ್ಮವನ್ನು ಹೇಳಿದ್ದರಿಂದ. ಆದಿಪದದಿಂದ ಬ್ರಹ್ಮತ್ವ, ಅಮೃತತ್ವ ಮೊದಲಾದವುಗಳನ್ನು ಹೇಳಿದ್ದರಿಂದಲೂ ಎಂಬರ್ಥವನ್ನು ವಿವಕ್ಷಿಸಬೇಕು.

॥ ಸೂತ್ರದೀಪಿಕೆಯಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು ॥

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – सर्वाधारत्वं विष्णोरुक्तम् । त'च्चाकाशो वै नाम नामरूपयोर्निर्वहित' (छा.उ.८-१४-१) इत्यत्राऽऽकाशस्य प्रतीयते । वै नामेति प्रसिद्धोपदेशात् प्रसिद्धाकाशश्चाङ्गीकर्तव्य इति ।**

ಅನುವಾದ - ದ್ಯುಭ್ವಾದ್ಯಧಿಕರಣದಲ್ಲಿ ಆಕಾಶಾದಿ ಸಕಲ ಪದಾರ್ಥಗಳಿಗೆ ಆಧಾರನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಹೇಳಲಾಯಿತು. ಆದರೆ ಛಾಂದೋಗ್ಯವು ಪ್ರಸಿದ್ಧವಾದ ಆಕಾಶವೇ ನಾಮ ಹಾಗೂ ರೂಪಾತ್ಮಕವಾದ ಪ್ರಪಂಚಕ್ಕೆ ನಿರ್ವಾಹಕವಾಗಿದೆ ಎಂದು ಹೇಳುತ್ತಿದೆ. ಈ ಶ್ರುತಿಯಲ್ಲಿ 'ವೈ ನಾಮ' ಎಂಬೆರಡು ಅವ್ಯಯಗಳಿಂದ ಲೋಕಪ್ರಸಿದ್ಧಿಯು ತಿಳಿಯುತ್ತಿದೆ. ಲೋಕಪ್ರಸಿದ್ಧವಾದ ಭೂತಾಕಾಶವೇ ಈ ಮಂತ್ರಪ್ರತಿಪಾದ್ಯವಾಗಿದೆ ಎಂದು ಅಂಗೀಕರಿಸಬೇಕು.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ 'ಆಕಾಶ' ಎಂಬ ನಾಮಾತ್ಮಕ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಶ್ರುತ್ಯಾದಿಸಂಗತಿ, ವಿಷಯಾದಿಗಳನ್ನು ಮೊದಲು ತೋರಿಸುತ್ತಾರೆ –

ಸರ್ವಾಧಾರತ್ವಂ = ಆಕಾಶಾದಿ ಸಕಲ ಪದಾರ್ಥಗಳಿಗೂ ಆಧಾರನಾದವನು, ವಿಷ್ಣೋಃ = ವಿಷ್ಣುವಿಗೆ, ಉಕ್ತಂ = ವಿಷ್ಣುವಿಗೆ ದ್ಯುಭ್ವಾದ್ಯಧಿಕರಣದಲ್ಲಿ ಹೇಳಲಾಯಿತು. ತಚ್ಚ = ಆ ಸರ್ವಾಧಾರತ್ವವಾದರೋ ಛಾಂದೋಗ್ಯ ಶ್ರುತಿಯಲ್ಲಿ, ಆಕಾಶೋ ವೈ = ಆಕಾಶವೇ, ನಾಮರೂಪಯೋಃ = ನಾಮ ಮತ್ತು ರೂಪಾತ್ಮಕವಾದ ಪ್ರಪಂಚಕ್ಕೆ, ನಿರ್ವಹಿತಾ = ನಿರ್ವಾಹಕವಾಗಿದೆ. ಇತಿ = ಹೀಗೆ, ಆಕಾಶಸ್ಯ = ಆಕಾಶಕ್ಕೆ, ಪ್ರತೀಯತೇ = ತೋರುತ್ತದೆ. ಮತ್ತು ವೈ ನಾಮೇತಿ = ವೈ ಮತ್ತು ನಾಮ ಎಂಬೆರಡು ನಿಪಾತಗಳು, ಪ್ರಸಿದ್ಧೋಪದೇಶಾತ್ = ಪ್ರಸಿದ್ಧವಾದ ಪದಾರ್ಥವನ್ನೇ ತಿಳಿಸುತ್ತದೆ. ಪ್ರಸಿದ್ಧಾಕಾಶಶ್ಚ = ಲೋಕಪ್ರಸಿದ್ಧವಾದ ಭೂತಾಕಾಶವನ್ನೇ ಸರ್ವಾಧಾರವೆಂದು, ಅಂಗೀಕರ್ತವ್ಯಃ = ಅಂಗೀಕರಿಸಬೇಕು. ಇತಿ = ಇಷ್ಟು ಪೂರ್ವಪಕ್ಷ.[೧]

---

**भाष्यदीपिका** – अत्रोभयत्रप्रसिद्धमाकाशनाम ब्रह्मणि समन्वीयते । श्रुत्यादिसङ्गतिं विषयादिकं च दर्शयति – **सर्वाधारत्वमिति** ।। द्युभ्वाद्यधिकरण इति शेषः । ततः किमित्यत आह – **तच्चेति** ।। चोऽवधारणे । 'इत्यत्र' इत्येवंरूपे छन्दोगवाक्य इत्यर्थः । अनेनात्रत्याकाशशब्दस्य विष्ण्वन्यत्वपरत्वोक्तिमुखेन पूर्वोक्तसर्वाधारत्वस्याप्यन्यनिष्ठत्वाक्षेपात् तेनास्याऽक्षेपिकी सङ्गतिरुक्ता भवति । छन्दोगश्रुत्युक्त आकाशाख्यो विषयश्च सूचितः । सयुक्तिकं पूर्वपक्षं दर्शयति – **वैनामेति** ।। स इति शेषः । चोऽवधारणे । तथा च छन्दोगश्रुत्युक्त आकाशः प्रसिद्धः साक्षिसिद्धोऽव्याकृताकाश एवाङ्गीकार्यः । कुतः ? आकाशपदेन वैनामेति निपातद्वयद्योतितप्रसिद्धिमदर्थस्योपदेशाद् उक्तत्वादित्यर्थः । केचित्तु – **'सत्तर्कदीपावल्यां प्रसिद्धो भूताकाश एवाङ्गीकार्यः'** इति वचनाद् अवकाशस्यापि नामरूपवत्त्वादिति चन्द्रिकाकृदभिप्रेतं टीकापाठमाश्रित्याऽकाशशब्दप्रवृत्तिनिमित्तमवकाशत्वं भूते निरवधिकमिति सुधोक्तेरत्रावकाशशब्दितं भूतमेव पूर्वपक्षविषय इत्याहुः । श्रुतौ वै नामेति निपातद्वयं प्रसिद्धौ । **'नाम'** वाचकशब्दप्रपञ्चः रूपपदेन प्राकृतरूपान्तर्भावितार्थप्रपञ्चमात्रमुच्यते । तथा चाऽकाशो **'नामरूपयोः'** शब्दार्थप्रपञ्चयोः **'निर्वहिता'** निर्वोढा आश्रयः कर्ता चेत्यर्थः । **'ते'** निर्वाह्यतया प्रकृते नामरूपे **'अन्तरा'** भेदेन । यदिति नामरूपप्रपञ्चाद् भिन्नं यदस्तीति यावत् । यद्वा – तच्छब्देन वाच्यप्रपञ्चान्तर्भूतं नीलादिरूपं वाचकं नाम च गृह्यते । तथा च **'ते'** नामरूपे **'अन्तरा'** विना तद्रहितमिति यावत् । साकल्येन नामवाच्यं प्राकृतरूपरहितं च यद् वर्तते तद् ब्रह्मेत्यर्थः । यद्वा – **'ते'** नामिरूपिणाम् **'अन्तरा'** भेदेन यदस्तीत्यर्थः । यथोक्तं तत्त्वप्रदीपे – नामि च रूपि च यन्न भवति तद्ब्रह्मेति ।

**भाष्यम् – अत उच्यते –**

**॥ ॐ आकाशोऽर्थान्तरत्वादिव्यपदेशात् ॐ ॥४१॥**

**'ते यदन्तरा तद्ब्रह्म' (छा. उ. ८-१४-१) इत्यर्थान्तरत्वादिव्यपदेशादाकाशो हरिरेव ।**

ಅನುವಾದ - ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಅದೇ ಛಾಂದೋಗ್ಯದಲ್ಲಿ ನಾಮರೂಪರಹಿತವಾದದ್ದು ಬ್ರಹ್ಮ ಎಂದು ಲೋಕವಿಲಕ್ಷಣವಾದ ತತ್ತ್ವವನ್ನೇ ಬ್ರಹ್ಮನೆಂದು ಹೇಳಿ, ಆಕಾಶವನ್ನು ಹೇಳಿದ್ದರಿಂದ ಶ್ರೀಹರಿಯೇ ಆಕಾಶಶಬ್ದಪ್ರತಿಪಾದ್ಯನಾಗುತ್ತಾನೆ.

ಪ್ರತಿಪದಾರ್ಥ --ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ –

ತೇ = ಪ್ರಾಕೃತವಾದ ನಾಮರೂಪಗಳನ್ನು, ಅಂತರಾ = ಬಿಟ್ಟು, ಅಂದರೆ ಭಿನ್ನವಾಗಿ, ಯತ್ = ಯಾವುದು ಇದೆಯೋ, ತತ್ ಬ್ರಹ್ಮ = ಅದೇ ಬ್ರಹ್ಮನು, ಇತಿ = ಹೀಗೆ, ಅರ್ಥಾಂತರತ್ವಾದಿವ್ಯಪದೇಶಾತ್ = ನಾಮರೂಪಾತ್ಮಕವಾದ ಪ್ರಪಂಚಕ್ಕಿಂತ ವಿಲಕ್ಷಣವಾದ ಅರ್ಥಾಂತರವನ್ನು ಹೇಳಿದ್ದರಿಂದ, ಆಕಾಶಃ = ಆಕಾಶಶಬ್ದಪ್ರತಿಪಾದ್ಯನಾದವನು, ಹರಿರೇವ = ಶ್ರೀಹರಿಯೇ ಆಗಿರುತ್ತಾನೆ.[१]

**भाष्यम् –'अवर्णं (अवर्णमचक्षुश्चोत्रम्' इत्याद्याथर्वणी श्रुतिः) 'यतो वाचो निवर्तन्ते' (तै.उ. २-४) इत्यादि श्रुतेस्तस्यैव हि तल्लक्षणम् ।**

---

(१) **भाष्यदीपिका** – सिद्धान्तयत्सूत्रमवतार्य व्याचष्टे – अत इति ।। इत्यर्थान्तरत्वादिव्यपदेशादिति ।। सूत्रे भाष्ये च पदार्थत्वबोधायार्थशब्दः । श्रुत्यनुसारादन्तरशब्दः । ताभ्यामिति शेषः । तथा च ताभ्यां नामरूपाभ्याम् अन्योऽर्थः अर्थान्तरं, यद्वा ताभ्यां विलक्षणः अर्थः अर्थान्तरः तस्य भावस्तत्त्वम् । नामरूपप्रपञ्चभिन्नत्वं वा प्राकृतनामरूपराहित्यं वा । नामरूपराहित्याख्यार्थान्तरत्वव्यपदेशादित्यर्थः । आदिपदेन ब्रह्मत्वं गृह्यते । यद्वा – निरपेक्षयोरेव नामरूपराहित्ययोराकाशस्य ब्रह्मत्वसाधकत्वाद् अर्थान्तरपदेन रूपराहित्यम् आदिपदेन नामराहित्यं च गृह्यते । तथा च एवंरूपार्थान्तरत्वाद्युक्तेरित्यर्थः । **'आकाशः'** छान्दोग्ये श्रुतोऽयमाकाशस्तच्छब्दवाच्यः । समन्वयसूत्रादनुवृत्तस्य तत्त्वित्यस्यार्थमाह – **हरिरेवेति** ।। अनेन – अयमाकाशो हरिरेव । कुतः ? अस्य अर्थान्तरत्वादिव्यपदेशात् **'ते यदन्तरा'** इति नामरूपराहित्याख्यविलक्षणार्थत्वोक्तेः, ब्रह्मत्वोक्तेश्चेति सूत्रार्थ उक्तो भवति ।

ಅನುವಾದ - 'ಅವರ್ಣಮಚಕ್ಷುಃಶ್ರೋತ್ರಮ್' ಎಂಬ ಅಥರ್ವಣ ಶ್ರುತಿಯಲ್ಲಿ, ಮತ್ತು 'ಯತೋ ವಾಚೋ ನಿವರ್ತಂತೇ' ಎಂದು ತೈತ್ತಿರೀಯ ಶ್ರುತಿಯಲ್ಲಿ ನಾಮರೂಪರಾಹಿತ್ಯವನ್ನು ಮಹಾವಿಷ್ಣುವಿನ ಲಕ್ಷಣವೆಂದು ಸ್ಪಷ್ಟವಾಗಿ ಹೇಳಲಾಗಿದೆ.

ಪ್ರತಿಪದಾರ್ಥ -- ಆಕಾಶದಲ್ಲಿ ಶ್ರುತವಾದ ನಾಮರೂಪತ್ವಾದಿ ಲಿಂಗದಿಂದ ವಿಷ್ಣುವನ್ನು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ, ಉತ್ತರಿಸುತ್ತಿದ್ದಾರೆ –

ಅವರ್ಣಂ = ಪ್ರಾಕೃತವಾದ ಶುಕ್ಲಾದಿ ವರ್ಣರಹಿತನಾದವನೆಂದು, ಮತ್ತು ಯತಃ = ಬ್ರಹ್ಮನ ದೆಸೆಯಿಂದ, ವಾಚೋ ನಿವರ್ತಂತೇ = ನಾಮರೂಪವಾದ ಜಗತ್ತು ಹಿಂತಿರುಗುತ್ತದೆ. ಇತ್ಯಾದಿ ಶ್ರುತೇಃ = ಇವೇ ಮೊದಲಾದ ಶ್ರುತಿಗಳ ಆಧಾರದಿಂದ, ತಸ್ಯೈವ ಹಿ = ಆ ವಿಷ್ಣುವಿನದ್ದೇ, ತತ್ = ನಾಮರೂಪರಾಹಿತ್ಯವು, ಲಕ್ಷಣಂ = ಲಕ್ಷಣವಾಗಿದೆ.[१]

**भाष्यम् – 'अनामा सोऽप्रसिद्धत्वादरूपो भूतवर्जनाद्' इति (हि) ब्राह्मे ॥४१॥**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये आकाशाधिकरणम् ।। १२ ।।**

ಅನುವಾದ - ಶ್ರೀಹರಿಯು ಲೋಕಪ್ರಸಿದ್ಧನಲ್ಲದ ಕಾರಣ ನಾಮವಾಚ್ಯನಾದರೂ ನಾಮರಹಿತನಾಗಿದ್ದಾನೆ. ಭೌತಿಕ ದೇಹರಹಿತನಾದ್ದರಿಂದ ಆಕಾರರಹಿತನಾಗಿದ್ದಾನೆಂದು ಕರೆಸಿಕೊಳ್ಳುತ್ತಾನೆ, ಹೀಗೆ ಬ್ರಹ್ಮಾಂಡ ಪುರಾಣವು ಹೇಳಿದೆ.

---

(१) **भाष्यदीपिका** – आकाशे श्रुतेन नामरूपत्वादिलिङ्गेन कुतो विष्णुत्वनिश्चय इत्यतस्तस्य तन्निष्ठत्वादिति भावेन तत्र प्रमाणतयाऽऽथर्वर्णी श्रुतिमाह –**अवर्णमिति** ।। प्राकृतशुक्लादिवर्णरहितं तद्भिन्नं वेत्यर्थः । यद्वा, अवर्णं न वर्ण्यं **'नापि वर्णात्मकम्'** इत्यर्थः **'यतः'** इति श्रुतिः । **'यतो'** ब्रह्मणो **'वाचो'** नामानि । **'निवर्तन्ते'** इत्यनामत्वोक्तिपरतया व्याख्येया । आदिशब्दात् **'अशब्दमस्पर्शमरूपम्'** (कठ.१.३.१५) इत्यादिश्रुतिर्गृह्यते । इत्यादिश्रुतेरित्यस्य तस्य विष्णोरेतदरूपत्वादिकं लक्षणमसाधारणधर्म इति ज्ञायत इत्यध्याहारेणान्वयः । हि यस्मात् तस्मान्न लिङ्गस्य व्यधिकरणासिद्धिरिति भावः । तस्यैवेत्येवकारेण व्यभिचारशङ्काऽपि निरस्ता । यद्यपि **'यतः'** इत्यनामत्वश्रुतिरेव प्रथममुदाहर्तव्या, **'ते यदन्तरा'** इति नामराहित्यस्यैव प्रथममुक्तत्वात् । नतु **'अवर्णम्'** इत्यरूपश्रुतिः । तथाऽपि वाचकस्य नाम्नो वाच्यापेक्षयाऽप्राधान्याद् वाच्यस्यैव प्रधानत्वाद् वाच्यप्रपञ्चान्तर्गतरूपराहित्यश्रुतिरेव प्रथममुदाहृतेत्यदोषः ।

ಪ್ರತಿಪದಾರ್ಥ -- ಶ್ರೀಹರಿಗೆ ನಾಮರೂಪರಾಹಿತ್ಯವು ಯುಕ್ತವಾಗುವುದಿಲ್ಲ. ಸರ್ವಶಬ್ದವಾಚ್ಯನಾದ್ದರಿಂದ ಹಾಗೂ ರುಗ್ಮಾದಿ ವರ್ಣಗಳಿರುವುದರಿಂದ. ಈ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ –

ಅಸೌ ವಿಷ್ಣುಃ ಅಪ್ರಸಿದ್ಧತ್ವಾತ್ = ಲೋಕವಿಲಕ್ಷಣನಾದ್ದರಿಂದ, ಅನಾಮ = ನಾಮರಹಿತನಾಗಿದ್ದಾನೆ, ಹೆಸರಿಲ್ಲದವನೆಂದು ಕರೆಸಿಕೊಳ್ಳುತ್ತಾನೆ, ಭೂತವರ್ಜನಾತ್ = ಪ್ರಾಕೃತವಾದ ದೇಹದ ಸಂಪರ್ಕವಿಲ್ಲದ ಕಾರಣ, ಅರೂಪಃ = ರೂಪರಹಿತನೆಂದು ಕರೆಸಿಕೊಳ್ಳುತ್ತಾನೆ. ಇತಿ = ಹೀಗೆ, ಬ್ರಾಹ್ಮೇ = ಬ್ರಹ್ಮಾಂಡ ಪುರಾಣದಲ್ಲಿ ಹೇಳಲಾಗಿದೆ.(१)

ಇಲ್ಲಿಗೆ ಆಕಾಶಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## श्रीपद्मनाभतीर्थविरचितसत्तर्कदीपावळिः

### ।। ॐ आकाशोऽर्थान्तरत्वादिव्यपदेशात् ॐ ।।

ननु, 'आकाशो वै नाम नामरूपयोनिर्वहिता' इत्यत्र सर्वाधिकतयाप्याम्नातोऽप्याकाशो न विष्णुः, किन्तु भूताकाश एव । वै नामेति प्रसिद्धिद्योतकनिपातश्रवणाल्लोकप्रसिद्धाकाशो हि भूताकाश इति न वक्तव्यम् । 'ते यदन्तरा तद् ब्रह्म' इति वाक्यशेषविरोधात् । यतो यमाकाशस्ते नामरूपे विना ताभ्यामस्पृष्टो वर्तते । अतो नामरूपात्मकभूतभौतिकादिप्रपञ्चानिर्वाहत्वाद् अर्थान्तरभूत इत्यर्थः । 'तद् ब्रह्म तदमृतं स आत्मा' इति निर्दिष्टमानत्वाच्च नायमाकाशः । वै नामेत्यनेन

(१) भाष्यदीपिका – ननु हरेर्नामरूपराहित्यं नोपपद्यते, सर्वशब्दवाच्यत्वाद् रुग्मवर्णादिरूपवत्त्वाच्च । अन्यथेक्षतेः रूपोपन्यासाच्चेत्युक्तविरोधापातादित्यत आह – अनामेति ।। 'सः' हरिः 'अप्रसिद्धत्वात्' साकल्येन स्वात्मनोऽन्येन शब्दादिनाऽप्रमितत्वान्निमित्तादनामेत्युच्यत इत्यर्थः । न चैवमाकाशशब्दवाच्यस्य प्रसिद्धिबोधकनिपातद्वयविरोध इति वाच्यम् । निपातबोध्यप्रसिद्धेः विधेयभूतनिर्वोढृत्वान्वयित्वेन पूर्वपक्षिरीत्योद्देश्याकाशान्वयित्वाभावात् । निर्वोढृत्वस्य च लोकप्रसिद्धत्वाभावेऽपि 'एको दाधार' इत्यादिश्रुतिप्रसिद्धत्वात् । तस्य चाप्रसिद्धत्वादित्यनेनानिषिद्धत्वात् । 'भूतवर्जनात्' भौतिकदेहशून्यत्वात् तादृशरूपराहित्याद् वाऽरूप इत्यर्थः । इति ब्राह्मे इत्यस्योक्तत्वान्नोक्तविरोध इत्यध्याहृतेनान्वयः ।

।। इत्याकाशाधिकरणम् ।। १२ ।।

प्रकाशमानो भगवान्नामरूपनिर्वहितेत्यत्र प्रसिद्धिद्योतकेन नामरूपातीतत्वं विष्णोरेव युज्यते । 'अगोत्रमवर्णमचक्षुःश्रोत्रम्' 'यतो वाचो निवर्तन्ते' इत्यादिश्रुतेः । 'अनामा सोऽप्रसिद्धत्वादरूपो भूतवर्जनाद्' इति वचनान्नात्र विरोधः शङ्कनीयः । तदिदमुक्तम् – सर्वाधारत्वमित्यादिना ॥

॥ इति सत्तर्कदीपावळ्याम् आकाशाधिकरणम् ॥

'ಆಕಾಶೋ ವೈ ನಾಮಾ, ನಾಮರೂಪಯೋರ್ನಿರ್ವಹಿತಾ' ಎಂಬಲ್ಲಿ ಆಕಾಶವು ಸಕಲ ಪದಾರ್ಥಗಳಗಿಂತಲೂ ಶ್ರೇಷ್ಠವಾಗಿದೆ, ಎಂದು ಹೇಳಲಾಗಿದೆ. ಇಲ್ಲಿರುವ ಆಕಾಶಶಬ್ದದಿಂದ ಭೂತಾಕಾಶವೇ ಪ್ರತಿಪಾದ್ಯವಾಗಿದೆ ಹೊರತು ವಿಷ್ಣುವಲ್ಲ. ಏಕೆಂದರೆ 'ವೈ ನಾಮಾ' ಎಂಬ ಪ್ರಸಿದ್ಧಿದ್ಯೋತಕವಾದ ನಿಪಾತವನ್ನು ಶ್ರುತಿಯು ಹೇಳಿದೆ. ಲೋಕಪ್ರಸಿದ್ಧವಾದ ಆಕಾಶವೆಂದರೆ ಭೂತಾಕಾಶವೇ ಆಗಿದೆ ಎಂದು ಪೂರ್ವಪಕ್ಷ.

ಸಿದ್ಧಾಂತ ಹೀಗಿದೆ - 'ತೇ ಯದಂತರಾ ತದ್ ಬ್ರಹ್ಮ' ಎಂಬ ವಾಕ್ಯಶೇಷದಲ್ಲಿ ವಿಷ್ಣುವಾಚಕವಾದ ಬ್ರಹ್ಮಶಬ್ದವಿರುವುದರಿಂದ ಮಹಾವಿಷ್ಣುವೇ ಆಕಾಶಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ನಾಮರೂಪ-ರಹಿತವಾದ ಯಾವ ಪದಾರ್ಥವಿದೆಯೋ, ಅದೇ ಬ್ರಹ್ಮ ಎಂದು ಹೇಳಿದ್ದರಿಂದ ಆಕಾಶಪದದಿಂದ ನಾಮರೂಪಾತ್ಮಕವಾದ ಭೌತಿಕವಾದ ಆಕಾಶವು ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. 'ತದ್ ಬ್ರಹ್ಮ ತದಮೃತಂ ಸ ಆತ್ಮಾ' ಎಂದು ನಿರ್ದೇಶ ಮಾಡಿದ್ದರಿಂದಲೂ ಆಕಾಶಶಬ್ದದಿಂದ ಭೂತಾಕಾಶವನ್ನು ಸ್ವೀಕರಿಸಲಾಗದು. 'ವೈ ನಾಮಾ' ಎಂಬುದರಿಂದ ಸಾಕಲ್ಯೇನ ಅಪ್ರಸಿದ್ಧನಾದ್ದರಿಂದ ಭಗವಂತನು ಅನಾಮನೆಂದು ಪಾಂಚಭೌತಿಕವಿಲ್ಲದ ಕಾರಣ ಅರೂಪನೆಂದು, ವಿಷ್ಣುವನ್ನೇ ಕರೆಯಲಾಗಿದೆ. 'ಅಗೋತ್ರಮವರ್ಣಮಚಕ್ಷುಃಶ್ರೋತ್ರಮ್' 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಗಳಿಂದ ಪ್ರಾಕೃತದೇಹವಿಲ್ಲದವನು ಎಲ್ಲಾ ಶಬ್ದಗಳಿಂದಲೂ ಅತೀತನಾದವನು ಭಗವಂತನೇ ಆಗುತ್ತಾನೆ. ಆದ್ದರಿಂದ ಪರಮಾತ್ಮನೇ ಆಕಾಶಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧವಾಗುತ್ತದೆ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

तत्वप्रकाशिका –

॥ ॐ आकाशोऽर्थान्तरत्वादिव्यपदेशात् ॐ ॥

अत्र प्रयोगवशाद्गगने भगवति च साधारणस्याकानाम्नो हरौ समन्वय-प्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयति ॥ सर्वेति ॥

ಈ ಅಧಿಕರಣದಲ್ಲಿ 'ಯದೇಷ ಆಕಾಶ ಆನಂದೋ ನ ಸ್ಯಾತ್' ಆಕಾಶಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. ಇಲ್ಲಿರುವ ಆಕಾಶಶಬ್ದವು ಲೋಕಪ್ರಸಿದ್ಧಿಯಿಂದ ಭೂತಾಕಾಶದಲ್ಲಿ ಪ್ರಥಮಪಾದದಲ್ಲಿ ಹೇಳಿದ ನ್ಯಾಯದಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ. ಹೀಗೆ ಉಭಯಸಾಧಾರಣವಾದ್ದರಿಂದ, 'ಆಕಾಶ' ಎಂಬ ನಾಮಾತ್ಮಕ ಶಬ್ದವನ್ನು ದಹರ ವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಸಂಗತಿ-ಅಧ್ಯಾಯಸಂಗತಿ-ಪಾದಸಂಗತಿಗಳು ಇರುತ್ತವೆ. ಶ್ರುತಿಸಂಗತಿ ಮತ್ತು ಅಧಿಕರಣಸಂಗತಿ, ವಿಷಯ ಮೊದಲಾದವುಗಳನ್ನು 'ಸರ್ವ ಇತ್ಯಾದಿ ಭಾಷ್ಯದಿಂದ ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – द्युभ्वाद्यायतनं स्वशब्दादित्यादौ सर्वाधरत्वं विष्णोरुक्तम् । तच्छन्दोगश्रुतादाकाशस्य प्रतीयते ।**

'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಸೂತ್ರದಲ್ಲಿ ವಿಷ್ಣುವಿಗೆ ಸರ್ವಾಧಾರತ್ವವನ್ನು ಹೇಳಿದ್ದಾರೆ. ಅದೇ ಸರ್ವಾಧಾರತ್ವವನ್ನು ಬೃಹದಾರಣ್ಯಕೋಪನಿಷತ್ತು ಆಕಾಶಕ್ಕೆ ಹೇಳಿದೆ.

**तत्वप्रकाशिका – आकाशो वै नाम नामरूपयोर्निर्वहिता ते यदन्तरा तद्ब्रह्म तदमृतम्' इति । स च विष्णोरितरश्चेत्सर्वाधारत्वमन्यस्य प्रसज्येत इत्यवश्यं निर्णयः । स आकाशोऽत्र विषयः ।**

'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ ಬ್ರಹ್ಮ ತದಮೃತಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶಶಬ್ದದಿಂದ ವಿಷ್ಣುವಿಗಿಂತ ಭಿನ್ನವಾದ ಪದಾರ್ಥವು ಪ್ರತಿಪಾದ್ಯವಾದರೆ, ಅದೇ ಪದಾರ್ಥವೇ ಸರ್ವಾಧಾರವೂ ಆಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಶಬ್ದವನ್ನು ನಿರ್ವಹಿಸಬೇಕು. ಈ ಆಕಾಶಶಬ್ದದ ಸಮನ್ವಯವೇ ಈ ಅಧಿಕರಣದ ವಿಷಯವಾಗಿದೆ.

**तत्वप्रकाशिका – किं विष्णुः प्रसिद्धाकाशो वेति सन्देहः । उक्तसाधारण्यं सन्देहबीजम् इति भावः । सयक्तिकं पूर्वपक्षयति ।। वै नामेति ।।**

ಇಲ್ಲಿರುವ ಆಕಾಶಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೋ, ಅಥವಾ ಭೂತಾಕಾಶವೋ? ಎಂದು ಸಂಶಯ. ಹಿಂದೆ ಹೇಳಲ್ಪಟ್ಟ ಉಭಯಸಾಧಾರಣ್ಯವೇ ಸಂಶಯಬೀಜವಾಗಿದೆ. ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ವೈನಾಮ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

**तत्वप्रकाशिका – अयमाकाशः प्रसिद्ध एव भवेत् । आकाशशब्दस्य तत्र रुढत्वात् ।**

ಶ್ರುತಿಯಲ್ಲಿರುವ ಆಕಾಶಶಬ್ದವು ಪ್ರಸಿದ್ಧವಾದ ಭೂತಾಕಾಶವನ್ನೇ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ, ಭೂತಾಕಾಶದಲ್ಲಿ ಆಕಾಶಶಬ್ದವು ರೂಢವಾಗಿದೆ.

**तत्वप्रकाशिका – नच वाच्यमाकाशब्दस्य विष्णावपि वृत्तेः सावकाश इति । यौगिकत्वात् । योगस्यरूढेर्दौबल्यात् ।**

ಆಕಾಶಶಬ್ದವು ವಿಷ್ಣುವಿನಲ್ಲೂ ಇರುವುದರಿಂದ ಸಾವಕಾಶವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ವಿಷ್ಣುವಿನಲ್ಲಿರುವ ಆಕಾಶಶಬ್ದವು ಯೌಗಿಕವಾಗಿದೆ. ಭೂತಾಕಾಶದಲ್ಲಿರುವ ಆಕಾಶಶಬ್ದವು ರೂಢವಾಗಿದೆ. ಯೋಗಕ್ಕಿಂತಲೂ ರೂಢಿಯೇ ಪ್ರಬಲವಾದ್ದರಿಂದ ಭೂತಾಕಾಶವೇ ಆಕಾಶಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯವಾಗುತ್ತದೆ.

**तत्वप्रकाशिका – सर्वाधारत्वलिङ्गेन योगोऽप्याश्रीयतेऽति चेन्न । प्रसिद्धाकाशपरित्यागेनात्र विष्णवङ्गीकारे वै नामेत्युक्तनिपातद्वयविरोधात् ।**

'ಸರ್ವಾಧಾರತ್ವ' ಎಂಬ ಲಿಂಗದಿಂದ ಯೋಗಾರ್ಥವನ್ನೂ ಸಹ ಆಶ್ರಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಸಿದ್ಧವಾದ ಭೂತಾಕಾಶ ಎಂಬರ್ಥವನ್ನು ಬಿಟ್ಟು ವಿಷ್ಣು ಎಂಬರ್ಥವನ್ನು ಅಂಗೀಕಾರ ಮಾಡಿದರೆ 'ವೈ ನಾಮಾ' ಎಂಬಲ್ಲಿ ಹೇಳಲ್ಪಟ್ಟ ಎರಡು ನಿಪಾತಗಳ ವಿರೋಧ ಬರುತ್ತದೆ.

**तत्वप्रकाशिका – तस्योक्तार्थप्रसिद्धिद्योतकत्वात् । नहि विष्णुस्तन्निर्वहितृत्वं वा प्रसिद्धम् । अतः प्रसिद्धाकाश एवायमिति तस्य सर्वाधारत्वमिति भावः ।**

ಏಕೆಂದರೆ, ಈ ನಿಪಾತಗಳು ಭೂತಾಕಾಶ ಎಂಬ ಪ್ರಸಿದ್ಧಾರ್ಥಕ್ಕೆ ದ್ಯೋತಕವಾಗಿವೆ. ಆಕಾಶಶಬ್ದಕ್ಕೆ ವಿಷ್ಣು ಎಂಬರ್ಥವಾಗಲಿ, ಅಥವಾ ಅವನ ಸರ್ವಾಧಾರತ್ವ ಎಂಬ ಅರ್ಥವಾಗಲಿ ಪ್ರಸಿದ್ಧವಲ್ಲವಷ್ಟೆ. ಆದ್ದರಿಂದ ಪ್ರಸಿದ್ಧವಾದ ಭೂತಾಕಾಶವನ್ನೇ ಇಲ್ಲಿ ಸ್ವೀಕರಿಸಬೇಕು. ಸರ್ವಾಧಾರತ್ವವೂ ಸಹ ಭೂತಾಕಾಶದ ಧರ್ಮವೇ ಆಗಿದೆ ಎಂದು ಹೇಳಬೇಕು. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। अयमकाशो हरिरेव । अस्याकाशस्य ते यदन्तरेति नामरूपराहित्याख्य-विलक्षणार्थत्वव्यपदेशात् । 'तदब्रह्मेति' ब्रह्मत्वव्यपदेशाचेत्यर्थः । अर्थान्तरत्वमिति रूपराहित्यमादिपदेनानामत्वमिति वा ते नामरूपे अन्तरा विना वर्तत इत्यर्थः ।**

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತ' ಇತ್ಯಾದಿಯಾಗಿ. ಶ್ರುತಿಯಲ್ಲಿ ಆಕಾಶಶಬ್ದಪ್ರತಿಪಾದ್ಯನು ಶ್ರೀಹರಿಯೇ ಆಗಿದ್ದಾನೆ. ಏಕೆಂದರೆ, ಈ ಆಕಾಶಕ್ಕೆ 'ತೇ ಯದಂತರಾ' ಎಂಬುದಾಗಿ ನಾಮರೂಪಗಳ ರಾಹಿತ್ಯವೆಂಬ ವಿಲಕ್ಷಣವಾದ ಅರ್ಥವನ್ನು ಹೇಳಿದ್ದರಿಂದ. ಮತ್ತು 'ತದ್ ಬ್ರಹ್ಮ' ಎಂದು ಬ್ರಹ್ಮತ್ವವನ್ನು ಹೇಳಿದ್ದರಿಂದಲೂ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

'ಅರ್ಥಾಂತರತ್ವ' ಎಂಬ ಶಬ್ದದಿಂದ ರೂಪರಾಹಿತ್ಯವೆಂಬರ್ಥವನ್ನಾಗಲಿ, ಆದಿಪದದಿಂದ ನಾಮರಾಹಿತ್ಯವೆಂಬ ಅರ್ಥವನ್ನಾಗಲಿ ಸ್ವೀಕರಿಸಬಹುದು. ಇಂಥಹ ನಾಮರೂಪಗಳಿಲ್ಲದ ಭಗವಂತನು ಮಾತ್ರ ಇರಲು ಸಾಧ್ಯ.

**तत्वप्रकाशिका – अरूपत्वादिलिङ्गेन कुतो विष्णुत्वनिश्चय इत्यत आह – अवर्णमिति ।। रूपस्य वाच्यान्तर्भावेन प्राधान्यात् क्रमोल्लङ्घनम् ।**

ಅರೂಪತ್ವ ಮೊದಲಾದ ಲಿಂಗಗಳಿಂದ ವಿಷ್ಣುವೇ ಇಲ್ಲಿ ಆಕಾಶಶಬ್ದಪ್ರತಿಪಾದ್ಯನೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಅವರ್ಣಮ್' ಎಂಬುದರಿಂದ ಉತ್ತರಿಸಿದ್ದಾರೆ. ರೂಪವು ವಾಚ್ಯದಲ್ಲೇ ಅಂತರ್ಭೂತವಾದ್ದರಿಂದ ಪ್ರಧಾನವಾಗಿದೆ. ಆದ್ದರಿಂದ 'ನಾಮರೂಪೇ' ಎಂದು ಕ್ರಮವನ್ನು ಉಲ್ಲಂಘನೆ ಮಾಡಿದ್ದಾರೆ.

**तत्वप्रकाशिका – ननु हरेः कथमनामरूपत्वमुक्तविरोधादित्यत आह – अनामेति ।।**

ಶ್ರೀಹರಿಗೆ ನಾಮರೂಪರಾಹಿತ್ಯವು ಹೇಗೆ ಕೂಡುತ್ತದೆ? ಏಕೆಂದರೆ, ಹಿಂದೆ ಈಕ್ಷತ್ಯಧಿಕರಣದಲ್ಲಿ ನಾಮ ಹಾಗೂ ರೂಪಗಳು ಪರಮಾತ್ಮನಿಗೆ ಇರುವುದರಿಂದ ಅವಾಚ್ಯತ್ವವಿಲ್ಲವೆಂದು ಸಮರ್ಥಿಸಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ಅನಾಮಾ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – नच विष्णुपक्षे निपातद्वयविरोधः । भगवतो नामादि-निर्वहितृत्वस्यालोकप्रसिद्धत्वेऽपि 'एको दाधार भुवनानि विश्वा' इत्यादि-वेदप्रसिद्धत्वेन तदर्थत्वेनोपपत्तेः ।**

ವಿಷ್ಣುವೇ ಆಕಾಶಶಬ್ದದಿಂದ ಪ್ರತಿಪಾದ್ಯನೆಂಬ ಪಕ್ಷದಲ್ಲಿ 'ವೈ ನಾಮಾ' ಎಂಬ ಎರಡು ನಿಪಾತಗಳ ವಿರೋಧ ಬರುವುದಿಲ್ಲ. ಏಕೆಂದರೆ, ನಾಮ ಹಾಗೂ ರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯನಾಗಿದ್ದಾನೆಂಬುದು ಲೋಕಪ್ರಸಿದ್ಧವಾಗದಿದ್ದರೂ 'ಏಕೋ ದಾಧಾರ ಭುವನಾನಿ ವಿಶ್ವಾ' ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧವಾಗಿದೆ. ಹೀಗೆ ವೈದಿಕಪ್ರಸಿದ್ಧಿಯಿರುವುದರಿಂದ ನಿಪಾತಗಳು ಉಪಪನ್ನವಾಗುತ್ತವೆ.

**तत्वप्रकाशिका – अन्यथा अनामरूपत्वविरोधात् । अव(आ) काशस्यापि नाम(रूप)वत्त्वात् । अतोऽयमाकाशो विष्णुरेवेति तस्यैव सर्वाधारत्वमिति स्थितम् ।। ४१ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**

**आकाशाधिकरणम् ।।**

ಆಕಾಶಾಧಿಕರಣ (೧-೩-೧೨)

**तत्वप्रकाशिका – नच वाच्यमाकाशब्दस्य विष्णावपि वृत्तेः सावकाश इति । यौगिकत्वात् । योगस्यरूढेर्दौबल्यात् ।**

ಆಕಾಶಶಬ್ದವು ವಿಷ್ಣುವಿನಲ್ಲೂ ಇರುವುದರಿಂದ ಸಾವಕಾಶವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ವಿಷ್ಣುವಿನಲ್ಲಿರುವ ಆಕಾಶಶಬ್ದವು ಯೌಗಿಕವಾಗಿದೆ. ಭೂತಾಕಾಶದಲ್ಲಿರುವ ಆಕಾಶಶಬ್ದವು ರೂಢವಾಗಿದೆ. ಯೋಗಕ್ಕಿಂತಲೂ ರೂಢಿಯೇ ಪ್ರಬಲವಾದ್ದರಿಂದ ಭೂತಾಕಾಶವೇ ಆಕಾಶಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯವಾಗುತ್ತದೆ.

**तत्वप्रकाशिका – सर्वाधारत्वलिङ्गेन योगोऽप्याश्रीयतेऽति चेन्न । प्रसिद्धाकाशपरित्यागेनात्र विष्णवङ्गीकारे वै नामेत्युक्तनिपातद्वयविरोधात् ।**

'ಸರ್ವಾಧಾರತ್ವ' ಎಂಬ ಲಿಂಗದಿಂದ ಯೋಗಾರ್ಥವನ್ನೂ ಸಹ ಆಶ್ರಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಸಿದ್ಧವಾದ ಭೂತಾಕಾಶ ಎಂಬರ್ಥವನ್ನು ಬಿಟ್ಟು ವಿಷ್ಣು ಎಂಬರ್ಥವನ್ನು ಅಂಗೀಕಾರ ಮಾಡಿದರೆ 'ವೈ ನಾಮಾ' ಎಂಬಲ್ಲಿ ಹೇಳಲ್ಪಟ್ಟ ಎರಡು ನಿಪಾತಗಳ ವಿರೋಧ ಬರುತ್ತದೆ.

**तत्वप्रकाशिका – तस्योक्तार्थप्रसिद्धिद्योतकत्वात् । नहि विष्णुस्तन्निर्वहितृत्वं वा प्रसिद्धम् । अतः प्रसिद्धाकाश एवायमिति तस्य सर्वाधारत्वमिति भावः ।**

ಏಕೆಂದರೆ, ಈ ನಿಪಾತಗಳು ಭೂತಾಕಾಶ ಎಂಬ ಪ್ರಸಿದ್ಧಾರ್ಥಕ್ಕೆ ದ್ಯೋತಕವಾಗಿವೆ. ಆಕಾಶಶಬ್ದಕ್ಕೆ ವಿಷ್ಣು ಎಂಬರ್ಥವಾಗಲಿ, ಅಥವಾ ಅವನ ಸರ್ವಾಧಾರತ್ವ ಎಂಬ ಅರ್ಥವಾಗಲಿ ಪ್ರಸಿದ್ಧವಲ್ಲವಷ್ಟೆ. ಆದ್ದರಿಂದ ಪ್ರಸಿದ್ಧವಾದ ಭೂತಾಕಾಶವನ್ನೇ ಇಲ್ಲಿ ಸ್ವೀಕರಿಸಬೇಕು. ಸರ್ವಾಧಾರತ್ವವೂ ಸಹ ಭೂತಾಕಾಶದ ಧರ್ಮವೇ ಆಗಿದೆ ಎಂದು ಹೇಳಬೇಕು. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। अयमकाशो हरिरेव । अस्याकाशस्य ते यदन्तरेति नामरूपराहित्याख्य-विलक्षणार्थत्वव्यपदेशात् । 'तदब्रह्मेति' ब्रह्मत्वव्यपदेशाच्चेत्यर्थः । अर्थान्तरत्वमिति रूपराहित्यमादिपदेनानामत्वमिति वा ते नामरूपे अन्तरा विना वर्तत इत्यर्थः ।**

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತ' ಇತ್ಯಾದಿಯಾಗಿ. ಶ್ರುತಿಯಲ್ಲಿ ಆಕಾಶಶಬ್ದಪ್ರತಿಪಾದ್ಯನು ಶ್ರೀಹರಿಯೇ ಆಗಿದ್ದಾನೆ. ಏಕೆಂದರೆ, ಈ ಆಕಾಶಕ್ಕೆ 'ತೇ ಯದಂತರಾ' ಎಂಬುದಾಗಿ ನಾಮರೂಪಗಳ ರಾಹಿತ್ಯವೆಂಬ ವಿಲಕ್ಷಣವಾದ ಅರ್ಥವನ್ನು ಹೇಳಿದ್ದರಿಂದ. ಮತ್ತು 'ತದ್ ಬ್ರಹ್ಮ' ಎಂದು ಬ್ರಹ್ಮತ್ವವನ್ನು ಹೇಳಿದ್ದರಿಂದಲೂ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

'ಅರ್ಥಾಂತರತ್ವ' ಎಂಬ ಶಬ್ದದಿಂದ ರೂಪರಾಹಿತ್ಯವೆಂಬರ್ಥವನ್ನಾಗಲಿ, ಆದಿಪದದಿಂದ ನಾಮರಾಹಿತ್ಯವೆಂಬ ಅರ್ಥವನ್ನಾಗಲಿ ಸ್ವೀಕರಿಸಬಹುದು. ಇಂಥಹ ನಾಮರೂಪಗಳಿಲ್ಲದೆ ಭಗವಂತನು ಮಾತ್ರ ಇರಲು ಸಾಧ್ಯ.

**तत्वप्रकाशिका – अरूपत्वादिलिङ्गेन कुतो विष्णुत्वनिश्चय इत्यत आह – अवर्णमिति ।। रूपस्य वाच्यान्तर्भावेन प्राधान्यात् क्रमोल्लङ्घनम् ।**

ಅರೂಪತ್ವ ಮೊದಲಾದ ಲಿಂಗಗಳಿಂದ ವಿಷ್ಣುವೇ ಇಲ್ಲಿ ಆಕಾಶಶಬ್ದಪ್ರತಿಪಾದ್ಯನೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಅವರ್ಣಮ್' ಎಂಬುದರಿಂದ ಉತ್ತರಿಸಿದ್ದಾರೆ. ರೂಪವು ವಾಚ್ಯದಲ್ಲೇ ಅಂತರ್ಭೂತವಾದ್ದರಿಂದ ಪ್ರಧಾನವಾಗಿದೆ. ಆದ್ದರಿಂದ 'ನಾಮರೂಪೇ' ಎಂದು ಕ್ರಮವನ್ನು ಉಲ್ಲಂಘನೆ ಮಾಡಿದ್ದಾರೆ.

**तत्वप्रकाशिका – ननु हरेः कथमनामरूपत्वमुक्तविरोधादित्यत आह – अनामेति ।।**

ಶ್ರೀಹರಿಗೆ ನಾಮರೂಪರಾಹಿತ್ಯವು ಹೇಗೆ ಕೂಡುತ್ತದೆ? ಏಕೆಂದರೆ, ಹಿಂದೆ ಈಕ್ಷತ್ಯಧಿಕರಣದಲ್ಲಿ ನಾಮ ಹಾಗೂ ರೂಪಗಳು ಪರಮಾತ್ಮನಿಗೆ ಇರುವುದರಿಂದ ಅವಾಚ್ಯತ್ವವಿಲ್ಲವೆಂದು ಸಮರ್ಥಿಸಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ಅನಾಮಾ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – नच विष्णुपक्षे निपातद्वयविरोधः । भगवतो नामादि-निर्वहितृत्वस्यालोकप्रसिद्धत्वेऽपि 'एको दाधार भुवनानि विश्वा' इत्यादि-वेदप्रसिद्धत्वेन तदर्थत्वेनोपपत्तेः ।**

ವಿಷ್ಣುವೇ ಆಕಾಶಶಬ್ದದಿಂದ ಪ್ರತಿಪಾದ್ಯನೆಂಬ ಪಕ್ಷದಲ್ಲಿ 'ವೈ ನಾಮಾ' ಎಂಬ ಎರಡು ನಿಪಾತಗಳ ವಿರೋಧ ಬರುವುದಿಲ್ಲ. ಏಕೆಂದರೆ, ನಾಮ ಹಾಗೂ ರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯನಾಗಿದ್ದಾನೆಂಬುದು ಲೋಕಪ್ರಸಿದ್ಧವಾಗದಿದ್ದರೂ 'ಏಕೋ ದಾಧಾರ ಭುವನಾನಿ ವಿಶ್ವಾ' ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧವಾಗಿದೆ. ಹೀಗೆ ವೈದಿಕಪ್ರಸಿದ್ಧಿಯಿರುವುದರಿಂದ ನಿಪಾತಗಳು ಉಪಪನ್ನವಾಗುತ್ತವೆ.

**तत्वप्रकाशिका – अन्यथा अनामरूपत्वविरोधात् । अव(आ) काशस्यापि नाम(रूप)वत्त्वात् । अतोऽयमाकाशो विष्णुरेवेति तस्यैव सर्वाधारत्वमिति स्थितम् ।। ४१ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**

**आकाशाधिकरणम् ।।**

ಆಕಾಶಾಧಿಕರಣ (೧-೩-೧೨)

ಇಲ್ಲದಿದ್ದರೆ, 'ತೇ ಯದಂತರಾ' ಎಂಬ ವಾಕ್ಯದಲ್ಲಿ ಅನಾಮರೂಪತ್ವದ ವಿರೋಧ ಬರುತ್ತದೆ. ಏಕೆಂದರೆ, ಭೂತಾಕಾಶವು ನಾಮ ಹಾಗೂ ರೂಪಗಳಿಂದ ಯುಕ್ತವೇ ಆಗಿದೆ. ಹಾಗಾಗಿ, ಛಾಂದೋಗ್ಯದಲ್ಲಿರುವ ಆಕಾಶಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. 'ಸರ್ವಾಧಾರತ್ವ' ಎಂಬ ಧರ್ಮವೂ ಸಹ ಅವನಲ್ಲೇ ಯುಕ್ತವಾಗುತ್ತದೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು

**भावदीपः –**

**।। ॐ आकाशोऽर्थान्तरत्वादिव्यपदेशात् ॐ ।।**

न्यायविवरणेऽनुक्तेर्भाष्यपर्यालोचनया लब्धं साधारण्यबीजमाह – **प्रयोगेति** ।। 'आकाशस्तल्लिङ्गाद्' इत्याकाशशब्दस्य विष्णौ प्रयोगस्य दर्शितत्वाद् गगने च प्रयोगस्य प्रसिद्धत्वादित्यर्थः ।

'ಆಕಾಶೋऽರ್ಥಾಂತರತ್ವಾದಿವ್ಯಪದೇಶಾತ್' ಎಂಬ ಸೂತ್ರದಿಂದ ಆಕಾಶಾಧಿಕರಣವು ಪ್ರಾರಂಭವಾಗಿದೆ. ನ್ಯಾಯವಿವರಣದಲ್ಲಿ ಉಭಯಸಾಧಾರಣ್ಯವನ್ನು ಆಕಾಶಶಬ್ದಕ್ಕೆ ತೋರಿಸಿಲ್ಲ. ಆದ್ದರಿಂದ, ಭಾಷ್ಯದಿಂದಲೇ ಉಭಯಸಾಧಾರಣ್ಯವು ಅರ್ಥಾತ್ ತಿಳಿಯುತ್ತಿದೆ ಎಂದು ಸಾಧಾರಣ್ಯಕ್ಕೆ ಕಾರಣವನ್ನು 'ಪ್ರಯೋಗವಶಾತ್' ಎಂಬುದರಿಂದ ಹೇಳಿದ್ದಾರೆ. 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಆಕಾಶಶಬ್ದದ ಪ್ರಯೋಗವನ್ನು ವಿಷ್ಣುವಿನಲ್ಲಿ ತೋರಿಸಿದ್ದಾರೆ. ಲೋಕದಲ್ಲಿ ಆಕಾಶಶಬ್ದದ ಪ್ರಯೋಗವು ಅವ್ಯಾಕೃತಾಕಾಶದಲ್ಲೇ ಇರುತ್ತದೆ.

**भावदीपः –** यद्वाऽत्र प्रयुक्तवैनामेति निपातद्योतितप्रसिद्धेर्व्यावर्त्यत्वेनाप्रसिद्ध-ब्रह्मण्याकाशशब्दप्रयोगस्य पूर्वपक्षिणाऽङ्गीकृतत्वादित्यर्थः । सङ्गत्यर्थतया भाष्यं व्याचष्टे – **द्युभ्वादीति** ।।

ಅಥವಾ, ಶ್ರುತಿಯಲ್ಲಿ 'ವೈ ನಾಮ' ಎಂಬ ನಿಪಾತಗಳನ್ನು ಪ್ರಯೋಗಿಸಿದ್ದರಿಂದ ಈ ನಿಪಾತಗಳಿಂದ ತಿಳಿಯುವ ಪ್ರಸಿದ್ಧಿಯನ್ನು ವ್ಯಾವೃತ್ತಿ ಮಾಡಬೇಕು. ಈ ನಿಪಾತಗಳಿಂದ ತಿಳಿಯುವ ಪ್ರಸಿದ್ಧಿಯು ಅಪ್ರಸಿದ್ಧವಾದ ಆಕಾಶಶಬ್ದದ ಪ್ರಯೋಗವನ್ನು ಬ್ರಹ್ಮನಲ್ಲಿ ವ್ಯಾವೃತ್ತಿ ಮಾಡುತ್ತದೆಂದು ಪೂರ್ವಪಕ್ಷಿಯು ಅಂಗೀಕರಿಸಿದ್ದಾನೆಂದರ್ಥ. ಸಂಗತಿಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು ಹೊರಟಿದ್ದಾರೆ, 'ದ್ಯುಭ್ವಾದಿ' ಇತ್ಯಾದಿಯಾಗಿ.

**भावदीपः –** 'अक्षरमम्बरान्तधृतेः' 'दहर उत्तरेभ्यः' इत्यादावित्यादिपदार्थः । तच्चेत्यादि व्याचष्टे – **तच्छन्दोगेति** ।। अष्टमान्त । यद्यपि नामेति शब्दप्रपञ्चोक्तावपि रूपपदेनात्र 'अवर्णम्' इत्याद्युक्त्या वर्णविशेषोक्तेर्न सर्वाधारत्वलाभः । तथाप्यस्य वाच्यरूपार्थप्रपञ्चमात्रोपलक्षणमिति भावः ।

'ಆಕ್ಷರಮಂಬರಾಂತಧೃತೇಃ' 'ದಹರ ಉತ್ತರೇಭ್ಯಃ' ಇತ್ಯಾದಿಗಳನ್ನು 'ದ್ಯುಭ್ವಾದಿ' ಎಂಬಲ್ಲಿರುವ ಆದಿಪದದಿಂದ ವಿವಕ್ಷಿಸಬೇಕು. 'ತಚ್ಚ' ಇತ್ಯಾದಿ ಭಾಷ್ಯವನ್ನು 'ತಚ್ಛಂದೋಗಾ ವಾ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತಚ್ಛಂದೋಗ' ಎಂದರೆ ಅಷ್ಟಮಾಧ್ಯಾಯದ ಕೊನೆಯಲ್ಲಿ ಎಂದರ್ಥ.

ವಾಸ್ತವಿಕವಾಗಿ ಶ್ರುತಿಯಲ್ಲಿ 'ನಾಮ' ಎಂಬ ಪದದಿಂದ ಶಬ್ದಪ್ರಪಂಚವನ್ನೂ ಹೇಳಿದ್ದಾರೆ. ಆದರೆ ರೂಪಪದದಿಂದ ಅರ್ಥಪ್ರಪಂಚವನ್ನು ವಿವಕ್ಷಿಸಲಾಗದು. ಏಕೆಂದರೆ, 'ಅವರ್ಣಂ' ಇತ್ಯಾದಿಯಾಗಿ ಹೇಳಿದ್ದರಿಂದ ವರ್ಣವಿಶೇಷವನ್ನಷ್ಟೇ ವಿವಕ್ಷಿಸಬೇಕು. ಇದರಿಂದ ಸರ್ವಾಧಾರತ್ವವನ್ನು ತಿಳಿಸಿದಂತಾಗುವುದಿಲ್ಲ. ಆದರೂ ಸಹ, ರೂಪಪದದಿಂದ ಯಾವ ರೂಪಪ್ರಪಂಚವು ತಿಳಿಯುತ್ತಿದೆಯೋ, ಇದರಿಂದ ಉಪಲಕ್ಷಣಯಾ ಸಕಲ ಅರ್ಥಪ್ರಪಂಚವನ್ನು ವಿವಕ್ಷಿಸಬೇಕು.

**भावदीपः** – एतेन इत्यत्रेत्यद् व्याख्यातम् । रूपेत्यर्थमात्रोपलक्षणम् । नामरूपयोः शब्दार्थप्रपञ्चयोः निर्वहिता निर्वोढा आश्रय इत्यर्थः । ते निर्वाह्यतया प्रकृते प्राकृतनामरूपे अन्तरा विना तद्रहितमिति यावत् । साकल्येन नामावाच्यं प्राकृतरूपरहितं च यद्वर्तत इति फलितार्थः ।

ಭಾಷ್ಯದಲ್ಲಿ 'ರೂಪ' ಎಂಬ ಪದವು ಅರ್ಥಮಾತ್ರಕ್ಕೆ ಉಪಲಕ್ಷಣವಾಗಿದೆ ಎಂದು 'ನಾಮರೂಪಯೋಃ' ಎಂದರೆ ಶಬ್ದ ಹಾಗೂ ಅರ್ಥಪ್ರಪಂಚಗಳಿಗೆ ನಿರ್ವಹಿತಾ = ಆಶ್ರಯವಾಗಿದೆ ಎಂಬರ್ಥವನ್ನು ವಿವಕ್ಷಿಸಬೇಕು. 'ತೇ' ಎಂದರೆ ನಿರ್ವಾಹ್ಯತಯಾ ಪ್ರಕೃತವಾದ ಪ್ರಾಕೃತ ನಾಮರೂಪಗಳನ್ನು ಬಿಟ್ಟು ಇರುವುದಿಲ್ಲ ಎಂದರ್ಥ. ಸಾಕಲ್ಯೇನ ಶಬ್ದಾವಾಚ್ಯವಾದ ಪ್ರಾಕೃತರೂಪರಹಿತವಾದ ಯಾವ ವಸ್ತುವಿದೆಯೋ, ಅಂತಹ ಬ್ರಹ್ಮ ಎಂಬರ್ಥವು ಫಲಿತಾರ್ಥವಾಯಿತು.

**भावदीपः** – वै नामेत्यादिभाष्यभावमाह – **स चेति** ।। वक्ष्यमाणदिशेति भावः। उक्तमित्यन्तस्य तात्पर्यम् – **सर्वेति** ।। इति सङ्गतिसम्भवादित्यर्थः । पूर्वपक्षादि-परत्वेनापि व्याख्यातुं पूर्वपक्षतद्युक्तिकथनपरांशमवतार्यप्रसिद्धाकाशश्चाङ्गीकर्तव्य इति प्रतिज्ञातार्थमाह – **सयुक्तिकमित्यादिना** ।।

'ವೈ ನಾಮ' ಇತ್ಯಾದಿ ಭಾಷ್ಯದ ಅಭಿಪ್ರಾಯವನ್ನು 'ಸ ಚ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. ಮುಂದೆ ಪೂರ್ವಪಕ್ಷದಲ್ಲಿ ಹೇಳುವಂತೆ ವಿಷ್ಣುವಿಗಿಂತ ಇತರವಾದದ್ದು ಆಕಾಶಶಬ್ದವಾಚ್ಯವಾದಲ್ಲಿ ಎಂದರ್ಥ. 'ಉಕ್ತಂ' ಎಂಬಲ್ಲಿಯ ತನಕ ಇರುವ ಭಾಷ್ಯದ ತಾತ್ಪರ್ಯವನ್ನು 'ಸರ್ವಾಧಾರತ್ವಂ' ಎಂಬುದರಿಂದ ತೋರಿಸುತ್ತಿದ್ದಾರೆ. 'ಇತಿ' ಎಂದರೆ ಹೀಗೆ ಸಂಗತಿಯು ಉಪಪನ್ನವಾಗುವುದರಿಂದ ಎಂದರ್ಥ. ಪೂರ್ವಪಕ್ಷ-ಪರವಾಗಿಯೂ ಕೂಡ ಭಾಷ್ಯವನ್ನು ವ್ಯಾಖ್ಯಾನ ಮಾಡಲು ಪೂರ್ವಪಕ್ಷ ಹಾಗೂ ಪೂರ್ವಪಕ್ಷಯುಕ್ತಿ ಕಥನಪರವಾಗಿ ಅವತಾರಿಕೆ ನೀಡಿ ಪ್ರಸಿದ್ಧವಾದ ಆಕಾಶವನ್ನೇ ಆಕಾಶಶಬ್ದವೆಂದು ಒಪ್ಪಬೇಕು ಎಂಬ ಪ್ರತಿಜ್ಞಾರ್ಥವನ್ನು 'ಸಯುಕ್ತಿಕಂ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ.

**भावदीपः** – प्रसिद्धपदसूचितां युक्तिमाह – **आकाशेति** ।। पूर्वेण गतार्थत्वमाशङ्कते – **नचेति** ।। **विष्णावपीति** ।। 'आकाशस्तल्लिङ्गाद्' इत्युक्तन्यायादिति भावः ।। **यौगिकत्वादिति** ।। 'यच्छब्दा योगवृत्तयः' इति सङ्क्षेपभाष्योक्तेः । अन्यथा ब्रह्मपदोक्तगुणपूर्त्यसिद्धेस्तदर्थत्वात् समन्चयस्येति भावः ।।

ಪ್ರಸಿದ್ಧಪದದಿಂದ ಸೂಚಿತವಾದ ಯುಕ್ತಿಯನ್ನು 'ಆಕಾಶ' ಎಂಬುದರಿಂದ ಹೇಳುತ್ತಿದ್ದಾರೆ. ಹಿಂದಿನ ಅಧಿಕರಣದಿಂದ ಗತಾರ್ಥತ್ವವನ್ನು 'ನಚ' ಎಂಬುದರಿಂದ ಆಶಂಕಿಸಿದ್ದಾರೆ. 'ವಿಷ್ಣಾವಪಿ' ಎಂದರೆ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ವಿಷ್ಣುವಿನಲ್ಲಿಯೂ ಆಕಾಶಶಬ್ದವು ಬರುತ್ತದೆ ಎಂದರ್ಥ. 'ಯೌಗಿಕತ್ವಾತ್' ಎಂದರೆ 'ಯಚ್ಛಬ್ದಾಃ ಯೋಗವೃತ್ತಯಃ' ಎಂದು ಅಣುಭಾಷ್ಯದಲ್ಲಿ ಹೇಳಿದಂತೆ, ಆಕಾಶಶಬ್ದವು ವಿಷ್ಣುವಿನಲ್ಲಿ ಯೌಗಿಕವಾಗಿ ಬರುತ್ತದೆ ಎಂದರ್ಥ. ಹೀಗೊಪ್ಪದಿದ್ದರೆ, ಬ್ರಹ್ಮಪದದಿಂದ ಯೌಗಿಕಾರ್ಥವನ್ನು ಒಪ್ಪಿ, ಗುಣಪೂರ್ಣತ್ವವೆಂಬ ಅರ್ಥವನ್ನು ಒಪ್ಪಿದ್ದು ಕೂಡ ತಪ್ಪಾಗುತ್ತದೆ. ಗುಣಪೂರ್ಣತ್ವದ ಸಿದ್ಧಿಗಾಗಿ ಸಮನ್ವಯವನ್ನು ಮಾಡಲಾಗಿದೆಯಷ್ಟೆ.

**भावदीपः** – **दौर्बल्यादिति** ।। तथाच प्रबलरूढित्यागेन यौगिकग्रहणे निरवकाशानन्तत्वादिलिङ्गाद् 'आकाश इति होवाच' इत्यादौ यौगिकस्यापि विष्णोर्ग्रहणेऽपीह कारणाभावादिति भावः ।

ವಿಷ್ಣುವಿನಲ್ಲಿ ಹೇಳುವಂತಹ ಆಕಾಶಶಬ್ದದ ಯೌಗಿಕಾರ್ಥಕ್ಕಿಂತಲೂ ರೂಢಿಯೇ ಪ್ರಬಲವಾಗಿದೆ. ಆದ್ದರಿಂದ, ಪ್ರಬಲವಾದ ರೂಢಿಯನ್ನು ಬಿಟ್ಟು ಯೌಗಿಕವಾದ ವಿಷ್ಣುಪರತ್ವವನ್ನು ಒಪ್ಪಬಾರದು. ನಿರವಕಾಶವಾದ ಅನಂತತ್ವಾದಿ ಲಿಂಗಗಳ ಬಲದಿಂದ 'ಆಕಾಶ ಇತಿ ಹೋವಾಚ' ಎಂಬುದರಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆದರೂ ಕೂಡ, ಪ್ರಕೃತ, ಇಲ್ಲಿಯೂ ಹಾಗೆಯೇ ಯೌಗಿಕಾರ್ಥವನ್ನು ಸ್ವೀಕರಿಸಲು ಯಾವುದೇ ಕಾರಣಗಳಿರುವುದಿಲ್ಲ.

**भावदीपः** – कारणमप्यत्राऽशङ्कते – **सर्वेति** ।। तथाच 'आकाशस्तल्लिङ्गाद्' इत्यनेनैव गतार्थमिदमिति भावः । एतदुपमर्दकतयाऽधिकां शङ्कां वक्तुं वै नामेति प्रसिद्धिद्योतनिपातद्वयं रूढित्यागेनोक्तयौगिकार्थस्वीकारविरोधीति न्यायविवरणं योजयित्वा वै नामेति भाष्यं योजयति – **प्रसिद्धेति** ।।

ಯೌಗಿಕಾರ್ಥವನ್ನು ಸ್ವೀಕರಿಸಲು ಕಾರಣವನ್ನು ಆಶಂಕಿಸುತ್ತಿದ್ದಾರೆ, 'ಸರ್ವಾಧಾರಸ್ಯತ್ವಲಿಂಗೇನ' ಎಂಬುದರಿಂದ. ಆದ್ದರಿಂದ, 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಿಂದಲೇ ಈ ಅಧಿಕರಣದ ಪ್ರಮೇಯವು ಗತಾರ್ಥವಾಗಿದೆ ಎಂದು ಅಭಿಪ್ರಾಯ. ಅಧಿಕಾಶಂಕೆಯನ್ನು ತೋರಿಸುವುದಕ್ಕಾಗಿ 'ವೈ ನಾಮ' ಎಂಬೆರಡು ಪ್ರಸಿದ್ಧಿ ದ್ಯೋತಕವಾದ ನಿಪಾತಗಳು ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥದ ಸ್ವೀಕಾರಕ್ಕೆ ವಿರೋಧಿ-

ಗಳಾಗಿವೆ. ಹೀಗೆ ನ್ಯಾಯವಿವರಣವನ್ನು ಯೋಜನೆ ಮಾಡಿ 'ವೈ ನಾಮ' ಎಂಬ ಭಾಷ್ಯವನ್ನು ಯೋಜನೆ ಮಾಡುತ್ತಿದ್ದಾರೆ 'ಪ್ರಸಿದ್ಧ' ಎಂಬುದರಿಂದ.

**भावदीपः – प्रसिद्धाकाशश्चाङ्गीकर्तव्य इत्युक्तिलब्धमेतदापादकम् ।** तस्येत्यादि तु भाष्ययोजना । तद्धि निपातद्वयम् । य आकाशः प्रसिद्धः स नामरूपनिर्वहितेत्युद्देशेन वाऽन्वितं स्यात् । य आकाशः स नामरूपनिर्वहिता वै नाम तस्य नामरूपनिर्वोढृत्वं प्रसिद्धमिति विधेयेन वाऽन्वितं स्याद् द्वेधाऽपि न विष्णौ युक्तमित्याह – **नहीति ।।**

'ಪ್ರಸಿದ್ಧಾಕಾಶಶ್ಚ ಅಂಗೀಕರ್ತವ್ಯಃ' ಎಂಬುದು ಆಪಾದಕವಾಗಿದೆ. 'ತಸ್ಯ ಸರ್ವಾಧಾರತ್ವಂ' ಎಂಬುದನ್ನು ಭಾಷ್ಯದ ಜೊತೆಗೆ ಯೋಜನೆ ಮಾಡಿಕೊಳ್ಳಬೇಕು. 'ತದ್ಧಿ' ಎಂದರೆ ಎರಡು ನಿಪಾತಗಳು ಎಂದರ್ಥ.ಯಾವ ಪ್ರಸಿದ್ಧವಾದ ಆಕಾಶವಿದೆಯೋ, ಅದು ನಾಮರೂಪನಿರ್ವಾಹಕವಾಗಿದೆ ಎಂದು ಉದ್ದೇಶದ ಜೊತೆಗೆ ಅನ್ವಯವನ್ನು ಹೊಂದುತ್ತದೆ. ಅಥವಾ, ಯಾವ ಆಕಾಶವಿದೆಯೋ, ಅದು ನಾಮರೂಪಗಳಿಗೆ ನಿರ್ವಾಹಕವಾಗಿದೆ. ಇದು ಪ್ರಸಿದ್ಧವಷ್ಟೆ ಎಂದೂ ಕೂಡ ಅನ್ವಯ ಮಾಡಬಹುದು. ಹೀಗೆ, ಎರಡು ಬಗೆಯ ಅನ್ವಯಗಳೂ ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ ಎಂದು 'ನಹಿ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ.

**भावदीपः –** य आकाशो विष्णुः प्रसिद्ध इति वा य आकाशशब्दितो विष्णुस्स नामरूपयोर्निर्वहिता प्रसिद्ध इति वाऽर्थः स्यात् । नहि विष्णुर्वा तस्य निर्वोढृत्वं वा लोकतः प्रसिद्धम् । औपनिषदत्वात् तस्येति भावः । श्रौतपदानुकरण-रूपत्वान्निर्वहितृत्वमित्युक्तम् । फलोक्त्योपसंहरति – **अत इति ।।**

'ನಹಿ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ. ವಿಷ್ಣು ಆಕಾಶಶಬ್ದಪ್ರತಿಪಾದ್ಯನೆಂಬುದಾಗಲಿ, ನಾಮರೂಪಗಳಿಗೆ ನಿರ್ವಾಹಕನಾಗಿದ್ದಾನೆಂಬುದಾಗಲಿ ಲೋಕದಿಂದ ಪ್ರಸಿದ್ಧವಾಗಿಲ್ಲ. ಏಕೆಂದರೆ, ಅವನು ಕೇವಲ ಉಪನಿಷತ್ತುಗಳಿಂದಷ್ಟೇ ತಿಳಿಯುವವನಾಗಿದ್ದಾನೆ ಎಂದು ಅಭಿಪ್ರಾಯ. ಶ್ರುತಿಯಲ್ಲಿರುವ ಪದವನ್ನು ಅನುಸರಿಸಲು 'ನಿರ್ವಹಿತೃತ್ವಂ' ಎಂದು ಹೇಳಿದ್ದಾರೆ. ಪೂರ್ವಪಕ್ಷದ ಫಲವನ್ನು ಹೇಳುತ್ತಾ ಉಪಸಂಹಾರ ಮಾಡಿದ್ದಾರೆ, 'ಅತಃ' ಎಂಬುದಾಗಿ.

**भावदीपः –** वै नामेति प्रसिद्धोपदेशादित्यर्थः । उक्तमित्यन्तवाक्यस्य तात्पर्यम् – **तस्येति ।।** आकाङ्क्षाक्रमेण भाष्यं व्याचष्टे – **अयमाकाश इति ।।** आदिपदार्थमाह – **तद् ब्रह्मेति ।।**

'ವೈ ನಾಮ' ಎಂಬ ಪ್ರಸಿದ್ಧೋಪದೇಶವಿರುವುದರಿಂದ ಎಂಬುದು 'ಅತಃ' ಎಂಬ ಪದದ ಅರ್ಥ. 'ಉಕ್ತಂ' ಎಂಬಲ್ಲಿಯ ತನಕ ಇರುವ ಭಾಷ್ಯದ ತಾತ್ಪರ್ಯವನ್ನು 'ತಚ್ಚ' ಎಂಬುದಾಗಿ ಹೇಳಿದ್ದಾರೆ. ಆಕಾಂಕ್ಷಾಕ್ರಮದಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡಿದ್ದಾರೆ, 'ಆಯಮಾಕಾಶಃ' ಇತ್ಯಾದಿಯಾಗಿ. ಆದಿಪದದ ಅರ್ಥವನ್ನೇ 'ತದ್ ಬ್ರಹ್ಮ' ಎಂದಿದ್ದಾರೆ.

**भावदीपः** – पूर्वमर्थान्तरत्वपदेन नामरूपोभयराहित्वं विवक्षित्वा आदिपदेन ब्रह्मत्वं गृह्यत इति मत्वा व्याख्यातम् । इदानीं प्रकारान्तरेण व्याचष्टे – **अर्थान्तरत्वमिति** ।। अस्मिन् पक्षे भाष्ये तद् ब्रह्मेत्यंशोक्ति सौत्रलिङ्गोक्तेरुप-लक्षणत्वाभिप्राया । 'कम्पनाद्' इत्यत्र तदविहाय लिङ्गान्तरस्यापीत्युक्त्वा एतदन्यत्राप्यनुसन्धेयमित्युक्तत्वादिति भावः ।।

ಸೂತ್ರದಲ್ಲಿರುವ ಅರ್ಥಾಂತರಪದಕ್ಕೆ ನಾಮರೂಪಉಭಯರಾಹಿತ್ಯ ಎಂಬ ಅರ್ಥವನ್ನು ವಿವಕ್ಷಿಸಿ, ಆದಿಪದದಿಂದ ಬ್ರಹ್ಮನೆಂಬರ್ಥವನ್ನು ವಿವಕ್ಷಿಸಿ ವ್ಯಾಖ್ಯಾನ ಮಾಡಲಾಯಿತು. ಈಗ ಮತ್ತೊಂದು ಪ್ರಕಾರದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅರ್ಥಾಂತರತ್ವಂ' ಇತ್ಯಾದಿಯಾಗಿ. ಈ ಪಕ್ಷದಲ್ಲಿ, 'ತದ್ ಬ್ರಹ್ಮ' ಎಂಬ ಅಂಶವು ಭಾಷ್ಯದಲ್ಲಿ, ಸೂತ್ರದಲ್ಲಿ ಹೇಳಲ್ಪಟ್ಟ ಲಿಂಗಶಬ್ದದಿಂದ ಉಪಲಕ್ಷಣಯಾ ವಿವಕ್ಷಿಸಲಾಗಿದೆ. ಏಕೆಂದರೆ, ಕಂಪನಾಧಿಕರಣದಲ್ಲಿ 'ತದವಿಹಾಯ ಲಿಂಗಾಂತರಸ್ಯಾಪಿ' ಎಂದು ಹೇಳಿ, 'ಏತದನ್ಯತ್ರಾಪ್ಯನುಸಂಧೇಯಂ' ಎಂದು ಹೇಳಿದ್ದರಿಂದ, ಇಲ್ಲಿಯೂ ಕೂಡ ಸೂತ್ರದಲ್ಲಿರುವ ಲಿಂಗವು ಉಪಲಕ್ಷಣವಾಗಿದೆ ಎಂದು ತಿಳಿಯಬೇಕು.

**भावदीपः** – इत्यत आहेति ।। **अवर्णमिति** ।। श्रुतिरदृश्यत्वनये ब्रह्मपरेति सिद्धम् । 'यतो वाचो' इति तु वाक्यमानन्दमय इति भावः । नन्वादिपदेनानामत्वं ग्राह्यमिति व्याख्याने सूत्रभाष्ययोरनामत्वादिव्यपदेशादिति वाच्यम् । तत्क्रमेणैव च वैष्णवता व्युत्पाद्या । नामरूपयोरिति ते इति च श्रौतक्रमानुरोधात् शब्दलाघवाच्चेत्यत आह – **रूपस्येति** ।। नाम्नो वाच्यसापेक्षत्वादप्राधान्यमिति भावः ।।

'ಅವರ್ಣಂ' ಇತ್ಯಾದಿ ಶ್ರುತಿಯು ಬ್ರಹ್ಮಪರವಾಗಿದೆ ಎಂದು ಅದೃಶ್ಯತ್ವಾಧಿಕರಣದಲ್ಲೇ ಪ್ರತಿಪಾದಿಸಿದ್ದಾಗಿದೆ. 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಾದರೋ ವಿಷ್ಣುಪರವಾಗಿದೆ ಎಂದು ಆನಂದಮಯಾಧಿ-ಕರಣದಲ್ಲಿ ವ್ಯಾಖ್ಯಾನಿಸಲಾಗಿದೆ. ಆದಿಪದದಿಂದ ನಾಮರಾಹಿತ್ಯವನ್ನು ವಿವಕ್ಷಿಸುವುದಾದಲ್ಲಿ ಸೂತ್ರ ಹಾಗೂ ಭಾಷ್ಯಗಳಲ್ಲಿಯೂ ಕೂಡ 'ಅನಾಮತ್ವಾದಿವ್ಯಪದೇಶಾತ್' ಎಂದು ಹೇಳಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಕ್ರಮವನ್ನು ಅನುಸರಿಸಿಯೇ ಸೂತ್ರ ಹಾಗೂ ಭಾಷ್ಯಗಳನ್ನು ವ್ಯಾಖ್ಯಾನ ಮಾಡಬೇಕು. ಶಬ್ದವು ವಾಚ್ಯವಾದ ಅರ್ಥವನ್ನು ಅಪೇಕ್ಷೆ ಪಡುವುದರಿಂದ ಅಪ್ರಧಾನವಾಗಿದೆ ಎಂಬ ಅಭಿಪ್ರಾಯದಿಂದ 'ರೂಪಸ್ಯ' ಎಂಬ ವಾಕ್ಯವು ಹೊರಟಿದೆ.

**भावदीपः** – **उक्तेति** ।। 'ईक्षतेर्नाशब्दम्' इत्यत्र वाच्यत्वोक्त्या नामवत्त्वस्य 'रूपोपन्यासाद्' इत्यत्र रुग्मवर्णमिति रूपस्य चोक्तेस्तद्विरोधादित्यर्थः । अप्रसिद्धत्वात् साकल्येनागोचरत्वात् ।। **भूतेति** ।। भौतिकरूपराहित्यादित्यर्थः ।

'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ ಬ್ರಹ್ಮನಲ್ಲಿ ಶಬ್ದವಾಚ್ಯನೆಂದು ಹೇಳಿದ್ದರಿಂದ, ನಾಮವತ್ತ್ವವು ಸಿದ್ಧವಾಯಿತು. 'ರೂಪೋಪನ್ಯಾಸಾಚ್ಚ' ಎಂಬ ಸೂತ್ರದಲ್ಲಿ ಬ್ರಹ್ಮನಲ್ಲಿ ರುಗ್ಮವರ್ಣವನ್ನು ಹೇಳಿದ್ದರಿಂದ

ರೂಪವತ್ತ್ವವು ಕೂಡ ಸಿದ್ಧವಾಯಿತು. ಆ ಸೂತ್ರಗಳ ವಿರೋಧವು ಕೂಡ ಪ್ರಕೃತ ಪೂರ್ವಪಕ್ಷಿಗಳಿಗೆ ಬರುತ್ತದೆ ಎಂದು ಅಭಿಪ್ರಾಯ. 'ಅಪ್ರಸಿದ್ಧತ್ವಾತ್' ಎಂದರೆ ಸಾಕಲ್ಯೇನ ತಿಳಿಯದ ಕಾರಣ ಎಂದು ಅರ್ಥ. 'ಭೂತ' ಎಂದರೆ ಭೌತಿಕ ರೂಪವಿಲ್ಲದ ಕಾರಣ ಎಂದು ಅರ್ಥ.

**भावदीपः** – वै नामेति निर्वहितृत्वे श्रुत्यादिप्रसिद्धिबाहुल्यमिति न्यायविवरणोक्तमत्र योजयितुमाह – **नचेति** ।। 'अन्नाद्ध्येव खल्विमानि भूतानि जायन्ते' इत्यादौ प्रसिद्धेर्विधेयान्वयदर्शनाद् इहापि तथेति नामरूपनिर्वहितृत्वस्येत्युक्तम्। साधुत्वं प्राग्वत् ।।

'ವೈ ನಾಮೇತಿ ನಿರ್ವಹಿತೃತ್ವೇ ಶ್ರುತ್ಯಾದಿಪ್ರಸಿದ್ಧಿಬಾಹುಲ್ಯಮ್' ಎಂಬ ನ್ಯಾಯವಿವರಣದ ಮಾತನ್ನು 'ನಚ' ಇತ್ಯಾದಿ ವಾಕ್ಯದಿಂದ ಯೋಜನೆ ಮಾಡುತ್ತಿದ್ದಾರೆ. 'ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಯಲ್ಲಿ ಪ್ರಸಿದ್ಧವಾದ್ದರಿಂದ ವಿಧೇಯದಲ್ಲಿ ಅನ್ವಯ ಮಾಡಿದ್ದು ಕಂಡಿದೆ. ಅದರಂತೆ ಇಲ್ಲಿಯೂ ಕೂಡ ವಿಧೇಯದಲ್ಲಿ ಅನ್ವಯವನ್ನು ಮಾಡಬಹುದೆಂದು ಹೇಳುತ್ತಿದ್ದಾರೆ. ಪ್ರಯೋಗದ ಸಾಧುತ್ವವನ್ನು ಹಿಂದಿನಂತೆ ತಿಳಿಯಬೇಕು.

**भावदीपः – अलोकेति** ।। लोकतोऽप्रसिद्धत्वेऽपीत्यर्थः । वेदवैदिकप्रसिद्धेरेवासम्भाव्याज्ञानादिमूलकत्वेनान्तरङ्गत्वेन च ग्राह्यत्वादिति भावः । प्रसिद्धाकाशस्योक्तमनामरूपत्वं विरुद्धमिति न्यायविवरणांशमर्थतो योजयति – **अन्यथेति** ।। प्रसिद्धाकाशत्व इत्यर्थः ।

'ಅಲೋಕಪ್ರಸಿದ್ಧತ್ವೇऽಪಿ' ಎಂದರೆ ಲೋಕತಃ ಪ್ರಸಿದ್ಧವಾಗದಿದ್ದರೂ ಎಂದು ಅರ್ಥ. ವೇದ ಹಾಗೂ ವೈದಿಕ ಗ್ರಂಥಗಳಲ್ಲಿ ಪ್ರಸಿದ್ಧವಾದದ್ದೇ ಶ್ರೇಷ್ಠವಾಗಿರುತ್ತದೆ. ಏಕೆಂದರೆ, ಅಜ್ಞಾನಾದಿಮೂಲಕತ್ವವು ಅಸಂಭಾವಿತವಾದ್ದರಿಂದ ಅಂತರಂಗವಾದ ಕಾರಣ ಇದೇ ಗ್ರಾಹ್ಯವಾಗಿದೆ ಎಂದು ತಿಳಿಯಬೇಕು. ಪ್ರಸಿದ್ಧಾಕಾಶಕ್ಕೆ ಹೇಳಲ್ಪಟ್ಟ ಅನಾಮರೂಪತ್ವಗಳು ವಿರುದ್ಧವಾಗಿವೆ ಎಂದು ನ್ಯಾಯವಿವರಣದ ಅಂಶವನ್ನು ಅರ್ಥತಃ ಯೋಜನೆ ಮಾಡುತ್ತಿದ್ದಾರೆ, 'ಅನ್ಯಥಾ' ಎಂಬ ವಾಕ್ಯದಿಂದ. ಪ್ರಸಿದ್ಧವಾದ ಆಕಾಶವನ್ನೇ ವಿವಕ್ಷಿಸುವುದಾದಲ್ಲಿ ಎಂಬುದು 'ಅನ್ಯಥಾ' ಎಂಬ ಪದದ ಅರ್ಥ.

**भावदीपः** – नन्वाकाशो नीलिमोदेति इति श्रुतेर्भूताकाशस्य रूपादिमत्त्वेऽपि अत्राभिमताव्याकृताकाशस्य त्वनामरूपत्वमस्तु । तस्मिन् रूपाश्रुतेरचाक्षुषत्वाच्चारूपत्वनिश्चयादित्यत आह – **अवकाशस्यापीति** ।। अनामत्वहेत्वप्रसिद्धत्वस्यावकाशोऽभावेन नामवत्त्वादित्यर्थः ।। **अत इति** ।। निरवकाशश्रुतिलिङ्गभावादित्यर्थः ।।४१।।

।। इति श्रीराघवेन्द्रयतिकृते भावदीपे आकाशाधिकरणम् ।।

ಆಕಾಶಾಧಿಕರಣ (೧-೩-೧೨)

'ಆಕಾಶೇ ನೀಲಿಮಾ ಉದೇತಿ' 'ಆಕಾಶದಲ್ಲಿ ನೀಲಿ ಬಣ್ಣವು ಉದಯವಾಗುತ್ತದೆ' ಎಂಬ ಶ್ರುತಿಯಿರುವುದರಿಂದ ಭೂತಾಕಾಶದಲ್ಲಿ ರೂಪಾದಿಗಳು ಇದ್ದರೂ ಪ್ರಕೃತ ಈ ಅಧಿಕರಣಕ್ಕೆ ವಿಷಯವಾದ ಅವ್ಯಾಕೃತಾಕಾಶದಲ್ಲಿ ರೂಪವೂ ಕೂಡ ಇರುವುದಿಲ್ಲ. ಏಕೆಂದರೆ, ಅವ್ಯಾಕೃತಾಕಾಶದಲ್ಲಿ ರೂಪವಿದೆ ಎನ್ನಲು ಆಧಾರವಿಲ್ಲ. ಚಕ್ಷುರಿಂದ್ರಿಯಕ್ಕೆ ವಿಷಯವೂ ಆಗದ ಕಾರಣ, ರೂಪವಿಲ್ಲವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂಬ ಪ್ರಶ್ನೆಗೆ 'ಅವಕಾಶಸ್ಯಾಪಿ' ಎಂಬುದರಿಂದ ಉತ್ತರಿಸಿದ್ದಾರೆ. 'ಅನಾಮತ್ವ' ಎಂಬ ಹೇತುವು ಕೂಡ ಅಪ್ರಸಿದ್ಧವಾಗಿದೆ. ಏಕೆಂದರೆ ಅವ್ಯಾಕೃತಾಕಾಶದಲ್ಲಿ ನಾಮವತ್ವವೇ ಇರುತ್ತದೆ ಎಂದು ಅರ್ಥ. 'ಅತಃ' ಎಂದರೆ ನಿರವಕಾಶಶ್ರುತಿ ಹಾಗೂ ಲಿಂಗಗಳಿರುವುದರಿಂದ ಎಂದು ಅರ್ಥ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು ॥

**वाक्यार्थमञ्जरी –**

**।। ॐ भावं तु बादरायणोऽस्ति हि ॐ ।।**

**प्रयोगवशादिति** ।। यदेष आकाश इति हरावन्यत्र तु प्रसिद्धिरेवेति भावः ।। **आकाशो वै नामेति** ।। आसमन्तात् काशमानत्वादाकाशनामा भगवान्नामरूपात्मक प्रपञ्चस्य निर्वहिता निर्वोढा आश्रय इति यावत् । निपातद्वयेनास्यार्थस्य प्रसिद्धत्वमाह । ते नामरूपे अन्तरा विना यद् वर्तते तदमृतं नित्यमुक्तं ब्रह्मेत्यर्थः ।। **ॐ आकाशोऽर्थान्तरत्वादिव्यपदेशात् ॐ** ।। आकाशो वै नामेत्युक्ताकाशो विष्णुरेव ते यदन्तरेत्याकाशस्य विष्णुमात्रनिष्ठनामरूपराहित्याख्य-लिङ्गोपदेशादित्यर्थः ।। **विलक्षणार्थत्वेति** ।। अनेन अन्तरः विलक्षणोऽर्थोऽर्थान्तरस्य भावोऽर्थान्तरत्वमिति व्याख्यातं भवति । आदिपदोपात्तमाह – **तद् ब्रह्मेति** ।। नन्वादिपदेनानामत्वमिति व्याख्याने सूत्रभाष्ययोरनामत्वादीति वाच्यं तेनैव क्रमेण श्रुत्युदाहरणं कार्यं किमर्थं श्रौतक्रमोल्लङ्घनमित्यत आह – **रूपस्येति** ।। नाम्नो वाच्यसापेक्षत्वादप्राधान्यमिति भावः ।। **उक्तविरोधादिति** ।। 'ईक्षतेर्नाशब्दम्' 'रूपोपन्यासाच्च' इत्युक्तविरोधः । अनामेतीति अत्रानामरूपत्वं साकल्येन शब्दागोचरत्वं प्राकृतरूपराहित्यं च विवक्षितं प्राक् चावाच्यत्वाभावः अप्राकृतरूपत्वं च विवक्षितमिति न तद्विरोध इति भावः ।। **अलोकेति** ।। लोकतोऽप्रसिद्धत्वेऽपीत्यर्थः । अन्यथा आकाशपक्षे नन्वाकाशो नीलिमोदेतीति श्रुतेर्भूताकाशस्य रूपत्वेऽप्यत्राभिमताव्याकृताकाशस्य तद्राहित्यं युक्तमित्यत आह – **आकाशस्यापीति** ।। अनामत्वप्रयोजकाप्रसिद्धत्वस्याकाशे अभावेनानामत्वा-भावादित्यर्थः ।। ४१ ।।

**।। इति श्रीशर्कराश्रीनिवासविरचितायां वाक्यार्थमञ्जर्याम् आकाशाधिकरणम् ।।**

ಆಕಾಶಾಧಿಕರಣ

(೧-೩-೧೨)

---

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अकाशाधिकरणम्

### ಪಾದಸಂಗತಿ ಹಾಗೂ ಅಧಿಕರಣ ಸಂಗತಿಗಳ ಸಮರ್ಥನೆ

॥ ॐ आकाशोर्थान्तरत्वादिव्यपदेशात् ॐ ॥

**तल्लिङ्गादित्यत्र ब्रह्मण्यप्याकाशशब्दप्रयोगस्य दर्शितत्वाद्वा इह प्रयुक्तवैनामेतिनिपातद्योतितप्रसिद्धेर्व्यावर्त्यत्वेनाप्रसिद्धे ब्रह्मण्यप्याकाशशब्दस्य पूर्वपक्षिणाऽप्यङ्गीकृतत्वाद्वोभयत्रप्रसिद्धता ।**

ಅನುವಾದ - 'ಓಂ ಆಕಾಶೋರ್ಥಾಂತರತ್ವಾದಿವ್ಯಪದೇಶಾತ್ ಓಂ' ಇತ್ಯಾದಿಯಾಗಿ ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ.

ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಆಕಾಶಶಬ್ದವು ಪ್ರಥಮಪಾದದ 'ಆಕಾಶಸ್ತಲ್ಲಿಂಗಾತ್' ಎಂಬ ನ್ಯಾಯದಂತೆ ಮಹಾವಿಷ್ಣುವಿನಲ್ಲಿ, ಲೋಕರೂಢಿಯಂತೆ, ಅವ್ಯಾಕೃತಾಕಾಶದಲ್ಲಿ ಪ್ರಸಿದ್ಧವಾದ್ದರಿಂದ ಉಭಯತ್ರಪ್ರಸಿದ್ಧವಾಗಿದೆ.

ಅಥವಾ 'ಆಕಾಶೋ ವೈ ನಾಮ' ಎಂಬಲ್ಲಿರುವ ನಿಪಾತಗಳಿಂದ ಅವ್ಯಾಕೃತಾಕಾಶದಲ್ಲಷ್ಟೇ ಆಕಾಶಶಬ್ದದ ಪ್ರಸಿದ್ಧಿಯನ್ನು ಶ್ರುತಿಯು ಹೇಳುತ್ತಿದೆ. ಇದರಿಂದ ಅಪ್ರಸಿದ್ಧವಾದ ಮತ್ತೊಂದು ಆಕಾಶವಿದೆಯೆಂದಂತಾಯಿತು. ಅಪ್ರಸಿದ್ಧವಾದ ಆಕಾಶವೆಂದರೆ, ಬ್ರಹ್ಮನೇ ಆಗಿದ್ದಾನೆಂದು ಪೂರ್ವಪಕ್ಷಿಗಳೂ ಕೂಡ ಒಪ್ಪಿದಂತಾಯಿತು. ಹಾಗಾಗಿಯೂ ಆಕಾಶಶಬ್ದವು ಉಭಯತ್ರಪ್ರಸಿದ್ಧವೆನಿಸುತ್ತದೆ.

**''प्रयोगवशात्'' इति टीकाऽप्युक्तरीत्या द्वेधा व्याख्येया ।**

'ಪ್ರಯೋಗವಶಾತ್' ಇತ್ಯಾದಿ ಟೀಕೆಯಲ್ಲಿ ಹೇಳಿದಂತೆ, ಮೇಲೆ ಹೇಳಿದ ಎರಡು ಬಗೆಯ ಅಭಿಪ್ರಾಯಗಳಿಂದ ವ್ಯಾಖ್ಯಾನಿಸಬೇಕು.

**अनन्तरसङ्गतिस्तु आकाशस्याब्रह्मत्वे पूर्वोक्तं ज्योतिरप्यब्रह्म स्यात् ।**

ಈ ಅಧಿಕರಣಕ್ಕೆ ಹಿಂದಿನ ಜ್ಯೋತಿರಧಿಕರಣದಿಂದ ಆನಂತರ್ಯಸಂಗತಿಯಿರುತ್ತದೆ. ಅಂದರೆ ಈ ಅಧಿಕರಣದ ವಿಷಯವಾಕ್ಯದಲ್ಲಿರುವ ಆಕಾಶಶಬ್ದವು ಬ್ರಹ್ಮನಾಗದಿದ್ದ ಪಕ್ಷದಲ್ಲಿ ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ ಜ್ಯೋತಿಯೂ ಕೂಡ ಬ್ರಹ್ಮನಾಗುವುದಿಲ್ಲ.

**''बहिः कुलायादमृतश्चरित्व'' इति ज्योतिषि श्रुतस्यामृतत्वस्येहाकाशे ''तदमृतम्'' इति श्रवणादिति पूर्वाधिकरणाक्षेपात् ।**

ಏಕೆಂದರೆ 'ಬಹಿಃ ಕುಲಾಯಾದಮೃತಶ್ಚರಿತ್ವ' ಎಂಬುದಾಗಿ 'ಯಾರು ಜ್ಯೋತಿ ಶಬ್ದ ಪ್ರತಿಪಾದ್ಯನಾಗಿದ್ದಾನೋ, ಅವನು ಅಮೃತ'ನೆಂದು ಶ್ರುತಿಯು ಹೇಳಿದೆ. ಅದೇ ಅಮೃತ ಶಬ್ದವನ್ನು 'ತದಮೃತಮ್' ಎಂಬುದಾಗಿ ಆಕಾಶಶ್ರುತಿಯೂ ಕೂಡ ಆಕಾಶನಲ್ಲಿ ಹೇಳಿದೆ. ಒಂದು ವೇಳೆ ಆಕಾಶಶ್ರುತಿಯಲ್ಲಿರುವ ಅಮೃತನು ಬೇರೆ ಪದಾರ್ಥವಾದಲ್ಲಿ ಜ್ಯೋತಿಯೂ ಕೂಡ ಬ್ರಹ್ಮನಾಗಲು ಸಾಧ್ಯವಿಲ್ಲ. ಹಾಗಾಗಿ ಹಿಂದಿನ ಅಧಿಕರಣದ ಜ್ಯೋತಿಯೇ ಬ್ರಹ್ಮನಾಗಿದ್ದಾನೆಂಬ ಸಿದ್ಧಾಂತವನ್ನು ಆಕ್ಷೇಪ ಮಾಡುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯು ಇರುತ್ತದೆಂದು ಭಾವಿಸಬೇಕು.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – ॐ आकाशोर्थान्तरत्वादिव्यपदेशात् ॐ ।। ''प्रयोगवशात्'' इत्यादिटीकां विवृण्वन् पादसङ्गतिं विवृणोति ।। तल्लिङ्गादिति ।।**

ವಿವರಣೆ - 'ಓಂ ಆಕಾಶೋರ್ಥಾಂತರತ್ವಾದಿವ್ಯಪದೇಶಾತ್ ಓಂ' ಎಂಬ ಸೂತ್ರದಿಂದ ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ. 'ಪ್ರಯೋಗವಶಾತ್' ಇತ್ಯಾದಿ ಟೀಕೆಯಲ್ಲಿ ಆಕಾಶಶಬ್ದಕ್ಕೆ ಉಭಯಸಾಧಾರಣ್ಯವನ್ನು ಹೇಳಿರುತ್ತಾರೆ. ಅದನ್ನು ವಿವರಿಸುವವರಾಗಿ ಇದಕ್ಕೆ ಪಾದಸಂಗತಿಯನ್ನು ಸಮರ್ಥಿಸುತ್ತಿದ್ದಾರೆ 'ತಲ್ಲಿಂಗಾತ್' ಇತ್ಯಾದಿ ವಾಕ್ಯದಿಂದ.

**प्रकाशः** – ''आकाश इति होवाच'' इति वाक्ये निरवकाशपरोवरीयस्त्वादिलिङ्गेनाकाशशब्दे विष्णुवाचित्वस्य दर्शितत्वाल्लोकतश्चाकाशे प्रयोगात् प्रयोगसाधारण्येनोभयत्रप्रसिद्धतेत्यर्थः ।

'ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ನಿರವಕಾಶವಾದ ಪರೋವರೀಯಸ್ತ್ವಾದಿಲಿಂಗಗಳು ಹೇಳಲ್ಪಟ್ಟಿವೆ. ಇದರಿಂದ ಆಕಾಶಶಬ್ದವು ವಿಷ್ಣುವಿನಲ್ಲಿ ಪ್ರಸಿದ್ಧವಾಗುತ್ತದೆ. ಭೂತಾಕಾಶದಲ್ಲಿಯೂ ಕೂಡ ಲೋಕಪ್ರಸಿದ್ಧಿಯಿರುವುದರಿಂದ ಎರಡೂ ಕಡೆ ಪ್ರಯೋಗಸಾಧಾರಣ್ಯ ಮೂಲಕ ಆಕಾಶಶಬ್ದವು ಬರುತ್ತದೆ. ಹೀಗೆ ಉಭಯತ್ರಪ್ರಸಿದ್ಧತ್ವವನ್ನು ತಿಳಿಯಬೇಕು.

**प्रकाशः** – पूर्वाधिकरणे तु प्राक्तनज्योतिषो भाष्यादौ विष्णुत्वाक्षेपाद्वा पूर्वपक्ष्यभिमते जीवे सम्प्रतिपन्नप्रयोगाभावाद्वा नैवं साधारण्यमुक्तम् ।

ಆಕಾಶಶಬ್ದಕ್ಕೆ ಪ್ರಥಮಪಾದದ ನ್ಯಾಯದಿಂದ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಲೌಕಿಕರೂಢಿಯಿಂದ ಲೋಕದಲ್ಲಿ ಪ್ರಸಿದ್ಧಿಯನ್ನು ವಿವಕ್ಷಿಸಿ, ಉಭಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಿದ್ದಾರೆ. ಇದರಂತೆ ಹಿಂದಿನ ಜ್ಯೋತಿರಧಿಕರಣದಲ್ಲಿಯೂ ಕೂಡ ಹೇಳಬಹುದಲ್ಲವೇ? ಏಕೆಂದರೆ ಪ್ರಥಮಪಾದದಲ್ಲಿಯೇ 'ಜ್ಯೋತಿಃ' ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದ್ದಾಗಿದೆ. ಲೋಕದಲ್ಲಿಯೂ ಕೂಡ ಅನ್ಯತ್ರಪ್ರಸಿದ್ಧವಾದ್ದರಿಂದ ಆಕಾಶಶಬ್ದದಂತೆ 'ಜ್ಯೋತಿಃ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಗುತ್ತದೆಂದು ಪ್ರಶ್ನಿಸಬಾರದು. ಏಕೆಂದರೆ ಹಿಂದಿನ ಅಧಿಕರಣದ ಭಾಷ್ಯಾದಿಗಳಲ್ಲಿ ಪ್ರಥಮಪಾದದಲ್ಲಿ ಸಮನ್ವಯ ಮಾಡಿದ 'ಜ್ಯೋತಿಃ' ಎಂಬ ಶಬ್ದವನ್ನು ಆಕ್ಷೇಪಮಾಡಿದ್ದಾರೆ. ಅಂದರೆ ಪ್ರಥಮಪಾದದಲ್ಲಿ ಸಮನ್ವಯ ಮಾಡಿದ 'ಜ್ಯೋತಿಃ' ಎಂಬ ಶಬ್ದವು ವಿಷ್ಣುವಿನಲ್ಲಿ ಸಮನ್ವಯಗೊಳ್ಳುವುದಿಲ್ಲ ಎಂದು ವಿವಕ್ಷಿಸಿ ಪೂರ್ವಪಕ್ಷ ಮಾಡಿದ್ದರಿಂದ ಈ ಅಧಿಕರಣದಂತೆ, ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಗದು. ಅಥವಾ ಪೂರ್ವಪಕ್ಷಿಗೆ ಅಭಿಮತನಾದ ಜೀವನಲ್ಲಿ 'ಜ್ಯೋತಿಃ' ಎಂಬ ಶಬ್ದದ ಪ್ರಯೋಗವು ಸಂಪ್ರತಿಪನ್ನವಾಗದ ಕಾರಣದಿಂದಲೂ ಈ ಅಧಿಕರಣದಂತೆ ಉಭಯತ್ರಪ್ರಸಿದ್ಧತ್ವವನ್ನು ಹೇಳಿರುವುದಿಲ್ಲ.

**प्रकाशः** – ननु तर्हि पूर्वत्रेवात्राप्याकाशशब्दप्रवृत्तिनिमित्तस्यावकाशदातृत्वादिरूपस्य ''तल्लिङ्गात्'' इत्यत्रोक्तन्यायेन विष्णौ लोकतश्चान्यत्रप्रसिद्ध्यांऽतरङ्गप्रवृत्तिनिमित्तसाम्येनैवोभयत्रप्रसिद्धिर्वाच्या । नतु बहिरङ्गप्रयोगसाम्येनेति चेत्

ಆಕ್ಷೇಪ - ಹಿಂದಿನ ಅಧಿಕರಣದಲ್ಲಿ ಪ್ರವೃತಿನಿಮಿತ್ತಸಾಮ್ಯವನ್ನು ವಿವಕ್ಷಿಸಿ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಲಾಯಿತು. ಅದರಂತೆ ಇಲ್ಲಿಯೂ ಕೂಡ ಹೇಳಬಹುದು. ಅವಕಾಶದಾತೃತ್ವವು ಆಕಾಶಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಈ ಪ್ರವೃತ್ತಿನಿಮಿತ್ತವು ಭಗವದಧೀನವೆಂದು 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದ ನ್ಯಾಯದಿಂದ ಸಿದ್ಧವಾಗಿದೆ. ಲೋಕರೂಢಿಯಿಂದ ಭೂತಾಕಾಶದಲ್ಲಿ ಅವಕಾಶದಾತೃತ್ವವು ಪ್ರಸಿದ್ಧವಾಗಿದೆ. ಹೀಗೆ ಅಂತರಂಗವೆನಿಸಿದ ಪ್ರವೃತ್ತಿನಿಮಿತ್ತಸಾಮ್ಯದಿಂದಲೇ ಆಕಾಶಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಹೇಳಲು ಬರುವಾಗ ಬಹಿರಂಗವಾದ ಪ್ರಯೋಗಸಾಮ್ಯವನ್ನು ವಿವಕ್ಷಿಸಿ, ಉಭಯತ್ರಪ್ರಸಿದ್ಧತ್ವವನ್ನು ಏಕೆ ಹೇಳುತ್ತಿದ್ದಾರೆ?

**प्रकाशः** – मैवम् । पूर्वत्र ज्योतिश्श्रुतेर्विष्णुजीवयो रूढेः पूर्वपक्षिणोऽसंमतेर्योगेन जीवनिष्ठत्वे वाच्ये तस्य विष्णावपि तौल्यात्प्रवृत्तिहेतुसाम्येन तथात्वमुक्तम् । इह त्वाकाशशब्दस्य लोके गगने प्रसिद्धत्वेन योगेनार्थद्वयोपस्थितेः प्रागेव लोकप्रयोगादर्थान्तरस्यैवोपस्थितेरुभयोपस्थित्यर्थं विष्णावपि प्रयोगस्यैव दर्शनीयत्वादेवमुक्तम् ।

ಹಿಂದಿನ ಅಧಿಕರಣದಂತೆ ಇಲ್ಲಿ ಹೇಳಲಾಗದು. ಜ್ಯೋತಿಶ್ರುತಿಯು ವಿಷ್ಣು ಹಾಗೂ ಜೀವ ಇಬ್ಬರಲ್ಲಿಯೂ ರೂಢವೆಂದು ಪೂರ್ವಪಕ್ಷಿ ಒಪ್ಪಿರಲಿಲ್ಲ. ಆವಾಗ ಯೋಗದಿಂದಲೇ ಜ್ಯೋತಿಶ್ರುತಿಯನ್ನು ಜೀವನಲ್ಲಿ ಹೇಳಬೇಕು. ಅದೇ ಯೋಗವನ್ನು ವಿಷ್ಣುವಿನಲ್ಲೂ ಹೇಳಲು ಬರುವುದರಿಂದ ಪ್ರವೃತ್ತಿನಿಮಿತ್ತ ಹೇತುವು ಉಭಯತ್ರ ಸಮಾನವಾಯಿತು. ಆದರೆ ಈ ಅಧಿಕರಣದಲ್ಲಿ ಆಕಾಶಶಬ್ದವು ಲೋಕದಲ್ಲಿ ಹಾಗೂ ಗಗನದಲ್ಲಿ ರೂಢಿಯಿಂದಲೇ ಪ್ರಸಿದ್ಧವಾಗಿದೆ. ಯೋಗದಿಂದ ಅರ್ಥವು ಉಪಸ್ಥಿತವಾಗುವ ಮೊದಲೇ ಲೋಕಪ್ರಯೋಗದಿಂದ ಅವ್ಯಾಕೃತಾಕಾಶವೇ ಉಪಸ್ಥಿತವಾಗುತ್ತದೆ. ವಿಷ್ಣುವಿನ ಉಪಸ್ಥಿತಿಯೂ ಕೂಡ ಲೋಕಪ್ರಯೋಗದಿಂದಲೇ ಆಗುತ್ತದೆನ್ನಲು ಲೋಕಪ್ರಯೋಗವನ್ನು ಆಶ್ರಯಿಸಲಾಗಿದೆ. ಪ್ರವೃತ್ತಿನಿಮಿತ್ತ ಸಾಮ್ಯವನ್ನು ಆಶ್ರಯಿಸಿಲ್ಲ.

**प्रकाशः** – नन्वेवमपि ''तल्लिङ्गात्'' इत्यत्रैवान्यत्र प्रसिद्धेस्त्याजितत्वात्कथमुभयत्रप्रसिद्धिः । नच तत्र विष्णौ प्रसिद्धिरेवोक्ता नान्यत्रप्रसिद्धिस्त्याजितेति वाच्यम् । ''नेतरोनुपपत्तेः'' इत्यादिना, प्रतिनयमन्वितेन तत्त्वित्यवधारणार्थतुशब्देन चान्यत्र प्रसिद्धेरपि त्याजितत्वात् ।

ಆಕ್ಷೇಪ - ಆದರೂ ಸಹ ಇಲ್ಲಿ ಸಮನ್ವಯ ಮಾಡುತ್ತಿರುವ ಆಕಾಶಶಬ್ದಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥನೆ ಮಾಡಲು ಬರುವುದಿಲ್ಲ. ಏಕೆಂದರೆ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿಯೇ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೂಲಕ ಅನ್ಯತ್ರಪ್ರಸಿದ್ಧವಾಗುತ್ತದೆಂಬುದನ್ನೂ ಕೂಡ ನಿರಾಕರಿಸಿದ್ದಾರೆ.

ಆಕಾಶಾಧಿಕರಣದಲ್ಲಿ ಕೇವಲ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನಷ್ಟೇ ಹೇಳಿದ್ದಾರೆ ಹೊರತು, ಅನ್ಯತ್ರಪ್ರಸಿದ್ಧವಲ್ಲವೆಂದೇನೂ ಸಮರ್ಥನೆ ಮಾಡಿಲ್ಲವಲ್ಲ ? ಎಂದು ಪ್ರಶ್ನಿಸಬಾರದು. 'ನೇತರೋನುಪಪತ್ತೇಃ' ಇತ್ಯಾದಿ ಸೂತ್ರದಿಂದ ಪ್ರತಿಅಧಿಕರಣದಲ್ಲಿಯೂ 'ತತ್ತು' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಲಾಗಿದೆ. ಅಲ್ಲಿರುವ 'ತು' ಶಬ್ದದಿಂದ ಅನ್ಯತ್ರಪ್ರಸಿದ್ಧಿಯ ನಿರಾಕರಣೆಯು ಪ್ರತಿಯೊಂದು ಅಧಿಕರಣದಲ್ಲಿಯೂ ಸಿದ್ಧವಾಗುತ್ತಿದೆ. ಹಾಗಾಗಿ ಪ್ರಥಮಪಾದದ ಆಕಾಶಾಧಿಕರಣದಿಂದಲೇ ಆಕಾಶಶಬ್ದವು ಅನ್ಯತ್ರಪ್ರಸಿದ್ಧವಲ್ಲವೆಂಬುದನ್ನು ನಿರಾಕರಿಸಿದಂತಾಯಿತು. ಹೀಗಿರುವಾಗ ಪ್ರಕೃತ ಉಭಯತ್ರಪ್ರಸಿದ್ಧವೆಂದು ಹೇಗೆ ಪರಿಗಣಿಸುತ್ತೀರಿ.

ಆಕಾಶಾಧಿಕರಣ (೧-೩-೧೨)

**प्रकाशः** – मैवम् । तत्तद्विषयवाक्येऽन्यत्रप्रसिद्धेस्त्याजितत्वेऽपि सर्वत्र तत्त्याजनाभावात् ।।

ಸಮಾಧಾನ - ಇದು ತಪ್ಪು. ಪ್ರಥಮಪಾದದಲ್ಲಿ ಆಕಾಶಾಧಿಕರಣದಲ್ಲಿ ಸಮನ್ವಯ ಮಾಡಿದ ವಿಷಯವಾಕ್ಯವೇ ಬೇರೆ. ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ವಿಷಯವಾಕ್ಯವೇ ಬೇರೆ. ಅಲ್ಲಿ ಸಮನ್ವಯ ಮಾಡಿದ ವಿಷಯವಾಕ್ಯವು ಅನ್ಯತ್ರಪ್ರಸಿದ್ಧವಾಗುವುದಿಲ್ಲವೆಂದಷ್ಟೇ ಆ ಅಧಿಕರಣವು ಸಮರ್ಥನೆ ಮಾಡುತ್ತದೆ ಹೊರತು, ಈ ವಿಷಯವಾಕ್ಯದ ಅನ್ಯತ್ರಪ್ರಸಿದ್ಧತ್ವವನ್ನು ನಿರಾಕರಣೆ ಮಾಡುವುದಿಲ್ಲ. ಹಾಗಾಗಿ ಈ ಅಧಿಕರಣದಲ್ಲಿ ಸಮನ್ವಯಮಾಡುತ್ತಿರುವ ಆಕಾಶಶಬ್ದವು ಉಭಯತ್ರಪ್ರಸಿದ್ಧವೇ ಆಗುತ್ತದೆ.

**प्रकाशः** – **व्यावर्त्यत्वेनेति** ।। निपातस्य प्रसिद्ध्यर्थत्वेन प्रसिद्धाकाशो नामरूपनिर्वोढेत्युक्त्या नैवंभूतोऽप्रसिद्धाकाश इति गम्यमानत्वात्तादृशाकाशश्च ब्रह्मैवेति भावः ।

'ವ್ಯಾವರ್ತ್ಯತ್ವೇನ' ಎಂಬುದರ ಅಭಿಪ್ರಾಯ ಹೀಗಿದೆ - 'ವೈ ನಾಮ' ಎಂಬಲ್ಲಿರುವ ನಿಪಾತವು ಪ್ರಸಿದ್ಧವಾದ ಅರ್ಥವನ್ನಷ್ಟೇ ತಿಳಿಸುತ್ತದೆ. ಆಕಾಶಶಬ್ದಕ್ಕೆ ಅವ್ಯಾಕೃತಾಕಾಶದಲ್ಲಿಯೇ ಲೋಕಪ್ರಸಿದ್ಧಿಯಿದೆ. ಮತ್ತು ಈ ಅವ್ಯಾಕೃತಾಕಾಶವು ಅರ್ಥಪ್ರಪಂಚಕ್ಕೆ ಹಾಗೂ ಶಬ್ದಪ್ರಪಂಚಕ್ಕೆ ಆಶ್ರಯವಾಗಿದೆ. ಶ್ರುತಿಯು ಇಂತಹ ನಾಮರೂಪಗಳಿಗೆ ಆಶ್ರಯವಾದ ಆಕಾಶವನ್ನೇ ಪ್ರತಿಪಾದನೆ ಮಾಡುತ್ತಿದೆ. ಆದರೆ ಬ್ರಹ್ಮನು ಆಕಾಶಶಬ್ದದಿಂದ ಪ್ರಸಿದ್ಧನಾಗಿಲ್ಲ. ಶಬ್ದ ಹಾಗೂ ಪ್ರಪಂಚಗಳಿಗೆ ಆಶ್ರಯನೂ ಆಗಿಲ್ಲ. ಈ ವಿಚಾರವು 'ವೈ ನಾಮ' ಎಂಬ ನಿಪಾತದಿಂದ ತಿಳಿಯುತ್ತದೆ. ಆದ್ದರಿಂದ ಪ್ರಸಿದ್ಧವಾದ ಆಕಾಶವನ್ನು ತಿಳಿಯಬೇಕೆಂದರೆ ಅಪ್ರಸಿದ್ಧವಾದ ಆಕಾಶವನ್ನೂ ಕೂಡ ತಿಳಿಯಲೇಬೇಕು. ಹಾಗಾಗಿ ಪೂರ್ವಪಕ್ಷಿಯು ಬ್ರಹ್ಮನಲ್ಲಿಯೂ ಆಕಾಶಶಬ್ದದ ಪ್ರಯೋಗವನ್ನು ಒಪ್ಪಿಕೊಂಡಂತಾಯಿತು. ಈ ಕಾರಣದಿಂದಲೂ ಉಭಯತ್ರಪ್ರಸಿದ್ಧತ್ವವನ್ನು ಸಮರ್ಥಿಸಬಹುದು.

**प्रकाशः** – कथमेतट्टीकाविवरणमित्यत आह – **प्रयोगेति** ।। प्रागुक्तप्रयोगाद्वा वैनामेतिनिपातवशादाकाशशब्दस्य ब्रह्मणि पूर्वपक्ष्यभिमतप्रयोगाद्वेति द्वेधेत्यर्थः ।

ಟೀಕೆಯನ್ನು ಇದರಿಂದ ಹೇಗೆ ವಿವರಣೆ ಮಾಡಿದಂತಾಯಿತು ? ಎಂಬ ಪ್ರಶ್ನೆಗೆ 'ಪ್ರಯೋಗವಶಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹಿಂದೆ ಹೇಳಿದಂತೆ ಆಕಾಶಶಬ್ದವು ವಿಷ್ಣುವಿನಲ್ಲಿ ಹಾಗೂ ಅವ್ಯಾಕೃತಾಕಾಶದಲ್ಲಿ ಸಮಾನವಾದ ಪ್ರಯೋಗವನ್ನು ಹೊಂದಿರುವುದರಿಂದ ಅಥವಾ 'ವೈ ನಾಮ' ಎಂಬ ನಿಪಾತದಿಂದ ಆಕಾಶಶಬ್ದವನ್ನು ಪೂರ್ವಪಕ್ಷಿಯೇ ಬ್ರಹ್ಮನಲ್ಲಿ ಒಪ್ಪಿದ್ದರಿಂದಲೂ ಉಭಯತ್ರಪ್ರಸಿದ್ಧವಾಗಿದೆ ಎಂದು ಎರಡುಬಗೆಯಲ್ಲಿ ತಿಳಿಯಬಹುದು.

ಪರಿಪೂರ್ಣಚಂದ್ರಿಕಾ

**प्रकाशः** – ''सर्वाधारत्वं विष्णोरुक्तम्'' इत्यादिभाष्यटीकाभ्यां तुल्यन्यायविषयतया सूचितां सङ्गतिमाह – **अनन्तरेति ।। सङ्गतिराक्षेपिकी** । भाष्यादि तु फलाभिप्रायमिति भावः ।

'ಸರ್ವಾಧಾರತ್ವಂ ವಿಷ್ಣೋರುಕ್ತಂ' ಇತ್ಯಾದಿಯಾದ ಭಾಷ್ಯದಲ್ಲಿ ಹಾಗೂ ಟೀಕೆಯಲ್ಲಿ ಈ ಅಧಿಕರಣಕ್ಕೆ ದ್ಯುಭ್ವಾದ್ಯಧಿಕರಣದಿಂದ ಸಂಗತಿಯನ್ನು ತಿಳಿಸಿದ್ದಾರೆ. ಸಮಾನನ್ಯಾಯದಿಂದ ಹಿಂದಿನ ಅಧಿಕರಣದಿಂದಲೂ ಸಂಗತಿಯನ್ನು ಭಾಷ್ಯ-ಟೀಕೆಗಳಿಂದಲೇ ಸೂಚಿತವಾಗಿದೆಯೆಂದು ಗ್ರಂಥಕಾರರು 'ಅನಂತರಸಂಗತಿಸ್ತು' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. 'ಅನಂತರಸಂಗತಿ' ಎಂದರೆ 'ಆಕ್ಷೇಪಿಕೀ ಸಂಗತಿ' ಎಂದರ್ಥ. ಅಂದರೆ ಭಾಷ್ಯ ಹಾಗೂ ಟೀಕೆಗಳಲ್ಲಿ ತೋರಿಸಿದ ದ್ಯುಭ್ವಾದ್ಯಧಿಕರಣದ ಸಂಗತಿಯು ಕೇವಲ ಫಲಪರವಾಗಿದೆ ಹೊರತು, ಸಂಗತಿಪ್ರದರ್ಶಕವಾಗಿಲ್ಲ. ಆದ್ದರಿಂದ ಹಿಂದಿನ ಅಧಿಕರಣದಿಂದಲೇ ಆನಂತರ್ಯ ಸಂಗತಿಯನ್ನು ತಿಳಿಯಬೇಕು.

**प्रकाशः** – ननूक्तदिशाऽमृतत्वमुखाक्षेपेणैव फलं सङ्गतिश्चोभयं भविष्यतीति ।

ಪ್ರಶ್ನೆ - ಗ್ರಂಥದಲ್ಲಿ ಹೇಳಿದಂತೆ ಅಮೃತತ್ವದ ಆಕ್ಷೇಪವನ್ನು ಮಾಡುವ ಮೂಲಕ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸುವುದು ಸೂಕ್ತ. ಫಲವನ್ನೂ ಕೂಡ ಹಿಂದಿನ ಅಧಿಕರಣದಿಂದಲೇ ತೋರಿಸಬಹುದು. ಹೀಗಿರುವಾಗ ಭಾಷ್ಯಕಾರರು ಹಾಗೂ ಟೀಕಾಕಾರರು ದ್ಯುಭ್ವಾದ್ಯಧಿಕರಣದಿಂದ ಸಂಗತಿಯನ್ನು ತೋರಿಸಲು ಔಚಿತ್ಯವೇನು?

**प्रकाशः** – सत्यम् । भाष्ये व्यवहिताक्षेपस्तु पूर्वं विष्णुधर्मतयाऽवधारितनामरूपनिर्वोढृत्वरूपसर्वाधारत्वलिङ्गेनाकाशो विष्णुः किं न स्यादिति शङ्काव्युदासाय ।

ಉತ್ತರ - ಹೌದು. ಆದರೆ ಭಾಷ್ಯ ಹಾಗೂ ಟೀಕೆಗಳಲ್ಲಿ ವ್ಯವಹಿತವಾದ ದ್ಯುಭ್ವಾದ್ಯಧಿಕರಣದಿಂದ ಆಕ್ಷೇಪ ಮಾಡಲು ಕಾರಣವಿದೆ. ದ್ಯುಭ್ವಾದ್ಯಧಿಕರಣದಲ್ಲಿ ಸರ್ವಾಧಾರತ್ವವನ್ನು ವಿಷ್ಣುವಿನ ಧರ್ಮವೆಂದು ಸಮರ್ಥಿಸಲಾಯಿತು. ಅದೇ ಸರ್ವಾಧಾರತ್ವವನ್ನು ಈ ಅಧಿಕರಣದ ವಿಷಯವಾಕ್ಯದಲ್ಲಿ ಅವಧಾರಣಪುರಸ್ಸರವಾಗಿ ನಾಮರೂಪನಿರ್ವೋಢೃತ್ವವೆಂಬ (ಶಬ್ದಪ್ರಪಂಚ ಹಾಗೂ ಅರ್ಥಪ್ರಪಂಚಗಳಿಗೆ ಆಶ್ರಯವಾಗಿರುವಿಕೆಯೆಂಬ) ಸರ್ವಾಧಾರತ್ವಲಿಂಗವನ್ನು ಹೇಳಲಾಗಿದೆ. ಈ ಲಿಂಗವು ದ್ಯುಭ್ವಾದ್ಯಧಿಕರಣದ ನ್ಯಾಯದಂತೆ ಮಹಾವಿಷ್ಣುವಿನಲ್ಲಿರುವುದರಿಂದ ಆಕಾಶಶಬ್ದದಿಂದಲೂ ವಿಷ್ಣುವೇ ಏಕೆ ಪ್ರತಿಪಾದ್ಯನಾಗಬಾರದು ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಆವಾಗ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲದ ಕಾರಣ ಈ ಅಧಿಕರಣಕ್ಕೆ ವೈಯರ್ಥ್ಯ ದೋಷವು ಬರುತ್ತದೆ. ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ದ್ಯುಭ್ವಾದ್ಯಧಿಕರಣದ ಸಿದ್ಧಾಂತವನ್ನೇ ಭಾಷ್ಯಾದಿಗಳಲ್ಲಿ ಆಕ್ಷೇಪ ಮಾಡಿದ್ದಾರೆ.

**प्रकाशः –** अत एव तुल्यन्यायतयाऽमृतत्वाक्षेपस्यापि सूचनात् प्राङ् निर्णीतामृतत्वरूपविष्णुलिङ्गेन विष्णुरित्यपि शङ्का प्रत्युक्ता ।

ಆದ್ದರಿಂದಲೇ ಸಮಾನನ್ಯಾಯದಿಂದ ಅಮೃತತ್ವಾಕ್ಷೇಪವೂ ಕೂಡ ಸೂಚಿತವಾಗಿದೆಯೆಂದು ಗ್ರಂಥಕಾರರು ವ್ಯಾಖ್ಯಾನ ಮಾಡಿದ್ದಾರೆ. ಇದರಿಂದ ಹಿಂದಿನ ಅಧಿಕರಣದಲ್ಲಿ ಅಮೃತತ್ವವೆಂಬುದು ವಿಷ್ಣುವಿನ ಲಿಂಗವನ್ನು ಹೇಳಿದ್ದರಿಂದ ಆಕಾಶಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಬೇಕಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸಿದಂತಾಯಿತು.

**प्रकाशः –** नन्वेवं सन्निहिताक्षेपमेव साक्षादुक्त्वा सर्वाधारत्वाक्षेपस्सूच्यताम् । नतु वैपरीत्यम् । मैवम् । सन्निहिताक्षेपस्य स्पष्टत्वाद्व्यवहिताक्षेपस्य दुर्बोधत्वाद्भाष्ये स एव कण्ठोक्तः । अन्यस्तु सूचितः ।

ಪ್ರಶ್ನೆ - ಸನ್ನಿಹಿತವಾದ ಅಮೃತತ್ವಾಕ್ಷೇಪವನ್ನೇ ಕಂಠತಃ ಹೇಳಿ ಸರ್ವಾಧಾರತ್ವದ ಆಕ್ಷೇಪವನ್ನು ಭಾಷ್ಯಾದಿಗಳಲ್ಲಿ ಸೂಚನೆಯಿಂದ ತೋರಿಸಬಹುದಿತ್ತಲ್ಲವೇ? ಹೀಗಿರುವಾಗ ದೂರದಲ್ಲಿರುವ ಸರ್ವಾಧಾರತ್ವವನ್ನು ಕಂಠತಃ ಹೇಳಿ, ಸನ್ನಿಹಿತವಾದ ಅಮೃತತ್ವದ ಆಕ್ಷೇಪವನ್ನು ಸೂಚನೆ ಮಾಡಲು ಕಾರಣವೇನು?

ಉತ್ತರ - ಸನ್ನಿಹಿತವಾದ ಅಮೃತತ್ವದ ಆಕ್ಷೇಪವು ಅತ್ಯಂತ ಸ್ಪಷ್ಟವಾಗಿದೆ. ವ್ಯವಹಿತವಾದ ಸರ್ವಾಧಾರತ್ವದ ಆಕ್ಷೇಪವು ಬುದ್ಧಿಯಲ್ಲಿ ಸನ್ನಿಹಿತವಾಗದ ಕಾರಣ ಅದರ ಆಕ್ಷೇಪವನ್ನು ತಿಳಿಯುವುದು ಕಠಿಣವಾಗಿದೆ. ಆದ್ದರಿಂದಲೇ ಭಾಷ್ಯದಲ್ಲಿ ಕಠಿಣವಾದ ಸರ್ವಾಧಾರತ್ವದ ಆಕ್ಷೇಪವನ್ನು ಕಂಠತಃ ಹೇಳಿ, ಸುಲಭವಾದ ಅಮೃತತ್ವದ ಆಕ್ಷೇಪವನ್ನು ಸೂಚನೆಯಿಂದ ತೋರಿಸಿದ್ದಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – ॐ आकाशोऽर्थान्तरत्वादिव्यपदेशात् ॐ ।।** नन्वेवं प्राणशब्दस्यापि अत एव प्राण इत्यत्र विष्णौ प्रयोगस्य दर्शितत्वादुभयत्रप्रसिद्धत्वं स्यादित्यत आह – **इहेति ।।** नन्वेवं प्रकारान्तरेणैवोभयत्र प्रसिद्धत्वे टीकाविरोधः । तत्र प्रयोगवशादिना प्रयोगवशेनोभयत्रप्रसिद्धिव्युत्पादनादित्यतो यथाश्रुतटीकाया उक्तानुपपत्तेस्सम्भवेनार्थान्तरपरत्वमावश्यकमित्याह – **प्रयोगवशादिति टीकापीति ।। उक्तरीत्येति ।।** तल्लिङ्गादित्यत्र ब्रह्मण्यप्याकाशशब्दप्रयोगस्य दर्शितत्वाद्धेत्याद्युक्तरीत्येत्यर्थः ।

ಪರಿಪೂರ್ಣಚಂದ್ರಿಕಾ



ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ. ಪ್ರಥಮಪಾದದಲ್ಲಿ ಒಮ್ಮೆ ಆಕಾಶಾಧಿಕರಣವು ಪ್ರಸಕ್ತವಾಗಿ ಬ್ರಹ್ಮನಲ್ಲಿ ಆಕಾಶಶಬ್ದವನ್ನು ಸಮನ್ವಯಮಾಡಿದ್ದಾಗಿದೆ. ಪುನಃ ಮೂರನೆಯ ಪಾದದಲ್ಲಿಯೂ ಕೂಡ ಆಕಾಶಾಧಿಕರಣವೇ ಪ್ರಾಪ್ತವಾಗುತ್ತಿದೆ. ಆದರೆ ಪ್ರಥಮಪಾದದಲ್ಲಿ ಭೂತಾಕಾಶದಲ್ಲಿ ಪ್ರಸಿದ್ಧವಾದ ಆಕಾಶಶಬ್ದವನ್ನು ಸಮನ್ವಯ ಮಾಡಿದರು. ಈ ಪಾದದಲ್ಲಿ ಅವ್ಯಾಕೃತಾಕಾಶದಲ್ಲಿ ಪ್ರಸಿದ್ಧವಾದ ಆಕಾಶಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ. ಮತ್ತು ಪ್ರಥಮಪಾದದ ಆಕಾಶಾಧಿಕರಣಕ್ಕೆ 'ಅಸ್ಯ ಲೋಕಸ್ಯ ಕಾಗತಿಃ' ಎಂಬ ಛಾಂದೋಗ್ಯದ ವಾಕ್ಯವು ವಿಷಯವಾಗಿದೆ. ಈ ಅಧಿಕರಣದಲ್ಲಿ 'ಆಕಾಶೋ ವೈ ನಾಮರೂಪಯೋರ್ನಿರ್ವಹಿತ' ಎಂಬ ಮತ್ತೊಂದು ಛಾಂದೋಗ್ಯದ ವಾಕ್ಯವು ವಿಷಯವಾಗಿದೆ. ಹೀಗೆ ಸಮನ್ವಯ ಮಾಡುತ್ತಿರುವ ವಿಷಯವಾಕ್ಯಗಳ ಭೇದದಿಂದಲೂ ಅಧಿಕರಣಭೇದವು ಯುಕ್ತವಾಗಿದೆ.

'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮಪಾದದ ಅಧಿಕರಣದಿಂದ ಶ್ರುತಿಯಲ್ಲಿರುವ ಆಕಾಶಬ್ದಗಳೆಲ್ಲವೂ ಭಗವತ್ಪರವಾಗಿವೆಯೆಂದು ಸಮರ್ಥನೆಮಾಡಿದ್ದಾರೆ. ಅದರಿಂದ ಪ್ರಕೃತ 'ಆಕಾಶೋ ವೈ ನಾಮ' ಇತ್ಯಾದಿ ಶ್ರುತಿಯಲ್ಲಿರುವ ಆಕಾಶಶಬ್ದವೂ ಕೂಡ ಭಗವತ್ಪರವೆಂದಂತಾಯಿತು. ಆದರೆ ಅವ್ಯಾಕೃತಾಕಾಶದಲ್ಲಿಯೂ ಆಕಾಶಶಬ್ದದ ಪ್ರಯೋಗವಿದೆ. ಹಾಗಾಗಿ ಪ್ರಥಮಪಾದದ ನ್ಯಾಯದಿಂದ ಹಾಗೂ ಲೋಕಪ್ರಸಿದ್ಧಿಯಿಂದ ಇಲ್ಲಿ ಸಮನ್ವಯ ಮಾಡುತ್ತಿರುವ ಆಕಾಶಶಬ್ದವು ಉಭಯತ್ರಪ್ರಸಿದ್ಧವೆನಿಸುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಪಾದಸಂಗತಿಯಿರುತ್ತದೆಂದು ತಿಳಿಯಬೇಕು.

ಹಿಂದಿನ ಜ್ಯೋತಿರಧಿಕರಣದಲ್ಲಿ ಅಮೃತತ್ವಾದಿ ಧರ್ಮಗಳಿಂದ ಯುಕ್ತನಾದವನೇ ಜ್ಯೋತಿಯೆಂದು ಶ್ರುತಿಯು ಹೇಳುತ್ತಿರುವುದರಿಂದ ಮಹಾವಿಷ್ಣುವಿನಲ್ಲಿ 'ಜ್ಯೋತಿ' ಎಂಬ ಶಬ್ದವನ್ನು ಸಮನ್ವಯ ಮಾಡಲಾಯಿತು. ಆದರೆ ಆಕಾಶಶ್ರುತಿಯಲ್ಲಿ ಅದೇ ಅಮೃತತ್ವಲಿಂಗವನ್ನು ಆಕಾಶವನ್ನಲ್ಲಿ ಶ್ರುತಿಯು ಹೇಳುತ್ತಿದೆ. ಒಂದು ವೇಳೆ ಆಕಾಶಶಬ್ದವಾಚ್ಯವಾದ ಪದಾರ್ಥವು ಬೇರೆಯಾದಲ್ಲಿ, ಹಿಂದಿನ ಅಧಿಕರಣದ ಜ್ಯೋತಿಯೂ ಕೂಡ ಬೇರೆ ಪದಾರ್ಥವೇ ಆಗುತ್ತದೆ. ಹಾಗಾಗಿ ಹಿಂದಿನ ಜ್ಯೋತಿರಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯಿರುತ್ತದೆಂದೂ ಭಾವಿಸಬೇಕು.



• • • • •

## ಅಧಿಕರಣದ ಸಂಶಯ ಪರಂಪರೆ

### तात्पर्यचन्द्रिका

**अत्र "आकाशो वैनाम नामरूपयोर्निर्वहिते" इति श्रुत आकाशः किं प्रसिद्धाकाशः किं वा ब्रह्मेति चिन्ता ।**

ಅನುವಾದ - ಈ ಅಧಿಕರಣದಲ್ಲಿ ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದಲ್ಲಿರುವ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತ' ಎಂಬ ವಾಕ್ಯವು ವಿಷಯವಾಗಿದೆ. ಇಲ್ಲಿರುವ

ಆಕಾಶಶಬ್ದವು ಪ್ರಸಿದ್ಧವಾದ ಅವ್ಯಾಕೃತಾಕಾಶವನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆಯೋ ? ಎಂಬುದೇ ಪ್ರಧಾನ ಸಂಶಯ.

**तदर्थं ब्रह्मग्रहणे प्रसिद्धिद्योतकौ वैनामेतिनिपातौ न युक्तावुत युक्ताविति ।**

೨. ಹಿಂದಿನ ಸಂಶಯಪರಿಹಾರಕ್ಕಾಗಿ ಬ್ರಹ್ಮನು ಪ್ರತಿಪಾದ್ಯನಾದರೆ ಪ್ರಸಿದ್ಧಿದ್ಯೋತಕವಾದ 'ವೈ ನಾಮ' ಎಂಬೆರಡು ನಿಪಾತಗಳು ಅಯುಕ್ತವಾಗುತ್ತವೋ, ಅಥವಾ ಯುಕ್ತವಾಗುತ್ತವೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किं लौकिकी प्रसिद्धिर्निपातद्योत्या किं वा वैदिकीति ।**

೩. ಅದಕ್ಕಾಗಿ 'ವೈ ನಾಮ' ಎಂಬ ನಿಪಾತಗಳಿಂದ ಲೌಕಿಕಪ್ರಸಿದ್ಧಿಯು ತಿಳಿಯುತ್ತಿದೆಯೋ, ಅಥವಾ ವೈದಿಕಪ್ರಸಿದ್ಧವು ತಿಳಿಯುತ್ತಿದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं वैदिकप्रसिद्धिग्रहणे किं प्रसिद्धिव्यावर्त्यं नास्त्युतास्तीति ।**

೪. ಹಿಂದಿನ ಸಂಶಯಪರಿಹಾರಕ್ಕಾಗಿ ವೈದಿಕಪ್ರಸಿದ್ಧಿಯನ್ನು ಸ್ವೀಕರಿಸಿದರೆ, ಪ್ರಸಿದ್ಧಿಯಿಂದ ವ್ಯಾವರ್ತ್ಯವಾದದ್ದು ಇಲ್ಲವೋ ಅಥವಾ ಇದೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं प्रसिद्धेः किमुद्देश्यस्वरूप एवान्वयः किं वा विधेयान्वय इति ।**

೫. ಹಿಂದಿನ ಸಂಶಯದ ಪರಿಹಾರಕ್ಕಾಗಿ 'ವೈ ನಾಮ' ಎಂಬೆರಡು ನಿಪಾತಗಳು ಉದ್ದೇಶದಲ್ಲಿ ಅನ್ವಯವಾಗುತ್ತವೆಯೋ ಅಥವಾ ವಿಧೇಯದಲ್ಲಿ ಅನ್ವಯವಾಗುತ್ತವೆಯೋ ಎಂಬ ಸಂಶಯವು ಪರಿಹಾರವಾಗಬೇಕು.

**यद्याद्यः तदा गगनस्वरूपस्यापि वेदप्रसिद्धत्वाद्वैदिकप्रसिद्धिग्रहणे व्यावर्त्याभावेन लोकप्रसिद्धेरेव ग्राह्यत्वाल्लोकप्रसिद्धगगन एवानामरूपत्वं कथञ्चिन्नेयम् ।**

ಪೂರ್ವಪಕ್ಷದ ಫಲ - ಒಂದು ವೇಳೆ ಉದ್ದೇಶಸ್ವರೂಪದಲ್ಲಿ 'ವೈ ನಾಮ' ಎಂಬುದನ್ನು ಅನ್ವಯ ಮಾಡಿದರೆ ಪ್ರಸಿದ್ಧವಾದ ಅವ್ಯಾಕೃತಾಕಾಶವೇ ಶ್ರುತಿಪ್ರತಿಪಾದ್ಯವಾಗುತ್ತದೆ. ವೇದಪ್ರಸಿದ್ಧವಾದ ಆಕಾಶವನ್ನು ತೆಗೆದುಕೊಂಡರೆ ವೇದದಲ್ಲಿ ಅಪ್ರಸಿದ್ಧ ಆಕಾಶವೇ ಇರುವುದಿಲ್ಲ. ಅವ್ಯಾಕೃತಾಕಾಶವೂ ಕೂಡ ವೇದಪ್ರತಿಪಾದ್ಯವೇ ಆಗಿದೆ. ಆದ್ದರಿಂದ ವೈದಿಕಪ್ರಸಿದ್ಧಿಯನ್ನು ತೆಗೆದುಕೊಳ್ಳಬಾರದು. ಲೌಕಿಕಪ್ರಸಿದ್ಧಿಯನ್ನು ತೆಗೆದುಕೊಳ್ಳಬೇಕು. ಲೋಕದಲ್ಲಿ ಅಪ್ರಸಿದ್ಧವಾದ ಆಕಾಶವೆಂದರೆ, ವಿಷ್ಣುವೇ ಆಗುತ್ತಾನೆ. ಹಾಗಾಗಿ ಲೌಕಿಕಪ್ರಸಿದ್ಧವಾದ ಅವ್ಯಾಕೃತಾಕಾಶವನ್ನೇ ವಿವಕ್ಷಿಸಿ ನಾಮರೂಪರಾಹಿತ್ಯವನ್ನು ಕಥಂಚಿತ್ ಉಪಪಾದಿಸಬೇಕು. ಹೀಗೆ ವ್ಯಾವರ್ತ್ಯವು ಸಿಗುವುದರಿಂದ ಲೌಕಿಕಪ್ರಸಿದ್ಧಿಯನ್ನೇ ತೆಗೆದುಕೊಳ್ಳಬೇಕೆಂಬುದು ಪೂರ್ವಪಕ್ಷದ ಉದ್ದೇಶ.

ಪರಿಪೂರ್ಣಚಂದ್ರಿಕಾ

**यदि तु द्वितीयः तदा गगने विधेयस्य नामादिनिर्वोढृत्वस्य वेदतो प्रसिद्धे-र्व्यावर्त्यसम्भवाद्वैदिकाप्रसिद्धेर्ग्रहणे बाधकाभावादनामरूपत्वादिना ब्रह्मैवाकाशः ।**

ಸಿದ್ಧಾಂತದ ಫಲ - ಒಂದು ವೇಳೆ 'ವೈ ನಾಮ' ಎಂಬ ನಿಪಾತವು ವಿಧೇಯವಾದ ನಾಮಾದಿನಿರ್ವೋಢೃತ್ವದಲ್ಲಿ ಅನ್ವಯವನ್ನು ಹೊಂದುವುದಾದರೆ, ಅಪ್ರಸಿದ್ಧವಾದ ವಿಷ್ಣುವೇ ಆಕಾಶಶ್ರುತಿಯಿಂದ ಪ್ರತಿಪಾದ್ಯನಾಗುತ್ತಾನೆ. ವೇದಪ್ರಸಿದ್ಧವಾದ ಆಕಾಶವನ್ನು ತೆಗೆದುಕೊಳ್ಳಲು ನಾಮಾದಿನಿರ್ವೋಢೃತ್ವವು ಮುಖ್ಯಕಾರಣವಾಗುತ್ತದೆ. ಲೋಕಪ್ರಸಿದ್ಧವಾದ ಅವ್ಯಾಕೃತಾಕಾಶದಲ್ಲಿ ಈ ನಾಮಾದಿನಿರ್ವೋಢೃತ್ವವು ಇಲ್ಲದ ಕಾರಣ 'ವೈ ನಾಮ' ಎಂಬ ನಿಪಾತವು ಅವ್ಯಾಕೃತಾಕಾಶವನ್ನು ವ್ಯಾವೃತ್ತಿಮಾಡುತ್ತಿದೆ. ಆದ್ದರಿಂದ ವೇದದಲ್ಲಿ ಅಪ್ರಸಿದ್ಧವಾದದ್ದನ್ನು ತೆಗೆದುಕೊಂಡರೆ ಯಾವುದೇ ಬಾಧಕವು ಇರುವುದಿಲ್ಲ. ಹಾಗಾಗಿ ನಾಮರೂಪರಾಹಿತ್ಯಕ್ಕೆ ಆಶ್ರಯನಾದ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಉದ್ದೇಶ.

**प्रकाशः –**

''आकाशोऽत्र विषय'' इत्यादिविषयसंशयटीकां व्यनक्ति ।। **अत्रेति** ।।

ವಿವರಣೆ - ಆಕಾಶಾಧಿಕರಣವು ಪ್ರಾರಂಭವಾಗುತ್ತಿದೆ. 'ಆಕಾಶೋಽತ್ರ ವಿಷಯಃ' ಎಂಬ ಟೀಕೆಯು ವಿಷಯ ಹಾಗೂ ಸಂಶಯಗಳನ್ನು ಪ್ರತಿಪಾದನೆ ಮಾಡುತ್ತಿದೆ. ಅದನ್ನು ಗ್ರಂಥಕಾರರು 'ಅತ್ರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – छान्दोग्येऽष्टमाध्यायान्ते ''आकाशो वैनाम नामरूपयोर्निर्वहिता ते यदन्तरा तद्ब्रह्म तदमृतं स आत्मा प्रजापतेस्सभां वेश्म प्रपद्ये यशोहं भवानि ब्राह्मणानाम्'' इत्यादि श्रूयते । तत्रस्थाकाश इत्यर्थः ।

ಛಾಂದೋಗ್ಯದ ಎಂಟನೇ ಅಧ್ಯಾಯದ ಕೊನೆಯಲ್ಲಿ ಶ್ರುತಿಪ್ರಕರಣ ಹೀಗಿದೆ - 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ ಯಶೋಹಂ ಭವಾನಿ ಬ್ರಾಹ್ಮಣಾನಾಮ್ ಯಶೋ ರಾಜ್ಞಾಂ ಯಶೋ ವಿಶಾಂ ಯಶೋಹಂ ಅನುಪ್ರಾಪತ್ತಿ ಸ ಹಾಹಂ ಯಶಸಾಂ ಯಶಃ ಶ್ವೇತಮದತ್ ಕಮದತ್ ಕಂ ಶ್ವೇತಂ ಲಿಂದು ಮಾಭಿಗಾಮ್ ಲಿಂದು ಮಾಭಿಗಾಮ್' ಆಕಾಶಶಬ್ದ ಪ್ರತಿಪಾದ್ಯವಾದ ವಸ್ತು ಹೃದಯದಲ್ಲಿದ್ದು, ನಾಮರೂಪಗಳ ಧಾರಕನೆಂದು ಪ್ರಸಿದ್ಧವಾಗಿದೆ. ನಾಮರೂಪಗಳಿಂದ ರಹಿತವಾಗಿ ಯಾವುದು ಇದೆಯೋ ಅದೇ ಬ್ರಹ್ಮ, ಅದೇ ಅಮೃತ, ಅದೇ ಆತ್ಮ. ನಾನು ಪ್ರಜಾಪತಿಯ ಸಭಾಗೃಹಗಳನ್ನು ತಲುಪಬೇಕು. ಬ್ರಾಹ್ಮಣರ ಮಧ್ಯದಲ್ಲಿ ಯಶಸ್ವಿ ಎನಿಸಿಕೊಳ್ಳಬೇಕು. ಕ್ಷತ್ರಿಯರ ಹಾಗೂ ವೈಶ್ಯರ ಮಧ್ಯದಲ್ಲಿಯೂ ಯಶಸ್ವಿಯಾಗಬೇಕು. ಯಶಸ್ವಿಗಳಿಗೂ ಯಶಸ್ಸನ್ನು ಕೊಡುವಂತಹ ಮತ್ತು ಯಶೋರೂಪನೇ ಆಗಿರುವ ಪರಮಸುಖವನ್ನು

ಅನುಭವಿಸುತ್ತಿರುವ ಅಂತಹ ಬ್ರಹ್ಮನ ಅನುಗ್ರಹದಿಂದ ನಾನು ಯಶಸ್ಸನ್ನು ಹೊಂದಿದ್ದೇನೆ. ಸ್ವರೂಪಸುಖವನ್ನು ಅನುಭವಿಸಲು ಕಾರಣನಾದ ವಾಯುದೇವನಲ್ಲಿ ನೆಲೆಸಿರುವ ಆ ಬ್ರಹ್ಮನನ್ನು ನಾನು ನಿರಂತರ ಹೊಂದಿರಬೇಕು. ಹೀಗೆ ಹೃತ್ಪದ್ಮಸ್ಥನನ್ನು ಉಪಾಸನೆ ಮಾಡುತ್ತೇನೆ ಎಂದು. ಈ ಶ್ರುತಿಪ್ರಕರಣದಲ್ಲಿ ಕೇಳಿಸುತ್ತಿರುವ ಆಕಾಶಶಬ್ದವೇ ಈ ಅಧಿಕರಣಕ್ಕೆ ವಿಷಯವಾಗಿದೆ ಎಂದರ್ಥ.

**प्रकाशः –** नामरूपयोः शब्दात्मकार्थात्मकप्रपञ्चयोः । निर्वहिता निर्वोढा । धारक इत्यर्थः । छान्दस इडागमः । कीदृश आकाश इत्यत उक्तं ते यदिति ।। अन्तरा विना । नामरूपराहित्येन यद्वर्तत इत्यर्थः ।

'ನಾಮರೂಪಯೋಃ' ಎಂಬ ಪದಕ್ಕೆ ಶಬ್ದಪ್ರಪಂಚ ಹಾಗೂ ಅರ್ಥಪ್ರಪಂಚಗಳಿಗೆ ಎಂದರ್ಥ. 'ನಿರ್ವಹಿತಾ' ಎಂಬುದು 'ನಿರ್ವೋಢಾ' ಎಂಬ ಶಬ್ದದ ಪ್ರತಿರೂಪವಾಗಿದೆ. ವೈದಿಕವಾದ್ದರಿಂದ 'ನಿರ್ವೋಢಾ' ಎಂಬುದನ್ನೇ 'ನಿರ್ವಹಿತ' ಎಂದು ಪ್ರಯೋಗಿಸಲಾಗಿದೆ. ವೈದಿಕವಾದ್ದರಿಂದ ಇಡಾಗಮವು ಬಂದಿರುತ್ತದೆ. 'ಧರಿಸಿದವನು' ಎಂದು ಇದರ ಅರ್ಥ. ಆಕಾಶವು ಹೇಗೆ ? ಎಂಬ ಪ್ರಶ್ನೆಗೆ 'ತೇ ಯದಂತರಾ' ಎಂಬುದರಿಂದ ಉತ್ತರಿಸಿದ್ದಾರೆ. ನಾಮ ಹಾಗೂ ರೂಪಗಳಿಂದ ರಹಿತವಾಗಿದೆ ಎಂದರ್ಥ.

**प्रकाशः –** ते नामरूपे ।। **प्रसिद्धेति** ।। अव्याकृताकाश इत्यर्थः । कोट्यन्तरं त्वग्रे निरसिष्यत इति भावः ।।

'ತೇ' ಎಂದರೆ ನಾಮರೂಪಗಳು ಎಂದರ್ಥ. 'ಪ್ರಸಿದ್ಧಾಕಾಶ' ಎಂದರೆ 'ಅವ್ಯಾಕೃತಾಕಾಶ' ಎಂದರ್ಥ. ಭೂತಾಕಾಶವನ್ನೇಕೆ ಇಲ್ಲಿ ವಿವಕ್ಷಿಸುತ್ತಿಲ್ಲ? ಎಂಬ ಪ್ರಶ್ನೆಗೆ ಮುಂದೆ ಉತ್ತರಿಸುತ್ತಾರೆ.

**प्रकाशः – प्रसिद्धिव्यावर्त्यमिति** ।। आकाशो वैनाम वेदे प्रसिद्धाकाशो नामादिनिर्वोढा नतु वेदाप्रसिद्धाकाश इति व्यावर्त्यभूतं वेदेऽप्रसिद्धमाकाशं नास्त्युतास्तीत्यर्थः ।।

'ಪ್ರಸಿದ್ಧಿವ್ಯಾವರ್ತ್ಯಮ್' ಎಂದರೆ 'ವೈ ನಾಮ' ಎಂಬ ನಿಪಾತವು ಪ್ರಸಿದ್ಧಿದ್ಯೋತಕವಾಗಿದೆ. ಲೌಕಿಕಪ್ರಸಿದ್ಧಿಯನ್ನು ಇದು ಹೇಳುತ್ತಿದೆ ಹೊರತು, ವೈದಿಕಪ್ರಸಿದ್ಧಿಯನ್ನಲ್ಲ. ಒಂದು ವೇಳೆ ವೈದಿಕಪ್ರಸಿದ್ಧಿಯನ್ನು ಹೇಳುವುದಾದರೆ ವ್ಯಾವರ್ತ್ಯವೇ ಇಲ್ಲವೆಂದಂತಾಗುತ್ತದೆ. 'ಆಕಾಶೋ ವೈ ನಾಮ' ಎಂಬುದು ವೇದದಲ್ಲಿ ಪ್ರಸಿದ್ಧವಾದ ಆಕಾಶವನ್ನು ಹೇಳುತ್ತಿದೆ ಹೊರತು, ವೇದದಲ್ಲಿ ಅಪ್ರಸಿದ್ಧವಾದ ಆಕಾಶವನ್ನು ಹೇಳುತ್ತಿಲ್ಲ ಎಂದು ಪೂರ್ವಪಕ್ಷಿಗಳು ಹೇಳುತ್ತಾರೆ. ಇಲ್ಲಿ ವ್ಯಾವರ್ತ್ಯವಾದ ವೇದಅಪ್ರಸಿದ್ಧವಾದ ಆಕಾಶವು ಇಲ್ಲವೋ ಅಥವಾ ಇದೆಯೋ ಎಂಬುದು 'ಪ್ರಸಿದ್ಧವ್ಯಾವರ್ತ್ಯಮ್' ಎಂಬ ಸಂಶಯದಿಂದ ತೋರಿಸುತ್ತಿದ್ದಾರೆ.

**प्रकाशः – उद्देश्येति** ।। यः प्रसिद्धाकाशः स सर्वनिर्वोढेति वा आकाशो नामादिनिर्वोढा वैनाम सर्वनिर्वोढृत्वं प्रसिद्धमिति वेत्यर्थः ।

ಗ್ರಂಥದಲ್ಲಿ 'ಉದ್ದೇಶಸ್ವರೂಪೇ' ಎಂದಿದೆ. ಯಾವ ಪ್ರಸಿದ್ಧವಾದ ಅವ್ಯಾಕೃತಾಕಾಶವಿದೆಯೋ, ಅದು ಸಕಲ ಪದಾರ್ಥಗಳಿಗೂ ಆಧಾರವಾಗಿದೆ ಎಂದಾಗಲೀ, ಅಥವಾ ಆಕಾಶವು ನಾಮರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯವಾಗಿದೆ ಎಂದು ಸರ್ವೋನಿರ್ವೋಢೃತ್ವವು ಪ್ರಸಿದ್ಧವಾಗಿದೆ ಎಂದಾಗಲೀ ಶ್ರುತಿಯ ಅರ್ಥವನ್ನು ವಿವಕ್ಷಿಸಬೇಕು. ಅಂದರೆ ಆಕಾಶವು ಉದ್ದೇಶವಾಗುತ್ತದೆ. ಸರ್ವೋನಿರ್ವೋಢೃತತ್ವವು ವಿಧೇಯವಾಗುತ್ತದೆಂದು ತಿಳಿಯುತ್ತದೆ.

**प्रकाशः** – नन्वाद्ये निपातद्योतितप्रसिद्धिसत्त्वेऽपि निरवकाशविष्णुलिङ्ग-श्रवणात्कथमाकाश इति सिध्यतीत्यतोऽस्पष्टत्वात् फलफलिभावं स्वयमाह – **यद्याद्य इति ।।**

ಸಂಶಯದ ಮೊದಲನೆಯ ಕೋಟಿಗಳನ್ನು ವಿವಕ್ಷಿಸಿದಾಗ ನಿಪಾತದಿಂದ ತಿಳಿಯುವ ಪ್ರಸಿದ್ಧಿಯನ್ನು ವಿವಕ್ಷಿಸಿದರೂ ನಿರವಕಾಶವಾದ ಅನಾಮರೂಪತ್ವವೆಂಬ ವಿಷ್ಣುಲಿಂಗವು ಶ್ರುತಿಯಲ್ಲಿ ಕೇಳಿಸುತ್ತಿರುವ ಕಾರಣ ಪ್ರಸಿದ್ಧಾಕಾಶವನ್ನು ಆಕಾಶಶಬ್ದ ಪ್ರತಿಪಾದ್ಯವೆಂದು ಹೇಗೆ ತಿಳಿಯುತ್ತೀರಿ ? ಎಂಬ ಪ್ರಶ್ನೆಗೆ ಅಸ್ಪಷ್ಟವಾದ ಕಾರಣ ಫಲಫಲಿಭಾವವನ್ನು ಸ್ವತಃ ಗ್ರಂಥಕಾರರೇ 'ಯದ್ಯಾದ್ಯೇ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**प्रकाशः** – उद्देश्य एवान्वय इत्यर्थः ।। **अनामेति** ।। ते यदन्तरेति वाक्योक्तं नामरूपराहित्यमित्यर्थः ।। **कथञ्चिदिति** ।। वक्ष्यमाणदिशेति भावः ।। **द्वितीय इति** ।। विधेयान्वय इत्यर्थः ।

'ಯದ್ಯಾದ್ಯೇ' ಎಂದರೆ ಉದ್ದೇಶ್ಯದಲ್ಲಿ ಅನ್ವಯ ಮಾಡುವುದಾದರೆ ಎಂದರ್ಥ. 'ಅನಾಮರೂಪ' ಎಂದರೆ 'ತೇ ಯದಂತರ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ನಾಮರೂಪರಾಹಿತ್ಯವೆಂದರ್ಥ. 'ಕಥಂಚಿತ್' ಎಂದರೆ ಮುಂದೆ ಹೇಳುವ ಪ್ರಕಾರ ನಾಮರೂಪರಾಹಿತ್ಯವನ್ನು ಉಪಪಾದಿಸಬೇಕು ಎಂದರ್ಥ. ದ್ವಿತೀಯ ಎಂದರೆ ವಿಧೇಯವಾದ ಸರ್ವನಿರ್ವೋಢೃತ್ವದಲ್ಲಿ ಅನ್ವಯ ಮಾಡುವುದಾದರೆ ಎಂದರ್ಥ.




'ಆಕಾಶೋ ವೈನಾಮ ನಾಮರೂಪಯೋರ್ನಿರ್ವಹಿತ' ಎಂಬ ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. 'ವೈ ನಾಮ' ಎಂಬ ಪದಗಳು ಆಕಾಶವು ಪ್ರಸಿದ್ಧವಾದುದೆಂದು ಹೇಳುತ್ತಿವೆ. ನಾಮರೂಪಾತ್ಮಕವಾದ ಪ್ರಪಂಚಕ್ಕೆ ಅಂತಹ ಆಕಾಶವು ಆಶ್ರಯವಾಗಿದೆಯೆಂದೂ ಕೂಡ ಹೇಳುತ್ತಿದೆ. ಪ್ರತ್ಯಕ್ಷಾನುಭವದಂತೆ ಅವ್ಯಾಕೃತಾಕಾಶವೇ ನಾಮರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯವಾದ ಕಾರಣ ಮತ್ತು ಆಕಾಶಶಬ್ದದ ಪ್ರಸಿದ್ಧಿಯೂ ಕೂಡ ಅವ್ಯಾಕೃತಾಕಾಶದಲ್ಲೇ ಇರುವ ಕಾರಣದಿಂದಲೂ ಅವ್ಯಾಕೃತಾಕಾಶವೇ 'ಆಕಾಶೋ ವೈ ನಾಮ' ಇತ್ಯಾದಿ

ಶ್ರುತಿಯಿಂದ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ. 'ತೇ ಯದಂತರ ತದ್ಬ್ರಹ್ಮ' ಎಂಬ ಮುಂದಿನ ವಾಕ್ಯದಲ್ಲಿ ಶ್ರುತವಾದ ಆಕಾಶವನ್ನು ನಾಮರೂಪಾತ್ಮಕವಾದ ಪ್ರಪಂಚಕ್ಕಿಂತಲೂ ಭಿನ್ನವೆಂದು ಅಥವಾ ಪ್ರಾಕೃತನಾಮರಹಿತರೆಂದು ಹೇಳಿರುವ ಕಾರಣ ಬ್ರಹ್ಮಶಬ್ದವಿರುವುದರಿಂದಲೂ ಆಕಾಶವು ಬ್ರಹ್ಮನೇ ಆಗುತ್ತಾನೆಂಬುದು ಈ ಅಧಿಕರಣದ ಸಿದ್ಧಾಂತ.

• • • • •

## ಅವ್ಯಾಕೃತಾಕಾಶವೇ ಪ್ರತಿಪಾದ್ಯವೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु ।। यद्यप्याकाशे ''तद्ब्रह्म तदमृतं स आत्म'' इति ब्रह्मश्रुत्यादीनि सन्ति । आकाशशब्दस्तु तल्लिङ्गादिति न्यायेन ब्रह्मण्यपि मुख्यवृत्त्या युक्तः । नच वाच्यं तल्लिङ्गादित्यत्र भूताकाशमिति पूर्वःपक्षः । अत्र त्वव्याकृताकाशमिति । निरवकाशलिङ्गेन प्रसिद्धिबाधस्योभयत्र साम्यात्**

ಅನುವಾದ - ಅಧಿಕರಣದ ಪೂರ್ವಪಕ್ಷ ಹೀಗಿದೆ - ಛಾಂದೋಗ್ಯೋಪನಿಷತ್ತಿನ ಆಕಾಶಶಬ್ದದಿಂದ ಅವ್ಯಾಕೃತಾಕಾಶವೇ ಪ್ರತಿಪಾದ್ಯವಾಗುತ್ತಿದೆ.

ಪ್ರಶ್ನೆ - ಆಕಾಶಶಬ್ದವು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆಯೆನ್ನಲು 'ತದ್ಬ್ರಹ್ಮ ತದಮೃತಂ ಸ ಆತ್ಮ' ಇವೇ ಮೊದಲಾದ ಬ್ರಹ್ಮಪ್ರತಿಪಾದಕವಾದ ಬ್ರಹ್ಮಶ್ರುತಿ, ಅಮೃತತ್ವಲಿಂಗ, ಆತ್ಮಶ್ರುತಿ ಇವುಗಳಿರುತ್ತವೆ. ಆಕಾಶಶಬ್ದವಾದರೂ ಹಿಂದೆ ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾಗಿದೆ. 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಪ್ರಸಿದ್ಧಿಯನ್ನು ಬಾಧಿಸಿ, ನಿರವಕಾಶಲಿಂಗದಿಂದ ಆಕಾಶಶಬ್ದವು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ ಎಂದು ಸಮನ್ವಯ ಮಾಡಿದ್ದರಿಂದ ಶ್ರುತಿಯಲ್ಲಿರುವ ಆಕಾಶಶಬ್ದವೂ ಕೂಡ ವಿಷ್ಣುವಿನಲ್ಲೇ ಮುಖ್ಯವಾಯಿತು. ಹಾಗಾಗಿ ಪೂರ್ವಪಕ್ಷವೇ ಉದಯವಾಗುವುದಿಲ್ಲ.

ಇನ್ನು ಹಿಂದೆ ಭೂತಾಕಾಶವಾಚಕವಾದ ಆಕಾಶಪದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದರೂ ಕೂಡ ಅವ್ಯಾಕೃತಾಕಾಶವಾಚಕವಾದ ಆಕಾಶಪದದ ಸಮನ್ವಯವನ್ನು ಮಾಡಿರುವುದಿಲ್ಲ. ಹಾಗಾಗಿ ಈ ಅಧಿಕರಣವು ಸಾರ್ಥಕವಾಗಿದೆಯಲ್ಲವೇ?

ಹೀಗೆ ಶಂಕಿಸಬಾರದು. ಏಕೆಂದರೆ ನಿರವಕಾಶಲಿಂಗದಿಂದ ಪ್ರಸಿದ್ಧಿಬಾಧವು ಭೂತಾಕಾಶ ಮತ್ತು ಅವ್ಯಾಕೃತಾಕಾಶವೆಂಬ ಎರಡೂ ಪಕ್ಷಗಳಲ್ಲಿಯೂ ಸಮಾನವಾಗಿದೆ. ವಿಷಯಭೇದಮಾತ್ರದಿಂದ ಅಧಿಕರಣಭೇದ ಮಾಡುವುದಾದರೆ, ಅನವಸ್ಥಾದೋಷವು ಬರುತ್ತದೆ. ಹಾಗಾಗಿ ಈ ಅಧಿಕರಣದ ಪೂರ್ವಪಕ್ಷವು ಹೇಗೆ ಉದಯವಾಗುತ್ತದೆ?

ಪರಿಪೂರ್ಣಚಂದ್ರಿಕಾ

**तथापि "इह वैनाम" इति निपातद्योतितप्रसिद्धिर्न ब्रह्मणि युक्ता । लोके तस्याप्रसिद्धत्वात् ।**

ಉತ್ತರ - ಈ ಅಧಿಕರಣದಲ್ಲಿ ಆಕಾಶಶಬ್ದದ ಸಮನ್ವಯವನ್ನು ಮಾಡುತ್ತಿರುವುದು ಸಾರ್ಥಕವೇ ಆಗಿದೆ. ಏಕೆಂದರೆ 'ವೈ ನಾಮ' ಎಂಬ ನಿಪಾತಗಳಿಂದ ತಿಳಿಯಲ್ಪಟ್ಟ ಪ್ರಸಿದ್ಧಿಯು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಲೋಕದಲ್ಲಿ ಬ್ರಹ್ಮನು ಪ್ರಸಿದ್ಧನೇ ಆಗಿಲ್ಲ.

**वेदे प्रसिद्धत्वेऽपि "अनादिर्वा अयमाकाश" इत्यादौ गगनस्यापि प्रसिद्धेर्व्यावर्त्यस्याप्रसिद्धाकाशस्यैवाभावेन निपातवैयर्थ्यात् ।**

ವೇದದಲ್ಲಿ ಬಹ್ಮನು ಪ್ರಸಿದ್ಧನಾಗಿದ್ದರೂ ಕೂಡ 'ಅನಾದಿರ್ವಾ ಅಯಮಾಕಾಶಃ' ಇತ್ಯಾದಿಯಾಗಿ ಗಗನವೂ ಕೂಡ ವೇದದಲ್ಲಿ ಪ್ರಸಿದ್ಧವಾದ್ದರಿಂದ ನಿಪಾತಗಳಿಂದ ವಾರ್ವತ್ಯವಾದ ಅಪ್ರಸಿದ್ಧಾಕಾಶವೇ ಇಲ್ಲವೆಂದಂತಾಯಿತು. ನಿಪಾತಗಳಿಗೆ ಸಾರ್ಥಕ್ಯವೇ ಇಲ್ಲದಂತಾಗುತ್ತದೆ.

**गगनपक्षे तु शास्त्रयोनित्वेन लोकाप्रसिद्धब्रह्माकाशस्य व्यावर्त्यत्वाल्लौकिक-प्रसिद्धिद्योतकनिपातावैयर्थ्यम् ।**

ಆದರೆ ಅವ್ಯಾಕೃತಾಕಾಶವೇ ಪ್ರತಿಪಾದ್ಯವಾಗಿದೆಯೆಂದು ವಿವಕ್ಷಿಸಿದಾಗ ಬ್ರಹ್ಮನು ಶಾಸ್ತ್ರಗಳಿಂದಷ್ಟೇ ಪ್ರಸಿದ್ಧನಾಗಿರುವ ಕಾರಣ ಲೋಕದಿಂದ ಅಪ್ರಸಿದ್ಧನಾಗಿದ್ದಾನೆ. ಅಂತಹ ಅಪ್ರಸಿದ್ಧನಾದ ಆಕಾಶನಾಮಕ ಪರಮಾತ್ಮನನ್ನು ವ್ಯಾವೃತ್ತಿ ಮಾಡಲು ನಿಪಾತದ್ವಯಗಳು ಸಾರ್ಥಕವಾಗಿವೆ. ಹಾಗಾಗಿ ಲೌಕಿಕಪ್ರಸಿದ್ಧಿಗೆ ದ್ಯೋತಕವಾದ ನಿಪಾತಗಳಿಗೆ ವೈಯರ್ಥ್ಯವನ್ನು ಹೇಳಲಾಗದು.

**नच वाच्यं वेदमात्रप्रसिद्धिर्निपातद्योत्या । तथा च लोकवेदप्रसिद्धं गगनं व्यावर्त्यत इति ।**

ಪ್ರಶ್ನೆ - ಜಡಾಕಾಶ ವೇದದಲ್ಲಿ ಮಾತ್ರ ಪ್ರಸಿದ್ಧವಾಗಿಲ್ಲ. ಲೋಕದಲ್ಲೂ ಕೂಡ ಪ್ರಸಿದ್ಧವಾಗಿದೆ. ನಿಪಾತಗಳು ವೇದಪ್ರಸಿದ್ಧಿಯನ್ನಷ್ಟೇ ತಿಳಿಸುತ್ತಿವೆ. ಆದ್ದರಿಂದ ಲೋಕದಲ್ಲಿ ಹಾಗೂ ವೇದದಲ್ಲಿ ಪ್ರಸಿದ್ಧವಾದ ಅವ್ಯಾಕೃತಾಕಾಶವನ್ನು ಈ ನಿಪಾತವು ವ್ಯಾವೃತ್ತಿ ಮಾಡುತ್ತಿದೆಯೆಂದು ವ್ಯಾಖ್ಯಾನ ಮಾಡಬಹುದಲ್ಲವೇ?

**मात्रशब्दार्थभूताया लोकाप्रसिद्धेः प्रसिद्धिद्योतकनिपाताद्योत्यत्वात् ।**

ಉತ್ತರ - ಹೀಗೆ ಪ್ರಶ್ನಿಸಬಾರದು. ಪ್ರಸಿದ್ಧಿದ್ಯೋತಕವಾದ ನಿಪಾತವು ಲೋಕ ಅಪ್ರಸಿದ್ಧಿಯನ್ನು ದ್ಯೋತನೆ ಮಾಡುವುದಿಲ್ಲ. ಕೇವಲ ಪ್ರಸಿದ್ಧಿಯನ್ನಷ್ಟೇ ದ್ಯೋತನೆ ಮಾಡುತ್ತದೆ. ಆದ್ದರಿಂದ ನಿಮ್ಮ ವ್ಯಾಖ್ಯಾನವು ಅಯುಕ್ತವಾಗುತ್ತದೆ.

**किञ्च ब्रह्मवेदमात्रे प्रसिद्धम् । गगनं तु लोके वेदेच स्वरूपेण नामरूपावकाश-दानात्तन्निर्वाहकतया च प्रसिद्धम् ।**

ಮತ್ತು ಬ್ರಹ್ಮನು ವೇದದಲ್ಲಷ್ಟೇ ಪ್ರಸಿದ್ಧನಾಗಿದ್ದಾನೆ. ಅವ್ಯಾಕೃತಾಕಾಶವಾದರೂ ಲೋಕದಲ್ಲಿ ಹಾಗೂ ವೇದದಲ್ಲಿಯೂ ಸ್ವರೂಪತಃ ಪ್ರಸಿದ್ಧವಾಗಿದೆ. ಅಷ್ಟೇ ಅಲ್ಲದೇ ಶಬ್ದಪ್ರಪಂಚ ಹಾಗೂ ಅರ್ಥಪ್ರಪಂಚಗಳಿಗೆ ಅವಕಾಶವನ್ನು ನೀಡುವ ಮೂಲಕ, ಅವುಗಳ ನಿರ್ವಾಹಕವಾಗಿದೆಯೆಂಬುದೂ ಸಹ ಪ್ರಸಿದ್ಧವಾಗಿದೆ. ಬ್ರಹ್ಮನು ಅರ್ಥಪ್ರಪಂಚಕ್ಕೆ ಹಾಗೂ ಶಬ್ದಪ್ರಪಂಚಕ್ಕೆ ಹೀಗೆ ನಿರ್ವಾಹಕನಾಗಿದ್ದಾನೆಂದು ಲೋಕದಲ್ಲಿ ಪ್ರಸಿದ್ಧವಾಗಿಲ್ಲ.

**अत एव ''नहि विष्णुस्तन्निर्वहितृत्वं वा प्रसिद्धम्'' इति टीकायामाकाशस्य स्वरूपेण तन्निर्वाहकत्वेन च लोकवेदयोः प्रसिद्धिं सिद्धां कृत्वा विष्णोस्तदप्रसिद्धिरुक्ता। न चासङ्कुचितप्रसिद्धौ सत्यां सङ्कुचितप्रसिद्धिद्योतनं युक्तम् ।**

ಆದ್ದರಿಂದಲೇ 'ನಹಿ ವಿಷ್ಣುಃ ತನ್ನಿರ್ವಹಿತೃತ್ವಂ ವಾ ಪ್ರಸಿದ್ಧಮ್' ವಿಷ್ಣುವಿಗೆ ನಾಮರೂಪಗಳ ನಿರ್ವಹಿತೃತ್ವವು ಪ್ರಸಿದ್ಧವಾಗಿಲ್ಲ ಎಂಬ ಟೀಕೆಯು ಹೊರಟಿದೆ. ಅಂದರೆ ಆಕಾಶಕ್ಕೆ ಸ್ವರೂಪೇಣ ಮತ್ತು ನಾಮರೂಪಗಳ ನಿರ್ವಾಹಕತ್ವೇನ ಲೋಕವೇದಗಳಲ್ಲಿ ಪ್ರಸಿದ್ಧಿಯಿದೆ. ವಿಷ್ಣುವಿನಲ್ಲಿ ಲೋಕಪ್ರಸಿದ್ಧಿಯಿಲ್ಲದ ಕಾರಣ ಅಪ್ರಸಿದ್ಧನಾಗಿರುತ್ತಾನೆ ಎಂದು ಟೀಕೆಯ ಅಭಿಪ್ರಾಯ.

ಲೋಕ ಹಾಗೂ ವೇದಗಳಲ್ಲಿ ಪ್ರಸಿದ್ಧವಾಗಿರುವಿಕೆಯೆಂಬ ಅಸಂಕುಚಿತ ಅರ್ಥವನ್ನೇ ವಿವಕ್ಷಿಸಲು ಬರುವಾಗ ಸಂಕುಚಿತವಾದ ವೇದಪ್ರಸಿದ್ಧಿಯನ್ನಷ್ಟೇ ವಿವಕ್ಷಿಸುವುದು ಸರಿಯಲ್ಲ. ಆದ್ದರಿಂದ ಲೋಕದಿಂದಲೂ, ವೇದದಿಂದಲೂ ಪ್ರಸಿದ್ಧವಾದ ನಾಮರೂಪಗಳಿಗೆಲ್ಲಾ ಆಶ್ರಯವಾದ ಅವ್ಯಾಕೃತಾಕಾಶವೇ ಆಕಾಶಶಬ್ದ ಪ್ರತಿಪಾದ್ಯವಾಗುತ್ತವೆ.

**प्रकाशः –**

अत्र टीकायाम् ''अयमाकाशः प्रसिद्धाकाश एव भवेत् । आकाशशब्दस्य तत्र रूढत्वात्'' इत्युक्त्वा ''नच वाच्यम्'' इत्यादिना पूर्वपक्षानुदयमाशंक्य वैनामेति निपाताभ्यां पूर्वपक्षोदयो दर्शितः ।

ವಿವರಣೆ - ಈ ಅಧಿಕರಣದ ಟೀಕೆಯಲ್ಲಿ - 'ಅಯಮಾಕಾಶಃ ಪ್ರಸಿದ್ಧಾಕಾಶ ಏವ ಭವೇತ್ । ಆಕಾಶಶಬ್ದಸ್ಯ ತತ್ರ ರೂಢತ್ವಾತ್' ಈ ಆಕಾಶವೆಂದರೆ ಪ್ರಸಿದ್ಧವಾದ ಆಕಾಶವೇ ಆಗಬೇಕು. ಏಕೆಂದರೆ

ಆಕಾಶಶಬ್ದವು ಅವ್ಯಾಕೃತಾಕಾಶದಲ್ಲೇ ರೂಢವಾಗಿದೆ ಎಂದು ಹೇಳಿ, ಅನಂತರ 'ನಚ ವಾಚ್ಯಮ್' ಇತ್ಯಾದಿ ವಾಕ್ಯಗಳಿಂದ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ಆಶಂಕಿಸಿ 'ವೈ ನಾಮ' ಎಂಬ ನಿಪಾತಗಳಿಂದ ಪೂರ್ವಪಕ್ಷ ಉದಯವು ಆಗುತ್ತದೆಂದು ಸಮರ್ಥಿಸಿದ್ದಾರೆ.

**प्रकाशः** – तत्र शङ्कोत्तरग्रन्थौ व्यनक्ति ।। **यद्यपीत्यादिना** ।। श्रुत्यादीनीत्यादिपदेन नामरूपनिर्वोढृत्वरूपसर्वाधारत्वामृतत्वानामरूपत्वग्रहः । ''सर्वाधारत्वलिङ्गेन'' इति टीकोपलक्षणमिति भावः ।

ಪ್ರಕೃತ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂಬ ಶಂಕೆಯನ್ನು ಹಾಗೂ ಅದಕ್ಕೆ ಉತ್ತರವನ್ನು ಗ್ರಂಥಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ವಾಕ್ಯಗಳಿಂದ. 'ಶ್ರುತ್ಯಾದೀನಾಮ್' ಎಂಬ ಆದಿಪದದಿಂದ ನಾಮರೂಪನಿರ್ವೋಢೃತ್ವವೆಂಬ ಸರ್ವಾಧಾರತ್ವವನ್ನು, ಮತ್ತು ಅನಾಮರೂಪತ್ವವನ್ನು ವಿವಕ್ಷಿಸಬೇಕು. 'ಸರ್ವಾಧಾರತ್ವಲಿಂಗೇನ' ಎಂಬ ಟೀಕೆಯು ಕೇವಲ ಉಪಲಕ್ಷಣವಾಗಿದೆಯೆಂದು ಇದರ ಅಭಿಪ್ರಾಯ.

**प्रकाशः** – आकाशश्रुतिर्निरवकाशेत्यत आकाशशब्दस्य विष्णावपि प्रवृत्तेरसौ सावकाश इति टीकार्थं व्यक्तमाह – **आकाशशब्दस्त्विति** ।। टीकायां सावकाशत्वशङ्का न युक्तेति भावेनाशंक्य टीकाभिप्रायविवरणेन समाधत्ते ।। नच वाच्यमित्यादिना साम्यादित्यन्तेन ।।

ಆಕಾಶಶ್ರುತಿಯು ನಿರವಕಾಶವೆಂದು ಹೇಳಿದಾಗ ಆಕಾಶಶಬ್ದವು ವಿಷ್ಣುವಿನಲ್ಲಿಯೂ ಪ್ರವೃತ್ತವಾಗುವ ಕಾರಣ ಸಾವಕಾಶವೇ ಆಗಿದೆ ಎಂಬ ಟೀಕೆಯ ಅರ್ಥವನ್ನು 'ಆಕಾಶಶಬ್ದಸ್ತು' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಟೀಕೆಯಲ್ಲಿ ಮಾಡಿದ ಸಾವಕಾಶತ್ವ ಶಂಕೆಯು ಅಯುಕ್ತವಲ್ಲವೇ? ಎಂಬ ಅಭಿಪ್ರಾಯದಿಂದ ಆಶಂಕಿಸಿ ಟೀಕಾಭಿಪ್ರಾಯವನ್ನು ವಿವರಿಸುವ ಮೂಲಕ ಸಮಾಧಾನವನ್ನು ಹೇಳುತ್ತಿದ್ದಾರೆ 'ನಚ ವಾಚ್ಯಮ್' ಎಂಬಲ್ಲಿಂದ ಪ್ರಾರಂಭವಾಗಿ 'ಸಾಮ್ಯಾತ್' ಎಂಬಲ್ಲಿಯ ತನಕ.

**प्रकाशः** – **भूतेति** ।। तत्र भाष्ये भूतपदप्रयोगादिह टीकायां सिद्धान्ते ''अवकाशस्यापि नामवत्त्वात्'' इत्युक्तेरिति भावः ।

ಪ್ರಥಮಪಾದದ ಆಕಾಶಾಧಿಕರಣದ ಭಾಷ್ಯದಲ್ಲಿ 'ಭೂತ' ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಟೀಕೆಯ ಸಿದ್ಧಾಂತದಲ್ಲಿ 'ಅವಕಾಶಸ್ಯಾಪಿ ನಾಮವತ್ತ್ವಾತ್' ಎಂದು ಹೇಳಿದ್ದರಿಂದ, ಭೂತಾಕಾಶವೇ ಪ್ರಥಮಪಾದದ ಆಕಾಶಾಧಿಕರಣದಲ್ಲಿ ವಿವಕ್ಷಿತವೆಂದು ತಿಳಿಯುತ್ತದೆ.

**प्रकाशः** – वैनामेति निपातयोरुद्देश्याकाशान्वयमुपेत्य तत्र लोकप्रसिद्धाकाश इत्यर्थ उत वेदप्रसिद्धाकाश इति विकल्पौ हृदि कृत्वाऽर्थद्वयमप्याकाशस्य विष्णुत्वेऽयुक्तमित्याह – **लोक इति** ।।

'ವೈ ನಾಮ' ಎಂಬೆರಡು ನಿಪಾತಗಳು ಉದ್ದೇಶ್ಯವಾದ ಆಕಾಶದಲ್ಲಿ ಅನ್ವಯವನ್ನು ಹೊಂದುತ್ತವೆಂದು ಒಪ್ಪಿ, ಲೋಕಪ್ರಸಿದ್ಧವಾದ ಆಕಾಶವು ಶ್ರುತ್ಯರ್ಥವೋ, ಅಥವಾ ವೇದಪ್ರಸಿದ್ಧವಾದ ಆಕಾಶವೋ? ಎಂದು ವಿಕಲ್ಪವನ್ನು ಮನಸ್ಸಿನಲ್ಲಿಟ್ಟುಕೊಂಡು ಎರಡೂ ಅರ್ಥಗಳು ಆಕಾಶವು ವಿಷ್ಣುವೆಂಬ ಪಕ್ಷದಲ್ಲಿ ಅಯುಕ್ತವಾಗುತ್ತವೆಂದು 'ಲೋಕೇ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಅಂದರೆ ಲೋಕಪ್ರಸಿದ್ಧಿಯಂತು ವಿಷ್ಣುವಿನಲ್ಲಿ ಇರುವುದೇ ಇಲ್ಲ. ವೇದಪ್ರಸಿದ್ಧಿಯನ್ನು ವಿವಕ್ಷಿಸಿದರೆ, ವ್ಯಾವರ್ತ್ಯವೇ ಇರುವುದಿಲ್ಲ ಎಂಬ ಕಾರಣದಿಂದ ಈ ಅರ್ಥದ್ವಯಗಳು ವಿಷ್ಣುವಿನಲ್ಲಿ ಅಯುಕ್ತವಾಗಿದೆ ಎಂದು ಇದರ ಅಭಿಪ್ರಾಯ.

**प्रकाशः** – आकाशस्य ब्रह्मधर्मत्वेऽपि निपातयोः सार्थक्यमाशंक्य निराह – **नच वाच्यं वेदमात्रेति** ।। "आकाशो वैनाम" इत्यस्य वेदमात्रे प्रसिद्धो य आकाशस्स नामरूपयोर्निर्वहितेत्यर्थः । तादृशश्चाकाशो विष्णुरेव नतु गगनम् । तस्य लोकवेदोभयप्रसिद्धत्वादिति व्यावर्त्यसत्त्वात्सार्थक्यं निपातयोरिति भावः ।।

ಆಕಾಶವು ಬ್ರಹ್ಮನಾದರೂ ಕೂಡ ನಿಪಾತಗಳು ಸಾರ್ಥಕವಾಗುತ್ತವೆಂದು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ನಚ ವಾಚ್ಯಮ್' ಇತ್ಯಾದಿ ಗ್ರಂಥದಿಂದ. 'ಆಕಾಶೋ ವೈ ನಾಮ' ಎಂಬುದು ವೇದದಲ್ಲಷ್ಟೇ ಪ್ರಸಿದ್ಧವಾದ ಯಾವ ಆಕಾಶವಿದೆಯೋ, ಅದು ನಾಮರೂಪಗಳಿಗೆ ಆಧಾರವಾಗಿದೆಯೆಂದರ್ಥ. ಅಂತಹ ಆಕಾಶನು ವಿಷ್ಣುವೇ ಆಗುತ್ತಾನೆ ಹೊರತು, ಗಗನವಲ್ಲ. ಏಕೆಂದರೆ ವಿಷ್ಣು ಲೋಕ ಹಾಗೂ ವೇದಗಳೆರಡರಲ್ಲಿಯೂ ಪ್ರಸಿದ್ಧನಾಗಿದ್ದಾನೆ. ಹೀಗೆ ವ್ಯಾವರ್ತ್ಯವಿರುವ ಕಾರಣ ನಿಪಾತಗಳು ಸಾರ್ಥಕವಾಗುತ್ತವಲ್ಲವೆ? ಎಂಬುದು ಈ ಪ್ರಶ್ನೆಯ ಅಭಿಪ್ರಾಯ.

**प्रकाशः – मात्रशब्दार्थेति** ।। वेदमात्रप्रसिद्ध इत्यस्य लोकतोऽप्रसिद्धत्वे सति वेदतः प्रसिद्ध इत्यर्थस्स्यात् । तत्र च प्रसिद्धिमात्रद्योतकस्य निपातद्वयस्य विशेषानालिङ्गित-सामान्याभावेन तद्विशेषवेदप्रसिद्धिद्योतकत्वसम्भवेऽपि न लोकाप्रसिद्धत्वद्योतकत्वम्। तस्य तत्रासामर्थ्यादिति भावः ।

ವೇದದಲ್ಲಿ ಮಾತ್ರ ಪ್ರಸಿದ್ದನಾಗಿದ್ದಾನೆ ಎಂಬುದಕ್ಕೆ ಲೋಕದಲ್ಲಿ ಪ್ರಸಿದ್ಧವಾಗದೇ, ವೇದದಲ್ಲಿ ಮಾತ್ರ ಪ್ರಸಿದ್ಧವಾಗಿದೆ ಎಂದರ್ಥ. ಆವಾಗ 'ವೈ ನಾಮ' ಎಂಬ ನಿಪಾತವು ಪ್ರಸಿದ್ಧಿಸಾಮಾನ್ಯವನ್ನಷ್ಟೇ ಹೇಳುತ್ತದೆ, ಯಾವುದೇ ಒಂದು ವಿಶೇಷದಿಂದ ಅನಾಲಿಂಗಿತ ಸಾಮಾನ್ಯವು ಇರುವುದಿಲ್ಲ. ಏನಾದರೂ ಒಂದು ವಿಶೇಷವು ಸಾಮಾನ್ಯದ ಜೊತೆಗೆ ಕೂಡಿಯೇ ಇರುತ್ತದೆ. ಪ್ರಕೃತ ವೇದಪ್ರಸಿದ್ಧಿಯೆಂಬ ವಿಶೇಷವನ್ನು ಹೇಳಲಿ. ಆದರೆ ಬೇರೆ ಕಡೆ ಪ್ರಸಿದ್ಧಿಯಿಲ್ಲವೆಂಬುದನ್ನು ಹೇಳಲು ಸಾಧ್ಯವಿಲ್ಲ. ಶಬ್ದಗಳಿಗೆ ಅಂತಹ ಶಕ್ತಿಯಿರುವುದಿಲ್ಲ ಎಂದಭಿಪ್ರಾಯ.

**प्रकाशः** – प्रसिद्ध्यर्थकनिपातेत्यादिव्यवहारे कार्ये द्योतकत्वद्योत्यत्वादिव्यवहारस्तु निपातानां द्योतकत्वमेव,न वाचकत्वमिति पक्षमुपेत्य "प्रसिद्धिद्योतकत्वात्" इति टीकामनुरुध्येति ध्येयम् ।

ಗ್ರಂಥದಲ್ಲಿ ಪ್ರಸಿದ್ಧ್ಯರ್ಥಕವಾದ ನಿಪಾತ ಎಂದೇ ವ್ಯವಹಾರ ಮಾಡಬೇಕು. ಆದರೆ ಎಲ್ಲೆಡೆಯೂ 'ನಿಪಾತದಿಂದ ದ್ಯೋತ್ಯವಾದ' ಎಂದು ವ್ಯವಹರಿಸುತ್ತಿದ್ದಾರೆ. ನಿಪಾತಗಳಿಂದ ಅರ್ಥವು ಪ್ರತಿಪಾದ್ಯವಾಗುತ್ತದೆ ಹೊರತು, ಸೂಚಿತವಾಗುವುದಿಲ್ಲ. ಹೀಗಿರುವಾಗ ಗ್ರಂಥಕಾರರು ದ್ಯೋತ್ಯವೆಂಬ ಪದಪ್ರಯೋಗವನ್ನು ಏಕೆ ಮಾಡುತ್ತಿದ್ದಾರೆ ? ಎಂದು ಪ್ರಶ್ನಿಸಬಾರದು. ನಿಪಾತಗಳು ಕೇವಲ ದ್ಯೋತಕಗಳಾಗುತ್ತವೆ ಹೊರತು, ವಾಚಕಗಳಲ್ಲ ಎಂದು ಕೆಲವರ ಮತವಿದೆ. ಆ ಪಕ್ಷವನ್ನು ಒಪ್ಪಿ, ಗ್ರಂಥಕಾರರು ಹಾಗೆ ಹೇಳಿದ್ದಾರೆ. ಅಥವಾ 'ಪ್ರಸಿದ್ಧಿದ್ಯೋತಕತ್ವಾತ್' ಎಂದು ಟೀಕಾಕಾರರು ಹೇಳಿದ್ದಾರೆ. ಅದನ್ನೇ ಅನುಸರಿಸಿ ಗ್ರಂಥಕಾರರೂ ಸಹ ದ್ಯೋತಕಶಬ್ದವನ್ನೇ ಪ್ರಯೋಗಿಸುತ್ತಿದ್ದಾರೆ.

**प्रकाशः** – ननु प्रसिद्धिसामान्यद्योतकस्य क्वचिद्विशेषे पर्यवसानावश्यंभावेन वेदप्रसिद्ध आकाश इत्युक्त्यैवार्थाल्लोकाप्रसिद्ध इति गम्यत इत्यतो वाऽभ्युपेत्यवादेन वाह – **किञ्चेति** ।।

ಪ್ರಸಿದ್ಧಿಸಾಮಾನ್ಯಕ್ಕೆ ದ್ಯೋತಕವಾದದ್ದು ಯಾವುದಾದರೊಂದು ವಿಶೇಷದಲ್ಲಿ ಪರ್ಯವಸಾನವಾಗಲೇ ಬೇಕು. ಆದ್ದರಿಂದ ಆಕಾಶವು ವೇದಪ್ರಸಿದ್ಧವಾಗಿದೆಯೆಂದು ಹೇಳಿದ್ದರಿಂದಲೇ ಅರ್ಥಾತ್ ಲೋಕರೂಢಿಯಿಂದ ಪ್ರಸಿದ್ಧವಲ್ಲವೆಂಬುದೂ ಕೂಡ ತಿಳಿಯುತ್ತದಲ್ಲವೇ? ಎಂಬ ಪ್ರಶ್ನೆಗೆ ಅಂಗೀಕಾರವಾದ ಮಾಡಿ ಹಾಗೆ ಹೇಳಿದ್ದಾರೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಿದ್ದಾರೆ.

**प्रकाशः** – वैनामेति निपातद्वयस्य नामरूपयोर्निर्वहिता वैनामेति विधेयान्वयमुपेत्याप्याह – **नामरूपेति** ।। लोके तस्याप्रसिद्धत्वादित्यादिना प्रतिपादितार्थं टीकारूढं करोति ।। **अत एवेति** ।।

'ವೈ ನಾಮ' ಎಂಬೆರಡು ನಿಪಾತಗಳಿಗೆ ನಾಮರೂಪನಿರ್ವಹಿತೃತ್ವ ಎಂಬ ವಿಧೇಯದಲ್ಲಿ ಅನ್ವಯವನ್ನು ಒಪ್ಪಿ 'ನಾಮರೂಪ' ಇತ್ಯಾದಿ ಗ್ರಂಥವು ಹೊರಟಿದೆ. 'ಲೋಕೇ ತಸ್ಯಾಪ್ರಸಿದ್ಧತ್ವಾತ್' ಇತ್ಯಾದಿ ಗ್ರಂಥದಿಂದ ಪ್ರತಿಪಾದಿತವಾದ ಅರ್ಥವನ್ನೆಲ್ಲಾ ಟೀಕಾರೂಢ ಮಾಡುತ್ತಿದ್ದಾರೆ 'ಅತ ಏವ' ಇತ್ಯಾದಿ ಗ್ರಂಥದಿಂದ.

**प्रकाशः** – निपातयोरुभयत्रान्वयादेवोभयथा प्रसिद्धेराकाशे सम्भवादेव चेत्यर्थः। **निर्वहितृत्वमिति** ।। श्रौतपदानुकरणमेतदित्यदोषः ।

'ವೈ ನಾಮ' ಎಂಬೆರಡು ನಿಪಾತಗಳಿಗೆ ಎರಡೂ ಕಡೆಯು ಅನ್ವಯವನ್ನು ಮಾಡಬಹುದಾದ್ದರಿಂದಲೇ ಅಥವಾ ಹೇಗಾದರೂ ಆಕಾಶದಲ್ಲಿ ಪ್ರಸಿದ್ಧಿ ಎಂಬರ್ಥವನ್ನೇ ಹೇಳುವುದರಿಂದಲೂ ಎಂದರ್ಥ. 'ನಿರ್ವಹಿತೃತ್ವಮ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಆದರೆ 'ನಿರ್ವೋಢೃತ್ವಮ್' ಎಂದು ಹೇಳಬೇಕಿತ್ತು. ಶ್ರುತಿಯಲ್ಲಿರುವ ಪದವನ್ನು ಅನುಸರಿಸಿ ಇಡಾಗಮದಿಂದ ಕೂಡಿರುವ ಛಾಂದಸ ಪ್ರಯೋಗವನ್ನೇ ಗ್ರಂಥಕಾರರು 'ನಿರ್ವಹಿತೃತ್ವಮ್' ಎಂದು ಮಾಡಿದ್ದಾರೆ.

**प्रकाशः – नन्वस्तु द्वेधाप्रसिद्धिर्गगने टीकासंमताच । तथाप्यत्राकाशपदेन गगनस्य ग्रहः कुत इत्यत आह – नचेति ।। सङ्कुचितेति ।। वैदिकप्रसिद्धिमात्रेत्यर्थः।**

ಎರಡು ಬಗೆಯ ಅಪ್ರಸಿದ್ಧಿಯು ಗಗನದಲ್ಲಿಲ್ಲವೆಂದು ಟೀಕೆಗೆ ಸಮ್ಮತವೇ ಆಗಲಿ. ಆದರೂ ಸಹ ಆಕಾಶಪದದಿಂದ ಗಗನವನ್ನು ಏಕೆ ವಿವಕ್ಷಿಸಬೇಕು? ಎಂಬ ಪ್ರಶ್ನೆಗೆ 'ನಚ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. 'ಸಂಕುಚಿತ' ಎಂದರೆ ಕೇವಲ ವೈದಿಕಪ್ರಸಿದ್ಧಿಯೆಂಬರ್ಥವನ್ನು ವಿವಕ್ಷಿಸುವುದು ಎಂದರ್ಥ.

## ಸಾರ

'ಆಕಾಶೋ ವೈನಾಮ ನಾಮರೂಪಯೋ ರ್ನಿರ್ವಹಿತ ತೇ ಯದಂತ ತದ್ಬ್ರಹ್ಮ ತದಮೃತಂ' ಎಂಬ ವಾಕ್ಯದಿಂದ ಪ್ರಸಿದ್ಧವಾದದ್ದು ಅವ್ಯಾಕೃತಾಕಾಶವೇ ಆಗಿದೆ. ಏಕೆಂದರೆ 'ವೈ ನಾಮ' ಎಂಬೆರಡು ಅವ್ಯಯಗಳು 'ಪ್ರಸಿದ್ಧ' ಎಂಬರ್ಥವನ್ನು ಹೇಳುತ್ತವೆ. ಅವ್ಯಾಕೃತಾಕಾಶವು ಆಕಾಶಶಬ್ದದಿಂದ ಪ್ರತಿಪಾದ್ಯವಾಗಿದೆಯೆಂಬುದು ಲೋಕಪ್ರಸಿದ್ಧವಾದ ವಿಚಾರ. ಮತ್ತು ನಾಮರೂಪವಾದ ಪ್ರಪಂಚಕ್ಕೂ ಆಶ್ರಯವಾಗಿರುವಿಕೆಯು ಅವ್ಯಾಕೃತಾಕಾಶದಲ್ಲಿ ಪ್ರತ್ಯಕ್ಷಸಿದ್ಧವಾದ ವಿಚಾರವೇ ಆಗಿದೆ. ಹೀಗೆ ಲೋಕಪ್ರಸಿದ್ಧಿ ಮತ್ತು ನಾಮರೂಪ ಪ್ರಪಂಚಕ್ಕೆ ಆಶ್ರಯವಾಗಿರುವಿಕೆ ಎಂಬೆರಡು ನಿರವಕಾಶಲಿಂಗಗಳಿಂದ ಆಕಾಶಪದದಿಂದ ಅವ್ಯಾಕೃತಾಕಾಶವೇ ಪ್ರತಿಪಾದ್ಯವಾಗುತ್ತದೆ. 'ವೈ ನಾಮ' ಎಂಬೆರಡು ನಿಪಾತಗಳೇ ಪೂರ್ವಪಕ್ಷಕ್ಕೆ ಪ್ರಧಾನವಾದ ಲಿಂಗ. ವಿಷಯವಾಕ್ಯದಲ್ಲಿ ಬ್ರಹ್ಮಶ್ರುತಿ, ಆತ್ಮಶ್ರುತಿ ಮೊದಲಾದ ಶ್ರುತಿಗಳು, ಅಮೃತತ್ವ, ನಾಮರೂಪರಾಹಿತ್ಯ ಮೊದಲಾದ ಲಿಂಗಗಳು ವಿಷ್ಣುವಿಷಯಕವಾಗಿ ಶ್ರುತವಾಗಿವೆ. ಆದರೂ ಸಹ ಪ್ರಸಿದ್ಧಿದ್ಯೋತಕವಾದ 'ವೈ ನಾಮ' ಎಂಬೆರಡು ನಿಪಾತಗಳು ಆ ಎಲ್ಲಾ ಶ್ರುತಿ ಹಾಗೂ ಲಿಂಗಗಳನ್ನು ಬಾಧಿಸುತ್ತವೆ. ನಿಪಾತದಿಂದ ದ್ಯೋತಿತವಾದ ಪ್ರಸಿದ್ಧಿಯೆಂದರೆ ಲೌಕಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಒಂದುವೇಳೆ ವೈದಿಕಪ್ರಸಿದ್ಧಿಯನ್ನು ಇಟ್ಟುಕೊಂಡರೆ, ವ್ಯಾವರ್ತ್ಯವಾದ ಅಪ್ರಸಿದ್ಧವಾದ ಆಕಾಶವೇ ಇರುವುದಿಲ್ಲ. ಏಕೆಂದರೆ ಗಗನವೂ ಸಹ ವೇದಪ್ರಸಿದ್ಧವೇ ಆಗಿದೆ.

ಮತ್ತು ಅಸಂಕುಚಿತ ಪ್ರವೃತ್ತಿಯು ವಿಷ್ಣುವಿಗಿಂತ ಗಗನದಲ್ಲೇ ಇರುತ್ತದೆ. ಏಕೆಂದರೆ ಸ್ವರೂಪೇಣ ಮತ್ತು ನಾಮರೂಪನಿರ್ವಾಹಕತ್ವೇನ ಲೋಕದಿಂದಲೂ, ವೇದದಿಂದಲೂ ಪ್ರಸಿದ್ಧವಾಗಿದೆ. ಆದರೆ ಬ್ರಹ್ಮನು ಸ್ವರೂಪದಿಂದಷ್ಟೇ ವೇದದಲ್ಲಿ ಪ್ರಸಿದ್ಧವಾಗಿದ್ದಾನೆ. ನಾಮರೂಪನಿರ್ವಾಹಕತ್ವೇನ ಪ್ರಸಿದ್ಧಿಯನ್ನಂತೂ ಬ್ರಹ್ಮನಲ್ಲಿ ಲೋಕದಿಂದಾಗಲೀ, ವೇದದಿಂದಾಗಲೀ ಹೇಳಲು ಸಾಧ್ಯವಿಲ್ಲ. ಹಾಗಾಗಿ ಬ್ರಹ್ಮಪಕ್ಷದಲ್ಲಿರುವ ಪ್ರವೃತ್ತಿಯು ಸಂಕುಚಿತವಾಗಿವೆ. ಗಗನಪಕ್ಷದಲ್ಲಿರುವ ಪ್ರವೃತ್ತಿಯು ಅಸಂಕುಚಿತವಾಗಿದೆ. ಅಸಂಕುಚಿತ ಪ್ರವೃತ್ತಿಯನ್ನೇ ವಿವಕ್ಷಿಸಲು ಬರುವಾಗ, ಸಂಕುಚಿತಪ್ರವೃತ್ತಿಯನ್ನು ವಿವಕ್ಷಿಸಬೇಕಾಗಿಲ್ಲ. ಹೀಗೆ 'ವೈ ನಾಮ' ಎಂಬ ನಿಪಾತಗಳನ್ನು 'ಆಕಾಶಃ' ಎಂಬ ಉದ್ದೇಶದಲ್ಲಾಗಲೀ, 'ನಾಮರೂಪನಿರ್ವಹಿತ' ಎಂಬ ವಿಧೇಯದಲ್ಲಾಗಲೀ ಅನ್ವಯ ಮಾಡಿದರೂ ಗಗನವೇ ಆಕಾಶಶಬ್ದ ಪ್ರತಿಪಾದ್ಯವಾಗುತ್ತದೆ.



• • • • •

ಪರಿಪೂರ್ಣಚಂದ್ರಿಕಾ

**तात्पर्यचन्द्रिका**

**यद्वा प्रसिद्धस्यैवोद्देश्यत्वादप्रसिद्धस्यैव च विधेयत्वात्प्रसिद्धेरुद्देश्याकाशेनैवान्वयात् सुकरः पूर्वपक्षः ।**

ಅನುವಾದ - ಅಥವಾ 'ವೈ ನಾಮ' ಎಂಬ ನಿಪಾತಗಳನ್ನು ಆಕಾಶದಲ್ಲೇ ಅನ್ವಯ ಮಾಡಬೇಕು ಹೊರತು, 'ನಾಮರೂಪನಿರ್ವಹಿತ' ಎಂಬಲ್ಲಿ ಅನ್ವಯ ಮಾಡಬಾರದು. ಆಕಾಶವಾದರೂ ಉದ್ದೇಶವಾಗಿದೆ. ಪ್ರಸಿದ್ಧವಾದದ್ದಷ್ಟೇ ಉದ್ದೇಶವೆನಿಸುತ್ತದೆ. ಆಕಾಶಸ್ವರೂಪವಾದರೂ ಲೋಕದಲ್ಲಿ ಹಾಗೂ ವೇದದಲ್ಲಿ ಪ್ರಸಿದ್ಧವಾಗಿದೆ. ಇಂತಹ ಆಕಾಶದ ಜೊತೆಗೆ ನಿಪಾತಗಳು ಅನ್ವಯವನ್ನು ಹೊಂದುವ ಕಾರಣ, ಪೂರ್ವಪಕ್ಷವು ಸುಲಭವಾಗುತ್ತದೆ. ಬ್ರಹ್ಮಸ್ವರೂಪವಾದರೂ ಲೋಕದಲ್ಲಿ ಪ್ರಸಿದ್ಧವಲ್ಲದ ಕಾರಣ, ಬ್ರಹ್ಮನು ಆಕಾಶಶಬ್ದ ಪ್ರತಿಪಾದ್ಯನಾಗುವುದಿಲ್ಲ.

**गगने निर्वोढृत्वस्याप्रसिद्धावपि स्वरूपप्रसिद्धेरसङ्कुचितायाः सत्त्वात् ।**

ಗಗನದಲ್ಲಿ ನಾಮರೂಪನಿರ್ವಾಹಕತ್ವವು ಅಪ್ರಸಿದ್ಧವಾದರೂ ಸಹ ಸ್ವರೂಪಪ್ರಸಿದ್ಧಿಯು ಅಸಂಕುಚಿತವಾಗಿ ಲೋಕದಲ್ಲಿ ವೇದದಲ್ಲಿ ಪ್ರಸಿದ್ಧವೇ ಆಗಿರುತ್ತದೆ. 'ವೈ ನಾಮ' ಎಂಬ ನಿಪಾತವನ್ನು ಉದ್ದೇಶದಲ್ಲಿ ಮಾತ್ರ ಅನ್ವಯ ಮಾಡಿರುವ ಕಾರಣ. ವಿಧೇಯವಾದ ನಾಮರೂಪನಿರ್ವಾಹಕತ್ವವನ್ನು ಗಗನದಲ್ಲಿ ಉಪಪಾದನೆ ಮಾಡಬೇಕಾಗಿಲ್ಲ.

**टीकायां ब्रह्मपक्षे प्रसिद्धेर्विधेयभूतनिर्वोढृत्वान्वयप्रतिषेधस्तु तदन्वयेऽपि न सिद्धान्तिन इष्टसिद्धिः ।**

ಟೀಕೆಯಲ್ಲಿ ನಿಪಾತದ್ಯೋತಿತವಾದ ಪ್ರಸಿದ್ಧಿಗೆ ಬ್ರಹ್ಮಪಕ್ಷದಲ್ಲಿ ವಿಧೇಯಭೂತವಾದ ನಿರ್ವೋಢೃತ್ವದ ಅನ್ವಯವನ್ನು ಪ್ರತಿಷೇಧ ಮಾಡಿದ್ದಾರೆ. ಇದರ ಉದ್ದೇಶವೇನೆಂದರೆ ವಿಧೇಯದಲ್ಲಿ ಅನ್ವಯ ಮಾಡಿದರೂ ಸಹ ಸಿದ್ಧಾಂತಿಯ ಇಷ್ಟವು ನೆರವೇರುವುದಿಲ್ಲ ಎಂದಷ್ಟೇ ಹೊರತು, ಆಕಾಶಪಕ್ಷದಲ್ಲಿ ಪ್ರಸಿದ್ಧಿಗೆ ವಿಧೇಯಾನ್ವಯವನ್ನು ಒಪ್ಪಬೇಕೆಂದು ಅಭಿಪ್ರಾಯದಿಂದಲ್ಲ.

**विधेयस्यापि ब्रह्मणि ''अप्रसिद्धेरवाच्यं तत्'' इत्यादाविव प्रसिद्धिशब्दार्थत्वेन स्वतः प्राप्ता या लोकप्रसिद्धिस्तद्राहित्यादिति दर्शयितुम् ।**

ಬ್ರಹ್ಮನನ್ನು ವಿಧೇಯನೆಂದು ಒಪ್ಪಿದರೂ ಸಹ ಯಾವುದೇ ಬಗೆಯ ಪ್ರಸಿದ್ಧಿಯನ್ನು ಅವನಲ್ಲಿ ತೋರಿಸಲಾಗದು. ಏಕೆಂದರೆ ಈಕ್ಷತ್ಯಧಿಕರಣದಲ್ಲಿ 'ಅಪ್ರಸಿದ್ಧೇರವಾಚ್ಯಂ ತತ್' ಎಂಬುದಾಗಿ

ಹೇಳಿದಂತೆ ಪ್ರಸಿದ್ಧಿಶಬ್ದಕ್ಕೆ ಲೋಕಪ್ರಸಿದ್ಧಿಯೆಂದೇ ಸ್ವಾಭಾವಿಕವಾದ ಅರ್ಥ. ಬ್ರಹ್ಮನಲ್ಲಿ ಇಂತಹ ಲೋಕಪ್ರಸಿದ್ಧಿಯನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಗಗನದಲ್ಲಿರುವ ಪ್ರಸಿದ್ಧಿಯನ್ನೇ 'ವೈ ನಾಮ' ಎಂಬೆರಡು ನಿಪಾತಗಳು ಹೇಳುತ್ತಿವೆ.

**न चाकाशश्रुतिरिव ब्रह्मश्रुत्यादिकं प्रसिद्ध्या विशेषितम् । येन ब्रह्मत्वादेरीशे प्रसिद्धत्वात्स एव गृह्येत ।**

ಬ್ರಹ್ಮಶ್ರುತಿ, ಆತ್ಮಶ್ರುತಿ ಮೊದಲಾದವುಗಳು ವಿಷ್ಣುವಿಷಯಕವಾಗಿವೆಯಲ್ಲವೇ? ಎಂದು ಪ್ರಶ್ನಿಸಬಾರದು. ಆಕಾಶಶ್ರುತಿಯಲ್ಲಿ 'ವೈ ನಾಮ' ಎಂಬ ನಿಪಾತವು ಯಾವರೀತಿಯಾಗಿ ಆಕಾಶಶ್ರುತಿಯಂತೆ ಬ್ರಹ್ಮಶ್ರುತಿಯು ಪ್ರಸಿದ್ಧಿದ್ಯೋತಕವಾದ ನಿಪಾತದಿಂದ ವಿಶೇಷಿತವಾಗಿಲ್ಲ. ಪ್ರಸಿದ್ಧಿದ್ಯೋತಕವಾದ ನಿಪಾತದಿಂದ ಕೂಡಿರುವ ಕಾರಣ ಆಕಾಶಶ್ರುತಿಯು ಪ್ರಬಲವಾಗಿದೆ. ಅದರಂತೆ ಬ್ರಹ್ಮಶ್ರುತಿಯಲ್ಲಿಯೂ ಕೂಡ ನಿಪಾತಗಳಿದ್ದಲ್ಲಿ, ಈ ಬ್ರಹ್ಮನನ್ನೇ ಆಕಾಶಶಬ್ದದಿಂದ ಸ್ವೀಕರಿಸಬಹುದು.

**एवञ्च ब्रह्मत्वादिकं गगने कथञ्चिन्नेयम् । अप्रसिद्धस्य ब्रह्मणः प्रसिद्धिद्योतक-निपातेनैव निरासात् ।**

ಆದ್ದರಿಂದ ಶ್ರುತಿಯಲ್ಲಿರುವ ಬ್ರಹ್ಮತ್ವಾದಿಗಳನ್ನು ವಿಶಾಲವಾದ ಕಾರಣ ಗಗನದಲ್ಲಿಯೇ ಹೇಗಾದರೂ ಉಪಪಾದನೆ ಮಾಡಬೇಕು. ಏಕೆಂದರೆ ಅಪ್ರಸಿದ್ಧನಾದ ಬ್ರಹ್ಮನನ್ನು ಪ್ರಸಿದ್ಧಿದ್ಯೋತಕವಾದ ನಿಪಾತದಿಂದ ನಿರಾಕರಿಸಿದ್ದರಿಂದ.

**तल्लिङ्गादित्यस्य विषयवाक्ये तु ''सर्वाणि हवा इमानि भूतान्याकाशादेव'' इत्यत्र वैशब्दस्य सन्निहितसर्वभूतान्वयो वा ।**

'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದ ವಿಷಯವಾಕ್ಯದಲ್ಲಿರುವ 'ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ' ಎಂಬಲ್ಲಿಯೂ ಕೂಡ 'ಹ ವೈ' ಎಂಬ ನಿಪಾತಗಳು ಶ್ರುತವಾಗಿವೆ. ಆದರೂ ಸಹ ಅದನ್ನು ವಿಷ್ಣುಪರವೆಂದು ಸಮನ್ವಯ ಮಾಡಿದ್ದೀರಿ. ಅದರಂತೆ ಈ ವಿಷಯವಾಕ್ಯವನ್ನೂ ಕೂಡ ವಿಷ್ಣುಪರವೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿರುವ 'ಹ ವೈ' ಎಂಬ ನಿಪಾತಗಳು ಸನ್ನಿಹಿತವಾದ ಭೂತದ ಜೊತೆಗೆ ಅನ್ವಯವಾಗಿವೆ. ಸಕಲಭೂತಗಳೆಲ್ಲವೂ ಆಕಾಶನಾಮಕ ಪರಮಾತ್ಮನಿಂದಲೇ ಹುಟ್ಟುತ್ತವೆಂದು ಅದಕ್ಕೆ ವ್ಯಾಖ್ಯಾನ ಮಾಡಬಹುದು.

**''स्युरेव तु पुनर्वै वेत्यवधारणवाचका'' इति वचनेनावधारणार्थत्वं वा । इह त्वाकाशस्यैव सन्निधानम् ।**

ಅಥವಾ 'ಸ್ಮರೇವ ತು ಪುನರ್ವೈ ವೇತ್ಯವಧಾರಣವಾಚಕಾ' 'ಸ್ಮ, ಏವ, ತು ಪುನಃ ವೈ' ಇವೆಲ್ಲವೂ ಅವಧಾರಣಾರ್ಥಕಶಬ್ದಗಳು ಎಂಬ ಕೋಶದಂತೆ 'ಹ ವೈ' ಎಂಬಲ್ಲಿರುವ 'ವೈ' ಶಬ್ದಕ್ಕೆ ಅವಧಾರಣ ಎಂಬರ್ಥವನ್ನೂ ಕೂಡ ಹೇಳಬಹುದು. ಆದರೆ ಪ್ರಕೃತ ವಿಷಯವಾಕ್ಯದಲ್ಲಿ 'ವೈ ನಾಮ' ಎಂಬ ನಿಪಾತಗಳು ಆಕಾಶದ ಜೊತೆಗೆ ಸನ್ನಿಹಿತವಾಗಿವೆ. ಅಲ್ಲಿಯಂತೆ ಭೂತಾದಿಗಳ ಜೊತೆಗೆ ಸನ್ನಿಹಿತವಾಗಿಲ್ಲ. ಆದ್ದರಿಂದ ಪ್ರಸಿದ್ಧಿದ್ಯೋತಕವೆಂದೇ ಹೇಳಬೇಕು.

**नामशब्दस्य च नार्थान्तरमस्तीति वैषम्यम् । अत एव भाष्ये वैनामेतिनिपातद्वयोक्तिः । न्यायविवरणे च ''वैनामे प्रसिद्धिद्योतकनिपातद्वयं रूढि त्यागेनोक्तयौगिकार्थस्वीकारे विरोधि'' इत्युक्तम् ।**

ಮತ್ತು 'ನಾಮ ವೈ' ಎಂಬಲ್ಲಿರುವ 'ವೈ' ಶಬ್ದಕ್ಕೆ ಅವಧಾರಣ ಮೊದಲಾದ ಅರ್ಥಾಂತರವನ್ನು ಹೇಳಬಹುದಾದರೂ, 'ನಾಮ' ಎಂಬ ನಿಪಾತಕ್ಕೆ ಅರ್ಥಾಂತರವನ್ನು ಹೇಳಲು ಯಾವುದೇ ಕೋಶಗಳೂ ಸಹ ಇರುವುದಿಲ್ಲ. ಹಾಗಾಗಿ 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿನ ವಿಷಯವಾಕ್ಯಕ್ಕೂ ಇಲ್ಲಿನ ವಿಷಯವಾಕ್ಯಕ್ಕೂ ವ್ಯತ್ಯಾಸವಿದೆ. ಆದ್ದರಿಂದಲೇ ಭಾಷ್ಯದಲ್ಲಿ 'ವೈ ನಾಮ' ಎಂಬೆರಡೂ ನಿಪಾತಗಳನ್ನೂ ಕೂಡ ಉಲ್ಲೇಖಿಸಿರುತ್ತಾರೆ. ನ್ಯಾಯವಿವರಣದಲ್ಲೂ ಕೂಡ 'ವೈನಾಮೇ ಪ್ರಸಿದ್ಧಿದ್ಯೋತಕನಿಪಾತದ್ವಯಂ ರೂಢಿತ್ಯಾಗೇನೋಕ್ತಯೌಗಿಕಾರ್ಥಸ್ವೀಕಾರೇ ವಿರೋಧಿ' ವೈ ನಾಮ ಎಂಬೆರಡು ಪ್ರಸಿದ್ಧಿದ್ಯೋತಕವಾದ ನಿಪಾತಗಳು ರೂಢಿತ್ಯಾಗದಿಂದ ಯೌಗಿಕಾರ್ಥ ಸ್ವೀಕಾರ ಮಾಡಲು ವಿರೋಧಿಗಳಾಗಿವೆ ಎಂದು ಹೇಳಿದ್ದಾರೆ.

**ते यदन्तरेति श्रुतं नामरूपराहित्यं तु न ब्रह्मण्यपि युक्तम् । ईक्षत्यधिकरणे ''रूपोपन्यासाच्च'' इत्यत्र च ब्रह्मणो नाम्नो रूपस्य चोक्तेः ।**

'ತೇ ಯದಂತರ' ಎಂಬ ಶ್ರುತಿಯಲ್ಲಿ ನಾಮರೂಪರಾಹಿತ್ಯವನ್ನು ಹೇಳಲಾಗಿದೆ. ಇದನ್ನು ಗಗನದಲ್ಲಿ ಹೇಳಲು ಬರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಈ ದೋಷವು ಬ್ರಹ್ಮಪಕ್ಷದಲ್ಲಿಯೂ ಕೂಡ ಸಮಾನವಾಗಿದೆ. ಏಕೆಂದರೆ ಈಕ್ಷತ್ಯಧಿಕರಣದಲ್ಲಿ ಬ್ರಹ್ಮನಿಗೆ ನಾಮವನ್ನು 'ರೂಪೋಪನ್ಯಾಸಾಚ್ಚ' ಎಂಬ ಸೂತ್ರದಲ್ಲಿ ರೂಪವನ್ನು ನೀವೇ ಸಮರ್ಥಿಸಿದ್ದೀರಿ. ಹೀಗಿರಲು ನಾಮರೂಪರಾಹಿತ್ಯವನ್ನು ಹೇಳಲು ಹೇಗೆ ಸಾಧ್ಯ ?

**भूताकाशस्य रूपित्वेप्यव्याकृताकाशस्यारूपत्वात् ।**

ಮತ್ತು ಈ ಅಧಿಕರಣದ ಪೂರ್ವಪಕ್ಷಕ್ಕೆ ಅವ್ಯಾಕೃತಾಕಾಶವು ವಿಷಯವಾಗಿದೆ ಹೊರತು, ಭೂತಾಕಾಶವಲ್ಲ. ಭೂತಾಕಾಶದಲ್ಲಿ ರೂಪವಿರುವುದು ಜ್ಞಾನಿಗಳಿಗೆ ಸಿದ್ಧವಾಗಿರಬಹುದು. ಆದರೆ

ಅವ್ಯಾಕೃತಾಕಾಶದಲ್ಲಿ ಯಾವುದೇ ರೂಪವು ಇರುವುದಿಲ್ಲ. ಆದ್ದರಿಂದ ರೂಪರಾಹಿತ್ಯವನ್ನು ಅವ್ಯಾಕೃತಾಕಾಶದಲ್ಲಿ ಹೇಳಬಹುದು.

**अत एव भूताकाशस्यापि शब्दैकगम्यत्वात्कथं लोकप्रसिद्धिरिति निरस्तम् । अव्याकृताकाश इत्येव पूर्वपक्षकरणात् ।**

ಅವ್ಯಾಕೃತಾಕಾಶವನ್ನು ಈ ಅಧಿಕರಣದ ಪೂರ್ವಪಕ್ಷವಿಷಯವನ್ನಾಗಿ ಹೇಳಿದ್ದರಿಂದಲೇ ಭೂತಾಕಾಶವೂ ಕೂಡ ಶಬ್ದೈಕಸಮಧಿಗಮ್ಯವಾದ್ದರಿಂದ ಲೋಕಪ್ರಸಿದ್ಧಿಯನ್ನು ಹೇಗೆ ಹೇಳುತ್ತೀರಿ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಭೂತಾಕಾಶ ಶಬ್ದೈಕಸಮಧಿಗಮ್ಯವಾಗಿದ್ದರೂ ಅವ್ಯಾಕೃತಾಕಾಶವು ಸಾಕ್ಷಿಸಿದ್ಧವಾದ ಕಾರಣ ಶಬ್ದೈಕಸಮಧಿಗಮ್ಯವಲ್ಲ. ಅಂತಹ ಅವ್ಯಾಕೃತಾಕಾಶವೇ ಆಕಾಶಶಬ್ದವೇ ಆಗಲಿ ಎಂದು ಇಲ್ಲಿ ಪೂರ್ವಪಕ್ಷ ಮಾಡಲಾಗಿದೆ.

**अत एव भाष्ये प्रसिद्धाकाश इत्येवोक्तम् । टीकायामपि सिद्धान्ते ''अवकाशस्यापि नामवत्त्वात्'' इत्यत्रारूपवत्त्वं स्वीकृत्यनामवत्त्वमेव वक्ष्यते । नहि भूताकाशमनामरूपमिति ।।**

ಆದ್ದರಿಂದಲೇ ಭಾಷ್ಯದಲ್ಲಿಯೂ ಕೂಡ 'ಪ್ರಸಿದ್ಧಾಕಾಶಃ' ಎಂದೇ ಹೇಳಿರುತ್ತಾರೆ ಹೊರತು ಭೂತಾಕಾಶವೆಂದು ಹೇಳಿಲ್ಲ. ಪ್ರಸಿದ್ಧಾಕಾಶವೆಂದರೆ ಸಾಕ್ಷಿಯಿಂದ ಪ್ರಸಿದ್ಧವಾದ ಆಕಾಶವೆಂದು ಅರ್ಥ. ಟೀಕೆಯಲ್ಲಿಯೂ ಕೂಡ ಸಿದ್ಧಾಂತವನ್ನು ಮಾಡುವಾಗ 'ಅವಕಾಶಸ್ಯಾಪಿ ನಾಮವತ್ತ್ವಾತ್' ಎಂದು ರೂಪವಿಲ್ಲವೆಂದು ಒಪ್ಪಿ, ನಾಮವತ್ವವನ್ನಷ್ಟೇ ಹೇಳಿರುತ್ತಾರೆ. ಭೂತಾಕಾಶಕ್ಕೆ ರೂಪವಿರುವ ಕಾರಣ ಅದನ್ನು ವಿವಕ್ಷಿಸಬಾರದೆಂದು ಇದರಿಂದಲೂ ಕೂಡ ಸ್ಪಷ್ಟವಾಗುತ್ತದೆ. ಮತ್ತು ಭೂತಾಕಾಶಕ್ಕೆ ನಾಮರಾಹಿತ್ಯವನ್ನೂ ಕೂಡ ಹೇಳಲು ಸಾಧ್ಯವಿಲ್ಲ.

**प्रकाशः –**

ननु निपातयोर्विधेयान्वये नामरूपनिर्वहितृत्वस्य विष्णावेव ''एको दाधार भुवनानि विश्व'' इत्यादिना प्रसिद्धेर्गगने सर्वाधारत्वस्य वैदिकप्रसिद्धेर्विष्णाविवाभावात्कथं विधेयान्वयपक्षे गगनप्राप्तिरित्यत उद्देश्येनैवान्वयमुपेत्य पूर्वपक्षमाह – यद्वेति ।।

ವಿವರಣೆ - ಆಕಾಶದ ಸ್ವರೂಪವೂ ಸಹ ಪ್ರಸಿದ್ಧವಾಗಿದೆ. ನಾಮರೂಪನಿರ್ವಾಹಕತ್ವವೂ ಕೂಡ ಆಕಾಶದಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಉದ್ದೇಶ್ಯತ್ವದ ಜೊತೆಗೆ ಮತ್ತು ವಿಧೇಯದ ಜೊತೆಗೆ ಅನ್ವಯ ಮಾಡಬಹುದು. ಆದರೆ ವಿಧೇಯಾನ್ವಯ ಮಾಡಿದರೆ 'ನಾಮರೂಪನಿರ್ವಾಹಕತ್ವ' ಎಂಬ ಸರ್ವಾಧಾರತ್ವವು

ಪರಮಾತ್ಮನಲ್ಲಿಯೂ ಬರುವುದರಿಂದ ಪರಮಾತ್ಮನು ಆಕಾಶಶಬ್ದ ಪ್ರತಿಪಾದ್ಯನೆನ್ನಲು ಇದು ಸಾಧಕವಾಗುತ್ತದೆ. ಏಕೆಂದರೆ 'ಏಕೋ ದಾಧಾರ ಭುವನಾನಿ ವಿಶ್ವ' ಇತ್ಯಾದಿ ಶ್ರುತಿಯು ವಿಷ್ಣು ಸಕಲಕ್ಕೂ ಆಧಾರನಾಗಿದ್ದಾನೆಂದು ಹೇಳುತ್ತಿದೆ. ಆದ್ದರಿಂದ 'ನಾಮರೂಪನಿರ್ವಹಿತೃತ್ವ' ಎಂಬ ವಿಧೇಯದ ಜೊತೆಗೆ ನಿಪಾತಗಳಿಗೆ ಅನ್ವಯವನ್ನು ಮಾಡುವುದಾದರೆ ವಿಷ್ಣುವಿನಲ್ಲಿ ಬರುವಂತೆ ಗಗನದಲ್ಲಿ ಬರುವುದಿಲ್ಲ. ಹೀಗಿರುವಾಗ ವಿಧೇಯಾನ್ವಯ ಪಕ್ಷದಲ್ಲಿ ಗಗನವೇ ಆಕಾಶಶಬ್ದ ಪ್ರತಿಪಾದ್ಯವೆಂದು ಹೇಗೆ ಪೂರ್ವಪಕ್ಷ ಮಾಡುತ್ತೀರಿ? ಎಂಬ ಪ್ರಶ್ನೆಗೆ ವಿಧೇಯಾನ್ವಯವನ್ನೇ ನಾವು ಹೇಳುವುಗಿಲ್ಲ. ಕೇವಲ ಉದ್ದೇಶದಲ್ಲಿ ಅನ್ವಯವನ್ನು ಮಾಡಿ, ಪೂರ್ವಪಕ್ಷ ಮಾಡುತ್ತೇವೆಂದು 'ಯದ್ವಾ' ಇತ್ಯಾದಿ ಗ್ರಂಥದಿಂದ ಮತ್ತೊಂದು ಬಗೆಯ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

**प्रकाशः – सुकर** इत्युक्तमेवाह – **गगन इति** ।। **असङ्कुचिताया इति** ।। लोकवेदयोस्सिद्धाया इत्यर्थः । विधेयान्वयपरटीका तु अभ्युपेत्यवादेन प्रवृत्तेति भावेन तां घटयति ।। **टीकायामिति** ।।

'ಸುಕರ ಪೂರ್ವಪಕ್ಷಃ' 'ಸುಲಭವಾಗಿ ಪೂರ್ವಪಕ್ಷ ಮಾಡಬಹುದು' ಎಂದು ಹೇಳಿದ್ದನ್ನೇ 'ಗಗನ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಅಸಂಕುಚಿತಾಯಾ' ಎಂದರೆ 'ಲೋಕದಲ್ಲಿ ಹಾಗೂ ವೇದದಲ್ಲಿ ಸಿದ್ಧವಾದ' ಎಂದರ್ಥ. ಪೂರ್ವಪಕ್ಷಿಗೆ ವಿಧೇಯದಲ್ಲಿ ಅನ್ವಯವಿಲ್ಲವೆಂಬುದೇ ಅಭಿಪ್ರಾಯವಾಗಿದೆ. ಒಂದು ವೇಳೆ ವಿಧೇಯಾನ್ವಯವನ್ನು ಒಪ್ಪಿಕೊಂಡರೂ ಕೂಡ ವಿಷ್ಣುವಿನಲ್ಲಿ ಅದೂ ಸಹ ಬರುವುದಿಲ್ಲವೆಂದು ಅಭಿಪ್ರೇತವಾದ್ದರಿಂದ ವಿಧೇಯಾನ್ವಯ ಪರವಾದ ಟೀಕೆಯು ಹೊರಟಿದೆ. ಈ ಅಭಿಪ್ರಾಯದಿಂದ ಟೀಕೆಯ ವಿರೋಧವನ್ನು ಪರಿಹರಿಸುತ್ತಿದ್ದಾರೆ 'ಟೀಕಾಯಾಮ್' ಇತ್ಯಾದಿ ವಾಕ್ಯದಿಂದ.

**प्रकाशः – विधेयस्यापीति** ।। या स्वतः प्राप्ता लोकप्रसिद्धिरित्यन्वयः । ''अप्रसिद्धेरवाच्यं तदतर्क्याज्ञेयमेव च'' इत्यादाववाच्यत्वहेतुभूताऽप्रसिद्धिर्न वैदिकप्रसिद्ध्यभावः । तस्याब्रह्मणि सत्त्वात् । किन्तु लौकिकप्रसिद्ध्यभाव एव । तथाचाप्रसिद्धेरित्यत्र प्रसिद्धिशब्दस्य यथालोकप्रसिद्धिरर्थस्तथेहापि निपातद्योतित विधेयान्विताया: प्रसिद्धेः प्रसिद्धिशब्दार्थतयास्वरसतः प्राप्तलोक प्रसिद्धेरभावादिति दर्शयितुमित्यर्थः ।

'ವಿಧೇಯಸ್ಯಾಪಿ' ಎಂಬ ವಾಕ್ಯದಲ್ಲಿ 'ಯಾ ಸ್ವತಃ ಪ್ರಾಪ್ತಾ ಲೋಕಪ್ರಸಿದ್ಧಿಃ' ಎಂದು ಅನ್ವಯವನ್ನು ತಿಳಿದುಕೊಳ್ಳಬೇಕು. 'ಅಪ್ರಸಿದ್ಧೇರವಾಚ್ಯಂ ತತ್ ಅತರ್ಕ್ಯಾಜ್ಞೇಯಮೇವ ಚ' ಇತ್ಯಾದಿ ಸ್ಥಳಗಳಲ್ಲಿ ಅವಾಚ್ಯಕ್ಕೆ ಹೇತುಭೂತವಾದ ಅಪ್ರಸಿದ್ಧಿಯೆಂದರೆ ವೈದಿಕಪ್ರಸಿದ್ಧ್ಯಭಾವ ಎಂದರ್ಥವಲ್ಲ. ಅದು ಬ್ರಹ್ಮನಲ್ಲಿಯೂ ಇರುತ್ತದೆ. ಹೊರತು, ಲೌಕಿಕಪ್ರಸಿದ್ಧ್ಯಭಾವ ಎಂದರ್ಥ. ಆದ್ದರಿಂದ 'ಅಪ್ರಸಿದ್ಧೇಃ' ಎಂಬಲ್ಲಿರುವ ಪ್ರಸಿದ್ಧಿ ಶಬ್ದಕ್ಕೆ ಹೇಗೆ ಲೌಕಿಕ ಪ್ರಸಿದ್ಧಿಯನ್ನು ವಿವಕ್ಷಿಸಲಾಗುತ್ತದೋ, ಅದರಂತೆ ಇಲ್ಲಿಯೂ ಸಹ

ನಿಪಾತತದ್ಯೋತಿತವಾದ ವಿಧೇಯದಲ್ಲಿ ಅನ್ವಿತವಾದ ಪ್ರಸಿದ್ಧಿಯು ಪ್ರಸಿದ್ಧಿಶಬ್ದದಿಂದ ಸ್ವಾಭಾವಿಕವಾಗಿ ತಿಳಿಯುವ ಲೋಕಪ್ರಸಿದ್ಧಿಯನ್ನೇ ಹೇಳುತ್ತದೆ. ಈ ಲೋಕಪ್ರಸಿದ್ಧಿಯನ್ನು ಬ್ರಹ್ಮನಲ್ಲಿ ಹೇಳಲು ಸಾಧ್ಯವಿಲ್ಲ ಎಂದರ್ಥ.

**प्रकाशः** – टीकायां ''प्रसिद्धम्'' इत्यस्य लोकतः प्रसिद्धं नच भवतीत्यर्थ उक्तो भवति । एवं च निपातद्वयविशेषितत्वेन प्रबलयाऽऽकाशश्रुत्या पूर्वपक्षकरणात्तया ब्रह्मसाधकानामन्यथासिद्धिं वक्तुं तेषां सावकाशत्वमाह – **नचाकाशेति** ।।

ಟೀಕೆಯಲ್ಲಿ 'ಪ್ರಸಿದ್ಧಂ' ಎಂಬ ಪದಕ್ಕೆ ಲೋಕತಃ ಪ್ರಸಿದ್ಧಿಯಿಲ್ಲ ಎಂದರ್ಥವನ್ನೇ ವಿವಕ್ಷಿಸಬೇಕು.

ಆದ್ದರಿಂದ ಆಕಾಶಶ್ರುತಿಯು ನಿಪಾತದ್ವಯಗಳಿಂದ ವಿಶೇಷಿತವಾದ ಕಾರಣ ಪ್ರಬಲವಾಯಿತು. ವಿಷ್ಣುತ್ವಸಾಧಕವಾದ ಬ್ರಹ್ಮಶ್ರುತಿ ಮೊದಲಾದವುಗಳು ಈ ನಿಪಾತಗಳಿಂದಲೇ ಬಾಧಿತವಾದವು. ಆದ್ದರಿಂದ ಆ ಬ್ರಹ್ಮಸಾಧಕವಾದ ಪ್ರಮಾಣಗಳೆಲ್ಲವೂ ಸಾವಕಾಶವಾಗಿವೆಯೆಂದು 'ನಚಾಕಾಶ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः** – **एवञ्चेति** ।। आकाशश्रुतेरिव ब्रह्मश्रुत्यादेर्निरवकाशत्वद्योतकाभावे सतीत्यर्थः ।। **कथञ्चिदिति** ।। देशकालाभ्यां गगनस्यापि वृद्धत्वेन ब्रह्मत्वं आततत्वादात्मत्वं अवकाशदानान्नामरूपनिर्वाहकत्वं नित्यत्वादमृतत्वं नेयमित्यर्थः ।

'ಏವಂಚ' ಎಂದರೆ ಆಕಾಶಶ್ರುತಿಯಂತೆ ಬ್ರಹ್ಮಶ್ರುತಿಯೂ ಕೂಡ ನಿರವಕಾಶವಾಗಿದೆಯೆಂದು ಉಪಪಾದನೆ ಮಾಡಲು ನಿಪಾತಗಳು ಇಲ್ಲದ್ದಿದ್ದಾಗ ಎಂದರ್ಥ. 'ಕಥಂಚಿತ್' ಎಂದರೆ ದೇಶಕಾಲಾದಿಗಳಂತೆ ಗಗನವೂ ಕೂಡ ವ್ಯಾಪ್ತವಾಗಿರುವ ಕಾರಣ, ಬ್ರಹ್ಮತ್ವವನ್ನು, ಆತ್ಮತ್ವವನ್ನು ಹೇಳಬಹುದು. ಅವಕಾಶಪ್ರದಾತೃತ್ವವೆಂಬ ನಿರ್ವಾಹಕತ್ವವನ್ನು ಹೇಳಿದ ಕಾರಣ ನಿತ್ಯತ್ವವನ್ನೂ ಕೂಡ ಹೇಳಬಹುದು ಎಂದರ್ಥ.

**प्रकाशः** – यदत्रान्यैरुक्तं न ब्रह्मत्वादिकं नामरूपनिर्वोढर्याकाशे युक्तम् । किन्तु तयोर्मध्यस्थत्वेन वक्ष्यमाणे वस्तुनि । ''यदन्तरा तद्ब्रह्म'' इत्यादिसामानाधिकरण्यात्। एतच्चान्तरालिकं वस्तु यदिति नपुंसकनिर्देशात्पुल्लिङ्गनिर्दिष्टाकाशादन्यदिति ।

ಅದ್ವೈತಿಗಳು ಹೀಗೆ ಹೇಳುತ್ತಾರೆ. ಶ್ರುತಿಯಲ್ಲಿರುವ ಬ್ರಹ್ಮತ್ವ-ಅಮೃತತ್ವಗಳನ್ನು ಆಕಾಶದಲ್ಲಿ ಸಮನ್ವಯ ಮಾಡುವ ಅವಶ್ಯಕತೆಯಿಲ್ಲ. ಏಕೆಂದರೆ 'ಆಕಾಶೋ ವೈನಾಮ' ಇತ್ಯಾದಿ ಮೊದಲನೆಯ ವಾಕ್ಯವು ಆಕಾಶವನ್ನೇ ಪ್ರತಿಪಾದನೆ ಮಾಡುತ್ತದೆ. ಇಂತಹ ಆಕಾಶವು ನಾಮರೂಪಗಳಿಗೆ ಆಶ್ರಯವೂ ಆಗಿದೆ. ಆದರೆ ಮುಂದಿನ 'ತೇ ಯದಂತರಾ' ಎಂಬ ವಾಕ್ಯವು ಭೂತಾಕಾಶವನ್ನು ಪ್ರತಿಪಾದನೆ ಮಾಡದೇ, ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆ. ನಾಮ ಹಾಗೂ ಭೂತಗಳ ಮಧ್ಯದಲ್ಲಿ ಬ್ರಹ್ಮನು ನೆಲೆಸಿದ್ದಾನೆಂದು ಹೇಳುತ್ತಿದೆ. 'ಯದಂತರಾ ತದ್ಬ್ರಹ್ಮ' ಎಂಬುದಾಗಿ ನಪುಂಸಕಲಿಂಗಶಬ್ದಗಳ ಸಾಮಾನಾಧಿಕರಣ್ಯವಿರುವುದರಿಂದಲೂ ಮುಂದಿನ ವಾಕ್ಯವು ಬ್ರಹ್ಮಪರವೆಂದೇ ಹೇಳಬೇಕು. ಮಧ್ಯದಲ್ಲಿರುವ ವಸ್ತುವನ್ನು 'ಯತ್' ಎಂಬುದಾಗಿ

ನಪುಂಸಕಲಿಂಗದಿಂದ ನಿರ್ದೇಶ ಮಾಡಿರುವ ಕಾರಣ, ಮೊದಲಿನ ವಾಕ್ಯದಲ್ಲಿ ಪುಲ್ಲಿಂಗದಲ್ಲಿ ನಿರ್ದೇಶ ಮಾಡಲ್ಪಟ್ಟ ಆಕಾಶಕ್ಕಿಂತಲೂ ಭಿನ್ನವೇ ಆಗುತ್ತದೆ. ಒಂದುವೇಳೆ ಆಕಾಶವೇ ವಿವಕ್ಷಿತವಾಗಿದ್ದಲ್ಲಿ, ಮುಂದಿನ ವಾಕ್ಯದಲ್ಲಿಯೂ ಪುಲ್ಲಿಂಗ ಪ್ರಯೋಗವೇ ಇರಬೇಕಿತ್ತು ಎಂದು.

**प्रकाशः** – तन्न । सिद्धान्ते वक्ष्यमाणदिशाऽन्तराशब्दस्य विनाऽर्थत्वेनोपपत्तौ लक्षणाक्लेशायोगात् ।

ಇದು ತಪ್ಪು. ಸಿದ್ಧಾಂತದಲ್ಲಿ ಮುಂದೆ ಹೇಳುವ ಪ್ರಕಾರ 'ಅಂತರಾ' ಶಬ್ದಕ್ಕೆ 'ವಿನಾ' ಎಂಬರ್ಥವನ್ನೇ ಹೇಳಲು ಬರುವಾಗ ಲಕ್ಷಣಾ ಮಾಡುವ ಕ್ಲೇಶವಿರುವುದಿಲ್ಲ.

**प्रकाशः** – तद्ब्रह्मेति वक्ष्यमाणापेक्षया नपुंसकत्वेऽप्याकाशात् प्रकृतादर्थान्तर-ग्रहणायोगात् ।

ಮತ್ತು ಶ್ರುತಿಯಲ್ಲಿ ಮುಂದೆ 'ತದ್ಬ್ರಹ್ಮ' ಎಂದು ನಪುಂಸಕಲಿಂಗದ ಪ್ರಯೋಗವಿರುವುದರಿಂದ 'ಯತ್' ಎಂಬ ಶಬ್ದವು ನಪುಂಸಕಲಿಂಗದ ಪ್ರಯೋಗವು ಯುಕ್ತವಾಗುತ್ತದೆ. ಆದ್ದರಿಂದ ನಪುಂಸಕವಿರುವ ಮಾತ್ರದಿಂದ ಬೇರೆ ವಸ್ತುವೇ ಪ್ರತಿಪಾದ್ಯವಾಗಿದೆ ಎಂದು ಹೇಳುವುದು ತಪ್ಪಾಗುತ್ತದೆ.

**प्रकाशः** – त्वयापि सिद्धान्ते "यस्य ब्रह्मणोऽन्तराले" इत्याकाशरूपब्रह्मपरत्वे नोक्ततयाऽऽकाशरूपैकार्थस्यैव कथनौचित्याच्चेति ।

ಮತ್ತು ನೀವೇ ಸಿದ್ಧಾಂತ ಮಾಡುವಾಗ 'ಯದಂತರಾ' ಎಂಬುದನ್ನು ಸಮಸ್ತ ಪದವನ್ನಾಗಿ ವಿವಕ್ಷಿಸಿ, 'ಯಸ್ಯ ಬ್ರಹ್ಮಣೋಽಂತರಾಲೇ' ಯಾವ ಬ್ರಹ್ಮನ ಮಧ್ಯದಲ್ಲಿ ನಾಮರೂಪಗಳೆಲ್ಲವೂ ಇವೆಯೋ ಎಂದು ಅರ್ಥೈಸಿದ್ದೀರಿ. ಆವಾಗ ಆಕಾಶವೂ ಸಹ ಬ್ರಹ್ಮನೇ ಆಯಿತು. ಸಮಸ್ತವಾಕ್ಯವನ್ನು ಆಕಾಶರೂಪವಾದ ಬ್ರಹ್ಮಪರವಾಗಿ ಯೋಜನೆ ಮಾಡಿದ್ದಾರೆ. ಅದೇ ರೀತಿಯಲ್ಲಿ ನಾವೂ ಸಹ ಈಗ ವ್ಯಾಖ್ಯಾನ ಮಾಡಿ, ಪೂರ್ವಪಕ್ಷ ಮಾಡುತ್ತಿದ್ದೇವೆ.

**प्रकाशः** – ब्रह्मादिशब्दात् मुख्यार्थस्य ब्रह्मण एव ग्रहणं कुतो नेत्यत आह – **अप्रसिद्धस्येति** ।। लोकप्रसिद्धिशून्यस्येत्यर्थः ।

ननु प्रसिद्धिद्योतकनिपातोपेतस्याप्याकाशस्य प्राग्ब्रह्मत्वं निर्णीतमिति तेन गतत्वमाशङ्क्य निराह – **तल्लिङ्गादितीति** ।। **नार्थान्तरमिति** ।। **"स्युरेवत्"** इत्यादिवत्प्रमाणाभावादिति भावः ।।

ಶ್ರುತಿಯಲ್ಲಿ ಬ್ರಹ್ಮಾದಿಶಬ್ದಗಳಿರುವುದರಿಂದ ಮುಖ್ಯಾರ್ಥನಾದ ಬ್ರಹ್ಮನನ್ನೇ ಏಕೆ ಸ್ವೀಕರಿಸಬಾರದು? ಎಂಬ ಪ್ರಶ್ನೆಗೆ 'ಅಪ್ರಸಿದ್ಧಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಲೋಕಪ್ರಸಿದ್ಧಿಶೂನ್ಯನಾದ' ಎಂದು ಇದರ ಅರ್ಥ.

ಪ್ರಸಿದ್ಧಿದ್ಯೋತಕವಾದ 'ಹವ್ವೈ' ಎಂಬ ನಿಪಾತಗಳಿಂದ ಕೂಡಿದ ಆಕಾಶಶಬ್ದಕ್ಕೆ ಬ್ರಹ್ಮವಾಚಕತ್ವವನ್ನು ಪ್ರಥಮಪಾದದ ಆಕಾಶಾಧಿಕರಣದಲ್ಲೇ ನಿರ್ಣಯಿಸಿದ್ದೇವಲ್ಲವೇ? ಎಂಬ ಆಶಂಕೆಯನ್ನು 'ತಲ್ಲಿಂಗಾತ್' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. 'ನಾರ್ಥಾಂತರಮ್' ಎಂದರೆ 'ಸ್ಯುರೇವ' ಎಂಬ ಕೋಶದಂತೆ ನಾಮಶಬ್ದಕ್ಕೆ ಬೇರೆ ಅರ್ಥವಿರಲು ಪ್ರಮಾಣವಿರುವುದಿಲ್ಲ ಎಂದಭಿಪ್ರಾಯ.

**प्रकाशः – भाष्ये वै नामेतीति ।।** एतेन ''वैनामेति निपातद्वयविरोधात्'' इति टीकाऽपि विवृता । भाष्ये द्वयेत्यनुक्तावपि द्वित्वे तात्पर्यं कथं टीकाकृता ज्ञातमित्यत आह – **न्यायविवरणे चेति ।।**

'ಭಾಷ್ಯೇ ವೈ ನಾಮೇತಿ' ಇತ್ಯಾದಿ ವಾಕ್ಯದಿಂದ 'ವೈನಾಮೇತಿ ನಿಪಾತದ್ವಯವಿರೋಧಾತ್' ಎಂಬ ಟೀಕೆಯನ್ನೂ ಕೂಡ ವಿವರಿಸಿದಂತಾಯಿತು. ಭಾಷ್ಯದಲ್ಲಿ 'ನಿಪಾತದ್ವಯಂ' ಎಂದು ಹೇಳದಿದ್ದರೂ ಟೀಕೆಯಲ್ಲಿ ನಿಪಾತದ್ವಯಗಳನ್ನು ಹೇಗೆ ವಿವಕ್ಷಿಸಿದರು ಎಂಬ ಪ್ರಶ್ನೆಗೆ 'ನ್ಯಾಯವಿವರಣೇ ಚ' ಎಂದು ಉತ್ತರಿಸಿದ್ದಾರೆ. ಅಂದರೆ ಸ್ಪಷ್ಟವಾಗಿ ನ್ಯಾಯವಿವರಣದಲ್ಲಿ ನಿಪಾತದ್ವಯಗಳನ್ನು ಕಂಠತಃ ಹೇಳಿದ್ದಾರೆ.

**प्रकाशः – अनामरूपत्वमप्यन्यथयति ।। ते यदन्तरेतीति ।। ईक्षतीति ।।** ईक्षतेर्नाशब्दमित्यनेन नञ्द्वयोपेतेन शब्दवत्त्वापरपर्यायनामवत्त्वस्योक्तत्वात् । अदृश्यत्वनयगुणसूत्रे रूपस्योक्तेरित्यर्थः ।। **रूपित्वेपीति ।।** ''आकाशो नीलिमोदेति'' इति श्रुतेरिति भावः ।

ಅನಾಮರೂಪತ್ವವನ್ನೂ ಕೂಡ ಬ್ರಹ್ಮನಲ್ಲಿ ಬರುವುದಿಲ್ಲವೆಂದು 'ತೇ ಯದಂತರಾ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ ಎರಡು ನಞ್‌ಗಳನ್ನು ಹೇಳುವ ಮೂಲಕ ಶಬ್ದವತ್ವಕ್ಕೆ ಪರ್ಯಾಯಶಬ್ದವಾದ ನಾಮವತ್ವವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿದ್ದಾರೆ. ಅದೃಶ್ಯತ್ವಾಧಿಕರಣದ ಗುಣಸೂತ್ರವೆನಿಸಿದ 'ರೂಪೋಪನ್ಯಾಸಾಚ್ಚ' ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ರೂಪವನ್ನೂ ಕೂಡ ಹೇಳಿದ್ದಾರೆ. 'ರೂಪಿತ್ವೇಪಿ' ಎಂದರೆ 'ಆಕಾಶೋ ನೀಲಿಮೋದೇತಿ' ಎಂಬ ಶ್ರುತಿಯು ಭೂತಾಕಾಶವು ನೀಲರೂಪದಿಂದ ಹುಟ್ಟುತ್ತದೆಂದು ಹೇಳುತ್ತಿದೆ ಎಂದರ್ಥ.

**प्रकाशः** – अत एवेत्युक्तमेव व्यनक्ति ।। **अव्याकृतेति ।।** आकाशद्वैतं तु वियत्पादे ''न वियदश्रुतेः'' इत्यत्र समर्थयिष्यते ।। **इत्येवेति ।।** अन्यथा भूतमित्यवक्ष्यदिति भावः ।

'ಅತ ಏವ' ಎಂಬಲ್ಲಿ ಹೇಳಿದ್ದನ್ನೇ ಸ್ಪಷ್ಟಪಡಿಸುತ್ತಿದ್ದಾರೆ 'ಅವ್ಯಾಕೃತಾ' ಇತ್ಯಾದಿಯಾಗಿ ಅಂದರೆ ಪ್ರಸಿದ್ಧಾಕಾಶವೆಂದು ಶ್ರೀಮದಾಚಾರ್ಯರು ಏಕೆ ಹೇಳಿದ್ದಾರೆಂದರೆ ಅವ್ಯಾಕೃತಾಕಾಶವನ್ನು ವಿವಕ್ಷಿಸಲು. ಭೂತಾಕಾಶ ಮತ್ತು ಅವ್ಯಾಕೃತಾಕಾಶವೆಂದು ಎರಡು ಬಗೆಯ ಆಕಾಶಗಳಿವೆಯೆಂಬುದು ಹೇಗೆ ಸಿದ್ಧವಾಗುತ್ತದೆ

ಎಂದರೆ 'ನ ವಿಯದಶ್ರುತೇಃ' ಎಂಬ ಸೂತ್ರದಲ್ಲಿ ಅದನ್ನು ಸಮರ್ಥಿಸುತ್ತೇವೆ. ಅವ್ಯಾಕೃತಾಕಾಶವು ವಿವಕ್ಷಿತವಾಗದಿದ್ದಲ್ಲಿ, ಪ್ರಥಮಪಾದದ ಆಕಾಶಾಧಿಕರಣದಂತೆ ಇಲ್ಲಿಯೂ ಕೂಡ ಶ್ರೀಮದಾಚಾರ್ಯರು ಭೂತಾಕಾಶವೆಂಬ ಪದವನ್ನೇ ಪ್ರಯೋಗಿಸುತ್ತಿದ್ದರು.

**प्रकाशः – इह भूतमेव कुतो नेत्यत आह – नहीति ।।** यद्यप्यनामत्वमन्याकृतेऽपि नास्ति । तथापि भूते रूपसत्त्वेनारूपित्वस्याप्यभावादव्याकृते तस्य भावात्तदभिप्रायेणैवमुक्तिः ।

ಈ ಅಧಿಕರಣದಲ್ಲಿ ಭೂತಾಕಾಶವನ್ನು ಏಕೆ ವಿವಕ್ಷಿಸಬಾರದು ? ಎಂಬ ಪ್ರಶ್ನೆಗೆ 'ನಹಿ 'ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವಾಸ್ತವಿಕವಾಗಿ ಅವ್ಯಾಕೃತಾಕಾಶದಲ್ಲಿ ಅನಾಮತ್ವವನ್ನು ಹೇಳಲು ಬರುವುದಿಲ್ಲ. ಆದರೆ ಭೂತಾಕಾಶದಲ್ಲಿ ನಾಮರೂಪಗಳೆರಡೂ ಇರುವುದರಿಂದ ಅನಾಮತ್ವ, ಅರೂಪಿತ್ವ ಎರಡನ್ನೂ ಹೇಳಲು ಬರುವುದಿಲ್ಲ. ಅವ್ಯಾಕೃತಾಕಾಶದಲ್ಲಿ ಅರೂಪಿತ್ವವನ್ನು ಹೇಳಲು ಬರುತ್ತದ್ದಾದ್ದರಿಂದ ಈ ಅಭಿಪ್ರಾಯದಿಂದ ನಾಮರೂಪರಾಹಿತ್ಯವನ್ನು ಪೂರ್ವಪಕ್ಷದಲ್ಲಿ ವಿವಕ್ಷಿಸಲಾಗಿದೆ.

**प्रकाशः –** यद्वा ब्रह्मवदव्याकृताकाशस्यापि देशादितोऽनन्तत्वेन साकल्येन शब्दागोचरत्वरूपमनामत्वमन्याकृतेऽप्यस्तीति भावः ।

ಅಥವಾ ಬ್ರಹ್ಮನಂತೆ ಅವ್ಯಾಕೃತಾಕಾಶವೂ ಕೂಡ ದೇಶತಃ ಅಪರಿಚ್ಛಿನ್ನವಾಗಿದೆ. ಬ್ರಹ್ಮನು ಹೇಗೆ ಸಾಕಲ್ಯೇನ ಶಬ್ದಗೋಚರನಲ್ಲವೋ, ಆದರಂತೆ ಅಪರಿಚ್ಛಿನ್ನವಾದ ಅವ್ಯಾಕೃತಾಕಾಶವೂ ಕೂಡ ಸಾಕಲ್ಯೇನ ಶಬ್ದಗೋಚರವಾಗುವುದಿಲ್ಲ. ಈ ಅಭಿಪ್ರಾಯದಿಂದ ಅನಾಮತ್ವವನ್ನು ಅವ್ಯಾಕೃತಾಕಾಶದಲ್ಲಿಯೂ ಹೇಳಬಹುದು. ಆದ್ದರಿಂದ ನಾಮರೂಪರಾಹಿತ್ಯವು ಅವ್ಯಾಕೃತಾಕಾಶದಲ್ಲಿರುವ ಪ್ರಯುಕ್ತ ಅದೇ ಆಕಾಶಶಬ್ದ ಪ್ರತಿಪಾದ್ಯವಾಗುತ್ತದೆಂಬ ಪೂರ್ವಪಕ್ಷವು ಉದಯವಾಯಿತು.

**गुरुराजीयम् – अत एवेत्यस्यैव विवरणमाकाशस्येति ।।** अस्मिन्पक्षे गगनस्य स्वरूपेण लोकवेदप्रसिद्धत्वेऽपि नामरूपनिर्वोढृत्वे प्रमाणाभावात्कथं तस्य प्रसिद्धिरिति पूर्वपक्षिणं प्रति नियोगापत्त्या पूर्वपक्षस्य दौर्घट्यं भवतीत्यतस्तत्सौघट्याय पक्षान्तरमाह – **यद्वेति ।।** नन्वेवं प्रसिद्धेरुद्देश्याकाशान्वये नैव पूर्वपक्षे टीकायां नहि विष्णुस्तन्निर्वहितृत्वं वा प्रसिद्धमित्यनेन प्रसिद्धेर्विधेयभूत-निर्वोढृत्वान्वयप्रतिषेधोऽनुपपन्नः । विधेयप्रसक्तेरभावादित्यत आह – **टीकायामिति।।** ननु वै नामेति प्रसिद्धेरुद्देश्याकाशान्वयेन लोकवेदयोः प्रसिद्धत्वेन गगनस्यैव ग्रहणं किं न स्यादित्यत आह – **न चाकाशेति ।।** सिद्धान्तीयलिङ्गादिकं सावकाशयति ।। **एवञ्चेति ।। स्युरिति ।।** एव तु पुनः वै वा एतेऽवधारणवाचकाः स्युरित्यन्वयः । प्रकृतनिर्वाह्यं निर्वाह्यत्वेन प्रकृतमित्यर्थः ।।



'ವೈ ನಾಮ' ಎಂಬೆರಡು ನಿಪಾತಗಳು ಲೋಕಪ್ರಸಿದ್ಧಿಯನ್ನು ಹೇಳುತ್ತಿವೆ. ಆದ್ದರಿಂದ ಗಗನವನ್ನೇ ಆಕಾಶಶಬ್ದ ಪ್ರತಿಪಾದ್ಯವೆಂದು ವಿವಕ್ಷಿಸಬೇಕು. ನಾಮರೂಪನಿರ್ವಾಹಕತ್ವವು ಗಗನದಲ್ಲಿ ಅಪ್ರಸಿದ್ಧವಾಗಿರಬಹುದು. ಆದರೆ ಸ್ವರೂಪತಃ ಪ್ರಸಿದ್ಧಿಯನ್ನಷ್ಟೇ ವಿವಕ್ಷಿಸಿ, ಆಕಾಶಶಬ್ದ ಪ್ರತಿಪಾದ್ಯವನ್ನು ನಿರ್ವಹಿಸಬಹುದು. ಅಂದರೆ 'ವೈ ನಾಮ' ಎಂಬ ನಿಪಾತವನ್ನು ಉದ್ದೇಶ್ಯದಲ್ಲಿ ಮಾತ್ರ ಅನ್ವಯ ಮಾಡಿ ವಿಧೇಯವಾದ ನಾಮರೂಪನಿರ್ವಾಹಕತ್ವದಲ್ಲಿ ಅನ್ವಯ ಮಾಡದೇ ಅರ್ಥವನ್ನು ತಿಳಿಯಬೇಕು.

ಬ್ರಹ್ಮನನ್ನು ವಿಧೇಯನೆಂದು ಒಪ್ಪಿದರೂ ಸಹ ಯಾವುದೇ ಬಗೆಯ ಪ್ರಸಿದ್ಧಿಯನ್ನು ಅವನಲ್ಲಿ ತೋರಿಸಲಾಗದು. ಏಕೆಂದರೆ ಈಕ್ಷತ್ಯಧಿಕರಣದಲ್ಲಿ 'ಅಪ್ರಸಿದ್ಧೇರವಾಚ್ಯಂ ತತ್' ಎಂಬುದಾಗಿ ಹೇಳಿದಂತೆ ಪ್ರಸಿದ್ಧಿಶಬ್ದಕ್ಕೆ ಲೋಕಪ್ರಸಿದ್ಧಿಯೆಂದೇ ಸ್ವಾಭಾವಿಕವಾದ ಅರ್ಥ. ಬ್ರಹ್ಮನಲ್ಲಿ ಇಂತಹ ಲೋಕಪ್ರಸಿದ್ಧಿಯನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಗಗನದಲ್ಲಿರುವ ಪ್ರಸಿದ್ಧಿಯನ್ನೇ 'ವೈ ನಾಮ' ಎಂಬೆರಡು ನಿಪಾತಗಳು ಹೇಳುತ್ತಿವೆ.



• • • • •

### ಸಿದ್ಧಾಂತ

### ನಾಮರಾಹಿತ್ಯ-ರೂಪರಾಹಿತ್ಯಗಳೆರಡೂ ವಿಷ್ಣುವಿನ ನಿರವಕಾಶಲಿಂಗಗಳು

**तात्पर्यचन्द्रिका**

**सिद्धान्तस्तु ।। साकल्येन शब्दागोचरत्वादिरूपमनामत्वं ''यतो वाचो निवर्तन्ते'' इत्यादिभाष्योक्तश्रुतिभिर्विष्णोरेव ।**

ಅನುವಾದ - 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತ' ಎಂಬ ಶ್ರುತಿಯಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ಶ್ರುತಿ ಹೇಳಿದ ನಾಮರೂಪರಾಹಿತ್ಯವನ್ನು ಪರಮಾತ್ಮನಲ್ಲಿ ಮಾತ್ರ ಹೇಳಲು ಸಾಧ್ಯ. ಏಕೆಂದರೆ ಬ್ರಹ್ಮನು ಸಾಕಲ್ಯೇನ ಶಬ್ದಗೋಚರನಲ್ಲ. ಹೀಗೆ 'ಯತೋ ವಾಚೋ ನಿವರ್ತಂತೇ' ಇವೇ ಮೊದಲಾದ ಭಾಷ್ಯೋದಾಹೃತ ಶ್ರುತಿಗಳು ಸಾರುತ್ತಿವೆ. ಆದ್ದರಿಂದ ಅನಾಮತ್ವವನ್ನು ವಿಷ್ಣುವಿನಲ್ಲಿ ಮಾತ್ರ ಹೇಳಲು ಸಾಧ್ಯ.

ಪರಿಪೂರ್ಣಚಂದ್ರಿಕಾ

**ईक्षत्यधिकरणे तु शब्दवाच्यत्वमेव निषिद्धम् ।**

ಈಕ್ಷತ್ಯಧಿಕರಣದಲ್ಲಿ ಶಬ್ದವಾಚ್ಯತ್ವವನ್ನು ಪರಮಾತ್ಮನಲ್ಲಿ ಸಮರ್ಥನೆ ಮಾಡಿದ್ದರಿಂದ, ಶಬ್ದ ಅಗೋಚರತ್ವವನ್ನು ಹೇಳಲು ಹೇಗೆ ಸಾಧ್ಯ ? ಅಲ್ಲಿ ಕೇವಲ ಪರಮಾತ್ಮನು ಅವಾಚ್ಯನಲ್ಲ ಎಂದಷ್ಟೇ ಸಮರ್ಥನೆ ಮಾಡಿದ್ದಾರೆ ಹೊರತು, ವಾಚ್ಯನೆಂದು ಹೇಳಿರುವುದಿಲ್ಲ.

**ते यदन्तरेत्यनेन च प्रकृतनिर्वाह्यप्राकृतरूपराहित्यमेवोक्तम् । तच्च "अरूपम्" इत्यादिश्रुतिभिर्ब्रह्मण्येव सुप्रसिद्धम् । नतु गगने ।**

ಇದರಂತೆ ಅನಾಮತ್ವವು ಕೂಡ ಬ್ರಹ್ಮನಲ್ಲೇ ಯುಕ್ತವಾಗುತ್ತದೆ. 'ತೇ ಯದಂತರಾ' ಎಂಬ ಮುಂದಿನ ಶ್ರುತಿಯಿಂದ ನಿರ್ವಾಚ್ಯತ್ವೇನ ಪ್ರಕೃತವಾದ ಪ್ರಾಕೃತರೂಪವೇ ಪ್ರಸಕ್ತವಾಗಿವೆ. ಆದ್ದರಿಂದ ಪ್ರಕೃತರೂಪರಾಹಿತ್ಯವನ್ನು ಶ್ರುತಿ ಹೇಳುತ್ತಿರುವುದರಿಂದ, ಪರಮಾತ್ಮನಲ್ಲಿ ಪ್ರಾಕೃತರೂಪವು ಇಲ್ಲದ ಕಾರಣ ಅರೂಪತ್ವವೂ ಕೂಡ ಅವನಲ್ಲೇ ಬರುತ್ತದೆ. ಈ ವಿಷಯದಲ್ಲಿ 'ಅರೂಪಮ್' ಇತ್ಯಾದಿ ಶ್ರುತಿಗಳೂ ಕೂಡ ಬ್ರಹ್ಮನಲ್ಲೇ ಪ್ರಸಿದ್ಧವಾಗಿದೆ. ಆದರೆ ಗಗನದಲ್ಲಿ ಯಾವುದೇ ರೂಪವಿಲ್ಲವೆಂಬ ಶ್ರುತಿಗಳಿರುವುದಿಲ್ಲ.

**ब्रह्मणि रुग्मवर्णादिश्रुतितात्पर्यापरिज्ञानादिप्राप्तलौकिकरूपस्य "अरूपम्" इत्यादिश्रुत्या निषेधवद्गगने तदभावात् ।**

'ಯದಾಪಶ್ಯಃ ಪಶ್ಯತೇ ರುಗ್ಮವರ್ಣಮ್' ಎಂಬ ಶ್ರುತಿಯು ಪರಮಾತ್ಮನಲ್ಲಿ ರೂಪಾದಿಗಳನ್ನು ಹೇಳುತ್ತಿದೆ. ಶ್ರುತಿಯ ತಾತ್ಪರ್ಯವನ್ನು ತಿಳಿಯದವನಿಗೆ ಈ ಶ್ರುತಿಯಿಂದ ಲೌಕಿಕರೂಪವನ್ನು ಪರಮಾತ್ಮನಲ್ಲಿ ತಿಳಿಯುತ್ತಾನೆ. ಆವಾಗ 'ಅರೂಪಮ್' ಎಂಬ ಇತ್ಯಾದಿ ಶ್ರುತಿಯು ಪರಮಾತ್ಮನಿಗೆ ಪ್ರಾಕೃತರೂಪವಿಲ್ಲವೆಂದು ನಿಷೇಧ ಮಾಡುತ್ತಿದೆ. ಹೀಗೆ ಗಗನದಲ್ಲಿ ಹೇಳಲು ಸಾಧ್ಯವಿಲ್ಲ.

**तदुक्तं न्यायविवरणे "प्रसिद्धाकाशस्योक्तमनामरूपत्वं विरुद्धम्" इति ।**

ಈ ಎಲ್ಲ ದೃಷ್ಟಿಯಿಂದಲೇ ನ್ಯಾಯವಿವರಣದಲ್ಲಿ 'ಪ್ರಸಿದ್ಧ ಆಕಾಶಸ್ಯ ಉಕ್ತಮ್ ಅನಾಮರೂಪತ್ವಂ ವಿರುದ್ಧಮ್' ಪ್ರಸಿದ್ಧವಾದ ಅವ್ಯಾಕೃತಾಕಾಶಕ್ಕೆ ಹೇಳಲ್ಪಟ್ಟ ಅನಾಮರೂಪತ್ವವು ವಿರುದ್ಧವಾಗಿದೆ ಎಂಬ ಮಾತು ಹೊರಟಿವೆ.

**प्रकाशः –**

अर्थातरत्वादिव्यपदेशादिति सूत्रभाष्याद्युक्तनिरवकाशानामरूपत्वादिहेतुबलादाकाशो विष्णुरेव । निपातद्योत्यप्रसिद्धिरप्यन्तरङ्गत्वाद्विष्णौ सम्भवद्वैदिक्येव ग्राह्येति भावेन सिद्धान्तटीकां विवृण्वन् अनामरूपत्वयोष्टीकायामस्पष्टस्वरूपस्य स्पष्टीकरणेन तयोर्निरवकाशत्वं क्रमेण व्यनक्ति – **साकल्येनेत्यादिना ॥**

ವಿವರಣೆ - ಸಿದ್ಧಾಂತವನ್ನು ಪ್ರಾರಂಭಮಾಡುತ್ತಿದ್ದಾರೆ - 'ಅರ್ಥಾಂತರತ್ವಾದಿವ್ಯಪದೇಶಾತ್' ಎಂಬ ಸೂತ್ರದ ಭಾಷ್ಯದಲ್ಲಿ ನಾಮರೂಪರಾಹಿತ್ಯವು ನಿರವಕಾಶವಾದ ವಿಷ್ಣುಲಿಂಗವಾಗಿದೆ. ಇದರ ಬಲದಿಂದ ವಿಷ್ಣುವೇ ಆಕಾಶಶಬ್ದ ವಾಚ್ಯನಾಗುತ್ತಾನೆಂದು ಸಮರ್ಥನೆ ಮಾಡಿದ್ದಾರೆ. 'ನಿಪಾತದ್ಯೋತ್ಯವಾದ ಪ್ರಸಿದ್ಧಿ' ಎಂದರೆ ವೈದಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಏಕೆಂದರೆ ವೈದಿಕಪ್ರಸಿದ್ಧಿಯು ಅಂತರಂಗವಾಗಿದೆ. ಇಂತಹ ವೈದಿಕಪ್ರಸಿದ್ಧಿಯು ವಿಷ್ಣುವಿನಲ್ಲಿ ಯುಕ್ತವೇ ಆಗುತ್ತದೆ. ಈ ಅಭಿಪ್ರಾಯದಿಂದ ಸಿದ್ಧಾಂತ ಟೀಕೆಯನ್ನು ವಿವರಿಸುವವರಾಗಿ, ನಾಮರೂಪರಾಹಿತ್ಯವನ್ನು ಹೇಳುವ ಟೀಕೆಯು ಅಸ್ಪಷ್ಟವಾಗಿರುವ ಕಾರಣ ಅದನ್ನು ಸ್ಪಷ್ಟಪಡಿಸುತ್ತಾ, ನಾಮರೂಪರಾಹಿತ್ಯ ಹಾಗೂ ರೂಪರಾಹಿತ್ಯಗಳಿಗೆ ನಿರವಕಾಶತ್ವವನ್ನು ಕ್ರಮವಾಗಿ ಸಮರ್ಥನೆ ಮಾಡುತ್ತಿದ್ದಾರೆ 'ಸಾಕಲ್ಯೇನ' ಇತ್ಯಾದಿ ಗ್ರಂಥದಿಂದ.

**प्रकाशः** – आदिपदेनामुख्यार्थकनामराहित्यं स्वानभिधायकनामराहित्यमयौगिकनामराहित्यमित्यादि ग्राह्यम् ॥

'ಸಾಕಲ್ಯೇನ ಶಬ್ದಾಗೋಚರತ್ವಾದಿರೂಪಮನಾಮತ್ವಮ್' ಎಂದು ಗ್ರಂಥದಲ್ಲಿದೆ. ಅಂದರೆ ಭಗವಂತನಲ್ಲಿರುವ ಅನಾಮತ್ವವು ಸಾಕಲ್ಯೇನ ಶಬ್ದ ಅಗೋಚರರೂಪವಾದದ್ದು. ಯಾವುದೇ ಶಬ್ದಗಳಿಂದಲೂ ಸಂಪೂರ್ಣವಾಗಿ, ಅವನನ್ನು ತಿಳಿಯಲು ಸಾಧ್ಯವಿಲ್ಲವೆಂದು ಇದರ ಅರ್ಥ. ಅಷ್ಟೇ ಅಲ್ಲದೆ, ಯಾವುದೇ ಶಬ್ದಗಳು ಅಮುಖ್ಯವಾಗಿ ಅವನನ್ನು ಪ್ರತಿಪಾದನೆ ಮಾಡುವುದಿಲ್ಲ. ಮತ್ತು ಅವನನ್ನು ಪ್ರತಿಪಾದನೆ ಮಾಡದ ನಾಮಾತ್ಮಕ ಶಬ್ದಗಳೇ ಇಲ್ಲ. ಮತ್ತು ಯೌಗಿಕವಲ್ಲದ ನಾಮಗಳೂ ಸಹ ಅವನಲ್ಲಿಲ್ಲ. ಈ ಎಲ್ಲ ಕಾರಣಗಳಿಂದ ಪರಮಾತ್ಮನು ನಾಮರಹಿತನೆನಿಸಿಕೊಳ್ಳುತ್ತಾನೆ.

**प्रकाशः – भाष्योक्तेति ॥** अत्र सूत्रेऽन्यत्र चेत्यर्थः । तेन ''अशब्दमस्पर्शं यत्तदद्रेश्यमग्राह्यं अवागमन'' इत्यादिश्रुतयो ग्राह्या इति बहुवचनोपपत्तिः । एवमग्रेऽपि ।

ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳಿಂದ ಈ ಸೂತ್ರದಲ್ಲಿ ಮತ್ತು ಬೇರೆ ಕಡೆಯು ವಿಷ್ಣುವೇ ಸಾಕಲ್ಯೇನ ಶಬ್ದ ಅಗೋಚರನಾಗುತ್ತಾನೆಂದು ವಿವಕ್ಷಿಸಿದ್ದಾರೆ. ಇದರಿಂದ 'ಅಶಬ್ದಮಸ್ಪರ್ಶಂ' ಎಂಬ ಶ್ರುತಿಯನ್ನು, 'ಯತ್ತದದ್ರೇಶ್ಯಮ್' ಎಂಬ ಶ್ರುತಿಯನ್ನು 'ಅಗ್ರಾಹ್ಯಂ' ಇತ್ಯಾದಿ ಶ್ರುತಿಗಳನ್ನು ಸಂಗ್ರಹಿಸಬೇಕು. ಇದರಂತೆ ಮುಂದೆಯೂ ಸಹ.

**प्रकाशः** – ''ननु हरेः कथमनामरूपत्वम् । उक्तविरोधात्'' इत्यादि टीकां व्यञ्जयन् प्रागुक्तशङ्कां निराह – **ईक्षतीति** ।। नतु साकल्येन शब्दागोचरत्वादिकमित्येवकारार्थः ।

'ನನು ಹರೇಃ ಕಥಮನಾಮರೂಪತ್ವಮ್ । ಉಕ್ತವಿರೋಧಾತ್' ಶ್ರೀಹರಿಯು ನಾಮರೂಪರಹಿತನಾಗಿದ್ದಾನೆಂದು ಹೇಳಿದರೆ ಈಕ್ಷತ್ಯಧಿಕರಣದ ವಿರೋಧ ಬರುತ್ತದಲ್ಲವೇ? ಎಂಬ ಟೀಕೆಯನ್ನು ಸ್ಪಷ್ಟಪಡಿಸುತ್ತಾ, ಪೂರ್ವಪಕ್ಷದಲ್ಲಿ ಹೇಳಿದ ಆಶಂಕೆಯನ್ನು ನಿರಾಕರಿಸುತ್ತಿದ್ದಾರೆ 'ಈಕ್ಷತಿ' ಇತ್ಯಾದಿ ವಾಕ್ಯದಿಂದ. ಈಕ್ಷತ್ಯಧಿಕರಣದಲ್ಲಿ ಶಬ್ದಗಳಿಂದ ಅವಾಚ್ಯನಲ್ಲವೆಂದಷ್ಟೇ ಸಮರ್ಥನೆ ಮಾಡಿದ್ದಾರೆ. ಹೊರತು, ಸಾಕಲ್ಯೇನ ಶಬ್ದ ಅಗೋಚರತ್ವವನ್ನು ನಿರಾಕರಣೆ ಮಾಡಿಲ್ಲ.

**प्रकाशः** – ननु ''अरूपो भूतवर्जनात्'' इति भाष्यमयुक्तम् । श्रुतौ भौतिकरूपराहित्याप्रतीतेरित्यत आह – **प्रकृतनिर्वाह्येति** ।। प्रकृतं यन्निर्वाह्यलक्षणं प्राकृतरूपं तद्राहित्यमित्यर्थः ।

'ಅರೂಪೋ ಭೂತವರ್ಜನಾತ್' ಎಂಬ ಭಾಷ್ಯವು ಪರಮಾತ್ಮನಲ್ಲಿ ಪ್ರಾಕೃತರೂಪವಿಲ್ಲದ ಕಾರಣ, ರೂಪರಾಹಿತ್ಯವನ್ನು ಹೇಳುತ್ತಿದೆ. ಆದರೆ ಶ್ರುತಿಯಲ್ಲಿ ಪ್ರಾಕೃತರೂಪರಾಹಿತ್ಯವನ್ನು ಹೇಳುತ್ತಿರುವುದು ಪ್ರತೀತವೇ ಆಗುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ 'ಪ್ರಕೃತನಿರ್ವಾಹ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಪ್ರಕೃತ ನಿರ್ವಾಹ್ಯ ಪ್ರಾಕೃತರೂಪರಾಹಿತ್ಯಮ್' ಎಂಬುದಕ್ಕೆ ಹೀಗರ್ಥ - ಶ್ರುತಿಯಲ್ಲಿ ಪ್ರಕೃತವಾದ ಯಾವ ನಿರ್ವಾಹ್ಯರೂಪವಾದ ಪ್ರಾಕೃತರೂಪವಿದೆಯೋ, ಅದರಿಂದ ರಹಿತನಾಗಿದ್ದಾನೆ ಎಂದು.

**प्रकाशः** – भाष्ये भूतपदमुपलक्षणम् । अत एव प्रथमस्कन्धे ''अनामरूपात्मनि नामरूपे'' इति श्लोकतात्पर्ये ''अप्राकृतत्वाद्रूपस्याप्यरूपोऽसावुदीर्यते'' इत्युक्तमिति भावः ।

ಭಾಷ್ಯದಲ್ಲಿರುವ ಭೂತಪದವು ಉಪಲಕ್ಷಣವಾಗಿದೆ. ಆದ್ದರಿಂದಲೇ ಪ್ರಥಮಸ್ಕಂಧದ ಭಾಗವತದಲ್ಲಿ 'ಅನಾಮರೂಪಾತ್ಮನಿ ನಾಮರೂಪೇ' ಎಂಬ ಶ್ಲೋಕವು ಪ್ರಾಕೃತರೂಪರಾಹಿತ್ಯವನ್ನು ಪರಮಾತ್ಮನಲ್ಲಿ ಹೇಳುತ್ತಿದೆ. ಭಾಗವತ ತಾತ್ಪರ್ಯದಲ್ಲಿ ಇದನ್ನು ವ್ಯಾಖ್ಯಾನ ಮಾಡುತ್ತಾ 'ಅಪ್ರಾಕೃತತ್ವಾದ್ರೂಪಸ್ಯಾಪ್ಯರೂಪೋಽಸಾವುದೀರ್ಯತೇ' ಅಪ್ರಾಕೃತರೂಪನಾದ್ದರಿಂದ ಪರಮಾತ್ಮನು ಅರೂಪನೆನಿಸುತ್ತಾನೆ ಎಂದು ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – अन्यथाऽप्रकृतपरत्वं, ''रुग्मवर्णम्'' इत्यादिवचनविरोधः, ''श्यामाच्छबलं प्रपद्ये'' इति सन्निहितवाक्यविरोधश्च स्यादिति भावः ।।

ಆಕಾಶಾಧಿಕರಣ (೧-೩-೧೨)

ಒಂದು ವೇಳೆ ಸಾಕಲ್ಯೇನ ರೂಪರಾಹಿತ್ಯವನ್ನು ಹೇಳಿದರೆ ಅಪ್ರಕೃತವಾದದ್ದನ್ನು ಹೇಳಿದಂತಾಗುತ್ತದೆ. ಮತ್ತು 'ರುಗ್ಮವರ್ಣಮ್' ಇತ್ಯಾದಿ ವಚನದ ವಿರೋಧವೂ ಕೂಡ ಬರುತ್ತದೆ. 'ಶ್ಯಾಮಾಚ್ಛಬಲಂ ಪ್ರಪದ್ಯೇ' ಎಂಬ ಹತ್ತಿರದಲ್ಲೇ ಇರುವ ವಾಕ್ಯವು ಪರಮಾತ್ಮನಲ್ಲಿರುವ ಚಿತ್ರವಿಚಿತ್ರ ರೂಪಗಳನ್ನು ಉಪಾಸನೆ ಮಾಡುತ್ತೇನೆಂದು ಹೇಳುತ್ತಿದೆ. ಈ ವಾಕ್ಯದ ವಿರೋಧವೂ ಕೂಡ ಬರುತ್ತದೆ.

**प्रकाशः – अरूपमिति ।।** "अशब्दमस्पर्शमरूपमव्ययमवर्णमगोत्रम्" इत्यादि-श्रुतिभिरित्यर्थः । **ब्रह्मणि रूपप्रसक्त्या तन्निषेधस्सम्भवतीति भावेन सुप्रसिद्धमित्युक्तम्।**

'ಅರೂಪಮ್' ಎಂದರೆ 'ಅಶಬ್ದಸ್ಪರ್ಶಮರೂಪಮವ್ಯಯಮವರ್ಣಮಗೋತ್ರಮ್' ಇತ್ಯಾದಿ ಶ್ರುತಿ-ಗಳಿಂದ ಪರಮಾತ್ಮನಲ್ಲಿ ಪ್ರಾಕೃತರೂಪರಾಹಿತ್ಯವನ್ನೇ ಹೇಳಲಾಗಿದೆ ಎಂದರ್ಥ. ಬ್ರಹ್ಮನಲ್ಲಿ ಪ್ರಾಕೃತರೂಪವು ಇದೆಯೆಂದು ಪ್ರಸಕ್ತವಾದಾಗ ಶ್ರುತಿಯು ಅದನ್ನು ನಿಷೇಧ ಮಾಡುತ್ತಿದೆ. ಈ ಅಭಿಪ್ರಾಯದಿಂದ 'ಪ್ರಸಿದ್ಧಂ' ಎಂದು ಹೇಳಿದ್ದಾರೆ.

**प्रकाशः –** तद्व्यनक्ति ।। **ब्रह्मणीति ।।** आदिपदेन कुसमयादिप्राप्तेति गृह्यते । भाष्यविवरणपरटीकया न्यायविवरणमपि विवृतमिति भावेनाह – **तदुक्तमिति ।।**

ಅದನ್ನೇ 'ಬ್ರಹ್ಮಣಿ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಆದಿಪದದಿಂದ ದುರ್ಮತಗಳಿಂದ ಪ್ರಾಪ್ತವಾದ ವಿಷಯವನ್ನು ಸಂಗ್ರಹಿಸಬೇಕು. ಭಾಷ್ಯವನ್ನು ವಿವರಿಸುವ ಟೀಕೆಯಿಂದ ನ್ಯಾಯವಿವರಣವನ್ನೂ ಕೂಡ ವಿವರಿಸಿದಂತಾಯಿತು ಎಂಬ ಅಭಿಪ್ರಾಯದಿಂದ 'ತದುಕ್ತಮ್' ಎಂದು ಹೇಳಿದ್ದಾರೆ.

**प्रकाशः –** यद्वा भाष्यटीकयोरनामत्वस्यारूपत्वस्य च व्युत्क्रमेणैव सूत्रानुरोधेन व्युत्पादनादिह च श्रौतक्रमानुरोधेनानामरूपत्वयोः क्रमेण व्युत्पादनं किं मूलमित्यत आह – **तदुक्तमिति ।।**

ಗ್ರಂಥಕಾರರು ಮೊದಲು ಭಗವಂತನಲ್ಲಿ ನಾಮರಾಹಿತ್ಯವನ್ನು ಸಮರ್ಥನೆ ಮಾಡಿ, ಅನಂತರ ರೂಪರಾಹಿತ್ಯವನ್ನು ಸಮರ್ಥನೆ ಮಾಡಿದ್ದಾರೆ. ಆದರೆ ಭಾಷ್ಯ ಹಾಗೂ ಟೀಕೆಗಳಲ್ಲಿ ರೂಪರಾಹಿತ್ಯವನ್ನು ಮೊದಲು ಸಮರ್ಥನೆ ಮಾಡಿ, ಅನಂತರ ನಾಮರಾಹಿತ್ಯವನ್ನು ಸಮರ್ಥನೆ ಮಾಡಿದ್ದಾರೆ. ಸೂತ್ರಕ್ಕೆ ಅನುಸಾರಿಯಾಗಿ ಭಾಷ್ಯಟೀಕೆಗಳು ಹೊರಟಿವೆ. ಪ್ರಕೃತ ಗ್ರಂಥಕಾರರ ಮಾತು ಶ್ರುತಿಕ್ರಮಕ್ಕೆ ಅನುಸಾರಿಯಾಗಿ ಹೊರಟಿದೆ. ಗ್ರಂಥಕಾರರ ಈ ಕ್ರಮಕ್ಕೆ ನ್ಯಾಯವಿವರಣವೇ ಮೂಲವಾಗಿದೆ ಎಂದು 'ತದುಕ್ತಮ್' ಎಂಬುದರಿಂದ ಹೇಳಿದ್ದಾರೆ.

**प्रकाशः –** यद्वा भाष्ये हरावनामरूपत्वोपपादनस्यैव कृतत्वेन गगने तदभावस्यानुक्तत्वाट्टीकायां "अन्यथाऽनामरूपत्वविरोधात् । अवकाशस्यापि नामवत्त्वात्" इत्युक्तिः किं मूला । यस्या उपपादनं नतु गगन इत्यादिना कृतमित्यत आह – **तदुक्तमिति ।।** तत् गगनेऽनुपपन्नत्वमित्यर्थः ।

ಅಥವಾ ಭಾಷ್ಯದಲ್ಲಿ ನಾಮರೂಪರಾಹಿತ್ಯವನ್ನು ಶ್ರೀಹರಿಯಲ್ಲಿ ಉಪಪಾದನೆ ಮಾಡಿದ್ದಾರೆ. ಹೊರತು, ಗಗನದಲ್ಲಿ ಇದನ್ನು ನಿರಕಾರಣೆ ಮಾಡುವ ಉದ್ದೇಶವಿಲ್ಲ. ಆದರೆ ಟೀಕೆಯಲ್ಲಿ 'ಅನ್ಯಥಾऽನಾಮರೂಪತ್ವ-ವಿರೋಧಾತ್' 'ಅವಕಾಶಸ್ಯಾಪಿ ನಾಮವತ್ತ್ವಾತ್' ಎಂಬುದಾಗಿ ಪರಮಾತ್ಮನಲ್ಲಿ ನಾಮರೂಪರಾಹಿತ್ಯವನ್ನು ಸಮರ್ಥನೆ ಮಾಡುವುದರ ಜೊತೆಗೆ ಆಕಾಶದಲ್ಲಿ ನಾಮ ಹಾಗೂ ರೂಪಗಳನ್ನು ಸಮರ್ಥನೆ ಮಾಡಿದ್ದಾರೆ. ಇದಕ್ಕೆ ಏನು ಮೂಲ? ಅಂದರೆ ಗಗನದಲ್ಲಿ ಯಾವ ನಾಮ ಹಾಗೂ ರೂಪಗಳನ್ನು ಉಪಪಾದನೆ ಮಾಡಿದ್ದಾರೋ, ಇದಕ್ಕೆ ಆಧಾರವೇನು ? ಎಂಬ ಪ್ರಶ್ನೆಗೆ 'ತದುಕ್ತಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಗಗನದಲ್ಲಿ ನಾಮರೂಪರಾಹಿತ್ಯವು ಅನುಪಪನ್ನವಾಗಿದೆಯೆಂದು ಅಭಿಪ್ರಾಯ.

**प्रकाशः** – यद्वा टीकायां ''अवकाशस्यापि नामवत्त्वात्'' इत्यादिनाऽनामत्वाभाव एवोपपादितो नत्वरूपत्वाभावोऽपि । भवद्भिस्त्वनामत्वाभावं टीकोक्तत्वादनुक्त्वाऽरूपत्वाभाव एव टीकानुक्तोऽपि व्युत्पादितः । स किं मूल इत्यत आह – **तदुक्तमिति** ।।

ಅಥವಾ ಟೀಕೆಯಲ್ಲಿ 'ಅವಕಾಶಸ್ಯಾಪಿ ನಾಮವತ್ತ್ವಾತ್' ಇತ್ಯಾದಿ ವಾಕ್ಯದಿಂದ ಅವ್ಯಾಕೃತಾಕಾಶದಲ್ಲಿ ನಾಮವತ್ತ್ವವನ್ನು ಮಾತ್ರ ಹೇಳಿರುತ್ತಾರೆ. ಇದರಿಂದ ನಾಮರಾಹಿತ್ಯವು ಇರುವುದಿಲ್ಲವೆಂದು ಉಪಪಾದನೆ ಮಾಡಿದಂತಾಯಿತು ಹೊರತು, ರೂಪರಾಹಿತ್ಯವು ಇಲ್ಲವೆಂದು ಉಪಪಾದನೆ ಮಾಡಿದಂತಾಗುವುದಿಲ್ಲ. ಆದರೆ ಪ್ರಕೃತ ಗ್ರಂಥಕಾರರು ಗಗನದಲ್ಲಿ ನಾಮರಾಹಿತ್ಯವನ್ನು ಟೀಕೆಯಲ್ಲಿ ಹೇಳಿರುವ ಕಾರಣದಿಂದ ಉಪಪಾದನೆ ಮಾಡದೇ, ರೂಪರಾಹಿತ್ಯವನ್ನು ಟೀಕೆಯಲ್ಲಿ ಹೇಳದಿದ್ದರೂ ಉಪಪಾದನೆ ಮಾಡಿದ್ದಾರೆ. ಇದಕ್ಕೆ ಏನು ಮೂಲ? ಎಂಬ ಪ್ರಶ್ನೆಗೆ 'ತದುಕ್ತಮ್' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – अनामत्वमरूपत्वमुभयं गगने विरुद्धमित्येतदुक्तमित्यर्थः । टीकोपलक्षणमिति भावः ।

ಅನಾಮತ್ವ ಮತ್ತು ಅರೂಪತ್ವ ಇವೆರಡೂ ಗಗನದಲ್ಲಿ ವಿರುದ್ಧವಾಗಿವೆ ಎಂದರ್ಥ. ಆದ್ದರಿಂದ ಟೀಕೆಯಲ್ಲಿ ಕೇವಲ ನಾಮವತ್ತ್ವವನ್ನಷ್ಟೇ ಸಮರ್ಥನೆ ಮಾಡಿದ್ದರೂ ರೂಪವತ್ತ್ವವನ್ನು ಉಪಲಕ್ಷಣಯಾ ವಿವಕ್ಷಿಸಬೇಕು.[೧]

**प्रकाशः** – न्यायविवरणेऽनामत्वमरूपत्वं च विरुद्धमित्यनत्त्वाऽनामरूपत्वमिति सहनिर्देशोऽपीह पृथग्व्युत्पादनं तु श्रुतौ ते इत्यत्र निर्वाह्यतया प्रकृतयोर्नामरूपयोर्मध्ये

(೧)'ತದುಕ್ತಮ್ ನ್ಯಾಯವಿವರಣೆ' ಎಂಬುದಕ್ಕೆ ನಾಲ್ಕು ಬಗೆಯ ರಾಯರ ವ್ಯಾಖ್ಯಾನ ಚಮತ್ಕಾರವನ್ನು ಜಿಜ್ಞಾಸುಗಳು ಗಮನಿಸಬೇಕು.

रूपमेव प्राकृतम् । नतु नामापि । सर्ववैदिकनाम्नामनादिनित्यत्वेन प्रकृतिजन्यनाम्नोऽभावादिति द्योतयितुमित्याहुः ।

ನ್ಯಾಯವಿವರಣದಲ್ಲಿ 'ಅನಾಮತ್ವಂ ಅರೂಪತ್ವಂ ಚ ವಿರುದ್ಧಮ್' ನಾಮರಾಹಿತ್ಯ ರೂಪರಾಹಿತ್ಯಗಳೆರಡೂ ವಿರುದ್ಧವಾಗಿದೆ ಎಂದು ಹೇಳದೆ 'ಅನಾಮರೂಪತ್ವಮ್' ಎಂದು ಸಹನಿರ್ದೇಶ ಮಾಡಿದ್ದಾರೆ. ಆದರೆ ಪ್ರಕೃತ ಗ್ರಂಥಕಾರರು ನಾಮರಾಹಿತ್ಯ, ರೂಪರಾಹಿತ್ಯಗಳನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದಾರೆ. ಏಕೆಂದರೆ ಶ್ರುತಿಯಲ್ಲಿ 'ತೇ ಯದಂತರಾ' ಎಂಬುದಾಗಿ ನಿರ್ವಾಹ್ಯತಯಾ ಪ್ರಕೃತವಾದ ನಾಮ ಹಾಗೂ ರೂಪಗಳ ನಡುವೆ ರೂಪವು ಮಾತ್ರ ಪರಮಾತ್ಮನಲ್ಲಿ ಪ್ರಾಕೃತವೆಂದು ಪ್ರಸಕ್ತವಾಗುತ್ತದೆ. ಹೊರತು, ನಾಮವು ಪ್ರಾಕೃತವೆಂದು ಪ್ರಸಕ್ತವಾಗುವುದಿಲ್ಲ. ಏಕೆಂದರೆ ಸಕಲ ವೈದಿಕಶಬ್ದಗಳೆಲ್ಲವೂ ಅನಾದಿನಿತ್ಯವಾದ್ದರಿಂದ ಪ್ರಕೃತಿಜನ್ಯವಾಗಿರುವುದಿಲ್ಲ. ಈ ಒಂದು ಸ್ವಾರಸ್ಯವನ್ನು ತೋರಿಸುವುದಕ್ಕಾಗಿ ಪ್ರತ್ಯೇಕವಾಗಿ ಗ್ರಂಥಕಾರರು ಅನಾಮತ್ವವನ್ನು ಪರಿಗಣಿಸಿದ್ದಾರೆ ಎಂದು ಕೆಲವರು ಉತ್ತರಿಸುತ್ತಾರೆ.

**प्रकाशः** – ननु ''नामरूपयोः'' इत्यत्र रूपपदेनार्थप्रपञ्चो गृह्यत इत्युपेत्य सर्वाधारत्वं तेन लब्धमित्युच्यते । ते यदन्तरेत्यत्र तु ''अवर्णम्'' इत्यादिभाष्योक्तश्रुत्या प्राकृतशुक्लपीतादिरूपराहित्यमर्थ इति भाति । तत्कथमेतदिति चेन्मैवम् । नामरूपयोरित्यत्र रूपपदेनाजहल्लक्षणया रूपस्पर्शगन्धादि-विषयमात्रोपलक्षणाददोष इत्याहुः ।

'ನಾಮರೂಪಯೋಃ' ಎಂಬಲ್ಲಿ ರೂಪಪದದಿಂದ ಅರ್ಥಪ್ರಪಂಚವನ್ನು ಸ್ವೀಕರಿಸಬೇಕು. ಆದ್ದರಿಂದಲೇ ಸರ್ವಾಧಾರತ್ವವನ್ನು ಹೇಳಿದಂತಾಗುತ್ತದೆಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಆದರೆ 'ತೇ ಯದಂತರಾ' ಎಂಬಲ್ಲಿ 'ಅವರ್ಣಮ್' ಇತ್ಯಾದಿಯಾದ ಭಾಷ್ಯೋದಾಹೃತ ಶ್ರುತಿಯಿಂದ ಪ್ರಾಕೃತವಾದ ಶುಕ್ಲಪೀತಾದಿರೂಪಾದಿಗಳಿಲ್ಲವೆಂದು ವ್ಯಾಖ್ಯಾನಿಸದಂತೆ ಕಾಣಿಸುತ್ತದೆ. ಹಾಗಾದರೆ ರೂಪಪದದಿಂದ ಅರ್ಥಪ್ರಪಂಚವನ್ನು ವಿವಕ್ಷಿಸಬೇಕೋ, ಅಥವಾ ಶುಕ್ಲಪೀತಾದಿ ಬಣ್ಣಗಳನ್ನು ವಿವಕ್ಷಿಸಬೇಕೋ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. 'ನಾಮರೂಪಯೋಃ' ಎಂಬಲ್ಲಿ ರೂಪ ಪದಕ್ಕೆ ಅಜಹಲ್ಲಕ್ಷಣಾ ಮಾಡಿದಾಗ ರೂಪದ ಜೊತೆಗೆ ಸ್ಪರ್ಶ, ಗಂಧ ಮೊದಲಾದ ಎಲ್ಲ ವಿಷಯಗಳನ್ನು ಉಪಲಕ್ಷಣಯಾ ವಿವಕ್ಷಿಸಿದಂತಾಗುತ್ತದೆ. ಇದರಿಂದ ಅರ್ಥಪ್ರಪಂಚವೂ ಕೂಡ ರೂಪಪದದಿಂದ ತಿಳಿಯುತ್ತದೆಂದು ಕೆಲವರು ವ್ಯಾಖ್ಯಾನಿಸುತ್ತಾರೆ.




'ಆಕಾಶೋ ವೈನಾಮ ನಾಮರೂಪಯೋಃ ನಿರ್ವಹಿತ' ಎಂಬ ಛಾಂದೋಗ್ಯದ ವಾಕ್ಯದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಈ ವಾಕ್ಯದಲ್ಲಿರುವ ನಾಮರಾಹಿತ್ಯ-ರೂಪರಾಹಿತ್ಯಗಳೆರಡೂ ವಿಷ್ಣುವಿನ ಅಸಾಧಾರಣ ನಿರವಕಾಶಲಿಂಗಗಳೇ ಆಗಿವೆ ಹೊರತು, ಅವ್ಯಾಕೃತಾಕಾಶದ್ದಲ್ಲ. 'ಯತೋ ವಾಚೋ ನಿವರ್ತಂತೇ' ಇತ್ಯಾದಿ

ಶ್ರುತಿಗಳು ಪರಮಾತ್ಮನು ಸಾಕಲ್ಯೇನ ಶಬ್ದಗೋಚರನಲ್ಲವೆಂದು ಸಮರ್ಥನೆ ಮಾಡುತ್ತಿವೆ. ಆದ್ದರಿಂದ ಅವನನ್ನು ನಾಮರಹಿತನೆಂದು ಶ್ರುತಿಯು ಕರೆದಿದೆ.

ಇದರಂತೆ 'ತೇ ಯದಂತರಾ' ಎಂಬ ಶ್ರುತಿಯಲ್ಲಿ ರೂಪರಾಹಿತ್ಯವನ್ನೂ ಕೂಡ ತಿಳಿಯಬೇಕು. ಅಂದರೆ ಬ್ರಹ್ಮನಲ್ಲಿ 'ಯದಾಪಶ್ಯಃ ಪಶ್ಯತೇ ರುಗ್ಮವರ್ಣಮ್' ಇತ್ಯಾದಿ ಶ್ರುತಿಗಳ ಆಧಾರದಿಂದ ಪ್ರಾಕೃತರೂಪವಿರಬಹುದೆಂಬ ಸಂಶಯವೂ ಉಂಟಾಗುತ್ತದೆ. ಅದನ್ನು 'ಅಶಬ್ದಸ್ಪರ್ಶಮರೂಪವ್ಯಯಮ್' ಎಂಬ ಶ್ರುತಿಯು ಪ್ರಾಕೃತರೂಪವಿಲ್ಲವೆಂಬು ವ್ಯಾಖ್ಯಾನ ಮಾಡುವ ಮೂಲಕ, ಅಪ್ರಾಕೃತರೂಪವನ್ನಷ್ಟೇ ಅಂತಹ ಶ್ರುತಿಗಳು ಹೇಳುತ್ತಿವೆಯೆಂದು ಸ್ಪಷ್ಟಪಡಿಸುತ್ತದೆ. ಪರಮಾತ್ಮನಲ್ಲಿ ಪ್ರಾಕೃತರೂಪವಿಲ್ಲದ ಕಾರಣ, ರೂಪರಾಹಿತ್ಯವನ್ನು ಶ್ರುತಿಯು ಹೇಳುತ್ತಿದೆ. ಆದ್ದರಿಂದ ನಾಮರಾಹಿತ್ಯ-ರೂಪರಾಹಿತ್ಯಗಳೆರಡೂ ಪರಮಾತ್ಮನ ನಿರವಕಾಶಲಿಂಗಗಳಾಗಿವೆ. ಏಕೆಂದರೆ ಗಗನದಲ್ಲಿ ಶಬ್ದಗಳಿಂದ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲವೆಂಬ ಅನಾಮತ್ವವನ್ನಾಗಲೀ, ರೂಪವೇ ಇಲ್ಲವೆಂಬ ಅರೂಪವತ್ವವನ್ನಾಗಲೀ, ಹೇಳಲು ಸಾಧ್ಯವಿಲ್ಲ. ಗಗನದಲ್ಲಿ ಶಬ್ದಪ್ರತಿಪಾದ್ಯತ್ವವೂ ಇರುತ್ತದೆ. ಮತ್ತು ನೈಲ್ಯಾದಿರೂಪಗಳೂ ಕೂಡ ಇರುತ್ತದೆ.



## ವಿಷ್ಣು ಆಕಾಶವೆನ್ನಲು ನಿಪಾತಗಳೇ ಆಧಾರ

### तात्पर्यचन्द्रिका

**नच निपातविरोधः । यतः –**

**वैदिकेषु प्रयोगेषु वैदिक्येव प्रसिद्धता ।**
**ग्राह्यान्तरङ्गभूतत्वात्तदयोगे त्ववैदिकी ।। १ ।।**

ಅನುವಾದ - 'ಹವ್ಯ' ಎಂಬ ನಿಪಾತಗಳ ವಿರೋಧವೂ ಕೂಡ ಬರುವುದಿಲ್ಲ. ಏಕೆಂದರೆ

ವೈದಿಕೇಷು ಪ್ರಯೋಗೇಷು ವೈದಿಕ್ಯೇವ ಪ್ರಸಿದ್ಧತಾ ।
ಗ್ರಾಹ್ಯಾಂತರಂಗಭೂತತ್ವಾತ್ತದಯೋಗೇ ತ್ವವೈದಿಕೀ ।।೧।।

ವೈದಿಕಪ್ರಯೋಗದಲ್ಲಿ ವೈದಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಏಕೆಂದರೆ ಅಂತರಂಗ ಬಹಿರಂಗಗಳಲ್ಲಿ ಅಂತರಂಗವನ್ನೇ ಸ್ವೀಕರಿಸುವುದು ಶ್ರೇಷ್ಠವಾದ್ದರಿಂದ, ವೈದಿಕಪ್ರಸಿದ್ಧಿಯೆಂಬ ಅಂತರಂಗವನ್ನು ಬಿಟ್ಟು, ಬಹಿರಂಗವೆನಿಸಿದ ಲೌಕಿಕಪ್ರಸಿದ್ಧಿಯನ್ನು ವಿವಕ್ಷಿಸಬಾರದು.

**ब्रह्मणो हि सर्ववेदेषु महातात्पर्यतः प्रसिद्धिः । नैवं गगनस्य । एवञ्च प्रसिद्धेर्यदि पूर्ववादिरीत्योद्देश्याकाशान्वयः तथापि ''शास्त्रस्था वा तन्निमित्तत्वात्''**

**इति न्यायेन विजातीयबहिरङ्गलौकिकप्रसिद्धिसङ्ग्रहाय सजातीयान्तरङ्गवैदिकप्रसिद्धि-पीडनायोगाद्ब्रह्मणः प्रसिद्धिरेव निपातद्योत्या ।**

ಸಕಲ ವೇದಗಳ ಮಹಾತಾತ್ಪರ್ಯವು ಬ್ರಹ್ಮನಲ್ಲೇ ಇರುತ್ತದೆಂದು ವೇದಪ್ರಸಿದ್ಧಿಯಿದೆ. ಇದರಂತೆ ಗಗನಕ್ಕೆ ಮಹಾತಾತ್ಪರ್ಯವಿರುತ್ತದೆಂಬ ಪ್ರಸಿದ್ಧಿಯಿರುವುದಿಲ್ಲ. ಆದ್ದರಿಂದ ಪೂರ್ವಪಕ್ಷಿ ಹೇಳಿದಂತೆ ಉದ್ದೇಶ್ಯವೆನಿಸಿದ ಆಕಾಶದಲ್ಲಿಯೇ ನಿಪಾತಗಳಿಗೆ ಅನ್ವಯವನ್ನು ಒಪ್ಪಿದರೂ ಕೂಡ 'ಶಾಸ್ತ್ರಸ್ಥಾ ವಾ ತನ್ನಿಮಿತ್ತತ್ವಾತ್' ಶಾಸ್ತ್ರೀಯಶಬ್ದಗಳಲ್ಲಿ ಶಾಸ್ತ್ರೀಯ ಅರ್ಥವನ್ನೇ ತೆಗೆದುಕೊಳ್ಳಬೇಕು. ಲೌಕಿಕಾರ್ಥವನ್ನು ತೆಗೆದುಕೊಳ್ಳಬಾರದು ಎಂಬ ಪೂರ್ವಮೀಮಾಂಸೆಯ ನ್ಯಾಯದಂತೆ, ವಿಜಾತೀಯವಾದ ಬಹಿರಂಗವಾದ ಲೌಕಿಕಪ್ರಸಿದ್ಧಿಯನ್ನು ಸಂಗ್ರಹ ಮಾಡುವುದಕ್ಕಾಗಿ ಸಜಾತೀಯವಾದ ಅಂತರಂಗವೆನಿಸಿದ ವೈದಿಕಪ್ರಸಿದ್ಧಿಯನ್ನು ಪೀಡನೆ ಮಾಡುವುದು ಅಯುಕ್ತವಾಗುತ್ತವೆ. ಆದ್ದರಿಂದ ವೈದಿಕಪ್ರಸಿದ್ಧಿಯನ್ನೇ ತೆಗೆದುಕೊಂಡು, ಬ್ರಹ್ಮನ ವೈದಿಕಪ್ರಸಿದ್ಧಿಯೇ ನಿಪಾತಗಳಿಂದ ದ್ಯೋತ್ಯವಾಗಿದೆಯೆಂದು ಹೇಳಬೇಕು. ಗಗನದಲ್ಲಿ ಯಾವ ಅಲ್ಪಪ್ರಸಿದ್ಧಿಯು ವೇದದಲ್ಲಿದೆಯೋ, ಅದನ್ನು ನಿಪಾತಗಳಿಂದ ವ್ಯಾವೃತ್ತಿ ಮಾಡಬೇಕು.

**अत एव सप्तमे इत्थंभावाकांक्षेषु वैदिकेषु सौर्यादिषु वैदिकस्यैवेत्थंभावस्यान्वय उक्तः ।**

ವೈದಿಕಪ್ರಯೋಗಗಳಲ್ಲಿ ವೈದಿಕವ್ಯವಹಾರವನ್ನೇ ವಿವಕ್ಷಿಸಬೇಕೆಂದು ಹೇಳಿದ್ದರಿಂದ, ಪೂರ್ವಮೀಮಾಂಸೆಯ ಏಳನೆಯ ಅಧ್ಯಾಯದಲ್ಲಿ ವೈದಿಕವಾದ ಸೌರ್ಯಾದಿ ಯಾಗಗಳಲ್ಲಿ ಇತ್ಥಂಭಾವಾಕಾಂಕ್ಷೆಯು ಪ್ರಾಪ್ತವಾದರೆ, ವೈದಿಕವಾದ ಇತ್ಥಂಭಾವಗಳ ಜೊತೆಗೆ ಅನ್ವಯವನ್ನು ಸಮರ್ಥನೆ ಮಾಡಿದ್ದಾರೆ ಹೊರತು, ಲೌಕಿಕವಾದ ಅಂಗಗಳ ಅನ್ವಯವು ಕೂಡುವುದಿಲ್ಲ.

**अस्ति च ब्रह्मण्याकाशशब्दार्थतयापि वेदे प्रसिद्धिः ।**

ಹೀಗೆ ಪರಮಾತ್ಮನು ವೇದಗಳಲ್ಲಿ ಸ್ವರೂಪತಃ ಪ್ರಸಿದ್ಧನಾಗಿದ್ದಷ್ಟೇ ಅಲ್ಲದೇ, ಆಕಾಶಶಬ್ದದ ಅರ್ಥವೆಂದೂ ಕೂಡ ವೇದಗಳಲ್ಲಿ ಪ್ರಸಿದ್ಧನಾಗಿದ್ದಾನೆ.

**यदातूद्देश्यस्य वस्तुतः प्रसिद्धिमात्रेणोद्देश्यतोपपत्तेर्विधेयस्यैव निर्वोढृत्वस्य स्थलान्तरसिद्धप्रसिद्ध्युपन्यासादिनोपपादनीयत्वादिदमित्थं खल्वित्यादौ विधेया-न्वयस्यैव दर्शनाच्च प्रसिद्धेर्निर्वोढृत्वान्वयः तदा ''एको दाधार भुवनानि नामरूपे व्याकरोत्'' इत्यादि वेदे ब्रह्मण इव गगनस्य निर्वोढृत्वेन वेदे लोके चाप्रसिद्धेर्गगनपक्ष एव निपातायोगः ।**

ಹಿಂದೆ ಪೂರ್ವಪಕ್ಷ ಮಾಡುವಾಗ, ನಿಪಾತಕ್ಕೆ ಪ್ರಸಿದ್ಧಿಯಲ್ಲೇ ಅನ್ವಯವನ್ನು ಮಾಡಬೇಕು. ವಿಧೇಯವು ಅಪ್ರಸಿದ್ಧವಾದ ಕಾರಣ ಅಲ್ಲಿ ಅನ್ವಯವು ಅಯುಕ್ತವಾಗುತ್ತದೆಂದು ಹೇಳಲಾಗಿತ್ತು. ಇದೂ ಸಹ ತಪ್ಪು. ಉದ್ದೇಶ್ಯವು ವಸ್ತುತಃ ಪ್ರಸಿದ್ಧವಾಗಿದ್ದರೆ ಸಾಕು. ಅದನ್ನು ಉಪಪಾದನೆ ಮಾಡುವ ಅವಶ್ಯಕತೆಯಿರುವುದಿಲ್ಲ. ಆದರೆ ವಿಧೇಯವು ಅಪ್ರಸಿದ್ಧವಾಗಿದ್ದರೂ ಕೂಡ ಉಪಪಾದನೀಯ-ವಾಗುತ್ತದೆ. ಅದನ್ನು ವೈದಿಕಪ್ರಸಿದ್ಧಿಯಿಂದಲೇ ನಾವು ಉಪಪಾದನೆ ಮಾಡುತ್ತಿದ್ದೇವೆ. ವಿಧೇಯಭೂತವಾದ ನಿರ್ವೋಢೃತ್ವವು ಬೇರೆ ಶ್ರುತಿಗಳಲ್ಲಿ ಪ್ರಸಿದ್ಧವಾಗಿದೆ. ಅದನ್ನು ಉಲ್ಲೇಖ ಮಾಡುವ ಮೂಲಕ, ವಿಧೇಯವನ್ನು ಇಲ್ಲಿ ಉಪಪಾದನೆ ಮಾಡಬೇಕು. ಲೋಕದಲ್ಲಿಯೂ ಕೂಡ 'ಇದಮಿತ್ಥಂ ಖಲು' ಇತ್ಯಾದಿ ಸ್ಥಳದಲ್ಲಿ 'ಖಲು' ಎಂಬುದು 'ಇದಂ' ಎಂಬಲ್ಲಿ ವಿಶೇಷಣವಾಗಿಲ್ಲ ಹೊರತು, ವಿಧೇಯವಾದ 'ಇತ್ಥಂ' ಎಂಬಲ್ಲಿಯೇ ವಿಶೇಷಣವಾಗಿರುವುದು ಕಂಡಿದೆ. ಪರಮಾತ್ಮನು ನಾಮರೂಪಗಳಿಗೆ ಆಧಾರನಾಗಿದ್ದಾನೆಂಬುದು 'ಏಕೋ ದಾಧಾರ ಭುವನಾನಿ ನಾಮರೂಪೇ ವ್ಯಾಕರೋತ್' ಇತ್ಯಾದಿ ಬೇರೆ ಶ್ರುತಿಗಳಿಂದ ಪ್ರಸಿದ್ಧವಾಗಿದೆ. ಅವ್ಯಾಕೃತಾಕಾಶವು ನಾಮರೂಪವಾದ ಪ್ರಪಂಚಕ್ಕಾಗಲೀ, ಅರ್ಥರೂಪವಾದ ಪ್ರಪಂಚಕ್ಕಾಗಲೀ ಆಧಾರವಾಗಿದೆಯೆಂಬ ವಿಚಾರವು ಲೋಕದಿಂದಲೂ ಪ್ರಸಿದ್ಧವಾಗಿಲ್ಲ. ವೇದದಿಂದಲೂ ಕೂಡ ಪ್ರಸಿದ್ಧವಾಗಿಲ್ಲ. ಆದ್ದರಿಂದ ಪರಮಾತ್ಮ ಪಕ್ಷದಲ್ಲಿ ನಿಪಾತಗಳು ಯುಕ್ತವಾಗುವುದಿಲ್ಲವೆಂದಲ್ಲ. ಹೊರತಾಗಿ, ಅವ್ಯಾಕೃತಾಕಾಶಪಕ್ಷದಲ್ಲಿಯೇ ನಿಪಾತಗಳು ಅಯುಕ್ತವಾಗುತ್ತವೆ.

**नहि गगने निरंकुशनामरूपनिर्वोढृत्वं लोकतोऽपि प्रसिद्धम् । एतमेव विधेयान्वयपक्षमभिप्रेत्य टीकायामपि ''भगवतो नामादिनिर्वहितृत्वस्या-लोकसिद्धत्वेऽपि'' इत्युक्तम् । न्यायविवरणे च ''वैनामेति निर्वहितृत्वे श्रुत्यादिप्रसिद्धिबाहुल्यम्'' इत्युक्तम् ।**

ನಾಮಾತ್ಮಕವಾದ ಪ್ರಪಂಚಕ್ಕೆ ಹಾಗೂ ರೂಪಾತ್ಮಕವಾದ ಪ್ರಪಂಚಕ್ಕೆ ಅವ್ಯಾಕೃತಾಕಾಶವು ಸ್ವತಂತ್ರವಾಗಿ ನಿರ್ವಾಹಕವಾಗಿವೆಯೆಂಬ ವಿಚಾರವು ಲೋಕರೂಢಿಯಿಂದಲೂ ಕೂಡ ಪ್ರಸಿದ್ಧವಾಗಿರುವುದಿಲ್ಲ. ಹೀಗೆ ಈ ವಿಧೇಯಾನ್ವಯಪಕ್ಷವನ್ನೇ ವಿವಕ್ಷಿಸಿ, ಟೀಕೆಯಲ್ಲೂ ಕೂಡ 'ಭಗವತೋ ನಾಮಾದಿನಿರ್ವಹಿತೃತ್ವಸ್ಯಾಲೋಕಸಿದ್ಧತ್ವೇಽಪಿ' ಎಂದು ಹೇಳಿದ್ದಾರೆ. ನ್ಯಾಯವಿವರಣದಲ್ಲಿ ಶ್ರೀಮದಾಚಾರ್ಯರು 'ವೈನಾಮೇತಿ ನಿರ್ವಹಿತೃತ್ವೇ ಶ್ರುತ್ಯಾದಿಪ್ರಸಿದ್ಧಿಬಾಹುಲ್ಯಮ್' ಎಂದು ಹೇಳಿದ್ದಾರೆ.

**यद्यप्यत्र लोके निर्वोढृशब्द एव साधुः । तथापि टीकादौ श्रुत्यनुकरणार्थं निर्वहितृशब्दः युक्तः ।**

ವಾಸ್ತವಿಕವಾಗಿ ಲೋಕದಲ್ಲಿ 'ನಿರ್ವೋಢೃ' ಎಂಬ ಶಬ್ದವೇ ಸಾಧುವಾಗಿದೆ. 'ನಿರ್ವಹಿತೃತ್ವ' ಶಬ್ದವು ಸಾಧುವಲ್ಲ. ಆದರೂ ಸಹ ಟೀಕಾದಿಗಳಲ್ಲಿ ಶ್ರುತಿಯನ್ನು ಅನುಸರಿಸಿ, 'ನಿರ್ವಹಿತೃ' ಶಬ್ದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು.

**भाष्येऽनामत्वे हेतूकृतमप्रसिद्धत्वं साकल्येनाप्रमितत्वम् । निपातयोत्या प्रसिद्धिस्तु निर्वोढृत्वेनान्यत्र निर्णीतत्वमित्यविरोधः ।**

ಭಾಷ್ಯದಲ್ಲಿ ಪರಮಾತ್ಮನು ನಾಮರಹಿತನಾಗಿದ್ದಾನೆನ್ನಲು ಅಪ್ರಸಿದ್ಧತ್ವವನ್ನು ಹೇತುವನ್ನಾಗಿ ಮಾಡಿದ್ದಾರೆ. ಅಂದರೆ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲವೆಂದಷ್ಟೇ ಅಪ್ರಸಿದ್ಧತ್ವ ಹೇತುವಿನ ಅಭಿಪ್ರಾಯ. ಆದರೆ ನಿಪಾತಗಳಿಂದ ತಿಳಿಯಲ್ಪಟ್ಟ ಪ್ರಸಿದ್ಧಿಯು ಇದರಿಂದ ವಿರುದ್ಧವಾಗುವುದಿಲ್ಲ. ಏಕೆಂದರೆ ಬೇರೆ ಶ್ರುತಿಗಳಲ್ಲಿ ಪರಮಾತ್ಮನು ನಾಮರೂಪಗಳಿಗೆ ನಿರ್ವಾಹಕನಾಗಿದ್ದಾನೆಂದು ನಿರ್ಣಯಿಸಲ್ಪಟ್ಟಿದೆ ಎಂಬ ಅಭಿಪ್ರಾಯದಿಂದ ಪ್ರಸಿದ್ಧಿಯನ್ನು ಹೇಳಿರುತ್ತಾರೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

**प्रकाशः –**

''नच विष्णुपक्षे निपातद्वयविरोधः । भगवतो नामादिनिर्वहितृत्वस्यालोकप्रसिद्धत्वेऽपि ''एको दाधार भुवनानि विश्व'' इत्यादिवेदप्रसिद्धत्वेन तदर्थत्वेनोपपत्तेः'' इति टीकां विवृण्वन् प्रागुक्तशङ्कामनूद्य निराह – **नच निपातेति।।**

ವಿವರಣೆ - ಇಲ್ಲಿಯ ತನಕ ನಾಮರಾಹಿತ್ಯ-ರೂಪರಾಹಿತ್ಯಗಳೆರಡು ವಿಷ್ಣುವಿನ ನಿರವಕಾಶಲಿಂಗಗಳಾಗಿವೆ ಎಂದು ಸಮರ್ಥಿಸಿದ್ದಾಯಿತು. ಪ್ರಕೃತ 'ವೈ ನಾಮ' ಎಂಬೆರಡು ನಿಪಾತಗಳ ವಿರೋಧವೂ ಕೂಡ ಬರುವುದಿಲ್ಲವೆಂದು ಸಮರ್ಥಿಸುತ್ತಿದ್ದಾರೆ. 'ನಚ ವಿಷ್ಣುಪಕ್ಷೇ ನಿಪಾತದ್ವಯವಿರೋಧಃ । ಭಗವತೋ ನಾಮಾದಿನಿರ್ವಹಿತೃತ್ವಸ್ಯಾಲೋಕಪ್ರಸಿದ್ಧತ್ವೇऽಪಿ 'ಏಕೋ ದಾಧಾರ ಭುವನಾನಿ ವಿಶ್ವ' ಇತ್ಯಾದಿವೇದಪ್ರಸಿದ್ಧತ್ವೇನ ತದರ್ಥತ್ವೇನೋಪಪತ್ತೇಃ' ವಿಷ್ಣುಪಕ್ಷದಲ್ಲಿ ನಿಪಾತದ್ವಯವಿರೋಧವು ಬರುವುದಿಲ್ಲ. ಏಕೆಂದರೆ ನಾಮರೂಪಾದಿಗಳ ನಿರ್ವಾಹಕತ್ವವು ಲೋಕದಲ್ಲಿ ಪ್ರಸಿದ್ಧವಾಗಿದ್ದರೂ 'ಏಕೋ ದಾಧಾರ ಭುವನಾನಿ ವಿಶ್ವ' ಇತ್ಯಾದಿ ವೇದಗಳಲ್ಲಿ ಪ್ರಸಿದ್ಧವಾದ ಕಾರಣ, ವಿಷ್ಣುವಿನಲ್ಲಿ ಯುಕ್ತವಾಗುತ್ತದೆ. ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ, ಪೂರ್ವಪಕ್ಷಿಯು ಮಾಡಿದ ಆಶಂಕೆಯನ್ನು ಅನುವಾದ ಮಾಡಿ, ನಿರಾಕರಣೆ ಮಾಡುತ್ತಿದ್ದಾರೆ 'ನಚ ನಿಪಾತದ್ವಯವಿರೋಧಃ' ಇತ್ಯಾದಿ ಗ್ರಂಥದಿಂದ.

**प्रकाशः –** टीकायां द्वयेत्युक्तेर्भावः प्रागेवोक्त इति भावेन निपातविरोध इत्येवानुवादः कृतः । वै इत्यस्यावधारणार्थत्वेनाप्युपपत्तेरिति भावः । यत इत्यस्य श्लोकेनान्वयः । अतो न विरोध इत्यर्थः ।

ಪರಿಪೂರ್ಣಚಂದ್ರಿಕಾ

ಟೀಕೆಯಲ್ಲಿ 'ನಿಪಾತದ್ವಯವಿರೋಧಃ' ಎಂದು ಹೇಳಿದ್ದಾರೆ. ಆದರೆ ಗ್ರಂಥದಲ್ಲಿ 'ನಿಪಾತವಿರೋಧಃ' ಎಂದಷ್ಟೇ ಏಕೆ ಹೇಳಿದ್ದಾರೆ? ಎಂದರೆ, ಈ ಹಿಂದೆ ಎರಡು ನಿಪಾತಗಳನ್ನು ಪ್ರಯೋಗಿಸಲು ಕೃತ್ಯವನ್ನು ಸಮರ್ಥನೆ ಮಾಡಿದ್ದಾಯಿತು. 'ವೈ' ಎಂಬುದು ನಿಪಾತವಾಗಿದ್ದರೂ ನಾಮಶಬ್ದಕ್ಕೆ 'ವೈ' ಎಂಬ ನಿಪಾತದ ಸಮುಚ್ಚಯದಿಂದಷ್ಟೇ ನಿಪಾತತ್ವವು ಸಿದ್ಧವಾಗುತ್ತದೆಂದು ಈ ಹಿಂದೆ ಸಮರ್ಥಿಸಲಾಗಿತ್ತು. ಆದ್ದರಿಂದ ಪುನಃ ಇಲ್ಲಿ 'ದ್ವಯ' ಶಬ್ದವನ್ನು ಪ್ರಯೋಗಿಸಿಲ್ಲ. ಅಂದರೆ ಈ ಹಿಂದೆಯೇ ಕೃತ್ಯವನ್ನು ಹೇಳಿರುವ ಕಾರಣದಿಂದ ಪುನಃ ಅದನ್ನು ಉಲ್ಲೇಖಿಸಬೇಕಾಗಿಲ್ಲ. 'ವೈ' ಎಂಬುದಕ್ಕೆ ಅವಧಾರಣ ಎಂಬರ್ಥವೂ ಕೂಡ ಇರುತ್ತದೆಂದು ಅಭಿಪ್ರಾಯ. 'ಯತಃ' ಎಂಬುದಕ್ಕೆ ಶ್ಲೋಕದ ಜೊತೆಗೆ ಅನ್ವಯ ಮಾಡಬೇಕು. ಯಾವಕಾರಣದಿಂದ, ಶ್ಲೋಕದಲ್ಲಿ ಹೇಳಿದ ವಿಚಾರವು ಸಾಧುವಾಗಿದೆಯೋ, ಆ ಕಾರಣದಿಂದ ವಿರೋಧವಿಲ್ಲವೆಂದು ಅನ್ವಯವನ್ನು ತಿಳಿಯಬೇಕು.

**प्रकाशः** – श्लोकं विवरीतुं **ब्रह्मणि** वैदिकप्रसिद्धिमाह – **ब्रह्मण इति** ।।

सर्वज्ञं सर्वकर्तारं नारायणमनामयम् ।
सर्वोत्तमं ज्ञापयन्ति महातात्पर्यमत्र हि ।।

सर्वेषामपि वेदानामितिहासपुराणयोः ।
प्रमाणानां च सर्वेषां तदर्थं चान्यदुच्यते ।।

इत्यादिपुराणवचनात्, ''सर्वोत्कर्षे देवदेवस्य विष्णोर्महातात्पर्यं नैव चान्यत्र सत्यम्'' इत्यादिश्रुतेरिति भावः ।

ಶ್ಲೋಕವನ್ನು ವಿವರಣೆ ಮಾಡುವುದಕ್ಕಾಗಿ ಬ್ರಹ್ಮನಲ್ಲಿ ವೈದಿಕಪ್ರಸಿದ್ಧಿಯನ್ನು 'ಬ್ರಹ್ಮಣಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್ ।
ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ ॥

ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ ।
ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥

ಸಕಲ ವೇದಗಳು ಪರಮಾತ್ಮನನ್ನು ಸರ್ವಜ್ಞ, ಸರ್ವಕರ್ತ, ದೋಷರಹಿತ, ಸರ್ವೋತ್ತಮ ಇತ್ಯಾದಿಯಾದ ಮಹಾತಾತ್ಪರ್ಯವನ್ನು ಪರಮಾತ್ಮನಲ್ಲಿ ತಿಳಿಸುತ್ತಿದೆ. ಸಕಲ ವೇದ ಇತಿಹಾಸ ಪುರಾಣಗಳೆಲ್ಲವೂ ಪರಮಾತ್ಮನ ಸರ್ವೋತ್ಕೃಷ್ಟಜ್ಞಾನಕ್ಕಾಗಿ ಹೊರಟಿರುತ್ತವೆ. ಇತ್ಯಾದಿ ಪುರಾಣವಚನದಿಂದ ಬ್ರಹ್ಮನಲ್ಲೇ ಮಹಾತಾತ್ಪರ್ಯವೆಂದು ತಿಳಿಯುತ್ತದೆ. ಮತ್ತು 'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್' ಸರ್ವೋತ್ತಮನಾದ ಮಹಾವಿಷ್ಣುವಿನಲ್ಲಿಯೇ

ವಾಸ್ತವಿಕವಾಗಿ ಲೋಕದಲ್ಲಿ 'ನಿರ್ವೋಢೃ' ಎಂಬ ಶಬ್ದವೇ ಸಾಧುವಾಗಿದೆ. 'ನಿರ್ವಹಿತೃತ್ವ' ಶಬ್ದವು ಸಾಧುವಲ್ಲ. ಆದರೂ ಸಹ ಟೀಕಾದಿಗಳಲ್ಲಿ ಶ್ರುತಿಯನ್ನು ಅನುಸರಿಸಿ, 'ನಿರ್ವಹಿತೃ' ಶಬ್ದವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು.

**भाष्येऽनामत्वे हेतूकृतमप्रसिद्धत्वं साकल्येनाप्रमितत्वम् । निपातद्योत्या प्रसिद्धिस्तु निर्वोढृत्वेनान्यत्र निर्णीतत्वमित्यविरोधः ।**

ಭಾಷ್ಯದಲ್ಲಿ ಪರಮಾತ್ಮನು ನಾಮರಹಿತನಾಗಿದ್ದಾನೆನ್ನಲು ಅಪ್ರಸಿದ್ಧತ್ವವನ್ನು ಹೇತುವನ್ನಾಗಿ ಮಾಡಿದ್ದಾರೆ. ಅಂದರೆ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲವೆಂದಷ್ಟೇ ಅಪ್ರಸಿದ್ಧತ್ವ ಹೇತುವಿನ ಅಭಿಪ್ರಾಯ. ಆದರೆ ನಿಪಾತಗಳಿಂದ ತಿಳಿಯಲ್ಪಟ್ಟ ಪ್ರಸಿದ್ಧಿಯು ಇದರಿಂದ ವಿರುದ್ಧವಾಗುವುದಿಲ್ಲ. ಏಕೆಂದರೆ ಬೇರೆ ಶ್ರುತಿಗಳಲ್ಲಿ ಪರಮಾತ್ಮನು ನಾಮರೂಪಗಳಿಗೆ ನಿರ್ವಾಹಕನಾಗಿದ್ದಾನೆಂದು ನಿರ್ಣಯಿಸಲ್ಪಟ್ಟಿದೆ ಎಂಬ ಅಭಿಪ್ರಾಯದಿಂದ ಪ್ರಸಿದ್ಧಿಯನ್ನು ಹೇಳಿರುತ್ತಾರೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

**प्रकाशः —**

''नच विष्णुपक्षे निपातद्वयविरोधः । भगवतो नामादिनिर्वहितृत्वस्यालोकप्रसिद्धत्वेऽपि ''एको दाधार भुवनानि विश्व'' इत्यादिवेदप्रसिद्धत्वेन तदर्थत्वेनोपपत्तेः'' इति टीकां विवृण्वन् प्रागुक्तशङ्कामनूद्य निराह — **नच निपातेति**।।

ವಿವರಣೆ - ಇಲ್ಲಿಯ ತನಕ ನಾಮರಾಹಿತ್ಯ-ರೂಪರಾಹಿತ್ಯಗಳೆರಡು ವಿಷ್ಣುವಿನ ನಿರವಕಾಶಲಿಂಗಗಳಾಗಿವೆ ಎಂದು ಸಮರ್ಥಿಸಿದ್ದಾಯಿತು. ಪ್ರಕೃತ 'ವೈ ನಾಮ' ಎಂಬೆರಡು ನಿಪಾತಗಳ ವಿರೋಧವೂ ಕೂಡ ಬರುವುದಿಲ್ಲವೆಂದು ಸಮರ್ಥಿಸುತ್ತಿದ್ದಾರೆ. 'ನಚ ವಿಷ್ಣುಪಕ್ಷೇ ನಿಪಾತದ್ವಯವಿರೋಧಃ । ಭಗವತೋ ನಾಮಾದಿನಿರ್ವಹಿತೃತ್ವಸ್ಯಾಲೋಕಪ್ರಸಿದ್ಧತ್ವೇಽಪಿ 'ಏಕೋ ದಾಧಾರ ಭುವನಾನಿ ವಿಶ್ವ' ಇತ್ಯಾದಿವೇದಪ್ರಸಿದ್ಧತ್ವೇನ ತದರ್ಥತ್ವೇನೋಪಪತ್ತೇಃ' ವಿಷ್ಣುಪಕ್ಷದಲ್ಲಿ ನಿಪಾತದ್ವಯವಿರೋಧವು ಬರುವುದಿಲ್ಲ. ಏಕೆಂದರೆ ನಾಮರೂಪಾದಿಗಳ ನಿರ್ವಾಹಕತ್ವವು ಲೋಕದಲ್ಲಿ ಪ್ರಸಿದ್ಧವಾಗಿದ್ದರೂ 'ಏಕೋ ದಾಧಾರ ಭುವನಾನಿ ವಿಶ್ವ' ಇತ್ಯಾದಿ ವೇದಗಳಲ್ಲಿ ಪ್ರಸಿದ್ಧವಾದ ಕಾರಣ, ವಿಷ್ಣುವಿನಲ್ಲಿ ಯುಕ್ತವಾಗುತ್ತದೆ. ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ, ಪೂರ್ವಪಕ್ಷಿಯು ಮಾಡಿದ ಆಶಂಕೆಯನ್ನು ಅನುವಾದ ಮಾಡಿ, ನಿರಾಕರಣೆ ಮಾಡುತ್ತಿದ್ದಾರೆ 'ನಚ ನಿಪಾತದ್ವಯವಿರೋಧಃ' ಇತ್ಯಾದಿ ಗ್ರಂಥದಿಂದ.

**प्रकाशः** — टीकायां द्वयेत्युक्तेर्भावः प्रागेवोक्त इति भावेन निपातविरोध इत्येवानुवादः कृतः । वै इत्यस्यावधारणार्थत्वेनाप्युपपत्तेरिति भावः । यत इत्यस्य श्लोकेनान्वयः । अतो न विरोध इत्यर्थः ।

ಪರಿಪೂರ್ಣಚಂದ್ರಿಕಾ

ಟೀಕೆಯಲ್ಲಿ 'ನಿಪಾತದ್ವಯವಿರೋಧಃ' ಎಂದು ಹೇಳಿದ್ದಾರೆ. ಆದರೆ ಗ್ರಂಥದಲ್ಲಿ 'ನಿಪಾತವಿರೋಧಃ' ಎಂದಷ್ಟೇ ಏಕೆ ಹೇಳಿದ್ದಾರೆ? ಎಂದರೆ, ಈ ಹಿಂದೆ ಎರಡು ನಿಪಾತಗಳನ್ನು ಪ್ರಯೋಗಿಸಲು ಕೃತ್ಯವನ್ನು ಸಮರ್ಥನೆ ಮಾಡಿದ್ದಾಯಿತು. 'ವೈ' ಎಂಬುದು ನಿಪಾತವಾಗಿದ್ದರೂ ನಾಮಶಬ್ದಕ್ಕೆ 'ವೈ' ಎಂಬ ನಿಪಾತದ ಸಮುಚ್ಚಯದಿಂದಷ್ಟೇ ನಿಪಾತತ್ವವು ಸಿದ್ಧವಾಗುತ್ತದೆಂದು ಈ ಹಿಂದೆ ಸಮರ್ಥಿಸಲಾಗಿತ್ತು. ಆದ್ದರಿಂದ ಪುನಃ ಇಲ್ಲಿ 'ದ್ವಯ' ಶಬ್ದವನ್ನು ಪ್ರಯೋಗಿಸಿಲ್ಲ. ಅಂದರೆ ಈ ಹಿಂದೆಯೇ ಕೃತ್ಯವನ್ನು ಹೇಳಿರುವ ಕಾರಣದಿಂದ ಪುನಃ ಅದನ್ನು ಉಲ್ಲೇಖಿಸಬೇಕಾಗಿಲ್ಲ. 'ವೈ' ಎಂಬುದಕ್ಕೆ ಅವಧಾರಣ ಎಂಬರ್ಥವೂ ಕೂಡ ಇರುತ್ತದೆಂದು ಅಭಿಪ್ರಾಯ. 'ಯತಃ' ಎಂಬುದಕ್ಕೆ ಶ್ಲೋಕದ ಜೊತೆಗೆ ಅನ್ವಯ ಮಾಡಬೇಕು. ಯಾವಕಾರಣದಿಂದ, ಶ್ಲೋಕದಲ್ಲಿ ಹೇಳಿದ ವಿಚಾರವು ಸಾಧುವಾಗಿದೆಯೋ, ಆ ಕಾರಣದಿಂದ ವಿರೋಧವಿಲ್ಲವೆಂದು ಅನ್ವಯವನ್ನು ತಿಳಿಯಬೇಕು.

**प्रकाशः – श्लोकं विवरीतुं ब्रह्मणि वैदिकप्रसिद्धिमाह – ब्रह्मण इति ।।**

सर्वज्ञं सर्वकर्तारं नारायणमनामयम् ।
सर्वोत्तमं ज्ञापयन्ति महातात्पर्यमत्र हि ।।

सर्वेषामपि वेदानामितिहासपुराणयोः ।
प्रमाणानां च सर्वेषां तदर्थं चान्यदुच्यते ।।

इत्यादिपुराणवचनात्, ''सर्वोत्कर्षे देवदेवस्य विष्णोर्महातात्पर्यं नैव चान्यत्र सत्यम्'' इत्यादिश्रुतेरिति भावः ।

ಶ್ಲೋಕವನ್ನು ವಿವರಣೆ ಮಾಡುವುದಕ್ಕಾಗಿ ಬ್ರಹ್ಮನಲ್ಲಿ ವೈದಿಕಪ್ರಸಿದ್ಧಿಯನ್ನು 'ಬ್ರಹ್ಮಣಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್ ।
ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ ।।

ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ ।
ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ।।

ಸಕಲ ವೇದಗಳು ಪರಮಾತ್ಮನನ್ನು ಸರ್ವಜ್ಞ, ಸರ್ವಕರ್ತ, ದೋಷರಹಿತ, ಸರ್ವೋತ್ತಮ ಇತ್ಯಾದಿಯಾದ ಮಹಾತಾತ್ಪರ್ಯವನ್ನು ಪರಮಾತ್ಮನಲ್ಲಿ ತಿಳಿಸುತ್ತಿದೆ. ಸಕಲ ವೇದ ಇತಿಹಾಸ ಪುರಾಣಗಳೆಲ್ಲವೂ ಪರಮಾತ್ಮನ ಸರ್ವೋತ್ಕೃಷ್ಟಜ್ಞಾನಕ್ಕಾಗಿ ಹೊರಟಿರುತ್ತವೆ. ಇತ್ಯಾದಿ ಪುರಾಣವಚನದಿಂದ ಬ್ರಹ್ಮನಲ್ಲೇ ಮಹಾತಾತ್ಪರ್ಯವೆಂದು ತಿಳಿಯುತ್ತದೆ. ಮತ್ತು 'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್' ಸರ್ವೋತ್ತಮನಾದ ಮಹಾವಿಷ್ಣುವಿನಲ್ಲಿಯೇ

ವೇದಗಳು ಮಹಾತಾತ್ಪರ್ಯವನ್ನು ಹೊಂದಿವೆ. ಬೇರೆ ವಿಷಯದಲ್ಲಿ ಅಲ್ಲವೆಂಬ ವಿಚಾರವು ಸತ್ಯವಾದದ್ದು ಎಂಬ ಶ್ರುತಿಯಿಂದಲೂ ಕೂಡ ಸ್ಪಷ್ಟವಾಗುತ್ತದೆ.

**प्रकाशः** – अवान्तरतात्पर्यतोऽन्यस्यापि प्रसिद्धिरस्तीत्यतो महातात्पर्यत इत्युक्तम् ।। **श्लोकं तात्पर्यतो विवृणोति ।। शास्त्रस्थावेति ।।** उक्तमधिकरणं प्राक् जन्माधिकरणे । शास्त्रनिष्ठा वैदिकीप्रसिद्धिरेव ग्राह्या । वेदशब्दार्थनिर्णयस्य वैदिक प्रसिद्धिनिमित्तकत्वात् । नत्वार्थप्रसिद्धिबलेन लौकिकी प्रसिद्धिर्ग्राह्येति सूत्रार्थः ।।

ಅವಾಂತರ ತಾತ್ಪರ್ಯವು ಬೇರೆ ಪದಾರ್ಥಗಳಲ್ಲಿ ಇರಬಹುದಲ್ಲವೇ? ಎಂಬ ಪ್ರಶ್ನೆಗೆ 'ಮಹಾತಾತ್ಪರ್ಯತ' ಎಂದು ಹೇಳಿದ್ದಾರೆ. ಅವಾಂತರ ತಾತ್ಪರ್ಯವು ಬೇರೆ ಕಡೆಯಿದ್ದರೂ ಮಹಾತಾತ್ಪರ್ಯ ವಿಷ್ಣುವಿನಲ್ಲಿ ಮಾತ್ರ ಎಂದು ತಿಳಿಯಬೇಕು. ಶ್ಲೋಕದ ತಾತ್ಪರ್ಯವನ್ನು ವಿವರಿಸುತ್ತಿದ್ದಾರೆ 'ಶಾಸ್ತ್ರಸ್ಥಾ' ಇತ್ಯಾದಿ ವಾಕ್ಯದಿಂದ 'ಶಾಸ್ತ್ರಸ್ಥಾ' ಎಂಬ ಪೂರ್ವಮೀಮಾಂಸೆಯ ಅಧಿಕರಣವನ್ನು ಜನ್ಮಾಧಿಕರಣದಲ್ಲಿಯೇ ವಿವರಿಸಿದ್ದೇವೆ. ಶಾಸ್ತ್ರದಲ್ಲಿರುವ ವೈದಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಏಕೆಂದರೆ ವೇದದಲ್ಲಿರುವ ಶಬ್ದದ ಅರ್ಥವನ್ನು ನಿರ್ಣಯಿಸಬೇಕೆಂದರೆ ವೈದಿಕಪ್ರಸಿದ್ಧಿಯೇ ನಿಮಿತ್ತವಾಗಿರುತ್ತದೆ. ಹೊರತು ಅರ್ಥಪ್ರಸಿದ್ಧಿಯ ಬಲದಿಂದ ಲೌಕಿಕಪ್ರಸಿದ್ಧಿಯನ್ನು ಸ್ವೀಕರಿಸಬಾರದೆಂದು ಪೂರ್ವಮೀಮಾಂಸೆಯ ಸೂತ್ರದ ಅರ್ಥ.

**प्रकाशः – सप्तम इति ।।** सप्तमस्य चतुर्थे पादे ''स लौकिकस्स्याद्दृष्टप्रवृत्तित्वात्'' इति द्वितीयेऽधिकरणे ''सौर्यं चरुं निर्वपेत्'' इत्यादौ किं लौकिक इत्थंभावोऽतिदिश्यतेऽथ वैदिक इति संशये

'ಸ ಲೌಕಿಕ ಸ್ಯಾತ್ ದೃಷ್ಟಪ್ರವೃತ್ತಿತ್ವಾತ್' (೭-೪-೨)[1]

---

(१) **भाट्टसङ्ग्रहः** –

**अथ द्वितीयं सौर्ये चरौ वैदिकेतिकर्तव्यतावत्त्वाधिकरणम् (सूत्रे २-१२)**

**स लौकिकः स्याद्दृष्टप्रवृत्तित्वात् ।।२।।**

**(वचनात्तु ततोऽन्यत्वम् ।।३।। लिङ्गेन वा नियम्येत लिङ्गस्य तद्गुणत्वात् ।।४।। अपि वाऽन्यायपूर्वत्वाद्यत्र नित्यानुवादवचनानि स्युः ।।५।। मिथो विप्रतिषेधाच्च गुणानां यथार्थकल्पना स्यात् ।।६।। भागित्वात्तु नियम्येत गुणानामभिधानत्वात्सम्बन्धादभिधानवद्यथा धेनुः किशोरेण ।।७।। उत्पत्तीनां समत्वाद्वा यथाधिकारं भावः स्यात् ।।८।। उत्पत्तिशेषवचनञ्च विप्रतिषिद्धमेकस्मिन् ।।९।। विध्यन्तो वा प्रकृतिवच्चोदनायां प्रवर्तेत तथा हि लिङ्गदर्शनम् ।।१०।। लिङ्गहेतुत्वादलिङ्गे लौकिकं स्यात् ।।११।। लिङ्गस्य पूर्ववत्त्वाच्चोदनाशब्दसामान्यदेकेनापि निरूप्येत यथा स्थालीपुलाकेन ।।१२।।)**

एवं साकाङ्क्षविधिबलात्सामान्यतोऽन्यतो धर्मप्राप्तिरिति स्थिते, अत्र विशेषचिन्तनात्सङ्गतिः। सा किमितिकर्तव्यता स्थालीपाकदिगता लौकिकी, किं

ಈ ಅಧಿಕರಣದಲ್ಲಿ 'ಸೌರ್ಯಂ ಚರುಂ ನಿರ್ವಪೇತ್' ಎಂಬ ವಾಕ್ಯವನ್ನು ವಿಚಾರ ಮಾಡಲಾಗಿದೆ. ಲೌಕಿಕವಾದ ಅಂಗಗಳನ್ನು ಸೌರ್ಯ ಯಾಗದಲ್ಲಿ ಅತಿದೇಶ ಮಾಡಿಕೊಳ್ಳಬೇಕೋ, ಅಥವಾ ವೈದಿಕವಾದ ಅಂಗಗಳನ್ನೇ ಅತಿದೇಶ ಮಾಡಿಕೊಳ್ಳಬೇಕೋ ಎಂದು ಸಂದೇಹ.

**प्रकाशः** – वैदिकेत्थंभावस्य प्रत्यक्षेण शास्त्रेण दर्शपूर्णमासादिषु निबद्धत्वेनान्यत्र सम्बन्धायोगात् लौकिकस्य पार्वणस्थालीपाकादावनुवृत्तस्य साधारणशास्त्रेणेह प्रापणसम्भवाल्लौकिक एवेति प्राप्ते

ಪೂರ್ವಪಕ್ಷ - ದರ್ಶಪೂರ್ಣಮಾಸಯಾಗಗಳಲ್ಲಿ ಆಗ್ನೇಯಯಾಗವು ಪ್ರಥಮಯಾಗವಾಗಿದೆ. ಅದು ಸೌರ್ಯಯಾಗಕ್ಕೆ ಪ್ರಕೃತಿಯೆನಿಸಿದೆ. ಅಲ್ಲಿರುವ ಅಂಗವನ್ನೇ ಸೌರ್ಯಯಾಗದಲ್ಲಿ ಅತಿದೇಶ ಮಾಡಬೇಕು. ಆದರೆ ಆಗ್ನೇಯಯಾಗದಲ್ಲಿ ಹೇಳಿದ ಅಂಗಗಳೆಲ್ಲವೂ ಅಲ್ಲಿಯೇ ಒಮ್ಮೆ ಅನ್ವಯ ಮಾಡಿದ್ದಾಗಿದೆ. ಪುನಃ ಇಲ್ಲಿ ಅನ್ವಯ ಮಾಡುವುದು ಸೂಕ್ತವಲ್ಲ. ಅಂಗಕ್ಕೆ ಅಂಗಿಯ ಆಕಾಂಕ್ಷೆಯಿರಬೇಕು, ಅಂಗಿಗೆ ಅಂಗದ ಆಕಾಂಕ್ಷೆಯಿರಬೇಕು, ಆವಾಗ ಮಾತ್ರ ಅನ್ವಯಮಾಡುವುದು ಸೂಕ್ತವಾಗುತ್ತದೆ. ಪ್ರಕೃತ ಸೌರ್ಯಯಾಗಕ್ಕೆ ಅಂಗದ ಆಕಾಂಕ್ಷೆಯಿದ್ದರೂ ಕೂಡ ಆಗ್ನೇಯಯಾಗದಲ್ಲಿ ಹೇಳಿದ ಅಂಗಗಳಿಗೆ ಅಂಗಿಯ ಆಕಾಂಕ್ಷೆಯೇ ಇರುವುದಿಲ್ಲ. ಆದ್ದರಿಂದ ವೈದಿಕಅಂಗಗಳ ಜೊತೆಗೆ ಅನ್ವಯವನ್ನು ಮಾಡದೇ, ಲೌಕಿಕವಾದ ಅಂಗಗಳ ಜೊತೆಗೆ ಸೂರ್ಯಯಾಗದಲ್ಲಿ ಅನ್ವಯವನ್ನು ಮಾಡಬೇಕು. ಪರ್ವಕಾಲವಿಶೇಷದಲ್ಲಿ ಮಾಡುವ ಸ್ಥಾಲೀಪಾಕದಲ್ಲಿ ಅನುವೃತ್ತವಾದ ಲೌಕಿಕಅಂಗಗಳನ್ನೇ ಇಲ್ಲಿಯೂ ಕೂಡ ಅನುವೃತ್ತಿ ಮಾಡಿಕೊಳ್ಳಬೇಕು. ಅಂದರೆ ಸ್ಥಾಲಿಯಲ್ಲಿ ಅಕ್ಕಿಯನ್ನು ಹಾಕಿ ಬೇಯಿಸಬೇಕು. ಅದನ್ನು ಹೇಗೆ ಬೇಯಿಸಬೇಕು? ಎಂಬ ಪ್ರಶ್ನೆ ಬಂದರೆ ಲೌಕಿಕವಾದ ಅನ್ನವನ್ನು ಮಾಡುವಂತೆ ಎಂದು ಹೇಳಿರುತ್ತಾರೆ. ಆದ್ದರಿಂದ ಸ್ಥಾಲಿಪಾಕಾದಿಗಳಲ್ಲಿ ಲೌಕಿಕವಾದ ಅಂಗಗಳು ಅನುವೃತ್ತವಾಗಿವೆ. ಅದನ್ನೇ ಇಲ್ಲೂ ಕೂಡ ವಿವಕ್ಷಿಸಲು ಬರುತ್ತದೆ.

**प्रकाशः** – वैदिकस्य कर्मणः कथंभावाकाङ्क्षायां वैदिकेत्थंभावस्य शीघ्रमुपस्थितेस्तदतिक्रमेणानुपस्थितलौकिकग्रहणायोगाद्वैदिक एवेत्थंभावोऽतिदिश्यत

वाऽलौकिकीति **सन्देहे**, वैदिक्याः प्रत्यक्षशास्त्रेण दर्शपूर्णमासादिप्रकरणेषु नियमितत्वेनान्यत्र नयनायोगाल्लौकिक्याश्च तथात्वात्सैवात्र सम्बद्ध्यत इति **प्राप्तम्** । तदाह **सूत्रे, स** इति-कर्तव्यतारूपो यागोपायो **लौकिकः स्यात्** । तस्य तत्र तत्र स्थालीपाकपार्वणहोमादौ **प्रवृत्तेर्दृष्टत्वादिति** । **सिद्धान्तस्तु,** वैदिके कर्मणि वैदिक्या एवेतिकर्तव्यतायाः शीघ्रमुपस्थितेस्तदतिक्रमेणानुपस्थितलौकिकग्रहणायोगाद्वैदिक्येव ग्राह्या । नच सा क्वचित्प्रकरणे निबद्धा नान्यत्र नेतुं शक्येति वाच्यम् । समानविधित्व एवास्य दोषत्वेनातिदेशपक्षे क्वचिन्निबद्धत्वस्यैव गुणत्वात् । किञ्च सौर्ययागविधिशेषे 'प्रयाजे प्रयाजे कृष्णलं जुहोति' इति कृष्णलहोमविधानाय सिद्धवत्प्रयाजानुवादरूपाल्लिङ्गाद्वैदिक्ये-वेतिकर्तव्यता सौर्यादाविति वैदिककर्मवत्सौर्यादीत्यनुमानादिति ।

**इति द्वितीयं सौर्ये चरौ वैदिकेतिकर्तव्यतावत्त्वाधिकरणम् (सूत्राणि २-१२)**

ಆಕಾಶಾಧಿಕರಣ (೧-೩-೦೨)

इत्युक्तम् । अन्यथा तत्रापि पूर्वपक्ष्युक्तदिशा लौकिकेतिकर्तव्यताया एवान्वय उच्येतेत्यर्थः ।

ಸಿದ್ಧಾಂತ - ಇದು ತಪ್ಪು. ವೈದಿಕವಾದ ಕರ್ಮಗಳಲ್ಲಿ ಕಥಂಭಾವಾಕಾಂಕ್ಷೆಯು ಪ್ರಾಪ್ತವಾದರೆ, ವೈದಿಕವಾದ ಇತ್ಥಂಭಾವವೇ ಶೀಘ್ರವಾಗಿ ಉಪಸ್ಥಿತವಾಗುತ್ತದೆ. ಶೀಘ್ರೋಪಸ್ಥಿತವಾದ ವೈದಿಕವಾದ ಅಂಗಗಳನ್ನು ಬಿಟ್ಟು, ಅನುಪಸ್ಥಿತವಾದ ಲೌಕಿಕವಾದ ಅಂಗಗಳನ್ನು ಸ್ವೀಕರಿಸುವುದು ತಪ್ಪು. ಆದ್ದರಿಂದ ವೇದಸಿದ್ಧವಾದ ಅಂಗಗಳನ್ನೇ ಸೌರ್ಯಯಾಗದಲ್ಲಿ ಅತಿದೇಶ ಮಾಡಿಕೊಳ್ಳಬೇಕೆಂದು ನಿರ್ಣಯಿಸಲಾಗಿದೆ. ಅದರಂತೆ ಪ್ರಕೃತ ವೈದಿಕವಾದ ನಿಪಾತಗಳಿಂದ ವೇದಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಹೀಗೊಪ್ಪದಿದ್ದರೆ ಪೂರ್ವಮೀಮಾಂಸೆಯ ಸೂತ್ರದಲ್ಲಿಯೂ ಕೂಡ ಪೂರ್ವಪಕ್ಷಿ ಹೇಳಿದಂತೆ ಸೌರ್ಯಯಾಗದಲ್ಲಿ ಲೌಕಿಕವಾದ ಅಂಗಗಳನ್ನೇ ವಿವಕ್ಷಿಸಬೇಕಾದ ಪ್ರಸಂಗ ಬರುತ್ತದೆ.

**प्रकाशः** – ननु स्वरूपतो हरेः प्रसिद्धावप्याकाशशब्दार्थतया प्रसिद्ध्यभावे यः प्रसिद्धाकाश इति कथमुक्तिरित्यत आह – **अस्ति चेति** ।।

ಶ್ರೀಹರಿಯು ಸ್ವರೂಪತಃ ಪ್ರಸಿದ್ಧನಾಗಿದ್ದರೂ ಆಕಾಶಶಬ್ದಾರ್ಥತ್ವೇನ ಪ್ರಸಿದ್ಧವಾಗಿಲ್ಲ. ಹೀಗಿರುವಾಗ ಪ್ರಸಿದ್ಧವಾದ ಆಕಾಶವೆಂದರೆ ಶ್ರೀಹರಿಯನ್ನು ವಿವಕ್ಷಿಸಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಅಸ್ತಿ ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಶ್ರೀಹರಿಯು ಆಕಾಶಶಬ್ದಾರ್ಥನೆಂದೂ ಕೂಡ ವೇದದಲ್ಲಿ ಪ್ರಸಿದ್ಧನಾಗಿದ್ದಾನೆಂದರ್ಥ.

**प्रकाशः** – एवं प्रसिद्धेरुद्देश्यान्वयेऽप्याकाशो ब्रह्मेत्युपपाद्येदानीं टीकोक्तं विधेयान्वयं सोपपत्तिकमुपपादयन् तत्रापि ब्रह्मणस्सिद्धिमाह – **यदात्विति** ।।

ಇಲ್ಲಿಯತನಕ ಪ್ರಸಿದ್ಧಿಯು ಉದ್ದೇಶದಲ್ಲಿ ಅನ್ವಿತವಾಗುತ್ತದೆಂದು ಒಪ್ಪಿದರೂ ಕೂಡ ಆಕಾಶಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆಂದು ಉಪಪಾದನೆ ಮಾಡಿದ್ದಾಯಿತು. ಪ್ರಕೃತ ಟೀಕೆಯಲ್ಲಿ ಹೇಳಿದ ವಿಧೇಯಾನ್ವಯ ಪಕ್ಷವನ್ನು ಉಪಪತ್ತಿ ಸಹಿತವಾಗಿ ಸಮರ್ಥನೆ ಮಾಡುತ್ತಾ, ಈ ಪಕ್ಷದಲ್ಲಿಯೂ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆಂಬುದನ್ನು 'ಯದಾತು' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – नामरूपनिर्वोढृत्वं किं तद्धारकत्वं किं वा तत्कर्तृत्वम् । द्वयमपि हरावेवेति श्रुतिद्वयोक्तिः ।। लोके चेत्युक्तमेवोपपादयति – **न हीति** ।।

ನಾಮರೂಪಗಳಿಗೆ ನಿರ್ವಾಹಕನಾಗಿದ್ದಾನೆಂದರೆ ಸಮಸ್ತಪ್ರಪಂಚಕ್ಕೆ ಧಾರಕನಾಗಿದ್ದಾನೆ ಎಂಬುದು ಒಂದು ಬಗೆಯ ಅರ್ಥ. ಮತ್ತೊಂದು ಸಮಸ್ತ ಪ್ರಪಂಚಕ್ಕೆ ಕರ್ತೃವಾಗಿದ್ದಾನೆ ಎಂದು. ಈ ಎರಡು ಅರ್ಥಗಳೂ ಶ್ರೀಹರಿಯಲ್ಲಿ ಯುಕ್ತವಾಗುತ್ತದೆನ್ನಲು ಎರಡು ಶ್ರುತಿಗಳನ್ನು ಉಲ್ಲೇಖಿಸಿದ್ದಾರೆ. ಆಕಾಶದಲ್ಲಿ ನಾಮರೂಪ-ನಿರ್ವಾಹಕತ್ವವು ಲೋಕರೂಢಿಯಿಂದಲೂ ಕೂಡ ಸಿದ್ಧವಾಗಿಲ್ಲವೆಂದು 'ನಹಿ' ಇತ್ಯಾದಿಯಾಗಿ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – अवकाशदानादिना नामादिनिर्वाहकत्वं गगनेऽप्यस्तीत्यत उक्तं **निरङ्कुशेति** ।। तस्य तत्र भगवदायत्तत्वादिति भावः ।

ಅವ್ಯಾಕೃತಾಕಾಶವೂ ಕೂಡ ಅವಕಾಶವನ್ನು ನೀಡುವ ಮೂಲಕ, ನಾಮಾದಿಗಳಿಗೆ ನಿರ್ವಾಹಕ-ವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅದಕ್ಕಾಗಿ ಗ್ರಂಥದಲ್ಲಿ 'ನಿರಂಕುಶ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅಂದರೆ ಸ್ವತಂತ್ರವಾಗಿ ಅವಕಾಶಪ್ರಧಾನಾದಿ ಧರ್ಮಗಳು ಅವ್ಯಾಕೃತಾಕಾಶದಲ್ಲಿರುವುದಿಲ್ಲ. ಹೊರತು, ಭಗವದಧೀನವಾಗಿ ಇರುತ್ತವೆಂದು ಅಭಿಪ್ರಾಯ.

**प्रकाशः** – यदात्वित्यादिनोक्तं टीकारूढं करोति ।। **एतमेवेति** ।। टीकोक्तेर्मूलमाह – **न्यायविवरणे चेति** ।। वैनामेति निपातद्वयं भगवतो नामरूपनिर्वहितृत्वे श्रुत्यादिप्रसिद्धिबाहुल्यं दर्शयतीत्यर्थः ।

'ಯದಾತು' ಇತ್ಯಾದಿ ಗ್ರಂಥದಿಂದ ಹೇಳಿದ್ದನ್ನು ಟೀಕಾರೂಢ ಮಾಡುತ್ತಿದ್ದಾರೆ 'ಏತಮೇವ' ಇತ್ಯಾದಿಯಾಗಿ. ಟೀಕಾಮಾತಿಗೆ ಮೂಲವನ್ನು 'ನ್ಯಾಯವಿವರಣೇ ಚ' ಎಂಬುದರಿಂದ ತೋರಿಸಿದ್ದಾರೆ. 'ವೈ ನಾಮ' ಎಂಬೆರಡು ನಿಪಾತಗಳು ಭಗವಂತನೇ ನಾಮರೂಪಗಳಿಗೆ ನಿರ್ವಾಹಕನಾಗಿದ್ದಾನೆಂಬುದು ಅನೇಕ ಶ್ರುತಿಗಳಿಂದ ಪ್ರಸಿದ್ಧವಾಗಿದೆ ಎಂಬುದನ್ನು ತೋರಿಸುತ್ತಿವೆಯೆಂದು ನ್ಯಾಯವಿವರಣದ ಮಾತಿಗೆ ಅರ್ಥ.

**प्रकाशः** – वह प्रापण इत्यस्य धातोरनिट्त्वात्कथं निर्वहितृत्वपदप्रयोग इत्याशङ्क्याह – **यद्यपीति** ।।

'ವಹ ಪ್ರಾಪಣ' ಎಂಬ ಧಾತು ಅನಿಟ್ ಆಗಿರುವುದರಿಂದ 'ನಿರ್ವೋಢೃತ್ವಮ್' ಎಂದೇ ಹೇಳಬೇಕು. 'ನಿರ್ವಹಿತೃತ್ವಮ್' ಎಂಬ ಪದವು ತಪ್ಪಾಗುತ್ತದಲ್ಲವೇ? ಎಂಬ ಆಶಂಕೆಯನ್ನು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ.

**प्रकाशः** – **श्रुत्यनुकरणार्थमिति** ।। यथा ''न लोकाव्ययनिष्ठाखलर्थतृनाम्'' इत्यत्र तृणामिति णत्वेन निर्देशे कार्ये तृनामिति णत्वाभावेन निर्देशो विवक्षित-रूपानुकरणार्थस्तथेति भावः । उक्तं च मञ्जर्यां ''जिघृक्षितरूपविनाशप्रसङ्गात्तृ-नामित्यत्र णत्वाभाव'' इति ।

ಶ್ರುತಿಯನ್ನು ಅನುಕರಣೆ ಮಾಡುವುದಕ್ಕಾಗಿ 'ನಿರ್ವಹಿತೃತ್ವ' ಪದವನ್ನು ಪ್ರಯೋಗಿಸಿದ್ದಾರೆ. ಮತ್ತೊಂದನ್ನು ಅನುಕರಣೆ ಮಾಡಲು ಹೀಗೆ ಪ್ರಯೋಗವನ್ನು ವ್ಯತ್ಯಾಸ ಮಾಡುವುದು ಪಾಣಿನಿ ಸೂತ್ರದಲ್ಲಿಯೂ ಕೂಡ ಕಂಡಿದೆ. 'ನ ಲೋಕಾವ್ಯಯನಿಷ್ಠಾಖಲರ್ಥತೃನಾಮ್' ಎಂಬ ಸೂತ್ರದಲ್ಲಿ 'ತೃಣಾಮ್' ಎಂದೇ ನಿರ್ದೇಶ ಮಾಡಬೇಕಿತ್ತು. ಏಕೆಂದರೆ ರೇಫದ ಸಂಯೋಗವಿದ್ದಾಗ ನಕಾರಕ್ಕೆ ಣತ್ವವನ್ನು 'ರಷಭ್ಯಾಂ ನೋಣಃ ಸಮಾನ ಪದೇ' ಎಂಬ ಸೂತ್ರವು ವಿಧಾನಮಾಡುತ್ತಿದೆ. ಆದ್ದರಿಂದ ಇಲ್ಲಿ 'ತೃಣಾಮ್'

ಎಂದು ಹೇಳಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರತ್ಯಯವು 'ತೃನ್' ಎಂದೇ ಪ್ರಸಿದ್ಧವಾಗಿದೆ. ಅದನ್ನು ಅನುಕರಣೆ ಮಾಡುವುದಕ್ಕಾಗಿ ಸೂತ್ರದಲ್ಲಿ 'ತೃನಾಮ್' ಎಂದು ಹೇಳಲಾಗಿದೆ. ಇಲ್ಲದಿದ್ದರೆ ಪ್ರತ್ಯಯವೂ ಕೂಡ 'ತೃನ್' ಎಂಬ ಭ್ರಾಂತಿಯು ಬರುತ್ತಿತ್ತು. ಇದನ್ನೇ ಮಂಜರಿವ್ಯಾಖ್ಯಾನದಲ್ಲಿ 'ಜಿಘೃಕ್ಷಿತ-ರೂಪವಿನಾಶಪ್ರಸಂಗತ್ತೃನಾಮಮಿತ್ಯತ್ರ ಣತ್ವಾಭಾವಃ'. 'ತೃನ್' ಪ್ರತ್ಯಯವನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯಿದೆ. ಅದೇ ನಾಶವಾಗುವ ಪ್ರಸಂಗ ಬರುವ ಕಾರಣ 'ತೃನಾಮ್' ಎಂದು ಪ್ರಯೋಗಿಸಿ ಣತ್ವವನ್ನು ಉಲ್ಲೇಖಿಸಿಲ್ಲ ಎಂದು.

**प्रकाशः** – ननु यदि भगवतो निपातद्योत्यप्रसिद्धिरुपपद्येत तर्हि ''अनामासोऽ-प्रसिद्धत्वादरूपो भूतवर्जनात्'' इत्यप्रसिद्धत्वोक्तिर्विरुध्यत इत्यत आह – **भाष्य इति** ।।

ಒಂದು ವೇಳೆ ನಿಪಾತದ್ಯೋತ್ಯವಾದ ಪ್ರಸಿದ್ಧಿಯು ಭಗವಂತನಲ್ಲಿ ಉಪಪನ್ನವಾಗುವುದಾದರೆ, 'ಅನಾಮಾಸೋऽಪ್ರಸಿದ್ಧತ್ವಾದರೂಪೋ ಭೂತವರ್ಜನಾತ್' ಎಂಬಲ್ಲಿ ಹೇಳಲ್ಪಟ್ಟ ಅಪ್ರಸಿದ್ಧತ್ವದ ಉಕ್ತಿಯು ವಿರುದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಭಾಷ್ಯೇ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**गुरुराजीयम्** –

**अत एवेति** ।। बहिरङ्गलौकिकप्रसिद्धिसङ्ग्रहाय सजातीयान्तरङ्गवैदिक-प्रसिद्धिपीडनायोगादेवेत्यर्थः ।। **निर्वोढृशब्द एव साधुरिति** ।। निरुपसर्गपूर्वकाद्वहेस्तृचि होढ इति ढत्वे खषस्तथोर्धोऽध इति धत्वे ष्टुनाष्टुरिति ष्टुत्वे सहिवहोरोदवर्णस्येत्यवर्णस्यौत्वे ढोढेलोप इति लोपे निर्वोढृशब्दनिष्पत्तिरिति भावः ।

## ಸಾರ

ಪೂರ್ವಪಕ್ಷ ಮಾಡುವಾಗ 'ವೈ ನಾಮ' ಎಂಬೆರಡು ನಿಪಾತಗಳೇ ಅವ್ಯಾಕೃತಾಕಾಶವನ್ನು ವಿವಕ್ಷಿಸಲು ಆಧಾರವಾಗಿವೆಯೆಂದು ಸಮರ್ಥಿಸಿದ್ದರು. ವಿಚಾರ ಮಾಡಿದರೆ, ಈ ಎರಡು ನಿಪಾತಗಳೇ ವಿಷ್ಣು ಆಕಾಶಶಬ್ದವಾಚ್ಯವೆನ್ನಲು ಮುಖ್ಯವಾದ ಆಧಾರಗಳಾಗಿವೆ. ಏಕೆಂದರೆ -

ವೈದಿಕೇಷು ಪ್ರಯೋಗೇಷು ವೈದಿಕ್ಯೇವ ಪ್ರಸಿದ್ಧತಾ ।
ಗ್ರಾಹ್ಯಾಂತರಂಗಭೂತತ್ವಾತ್ತದಯೋಗೇ ತ್ವವೈದಿಕೀ ॥೧॥

ಪರಿಪೂರ್ಣಚಂದ್ರಿಕಾ

ವೈದಿಕಪ್ರಯೋಗದಲ್ಲಿ ವೈದಿಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಏಕೆಂದರೆ ಅಂತರಂಗ ಬಹಿರಂಗಗಳಲ್ಲಿ ಅಂತರಂಗವನ್ನೇ ಸ್ವೀಕರಿಸುವುದು ಶ್ರೇಷ್ಠವಾದ್ದರಿಂದ, ವೈದಿಕಪ್ರಸಿದ್ಧಿಯೆಂಬ ಅಂತರಂಗವನ್ನು ಬಿಟ್ಟು, ಬಹಿರಂಗವೆನಿಸಿದ ಲೌಕಿಕಪ್ರಸಿದ್ಧಿಯನ್ನು ವಿವಕ್ಷಿಸಬಾರದು. ಆದ್ದರಿಂದ ಪರಮಾತ್ಮನು ವೇದಗಳಲ್ಲಿ ಸ್ವರೂಪತಃ ಪ್ರಸಿದ್ಧನಾಗಿದ್ದಷ್ಟೇ ಅಲ್ಲದೇ ಆಕಾಶಶಬ್ದದಿಂದಲೂ ಕೂಡ ಪ್ರಸಿದ್ಧನಾಗಿದ್ದಾನೆ.

ಮತ್ತು 'ವೈ ನಾಮ' ಎಂಬೆರಡು ನಿಪಾತಗಳು ವಿಧೇಯದಲ್ಲೇ ಅನ್ವಯವನ್ನು ಹೊಂದುತ್ತವೆ. ಏಕೆಂದರೆ ಶ್ರುತಿಗಳಲ್ಲಿ ಪರಮಾತ್ಮನು ನಾಮರೂಪ ಪ್ರಪಂಚಕ್ಕೆ ಆಧಾರನಾಗಿದ್ದಾನೆಂದು ಪ್ರಸಿದ್ಧವಾಗಿದೆ. 'ಏಕೋ ದಾಧಾರ ಭುವನಾನಿ ವಿಶ್ವಾ' ಎಂಬ ಶ್ರುತಿಯು ಸಮಸ್ತಪ್ರಪಂಚಕ್ಕೆ ಪರಮಾತ್ಮನೇ ಆಧಾರನೆಂದು ಹೇಳಿದರೆ 'ನಾಮರೂಪೇ ವ್ಯಾಕರೋತ್' ಎಂಬ ಶ್ರುತಿಯು ಸಮಸ್ತಜಗತ್ತಿಗೆ ಪರಮಾತ್ಮನೇ ಕಾರಣನಾಗಿದ್ದಾನೆಂದು ಹೇಳುತ್ತಿದೆ. ಹೀಗೆ ನಾಮಾತ್ಮಕವಾದ ಹಾಗೂ ರೂಪಾತ್ಮಕವಾದ ಪ್ರಪಂಚಕ್ಕೆ ಆಶ್ರಯನಾದವನು ಪರಮಾತ್ಮನೇ ಆಗಿದ್ದಾನೆ. ಇದನ್ನೇ ಪ್ರಕೃತ ಆಕಾಶಶ್ರುತಿಯು ನಾಮರೂಪನಿರ್ವಹಿತೃತ್ವವನ್ನು ಪರಮಾತ್ಮನಲ್ಲಿ ಹೇಳುತ್ತಿದೆ. ಸ್ವತಂತ್ರವಾದ ನಾಮರೂಪಗಳಿಗೆ ಆಧಾರವಾಗಿರುವಿಕೆ ಪರಮಾತ್ಮನಲ್ಲಿ ಮಾತ್ರ ಇರುತ್ತದೆ ಹೊರತು, ಅವ್ಯಾಕೃತಾಕಾಶದಲ್ಲಿ ಇರುವುದಿಲ್ಲ. ಅವಕಾಶಾದಿಗಳನ್ನು ಅವ್ಯಾಕೃತಾಕಾಶವು ನೀಡಿದರೂ ಸಹ ಪರಮಾತ್ಮನ ಅಧೀನವಾಗಿ ಮಾತ್ರ ನೀಡಲು ಸಾಧ್ಯ. ಆದ್ದರಿಂದ ನಾಮರೂಪ-ನಿರ್ವಾಹಕತ್ವವು ಪರಮಾತ್ಮನಲ್ಲೇ ಬರುತ್ತದೆ.

////////////////////////////////////////

• • • • •

## ಸೂತ್ರವ್ಯಾಖ್ಯಾನ

### तात्पर्यचन्द्रिका

**सूत्रेऽर्थान्तरशब्देन विलक्षणत्वमात्रोक्तावपि विषयवाक्ये सन्निहितत्वादनाम-रूपत्वरूपविशेषसिद्धिः । आदिशब्दार्थस्तु ब्रह्मत्वादिकम् ।**

ಅನುವಾದ - ಸೂತ್ರದಲ್ಲಿರುವ ಅರ್ಥಾಂತರ ಶಬ್ದಕ್ಕೆ 'ವಿಲಕ್ಷಣ' ಎಂದರ್ಥ. ಸಾಮಾನ್ಯವಾದ ವೈಲಕ್ಷಣ್ಯವನ್ನಷ್ಟೇ ಸೂತ್ರದಲ್ಲಿ ಹೇಳಿದ್ದರೂ ಕೂಡ 'ತೇ ಯದಂತರಾ' ಎಂಬ ಸನ್ನಿಹಿತವಾದ ವಿಷಯವಾಕ್ಯದಿಂದ ನಾಮರೂಪವೈಲಕ್ಷಣ್ಯವೆಂಬ ವಿಶೇಷವು ಸಿದ್ಧವಾಗುತ್ತದೆ. ಅಂದರೆ ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥಗಳಲ್ಲಿಯೂ ನಾಮವತ್ವ, ರೂಪವತ್ವಗಳು ಸಿದ್ಧವಾಗಿವೆ. ಆದರೆ ಪರಮಾತ್ಮನನ್ನು ಸಂಪೂರ್ಣವಾಗಿ ಪ್ರತಿಪಾದನೆ ಮಾಡುವ ಯಾವುದೇ ಶಬ್ದಗಳು ಇರುವುದಿಲ್ಲ. ಪ್ರಾಕೃತರೂಪಗಳೂ ಕೂಡ ಇರುವುದಿಲ್ಲ. ಹೀಗೆ ನಾಮವೈಲಕ್ಷಣ್ಯ ಹಾಗೂ ರೂಪವೈಲಕ್ಷಣ್ಯಗಳೆಂಬ ಅರ್ಥವನ್ನು ಈ ಅರ್ಥಾಂತರ ಶಬ್ದವು ಹೇಳುತ್ತಿದೆ. 'ಅರ್ಥಾಂತರತ್ವಾದಿ' ಎಂಬಲ್ಲಿರುವ ಆದಿಶಬ್ದದಿಂದ ಅಮೃತತ್ವ, ಬ್ರಹ್ಮತ್ವ ಮೊದಲಾದ ಬ್ರಹ್ಮನ ಧರ್ಮಗಳನ್ನು ವಿವಕ್ಷಿಸಬೇಕು.

**यद्वा ''ते यदन्तर'' इति द्विवचनेनानामरूपत्वयोः साहित्यप्रतीतावपि ब्रह्मत्वे निरपेक्षयोरेव हेतुत्वमिति भावेन सूत्रेऽरूपत्वमर्थान्तरपदेन आदिपदेन तु अनामत्वमुक्तम् । अस्मिंश्चपक्षे ब्रह्मत्वादिकं प्रसिद्धत्वाच्छिष्यैरेवोहितुं शक्यमिति न तस्यादिपदेन ग्रहणमिति द्रष्टव्यम् ।।**

ಅಥವಾ ಅರ್ಥಾಂತರ ಶಬ್ದದಿಂದ ರೂಪರಾಹಿತ್ಯವನ್ನು ಮಾತ್ರ ವಿವಕ್ಷಿಸಿ, ಆದಿಪದದಿಂದ ನಾಮರಾಹಿತ್ಯವನ್ನು ವಿವಕ್ಷಿಸಬೇಕು. ವಸ್ತುತಃ 'ತೇ ಯದಂತರೇ' ಶ್ರುತಿಯಲ್ಲಿರುವ ದ್ವಿವಚನದಿಂದ ನಾಮರಾಹಿತ್ಯ, ರೂಪರಾಹಿತ್ಯಗಳೆರಡೂ ಒಟ್ಟಿಗೆ ಪ್ರತೀತವಾಗುತ್ತಿವೆ. ಹೀಗಿರುವಾಗ ಸೂತ್ರದಲ್ಲಿ ಒಂದನ್ನು ಬಿಟ್ಟು ಕೇವಲ ರೂಪರಾಹಿತ್ಯವನ್ನು ಮಾತ್ರ ವಿವಕ್ಷಿಸುವುದು ತಪ್ಪಾಗುತ್ತದೆ. ಆದರೆ ಆಕಾಶಶಬ್ದಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆಂದು ಸಾಧನೆ ಮಾಡಲು ರೂಪರಾಹಿತ್ಯವನ್ನು ಮಾತ್ರ ಹೇತುಮಾಡಿದರೂ ಸಾಕು ಯಾವುದೇ ವ್ಯಭಿಚಾರಾದಿ ದೋಷಗಳಿಗೆ ಪ್ರಸಕ್ತಿಯಿಲ್ಲ. ಅದರಂತೆ ನಾಮರಾಹಿತ್ಯವೆಂಬ ಹೇತುವಿಗೂ ವ್ಯಭಿಚಾರಾದಿ ದೋಷಗಳಿಗೆ ಅವಕಾಶವಿಲ್ಲ. ಹೀಗೆ ನಿರಪೇಕ್ಷಿತವಾದ ಒಂದೊಂದು ಹೇತುಗಳೇ ಬ್ರಹ್ಮತ್ವಕ್ಕೆ ಸಾಧಕವಾಗಿವೆ. ಈ ಅಭಿಪ್ರಾಯದಿಂದ ಅರ್ಥಾಂತರಶಬ್ದದಿಂದ ರೂಪರಾಹಿತ್ಯವನ್ನಷ್ಟೇ ವಿವಕ್ಷಿಸಿ, ಆದಿಪದದಿಂದ ನಾಮರಾಹಿತ್ಯವನ್ನು ವಿವಕ್ಷಿಸಬೇಕು. ಈ ಪಕ್ಷದಲ್ಲಿ ಬ್ರಹ್ಮತ್ವಾದಿಗಳು ವಿಷ್ಣುಲಿಂಗಗಳೆಂಬುದು ಪ್ರಸಿದ್ಧವಾದ್ದರಿಂದ ಶಿಷ್ಯಂದಿರೇ ಸ್ವತಃ ಊಹಿಸಿಕೊಳ್ಳಬೇಕು. ಆದ್ದರಿಂದ ಅವುಗಳನ್ನು ಆದಿಪದದಿಂದ ಇಲ್ಲಿ ಸ್ವೀಕರಿಸುವುದಿಲ್ಲ.

**प्रकाशः —**

एवमधिकरणशरीरमुपपाद्य सूत्रस्थहेत्वंशस्य टीकायां ''नामरूपराहित्याख्य-विलक्षणार्थत्वव्यपदेशात्तद्ब्रह्मेति ब्रह्मत्वव्यपदेशाच्च'' इत्युक्तमर्थं सूत्रारूढं करोति ।। सूत्र इति ।।

ವಿವರಣೆ - ಇಲ್ಲಿಯ ತನಕ ಅಧಿಕರಣಶರೀರವನ್ನು ಪ್ರತಿಪಾದನೆ ಮಾಡಿದ್ದಾಯಿತು. ಪ್ರಕೃತ ಸೂತ್ರದಲ್ಲಿರುವ 'ಅರ್ಥಾಂತರತ್ವಾದಿ ವ್ಯಪದೇಶಾತ್' ಎಂಬ ಹೇತುವನ್ನು ಟೀಕೆಯಲ್ಲಿ 'ನಾಮರೂಪ-ರಾಹಿತ್ಯಾಖ್ಯವಿಲಕ್ಷಣಾರ್ಥತ್ವವ್ಯಪದೇಶಾತ್ ತದ್ಬ್ರಹ್ಮೇತಿ ಬ್ರಹ್ಮತ್ವವ್ಯಪದೇಶಾಚ್ಚ' ನಾಮರೂಪರಾಹಿತ್ಯವೆಂಬ ವಿಲಕ್ಷಣಾರ್ಥತ್ವವನ್ನು ಹೇಳುತ್ತಿರುವುದರಿಂದ ಆಕಾಶಶಬ್ದಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಬ್ರಹ್ಮತ್ವ, ಅಮೃತತ್ವ ಮೊದಲಾದ ಲಿಂಗಗಳು ಈ ವಿಷಯದಲ್ಲಿ ಆಧಾರವಾಗಿವೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಅದನ್ನು ಪ್ರಕೃತ ಗ್ರಂಥಕಾರರು ಸೂತ್ರಾರೂಢ ಮಾಡುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸೂತ್ರೇ' ಇತ್ಯಾದಿ ಗ್ರಂಥದಿಂದ.

**प्रकाशः** – ''अर्थान्तरत्वमिति रूपराहित्यमादिपदेनानामत्वमिति वा'' इति टीकोक्तं पक्षान्तरमुपपत्तिं वदन्नाह – **यद्वेति** ।।

'ಅರ್ಥಾಂತರತ್ವಮಿತಿ ರೂಪರಾಹಿತ್ಯಮಾದಿಪದೇನಾನಾಮತ್ವಮಿತಿ ವಾ' ಅಥವಾ ಸೂತ್ರದಲ್ಲಿರುವ ಅರ್ಥಾಂತರ ಶಬ್ದವು ರೂಪರಾಹಿತ್ಯವನ್ನಷ್ಟೇ ಹೇಳುತ್ತಿದೆ. ಆದಿಪದದಿಂದ ನಾಮರಾಹಿತ್ಯವನ್ನು ವಿವಕ್ಷಿಸಬಹುದು ಎಂಬ ಟೀಕೆಯಲ್ಲೇ ಹೇಳಿದ ಮತ್ತೊಂದು ಪಕ್ಷವನ್ನು ಉಪಪತ್ತಿ ಸಹಿತವಾಗಿ ಸಮರ್ಥನೆ ಮಾಡುತ್ತಿದ್ದಾರೆ 'ಯದ್ವಾ' ಇತ್ಯಾದಿ ವಾಕ್ಯದಿಂದ.

**प्रकाशः** – अस्मिन्पक्षे अन्योऽर्थोऽर्थान्तरम् । तत्त्वादिव्यपदेशादिति शब्दादेवा-नामरूपत्वसिद्धिः । नतु विषयवाक्यसन्निधानात् ।।

ಈ ಪಕ್ಷದಲ್ಲಿ 'ಅನ್ಯಃ ಅರ್ಥಃ ಅರ್ಥಾಂತರಮ್ ತತ್ವಾದಿ ವ್ಯಪದೇಶಾತ್' ಎಂಬರ್ಥವನ್ನು ತಿಳಿಯಬೇಕು. ಅಂದರೆ ವಿಷಯವಾಕ್ಯದ ಸನ್ನಿಧಾನದಿಂದ ರೂಪರಾಹಿತ್ಯವು ತಿಳಿಯುತ್ತಿರುವುದಲ್ಲ ಹೊರತಾಗಿ, 'ಅರ್ಥಾಂತರತ್ವಾದಿವ್ಯಪದೇಶಾತ್' ಎಂಬ ಪದದಿಂದಲೇ ಯೋಗ್ಯತೆಯ ಸಹಕಾರದಿಂದ ಶಾಶ್ವತ-ರೂಪವಿಲ್ಲವೆಂಬ ವಿಷಯವು ತಿಳಿಯುತ್ತದೆ.

**प्रकाशः** – **न तस्यादिपदेनेति** ।। तत्वप्रदीपेतु ''अर्थान्तरत्वनामान्तरत्वादि-व्यपदेशादिति वा'' इति पुनरादिपदप्रयोगाद्ब्रह्मत्वादिकमप्यादिपदार्थ इति प्रतीयते।।

ತತ್ವಪ್ರದೀಪದಲ್ಲಿ 'ಅರ್ಥಾಂತರತ್ವನಾಮಾಂತರತ್ವಾದಿವ್ಯಪದೇಶಾದಿತಿ ವಾ' ಎಂದು ಹೇಳಿದ್ದಾರೆ. ಈ ವಾಕ್ಯವನ್ನು ನೋಡಿದಾಗ ಯಾವ ಆದಿಪದದಿಂದ ನಾಮರಾಹಿತ್ಯವನ್ನು ತೆಗೆದುಕೊಂಡಿದ್ದೇವೋ, ಅದೇ ಆದಿಪದದಿಂದ ಬ್ರಹ್ಮತ್ವ, ಅಮೃತತ್ವ ಮೊದಲಾದವನ್ನೂ ಕೂಡ ತೆಗೆದುಕೊಳ್ಳಬಹುದು ಎಂಬರ್ಥವು ತೋರುತ್ತದೆ.




ಸೂತ್ರದಲ್ಲಿರುವ 'ಅರ್ಥಾಂತರತ್ವಾದಿವ್ಯಪದೇಶಾತ್' ಎಂಬ ಹೇತುವಿನ ಅಭಿಪ್ರಾಯವು ಹೀಗಿದೆ - ಅರ್ಥಾಂತರ ಶಬ್ದವು ವೈಲಕ್ಷಣ್ಯವನ್ನಷ್ಟೇ ಹೇಳಿದರೂ 'ತೇ ಯದಂತರಾ' ಎಂಬ ವಿಷಯವಾಕ್ಯದ ಸನ್ನಿಧಾನದಿಂದ ನಾಮರೂಪರಾಹಿತ್ಯವೆಂಬ ವೈಲಕ್ಷಣ್ಯವನ್ನು ತಿಳಿಸುತ್ತಿದೆ. ಜಗತ್ತಿನಲ್ಲಿರುವ ಯಾವುದೇ ಪದಾರ್ಥಗಳಾದರೂ ಶಬ್ದದಿಂದ ತಿಳಿಯಲು ಸಾಧ್ಯವಾಗುತ್ತವೆ. ಮತ್ತು ಪ್ರಾಕೃತರೂಪಗಳನ್ನು ಹೊಂದಿರುತ್ತವೆ. ಆದರೆ ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಸುವ ಶಬ್ದಗಳು ಜಗತ್ತಿನಲ್ಲಿ ಇಲ್ಲವೇ ಇಲ್ಲ. ಈ ಕಾರಣದಿಂದ ನಾಮರಾಹಿತ್ಯವೆಂಬ ವೈಲಕ್ಷಣ್ಯವು ಅವನಲ್ಲಿದೆ. ಮತ್ತು ಪ್ರಾಕೃತರೂಪವಿಲ್ಲದ ಕಾರಣ ರೂಪರಾಹಿತ್ಯವೆಂಬ ವೈಲಕ್ಷಣ್ಯವೂ ಕೂಡ ಅವನಲ್ಲಿದೆ.. ಅಷ್ಟೇ ಅಲ್ಲದೇ ಬ್ರಹ್ಮತ್ವ, ಅಮೃತತ್ವ ಮೊದಲಾದ ಬ್ರಹ್ಮನ ಅಸಾಧಾರಣ ಲಿಂಗಗಳನ್ನು ಶ್ರುತಿ ಹೇಳುತ್ತಿರುವುದರಿಂದಲೂ ಆಕಾಶಶಬ್ದದಿಂದ ಪ್ರತಿಪಾದ್ಯನಾದವನು ಪರಮಾತ್ಮನೇ

ಆಗುತ್ತಾನೆಂದು ಶ್ರುತಿಯಲ್ಲಿರುವ ಲಿಂಗಗಳಿಂದಲೇ ಸ್ಪಷ್ಟವಾಗಿ ತಿಳಿಯುತ್ತದೆ. ಅಥವಾ ನಾಮರೂಪ-ರಾಹಿತ್ಯವೆಂಬುದನ್ನು ಒಟ್ಟಿಗೆ ವಿವಕ್ಷಿಸದೇ ಪ್ರತ್ಯೇಕವಾಗಿಯೇ ನಾಮರಾಹಿತ್ಯ ರೂಪರಾಹಿತ್ಯಗಳು ಬ್ರಹ್ಮತ್ವಕ್ಕೆ ಸಾಧಕವಾಗಿವೆ. ಅಂದರೆ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆನ್ನಲು ಕೇವಲ ನಾಮರಾಹಿತ್ಯವೆಂಬ ವೈಲಕ್ಷಣ್ಯವನ್ನು ಹೇಳಿದರೆ ಸಾಕು. ಅಥವಾ ರೂಪರಾಹಿತ್ಯವೆಂಬ ವೈಲಕ್ಷಣ್ಯವನ್ನು ಹೇಳಿದರೆ ಸಾಕು. ಎರಡೂ ಹೇತುಗಳು ಯಾವುದೇ ದೋಷವನ್ನು ಹೊಂದದೇ ಬ್ರಹ್ಮತ್ವಕ್ಕೆ ಸಾಧಕವಾಗಿವೆ. ಆದ್ದರಿಂದ ಸೂತ್ರದಲ್ಲಿರುವ ಅರ್ಥಾಂತರ ಶಬ್ದವು ಕೇವಲ ರೂಪರಾಹಿತ್ಯವೆಂಬ ವೈಲಕ್ಷಣ್ಯವನ್ನು ಹೇಳುತ್ತಿದೆ. ನಾಮರಾಹಿತ್ಯವನ್ನು ಆದಿಪದವು ಹೇಳುತ್ತಿದೆಯೆಂದು ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ ಆದಿಪದದಿಂದ ಬ್ರಹ್ಮತ್ವಾದಿಗಳನ್ನು ವಿವಕ್ಷಿಸಲಾಗಿತ್ತು. ಈ ಪಕ್ಷದಲ್ಲಿ ಆದಿಪದದಿಂದ ನಾಮರಾಹಿತ್ಯವನ್ನು ವಿವಕ್ಷಿಸಿ, ಬ್ರಹ್ಮತ್ವಾದಿಗಳನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬಹುದೆಂದು ತಿಳಿಯಬೇಕು. ಇಷ್ಟು ಸೂತ್ರಾರ್ಥ.

• • • • •

## ಅದ್ವೈತಿಗಳ ಅಧಿಕರಣ ವಿಮರ್ಶೆ

### तात्पर्यचन्द्रिका

**अन्येतु ।। "आकाशस्तल्लिङ्गात्" इत्यस्य विषयवाक्ये "आकाशादेव समुत्पद्यन्ते" इत्यत्रैवैतत्सूत्रविषयवाक्ये "आकाशो हवैनाम" इत्यत्र ब्रह्मलिङ्गाभावेन पूर्वपक्षोदयादगतार्थतेत्याहुः ।**[1]

(१) **शाङ्करभाष्यम् –**

**आकाशोऽर्थान्तरत्वादिव्यपदेशात् ॥ ४१ ॥**
**वियद्वा ब्रह्म वाकाशो वै नामेति श्रुतं वियत् ।**
**अवकाशप्रदानेन सर्वनिर्वाहकत्वतः ॥**
**निर्वोढृत्वं नियन्तृत्वं चैतन्यस्यैव तत्त्वतः ।**
**ब्रह्म स्याद् वाक्यशेषे च ब्रह्मात्मेत्यादिशब्दतः ॥**

'आकाशो वै नाम नामरूपयोर्निर्वहिता ते यदन्तरा तद् ब्रह्म तदमृतं स आत्मा' इति श्रूयते । तत्किमाकाशशब्दं परं ब्रह्म? किं वा प्रसिद्धमेव भूताकाशम्? इति विचारे भूतपरिग्रहो युक्तः, आकाशशब्दस्य तस्मिन् रूढत्वात् । नामरूपनिर्वहणस्य चावकाशदानद्वारेण तस्मिन् योजयितुं शक्यत्वात्, स्रष्टृत्वादेश्च स्पष्टस्य ब्रह्मलिङ्गस्याश्रवणादिति । एवं प्राप्त इदमुच्यते, परमेव ब्रह्मेहाकाशशब्दं भवितुमर्हति । कस्मात्? अर्थान्तरत्वादिव्यपदेशात् । 'ते यदन्तरा तद् ब्रह्म' इति हि नामरूपाभ्यामर्थान्तर-भूतमाकाशं व्यपदिशति । नच ब्रह्मणोऽन्यत्रामरूपाभ्यामर्थान्तरं सम्भवति, सर्वस्य

ಅನುವಾದ - ಅದ್ವೈತಿಗಳು ಆಕಾಶಾಧಿಕರಣದ ಬಗ್ಗೆ ಹೀಗೆ ಹೇಳುತ್ತಾರೆ - 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮ ಪಾದದ ಆಕಾಶಾಧಿಕರಣದಿಂದ ಈ ಸೂತ್ರಕ್ಕೆ ವೈಯರ್ಥ್ಯಬರುವುದಿಲ್ಲ. ಏಕೆಂದರೆ ಅಲ್ಲಿರುವ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ವಿಷಯವಾಕ್ಯವು ಭೂತಕಾರಣತ್ವವನ್ನು ಆಕಾಶದಲ್ಲಿ ಹೇಳುತ್ತಿದೆ. ಇದು ಬ್ರಹ್ಮನ ಲಿಂಗವಾಗಿರುವುದರಿಂದ, ಆಕಾಶಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗ ಬೇಕಾಗುತ್ತದೆ. ಆದರೆ ಪ್ರಕೃತ ಈ ಅಧಿಕರಣದ ವಿಷಯವಾಕ್ಯವೆನಿಸಿರುವ 'ಆಕಾಶೋ ಹವೈನಾಮ' ಎಂಬಲ್ಲಿ ಅಂತಹ ಯಾವುದೇ ಬ್ರಹ್ಮಲಿಂಗಗಳು ಶ್ರುತವಾಗುತ್ತಿಲ್ಲ. ಆದ್ದರಿಂದ ಈ ಅಧಿಕರಣ ಹೊರಟಿದ್ದು ಸಾರ್ಥಕವೆನ್ನುತ್ತಾರೆ.

**तन्न । अत्रापि नामरूपनिर्वहितृत्वादिलिङ्गानां ब्रह्मात्मादिश्रुतीनां च सत्त्वात्। क्लेशेनाकाशे योजनं तूभयत्र समम् ।।**

ಇದು ತಪ್ಪು. ಪ್ರಥಮಪಾದದ ಆಕಾಶಾಧಿಕರಣದಲ್ಲಿ ಭೂತಕಾರಣತ್ವ ಮೊದಲಾದ ಬ್ರಹ್ಮನ ಲಿಂಗವಿರುವಂತೆ ಈ ಅಧಿಕರಣದ ವಿಷಯವಾಕ್ಯದ ಸಮೀಪದಲ್ಲಿಯೂ ನಾಮರೂಪನಿರ್ವಹಿತೃತ್ವ ಮೊದಲಾದ ಲಿಂಗಗಳು ಬ್ರಹ್ಮಶ್ರುತಿ, ಆತ್ಮಶ್ರುತಿ ಮೊದಲಾದವುಗಳು ಬ್ರಹ್ಮನೇ ಆಕಾಶನಾಗಿದ್ದಾನೆನ್ನಲು ನಿರ್ಣಾಯಕಗಳಾಗಿವೆ. ಇನ್ನು ಭೂತಾಕಾಶದಲ್ಲೇ ಈ ನಾಮನಿರ್ವಹಿತೃತ್ವಾದಿಗಳನ್ನು ಕಷ್ಟದಿಂದ ಯೋಜನೆ ಮಾಡಬೇಕು. ಹಾಗಾದರೆ ಪ್ರಥಮ ಪಾದದ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಭೂತಕಾರಣತ್ವಾದಿಗಳನ್ನೂ ಕೂಡ ಭೂತಾಕಾಶದಲ್ಲೇ ಕಷ್ಟದಿಂದ ಹೇಳಬಹುದಲ್ಲವೇ? ಆದ್ದರಿಂದ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಅದ್ವೈತಿಗಳಿಂದ ಸಮರ್ಥನೆ ಮಾಡಲು ಸಾಧ್ಯವಿಲ್ಲ.

**प्रकाशः –**

**अन्येत्विति** ।। आकाशो वैनामेत्यत्र श्रुत आकाशः किं भूताकाशः परमात्मावेति सन्देहे आकाशशब्दस्य भूते रूढत्वाद्भूतमिति प्राप्ते नामरूपनिर्वाहकत्वादि-ब्रह्मलिङ्गाद्ब्रह्मेति सिद्धान्तः ।

विकारजातस्य नामरूपाभ्यामेव व्याकृतत्वात् । नामरूपयोरपि निर्वहणं निरङ्कुशं न ब्रह्मणोऽन्यत्र सम्भवति । 'अनेन जीवेनात्मनानुप्रविश्य नामरूपे व्याकरवाणि' इत्यादि-ब्रह्मकर्तृकत्वश्रवणात् । ननु जीवस्यापि प्रत्यक्षं नामरूपविषयं निर्वोढृत्वमस्ति । बाढमस्ति । अभेदस्त्विह विवक्षितः । नामरूपनिर्वहणाभिधानादेव च स्रष्टृत्वादि-ब्रह्मलिङ्गमभिहितं भवति । 'तद् ब्रह्म तदमृतं स आत्मा' इति च ब्रह्मवादस्य लिङ्गानि । 'आकाशस्तल्लिङ्गाद्' इत्यस्यैवायं प्रपञ्चः ।। ४१ ।।

ವಿವರಣೆ - ಅದ್ವೈತಿಗಳ ಅಧಿಕರಣಶರೀರ ಹೀಗಿದೆ - 'ಆಕಾಶೋ ವೈ ನಾಮ' ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿ ಆಕಾಶಶಬ್ದವು ಶ್ರುತವಾಗಿದೆ. ಇದು ಭೂತಾಕಾಶವನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಪರಮಾತ್ಮನನ್ನೋ ? ಎಂದು ಸಂದೇಹ. ಆಕಾಶಶಬ್ದವು ಭೂತಾಕಾಶದಲ್ಲೇ ರೂಢವಾದ್ದರಿಂದ ಭೂತಾಕಾಶವೇ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ. ನಾಮರೂಪನಿರ್ವಾಹಕತ್ವ ಮೊದಲಾದ ಬ್ರಹ್ಮನ ಲಿಂಗಗಳಿರುವುದರಿಂದ, ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆಂಬುದು ಸಿದ್ಧಾಂತ.

**प्रकाशः** – ननु लिङ्गाद्रूढिबाधः प्रागेवोक्तः । अतो गतार्थमेतदित्यतो भामत्युक्तमनुवदति ।। **आकाश इति** ।।

ಲಿಂಗದಿಂದ ಲೋಕರೂಢಿಯು ಬಾಧಿತವಾಗುತ್ತದೆಂದು ಹಿಂದೆಯೇ ಹೇಳಿದ್ದಾಗಿದೆ. ಆದ್ದರಿಂದ, ಪ್ರಥಮ ಪಾದದ ಆಕಾಶಾಧಿಕರಣದಿಂದ ಈ ಅಧಿಕರಣವು ಗತಾರ್ಥವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಭಾಮತಿಯಲ್ಲಿ ಹೇಳಿದ್ದನ್ನೇ ಅನುವಾದ ಮಾಡುತ್ತಿದ್ದಾರೆ 'ಆಕಾಶಸ್ತಲ್ಲಿಂಗಾತ್' ಇತ್ಯಾದಿಯಾಗಿ.

**प्रकाशः** – सर्वाणि भूतान्याकाशादेव समुत्पद्यन्त इत्यत्र सर्वजगदुत्पत्तेरेवकारावगतनिरपेक्षकारणत्वस्य प्रश्नप्रत्युक्तिसामानाधिकरण्यसामर्थ्यस्य च दर्शनाद्ब्रह्मपरत्वं नैवमिहेति कल्पतरूक्तार्थो बोध्यः । निर्वहितृत्वेति पूर्ववत्साधुत्वसमर्थनम् ।

ಭಾಮತಿಯ ವಾಕ್ಯವನ್ನು ಕಲ್ಪತರುವಿನಲ್ಲಿ ಹೀಗೆ ವ್ಯಾಖ್ಯಾನ ಮಾಡಲಾಗಿದೆ - 'ಸರ್ವಾಣಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂಬ ಪ್ರಥಮಪಾದದ ವಿಷಯವಾಕ್ಯದಲ್ಲಿ, ಸರ್ವಜಗತ್ತಿನ ಉತ್ಪತ್ತಿಗೆ ನಿರಪೇಕ್ಷಕಾರಣತ್ವವನ್ನು ಏವಕಾರದಿಂದ ಹೇಳಲಾಗಿದೆ. ಮತ್ತು ಆಕಾಶದಿಂದ ನೇರವಾಗಿ ಪೃಥಿವಿಯು ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನೆಂಬ ಅರ್ಥವನ್ನು ಆಕಾಶಶಬ್ದಕ್ಕೆ ಹೇಳಿದಾಗ, ಪ್ರಶ್ನೆ ಹಾಗೂ ಉತ್ತರವಾಕ್ಯಗಳಿಗೆ ಸಾಮಾನಾಧಿಕರಣ್ಯವು ಬರುತ್ತದೆ. ಹಾಗಾಗಿ ಅಲ್ಲಿರುವ ಆಕಾಶಶಬ್ದಕ್ಕೆ ಬ್ರಹ್ಮಪರತ್ವವನ್ನು ಹೇಳಬಹುದು. ಆದರೆ ಅದರಂತೆ ಇಲ್ಲಿ ಯಾವುದೇ ಬ್ರಹ್ಮಲಿಂಗಗಳಿರುವುದಿಲ್ಲ. ಇಲ್ಲಿಯೂ ಕೂಡ ನಿರ್ವಹಿತೃತ್ವ ಎಂಬ ಶಬ್ದಪ್ರಯೋಗವನ್ನು ಶ್ರುತಿಯ ಅನುಕರಣೆಗಾಗಿ ಪ್ರಯೋಗಿಸಿದ್ದಾರೆಂಬುದನ್ನು ಹಿಂದಿನಂತೆ ತಿಳಿದುಕೊಳ್ಳಬೇಕು.

**प्रकाशः** – ननूक्तमत्र ''तत्रेवात्र सर्वशब्दाभावादवकाशदानादिना नामरूपनिर्वहणस्य गगनेऽपि सम्भवादकस्माद्रूढित्यागायोगात् ''ते यदन्तरा तद्ब्रह्म'' इति ब्रह्मणो नामरूपयोरन्तरालत्ववचनाद्भूताकाशो नामरूपयोर्निर्वहिता । ब्रह्मचैतयोरन्तरालम् । मध्यं सारमिति यावदिति नामरूपनिर्वोढ्राकाशतो ब्रह्मणो भेदेनोक्तेः'' इत्यादिना ब्रह्मलिङ्गादेरन्यथानयनमित्यत आह – **क्लेशेनेति** ।।

ಪರಿಪೂರ್ಣಚಂದ್ರಿಕಾ

ಪ್ರಥಮಪಾದದ ಆಕಾಶಾಧಿಕರಣದ ವಿಷಯವಾಕ್ಯದಲ್ಲಿ ಸರ್ವಶಬ್ದವು ಇದ್ದಂತೆ ಪ್ರಕೃತ ವಿಷಯವಾಕ್ಯದಲ್ಲಿ ಸರ್ವಶಬ್ದವಿರುವುದಿಲ್ಲ. ಆದ್ದರಿಂದ ಅವಕಾಶಪ್ರದಾನಾದಿಗಳನ್ನು ವಿವಕ್ಷಿಸಿ, ನಾಮರೂಪನಿರ್ವಾಹಕತ್ವವನ್ನು ಗಗನದಲ್ಲಿಯೂ ಕೂಡ ಉಪಪಾದನೆ ಮಾಡಬಹುದು. ಹಾಗಾಗಿ ಆಕಸ್ಮಿಕವಾಗಿ ರೂಢಿಯನ್ನು ತ್ಯಾಗ ಮಾಡಲು ಬರುವುದಿಲ್ಲ. ಮತ್ತು 'ತೇ ಯದಂತರಾ ತದ್ಬ್ರಹ್ಮ' ಎಂಬ ಶ್ರುತಿಯಲ್ಲಿ ಬ್ರಹ್ಮನು ನಾಮ ಹಾಗೂ ರೂಪಗಳ ಮಧ್ಯದಲ್ಲಿ ಪ್ರಯುಕ್ತನಾಗಿದ್ದಾನೆ. ಭೂತಾಕಾಶವೇ ನಾಮರೂಪಗಳಿಗೆ ನಿರ್ವಾಹಕವಾಗಿದೆ. ಬ್ರಹ್ಮನು ಈ ನಾಮರೂಪಗಳ ಮಧ್ಯದಲ್ಲಿ ಉಕ್ತನಾಗಿದ್ದಾನೆ. 'ಮಧ್ಯಂ ಸಾರಂ' ಮಧ್ಯದಲ್ಲಿರುವುದೇ ಶ್ರೇಷ್ಠವೆಂಬ ಮಾತಿನಂತೆ ಬ್ರಹ್ಮನ ಶ್ರುತಿಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡಲಿ, ಆದರೆ ಆಕಾಶಶಬ್ದ ಮಾತ್ರ ಭೂತಾಕಾಶವನ್ನು ಪ್ರತಿಪಾದನೆ ಮಾಡುತ್ತದೆ. ನಾಮರೂಪಗಳನ್ನು ನಿರ್ವಹಣೆ ಮಾಡುವ ಆಕಾಶವೇ ಬೇರೆ, ಬ್ರಹ್ಮನೇ ಬೇರೆ. ಹೀಗೆ ಬ್ರಹ್ಮಲಿಂಗಗಳ ವಿರೋಧವನ್ನು ಪರಿಹಾರ ಮಾಡಬಹುದಲ್ಲವೇ? ಎಂಬ ಆಶಂಕೆಗೆ 'ಕ್ಲೇಶೇನ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः – उभयत्रेति ।।** तत्रापि ''आकाशाद्वायुः वायोरग्निः'' इत्यादिनाऽऽकाशस्य सर्वभूतादित्वश्रवणेन सर्वभूतकारणस्य ततोऽन्यस्याभावेन निर्धारणोक्तनिरपेक्षत्वस्य भूतेऽप्युपपत्तेस्तत्रैवोक्तत्वादिति भावः ।

ಹಾಗಾದರೆ ಪ್ರಥಮಪಾದದ ಆಕಾಶಾಧಿಕರಣದಲ್ಲಿಯೂ 'ಆಕಾಶಾದ್ವಾಯುಃ ವಾಯೋರಗ್ನಿಃ' ಇತ್ಯಾದಿ ವಾಕ್ಯಗಳಲ್ಲಿ ಆಕಾಶಕ್ಕೆ ಸರ್ವಭೂತಕಾರಣತ್ವವು ಶ್ರುತವಾಗುತ್ತಿದೆ. ಸರ್ವಭೂತಕಾರಣತ್ವವನ್ನು ಭೂತಾಕಾಶದಲ್ಲಿಯೂ ಕೂಡ ಹೇಳಬಹುದು. 'ಆಕಾಶಾದೇವ' ಎಂಬ ನಿರ್ಧಾರಣದಿಂದ ನಿರಪೇಕ್ಷ-ಕಾರಣತ್ವವನ್ನು ಭೂತಾಕಾಶದಲ್ಲಿಯೂ ಕೂಡ ಉಪಪಾದನೆ ಮಾಡಬಹುದೆಂದು ಅಲ್ಲಿಯೇ ನಾವು ಹೇಳಿದ್ದೇವೆ. ಆದ್ದರಿಂದ ಇಲ್ಲಿ ಶ್ರುತವಾದ ಬ್ರಹ್ಮನ ಲಿಂಗಗಳನ್ನು ಕಷ್ಟದಿಂದ ಆಕಾಶದಲ್ಲಿ ಸಮನ್ವಯ ಮಾಡುವಂತೆ ಅಲ್ಲಿಯೂ ಕೂಡ ಭೂತಕಾರಣತ್ವಾದಿಗಳನ್ನು ಭೂತಾಕಾಶದಲ್ಲೇ ಹೇಳಲು ಬರುತ್ತದೆ.

**प्रकाशः –** ननु पूर्वमाकाशस्य ब्रह्मत्वे निर्णीतेऽपि दहराधिकरणे दहराकाशो भूतमिति प्राप्ते ब्रह्मेति पुनर्विवरणमिवेहापि स्यादिति चेन्न । दहरस्थस्यैव ब्रह्मत्वेन दहरस्य ब्रह्मत्वनिरासात् । तत्र पूर्वपक्षप्रापकप्रबलहेतोरिवेह प्रापकस्याभावाच्चेति भावः ।।

ಶಂಕೆ - ಪ್ರಥಮಪಾದದ ಆಕಾಶಾಧಿಕರಣದಲ್ಲಿ ಬ್ರಹ್ಮನೇ ಆಕಾಶಶಬ್ದಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸಿದ್ದೇವೆ. ಆದರೂ ಕೂಡ ಇದೇ ಪಾದದಲ್ಲಿರುವ ದಹರಾಧಿಕರಣದಲ್ಲಿ ದಹರಾಕಾಶವು ಭೂತಪದಾರ್ಥವೆಂದೇ ಹೇಳಬೇಕೆಂದು ಪೂರ್ವಪಕ್ಷ ಬಂದಾಗ ಬ್ರಹ್ಮನು ದಹರಾಕಾಶವೆಂದು ಸಿದ್ಧಾಂತ ಮಾಡಲಾಗಿದೆ. ವಾಸ್ತವಿಕವಾಗಿ ಪ್ರಥಮಪಾದದಲ್ಲೇ ಆಕಾಶವನ್ನು ಬ್ರಹ್ಮನೆಂದು ನಿರ್ಣಯಿಸಿದ ಮೇಲೆ ಪುನಃ ದಹರಾಧಿಕರಣದಲ್ಲಿ ದಹರಕಾಶವನ್ನು ಬ್ರಹ್ಮನೆಂದು ನಿರ್ಣಯಿಸಬೇಕಾಗಿಲ್ಲ. ಆದರೂ ಪ್ರಥಮಪಾದದ ಆಕಾಶಾಧಿಕರಣ (೧-೩-೧೨)

ಆಕಾಶಾಧಿಕರಣದ ವಿವರಣರೂಪವಾಗಿದೆಯೆಂದು ಹೇಗೆ ಉತ್ತರಿಸುತ್ತೇವೋ, ಅದರಂತೆ ಇಲ್ಲಿಯೂ ಕೂಡ ಪ್ರಥಮಪಾದದಲ್ಲಿ ಹೇಳಿದ ವಿಚಾರವನ್ನೇ ವಿವರಿಸಲಾಗಿದೆಯೆಂದು ಉತ್ತರಿಸುತ್ತೇವೆ.

ಸಮಾಧಾನ - ಇದೂ ಸಹ ತಪ್ಪು. ಏಕೆಂದರೆ ದಹರಾಧಿಕರಣದಲ್ಲಿ ದಹರಾಕಾಶದಲ್ಲಿರುವವನನ್ನು ಬ್ರಹ್ಮನೆಂದು ನಿರ್ಣಯಿಸಲಾಗಿದೆ ಹೊರತು, ದಹರಾಕಾಶವನ್ನೇ ಬ್ರಹ್ಮನೆಂದು ನಿರ್ಣಯಿಸಿಲ್ಲ. ಈ ವಿಚಾರವನ್ನು ದಹರಾಧಿಕರಣದಲ್ಲಿ ನಾವು ಸಮರ್ಥನೆ ಮಾಡಿದ್ದೇವೆ. ಮತ್ತು ದಹರಾಧಿಕರಣದಲ್ಲಿ ಪ್ರಬಲವಾದ ಪೂರ್ವಪಕ್ಷಗಳಿರುವುದರಿಂದ ಅದಕ್ಕೆ ಸಾರ್ಥಕ್ಯವನ್ನು ಹೇಳಲಾಗಿತ್ತು. ಅದರಂತೆ ಪ್ರಕೃತ ಈ ಆಕಾಶಾಧಿಕರಣಕ್ಕೆ ಪೂರ್ವಪಕ್ಷ ಪ್ರಾಪಕಗಳಿಲ್ಲದ ಕಾರಣ, ಇದಕ್ಕೆ ಸಾರ್ಥಕ್ಯವನ್ನು ತೋರಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಆದ್ದರಿಂದ ಅಧಿಕರಣ ಶರೀರವು ಅಯುಕ್ತವಾಗಿದೆ.



## ಸಾರ

ಶಾಂಕರಭಾಷ್ಯದಲ್ಲಿಯೂ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬ ಛಾಂದ್ಯೋಗ್ಯದ ವಾಕ್ಯವನ್ನೇ ವಿಷಯವೆಂದಿದ್ದಾರೆ. ಈ ಶ್ರುತಿವಾಕ್ಯದಲ್ಲಿ ಆಕಾಶಶಬ್ದವನ್ನು ಕೇಳಿದಾಗ ಭೂತಾಕಾಶವನ್ನು ಹೇಳುತ್ತಿದೆಯೋ, ಅಥವಾ ಪರಮಾತ್ಮನನ್ನೋ ಎಂಬ ಸಂದೇಹವು ಪ್ರಾಪ್ತವಾಗುತ್ತದೆ. ಭೂತಾಕಾಶದಲ್ಲೇ ಆಕಾಶಶಬ್ದವು ರೂಢವಾದ ಕಾರಣ ಭೂತಾಕಾಶವೇ ಪ್ರತಿಪಾದ್ಯವಾಗುತ್ತದೆಂದು ಪೂರ್ವಪಕ್ಷ. ನಾಮರೂಪನಿರ್ವಾಹಕತ್ವ ಮೊದಲಾದ ಬ್ರಹ್ಮನ ಲಿಂಗವಿರುವುದರಿಂದ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ ಮಾಡಿದ್ದಾರೆ. ಈ ಅಧಿಕರಣಕ್ಕೆ ಪ್ರಥಮಪಾದದ ಆಕಾಶಾಧಿಕರಣದಿಂದ ವೈಯರ್ಥ್ಯವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಆಕಾಶಾದೇವ ಸಮುತ್ಪದ್ಯಂತೇ' ಎಂಬ ಪ್ರಥಮಪಾದದ ಆಕಾಶಾಧಿಕರಣಕ್ಕೆ ಯಾವುದು ವಿಷಯವಾಗಿದೆಯೋ, ಅದರಲ್ಲಿ ಸರ್ವಭೂತಕಾರಣತ್ವವೆಂಬ ಬ್ರಹ್ಮನ ಲಿಂಗವು ಶ್ರುತವಾಗಿದೆ. ಪ್ರಕೃತ 'ಆಕಾಶೋ ವೈ ನಾಮ' ಎಂಬಲ್ಲಿ ಯಾವುದೇ ಬ್ರಹ್ಮಲಿಂಗಗಳಿರುವುದಿಲ್ಲ. ಹಾಗಾಗಿ ಇದಕ್ಕೆ ಆರಂಭಣೀಯತ್ವವು ಇರುತ್ತದೆನ್ನುತ್ತಾರೆ.

ಇದು ತಪ್ಪು. ಈ ಅಧಿಕರಣದ ಶ್ರುತಿಯಲ್ಲಿಯೂ ನಾಮರೂಪನಿರ್ವಾಹಕತ್ವವೆಂಬ ಸ್ಪಷ್ಟ-ಬ್ರಹ್ಮಲಿಂಗವಿರುವ ಕಾರಣ ಹಿಂದಿನ ಆಕಾಶಾಧಿಕರಣದಿಂದ ಗತಾರ್ಥತ್ವವು ಬಂದೇ ಬರುತ್ತದೆ. ಒಂದು ವೇಳೆ ಇಲ್ಲಿರುವ ನಾಮರೂಪ ನಿರ್ವಾಹಕತ್ವಾದಿಲಿಂಗಗಳನ್ನು ಆಕಾಶದಲ್ಲಿ ಕಷ್ಟದಿಂದ ಕೂಡಿಸುವುದಾದರೆ, ಪ್ರಥಮಪಾದದಲ್ಲಿಯೂ ಕೂಡ ಸರ್ವಭೂತಕಾರಣತ್ವವನ್ನು ಆಕಾಶದಲ್ಲಿ ಕೂಡಿಸಲು ಬರುತ್ತದೆ. ಹೀಗೆ ಈ ಅಧಿಕರಣಕ್ಕೆ ಸಾರ್ಥಕ್ಯವನ್ನು ಚಿಂತನೆ ಮಾಡಲು ಹೋಗಿ, ಪ್ರಥಮಪಾದದ ಆಕಾಶಾಧಿಕರಣಕ್ಕೆ ವೈಯರ್ಥ್ಯವನ್ನು ಒಪ್ಪಿಕೊಂಡಂತಾಗುತ್ತದೆ. ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಹುರುಳಿಲ್ಲದ್ದು.



ಪರಿಪೂರ್ಣಚಂದ್ರಿಕಾ

**तात्पर्यचन्द्रिका**

**केचित्तु ।। तल्लिङ्गादिति न्यायेनैवात्रापि वाक्य आकाशस्य गगनत्वनिरासात् मुक्तजीवत्वेनैवेह पूर्वपक्ष इत्याहुः ।**

ಅನುವಾದ - ರಾಮಾನುಜರು ಈ ಅಧಿಕರಣ ಸಾರ್ಥಕ್ಯವನ್ನು ಹೀಗೆ ಉಪಪಾದನೆ ಮಾಡಿದ್ದಾರೆ. 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮ ಪಾದದಲ್ಲಿ ಶ್ರುತಿಯಲ್ಲಿ ಇರುವ ಆಕಾಶಶಬ್ದಗಳೆಲ್ಲವೂ ಪರಮಾತ್ಮ ಪರವೆಂದು ನಿರ್ಣಯಿಸಿದ್ದಾಗಿದೆ. ಶ್ರುತಿಯಲ್ಲಿರುವ ಆಕಾಶಶಬ್ದವು ಭೂತಾಕಾಶಪರವಾಗುವುದಿಲ್ಲವೆಂದು ನಿರಾಕರಿಸಿದ್ದಾಗಿದೆ. ಆದ್ದರಿಂದ ಈ ಅಧಿಕರಣದ ವಿಷಯವಾಕ್ಯದಲ್ಲಿರುವ ಆಕಾಶಶಬ್ದವೂ ಕೂಡ ಭೂತಾಕಾಶವನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಮುಕ್ತಜೀವನೇ ಇಲ್ಲಿ ಆಕಾಶಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷವೆನ್ನುತ್ತಾರೆ.

**तन्न । अस्मिन् वाक्ये ब्रह्मलिङ्गस्यास्फुटत्वे गगनपक्षस्यैवोदयात् । स्फुटत्वे च जीवपक्षस्याप्यनुदयाच्च ।**

ಇದೂ ಸಹ ತಪ್ಪು. ಏಕೆಂದರೆ ಶ್ರುತಿಯಲ್ಲಿ, ಬ್ರಹ್ಮನ ಲಿಂಗಗಳು ಸ್ಪಷ್ಟವಾಗಿ ತೋರುತ್ತಿಲ್ಲವೋ, ಅಥವಾ ತೋರುತ್ತಿದೆಯೋ ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಒಂದು ವೇಳೆ ಛಾಂದೋಗ್ಯದ ಈ ವಾಕ್ಯದಲ್ಲಿ ಬ್ರಹ್ಮನಲಿಂಗಗಳು ಸ್ಪಷ್ಟವಾಗಿ ತೋರುತ್ತಿಲ್ಲವೆನ್ನುವುದಾದರೆ, ಭೂತಾಕಾಶವೇ ಪೂರ್ವಪಕ್ಷಕ್ಕೆ ವಿಷಯವಾಗಿದೆಯೆಂಬ ಪೂರ್ವಪಕ್ಷವು ಹುಟ್ಟುತ್ತದೆ. ಬ್ರಹ್ಮನ ಲಿಂಗಗಳು ಸ್ಪಷ್ಟವಾಗಿವೆ ಎನ್ನುವುದಾದರೆ, ಮುಕ್ತಜೀವನು ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆಂಬ ಪೂರ್ವಪಕ್ಷವೂ ಸಹ ಹುಟ್ಟುವುದಿಲ್ಲ.

**निर्बीजश्च जीवपक्षः । जीवलिङ्गाद्यभावात् । आकाशशब्दस्य तत्राप्रसिद्धेर्वैनामेति निपातानुपपत्तेः ।**

ಮತ್ತು ಜೀವನೆಂಬ ಪೂರ್ವಪಕ್ಷವು ನಿರ್ಬೀಜವಾಗಿದೆ. ಏಕೆಂದರೆ ಶ್ರುತಿಯಲ್ಲಿ ಯಾವುದೇ ಜೀವನ ಲಿಂಗಗಳು ಕೇಳಿಸುತ್ತಿಲ್ಲ. ಆಕಾಶಶಬ್ದವು ಮುಕ್ತಜೀವನಲ್ಲಿ ಸಿದ್ಧವೇ ಆಗಿಲ್ಲ. ಹೀಗಿರುವಾಗ 'ವೈ ನಾಮ' ಎಂಬ ನಿಪಾತಗಳಿಗೆ ಸಾರ್ಥಕ್ಯವನ್ನು ಹೇಳಲು ಹೇಗೆ ಸಾಧ್ಯ ?

**जगद्व्यापारवर्जमित्यत्र मुक्तजीवस्य नामरूपनिर्वोढृत्वस्य निरसिष्यमाणत्वाच्च।**

ಮತ್ತು 'ಜಗದ್ವ್ಯಾಪಾರವರ್ಜಮ್' ಎಂಬಲ್ಲಿ ಮುಕ್ತನಿಗೆ ಜಗತ್ತಿನ ಯಾವುದೇ ವ್ಯಾಪಾರಗಳಿರುವು-ದಿಲ್ಲವೆಂದು ಸ್ಥಾಪನೆ ಮಾಡಲಾಗಿದೆ. ಹೀಗಿರುವಾಗ ನಾಮರೂಪನಿರ್ವಾಹಕತ್ವವನ್ನು ಮುಕ್ತಜೀವನಲ್ಲಿ

ಹೇಗೆ ಹೇಳುತ್ತೀರಿ. ಇದು ಮುಕ್ತಜೀವನಲ್ಲಿ ಇಲ್ಲವೆಂಬ ವಿಚಾರವನ್ನು ಮುಂದೆ ಸಮರ್ಥನೆ ಮಾಡುತ್ತೇವೆ.

**''ब्रह्मलोकमभिसम्भवामि'' इति पूर्ववाक्ये च जीवस्य सन्निहितत्वेऽपि सन्निधानस्य श्रुत्यबाधकत्वात् ।**[१]

(१) रामानुजभाष्यम्

आकाशोऽर्थान्तरत्वादिव्यपदेशात् ॥ ४२ ॥

छान्दोग्ये श्रूयते 'आकाशो ह वै नामरूपयोर्निर्वहिता ते यदन्तरा तद् ब्रह्म तदमृतं स आत्मा' इति । तत्र संशयः, किमयमाकाशशब्दनिर्दिष्टो मुक्तात्मा, उत परमात्मा? इति । किं युक्तम्? मुक्तात्मेति । कुतः? 'अश्व इव रोमाणि विधूय पापं चन्द्र इव राहोर्मुखात्प्रमुच्य । धृत्वा शरीरमकृतं कृतात्मा ब्रह्मलोकमभिसम्भवामि ॥' इति मुक्तस्यानन्तरप्रकृतत्वात् । 'ते यदन्तरा' इति च नामरूपविनिर्मुक्तस्य तस्याभिधानात् । 'नामरूपयोर्निर्वहिता' इति च स एव पूर्वावस्थयोपलिलक्षयिषितः । स एव हि देवादिरूपाणि नामानि च पूर्वमबिभः, तस्यैव नामरूपविनिर्मुक्ता साम्प्रतिक्यवस्था 'तद् ब्रह्म तदमृतम्' इत्युच्यते । आकाशशब्दश्च तस्मिन्नप्यसङ्कुचितप्रकाशयोगादुपपद्यते । ननु दहरवाक्यशेषत्वादस्य स एव दहराकाशोऽयमिति प्रतीयते । तस्य च परमात्मत्वं निर्णीतम्। मैवम्, प्रजापतिवाक्यव्यवधानात् । प्रजापतिवाक्ये च प्रत्यगात्मनो मुक्त्यवस्थान्तं रूपमभिहितम्। अनन्तरं च 'विधूय पापम्' इति स एव मुक्तावस्थः प्रस्तुतः । अतोऽत्राकाशो मुक्तात्मा, इति प्राप्ते उच्यते – आकाशोऽर्थान्तरत्वादिव्यपदेशात् इति ॥ आकाशः परं ब्रह्म, कुतः? अर्थान्तरत्वादिव्यपदेशात् । अर्थान्तरत्वव्यपदेशस्तावद् 'आकाशो ह वै नामरूपयोर्निर्वहिता' इति नामरूपयोर्निर्वोढृत्वं बद्धमुक्तोभयावस्थात् प्रत्यगात्मनोऽर्थान्तरत्वमाकाशस्योपपादयति। बद्धावस्थः स्वयं कर्मवशान्नामरूपे भजमानो न नामरूपे निर्वोढुं शक्नुयात् । मुक्तावस्थस्य जगद्व्यापारसम्भवाद् नितरां नामरूपनिर्वोढृत्वम् । ईश्वरस्य तु सकलजगन्निर्माणधुरन्धरस्य नामरूपयोर्निर्वोढृत्वं श्रुत्यैव प्रतिपन्नम् । 'अनेन जीवेनाऽत्मनाऽनुप्रविश्य नामरूपे व्याकरवाणि' 'यस्सर्वज्ञः सर्वविद् यस्य ज्ञानमयं तपः । तस्मादेतद् ब्रह्म नाम रूपमन्नं च जायते' 'सर्वाणि रूपाणि विचित्य धीरो नामानि कृत्वाऽभिवदन् यदास्ते' इत्यादिषु । अतो निर्वाह्यनामरूपात् प्रत्यगात्मनो नामरूपयोर्निर्वोढाऽयमाकाशोऽर्थान्तरभूतं परमेव ब्रह्म । तदेवोपपादयति 'ते यदन्तरा' इति । यस्मादयमाकाशो नामरूपे अन्तरा, ताभ्यामस्पृष्टोऽर्थान्तरभूतः, तस्मात्तयोर्निर्वोढा अपहतपाप्मत्वात् सत्यसङ्कल्पत्वाच्च निर्वहितेत्यर्थः । आदिशब्देन ब्रह्मत्वात्मत्वामृतत्वानि गृह्यन्ते । निरुपाधिकबृहत्त्वादयो हि परमात्मन एव सम्भवन्ति ।

'ಬ್ರಹ್ಮಲೋಕಮಭಿಸಂಭವಾಮಿ' ಎಂಬ ಹಿಂದಿನ ವಾಕ್ಯದಲ್ಲಿ ಜೀವನು ಸನ್ನಿಹಿತನಾಗಿರಬಹುದು. ಆದರೆ ಸನ್ನಿಧಾನವು ಶ್ರುತಿಯನ್ನು ಬಾಧಿಸಲು ಸಾಧ್ಯವಿಲ್ಲ. ಹಿಂದೆ ಪ್ರಸಕ್ತನಾದ ಜೀವನನ್ನು ವಿವಕ್ಷಿಸಲು ಪರಾಮರ್ಶಕವಾದ ಯಾವುದೇ ಶಬ್ದಗಳೂ ಕೂಡ ಇರುವುದಿಲ್ಲ.

**ब्रह्मलोकशब्देन ब्रह्मणः प्राधान्येन सन्निहितत्वाच्चेति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् आकाशाधिकरणं सम्पूर्णम् ।।**

ಮತ್ತು ಬ್ರಹ್ಮಲೋಕ ಶಬ್ದದಿಂದ ಬ್ರಹ್ಮನೇ ಪ್ರಧಾನವಾಗಿ ಸನ್ನಿಹಿತನಾಗಿದ್ದಾನೆ. ಹೊರತು, ಮುಕ್ತಜೀವನಲ್ಲ. ಆದ್ದರಿಂದ ರಾಮಾನುಜರ ಅಭಿಪ್ರಾಯವು ಅಸಾಧುವಾಗಿದೆ.

ಇಲ್ಲಿಗೆ ಶ್ರೀವ್ಯಾಸತೀರ್ಥಶ್ರೀಪಾದಂಗಳವರಿಂದ ರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಂಪೂರ್ಣವಾಯಿತು.

**प्रकाशः –**

**केचित्त्विति** ।। ''आकाशो वैनाम'' इति श्रुत आकाशो मुक्तजीवः परमात्मावेति संशये

ವಿವರಣೆ - ರಾಮಾನುಜಭಾಷ್ಯದ ಅಧಿಕರಣ ಶರೀರ ಹೀಗಿದೆ - 'ಆಕಾಶೋ ವೈ ನಾಮ' ಎಂಬ ವಾಕ್ಯವೇ ವಿಷಯವೆನ್ನುತ್ತಾರೆ. ಇಲ್ಲಿರುವ ಆಕಾಶಶಬ್ದವು ಮುಕ್ತಜೀವನನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿದೆಯೋ ? ಎಂದು ಸಂದೇಹ.

तेनात्राकाशः परमेव ब्रह्म । यत्पुनरुक्तं 'धृत्वा शरीरम्' इति मुक्तोऽनन्तरप्रकृतः इति, तन्न । 'ब्रह्मलोकमभिसम्भवामि' इति परस्यैव ब्रह्मणोऽनन्तरप्रकृतत्वात् । यद्यप्यभिसम्भवितुर्मुक्तस्याभिसम्भाव्यतया परं ब्रह्म निर्दिष्टम्, तथाप्यभिसम्भवितुर्मुक्तस्य नामरूपनिर्वोढृत्वाद्यसम्भवादभिसम्भाव्यं परमेव ब्रह्म तत्र प्रत्येतव्यम् । किञ्च आकाशशब्देन प्रकृतस्य दहराकाशस्यात्र प्रत्यभिज्ञानात्, प्रजापतिवाक्यस्याप्युपासकस्वरूपकथनार्थत्वादुपास्य एव दहराकाशः प्राप्यतयेहोपसंह्रियत इति युक्तम्। आकाशशब्दश्च प्रत्यगात्मनि न क्वचिद् दृष्टचरः । अतोऽत्राकाशः परं ब्रह्म ।।

अथ स्यात्, प्रत्यगात्मनोऽर्थान्तरभूतमात्मान्तरमेव नास्ति, ऐक्योपदेशात्, द्वैतप्रतिषेधाच्च। शुद्धावस्थ एव हि प्रत्यगात्मा परमात्मा परं ब्रह्म परमेश्वर इति च व्यपदिश्यते । अतः प्रकृतान्मुक्तात्मनोऽभिसम्भवितुर्नार्थान्तरमभिसम्भावो ब्रह्मलोकः, अतो नामरूपयोर्निर्वहिता आकाशोऽपि स एव भवितुमर्हति, इति अत उत्तरं पठति –

**प्रकाशः** – ''अश्व इव रोमाणि विधूय पापं चन्द्र इव निर्मुक्त'' इति मुक्तस्याभिधानेन प्रकृतत्वात् नामरूपभाक्त्वरूपनामरूपनिर्वोढृत्वस्य संसारित्वदशायां सम्भवात् ब्रह्मत्वामृतत्वादेश्च मुक्ते सम्भवात् आकाशशब्दस्य चासङ्कुचितप्रकाशयुक्ते मुक्ते यौगिकत्वेनोपपत्तेर्मुक्त एवायमाकाश इति प्राप्ते

ಹಿಂದಿನ ವಾಕ್ಯದಲ್ಲಿ 'ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ನಿರ್ಮುಕ್ತ' ಕದುರೆಯು ತನ್ನ ರೋಮಗಳನ್ನು ಝಾಡಿಸುವಂತೆ ಮುಕ್ತನೂ ಸಹ ತನ್ನ ಪಾಪಗಳನ್ನು ಝಾಡಿಸುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಹಿಂದೆ ಮುಕ್ತನು ಪ್ರಕೃತನಾದ ಕಾರಣ, ನಾಮರೂಪನಿರ್ವಹಿತೃತ್ವವನ್ನು ಅವನಲ್ಲೇ ಹೇಳಬೇಕು. ನಾಮ ಹಾಗೂ ರೂಪಗಳಿಗೆ ಆಶ್ರಯವಾಗಿರುವಿಕೆಯನ್ನೇ ನಾಮರೂಪ ನಿರ್ವೋಢೃತ್ವವು ಹೇಳುತ್ತಿದೆ. ಸಂಸಾರ ಕಾಲದಲ್ಲಿ ಮುಕ್ತನೂ ಕೂಡ ನಾಮರೂಪಗಳಿಗೆ ಆಶ್ರಯನಾದ ಕಾರಣ, ನಾಮರೂಪನಿರ್ವೋಢೃತ್ವವು ಅವನಲ್ಲಿ ಯುಕ್ತವಾಗುತ್ತದೆ. ಅದರಂತೆ ಶ್ರುತಿಯಲ್ಲಿ ಇರುವ ಬ್ರಹ್ಮತ್ವ, ಅಮೃತತ್ವ, ಮೊದಲಾದ ಧರ್ಮಗಳು ಮುಕ್ತನಲ್ಲಿ ಯುಕ್ತವಾಗುತ್ತವೆ. ಆಕಾಶಶಬ್ದಕ್ಕೆ 'ಆಸಮಂತಾತ್‌ಕಾಶತೇ' ಎಂಬ ಯೌಗಿಕಾರ್ಥವನ್ನು ವಿವಕ್ಷಿಸಿ ಅತ್ಯಂತ ಪ್ರಕಾಶವುಳ್ಳವನಾದ್ದರಿಂದ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆಂದು ಪೂರ್ವಪಕ್ಷ.

**प्रकाशः** – ''नामरूपयोर्निर्वहित'' इति कर्तृतया तन्निर्वोढृत्वस्य जीवेऽयोगात्सकलनिर्माणधुरंधरस्येश्वरस्यैव योगात् ''ते यदन्तर'' इत्युक्तनामरूपास्पृष्टत्वस्य तत्रैव योगादाकाशो ब्रह्मेति सिद्धान्तः ।

'ನಾಮರೂಪಯೋರ್ನಿರ್ವಹಿತಾ' ಎಂಬಲ್ಲಿ ನಾಮರೂಪಗಳಿಗೆ ಕರ್ತೃತ್ವೇನ ನಿರ್ವೋಢೃತ್ವವನ್ನೇ ಶ್ರುತಿಯು ಹೇಳುತ್ತಿದೆ. ನಾಮರೂಪಗಳಿಗೆ ಕಾರಣವಾಗಿರುವಿಕೆಯು ಮುಕ್ತಜೀವನಲ್ಲಿ ಯುಕ್ತವಾಗುವುದಿಲ್ಲ. ಹೊರತಾಗಿ ಸಕಲ ನಿರ್ಮಾಣ ಧುರಂಧರನಾದ ಈಶ್ವರನಲ್ಲೇ ಬರುತ್ತದೆ. ಮತ್ತು 'ತೇ ಯದಂತರೇ' ಎಂಬಲ್ಲಿ ಹೇಳಲ್ಪಟ್ಟ ನಾಮರೂಪಗಳ ಸ್ಪರ್ಶವಿಲ್ಲದಿರುವಿಕೆಯು ಪರಮಾತ್ಮನಲ್ಲೇ ಬರುತ್ತದ್ದಾದ್ದರಿಂದ ಆಕಾಶಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧಾಂತ.

**प्रकाशः** – तत्र दूष्यांशमात्रमनुवदति ।। **तल्लिङ्गादितीति** ।। किमस्मिन्वाक्ये ब्रह्मलिङ्गमस्पष्टमुत स्पष्टमिति विकल्पौ हृदि कृत्वा क्रमेण निराह – **अस्मिन्निति** ।। स्पष्टत्वे ब्रह्मलिङ्गेनैव जीवप्रापकबाधादिति भावः ।

ರಾಮಾನುಜರ ಈ ಅಧಿಕರಣ ಶರೀರದಲ್ಲಿ ದೂಷ್ಯವಾದ ಅಂಶವನ್ನಷ್ಟೇ ಅನುವಾದ ಮಾಡುತ್ತಿದ್ದಾರೆ 'ತಲ್ಲಿಂಗಾದಿತಿ' ಇತ್ಯಾದಿಯಾಗಿ. ಅಂದರೆ ಈ ವಾಕ್ಯದಲ್ಲಿ ಬ್ರಹ್ಮನ ಲಿಂಗಗಳು ಅಸ್ಪಷ್ಟವಾಗಿ ಶ್ರುತವಾಗಿವೆಯೋ, ಅಥವಾ ಸ್ಪಷ್ಟವಾಗಿ ಶ್ರುತವಾಗಿವೆಯೋ? ಎಂದು ವಿಕಲ್ಪ ಮಾಡಿ, ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ಅಸ್ಮಿನ್' ಇತ್ಯಾದಿ ವಾಕ್ಯದಿಂದ. ಸ್ಪಷ್ಟವಾಗಿರುವುದಾದರೆ ಅದೇ ಬ್ರಹ್ಮಲಿಂಗಗಳಿಂದ ಮುಕ್ತಜೀವನನ್ನು ವಿವಕ್ಷಿಸಲು ಬರುವುದಿಲ್ಲವೆಂದು ತಿಳಿಯುತ್ತದೆ.

**प्रकाशः** – जीवप्रापकं च नास्तीत्याह – **निर्वीजश्चेति** ।। **श्रुतीति** ।। आकाशश्रुतीत्यर्थः । सन्निधेः स्थानप्रमाणत्वेन श्रुतितो दुर्बलत्वादिति भावः ।

ಮತ್ತು ಮುಕ್ತಜೀವಪ್ರಾಪಕವಾದ ಲಿಂಗಗಳೂ ಕೂಡ ಇರುವುದಿಲ್ಲವೆಂದು 'ನಿರ್ಬೀಜಶ್ಚ' ಎಂಬ ವಾಕ್ಯದಿಂದ ಹೇಳಿದ್ದಾರೆ. ಶ್ರುತಿಯೆಂದರೆ ಆಕಾಶಶ್ರುತಿಯೆಂದರ್ಥ. ಸನ್ನಿಧಿಯು ಸ್ಥಾನಪ್ರಮಾಣವೆನಿಸುತ್ತದೆ. ಇದು ಶ್ರುತಿಗಿಂತಲೂ ದುರ್ಬಲವಾದ ಕಾರಣ ಶ್ರುತಿಯನ್ನು ಬಾಧಿಸಲು ಇದಕ್ಕೆ ಸಾಮರ್ಥ್ಯವಿರುವುದಿಲ್ಲ.

**प्रकाशः** – एतेनास्याकाशस्य भूतजीवान्यतरत्वप्राप्तौ शिवत्वेन सिद्धान्त इति वदतः कस्यचिन्मतमपि निरस्तं बोध्यम् । शिवासाधारणलिङ्गाभावाच्च । सर्वाधारत्वादेर्विष्णुलिङ्गत्वसमर्थनाच्चेति अक्षरार्थस्तु प्रागेव विवृतः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे आकाशाधिकरणं सम्पूर्णम् ॥**

ಹೀಗೆ ಅದ್ವೈತಿಗಳನ್ನು ಹಾಗೂ ರಾಮಾನುಜರನ್ನು ನಿರಾಕರಣೆ ಮಾಡಿದ್ದರಿಂದ, ಶೈವಮತವನ್ನೂ ಕೂಡ ನಿರಾಕರಿಸಿದಂತಾಯಿತು. ಈ ವಾಕ್ಯದಲ್ಲಿರುವ ಆಕಾಶಶಬ್ದವು ಭೂತಾಕಾಶವನ್ನು ಅಥವಾ ಜೀವನನ್ನು ಪ್ರತಿಪಾದನೆ ಮಾಡುತ್ತದೆಂದು ಪೂರ್ವಪಕ್ಷ ಮಾಡಿ, ಶಿವನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಶೈವರು ಸಿದ್ಧಾಂತ ಮಾಡಿದ್ದಾರೆ. ಇದು ತಪ್ಪು. ಏಕೆಂದರೆ ಶ್ರುತಿಯಲ್ಲಿ ಶಿವನ ಅಸಾಧಾರಣಲಿಂಗಗಳಾವುದೂ ಸಹ ಕೇಳಿಸುತ್ತಿಲ್ಲ. ಮತ್ತು ಸರ್ವಾಧಾರತ್ವ ಮೊದಲಾದವುಗಳು ವಿಷ್ಣುವಿನ ಅಸಾಧಾರಣಲಿಂಗಗಳಾಗಿವೆಯೆಂದು ಈಗಾಗಲೇ ನಾವು ಸಮರ್ಥನೆ ಮಾಡಿದ್ದೇವೆ. ಹೀಗಿರುವಾಗ ವಿಷ್ಣುವೇ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆ ಹೊರತು, ಶಿವನಲ್ಲ.

ಟೀಕೆಯ ಕಠಿಣಪದಾರ್ಥಗಳನ್ನು ಉಪನ್ಯಾಸಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ವಿವರಿಸಿದ್ದಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಆಕಾಶಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम् – पूर्वपक्षे सूत्रे साक्षाद्धेतुविशेषाभावात्पक्षान्तरमाह – यद्वेति।। प्राधान्येनेति ।। प्राप्तत्वेन तस्य प्राधान्यमित्यर्थः ।।**

**।। इति श्रीकेशवभट्टारकेण विरचितायां भावदीपिकायाम्**
**आकाशाधिकरणं सम्पूर्णम् ।।१२ ।।**




ರಾಮಾನುಜರೂ ಕೂಡ ಛಾಂದೋಗ್ಯದ ಈ ವಾಕ್ಯವನ್ನೇ ವಿಷಯವೆನ್ನುತ್ತಾರೆ. ಆದರೆ 'ಆಕಾಶೋ ವೈ ನಾಮ' ಎಂಬ ವಾಕ್ಯದಿಂದ ಮುಕ್ತಜೀವನು ಪ್ರತಿಪಾದ್ಯನಾಗಿದ್ದಾನೆಂದು ಪೂರ್ವಪಕ್ಷ ಮಾಡುತ್ತಾರೆ. ಇಲ್ಲಿರುವ ನಾಮರೂಪನಿರ್ವಾಹಕಶಬ್ದಕ್ಕೆ ನಾಮ ಹಾಗೂ ರೂಪಗಳನ್ನು ಧರಿಸಿರುತ್ತಾನೆಂದು ಅರ್ಥ. ಸಂಸಾರಾವಸ್ಥೆಯಲ್ಲಿ ಜೀವನು ನಾಮ ಹಾಗೂ ರೂಪಗಳನ್ನು ಧರಿಸಿರುತ್ತಾನೆ. ಆದ್ದರಿಂದ ಮುಕ್ತಜೀವನೇ ಆಕಾಶಪದವಾಚ್ಯನಾಗುತ್ತಾನೆಂದು ಪೂರ್ವಪಕ್ಷ. ಬ್ರಹ್ಮನೇ ಆಕಾಶನು. ಏಕೆಂದರೆ ನಾಮರೂಪನಿರ್ವಾಹಕತ್ವವೆಂದರೆ ನಾಮರೂಪಕರ್ತೃತ್ವವೆಂದರ್ಥ. ಜೀವನು ಸ್ವತಃ ನಾಮರೂಪವುಳ್ಳವನಾದ್ದರಿಂದ ಅವನು ಕರ್ತೃ ಆಗಲಾರ. ಹೊರತಾಗಿ ಸಕಲನಿರ್ಮಾಣ ಧುರಂಧರನಾದ ಈಶ್ವರನೇ ನಾಮರೂಪಗಳಿಗೆ ಕಾರಣನಾಗುತ್ತಾನೆ. ಆದ್ದರಿಂದ ಬ್ರಹ್ಮನೇ ಆಕಾಶನೆಂದು ಸಿದ್ಧಾಂತ ಮಾಡಿದ್ದಾರೆ.

ಇವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ ಈ ವಿಷಯವಾಕ್ಯದಲ್ಲಿ ಬ್ರಹ್ಮನ ಲಿಂಗಗಳು ಅಸ್ಪಷ್ಟವಾಗಿದ್ದಲ್ಲಿ, ಭೂತಾಕಾಶವನ್ನೇ ಆಕಾಶಶಬ್ದಪ್ರತಿಪಾದ್ಯವೆಂದು ಪೂರ್ವಪಕ್ಷ ಮಾಡಬಹುದು. ಸ್ಪಷ್ಟವಾಗಿದ್ದಲ್ಲಿ ಸಂಸಾರಿ ಜೀವನೂ ಕೂಡ ಪೂರ್ವಪಕ್ಷಕ್ಕೆ ವಿಷಯನಾಗಲಾರ. ಮತ್ತು ಮುಕ್ತಜೀವ-ಪ್ರಾಪಕವಾದ ಯಾವುದೇ ಲಿಂಗಗಳು ಇಲ್ಲಿ ಶ್ರುತವಾಗಿಲ್ಲ. ಆಕಾಶಶಬ್ದವು ಮುಕ್ತಜೀವನಲ್ಲಿ ಪ್ರಸಿದ್ಧವೂ ಆಗಿಲ್ಲ. ಆದ್ದರಿಂದ 'ವೈ ನಾಮ' ಎಂಬ ನಿಪಾತಗಳಿಗೆ ಸಾರ್ಥಕ್ಯವೇ ಇಲ್ಲದಂತಾಗುತ್ತದೆ. 'ಜಗದ್ವ್ಯಾಪಾರವರ್ಜಮ್' ಎಂಬಲ್ಲಿ ಹೇಳುವಂತೆ ಮುಕ್ತನಿಗೆ ನಾಮರೂಪನಿರ್ವಾಹಕತ್ವವನ್ನೂ ಕೂಡ ಹೇಳಲು ಬರುವುದಿಲ್ಲ. ಹಿಂದಿನ ವಾಕ್ಯದಲ್ಲಿ 'ಬ್ರಹ್ಮಲೋಕಮಭಿಸಂಭವಾಮಿ' ಎಂದು ಮುಕ್ತಜೀವನು ಸನ್ನಿಹಿತವಾಗಿದ್ದರೂ ಸನ್ನಿಧಿರೂಪವಾದ ಸ್ಥಾನಪ್ರಮಾಣವು ಶ್ರುತಿಯನ್ನು ಬಾಧಿಸಲು ಸಾಧ್ಯವಿಲ್ಲ. ಏಕೆಂದರೆ ಸ್ಥಾನ ಪ್ರಮಾಣಕ್ಕಿಂತಲೂ ಶ್ರುತಿಪ್ರಮಾಣವೇ ಪ್ರಬಲವಾಗಿವೆ. ಅಷ್ಟೇ ಅಲ್ಲದೇ ಬ್ರಹ್ಮಲೋಕಶಬ್ದದಿಂದ ಬ್ರಹ್ಮನೇ ಹಿಂದೆ ಪ್ರಧಾನವಾಗಿ ಪ್ರಕೃತನಾಗಿದ್ದಾನೆ. ಈ ಎಲ್ಲ ಕಾರಣಗಳಿಂದ ರಾಮಾನುಜರ ಅಧಿಕರಣಶರೀರ ಅಸಾಧುವಾಗಿದೆ.



# ಆಕಾಶಾಧಿಕರಣ

(೧-೩-೧೨)

---

# ಭಾಗ -೩

## ಅಣುಭಾಷ್ಯ, ತತ್ವಮಂಜರೀ,
## ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
## ಸರಳ ಕನ್ನಡ ಅನುವಾದ

* * *

## ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

# अणुभाष्यम्

## आकाशाधिकरणम् (१।३।१२)

**अन्यश्च**

ನಾಮರೂಪರಾಹಿತ್ಯವೆಂಬ ವೈಲಕ್ಷಣ್ಯವುಳ್ಳವನು ಮಹಾವಿಷ್ಣುವೇ ಆಗಿದ್ದಾನೆ. ಹೊರತು ಭೂತಾಕಾಶವಲ್ಲ. ಆದ್ದರಿಂದ, ಉಭಯತ್ರ ಪ್ರಸಿದ್ಧವಾದ ಆಕಾಶಶಬ್ದಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## आकाशाधिकरणम् (१।३।१२)

ननु सर्वाश्रयो जनार्दन इत्युक्तम् । छान्दोग्ये अष्टमान्ते 'आकाशो वै नाम नामरूपयोर्निर्वहिता । ते यदन्तरा तद्ब्रह्म तदमृतम्' इति वाक्ये 'वै नाम' इति निपातद्योतितप्रसिद्धाकाशस्यैव नामरूपनिर्वहितृपदेन सर्वाश्रयत्वोक्तेरित्यतः प्राप्तम्- आकाशोऽर्थान्तरव्यपदेशादिति । तदर्थः - अन्यश्चेति ।

ಮಹಾವಿಷ್ಣುವೇ ಸರ್ವಾಶ್ರಯನಾಗಿದ್ದಾನೆ ಎಂದು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತು. ಇದು ತಪ್ಪು. ಏಕೆಂದರೆ, ಛಾಂದೋಗ್ಯೋಪನಿಷತ್ತಿನ ಎಂಟನೆಯ ಅಧ್ಯಾಯದ ಕೊನೆಯಲ್ಲಿ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ ಬ್ರಹ್ಮ ತದಮೃತಮ್' ಎಂಬ ವಾಕ್ಯದಲ್ಲಿ 'ವೈ ನಾಮ' ಎಂಬ ಎರಡು ನಿಪಾತಗಳಿಂದ ಆಕಾಶವು ಪ್ರಸಿದ್ಧವಾದ ಆಕಾಶವೇ ಆಗಿದೆ ಎಂದು ಸ್ಪಷ್ಟಪಡಿಸಲಾಗಿದೆ. ಆದ್ದರಿಂದ, ಪ್ರಸಿದ್ಧವಾದ ಭೂತಾಕಾಶವೇ ಸಕಲಕ್ಕೂ ಆಶ್ರಯವಾಗಿದೆ, ಹೊರತು ವಿಷ್ಣುವಲ್ಲ. ಎಂಬ ಆಶಂಕೆಯ ಪರಿಹಾರಕ್ಕಾಗಿ 'ಆಕಾಶೋऽರ್ಥಾಂತರತ್ವಾದಿವ್ಯಪದೇಶಾತ್' ಎಂಬ ಸೂತ್ರದಿಂದ ಕೂಡಿರುವ ಆಕಾಶಾಧಿಕರಣವು ಹೊರಟಿದೆ. ಇದರ ಸಾರವನ್ನು ಅಣುಭಾಷ್ಯದಲ್ಲಿ 'ಅನ್ಯಶ್ಚ' ಎಂಬುದರಿಂದ ಸಂಗ್ರಹಿಸಿದ್ದಾರೆ.

**अन्यशब्दोऽर्थान्तरशब्दितविलक्षणार्थवाची । पूर्ववदनुषङ्गः । 'ते यदन्तरा' इति नामरूपे अन्तरा विना यद्वर्तत इति अनामरूपतयोक्तोऽन्यश्च विलक्षणश्च एको जनार्दन एव । न केवलं कम्पकादिरिति चार्थः ।**

ಅನ್ಯಶಬ್ದಕ್ಕೆ ವಿಲಕ್ಷಣ ಎಂದರ್ಥ. ಸೂತ್ರದಲ್ಲಿರುವ ಅರ್ಥಾಂತರ ಶಬ್ದಕ್ಕೆ ವಿಲಕ್ಷಣ ಎಂದೇ ಅರ್ಥ. ಇದನ್ನೇ ಅಣುಭಾಷ್ಯದಲ್ಲಿ 'ಅನ್ಯಃ' ಎಂಬುದರಿಂದ ಸಂಗ್ರಹಿಸಿದ್ದಾರೆ. ಇಲ್ಲಿಯೂ ಕೂಡ 'ತದನ್ಯತ್ರ ಚ ವಾಚಕೈಃ' ಇತ್ಯಾದಿ ಶಬ್ದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ತೇ ಯದಂತರಾ' ಎಂದರೆ ನಾಮರೂಪಗಳಿಂದ ರಹಿತವಾದ ಎಂದರ್ಥ. ನಾಮರೂಪರಾಹಿತ್ಯವೆಂಬ ವೈಲಕ್ಷಣ್ಯವುಳ್ಳವನು ಜನಾರ್ದನನೇ ಆಗಿರುತ್ತಾನೆ. ಹೊರತು, ಆಕಾಶವಲ್ಲ. ಸ್ವಶಬ್ದಕ್ಕೆ ಕೇವಲ ಕಂಪಕಾದಿಗಳಷ್ಟೇ ಅಲ್ಲ, ನಾಮರೂಪಾದಿಗಳಿಂದ ವಿಲಕ್ಷಣನೂ ಆಗಿರುತ್ತಾನೆ, ಎಂಬರ್ಥವು ತಿಳಿಯುತ್ತದೆ.

तत्तस्मात् अन्तरः खवदित्यत्र हरौ लोकतो गगने च प्रयोगात्प्रयोगसाधारण्ये न तत्रान्यत्रापि वाचकतया प्रतीतैराकाशनिर्वहिता यदित्यादिसर्वशब्दैरेको जनार्दन एव वाच्यः । नत्ववकाशः । कुतः अन्यो विष्णु लिङ्गैर्युतो हि । अनामत्वारूपत्वोपलक्षितब्रह्मत्वामृतत्वनामरूपनिर्वहितृत्वलिङ्गैर्युतत्वस्य लोकतोप्रसिद्धत्वेऽपि श्रुतिषु विष्णौ प्रसिद्धेरिति चार्थः । तत्तस्मात् अन्तरः खवदित्त्यत्र हरौ लोकतो गगने च प्रयोगात्प्रयोगसाधारण्येन तत्रान्यत्रापि वाचकतया प्रतीतैराकाशनिर्वहिता यदित्यादिसर्वशब्दैरेको जनार्दन एव वाच्यः । नत्ववकाशः । कुतः । अन्यो विष्णुः लिङ्गैर्युतो हि । अनामत्वारूपत्वोपलक्षितब्रह्मत्वामृतत्वनामरूपनिर्वहितृत्वलिङ्गैः युतत्वस्य लोकतोऽप्रसिद्धत्वेऽपि श्रुतिषु विष्णौ प्रसिद्धेरित्यर्थः । निपातद्वयमपि वैदिकप्रसिद्धत्वेपि विष्णौ सावकाशमिति भावः ।

'ತತ್' ಎಂದರೆ ಆದ್ದರಿಂದ ಎಂದರ್ಥ. 'ಅಂತರಃ ಖವತ್' ಎಂಬಲ್ಲಿ ತೋರಿಸಿದಂತೆ ವಿಷ್ಣುವಿನಲ್ಲಿಯೂ ಲೋಕರೂಢಿಯಿಂದ ಆಕಾಶದಲ್ಲಿಯೂ ಉಭಯತ್ರ ಪ್ರಸಿದ್ಧವಾದ ಆಕಾಶ ಎಂಬ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಅಂದರೆ, ಲೋಕಪ್ರಸಿದ್ಧಿಯಿಂದ ಭೂತಾಕಾಶದಲ್ಲಿ, ಶ್ರುತಿಪ್ರಸಿದ್ಧಿಯಿಂದ ಪರಮಾತ್ಮನಲ್ಲಿ ಪ್ರಸಿದ್ಧವಾದ, ಆದ್ದರಿಂದಲೇ ಉಭಯತ್ರ ಪ್ರಸಿದ್ಧವಾದ ಆಕಾಶವೆಂಬ ಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಲಾಗಿದೆ. ಹೊರತು ಆಕಾಶವು ಆಕಾಶಶಬ್ದದಿಂದ ಪ್ರತಿಪಾದ್ಯವಾಗುವುದಿಲ್ಲ. ಏಕೆಂದರೆ, ಶ್ರುತಿಯಲ್ಲಿರುವ ಲಿಂಗಗಳೆಲ್ಲವೂ ಮಹಾವಿಷ್ಣುವಿನಲ್ಲೇ ಇರುತ್ತವೆ. ಶ್ರುತಿಯಲ್ಲಿ ಅನಾಮತ್ವ, ಅರೂಪತ್ವ, ಬ್ರಹ್ಮತ್ವ, ಅಮೃತತ್ವ, ನಾಮರೂಪನಿರ್ವಹಿತತ್ವ ಮೊದಲಾದ ಲಿಂಗಗಳು ಶ್ರುತವಾಗಿವೆ. ಇವೆಲ್ಲವೂ ಲೋಕರೂಢಿಯಿಂದ ಅನ್ಯತ್ರ ಪ್ರಸಿದ್ಧವಾಗಿದ್ದರೂ, ಶ್ರುತಿಯಲ್ಲಿ ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆ. ಇದನ್ನು 'ಚ' ಶಬ್ದವು ಸೂಚಿಸುತ್ತಿದೆ. 'ವೈ' ಮತ್ತು 'ನಾಮ' ಎಂಬೆರಡು ನಿಪಾತಗಳಿಗೆ ವೈದಿಕಪ್ರಸಿದ್ಧಿಯಿದ್ದರೂ ವಿಷ್ಣುವಿನಲ್ಲಿ ಸಾವಕಾಶವಾಗಿವೆ ಎಂದು ತಿಳಿಸುತ್ತಿವೆ.

जनार्दनेत्यजत्वमोचकत्वयोरूक्त्या अमृतत्वं ब्रह्मत्वं च तस्यैवेति सूचितम् । 'यत्प्रयन्त्यभिसंविशन्तीति । तद्विजिज्ञासस्व । तद्ब्रह्म' इति इत्यादेः ।

अत्र समन्वेययौगिकाकाशशब्दार्थे वाच्येऽप्यर्थान्तरत्वरूपलिङ्गविशेषोक्तिः प्रागुक्ताशया ।। १२ ।।

'ಜನಾರ್ದನ' ಎಂದು ಅಜತ್ವ, ಮೋಚಕತ್ವಗಳನ್ನು ಹೇಳಿರುವ ಕಾರಣ, ಅಮೃತತ್ವ, ಬ್ರಹ್ಮತ್ವ ಇವುಗಳು ವಿಷ್ಣುವಿನ ಧರ್ಮವೆಂದು ಸೂಚಿಸಲ್ಪಟ್ಟಿದೆ. 'ಯತ್ರ ಯಂ ಅಭಿಸಂವಿಶಂತಿ, ತದ್ ವಿಜಿಜ್ಞಾಸಸ್ವ, ತದ್ ಬ್ರಹ್ಮ' ಇತ್ಯಾದಿ ಶ್ರುತಿಗಳಿಂದ ಇವುಗಳು ವಿಷ್ಣುಧರ್ಮಗಳೆಂದು ನಿಶ್ಚಯವಾಗಿದೆ.

ಈ ಅಧಿಕರಣದಲ್ಲಿ ಸಮನ್ವಯ ಮಾಡಬೇಕಾದ, ಯೌಗಿಕವಾದ ಆಕಾಶಶಬ್ದದ ಅರ್ಥವನ್ನು ಸಂಗ್ರಹಿಸುವ ಆಕಾಶಶಬ್ದವನ್ನು ಅಣುಭಾಷ್ಯದಲ್ಲಿ ಹೇಳಬೇಕಾಗಿತ್ತು. ಆದರೂ ಸಹ ಅರ್ಥಾಂತರತ್ವ ಎಂಬ ವಿಲಕ್ಷಣ ಧರ್ಮವನ್ನು ಪಡೆದಿದ್ದಾನೆ ಎಂಬರ್ಥವನ್ನು ಹೇಳುವಂತಹ, 'ಅನ್ಯಃ' ಎಂಬ ಪದವನ್ನೇಕೆ ಹೇಳಿದ್ದಾರೆಂದರೆ, ಈ ಹಿಂದೆ ಹೇಳಿದಂತೆ, ಸಮನ್ವಯಕ್ಕೆ ಅನುಕೂಲವಾದ ನಿರಪೇಕ್ಷ ಹೇತುವನ್ನು ಹೇಳುವ ಮೂಲಕ ಸೂತ್ರದಲ್ಲಿ ಉಲ್ಲೇಖಿಸಿದ ಹೇತುವನ್ನು ಸಂಗ್ರಹಿಸುವುದಕ್ಕಾಗಿ ಎಂದು ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಮುಗಿಯಿತು.

* * *

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## आकाशाधिकरणम् (१।३।१२)

।। ॐ आकाशोऽर्थान्तरत्वादिव्यपदेशात् ॐ ।। १-३-४१।।

अत्राकाशनाम समन्वीयते । "आकाशो वै नाम नामरूपयोर्निर्वहिता" इत्युक्ताकाशस्तत्तु ब्रह्मैव । न त्वव्याकृताकाशः । कुतः ? अर्थान्तरत्वादिव्यपदेशात्। अन्योऽर्थोऽर्थान्तरम् । विलक्षणोऽर्थः । तस्य भावः । नामरूपराहित्यरूपविलक्षणार्थत्वव्यपदेशात् आदिपदाद् ब्रह्मत्वामृतत्वव्यपदेशादित्यर्थः । अर्थान्तरत्वमात्रोक्तावपि "नामरूपयोर्निर्वहिता ते यदन्तरा तद्ब्रह्म तदमृतम्" (१५२) इति विषयवाक्ये सन्निहितत्वात् अनामरूपत्वरूपविशेषसिद्धिः । यद्वाऽर्थान्तरत्वमरूपत्वं आदिपदेनामत्वं ग्राह्यम् । प्राकृतरूपराहित्यात् साकल्येन शब्दागोचरत्वरूपानामत्वाचेत्यर्थः । निरपेक्षहेतुत्वं सूचयितुं पृथगुक्तिः । श्रुतावनामत्वस्यादित्वेऽप्यरूपत्वोक्तिर्नाम्नोऽर्थसापेक्षत्वात् ।।१३।।

ಈ ಅಧಿಕರಣದಲ್ಲಿ 'ಆಕಾಶ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡುತ್ತಿದ್ದಾರೆ. 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಆಕಾಶವು 'ತತ್ತು = ಬ್ರಹ್ಮನೇ ಆಗಿದ್ದಾನೆ. ಹೊರತು, ಅವ್ಯಾಕೃತಾಕಾಶವಲ್ಲ. ಏಕೆಂದರೆ, ಅರ್ಥಾಂತರತ್ವಾದಿವ್ಯಪದೇಶಾತ್ = ಅನ್ಯವಾದ ಅರ್ಥವೇ ಅರ್ಥಾಂತರ ಎನಿಸುತ್ತದೆ. ವಿಲಕ್ಷಣವಾದ ಪದಾರ್ಥ ಎಂದರ್ಥ. ಅದರ ಧರ್ಮವು ಅರ್ಥಾಂತರತ್ವ ಎನಿಸಿದೆ. ನಾಮರೂಪರಾಹಿತ್ಯವೆಂಬ

ವಿಲಕ್ಷಣ ಧರ್ಮವನ್ನು ಹೇಳಿರುವುದರಿಂದ. ಆದಿಪದದಿಂದ ಬ್ರಹ್ಮತ್ವ, ಅಮೃತತ್ವಗಳನ್ನು ಹೇಳಿರುವುದರಿಂದಲೂ ಆಕಾಶನು ಮಹಾವಿಷ್ಣುವೇ ಆಗಿದ್ದಾನೆ ಎಂದು ಸೂತ್ರಾರ್ಥ.

ಸೂತ್ರದಲ್ಲಿ ಅರ್ಥಾಂತರತ್ವವೆಂದಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು. 'ನಾಮರೂಪಯೋ-ರ್ನಿರ್ವಹಿತಾ ತೇ ಯದಂತರಾ ತದ್ ಬ್ರಹ್ಮ ತದಮೃತಮ್' ಎಂಬ ವಿಷಯವಾಕ್ಯದಲ್ಲಿ ಸನ್ನಿಹಿತವಾದ್ದರಿಂದ ನಾಮ-ರೂಪರಾಹಿತ್ಯವೆಂಬ ವಿಶೇಷ ಧರ್ಮವು ತಿಳಿದು ಬರುತ್ತದೆ. ಅಥವಾ, 'ಅರ್ಥಾಂತರತ್ವ' ಎಂದರೆ 'ರೂಪರಾಹಿತ್ಯ' ಎಂದರ್ಥ. ಆದಿಪದದಿಂದ ನಾಮರಾಹಿತ್ಯವನ್ನೂ ಕೂಡ ಇಟ್ಟುಕೊಳ್ಳಬೇಕು. ಪ್ರಾಕೃತವಾದ ರೂಪರಾಹಿತ್ಯದಿಂದ ಸಂಪೂರ್ಣವಾಗಿ ಶಬ್ದಗಳಿಗೆ ಗೋಚರನಾಗದಿರುವಿಕೆ ಎಂಬ ನಾಮರಾಹಿತ್ಯದಿಂದ ಎಂದರ್ಥ. ನಾಮರಾಹಿತ್ಯ ಹಾಗೂ ರೂಪರಾಹಿತ್ಯಗಳೆರಡು ಪರಸ್ಪರ ಒಂದನ್ನೊಂದು ಅಪೇಕ್ಷೆ ಪಡದೆ, ಆಕಾಶಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸುತ್ತಿವೆ. ಆದ್ದರಿಂದ, ಇವುಗಳನ್ನು ಸೂತ್ರದಲ್ಲಿ ಪ್ರತ್ಯೇಕವಾಗಿ ಹೇಳಿರುತ್ತಾರೆ. ಶ್ರುತಿಯಲ್ಲಿ ನಾಮರಾಹಿತ್ಯವನ್ನು ಮೊದಲೇ ಹೇಳಿದ್ದರೂ ಕೂಡ ನಾಮವು ಅರ್ಥವನ್ನು ಅಪೇಕ್ಷೆ ಪಡುವ ಕಾರಣ ಸೂತ್ರದಲ್ಲಿ ರೂಪರಾಹಿತ್ಯವನ್ನು ಮೊದಲು ಹೇಳಿರುತ್ತಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## आकाशाधिकरणम् (१।३।१२)

।। ॐ आकाशोऽर्थान्तरत्वादिव्यपदेशात् ॐ ।। १२ ।।

अत्र ''बहिष्कुलायादमृतश्चरित्व'' इति (बृ.६-३-१२) पूर्वज्योतिषि श्रुतामृतत्वस्य इहाकाशे ''तदमृतम्'' इति श्रवणात् तस्य च अन्यत्वात् पूर्वोक्तमपि अन्यदित्याक्षेपात् आक्षेपिकी सङ्गतिः ।

'ಬಹಿಷ್ಕುಲಾಯದಮೃತಶ್ಚರಿತ್ವಾ' ಎಂಬ ಬೃಹದಾರಣ್ಯಕದ ಮಾತಿನಿಂದ ಜ್ಯೋತಿಯು ಅಮೃತವಾಗಿದೆಯೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಯಿತು. ಅದೇ ಅಮೃತತ್ವವನ್ನು 'ತದಮೃತಮ್' ಎಂಬುದಾಗಿ ಆಕಾಶದಲ್ಲಿಯೂ ಕೂಡ ಶ್ರುತಿಯು ಹೇಳುತ್ತಿದೆ. ಒಂದು ವೇಳೆ ಆಕಾಶಶಬ್ದಪ್ರತಿಪಾದ್ಯವಾದದ್ದು, ಬೇರೆ ಪದಾರ್ಥವಾದಲ್ಲಿ, ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಜ್ಯೋತಿಯೂ ಕೂಡ ಬೇರೆ ಪದಾರ್ಥವೇ ಆಗುತ್ತದೆ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡಿ ಈ ಅಧಿಕರಣವು ಹೊರಟಿರುವುದರಿಂದ ಆಕ್ಷೇಪಿಕೀಸಂಗತಿಯಿರುತ್ತದೆಂದು ತಿಳಿಯಬೇಕು.

**छान्दोग्ये ''आकाशो वै नाम नामरूपयोर्निर्वहिता ते यदन्तरा तद्ब्रह्म तदमृतम्'' इत्यन्तिमखण्डे (छां. ८-१४-१) श्रुताकाशः किं प्रसिद्धाव्याकृताकाशः किं वा ब्रह्मेति सन्देहः ।**

ಛಾಂದ್ಯೋಗ್ಯದ ಎಂಟನೇ ಅಧ್ಯಾಯದಲ್ಲಿ 'ಆಕಾಶೋ ವೈ ನಾಮ ನಾಮರೂಪಯೋ-ರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಮ್' ಎಂಬ ವಾಕ್ಯವು ಶ್ರುತವಾಗಿದೆ. ಇದೇ ಈ ಅಧಿಕರಣದ ವಿಷಯವೆಂದು ತಿಳಿಯಬೇಕು. ಇಲ್ಲಿರುವ ಆಕಾಶವು ಪ್ರಸಿದ್ಧವಾದ ಅವ್ಯಾಕೃತಾಕಾಶವನ್ನು ಪ್ರತಿಪಾದನೆ ಮಾಡುತ್ತದೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತದೋ ? ಎಂಬುದೇ ಸಂದೇಹ.

**पूर्वपक्षस्तु वै नामेति निपातद्वयस्य प्रसिद्धार्थत्वात् तस्य च ''आकाशो वै नाम'' प्रसिद्धः खल्वाकाशः ''नामरूपयोर्निर्वहित'' इति उद्देशान्वये आकाशो नामरूपयोर्निर्वहिता, वै नाम तस्य नामरूपनिर्वोढृत्वं प्रसिद्धमिति विधेयान्वये वा द्वेधापि स्वरूपेण नामरूपावकाशदानात् तन्निर्वाहकतया च लोके अवकाश एव प्रसिद्धेः ईशे अप्रसिद्धेः अवकाश एवऽयमाकाश इति ।।**

ಪೂರ್ವಪಕ್ಷ ಹೀಗಿದೆ - ಶ್ರುತಿಯಲ್ಲಿ 'ವೈ ನಾಮ' ಎಂಬೆರಡು ನಿಪಾತಗಳು ಪ್ರಸಿದ್ಧವಾದ ಅರ್ಥವನ್ನು ಸೂಚನೆ ಮಾಡುತ್ತಿವೆ. 'ಆಕಾಶೋ ವೈ ನಾಮ' ಎಂಬಲ್ಲಿ ಹೇಳಲ್ಪಟ್ಟ ಪ್ರಸಿದ್ಧವಾದ ಆಕಾಶವೆಂದರೆ ಭೂತಾಕಾಶವೇ ಆಗಬೇಕು. ಏಕೆಂದರೆ 'ನಾಮರೂಪಯೋರ್ನಿರ್ವಹಿತಾ' ಎಂಬಲ್ಲಿ ಉದ್ದೇಶದ ಜೊತೆಗೆ ನಿಪಾತದ್ವಯಗಳಿಗೆ ಅನ್ವಯ ಮಾಡಿದರೆ, ಆಕಾಶವೇ ನಾಮರೂಪಗಳಿಗೆ ನಿರ್ವಾಹಕವೆಂದು ಸಿದ್ಧವಾಗುತ್ತದೆ. ನಾಮರೂಪನಿರ್ವೋಢೃತ್ವವು ಪ್ರಸಿದ್ಧವಾಗಿದೆಯೆಂದು

ವಿಧೇಯದಲ್ಲಿಯೂ ಅನ್ವಯ ಮಾಡಬಹುದು. ಎರಡು ಬಗೆಯ ಅನ್ವಯಗಳಲ್ಲಿಯೂ ಕೂಡ ನಾಮರೂಪಅವಕಾಶಪ್ರಧಾನವು ಯುಕ್ತವಾಗುವುದರಿಂದ ಭೂತಾಕಾಶದಲ್ಲೇ ಆಕಾಶಶಬ್ದ-ಪ್ರತಿಪಾದ್ಯತ್ವವು ಯುಕ್ತವಾಗುತ್ತದೆ. ಏಕೆಂದರೆ ನಾಮರೂಪ ಅವಕಾಶಪ್ರದಾನವು ಭೂತಾಕಾಶದಲ್ಲೇ ಪ್ರಸಿದ್ಧವಾಗಿದೆ ಹೊರತು, ಈಶನಲ್ಲಲ್ಲ.

सिद्धान्तस्तु – ''ते यदन्तरा'' इति वाक्ये ते नामरूपे विना यदस्तीत्युक्तस्य कात्स्न्येन शब्दागोचरत्वादिरूपानामत्वस्य तथा निर्वाह्यतया प्रकृतप्राकृत-रूपराहित्यस्य च लिङ्गस्य ''यतो वाचो निवर्तन्ते'' (तै.२-४) ''अरूपमस्पर्शं'' (का.३-१५) इत्यादिश्रुतिभिः ''अनामा सोऽप्रसिद्धत्वात् अरूपो भूतवर्जनात्'' (ब्राह्म पू.) इत्यादिस्मृत्या च विष्ण्वेकधर्मत्वात् तद्ब्रह्मेत्युक्तब्रह्मशब्दात् तदमृतमित्युक्तामृत्वलिङ्गाच्च साधकसत्त्वात् प्रसिद्धार्थकनिपातद्वयस्य च ''आकाश इति होवाच'' इति श्रुतौ (छा. १-९-१) स्वरूपेण ''एको दाधार भुवनानि विश्वा'' इत्यादिश्रुतौ (ऋ.सं. १-१५४-४) नामरूपनिर्वोढृत्वेन च विष्णौ प्रसिद्धत्वात् वेदप्रसिद्धेः अन्तरङ्गताया वेदे ग्राह्यत्वेनाबाधकत्वात् अयमाकाशो विष्णुरेवेति ॥

ಸಿದ್ಧಾಂತ ಹೀಗಿದೆ - 'ತೇ ಯದಂತರಾ' ಎಂಬ ವಾಕ್ಯದಲ್ಲಿ ನಾಮರಾಹಿತ್ಯ ಹಾಗೂ ರೂಪರಾಹಿತ್ಯ ಎಂಬ ಎರಡು ಧರ್ಮಗಳು ಉಕ್ತವಾಗಿವೆ. ನಾಮರಾಹಿತ್ಯವೆಂದರೆ ಸಕಲ ಶಬ್ದಗಳಿಂದ ಗಮ್ಯನಾಗುವುದಿಲ್ಲ ಎಂದರ್ಥ. ರೂಪರಾಹಿತ್ಯವೆಂದರೆ ಪ್ರಾಕೃತರೂಪಗಳಿಂದ ರಹಿತನಾಗಿದ್ದಾನೆ ಎಂದರ್ಥ. ಈ ಎರಡು ಲಿಂಗಗಳು ವಿಷ್ಣುವಿನಲ್ಲಿ ಮಾತ್ರ ಯುಕ್ತವಾಗುತ್ತವೆ. ಏಕೆಂದರೆ 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಸಾಕಲ್ಯೇನ ಶಬ್ದ ಅಗೋಚರನಾಗಿದ್ದಾನೆಂದು ಪರಮಾತ್ಮನನ್ನು ಕುರಿತು ಹೇಳುತ್ತಿದೆ. 'ಅರೂಪಮಸ್ಪರ್ಶಂ' ಇತ್ಯಾದಿ ಶ್ರುತಿಯು ಪ್ರಾಕೃತರೂಪ ರಹಿತನಾಗಿದ್ದಾನೆಂದು ಹೇಳುತ್ತಿದೆ. ಮತ್ತು 'ಅನಾಮಾ ಸೋಽಪ್ರಸಿದ್ಧತ್ವಾತ್ ಅರೂಪೋ ಭೂತವರ್ಜನಾತ್' ಎಂಬ ಸ್ಮೃತಿಯು ನಾಮರಾಹಿತ್ಯ ಹಾಗೂ ರೂಪರಾಹಿತ್ಯಗಳೆರಡೂ ವಿಷ್ಣುವಿನ ಧರ್ಮವಾಗಿವೆಯೆಂದು ಸ್ಪಷ್ಟಪಡಿಸುತ್ತಿವೆ. ಅಷ್ಟೇ ಅಲ್ಲದೇ, 'ತದ್ಬ್ರಹ್ಮ' ಎಂಬುದಾಗಿ ಬ್ರಹ್ಮಶಬ್ದದ ಜೊತೆಗೆ ನಾಮರಾಹಿತ್ಯ ರೂಪರಾಹಿತ್ಯಗಳನ್ನು ಹೇಳಿದ್ದರಿಂದ ವಿಷ್ಣುವಿನ ಧರ್ಮವೇ ವಿಷ್ಣುವಿನ ಧರ್ಮವೆಂದು ಸಿದ್ಧವಾಗುತ್ತದೆ. 'ತದಮೃತಂ' ಎಂಬುದಾಗಿ 'ಅಮೃತತ್ವ' ಲಿಂಗವೂ ಕೂಡ ಇದೇ ವಿಷಯದಲ್ಲಿ ಸಾಧಕವಾಗಿದೆ.

ಇನ್ನು ಪ್ರಸಿದ್ಧಾರ್ಥಕವಾದ ನಿಪಾತದ್ವಯಗಳಿಗೆ 'ಆಕಾಶ ಇತಿ ಹೋವಾಚ' ಎಂಬ ಶ್ರುತಿಯಲ್ಲಿ ಸ್ವರೂಪತಃ ಪ್ರಸಿದ್ಧವಾಗಿದೆಯೆಂದು, 'ಏಕೋ ದಾಧಾರ ಭುವನಾನಿ ವಿಶ್ವಾ' ಇತ್ಯಾದಿ ಶ್ರುತಿಯಲ್ಲಿ

ನಾಮರೂಪನಿರ್ವಾಹಕವಾಗಿ ವಿಷ್ಣು ಪ್ರಸಿದ್ಧನಾಗಿದ್ದಾನೆಂದು ಕೂಡಿಸಬೇಕು. ನಿಪಾತದ್ವಯಗಳು ಪ್ರಸಿದ್ಧಿಯನ್ನಷ್ಟೇ ಹೇಳುತ್ತಿವೆ ಹೊರತು, ಲೋಕಪ್ರಸಿದ್ಧವೆಂದಾಗಲೀ, ವೈದಿಕಪ್ರಸಿದ್ಧವೆಂದಾಗಲೀ ಸ್ಪಷ್ಟವಾಗಿ ಹೇಳುತ್ತಿಲ್ಲ. ಲೌಕಿಕಪ್ರಸಿದ್ಧಿ ಹಾಗೂ ವೈದಿಕಪ್ರಸಿದ್ಧಿಗಳಲ್ಲಿ ವೈದಿಕಪ್ರಸಿದ್ಧಿ ಅಂತರಂಗ-ವಾದ್ದರಿಂದ, ವೇದದಿಂದ ನಾಮರೂಪನಿರ್ವೋಢೃತ್ವೇನ ಪ್ರಸಿದ್ಧನಾದವನು ಪರಮಾತ್ಮನೇ ಆಗಿದ್ದಾನೆ ಆದ್ದರಿಂದ ಅವನನ್ನೇ ಇಲ್ಲಿ ಸ್ವೀಕರಿಸಬೇಕು. ಆದ್ದರಿಂದ ಆಕಾಶಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ.

**फलं तु नामरूपनिर्वोढृत्वाख्यसर्वाधारत्वमुखेन द्युभ्वादिनयाक्षेपः तत्समाधिश्च।। तल्लिङ्गादित्यत्र अनवकाशलिङ्गेन लोकरूढित्यागोक्तावपीह वै नामेत्याभ्यां विशेषशङ्कया पुनरारम्भः ।। १२ ।।**

ನಾಮರೂಪನಿರ್ವೋಢೃತ್ವವೆಂಬ ಸರ್ವಾಧಾರತ್ವದ ಮೂಲಕ ದ್ಯುಭ್ವಾದ್ಯಧಿಕರಣವನ್ನು ಆಕ್ಷೇಪ ಮಾಡುವುದೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ. 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಅನವಕಾಶವೆಂಬ ಲಿಂಗದಿಂದ ಲೌಕಿಕರೂಢಿಯನ್ನು ತ್ಯಾಗಮಾಡಬೇಕೆಂದು ಹೇಳಿದ್ದರು, ಪ್ರಕೃತ ಈ ಅಧಿಕರಣದಲ್ಲಿ 'ವೈ ನಾಮ' ಎಂಬೆರಡು ನಿಪಾತಗಳಿಂದ ಪುನಃ ವಿಶೇಷವಾಗಿ ಆಕ್ಷೇಪ ಮಾಡಿರುವ ಕಾರಣ, ಪ್ರಥಮ ಪಾದದಲ್ಲಿ ಪ್ರಸಕ್ತವಾಗಿದ್ದರೂ ಪುನಃ ಇಲ್ಲಿ ಅದೇ ಆಕಾಶಶಬ್ದವನ್ನು ಸಮನ್ವಯ ಮಾಡಿದ್ದು ವ್ಯರ್ಥವಲ್ಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಆಕಾಶಾಧಿಕರಣವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# सूत्रार्थरत्नावळिः

## आकाशाधिकरणम् (१।३।१२)

अत्रोभयत्रप्रसिद्धमाकाशनाम ब्रह्मणि समन्वीयते ।

**ॐ।। आकाशोऽर्थान्तरत्वादिव्यपदेशात् ।।ॐ १-३-४१**

ननु 'अयमाकाशो वै नाम' (छां. ८-१४-१) इत्यत्राकाशः प्रसिद्धाकाश एव स्यात् । तच्छब्दस्याकाशे रूढत्वात् । विष्णौ च यौगिकत्वात् । योगस्य रूढेर्बलवत्वात् । प्रसिद्धाकाशपरित्यागेन सर्वाधारत्वलिङ्गेन विष्णुग्रहणे 'वै नाम' इत्युक्तनिपातद्वयविरोधसद्भावात् । नामरूपनिर्वाहकत्वमात्रस्याकाशपक्षे प्रसिद्धत्वान्निपातविरोधसाम्याभावात् । विष्णुपक्षे विष्णुस्तन्निर्वाहकत्वं चेति द्वयमप्यप्रसिद्धम् । आकाशपक्षे तु तन्निर्वाहकत्वमात्रप्रसिद्धमिति वैषम्यात् । नामरूपनिर्वाहकत्वलिङ्गं त्वाकाशस्योपादानत्वात् सम्भावितं नतु विष्णोरिति प्राप्ते, सूत्रमाह –

ॐ।। आकाशोऽर्थान्तरत्वादिव्यपदेशादिति ।। अस्यार्थः – 'आकाशो ह वै नाम' इति श्रुत्युक्ताकाशो विष्णुरेव । नत्वव्याकृताकाशः । कुतः? अर्थान्तरत्वादिव्यपदेशात् । ते यदन्तरेति (बृ. ८-१४-१) वाक्ये विष्णोर्नामरूपराहित्याख्यविलक्षणार्थत्वस्यादिशब्दगृहीतब्रह्मत्वामृतत्वयोश्च उक्तत्वादित्यर्थः ।

एवञ्च उक्तहेतुद्वयसद्भावात् । अनामरूपत्वस्य तल्लक्षणत्वेन 'अवर्णम्' इति (आथर्वणी.) श्रुतिसिद्धत्वात् 'एको दाधार' (ऋ. १-१५४-४) इत्यप्रसिद्धत्वाभावेन निपातद्वयाविरोधात्। लोकप्रसिद्ध्यपेक्षया श्रुतिप्रसिद्धेः प्राबल्येन तस्या एव ग्राह्यत्वात् । प्रत्युताकाशस्य नामरूपत्वेनाकाशग्रहण एव विरोधः । ततश्चाकाशो विष्णुरेवेति तस्यैव सर्वाधारत्वमिति सिद्धम् ।।*।।

।। इति सूत्रार्थरत्नावळ्यां आकाशाधिकरणम् ।।

# ಸುಷುಪ್ತ್ಯಧಿಕರಣ

(೧-೩-೧೩)

---

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

---

॥ ಶ್ರೀಗುರುಭ್ಯೋ ನಮಃ ॥

# ಸುಷುಪ್ತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ

ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಸರ್ವಜ್ಞನಾದ ಪರಮಾತ್ಮನೇ ಸ್ವಪ್ನಾದಿದ್ರಷ್ಟಾ

**।। अथ सुषुप्त्यधिकरणम् ।।**

**सू – ॥ ॐ सुषुप्त्युत्क्रान्त्योर्भेदेन ॐ ॥ ३३ ॥**

ಸೂತ್ರಾರ್ಥ - 'ತ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತಃ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿರುವ ಸ್ವಪ್ನಾದಿದ್ರಷ್ಟೃವು ಬ್ರಹ್ಮನೇ ಆಗಿದ್ದಾನೆ ಹೊರತು ಜೀವನಲ್ಲ. ಏಕೆಂದರೆ 'ಅಸಂಗೋ ಹ್ಯಯಂ ಪುರುಷಃ' ಎಂಬುದಾಗಿ ಅಸಂಗತ್ವವನ್ನು ಹೇಳಿರುವುದರಿಂದ ಜೀವಬ್ರಹ್ಮರಿಗೆ ಭೇದವಿರುವುದರಿಂದ ಜೀವನಲ್ಲೂ ಕೂಡ ಅಸಂಗತ್ವವನ್ನು ಹೇಳಬಹುದಲ್ಲವೆ? ಎಂದು ಪ್ರಶ್ನಿಸಬಾರದು. 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬುದಾಗಿ 'ಪ್ರಾಜ್ಞೇನಾತ್ಮನಾನ್ವಾರೂಢಃ' ಎಂಬುದಾಗಿಯೂ ಜೀವ ಬ್ರಹ್ಮರ ಭೇದವನ್ನು ಹೇಳಿರುವುದರಿಂದ ಅವರಿಬ್ಬರಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ

ಸುಷುಪ್ತ್ಯಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

सूत्रदीपिका — 'स यत्तत्र किञ्चित् पश्यति' इति श्रुत्युक्तस्वप्नादिद्रष्टा परमात्मैव । न जीवः । कुतः 'असङ्गो ह्यं पुरुषः' इत्युक्तासङ्गत्वलिङ्गादिति हेतुर्वहिरेवाध्याहार्यः । नन्वीश्वराभेदेन जीवेऽप्यसङ्गत्वोक्तिः सम्भवतीत्यत उक्तम् । सुषुप्तीत्यादि । तथा च सुषुप्त्युत्क्रान्त्योः 'प्राज्ञेनात्मना सम्परिष्वक्तः' इति 'प्राज्ञेनात्मनाऽन्वारूढः' इति च सुषुप्त्युक्रान्तिप्रकरणयोः । भेदेन जीवेशयोर्भिन्नत्वेनोक्तेः । न तयोरैक्यमित्यर्थः ।।१।।

ಅರ್ಥ --'ಸ ಯತ್ತತ್ರ ಕಿಂಚಿತ್ ಪಶ್ಯತಿ' ಎಂಬ ಶ್ರುತಿಯಲ್ಲಿ ಉಕ್ತವಾದ ಸ್ವಪ್ನಾದಿದ್ರಷ್ಟೃವು ಪರಮಾತ್ಮನೇ ಆಗಿದ್ದಾನೆ ಹೊರತು ಜೀವನಲ್ಲ. ಏಕೆಂದರೆ 'ಅಸಂಗೋ ಹ್ಯಯಂ ಪುರುಷಃ' ಎಂಬಲ್ಲಿ ಅಸಂಗತ್ವ ಮೊದಲಾದ ಲಿಂಗಗಳನ್ನು ಹೇಳಿರುವುದರಿಂದ ಈ ಹೇತುಗಳನ್ನು ಸೂತ್ರದಲ್ಲಿ ಶೇಷಪೂರಣಮಾಡಿಕೊಳ್ಳಬೇಕು. ಈಶ್ವರನಿಗೆ ಜೀವನಿಂದ ಅಭೇದವಿರುವದರಿಂದ, ಜೀವನಲ್ಲೂ ಅಸಂಗತ್ವಲಿಂಗ ಬರುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಸುಷುಪ್ತ್ಯುತ್ಕ್ರಾಂತ್ಯೋಃ' = 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ಸುಷುಪ್ತಿಪ್ರಕರಣದಲ್ಲಿ 'ಪ್ರಾಜ್ಞೇನಾತ್ಮನಾನ್ವಾರೂಢಃ' ಎಂಬ ಉತ್ಕ್ರಾಂತಿ ಪ್ರಕರಣದಲ್ಲಿ ಭೇದೇನ = ಜೀವೇಶ್ವರರಿಗೆ ಭೇದವನ್ನು ಹೇಳಿರುವುದರಿಂದ ಭೇದವನ್ನು ಹೇಳಲಾಗದು.

॥ ಸೂತ್ರದೀಪಿಕೆಯಲ್ಲಿ ಸಷುಪ್ತ್ಯಧಿಕರಣವು ಸಮಾಪ್ತವಾಯಿತು ॥

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् — असङ्गत्वं परमात्मन उक्तम् । तच 'स तत्तत्र किञ्चित्पश्यत्यनन्वागतस्तेन भवत्यसङ्गो ह्ययं पुरुष' (बृ. उ. ६-३-१५) इति स्वप्नादिद्रष्टुः प्रतीयते।**

ಅನುವಾದ - ಪರಮಾತ್ಮನು ಅಸಂಗನಾಗಿದ್ದಾನೆಂದು ಅಕ್ಷರಾಧಿಕರಣದಲ್ಲಿ ಸಮರ್ಥಿಸಲಾಯಿತು. ಆದರೆ, ಅದೇ ಅಸಂಗತ್ವವನ್ನು ಬೃಹದಾರಣ್ಯಕೋಪನಿಷತ್ತು 'ಸ ಯತ್ತತ್ರ ಕಿಂಚಿತ್ ಪಶ್ಯತಿ'

ಇತ್ಯಾದಿಯಾಗಿ ಸ್ವಪ್ನದ್ರಷ್ಟೃವಿಗೆ ಹೇಳುತ್ತಿದೆ. ಸ್ವಪ್ನದ್ರಷ್ಟೃವು ಜೀವನೇ ಆಗಿದ್ದಾನೆಂದು ಪ್ರಸಿದ್ಧವಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಮೊದಲು ಶ್ರುತ್ಯಾದಿ ಸಂಗತಿ ಮತ್ತು ವಿಷಯಾದಿಗಳನ್ನು ಸೂಚಿಸುತ್ತಿದ್ದಾರೆ –

ಪರಮಾತ್ಮನಃ = ಮಹಾವಿಷ್ಣುವಿಗೆ, ಅಸಂಗತ್ವಂ = ಅಸಂಗತ್ವವನ್ನು, ಉಕ್ತಂ = ಅಕ್ಷರಾಧಿಕರಣದಲ್ಲಿ ಹೇಳಲಾಯಿತು. ತಚ್ಚ = ಅದೇ ಅಸಂಗತ್ವವು, ಬೃಹದಾರಣ್ಯಕೋಪನಿಷತ್ತು ಬೇರೆಯವರಲ್ಲಿ ಹೇಳಿದೆ. ಸಃ = ಆ ಪುರುಷನು, ತತ್ರ = ಸ್ವಪ್ನಾವಸ್ಥೆಯಲ್ಲಿ, ಕಿಂಚಿತ್ ಪಶ್ಯತಿ = ಏನನ್ನು ನೋಡುತ್ತಾನೋ, ತೇನ = ಆ ಸ್ವಪ್ನದರ್ಶನದಿಂದ, ಅನನ್ವಾಗತಃ = ದುಃಖದಿಂದ ಅಸಂಸ್ಪೃಷ್ಟನಾಗಿ, ಭವತಿ = ಇರುತ್ತಾನೆ. ಏಕೆಂದರೆ, ಅಯಂ = ಈ, ಪುರುಷಃ = ಪುರುಷನು, ಅಸಂಗಃ = ಪುಣ್ಯಪಾಪಸಂಪರ್ಕರಹಿತನು. ಇತಿ = ಹೀಗೆ, ಪ್ರತೀಯತೇ = ಅಸಂಗತ್ವವನ್ನು ಹೇಳಿದ್ದು ಕಾಣಿಸುತ್ತಿದೆ.(१)

**भाष्यम् – स च जीवः प्रसिद्धेरित्यत आह (वक्ति) -**

**॥ ॐ सुषुप्त्युत्क्रान्त्योर्भेदेन ॐ ॥४२॥**

ಅನುವಾದ - ಆ ತತ್ವದ್ರಷ್ಟೃವು ಜೀವನೇ ಆಗಿದ್ದಾನೆಂದು ಲೋಕಪ್ರಸಿದ್ಧವಾಗಿದೆ.

ಪ್ರತಿಪದಾರ್ಥ -- ಸ್ವಪ್ನದ್ರಷ್ಟೃವು ಅಸಂಗನಾದ ಮಾತ್ರಕ್ಕೆ ಏನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ ಪೂರ್ವಪಕ್ಷವನ್ನು ದೃಢಪಡಿಸುತ್ತಿದ್ದಾರೆ. ಸಃ = ಆ ತತ್ವದ್ರಷ್ಟೃವು, ಚ ಜೀವಃ = ಜೀವನೇ ಆಗಿದ್ದಾನೆ. ಏಕೆಂದರೆ, ಪ್ರಸಿದ್ಧೇಃ =ಲೋಕಪ್ರಸಿದ್ಧಿಯಿರುವುದರಿಂದ, ಇತಿ = ಇಷ್ಟು ಪೂರ್ವಪಕ್ಷ.(२)

---

(१) **भाष्यदीपिका** – अत्राधिकरणे स्वप्नादिद्रष्टृत्वलिङ्गं ब्रह्मणि समन्वीयते । श्रुत्यादिसङ्गतिं विषयादिकं च सूचयति – **असङ्गत्वमिति** ।। अक्षरनयोदाहृते **'अगन्धमरसम्'** इति वाजसनेयवाक्ये परमात्मनो असङ्गत्वमुक्तमित्यर्थः । ततः किमित्यत आह – **तच्चेति** ।। चोऽवधारणे । इतीति एवंरूपे वाजसनेयवाक्य इत्यर्थः । अनेन स्वप्नादिद्रष्टृत्वस्यान्य-निष्ठत्वाक्षेपमुखेन पूर्वोक्तासङ्गत्वस्याप्यन्यनिष्ठत्वाक्षेपात्, अक्षरनयेनास्याऽक्षेपिकी सङ्गतिः सूचिता । स्वप्नादिद्रष्टृत्वाख्यो विषयश्च सूचितः ।

(२) **भाष्यदीपिका** – ततः किमित्यतः सयुक्तिकं पूर्वपक्षयति – **स चेति** ।। चोऽवधारणे । 'सः' स्वप्नादिद्रष्टा । जीव एव भवेत् । कुतः ? तद्द्रष्टृत्वस्य लोके जीव एव

**भाष्यम् – 'प्राज्ञेनाऽऽत्मनाऽन्वारूढ उत्सर्जयाति' (बृ. उ.६-३-३६) इति भेदव्यपदेशान्न जीवः, पर एवासङ्गः ।**

ಅನುವಾದ - ಈ ಆಕ್ಷೇಪಕ್ಕೆ ಪರಿಹಾರ ನೀಡಲು ಸೂತ್ರಕಾರರು ಉತ್ತರಿಸಿದ್ದಾರೆ. 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಇತ್ಯಾದಿ ಸುಷುಪ್ತಿ ಪ್ರಕರಣದಲ್ಲಿ ಮತ್ತು, 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಇತ್ಯಾದಿ ಉತ್ಕ್ರಾಂತಿ ಪ್ರಕರಣದಲ್ಲಿ ಜೀವ ಮತ್ತು ಪರಮಾತ್ಮನಿಗೆ ಭೇದವನ್ನು ಹೇಳಲಾಗಿದೆ. ಆದ್ದರಿಂದ, ವಿಷಯವಾಕ್ಯದಲ್ಲಿ ಹೇಳಿರುವ ಅಸಂಗಪುರುಷನು ಜೀವನಲ್ಲ, ಹೊರತು ಪರಮಾತ್ಮನೇ ಆಗಿದ್ದಾನೆ.

ಪ್ರತಿಪದಾರ್ಥ -- ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ - ಪ್ರಾಜ್ಞೇನ ಆತ್ಮನಾ = ಪ್ರಾಜ್ಞನಾಮಕನಾದ ಪರಮಾತ್ಮನಿಂದ, ಸಂಪರಿಷ್ವಕ್ತಃ = ಆಲಿಂಗಿತನಾಗಿ, ಬಾಹ್ಯಂ = ದೇಹದಿಂದ ಬಾಹ್ಯವಾದ, ಆಂತರಂ = ದೇಹದ ಒಳಗಿರುವ ಯಾವುದೇ ವಿಷಯಗಳನ್ನು, ನ ವೇದ = ತಿಳಿಯಲಾರ ಎಂದು, ಮತ್ತು ಪ್ರಾಜ್ಞೇನ ಆತ್ಮನಾ = ಪ್ರಾಜ್ಞನಾಮಕನಾದ ಪರಮಾತ್ಮನಿಂದ, ಅನ್ವಾರೂಢಃ = ಹೊತ್ತುಕೊಂಡವನಾಗಿ, ಉತ್ಸರ್ಜದ್ = ದೇಹವನ್ನು ಬಿಟ್ಟು, ಯಾತಿ = ಹೊರಡುತ್ತಾನೆ. ಇತಿ = ಹೀಗೆ, ಭೇದವ್ಯಪದೇಶಾತ್ = ಪರಮಾತ್ಮನ ದೆಸೆಯಿಂದ ಜೀವನಿಗೆ ಭೇದವನ್ನು ಹೇಳಿದ್ದರಿಂದ, ಜೀವಃ = ಜೀವನು, ನ = ಅಸಂಗನಾಗುವುದಿಲ್ಲ.

ಪರಃ ಏವ = ಪರಮಾತ್ಮನೇ, ಅಸಂಗಃ = ಅಸಂಗನಾಗುತ್ತಾನೆ.[१]

---

प्रसिद्धत्वादित्यर्थः। सिद्धान्ते श्रुतौ 'सः' इति तच्छब्देन 'स वा एष एतस्मिन् सम्प्रसादे रत्वा चरित्वा दृष्ट्वैव पुण्यं च पापं च पुनः प्रतिन्यायं प्रतियोन्या द्रवति स्वप्नायैव' (बृ.६.३.१५) इति पूर्ववाक्ये प्रकृतः परमात्मा परामृश्यते । वैशब्दः प्रसिद्धौ । सम्यक् प्रसीदति जीवोऽस्यामिति सम्प्रसादः सुप्तिः । तथा च स परमात्मा 'सम्प्रसादे' सुप्तौ 'रत्वा' रमणं कृत्वा जीवगतं पुण्यं च पापं च दृष्ट्वैव न त्वनुभूय 'चरित्वा' सञ्चरित्वा 'प्रतिन्यायम्' अवस्थान्तरं प्रवर्तनीयमिति न्यायमनुसृत्य यद्वा तत्तत्कर्मानुसृत्य 'प्रतियोनि' प्रतिदेहं सर्वदेहेषु, यद्वा प्रतियोनि तत्तन्मार्गमनुसृत्य 'पुनः' 'स्वप्नायैव' जीवस्य स्वप्नप्राप्तये एव 'आद्रवति' कण्ठदेशमागच्छति । 'सः' परमात्मा 'तत्र' स्वप्नावस्थायां यत्किञ्चिदनिष्टं पश्यति 'तेन' तत्कृतपापफलेन दुःखेन 'अनन्वागतः' असंस्पृष्टो भवति । तत्र हेतुः – असङ्ग इति ।। हि यस्मादयं पुरुषः 'असङ्गः' तत्कृतपापफलसंसर्गशून्यः प्रमितः, तस्मादित्यर्थः । पूर्वपक्षी तु श्रौततच्छब्देन जीवं गृहीत्वा सर्वं वाक्यं जीवपरतया व्याख्याति ।

(१) भाष्यदीपिका – सिद्धान्तयत्सूत्रमवतार्य व्याचष्टे – अत इति ।। 'वक्ति' समाधत्ते । स्वप्नादिद्रष्टृत्वं तस्यैवेत्यत्रापि सम्बध्यते । तेन सूत्रे उद्देश्यविधेयप्रतिपत्त्यर्थम्

**भाष्यम् – स्वप्नादिप्रष्टृत्वं च सर्वज्ञत्वात्तस्यैव युज्यते ॥४२॥**

**॥ इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये सुषुप्त्यधिकरणम्॥ ८॥**

ಅನುವಾದ- ಪರಮಾತ್ಮನು ಸರ್ವಜ್ಞನಾದ್ದರಿಂದ ಸ್ವಪ್ನಾದಿದ್ರಷ್ಟೃತ್ವವು ಅವನಿಗೆ ಯುಕ್ತವಾಗುತ್ತದೆ.

ಪ್ರತಿಪದಾರ್ಥ -- ಅಶರೀರಿಯಾದ ಪರಮಾತ್ಮನಿಗೆ ಸ್ವಪ್ನಾದಿದರ್ಶನವು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ –

(१)ಸ್ವಪ್ನಾದಿದ್ರಷ್ಟೃತ್ವಂ ಚ = ಸ್ವಪ್ನಾದಿದ್ರಷ್ಟೃತ್ವವಾದರೋ, ಸರ್ವಜ್ಞತ್ವಾತ್ =

---

अनुवृत्तावृत्तस्य तच्छब्दस्य विपरिणामः सूचितः । तच्छब्देन गृहीतस्यापि समन्वेतव्यलिङ्गस्य स्पष्टप्रतिपत्त्यर्थं स्वशब्देन निर्देशः । इतिशब्दानन्तरं सुषुप्तीति सौत्रपदं संयोज्यम् । व्यपदेशादिति बुद्ध्या विविच्य पूर्वस्मादनुषक्तं पदम् । असङ्ग इत्यपि हेतुसूचनाय सूत्रेऽध्याहृतं पदम् । जीवः पर इत्यनेन सुषुप्त्युत्क्रान्तिपदं तत्प्रकरणलक्षकमपि जीवपरमात्मपरमपीत्युक्तं भवति । तथात्वे सुषुप्तिशब्दः कर्तरि क्तिन्नन्तः । उत्क्रान्तिशब्दः देहादुत्क्रामयितृपरः ।
तथा चेत्थं योजना – स्वप्नादिद्रष्टृत्वं तस्य परमात्मन एव भवेत् न जीवस्य । कुतः ? यतोऽसावसङ्गः श्रुतः । नच स्वप्नादिद्रष्टुरसङ्गत्वश्रवणेऽपि कुतोऽयं विष्णुरिति वाच्यम् । यतोऽयमसङ्गः कर्माबद्धत्वात् परः परमात्मैव न जीवः । तथा च लिङ्गस्य निरवकाशत्वान्ना-प्रयोजकत्वं शङ्क्यमिति भावः । नच जीवेऽपीश्वरभेदेनासङ्गत्वोक्तिः सम्भवतीति वाच्यम् । प्राज्ञेनेत्यादिसुषुप्त्युत्क्रान्तिप्रकरणद्वयगतवाक्ययोरसङ्गात् स्वप्नादिद्रष्टुरीश्वराज्जीवस्य भेद-व्यपदेशादिति । प्राज्ञेनेति श्रुत्युदाहरणेन सूत्रे सुषुप्तिपदं मोक्षस्यापि ग्राहकं, तेनायं भेदो व्यावहारिक इति शङ्कानिरासोऽपि भवति । सुषुप्त्युत्क्रान्तिपदेन च तत्प्रकरणं लक्ष्यत इत्युक्तं भवति । उत्क्रान्तिपदं च जीवस्य देहादुत्क्रमणरूपमरणवाचि । श्रुतौ प्राज्ञशब्दः स्वार्थिकाणन्तः । तथा च 'प्राज्ञेन' सर्वज्ञेन परमात्मना 'सम्परिष्वक्तः' समाश्लिष्टः सुप्तो मुक्तश्च देहाद् बाह्यमान्तरं च किञ्चन विषयादिकं न वेदेति प्रथमवाक्यार्थः । द्वितीयार्थस्तु – प्राक्तनाधिकरणेऽभिहितः ।

(१) **भाष्यदीपिका** – ननु कथमशरीरस्य स्वप्नादिदर्शनं युक्तं स्यादित्यत आह – **स्वप्नादीति** ॥ चशब्दः समुच्चये । अप्यर्थे वा । आदिपदेन जीवगतावस्था गृह्यते । तथा च न केवलमसङ्गत्वं कर्माबद्धत्वात् परस्यैव युज्यते, किन्तु स्वप्नादिद्रष्टृत्वं च 'तस्यैव'

ಸರ್ವಜ್ಞನಾದ ಕಾರಣ, ತಸ್ಯೈವ = ಪರಮಾತ್ಮನಿಗೆ, ಯುಜ್ಯತೇ = ಯುಕ್ತವಾಗುತ್ತದೆ.

ಇಲ್ಲಿಗೆ ಸುಷುಪ್ತ್ಯಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## श्रीपद्मनाभतीर्थविरचितसत्तर्कदीपावळिः

### ॥ ॐ सुषुप्त्युत्क्रान्त्योर्भेदेन ॐ ॥

**नन्वसङ्गत्वेन श्रुताज्जीवादर्थान्तरत्वं परमात्मनः कथम्? इत्याशङ्क्य परिहरति – प्राज्ञेनेत्यादिना ।। सुषुप्तीत्यादिना ।। 'सन्ध्यं तृतीयं स्वप्नस्थानम्' इत्यारभ्य 'स यत्तत्र किञ्चित् पश्यति । अनन्वागतस्तेन भवति असङ्गो ह्ययं पुरुषः' इत्येतत् परमात्मनि घटयति – स्वप्नादीति ।। नहि कर्मबद्धस्य जीवस्यासङ्गत्वमुपपद्यते । अतोऽर्थान्तरभूतः परमात्मा जीवात् । 'प्राज्ञेनात्मना सम्परिष्वक्तः' इत्यादिश्रुतेरित्यर्थः ।।**

**।। इति सत्तर्कदीपावळ्याम् सुषुप्त्यधिकरणम् ।।**

ಜೀವನು ಅಸಂಗನಾಗಿದ್ದಾನೆಂದು ಶ್ರುತಿಯಲ್ಲಿ ಹೇಳುತ್ತಿರುವಾಗ ಪರಮಾತ್ಮನಲ್ಲಿ ಅಸಂಗತ್ವ ಧರ್ಮವನ್ನು ಹೇಗೆ ಹೇಳುತ್ತೀರಿ? ಎಂದು ಆಶಂಕಿಸಿ, ಪರಿಹಾರವನ್ನು 'ಪ್ರಾಜ್ಞೇನ' ಇತ್ಯಾದಿ

परमात्मन एव जीवादपि मुख्यतो युज्यते । अतस्तस्यैव तद्वचनं युज्यते न जीवस्य । कुतः ? तस्यैव 'सर्वज्ञत्वात्' सत्याशेषार्थज्ञत्वात् स्वप्नपदार्थानां जीवगतावस्थायाश्च सत्यताया वक्ष्यमाणत्वादिति भावः । न चाशरीरत्वलिङ्गं बाधकं, यतोऽत्र तस्यैव चिच्छरीरकस्यैव स्वप्नादिद्रष्टृत्वमुच्यते । नच **'दृष्ट्वैव पुण्यं च पापं च'** (बृ.६.३.१५) इत्याद्ययोग इति वाच्यम् । यतोऽत्राऽदिपदगृहीतं पुण्यपापादिद्रष्टृत्वं लिङ्गान्तरं च तस्यैव युज्यते, अत इति योजना । तत्रोपपत्तिस्तु बृहद्भाष्यादवगन्तव्या । अनेन – **'सुषुप्त्युत्क्रान्त्योः' 'प्राज्ञेन'** इति सुषुप्त्युत्क्रान्तिप्रकरणयोः सुषुप्त्युत्क्रान्त्योः सुषुप्तियुतत्वात् सुषुप्तिर्जीवः, उत्क्रामयितृत्वाद् उत्क्रान्तिरीश्वरः, तथा च जीवेश्वरयोः **'भेदेन'** भिन्नत्वेनैव **'व्यपदेशात्'** उक्तत्वान्न तयोरभेदः । अतो नेश्वराभेदेनापि जीवेऽसङ्गत्वोक्तिर्युज्यते । किन्तु तत्तु तस्यैवेश्वरस्यैव युज्यते । अत एव स्वप्नादिद्रष्टृत्वं च तस्यैव वक्तुं युज्यते, न जीवस्येति सूत्रार्थ उक्तो भवति ।

**।। इति सुषुप्त्यधिकरणम् ।। १३ ।।**

ಸುಷುಪ್ತ್ಯಧಿಕರಣ (೧-೩-೧೩)

ಭಾಷ್ಯದಿಂದ ಹೇಳುತ್ತಿದ್ದಾರೆ. ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿ ಯುಕ್ತವಾಗುವುದಿಲ್ಲ. ಸರ್ವಜ್ಞನಾದ್ದರಿಂದ ಪರಮಾತ್ಮನಲ್ಲೇ ಯುಕ್ತವಾಗುತ್ತದೆ. ಪರಮಾತ್ಮನೇ ಅಸಂಗನಾಗಿದ್ದಾನೆಂದು 'ಅನನ್ವಾಗತಃ ತೇನ ಭವತಿ ಅಸಂಗೋ ಹ್ಯಯಂ ಪುರುಷಃ' ಎಂದು ಶ್ರುತಿಯು ಹೇಳುತ್ತಿದೆ. ಕರ್ಮಬದ್ಧನಾದ ಜೀವನಿಗೆ ಅಸಂಗತ್ವವು ಯುಕ್ತವಾಗುವುದಿಲ್ಲ. ಆದ್ದರಿಂದ ಜೀವನಿಗಿಂತ ಭಿನ್ನನಾದ ಪರಮಾತ್ಮನೇ ಅಸಂಗನು. ಈ ವಿಷಯದಲ್ಲಿ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಇತ್ಯಾದಿ ಶ್ರುತಿಗಳೇ ಆಧಾರವಾಗಿವೆ.

॥ ಇಲ್ಲಿಗೆ ಸತ್ತರ್ಕದೀಪಾವಳಿ ಕನ್ನಡಾನುವಾದದಲ್ಲಿ ಸುಷುಪ್ತ್ಯಧಿಕರಣವು ಮುಗಿಯಿತು ॥

**तत्वप्रकाशिका –**

**।। ॐ सुषुप्त्युत्क्रान्त्योर्भेदेन ॐ ।।**

**अत्रासङ्गत्वलिङ्गेन लोकप्रसिद्ध्या चेशजीवयोः साधारणस्य स्वप्नादिदर्शनलिङ्गस्य भगवति समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयति ।। असङ्गत्वमिति ।।**

ಈ ಅಧಿಕರಣದಲ್ಲಿ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಧರ್ಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಅಸಂಗತ್ವ ಎಂಬ ಧರ್ಮದಿಂದ ಈಶ್ವರನಲ್ಲಿ ಸ್ವಪ್ನಾದಿದ್ರಷ್ಟೃತ್ವ ಧರ್ಮವು ಪ್ರಸಿದ್ಧವಾಗಿದೆ. ಲೋಕಪ್ರಸಿದ್ಧಿಯಿಂದ ಜೀವನಲ್ಲಿ ಪ್ರತೀತವಾಗುತ್ತಿದೆ. ಹೀಗೆ ಉಭಯಸಾಧಾರಣವಾದ ಸ್ವಪ್ನಾದಿದರ್ಶನ ಎಂಬ ಲಿಂಗವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಿದ್ದರಿಂದ ಶಾಸ್ತ್ರಸಂಗತಿ - ಅಧ್ಯಾಯಸಂಗತಿ-ಪಾದಸಂಗತಿಗಳಿರುತ್ತವೆ. ಶ್ರುತಿಸಂಗತಿ-ಅಧಿಕರಣಸಂಗತಿ ಮತ್ತು ವಿಷಯಾದಿಗಳನ್ನು 'ಅಸಂಗತ್ವಮ್' ಇತ್ಯಾದಿ ಭಾಷ್ಯದಿಂದ ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – असङ्गमरसमित्यसङ्गत्वं परमात्मन उक्तम् । तद्वाजसनेयके स्वप्नादिद्रष्टुः प्रतीयते । 'स वा एष, एतस्मिन्सम्प्रसादेरत्वा चरित्वा दृष्ट्वैव पुण्यं च पापं प्रतिन्यायं प्रतियोन्यां द्रवति स्वप्नायैव स यत्तत्र किञ्चित्पश्यत्यन्वागतस्तेन भवत्यसङ्गो ह्ययं पुरषः' इति । तस्य च विष्णोरन्यत्वेऽन्यस्यासङ्गत्व-प्रसङ्गादवश्यनिर्णेयत्वम् ।**

'ಅಸಂಗಮರಸಮ್' ಎಂಬ ಶ್ರುತಿಯಿಂದ ಪರಮಾತ್ಮನಿಗೆ ಅಸಂಗತ್ವವನ್ನು ಹೇಳಲಾಗಿದೆ. ಇದೇ ಅಸಂಗತ್ವವು ಬೃಹದಾರಣ್ಯಕೋಪನಿಷತ್ತಿನಲ್ಲಿ ಸ್ವಪ್ನದ್ರಷ್ಟುವಿಗೆ ಹೇಳಲಾಗಿದೆ - 'ಸವಾ ಏತಸ್ಮಿನ್

ಸಂಪ್ರಸಾದೇರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಪ್ರತಿನ್ಯಾಯಂ ಪ್ರತಿಯೋನ್ಯಾಂ ದ್ರವತಿ ಸ್ವಪ್ನಾಯೈವ ಸ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ'. ಪರಮಾತ್ಮನು ಸ್ವಪ್ನಾವಸ್ಥೆಯಲ್ಲಿ ಸ್ವರಮಣನಾಗಿ ಅಲ್ಲಲ್ಲಿ ಸಂಚಾರ ಮಾಡಿ ಜೀವನು ಮಾಡುವಂತಹ ಪುಣ್ಯ-ಪಾಪಗಳನ್ನು ನೋಡುತ್ತಾ, ಅವನ ಕರ್ಮಾನುಸಾರವಾಗಿ ಉಪಭೋಗಗಳನ್ನು ಕೊಡುವುದಕ್ಕೋಸ್ಕರ ಶರೀರಗಳಲ್ಲಿ ಸ್ವಪ್ನಾವಸ್ಥೆಗಾಗಿ ಕಂಠಸ್ಥಾನಕ್ಕೆ ಬರುತ್ತಾನೆ. ಮುಂದೆ ಅದೇ ಪರಮಾತ್ಮನು ಸ್ವಪ್ನಾವಸ್ಥೆಯಲ್ಲಿ ಯಾವ ಪದಾರ್ಥಗಳನ್ನೆಲ್ಲಾ ನೋಡುತ್ತಾನೋ, ಅದರ ಫಲದಿಂದ ಲಿಪ್ತನಾಗುವುದಿಲ್ಲ. ಏಕೆಂದರೆ, ಅವನಿಗೆ ಯಾವುದೇ ಲೇಪಗಳು ಇರುವುದಿಲ್ಲ'. ಹೀಗೆ ಸ್ವಪ್ನದ್ರಷ್ಟ್ರುವಿಗೆ ಅಸಂಗತ್ವವನ್ನು ಶ್ರುತಿಯು ಹೇಳುತ್ತಿದೆ.

**तत्वप्रकाशिका – तत्स्वप्नादिद्रष्टृत्वं विषयः । विष्णोर्जीवस्य वेति सन्देहः । उक्तसाधारण्यं सन्देहबीजमिति भावः ।**

ಇಂತಹ ಸ್ವಪ್ನದ್ರಷ್ಟ್ರುವು ವಿಷ್ಣುವಿಗಿಂತ ಭಿನ್ನನಾದಲ್ಲಿ ಅಸಂಗತ್ವವೂ ಸಹ ಬೇರೆಯವರಲ್ಲೇ ಬರಬೇಕಾಗುತ್ತದೆ. ಆದ್ದರಿಂದ ಸ್ವಪ್ನದ್ರಷ್ಟ್ರುವು ಯಾರೆಂದು ಅವಶ್ಯವಾಗಿ ನಿರ್ಣಯ ಮಾಡಲೇಬೇಕು. ಈ ಅಧಿಕರಣಕ್ಕೆ ಅಂತಹ ಸ್ವಪ್ನಾದಿದ್ರಷ್ಟ್ರುತ್ವವೇ ವಿಷಯವಾಗಿದೆ. ಈ ಧರ್ಮವು ವಿಷ್ಣುವಿನಲ್ಲಿ ಬರುತ್ತದೋ, ಅಥವಾ ಜೀವನಲ್ಲಿ ಬರುತ್ತದೋ? ಎಂಬುದೇ ಸಂಶಯ. ಹಿಂದೆ ಹೇಳಿದಂತೆ ಉಭಯಸಾಧಾರಣ್ಯವೇ ಸಂಶಯಬೀಜವಾಗಿದೆ.

**तत्वप्रकाशिका – सयुक्तिकं पूर्वपक्षयति ।। स चेति ।। स्वप्नादिद्रष्टृत्वं जीवस्यैव भवेत् । प्रसिद्धत्वात् ।**

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಸ ಚ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಸ್ವಪ್ನಾದಿದ್ರಷ್ಟ್ರುತ್ವವು ಜೀವನ ಧರ್ಮವೇ ಆಗಿದೆ. ಈ ವಿಷಯದಲ್ಲಿ ಲೋಕಪ್ರಸಿದ್ಧಿಯೇ ಕಾರಣ.

**तत्वप्रकाशिका – न चासङ्गत्वलिङ्गादीशस्येति वाच्यम् । जीवेशयोरभेदेन जीवेऽपि चैतन्यविवक्षयाऽसङ्गत्वोक्तिसम्भवात् ।**

ಶ್ರುತಿಯಲ್ಲಿ 'ಅಸಂಗತ್ವ' ಎಂಬ ಧರ್ಮವನ್ನು ಸ್ವಪ್ನದ್ರಷ್ಟ್ರುವಿಗೆ ಹೇಳಿರುವುದರಿಂದ ಪರಮಾತ್ಮನೇ ಸ್ವಪ್ನಾದಿದ್ರಷ್ಟ್ರು ಆಗಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಜೀವ ಹಾಗೂ ಪರಮಾತ್ಮನಿಗೆ ಅಭೇದವಿರುವುದರಿಂದ ಜೀವನಿಗೆ ಕೇವಲ ಚೈತನ್ಯವಿವಕ್ಷೆಯಿಂದ ಅಸಂಗತ್ವವನ್ನು ಹೇಳುವುದು ತಪ್ಪಾಗುವುದಿಲ್ಲ.

**तत्वप्रकाशिका – नच मुख्यतोऽसङ्गत्वादीश्वरस्य स्वप्नादिद्रष्टृत्वम् । तस्याशरीरतया स्वप्नाद्यवस्थानुभवानुपपत्तेः ।**

ಸ್ವಪ್ನಾದಿದ್ರಷ್ಟೃತ್ವವು ಮುಖ್ಯವಾಗಿ ಜೀವನಲ್ಲಿರುವುದರಿಂದ ಅಸಂಗತ್ವಧರ್ಮವು ಪರಮಾತ್ಮನಲ್ಲಿದ್ದರೂ ಜೀವೇಶ್ವರರಲ್ಲಿ ಭೇದವಿಲ್ಲದ ಕಾರಣ ಜೀವನ ಧರ್ಮ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಪರಮಾತ್ಮನು ಅಶರೀರಿಯಾದ್ದರಿಂದ ಸ್ವಪ್ನಾದ್ಯವಸ್ಥಾನವೇ ಕೂಡುವುದಿಲ್ಲ.

**तत्वप्रकाशिका – नच मन्तव्यं यथा स्वप्नादिदर्शनस्य जीवे मुख्यत्वेनाऽसङ्गत्वमभेदाभिप्रायेण नीयते तथाऽसङ्गत्वस्येश्वरे मुख्यत्वेन स्वप्नादिदर्शनस्याप्यभेदाभिप्रायेण तद्गतासङ्गत्वस्य जीवेऽमुख्यवृत्तिवदीश्वरे स्वप्नादिद्रष्टृत्वस्य विशिष्टनिष्ठस्यामुख्यतोऽपि वक्तुमयोगात् ।**

ಸ್ವಪ್ನಾದಿದರ್ಶನವು ಜೀವನಲ್ಲಿ ಮುಖ್ಯವಾಗಿರುವುದರಿಂದ ಅಭೇದ ಅಭಿಪ್ರಾಯದಿಂದ ಅಸಂಗತ್ವವನ್ನು ಹೇಗೆ ಜೀವನಲ್ಲಿ ಹೇಳಲಾಗುತ್ತದೋ, ಅದೇ ರೀತಿಯಾಗಿ ಅಸಂಗತ್ವವೂ ಈಶ್ವರನಲ್ಲಿ ಮುಖ್ಯವಾಗಿರುವುದರಿಂದ ಸ್ವಪ್ನಾದಿದರ್ಶನವನ್ನೂ ಸಹ ಅಭೇದಾಭಿಪ್ರಾಯದಿಂದ ಈಶ್ವರನಲ್ಲಿ ಒಪ್ಪಬಹುದು. ಆದ್ದರಿಂದ ಶ್ರುತಿಯಲ್ಲಿ ಜೀವನೇ ಪ್ರತಿಪಾದ್ಯನಾಗಿದ್ದಾನೆಂದು ನಿಶ್ಚಯಿಸಲು ಏನು ಕಾರಣ? ಎಂದು ತಿಳಿಯಬಾರದು.

ಚೈತನ್ಯೈಕ್ಯವನ್ನು ವಿವಕ್ಷಿಸಿದಾಗ ಈಶನಲ್ಲಿರುವ ಅಸಂಗತ್ವವನ್ನು ಜೀವನಲ್ಲಿ ಅಮುಖ್ಯವೃತ್ತಿಯಿಂದ ಹೇಳಬಹುದೇ ಹೊರತು, ಜೀವನಲ್ಲಿರುವ ಸ್ವಪ್ನಾದಿದ್ರಷ್ಟೃತ್ವವನ್ನು ಈಶ್ವರನಲ್ಲಿ ಅಮುಖ್ಯವೃತ್ತಿಯಿಂದಲೂ ಸಹ ಹೇಳಲು ಸಾಧ್ಯವಿಲ್ಲ.

**तत्वप्रकाशिका – नच जीवेशाभेद एव कुत इति वाच्यम् । विशेषणद्वयसानाधिकरण्यान्यथानुपपत्त्यैव तत्सिद्धेः ।**

ಜೀವೇಶ್ವರರಿಗೆ ಅಭೇದವನ್ನೇ ಏಕೆ ಒಪ್ಪಬೇಕು? ಎಂದು ಪ್ರಶ್ನಿಸಬಾರದು. ಶ್ರುತಿಯಲ್ಲಿ ಅಸಂಗತ್ವ ಹಾಗೂ ಸ್ವಪ್ನಾದಿದ್ರಷ್ಟೃತ್ವ ಎಂಬೆರಡು ಧರ್ಮಗಳಿಗೆ ಸಾಮಾನಾಧಿಕರಣ್ಯವನ್ನು ಹೇಳಲಾಗಿದೆ. ಇದರ ಅನ್ಯಥಾನುಪಪತ್ತಿಯಿಂದ ಅಭೇದವನ್ನು ಒಪ್ಪುವುದು ಅನಿವಾರ್ಯ.

**तत्वप्रकाशिका – अतो जीव एवायं स्वप्नादिद्रष्टेति न प्रागुक्तासङ्गत्वं विष्णोरेवेति भावः ।**

ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಜೀವನ ಧರ್ಮವೇ ಆಗಿದೆ. ಆದ್ದರಿಂದ ಅಕ್ಷರಾಧಿಕರಣದಲ್ಲಿ ಹೇಳಿದ ಅಸಂಗತ್ವವೂ ಕೂಡ ಜೀವನ ಧರ್ಮವೇ ಆಗುತ್ತದೆ. ಇಷ್ಟು ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ॥ स्वप्नादिद्रष्टा परमात्मैवासङ्गत्वलिङ्गात् । यतोऽसङ्गः पर एव न जीवः ।**

ಸಿದ್ಧಾಂತಸ್ಥಾಪನೆಗೋಸ್ಕರ ಸೂತ್ರವನ್ನು ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅತಃ' ಇತ್ಯಾದಿ ಭಾಷ್ಯದಿಂದ. ಸ್ವಪ್ನಾದಿದ್ರಷ್ಟೃವು ಪರಮಾತ್ಮನೇ ಆಗಿದ್ದಾನೆ. 'ಅಸಂಗತ್ವ' ಎಂಬ ಅಸಾಧಾರಣ ಲಿಂಗವು ಶ್ರುತವಾದ್ದರಿಂದ. ಯಾವ ಕಾರಣದಿಂದ ಪರಮಾತ್ಮನು ಅಸಂಗನಾಗಿದ್ದಾನೋ, ಆ ಕಾರಣದಿಂದಲೇ ಜೀವನು ಸ್ವಪ್ನಾದಿದ್ರಷ್ಟೃವಾಗಲು ಸಾಧ್ಯವಿಲ್ಲ.

**तत्वप्रकाशिका – न चेश्वराभेदेन जीवेप्यसङ्गत्वोक्तिः सम्भवतीति वाच्यम्। सुषुप्त्युत्क्रान्तिप्रकरणयोर्भेदेनैव जीवेशयोरुक्तत्वेन तदभेदस्यैवाभावादिति भावः ।**

ಈಶ್ವರನಿಂದ ಅಭೇದವಿರುವ ಪ್ರಯುಕ್ತ ಜೀವನಲ್ಲಿಯೂ ಅಸಂಗತ್ವಧರ್ಮವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಸುಷುಪ್ತಿಪ್ರಕರಣ ಹಾಗೂ ಉತ್ಕ್ರಾಂತಿಪ್ರಕರಣಗಳಲ್ಲಿ ಜೀವೇಶ್ವರರಿಗೆ ಭೇದವೇ ಹೇಳಲ್ಪಟ್ಟಿದೆ. ಹೀಗಿರುವಾಗ ಜೀವೇಶ್ವರರಿಗೆ ಅಭೇದವನ್ನು ಹೇಳಲು ಬರುವುದಿಲ್ಲ. ಇಷ್ಟು ಸೂತ್ರದ ಅಭಿಪ್ರಾಯ.

**तत्वप्रकाशिका – न चायं भेदो व्यावहारिक एवेति युक्तम् । सुषुप्तिप्रकरणस्य मोक्षपरताया अपि भावात् । यद्वक्ष्यति 'स्वाप्ययसम्पत्योरन्यतरापेक्षमाविष्कृतं हि' इति । अनन्वागतं पुण्येनानन्वागतं पापेनेत्याद्युपपत्तेश्च ।**

ಶ್ರುತಿಯಲ್ಲಿ ಹೇಳಲ್ಪಟ್ಟ ಭೇದವು ವ್ಯಾವಹಾರಿಕವಾಗಿರಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಯಲ್ಲಿ ಸುಷುಪ್ತಿಪ್ರಕರಣವು ಮೋಕ್ಷಪರವೂ ಆಗಬಹುದು. ಏಕೆಂದರೆ, ಸೂತ್ರಕಾರರೇ ಮುಂದೆ 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂಬ ಸೂತ್ರದಲ್ಲಿ ಮತ್ತು 'ಅನನ್ವಾಗತಂ ಪುಣ್ಯೇನ, ಅನನ್ವಾಗತಂ ಪಾಪೇನ' ಪುಣ್ಯದಿಂದ ಹಾಗೂ ಪಾಪದಿಂದ ಲೇಪವು ಇರುವುದಿಲ್ಲ. ಇದು ಕೂಡ ಒಪ್ಪಬೇಕೆಂದರೆ ಸುಷುಪ್ತಿಪ್ರಕರಣವು ಮೋಕ್ಷಪರವಾಗಿದೆ ಎಂದು ಒಪ್ಪಲೇಬೇಕಾಗುತ್ತದೆ.

**तत्वप्रकाशिका – मोक्षे च सतो भेदस्य व्यावहारिकता नाम परिभाषामात्रं स्यात् । ननु कथमशरीरस्येश्वरस्य स्वप्नादिदर्शनं युक्तं स्यादित्यत आह – स्वप्नादीति ॥**

ಅದರಂತೆ, ಮೋಕ್ಷದಲ್ಲಿಯೂ ಒಂದು ವೇಳೆ ವ್ಯಾವಹಾರಿಕಭೇದವನ್ನು ಒಪ್ಪಿದರೆ, ಅದ್ವೈತಿಗಳು ಹೇಳುತ್ತಿರುವ ವ್ಯಾವಹಾರಿಕಸತ್ಯವು ಕೇವಲ ಪಾರಿಭಾಷಿಕವಾಗುತ್ತದೆ. ಏನೂ ಅರ್ಥವ್ಯತ್ಯಾಸವನ್ನು ಹೇಳಲು ಸಾಧ್ಯವಿಲ್ಲ.

ಸುಷುಪ್ತ್ಯಧಿಕರಣ (೧-೩-೧೩)

ಶರೀರವಿಲ್ಲದ ಪರಮಾತ್ಮನಿಗೆ ಸ್ವಪ್ನಾದಿದರ್ಶನವನ್ನು ಹೇಳುವುದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ, 'ಸ್ವಪ್ನಾದಿ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – न विष्णोः स्वप्नादिदर्शनायोगः किं नाम तस्यैव तन्मुख्यं जीवादपि । स्वाप्नपदार्थानां जीवगतावस्थायाश्च सत्यत्वात् परमात्मनश्च सर्वज्ञत्वेन तद्विशेषदर्शनोपपत्तिरिति भावः ।**

ಸ್ವಪ್ನಾದಿದರ್ಶನವು ವಿಷ್ಣುವಿಗೆ ಕೂಡುವುದಿಲ್ಲವೆಂದು ಪ್ರಶ್ನಿಸಬಾರದು. ಏಕೆಂದರೆ, ಜೀವನಲ್ಲಿ ಸ್ವಪ್ನಾದಿದರ್ಶನಧರ್ಮವು ಹೇಗೆ ಇದೆಯೋ, ಅದಕ್ಕಿಂತ ಮುಖ್ಯವಾಗಿ ಪರಮಾತ್ಮನಲ್ಲೇ ಇರುತ್ತದೆ. ಏಕೆಂದರೆ, ಸ್ವಪ್ನದಲ್ಲಿ ತೋರುವಂತಹ ಪದಾರ್ಥಗಳು ಜೀವನಿಗೆ ಬರುವಂತಹ ಸ್ವಪ್ನಾವಸ್ಥೆಯು ಸತ್ಯವಾಗಿರುವುದರಿಂದ ಪರಮಾತ್ಮನು ಸರ್ವಜ್ಞನಾದ್ದರಿಂದ, ಇವೆಲ್ಲದರ ವಿಶೇಷದರ್ಶನವು ಪರಮಾತ್ಮನಲ್ಲಿ ಉಪಪನ್ನವಾಗುತ್ತದೆಂದು ಅಭಿಪ್ರಾಯ.

**तत्वप्रकाशिका – एवं स्वप्नादिदर्शनासङ्गत्वयोः परमात्मनि मुख्यत्वोक्त्या तदन्यथानुपपत्त्याऽभेदः इति परास्तम् ।**

ಹೀಗೆ 'ಸ್ವಪ್ನಾದಿದರ್ಶನ' ಮತ್ತು 'ಅಸಂಗತ್ವ' ಎಂಬೆರಡು ಧರ್ಮಗಳನ್ನು ಪರಮಾತ್ಮನಲ್ಲಿ ಪ್ರತಿಪಾದನೆ ಮಾಡಿದ್ದರಿಂದ, ಇದರ ಅನ್ಯಥಾನುಪಪತ್ತಿಯಿಂದ ಅಭೇದವು ನಿರಸ್ತವಾಯಿತು. ಅಂದರೆ, ಜೀವ ಮತ್ತು ಪರಮಾತ್ಮರಿಗೆ ಭೇದವನ್ನು ಒಪ್ಪದೆ, ಇವೆರಡು ಧರ್ಮಗಳು ಪರಮಾತ್ಮನಲ್ಲಿ ಮುಖ್ಯವಾಗಿ ಕೂಡುವುದಿಲ್ಲ. ಆದ್ದರಿಂದ ಅನ್ಯಥಾನುಪಪತ್ತಿಯಿಂದ ಅಭೇದವನ್ನು ಸಮರ್ಥಿಸಿದ್ದು ನಿರಾಕೃತವಾಯಿತು.

**तत्वप्रकाशिका – तत्र प्रतीतोभयविधलिङ्गान्तरोपपत्तिस्तु तद्भाष्यादवगन्तव्या । अतो विष्णुरेव स्वप्नादिद्रष्टाऽसङ्गश्चेति सिद्धम् ।। ४२ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् सुषुप्त्यधिकरणम्।।**

ಇನ್ನು ಸುಷುಪ್ತಿಪ್ರಕರಣದಲ್ಲಿ ಉಭಯವಿಧವಾದ ಎರಡು ಲಿಂಗಗಳನ್ನು ಹೇಳಿದ್ದನ್ನು ಹೇಗೆ ಉಪಪಾದಿಸಬೇಕೆಂಬುದನ್ನು ಆ ಶ್ರುತಿಯ ಭಾಷ್ಯದಿಂದಲೇ ತಿಳಿದುಕೊಳ್ಳಬೇಕು. ಆದ್ದರಿಂದ ವಿಷ್ಣುವೇ ಸ್ವಪ್ನಾದಿದ್ರಷ್ಟುವಾಗಿದ್ದಾನೆ, ಅಸಂಗನೂ ಆಗಿದ್ದಾನೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಸುಷುಪ್ತ್ಯಧಿಕರಣವು ಮುಗಿಯಿತು

भावदीपः –

॥ ॐ सुषुप्त्युत्क्रान्त्योर्भेदेन ॐ ॥

भाष्यसूचितं साधारण्यबीजमाह – असङ्गत्वेति ॥ अलेपत्वरूपासङ्गत्वलिङ्गेनेत्यर्थः । सङ्गत्यर्थतया भाष्यं व्याचष्टे – असङ्गमिति ॥ अक्षरनये 'अन्यभाव' इति सूत्र इत्यर्थः । तच्चेत्यादि व्याचष्टे – तद्वाजसनेयक इति ॥ षष्ठ इत्यर्थः । स यत्तत्रेति तच्छब्दपरामृष्टं दर्शयितुं पूर्वशेषमाह – स वा इति ॥ सम्यक् प्रसीदत्यस्यामिति सम्प्रसादः सुप्तिः । तस्मिन् रत्वा रमणं कृत्वा प्रतिन्यायम् अवस्थान्तरं प्राप्तव्यमिति न्यायमनुसृत्य प्रतियोन्यापदव्या तेन स्वाप्नपदार्थदर्शनेनानन्वागतो निर्लेपः लेपे सर्वप्रमाणाभावं वक्तुम् 'असङ्गो ह्ययम्' इति वाक्यशेषः ।

'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬುದಾಗಿ ಸುಷುಪ್ತ್ಯಧಿಕರಣವು ಪ್ರಾರಂಭವಾಗುತ್ತಿದೆ. ಭಾಷ್ಯದಲ್ಲಿ 'ಸ್ವಪ್ನಾದಿದ್ರಷ್ಟೃತ್ವ' ಎಂಬ ಲಿಂಗವು ಉಭಯಸಾಧಾರಣವಾಗಿದೆ ಎಂದು ಸೂಚಿಸಿದ್ದಾರೆ. ಅದಕ್ಕೆ ಕಾರಣವನ್ನು 'ಅಸಂಗತ್ವಲಿಂಗೇನ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಅಸಂಗತ್ವಲಿಂಗೇನ' ಎಂದರೆ 'ಅಲೇಪತ್ವ' ಎಂಬ ಅಸಂಗತ್ವಲಿಂಗದಿಂದ ಎಂದರ್ಥ. ಸಂಗತಿಪರವಾಗಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅಸಂಗಂ' ಇತ್ಯಾದಿಯಾಗಿ. ಅಕ್ಷರಾಧಿಕರಣದ 'ಅನ್ಯಭಾವ' ಎಂಬ ಸೂತ್ರದಲ್ಲಿ ಪರಮಾತ್ಮನನ್ನು ಅಸಂಗನೆಂದು ಹೇಳಲಾಗಿದೆ ಎಂದರ್ಥ. 'ನಚ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ, 'ತದ್ವಾಜಸನೇಯಕೇ' ಇತ್ಯಾದಿ ಟೀಕೆಯಿಂದ. ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಈ ವಾಕ್ಯವಿದೆ ಎಂದರ್ಥ. 'ಸ ಯತ್ತತ್ರ' ಎಂಬಲ್ಲಿರುವ 'ತತ್' ಶಬ್ದದಿಂದ ಪರಾಮರ್ಶಿತವಾದದ್ದನ್ನು ತೋರಿಸಲು ವಾಕ್ಯದ ಪೂರ್ವಭಾಗವನ್ನು ಉಲ್ಲೇಖ ಮಾಡುತ್ತಿದ್ದಾರೆ, 'ಸ ವಾ ಏಷಃ' ಇತ್ಯಾದಿಯಾಗಿ. 'ಸಮ್ಯಕ್ ಪ್ರಸೀದತಿ ಅಸ್ಯಾಮ್' ಎಂಬ ವ್ಯುತ್ಪತ್ತಿಯಿಂದ 'ಸಂಪ್ರಸಾದ' ಶಬ್ದಕ್ಕೆ 'ಸುಷುಪ್ತ್ಯವಸ್ಥೆ' ಎಂದರ್ಥ. ಅಂತಹ ಸುಷುಪ್ತ್ಯವಸ್ಥೆಯಲ್ಲಿ ರತ್ವಾ = ಕ್ರೀಡಿಸಿ, ಪ್ರತಿನ್ಯಾಯಂ = ಬೇರೆ ಅವಸ್ಥೆಯನ್ನು ಹೊಂದಬೇಕೆಂಬ ನ್ಯಾಯವನ್ನು ಅನುಸರಿಸಿ, ಸ್ವಾಪ್ನಪದಾರ್ಥದ ದರ್ಶನ ಮಾಡಿದರೂ ನಿರ್ಲಿಪ್ತನಾಗಿಯೇ ಇರುತ್ತಾನೆ ಎಂದು ಅಭಿಪ್ರಾಯ. ಅವನಿಗೆ ಲೇಪವಾಗುತ್ತದೆಂಬ ವಿಷಯದಲ್ಲಿ ಯಾವುದೇ ಪ್ರಮಾಣಗಳಿರುವುದಿಲ್ಲ ಎಂಬುದನ್ನು ಸಮರ್ಥಿಸಲು 'ಅಸಂಗೋ ಹ್ಯಯಮ್' ಎಂಬ ವಾಕ್ಯಶೇಷವನ್ನು ನೀಡಲಾಗಿದೆ.

**भावदीपः – स चेत्यादेस्तात्पर्यम् – तस्य चेति ।। प्रसिद्ध्या जीवत्व इत्यर्थः।**

'ಸ ಚ' ಎಂಬುದರ ತಾತ್ಪರ್ಯವನ್ನು ಟೀಕೆಯಲ್ಲಿ 'ತಸ್ಯ ಚ' ಎಂಬುದರಿಂದ ಹೇಳುತ್ತಿದ್ದಾರೆ. ಪ್ರಸಿದ್ಧಿಬಲದಿಂದ ಜೀವನೇ ಸ್ವಪ್ನದ್ರಷ್ಟೃವಾದಲ್ಲಿ ಎಂದರ್ಥ.

**भावदीपः – उक्तमित्यन्तभाष्यस्य तात्पर्यम् – अन्यस्येति ।। नच, 'नहि सङ्गोऽस्ति वह्विवायुविवस्वताम्' इति न्यायेनानेकेषामसङ्गत्वं तथाच न पूर्वाक्षेप इति शङ्क्यम् । अनन्यापेक्षस्यानेकेषामयोगादिति तात्पर्यात् तस्यैव श्रुतौ प्रतीतेरिति ।**

'ಉಕ್ತಂ' ಎಂಬಲ್ಲಿಯ ತನಕ ಇರುವ ಭಾಷ್ಯದ ತಾತ್ಪರ್ಯವನ್ನು 'ಅನ್ಯಸ್ಯ ಚ' ಎಂಬುದರಿಂದ ಸಮರ್ಥಿಸುತ್ತಿದ್ದಾರೆ. 'ನಹಿ ಸಂಗೋಽಸ್ತಿ ವಹ್ನಿವಾಯುವಿವಸ್ವತಾಮ್' 'ವಹ್ನಿ, ವಾಯು, ಸೂರ್ಯ ಮೊದಲಾದವರಿಗೂ ಕೂಡ ಯಾವುದೇ ಪದಾರ್ಥಗಳ ಸಂಗ ಇರುವುದಿಲ್ಲ' ಎಂಬ ನ್ಯಾಯದಂತೆ ಬೇರೆಯವರಲ್ಲಿಯೂ ಕೂಡ ಅಸಂಗತ್ವವು ಬರುತ್ತದೆ. ಆದ್ದರಿಂದ, ಪೂರ್ವಾಕ್ಷೇಪವನ್ನು ಹೇಗೆ ಮಾಡುತ್ತೀರಿ? ಎಂದು ಶಂಕಿಸಬಾರದು. ಸ್ವತಂತ್ರವಾದ ಅಸಂಗತ್ವವೇ ಇಲ್ಲಿ ವಿವಕ್ಷಿತವಾಗಿದೆ. ವಹ್ನಿ ಮೊದಲಾದವರಲ್ಲಿರುವ ಅಸಂಗತ್ವವು ಅಸ್ವತಂತ್ರವಾದದ್ದೇ, ಹೊರತು ಸ್ವತಂತ್ರವಾದದ್ದಲ್ಲ. ಹೀಗೆ ಶ್ರುತಿಯ ತಾತ್ಪರ್ಯವಿದೆ.

**भावदीपः – पूर्वपक्षादिपरत्वेनापि व्याकुर्वत्स च जीव इति प्रतिज्ञार्थमाह – स्वप्नेति ।। स्वप्नादिद्रष्टृत्वं चेति सिद्धान्तभाष्यानुरोधाद् अत्रापि तथैव व्याख्या कृतेति बोध्यम् ।**

ಭಾಷ್ಯವನ್ನು ಪೂರ್ವಪಕ್ಷಾದಿಪರವಾಗಿಯೂ ಕೂಡ ವ್ಯಾಖ್ಯಾನ ಮಾಡುವವರಾಗಿ, ಜೀವನೇ ಸ್ವಪ್ನಾದಿದ್ರಷ್ಟೃವಾಗಿದ್ದಾನೆ ಎಂಬ ಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ, 'ಸ್ವಪ್ನ' ಇತ್ಯಾದಿಯಾಗಿ. 'ಸ್ವಪ್ನಾದಿದ್ರಷ್ಟೃತ್ವಂ ಚ ಸರ್ವಜ್ಞತ್ವಾತ್ ತಸ್ಯೈವ ಯುಜ್ಯತೇ' ಎಂಬ ಸಿದ್ಧಾಂತಭಾಷ್ಯಕ್ಕೆ ಅನುಸಾರಿಯಾಗಿ ಇಲ್ಲಿಯೂ ಕೂಡ ವ್ಯಾಖ್ಯಾನ ಮಾಡಬೇಕು.

**भावदीपः – ननु यथा पूर्वत्र नामरूपनिर्वोढृत्वरूपब्रह्मलिङ्गाद् वै नामेति प्राप्त लोकप्रसिद्धिबाधस्तथाऽत्राप्यस्त्विति भावेन शङ्कते – नचेति ।। जीवेश्वराभेदे ईश्वरोक्तावप्यर्थाज्जीव एवोच्यत इति न्यायविवरणांशोक्तमाह – जीवेशयोरिति ।।**

ಹಿಂದೆ, ನಾಮರೂಪನಿರ್ವಾಹಕತ್ವವೆಂಬ ಬ್ರಹ್ಮನ ಲಿಂಗದಿಂದ 'ವೈ ನಾಮ' ಎಂಬ ನಿಪಾತದಿಂದ ಪ್ರಾಪ್ತವಾದ ಲೋಕಪ್ರಸಿದ್ಧಿಯನ್ನು ಬಾಧಿಸಲಾಯಿತು. ಅದರಂತೆ, ಇಲ್ಲಿಯೂ ಕೂಡ ಲೋಕಪ್ರಸಿದ್ಧಿಯನ್ನು ಬಾಧಿಸಬಹುದಲ್ಲವೇ? ಎಂದು ಆಶಂಕಿಸುತ್ತಿದ್ದಾರೆ, 'ನಚ' ಇತ್ಯಾದಿ ಗ್ರಂಥದಿಂದ. ಜೀವ ಹಾಗೂ ಈಶ್ವರರಿಗೆ

ಅಭೇದವನ್ನು ಒಪ್ಪಿದಾಗ ಈಶ್ವರನಲ್ಲಿರುವ ಅಸಂಗತ್ವವು ಜೀವನಲ್ಲಿಯೂ ಕೂಡ ಬರುತ್ತದೆಂಬ ನ್ಯಾಯವಿವರಣದ ಮಾತನ್ನು 'ಜೀವೇಶಯೋಃ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – विशिष्टस्य सङ्गित्वादुक्तम् – चैतन्येति** ।। ननु विनैवाभेदमीशलिङ्गेन जीवलिङ्गमीशे नीयतामिति शङ्कते – **नचेति** ।। तस्येशेऽनवकाशतामाह – **तस्येति** ।। सर्वत्र प्रसिद्धेत्यत्र 'अशरीरः प्रज्ञात्मा' इत्युक्तेरिति भावः ।

ವಿಶಿಷ್ಟನಾದ ಚೇತನನು ಸಂಗವುಳ್ಳವನಾದ್ದರಿಂದ 'ಚೈತನ್ಯವಿವಕ್ಷಯಾ' ಎಂದು ಹೇಳಿದ್ದಾರೆ. ಅಭೇದವನ್ನೊಪ್ಪದೆ, ಈಶ್ವರನ ಲಿಂಗದಿಂದ ಜೀವನ ಲಿಂಗವನ್ನೇ ಈಶ್ವರನಲ್ಲಿ ಹೇಳಬಹುದಲ್ಲವೇ? ಎಂದು 'ನಚ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಜೀವನ ಲಿಂಗವು ನಿರವಕಾಶವಾಗಿದೆ ಎಂದು 'ತಸ್ಯ' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ. 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ 'ಅಶರೀರಃ ಪ್ರಜ್ಞಾತ್ಮಾ' ಎಂದು ಹೇಳಿದ್ದರಿಂದ, ಈಶ್ವರನಿಗೆ ಶರೀರವಿಲ್ಲವೆಂದು ಇದರ ಅಭಿಪ್ರಾಯ.

**भावदीपः** – ईश्वरोक्तावप्यर्थाज्जीव एवोच्यत इत्यंशतात्पर्यं व्यक्तीकर्तुमाह – **नच मन्तव्यमिति** ।। **चैतन्येति** ।। जीवस्य येन चैतन्यात्मना ब्रह्मैक्यं तदभिप्रायेणेत्यर्थः ।।

'ಈಶ್ವರೋಕ್ತಾವಪಿ ಅರ್ಥಾತ್ ಜೀವ ಏವ ಉಚ್ಯತೇ' ಎಂಬ ನ್ಯಾಯವಿವರಣದ ತಾತ್ಪರ್ಯವನ್ನು 'ನಚ ಮಂತವ್ಯಂ' ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಚೈತನ್ಯೈಕ್ಯಾತ್ ಪ್ರಾಯೇಣ' ಎಂದರೆ ಜೀವನಿಗೆ ಯಾವ ಚೈತನ್ಯಸ್ವರೂಪದಿಂದ ಬ್ರಹ್ಮನ ಐಕ್ಯವನ್ನು ಒಪ್ಪಲಾಗಿದೆಯೋ, ತದಭಿಪ್ರಾಯದಿಂದ ಎಂದರ್ಥ.

**भावदीपः – विशेषणेति** ।। उक्तदिशा निरवकाशासङ्गत्वस्वप्नादिद्रष्टृरूप-विशेषणेत्यर्थः । एतच्चासङ्गत्वं प्रसिद्धेरिति भाष्योक्त्या ज्ञायत इति भावः ।।

ವಿಶೇಷಣದ್ವಯವೆಂದರೆ, ನಿರವಕಾಶವಾದ ಅಸಂಗತ್ವ ಹಾಗೂ ಸ್ವಪ್ನಾದಿದ್ರಷ್ಟೃತ್ವ ಎಂಬೆರಡು ವಿಶೇಷಣಗಳಿಂದ ಎಂದರ್ಥ. ಈ ಅಸಂಗತ್ವವಾದರೂ, 'ಪ್ರಸಿದ್ಧೇಃ' ಇತ್ಯಾದಿ ಭಾಷ್ಯದಿಂದ ತಿಳಿಯುತ್ತದೆ.

**भावदीपः** – **अत इति** ।। असङ्गत्वरूपब्रह्मलिङ्गस्य जीवे तदभेदेनोपपत्त्या जीवलिङ्गस्य चेशेऽनुपपत्त्या च निर्बाधनिरवकाशप्रसिद्धिभावादित्यर्थः । उक्तमित्यन्तस्य भावोक्तिः – **न प्रागिति** ।।

'ಅತಃ' ಎಂದರೆ 'ಅಸಂಗತ್ವ' ಎಂಬ ಬ್ರಹ್ಮಲಿಂಗಕ್ಕೆ ಜೀವನಲ್ಲಿ ಅಭೇದವನ್ನು ಒಪ್ಪುವ ಮೂಲಕ ಮತ್ತು ಜೀವಲಿಂಗವು ಈಶನಲ್ಲಿ ಅನುಪಪನ್ನವಾದ್ದರಿಂದ ನಿರ್ಬಾಧಿತವಾದ ನಿರವಕಾಶ ಪ್ರಸಿದ್ಧಿಯಿರುವುದರಿಂದ

ಎಂಬರ್ಥ. 'ಉಕ್ತಮ್' ಎಂಬಲ್ಲಿಯ ತನಕ ಇರುವ ಭಾಷ್ಯದ ಅಭಿಪ್ರಾಯವನ್ನು 'ನ ಪ್ರಾಕ್' ಎಂದು ಹೇಳಿದ್ದಾರೆ.

**भावदीपः** – अभेदेन जीवेऽप्युपपन्नोक्त्या विष्णावनिरासादेवेत्युक्तम् । स्वप्नादिद्रष्टृत्वं च तस्यैवेति प्रतिज्ञांशं व्याचष्टे – **स्वप्नादिद्रष्टेति** ।। असङ्गत्वादि चेश्वरस्यैवेति न्यायविवरणानुरोधेन हेतुमाह – **असङ्गत्वेति** ।।

ಅಭೇದವನ್ನು ಒಪ್ಪಿ ಜೀವನಲ್ಲಿಯೂ ಕೂಡ ಅಸಂಗತ್ವವು ಬರುತ್ತದೆಂದು ಹೇಳಿ ವಿಷ್ಣುವಿನಲ್ಲಿ ಅಸಂಗತ್ವವನ್ನು ನಿರಾಕರಣೆ ಮಾಡದ್ದರಿಂದ ಟೀಕೆಯಲ್ಲಿ 'ಏವ' ಎಂದು ಹೇಳಿದ್ದಾರೆ. ಸ್ವಪ್ನಾದಿದ್ರಷ್ಟೃತ್ವವು ಪರಮಾತ್ಮನಲ್ಲೇ ಉಪಪನ್ನವಾಗುತ್ತದೆ ಎಂಬ ಪ್ರತಿಜ್ಞಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ, 'ಸ್ವಪ್ನಾದಿದ್ರಷ್ಟಾ' ಇತ್ಯಾದಿಯಾಗಿ. 'ಅಸಂಗತ್ವಾದಿ ಚ ಈಶ್ವರಸ್ಯೈವ' ಎಂಬ ನ್ಯಾಯವಿವರಣಕ್ಕೆ ಅನುಸಾರಿಯಾಗಿ ಹೇತುವನ್ನು ಹೇಳುತ್ತಿದ್ದಾರೆ 'ಅಸಂಗತ್ವ' ಎಂಬ ಟೀಕೆಯಿಂದ.

**भावदीपः** – अनन्वागतस्तेनेति वाक्योक्तादित्यर्थः । तावता कुतो विष्णुरित्यतो न जीव इत्यादि व्याचष्टे – **यत इति** ।। 'असङ्गो ह्ययम्' इति हेतूकृतासङ्ग इत्यर्थः । अनन्वागतस्तेन भवतीत्यत्रासङ्गो ह्ययं पुरुष इत्यसङ्गत्वं हेतुः । प्रसिद्धमेव च हेतुत्वयोग्यम् असङ्गमस्पर्शमित्यादि श्रुतिषु च ब्रह्मण्येव प्रसिद्धमिति भावः ।

'ಅನನ್ವಾಗತಸ್ತೇನ ಭವತಿ' ಎಂಬ ವಾಕ್ಯದಲ್ಲಿ ಅಸಂಗತ್ವವನ್ನು ಹೇಳಿದ್ದಾರೆಂದು ತಿಳಿಯಬೇಕು. ಇದರಿಂದ, ವಿಷ್ಣುವೇ ಸ್ವಪ್ನಾದಿದ್ರಷ್ಟೃವಾಗಿದ್ದಾನೆ, ಹೊರತು ಜೀವನಲ್ಲವೆಂದು ಸ್ಪಷ್ಟವಾಗುತ್ತದೆಂದು 'ಯತಃ' ಇತ್ಯಾದಿ ಟೀಕೆಯಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಅಸಂಗೋ ಹ್ಯಯಮ್' ಎಂಬಲ್ಲಿ ಅಸಂಗತ್ವವನ್ನು ಹೇತುವನ್ನಾಗಿ ಹೇಳಿದ್ದಾರೆ. 'ಅನನ್ವಾಗತಸ್ತೇನ ಭವತಿ' ಎಂಬಲ್ಲಿ 'ಅಸಂಗೋ ಹ್ಯಯಂ ಪುರುಷಃ' ಎಂಬಲ್ಲಿ ಹೇಳಿರುವ ಅಸಂಗತ್ವವೇ ಹೇತುವಾಗಿದೆ. ಪ್ರಸಿದ್ಧವಾದದ್ದಷ್ಟೇ ಹೇತುವಾಗಲು ಸಾಧ್ಯ. 'ಅಸಂಗಮಸ್ಪರ್ಶಂ' ಇತ್ಯಾದಿ ಶ್ರುತಿಗಳಲ್ಲಾದರೋ, ಅಸಂಗತ್ವವು ಪರಮಾತ್ಮನ ಧರ್ಮವಾಗಿದೆ ಎಂದೇ ಪ್ರಸಿದ್ಧವಾಗಿದೆ ಎಂದು ತಿಳಿಯಬೇಕು.

भावदीपः – सुषुप्त्युत्क्रान्त्योर्जीवेशयोर्भेदोक्तेरिति न्यायविवरणानुरोधेन प्राज्ञेनेत्यादि भाष्यं व्याचष्टे – **नचेति** ।। सुषुप्तिपदलब्धयुक्तिं वक्तुमाह – **नचायमिति** ।। **यद्वक्ष्यतीति** ।। चतुर्थ इत्यर्थः ।

ಸುಷುಪ್ತಿ ಹಾಗೂ ಉತ್ಕ್ರಾಂತಿ ಪ್ರಕರಣಗಳು ಜೀವ ಹಾಗೂ ಈಶ್ವರರಿಗೆ ಭೇದವನ್ನೇ ಹೇಳುತ್ತಿವೆ. ಹೀಗೆ ನ್ಯಾಯವಿವರಣದಲ್ಲಿ ಹೇಳಿದ್ದನ್ನು ಅನುಸರಿಸಿ, 'ಪ್ರಾಜ್ಞೇನ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ,

'ನಚ' ಇತ್ಯಾದಿ ವಾಕ್ಯದಿಂದ. ಸುಷುಪ್ತಿ ಪದದಿಂದ ತಿಳಿಯಲ್ಪಟ್ಟ ಯುಕ್ತಿಯನ್ನು 'ನಚಾಯಂ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ವಕ್ಷ್ಯತಿ' ಎಂದರೆ ಚತುರ್ಥಾಧ್ಯಾಯದಲ್ಲಿ ಎಂದರ್ಥ.

**भावदीपः** – तीर्णो हि तदा सर्वान् शोकान् हृदयस्य भवतीति वाक्यं न मुक्तविषयम्, किन्तु स्वर्गस्थविषयं स्वर्गे लोके न भयं किञ्चनास्तीत्यादेरित्यतः स्वाप्यये सूत्रम् । स्वाप्ययः सुप्तिः सम्पत्तिर्मुक्तिः । अन्यतरशब्दोऽत्र उभयपरः । तीर्णो हीति वाक्यं सुप्तिमुक्त्युभयपरं न स्वर्गिविषयम् । कुतः? हि यस्माद् आविष्कृतं तदुभयविषयत्वमस्य वाक्यस्य विस्पष्टमत इति सूत्रार्थः । तत् किञ्चिद् व्यनक्ति – **अनन्वागतमिति** ॥

'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' (೪-೪-೧೬).

ಸೂತ್ರಾರ್ಥ ಹೀಗಿದೆ - ಜಡದೇಹಪ್ರವೇಶವು ಮುಕ್ತನಿಗೆ ಇರುವುದಿಲ್ಲ. 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' ಎಂಬ ಶ್ರುತಿವಾಕ್ಯದಿಂದ ಇದು ಸ್ಪಷ್ಟವಾಗುತ್ತದೆ. ಆದರೆ ಈ ಶ್ರುತಿಯು ಸ್ವರ್ಗಾದಿ ಲೋಕದಲ್ಲಿರುವವರನ್ನು ಕುರಿತು ಹೇಳುತ್ತಿದೆ ಎಂದು ಏಕೆ ಒಪ್ಪಬಾರದು? ಹಾಗೆ ಹೇಳಿದರೆ, ಬಾಧಕವೇನೂ ಇರುವುದಿಲ್ಲ. 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' ಎಂಬ ಶ್ರುತಿಯಿಂದ ಸ್ವರ್ಗದಲ್ಲಿಯೂ ಕೂಡ ದುಃಖವಿಲ್ಲವೆಂದು ಸಿದ್ಧವಾಗಿದೆ. ಆದ್ದರಿಂದ, ಮುಕ್ತರಿಗೆ ದುಃಖವಿಲ್ಲ ಎಂಬ ವಿಷಯದಲ್ಲಿ, ಇದು ಹೇಗೆ ಪ್ರಮಾಣವಾಗುತ್ತದೆ? ಹೀಗೆ ಆಕ್ಷೇಪ ಮಾಡಬಾರದು. 'ತೀರ್ಣೋ ಹಿ ತದಾ' ಎಂಬ ವಾಕ್ಯವು ಸ್ವರ್ಗದಲ್ಲಿರುವ ಜೀವರನ್ನು ಕುರಿತು ಹೊರಟಿಲ್ಲ. ಸುಷುಪ್ತ್ಯವಸ್ಥೆಯಲ್ಲಿರುವವರನ್ನು ಹಾಗೂ ಮುಕ್ತರನ್ನು ಕುರಿತು ಹೊರಟಿದೆ. 'ಅತ್ರ ಪಿತಾಽಪಿತಾ ಭವತ್ಯನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ' ಎಂಬ ಶ್ರುತಿಯಲ್ಲಿ ಅಪಿತೃತ್ವ, ಪುಣ್ಯಪಾಪಾದ್ಯಸಂಗತ್ವ ಮೊದಲಾದ ಮುಕ್ತರ ಹಾಗೂ ಸುಪ್ತರ ಅಸಾಧಾರಣ ಧರ್ಮಗಳು ಉಕ್ತವಾಗಿದೆ. ಶ್ರಾದ್ಧಾದಿಗಳನ್ನು ಭೋಗಿಸುವ ಸ್ವರ್ಗದಲ್ಲಿರುವವರಿಗೆ ಈ ಧರ್ಮಗಳು ಅಸಂಭಾವಿತವಾಗಿವೆ. ಸೂತ್ರಾರ್ಥ ಹೀಗಿದೆ - 'ತೀರ್ಣೋ ಹಿ' ಎಂಬ ವಾಕ್ಯವು ಸ್ವಾಪ್ಯಯ = ಸುಷುಪ್ತಿ, ಸಂಪತ್ತಿ = ಮುಕ್ತಿ, ಅನ್ಯತರಾಪೇಕ್ಷಮ್ = ಉಭಯಪರವಾಗಿದೆ. ಹಿ = ಏಕೆಂದರೆ, ಆವಿಷ್ಕೃತಮ್ = ಸುಪ್ತಿ ಹಾಗೂ ಮುಕ್ತಿಪರವೆಂದು ಅತ್ಯಂತ ಸ್ಪಷ್ಟವಾಗಿದೆ ಎಂದು ಸೂತ್ರಾರ್ಥ. ಇದನ್ನು ಸ್ವಲ್ಪವೇ ವ್ಯಾಖ್ಯಾನ ಮಾಡುತ್ತಿದ್ದಾರೆ, 'ಅನನ್ವಾಗತಂ' ಇತ್ಯಾದಿ ಟೀಕೆಯಿಂದ.

**भावदीपः** – अन्यथा अत्र पिताऽपिता भवति अनन्वागतं पुण्येनेत्यादिनोक्ता-पितृत्वपुण्यपापाद्यसङ्गत्वलिङ्गानां स्वर्गिणः श्राद्धादिभोक्तुरनुपपत्तेः सुप्तिप्रकरणस्य मुक्तिपरत्वमुपेयमित्यर्थः । व्यक्तमुक्तमस्य सूत्रस्योभयपरत्वाद्यर्थकत्वं बृहदारण्यक-भाष्ये । कर्मनिर्णयटीकायां च । विवृतं तन्त्रदीपिकायामस्माभिश्चतुर्थे ।

ಹೀಗೆ ಮುಕ್ತವಿಷಯಕವೆಂದು ಒಪ್ಪದಿದ್ದರೆ, 'ಪಿತಾऽಪಿತಾ ಭವತಿ ಅನನ್ವಾಗತಂ ಪುಣ್ಯೇನ' ಇತ್ಯಾದಿಯಾಗಿ ಹೇಳಲ್ಪಟ್ಟ ಅಪಿತೃತ್ವ, ಪುಣ್ಯಪಾಪಾದ್ಯಸಂಗತ್ವ ಮೊದಲಾದ ಲಿಂಗಗಳು ಯುಕ್ತವಾಗುವುದಿಲ್ಲ. ಏಕೆಂದರೆ, ಸ್ವರ್ಗದಲ್ಲಿರುವವರಿಗೆ ಶ್ರಾದ್ಧಾದಿಭೋಕ್ತೃತ್ವವೇ ಇರುವುದರಿಂದ ಅಪಿತೃತ್ವವು ಹೇಗೆ ಯುಕ್ತವಾಗುತ್ತದೆ? ಆದ್ದರಿಂದ, ಸುಪ್ತಿಪ್ರಕರಣವು ಮುಕ್ತವಿಷಯಕವೆಂದೇ ಹೇಳಬೇಕು. ಶ್ರುತಿಗೆ ಹೀಗೆ ವ್ಯಾಖ್ಯಾನ ಮಾಡಬೇಕೆಂದು ಬೃಹದಾರಣ್ಯಕ ಭಾಷ್ಯದಲ್ಲಿ ಹಾಗೂ ಕರ್ಮನಿರ್ಣಯ ಟೀಕೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಸೂತ್ರಾರ್ಥವನ್ನು ತಂತ್ರದೀಪಿಕೆಯಲ್ಲಿ ನಾವು ಸ್ಪಷ್ಟವಾಗಿ ಹೇಳಿದ್ದೇವೆ.

**भावदीपः** – अस्तु तावता व्यावहारिको भेद इत्यत्र किमागतमित्यत आह – **मोक्षे चेति** ।। प्रतिज्ञापरत्वेन व्याख्यातमपीदानीं स्वप्नादीत्यशेषभाष्यं प्रागुक्तशङ्का-निवर्तकतयाऽवतार्य जीवस्य तदयुक्तेरीशे सावकाशत्वाच्चेति न्यायविवरणविवरणपरतया व्याचष्टे – **नन्वित्यादिना** ।।

ಇದರಿಂದೇನಾಯಿತು? ವ್ಯಾವಹಾರಿಕಭೇದವನ್ನಷ್ಟೇ ಶ್ರುತಿಯು ಹೇಳುತ್ತಿದೆಯಲ್ಲವೇ? ಎಂಬ ಪ್ರಶ್ನೆಗೆ 'ಮೋಕ್ಷೇ ಚ' ಎಂಬುದರಿಂದ ಉತ್ತರಿಸಿದ್ದಾರೆ. 'ಸ್ವಪ್ನಾದೀತ್ಯಾದಿ' ಇತ್ಯಾದಿ ಭಾಷ್ಯವನ್ನು ಪ್ರತಿಜ್ಞಾಪರವಾಗಿ ವ್ಯಾಖ್ಯಾನ ಮಾಡಿ, ಈಗ ಹಿಂದೆ ಮಾಡಿದ ಆಶಂಕೆಯನ್ನು ನಿರಾಕರಣೆ ಮಾಡುತ್ತಿದೆ ಎಂದು ಹೇಳುತ್ತಾ, ಜೀವನಲ್ಲಿ ಸ್ವಪ್ನಾದಿದ್ರಷ್ಟೃತ್ವವು ಬರುವುದಿಲ್ಲ, 'ಜೀವಸ್ಯ ತದಯುಕ್ತೇ ಹಿ ಈಶೇ ಸಾವಕಾಶತ್ವಾಚ್ಚ' ಎಂಬ ನ್ಯಾಯವಿವರಣವನ್ನು ವಿವರಿಸುವ ಪರವಾಗಿಯೂ ಕೂಡ ವ್ಯಾಖ್ಯಾನ ಮಾಡುತ್ತಿದ್ದಾರೆ, 'ನನು' ಇತ್ಯಾದಿ ಗ್ರಂಥದಿಂದ.

**भावदीपः** –'सन्ध्ये सृष्टिराह हि' इत्यादिना तृतीयस्य द्वितीयपादे वक्ष्यमाणत्वात् सत्यत्वस्येति भावः । एतल्लिङ्गद्वयानुपपत्तिपरिहारेऽपि लिङ्गान्तरसामानाधि-करण्यानुपत्त्याऽभेदशङ्कायां कथं तदुपपत्तिरित्यत आह – **तत्र प्रतीतेति** ।। सम्प्रसादे रत्वेत्यादिना प्रागुदाहृतवाक्ये प्रतीतजीवलिङ्गान्तराणाम् अनन्वागतं पुण्ये-नेतीदानीमुदाहृतवाक्यप्रतीतपुण्यपापलेपरूपब्रह्मलिङ्गान्तराणामुपपत्तिस्तु 'शुभाशुभं तु दृष्ट्वैव स्वप्ने जागरितेऽपि च । असंसृष्टः सदा दुःखैश्चरतीशः पुनःपुनः' ।। इत्यादिवाजसनेयभाष्यादवसेयेत्यर्थः । फलोक्त्योपसहंरति – **अत इति** ।। परमात्मनि मुख्यत्वादित्यर्थः ।। ४२ ।।

।। इति श्रीराघवेन्द्रयतिकृते भावदीपे सुषुप्त्यधिकरणम् ।।

'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಮೂರನೇ ಅಧ್ಯಾಯದ ಎರಡನೆಯ ಪಾದದಲ್ಲಿ ಸ್ವಾಪ್ನಪದಾರ್ಥಗಳನ್ನು ಸತ್ಯವೆಂದು ಸಮರ್ಥನೆ ಮಾಡುತ್ತಾರೆ. 'ಸ್ವಪ್ನಾದಿದ್ರಷ್ಟೃತ್ವ' ಮತ್ತು 'ಅಸಂಗತ್ವ' ಎಂಬ ಲಿಂಗದ್ವಯಗಳ ಅನುಪಪತ್ತಿಯನ್ನು ಪರಿಹಾರ ಮಾಡಿದರೂ ಇತರ ಲಿಂಗಗಳ ಸಾಮಾನಾಧಿಕರಣ್ಯಾನ್ಯಥಾನುಪಪತ್ತಿಯಿಂದ ಅಭೇದವನ್ನು ಆಶಂಕಿಸಿದರೆ, ಅದನ್ನೂ ಕೂಡ ಪರಿಹಾರ ಮಾಡುತ್ತಿದ್ದಾರೆ, 'ತತ್ರ ಪ್ರತೀತ' ಇತ್ಯಾದಿ ವಾಕ್ಯದಿಂದ. 'ಸಂಪ್ರಸಾದೇ ರತ್ವಾ' ಇತ್ಯಾದಿಯಾಗಿ ಹಿಂದೆ ಉದಾಹರಿಸಿದ ವಾಕ್ಯದಲ್ಲಿ, ಯಾವ ಜೀವನ ಲಿಂಗಗಳು ಶ್ರುತವಾಗಿವೆಯೋ, 'ಅನನ್ವಾಗತಂ ಪುಣ್ಯೇನ' ಎಂಬ ವಾಕ್ಯದಲ್ಲಿ ಉದಾಹರಿಸಲ್ಪಟ್ಟ ಪುಣ್ಯ-ಪಾಪಗಳ ಸಂಪರ್ಕವಿಲ್ಲವೆಂಬ ಯಾವ ಬ್ರಹ್ಮನ ಲಿಂಗವು ಶ್ರುತವಾಗಿದೆಯೋ, ಇವನ್ನು 'ಶುಭಾಶುಭಂ ತು ದೃಷ್ಟ್ವೈವ ಸ್ವಪ್ನೇ ಜಾಗರಿತೇಽಪಿ ಚ । ಅಸಂಸ್ಪೃಷ್ಟಃ ಸದಾ ದುಃಖೇ ಚರಿತೀಷ ಪುನಃಪುನಃ ।।' ಇತ್ಯಾದಿಯಾದ ಬೃಹದಾರಣ್ಯಕ ಭಾಷ್ಯದ ಆಧಾರದಿಂದ ಕೂಡಿಸಬೇಕು. ಫಲವನ್ನು ಹೇಳುವ ಮೂಲಕ ಅಧಿಕರಣವನ್ನು ಉಪಸಂಹಾರ ಮಾಡುತ್ತಿದ್ದಾರೆ, 'ಅತಃ' ಇತ್ಯಾದಿಯಾಗಿ. ಪರಮಾತ್ಮನಲ್ಲಿ ಮುಖ್ಯವಾಗಿರುವುದರಿಂದ ಎಂದು ಇದರ ಅರ್ಥ.

।। ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಸುಷುಪ್ತ್ಯಧಿಕರಣವು ಮುಗಿಯಿತು ।।

**वाक्यार्थमञ्जरी –**

**।। ॐ सुषुप्त्युत्क्रान्त्योर्भेदेन ॐ ।।**

उक्तम् अक्षराधिकरणे – **स वा एष इति** ।। स एव परमात्मैव सम्प्रसादे सम्यक् प्रसीदति जीवोऽस्यामिति सम्प्रसादः सुप्तिस्तस्मिन् रत्वा रमणं कृत्वा पुण्यं च पापं च दृष्ट्वैव चरति चरित्वा च प्रतिन्यायं प्रतिकालं प्रतियोनि प्रतिजीवं पुनः स्वप्नायैव जीवस्य स्वप्नप्राप्तय एवाद्रवति दृष्ट्वैवेत्येवकारव्यवच्छेद्यमाह – **स इति** ।। स परमात्मा तत्र सुप्तौ यत्किञ्चित् पापं पश्यति तेन पापफलेन दुःखेनानन्वागतः असंस्पृष्टो भवति । कुत इत्यत उक्तम् – **असङ्ग इति** ।। हि यस्मादयं पुरुषः असङ्गः तत्तत्कृतपापफलसंसर्गशून्यस्तस्मात्तेनानन्वागत इत्यर्थः ।। **जीवेऽपीति** ।। देहेन्द्रियान्तःकरणचैतन्यसङ्घातरूपेऽपीत्यर्थः ।। **मुख्यतो सङ्गत्वादिति**।। जीवे त्वेकदेशविवक्षयोक्तमसङ्गत्वममुख्यमिति बावः । ईश्वरे शुद्धे ।। **विशिष्टेति** ।। देहादिविशिष्टेत्यर्थः ।। **विशेषणद्वयेति** ।। असङ्गत्वस्वप्नादिद्रष्टृत्वरूप-विशेषणद्वयेत्यर्थः ।। **ॐ सुषुप्त्युत्क्रान्त्योर्भेदेन ॐ** ।। नोक्तरीत्या जीवेशयोरभेदो मन्तव्यः 'प्राज्ञेनात्मना सम्परिष्वक्तः' इति सुप्तिप्रकरणे 'प्राज्ञेनात्मनाऽन्वारूढः'

इत्युत्क्रान्तिप्रकरणे च जीवेशयोर्भेदेनोक्तत्वादित्यर्थः । वक्ष्यति चतुर्थाध्याये – **स्वाप्ययेति** ।। तीर्णो हि तदा सर्वांल्लोकान् हृदयस्य भवतीति वाक्यस्य स्वर्गस्थविषयत्वशङ्कापराकरणायेदं सूत्रम् । स्वाप्ययो मुक्तिः, सम्पत्तिः सुप्तिः तीर्णो हीति वाक्यम् सुप्तिमुक्तिविषयमेव न स्वर्गस्थविषयम्, कुतः? 'अत्र पिताऽपिता भवत्यनन्वागतं पुण्येनानन्वागतं पापेन' इत्यादिना पितृत्वपुण्यपापाद्यसङ्गत्वादि-लिङ्गश्रवणादस्य वाक्यस्य सुप्तिमुक्तिविषयत्वस्याविष्कृतत्वात् स्फुटं प्रतीयमानत्वात् स्वर्गस्थस्य श्राद्धादिभोक्तुः तदसम्भवादिति सूत्रार्थः । मोक्षपरत्वाभावे बाधकं चाह – **अनन्वागतमिति** ।। पुण्याद्यश्लेषस्य मुक्तिमात्रलिङ्गत्वादिति भावः । नन्वस्त्वेव सुषुप्तिप्रकरणस्य मोक्षपरत्वं ततः किमायातम्? भेदो व्यावहारिक इत्यत्रेत्यत आह – **मोक्षे चेति** ।। परिभाषामात्रं सङ्केतमात्रम्, नतु पराभिप्रेतमविद्यातत्कार्ययोर-न्यतरत्वरूपं तदानीमविद्यायाः निःशेषनाशादिति भावः । ननु स्वप्नादेर्मिथ्यात्वात्त-द्रष्टृत्वे ईश्वरस्य भ्रान्तत्वप्राप्त्या कथं तत्र तन्मुख्यमित्यत आह – **स्वप्नपदार्थानामिति** ।। ननु स्वप्नादिद्रष्टृत्वस्योक्तरीत्या ईश्वरनिष्ठत्वेनासङ्गतत्वेन सह विरोधाभावेऽपि सम्प्रसादे रत्वा चरित्वा दृष्ट्वैव पुण्यं पापं चेत्याद्युक्तलिङ्गा-नामनन्वागतस्तेन भवतीत्याद्युक्तेश्वरलिङ्गैः सह कथं सामानाधिकरण्योपपत्तिरित्यत आह – **अत्र प्रतीतेति** ।। 'शुभाशुभं तु दृष्ट्वैव स्वप्ने जागरितेऽपि च । असंस्पृष्टः सदा दुःखैश्चरतीशः पुनःपुनः' ।। इति बृहदारण्यकभाष्यादुक्तोभयलिङ्गोपपत्तिः द्रष्टव्येत्यर्थः ।। ४२ ।।

**।। इति श्रीशर्कराश्रीनिवासविरचितायां वाक्यार्थमञ्जर्याम् सुषुप्त्यधिकरणम् ।।**

ಪರಿಪೂರ್ಣಚಂದ್ರಿಕಾ

ಸುಷುಪ್ತ್ಯಧಿಕರಣ

(೧-೩-೧೩)

---

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ರಾಮಾನುಜಭಾಷ್ಯ

ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ सुषुप्त्यधिकरणम्

### ಸ್ವಪ್ನದ್ರಷ್ಟೃತ್ವಲಿಂಗಕ್ಕೆ ಸಮನ್ವಯದ ಸಂಗತಿ

**।। ॐ सुषुप्त्युत्क्रान्त्योर्भेदेन ॐ ।।**

**अस्योभयत्र प्रसिद्धत्वं कम्पनादित्यत्रैवोक्तम् ।**

ಅನುವಾದ - 'ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ' ಎಂಬ ಸೂತ್ರದಿಂದ ಸುಷುಪ್ತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಿದ್ದಾರೆ.

ಈ 'ಸ್ವಪ್ನದ್ರಷ್ಟೃತ್ವ' ಎಂಬ ಲಿಂಗವು ಉಭಯತ್ರಪ್ರಸಿದ್ಧವಾಗಿದೆ ಎಂಬ ವಿಚಾರವನ್ನು ಕಂಪನಾಧಿಕರಣದ ಪ್ರಾರಂಭದಲ್ಲಿಯೇ ನಿರೂಪಣೆ ಮಾಡಿದ್ದಾಗಿದೆ.

**अनन्तरसङ्गतिस्तु पूर्ववैषम्येण वा पूर्वसिद्धान्तन्यायेन वा पूर्वपक्षोत्थानात् ।**

ಹಿಂದಿನ ಅಧಿಕರಣದಲ್ಲಿ ಆಕಾಶಶಬ್ದವು ಶ್ರುತಿಪ್ರಸಿದ್ಧವಾದ್ದರಿಂದ ಬ್ರಹ್ಮನಲ್ಲಿ ಸಮನ್ವಯವಾಗಬಹುದಾದರೂ, ಈ ಅಧಿಕರಣದಲ್ಲಿ ಶ್ರುತಿಪ್ರಸಿದ್ಧಿಯು ಇಲ್ಲದ ಕಾರಣ ಸ್ವಪ್ನದ್ರಷ್ಟೃತ್ವವು ಭಗವಂತನಲ್ಲಿ ಸಮನ್ವಯವಾಗುವುದಿಲ್ಲ ಎಂದು ಪೂರ್ವವೈಷಮ್ಯದಿಂದ ಸಂಗತಿಯು ಯುಕ್ತವಾಗುತ್ತದೆ. ಅಥವಾ ಪ್ರಾಕೃತರೂಪವಿಲ್ಲದ ಕಾರಣ ಪ್ರಸಿದ್ಧನಾದ ಬ್ರಹ್ಮನನ್ನೇ ಸ್ವೀಕರಿಸಬೇಕೆಂಬ ಸಿದ್ಧಾಂತನ್ಯಾಯವನ್ನು ಆಕ್ಷೇಪಿಸಿ ಈ ಅಧಿಕರಣ ಹೊರಟಿರುವುದರಿಂದ ಪ್ರತ್ಯುದಾಹರಣರೂಪವಾದ ಅಥವಾ ಆಪವಾದಿಕೀರೂಪವಾದ ಸಂಗತಿಯಿರುತ್ತದೆಂದು ತಿಳಿಯಬೇಕು.

**प्रयोजनं तु पूर्वपक्षेऽक्षराधिकरणोक्तासङ्गत्वाक्षेपः । सिद्धान्ते तु तत्समाधानमिति भाष्य एवोक्तम् ।**

ಪೂರ್ವಪಕ್ಷ ಮಾಡುವಾಗ ಅಕ್ಷರಾಧಿಕರಣದಲ್ಲಿ ಹೇಳಲ್ಪಟ್ಟ ಅಸಂಗತ್ವವನ್ನು ಆಕ್ಷೇಪ ಮಾಡುವಿಕೆಯೇ ಪೂರ್ವಪಕ್ಷದ ಫಲ. ಅದರ ಪರಿಹಾರವೇ ಸಿದ್ಧಾಂತದ ಫಲವೆಂದು ಭಾಷ್ಯದಲ್ಲಿ ಅಧಿಕರಣಪ್ರಯೋಜನವನ್ನು ಹೇಳಿರುತ್ತಾನೆ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – ।। ॐ सुषुप्त्युत्क्रान्त्योर्भेदेन ॐ ।।** अत्र टीकायां 'असङ्गत्वलिङ्गेन लोकप्रसिद्ध्या चेशजीवयोस्साधारणस्य स्वप्नादिदर्शनलिङ्गस्य'' इत्युभयत्र-प्रसिद्धत्वमुक्तम् ।

ವಿವರಣೆ - 'ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ' ಈ ಅಧಿಕರಣದ ಟೀಕೆಯಲ್ಲಿ 'ಅಸಂಗತ್ವಲಿಂಗೇನ ಲೋಕಪ್ರಸಿದ್ಧ್ಯಾ ಚೇಶಜೀವಯೋಃ ಸಾಧಾರಣಸ್ಯ ಸ್ವಪ್ನಾದಿದರ್ಶನಲಿಂಗಸ್ಯ' ಅಸಂಗತ್ವ ಲಿಂಗದಿಂದ ಸ್ವಪ್ನಾದಿದರ್ಶನಲಿಂಗವು ಭಗವಂತನಲ್ಲಿ ಲೋಕಪ್ರಸಿದ್ಧಿಯಿಂದ ಜೀವನಲ್ಲಿ ಸಾಧಾರಣವಾಗಿದೆ. ಆದ್ದರಿಂದ ಸ್ವಪ್ನಾದಿದರ್ಶನವೆಂಬ ಲಿಂಗವನ್ನು ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬೇಕು ಎಂದು ಹೇಳಿದ್ದಾರೆ.

**प्रकाशः –** तदयुक्तमिव । नामपादीयाकाशादिशब्दानामपीश्वरलिङ्गलोक-प्रसिद्धिभ्यां तथात्वापत्तेरित्यत आह – **अस्येति ।। स्वप्नद्रष्टृत्वलिङ्गस्येत्यर्थः ।**

ಇದು ಹೇಗೆ ಸರಿ. ಏಕೆಂದರೆ ನಾಮಪಾದದ ಆಕಾಶಾದಿಶಬ್ದಗಳೂ ಕೂಡ ಈಶ್ವರಲಿಂಗದಿಂದ ಮತ್ತು ಲೋಕಪ್ರಸಿದ್ಧಿಯಿಂದ ಇದರಂತೆ ಉಭಯತ್ರಪ್ರಸಿದ್ಧವಾಗುತ್ತವೆಂದು ಹೇಳಬಹುದಲ್ಲವೇ? ಈ ಪ್ರಶ್ನೆಗೆ 'ಅಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅಸ್ಯ' ಎಂದರೆ ಸ್ವಪ್ನದ್ರಷ್ಟೃತ್ವವೆಂಬ ಲಿಂಗಕ್ಕೆ ಎಂದರ್ಥ.

**प्रकाशः –** नामपादादिन्यायसाम्येन वज्रादिनाम्नां स्वप्नद्रष्टृत्वादिलिङ्गानां च ब्रह्मणि प्रयोगस्योक्त्या प्रयोगसाधारण्येनोभयत्रप्रसिद्धत्वादित्यर्थः । टीकाऽपि तथैव नेयेति भावः ।

ನಾಮಪಾದನ್ಯಾಯದ ಬಲದಿಂದ ವಜ್ರಶಬ್ದವು ಭಗವಂತನಲ್ಲಿ ಬರುತ್ತದೆ. ಲೋಕರೂಢಿಯಿಂದ ಇಂದ್ರಾಯುಧದಲ್ಲಿ ಬರುತ್ತದೆ. ಸ್ವಪ್ನದ್ರಷ್ಟೃತ್ವವೆಂಬ ಲಿಂಗವೂ ಸಹ ಲಿಂಗಪಾದದ ನ್ಯಾಯದಿಂದ ಭಗವಂತನಲ್ಲಿ ಬರುತ್ತದೆ. ಲೋಕಪ್ರಸಿದ್ಧಿಯಿಂದ ಜೀವನಲ್ಲಿ ಬರುತ್ತದೆ. ಹೀಗೆ ವಜ್ರವೆಂಬ ನಾಮಾತ್ಮಕಶಬ್ದವು ಸ್ವಪ್ನದ್ರಷ್ಟೃತ್ವವೆಂಬ ಲಿಂಗಾತ್ಮಕಶಬ್ದವು ಉಭಯಸಾಧಾರಣವಾಗಿರುವುದರಿಂದ, ಉಭಯತ್ರಪ್ರಸಿದ್ಧವೆನಿಸುತ್ತವೆ ಎಂದು ಇದರ ಅರ್ಥ. ಟೀಕಾಮಾತನ್ನೂ ಕೂಡ ಹೀಗೆಯೇ ಅರ್ಥೈಸಬೇಕು.

**प्रकाशः – ''जीवस्यैव भवेत् प्रसिद्धत्वात्'' इति टीकायां प्रसिद्धपदप्रयोगेण हरावप्रसिद्धिसूचनेन सूचितं सङ्गतिद्वयमाह – पूर्वेति ।।**

'ಜೀವಸ್ಯೈವ ಭವೇತ್ ಪ್ರಸಿದ್ಧತ್ವಾತ್' ಜೀವನೇ 'ಸ್ವಪ್ನದ್ರಷ್ಟ' ಎನಿಸುತ್ತಾನೆ. ಅವನಲ್ಲೇ ಇದು ಪ್ರಸಿದ್ಧವಾದ್ದರಿಂದ ಎಂಬ ಟೀಕೆಯಲ್ಲಿರುವ ಪ್ರಸಿದ್ಧ ಪದಪ್ರಯೋಗದಿಂದ ಶ್ರೀಹರಿಯಲ್ಲಿ ಈ ಲಿಂಗವು ಅಪ್ರಸಿದ್ಧವಾಗಿದೆಯೆಂದು ಸೂಚಿಸಿದ್ದಾರೆ. ಇದರಿಂದ ಈ ಅಧಿಕರಣಕ್ಕೆ ಎರಡುಬಗೆಯ ಸಂಗತಿಗಳನ್ನು ತೋರಿಸಿದಂತಾಗುತ್ತದೆಂದು 'ಪೂರ್ವವೈಷಮ್ಯೇಣ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः – प्रागाकाशशब्दस्य श्रौतप्रसिद्ध्या ब्रह्मणि सम्भवेऽपीह तदभावान्न स्वप्नद्रष्टृत्वं हरेर्युक्तमिति वा आकाशस्य जडत्वेन तत्रेशलिङ्गस्येशाभेदेनायोगेऽपीह जीवस्येशाभेदेन तल्लिङ्गं नेतुं शक्यत इति वा पूर्ववैषम्येण अव्याकृताकाशस्या-रूपत्वेऽप्यरूपत्वेन प्रसिद्धब्रह्मण एव ग्रहणं पूर्वत्र यथा तथेहापि स्वप्नादिद्रष्टृत्वेन प्रसिद्धस्य जीवस्यैव ग्रहणमिति पूर्वन्यायेन वेत्यग्रे स्पष्टम् । तथाच प्रत्युदाहरणरूपा वाऽऽपवादिकी वा सङ्गतिरित्यर्थः ।**

ಹಿಂದಿನ ಅಧಿಕರಣದಲ್ಲಿ ಆಕಾಶಶಬ್ದವು ಶ್ರುತಿಯಲ್ಲಿ ಪ್ರಸಿದ್ಧವಾದ ಕಾರಣ ಬ್ರಹ್ಮನಲ್ಲಿ ಸಮನ್ವಯವಾಗುತ್ತದೆಂದು ಸಮರ್ಥನೆ ಮಾಡಲಾಯಿತು. ಆದರೆ ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವು ಶ್ರುತಿಯಲ್ಲಿ ಪ್ರಸಿದ್ಧವಾಗದ ಕಾರಣ ಭಗವಂತನಲ್ಲಿ ಸಮನ್ವಯ ಮಾಡಲು ಸಾಧ್ಯವಿಲ್ಲ. ಅಥವಾ ಅವ್ಯಾಕೃತಾಕಾಶವು ಜಡವಾದ ಕಾರಣ ಪರಮಾತ್ಮನಿಂದ ಅಭೇದವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಜೀವನು ಚೇತನನಾದ ಕಾರಣ ಭಗವಂತನಿಂದ ಅಭೇದವನ್ನು ಹೇಳಬಹುದು. ಆದ್ದರಿಂದ ಪರಮಾತ್ಮನ ಲಿಂಗವನ್ನು ಜೀವನಲ್ಲೂ ಕೂಡ ಉಪಪಾದಿಸಬಹುದೆಂದು ಹಿಂದಿನ ಅಧಿಕರಣಕ್ಕಿಂತ ವಿಷಮವಾದ ಸಂಗತಿಯಿರುತ್ತದೆ. ಅಥವಾ ಅವ್ಯಾಕೃತಾಕಾಶವು ರೂಪರಹಿತವಾಗಿದ್ದರೂ, ಪ್ರಾಕೃತರೂಪರಹಿತನೆಂದು ಪ್ರಸಿದ್ಧನಾದ ಬ್ರಹ್ಮನನ್ನೇ ಆಕಾಶಶಬ್ದ ಪ್ರತಿಪಾದ್ಯನೆಂದು ಹಿಂದೆ ಸಿದ್ಧಾಂತ ಮಾಡಲಾಯಿತು. ಅದರಂತೆ ಇಲ್ಲಿ ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವು ಜೀವನಲ್ಲಿ ಪ್ರಸಿದ್ಧವಾಗಿರುವುದರಿಂದ ಜೀವನನ್ನೇ ಸ್ವಪ್ನಾದಿದ್ರಷ್ಟೃವೆಂದು ಸ್ವೀಕರಿಸಬೇಕು. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯವನ್ನೇ ಅವಲಂಬಿಸಿ ಪೂರ್ವಪಕ್ಷ ಹೊರಟಿರುವುದರಿಂದಲೂ ಸಂಗತಿಯನ್ನು ತಿಳಿಯಬೇಕು. ಪೂರ್ವವೈಷಮ್ಯವನ್ನು ತೋರಿಸಿ ಸಂಗತಿ ಹೇಳಿದಾಗ ಪ್ರತ್ಯುದಾಹರಣರೂಪವಾದ ಸಂಗತಿಯೆಂದು ಅಥವಾ ಹಿಂದಿನ ಅಧಿಕರಣದ ಸಿದ್ಧಾಂತವನ್ನೇ ಅವಲಂಬಿಸಿ ಪೂರ್ವಪಕ್ಷವನ್ನು ಮಾಡಿದಾಗ ಆಪವಾದಿಕೀಸಂಗತಿಯನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः – एवं तर्हि पूर्वोक्ते विरोधाभावादफलेयं चिन्तेत्यत आह – प्रयोजनं त्विति ॥ एतेन "असङ्गमरसमगन्धम्" इत्यादिटीका विवृता । एतेनैव स्वोक्त-सङ्गतेर्भाष्यादिविरोधोऽपि प्रत्युक्तः । तस्य फलपरत्वादिति ।**

ಹೀಗೆ ಹೇಳಿದಾಗ ಹಿಂದೆ ಹೇಳಿದ ಯಾವುದೇ ವಿಚಾರಕ್ಕೂ ವಿರೋಧ ಬರುವುದಿಲ್ಲ. ಆದ್ದರಿಂದ ಈ ವಿಚಾರವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಪ್ರಯೋಜನಂ ತು' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಇದರಿಂದ 'ಅಸಂಗಮರಸಮಗಂಧಮ್' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು. ಮತ್ತು ಇದರಿಂದಲೇ ತಾವು ಹೇಳಿದ ಸಂಗತಿಗೆ ಭಾಷ್ಯಾದಿವಿರೋಧವನ್ನೂ ಕೂಡ ಪರಿಹರಿಸಿದಂತಾಯಿತು. ಏಕೆಂದರೆ ಭಾಷ್ಯದಲ್ಲಿ ಅಕ್ಷರಾಧಿಕರಣದಿಂದ ಸಂಗತಿಯನ್ನು ಹೇಳಿದಂತೆ ಕಾಣಿಸುತ್ತದೆ. ಆದರೆ ಅದು ಕೇವಲ ಫಲಪರವಾಗಿದೆಯೆಂದು ತಿಳಿಯಬೇಕು.




ಸುಷುಪ್ತ್ಯಧಿಕರಣದಲ್ಲಿ ಸ್ವಪ್ನದ್ರಷ್ಟೃತ್ವವೆಂಬ ಲಿಂಗವನ್ನು ಭಗವಂತನಲ್ಲಿ ಸಮನ್ವಯ ಮಾಡಲಾಗಿದೆ. ಲಿಂಗಪಾದದ ನ್ಯಾಯದಿಂದ ಈ ಲಿಂಗವು ಭಗವತ್ಪರವಾಗಿದೆಯೆಂದು ತಿಳಿಯುತ್ತದೆ. ಆದರೆ ಲೋಕದಲ್ಲಿ ಹೆಚ್ಚಾಗಿ ಜೀವನಲ್ಲೇ ಇದು ಪ್ರಸಿದ್ಧವಾದ ಕಾರಣ ಉಭಯತ್ರಪ್ರಸಿದ್ಧವಾಗಿದೆ.

ಹಿಂದಿನ ಆಕಾಶಾಧಿಕರಣದಲ್ಲಿ ಶ್ರುತಿಪ್ರಸಿದ್ಧವಾದ ಕಾರಣ, ಆಕಾಶಶಬ್ದವು ಬ್ರಹ್ಮನಲ್ಲಿ ಸಮನ್ವಯವಾಗುತ್ತದೆಂದು ಸಮರ್ಥಿಸಲಾಯಿತು. ಆದರೆ ಇಲ್ಲಿ ಸಮನ್ವಯ ಮಾಡುತ್ತಿರುವ ಸ್ವಪ್ನದ್ರಷ್ಟೃತ್ವಲಿಂಗವು ಶ್ರುತಿಪ್ರಸಿದ್ಧವೇ ಆಗಿಲ್ಲ. ಆದ್ದರಿಂದ ಇದನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಲು ಹೇಗೆ ಸಾಧ್ಯ ? ಅಥವಾ ಅವ್ಯಾಕೃತಾಕಾಶವು ಜಡವಾದ್ದರಿಂದ ಪರಮಾತ್ಮನಿಂದ ಅಭೇದವನ್ನು ಹೇಳಲು ಬರುವುದಿಲ್ಲ. ಆದರೆ ಜೀವನು ಪರಮಾತ್ಮನಿಗಿಂತ ಅಭಿನ್ನನಾದ ಕಾರಣ, ಪರಮಾತ್ಮನಲಿಂಗವನ್ನು ಜೀವನಲ್ಲಿ ಹೇಳಬಹುದೆಂದು ಪೂರ್ವವೈಷಮ್ಯದಿಂದ ಸಂಗತಿಯನ್ನು ತಿಳಿಯಬೇಕು. ಅಥವಾ ಅವ್ಯಾಕೃತಾಕಾಶವು ರೂಪರಹಿತವಾಗಿದ್ದರೂ ರೂಪರಹಿತನೆಂದು ಪ್ರಸಿದ್ಧನಾದ ಕಾರಣದಿಂದಲೇ ಬ್ರಹ್ಮನು ಆಕಾಶಶಬ್ದ ಪ್ರತಿಪಾದ್ಯನೆಂದು ಹೇಗೆ ಸಿದ್ಧಾಂತ ಮಾಡಿದಿರೋ, ಅದರಂತೆ ಇಲ್ಲಿ ಸ್ವಪ್ನದ್ರಷ್ಟೃತ್ವವು ಜೀವನಲ್ಲೇ ಪ್ರಸಿದ್ಧವಾದ ಕಾರಣ ಜೀವನನ್ನೇ ವಿವಕ್ಷಿಸಬೇಕೆಂದು ಪೂರ್ವಸಿದ್ಧಾಂತ ನ್ಯಾಯದಿಂದಲೇ ಸಂಗತಿಯನ್ನು ತೋರಿಸಬೇಕು. ಭಾಷ್ಯದಲ್ಲಿ ಅಕ್ಷರಾಧಿಕರಣದ ಜೊತೆ ಸಂಗತಿ ಹೇಳಿದ್ದಲ್ಲ, ಹೊರತಾಗಿ ಅಕ್ಷರಾಧಿಕರಣದಲ್ಲಿ ಹೇಳಲ್ಪಟ್ಟ ಅಸಂಗತ್ವವನ್ನು ಸ್ವಪ್ನದ್ರಷ್ಟೃವಾದ ಜೀವನಲ್ಲಿ ಶ್ರುತಿ ಹೇಳಿದ್ದರಿಂದ, ಅಕ್ಷರಾಧಿಕರಣದ ವಿಷಯವನ್ನು ಕೇವಲ ಆಕ್ಷೇಪ ಮಾಡಿದ್ದಾರೆಂದು ತಿಳಿಯಬೇಕು. ಆದ್ದರಿಂದ ಅದು ಕೇವಲ ಫಲಪರವಾಗಿದೆ.



## ಸಂದೇಹ ಕೋಟಿಗಳು

## तात्पर्यचन्द्रिका

**अत्र स्वप्नादिद्रष्टृत्वं किं जीवस्योत ब्रह्मण इति चिन्ता ।**

ಅನುವಾದ - ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ - ಬೃಹದಾರಣ್ಯಕದ ಆರನೆಯ ಅಧ್ಯಾಯದಲ್ಲಿ 'ಸವಾ ಏಷ ಏತಸ್ಮಿನ್' ಇತ್ಯಾದಿ ವಾಕ್ಯವು ಶ್ರುತವಾಗಿದೆ. ಇಲ್ಲಿ ಕೇಳಿಸುತ್ತಿರುವ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿ ಬರುತ್ತದೋ, ಅಥವಾ ಬ್ರಹ್ಮನಲ್ಲೋ ? ಎಂಬುದು ಪ್ರಧಾನ ಸಂಶಯ. '

**तदर्थं किं लोकप्रसिद्धिबाधकं नास्त्युतास्तीति ।**

ಪ್ರಧಾನಸಂಶಯವು ಪರಿಹಾರವಾಗಬೇಕೆಂದರೆ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲೇ ಇದೆಯೆಂಬ ಯಾವ ಲೋಕಪ್ರಸಿದ್ಧಿಯಿದೆಯೋ, ಅದಕ್ಕೆ ಬಾಧಿಕವು ಇರುವುದಿಲ್ಲವೋ, ಅಥವಾ ಇರುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थमसङ्गत्वादिकं किं जीवे ब्रह्माभेदाभिप्रायेण नेतुं शक्यमुताशक्यमिति ।**

ಎರಡನೆಯ ಸಂಶಯವು ಪರಿಹಾರವಾಗಬೇಕೆಂದರೆ ಅಸಂಗತ್ವವು ಬ್ರಹ್ಮನ ಅಭೇದದಿಂದ ಜೀವನಲ್ಲಿ ಯುಕ್ತವಾಗುತ್ತದೋ, ಅಥವಾ ಆಗುವುದಿಲ್ಲವೋ ? ಎಂಬ ಸಂಶಯವು ಪರಿಹಾರಬೇಕು.

**तदर्थं सुषुप्त्युत्क्रान्त्योर्व्यपदिष्टो भेदः किं मिथ्योत सत्य इति ।**

ಮೂರನೆಯ ಸಂಶಯವು ಪರಿಹಾರವಾಗಬೇಕೆಂದರೆ ಸುಷುಪ್ತಿ ಹಾಗೂ ಉತ್ಕ್ರಾಂತಿಗಳಿಗೆ ಹೇಳಲ್ಪಟ್ಟ ಭೇದವು ಮಿಥ್ಯಾಭೂತವಾಗಿದೆಯೋ, ಅಥವಾ ಸತ್ಯವಾಗಿದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

विषयसंशयटीकां व्यनक्ति ।। अत्रेति ।। वाजसनेये षष्ठे तृतीयब्राह्मणे ज्योतिर्वाक्यादनन्तरं श्रूयते ''सवा एष एतस्मिन्सम्प्रसादे रत्वा चरित्वा दृष्ट्वैव पुण्यं च पापं च पुनः प्रतिन्यायं प्रतियोन्या द्रवति स्वप्नायैव स यत्तत्र किञ्चित्पश्यत्यनन्वागतस्तेन भवत्यसङ्गो ह्ययं पुरुष इत्यादि ।

ವಿವರಣೆ - ಈ ಅಧಿಕರಣದ ವಿಷಯವಾಕ್ಯವನ್ನು ಮತ್ತು ಸಂಶಯಕೋಟಿಯನ್ನು ನಿರೂಪಣೆ ಮಾಡುತ್ತಾ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. ಬೃಹದಾರಣ್ಯಕೋಪನಿಷತ್ತಿನ ಆರನೇ ಅಧ್ಯಾಯದ ಮೂರನೆಯ ಬ್ರಾಹ್ಮಣದಲ್ಲಿ ಜ್ಯೋತಿರ್ವಾಕ್ಯದ ಅನಂತರ ಹೀಗೆ ಶ್ರುತವಾಗಿದೆ - 'ಸವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾಯೈವ ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ' ಇತ್ಯಾದಿಯಾಗಿ.

**प्रकाशः – तद्वाक्ये यत्तत्र स्वप्ने किञ्चित्पश्यतीत्युक्तं स्वप्नावस्थातत्स्थवस्तु नोर्द्रष्टृत्वं विषय इत्यर्थः ।**

ಈ ವಾಕ್ಯದಲ್ಲಿ 'ಸ್ವಪ್ನೇ ಕಿಂಚಿತ್ ಪಶ್ಯತಿ' ಎಂಬುದಾಗಿ ಸ್ವಪ್ನಾವಸ್ಥೆ ಹಾಗೂ ಸ್ವಪ್ನಾವಸ್ಥೆಯಲ್ಲಿ ವಸ್ತುಗಳನ್ನು ನೋಡುವಿಕೆ ಇದೇ ವಿಷಯವಾಗಿದೆ ಎಂದು ತಿಳಿಯಬೇಕು.

**प्रकाशः – यदि भेदो मिथ्या तदाऽसङ्गत्वस्य जीवेऽपि ब्रह्माभेदेन नयनसम्भवेन प्रसिद्धिबाधाभावाज्जीवस्यैवेदं लिङ्गम् । अन्यदातु नेति स्पष्टा हेतुहेतुमत्तेति भावः ।**

ಪೂರ್ವಪಕ್ಷದ ಫಲ - ಒಂದು ವೇಳೆ ಜೀವಬ್ರಹ್ಮರಿಗಿರುವ ಭೇದವು ಮಿಥ್ಯಾಭೂತವಾದಲ್ಲಿ, ಬ್ರಹ್ಮನಲ್ಲಿರುವ ಅಸಂಗತ್ವವು ಜೀವನಲ್ಲೂ ಬರುತ್ತದೆ. ಜೀವನಲ್ಲಿ ಇರುವ ಸ್ವಪ್ನದ್ರಷ್ಟೃತ್ವದ ಪ್ರಸಿದ್ಧಿಗೆ ಬಾಧವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವಪ್ನದ್ರಷ್ಟೃತ್ವಾದಿಲಿಂಗಗಳು ಜೀವನದ್ದೇ ಆಗುತ್ತವೆ.

ಸಿದ್ಧಾಂತದ ಫಲ - ಒಂದುವೇಳೆ ಜೀವಬ್ರಹ್ಮರ ಭೇದವು ಸತ್ಯವಾದಲ್ಲಿ, ಅಸಂಗತ್ವವು ಬ್ರಹ್ಮನ ಧರ್ಮವೇ ಆಗುತ್ತದೆ. ಆವಾಗ ಲೋಕಪ್ರಸಿದ್ಧಿಯನ್ನು ಬಾಧಿಸಿ, ಬ್ರಹ್ಮನಲ್ಲೇ ಸ್ವಪ್ನದ್ರಷ್ಟೃತ್ವಲಿಂಗವು ಬರುತ್ತದೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् –** ॐ सुषुप्त्युत्क्रान्त्योर्भेदेन ॐ ।। ननु स्वप्नद्रष्टृत्वलिङ्गस्य लोकतोऽन्यत्रप्रसिद्धत्वात्कथमुभयत्रप्रसिद्धतेत्यत आह – **अस्येति ।। पूर्ववैषम्येणेति ।।** पूर्वाधिकरणे आकाशशब्दस्य ब्रह्मणि प्रसिद्धत्वान्नामादिनिर्वोढृत्वस्य ब्रह्मणि प्रसिद्धत्वेऽपि स्वप्नद्रष्टृत्वस्य ब्रह्मण्यप्रसिद्धत्वादन्यपरत्वमिति वैषम्येणेत्यर्थः ।। **सिद्धान्तन्यायेनेति ।।** यथा पूर्वाधिकरणेऽव्याकृताकाशस्य रूपमात्राभावेऽपि प्राकृतरूपरहितत्वेन प्रसिद्धस्य ब्रह्मण एव ग्रहणं तथा स्वप्नादिद्रष्टृत्वेन प्रसिद्धस्य जीवस्यैव ग्रहणमिति पूर्वसिद्धान्तन्यायेनेत्यर्थः ।



ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದ ಮೂರನೆಯ ಬ್ರಾಹ್ಮಣದಲ್ಲಿ 'ಸವಾ ಏಷ ಏತಸ್ಮಿನ್ ಸಂಪ್ರಸಾದೇ' ಇತ್ಯಾದಿ ವಾಕ್ಯವು ಶ್ರುತವಾಗಿದೆ. 'ಸ ಯತ್ತತ್ರ ಕಿಂಚಿತ್‌ಪಶ್ಯತ್ಯನನ್ವಾಗತಸ್ತೇನ ಭವತಿ' ಎಂಬುದೇ ಈ ಅಧಿಕರಣದ ವಿಷಯವಾಕ್ಯ. ಸ್ವಪ್ನಾವಸ್ಥೆಯಲ್ಲಿ ಯಾವ ಅನಿಷ್ಟವನ್ನು ನೋಡಿದರೂ ಅದರಿಂದ ದುಃಖದ ಸ್ಪರ್ಶವು ಅವನಿಗೆ ಉಂಟಾಗುವುದಿಲ್ಲ ಎಂದು ಶ್ರುತಿಯ ಅರ್ಥ. ಇಲ್ಲಿ ಹೇಳಿರುವ ಸ್ವಪ್ನದ್ರಷ್ಟೃವು ಜೀವನೇ ಆಗಿದ್ದಾನೆಂದು ಪೂರ್ವಪಕ್ಷ. 'ಅಸಂಗೋ ಹ್ಯಯಂ ಪುರುಷ' ಎಂಬ ಮುಂದಿನ ವಾಕ್ಯದಲ್ಲಿ ಸ್ವಪ್ನಾದಿದ್ರಷ್ಟೃವಿಗೆ ದುಃಖಸ್ಪರ್ಶವು ಆಗದಿರುವುದು ಬ್ರಹ್ಮನ ಅಸಾಧಾರಣಧರ್ಮವಾದ ಅಸಂಗತ್ವವನ್ನು ಕಾರಣವನ್ನಾಗಿ ಹೇಳಿರುವುದರಿಂದ ಸ್ವಪ್ನಾದಿದ್ರಷ್ಟೃವು ಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ.

ಪೂರ್ವಪಕ್ಷದ ಫಲ - ಒಂದು ವೇಳೆ ಜೀವಬ್ರಹ್ಮರಿಗಿರುವ ಭೇದವು ಮಿಥ್ಯಾಭೂತವಾದಲ್ಲಿ, ಬ್ರಹ್ಮನಲ್ಲಿರುವ ಅಸಂಗತ್ವವು ಜೀವನಲ್ಲೂ ಬರುತ್ತದೆ. ಜೀವನಲ್ಲಿ ಇರುವ ಸ್ವಪ್ನದ್ರಷ್ಟೃತ್ವದ ಪ್ರಸಿದ್ಧಿಗೆ ಬಾಧವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ವಪ್ನದ್ರಷ್ಟೃತ್ವಾದಿಲಿಂಗಗಳು ಜೀವನದ್ದೇ ಆಗುತ್ತದೆ.

ಸಿದ್ಧಾಂತದ ಫಲ - ಒಂದುವೇಳೆ ಜೀವಬ್ರಹ್ಮರ ಭೇದವು ಸತ್ಯವಾದಲ್ಲಿ, ಅಸಂಗತ್ವವು ಬ್ರಹ್ಮನ ಧರ್ಮವೇ ಆಗುತ್ತದೆ. ಆವಾಗ ಲೋಕಪ್ರಸಿದ್ಧಿಯನ್ನು ಬಾಧಿಸಿ, ಬ್ರಹ್ಮನಲ್ಲೇ ಸ್ವಪ್ನದ್ರಷ್ಟೃತ್ವಲಿಂಗವು ಬರುತ್ತದೆ.



● ● ● ● ●

## ಸ್ವಪ್ನಾದಿದ್ರಷ್ಟಾ ಜೀವನೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु ।। पूर्वोक्त आकाशशब्दः श्रुतिषु ब्रह्मणि प्रसिद्धः । नामादिनिर्वोढृत्वं तु ब्रह्मण्येव प्रसिद्धम् ।**

ಅನುವಾದ - ಪೂರ್ವಪಕ್ಷ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಏಕೆಂದರೆ ಶ್ರುತಿಗಳೆಲ್ಲೆಲ್ಲಡೆ ಆಕಾಶಶಬ್ದವು ಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ. ನಾಮರೂಪಗಳ ನಿರ್ವಹಿತೃತ್ವವೂ ಕೂಡ ಬ್ರಹ್ಮನಲ್ಲೇ ಪ್ರಸಿದ್ಧವಾಗಿದೆ.

**"द्रवति स्वप्नायैव स यत्तत्र किञ्चित्पश्यत्यनन्वागतस्तेन भवत्यसङ्गो ह्ययं पुरुषः" इति श्रुतं स्वप्नादिद्रष्टृत्वं तु न तथा । किन्तु लोके जीव एव प्रसिद्धम् ।**

ಆದರೆ ಸ್ವಪ್ನಾದಿದ್ರಷ್ಟೃತ್ವವು ಹಾಗೇ ಬ್ರಹ್ಮನಲ್ಲಿ ಪ್ರಸಿದ್ಧವಾಗಿಲ್ಲ. 'ದ್ರವತಿ ಸ್ವಪ್ನಾಯ್ಯೈವ ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋಹ್ಯಯಂ ಪುರುಷಃ' ಎಂಬ ಶ್ರುತಿಯು ಸ್ವಪ್ನಾವಸ್ಥೆಯಲ್ಲಿ ಅನೇಕ ಪದಾರ್ಥಗಳನ್ನು ನೋಡುತ್ತಾನೆ. ಅವನಿಗೆ ಆಯಾ ಪದಾರ್ಥಗಳ ಸಂಪರ್ಕವು ಇಲ್ಲದ ಕಾರಣ, ಅಸಂಗನಾಗಿದ್ದಾನೆಂದು ಹೇಳುತ್ತಿದೆ. ಈ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಲೋಕರೂಢಿಯಿಂದ ಜೀವನಲ್ಲೇ ಪ್ರಸಿದ್ಧವಾಗಿದೆ.

**आर्यप्रसिद्ध्यभावे पिकनेमादौ लोकप्रसिद्धिवद्वेदप्रसिद्ध्यभावे लोकप्रसिद्धिरेव च ग्राह्या ।**

ಲೋಕಪ್ರಸಿದ್ಧಿಯನ್ನೇ ಅನುಸರಿಸಬೇಕು. ಏಕೆಂದರೆ ಪೂರ್ವಮೀಮಾಂಸೆಯಲ್ಲಿ ಪಿಕನೇಮಾಧಿ-ಕರಣದಲ್ಲಿ ಪಿಕ, ನೇಮ, ತಾಮರಸ ಮೊದಲಾದ ಶಬ್ದಗಳಿಗೆ ಆರ್ಯಪ್ರಸಿದ್ಧಿಯಿಲ್ಲದಾಗ ಲೋಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕೆಂದು ಸಿದ್ಧಾಂತ ಮಾಡಲಾಗಿದೆ. ಅದರಂತೆ ಪ್ರಕೃತ ಸ್ವಪ್ನಾದಿದ್ರಷ್ಟೃವು ಬ್ರಹ್ಮನಾಗಿದ್ದಾನೆಂದು ವೇದದಲ್ಲಿ ಪ್ರಸಿದ್ಧಿಯಿಲ್ಲ. ಹಾಗಾಗಿ ಲೋಕಪ್ರಸಿದ್ಧಿಯನ್ನೇ ವಿವಕ್ಷಿಸಬೇಕು. ಲೋಕಪ್ರಸಿದ್ಧಿಯು ಜೀವನಲ್ಲಿರುವುದರಿಂದ ಜೀವನೇ ಸ್ವಪ್ನಾದಿದ್ರಷ್ಟೃ ಎನಿಸುತ್ತಾನೆ.

**यद्यपि प्रसिद्धिद्योतकनिपातो नास्ति । तथापि ''यमन्तः समुद्र'' इत्यादाविव प्रसिद्धमेव ग्राह्यम् ।**

ವಾಸ್ತವಿಕವಾಗಿ ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಲೌಕಿಕಪ್ರಸಿದ್ಧಿಗೆ ದ್ಯೋತಕವಾದ ಯಾವುದೇ ನಿಪಾತಗಳು ಶ್ರುತಿಯಲ್ಲಿ ಕಾಣಿಸುತ್ತಿಲ್ಲ. ಆದರೆ 'ಯಮಂತಃ ಸಮುದ್ರೇ' ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧಿದ್ಯೋತಕವಾದ ನಿಪಾತಗಳಿಲ್ಲದಿದ್ದರೂ ಸಮುದ್ರಸ್ಥಿತನಾದವನು ನಾರಾಯಣನಾಗಿದ್ದಾನೆಂದು ಪ್ರಸಿದ್ಧಿಬಲದಿಂದ ಹೇಗೆ ನಿರ್ಣಯಿಸುತ್ತೀರೋ, ಅದರಂತೆ ನಾವೂ ಸಹ ಪ್ರಸಿದ್ಧಿದ್ಯೋತಕವಾದ ನಿಪಾತಗಳಿಲ್ಲದಿದ್ದರೂ ಲೋಕಪ್ರಸಿದ್ಧಿಯಿಂದ ಜೀವನೇ 'ಸ್ವಪ್ನಾದಿದ್ರಷ್ಟೃ' ಆಗಿದ್ದಾನೆಂದು ನಿರ್ಣಯಿಸುತ್ತೇವೆ.

**नच वज्राकाशादिशब्दानां प्रसिद्धार्थत्यागेन ब्रह्मपरत्ववदिह पश्यत्यादिपदानां योगेन ब्रह्मपरता युक्ता इष्टा वा ।**

ಮತ್ತು ಈ ಶ್ರುತಿಯು ಬ್ರಹ್ಮಪರವಾಗಿದೆಯೆಂಬುದು ಯುಕ್ತವೂ ಅಲ್ಲ. ವಜ್ರ ಆಕಾಶ ಮೊದಲಾದ ಶಬ್ದಗಳಿಗೆ ಲೋಕಪ್ರಸಿದ್ಧವಾದ ಅರ್ಥವನ್ನು ಬಿಟ್ಟು, ಬ್ರಹ್ಮಪರತ್ವವನ್ನು ಸಿದ್ಧಾಂತಿಗಳು ಹೇಳಿದರು ಏಕೆಂದರೆ ಶ್ರುತಿಪ್ರಸಿದ್ಧಿಯಿರುವ ಕಾರಣದಿಂದ. ಆದರೆ ಪ್ರಕೃತ 'ಪಶ್ಯತಿ' ಇತ್ಯಾದಿ ಪದಗಳಿಗೆ ಯೌಗಿಕಾರ್ಥವನ್ನು ಸ್ವೀಕರಿಸಿ, ಬ್ರಹ್ಮಪರತ್ವವನ್ನು ಹೇಳಿದರೆ ವಾಕ್ಯಕ್ಕೆ ತಾತ್ಪರ್ಯವೇ ಇಲ್ಲದಂತಾಗುತ್ತದೆ.

ಅಥವಾ ಪ್ರತಿಯೊಂದು ಪದಗಳ ಸಮನ್ವಯವು ಚತುರ್ಥಪಾದದಲ್ಲಿ ಸಮನ್ವಯವನ್ನು ಮಾಡುವುದು ಸಿದ್ಧಾಂತಿಗಳಿಗೆ ಇಷ್ಟವಾಗಿದೆ. ಪ್ರಕೃತ ಈ ಅಧಿಕರಣದಲ್ಲಿ ಹಾಗೇ ಸಮನ್ವಯ ಮಾಡುವುದು ಸಿದ್ಧಾಂತಿಗಳಿಗೂ ಕೂಡ ಇಷ್ಟವಲ್ಲ.

**नच ''संध्ये सृष्टिराह हि'' इत्यादिन्यायैः स्वाप्नवस्तुनि, जीवगतस्वप्नावस्थाच सत्या । ब्रह्मणश्च सर्वज्ञत्वं श्रुतिप्रसिद्धमिति वाच्यम् ।**

'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಸೂತ್ರದಲ್ಲಿ ಹೇಳಿದಂತೆ ಸ್ವಾಪ್ನಪದಾರ್ಥಗಳೆಲ್ಲವೂ ಸತ್ಯವಾಗಿವೆ. ಮತ್ತು ಜೀವನ ಸ್ವಪ್ನಾವಸ್ಥೆಯೂ ಕೂಡ ಸತ್ಯವೇ ಆಗಿವೆ. ಬ್ರಹ್ಮನು ಸರ್ವಜ್ಞನೆಂದು ಶ್ರುತಿಪ್ರಸಿದ್ಧಿಯಿರುವುದರಿಂದ ಸ್ವಾಪ್ನಪದಾರ್ಥಗಳನ್ನು ಅವನು ನೋಡುತ್ತಾನಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಇದು ತಪ್ಪು.

**यथाऽव्याकृताकाशस्य रूपमात्राभावेऽपि प्राकृतरूपरहितत्वेन प्रसिद्धस्य ब्रह्मण एव ''ते यदन्तर'' इत्यत्र ग्रहणं तथा ब्रह्मणो वस्तुमात्रद्रष्टृत्वेऽपि स्वप्नादिद्रष्टृत्वेन प्रसिद्धस्य जीवस्यैवेह ग्रहणात् ।**

ಏಕೆಂದರೆ ಯಾವರೀತಿಯಾಗಿ ಅವ್ಯಾಕೃತಾಕಾಶಕ್ಕೆ ರೂಪಸಾಮಾನ್ಯವು ಇಲ್ಲದಿದ್ದರೂ ಪ್ರಾಕೃತರೂಪ-ರಹಿತನೆಂದು ಪ್ರಸಿದ್ಧನಾದ ಬ್ರಹ್ಮನನ್ನೇ 'ತೇ ಯದಂತರ' ಎಂಬ ಶ್ರುತಿಯಿಂದ ಸ್ವೀಕರಿಸಲಾಯಿತೋ, ಅದರಂತೆ ಬ್ರಹ್ಮನು ಸಕಲವಸ್ತುಗಳನ್ನು ಸಾಮಾನ್ಯತಃ ತಿಳಿದವನಾದರೂ ಸಹ, ಸ್ವಪ್ನಾದಿದ್ರಷ್ಟ್ರವೆಂದು ಪ್ರಸಿದ್ಧನಾದ ಜೀವನನ್ನೇ ಈ ಶ್ರುತಿಯಿಂದ ಪ್ರತಿಪಾದಿಸಬೇಕು.

**नच वाच्यं पश्यतीतिपदं न द्रष्टृत्वमाह – किन्तु ''ज्योतिर्दर्शनात्'' इत्यत्रोक्तन्यायेन दर्शयितृत्वम् । अन्यथाऽसङ्गत्वविरोधादिति ।**

ಪ್ರಶ್ನೆ - ಶ್ರುತಿಯಲ್ಲಿರುವ 'ಪಶ್ಯತಿ' ಎಂಬ ಪದವು ದ್ರಷ್ಟೃತ್ವವನ್ನು ಹೇಳುತ್ತಲೇ ಇಲ್ಲ. ಹೊರತಾಗಿ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರನ್ಯಾಯದಂತೆ ದರ್ಶಯಿತೃತ್ವವನ್ನು (ನೋಡಿಸುವಿಕೆಯನ್ನು) ಹೇಳುತ್ತಿದೆ. ಇಲ್ಲದಿದ್ದರೆ ಶ್ರುತಿಯಲ್ಲೇ ಇರುವ ಅಸಂಗತ್ವಧರ್ಮಕ್ಕೆ ವಿರೋಧ ಬರುತ್ತದೆ. ಅಂದರೆ ಯಾವಾತನು ಸ್ವಪ್ನವನ್ನು ನೋಡುತ್ತಿದ್ದಾನೋ, ಅವನು ಅಸಂಗನಾಗಿದ್ದಾನೆಂದು ಶ್ರುತಿಯ ಅರ್ಥ. ಜೀವನೆಂಬ ಅರ್ಥವನ್ನು ಸ್ವೀಕರಿಸಿದರೆ, ಅವನಲ್ಲಿ ಅಸಂಗತತ್ವಧರ್ಮವನ್ನು ಹೇಳಲು ಸಾಧ್ಯವಿಲ್ಲ. ಈ ಅಸಂಗತ್ವಧರ್ಮದ ಅನ್ಯಥಾನುಪಪತ್ತಿಯಿಂದ ನಿಜರ್ಥತ್ವವನ್ನು ಕಲ್ಪನೆ ಮಾಡಿ ನೋಡುತ್ತಾನೆ ಎಂಬುದಕ್ಕೆ ನೋಡಿಸುತ್ತಾನೆ ಎಂಬರ್ಥವನ್ನು ಹೇಳಬೇಕಲ್ಲವೇ?

**तथात्वे दर्शनकृतसङ्गप्रसक्तेरेवाभावेन तन्निषेधायोगात् । तथाचासङ्गत्वं स्वोपजीव्यद्रष्टृत्वानुरोधात् ''सन्निपातलक्षणो विधिरनिमित्तं तद्विघातस्य'' इति न्यायाज्जीव एव ब्रह्माभेदाभिप्रायम् ।**

ಉತ್ತರ - ಇದು ತಪ್ಪು. ಹಾಗಾದಲ್ಲಿ ನೋಡುವಿಕೆಯಿಂದ ಸಂಗವು ಬರುತ್ತದೆಂಬುದಕ್ಕೆ ಪ್ರಸಕ್ತಿಯೇ ಇಲ್ಲವೆಂದಂತಾಯಿತು. ಸಂಗಕ್ಕೆ ಪ್ರಸಕ್ತಿಯಿದ್ದರೆ ಅದನ್ನು ಶ್ರುತಿಯು 'ಅಸಂಗಃ' ಎಂಬ ಪದದಿಂದ ನಿಷೇಧ ಮಾಡುತ್ತದೆ. ಒಂದು ವೇಳೆ ಪ್ರಸಕ್ತಿಯೇ ಇಲ್ಲದಿದ್ದರೆ ನಿಷೇಧ ಮಾಡಲು ಹೇಗೆ ಸಾಧ್ಯ ? ಆದ್ದರಿಂದ ಅಸಂಗತ್ವಕ್ಕೆ ದ್ರಷ್ಟೃತ್ವವು ಉಪಜೀವ್ಯವಾಗಿದೆ. ಉಪಜೀವ್ಯಕ್ಕೆ ಅನುಸರಿಸಿ, ಉಪಜೀವಕವನ್ನು ಅರ್ಥೈಸಬೇಕು. ಹೊರತು, ಉಪಜೀವಕವು ತನ್ನ ಉಪಜೀವ್ಯಕ್ಕೆ ಮಾರಕವಾಗುವುದಿಲ್ಲ. 'ಸನ್ನಿಪಾತಲಕ್ಷಣೋ ವಿಧಿಃ ಅನಿಮಿತ್ತಂ ತದ್ವಿಘಾತಸ್ಯ' ಸನ್ನಿಧಾನವನ್ನೇ ನಿಮಿತ್ತವಾಗಿ ಉಳ್ಳಂತಹ ವಿಧಿಯು ಸನ್ನಿಪಾತಕ್ಕೆ ವಿಘಾತಕವಾಗುವುದಿಲ್ಲ ಎಂಬ ನ್ಯಾಯವನ್ನು ವ್ಯಾಕರಣದಲ್ಲಿ ಹೇಳಿರುತ್ತಾರೆ. ಆದರಂತೆ ಪ್ರಕೃತ ಅಸಂಗತ್ವಧರ್ಮವು ಬಂದಿರುವುದೇ ದ್ರಷ್ಟೃತ್ವನಿಮಿತ್ತಕವಾಗಿ, ಇಂತಹ ಅಸಂಗತ್ವಧರ್ಮವು ದ್ರಷ್ಟೃತ್ವಕ್ಕೆ ಘಾತಕವಾಗುವುದಿಲ್ಲ. ಅಂದರೆ ಅಸಂಗತ್ವದ ಅನ್ಯಥಾನುಪಪತ್ತಿಯ ಬಲದಿಂದ ನೋಡುತ್ತಾನೆ ಎಂಬರ್ಥವನ್ನು ಬಿಟ್ಟು ನೋಡುತ್ತಾನೆಂಬರ್ಥವನ್ನು ಕಲ್ಪಿಸಲು ಸಾಧ್ಯವಿಲ್ಲ. ಆದ್ದರಿಂದ ಅಸಂಗತ್ವವನ್ನು ಜೀವನಲ್ಲೇ ಕೂಡಿಸಬೇಕು. ಜೀವನಿಗೂ ಬ್ರಹ್ಮನಿಗೂ ಅಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿರುವ ಅಸಂಗತ್ವಧರ್ಮವು ಜೀವನಲ್ಲಿ ಬರುತ್ತದೆಂದು ಹೇಳಿದಾಗ ಯಾವುದೇ ಸಮಸ್ಯೆಗಳಿರುವುದಿಲ್ಲ.

**पूर्वत्रत्वाकाशस्य जडत्वेन ब्रह्माभेदायोगान्नामरूपनिर्वोढृत्वादिकं नाकाशे ब्रह्माभेदेन नेतुं शक्यमिति वैषम्यम् ।**

ಹಾಗಾದರೆ ಹಿಂದಿನ ಅಧಿಕರಣದಲ್ಲಿಯೂ ಕೂಡ ನಾಮರೂಪನಿರ್ವಹಿತೃತ್ವಾದಿಗಳನ್ನು ಬ್ರಹ್ಮಾಭೇದವಿರುವ ಪ್ರಯುಕ್ತ ಅವ್ಯಾಕೃತಾಕಾಶದಲ್ಲಿ ಹೇಳಬಹುದಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಆಕಾಶವು ಜಡವಾದ್ದರಿಂದ ಬ್ರಹ್ಮನಿಂದ ಅಭೇದವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ಬ್ರಹ್ಮನಲ್ಲಿರುವ ನಾಮರೂಪನಿರ್ವೋಢೃತ್ವಾದಿಗಳನ್ನು ಅಭೇದಾಭಿಪ್ರಾಯದಿಂದ ಆಕಾಶದಲ್ಲಿ ಕೂಡಿಸಲೂ ಸಹ ಬರುವುದಿಲ್ಲ. ಆದರೆ ಪ್ರಕೃತ ಜೀವ ಹಾಗೂ ಬ್ರಹ್ಮರಿಬ್ಬರೂ ಚೇತನರಾದ್ದರಿಂದ ಚೈತನ್ಯವಿವಕ್ಷೆಯಿಂದ ಅಭೇದವನ್ನು ಹೇಳಲು ಬರುತ್ತದೆ. ಹಾಗಾಗಿ ಬ್ರಹ್ಮನಲ್ಲಿರುವ ಅಸಂಗತ್ವಧರ್ಮವನ್ನು ಜೀವನಲ್ಲಿ ಕೂಡಿಸಬಹುದು.

**ननु तर्हि स्वप्नादिद्रष्टृत्वमेव ब्रह्मणि जीवाभेदाभिप्रायमस्त्विति चेन्न । जीवस्य येन चैतन्यात्मना ब्रह्माभेदस्तस्मिञ्शुद्धे चैतन्येऽसङ्गतत्ववद्ब्रह्मणो येन चैतन्यात्मना जीवाभेदस्तस्मिंश्चैतन्ये स्वप्नादिद्रष्टृत्वायोगात् ।**

ಪ್ರಶ್ನೆ - ಅಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿರುವ ಅಸಂಗತ್ವವನ್ನು ಜೀವನಲ್ಲಿ ಹೇಳುವುದಾದರೆ, ಜೀವನಲ್ಲಿರುವ ಸ್ವಪ್ನಾದಿದ್ರಷ್ಟೃತ್ವವನ್ನು ಬ್ರಹ್ಮನಲ್ಲಿ ಹೇಳಬಹುದಲ್ಲವೇ?

ಉತ್ತರ - ಇದೂ ಸಹ ತಪ್ಪು. ಏಕೆಂದರೆ ಜೀವನಿಗೆ ಯಾವ ಚೈತನ್ಯಸ್ವರೂಪದಿಂದ ಬ್ರಹ್ಮಾಭೇದವಿದೆಯೋ, ಅಂತಹ ಶುದ್ಧಚೈತನ್ಯನಲ್ಲಿ ಅಸಂಗತ್ವಧರ್ಮವು ಇರುತ್ತದೆ. ಇದರಂತೆ ಬ್ರಹ್ಮನಿಗೆ ಯಾವ ಚೈತನ್ಯವಿವಕ್ಷೆಯಿಂದ ಜೀವಾಭೇದವಿದೆಯೋ, ಅಂತಹ ಚೈತನ್ಯದಲ್ಲಿ ಸ್ವಪ್ನಾದಿದ್ರಷ್ಟೃತ್ವವನ್ನು ಹೇಳಲು ಸಾಧ್ಯವಿಲ್ಲ. ಅಂದರೆ ಬ್ರಹ್ಮನ ಧರ್ಮವನ್ನು ಜೀವನಲ್ಲಿ ಕೂಡಿಸಬಹುದೇ ಹೊರತು, ಜೀವನ ಧರ್ಮವನ್ನು ಬ್ರಹ್ಮನಲ್ಲಿ ಕೂಡಿಸಲಾಗದು ಎಂದಭಿಪ್ರಾಯ.

**एतदेवाभिप्रेत्योक्तं न्यायविवरणे ''जीवेश्वराभेद ईश्वरोक्तावप्यर्थाज्जीव एवोच्यते'' इति ।।**

ಈ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ 'ಜೀವೇಶ್ವರಾಭೇದಃ ಈಶ್ವರೋಕ್ತಾವಪ್ಯರ್ಥಾಜ್ಜೀವ ಏವೋಚ್ಯತೇ' ಎಂದು ಹೇಳಿದ್ದಾರೆ.

**यद्वा जिज्ञासासूत्रे ब्रह्मणो जीवाद्भेदस्य प्रतिज्ञातत्वात् सिद्धान्तिना स्वप्नद्रष्टृत्वादिकं न ब्रह्मणि जीवाभेदाभिप्रायं वक्तुं शक्यमिति न्यायविवरणाभिप्रायः।**

ಅಥವಾ ಪೂರ್ವಪಕ್ಷಿಯು ಅಭೇದವಾದಿಯಾಗಿರುವುದರಿಂದ, ಬ್ರಹ್ಮಾಭೇದವಿರುವ ಪ್ರಯುಕ್ತ ಜೀವನಲ್ಲಿ ಬ್ರಹ್ಮನ ಧರ್ಮವೆನಿಸಿದ ಅಸಂಗತ್ವವು ಬರಬಹುದು. ಆದರೆ ಸ್ವಪ್ನಾದಿದ್ರಷ್ಟೃತ್ವವು ಜೀವನ ಧರ್ಮವಾದ್ದರಿಂದ, ಜೀವಾಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿ ಭೇದವಾದಿಗಳಾದ ನೀವು ಸ್ವಪ್ನಾದಿದ್ರಷ್ಟೃತ್ವವನ್ನು ಹೇಳಲಾಗದು. ಏಕೆಂದರೆ ಸ್ವಪ್ನಾದಿದ್ರಷ್ಟೃತ್ವವು ಬ್ರಹ್ಮನ ಧರ್ಮವೆಂದು ಸಿದ್ಧಾಂತ ಮಾಡಿರುವಿರಿ. ಈ ಅಭಿಪ್ರಾಯದಿಂದ ನ್ಯಾಯವಿವರಣವು ಹೊರಟಿದೆ ಎಂದೂ ಕೂಡ ತಿಳಿಯಬಹುದು. ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮನಿಗೆ ಜೀವನಿಂದ ಭೇದವಿದೆಯೆಂದು ಪ್ರತಿಜ್ಞೆ ಮಾಡಿದ್ದರಿಂದ ಸಿದ್ಧಾಂತಿಗಳಿಗೆ ಸ್ವಪ್ನಾದಿದ್ರಷ್ಟೃತ್ವವನ್ನು ಬ್ರಹ್ಮನಲ್ಲಿ ಕೂಡಿಸಲಾಗದು.

**नच ''प्राज्ञेनात्मना सम्परिष्वक्त'' इति ''प्राज्ञेनात्मनान्वारूढ'' इति सुषुप्त्युत्क्रान्त्योर्भेदोक्तेर्नाभेद इति वाच्यम् । सुषुप्त्यादिमतो विशिष्टस्य शुद्धात् सदा भेदेऽपि विशेष्यस्य भेदासिद्धेः ।**

ಪ್ರಶ್ನೆ - 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂದು 'ಪ್ರಾಜ್ಞೇನಾತ್ಮನಾನ್ವಾರೂಢ' ಎಂಬುದಾಗಿಯೂ ಸುಷುಪ್ತಿ ಹಾಗೂ ಉತ್ಕ್ರಾಂತಿಗಳಿಗೆ ಭೇದವನ್ನು ಹೇಳಿರುವ ಕಾರಣ, ಅಭೇದವನ್ನು ಹೇಗೆ ಹೇಳುತ್ತೀರಿ?

ಉತ್ತರ - ಸುಷುಪ್ತ್ಯಾದ್ಯವಸ್ಥೆಗಳಿಂದ ವಿಶಿಷ್ಟನಾದವನಿಗೆ ಶುದ್ಧಬ್ರಹ್ಮನಿಂದ ಭೇದವಿದ್ದರೂ ಸಹ ವಿಶೇಷ್ಯವಾದ ಚೇತನರಿಗೆ ಭೇದವು ಸಿದ್ಧವಾಗಿರುವುದಿಲ್ಲ.

**एतेनान्तरधिकरणोक्तेन ''भेदव्यपदेशाच्चान्य'' इति न्यायेनात्रापि भेदः सिद्ध इति परास्तम् ।।**

ಆದ್ದರಿಂದಲೇ ಅಂತರಧಿಕರಣದಲ್ಲಿ ಹೇಳಲ್ಪಟ್ಟ 'ಭೇದವ್ಯಪದೇಶಾಚ್ಚಾನ್ಯಃ' ಎಂಬ ನ್ಯಾಯದಂತೆ ಇಲ್ಲಿಯೂ ಕೂಡ ಭೇದವೇ ಸಿದ್ಧವಾಗುತ್ತದೆ ಎಂಬ ಶಂಕೆಯನ್ನು ನಿರಾಕರಣೆ ಮಾಡಿದಂತಾಯಿತು. ಹಾಗಾಗಿ ಅಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿರುವ ಅಸಂಗತ್ವಧರ್ಮವನ್ನು ಜೀವನಲ್ಲಿ ಉಪಪಾದನೆ ಮಾಡಿ, ಸ್ವಪ್ನಾದಿದ್ರಷ್ಟೃತ್ವ ಧರ್ಮವನ್ನು ಜೀವನಲ್ಲೇ ಹೇಳಬೇಕೆಂಬ ಪೂರ್ವಪಕ್ಷವು ಸಿದ್ಧವಾಯಿತು.

**प्रकाशः –**

''स्वप्नादिद्रष्टृत्वं जीवस्यैव भवेत् । प्रसिद्धत्वात्'' इति टीकां विवृण्वन् पूर्ववैषम्येण पूर्वपक्षं व्यनक्ति ।। पूर्वोक्त इति ।। न तथेति ।। श्रुतिषु ब्रह्मणि प्रसिद्धं नेत्यर्थः ।

ವಿವರಣೆ - ಪೂರ್ವಪಕ್ಷವು ಪ್ರಾರಂಭವಾಗುತ್ತಿದೆ. 'ಸ್ವಪ್ನಾದಿದ್ರಷ್ಟೃತ್ವಂ ಜೀವಸ್ಯೈವ ಭವೇತ್ । ಪ್ರಸಿದ್ಧತ್ವಾತ್' 'ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವು ಜೀವನಲ್ಲೇ ಬರುತ್ತದೆ. ಏಕೆಂದರೆ ಸ್ವಪ್ನಗಳನ್ನು ನೋಡುವವನು ಜೀವನೇ ಎಂದು ಲೋಕಪ್ರಸಿದ್ಧಿಯಿರುವುದರಿಂದ' ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ ಹಿಂದಿನ ಅಧಿಕರಣದ ಸಿದ್ಧಾಂತಪ್ರಮೇಯದಿಂದ ವೈಷಮ್ಯವನ್ನು ತೋರಿಸುತ್ತಾ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ 'ಪೂರ್ವೋಕ್ತ' ಇತ್ಯಾದಿ ಗ್ರಂಥದಿಂದ. 'ನ ತಥಾ' ಎಂದರೆ ಶ್ರುತಿಗಳಲ್ಲಿ ಸ್ವಪ್ನಾದಿದ್ರಷ್ಟೃತ್ವವು ಬ್ರಹ್ಮನಲ್ಲಿ ಪ್ರಸಿದ್ಧವಾಗಿಲ್ಲ ಎಂದರ್ಥ.

**प्रकाशः** – ननूक्तं पूर्वत्र लौकिकी प्रसिद्धिर्नग्राह्येति । तत्राह – आर्येति ।। सत्यं लौकिकी न ग्राह्येति । किन्तु वैदिक्या अभाव एव सा ग्राह्या नतु तत्सद्भावे।

ಲೌಕಿಕಪ್ರಸಿದ್ಧಿಯನ್ನು ವಿವಕ್ಷಿಸಬಾರದೆಂದು ಹಿಂದಿನ ಅಧಿಕರಣದಲ್ಲಿ ಸಿದ್ಧಾಂತ ಮಾಡಿದ್ದಾಗಿದೆ. ಹೀಗಿರುವಾಗ ಪುನಃ ಲೌಕಿಕಪ್ರಸಿದ್ಧಿಯನ್ನು ಆಶ್ರಯಿಸಿ, ಸ್ವಪ್ನದ್ರಷ್ಟೃತ್ವವನ್ನು ಜೀವನಲ್ಲಿ ಹೇಳುವುದು ಹೇಗೆ ಸರಿಯಾಗುತ್ತದೆ ಎಂಬ ಪ್ರಶ್ನೆಗೆ 'ಆರ್ಯಪ್ರಸಿದ್ಧಿ' ಇತ್ಯಾದಿ ವಾಕ್ಯದಿಂದ ದೃಷ್ಟಾಂತಪುರಸ್ಸರವಾಗಿ ಉತ್ತರ ನೀಡುತ್ತಿದ್ದಾರೆ. ಲೌಕಿಕಪ್ರಸಿದ್ಧಿಯನ್ನು ವಿವಕ್ಷಿಸಬಾರದೆಂಬುದು ಸತ್ಯ. ಆದರೆ ವೈದಿಕಪ್ರಸಿದ್ಧಿಯಿಲ್ಲದಿದ್ದಾಗ, ಲೌಕಿಕಪ್ರಸಿದ್ಧಿಯನ್ನು ವಿವಕ್ಷಿಸುವುದು ಅನಿವಾರ್ಯ. ಒಂದುವೇಳೆ ವೈದಿಕಪ್ರಸಿದ್ಧಿಯಿದ್ದರೆ ಲೌಕಿಕಪ್ರಸಿದ್ಧಿಯನ್ನು ಇಟ್ಟುಕೊಳ್ಳಬೇಕಾಗಿಲ್ಲವೆಂದು ಹಿಂದಿನ ಅಧಿಕರಣದ ಅಭಿಪ್ರಾಯ.

**प्रकाशः – पिकनेमं सततामरसादिशब्दानामायप्रसिद्धेरभावेन निगमनिघण्टु-व्याकरणादिवशेर्नापूर्वार्थकल्पने गौरवाल्लौकिकप्रसिद्धिवशेनैवार्थग्रहणस्य पिकनेमाधिकरणे प्रथमस्य तृतीयपादे व्युत्पादितत्वादित्यर्थः । अत एव प्राक् ''तदयोगे त्ववैदिकि'' इत्युक्तमिति भावः ।**

ಪಿಕ, ನೇಮ, ತಾಮರಸ ಮೊದಲಾದ ಶಬ್ದಗಳಲ್ಲಿ ಆರ್ಯಪ್ರಸಿದ್ಧಿ ಇರುವುದಿಲ್ಲ. ಆದರೆ ನಿಗಮ, ನಿಘಂಟು, ವ್ಯಾಕರಣ ಮೊದಲಾದವುಗಳ ಆಧಾರದಲ್ಲಿ ಹೊಸದಾದ ಅರ್ಥವನ್ನು ಕಲ್ಪನೆ ಮಾಡಿದರೆ, ಗೌರವ ಬರುತ್ತದೆ. ಆದ್ದರಿಂದ ಲೌಕಿಕಪ್ರಸಿದ್ಧಿಯನ್ನೇ ಆಶ್ರಯಿಸಿ ಪಿಕ ಮೊದಲಾದ ಶಬ್ದಗಳಿಗೆ ಅರ್ಥವನ್ನು ಸ್ವೀಕರಿಸಬೇಕು ಎಂದು, ಪೂರ್ವಮೀಮಾಂಸೆಯ ಪ್ರಥಮಾಧ್ಯಾಯದ ತೃತೀಯ ಪಾದದಲ್ಲಿ ಬರುವ ಪಿಕನೇಮಾಧಿಕರಣದಲ್ಲಿ ಸಿದ್ಧಾಂತ ಮಾಡಲಾಗಿದೆ. ಆದ್ದರಿಂದಲೇ ಹಿಂದೆ 'ತದಯೋಗೇ ತ್ವವೈದಿಕೀ' ಎಂಬ ಮಾತಿನಿಂದ ವೇದಪ್ರಸಿದ್ಧ್ಯಾದಿಗಳು ಇಲ್ಲದಿದ್ದಾಗ ಮಾತ್ರ ಲೌಕಿಕಪ್ರಸಿದ್ಧಿಯನ್ನು ಇಟ್ಟುಕೊಳ್ಳಬೇಕೆಂದು ಹೇಳಿರುತ್ತಾರೆ.

**प्रकाशः – एतेन टीकायां ''प्रसिद्धत्वात्'' इत्यस्य लोकप्रसिद्धत्वादित्यर्थो दर्शितः । टीकोक्तहेतुमाक्षिप्य समाधत्ते ।। यद्यपीति ।।**

ಹೀಗೆ ಹೇಳಿದ್ದರಿಂದ ಟೀಕೆಯಲ್ಲಿ 'ಪ್ರಸಿದ್ಧತ್ವಾತ್' ಎಂಬ ಪದಕ್ಕೆ ಲೋಕಪ್ರಸಿದ್ಧಿಯಿರುವುದರಿಂದ ಎಂಬರ್ಥವನ್ನು ಹೇಳಿದಂತಾಯಿತು. ಟೀಕೆಯಲ್ಲಿ ಹೇಳಿದ ಹೇತುವನ್ನು ಆಕ್ಷೇಪ ಮಾಡಿ, ಸಮಾಧಾನ ಮಾಡುತ್ತಿದ್ದಾರೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ.

**प्रकाशः – यमिति ।। ''यमन्तस्समुद्रे कवयो वयन्ति'' इत्यत्र यस्य कस्यापि समुद्रस्थत्वे सम्भवत्यपि ''महोदधिशयोऽन्तक'' इत्यादौ विष्णोरेव प्रसिद्धतया प्रसिद्धो नारायण एव ''यमन्तस्समुद्र'' इत्यादौ गृह्यते तथेहापि ''सयत्तत्र किञ्चित्पश्यति'' इत्यत्र तथात्वेन प्रसिद्धो जीव एव ग्राह्य इत्यर्थः ।**

'ಯಮಂತಃ ಸಮುದ್ರೇ ಕವಯೋ ವಯಂತಿ' ಎಂಬ ಶ್ರುತಿಯು ಸಮುದ್ರದಲ್ಲಿ ಇರುವವನನ್ನು ಹೇಳುತ್ತಿದೆ. ಸಮುದ್ರದಲ್ಲಿರುವ ಯಾವುದೇ ವ್ಯಕ್ತಿಯನ್ನು ಈ ಶ್ರುತಿಯಿಂದ ಪ್ರತಿಪಾದ್ಯನೆಂದು ಹೇಳಬಹುದು. ಆದರೆ 'ಮಹೋದಧಿಶಯೋಽಂತಕಃ' ಎಂಬ ವಿಷ್ಣುಸಹಸ್ರನಾಮದ ವಚನವು ಮಹಾವಿಷ್ಣುವಿನಲ್ಲಿ ಪ್ರಸಿದ್ಧವಾದ ಕಾರಣ, ಪ್ರಸಿದ್ಧನಾದ ನಾರಾಯಣನನ್ನೇ ಸಮುದ್ರಸ್ಥಿತನೆಂದು 'ಯಮಂತಃ ಸಮುದ್ರೇ' ಎಂಬ ಶ್ರುತಿಯು ಹೇಳುತ್ತಿದೆಯೆಂದೇ ವಿವಕ್ಷಿಸಬೇಕು. ಅದರಂತೆ ಪ್ರಕೃತ 'ಸಯತ್ತತ್ರ ಕಿಂಚಿತ್ಪಶ್ಯತಿ' ಎಂಬ ಶ್ರುತಿಯು ಜೀವನು ಸ್ವಪ್ನಕಾಲದಲ್ಲಿ ಅನೇಕ ಪದಾರ್ಥಗಳನ್ನು ನೋಡುತ್ತಾನೆಂದು ಹೇಳುತ್ತಿದೆ. ಲೋಕಪ್ರಸಿದ್ಧಿಯು ಜೀವನಲ್ಲೇ ಇರುವುದರಿಂದ ಪರಮಾತ್ಮನನ್ನು ಈ ಶ್ರುತಿಯಿಂದ ಪ್ರತಿಪಾದ್ಯನೆಂದು ಹೇಳದೇ, ಜೀವನನ್ನೇ ಪ್ರತಿಪಾದ್ಯನೆನ್ನಬೇಕು.

**प्रकाशः** – उक्तं चाद्यसूत्रभाष्ये ''समुद्रेऽन्तर्नारायणः । प्रसिद्धत्वात्'' इति । नन्वसङ्गत्वरूपनिरवकाशेश्वरलिङ्गात्प्रसिद्धिबाधः स्याद्वज्रादिशब्देष्विवेत्याशंक्य तद्वैषम्यमाह – **नच वज्रेति** ।।

ಇದನ್ನೇ ಪ್ರಥಮಸೂತ್ರದ ಭಾಷ್ಯದಲ್ಲಿ 'ಸಮುದ್ರೇಽಂತರ್ನಾರಾಯಣಃ । ಪ್ರಸಿದ್ಧತ್ವಾತ್' ಸಮುದ್ರದಲ್ಲಿರುವವನು ನಾರಾಯಣನೇ ಆಗಿದ್ದಾನೆಂದು ವಿಷ್ಣುಸಹಸ್ರನಾಮಾದಿಗಳಲ್ಲಿ ಪ್ರಸಿದ್ಧವಾದ್ದರಿಂದ ಎಂದು ಹೇಳಿದ್ದಾರೆ.

ಅಸಂಗತ್ವವೆಂಬ ನಿರವಕಾಶವಾದ ಈಶ್ವರನ ಲಿಂಗದಿಂದ, ಸ್ವಪ್ನದ್ರಷ್ಟೃತ್ವವು ಈಶ್ವರನಲ್ಲಿ ಬರುತ್ತದೆ. ಮತ್ತು ನಿರವಕಾಶವಾದ ಲಿಂಗದಿಂದ ಪ್ರಸಿದ್ಧಿಯು ಬಾಧಿತವಾಗುತ್ತದೆಂದು ವಜ್ರಾದಿಶಬ್ದವನ್ನು ಸಮನ್ವಯ ಮಾಡುವಾಗ ಸಮರ್ಥಿಸಿದ್ದಾಗಿದೆ. ಆದ್ದರಿಂದ ಸ್ವಪ್ನದ್ರಷ್ಟೃತ್ವವು ಪರಮಾತ್ಮನಲ್ಲೇ ಬರಬೇಕಲ್ಲವೇ? ಎಂದು ಆಶಂಕಿಸಬಾರದು. ಕಂಪನಾಧಿಕರಣಕ್ಕಿಂತ ಈ ಅಧಿಕರಣದಲ್ಲಿ ವೈಷಮ್ಯವಿದೆ. ಆದ್ದರಿಂದ ಆ ಅಧಿಕರಣದ ಸಿದ್ಧಾಂತವನ್ನು ವಿವಕ್ಷಿಸಲಾಗದೆಂದು 'ನಚ ವಜ್ರ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – **युक्ता इष्टावेति** ।। ''तथात्व'' इत्यादि वक्ष्यमाणदिशा वाक्यार्थासिद्धिप्रसङ्गादिति भावः ।

'ಯುಕ್ತಾ ಇಷ್ಟಾವ' ಎಂಬುದರ ಅಭಿಪ್ರಾಯ ಹೀಗಿದೆ - ಒಂದು ವೇಳೆ ಪಶ್ಯತಿ ಮೊದಲಾದ ಪದಗಳಿಗೆಲ್ಲಾ ಯೌಗಿಕಾರ್ಥವನ್ನು ಸ್ವೀಕರಿಸಿ, ಪರಮಾತ್ಮನಲ್ಲಿ ಸಮನ್ವಯ ಮಾಡುವುದಾದರೆ, 'ತಥಾತ್ವೇ' ಇತ್ಯಾದಿಯಾಗಿ ಮುಂದೆ ಹೇಳುವಂತೆ ಆಯಾ ವಾಕ್ಯಗಳ ಅರ್ಥವೇ ಸಿದ್ಧವಾಗದಿರಬೇಕಾಗುತ್ತದೆ. ಆದ್ದರಿಂದ ಪ್ರತಿಯೊಂದು ಪದಗಳಿಗೂ ಯೌಗಿಕಾರ್ಥವನ್ನು ಸ್ವೀಕರಿಸುವುದು ಯುಕ್ತವಲ್ಲ. ಮತ್ತು ಈ ಪಾದದಲ್ಲಿ ಅದರ ಸಮನ್ವಯವು ಸಿದ್ಧಾಂತಿಗಳಿಗೆ ಇಷ್ಟವೂ ಅಲ್ಲ ಎಂದಭಿಪ್ರಾಯ.

**प्रकाशः** – ''प्रसिद्धत्वात्'' इति टीकोक्तहेतोः प्रकारान्तरेणापि तात्पर्यं विवरीतुं शङ्कामाह – **नच सन्ध्य इति** ।।

'ಪ್ರಸಿದ್ಧತ್ವಾತ್' ಎಂಬ ಟೀಕೆಯಲ್ಲಿ ಹೇಳಿದ ಹೇತುವನ್ನು ಮತ್ತೊಂದು ಬಗೆಯಲ್ಲಿ ವಿವರಿಸಲು ಆಶಂಕಿಸುತ್ತಿದ್ದಾರೆ 'ನಚ ಸಂಧ್ಯೇ' ಇತ್ಯಾದಿ ವಾಕ್ಯದಿಂದ.

**प्रकाशः** – तृतीयस्य द्वितीयपादे ''सन्ध्ये सृष्टिराह हि'' इत्यत्र स्वप्नविषयो भगवदधीनो न वेति संशये स्वाप्नवस्तूनां नित्यत्वेऽनित्यत्वे वा प्रागूर्ध्वमुपलंभप्रसङ्गात् कर्त्रुपादाननिमित्तानामभावाच्च सत्यत्वायोगात् असत्यत्वे तेषामन्याधीनत्वा-योगान्नेशाधीन इति प्राप्ते सत्यत्वेऽपि विद्युदादिवत्तदानीमेवोत्पादविनाशसम्भवादीश कर्तृकत्वस्य वासनोपादानकत्वस्यादृष्टादिनिमित्तकत्वस्य च सम्भवात् ''अथरथान्

रथयोगान् पथस्सृजत'' इति सृष्ट्यवगमाच्च सत्यस्स्वप्नो भगवदधीन इति वक्ष्यते । तन्न्यायैरित्यर्थः ।

'ಸಂಧ್ಯೇ ಸೃಷ್ಟಿರಾಹ ಹಿ' (೩-೨) ಸ್ವಪ್ನಪದಾರ್ಥಗಳಲ್ಲಿ ಕಾಣುವ ಪದಾರ್ಥಗಳು ಭಗವದಧೀನ-ವಾಗಿದೆಯೋ, ಇಲ್ಲವೋ ಎಂದು ಸಂದೇಹ.

ಪೂರ್ವಪಕ್ಷ - ಸ್ವಾಪ್ನಪದಾರ್ಥಗಳು ಸುಳ್ಳಾಗಲೀ, ಸತ್ಯವಾಗಲೀ, ಸ್ವಪ್ನದ ಮೊದಲು ಮತ್ತು ಅನಂತರ ಉಪಲಬ್ಧವಾಗುವ ಪ್ರಸಂಗ ಬರುತ್ತದೆ. ಮತ್ತು ಸ್ವಾಪ್ನಪದಾರ್ಥಗಳ ಸೃಷ್ಟಿಗೆ ಅನಿವಾರ್ಯವಾದ ಕರ್ತೃವಾಗಲೀ, ಉಪಾದಾನಕಾರಣವಾಗಲೀ, ನಿಮಿತ್ತಕಾರಣವಾಗಲೀ, ಕಾಣಿಸುತ್ತಿಲ್ಲ. ಆದ್ದರಿಂದ ಸತ್ಯವೆಂದು ಹೇಳಲಾಗದು. ಸ್ವಾಪ್ನಪದಾರ್ಥಗಳೆಲ್ಲವೂ ಮಿಥ್ಯಾಭೂತವೆಂದರೆ ಮತ್ತೊಬ್ಬರ ಅಧೀನವೆಂಬುದು ಯುಕ್ತವಾಗುವುದಿಲ್ಲ. ಆವಾಗ ಈಶಾಧೀನವೆಂದೂ ಕೂಡ ಹೇಳಲು ಬರುವುದಿಲ್ಲ.

ಸಿದ್ಧಾಂತ - ಸ್ವಾಪ್ನಪದಾರ್ಥಗಳೆಲ್ಲವೂ ಸತ್ಯಭೂತವೇ ಆಗಿವೆ. ಮಿಂಚಿನಂತೆ ಆ ಕ್ಷಣ ಹುಟ್ಟಿ ನಷ್ಟವಾಗುತ್ತವೆ. ಈ ಪದಾರ್ಥಗಳ ಸೃಷ್ಟಿಗೆ ಕಾರಣನಾದವನು ಭಗವಂತನೇ ಆಗಿದ್ದಾನೆ. ಮನಸ್ಸಿಲ್ಲಿರುವ ವಾಸನಾ ಎಂಬ ಸಂಸ್ಕಾರವೇ ಉಪಾದಾನಕಾರಣವಾಗಿದೆ. ಆಯಾ ಜೀವಿಗಳ ಅದೃಷ್ಟಾದಿಗಳು ನಿಮಿತ್ತಕಾರಣವಾಗಿವೆ. 'ಅಥರಥಾನ್ ರಥಯೋಗಾನ್ ಪಥಃಸೃಜತೇ' ಎಂಬ ವೇದವು ಭಗವಂತನೇ ಸ್ವಾಪ್ನಕಾಲದಲ್ಲಿ ರಥ ಮೊದಲಾದವುಗಳನ್ನು ಸೃಷ್ಟಿ ಮಾಡಿ ತೋರಿಸುತ್ತಾನೆಂದು ಹೇಳುತ್ತಿದೆ. ಈ ಎಲ್ಲ ಕಾರಣಗಳಿಂದ ಸ್ವಪ್ನಕಾಲದಲ್ಲಿ ತೋರುವಂತಹ ಪದಾರ್ಥಗಳೆಲ್ಲವೂ ಸತ್ಯಭೂತವೇ ಆಗಿವೆ. ಮತ್ತು ಭಗವದಧೀನವಾಗಿವೆ.

ಹೀಗೆ ಸಂಧ್ಯಧಿಕರಣದಲ್ಲಿ ಸ್ವಪ್ನಸತ್ಯತ್ವವನ್ನು ಸಮರ್ಥಿಸುತ್ತಾರೆ. ಆ ನ್ಯಾಯದಂತೆ ಸ್ವಪ್ನದ್ರಷ್ಟೃತ್ವವು ಭಗವಂತನಲ್ಲಿ ಬರುತ್ತದೆಂದು ಹೇಳಬಹುದಲ್ಲವೇ? ಎಂದು ಪ್ರಶ್ನೆಯ ಅಭಿಪ್ರಾಯ.

**प्रकाशः** – परमार्थाशेषार्थाभिज्ञत्वस्य सार्वज्ञशब्दार्थत्वात्सत्यत्वोपन्यासः ॥ श्रुतीति ॥ ''यस्सर्वज्ञस्सर्व'' इत्यादिश्रुतीत्यर्थः ।

ಪಾರಮಾರ್ಥಿಕವಾದ ಸಕಲ ಪದಾರ್ಥಗಳನ್ನು ತಿಳಿದುಕೊಳ್ಳುವಿಕೆಯೇ ಸಾರ್ವಜ್ಞ್ಯವೆಂದರ್ಥ. ಇದರಿಂದ ಸತ್ಯತ್ವವು ಪದಾರ್ಥಗಳಲ್ಲಿ ತಿಳಿಯುತ್ತದೆ. ಶ್ರುತಿಯೆಂದರೆ 'ಯಃ ಸರ್ವಜ್ಞಃ ಸರ್ವವಿತ್' ಎಂಬ ಶ್ರುತಿಯೆಂದರ್ಥ.

**प्रकाशः** – उपलक्षणमेतत् । ''विशेषणभेदव्यपदेशाभ्यां च नेतरौ'' इति सूत्रे विशेषणपदेन सार्वज्ञस्य विष्णुधर्मत्वेनोपादानात् सूत्रप्रसिद्धं चेत्यपि ध्येयम् ।

ಬ್ರಹ್ಮನಲ್ಲಿ ಸರ್ವಜ್ಞತ್ವವು ಶ್ರುತಿಪ್ರಸಿದ್ಧವಾಗಿದೆಯೆಂದು ಗ್ರಂಥದಲ್ಲಿ ಹೇಳಿದ್ದಾರೆ. ಉಪಲಕ್ಷಣಯಾ ಸೂತ್ರಪ್ರಸಿದ್ಧಿಯನ್ನೂ ಕೂಡ ಇಟ್ಟುಕೊಳ್ಳಬೇಕು. 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' ಎಂಬ ಸೂತ್ರದಲ್ಲಿ ಸಾರ್ವಜ್ಞ್ಯವು ವಿಷ್ಣುಧರ್ಮವೆಂದು ಹೇಳಿರುತ್ತಾರೆ.

**प्रकाशः** – एतेन ''स्वाप्नपदार्थानां जीवगतावस्थायाश्च सत्यत्वात् परमात्मनश्च सर्वज्ञत्वेन तद्विशेषदर्शनोपपत्तिः'' इति सिद्धान्तटीकाऽत्रैव विवृता ध्येया ।

ಇದರಿಂದ 'ಸ್ವಾಪ್ನಪದಾರ್ಥಾನಾಂ ಜೀವಗತಾವಸ್ಥಾಯಾಶ್ಚ ಸತ್ಯತ್ವಾತ್ ಪರಮಾತ್ಮನಶ್ಚ ಸರ್ವಜ್ಞತ್ವೇನ ತದ್ವಿಶೇಷದರ್ಶನೋಪಪತ್ತಿಃ' ಸ್ವಾಪ್ನಪದಾರ್ಥಗಳು ಮತ್ತು ಜೀವನ ಸ್ವಪ್ನಾದ್ಯವಸ್ಥೆಗಳು ಸತ್ಯಭೂತವಾದ್ದರಿಂದ, ಪರಮಾತ್ಮನು ಸರ್ವಜ್ಞನಾದ್ದರಿಂದ ಆಯಾ ಪದಾರ್ಥಗಳ ನೋಡುವಿಕೆಯು ಉಪಪನ್ನವಾಗುತ್ತದೆ ಎಂಬ ಸಿದ್ಧಾಂತ ಟೀಕೆಯನ್ನು ಪೂರ್ವಪಕ್ಷದ ಸಂದರ್ಭದಲ್ಲೇ ವಿವರಿಸಿದಂತಾಯಿತು.

**प्रकाशः** – एतेन ''सन्ध्ये सृष्टिः'' इत्यनेन गतार्थत्वमप्याशङ्कितं भवति । एतच्छङ्कोत्तरत्वेनापि ''प्रसिद्धत्वात्'' इति टीकोक्तहेत्वर्थं विवृण्वन् पूर्वसिद्धान्तन्यायेन पूर्वपक्षमुज्जीवयति ।। **यथेति** ।। ''अरूपमस्पर्शं अरूपोभूतवर्जनात्'' इत्यादिश्रुतिस्मृतिभिः प्रसिद्धस्येत्यर्थः ।

ಇದರಿಂದ 'ಸಂಧ್ಯೇ ಸೃಷ್ಟಿರಾಹ ಹಿ' ಎಂಬ ಸೂತ್ರದಿಂದ ಈ ಅಧಿಕರಣಕ್ಕೆ ಗತಾರ್ಥತ್ವವನ್ನು ಆಶಂಕಿಸಿದಂತಾಯಿತು. ಮತ್ತು ಆಶಂಕೆಗೆ ಉತ್ತರಿಸುವವರಾಗಿ 'ಪ್ರಸಿದ್ಧತ್ವಾತ್' ಎಂಬ ಟೀಕೆಯನ್ನು ವಿವರಿಸುತ್ತಾ ಪೂರ್ವಸಿದ್ಧಾಂತ ನ್ಯಾಯದಿಂದ ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದ್ದಾರೆ 'ಯಥಾ' ಇತ್ಯಾದಿ ಗ್ರಂಥದಿಂದ. 'ಅರೂಪಮಸ್ಪರ್ಶಂ' ಎಂಬ ಶ್ರುತಿಯಿಂದ 'ಅರೂಪೋಭೂತವರ್ಜನಾತ್' ಎಂಬ ಸ್ಮೃತಿಯಿಂದ ಪ್ರಸಿದ್ಧನಾದವನು ಎಂದರ್ಥ.

**प्रकाशः** – एतेन पूर्वन्यायेनेत्येतद्विवृतं भवति । ज्योतिर्नयेन गतार्थत्वमाशंक्य निराह – **नच वाच्यमिति** ।।

ಇದರಿಂದ 'ಪೂರ್ವನ್ಯಾಯೇನ' ಎಂಬುದನ್ನು ವಿವರಿಸಿದಂತಾಯಿತು. ಜ್ಯೋತಿರಧಿಕರಣದಿಂದ ಪುನರುಕ್ತಿಯನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ನಚ ವಾಚ್ಯಮ್' ಇತ್ಯಾದಿ ಗ್ರಂಥದಿಂದ.

**प्रकाशः** – ननु तत्र ब्रह्मपरैकवाक्यत्वबलादन्तर्णीतण्यर्थत्वं कल्पितं शब्दानामिति चेत्तर्हीहापि लिङ्गबलात् सुतरां तथा स्यात् । वाक्यादपि लिङ्गस्य बलवत्त्वादिति भावेनाह – **अन्यथेति** ।।

ಜ್ಯೋತಿರಧಿಕರಣದಲ್ಲಿ ಬ್ರಹ್ಮಪರವಾದ ವಾಕ್ಯಗಳ ಜೊತೆಗೆ ಏಕವಾಕ್ಯತ್ವವನ್ನು ಸಂಪಾದನೆ ಮಾಡುವುದಕ್ಕಾಗಿ ಶಬ್ದಗಳಿಗೆ ಅಂತರ್ಣೀತಣ್ಯರ್ಥತ್ವವನ್ನು ಕಲ್ಪಿಸಲಾಗಿದೆ. ಹಾಗಾದರೆ ಇಲ್ಲಿಯೂ ಸಹ ವಿಷ್ಣುಲಿಂಗದ ಬಲದಿಂದ ಅಂತರ್ಣೀತಣ್ಯರ್ಥತ್ವವನ್ನೇ ಸುತರಾಂ ಒಪ್ಪಬಹುದು. ಸ್ವಪ್ನಗಳನ್ನು ನೋಡುತ್ತಾನೆಂದು ಶ್ರುತಿಯಲ್ಲಿದ್ದರೆ, ನೋಡಿಸುತ್ತಾನೆ ಎಂಬರ್ಥವನ್ನು ಹೇಳಿದಾಗ, ಸ್ವಪ್ನದ್ರಷ್ಟೃತ್ವವು ವಿಷ್ಣುವಿನಲ್ಲೇ ಬಂದಂತಾಗುತ್ತದೆ. ಏಕೆಂದರೆ ವಾಕ್ಯಕ್ಕಿಂತಲೂ ಲಿಂಗವೇ ಪ್ರಬಲವಾದ್ದರಿಂದ, ವಿಷ್ಣುಲಿಂಗದ

ಬಲದಿಂದ ಹೀಗೆ ಅರ್ಥೈಸುವುದು ತಪ್ಪಾಗುವುದಿಲ್ಲ ಎಂಬ ಅಭಿಪ್ರಾಯದಿಂದ 'ಅನ್ಯಥಾ' ಎಂಬ ವಾಕ್ಯವು ಹೊರಟಿದೆ.

**प्रकाशः –** यद्यपि पश्यतीति कर्तृप्रयोगस्य दर्शनात्कर्तर्येव प्रसिद्धेः प्रयोजककर्तर्यप्रसिद्धेः प्रसिद्धस्य स्वप्नादिदर्शनकर्तुर्जीवस्यैव ग्रहणं न त्वप्रसिद्धस्य प्रयोजककर्तुरीश्वरस्य । तल्लिङ्गं तु प्रसिद्धिबलात् कथञ्चिन्नेयमित्येवंरूपेण टीकोक्त ''प्रसिद्धत्वात्'' इति हेतुरेवैतच्छङ्कोत्तरत्वेनापि योजयितुं शक्यः ।

ಪ್ರಶ್ನೆ - 'ಪಶ್ಯತಿ' ಎಂಬುದು 'ದೃಶಿರ್‌ಪ್ರೇಕ್ಷಣೇ' ಧಾತುವಿನಿಂದ ಉಂಟಾದ 'ತಿಪ್' ಪ್ರತ್ಯಯಾಂತವಾದ ಧಾತುವಾಗಿದೆ. ಕರ್ತ್ರರ್ಥದಲ್ಲೇ 'ತಿಪ್' ಪ್ರತ್ಯಯವು ಬರುತ್ತದಾದ್ದರಿಂದ, ನೋಡುವವನು ಎಂಬರ್ಥದಲ್ಲೇ ಈ ಪದ ಪ್ರಸಿದ್ಧವಾಗಿದೆ, ಹೊರತು ನೋಡಿಸುವವನಾದ ಪ್ರಯೋಜಕಕರ್ತೃವಿನಲ್ಲಿ 'ಪಶ್ಯತಿ' ಎಂಬ ಪ್ರಯೋಗವು ಅಪ್ರಸಿದ್ಧವಾಗಿವೆ. ಸ್ವಪ್ನಾದಿಗಳನ್ನು ನೋಡುವವನು ಜೀವನೆಂದು ಪ್ರಸಿದ್ಧಿಯಿರುವ ಕಾರಣ, ಅವನನ್ನೇ ಇಲ್ಲಿ 'ಪಶ್ಯತಿ' ಪದವು ಹೇಳುತ್ತದೆ ಅಪ್ರಸಿದ್ಧನಾದ ಪ್ರಯೋಜಕ ಕರ್ತೃವೆನಿಸಿದ ಈಶ್ವರನನ್ನು ಹೇಳುವುದಿಲ್ಲ. ಆದ್ದರಿಂದ ಅಸಂಗತ್ವ ಮೊದಲಾದ ಲಿಂಗವನ್ನು ಪ್ರಸಿದ್ಧಿಗೆ ಅನುಸಾರಿಯಾಗಿ ಜೀವನಲ್ಲೇ ಹೇಗಾದರೂ ಉಪಪಾದನೆ ಮಾಡಬೇಕಾಗುತ್ತದಲ್ಲವೇ? ಈ ಪ್ರಶ್ನೆಗೆ ಟೀಕೆಯಲ್ಲಿ ಹೇಳಿದ 'ಪ್ರಸಿದ್ಧತ್ವಾತ್' ಎಂಬ ಹೇತುವನ್ನೇ ಉತ್ತರವನ್ನಾಗಿ ಯೋಜನೆ ಮಾಡಿಕೊಳ್ಳಬೇಕು.

**प्रकाशः –** तथाप्यस्य योजनस्योक्तदिशा ऊहितुं शक्यत्वाद्बलवदन्तरङ्गं बाधकान्तरमाह **– तथात्व इति ।।**

ಉತ್ತರ - 'ಪ್ರಸಿದ್ಧತ್ವಾತ್' ಎಂಬ ಟೀಕೆಯಿಂದಲೇ ಉತ್ತರವನ್ನು ಹೇಳಬಹುದಾಗಿದ್ದರೂ, ಇದನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬಹುದೆಂಬ ದೃಷ್ಟಿಯಿಂದ ಬಲಿಷ್ಠವಾದ ಅಂತರಂಗವಾದ ಮತ್ತೊಂದು ಬಾಧಕವನ್ನು 'ತಥಾತ್ವೇ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः –** दर्शनं प्रति कर्तृत्वाभावे । प्रयोजककर्तृत्वे स्वाप्नार्थदर्शनकृतविकार-रूपलेपाभावेन ''अनन्वागतस्तेन भवति'' तेन दर्शनेनानन्वागतो लिप्तो न भवतीति निषेधायोगादित्यर्थः । व्यामोहयितुर्मायाविनो व्यामोहकृतकार्यादर्शनादिति भावः ।

'ತಥಾತ್ವೇ' ಎಂದರೆ ಸ್ವಪ್ನಾದಿದರ್ಶನಕ್ಕೆ ಕರ್ತೃವಾಗದಿದ್ದರೆ ಎಂದರ್ಥ. ಒಂದುವೇಳೆ ಸ್ವಪ್ನವನ್ನು ನೋಡಿಸುವವನು ಎಂಬ ಪ್ರಯೋಜಕಕರ್ತೃವನ್ನು ವಿವಕ್ಷಿಸುವುದಾದಲ್ಲಿ, ಸ್ವಾಪ್ನಪದಾರ್ಥಗಳನ್ನು ನೋಡುವುದರಿಂದ ವಿಕಾರರೂಪವಾದ ಲೇಪವೇ ಪರಮಾತ್ಮನಿಗೆ ಉಂಟಾಗುವುದಿಲ್ಲ. 'ಅನನ್ವಾಗತಸ್ತೇನ ಭವತಿ' ಎಂಬ ಶ್ರುತಿಯು ಸ್ವಾಪ್ನಪದಾರ್ಥಗಳನ್ನು ನೋಡುವುದರಿಂದ, ಯಾವುದೇ ಪದಾರ್ಥಗಳ ಸಂಗವು ಆಗುವುದಿಲ್ಲವೆಂದು ನಿಷೇಧ ಮಾಡುತ್ತಿದೆ. ಈಗ ಪರಮಾತ್ಮನನ್ನು ವಿವಕ್ಷಿಸುವುದಾದರೆ, ಸಂಗಕ್ಕೆ ಪ್ರಸಕ್ತಿಯಿರುವುದಿಲ್ಲ. ಹೀಗಿರುವಾಗ ಅದನ್ನು ನಿಷೇಧ ಮಾಡುವುದು ತಪ್ಪಾಗುತ್ತದೆ. ಏಕೆಂದರೆ ವ್ಯಾಮೋಹನೆ

ಮಾಡುವ ಐಂದ್ರಜಾಲಿಕನಿಗೆ ತಾನು ಸೃಷ್ಟಿಸುವ ಪದಾರ್ಥಗಳು ಕಾಣಿಸುವುದೇ ಇಲ್ಲ. ಮತ್ತೊಬ್ಬರಿಗಷ್ಟೇ ಆ ಪದಾರ್ಥಗಳು ಕಾಣಿಸಿ ಅದರಿಂದ ಸುಖ-ದುಃಖಗಳು ಉಂಟಾಗುತ್ತವೆ. ಅದರಂತೆ ಪರಮಾತ್ಮನು ಮತ್ತೊಬ್ಬರಿಗೆ ಸ್ವಾಪ್ನಪದಾರ್ಥಗಳನ್ನು ತೋರಿಸುತ್ತಾನಾದ್ದರಿಂದ ತನಗೆ ಯಾವುದೇ ಪದಾರ್ಥಗಳ ಸಂಪರ್ಕವಿರುವುದಿಲ್ಲ. ಹೀಗಿರುವಾಗ ಶ್ರುತಿಯು ಅದನ್ನು ನಿಷೇಧ ಮಾಡುವುದು ತಪ್ಪಾಗುತ್ತದೆ.

**प्रकाशः** – कथं तर्हि ब्रह्मलिङ्गोपपत्तिरित्यतो ''जीवेशयोरभेदेन जीवे चैतन्यविवक्षयाऽसङ्गत्वोक्तिसंभवात्'' इति टीकोक्तं सौत्रभेदपदव्यावर्त्यमभेदेनोपपन्नत्वं लिङ्गस्याह – **तथाचेति** ।। स्वस्यासङ्गत्वस्य यदुपजीव्यं द्रष्टृत्वं तदनुरोधादित्यर्थः । प्रतियोगिभूतसङ्गप्रसक्तिसम्पादकत्वेन द्रष्टृत्वस्योपजीव्यत्वमिति भावः ।

ಅಸಂಗತ್ವವೆಂಬ ಬ್ರಹ್ಮಲಿಂಗವನ್ನು ಜೀವನಲ್ಲಿ ಹೇಗೆ ಕೂಡಿಸುತ್ತೀರಿ? ಎಂಬ ಪ್ರಶ್ನೆಗೆ 'ಜೀವೇಶಯೋರಭೇದೇನ ಜೀವೇ ಚೈತನ್ಯವಿವಕ್ಷಯಾऽಸಂಗತ್ವೋಕ್ತಿಸಂಭವಾತ್' ಜೀವ ಮತ್ತು ಈಶ್ವರರಿಗೆ ಚೈತನ್ಯವಿವಕ್ಷೆಯಿಂದ ಅಭೇದವಿರುವುದರಿಂದ ಬ್ರಹ್ಮನಲ್ಲಿರುವ ಅಸಂಗತ್ವವನ್ನು ಜೀವನಲ್ಲಿ ಕೂಡಿಸುತ್ತೇವೆ ಎಂಬ ಟೀಕೆಯಲ್ಲಿ ಹೇಳಿದ್ದನ್ನು 'ತಥಾಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಮತ್ತು ಸೂತ್ರದಲ್ಲಿರುವ 'ಭೇದೇನ' ಎಂಬ ಪದದಿಂದ ವ್ಯಾವರ್ತ್ಯವಾದ ಅಭೇದಸಾಧಕವಾದ ಲಿಂಗವನ್ನೂ ಕೂಡ 'ತಥಾಚ' ಎಂಬ ವಾಕ್ಯದಿಂದಲೇ ತೋರಿಸುತ್ತಿದ್ದಾರೆ. ತನ್ನಲ್ಲಿರುವ ಅಸಂಗತ್ವಕ್ಕೆ ಉಪಜೀವ್ಯವಾದದ್ದು ದ್ರಷ್ಟೃತ್ವ ಅದನ್ನು ಅನುಸರಿಸಿ ಎಂದು 'ತಥಾಚ' ಎಂಬುದರ ಅರ್ಥ. ಅಸಂಗತ್ವಕ್ಕೆ ಪ್ರತಿಯೋಗಿಯಾದದ್ದು ಸಂಗ. ಆ ಸಂಗದ ಪ್ರಸಕ್ತಿಯನ್ನು ಉಂಟು ಮಾಡುವುದೇ ದ್ರಷ್ಟೃತ್ವ. ಆವಾಗ ಅಸಂಗತ್ವಕ್ಕೆ ದ್ರಷ್ಟೃತ್ವವು ಉಪಜೀವ್ಯವಾಯಿತು. ಈ ಸ್ವಪ್ನಾದಿದ್ರಷ್ಟೃತ್ವದ ಬಲದಿಂದ ಹಿಂದೆ ಹೇಳಿದಂತೆ ಜೀವನಲ್ಲೇ ಅಸಂಗತ್ವವು ಬರುತ್ತದೆ. ಹೀಗೆ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿ ಸಿದ್ಧವಾದ ಮೇಲೆ, ಉಪಜೀವ್ಯದ ಬಲದಿಂದ ಅಸಂಗತ್ವವನ್ನು ಜೀವನಲ್ಲೇ ಕೂಡಿಸಬೇಕು.

**प्रकाशः** – शाब्दिकन्यायमाह – **सन्निपातेति** ।। सन्निपातस्सन्निधानम् । लक्षणशब्दो निमित्तवचनः । बहुव्रीहिश्च समासः । यत्सन्निधानं निमित्तीकृत्य यो विधिः प्रवर्तते स विधिस्तत्सन्निधानविघातकस्य शास्त्रस्य कार्यस्य वा न निमित्तमिति न्यायार्थः ''कृन्मेजन्त'' इत्यत्र कैयटोक्तः ।

ತನಗೆ ಉಪಜೀವ್ಯವಾದದ್ದನ್ನು ಅನುಸರಿಸಬೇಕು ಹೊರತು, ವಿರೋಧಿಸಬಾರದೆನ್ನಲು ವ್ಯಾಕರಣ-ನ್ಯಾಯವನ್ನು ಹೇಳುತ್ತಿದ್ದಾರೆ 'ಸನ್ನಿಪಾತ' ಇತ್ಯಾದಿ ವಾಕ್ಯದಿಂದ. 'ಸನ್ನಿಪಾತಲಕ್ಷಣೋ ವಿಧಿಃ ಅನಿಮಿತ್ತಂ ತದ್ವಿಘಾತಸ್ಯ' ಎಂಬ ನ್ಯಾಯವನ್ನು 'ಕೃನ್ಮೇಜಂತಃ' ಎಂಬ ಸೂತ್ರವ್ಯಾಖ್ಯಾನ ಸಂದರ್ಭದಲ್ಲಿ ಕೈಯಟವು ಹೀಗೆ ವಿವರಣ ನೀಡಿದೆ - 'ಸನ್ನಿಪಾತ' ಶಬ್ದಕ್ಕೆ 'ಸನ್ನಿಧಾನ' ಎಂದರ್ಥ. 'ಲಕ್ಷಣ' ಶಬ್ದಕ್ಕೆ 'ನಿಮಿತ್ತ' ಎಂದರ್ಥ. ಸನ್ನಿಧಾನವನ್ನೇ ನಿಮಿತ್ತವನ್ನಾಗಿ ಉಳ್ಳದ್ದೆಂದು ಬಹುವ್ರೀಹಿ ಸಮಾಸವನ್ನು ತಿಳಿಯಬೇಕು. ಯಾವುದರ

ಸನ್ನಿಧಾನವನ್ನು ನಿಮಿತ್ತವನ್ನಾಗಿಟ್ಟುಕೊಂಡು, ಯಾವ ವಿಧಿಯು ಪ್ರವೃತ್ತವಾಗುತ್ತದೋ, ಆ ವಿಧಿಯು ಅದರ ಸನ್ನಿಧಾನ ವಿಘಾತಕವಾದ ಶಾಸ್ತ್ರಕ್ಕಾಗಲೀ, ಕಾರ್ಯಕ್ಕಾಗಲೀ ನಿಮಿತ್ತವಾಗುವುದಿಲ್ಲ ಎಂದು ನ್ಯಾಯದ ಅರ್ಥ.

**प्रकाशः** – यथा शतानीतिशब्दे शतशब्दात्परस्य जसः ''जश्शसोश्शिः'' इति शिभावे कृते तस्य ''शि सर्वनामस्थानम्'' इति सर्वनामस्थानसंज्ञायां तत्संनिपातेन शतशब्दस्य ''नपुंसकस्य खलच'' इति नुमागमे सति शतन् इ इति स्थिते ''ष्णान्ताषड्'' इति षट्संज्ञायां शिभावस्य ''षड्भ्योलुग्'' इति लुक्प्राप्नोति । शिभावसन्निपातेन विहितो नुम् षट्संज्ञाद्वारा शिभावविघातकस्य लुको निमित्तं न भवति ।

'ಶತಾನಿ' ಎಂಬ ರೂಪವು ಹೀಗೆ ನಿಷ್ಪನ್ನವಾಗುತ್ತದೆ - 'ಶತ' ಶಬ್ದದ ಮುಂದೆ ಬಹುತ್ವವು ವಿವಕ್ಷಿತವಾದಾಗ 'ಜಸ್' ಎಂಬ ಪ್ರತ್ಯಯವು ಪ್ರಾಪ್ತವಾಗುತ್ತದೆ. ಅನಂತರ 'ಜಶ್ಶಸೋಶ್ಶಿಃ' ಎಂಬ ಸೂತ್ರವು 'ಜಸ್' ಮತ್ತು 'ಶಸ್' ಪ್ರತ್ಯಯಗಳಿಗೆ ಶಿಭಾವವನ್ನು ಹೇಳುತ್ತದೆ. ಆವಾಗ 'ಶತ ಶಿ' ಎಂದಾಗುತ್ತದೆ. ಇಲ್ಲಿರುವ ಶಿಭಾವಕ್ಕೆ 'ಸರ್ವನಾಮಸ್ಥಾನಮ್' ಎಂಬ ಸೂತ್ರವು ಸರ್ವನಾಮಸ್ಥಾನ ಸಂಜ್ಞೆಯನ್ನು ಹೇಳುತ್ತದೆ. ಇದರ ಸನ್ನಿಧಾನದಿಂದ 'ನಪುಂಸಕಸ್ಯ ಖಲಚ' ಎಂಬ ಸೂತ್ರವು ಶತಶಬ್ದಕ್ಕೆ ನುಮಾಗಮವನ್ನು ವಿಧಿಸುತ್ತದೆ. ಆವಾಗ 'ಶತನ್ ಇ' ಎಂದಾಗುತ್ತದೆ. ಹೀಗಿರುವಾಗ 'ಷ್ಣಾಂತಾಃಷಡ್' ಎಂಬ ಸೂತ್ರವು ಶಕಾರಾಂತವಾದ ಮತ್ತು ನಕಾರಾಂತವಾದ ಶಬ್ದಗಳಿಗೆ 'ಷಡ್' ಎಂಬ ಸಂಜ್ಞೆಯನ್ನು ವಿಧಿಸುತ್ತದೆ. ಅನಂತರ 'ಷಡ್‌ಭ್ಯೋಲುಗ್' ಎಂಬ ಸೂತ್ರದಿಂದ ಶಿಭಾವಕ್ಕೆ ಲುಕ್ ಬರುವ ಪ್ರಸಕ್ತಿಯಿದೆ. ಆದರೆ 'ಶಿ' ಎಂಬುದನ್ನು ಉಪಜೀವಿಸಿಕೊಂಡು ನುಮಾಗಮವು ಬಂದಿದೆ. ಇಂತಹ ನುಮ್ ಆಗಮವು ಷಟ್‌ಸಂಜ್ಞೆಯನ್ನು ಸಂಪಾದನೆ ಮಾಡಿ, ಇಕಾರದ ಲೋಪಕ್ಕೆ ಕಾರಣವಾಗುವುದಿಲ್ಲ. ತನ್ನ ಉಪಜೀವ್ಯವನ್ನು ತಾನೇ ಬಾಧಿಸಲು ಸಾಧ್ಯವಿಲ್ಲ.

**प्रकाशः** – तथेहाप्यसङ्गत्वं ''पश्यति'' इत्युक्तद्रष्टृत्वविघातकस्य णिजर्थ-कल्पनस्यानिमित्तमिति द्रष्टव्यम् ।

ಅದರಂತೆ ಪ್ರಕೃತ 'ಪಶ್ಯತಿ' ಎಂಬುದರಿಂದ ಪ್ರಾಪ್ತವಾದ ದ್ರಷ್ಟೃತ್ವವನ್ನು ಹೇಳಿದಾಗಲೇ ಸಂಗವು ಪ್ರಸಕ್ತವಾದಾಗ ಅಸಂಗತ್ವವನ್ನು ಶ್ರುತಿಯು ಹೇಳುತ್ತಿದೆ. ಆದರೆ ಇದೇ ಅಸಂಗತ್ವಲಿಂಗದಿಂದ ದ್ರಷ್ಟೃತ್ವವನ್ನು ನಿಷೇಧ ಮಾಡಿ ದರ್ಶಯಿತಾ' ಎಂಬರ್ಥವನ್ನು ವಿವಕ್ಷಿಸುತ್ತೇವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅಸಂಗತ್ವಧರ್ಮವು ಪ್ರಾಪ್ತವಾದದ್ದೇ ದ್ರಷ್ಟೃತ್ವವನ್ನು ಉಪಜೀವಿಸಿಕೊಂಡು, ತನಗೆ ಉಪಜೀವ್ಯವಾದ ದ್ರಷ್ಟೃತ್ವಕ್ಕೆ ಈ ಅಸಂಗತ್ವಲಿಂಗವು ಘಾತಕವಾಗುವುದಿಲ್ಲ. ಆದ್ದರಿಂದ ಅಸಂಗತ್ವಲಿಂಗದ ಬಲದಿಂದ ಣಿಜರ್ಥತ್ವವನ್ನು ಕಲ್ಪನೆಮಾಡಲು ಬರುವುದಿಲ್ಲ.

**प्रकाशः** – ननु क्वचिद्वृक्षायेत्यादौ ''ङेर्य'' इत्यकारनिमित्तकोऽपि यादेशः ''सुपिच'' इति दीर्घविधेर्हेतुस्सन् अकारविघातहेतुरपि दृष्ट इति तत्रायं न्यायो व्यभिचारीति चेत्

ಪ್ರಶ್ನೆ - 'ಸನ್ನಿಪಾತಲಕ್ಷಣೋ ವಿಧಿಃ ಅನಿಮಿತ್ತಂ ತದ್ವಿಘಾತಸ್ಯ' ಎಂಬ ನ್ಯಾಯಕ್ಕೆ ವ್ಯಭಿಚಾರವಿದೆ. ಏಕೆಂದರೆ ವೃಕ್ಷಾಯ ಎಂಬ ರೂಪವನ್ನು ನಿಷ್ಪತ್ತಿ ಮಾಡುವಾಗ ಹೀಗೆ ವಿಚಾರ ಮಾಡಿದ್ದಾರೆ. ವೃಕ್ಷ ಶಬ್ದದ ಮೇಲೆ ಚತುರ್ಥಿವಿಭಕ್ತಿಯ ಏಕವಚನವು ವಿವಕ್ಷಿತವಾದಾಗ, 'ಙೇ ಎಂಬ ಪ್ರತ್ಯಯವು ಪ್ರಾಪ್ತವಾಗುತ್ತಗೆ. ಆವಾಗ 'ಙೇರ್ಯಃ' ಎಂಬ ಸೂತ್ರವು ವೃಕಕ್ಷಶಬ್ದದ ಕೊನೆಯಲ್ಲಿರುವ ಅಕಾರವನ್ನು ನಿಮಿತ್ತೀಕರಿಸಿಕೊಂಡು 'ಯ' ಎಂಬ ಆದೇಶವನ್ನು ವಿಧಿಸುತ್ತದೆ. ಅನಂತರ 'ಸುಪಿಚ' ಎಂಬ ಸೂತ್ರವು 'ಸುಪ್' ಪ್ರತ್ಯಯವೆನಿಸಿದ 'ಙೇ' ಪ್ರತ್ಯಯವು ಪರದಲ್ಲಿರುವ ಕಾರಣ, ಅಕಾರಕ್ಕೆ ದೀರ್ಘವನ್ನು ವಿಧಿಸುತ್ತಿದೆ. ಇಲ್ಲಿ 'ಙೇ' ಪ್ರತ್ಯಯವು ಬಂದದ್ದೇ ಅಕಾರವನ್ನು ಉಪಜೀವಿಸಿಕೊಂಡು, ಅಂತಹ ಉಪಜೀವ್ಯವಾದ ಅಕಾರಕ್ಕೆ ಪುನಃ 'ಙೇ' ಪ್ರತ್ಯಯವೇ ಬಾಧಕವಾಗಿರುವುದು ಕಂಡಿದೆ. ಆದ್ದರಿಂದ ಉಪಜೀವ್ಯವನ್ನು ವಿರೋಧಿಸುವುದಿಲ್ಲವೆಂಬ ನ್ಯಾಯಕ್ಕೆ ಈ ಸ್ಥಳದಲ್ಲಿ ವ್ಯಭಿಚಾರ ಬರುತ್ತದಲ್ಲವೇ?

**प्रकाशः** – मैवम् । ''कष्टायक्रमण'' इत्यादिनिर्देशात् ज्ञापकात्तत्र तथात्वेऽपि नेह तथा । तादृशज्ञापकाभावादिति भावः । टीकायां वाक्यशेषानुपपत्तेस्स्पष्टत्वादेतदाशंकासमाधी नोक्ताविति भावः । टीकोक्तलिङ्गोपपत्तावतिप्रसङ्गमाशंक्यनिराह – पूर्वत्र त्विति ॥

ಹೀಗೆ ವ್ಯಭಿಚಾರದೋಷವನ್ನು ಆಶಂಕಿಸುವುದು ತಪ್ಪು. ಏಕೆಂದರೆ 'ಕಷ್ಟಾಯಕ್ರಮಣ' ಎಂದು ಪಾಣಿನಿಯೇ ನಿರ್ದೇಶಿಸಿದ್ದಾನೆ. ಈ ಜ್ಞಾಪಕದ ಬಲದಿಂದ, 'ವೃಕ್ಷಾಯ' ಇತ್ಯಾದಿ ಶಬ್ದಗಳಲ್ಲಿ ಉಪಜೀವ್ಯವನ್ನು ವಿರೋಧಿಸುವುದು ಚತುರ್ಥಿವಿಭಕ್ತಿಯಲ್ಲಿ ಅನಿವಾರ್ಯ. ಆದರೆ ಬೇರೆಡೆ ಹಾಗೇ ಉಪಜೀವ್ಯವನ್ನು ವಿರೋಧಿಸಲು ಯಾವುದೇ ಜ್ಞಾಪಕಗಳಿರುವುದಿಲ್ಲ. ಆದ್ದರಿಂದ ಅಸಂಗತ್ವದ ಬಲದಿಂದ ದ್ರಷ್ಟೃತ್ವವೆಂಬರ್ಥವನ್ನು ಪರಿತ್ಯಾಗ ಮಾಡುವುದೂ ಕೂಡ ತಪ್ಪಾಗುತ್ತದೆ. ಟೀಕೆಯಲ್ಲಿ ಈ ಶಂಕೆ ಮತ್ತು ಸಮಾಧಾನಗಳನ್ನು ಏಕೆ ಹೇಳಿಲ್ಲ ಎಂದರೆ 'ಅನನ್ವಾಗತಸ್ತೇನ ಭವತಿ' ಎಂಬ ವಾಕ್ಯಶೇಷದಲ್ಲಿ ಸ್ಪಷ್ಟವಾಗಿ ಸಂಗನಿಷೇಧವನ್ನು ಮಾಡಲಾಗಿದೆ. ನಿಷೇಧ ಮಾಡಬೇಕೆಂದರೆ ಮೊದಲು ಪ್ರಸಕ್ತಿಯಿರಬೇಕು. ಆದ್ದರಿಂದ ಸ್ವಪ್ನದ್ರಷ್ಟೃತ್ವವನ್ನು ಹಿಂದಿನವಾಕ್ಯದಲ್ಲಿ ಹೇಳುತ್ತಿದ್ದಾರೆಂಬರ್ಥವು ಸ್ಪಷ್ಟವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ಇದನ್ನು ಹೇಳಿರುವುದಿಲ್ಲ.

ಅಭೇದದಿಂದ ಬ್ರಹ್ಮನಲಿಂಗವನ್ನು ಜೀವನಲ್ಲಿ ತರುವುದಾದರೆ, 'ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬಲ್ಲಿಯೂ ನಾಮರೂಪನಿರ್ವಾಹಿತೃತ್ವ ಮೊದಲಾದ ಲಿಂಗಗಳನ್ನು ಬ್ರಹ್ಮಾಭೇದವಿರುವ ಪ್ರಯುಕ್ತ ಆಕಾಶದಲ್ಲಿಯೂ ಕೂಡ ಹೇಳಬಹುದಲ್ಲವೇ? ಎಂಬ ಆಶಂಕೆಯನ್ನು 'ಪೂರ್ವತ್ರ ತು' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಅಂದರೆ ಆಕಾಶವು ಜಡವಾದ್ದರಿಂದ ಬ್ರಹ್ಮನಿಂದ ಅಭೇದವನ್ನು ಹೇಳಲಾಗದು ಎಂದರ್ಥ.

**प्रकाशः** – एतेन ''पूर्ववैषम्येण'' इत्येतत्प्रकारान्तरेणापि विवृतं ध्येयम् । ''नच मन्तव्यं यथा स्वप्नादिदर्शनस्य'' इत्यादिटीकां व्यनक्ति ॥ ननु तर्हीति ॥

ಇದರಿಂದ 'ಪೂರ್ವವೈಷಮ್ಯೇಣ' ಎಂಬುದನ್ನು ಮತ್ತೊಂದು ಬಗೆಯಲ್ಲಿ ವಿವರಿಸಿದಂತಾಯಿತು. 'ನಚ ಮಂತವ್ಯಂ ಯಥಾ ಸ್ವಪ್ನಾದಿದರ್ಶನಸ್ಯ' ಇತ್ಯಾದಿ ಟೀಕೆಯನ್ನು 'ನನು ತರ್ಹಿ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – भाष्येऽनुक्तस्याप्यभेदपूर्वपक्षस्य टीकायामुपपादने मूलमाह – **एतदेवेति** ।। जीवेश्वराभेद इति निमित्तसप्तमी । जीवेश्वराभेदेन निमित्तेनेत्यर्थः । तयोरभेदश्च स्वप्नद्रष्टृत्वासङ्गत्वरूपजीवेशलिङ्गयोस्सामानाधिकरण्यान्यथानुपपत्त्यैव सिद्ध इति भावः ।

ಅಭೇದಪೂರ್ವಪಕ್ಷವನ್ನು ಭಾಷ್ಯದಲ್ಲಿ ಹೇಳದಿದ್ದರೂ ಟೀಕೆಯಲ್ಲಿ ಹೇಳಲು ಏನು ಕಾರಣ? ಎಂಬುದಕ್ಕೆ 'ಏತದೇವ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಜೀವೇಶ್ವರಾಭೇದೇ' ಎಂಬುದು ನಿಮಿತ್ತಸಪ್ತಮೀ ವಿಭಕ್ತಿಯಾಗಿದೆ. ಅಂದರೆ ಜೀವೇಶ್ವರಾಭೇದನಿಮಿತ್ತಕವಾಗಿ ಅಸಂಗತ್ವವು ಜೀವನಲ್ಲಿ ಬರುತ್ತದೆ ಎಂದರ್ಥ. ಸ್ವಪ್ನದ್ರಷ್ಟೃತ್ವವು ಜೀವನ ಧರ್ಮವಾಗಿದೆ. ಅಸಂಗತ್ವವು ಬ್ರಹ್ಮನ ಧರ್ಮವಾಗಿದೆ. ಈ ಎರಡು ಧರ್ಮಗಳನ್ನು ಸಾಮಾನಾಧಿಕರಣ್ಯದಿಂದ ಶ್ರುತಿಯು ಹೇಳುತ್ತಿದೆ. ಈ ಸಾಮಾನಾಧಿಕರಣ್ಯದ ಅನ್ಯಥಾನುಪಪತ್ತಿಯಿಂದಲೇ ಜೀವೇಶ್ವರರಿಗೆ ಅಭೇದವು ಸಿದ್ಧವಾಗುತ್ತದೆಂದು ತಿಳಿಯಬೇಕು.

**प्रकाशः** – टीकानुक्तं स्वयं भाष्यतात्पर्यांतरमाह – **यद्वेति** ।। सिद्धान्तिना जीवेशाभेदानङ्गीकारादिति वाक्यशेषो न्यायविवरणे द्रष्टव्य इति भावः ।

ಟೀಕೆಯಲ್ಲಿ ಹೇಳದ ಮತ್ತೊಂದು ಬಗೆಯ ಭಾಷ್ಯದ ತಾತ್ಪರ್ಯವನ್ನು ಸ್ವತಃ ಗ್ರಂಥಕಾರರು ಹೇಳುತ್ತಿದ್ದಾರೆ 'ಯದ್ವಾ' ಇತ್ಯಾದಿ ವಾಕ್ಯದಿಂದ. ಅಂದರೆ ಅಭೇದವಾದಿಗಳು ಹೀಗೆ ಪೂರ್ವಪಕ್ಷ ಮಾಡಬಹುದೇ ಹೊರತು, ಭೇದವಾದಿಗಳಿಗೆ ಈ ಪೂರ್ವಪಕ್ಷವನ್ನು ಮಾಡಲಾಗದು. ಏಕೆಂದರೆ ಸಿದ್ಧಾಂತಿಗಳು ಜೀವೇಶ್ವರರಿಗೆ ಅಭೇದವನ್ನು ಒಪ್ಪಿರುವುದಿಲ್ಲ ಎಂಬುದಾಗಿ ನ್ಯಾಯವಿವರಣದಲ್ಲಿ 'ಸಿದ್ಧಾಂತಿನಾ ಜೀವೇಶಾಭೇದಾನಂಗೀಕಾರಾತ್' ಎಂಬ ವಾಕ್ಯಶೇಷವನ್ನು ವಿವಕ್ಷಿಸಬೇಕು ಎಂದು ವ್ಯಾಖ್ಯಾನ ಮಾಡಿದಂತಾಯಿತು.

**प्रकाशः** – सिद्धान्तन्यायमप्याशङ्क्याह – **नच प्राज्ञेनेति** ।। क्रमेण सुषुप्त्युत्क्रान्त्योर्वाक्यद्वयम् । तथा च विशिष्टे प्रतीतो भेदो मिथ्येति भावः ।।

ಸಿದ್ಧಾಂತನ್ಯಾಯವನ್ನೂ ಕೂಡ ಆಶಂಕಿಸುತ್ತಿದ್ದಾರೆ 'ನಚ ಪ್ರಾಜ್ಞೇನ' ಇತ್ಯಾದಿ ವಾಕ್ಯದಿಂದ. ಕ್ರಮವಾಗಿ ಸುಷುಪ್ತಿವಾಕ್ಯ ಹಾಗೂ ಉತ್ಕ್ರಾಂತಿವಾಕ್ಯವನ್ನು ವಿವಕ್ಷಿಸಬೇಕು. ಆದ್ದರಿಂದ ವಿಶಿಷ್ಟರಲ್ಲಿ ಪ್ರತೀತವಾದ ಭೇದವು ಮಿಥ್ಯಾಭೂತವಾಗಿದೆಯೆಂದು ತಿಳಿಯಬೇಕು.

**प्रकाशः** – **एतेनेति** ।। विशेष्यस्य भेदाभावेनेत्यर्थः । प्रागुक्तोऽपि भेदव्यपदेशो न विशेष्यभेदविषय इति भावः ।

'ಏತೇನ' ಎಂದರೆ ವಿಶೇಷ್ಯಗಳಿಗೆ ಭೇದವಿಲ್ಲದ ಕಾರಣದಿಂದ ಎಂದರ್ಥ. 'ಅಂತಸ್ಥತ್ವಾಧಿಕರಣದಲ್ಲಿ ಭೇದವ್ಯಪದೇಶವನ್ನು ಹೇಳಲಾಗಿತ್ತು. ಹೊರತು, ವಿಶೇಷ್ಯಗಳಿಗೆ ಭೇದವನ್ನು ಹೇಳಿರುವುದಿಲ್ಲ. ಆದ್ದರಿಂದ ಎಲ್ಲೆಡೆಯು ಭೇದವು ಅನ್ಯಥಾಸಿದ್ಧವೆಂದು ಹೇಳಬಹುದು.

**गुरुराजीयम्** – वैषम्येण पूर्वपक्षमाह – **पूर्वोक्तेति** ।। न तथा ब्रह्मणि न प्रसिद्धमित्यर्थः । ननु यवादिशब्दानां प्रियंग्वादिषु म्लेच्छप्रसिद्धेः सत्त्वेऽपि यदा अन्या ओषधयो म्लायन्ते अथैते मोदमानास्तिष्ठंतीत्यादिवाक्यशेषानुगृहीतार्थप्रसिद्ध्या दीर्घशूकादिपरत्ववत् स्वप्नद्रष्टृत्वस्य लोकतो जीव एव प्रसिद्धत्वेऽपि वैदिकप्रसिद्ध्या ब्रह्मण एव स्वप्नद्रष्टृत्वं किं न स्यादित्यतो दृष्टान्त आर्यप्रसिद्धेः सत्त्वेन तदनुसारेण यवादिशब्दानां दीर्घशूकपरत्वेऽपि प्रकृते स्वप्नद्रष्टृत्वस्य ब्रह्मणि वैदिकप्रसिद्ध्याभावा दृष्टान्तदार्ष्टान्तिकयोर्वैषम्यापत्त्या नास्य यववराहाधिकरणविषयत्वम् । किन्तु पिकनेमाधिकरणविषयत्वमेवेत्याह – **आर्यप्रसिद्ध्यभाव इति** ।। पूर्वाधिकरण आकाशश्रुतेर्वैनामेति प्रसिद्धिद्योतकनिपातेनेव स्वप्नद्रष्टृत्वस्य प्रसिद्धिद्योतकनिपातेना-विशेषणात्पूर्वपक्षानुपपत्तिरित्याशङ्कते – **यद्यपीति** ।।

ननु न स्वप्नद्रष्टृत्वं ब्रह्मपक्षे बाधकम् । ब्रह्मणः सर्वज्ञत्वेन स्वप्नद्रष्टृत्वोपपत्तेः। नच स्वप्नादेर्मिथ्यात्वेन तज्ज्ञत्वे ब्रह्मणो भ्रान्तत्वं स्यादिति वाच्यम् । सन्ध्ये सृष्टिराह हीत्यादिन्यायेन स्वप्नादेस्सत्यत्वेन तज्ज्ञत्वे भ्रान्तत्वायोगादिति शङ्कते ।। **नचेति** ।। पूर्वाधिकरणसिद्धान्तन्यायेन पूर्वपक्षमाह – **यथेति** ।। **उक्तन्यायेनेति** ।। अन्तर्भावितण्यर्थत्वरूपोक्तन्यायेनेत्यर्थः ।। **अन्यथेति** ।। पश्यतीत्यस्य द्रष्टृत्वार्थक-क्रियावेशापत्त्याऽसङ्गतत्वव्याघात इत्यर्थः । यत्सन्निपातेन यस्य यद्भवति तत्तद्विघातस्यानिमित्तमिति न्यायार्थः ।

नन्वेवं पूर्वाधिकरणेऽपि ब्रह्माभेदाभिप्रायेण नामादिनिर्वोढृत्वमाकाशस्यैव स्यादित्यत्राह – **पूर्वत्रेति** ।। चैतन्यैक्याभिप्रायेणेति टीकाऽनुपपन्ना । चैतन्यैक्याभिप्रायेणैव जीवेऽमुख्यत्ववत्तेनैवेश्वरे स्वप्नादिद्रष्टृत्वस्याप्यमुख्यत्वोपपत्तेः। अतोभिप्रायमाह – **जीवस्येति** ।। **न्यायविवरण इति** ।। ईश्वरोक्तावपि असङ्गतत्वेने-श्वरोक्तावपीत्यर्थः । नन्वसङ्गतत्वेनेश्वरोक्तौ जीव एवोक्त इत्यत उक्तं जीवेश्वराभेद इति ।। नन्वेवं जीवेश्वराभेदादेव जीवोक्तावपीश्वर एवोक्त इति किं न स्यादित्यत उक्तमर्थादिति ।। ईश्वरधर्मभूतासङ्गत्वोक्तावपि येन रूपेण जीवस्येश्वरैक्यं

तत्रासङ्गत्वस्य सत्त्वेनोपपन्नत्वात् ब्रह्मणश्च येन रूपेण जीवाभेदस्तत्र चिन्मात्रे स्वप्नद्रष्टृत्वाभावादस्मिन्पक्षे यदि जीवेश्वराभेदस्तदेश्वरोक्तावर्थाज्जीव उक्त इति सम्भवति । नत्वेवं त्वया वक्तुं शक्यम् । जीवेश्वराभेदस्य त्वयाऽनभ्युपगमादिति न्यायविवरणं व्याख्यातं भवति – **एतेनेति** ।। विशिष्टस्य भेदसिद्धावपि विशेष्यस्य भेदसिद्ध्यभावेनेत्यर्थः ।




'ದ್ರವತಿ ಸ್ವಪ್ನಾಯ್ಯೈವ ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋಹ್ಯಯಂ ಪುರುಷಃ' ಎಂಬ ಶ್ರುತಿಯು ಸ್ವಪ್ನಾವಸ್ಥೆಯಲ್ಲಿ ಯಾವಾತನು ಪದಾರ್ಥಗಳನ್ನೆಲ್ಲಾ ನೋಡುತ್ತಾನೋ, ಅವನು ಅಸಂಗನಾಗಿದ್ದಾನೆಂದು ಹೇಳುತ್ತಿದೆ. ಇಂತಹ ವ್ಯಕ್ತಿ ಜೀವನೇ ಹೊರತು, ಪರಮಾತ್ಮನಲ್ಲ. ಪ್ರತಿಯೊಬ್ಬರೂ ಕೂಡ ಲೋಕದಲ್ಲಿ ಜೀವನೇ 'ಸ್ವಪ್ನದ್ರಷ್ಟ್ರ' ಎಂದು ವ್ಯವಹರಿಸುತ್ತಾರೆ. ಮತ್ತು ವೇದದಲ್ಲಿ ಎಲ್ಲಿಯೂ ಕೂಡ ಪರಮಾತ್ಮನು 'ಸ್ವಪ್ನದ್ರಷ್ಟ್ರ' ಎಂಬ ಪ್ರಸಿದ್ಧಿಯಿಲ್ಲ. ಹೀಗೆ ಲೋಕದಲ್ಲಾಗಲೀ, ವೇದದಲ್ಲಾಗಲೀ, ಪರಮಾತ್ಮನಲ್ಲಿ ಸ್ವಪ್ನದ್ರಷ್ಟೃತ್ವವು ಪ್ರಸಿದ್ಧವೇ ಆಗಿರುವುದಿಲ್ಲ. ಆದ್ದರಿಂದ ಲೋಕಪ್ರಸಿದ್ಧಿಯಿರುವ ಜೀವನನ್ನೇ ಸ್ವಪ್ನದ್ರಷ್ಟ್ರ ಎನ್ನಬೇಕು. ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ ಆಕಾಶಶಬ್ದದಲ್ಲಾದರೆ ಪರಮಾತ್ಮನಲ್ಲಿ ವೇದಪ್ರಸಿದ್ಧಿಯ್ದಾದರೂ ಇತ್ತು. ಪ್ರಕೃತ ಹಾಗೇ ವೇದಪ್ರಸಿದ್ಧಿಯೂ ಕೂಡ ಇರುವುದಿಲ್ಲ.

ಇನ್ನು ವಜ್ರ, ಆಕಾಶ ಮೊದಲಾದ ಶಬ್ದಗಳಲ್ಲಿ ಯೌಗಿಕಾರ್ಥವನ್ನು ಸ್ವೀಕರಿಸಿ, ಪರಮಾತ್ಮನಲ್ಲಿ ಸಮನ್ವಯ ಮಾಡಿದಂತೆ ಇಲ್ಲಿಯೂ ಕೂಡ 'ಪಶ್ಯತಿ' ಮೊದಲಾದ ಪದಗಳನ್ನು ವಿಭಾಗ ಮಾಡಿ, ಯೋಗದಿಂದ ಬ್ರಹ್ಮಪರತ್ವವನ್ನು ಸಮರ್ಥನೆ ಮಾಡಬೇಕು. ಆದರೆ ಇದನ್ನು ಸಿದ್ಧಾಂತಿಗಳೇ ಒಪ್ಪುವುದಿಲ್ಲ. ನಾಲ್ಕನೆಯ ಪಾದದಲ್ಲಿ ಪ್ರತಿಯೊಂದು ಪದಗಳಿಗೂ ಯೌಗಾರ್ಥವನ್ನು ಹೇಳುವ ಮೂಲಕ ಸಮನ್ವಯ ಮಾಡಬೇಕೆಂಬುದೇ ಸಿದ್ಧಾಂತಿಗಳ ಅಭಿಪ್ರಾಯ. ಇಲ್ಲಿ ಆದರ ಸಮನ್ವಯವು ಅನುಪಯುಕ್ತ. ಮತ್ತು ಸರ್ವಜ್ಞನಾದ ಬ್ರಹ್ಮನು ಎಲ್ಲವನ್ನೂ ನೋಡುತ್ತಾನಾದ್ದರಿಂದ, ಸ್ವಾಪ್ನಪದಾಥಗಳನ್ನೂ ಕೂಡ ನೋಡುತ್ತಾನೆಂದು ಹೇಳಬಹುದು. ಆದರೆ ಹಿಂದಿನ ಅಧಿಕರಣದಲ್ಲಿ ಅವ್ಯಾಕೃತಾಕಾಶಕ್ಕೆ ರೂಪಸಾಮಾನ್ಯವಿಲ್ಲದಿದ್ದರೂ ಪ್ರಾಕೃತರೂಪವಿಲ್ಲದ ಕಾರಣ. ಬ್ರಹ್ಮನನ್ನೇ ರೂಪರಹಿತನೆಂದು ಹೇಗೆ ಸ್ವೀಕರಿಸಿದರೋ, ಅದರಂತೆ ಇಲ್ಲಿಯೂ ಕೂಡ ಸಕಲ ವಸ್ತುಗಳನ್ನು ಪರಮಾತ್ಮನು ನೋಡುವವನಾದರೂ, ಸ್ವಪ್ನಾದಿದ್ರಷ್ಟೃತ್ವೇನ ಪ್ರಸಿದ್ಧನಾದ ಜೀವನನ್ನೇ ವಿವಕ್ಷಿಸುವುದು ಸೂಕ್ತ.

'ಅಸಂಗೋಹ್ಯಯಂ ಪುರುಷಃ' ಎಂಬುದಾಗಿ ಶ್ರುತಿಯು ಅಸಂಗತ್ವಧರ್ಮವನ್ನು ಹೇಳುತ್ತಿದೆ. ಈ ಅಸಂಗತ್ವವು ಬ್ರಹ್ಮನ ಧರ್ಮವಾದ್ದರಿಂದ, ಸ್ವಪ್ನಾದಿದ್ರಷ್ಟೃತ್ವವನ್ನು ಅವನಲ್ಲಿ ಣಿಜರ್ಥತ್ವವನ್ನು ಕಲ್ಪನೆ ಮಾಡುವ ಮೂಲಕ ಕೂಡಿಸಬೇಕು. ಅಂದರೆ ಜೀವರುಗಳಿಗೆ ಸ್ವಾಪ್ನಪದಾರ್ಥಗಳನ್ನು ತೋರಿಸುತ್ತಾನಾದ್ದರಿಂದ ಶ್ರುತಿಯು ಪರಮಾತ್ಮನನ್ನು ಸ್ವಪ್ನಾದಿದ್ರಷ್ಟ್ರವೆನ್ನುತ್ತಿದೆ ಎನ್ನಬೇಕು. ಆದರೆ ಇದೂ ಕೂಡ ಸರಿಯಲ್ಲ. ಅಸಂಗತ್ವವು ಪ್ರಾಪ್ತವಾದದ್ದೇ ಸ್ವಪ್ನಾದಿದ್ರಷ್ಟೃತ್ವದಿಂದ. ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆ ಎಂದು ಹೇಳಿದಾಗ, ಆಯಾ ಪದಾರ್ಥಗಳ

ಸಂಪರ್ಕವನ್ನು ನೋಡುವ ವ್ಯಕ್ತಿಯಲ್ಲಿ ಹೇಳಿದಂತಾಗುತ್ತದೆ. ಆವಾಗ ಶ್ರುತಿಯು ಅಸಂಗತ್ವಧರ್ಮವನ್ನು ಹೇಳುವ ಮೂಲಕ ನೋಡುವ ವ್ಯಕ್ತಿಗೆ ಯಾವುದೇ ಸಂಗವಿರುವುದಿಲ್ಲವೆಂದು ನಿಷೇಧ ಮಾಡುತ್ತಿದೆ. ಹೀಗೆ ಅಸಂಗತ್ವಧರ್ಮಕ್ಕೆ ಸ್ವಪ್ನಾದಿದ್ರಷ್ಟೃತ್ವವೇ ಉಪಜೀವ್ಯವೆಂದಂತಾಯಿತು. ಉಪಜೀವ್ಯವಾದ ದ್ರಷ್ಟೃತ್ವವನ್ನು ಅದೇ ಅಸಂಗತ್ವಧರ್ಮವು ನಿಷೇಧಿಸಲು ಸಾಧ್ಯವಿಲ್ಲ. 'ಸನ್ನಿಪಾತಲಕ್ಷಣೋ ವಿಧಿಃ ಅನಿಮಿತ್ತಂ ತದ್ವಿಘಾತಸ್ಯ' ಎಂಬ ವ್ಯಾಕರಣ ನಿಯಮವು ಉಪಜೀವ್ಯಕ್ಕೆ ಉಪಜೀವಕವು ಮಾರಕವಾಗುವುದಿಲ್ಲ ಎಂದು ಸಿದ್ಧಾಂತ ಮಾಡಿದೆ. ಆದ್ದರಿಂದ ಉಪಜೀವಕವಾದ ಅಸಂಗತ್ವಧರ್ಮವು ತನಗೆ ಉಪಜೀವ್ಯವಾದ ಸ್ವಪ್ನಾದಿದ್ರಷ್ಟೃತ್ವವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಆದ್ದರಿಂದ ಜೀವನಿಗೆ ಬ್ರಹ್ಮನಿಂದ ಅಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿರುವ ಅಸಂಗತ್ವಧರ್ಮವನ್ನು ಜೀವನಲ್ಲಿ ಶ್ರುತಿಯು ಗೌಣವಾಗಿ ಹೇಳುತ್ತಿದೆಯೆಂದೇ ಅರ್ಥೈಸಬೇಕು. ಹಾಗಾಗಿ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲೇ ಬರುತ್ತದೆ.

ಪೂರ್ವಪಕ್ಷಿಯು ಅಭೇದವಾದಿಯಾಗಿರುವುದರಿಂದ, ಬ್ರಹ್ಮಾಭೇದಪ್ರಯುಕ್ತವಾಗಿ ಜೀವನಲ್ಲಿ ಬ್ರಹ್ಮನ ಧರ್ಮವನ್ನು ಕೂಡಿಸುತ್ತಾನೆ. ಆದರೆ ಸಿದ್ಧಾಂತಿಗಳು ಭೇದವಾದಿಗಳಾದ್ದರಿಂದ ಜೀವನ ಧರ್ಮವೆನಿಸಿದ ಸ್ವಪ್ನಾದಿದ್ರಷ್ಟೃತ್ವವನ್ನು ಜೀವಾಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿ ಕೂಡಿಸುತ್ತೇವೆಂದು ಹೇಳಲು ಸಾಧ್ಯವಿಲ್ಲ.



## ಪ್ರತಿಯೊಬ್ಬ ಜೀವಿಯ ಸ್ವಾಪ್ನಪದಾರ್ಥಗಳೆಲ್ಲವನ್ನೂ ಸಂಪೂರ್ಣವಾಗಿ ನೋಡುವವನು ಪರಮಾತ್ಮನು ಮಾತ್ರ

### तात्पर्यचन्द्रिका

**सिद्धान्तस्तु ।।**

**कात्स्न्र्येन स्वाप्नवस्तूनां द्रष्टा सर्वज्ञ ईश्वरः ।**
**न युज्यते च सङ्कोचो ह्यसङ्कोचस्य सम्भवे ।। १ ।।**

ಅನುವಾದ - ಸಿದ್ಧಾಂತ ಹೀಗಿದೆ -

ಕಾರ್ತ್ಸ್ನ್ಯೇನ ಸ್ವಾಪ್ನವಸ್ತೂನಾಂ ದ್ರಷ್ಟಾ ಸರ್ವಜ್ಞ ಈಶ್ವರಃ ।
ನ ಯುಜ್ಯತೇ ಚ ಸಂಕೋಚೋ ಹ್ಯಸಂಕೋಚಸ್ಯ ಸಂಭವೇ ॥೧॥

ಸ್ವಪ್ನಾಪದಾರ್ಥಗಳನ್ನೆಲ್ಲಾ ಸಂಪೂರ್ಣವಾಗಿ ನೋಡುವವನು ಸರ್ವಜ್ಞನಾದ ಈಶ್ವರನೇ ಆಗಿದ್ದಾನೆ. ಹೀಗೆ ಶ್ರುತಿಗೆ ಅಸಂಕುಚಿತವಾದ ಅರ್ಥವನ್ನೇ ಸ್ವೀಕರಿಸಲು ಬರುವಾಗ, ಸಂಕುಚಿತವಾದ ಅರ್ಥವನ್ನು ಸ್ವೀಕರಿಸಲು ಬರುವುದಿಲ್ಲ.

**ते यदन्तरेत्यत्र तु प्राकृतयोर्नामरूपयोः प्रकृतत्वात्प्रकृतपरसर्वनामबलाद्रूपमात्र निषेधे ''श्यामाच्छबलं प्रपद्य'' इति सन्निहितवाक्यविरोधाच्च प्राकृतपरत्वेन सङ्कोचः ।**

तत्रासङ्गत्वस्य सत्त्वेनोपपन्नत्वात् ब्रह्मणश्च येन रूपेण जीवाभेदस्तत्र चिन्मात्रे स्वप्नद्रष्टृत्वाभावादस्मिन्पक्षे यदि जीवेश्वराभेदस्तदेश्वरोक्तावर्थाज्जीव उक्त इति सम्भवति । नत्वेवं त्वया वक्तुं शक्यम् । जीवेश्वराभेदस्य त्वयाऽनभ्युपगमादिति न्यायविवरणं व्याख्यातं भवति – एतेनेति ।। विशिष्टस्य भेदसिद्धावपि विशेष्यस्य भेदसिद्ध्यभावेनेत्यर्थः ।




'ದ್ರವತಿ ಸ್ವಪ್ನಾಯೈವ ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋಹ್ಯಯಂ ಪುರುಷಃ' ಎಂಬ ಶ್ರುತಿಯು ಸ್ವಪ್ನಾವಸ್ಥೆಯಲ್ಲಿ ಯಾವಾತನು ಪದಾರ್ಥಗಳನ್ನೆಲ್ಲಾ ನೋಡುತ್ತಾನೋ, ಅವನು ಅಸಂಗನಾಗಿದ್ದಾನೆಂದು ಹೇಳುತ್ತಿದೆ. ಇಂತಹ ವ್ಯಕ್ತಿ ಜೀವನೇ ಹೊರತು, ಪರಮಾತ್ಮನಲ್ಲ. ಪ್ರತಿಯೊಬ್ಬರೂ ಕೂಡ ಲೋಕದಲ್ಲಿ ಜೀವನೇ 'ಸ್ವಪ್ನದ್ರಷ್ಟೃ' ಎಂದು ವ್ಯವಹರಿಸುತ್ತಾರೆ. ಮತ್ತು ವೇದದಲ್ಲಿ ಎಲ್ಲಿಯೂ ಕೂಡ ಪರಮಾತ್ಮನು 'ಸ್ವಪ್ನದ್ರಷ್ಟೃ' ಎಂಬ ಪ್ರಸಿದ್ಧಿಯಿಲ್ಲ. ಹೀಗೆ ಲೋಕದಲ್ಲಾಗಲೀ, ವೇದದಲ್ಲಾಗಲೀ, ಪರಮಾತ್ಮನಲ್ಲಿ ಸ್ವಪ್ನದ್ರಷ್ಟೃತ್ವವು ಪ್ರಸಿದ್ಧವೇ ಆಗಿರುವುದಿಲ್ಲ. ಆದ್ದರಿಂದ ಲೋಕಪ್ರಸಿದ್ಧಿಯಿರುವ ಜೀವನನ್ನೇ ಸ್ವಪ್ನದ್ರಷ್ಟೃ ಎನ್ನಬೇಕು. ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ ಆಕಾಶಶಬ್ದದಲ್ಲಾದರೆ ಪರಮಾತ್ಮನಲ್ಲಿ ವೇದಪ್ರಸಿದ್ಧಿಯಾದರೂ ಇತ್ತು. ಪ್ರಕೃತ ಹಾಗೇ ವೇದಪ್ರಸಿದ್ಧಿಯೂ ಕೂಡ ಇರುವುದಿಲ್ಲ.

ಇನ್ನು ವಜ್ರ, ಆಕಾಶ ಮೊದಲಾದ ಶಬ್ದಗಳಲ್ಲಿ ಯೌಗಿಕಾರ್ಥವನ್ನು ಸ್ವೀಕರಿಸಿ, ಪರಮಾತ್ಮನಲ್ಲಿ ಸಮನ್ವಯ ಮಾಡಿದಂತೆ ಇಲ್ಲಿಯೂ ಕೂಡ 'ಪಶ್ಯತಿ' ಮೊದಲಾದ ಪದಗಳನ್ನು ವಿಭಾಗ ಮಾಡಿ, ಯೋಗದಿಂದ ಬ್ರಹ್ಮಪರತ್ವವನ್ನು ಸಮರ್ಥನೆ ಮಾಡಬೇಕು. ಆದರೆ ಇದನ್ನು ಸಿದ್ಧಾಂತಿಗಳೇ ಒಪ್ಪುವುದಿಲ್ಲ. ನಾಲ್ಕನೆಯ ಪಾದದಲ್ಲಿ ಪ್ರತಿಯೊಂದು ಪದಗಳಿಗೂ ಯೌಗಾರ್ಥವನ್ನು ಹೇಳುವ ಮೂಲಕ ಸಮನ್ವಯ ಮಾಡಬೇಕೆಂಬುದೇ ಸಿದ್ಧಾಂತಿಗಳ ಅಭಿಪ್ರಾಯ. ಇಲ್ಲಿ ಅದರ ಸಮನ್ವಯವು ಅನುಪಯುಕ್ತ. ಮತ್ತು ಸರ್ವಜ್ಞನಾದ ಬ್ರಹ್ಮನು ಎಲ್ಲವನ್ನೂ ನೋಡುತ್ತಾನಾದ್ದರಿಂದ, ಸ್ವಾಪ್ನಪದಾಥಗಳನ್ನೂ ಕೂಡ ನೋಡುತ್ತಾನೆಂದು ಹೇಳಬಹುದು. ಆದರೆ ಹಿಂದಿನ ಅಧಿಕರಣದಲ್ಲಿ ಅವ್ಯಾಕೃತಾಕಾಶಕ್ಕೆ ರೂಪಸಾಮಾನ್ಯವಿಲ್ಲದಿದ್ದರೂ ಪ್ರಾಕೃತರೂಪವಿಲ್ಲದ ಕಾರಣ. ಬ್ರಹ್ಮನನ್ನೇ ರೂಪರಹಿತನೆಂದು ಹೇಗೆ ಸ್ವೀಕರಿಸಿದರೋ, ಅದರಂತೆ ಇಲ್ಲಿಯೂ ಕೂಡ ಸಕಲ ವಸ್ತುಗಳನ್ನು ಪರಮಾತ್ಮನು ನೋಡುವವನಾದರೂ, ಸ್ವಪ್ನಾದಿದ್ರಷ್ಟೃತ್ವೇನ ಪ್ರಸಿದ್ಧನಾದ ಜೀವನನ್ನೇ ವಿವಕ್ಷಿಸುವುದು ಸೂಕ್ತ.

'ಅಸಂಗೋಹ್ಯಯಂ ಪುರುಷಃ' ಎಂಬುದಾಗಿ ಶ್ರುತಿಯು ಅಸಂಗತ್ವಧರ್ಮವನ್ನು ಹೇಳುತ್ತಿದೆ. ಈ ಅಸಂಗತ್ವವು ಬ್ರಹ್ಮನ ಧರ್ಮವಾದ್ದರಿಂದ, ಸ್ವಪ್ನಾದಿದ್ರಷ್ಟೃತ್ವವನ್ನು ಅವನಲ್ಲಿ ಣಿಜರ್ಥತ್ವವನ್ನು ಕಲ್ಪನೆ ಮಾಡುವ ಮೂಲಕ ಕೂಡಿಸಬೇಕು. ಅಂದರೆ ಜೀವರುಗಳಿಗೆ ಸ್ವಾಪ್ನಪದಾರ್ಥಗಳನ್ನು ತೋರಿಸುತ್ತಾನಾದ್ದರಿಂದ ಶ್ರುತಿಯು ಪರಮಾತ್ಮನನ್ನು ಸ್ವಪ್ನಾದಿದ್ರಷ್ಟೃವೆನ್ನುತ್ತಿದೆ ಎನ್ನಬೇಕು. ಆದರೆ ಇದೂ ಕೂಡ ಸರಿಯಲ್ಲ. ಅಸಂಗತ್ವವು ಪ್ರಾಪ್ತವಾದದ್ದೇ ಸ್ವಪ್ನಾದಿದ್ರಷ್ಟೃತ್ವದಿಂದ. ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆ ಎಂದು ಹೇಳಿದಾಗ, ಆಯಾ ಪದಾರ್ಥಗಳ

ಸಂಪರ್ಕವನ್ನು ನೋಡುವ ವ್ಯಕ್ತಿಯಲ್ಲಿ ಹೇಳಿದಂತಾಗುತ್ತದೆ. ಆವಾಗ ಶ್ರುತಿಯು ಅಸಂಗತ್ವಧರ್ಮವನ್ನು ಹೇಳುವ ಮೂಲಕ ನೋಡುವ ವ್ಯಕ್ತಿಗೆ ಯಾವುದೇ ಸಂಗವಿರುವುದಿಲ್ಲವೆಂದು ನಿಷೇಧ ಮಾಡುತ್ತಿದೆ. ಹೀಗೆ ಅಸಂಗತ್ವಧರ್ಮಕ್ಕೆ ಸ್ವಪ್ನಾದಿದ್ರಷ್ಟೃತ್ವವೇ ಉಪಜೀವ್ಯವೆಂದಂತಾಯಿತು. ಉಪಜೀವ್ಯವಾದ ದ್ರಷ್ಟೃತ್ವವನ್ನು ಅದೇ ಅಸಂಗತ್ವಧರ್ಮವು ನಿಷೇಧಿಸಲು ಸಾಧ್ಯವಿಲ್ಲ. 'ಸನ್ನಿಪಾತಲಕ್ಷಣೋ ವಿಧಿಃ ಅನಿಮಿತ್ತಂ ತದ್ವಿಘಾತಸ್ಯ' ಎಂಬ ವ್ಯಾಕರಣ ನಿಯಮವು ಉಪಜೀವ್ಯಕ್ಕೆ ಉಪಜೀವಕವು ಮಾರಕವಾಗುವುದಿಲ್ಲ ಎಂದು ಸಿದ್ಧಾಂತ ಮಾಡಿದೆ. ಆದ್ದರಿಂದ ಉಪಜೀವಕವಾದ ಅಸಂಗತ್ವಧರ್ಮವು ತನಗೆ ಉಪಜೀವ್ಯವಾದ ಸ್ವಪ್ನಾದಿದ್ರಷ್ಟೃತ್ವವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಆದ್ದರಿಂದ ಜೀವನಿಗೆ ಬ್ರಹ್ಮನಿಂದ ಅಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿರುವ ಅಸಂಗತ್ವಧರ್ಮವನ್ನು ಜೀವನಲ್ಲಿ ಶ್ರುತಿಯು ಗೌಣವಾಗಿ ಹೇಳುತ್ತಿದೆಯೆಂದೇ ಅರ್ಥೈಸಬೇಕು. ಹಾಗಾಗಿ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲೇ ಬರುತ್ತದೆ.

ಪೂರ್ವಪಕ್ಷಿಯು ಅಭೇದವಾದಿಯಾಗಿರುವುದರಿಂದ, ಬ್ರಹ್ಮಾಭೇದಪ್ರಯುಕ್ತವಾಗಿ ಜೀವನಲ್ಲಿ ಬ್ರಹ್ಮನ ಧರ್ಮವನ್ನು ಕೂಡಿಸುತ್ತಾನೆ. ಆದರೆ ಸಿದ್ಧಾಂತಿಗಳು ಭೇದವಾದಿಗಳಾದ್ದರಿಂದ ಜೀವನ ಧರ್ಮವೆನಿಸಿದ ಸ್ವಪ್ನಾದಿದ್ರಷ್ಟೃತ್ವವನ್ನು ಜೀವಾಭೇದವಿರುವ ಪ್ರಯುಕ್ತ ಬ್ರಹ್ಮನಲ್ಲಿ ಕೂಡಿಸುತ್ತೇವೆಂದು ಹೇಳಲು ಸಾಧ್ಯವಿಲ್ಲ.



## ಪ್ರತಿಯೊಬ್ಬ ಜೀವಿಯ ಸ್ವಾಪ್ನಪದಾರ್ಥಗಳೆಲ್ಲವನ್ನೂ ಸಂಪೂರ್ಣವಾಗಿ ನೋಡುವವನು ಪರಮಾತ್ಮನು ಮಾತ್ರ

### तात्पर्यचन्द्रिका

**सिद्धान्तस्तु ॥**

**कात्स्न्र्येन स्वाप्नवस्तूनां द्रष्टा सर्वज्ञ ईश्वरः ।**
**न युज्यते च सङ्कोचो ह्यसङ्कोचस्य सम्भवे ॥ १ ॥**

ಅನುವಾದ - ಸಿದ್ಧಾಂತ ಹೀಗಿದೆ -

ಕಾರ್ತ್ಸ್ನ್ಯೇನ ಸ್ವಾಪ್ನವಸ್ತೂನಾಂ ದ್ರಷ್ಟಾ ಸರ್ವಜ್ಞ ಈಶ್ವರಃ ।
ನ ಯುಜ್ಯತೇ ಚ ಸಂಕೋಚೋ ಹ್ಯಸಂಕೋಚಸ್ಯ ಸಂಭವೇ ॥೧॥

ಸ್ವಪ್ನಾಪದಾರ್ಥಗಳನ್ನೆಲ್ಲಾ ಸಂಪೂರ್ಣವಾಗಿ ನೋಡುವವನು ಸರ್ವಜ್ಞನಾದ ಈಶ್ವರನೇ ಆಗಿದ್ದಾನೆ. ಹೀಗೆ ಶ್ರುತಿಗೆ ಅಸಂಕುಚಿತವಾದ ಅರ್ಥವನ್ನೇ ಸ್ವೀಕರಿಸಲು ಬರುವಾಗ, ಸಂಕುಚಿತವಾದ ಅರ್ಥವನ್ನು ಸ್ವೀಕರಿಸಲು ಬರುವುದಿಲ್ಲ.

**ते यदन्तरेत्यत्र तु प्राकृतयोर्नामरूपयोः प्रकृतत्वात्प्रकृतपरसर्वनामबलाद्रूपमात्र निषेधे ''श्यामाच्छबलं प्रपद्य'' इति सन्निहितवाक्यविरोधाच्च प्राकृतपरत्वेन सङ्कोचः ।**

ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ವ್ಯತ್ಯಾಸವಿದೆ. ಹಿಂದೆ 'ತೇ ಯದಂತರಾ' ಎಂಬ ಶ್ರುತಿಯಲ್ಲಿ ಪ್ರಾಕೃತವಾದ ನಾಮರೂಪಗಳು ಪ್ರಸಕ್ತವಾಗಿದ್ದವು. ಅದನ್ನು ನಿಷೇಧ ಮಾಡುವುದು ಸೂಕ್ತವಾಗುತ್ತದೆ. ಮತ್ತು 'ತೇ' ಎಂಬ ಸರ್ವನಾಮ ಶಬ್ದದಿಂದ ರೂಪಸಾಮಾನ್ಯವು ಪ್ರಸಕ್ತವಾಗಿರುವುದರಿಂದ, ರೂಪಸಾಮಾನ್ಯವನ್ನು ನಿಷೇಧ ಮಾಡಿದರೆ, 'ಶ್ಯಾಮಾಚ್ಛಬಲಂ ಪ್ರಪದ್ಯೇ' ಎಂಬ ಸನ್ನಿಹಿತವಾಕ್ಯವು ಬ್ರಹ್ಮನಲ್ಲಿ ಶಬಲ ಮೊದಲಾದ ರೂಪಗಳನ್ನು ಹೇಳುತ್ತಿರುವುದರಿಂದ ವಿರೋಧ ಬರುತ್ತದೆ. ಆದ್ದರಿಂದ ಪ್ರಾಕೃತರೂಪವನ್ನು ನಿಷೇಧ ಮಾಡುತ್ತಿದೆಯೆಂದೇ ಸಂಕೋಚ ಮಾಡುವುದು ಅನಿವಾರ್ಯವಾಗಿತ್ತು.

**नच साकल्येन स्वप्नद्रष्टृत्वमसर्वज्ञे जीवे लोकतोऽपि प्रसिद्धम् । ब्रह्मणि तु श्रुतितः प्रसिद्धम् ।**

ಆದರೆ ಸಾಕಲ್ಯೇನ ಸ್ವಪ್ನದ್ರಷ್ಟೃತ್ವವು ಅಸರ್ವಜ್ಞನಾದ ಜೀವನಲ್ಲಿ ಲೋಕರೂಢಿಯಿಂದಲೂ ಕೂಡ ಪ್ರಸಿದ್ಧವಾಗಿಲ್ಲ. ಬ್ರಹ್ಮನಲ್ಲಾದರೆ, ಶ್ರುತಿಯಿಂದ ಪ್ರಸಿದ್ಧವಾಗಿದೆ.

**नच श्रुतितः प्रसिद्धग्रहणसम्भवे श्रुतितो लोकतश्चाप्रसिद्धस्य ग्रहणं युक्तम् । न चेह स्वप्नाद्यवस्थावत्तोच्यते । पश्यतीति तद्द्रष्टृत्वस्यैवोक्तेः ।**

ಶ್ರುತಿಪ್ರಸಿದ್ಧಿಯನ್ನು ವಿವಕ್ಷಿಸಲು ಬರುವಾಗ, ಶ್ರುತಿಯಿಂದ ಹಾಗೂ ಲೋಕರೂಢಿಯಿಂದ ಅಪ್ರಸಿದ್ಧವಾದ ಅರ್ಥವನ್ನು ಸ್ವೀಕರಿಸುವುದು ಯುಕ್ತವಲ್ಲ. ಇನ್ನು ಶ್ರುತಿಯಲ್ಲಿ ಸ್ವಪ್ನಾದ್ಯವಸ್ಥಾವುಳ್ಳವನನ್ನು ಹೇಳುತ್ತಿರುವುದರಿಂದ, ಪರಮಾತ್ಮನನ್ನು ಸ್ವೀಕರಿಸಲಾಗದೆಂದು ಶಂಕಿಸಬಾರದು. ಏಕೆಂದರೆ 'ಪಶ್ಯತಿ' ಎಂದು ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆಂದಷ್ಟೇ ಶ್ರುತಿಹೇಳುತ್ತಿದೆ. ಹೊರತು, ಸ್ವಪ್ನಾದ್ಯವಸ್ಥೆಯನ್ನು ಹೊಂದಿರುತ್ತಾನೆಂದು ಹೇಳಿರುವುದಿಲ್ಲ.

**किञ्च ''अनन्वागतस्तेन भवति'' इत्यत्र ''असङ्गो ह्ययं पुरुषः'' इत्यसङ्गत्वं हेतुः । प्रसिद्धमेव च हेतुत्वयोग्यम् । ''असङ्गमस्पर्शम्'' इत्यादिश्रुतिषु च ब्रह्मण्येव तत्प्रसिद्धम् ।**

ಮತ್ತು 'ಅನನ್ವಾಗತಸ್ತೇನ ಭವತಿ' ಎಂಬ ಶ್ರುತಿಯಲ್ಲಿ 'ಅಸಂಗೋಹ್ಯಯಂ ಪುರುಷಃ' ಎಂಬಲ್ಲಿ ಹೇಳಲ್ಪಟ್ಟ ಅಸಂಗತ್ವವೇ ಹೇತುವಾಗಿದೆ. ಪ್ರಸಿದ್ಧವಾದದ್ದನ್ನಷ್ಟೇ ಹೇತುವನ್ನಾಗಿ ಮಾಡಬೇಕು. ಈ ಅಸಂಗತ್ವವಾದರೂ 'ಅಸಂಗಮಸ್ಪರ್ಶಮ್' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಲ್ಲೇ ಪ್ರಸಿದ್ಧವಾದ ಹೇತುವಾಗಿದೆ.

**किं चासङ्गत्वं न स्वरूपेणापि जीवे युक्तम् । जडेशयोरसंसारित्वाज्जीवस्यैव संसारिणः सङ्गवत्तया श्रुत्यादिसिद्धत्वेन तत्र सङ्गनिषेधायोगात् ।**

ಮತ್ತು ಅಸಂಗತ್ವವು ಸ್ವರೂಪವಿವಕ್ಷೆಯಿಂದ ಜೀವನಲ್ಲಿ ಯುಕ್ತವಾಗುತ್ತದೆಂದು ಹೇಳಿದ್ದೂ ಸಹ ಸರಿಯಲ್ಲ. ಏಕೆಂದರೆ ಜಡಪದಾರ್ಥ ಹಾಗೂ ಈಶ್ವರರಿಬ್ಬರಿಗೆ ಸಂಸಾರವೇ ಇರುವುದಿಲ್ಲ. ಜೀವನಿಗೆ ಮಾತ್ರ ಸಂಸಾರಾವಸ್ಥೆಯಿರುತ್ತದೆ. ಅಂತಹ ಜೀವನಲ್ಲಿ ಮಾತ್ರ ಪದಾರ್ಥಗಳ ಸಂಗವನ್ನು ಹೇಳಲು ಸಾಧ್ಯ. ಶ್ರುತಿಗಳೂ ಕೂಡ ಜೀವನಲ್ಲೇ ಸಂಗವನ್ನು ಹೇಳುತ್ತಿವೆ. ಹೀಗಿರುವಾಗ ಜೀವನಿಗೆ ಯಾವುದೇ ಪದಾರ್ಥಗಳ ಸಂಗವಿಲ್ಲವೆಂಬ ನಿಷೇಧ ಮಾಡುವುದು ಅಯುಕ್ತವಾಗಿದೆ.

**यच्चोक्तं विशेष्यस्य भेदासिद्धेरिति तन्न । बन्धमोक्षयोः सामानाधिकरण्यनियमेन विशेष्यस्यैव बन्धाश्रयत्वात्तस्यैव च तत्तत्कारणाधीनसुषुप्त्याद्यवस्थावत्त्वेन विशेष्यस्यैव भेदसिद्धेः ।**

ಇನ್ನು ಈ ಪ್ರಕರಣದಲ್ಲೇ ಭೇದವ್ಯಪದೇಶವಿರುವುದರಿಂದ ಅಭೇದವನ್ನು ಹೇಳಲು ಸಾಧ್ಯವಿಲ್ಲ.

ವಿಶೇಷ್ಯನಾದ ಬ್ರಹ್ಮನಿಗೆ ಭೇದವಿಲ್ಲ. ಹೊರತಾಗಿ, ಸುಷುಪ್ತ್ಯಾದ್ಯವಸ್ಥೆಗಳಿಂದ ವಿಶಿಷ್ಟನಾದ ಶ್ರೀಹರಿಗೆ ಹೇಳುತ್ತೇವೆಂದು ಪ್ರಶ್ನಿಸಬಾರದು. ಏಕೆಂದರೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬಲ್ಲಿ ಪರಮಾತ್ಮನಿಂದ ಸುಷುಪ್ತ್ಯಾದ್ಯವಸ್ಥಾವಿಶಿಷ್ಟನಾದ ಜೀವನಿಗೆ ಭೇದವನ್ನು ಹೇಳಲಾಗಿದೆ. ಸುಷುಪ್ತ್ಯಾದ್ಯವಸ್ಥಾ ವಿಶಿಷ್ಟನಾದವನು ಕೇವಲ ವಿಶೇಷ್ಯನಾದ ಜೀವಚೈತನ್ಯನೇ ಆಗುತ್ತಾನೆ. ಏಕೆಂದರೆ ಬಂಧಮೋಕ್ಷಗಳೆರಡಕ್ಕೂ ಸಾಮಾನ್ಯಾಧಿಕರಣ್ಯವಿರಬೇಕು. ಮೋಕ್ಷವು ವಿಶೇಷ್ಯದಲ್ಲಿರುವುದರಿಂದ ಅದರ ಸಾಮಾನಾಧಿಕರಣ್ಯಕ್ಕಾಗಿ ಬಂಧವೂ ಕೂಡ ವಿಶೇಷ್ಯದಲ್ಲೇ ಬರುತ್ತದೆನ್ನಬೇಕು. ಬಂದಾಧೀನವಾದ ಸುಷುಪ್ತ್ಯಾದ್ಯವಸ್ಥೆಗಳೆಲ್ಲವೂ ವಿಶೇಷ್ಯದಲ್ಲೇ ಬರುತ್ತವೆ. ಆದ್ದರಿಂದ ಸುಷುಪ್ತ್ಯಾದ್ಯವಸ್ಥೆಯುಳ್ಳವರಿಗೆ ಬ್ರಹ್ಮನಿಂದ ಭೇದವನ್ನು ಹೇಳಿದ್ದಾರೆಂದರೆ ಸುಷುಪ್ತ್ಯಾದ್ಯವಸ್ಥಾವುಳ್ಳವನು ವಿಶೇಷ್ಯನಾದ್ದರಿಂದ ವಿಶೇಷ್ಯಕ್ಕೆ ಭೇದವನ್ನು ಹೇಳಿದಂತಾಯಿತು.

**अन्यथा तुरीयावस्थया स्वप्नाद्यवस्थानां सामानाधिकरण्यं न स्यात् ।**

ಹೀಗೊಪ್ಪದಿದ್ದರೆ ತುರೀಯಾವಸ್ಥೆಗೂ ಸ್ವಪ್ನಾದ್ಯವಸ್ಥೆಗೂ ಸಾಮಾನಾಧಿಕರಣ್ಯವೇ ಬಾರದಿರಬೇಕಾದೀತು. ಆದ್ದರಿಂದ ಸುಷುಪ್ತ್ಯಾದ್ಯವಸ್ಥಾವಿಶಿಷ್ಟನಾದವನು ವಿಶೇಷ್ಯನಾದ ಜೀವನೇ ಆಗುತ್ತಾನೆ.

**भेदस्य मिथ्यात्वे च तच्छ्रुतिरप्रमाणं स्यात् । नच सुषुप्त्यादावीशस्य जीवपरिष्वङ्गादिमानान्तरप्राप्तम् । येन तत्रातात्पर्याच्छ्रुतिरप्रमाणं न स्यात् ।**

ಜೀವಬ್ರಹ್ಮರಿಗಿರುವ ಭೇದವು ಮಿಥ್ಯಾಭೂತವಾದಲ್ಲಿ, ತತ್‌ಪ್ರತಿಪಾದಕವಾದ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಿದಂತಾಗುತ್ತದೆ. ಇನ್ನು ಸುಷುಪ್ತ್ಯಾದಿಗಳಲ್ಲಿ ಈಶ್ವರನಿಗೆ ಜೀವನ ಪರಿಷ್ವಂಗವು ಮಾನಾಂತರದಿಂದ ಪ್ರಾಪ್ತವಾಗಿದೆಯೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಿದಲ್ಲಿ, ಭೇದವಿಷಯದಲ್ಲಿ ತಾತ್ಪರ್ಯವಿಲ್ಲದ ಕಾರಣ, ಶ್ರುತಿಗೆ ಅಪ್ರಾಮಾಣ್ಯದೋಷವು ಬರುತ್ತಿರಲಿಲ್ಲ.

**किञ्च भ्रान्तिरहितायां सुषुप्तौ सतो भेदस्य न भ्रान्तिमात्रशरीरत्वरूपं मिथ्यात्वं युक्तम् ।**

ಮತ್ತು ಸುಷುಪ್ತ್ಯವಸ್ಥೆಯಲ್ಲಿ ಯಾವುದೇ ಭ್ರಾಂತಿಯೂ ಕೂಡ ಇರುವುದಿಲ್ಲ. ಆದ್ದರಿಂದ ಸ್ವಾಭಾವಿಕವಾಗಿಯೇ ಭೇದವು ಇರುತ್ತದೆ. ಇಂತಹ ಭೇದವಿರುವ ಜೀವನಿಗೆ ಭ್ರಾಂತಿಮಾತ್ರಶರೀರತ್ವ ರೂಪವಾದ ಮಿಥ್ಯಾತ್ವವನ್ನು ಹೇಳಲು ಬರುವುದಿಲ್ಲ.

**अपि च जीवपरिष्वङ्गादिश्रुतिर्मुक्तिविषया । तथा सूत्रकृतैव वक्ष्यमाणत्वात् । ''अनन्वागतं पुण्येनानन्वागतं पापेन तीर्णो हि तदा सर्वान् शोकान्'' इत्यादिमुक्तिलिङ्गाच्च । नच मुक्तावपि सतो मिथ्यात्वम् ।**

ಮತ್ತು ಜೀವನ ಜೊತೆಗೆ ಆಲಿಂಗನ ಮಾಡುತ್ತಾನೆಂದು ಹೇಳುವ ಶ್ರುತಿಯು ಮುಕ್ತನಾದ ಜೀವವಿಷಯಕವೇ ಆಗಿದೆ. ಅದನ್ನು ಸೂತ್ರಕಾರರೇ ಮುಂದೆ ಹೇಳುವವರಿದ್ದಾರೆ. 'ಅನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾನ್ ಶೋಕಾನ್' ಇತ್ಯಾದಿಯಾದ ಮುಕ್ತಿಲಿಂಗವೇ ಅಲ್ಲಿ ಕೇಳಿಸುತ್ತಿವೆ. ಮುಕ್ತಿಯಲ್ಲಿ ಇರುವ ಜೀವನಿಗೆ ಮಿಥ್ಯಾಭೂತವಾದ ಭೇದವನ್ನು ಹೇಳಲು ಸಾಧ್ಯವಿಲ್ಲವಷ್ಟೇ.

**तदुक्तं न्यायविवरणे ''सुषुप्त्युत्क्रान्त्योर्जीवेशयोर्भेदोक्तेरसङ्गत्वादिचेश्वरस्यै-वेत्यर्थाद्भवति'' इति । अत्र सूत्रे भेदेनेत्यस्य पूर्वसूत्रानुषक्तेन व्यपदेशादि-त्यनेनान्वयः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् सुषुप्त्यधिकरणं सम्पूर्णम् ।।**

ಇದನ್ನೇ ನ್ಯಾಯವಿವರಣದಲ್ಲಿ 'ಸುಷುಪ್ತ್ಯುತ್ಕ್ರಾಂತ್ಯೋರ್ಜೀವೇಶಯೋರ್ಭೇದೋಕ್ತೇರಸಂಗತ್ವಾದಿ ಚೇಶ್ವರಸ್ಯೈವೇತ್ಯರ್ಥಾದ್ಭವತಿ' ಸುಷುಪ್ತಿಯುಳ್ಳ ಜೀವನಿಗೆ ಉತ್ಕ್ರಾಂತಿಯುಳ್ಳ ಈಶ್ವರನಿಗೆ ಭೇದವನ್ನೇ ಶ್ರುತಿಯು ಹೇಳುತ್ತಿರುವುದರಿಂದ, ಅಸಂಗತ್ವವೇ ಮೊದಲಾದ ಈಶ್ವರನ ಲಿಂಗವಿರುವುದರಿಂದಲೂ

ಈಶ್ವರನೇ ಸ್ವಪ್ನಾದಿದ್ರಷ್ಟೃಯೆನಿಸುತ್ತಾನೆಂದು ಹೇಳಿರುತ್ತಾರೆ. ಈ ಸೂತ್ರದಲ್ಲಿರುವ 'ಭೇದೇನ' ಎಂಬ ಪದಕ್ಕೆ ಹಿಂದಿನ ಸೂತ್ರದಿಂದ ಅನುಷಕ್ತವಾದ 'ವ್ಯಪದೇಶಾತ್' ಎಂಬ ಪದದ ಜೊತೆಗೆ ಅನ್ವಯವನ್ನು ತಿಳಿದುಕೊಳ್ಳಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಸುಷುಪ್ತ್ಯಧಿಕರಣವು ಸಂಪೂರ್ಣವಾಯಿತು

**प्रकाशः –**

अत्र टीका ''स्वप्नादिद्रष्टा परमात्मैव असङ्गत्वलिङ्गात्'' इति । सा नयुक्तेव । जीवे प्रसिद्धनिरवकाशस्वप्नद्रष्टृत्वलिङ्गेनासङ्गत्वरूपेश्वरलिङ्गस्येशाभेदेन सावकाशत्वादित्यतो ''न विष्णोस्स्वप्नादिदर्शनायोग'' इत्यादि टीकोक्तं स्वप्नादिद्रष्टृत्वस्य विष्णौ मुख्यत्वं तावदुपपादयति ।। कात्स्न्येनेति ।।

ವಿವರಣೆ - ಸಿದ್ಧಾಂತ ಟೀಕೆಯಲ್ಲಿ 'ಸ್ವಪ್ನಾದಿದ್ರಷ್ಟಾ ಪರಮಾತ್ಮೈವ ಅಸಂಗತ್ವಲಿಂಗಾತ್'. ಅಸಂಗತ್ವಲಿಂಗದ ಬಲದಿಂದ ಪರಮಾತ್ಮನೇ ಸ್ವಪ್ನಾದಿದ್ರಷ್ಟೃ ಆಗಿದ್ದಾನೆಂದು ಹೇಳಿದ್ದಾರೆ. ಇದು ಅಯುಕ್ತ. ಏಕೆಂದರೆ ಜೀವನಲ್ಲಿ ಪ್ರಸಿದ್ಧವಾದ ಮತ್ತು ನಿರವಕಾಶವಾದ ಸ್ವಪ್ನದ್ರಷ್ಟೃತ್ವಲಿಂಗದಿಂದ ಈಶ್ವರನ ಲಿಂಗವೆನಿಸಿದ ಅಸಂಗತ್ವವನ್ನು ಜೀವನಲ್ಲಿ ಈಶ್ವರನಿಂದ ಅಭೇದವನ್ನು ಒಪ್ಪಿ, ಸಾವಕಾಶ ಮಾಡಬಹುದಲ್ಲವೇ? ಎಂಬ ಪೂರ್ವಪಕ್ಷಕ್ಕೆ ಉತ್ತರಿಸುತ್ತಿದ್ದಾರೆ. 'ನ ವಿಷ್ಣೋಃ ಸ್ವಪ್ನಾದಿದರ್ಶನಾಯೋಗಃ' ವಿಷ್ಣುವಿನಲ್ಲಿ ಸ್ವಪ್ನಾದಿದ್ರಷ್ಟೃತ್ವವು ಅಯುಕ್ತವಾಗುತ್ತದೆಂದು ಹೇಳಬಾರದು. ಇತ್ಯಾದಿ ಟೀಕೆಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವನ್ನು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂದು ಉಪಪಾದನೆ ಮಾಡುತ್ತಿದ್ದಾರೆ 'ಕಾರ್ತ್ಸ್ನ್ಯೇನ' ಇತ್ಯಾದಿಯಾಗಿ.

**प्रकाशः** – ननु श्रुतौ ''स यत्र किञ्चित्पश्यति'' इत्येवोच्यते नतु कृत्स्नं पश्यतीत्यत आह – न युज्यते इति ।। हिर्हेतौ । तस्मात्स्वप्नद्रष्टेश्वर इति पूर्वार्धेनान्वयः ।

ಶ್ರುತಿಯಲ್ಲಿ 'ಸ ಯತ್ರ ಕಿಂಚಿತ್ಪಶ್ಯತಿ' ಎಂಬುದಾಗಿ ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆಂದಷ್ಟೇ ಹೇಳಲಾಗಿದೆ ಹೊರತು, ಎಲ್ಲವನ್ನು ನೋಡುತ್ತಾನೆಂದೇನೂ ಹೇಳಿಲ್ಲವಲ್ಲ ? ಎಂಬ ಪ್ರಶ್ನೆಗೆ 'ನ ಯುಜ್ಯತೇ' ಎಂಬುದರಿಂದ ಉತ್ತರಿಸಿದ್ದಾರೆ. 'ಹಿ' ಶಬ್ದವು ಹೇತ್ವರ್ಥದಲ್ಲಿದೆ. ಯಾವಕಾರಣದಿಂದ ಸಂಕುಚಿತವಾದ ಅರ್ಥವನ್ನು ಮಾಡಬಾರದೋ, ಆ ಕಾರಣದಿಂದ ಈಶ್ವರನೇ ಸ್ವಪ್ನದ್ರಷ್ಟೃಯೆನಿಸುತ್ತಾನೆಂದು ಶ್ಲೋಕದ ಪೂರ್ವಾರ್ಧದ ಜೊತೆಗೆ ಅನ್ವಯವನ್ನು ಮಾಡಬೇಕು.

**प्रकाशः – नच भ्रान्तत्वप्रसङ्गः । स्वाप्नसत्यताया वक्ष्यमाणत्वेनेति पूर्वपक्ष एवोक्तत्वात् ।**

ಸ್ವಾಪ್ನಪದಾರ್ಥಗಳೆಲ್ಲವೂ ಮಿಥ್ಯಾಭೂತವಾದ್ದರಿಂದ ಅವುಗಳನ್ನು ನೋಡುವಂತಹ ಪರಮಾತ್ಮನಿಗೆ ಭ್ರಾಂತಿಯನ್ನು ಒಪ್ಪುವ ಪ್ರಸಂಗ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಸ್ವಾಪ್ನಪದಾರ್ಥಗಳೆಲ್ಲವೂ ಸತ್ಯವಾಗಿವೆ. ಇದನ್ನು ಮುಂದೆ ಉಪಪಾದನೆ ಮಾಡುತ್ತೇವೆಂದು ಪೂರ್ವಪಕ್ಷದಲ್ಲಿಯೇ ಹೇಳಲಾಗಿದೆ.

**प्रकाशः – न चासङ्कोचे तत्रारोपितजाग्रत्त्वस्यापि दर्शनप्रसङ्ग इति शङ्क्यम् । पश्यतीति दृष्टेर्मुख्यज्ञानवाचित्वेन प्रमितेरेवात्र ग्रहणात् । अत एव स्वाप्नवस्तूनामित्युक्तिरिति भावः ।**

ಪರಮಾತ್ಮನು ಸ್ವಾಪ್ನಪದಾರ್ಥಗಳೆಲ್ಲವನ್ನು ನೋಡುತ್ತಾನೆಂದು ಅಸಂಕುಚಿತವಾದ ಅರ್ಥವನ್ನು ವಿವಕ್ಷಿಸಿದರೆ, ಸ್ವಪ್ನಕಾಲದಲ್ಲಿ ಜಾಗ್ರತ್ವವು ಆರೋಪಿತವಾಗಿದೆ. ಅಂತಹ ಆರೋಪಿತವಾದ ಜಾಗ್ರತ್ವವನ್ನೂ ಕೂಡ ಪರಮಾತ್ಮನು ನೋಡುತ್ತಾನೆಂದು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. 'ಪಶ್ಯತಿ' ಎಂಬ ಪದವು ಮುಖ್ಯಜ್ಞಾನವನ್ನಷ್ಟೇ ಹೇಳುತ್ತಿದೆ. ಮುಖ್ಯಜ್ಞಾನವೆಂದರೆ ಪ್ರಮಾಭೂತವಾದ ಜ್ಞಾನವೆಂದರ್ಥ. ಆದ್ದರಿಂದ ಪರಮಾತ್ಮನು ಸಕಲಜೀವರ ಎಲ್ಲ ಬಗೆಯ ಸ್ವಾಪ್ನಪದಾರ್ಥಗಳನ್ನು ನೋಡುತ್ತಾನೆ. ಆದರೆ ಜೀವರಿಗೆ ಯಾವರೀತಿಯಾಗಿ ಆ ಪದಾರ್ಥಗಳಲ್ಲಿ ಜಾಗ್ರತ್ವದ ಭ್ರಾಂತಿಯಿರುತ್ತದೆ. ಅಂತಹ ಭ್ರಾಂತಿ ಪರಮಾತ್ಮನಿಗಿರುವುದಿಲ್ಲ. ಅವನು ಆಯಾಜೀವರು ಅನುಭವಿಸುವಂತಹ ಪದಾರ್ಥಗಳನ್ನು ಸ್ವಾಪ್ನಪದಾರ್ಥಗಳೆಂದೇ ತಿಳಿಯುತ್ತಾನೆ ಹೊರತು, ಜಾಗ್ರತ್ಕಾಲೀನ ಪದಾರ್ಥಗಳೆಂದು ಅವನು ಸರ್ವಥಾ ತಿಳಿಯುವುದಿಲ್ಲ. ಆದ್ದರಿಂದ ಸ್ವಾಪ್ನಪದಾರ್ಥಗಳ ಸರಿಯಾದ ತಿಳುವಳಿಕೆಯಿರುವುದು ಪರಮಾತ್ಮನಿಗೆ ಮಾತ್ರ. ಆದ್ದರಿಂದಲೇ 'ಸ್ವಾಪ್ನವಸ್ತೂನಾಂ' ಎಂದು ಗ್ರಂಥದಲ್ಲಿ ಹೇಳಿದ್ದಾರೆ.

**प्रकाशः – ननु पूर्वत्रेवेहापि सङ्कोचः किं न स्यादित्यत आह – ते यदिति ।। नाम्नः प्राकृतत्वं प्राकृतपदार्थवाचित्वम् । अस्त्वेवंरूपं जीवेऽपीत्यतः ''तस्यैव तन्मुख्यं जीवादपि'' इति टीकोक्तं जीवेऽमुख्यत्वं व्यनक्ति ।। नच साकल्येनेति ।। श्रुतितः ''यस्सर्वज्ञ'' इत्यादिश्रुतितः ।**

ಹಿಂದಿನ ಅಧಿಕರಣದಲ್ಲಿ ಶ್ರುತಿಯಲ್ಲಿರುವ ನಾಮರೂಪರಾಹಿತ್ಯಶಬ್ದಕ್ಕೆ ಸಂಕುಚಿತವಾದ ಅರ್ಥವನ್ನು ಮಾಡಿ, ಪರಮಾತ್ಮನ ಪರತ್ವವನ್ನು ಸಮರ್ಥನೆ ಮಾಡಿದಂತೆ ಇಲ್ಲಿಯೂ ಸಹ ಅರ್ಥಸಂಕೋಚವನ್ನೇಕೆ ಮಾಡಬಾರದು ಎಂಬ ಪ್ರಶ್ನೆಗೆ 'ತೇ ಯತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ನಾಮವು ಪ್ರಾಕೃತವಾಗಿದೆಯೆಂದರೆ ಪ್ರಾಕೃತವಾದ ಪದಾರ್ಥಕ್ಕೆ ಪ್ರತಿಪಾದಕವಾಗಿದೆಯೆಂದರ್ಥ. ಹಾಗಾದರೆ ಜೀವನೂ ಕೂಡ ಸ್ವಾಪ್ನಸಕಲಪದಾರ್ಥಗಳನ್ನು ನೋಡುತ್ತಾನೆಂದು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ತಸ್ಯೈವ

ತನ್ಮುಖ್ಯಂ ಜೀವಾದಪಿ' ಎಂಬ ಟೀಕೆಯ ಮಾತು ಉತ್ತರಿಸಿದೆ. ಅಂದರೆ ಜೀವನಲ್ಲಿ ಅಮುಖ್ಯವಾದ ಸ್ವಪ್ನದ್ರಷ್ಟೃತ್ವವು ಬರುತ್ತದೆ ಹೊರತು, ಮುಖ್ಯವಾದ ಸ್ವಪ್ನದ್ರಷ್ಟೃತ್ವವು ಬರುವುದಿಲ್ಲವೆಂದು 'ನಚ ಸಾಕಲ್ಯೇನ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ. 'ಶ್ರುತಿತಃ' ಎಂದರೆ 'ಯಃ ಸರ್ವಜ್ಞ' ಇತ್ಯಾದಿ ಶ್ರುತಿಗಳಿಂದ ಎಂದರ್ಥ.

**प्रकाशः** – ननु तस्य सर्वज्ञतया सामान्यतः प्रसिद्धावपि न विशिष्य स्वप्नद्रष्टृत्वप्रसिद्धिरिति चेत्किं तावता । ''शब्दादेव'' इत्यत्रोक्तरीत्या प्रासादवासिन्यायेन सर्वज्ञग्रहणेन तद्विशेषस्वप्नदर्शनग्रहणोपपत्तेरिति भावः ॥ **न चेहेति** ॥ येन जीवस्स्यादिति भावः ।

ಪ್ರಶ್ನೆ - 'ಯಃ ಸರ್ವಜ್ಞ ಸ ಸರ್ವವಿತ್' ಇತ್ಯಾದಿ ಶ್ರುತಿಗಳು ಪರಮಾತ್ಮನು ಸರ್ವಜ್ಞನಾಗಿದ್ದಾನೆಂದು ಸಾಮಾನ್ಯವಾಗಿ ಹೇಳುತ್ತಿವೆ ಹೊರತು, ವಿಶೇಷವಾಗಿ ಸ್ವಾಪ್ನಪದಾರ್ಥಗಳೆಲ್ಲವನ್ನು ನೋಡುತ್ತಾನೆಂದು ಸ್ಪಷ್ಟವಾಗಿ ಹೇಳಿರುವುದಿಲ್ಲ. ಆದ್ದರಿಂದ ಸ್ವಾಪ್ನಪದಾರ್ಥಗಳ ಸಾಕಲ್ಯೇನ ಜ್ಞಾನವು ಶ್ರುತಿಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ?

ಉತ್ತರ - ಸಾಮಾನ್ಯವಾಗಿ ಸರ್ವಜ್ಞನೆಂದು ಹೇಳಿದರೆ ಸಾಕು. ಸ್ವಾಪ್ನಪದಾರ್ಥಗಳ ಸಾಕಲ್ಯೇನ ಪರಿಜ್ಞಾನವನ್ನು ಹೇಳಿದಂತೆ ಆಗುತ್ತದೆ. 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಹೇಳಿದ ಪ್ರಾಸಾದವಾಸಿನ್ಯಾಯವನ್ನು ಇಲ್ಲಿ ಇಟ್ಟುಕೊಳ್ಳಬೇಕು. ಅಂದರೆ ಮಹಡಿಯಲ್ಲಿದ್ದಾನೆ ಎಂದು ಹೇಳಿದಾಗ, ಮಹಡಿಯ ಸ್ಥಳವಿಶೇಷದಲ್ಲಿ ಇದ್ದಾನೆ ಎಂದೇ ಅರ್ಥ. ಅದರಂತೆ ಸರ್ವಜ್ಞನಾಗಿದ್ದಾನೆಂದು ಹೇಳಿದರೆ, ಎಲ್ಲವನ್ನೂ ತಿಳಿದಾಗ ಸ್ವಾಪ್ನಪದಾರ್ಥಗಳನ್ನೂ ಕೂಡ ತಿಳಿದಿದ್ದಾನೆ ಎಂಬರ್ಥವು ಸುಲಭವಾಗಿ ತಿಳಿಯುತ್ತದೆ. 'ನಚ ಇಹ' ಎಂಬ ವಾಕ್ಯದಿಂದ ಶ್ರುತಿಯಲ್ಲಿ ಸ್ವಪ್ನಾವಸ್ಥೆಯು ಪ್ರತಿಪಾದ್ಯವಾಗಿಲ್ಲ. ಹಾಗಾಗಿದ್ದಲ್ಲಿ, ಜೀವನನ್ನೇ ಇಟ್ಟುಕೊಳ್ಳಬೇಕೆಂದು ವಾದಿಸಬಹುದಿತ್ತು ಎಂದು ಹೇಳಿದ್ದಾರೆ.

**प्रकाशः** – एवं स्वप्नद्रष्टृत्वं भगवत्येव मुख्यं न जीव इति तद्बलेनासङ्गत्वं न जीवे कथञ्चिन्नेयमिति भावेन टीकोपपादिता ।

इदानीं त्विहवाक्ये श्रुतमसङ्गत्वं न कथञ्चिदपि जीवेऽवकाशमर्हतीति भावेन तस्य विष्ण्वेकनिष्ठतां ''यतोऽसङ्गः पर एव'' इति टीकोक्तामाह – **किं चानन्वागत इति** ॥

ಇಲ್ಲಿಯ ತನಕ ಸ್ವಪ್ನದ್ರಷ್ಟೃತ್ವವು ಪರಮಾತ್ಮನಲ್ಲೇ ಮುಖ್ಯವಾಗಿ ಬರುತ್ತದೆ. ಜೀವನಲ್ಲಿ ಸರ್ವಥಾ ಬರುವುದಿಲ್ಲ. ಈ ಸ್ವಪ್ನದ್ರಷ್ಟೃತ್ವಲಿಂಗದ ಬಲದಿಂದ ಅಸಂಗತ್ವವನ್ನು ಜೀವನಲ್ಲಿ ಸಾವಕಾಶ ಮಾಡಬಾರದು ಎಂಬುದಾಗಿ ಟೀಕೆಯನ್ನು ವ್ಯಾಖ್ಯಾನ ಮಾಡಿದರು. ಈಗ ಪ್ರಕೃತ ವಿಷಯವಾಕ್ಯದಲ್ಲಿ ಶ್ರುತವಾದ ಅಸಂಗತ್ವ

ಧರ್ಮವೂ ಕೂಡ ಜೀವನಲ್ಲಿ ಸಾವಕಾಶ ಮಾಡಲು ಸರ್ವಥಾ ಬರುವುದಿಲ್ಲ ಎಂಬ ಅಭಿಪ್ರಾಯದಿಂದ ವಿಷ್ಣುವಿನಲ್ಲಷ್ಟೇ ಅಸಂಗತ್ವಧರ್ಮವಿದೆಯೆಂದು ಸಮರ್ಥನೆ ಮಾಡುವವರಾಗಿ 'ಯತೋಽಸಂಗಃ ಪರ ಏವ' ಇತ್ಯಾದಿ ಟೀಕಾಮಾತನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂಚನನ್ವಾಗತಃ' ಇತ್ಯಾದಿ ಗ್ರಂಥದಿಂದ.

**प्रकाशः** – यद्वा ''स्वप्नादिद्रष्टा परमात्मैव'' इति टीकास्थप्रतिज्ञांशमुत्तरटीकावाक्यानुरोधेनोपपाद्य ''असङ्गत्वलिङ्गात्'' इति टीकास्थं हेत्वंशमुपपादयति ।। **किञ्चेति** ।।

ಅಥವಾ 'ಸ್ವಪ್ನಾದಿದ್ರಷ್ಟಾ ಪರಮಾತ್ಮೈವ' ಎಂಬ ಟೀಕೆಯಲ್ಲಿರುವ ಪ್ರತಿಜ್ಞಾಭಾಗವನ್ನು ಮುಂದಿನ ಟೀಕಾವಾಕ್ಯಕ್ಕೆ ಅನುಸಾರಿಯಾಗಿ ವ್ಯಾಖ್ಯಾನ ಮಾಡಿದರು. ಈಗ 'ಅಸಂಗತ್ವಲಿಂಗಾತ್' ಎಂಬ ಟೀಕೆಯಲ್ಲಿರುವ ಹೇತ್ವಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः – यद्वा न केवलं स्वरूपपर्यालोचनया स्वप्नद्रष्टृत्वमीश्वरस्यैव मुख्यमिति। किं त्वत्र वाक्ये श्रुतासङ्गत्वरूपलिङ्गपर्यालोचनयापीति भावेन तल्लिङ्गं हरावेवोपपादयति ।। किञ्चेति ।।**

ಅಥವಾ ಸ್ವರೂಪವನ್ನು ಪರ್ಯಾಲೋಚನೆ ಮಾಡಿದಾಗ ಸ್ವಪ್ನದ್ರಷ್ಟೃತ್ವವು ಈಶ್ವರನಲ್ಲೇ ಮುಖ್ಯವಾಗಿ ಬರುತ್ತದೆ ಎಂದಷ್ಟೇ ಅಲ್ಲ. ಹೊರತಾಗಿ, ಈ ವಾಕ್ಯದಲ್ಲಿ ಶ್ರುತವಾದ ಅಸಂಗತ್ವವೆಂಬ ಲಿಂಗವನ್ನು ಪರ್ಯಾಲೋಚನೆ ಮಾಡಿದಾಗಲೂ ಸ್ವಪ್ನದ್ರಷ್ಟೃತ್ವಲಿಂಗವು ಶ್ರೀಹರಿಯಲ್ಲೇ ಬರುತ್ತದೆಂದು ಉಪಪಾದನೆ ಮಾಡಲು 'ಕಿಂಚ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – अस्मिन्पक्षे टीकायां स्वप्नादिद्रष्टा परमात्मैव तस्य सर्वज्ञत्वेन सत्यस्वप्नाद्यशेषवस्तुदृष्टेस्तस्मिन्नेव मुख्यत्वादसङ्गत्वलिङ्गाच्चेति योजना ध्येया ।

'ಕಿಂಚ' ಎಂಬ ಗ್ರಂಥಕ್ಕೆ ಮೂರನೆಯ ಬಗೆಯ ಈ ಅವತಾರಿಕೆಯ ಪಕ್ಷದಲ್ಲಿ ಟೀಕೆಯನ್ನು ಹೀಗೆ ಯೋಜನೆ ಮಾಡಿಕೊಳ್ಳಬೇಕು. ಪರಮಾತ್ಮನೇ ಸ್ವಪ್ನಾದಿದ್ರಷ್ಟೃ ಆಗಿದ್ದಾನೆ. ಏಕೆಂದರೆ ಸರ್ವಜ್ಞನಾದ್ದರಿಂದ, ಸತ್ಯವಾದ ಸ್ವಪ್ನದಲ್ಲಿ ಕಾಣಿಸುವ ಸಕಲ ಪದಾರ್ಥಗಳನ್ನು ನೋಡುವವನಾದ್ದರಿಂದ ಸ್ವಪ್ನಾದಿದ್ರಷ್ಟೃತ್ವವು ಪರಮಾತ್ಮನಲ್ಲೇ ಮುಖ್ಯವಾಗಿ ಬರುತ್ತದೆ. ಅಸಂಗತ್ವಲಿಂಗವಿರುವುದರಿಂದಲೂ ಅವನಲ್ಲೇ ಮುಖ್ಯವಾಗಿ ಸ್ವಪ್ನಾದಿದ್ರಷ್ಟೃತ್ವಲಿಂಗವು ಬರುತ್ತದೆಂದು.

**प्रकाशः** – यद्वा टीकायामसङ्गत्वेत्यस्यानन्वागतवाक्योक्तासङ्गत्वलिङ्गादित्यर्थः । यतोऽसङ्गः पर एवेत्यस्य हेतूकृतासङ्ग इत्यर्थ इति भावेन तद्व्याख्याति ।। **किञ्चेति** ।। **हेतुरिति** ।। स्वाप्नवस्तुदर्शनकृतलेपाभावरूपे साध्येऽसङ्गत्वशब्दितलेपाभाव सामान्यं हेतुरुच्यते । असङ्गो हीति हिशब्दस्य हेत्वर्थत्वादित्यर्थः ।

'ಸ ಯತತ್ರ' ಇತ್ಯಾದಿ ವಾಕ್ಯದಲ್ಲಿ ಎರಡು ಕಡೆ ಅಸಂಗತ್ವವನ್ನು ಹೇಳಲಾಗಿದೆ. ಇದರ ಅಭಿಪ್ರಾಯ ಹೀಗಿದೆ - ಮನುಷ್ಯತ್ವಾಭಾವದಿಂದ ಬ್ರಾಹ್ಮಣ್ಯಾಭಾವವನ್ನು ಸಾಧನೆ ಮಾಡುತ್ತೇವೆ. ಅಂದರೆ ಸಾಮಾನ್ಯಾಭಾವದಿಂದ ವಿಶೇಷಾಭಾವವನ್ನು ಸಾಧನೆ ಮಾಡುವುದು ಲೋಕದಲ್ಲಿ ಕಂಡಿದೆ. ಅದರಂತೆ ಶ್ರುತಿಯಲ್ಲಿಯೂ ಕೂಡ 'ಸ ಯತ್ರ ಕಿಂಚಿತ್ಪಶ್ಯತಿ ಅನನ್ವಾಗತಸ್ತೇನ ಭವತಿ' ಎಂಬುದು ವಿಶೇಷಭಾವರೂಪವಾಗಿದೆ. 'ಅಸಂಗೋಽಹ್ಯಯಂ ಪುರುಷಃ' ಎಂಬುದು ಸಾಮಾನ್ಯಾಭಾವರೂಪವಾಗಿದೆ. ಅನುಮಾನಸ್ವರೂಪವನ್ನು ಹೀಗೆ ತಿಳಿಯಬೇಕು - 'ಭಗವಾನ್ ಸ್ವಾಪ್ನದರ್ಶನಕೃತಫಲಲೇಪವಾನ್ ನ ಭವತಿ ಲೇಪಮಾತ್ರಶೂನ್ಯತ್ವಾತ್' ಎಂದು. ಈ ಅಭಿಪ್ರಾಯದಿಂದಲೇ ಟೀಕೆಯಲ್ಲಿ 'ಅಸಂಗತ್ವಲಿಂಗಾಚ್ಚ' ಎಂದು ಹೇಳಿದ್ದಾರೆ. ಇದಕ್ಕೆ ಎರಡು ಅರ್ಥವನ್ನು ತಿಳಿಯಬೇಕು. ೧) ಅನನ್ವಾಗತ ವಾಕ್ಯದಲ್ಲಿ ಹೇಳಲ್ಪಟ್ಟ ಅಸಂಗತ್ವಲಿಂಗದಿಂದ ಎಂದು. ೨) 'ಅಸಂಗೋಽಹ್ಯಯಂ ಪುರುಷಃ' ಎಂಬಲ್ಲಿ ಹೇತುವನ್ನಾಗಿ ಮಾಡಲ್ಪಟ್ಟ ಅಸಂಗತ್ವಲಿಂಗದಿಂದ ಎಂದು. ಈ ಅಭಿಪ್ರಾಯದಿಂದ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ. ಹೇತು ಎಂದರೆ ಸ್ವಾಪ್ನವಸ್ತುದರ್ಶನದಿಂದ ಯಾವುದೇ ಫಲಗಳು ಲೇಪವಾಗುವುದಿಲ್ಲ ಎಂದು ಸಾಧನೆ ಮಾಡುವಾಗ ಅಸಂಗತ್ವ ಶಬ್ದದಿಂದ ತಿಳಿಯಲ್ಪಟ್ಟ ಲೇಪಸಾಮಾನ್ಯಾಭಾವವನ್ನು ಹೇತುವನ್ನಾಗಿ ಮಾಡಿದ್ದಾರೆ ಎಂದು ತಿಳಿಯಬೇಕು. ಏಕೆಂದರೆ 'ಅಸಂಗೋಽಹಿ' ಎಂಬಲ್ಲಿರುವ 'ಹಿ' ಶಬ್ದವು ಹೇತ್ವರ್ಥದಲ್ಲಿದೆ.

**प्रकाशः –** यदपि शुद्धचैतन्यात्मना ब्रह्माभिन्ने जीवेऽप्यसङ्गत्वं युक्तमिति तदपि नेत्याह – **किं चासङ्गत्वमिति ।। श्रुत्यादीति ।।** ''अतोऽन्यदार्तं, जीवा एव तु दुःखिनः, अनादिमायया सुप्तो यदाजीवः प्रबुध्यते, स पात्रं बन्धमोक्षयोः'' इत्यादि श्रुतिस्मृतिसिद्धत्वादित्यर्थः ।

ಶುದ್ಧಚೈತನ್ಯದಿಂದ ಅಭೇದವನ್ನು ಒಪ್ಪಿ, ಜೀವನಲ್ಲಿ ಅಸಂಗತ್ವಲಿಂಗವನ್ನು ಸಾವಕಾಶ ಮಾಡಬಹುದೆಂದು ಹಿಂದೆ ಪೂರ್ವಪಕ್ಷ ಮಾಡಲಾಗಿತ್ತು. ಅದನ್ನು 'ಕಿಂಚ ಅಸಂಗತ್ವಮ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅತೋಽನ್ಯದಾರ್ತಂ, ಜೀವಾ ಏವ ತು ದುಃಖಿನಃ, ಅನಾದಿಮಾಯಯಾ ಸುಪ್ತೋ ಯದಾಜೀವಃ ಪ್ರಬುಧ್ಯತೇ, ಸ ಪಾತ್ರಂ ಬಂಧಮೋಕ್ಷಯೋಃ' ಇವೇ ಮೊದಲಾದ ಶ್ರುತಿಸ್ಮೃತಿಗಳೆಲ್ಲವೂ ಜೀವನಿಗೆ ಬಂಧ, ದುಃಖ ಮೊದಲಾದವುಗಳ ಸಂಗವಿದೆಯೆಂದು ಶ್ರುತಿಸ್ಮೃತಿಗಳಿಂದ ಪ್ರಸಿದ್ಧವಾಗಿದೆ.

**प्रकाशः – सूत्रभाष्याद्युक्त** भेदव्यपदेशं प्रागाक्षिप्तमिदानीं समर्थयते ।। **यच्चेति।।** तुरीयावस्थया मुक्तयवस्थयेत्यर्थः । ''न चायं भेदो व्यावहारिक एव'' इत्यादिटीकां व्यनक्ति ।। **भेदस्य मिथ्यात्वे चेति ।।** स्वयं युक्त्यन्तरमाह – **तच्छ्रुतरिति ।।**

ಸೂತ್ರ ಹಾಗೂ ಭಾಷ್ಯಾದಿಗಳಲ್ಲಿ ಹೇಳಲ್ಪಟ್ಟ ಭೇದವ್ಯಪದೇಶವನ್ನು ಹಿಂದೆ ಆಕ್ಷೇಪ ಮಾಡಲಾಗಿತ್ತು. ಇದನ್ನು ಈಗ ಸಮರ್ಥನೆ ಮಾಡುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ. 'ತುರೀಯಾವಸ್ಥಯಾ' ಎಂದರೆ ಮುಕ್ತ್ಯವಸ್ಥೆಯಿಂದ ಎಂದರ್ಥ. 'ನ ಚಾಯಂ ಭೇದೋ ವ್ಯಾವಹಾರಿಕ ಏವ' ವ್ಯವಹಾರಿಕ ಭೇದವನ್ನು

ವಿವಕ್ಷಿಸಬಾರದು ಇತ್ಯಾದಿ ಟೀಕೆಯನ್ನು 'ಭೇದಸ್ಯ ಮಿಥ್ಯಾತ್ವೇಚ' ಎಂಬ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಸ್ವತಃ ಗ್ರಂಥಕಾರರೇ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ 'ತಚ್ಛ್ರುತಿಃ' ಇತ್ಯಾದಿ ವಾಕ್ಯದಿಂದ.

**प्रकाशः** – तत्रातात्पर्यान्नाप्रामाण्यमित्यत आह – **नचेति** ।। मानान्तरबाधितमपि नेत्यपि ग्राह्यम् । मिथ्यात्वं नासत्त्वम् । किन्तु प्रातिभासिकत्वम् । तच्च प्रतीतिमात्राभावदशायां सतो भेदस्य न युक्तमित्याह – **किञ्चेति** ।।

ಶ್ರುತಿಯು ಭೇದವನ್ನು ಪ್ರತಿಪಾದನೆ ಮಾಡಿದರೂ, ಅದರಲ್ಲಿ ತಾತ್ಪರ್ಯವಿಲ್ಲದ ಕಾರಣ ಶ್ರುತಿಗೆ ಅಪ್ರಾಮಾಣ್ಯದೋಷವು ಬರುವುದಿಲ್ಲವೆಂದು ಆಶಂಕಿಸಿದರೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಒಂದು ವೇಳೆ ಶ್ರುತಿಯು ಅನುವಾದ ಮಾಡಿ ನಿರಾಕರಣೆ ಮಾಡುವುದಾಗಿದ್ದಲ್ಲಿ ತಾತ್ಪರ್ಯವಿಲ್ಲವೆನ್ನಬಹುದಿತ್ತು. ಅಥವಾ ಮಾನಾಂತರಬಾಧಿತವಾಗಿದ್ದರೆ ಭೇದದಲ್ಲಿ ತಾತ್ಪರ್ಯವಿಲ್ಲವೆಂದು ಹೇಳಬಹುದಿತ್ತು. ಆದರೆ ಅನುವಾದವನ್ನೂ ಮಾಡುತ್ತಿಲ್ಲ. ಮಾನಾಂತರಬಾಧಿತವೂ ಆಗಿರುವುದಿಲ್ಲ. ಹೀಗಿರುವಾಗ, ಭೇದವಿಷಯದಲ್ಲಿ ತಾತ್ಪರ್ಯವಿಲ್ಲವೆಂದು ಪೂರ್ವಪಕ್ಷಿಗಳಿಗೆ ಆಶಂಕಿಸಲು ಸಾಧ್ಯವಿಲ್ಲ. ಮತ್ತು ಮಿಥ್ಯಾತ್ವವೆಂದರೆ ಅಸತ್ತ್ವವೆಂದು ಹೇಳುವುದಿಲ್ಲ ಹೊರತಾಗಿ, ಪ್ರಾತಿಭಾಸಿಕವೆಂದು ಪೂರ್ವಪಕ್ಷಿಗಳು ಹೇಳಬೇಕು. ಹಾಗೆ ಹೇಳಿದರೆ ಸುಷುಪ್ತ್ಯವಸ್ಥೆಯಲ್ಲಿ ಯಾವುದೇ ವಸ್ತುಗಳ ಪ್ರತೀತಿಯೇ ಇರುವುದಿಲ್ಲ. ಆ ಅವಸ್ಥೆಯಲ್ಲಿ ಪ್ರತೀತಿಮಾತ್ರ ಶರೀರರೂಪವಾದ ಮಿಥ್ಯಾತ್ವವನ್ನು ಹೇಳಲು ಸಾಧ್ಯವಿಲ್ಲ.

**प्रकाशः** – भाष्यटीकया न्यायविवरणमपि विवृतमिति भावेनोक्तं प्रमेयं तदारूढं करोति ।। **तदुक्तमिति** ।। भेदोक्तेः प्राज्ञेनात्मनेत्यादिनेत्यर्थः । आदिपदेन स्वप्नादिद्रष्टृत्वम् । परमतं त्वग्रे निरसिष्यते ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे सुषुप्त्यधिकरणं सम्पूर्णम् ।।**

ಭಾಷ್ಯ ಹಾಗೂ ಟೀಕೆಗಳನ್ನು ವ್ಯಾಖ್ಯಾನ ಮಾಡಿದ್ದರಿಂದ ನ್ಯಾಯವಿವರಣದ ವಾಕ್ಯವನ್ನೂ ಕೂಡ ವ್ಯಾಖ್ಯಾನ ಮಾಡಿದಂತಾಯಿತು ಎಂಬ ಅಭಿಪ್ರಾಯದಿಂದ ಇದುವರೆಗೂ ಹೇಳಿದ ಪ್ರಮೇಯವನ್ನು ನ್ಯಾಯವಿವರಣದಲ್ಲಿ ಆರೂಢ ಮಾಡುತ್ತಿದ್ದಾರೆ 'ತದುಕ್ತಮ್' ಇತ್ಯಾದಿ ವಾಕ್ಯದಿಂದ. 'ಭೇದೋಕ್ತೇಃ' ಎಂದರೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ವಾಕ್ಯದಲ್ಲಿ ಪ್ರಾಜ್ಞನಾಮಕ ಪರಮಾತ್ಮನು ಜೀವನನ್ನು ಆಲಿಂಗನ ಮಾಡುತ್ತಾನೆಂದು ಹೇಳಲಾಯಿತು. ಇದರಿಂದ ಜೀವೇಶ್ವರರಿಗೆ ಭೇದವನ್ನೇ ಹೇಳಿದಂತಾಗುತ್ತದೆ. ಆದಿಪದದಿಂದ ಸ್ವಪ್ನಾದಿದ್ರಷ್ಟೃತ್ವವನ್ನು ವಿವಕ್ಷಿಸಬೇಕು. ಈ ಅಧಿಕರಣದಲ್ಲಿ ಶಾಂಕರಭಾಷ್ಯವನ್ನಾಗಲೀ,

ರಾಮಾನುಜಭಾಷ್ಯವನ್ನಾಗಲೀ ಗ್ರಂಥಕಾರರು ವಿಮರ್ಶೆ ಮಾಡಿಲ್ಲ. ಮುಂದಿನ ಅಧಿಕರಣದಲ್ಲಿ ವಿಮರ್ಶೆ ಮಾಡುತ್ತಾರೆ. ಏಕೆಂದರೆ ಅವರು ಇದನ್ನು ಪ್ರತ್ಯೇಕ ಅಧಿಕರಣವೆಂದೇ ಪರಿಗಣಿಸಿರುವುದಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಸುಷುಪ್ತ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – ननु स्वप्नादिद्रष्टृत्वं नाम स्वप्नाद्यवस्थावत्त्वम् । न चात्मनः स्वप्नाद्यवस्थावत्त्वं लोकवेदयोः प्रसिद्धमित्यत आह – **नचेति** ।। नच प्राज्ञेनात्मना सम्परिष्वक्त इति प्राज्ञेनात्मनान्वारूढ इति सुषुप्त्युत्क्रान्त्योर्भेदोक्तेर्नाभेद इति । अत्रोक्तसुषुप्त्यादिमतो विशिष्टस्य शुद्धात्सदाभेदेपि विशेष्यस्य भेदासिद्धेरिति यत्तदनूद्य दूषयति – **यच्चेति** ।। ननु भेदस्य मिथ्यात्वेऽपि न तच्छ्रुतेरप्रामाण्यम् । मिथ्याभूते भेदे तात्पर्याभावात् । नच तात्पर्यमपि किं न स्यादिति वाच्यम् । तस्य मानान्तरप्राप्तत्वेन तात्पर्यज्ञापकापूर्वताया अभावादित्यत आह – **नचेति** ।। वक्ष्यमाणत्वात् स्वाप्ययसंपत्त्योरित्यादिनेति शेषः । आविष्कृतं हीत्याद्युक्तां युक्तिमाह – **अनन्वागतमिति** ।। मुक्तावपीत्यपिशब्देनान्यथा ब्रह्मणोऽपि मिथ्यात्वं स्यादित्यतिप्रसङ्गं सूचयति ।।

।। इति श्रीकेशवभट्टारकेण विरचितायां भावदीपिकायाम्
सुषुप्त्यधिकरणं सम्पूर्णम् ।। १२ ।।




ಸ್ವಪ್ನಕಾಲದಲ್ಲಿ ಸೃಷ್ಟಿಯಾದ ವಸ್ತುಗಳನ್ನು ಸಂಪೂರ್ಣವಾಗಿ ನೋಡಲು ನಮ್ಮಿಂದ ಸಾಧ್ಯವಿಲ್ಲ. ಆದರೆ ಪರಮಾತ್ಮನು ಎಲ್ಲವನ್ನೂ ಕೂಡ ಸಂಪೂರ್ಣವಾಗಿ ನೋಡುತ್ತಾನೆ. ಅಷ್ಟೇ ಅಲ್ಲದೇ, ಇನ್ನೊಬ್ಬರ ಸ್ವಾಪ್ನಪದಾರ್ಥವನ್ನು ನೋಡಲು ಸಾಧ್ಯವೇ ಇಲ್ಲ. ಆದರೆ ಪರಮಾತ್ಮನು ಸಕಲಜೀವರುಗಳ ಸ್ವಾಪ್ನಪದಾಥಗಳನ್ನು ಸಂಪೂರ್ಣವಾಗಿ ನೋಡುತ್ತಾನೆ. ಆದ್ದರಿಂದ ಸ್ವಪ್ನದ್ರಷ್ಟೃತ್ವವು ಪರಮಾತ್ಮನಲ್ಲೇ ಮುಖ್ಯವಾಗಿ ಬರುತ್ತದೆ.

ಸುಷುಪ್ತ್ಯಧಿಕರಣ (೧-೩-೧೩)

ವರ್ಣಾದಿಶೂನ್ಯನಾದ ಈಶ್ವರನು ಎಂದರೆ, 'ಅಗೋತ್ರಮವರ್ಣಂ' ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ ಬ್ರಾಹ್ಮಣ್ಯಾದಿ ವರ್ಣಗಳಾಗಲಿ ಗೋತ್ರಗಳಾಗಲಿ ಪರಮಾತ್ಮನಿಗಿರುವುದಿಲ್ಲವೆಂದು ತಿಳಿಯಬೇಕು. 'ವ್ಯಾವರ್ತಕತ್ವಾತ್' ಎಂಬಲ್ಲಿ 'ಈಶ್ವರಾತ್' ಎಂಬುದನ್ನು ಅನುಷಂಗ ಮಾಡಬೇಕು. ವಿರಿಂಚನು ವಿಪ್ರನಾದ್ದರಿಂದ ವಿಪ್ರತ್ವಜಾತಿಯಲ್ಲಿ ಬ್ರಾಹ್ಮಣಶ್ರುತಿಯು ನಿರೂಢವಾಗಿದೆ ಎಂದಭಿಪ್ರಾಯ. ಪ್ರಕೃಷ್ಟತ್ವವಾಚಿಯಾದ ಮಹತ್ ಶಬ್ದದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಮಹತ್ತತ್ತ್ವ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः – द्वितीये वक्ष्यमाणाभिमानिनयन्यायादिति भावः । प्रथमेऽध्याये बृहद्भाष्योक्ताभिधानमाह – आत्मेति ।।** इत्यादेरित्यादिपदेन 'बुद्धेरात्मा महान् परः' इति प्रयोगग्रहः ।

ಎರಡನೆಯ ಅಧ್ಯಾಯದ ಅಭಿಮಾನ್ಯಧಿಕರಣದಲ್ಲಿ ಅಭಿಮಾನಿ ದೇವತೆಯನ್ನು ವಿವಕ್ಷಿಸಬೇಕೆಂದು ಹೇಳಿದ್ದಾರೆ. ಪ್ರಥಮಾಧ್ಯಾಯದ ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿದ್ದನ್ನು 'ಆತ್ಮಾ' ಎಂಬುದರಿಂದ ತೋರಿಸಿದ್ದಾರೆ. 'ಇತ್ಯಾದಿ' ಎಂಬಲ್ಲಿರುವ ಆದಿಪದದಿಂದ 'ಬುದ್ಧೇರಾತ್ಮಾ ಮಹಾನ್ ಪರಃ' ಎಂಬ ಪ್ರಯೋಗವನ್ನು ವಿವಕ್ಷಿಸಬೇಕು.

**भावदीपः –** अत इति विष्णावनवकाशब्राह्मणश्रुतिसाहित्याद् बाधका-भावाच्चेत्यर्थः । ब्राह्मणो ब्राह्मणशब्दार्थः । प्रागुक्तन्यायविवरणोक्तश्रुतिलिङ्गे भाष्योक्त ाजश्रुतिनित्यमहिमत्त्वलिङ्गयोरप्युपलक्षणमिति भावेन न्यायविवरणभाष्याभ्यामुक्त-विरुद्धश्रुतिलिङ्गानि व्यक्तीकृत्याभेदं विनाऽवकाशराहित्यादिति न्यायविवरणोक्त-दिशाऽभेदप्रापकतां व्यनक्ति – **तथाहीत्यादिना ।।**

'ಅತಃ' ಎಂದರೆ ವಿಷ್ಣುವಿನಲ್ಲಿ ಅವಕಾಶವನ್ನು ಹೊಂದದ ಬ್ರಾಹ್ಮಣಶ್ರುತಿಯ ಸಾಹಿತ್ಯದಿಂದ ಮತ್ತು ಯಾವುದೇ ಬಾಧಕಗಳಿಲ್ಲದ ಕಾರಣ ಎಂದು ಅರ್ಥ. 'ಬ್ರಾಹ್ಮಣಃ' ಎಂದರೆ ಬ್ರಾಹ್ಮಣ ಶಬ್ದದ ಅರ್ಥ. ಹಿಂದೆ ಹೇಳಿದ ನ್ಯಾಯವಿವರಣದಲ್ಲಿ ಶ್ರುತಿ ಹಾಗೂ ಲಿಂಗಗಳು ಭಾಷ್ಯದಲ್ಲಿ ಉದಾಹರಿಸಿದ ಅಜಶ್ರುತಿ, ನಿತ್ಯಮಹಿಮತ್ವಾ ಲಿಂಗಗಳಿಗೆ ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ನ್ಯಾಯವಿವರಣ ಹಾಗೂ ಭಾಷ್ಯಗಳಿಂದ ವಿರುದ್ಧವಾದ ಶ್ರುತಿಲಿಂಗಗಳನ್ನು ವ್ಯಾಖ್ಯಾನ ಮಾಡಿ 'ಅಭೇದಂ ವಿನಾಽವಕಾಶರಾಹಿತ್ಯಾತ್' ಎಂಬ ನ್ಯಾಯವಿವರಣದಲ್ಲಿ ಹೇಳಿದಂತೆ ಅಭೇದಪ್ರಾಪಕವಾದದ್ದನ್ನು 'ತಥಾಹಿ' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**भावदीपः –** ननु ब्राह्मण श्रुत्युपेतम् अज आत्मेत्यादिकम् विरिञ्चविषयं; विष्णुलिङ्गोपेतवाक्यं तु विष्णुविषयमित्यन्यथोपपत्तिं श्रुत्यादेराशङ्क्य निराह – **नच**

**भिन्नेति** ।। वाक्यभेदमाश्रित्येति योज्यम् ।। **एकेति** ।। एकार्थनिष्ठत्वेनैकवाक्यत्वावगमादित्यर्थः ।। **स एवेति** ।। पूर्वाधिकरणपूर्वपक्षन्यायाद् वक्ष्यमाणदिशा वेति भावः । विवरिष्यते चैतदग्रे इति भावः । न केवलमर्थापत्त्येत्याह – **सत्त्वमिति** ।। भागवते प्रथमस्कन्धे परमपुरुषस्यैकस्यैव क्रमेण सत्त्वादिगुणै रक्षासृष्टिसंहारार्थं हरिविरिञ्चहरात्मना रूपत्रयोक्तेरित्यर्थः ।

ಬ್ರಾಹ್ಮಣ ಶ್ರುತಿಯಿಂದ 'ಅಜ ಆತ್ಮಾ' ಎಂಬ ಶ್ರುತಿಯು ಕೂಡಿರುತ್ತದೆ. ಆದ್ದರಿಂದ, 'ಅಜ ಆತ್ಮಾ' ಎಂಬ ಶ್ರುತಿಯು ವಿರಿಂಚಪರವಾಗಿದೆ. ವಿಷ್ಣುಲಿಂಗದಿಂದ ಕೂಡಿದ ವಾಕ್ಯ ಮಾತ್ರ ವಿಷ್ಣುವಿಷಯಕವಾಗಿದೆ ಎಂದು ಹೇಳಬಹುದಲ್ಲವೇ? ಎಂದು ಅನ್ಯಥೋಪಪತ್ತಿಯನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ, 'ನಚ ಭಿನ್ನ' ಇತ್ಯಾದಿ ಟೀಕೆಯಿಂದ. 'ವಾಕ್ಯಭೇದಮಾಶ್ರಿತ್ಯ' ಎಂಬುದನ್ನು ಇಲ್ಲಿ ಯೋಜನೆ ಮಾಡಿಕೊಳ್ಳಬೇಕು.

'ಏಕನಿಷ್ಠತ್ವಾತ್' ಎಂದರೆ ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಏಕವಾಕ್ಯವಾಗಿದೆ ಎಂದರ್ಥ. 'ಸ ಚ ಏವ' ಹಿಂದಿನ ಅಧಿಕರಣದ ಪೂರ್ವಪಕ್ಷನ್ಯಾಯದಿಂದ, ಅಥವಾ ಮುಂದೆ ಹೇಳುವ ನ್ಯಾಯದಿಂದ ಎಂದರ್ಥ. ಮುಂದೆ ಇದನ್ನು ವಿವರಿಸಲಾಗುತ್ತದೆ. ಕೇವಲ ಅರ್ಥಾಪತ್ತಿಯಿಂದಷ್ಟೇ ಸಿದ್ಧವಾಗಿಲ್ಲವೆಂದು 'ತತ್ತ್ವಂ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಭಾಗವತದ ಪ್ರಥಮಸ್ಕಂಧದಲ್ಲಿ ಒಬ್ಬನೇ ಪರಮಪುರುಷನು ಕ್ರಮವಾಗಿ ರಕ್ಷಣೆ, ಸೃಷ್ಟಿ, ಸಂಹಾರಗಳಿಗಾಗಿ ಹರಿ-ವಿರಿಂಚಿ-ಹರ ಎಂಬ ರೂಪಗಳನ್ನು ಧರಿಸಿದ್ದಾನೆಂದು ಹೇಳಲಾಗಿದೆ.

**भावदीपः** – इत्यादेरित्यादिपदेन तृतीयस्कन्धे एकादशाध्याये तात्पर्योदाहृतम् 'स त्रेधा बभूवैषां गुणानामुपादानाय विष्णुर्वाव सत्त्वस्य रजसो ब्रह्मा ईशानो नाम तमसः' इत्यादिश्रुतिवाक्यं च गृह्यते । ब्राह्मणशब्दो विष्णावेवेति न्यायविवरणानुरोधाद् ब्राह्मणपदमध्याहृत्य नित्यमहिमा विष्णुरेवेति प्रतिज्ञार्थमाह – **अयं ब्राह्मणो विष्णुरेवेति** ।।

'ಇತ್ಯಾದೇಃ' ಎಂಬಲ್ಲಿರುವ ಆದಿಪದದಿಂದ ತೃತೀಯಸ್ಕಂಧದ ಏಕಾದಶಾಧ್ಯಾಯದ ತಾತ್ಪರ್ಯದಲ್ಲಿ ಉದಾಹರಿಸಿದ ಈ ವಾಕ್ಯವನ್ನು ವಿವಕ್ಷಿಸಬೇಕು - 'ಸ ತ್ರೇಧಾ ಬಭೂವೈಷಾಂ ಗುಣಾನಾಮುಪಾದಾನಾಯ ವಿಷ್ಣುರ್ವಾವ ಸತ್ವಸ್ಯ ರಜಸೋ ಬ್ರಹ್ಮಾ ಈಶಾನೋನಾಮ ತಮಸಃ' ಎಂದು. 'ಬ್ರಾಹ್ಮಣಶಬ್ದಃ ವಿಷ್ಣಾವೇವ' ಎಂಬ ನ್ಯಾಯವಿವರಣಕ್ಕೆ ಅನುಸಾರಿಯಾಗಿ, ಬ್ರಾಹ್ಮಣಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ವಿಷ್ಣುವೇ ನಿತ್ಯಮಹಿಮೆಯುಳ್ಳವನಾಗಿದ್ದಾನೆಂಬ ಪ್ರತಿಜ್ಞಾರ್ಥವನ್ನು 'ಅಯಂ ಬ್ರಾಹ್ಮಣಃ ವಿಷ್ಣುರೇವ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**भावदीपः** – भाष्ये पत्यादीति सूत्रोपात्तशाखान्तरस्थवाक्यस्यैवोदाहृतत्वेन स्वयमेव तत्पकरणस्थवाक्यमुदाहृत्य 'पत्यादिशब्देभ्यः' इति हेतुपरभाष्यं व्याचष्टे – **सर्वस्येति** ।।

ಭಾಷ್ಯದಲ್ಲಿ 'ಪತ್ಯಾದಿ' ಎಂಬ ಸೂತ್ರದಲ್ಲಿ ಉದಾಹರಿಸಿದ ಶಾಖಾಂತರದ ವಾಕ್ಯವನ್ನೇ ಉದಾಹರಿಸಿದ್ದಾರೆ. ಹೊರತು, ಆ ಪ್ರಕರಣದಲ್ಲಿರುವ ವಾಕ್ಯವನ್ನು ಉದಾಹರಿಸಿಲ್ಲವೆಂದು ತಿಳಿದು ಸ್ವತಃ ಟೀಕೆಯಲ್ಲಿ ಅದೇ ಪ್ರಕರಣದಲ್ಲಿರುವ ವಾಕ್ಯವನ್ನು ಉದಾಹರಿಸಿ 'ಪತ್ಯಾದಿಶಬ್ದೇಭ್ಯಃ' ಎಂಬ ಹೇತುಪರವಾದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಸರ್ವಸ್ಯ' ಇತ್ಯಾದಿ ಗ್ರಂಥದಿಂದ.

**भावदीपः – सेतुर्विधारण इति** ।। धारणसमर्थ आश्रय इत्यर्थः ।। **इति नेति** ।। इति नेति श्रुतदृष्टवन्नेत्यर्थः । असितः अबद्धः 'षिञ् बन्धने' । न रिष्यति न नश्यति, 'रिष हिंसायाम्' । सूत्रे पत्यादिशब्दः सर्वाधिपत्यादिवाचिपर इति मत्वाऽह – **सर्वाधिपत्येति** ।। तेन सर्वस्य वशीत्याद्यपि शाखान्तरस्थवाक्यमिह सङ्गृहीतमिति भावः ।

ಶ್ರುತಿಯಲ್ಲಿರುವ 'ಸೇತುರ್ವಿಧಾರಣಃ' ಎಂದರೆ ಧಾರಣಸಮರ್ಥನಾದವನು, ಅಂದರೆ ಆಶ್ರಯನು ಎಂದು ಅರ್ಥ. 'ಇತಿ ನೇತಿ' ಎಂದರೆ ಶ್ರುತನಾದವನಂತೆ, ದೃಷ್ಟನಾದವನಂತೆ ಅಲ್ಲವೆಂದರ್ಥ. 'ಅಸಿತಃ' ಎಂದರೆ ಬದ್ಧನಲ್ಲ ಎಂದರ್ಥ. 'ಷೀಞ್ ಬಂಧನೇ' ಎಂಬ ಧಾತುವಿನಿಂದ ಇದು ನಿಷ್ಪನ್ನವಾಗಿದೆ. 'ನ ರಿಷ್ಯತಿ' ಎಂದರೆ ನಾಶವಾಗುವುದಿಲ್ಲ. 'ರಿಷ ಹಿಂಸಾಯಾಮ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಸೂತ್ರದಲ್ಲಿರುವ 'ಪತ್ಯಾದಿಶಬ್ದಃ' ಎಂಬುದು ಸರ್ವಾಧಿಪತ್ಯವಾಚಿಯಾಗಿದೆ ಎಂದು 'ಸರ್ವಾಧಿಪತ್ಯಂ' ಎಂಬುದರಿಂದ ಹೇಳಿದ್ದಾರೆ. ಇದರಿಂದ 'ಸರ್ವಸ್ಯ ವಶೀ' ಎಂಬ ಶಾಖಾಂತರದಲ್ಲಿರುವ ವಾಕ್ಯವನ್ನು ಸಂಗ್ರಹಿಸಿದಂತಾಯಿತು.

**भावदीपः** – नित्यमहिमा विष्णुरेवेत्येतद् व्याचष्टे – **तथाचेति** ।। भाष्ये 'सर्वस्य वशी' इत्यादावुदाहर्तव्ये 'सर्वस्याधिपतिः' इत्युक्तिः शाखान्तराणामुपसङ्ग्रहार्थेत्यस्य 'धृतेश्च महिम्नः' इति सूत्रे एवमन्यत्रापीत्युक्त्या उक्तप्रायत्वादत्रानुक्तिः। उतशब्दाकाङ्क्षितं 'पुरुष एवेदं सर्वं यद् भूतं यच्च भव्यम्' इति पूर्ववाक्यार्थमाह – **यद्भूतमिति** ।।

ವಿಷ್ಣುವೇ ನಿತ್ಯಮಹಿಮೆಯುಳ್ಳವನಾಗಿದ್ದಾನೆಂದು 'ತಥಾ ಚ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ 'ಸರ್ವಸ್ಯ ವಶೀ' ಎಂದೇ ಉದಾಹರಿಸಬೇಕಿತ್ತು. ಆದರೂ 'ಸರ್ವಾಧಿಪತಿಃ'

ಎಂದು ಏಕೆ ಹೇಳಿದರು? ಎಂದರೆ ಬೇರೆ ಶಾಖೆಗಳಲ್ಲಿರುವುದನ್ನು ಉಪಲಕ್ಷಣಯಾ ಇಟ್ಟುಕೊಳ್ಳಬೇಕೆಂದು ತಿಳಿಸಲು. 'ಧೃತೇಶ್ಚ ಮಹಿಮ್ನಃ' ಎಂಬ ಸೂತ್ರದಲ್ಲಿ ಇದನ್ನು ಹೇಳಲಾಗಿದೆ. 'ಏವಮನ್ಯತ್ರಾಪಿ' ಎಂದು ಹೇಳಿದ್ದರಿಂದ ಉಕ್ತಪ್ರಾಯವಾಗಿದ್ದರಿಂದ ಇಲ್ಲಿ ಅದನ್ನು ಹೇಳಿಲ್ಲವೆಂದು ಅರ್ಥ. 'ಉತ' ಶಬ್ದದಿಂದ ಆಕಾಂಕ್ಷಿತವಾದ 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್' ಎಂಬ ಪೂರ್ವವಾಕ್ಯವು ತಿಳಿಯುತ್ತದೆ. ಅದರ ಅರ್ಥವನ್ನು 'ಯದ್‌ಭೂತಂ' ಎಂಬುದರಿಂದ ಹೇಳಿದ್ದಾರೆ.

**भावदीपः** – उपलक्षणं मत्वोक्तम् – **वर्तमानमिति** ।। 'इदं हि विश्वं भगवानिवेतरो यतो जगत्स्थाननिरोधसम्भवः' । इत्याद्यानन्दमयनयभाष्योक्त-स्मृतेरधीनमित्युक्तम् । 'पुरुष एवेदं सर्वं भूतं भव्यं भवच्च यत् । इत्युच्यते तदीशत्वान्नतु सर्वस्वरूपतः' ।। इति प्रथमे बृहद्भाष्योक्तभारतस्मृतेरिति भावः । उतेत्यस्यार्थः – **न केवलमिति** ।। अमृतत्वस्येत्यस्यार्थः – **मुक्तसमुदायस्येति** ।।

'ಉಪಲಕ್ಷಣಂ' ಎಂದು ತಿಳಿದು 'ವರ್ತಮಾನಂ' ಎಂದು ಪ್ರಯೋಗಿಸಿದ್ದಾರೆ. ಈ ಸಮಸ್ತ ವಿಶ್ವವು 'ಇದಂ ಹಿ ವಿಶ್ವಂ ಭಗವಾನಿವೇತರೋ ಯತೋ ಜಗತ್‌ಸ್ಥಾನನಿರೋಧಸಂಭವಃ' ಎಂಬ ಆನಂದಮಯಾಧಿಕರಣದ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯ ಅಧೀನವಾಗಿದೆ ಎಂದು ಹೇಳಿದ್ದಾರೆ. 'ಪುರುಷ ಏವೇದಂ ಸರ್ವಂ ಭೂತಂ ಭವ್ಯಂ ಭವಚ್ಚ ಯತ್ । ಇತ್ಯುಚ್ಯತೇ ತದೀಶತ್ವಾತ್ ನತು ಸರ್ವಸ್ವರೂಪತಃ ॥' ಎಂಬ ಬೃಹದಾರಣ್ಯಕೋಪನಿಷತ್ತಿನ ಭಾಷ್ಯದ ಪ್ರಥಮಾಧ್ಯಾಯದಲ್ಲಿ ಉದಾಹರಿಸಿದ ಮಹಾಭಾರತದ ವಾಕ್ಯವೆಂದರ್ಥ. 'ನಚ' ಎಂಬುದರ ಅರ್ಥವನ್ನೇ 'ನ ಕೇವಲಂ' ಎಂದು ಹೇಳಿದ್ದಾರೆ. 'ಅಮೃತತ್ವಸ್ಯ' ಎಂಬುದರ ಅರ್ಥವನ್ನು 'ಮುಕ್ತಸಮುದಾಯಸ್ಯ' ಎಂದು ಹೇಳಿದ್ದಾರೆ.

**भावदीपः** – विचित्रा हि तद्धितगतिरिति समुदाये भावप्रत्ययः । भावभवित्रोर-भेदादमृतत्वशब्दोऽत्र मुक्तसमुदायपर इति वा भावः । **द्वितीया सप्तार्थगर्भेति** श्रुतिरित्यर्थः । इयमक्षरनये व्याख्यातत्वान्नेह व्याख्याता ।। **तृतीयेति** ।।

'ವಿಚಿತ್ರಾ ಹಿ ತದ್ಧಿತಗತಿಃ' ಎಂಬಂತೆ ಸಮುದಾಯಾರ್ಥದಲ್ಲಿ ಭಾವಪ್ರತ್ಯಯ ಬಂದಿರುತ್ತದೆ. ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ ಅಮೃತತ್ವ ಶಬ್ದವು ಮುಕ್ತಸಮುದಾಯಪರವಾಗಿದೆ ಎಂಬುದಾಗಿಯೂ ಕೂಡ ತಿಳಿಯಬಹುದು. 'ದ್ವಿತೀಯಾ' ಎಂದರೆ 'ಸಪ್ತಾರ್ಥಗರ್ಭಾ' ಎಂಬ ಶ್ರುತಿಯೆಂದರ್ಥ. ಇದನ್ನು ಅಕ್ಷರಾಧಿಕರಣದಲ್ಲಿ ವ್ಯಾಖ್ಯಾನ ಮಾಡಿದ್ದರಿಂದ ಇಲ್ಲಿ ವ್ಯಾಖ್ಯಾನ ಮಾಡಿಲ್ಲ.

**भावदीपः** – 'स योऽतः' इति श्रुतिः । इयं च सर्वत्र प्रसिद्धेति नये व्यक्ता । ब्रह्मणा वेदेन गम्यत इति ब्राह्मणशब्दो विष्णावेव युज्यत इत्यर्थादजशब्दोऽपि

तस्मिन्नेवेति न्यायविवरणं प्रागुक्तशङ्काव्यावर्तकत्वेन योजयितुं शङ्कामनूद्याकाङ्क्षाक्रमेण योजयति – **नचेत्यादिना** ।। **स्वरेति** ।।

'ಸ ಯೋऽತೋऽಶ್ರುತಃ' ಎಂಬ ಶ್ರುತಿಯನ್ನು ಸರ್ವಗತತ್ವಾಧಿಕರಣದಲ್ಲಿ ವ್ಯಾಖ್ಯಾನ ಮಾಡಲಾಗಿದೆ. 'ಬ್ರಹ್ಮಣಾ ವೇದೇನ ಗಮ್ಯತೇ' ಎಂಬ ವ್ಯುತ್ಪತ್ತಿಯಿಂದ ಬ್ರಾಹ್ಮಣಶಬ್ದವು ವಿಷ್ಣುವಿನಲ್ಲಿ ಮಾತ್ರ ಯುಕ್ತವಾಗುತ್ತದೆ. ಅರ್ಥಾತ್ ಅಜಶಬ್ದವೂ ಅವನಲ್ಲೇ ಯುಕ್ತವಾಗುತ್ತದೆ ಎಂಬ ನ್ಯಾಯವಿವರಣವನ್ನು ಹಿಂದಿನ ಆಶಂಕಾವ್ಯಾವರ್ತಕವಾಗಿ ಯೋಜನೆ ಮಾಡಲು ಶಂಕೆಯನ್ನು ಅನುವಾದ ಮಾಡಿ, ಆಕಾಂಕ್ಷಾಕ್ರಮದಿಂದ ಯೋಜನೆ ಮಾಡುತ್ತಿದ್ದಾರೆ, 'ನಚ' ಇತ್ಯಾದಿ ಗ್ರಂಥದಿಂದ.

**भावदीपः** – ब्रह्मणा वेदेन गम्यत इति विग्रहे ब्रह्माण इति वाच्ये ब्राह्मण इति स्वरशब्दितदीर्घव्यत्यासः 'आधिक्येऽधिकमित्येव हरिणा सूत्रमीरितम्' । इति ऋग्भाष्योक्त्या वेदेन गम्यत्वाधिक्यद्योतनार्थमित्यर्थः ।

'ಬ್ರಹ್ಮಣಾ ವೇದೇನ ಗಮ್ಯತೇ' ಎಂದು ವಿಗ್ರಹ ಮಾಡಿದರೆ 'ಬ್ರಹ್ಮಾಣಃ' ಎಂದಾಗಬೇಕು. 'ಬ್ರಾಹ್ಮಣಃ' ಎಂದು ದೀರ್ಘಸ್ವರದ ವ್ಯತ್ಯಾಸವೇಕಾಯಿತು? ಎಂದರೆ 'ಆಧಿಕ್ಯೇ ಅಧಿಕಮಿತ್ಯೇವ ಹರಿಣಾ ಸೂತ್ರಮೇರಿತಮ್' ಆಧಿಕ್ಯಾರ್ಥವನ್ನು ಸೂಚಿಸಲು ಸ್ವರವ್ಯತ್ಯಾಸವಾಗಿದೆ ಎಂಬ ಋಗ್ಭಾಷ್ಯದ ಆಧಾರದಿಂದ ವೇದದಿಂದ ಪರಮಾತ್ಮನು ಅಧಿಕವಾಗಿ ಗಮ್ಯನಾಗಿದ್ದಾನೆಂದು ತಿಳಿಯುತ್ತದೆ.

**भावदीपः** – ननु गम्यत इति व्युत्पत्तौ ब्रह्मगम इत्यादि स्यात् स्वरव्यत्यय इति कथमित्यत आह – **अण गताविति** ।। उक्तविरोधश्च तत्रैवेति न्यायविवरणोक्तमाह – **अन्यथेति** ।।

'ಗಮ್ಯತೇ' ಎಂಬ ವ್ಯುತ್ಪತ್ತಿ ಮಾಡಿದಾಗ 'ಬ್ರಹ್ಮಗಮಃ' ಎಂದೇ ಆಗಬೇಕು. 'ಸ್ವರವ್ಯತ್ಯಯಃ' ಎಂದು ಏಕೆ ಹೇಳಿದರು? ಎಂಬ ಪ್ರಶ್ನೆಗೆ 'ಅಣ ಗತೌ' ಎಂಬುದರಿಂದ ಉತ್ತರಿಸಿದ್ದಾರೆ.

**भावदीपः** – **मानाभावादिति** ।। अभेदः किमर्थापत्त्याऽथ पुराणवाक्येन । नाद्यः। श्रुत्या यौगिकत्वोक्तिपरन्यायविवरणेन परिहृतत्वादित्याह – **ब्राह्मणेति** ।। स्मृतिस्तु तात्पर्ये स्मृत्यैव व्याख्यातेति मत्वाऽह – **स्मृतेस्त्विति** ।।

ಶ್ರೀಹರಿಯಿಂದ ಚತುರ್ಮುಖನಿಗೆ ಅಭೇದವನ್ನು ಅರ್ಥಾಪತ್ತಿ ಪ್ರಮಾಣದಿಂದ ಹೇಳುತ್ತೀರೋ, ಅಥವಾ ಪುರಾಣವಾಕ್ಯದಿಂದಲೋ? ಮೊದಲನೆಯ ಪಕ್ಷವು ತಪ್ಪು. ಏಕೆಂದರೆ, ಬ್ರಾಹ್ಮಣಶಬ್ದವು ಯೌಗಿಕವಾಗಿದೆಯೆಂದು ಹೇಳುವ ನ್ಯಾಯವಿವರಣದಿಂದ ಇದನ್ನು ನಿರಾಕರಿಸಲಾಗಿದೆ ಎಂದು 'ಬ್ರಾಹ್ಮಣಃ'

ಎಂಬ ವಾಕ್ಯವು ಸಮರ್ಥಿಸುತ್ತಿದೆ. ಭಾಗವತತಾತ್ಪರ್ಯದಲ್ಲಿ ಸ್ಮೃತಿವಾಕ್ಯದಿಂದಲೇ ವ್ಯಾಖ್ಯಾನ ಮಾಡಿದ್ದಾರೆ ಎಂಬುದನ್ನು 'ಸ್ಮೃತೇಸ್ತು' ಎಂಬುದರಿಂದ ಹೇಳಿದ್ದಾರೆ.

**भावदीपः** – सत्त्व रजस्तम इत्यादेः 'ब्रह्मणि ब्रह्मरूपोऽसौ शिवरूपी शिवे स्थितः' । इत्यादिस्मृतेरिति भावः । चतुर्मुखस्य कर्मफलाभावायुक्तेस्तयोर्भेद एवार्थादापद्यत इति न्यायविवरणोक्तमत्र व्यनक्ति – **स्वधर्मेति** ।।

'ಸತ್ತ್ವಂ ರಜಸ್ತಮಃ' ಇತ್ಯಾದಿ ವಾಕ್ಯವು 'ಬ್ರಹ್ಮಣಿ ಬ್ರಹ್ಮರೂಪೋऽಸೌ ಶಿವರೂಪೀ ಶಿವೇ ಸ್ಥಿತಃ' ಇತ್ಯಾದಿ ಸ್ಮೃತಿವಾಕ್ಯವು ಅಂತರ್ಗತನಾದ ಪರಮಾತ್ಮಪರವಾಗಿದೆ ಎಂದು ಅಭಿಪ್ರಾಯ. ಚತುರ್ಮುಖನಿಗೆ ಕರ್ಮಫಲವೇ ಇಲ್ಲವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ, ಚತುರ್ಮುಖನಿಗೂ ಪರಮಾತ್ಮನಿಗೂ ಭೇದವು ಅರ್ಥಾತ್ ಸಿದ್ಧವಾಗುತ್ತದೆ. ಹೀಗೆ ನ್ಯಾಯವಿವರಣದಲ್ಲಿ ಹೇಳಿದ್ದನ್ನೇ 'ಸ್ವಧರ್ಮ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – **इति वचनादिति** ।। चतुर्थस्कन्धे त्रयोविंशेऽध्याये । मां लक्ष्मीमित्यर्थः ।। **नित्यमुक्तेनेति** ।। तथाच परमात्मनो नित्यमुक्तत्वेन कर्मफला-भावाद् विरिञ्चस्य चोदाहृतवचनेन कर्मफलसद्भावावगमेन तदभावायुक्तेरित्यर्थः।

'ಇತಿ ವಚನಾತ್' ಎಂದರೆ ಚತುರ್ಥಸ್ಕಂಧದ ಇಪ್ಪತ್ತಮೂರನೇ ಅಧ್ಯಾಯದಲ್ಲಿ ಹೇಳಲಾಗಿದೆ ಎಂದರ್ಥ. 'ಮಾಂ' ಎಂದರೆ ಲಕ್ಷ್ಮೀಯನ್ನು ಎಂದರ್ಥ. 'ನಿತ್ಯಮುಕ್ತೇನ' ಎಂದು ಹೇಳಿದ್ದರಿಂದ, ಪರಮಾತ್ಮನು ನಿತ್ಯಮುಕ್ತನಾದ್ದರಿಂದ ಯಾವುದೇ ಕರ್ಮಫಲಗಳಿರುವುದಿಲ್ಲ. ವಿರಿಂಚನಿಗಾದರೋ, ಉದಾಹರಿಸಿದ ವಾಕ್ಯಫಲದಿಂದ ಕರ್ಮಫಲವಿರುತ್ತದೆಂದು ತಿಳಿಯುತ್ತದೆ. ಆದ್ದರಿಂದ, ಅವರಿಬ್ಬರಿಗೂ ಐಕ್ಯವು ಯುಕ್ತವಾಗುವುದಿಲ್ಲ.

**भावदीपः** – भेदश्रुतिबाहुल्यादित्यन्यत्रोक्तं व्यनक्ति – **तत इति** ।। अदृश्यत्वनय-भाष्योक्तेयं श्रुतिः ।। **अत इति** ।। निरवकाशप्रापकसद्भावादित्यर्थः । नित्यमहिमा चेति फलोक्तिः । अकारान्तत्वमुपेत्य क्वचिन्नित्यमहिमश्चेति पाठः ।।४३।।

।। इति श्रीमद्भाष्यटीकाभावदीपे श्रीराघवेन्द्रयतिकृते
प्रथमाध्यायस्य तृतीयः पादः ।।

ವಿರಿಂಚನಿಗೂ ಪರಮಾತ್ಮನಿಗೂ ಭೇದವಿದೆ ಎಂದು ಸಮರ್ಥಿಸುವ ಅನೇಕ ಶ್ರುತಿಗಳು ಇರುತ್ತವೆ. ಅವುಗಳನ್ನು ಬೇರೆ ಕಡೆ ತಿಳಿಸಿರುತ್ತೇವೆ ಎಂಬುದನ್ನು 'ತತಃ' ಎಂಬುದರಿಂದ ಹೇಳಿದ್ದಾರೆ. ಅದೃಶ್ಯತ್ವಾಧಿಕರಣದ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ. 'ಅತಃ' ಎಂದರೆ ನಿರವಕಾಶತ್ವಪ್ರಾಪಕವಾದ ಲಿಂಗಗಳಿರುವುದರಿಂದ ಎಂದರ್ಥ. 'ನಿತ್ಯಮಹಿಮಾ ಚ' ಎಂಬುದು ಅಧಿಕರಣದ ಫಲವಾಗಿದೆ. ಕೆಲವು ಪುಸ್ತಕಗಳಲ್ಲಿ ಅಕಾರಾಂತವೆಂದು ಒಪ್ಪಿ, 'ನಿತ್ಯಮಹಿಮಶ್ಚ' ಎಂಬ ಪಾಠವನ್ನು ವಿವಕ್ಷಿಸಿರುತ್ತಾರೆ.

ಇಲ್ಲಿಗೆ ಭಾವದೀಪದಲ್ಲಿ ಪ್ರಥಮಾಧ್ಯಾಯದ ತೃತೀಯ ಪಾದವು ಸಮಾಪ್ತವಾಯಿತು.

**वाक्यार्थमञ्जरी –**

**।। ॐ पत्यादि शब्देभ्यः ॐ ।।**

किंबलादभिसंहितत्वं ज्ञायत इत्यत आह – **अनन्यापेक्षयेति** ।। **एष इति** ।। ब्रह्मणा वेदेनाप्यते गम्यते इति ब्राह्मणशब्दवाच्यस्य **विष्णोरेव पूर्वोक्तमहिमा नित्यः** आद्यन्तरहितः ।। **नेति** ।। एष महिमा पुण्येन **कर्मणा नाभिवर्धते**, पापेन **कर्मणा न** कनीयानपकृष्टो नो भवतीत्यर्थः ।। बहुशोऽजशब्दश्रवणादित्यर्थः । ब्राह्मणस्य विरिञ्चत्वे हेत्वन्तरमाह – **महत्तत्वाभिमानितयेति** ।। आत्मा विरिञ्च इति बृहद्भाष्योक्ताभिधानम् । नियमादिति जन्यभावस्य विनाशव्याप्तत्वादिति भावः ।। **स इति** ।। स ब्राह्मणः साधुकर्मफलेन सुखेन भूयानुचोऽसाधुकर्मफलेन दुःखेन नीचश्च नो एव भवतीत्यर्थः । एतत् श्रुतिद्वयं लिङ्गद्वयञ्च एकनिष्ठत्वाद् एकनिष्ठत्वावगमात् । विरिञ्चेश्वरयोरैक्ये प्रथमभागवसम्मतिमाह – **सत्त्वमिति** ।। पुरुषः पूर्णषड्गुणो हरिः प्रकृतेः परोऽपि अप्राकृतविग्रहोऽपि सत्त्वं रजस्तम इति प्रकृतेर्ये गुणास्तैर्युक्तस्तेषामाश्रयः सन् इह जगति एक हरिविरिञ्चहरेतिसञ्ज्ञानामानि धत्ते । किमर्थम्? इत्यत उक्तम् अस्य जगतः स्थित्यादये उपलक्षणमेतत् स्थित्युत्पत्तिसंहारान् कर्तुमिति । कारणमीश्वरः कार्यं विरिञ्चः, मृच्छब्दस्य घटे प्रवृत्तिवद् घटस्य मृद्यप्रयोगादिति भावः ।। **ॐ पत्यादिशब्देभ्यः ॐ** ।। 'एष नित्यो महिमा ब्राह्मणस्य' इति उक्तब्राह्मणो विष्णुरेव 'सर्वस्याधिपतिः सर्वस्येशानः सवा एष नेति नेति' इति सर्वाधिपतित्वसर्वप्रेरकत्वश्रुतदृष्टविलक्षणत्वप्रतिपादकशब्द-सद्भावादित्यर्थः । सर्ववशीत्यादिश्रुतिर्दहराधिकरणे व्याखयातेत्यत्र न व्याख्यायते

– **स** इति ।। 'स वा एषः आत्मा ब्राह्मणः नेति श्रुतविलक्षण' इति नेतिदृष्टविलक्षण इति चोच्यते तदेवोपपादयति – **अगृह्य इति** ।। हि यस्मान्न गृह्यते अतो अगृह्य इत्युच्यत इत्यर्थः । **कुत इत्यत आह – गृह्यत इति** ।। एवमग्रेऽपि । शीर्यते विदार्यते सज्जते सम्बद्ध्यते असितः अव्ययः न रिष्यति न नश्यति 'ऋष हिंसायाम्' इति धातोः 'उतामृतत्वस्येशानः' इति वाक्येनैव सर्वाधिपतित्वं न प्रतीयत इत्यतः 'पुरुष एवेदं सर्वं यद्भूतं यच्च भव्यम्' इति पूर्वार्धेन सह व्याचष्टे – **यद्भूतं भविष्यदित्यादिना** ।। ततश्चेयमक्षरयोजना **यद्भूतमतितं** भव्यं भविष्यच्च शब्दाद् वर्तमानं च तदिदं **सर्वं पुरुष एव पुरुषाधीनमेव** । 'यदधीना यस्य सत्ता तत् तदित्येव भण्यते' इत्युक्तेः । **पुरुषः यद् यस्मादन्नेनेति** तृतीया द्वितीयार्थे । अद्यते विनश्यत इत्यन्नं संसारिजातम्। **अतिरोहति अपिशेते** तदधिपतिरिति यावत् । तस्मादमृतत्वस्येति भवितृप्रधानोऽयं निर्देशः । अमृतत्वस्य मरणादिभयरहितस्यापि मुक्तवर्गस्य ईशानः प्रेरकः । 'सोऽमृतस्याभयस्येशो मर्त्यमन्नं यदत्यगाद्'। इति भागवतोक्तेरिति हेतुहेतुमद्भावस्य स्पष्टमप्रतीतेराह – **मुक्ताविति** ।। मुक्तावनधीनत्वाज्ज्ञानेन मोक्षप्रदानं किन्न स्यादित्यत उक्तम् – **बुद्धिमत इति** ।। भविष्यद् बुद्धिमत इत्यर्थः । तदेव कुत इत्यत उक्तम् – **सर्वज्ञस्येति** ।। योगेनेत्युपलक्षणं तस्मादहमजः स्मृतः इति रूढिरप्यस्तीति द्रष्टव्यम् । ननु ब्राह्मणशब्दस्य ब्रह्मणा वेदेनेत्याद्युक्तरीत्या यौगिकत्वे ब्रह्मण इति भवेद् ब्राह्मण इति तु कथम्? इत्यत आह – **स्वरव्यत्यासेति** ।। 'आधिक्येऽधिकमित्येव हरिणा सूत्रमीरितम्' । इति ऋग्भाष्योक्तेर्ब्रह्मणा वेदेन गम्यत्वाधिक्यविवक्षया दीर्घस्वरव्यत्यास इत्यर्थः ।। **तदन्तर्गतेति** ।। 'ब्रह्मणि ब्रह्मरूपोऽसौ शिवरूपी शिवे स्थितः' । इत्युक्तेरिति भावः । न केवलमभेदे मानाभावः, किन्तु भेदसाधकमान-विरोधश्चेत्याशयेनाह – **स्वधर्मनिष्ठ इत्यादिना** ।। इदमुक्तं भवति, हरिविरिञ्चौ भिन्नौ कर्मफलभोगतदभावरूपविरुद्धधर्माधिकरणत्वात् । नचासिद्धिः विरिञ्चे कर्मफल भोगस्योदाहृतवचनसिद्धत्वादिति वचनार्थस्तु पुमान् ऋजुर्जीवः अनादितो भगवज्ज्ञानभक्त्यादिसम्पन्नोऽपि विशेषेणापरोक्षज्ञानानन्तरं शतजन्मभिः एकोनशतसङ्ख्याकब्रह्मकल्पैः स्वधर्मनिष्ठहर्युपासनादिस्वयोग्यधर्मनिष्ठावानेव विरिञ्चतां प्राप्नोति । ततः परं मां श्रियमेतीति यथाश्रुते तु विरिञ्चजन्मन एकोत्तरशतत्वप्राप्त्या ऋजूनामपरोक्षज्ञानानन्तरं शतकल्पैरेव मोक्ष इति नियमानुपपत्तिः । ब्रह्मणस्त्वेव

तावत्त्वमित्यनुव्याख्यानव्याख्यानसुधायां ब्राह्मणस्तु तावत्त्वमेव ब्रह्मकल्पानां शतेनैव कर्मक्षयवत्वमित्युक्त्या एकोत्तरशतजन्मवतो विरिञ्चस्य प्रारब्धभोगाभावप्रसङ्गश्च । नचेष्टापत्तिः । 'प्रारब्धकर्मशेषस्तु विरजातरणावधि' । तस्य तावदेव चिरं यावन्न विमोक्ष्येतेत्यादिविरोधाद् एवमेव 'लिङ्गाल्लब्धव्यतः पूर्वमृजोर्ब्रह्मत्वतः शतात्' । इत्यनुव्याख्यानं शतजन्मप्रयत्नत इत्यादिचतुर्थ-तात्पर्यादिकमपि व्याख्येयं यत्तूदाहृतानुव्याख्यानसुधायां यस्यैतस्माद् ब्रह्मकल्पादारभ्य ब्रह्मकल्पानां शतङ्गते ब्रह्मतत्त्वं भविष्यतीत्युक्तम् । तदप्यनुव्याख्यानानुवादमात्रम् । शते आगते इति पदच्छेदो वेत्यदोषः । अत एव सन्न्यायरत्नावल्यामुदाहृतानुव्याख्यानावसरे एकोनशतब्रह्मस्वतीतेष्वित्युक्तमिति सङ्क्षेपः । विश्वो वायुः ।। ४३ ।।

**।। इति श्रीमत्तत्वप्रकाशिकावाक्यार्थमञ्जर्यां शर्कराश्रीनिवासविरचितायां प्रथमाध्यायस्य तृतीयः पादः समाप्तः ।।**

## ಬ್ರಾಹ್ಮಣಾಧಿಕರಣ
## (೧-೩-೧೪)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ರಾಮಾನುಜಭಾಷ್ಯ
ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ ब्राह्मणाधिकरणम्

### ಪಾದಸಂಗತಿ-ಅಧಿಕರಣಸಂಗತಿ ಮತ್ತು ಪ್ರಯೋಜನ ವಿಚಾರ

**॥ ॐ पत्यादिशब्देभ्यः ॐ ॥**

**अस्य पादसङ्गतिः ब्राह्मणशब्दस्य विप्रत्वजातौ लोके प्रसिद्धत्वेऽपि चतुर्मुखे विशिष्य तदभावेन वा कम्पनादित्यत्रोक्तरीत्या वा द्रष्टव्या ।**

ಅನುವಾದ - 'ಓಂ ಪತ್ಯಾದಿಶಬ್ದೇಭ್ಯಃ ಓಂ' ಎಂಬ ಸೂತ್ರದಿಂದ ಬ್ರಾಹ್ಮಣಾಧಿಕರಣವು ಪ್ರಾರಂಭವಾಗುತ್ತಿದೆ. ಪಾದಸಂಗತಿಯನ್ನು ಹೀಗೆ ತಿಳಿಯಬೇಕು - ಬ್ರಾಹ್ಮಣಶಬ್ದವು ವಿಪ್ರತ್ವಜಾತಿಯುಳ್ಳ ಬ್ರಾಹ್ಮಣ ಸಮೂಹದಲ್ಲಿ ಲೋಕತಃ ಪ್ರಸಿದ್ಧವಾಗಿದೆ. ಆದ್ದರಿಂದ ಅನ್ಯತ್ರಪ್ರಸಿದ್ಧವೆನಿಸುತ್ತದೆ. ಆದರೆ ಚತುರ್ಮುಖ ಬ್ರಹ್ಮದೇವನಲ್ಲಿ ಅಸಾಧಾರಣವಾಗಿ ಪ್ರಯೋಗವಿಲ್ಲದ ಕಾರಣ, ಅಜಶ್ರುತಿಯ ಬಲದಿಂದ, ಪ್ರಸಿದ್ಧವಾಗಿದೆಯೆನ್ನಬೇಕು. ಅದೇ ಕಾರಣದಿಂದ ನಿತ್ಯಮಹಿಮತ್ವವೆಂಬ ಲಿಂಗವನ್ನು ಆಶ್ರಯಿಸಿ ವಿಷ್ಣುವಿನಲ್ಲೂ ಕೂಡ ಬ್ರಾಹ್ಮಣಶಬ್ದವು ಸಿದ್ಧವಾಗುತ್ತದೆ. ಹಾಗಾಗಿ ಬ್ರಾಹ್ಮಣಶಬ್ದವು ಉಭಯತ್ರಪ್ರಸಿದ್ಧಶಬ್ದವೆನಿಸಿದೆ.

ಅಥವಾ ಕಂಪನಾಧಿಕರಣದಲ್ಲಿ ವಜ್ರಶಬ್ದಕ್ಕೆ ಪ್ರಯೋಗಸಾಧಾರಣ್ಯವನ್ನು ಹೇಳಿದಂತೆ ಬ್ರಾಹ್ಮಣಶಬ್ದಕ್ಕೆ ಬ್ರಾಹ್ಮಣಸಾಮಾನ್ಯರಲ್ಲಿ ಪ್ರಯೋಗವಿರುವಂತೆ, ಚತುರ್ಮುಖಬ್ರಹ್ಮನಲ್ಲಿಯೂ ಕೂಡ ಪ್ರಯೋಗವಿದೆ. ಅದೇ ಬ್ರಾಹ್ಮಣಶಬ್ದಕ್ಕೆ ನಾಮಪಾದದ ನ್ಯಾಯದಿಂದ ವಿಷ್ಣುವಿನಲ್ಲೂ ಕೂಡ ಪ್ರಯೋಗವಿದೆಯೆಂದು ಉಭಯತ್ರಪ್ರಸಿದ್ಧವಾಗುತ್ತದೆ. ಹೀಗೆ ಪಾದಸಂಗತಿಯನ್ನು ತಿಳಿಯಬೇಕು.

**अनन्तरसङ्गतिस्तु ''असङ्गेन हि सज्यते'' इति श्रुतस्यात्रत्यासङ्गस्याब्रह्मत्वे ''असङ्गो ह्ययं पुरुष'' इति पूर्वोक्तस्याप्यब्रह्मत्वं स्यादिति पूर्वाक्षेपेण पूर्वपक्षोत्थानाद्वा पूर्वत्र जीवमात्राभेदं निरस्येह जीवविशेषचतुर्मुखाभेदनिरासाद्वा द्रष्टव्या ।**

ಪಾದಸಂಗತಿ ಹೀಗಿದೆ - 'ಅಸಂಗೋನ ಹಿ ಸಜ್ಯತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅಸಂಗನು ಬ್ರಹ್ಮನಾಗದಿದ್ದಲ್ಲಿ ಹಿಂದಿನ ಅಧಿಕರಣದ 'ಅಸಂಗೋ ಹ್ಯಯಂ ಪುರುಷಃ' ಎಂಬ ವಿಷಯವಾಕ್ಯದಲ್ಲಿ ಹೇಳಲ್ಪಟ್ಟ ಅಸಂಗನೂ ಕೂಡ ಬ್ರಹ್ಮನಾಗುವುದಿಲ್ಲ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತ ಪ್ರಮೇಯವನ್ನು ಆಕ್ಷೇಪ ಮಾಡಿ, ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿರುವ ಕಾರಣ ಆನಂತರ್ಯ ಸಂಗತಿಯು ಇರುತ್ತದೆ.

ಅಥವಾ ಹಿಂದಿನ ಅಧಿಕರಣದಲ್ಲಿ ಜೀವಸಾಮಾನ್ಯರಿಗೆ ಬ್ರಹ್ಮನಿಂದ ಅಭೇದವನ್ನು ನಿರಾಕರಣೆ ಮಾಡಿದ್ದಾಯಿತು. ಆದರೆ ಜೀವವಿಶೇಷನೆನಿಸಿದ ಚತುರ್ಮುಖಬ್ರಹ್ಮನಿಗೆ ಬ್ರಹ್ಮನಿಂದ ಅಭೇದವಿರ-ಬಹುದಲ್ಲವೇ? ಎಂಬ ಆಕ್ಷೇಪದ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿರುತ್ತದೆಂದು ಸಂಗತಿಯನ್ನು ತಿಳಿಯಬೇಕು.

**प्रयोजनं तु अन्यस्य नित्यमहिमत्वे जिज्ञासादिसूत्रेषु विवक्षितं विष्णोर्नित्यमहिमत्वं न स्यादिति टीकायामेवोक्तम् ।**

ಅಧಿಕರಣದ ಪ್ರಯೋಜನ ಹೀಗಿದೆ - ಜಿಜ್ಞಾಸಾಧಿಕರಣದಿಂದ ಪ್ರಾರಂಭಮಾಡಿ, ಹಿಂದಿನ ಸುಷುಪ್ತ್ಯಧಿಕರಣದ ತನಕ ಪ್ರತಿಯೊಂದು ಅಧಿಕರಣಗಳಲ್ಲಿಯೂ ಪರಮಾತ್ಮನ ನಿತ್ಯಮಹಿಮೆಗಳನ್ನು ಸಮರ್ಥಿಸಲಾಯಿತು. ಒಂದು ವೇಳೆ ಮತ್ತೊಬ್ಬನು ನಿತ್ಯಮಹಿಮೆಯುಳ್ಳವನಾದಲ್ಲಿ, ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಸಮರ್ಥಿಸಲ್ಪಟ್ಟ ವಿಷ್ಣುವಿನ ನಿತ್ಯಮಹಿಮೆಯು ಸಿದ್ಧವಾಗುವುದಿಲ್ಲ. ಹಾಗಾಗಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ನಿತ್ಯಮಹಿಮೆಯು ವಿಷ್ಣುವಿನದ್ದೇ ಆಗಿದೆಯೆಂದು ಈ ಅಧಿಕರಣದಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. ಇದು ಈ ಅಧಿಕರಣದ ಪ್ರಯೋಜನವೆಂದು ಟೀಕೆಯಲ್ಲಿಯೇ ಹೇಳಿದ್ದಾರೆ.

**''देवानां विद्याकर्मणोः पदप्राप्तिः सूचितः'' इति भाष्येणैव प्रयोजनमप्युक्तमिति ज्ञेयम् । तस्य भाष्यस्य देवानामेवानित्यपदत्वं नतु विरिञ्चस्येत्यर्थवत् विरिञ्चादीनां देवानामनित्यपदत्वमुक्तम् ।**

ಭಾಷ್ಯದಲ್ಲಿ ಅಧಿಕರಣದ ಪ್ರಯೋಜನವನ್ನು ಹೀಗೆ ಹೇಳಿದ್ದಾರೆ - 'ದೇವಾನಾಂ ವಿದ್ಯಾಕರ್ಮಣೋಃ ಪದಪ್ರಾಪ್ತಿಃ ಸೂಚಿತಃ' ದೇವತೆಗಳಿಗೆ ವಿದ್ಯೆ ಹಾಗೂ ಕರ್ಮಗಳಿಂದ ತಮ್ಮ ತಮ್ಮ ಪದವಿಗಳು

ದೊರೆಯುತ್ತವೆಂದು ಸೂಚಿತವಾಗಿದೆ. ಈ ಮಾತಿನಿಂದಲೇ ಪ್ರಯೋಜನವನ್ನೂ ಕೂಡ ಭಾಷ್ಯದಲ್ಲಿ ಹೇಳಿರುತ್ತಾರೆಂದು ತಿಳಿಯಬೇಕು.

**तच्चायुक्तम् । विरिञ्चस्य नित्यमहिमत्वादित्यर्थस्यापि सुवचत्वात् ।**

ಈ ಭಾಷ್ಯದ ಮಾತಿಗೆ ಟೀಕೆಯಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ದೇವತೆಗಳಿಗಷ್ಟೇ ಅನಿತ್ಯಪದವಿಯಿರುತ್ತದೆ. ಹೊರತು, ಚತುರ್ಮುಖಬ್ರಹ್ಮದೇವರಿಗೆ ಅನಿತ್ಯಪದವಿಯಿರುವುದಿಲ್ಲ. ಈ ಆಕ್ಷೇಪವನ್ನು ಪರಿಹರಿಸಲು ಬ್ರಾಹ್ಮಣಾಧಿಕರಣವು ಹೊರಟಿದೆ ಎಂದು.

ಟೀಕೆಯಲ್ಲಿ ವ್ಯಾಖ್ಯಾನ ಮಾಡಿದಂತೆ ಮತ್ತೊಂದು ಬಗೆಯಲ್ಲಿಯೂ ಕೂಡ ಭಾಷ್ಯವನ್ನು ವ್ಯಾಖ್ಯಾನಿಸಬಹುದು - ಚತುರ್ಮುಖಬ್ರಹ್ಮದೇವರನ್ನೊಳಗೊಂಡಂತೆ ಸಕಲದೇವತೆಗಳಿಗೂ ಅನಿತ್ಯ-ಪದವಿಯನ್ನು ದೇವತಾಧಿಕರಣದಲ್ಲಿ ಸಮರ್ಥಿಸಲಾಗಿದೆ. ಇದು ತಪ್ಪು. ಏಕೆಂದರೆ ಚತುರ್ಮುಖಬ್ರಹ್ಮದೇವರ ಪದವಿಯು ನಿತ್ಯವಾಗಿದೆಯೆಂದು 'ಏಷ ನಿತ್ಯೋ ಮಹಿಮಾ' ಎಂಬ ಶ್ರುತಿಯು ಹೇಳುತ್ತಿದೆ ಎಂಬ ಆಕ್ಷೇಪವನ್ನು ಪರಿಹರಿಸಲು ಅಧಿಕರಣ ಹೊರಟಿದೆ ಎಂದು.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – ।। ॐ पत्यादिशब्देभ्यः ॐ ।। अत्र टीकायां** ''नित्यमहिमत्वलिङ्गे-नाजश्रुत्याच विष्णुविरिञ्चयोस्साधारणस्य ब्राह्मणनाम्न'' इत्यादिना पादसङ्गतिरुक्ता।

ವಿವರಣೆ - 'ಓಂ ಪತ್ಯಾದಿಶಬ್ದೇಭ್ಯಃ ಓಂ' ಎಂಬುದಾಗಿ ಬ್ರಾಹ್ಮಣಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಟೀಕೆಯಲ್ಲಿ ಪಾದಸಂಗತಿಯನ್ನು ಹೀಗೆ ಹೇಳಿದ್ದಾರೆ - 'ನಿತ್ಯಮಹಿಮತ್ವಲಿಂಗೇನಾಜಶ್ರುತ್ಯಾಚ ವಿಷ್ಣುವಿರಿಂಚಯೋಃ ಸಾಧಾರಣಸ್ಯ ಬ್ರಾಹ್ಮಣನಾಮ್ನಃ' 'ನಿತ್ಯಮಹಿಮತ್ವ' ಎಂಬ ಲಿಂಗದಿಂದ ಬ್ರಾಹ್ಮಣಶಬ್ದವು ವಿಷ್ಣುವಿನಲ್ಲಿ ಸಾಧಾರಣವಾಗಿದೆ. ಅಜಶ್ರುತಿಯ ಬಲದಿಂದ ಚತುರ್ಮುಖನಲ್ಲಿ ಸಾಧಾರಣವಾಗಿದೆ. ಹೀಗೆ ಬ್ರಾಹ್ಮಣಶಬ್ದವು ಉಭಯತ್ರಪ್ರಸಿದ್ಧವಾಗಿರುತ್ತದೆಂದು ತಿಳಿಯಬೇಕು ಎಂಬುದಾಗಿ. ಉಭಯತ್ರಪ್ರಸಿದ್ಧ ಶಬ್ದ ಸಮನ್ವಯವನ್ನು ಮಾಡುವ ತೃತೀಯಪಾದದಲ್ಲಿ ಈ ಅಧಿಕರಣಕ್ಕೆ ಅಂತರ್ಭಾವಸಂಗತಿಯು ಯುಕ್ತವಾಗುತ್ತದೆಂದು ಹೇಳಿದ್ದಾರೆ.

**प्रकाशः –** सा नऽयुक्तेव । ब्राह्मणशब्दस्यान्यत्र रूढत्वेनाकाशादिशब्दवदन्यत्र प्रसिद्धत्वापत्तेः । उभयप्रापकवशादुभयत्रप्रसिद्धत्वे चाकाशादिनाम्नोऽपि तथात्वापत्तेरित्यत आह – **अस्येति ।।**

ಇದು ಸರಿಯಲ್ಲ. ಏಕೆಂದರೆ ಬ್ರಾಹ್ಮಣಶಬ್ದವು ವಿಪ್ರತ್ವಜಾತಿಯುಳ್ಳ ಬ್ರಾಹ್ಮಣರಲ್ಲಿ ರೂಢವಾದ ಕಾರಣ, ಆಕಾಶಾದಿಶಬ್ದಗಳಂತೆ ಅನ್ಯತ್ರಪ್ರಸಿದ್ಧವೇ ಆಗಬೇಕು. ಹಾಗಿದ್ದರೂ ಉಭಯಪ್ರಾಪಕಗಳಿರುವ ಕಾರಣ, ಉಭಯತ್ರಪ್ರಸಿದ್ಧವೆಂದು ಪರಿಗಣಿಸಿದಲ್ಲಿ, ಆಕಾಶಾದಿಶಬ್ದಗಳಿಗೂ ಕೂಡ ಹೀಗೆ ಉಭಯಪ್ರಾಪಕಗಳನ್ನು ಹೇಳಬಹುದಾದ್ದರಿಂದ ಅವುಗಳೂ ಕೂಡ ಉಭಯತ್ರಪ್ರಸಿದ್ಧಶಬ್ದಗಳೆಂದು ಆಗಬೇಕಾದೀತು. ಈ ಪ್ರಶ್ನೆಗೆ 'ಅಸ್ಯ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अधिकरणस्येत्यर्थः ।। **चतुर्मुख इति** ।। पूर्वपक्ष्यभिमतेऽन्यत्र प्रसिद्धेरेवान्यत्रप्रसिद्धिशब्दार्थत्वात् । जातिपूर्वपक्षस्य चेह नित्यमहिमत्वादिनाऽनवकाशादिति भावः ।।

'ಅಸ್ಯ' ಎಂದರೆ ಬ್ರಾಹ್ಮಣಾಧಿಕರಣಕ್ಕೆ ಎಂದರ್ಥ. ಪೂರ್ವಪಕ್ಷಿಗೆ ಅಭಿಮತವಾದ ಬೇರೆ ಪದಾರ್ಥದಲ್ಲಿ ರೂಢಿಯಿದ್ದರೆ ಮಾತ್ರ ಅನ್ಯತ್ರಪ್ರಸಿದ್ಧಿಶಬ್ದವೆನಿಸುತ್ತದೆ. ಆದರೆ ವಿಪ್ರತ್ವಜಾತಿಯುಳ್ಳ ಬ್ರಾಹ್ಮಣರು ಈ ಅಧಿಕರಣದಲ್ಲಿ ಪೂರ್ವಪಕ್ಷಕ್ಕೆ ವಿಷಯರೇ ಆಗಿಲ್ಲ. ಏಕೆಂದರೆ ನಿತ್ಯಮಹಿಮತ್ವ ಮೊದಲಾದ ಶ್ರುತಿಯಲ್ಲಿ ಹೇಳಲ್ಪಟ್ಟ ಧರ್ಮಗಳು ಅವರಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ಚತುರ್ಮುಖಬ್ರಹ್ಮನೇ ಪೂರ್ವಪಕ್ಷಗಳಿಗೆ ಅಭಿಮುಖನಾಗಿದ್ದಾನೆ. ಅಂತಹ ಚತುರ್ಮುಖನಲ್ಲಿ ಲೋಕಪ್ರಸಿದ್ಧಿಯನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಉಭಯಪ್ರಾಪಕಗಳಿರುವ ಕಾರಣ, ಉಭಯತ್ರಪ್ರಸಿದ್ಧಿಶಬ್ದವೆಂದು ಹೇಳಿದ್ದು ಸಾಧುವಾಗಿದೆ.

ಚತುರ್ಮುಖಬ್ರಹ್ಮದೇವರೂ ಕೂಡ ಬ್ರಾಹ್ಮಣರೇ ಆಗಿರುವುದರಿಂದ ಸಾಮಾನ್ಯವಾಗಿ ಬ್ರಾಹ್ಮಣರೆನಿಸಿದರು ಅಸಾಧಾರಣವಾಗಿ ಚತುರ್ಮುಖ ದೇವರೊಬ್ಬರೇ ಬ್ರಾಹ್ಮಣರೆಂದು ಪ್ರಸಿದ್ಧವಾಗಿಲ್ಲ. ಅಸಾಧಾರಣವಾಗಿ ಪ್ರಸಿದ್ಧರಾಗದ ಕಾರಣ, ಬ್ರಾಹ್ಮಣಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಇಲ್ಲಿ ಹೇಳಿರುತ್ತಾರೆ.

**प्रकाशः** – **विशिष्येति** ।। तस्यापि विप्रत्वेन सामान्यतस्सत्त्वादिति भावः । एतेनान्यसाधारण्येन पूर्वपक्ष्यभिमते प्रसिद्धत्वादन्यत्रप्रसिद्धिरिति प्रत्युक्तम् ।

'ವಿಶಿಷ್ಯ' ಎಂದರೆ ಚತುರ್ಮುಖಬ್ರಹ್ಮನೂ ಕೂಡ ವಿಪ್ರನೇ ಆಗಿರುವುದರಿಂದ, ವಿಪ್ರತ್ವಜಾತಿಯು ಚತುರ್ಮುಖಬ್ರಹ್ಮನಲ್ಲಿ ಸಾಧಾರಣವಾಗಿದೆ. ಹೊರತು ಅಸಾಧಾರಣವಾಗಿರುವುದಿಲ್ಲ. ಹೀಗೆ ಹೇಳಿದ್ದರಿಂದ ಬ್ರಾಹ್ಮಣಶಬ್ದವು ಅನ್ಯಸಾಧಾರಣವಾಗಿ ಪೂರ್ವಪಕ್ಷಿಗೆ ಅಭಿಮತವಾದ್ದರಲ್ಲಿ ಪ್ರಸಿದ್ಧವಾದ ಕಾರಣ, ಅನ್ಯತ್ರಪ್ರಸಿದ್ಧವಾಗಬಹುದಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸಿದಂತಾಯಿತು.

**प्रकाशः** – विशिष्याभावात् । तथाच सामान्यप्रसिद्धिब्रह्मलिङ्गाभ्यामुभयत्रप्रसिद्धिरिति भावः ।।

ಬ್ರಾಹ್ಮಣಶಬ್ದವು ಚತುರ್ಮುಖನಲ್ಲಿ ಅಸಾಧಾರಣವಾಗಿ ಪ್ರಸಿದ್ಧವಾಗಿಲ್ಲ. ಆದ್ದರಿಂದ ಸಾಮಾನ್ಯಪ್ರಸಿದ್ಧಿ ಮತ್ತು ಬ್ರಹ್ಮನ ಲಿಂಗದಿಂದ ಇದು ಉಭಯತ್ರಪ್ರಸಿದ್ಧವೆನಿಸುತ್ತದೆ.

ಬ್ರಾಹ್ಮಣಾಧಿಕರಣ (೧-೩-೧೪)

**प्रकाशः – उक्तेति** ।। नामपादीयन्यायेन ब्रह्मण्यपि प्रयोगस्योक्तत्वात्प्रयोग साधारण्येनेत्याद्युक्तरीत्येत्यर्थः । टीकायां लिङ्गोक्तिस्तु नामपादन्यायसूचनाय । अजश्रुत्युक्तिरपि चतुर्मुखरूपविशेषोपस्थित्यर्थेति भावः ।

'ಉಕ್ತರೀತ್ಯಾ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ವಜ್ರಶಬ್ದಕ್ಕೆ ಪ್ರಯೋಗಸಾಧಾರಣ್ಯದಿಂದ ಉಭಯತ್ರಪ್ರಸಿದ್ಧತ್ವವನ್ನು ಹೇಳಿದಂತೆ ಬ್ರಾಹ್ಮಣಶಬ್ದದಲ್ಲಿಯೂ ಕೂಡ ಹೇಳಬಹುದು. ಈಗಾಗಲೇ ನಾಮಪಾದದಲ್ಲಿ ಸಕಲಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದರಿಂದ, ವಿಷ್ಣುವಿನಲ್ಲಿ ಪ್ರಯೋಗ ಸಾಧಾರಣ್ಯವನ್ನು ಹೇಳಬಹುದು. ಹಾಗಾದರೆ ಟೀಕೆಯಲ್ಲಿ ನಿತ್ಯಮಹಿಮತ್ವಾದಿಲಿಂಗದಿಂದ ಪ್ರಯೋಗ-ಸಾಧಾರಣ್ಯವನ್ನು ಏಕೆ ಹೇಳಿದ್ದಾರೆ ಎಂದರೆ ನಾಮಪಾದದ ನ್ಯಾಯವನ್ನು ಸೂಚನೆ ಮಾಡುವುದಕ್ಕಾಗಿ, ಲೋಕದಲ್ಲಿ ಅನ್ಯತ್ರ ರೂಢವಾದ ನಾಮಾತ್ಮಕವಾದ ಶಬ್ದಗಳೆಲ್ಲವೂ ಅದೇ ವಾಕ್ಯದಲ್ಲಿ ಕೇಳಿಸುತ್ತಿರುವ ನಿರವಕಾಶವಿಷ್ಣುಲಿಂಗಗಳಿಂದ ಪರಮಾತ್ಮನಲ್ಲಿ ಸಮನ್ವಯವಾಗುತ್ತದೆಂದು ಹೇಳಲಾಗಿದೆ. ಆದ್ದರಿಂದ ನಾಮಪಾದನ್ಯಾಯದಿಂದ ವಿಷ್ಣುವಿನಲ್ಲಿ ಬ್ರಾಹ್ಮಣಶಬ್ದದ ಪ್ರಯೋಗವಿದೆ ಎಂದಂತಾಯಿತು. ಅದರಂತೆ ಸರ್ವಬ್ರಾಹ್ಮಣ ಸಾಧಾರಣ್ಯದಿಂದ ಚತುರ್ಮುಖನಲ್ಲಿ ಬ್ರಾಹ್ಮಣ ಶಬ್ದವು ಪ್ರಸಿದ್ಧವಾಗಿದೆ. ಅಂದರೆ ಅಜಶ್ರುತಿಯ ಆಧಾರದಿಂದ ವಿಶೇಷವಾಗಿ ಪ್ರಯೋಗವಿದೆಯೆಂದು ಹೇಳಬಹುದು.

**प्रकाशः** – नन्वेवं सङ्गत्युक्तौ ''प्राचीनाधिकरणेषु विष्णौ नित्यमहिमत्वमभि-संहितम्'' इति टीकाविरोध इत्यत आह – **प्रयोजनं त्विति** ।। सा प्रयोजनपरेति भावः ।

ಹೀಗೆ ಸಂಗತಿಯನ್ನು ಹೇಳಿದರೆ 'ಪ್ರಾಚೀನಾಧಿಕರಣೇಷು ವಿಷ್ಣೌ ನಿತ್ಯಮಹಿಮತ್ವಮಭಿಸಂಹಿತಮ್' ಎಂಬ ಟೀಕೆಯ ವಿರೋಧ ಬರುತ್ತದೆ. ಏಕೆಂದರೆ ಟೀಕೆಯಲ್ಲಿ ಜಿಜ್ಞಾಸಾಧಿಕರಣದಿಂದ ಪ್ರಾರಂಭಮಾಡಿ, ಹಿಂದಿನ ಸುಷುಪ್ತ್ಯಧಿಕರಣದ ತನಕ ಪ್ರತಿಯೊಂದು ಅಧಿಕರಣದಲ್ಲಿ ಹೇಳಲ್ಪಟ್ಟ ನಿತ್ಯಮಹಿಮತ್ವವನ್ನು ಆಕ್ಷೇಪ ಮಾಡಿ, ಸಂಗತಿಯನ್ನು ತೋರಿಸಿರುತ್ತಾರೆ. ಅದರ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಪ್ರಯೋಜನಂ ತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಟೀಕೆಯ ಮಾತು ಅಧಿಕರಣದ ಪ್ರಯೋಜನವನ್ನು ತೋರಿಸಲು ಹೊರಟಿದೆ ಹೊರತು, ಸಂಗತಿಯನ್ನು ತೋರಿಸಲು ಅಲ್ಲ.

**प्रकाशः** – यद्यप्यसङ्गत्वाक्षेपः प्रयोजनं सूचितम् । तथापि तस्य सङ्गतिमात्र-परत्वेनोपपत्तेरिति वा सर्वाक्षेपरूपप्रयोजनसम्भवे तन्मात्राक्षेपरूपप्रयोजनसङ्कोचा-योगादिति वा टीकोक्तं प्रयोजनान्तरमिति वा तत्स्फुटीकर्तुं प्रयोजनं त्वित्युक्तम् ।।

ಪ್ರಶ್ನೆ - ಟೀಕೆಯಲ್ಲಿ ಅಸಂಗತ್ವದ ಆಕ್ಷೇಪವನ್ನೇ ಪ್ರಯೋಜನವೆಂದು ಹೇಳುವುದು ಉಚಿತವಲ್ಲವೇ? ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ನಿತ್ಯಮಹಿಮತ್ವದ ಆಕ್ಷೇಪವನ್ನೇ ಪ್ರಯೋಜನವೆಂದು ಏಕೆ ಹೇಳಿದ್ದಾರೆ?

ಉತ್ತರ - ಅಸಂಗತ್ವವು ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾಗಿದೆ. ಅದರ ಆಕ್ಷೇಪವು ಸಂಗತಿ-ಪರವಾಗಿದೆಯೆಂದು ಹೇಳುವುದರಿಂದ ಅಧಿಕರಣ ಸಂಗತಿಯನ್ನು ಸ್ಪಷ್ಟವಾಗಿ ತೋರಿಸಿದಂತಾಗುತ್ತದೆ. ಅಥವಾ ಹಿಂದಿನ ಎಲ್ಲಾ ಅಧಿಕರಣಗಳ ಪ್ರಮೇಯವನ್ನು ಆಕ್ಷೇಪ ಮಾಡುವುದು ಪ್ರಯೋಜನವೆಂದು ಹೇಳಲು ಬರುವಾಗ, ಕೇವಲ ಹಿಂದಿನ ಒಂದು ಅಧಿಕರಣದಲ್ಲಿ ಹೇಳಿದ ಅಸಂಗತ್ವವನ್ನು ಆಕ್ಷೇಪ ಮಾಡುವಿಕೆಯೆಂಬ ಸಂಕೋಚವು ಅಯುಕ್ತವಾಗುತ್ತದೆ. ಅಥವಾ ಅಸಂಗತ್ವದ ಆಕ್ಷೇಪವೂ ಒಂದು ಪ್ರಯೋಜನ. ಟೀಕೆಯಲ್ಲಿ ಹೇಳಿದ ನಿತ್ಯಮಹಿತ್ವಾದಿಗಳ ಆಕ್ಷೇಪವು ಮತ್ತೊಂದು ಪ್ರಯೋಜನವೆಂದೂ ಕೂಡ ತಿಳಿಯಬಹುದು.

**प्रकाशः – यद्वा द्वितीयसङ्गतौ पूर्वाक्षेपाभावाद्भाष्ये स्पष्टं प्रयोजनानुक्तेश्च किं प्रयोजनमेतच्चिन्ताया इत्यत उक्तं प्रयोजनं त्विति ॥**

ಅಥವಾ 'ಪ್ರಯೋಜನಂ ತು' ಎಂಬ ಗ್ರಂಥಕ್ಕೆ ಮತ್ತೊಂದು ರೀತಿಯಲ್ಲಿಯೂ ಅವತಾರಿಕೆಯನ್ನು ತಿಳಿಯಬಹುದು. ಗ್ರಂಥದಲ್ಲಿ ಅಸಂಗತ್ವದ ಆಕ್ಷೇಪವು ಒಂದು ಬಗೆಯ ಸಂಗತಿಯಾಗಿದೆ. ಜೀವವಿಶೇಷನಾದ ಚತುರ್ಮುಖನಿಂದ ಅಭೇದದ ಆಕ್ಷೇಪವು ಮತ್ತೊಂದು ಬಗೆಯ ಸಂಗತಿಯಾಗಿದೆಯೆಂದು ಹೇಳಿದರು. ಚತುರ್ಮುಖನಿಂದ ಅಭೇದವಿದೆಯೆಂಬ ಎರಡನೆಯ ಸಂಗತಿಯಲ್ಲಿ ಹಿಂದಿನ ಅಧಿಕರಣವನ್ನು ಆಕ್ಷೇಪ ಮಾಡಿದಂತಾಗುವುದಿಲ್ಲ. ಅದಕ್ಕೋಸ್ಕರ 'ಪ್ರಯೋಜನಂ ತು' ಎಂಬ ವಾಕ್ಯವು ಪ್ರಯೋಜನಪರವಾಗಿದೆ ಎಂದು ಹೇಳುತ್ತಿದೆ. ಅಥವಾ ಭಾಷ್ಯದಲ್ಲಿ ಪ್ರಯೋಜವನ್ನು ಸ್ಪಷ್ಟವಾಗಿ ಹೇಳದ ಕಾರಣ, ಈ ಬಗೆಯ ವಿಚಾರದಿಂದ ಏನು ಪ್ರಯೋಜನ? ಎಂಬ ಪ್ರಶ್ನೆಗೂ 'ಪ್ರಯೋಜನಂ ತು' ಎಂಬ ವಾಕ್ಯವು ಹೊರಟಿದೆ.

**प्रकाशः – भाष्य एव प्रयोजनोक्तिरस्तीत्याह – देवानामिति ॥**

**ननु टीकायामेतदन्यथाव्याख्यातमित्यतस्स्वयमर्थान्तरमाह – तस्येति ॥**

ಈ ಅಧಿಕರಣದ ಪ್ರಯೋಜನವನ್ನು ಭಾಷ್ಯದಲ್ಲಿಯೇ ಹೇಳಿರುತ್ತಾರೆಂದು 'ದೇವಾನಾಮ್' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಟೀಕೆಯಲ್ಲಿ 'ದೇವಾನಾಮ್' ಇತ್ಯಾದಿ ಭಾಷ್ಯದ ಮಾತನ್ನು ಬೇರೆ ರೀತಿಯಲ್ಲಿಯೇ ವ್ಯಾಖ್ಯಾನ ಮಾಡಿದ್ದಾರಲ್ಲವೇ? ಎಂದರೆ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಗ್ರಂಥಕಾರರು 'ತಸ್ಯ' ಎಂಬ ವಾಕ್ಯದಿಂದ ಮಾಡುತ್ತಿದ್ದಾರೆ.

**प्रकाशः – अनेकार्थत्वाद्भाष्यस्य । ''भाष्यं चात्यर्थविस्तरम्'' इत्युक्तेरिति भावः ॥ उक्तमिति ॥ देवताधिकरण इत्यर्थः ।**

'ಭಾಷ್ಯಂ ಚಾತ್ಯರ್ಥವಿಸ್ತರಮ್' ಎಂಬ ಮಾತಿನಂತೆ ಭಾಷ್ಯದ ಒಂದೇ ಮಾತಿಗೆ ಅನೇಕ ಅರ್ಥಗಳಿರುತ್ತವೆ. ಆದ್ದರಿಂದ ಟೀಕೆಯಲ್ಲಿ ಹೇಳಿದ ಅರ್ಥವನ್ನೂ ಸ್ವೀಕರಿಸಬೇಕು. ಗ್ರಂಥಕಾರರು ಹೇಳಿದ ಅರ್ಥವನ್ನೂ ಕೂಡ ಸ್ವೀಕರಿಸಬೇಕು. 'ಉಕ್ತಮ್' ಎಂದರೆ ದೇವತಾಧಿಕರಣದಲ್ಲಿ ಈ ಅಧಿಕರಣದ ಪ್ರಯೋಜನವನ್ನು ಹೇಳಿದ್ದಾರೆಂದರ್ಥ.

## ಬ್ರಾಹ್ಮಣಾಧಿಕರಣ (೧-೩-೧೪)




ಬ್ರಾಹ್ಮಣಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ 'ಬ್ರಾಹ್ಮಣ' ಎಂಬ ನಾಮಾತ್ಮಕಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ವಾಸ್ತವಿಕವಾಗಿ 'ಬ್ರಾಹ್ಮಣ' ಶಬ್ದವು ಬ್ರಾಹ್ಮಣ ವರ್ಗದಲ್ಲಿ ಎಲ್ಲರೂ ವ್ಯವಹರಿಸುತ್ತಾರೆ. ಆದ್ದರಿಂದ ಪ್ರಥಮಪಾದದಲ್ಲಿ ಇದರ ಸಮನ್ವಯವು ಪ್ರಸಕ್ತವಾಗುತ್ತದೆಂದೆನಿಸುತ್ತದೆ. ಆದರೆ ಶ್ರುತಿಯು ಅಜಶಬ್ದದ ಜೊತೆಗೆ ಬ್ರಾಹ್ಮಣಶಬ್ದವನ್ನು ಪ್ರಯೋಗಿಸಿದೆ. ಹಾಗಾಗಿ ಚತುರ್ಮುಖಬ್ರಹ್ಮದೇವನನ್ನು ಬ್ರಾಹ್ಮಣಶಬ್ದವು ಪ್ರತಿಪಾದನೆ ಮಾಡುತ್ತಿದೆಯೆಂದು ಇಲ್ಲಿ ವಿವಕ್ಷಿಸುತ್ತಿದ್ದಾರೆ. ಹಾಗಾದರೆ ಅದೇ ಶ್ರುತಿಯಲ್ಲೇ ನಿತ್ಯಮಹಿಮತ್ವವೆಂಬ ವಿಷ್ಣುವಿನ ಲಿಂಗವಿರುವುದರಿಂದ ಬ್ರಾಹ್ಮಣಶಬ್ದವು ವಿಷ್ಣುವನ್ನು ಪ್ರತಿಪಾದನೆ ಮಾಡಬಹುದಲ್ಲವೇ? ಎಂಬ ಗೊಂದಲವುಂಟಾಗುತ್ತದೆ. ಹೀಗೆ ಒಂದೇ ಬ್ರಾಹ್ಮಣಶಬ್ದವು ಚತುರ್ಮುಖ ಬ್ರಹ್ಮನಲ್ಲಿ ಮತ್ತು ವಿಷ್ಣುವಿನಲ್ಲಿ ಪ್ರಯೋಗಸಾಧಾರಣ್ಯವನ್ನು ಹೊಂದಿರುವ ಕಾರಣ ಉಭಯಪ್ರಸಿದ್ಧವೆನಿಸುತ್ತದೆಂದು ವಿವಕ್ಷಿಸಿ, ಮೂರನೆಯ ಈ ಪಾದದಲ್ಲಿ ಸಮನ್ವಯ ಮಾಡಲು ಹೊರಟಿದ್ದಾರೆ.

ಹಿಂದಿನ ಅಧಿಕರಣದಲ್ಲಿ ಬ್ರಹ್ಮನನ್ನು ಅಸಂಗನೆಂದು ಸಮರ್ಥಿಸಲಾಯಿತು. ಆದರೆ 'ಅಸಂಗೋ ನಹಿ ಸಜ್ಯತೇ' ಎಂಬಲ್ಲಿ ಮತ್ತೊಬ್ಬ ಪುರುಷನು ಅಸಂಗನೆಂದು ಹೇಳಿದಂತಿದೆ. ಇವನು ಬೇರೆಯವನಾದಲ್ಲಿ, 'ಅಸಂಗೋ ಹ್ಯಯಂ ಪುರುಷಂ' ಎಂಬಲ್ಲಿ ಹೇಳಲ್ಪಟ್ಟ ಅಸಂಗನೂ ಕೂಡ ಬೇರೆಯವನೇ ಆಗುತ್ತಾನೆಂದು ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪಮಾಡಿದ ಅನಂತರವೇ ಈ ಅಧಿಕರಣವು ಹೊರಟಿದೆ.

ಜಿಜ್ಞಾಸಾಧಿಕರಣದಿಂದ ಪ್ರಾರಂಭ ಮಾಡಿ, ಹಿಂದಿನ ಸುಷುಪ್ತ್ಯಧಿಕರಣದ ತನಕ, ಪ್ರತಿಯೊಂದು ಅಧಿಕರಣಗಳಲ್ಲಿಯೂ ಪರಮಾತ್ಮನ ಮಹಿಮೆಯು ನಿತ್ಯನೂತವಾಗಿದೆಯೆಂದು ಸಮರ್ಥಿಸಲಾಯಿತು. 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿ ಅಂತಹ ಪರಮಾತ್ಮನ ಮಹಿಮೆಯೇ ನಿತ್ಯವಾಗಿದೆಯೆಂದು ಹೇಳಲಾಗಿದೆ. ಒಂದು ವೇಳೆ 'ಏಷ ನಿತ್ಯೋ ಮಹಿಮಾ' ಎಂಬ ಶ್ರುತಿಯು ಬೇರೆಯವರ ಮಹಿಮೆಯನ್ನು ನಿತ್ಯವೆಂದು ಹೇಳಿದರೆ, ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಸಮರ್ಥಿಸಲ್ಪಟ್ಟ ವಿಷ್ಣುವಿನ ಮಹಿಮೆಗೆ ನಿತ್ಯತ್ವವು ಸಿದ್ಧವಾಗುವುದಿಲ್ಲ. ಅದಕ್ಕೋಸ್ಕರ ಈ ಅಧಿಕರಣವು 'ಏಷ ನಿತ್ಯೋ ಮಹಿಮಾ' ಎಂಬ ಶ್ರುತಿಯಿಂದಲೂ ಕೂಡ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲು ಹೊರಟಿದೆ.




## तात्पर्यचन्द्रिका

**अत्र ''एष नित्यो महिमा ब्राह्मणस्य'' इति श्रुतो ब्राह्मणशब्दः किं विरिञ्चपरः किं वा ब्रह्मपर इति चिन्ता ।**

ಅನುವಾದ - ಈ ಅಧಿಕರಣದಲ್ಲಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬುದು ವಿಷಯವಾಕ್ಯವಾಗಿದೆ. ಇಲ್ಲಿರುವ ಬ್ರಾಹ್ಮಣಶಬ್ದವು ಚತುರ್ಮುಖಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತದೆಯೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತದೆಯೋ? ಎಂಬುದು ಪ್ರಧಾನ ಸಂಶಯ.

**तदर्थं स किं रूढः किं वा यौगिक इति ।**

ಪ್ರಧಾನ ಸಂಶಯವು ಪರಿಹಾರವಾಗಬೇಕೆಂದರೆ ಬ್ರಾಹ್ಮಣಶಬ್ದವು ರೂಢವೋ, ಅಥವಾ ಯೌಗಿಕವೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किं रूढेर्बाधकं नास्त्युतास्तीति ।**

ಎರಡನೆಯ ಸಂಶಯವು ಪರಿಹಾರವಾಗಬೇಕೆಂದರೆ ಬ್ರಾಹ್ಮಣಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿಲ್ಲವೋ? ಅಥವಾ ಇದೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं सर्वाधिपतित्वादिकं किं चतुर्मुखे ब्रह्माभेदाभिप्रायेण नेतुं शक्यमुताशक्यमिति ।।**

ಮೂರನೆಯ ಸಂಶಯವು ಪರಿಹಾರವಾಗಬೇಕೆಂದರೆ ಸರ್ವಾಧಿಪತಿತ್ವ ಮೊದಲಾದವುಗಳು ಚತುರ್ಮುಖನಲ್ಲಿ ಪರಬ್ರಹ್ಮನ ಅಭೇದಾಭಿಪ್ರಾಯದಿಂದ ಬರುತ್ತದೋ, ಅಥವಾ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

विषयसंशयटीकां व्यनक्ति ।। अत्रेति ।।

ವಿವರಣೆ - ಅಧಿಕರಣದ ವಿಷಯವಾಕ್ಯವನ್ನು ಸಂಶಯ ಕೋಟಿಗಳನ್ನು ವಿವರಿಸುವ ಟೀಕಾವಾಕ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ.

**प्रकाशः** – वाजसनेये ''जनको ह वैदेह आसांचक्र'' इति षष्ठेऽध्याये चतुर्थे ब्राह्मणे ''स वा एष महानज आत्मा योऽयं विज्ञानमयः प्राणेषु य एषोंऽतर्हृदय आकाशस्तस्मिन् शेते सर्वस्य वशी सर्वस्येशानस्सर्वस्याधिपतिस्स न साधुना कर्मणा भूयान्नो एवासाधुना कनीयानेष सर्वेश्वर एष भूताधिपतिरेष भूतपाल एष सेतुर्विधरण एषां लोकानामसम्भेदाय स एष नेति नेत्यात्माऽगृह्यो नहि गृह्यतेऽशीर्यो नहि शीर्यतेऽसङ्गो नहि सज्यतेऽसितो न व्यथते न रिष्यति'' इत्याद्युपक्रम्य श्रूयते ''तदेतदृचाभ्युक्तम् । एष नित्योमहिमा ब्राह्मणस्य न कर्मणा वर्धते नो कनीयान् । तस्यैव स्यात्पदवित्तं विदित्वा न लिप्यते कर्मणा पापकेनेति ।। तस्मादेवंविच्छान्तो दान्त उपरतस्तितिक्षुस्समाहितो भूत्वाऽऽत्मन्येवात्मानं पश्यति । नैनं पाप्मा तरति सर्वं पाप्मानं तरति नैनं पाप्मा तपति सर्वं पाप्मानं तपति विपापो विजरो विजिघित्सो ब्राह्मणो भवति एष ब्रह्मलोकस्सम्राडिति होवाच याज्ञवल्क्यस्सोहं भगवो विदेहान् ददामिमां च सहदास्यायेति । स वा एष महानज आत्माऽन्नादो वसुदानो विन्दते वसु य एवं वेद । स वा एष महानज आत्माऽजरोऽमरोऽमृतोऽभयो ब्रह्माभयं हवै ब्रह्म भवति य एवं वेद'' इति ।

ಬೃಹದಾರಣ್ಯಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಬರುವ ಪ್ರಕರಣ ಹೀಗಿದೆ -

'ಸ ವಾ ಏಷ ಮಹಾನಜಂ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ । ಸರ್ವಸ್ಯ ವಶೀ, ಸರ್ವಸ್ಯೇಶಾನಃ, ಸರ್ವಸ್ಯಾಧಿಪತಿಃ ಸಃ । ನ ಸಾಧುನಾ ಕರ್ಮಣಾ ಭೂಯಾನ್ । ನೋ ಏವಾಸಾಧುನಾ ಕನೀಯಾನ್ । ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ । ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾನಾಶಕೇನ । ಏತಮೇವ ವಿದಿತ್ವಾಮುನಿರ್ಭವತಿ ।

ಈ ಹಿಂದೆ ಉಪನಿಷತ್ತಿನಲ್ಲಿ ಮಹಾನ್, ಅಜ, ಆತ್ಮಾ ಎಂದು ವರ್ಣಿಸಲ್ಪಟ್ಟಿರುವನು ಚತುರ್ಮುಖನಲ್ಲ. ಶ್ರೀಹರಿಯೇ. ಅಂದರೆ ಸರ್ವಜ್ಞನೂ ಇಂದ್ರಿಯಗಳಲ್ಲಿ ನಿಯಾಮಕನೂ ಆಗಿದ್ದು ಹೃದಯದೊಳಗಿನ ಆಕಾಶದಲ್ಲಿರುವ ಪರಮಾತ್ಮನೆ. ಅವನ ಜ್ಞಾನವೇ ಮೋಕ್ಷಸಾಧನ. ಅಧ್ಯಯನಾದಿ ಕರ್ಮವು ಜ್ಞಾನಸಾಧನ ಮಾತ್ರ. ಆದ್ದರಿಂದ ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವವ ಶ್ರೀಹರಿ ಬ್ರಹ್ಮರುದ್ರಾದಿಗಳೆಲ್ಲರಿಗೂ ಚೇಷ್ಟಕ. ಎಲ್ಲರಿಗಿಂತ ಗುಣಾಧಿಕ. ಪುಣ್ಯಕರ್ಮಗಳಿಂದ ಸುಖಪೂರ್ಣನಾಗುವುದಿಲ್ಲ. ಪಾಪಕರ್ಮಗಳಿಂದ ಸುಖರಹಿತನೂ ಆಗುವುದಿಲ್ಲ. ಎಲ್ಲರ ಒಡೆಯ. ಇವನು ಅನಾದಿಕಾಲದಿಂದಲೂ ಒಡೆಯನಾಗಿಯೇ

ಇದ್ದಾನೆ. ಅನಾದಿಯಿಂದಲೂ ಪಾಲಕ. ಈ ಲೋಕಗಳನ್ನು ಒಂದರಲ್ಲೊಂದು ಕಲಸಿ ಹೋಗದಂತೆ ವ್ಯವಸ್ಥಿತವಾಗಿ ಇಟ್ಟಿರುವವನು ಎಂದು ಶ್ರೀಹರಿಯನ್ನು ಬ್ರಹ್ಮಜ್ಞಾನ ಯೋಗ್ಯರು ವೇದಾಧ್ಯಯನದಿಂದ, ಯಜ್ಞದಿಂದ, ದಾನದಿಂದ ತಪಸ್ಸಿನಿಂದ, ಉಪವಾಸದಿಂದ ತಿಳಿಯಲು ಇಚ್ಛಿಸುತ್ತಾರೆ. ಇವನನ್ನು ತಿಳಿದೇ ಜ್ಞಾನಸ್ವರೂಪರಾಗುತ್ತಾರೆ. ಅಂದರೆ ಮುಕ್ತರಾಗುತ್ತಾರೆ.

'ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜತಿ । ಏತದ್ಧಸ್ಮ ವೈ ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯಂತೇ । ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಯಂ ಲೋಕ ಇತಿ । ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ । ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ । ಯಾ ವಿತ್ತೈಷಣಾ ಸಾ ಲೋಕೈಷಣಾ । ಉಭೇಹ್ಯೇತೇ ಏಷಣೇ ಏವ ಭವತಃ । ಸ ಏಷ ನೇತಿ । ನೇತಿ । ಆತ್ಮಾಽಗೃಹ್ಯೋ ನಹಿ ಗೃಹ್ಯತೇ । ಅಶೀರ್ಯೋ ನಹಿ ಶೀರ್ಯತೇ । ಅಸಂಗೋ ನಹಿ ಸಜ್ಜತೇ । ಅಸಿತೋ ನ ವ್ಯಥತೇ । ನ ರಿಷ್ಯತಿ ।'

ಈ ಭಗವಂತನನ್ನೇ ಆಶ್ರಯಿಸಲು ಬಯಸುವ ಸಂನ್ಯಾಸ ಯೋಗ್ಯರು ಸನ್ಯಾಸಿಗಳಾಗುತ್ತಾರೆ. ಭಗವಂತನೇ ಎಲ್ಲರಿಗೂ ಆಶ್ರಯ ಎಂಬ ಪ್ರಮೇಯವನ್ನು ತಿಳಿದ ಪ್ರಾಚೀನರು ನಿಷಿದ್ಧ ವಸ್ತುಗಳನ್ನು ಕಾಮಿಸಲಿಲ್ಲ. ಏಕೆಂದರೆ ನಮಗೆ ಶ್ರೀಹರಿಯೇ ಒಡೆಯನೂ ಆಶ್ರಯನೂ ಆಗಿರುವಾಗ ನಿಷಿದ್ಧ ಪದಾರ್ಥಗಳಿಂದ ನಾವು ಏನು ಸಾಧಿಸಬೇಕು ? ಎಂದು ಭಾವಿಸಿದರು. ಅವರು ಪುತ್ರೈಷಣ, ವಿತ್ತೈಷಣ ಮತ್ತು ಲೋಕೈಷಣಗಳನ್ನು ಮೀರಿ ಮುಕ್ತರಾಗಿ ಪರಮಾತ್ಮನಿಂದ ಅತ್ಯಲ್ಪ ಆನಂದವನ್ನು ಬೇಡುತ್ತಾರೆ. ಯಾವುದು ಪುತ್ರೈಷಣವೋ ಅದೇ ವಿತ್ತೈಷಣಾ. ಯಾವುದು ವಿತ್ತೈಷಣವೋ ಅದೇ ಲೋಕೈಷಣಾ. ಇವೆರಡು ಏಷಣಗಳು ದುಃಖಹೇತುಗಳೇ. ಅಂತಹ ಈ ಶ್ರೀಹರಿಯು ಶ್ರೀದೇವಿಯಂತೆಯೂ ಅಲ್ಲ. ಬ್ರಹ್ಮಾದಿಗಳಂತೆಯೂ ಅಲ್ಲ. ಏಕೆಂದರೆ ಶ್ರೀಹರಿಯು ಸಂಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಅವನು ಸಂಪೂರ್ಣವಾಗಿ ತಿಳಿಯಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಕಾಲದಿಂದ ಅಥವಾ ಬೇರೆ ಕಾರಣಗಳಿಂದ ಹಿಂಸೆಯಿಲ್ಲದವನು. ಏಕೆಂದರೆ ಹಿಂಸಿಸಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಪ್ರಪಂಚದ ಜೊತೆ ಸಂಬಂಧ ಹೊಂದಿದ್ದರೂ ಪ್ರಪಂಚದ ದೋಷಗಳ ಲೇಪವಿಲ್ಲದವನು. ಏಕೆಂದರೆ ದೋಷಲೇಪವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಬಂಧವಿಲ್ಲದವನು ಏಕೆಂದರೆ ಬಂಧವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ ಅವನು ನಾಶವಿಲ್ಲದವನು.

'ಏತಮು ಹ ಏವ ಏತೇ ನ ತರತಃ ಇತಿ । ಅತಃ ಪಾಪಮಕರವಮಿತಿ । ಅತಃ ಕಲ್ಯಾಣಮಕರವಮಿತಿ । ಉಭೇ ಉ ಹೈವೈಷ ಏತೇ ತರತಿ । ನೈನಂ ಕೃತಾಕೃತೇ ತಪತಃ ।'

ನಾನು ಪಾಪ ಮಾಡಿದೆನು ಪುಣ್ಯ ಮಾಡಿದೆನೆಂಬ ಭಾವನೆಗಳು ಹರಿಗೆ ಮಾತ್ರವೆ ಇಲ್ಲ, ಹರಿಪ್ರೇರಣೆಯಿಂದಲೇ ಪಾಪವನ್ನು ಮಾಡಿದೆನು. ಪುಣ್ಯವನ್ನು ಮಾಡಿದೆನು ಎಂಬ ಭಾವನೆಗಳು ಜೀವರಿಗೆ ಉಂಟಾಗುವುವು. ಶ್ರೀಹರಿಯು ಪುಣ್ಯ ಪಾಪಕರ್ಮಗಳನ್ನು ಮೀರಿದ್ದಾನೆ. ಆದ್ದರಿಂದ ಪುಣ್ಯ ಪಾಪಗಳು ಇವನಿಗೆ ಎಂದೂ ತಾಪವನ್ನುಂಟು ಮಾಡುವುದಿಲ್ಲ.

ಬ್ರಾಹ್ಮಣಾಧಿಕರಣ (೧-೩-೧೪)

'ತದೇತದೃಚಾಭ್ಯುಕ್ತಂ
ಏಷ ನಿತ್ಯೋಮಹಿಮಾ ಬ್ರಾಹ್ಮಣಸ್ಯ
ನ ಕರ್ಮಣಾವರ್ಧತೇ ನೋ ಕನೀಯಾನ್ ।
ತಸ್ಯೈವ ಸ್ಯಾತ್ ಪದವಿತ್ ತಂ ವಿದಿತ್ವಾ
ನ ಲಿಪ್ಯತೇ ಕರ್ಮಣಾ ಪಾಪಕೇನ । ಇತಿ ।'

ಈ ಪ್ರಮೇಯವು ಈ ಋಚೆಯಲ್ಲಿಯೂ ಉಕ್ತವಾಗಿದೆ - ವೇದವೇದ್ಯನಾದ ವಿಷ್ಣುವಿನ ಈ ಮಹಿಮೆ ನಿತ್ಯಂ ಏಕೆಂದರೆ ಅವನ ಸುಖಜ್ಞಾನಾದಿಗಳು ಕರ್ಮದಿಂದ ಹೆಚ್ಚುವುದಿಲ್ಲ, ಕಡಿಮೆಯೂ ಆಗುವುದಿಲ್ಲ. ಅಂತಹ ವಿಷ್ಣುವಿನ ಸ್ವರೂಪವನ್ನು ತಿಳಿಯಬೇಕು. ಅವನನ್ನು ತಿಳಿದವನು ಪಾಪಕರ್ಮದ ಲೇಪವನ್ನು ಹೊಂದುವುದಿಲ್ಲ.

'ತಸ್ಮಾದೇವಂವಿತ್ ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯತಿ । ಸರ್ವಮಾತ್ಮಾನಂ ಪಶ್ಯತಿ । ನೈನಂ ಪಾಪ್ಮಾತರತಿ । ಸರ್ವಂ ಪಾಪ್ಮಾನಂ ತರತಿ । ನೈನಂ ಪಾಪ್ಮಾತಪತಿ । ಸರ್ವಂ ಪಾಪ್ಮಾನಂ ತಪತಿ । ವಿಪಾಪೋ ವಿರಜೋಽವಿಚಿಕಿತ್ಸೋ ಬ್ರಾಹ್ಮಣೋ ಭವತ್ಯೇಷ ಬ್ರಹ್ಮಲೋಕಃ ಸಾಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ । ಸೋಽಹಂ ಭಗವತೇ ವಿದೇಹಾನ್ ದದಾಮಿ ಮಾಂ ಚಾಪಿ ಸಹ ದಾಸ್ಯಾಯ ಇತಿ ।'

ಬ್ರಹ್ಮಜ್ಞಾನವು ಮುಕ್ತಿಸಾಧನವಾದುದರಿಂದ ಇದನ್ನು ತಿಳಿದವನು ಭಗವನ್ನಿಷ್ಠನೂ ಇಂದ್ರಿಯ ನಿಗ್ರಹವುಳ್ಳವನೂ, ಹೃದಯದಲ್ಲಿರುವ ವಿಷ್ಣುವಿನ ಬಗ್ಗೆ ಚಿಂತನೆಯಿಂದಲೇ ಸಂತೋಷಪಡುವವನೂ, ದ್ವಂದ್ವ ಸಹಿಷ್ಣುವೂ, ಯಥಾರ್ಥಜ್ಞಾನಿಯೂ ಆಗಿ ತನ್ನಲ್ಲಿಯೇ ಇರುವ ವಿಷ್ಣುವನ್ನು ತಿಳಿಯುತ್ತಾನೆ, ತಿಳಿಯಬೇಕು. ತನ್ನಲ್ಲಿರುವ ವಿಷ್ಣುವನ್ನು ಪೂರ್ಣನೆಂದು ತಿಳಿಯುತ್ತಾನೆ, ತಿಳಿಯಬೇಕು. ಹೀಗೆ ತಿಳಿದವನನ್ನು ಪಾಪವು ಆಕ್ರಮಿಸುವುದಿಲ್ಲ. ಇವನೇ ಸಕಲ ಪಾಪಗಳನ್ನೂ ದಾಟುತ್ತಾನೆ. ಅಂದರೆ ಇವನನ್ನು ಪಾಪವು ಸುಡುವುದಿಲ್ಲ. ಇವನೇ ಪಾಪವನ್ನು ಸುಡುತ್ತಾನೆ. ಬ್ರಹ್ಮಜ್ಞಾನಿಯು ಪಾಪರಹಿತನೂ ರಜಸ್ ಮೊದಲಾದ ಪ್ರಾಕೃತ ದೋಷವಿಲ್ಲದವನೂ ಸಂಶಯರಹಿತನೂ ಆಗುತ್ತಾನೆ. ಏಕೆಂದರೆ ರಾಜನೇ ! ಪೂರ್ಣಜ್ಞಾನಸ್ವರೂಪನಾದ ಈ ಹರಿಯು ಪಾಪರಹಿತನೂ ರಜಸ್ ಮೊದಲಾದ ಪ್ರಾಕೃತಗುಣರಹಿತನೂ, ಸಂಶಯರಹಿತನೂ, ವೇದಗಮ್ಯನೂ ಆಗಿದ್ದಾನೆ ಎಂದು ಯಾಜ್ಞವಲ್ಕ್ಯರು ಹೇಳಿದರು. ಪೂಜ್ಯರಾದ ನಿಮಗೆ ನಾನು ಇಡೀ ವಿದೇಹದೇಶವನ್ನು ಮತ್ತು ನನ್ನನ್ನೂ ಗುರುದಕ್ಷಿಣೆಯಾಗಿ ಕೊಡುತ್ತೇನೆ ಎಂದು ರಾಜನು ಹೇಳಿದನು.

'ಸ ವಾ ಏಷ ಮಹಾನಜ ಆತ್ಮಾನ್ನಾದೋ ವಸುದಾನಃ । ವಿಂದತೇ ವಸು ಯ ಏವಂ ವೇದ ।'

ಮಹಾನ್, ಅಜ, ಆತ್ಮಾ ಎಂದು ಪ್ರಸಿದ್ಧನಾದ ಈ ಹರಿಯೇ ಸಕಲ ಪ್ರಪಂಚವನ್ನೂ ಲಯಕಾಲದಲ್ಲಿ ಸಂಹರಿಸುವವನು, ಜ್ಞಾನಿಗೆ, ದೈವ, ಮಾನುಷ ಸಂಪತ್ತುಗಳನ್ನೂ ಕೊಡುವವನು. ಹೀಗೆ ತಿಳಿದ ಉಪಾಸಕನು ದೈವ ಮಾನುಷ ಸಂಪತ್ತುಗಳನ್ನು ಹೊಂದುತ್ತಾನೆ.

ಪರಿಪೂರ್ಣಚಂದ್ರಿಕಾ

'ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ। ಅಭಯಂ ವೈ ಬ್ರಹ್ಮ ಅಭಯಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ।'

ಮಹಾನ್ ಅಜ, ಆತ್ಮಾ ಎಂದು ಪ್ರಸಿದ್ಧನಾದ ಇವನು ಮುಪ್ಪಿಲ್ಲದವನು, ಭೂತಕಾಲದಲ್ಲಿ ಮರಣರಹಿತ, ಭವಿಷ್ಯತ್ ಕಾಲದಲ್ಲಿಯೂ ಮರಣರಹಿತ. ಭಯ ರಹಿತ, ಆಪ್ತಕಾಮ. ಈ ವಿಷಯ 'ತದೇತದಮೃತಮಭಯಂ ಏತತ್ ಬ್ರಹ್ಮ' ಎಂಬ ಶ್ರುತಿಪ್ರಸಿದ್ಧವಾದುದು. ಹೀಗೆ ತಿಳಿದವನು ಭಯರಹಿತನೂ, ಆಪ್ತಕಾಮನೂ ಆಗುತ್ತಾನೆ.

**प्रकाशः** – तत्रत्यो ब्राह्मणशब्दो विषय इत्यर्थः ।। **रूढ इति** ।। जातिवाचीत्यर्थः।। उताशक्यमिति ।। यदि त्वाद्यस्तदा रूढौ बाधकाभावाच्चतुर्मुख एव । द्वितीये बाधकाद्रूढित्यागेन योगाद्विष्णुरेवेति स्पष्टः फलफलिभाव इति भावः ।

ಈ ವಾಕ್ಯದಲ್ಲಿರುವ ಬ್ರಾಹ್ಮಣಶಬ್ದವೇ ಈ ಅಧಿಕರಣದ ವಿಷಯವಾಗಿದೆ. 'ರೂಢಃ' ಎಂದರೆ ಬ್ರಾಹ್ಮಣಜಾತಿಯನ್ನು ಹೇಳುವ ಎಂದರ್ಥ. 'ಉತಾಶಕ್ಯಮ್' ಎಂಬುದರ ಅನಂತರ ಪೂರ್ವಪಕ್ಷದ ಹಾಗೂ ಸಿದ್ಧಾಂತದ ಫಲಫಲಿಭಾವವನ್ನು ಹೀಗೆ ತಿಳಿಯಬೇಕು. ಒಂದು ವೇಳೆ ಸಂಶಯಕೋಟಿಗಳಲ್ಲಿ ಮೊದಲನೆಯ ಕೋಟಿಗಳು ಸಮರ್ಥಿತವಾದಲ್ಲಿ, ರೂಢಿಗೆ ಬಾಧಕವಿಲ್ಲದ ಕಾರಣ, ಚತುರ್ಮುಖನೇ ಬ್ರಾಹ್ಮಣಶಬ್ದ ಪ್ರತಿಪಾದ್ಯನಾಗುತ್ತಾನೆ. ಎರಡನೆಯ ಸಂಶಯಕೋಟಿಗಳನ್ನು ವಿವಕ್ಷಿಸಿದಾಗ, ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿರುವ ಕಾರಣ, ಯೌಗಿಕಾರ್ಥವನ್ನೇ ಸ್ವೀಕರಿಸಬೇಕು. ಆವಾಗ ಬ್ರಾಹ್ಮಣಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಫಲ.

**प्रकाशः** – नन्वत्र यद्वेत्याद्यग्रिमग्रन्थे टीकायां च वर्णादिहीने हरावनवकाशेन विप्रत्वजातौ निरूढेन ब्राह्मणशब्देन सहपठिततयाऽजशब्दस्य विरिञ्चिपरत्ववर्णनाद्धरौ विरिञ्चेचाजायमानत्वाकारवाच्यविष्णुजत्वरूपयोगाभ्यां ''तस्मादहमजस्स्मृत'' इति स्मृत्या ''अज आत्मा महान्ध्रुव'' इत्यादिनाच रूढ्यापि साधारणस्याजशब्दस्यैव चिन्ताधर्मित्वमुचितमिति चेत् ।

ಪೂರ್ವಪಕ್ಷ ಮಾಡುವಾಗ 'ಯದ್ವಾ' ಇತ್ಯಾದಿ ಗ್ರಂಥವನ್ನು ನೋಡಿದಾಗ ಅಜಶಬ್ದವೇ ಅಧಿಕರಣದ ವಿಷಯವೆಂದೆನಿಸುತ್ತದೆ. ಮತ್ತು ಟೀಕೆಯಲ್ಲಿಯೂ ಬ್ರಾಹ್ಮಣಶಬ್ದವು ಶ್ರೀಹರಿಯಲ್ಲಿ ಬರುವುದಿಲ್ಲವಾದ್ದರಿಂದ ವಿಪ್ರತ್ವಜಾತಿಯುಳ್ಳವರಲ್ಲಿ, ರೂಢವಾದ್ದರಿಂದಲೂ ಅದರ ಜೊತೆಗೆ ಪಠಿತವಾದ ಅಜಶಬ್ದಕ್ಕೆ ಚತುರ್ಮುಖಪರತ್ವವನ್ನು ವರ್ಣಿಸಲಾಗಿದೆ. ಇದರಿಂದಲೂ ಅಜಶಬ್ದವೇ ವಿಷಯವೆಂದು ತಿಳಿಯುತ್ತದೆ. ಇಂತಹ ಅಜಶಬ್ದವನ್ನು 'ಆತ್ ಜಾಯತೇ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಿದಾಗ, ಚತುರ್ಮುಖನಲ್ಲಿ 'ನ ಜಾಯತಿ ಇತಿ ಅಜಃ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಿದಾಗ ವಿಷ್ಣುವಿನಲ್ಲಿ ಪ್ರಸಿದ್ಧವಾಗುತ್ತದೆ. ಮತ್ತು 'ತಸ್ಮಾದಹಮಜಃಸ್ಮೃತ' ಎಂಬ ಸ್ಮೃತಿಯಂತೆ 'ಅಜ ಆತ್ಮಾ ಮಹಾನ್‌ಧ್ರುವಃ' ಇತ್ಯಾದಿ ವಾಕ್ಯದಂತೆ

ರೂಢಿಯಿಂದಲೂ ಕೂಡ ಚತುರ್ಮುಖ ಹಾಗೂ ಬ್ರಹ್ಮರಲ್ಲಿ ಅಜಶಬ್ದವು ಸಾಧಾರಣವಾಗಿದೆ. ಹೀಗೆ ಬ್ರಾಹ್ಮಣಶಬ್ದದ ಜೊತೆಗೆ ಪಠಿತವಾದ ಅಜಶಬ್ದವನ್ನೇ ಈ ಅಧಿಕರಣದ ವಿಷಯವೆಂದೇಕೆ ಪರಿಗಣಿಸಿಲ್ಲ?

**प्रकाशः –** मैवम् । भाष्ये ''स च ब्राह्मणस्सवा एषमहानज आत्मेत्यजशब्दाद्विरिञ्चः'' इत्युक्तयाऽजशब्दादेव पूर्वपक्षप्राप्त्युक्तेः । तत्र चाजशब्दो विष्णौ यौगिक एव । नतु चतुर्मुख इव योगरूढ इत्युपेत्याजशब्दे विरिञ्चप्रापकत्वस्याग्रे प्रतिपादनात्तदनुरोधेन ब्राह्मणशब्द एव धर्मीकृतः ।

ಇದು ತಪ್ಪು. ಏಕೆಂದರೆ ಭಾಷ್ಯದಲ್ಲಿ 'ಸ ಚ ಬ್ರಾಹ್ಮಣಃ ಸವಾ ಏಷ ಮಹಾನಜ ಆತ್ಮೇತ್ಯಜಶಬ್ದಾತ್ ವಿರಿಂಚಃ' ಎಂದು ಹೇಳಿದ್ದಾರೆ. ಅಂದರೆ ಅಜಶಬ್ದದ ಆಧಾರದಿಂದ ಬ್ರಾಹ್ಮಣ ಶಬ್ದವು ವಿರಿಂಚಪರವಾಗಿದೆಯೆಂದು ಪೂರ್ವಪಕ್ಷ ಮಾಡುತ್ತಿದ್ದಾರೆ. ಇಲ್ಲಿರುವ ಅಜಶಬ್ದವು ವಿಷ್ಣುವಿನಲ್ಲಿ ಯೌಗಿಕವೇ ಆಗಿದೆ ಹೊರತು, ಚತುರ್ಮುಖನಲ್ಲಿ ಯೋಗ ಹಾಗೂ ರೂಢಿಗಳಿರುವಂತೆ ಅಲ್ಲ. ಈ ಅಜಶಬ್ದವು ಕೇವಲ ಚತುರ್ಮುಖಪರವೇ ಆಗಿದೆಯೆಂದು ಮುಂದೆ ಪ್ರತಿಪಾದನೆ ಮಾಡುವ ಕಾರಣ, ಇದನ್ನು ಸಂಶಯಧರ್ಮಿಯೆಂದು ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಬ್ರಾಹ್ಮಣಶಬ್ದವನ್ನೇ ಸಂಶಯಧರ್ಮಿಯನ್ನಾಗಿ ಸ್ವೀಕರಿಸಿದ್ದಾರೆ.

**प्रकाशः –** नन्वेवं ब्रह्मपर इति चिन्तानन्तरं तदर्थं तत्सहपठितोऽजशब्दः किं चतुर्मुखपरोऽथ ब्रह्मपर इति चिन्ता कार्येति च,

ಪ್ರಶ್ನೆ - ಗ್ರಂಥದಲ್ಲಿ 'ಬ್ರಹ್ಮಪರಃ' ಎಂಬ ಸಂಶಯದ ಅನಂತರ 'ತದರ್ಥಂ ತತ್ ಸಹಪಠಿತೋಽಜಶಬ್ದಃ ಕಿಂ ಚತುರ್ಮುಖಪರೋಽಥ ಬ್ರಹ್ಮಪರಃ' ಅದಕ್ಕಾಗಿ ಬ್ರಾಹ್ಮಣಶಬ್ದದ ಜೊತೆಗೆ ಪಠಿತವಾದ ಅಜಶಬ್ದವು ಚತುರ್ಮುಖಪರವೋ, ಅಥವಾ ಬ್ರಹ್ಮಪರವೋ? ಎಂಬ ಸಂಶಯವು ಪರಿಹಾರವಾಗಬೇಕು ಎಂಬ ಮತ್ತೊಂದು ಸಂಶಯವನ್ನು ತೋರಿಸಬೇಕಿತ್ತಲ್ಲವೇ?

**प्रकाशः –** इति चेन्न । ब्राह्मणशब्देनाजशब्दस्याप्युपलक्षणाद्वा श्रुतिद्वयसाहित्यस्यैव पूर्वपक्षप्रापकत्वेनाभिमतत्वस्य वक्ष्यमाणत्वाद्ब्राह्मणशब्दे चिन्तापरम्परा प्रदर्शनस्याजशब्देऽपि तुल्यत्वेनोहितुं शक्यत्वाद्वा ब्राह्मणशब्दसाहित्येनैवाजशब्दस्य विरिञ्चपरताया वक्ष्यमाणत्वेन तत्पक्षानुसाराद्वा ब्राह्मणशब्दधर्मिकैव चिन्तापरम्परोक्तेति ।

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಬ್ರಾಹ್ಮಣಶಬ್ದದಿಂದ ಅಜಶಬ್ದವನ್ನೂ ಕೂಡ ಉಪಲಕ್ಷಣಯಾ ಸ್ವೀಕರಿಸಬೇಕೆಂದು ತಿಳಿಸಲು ಪ್ರತ್ಯೇಕವಾಗಿ ಅಜಶಬ್ದ ಧರ್ಮಿಕವಾದ ಸಂಶಯವನ್ನು ತೋರಿಸಿಲ್ಲ. ಅಥವಾ ಬ್ರಾಹ್ಮಣಶ್ರುತಿ ಹಾಗೂ ಅಜಶ್ರುತಿ ಎರಡೂ ಸಹ ಒಟ್ಟಿಗೆ ಸೇರಿ ಪೂರ್ವಪಕ್ಷವನ್ನು ಉಪೋದ್ಬಲನ ಮಾಡಬೇಕಾಗಿದೆಯೆಂದು ಮುಂದೆ ತಿಳಿಸುತ್ತಾರೆ. ಆದ್ದರಿಂದ ಬ್ರಾಹ್ಮಣಶಬ್ದದಲ್ಲಿ ಯಾವ

ಸಂಶಯಪರಂಪರೆಯನ್ನು ತೋರಿಸಿದ್ದಾರೋ ಅದು ಅಜಶಬ್ದದ ವಿಷಯದಲ್ಲಿಯೂ ಸಮಾನವಾಗಿದೆಯೆಂದು ಸ್ವತಃ ಊಹಿಸಿಕೊಳ್ಳಬಹುದು. ಈ ಅಭಿಪ್ರಾಯದಿಂದಲೂ ಪ್ರತ್ಯೇಕವಾಗಿ ಅಜಶಬ್ದ ಧರ್ಮಿಕವಾದ ಸಂಶಯವನ್ನು ತೋರಿಸಿಲ್ಲ.

ಅಥವಾ ಬ್ರಾಹ್ಮಣಶಬ್ದದ ಸಾಹಿತ್ಯದಿಂದ ಅಜಶಬ್ದವೂ ಕೂಡ ವಿರಿಂಚಿಪರವಾಗುತ್ತದೆಂದು ಮುಂದೆ ಸಮರ್ಥಿಸುತ್ತಾರೆ. ಆ ಪಕ್ಷಕ್ಕನುಸಾರಿಯಾಗಿ ಬ್ರಾಹ್ಮಣಶಬ್ದವೇ ಮುಖ್ಯವೆಂದು ತಿಳಿದು, ಬ್ರಾಹ್ಮಣಶಬ್ದ ಧರ್ಮಿಕವಾದ ಸಂಶಯಪರಂಪರೆಯನ್ನೇ ಇಲ್ಲಿ ತೋರಿಸಿದ್ದಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**ग़ुरुराजीयम् – ॥ ॐ पत्यादिशब्देभ्यः ॐ ॥ उक्तरीत्येति ॥** नामलिङ्गपादन्यायसाम्येन ब्राह्मणशब्दस्य ब्रह्मण्यपि प्रसिद्धेरुक्तप्रायत्वादुभय-साधारण्यमित्युक्तरीत्येत्यर्थः ।




'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯೇ ಈ ಅಧಿಕರಣದ ವಿಷಯವಾಕ್ಯ. ನಿತ್ಯಮಹಿಮೆಯುಳ್ಳವನೆಂದು ಬ್ರಾಹ್ಮಣನನ್ನು ಶ್ರುತಿಯಲ್ಲಿ ಪ್ರಸಿದ್ಧನಾಗಿದ್ದಾನೆ. 'ಸ ವಾ ಏಷ ಮಹಾನಜ ಆತ್ಮಾ' ಎಂಬ ಮುಂದಿನ ವಾಕ್ಯದಲ್ಲಿ ಚತುರ್ಮುಖನಲ್ಲಿ ಪ್ರಸಿದ್ಧವಾದ ಅಜಶಬ್ದವಿದೆ. ಇದರ ಬಲದಿಂದ ಚತುರ್ಮುಖನೇ ಬ್ರಾಹ್ಮಣನಾಗುತ್ತಾನೆಂದು ಪೂರ್ವಪಕ್ಷ.

ಬ್ರಹ್ಮನ ಅಸಾಧಾರಣಧರ್ಮಗಳೆನಿಸಿದ ಸರ್ವಾಧಿಪತ್ಯ ಮೊದಲಾದ ಧರ್ಮಗಳನ್ನು 'ಸರ್ವಸ್ಯಾಧಿಪತಿಃ ಸರ್ವಸ್ಯೇನಾಃ' ಇತ್ಯಾದಿ ಶ್ರುತಿಯು ಸಾರುತ್ತಿದೆ. ಈ ಲಿಂಗದ ಬಲದಿಂದ ಬ್ರಾಹ್ಮಣಶಬ್ದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗುತ್ತಾನೆಂಬುದು ಸಿದ್ಧಾಂತ.



## ಚತುರ್ಮುಖಬ್ರಹ್ಮನು ಬ್ರಾಹ್ಮಣಶಬ್ದ ಪ್ರತಿಪಾದ್ಯನೆಂದು ಪೂರ್ವಪಕ್ಷ

### तात्पर्यचन्द्रिका

**।। पूर्वपक्षस्तु ।। अयं ब्राह्मणोविरिञ्चः । ''स वा एष महानज आत्मा' इत्यजशब्दात् ।**

ಅನುವಾದ - ಪೂರ್ವಪಕ್ಷ ಹೀಗಿದೆ - 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯಲ್ಲಿರುವ ಬ್ರಾಹ್ಮಣಶಬ್ದದಿಂದ ವಿರಿಂಚನೇ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಸ ವಾ ಏಷ ಮಹಾನಜ ಆತ್ಮಾ' ಎಂಬುದಾಗಿ ಅದೇ ಶ್ರುತಿಯಲ್ಲಿ ವಿರಿಂಚನಲ್ಲಿ ಪ್ರಸಿದ್ಧವಾದ ಅಜಶಬ್ದವಿರುವುದರಿಂದ.

**नच वाच्यमजशब्दो न जायत इत्यज इति विष्णौ यौगिकः । विरिञ्चेऽप्यकार वाच्यविष्णुजातत्वाद्यौगिक इति । विरिञ्चे रूढेरपि सत्त्वात् । योगरूढेश्च योगमात्रात्प्राबल्यात् ।**

ಪ್ರಶ್ನೆ - 'ನ ಜಾಯತೇ ಇತ್ಯಜಃ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಿದಾಗ ಅಜಶಬ್ದವು ವಿಷ್ಣುವಿನಲ್ಲಿ ಯೌಗಿಕವಾಗಿ ಸಮನ್ವಯವಾಗುತ್ತದೆ. ಆದ್ದರಿಂದ ಅಜಶಬ್ದದ ಆಧಾರದಿಂದ ಚತುರ್ಮುಖನನ್ನು ಬ್ರಾಹ್ಮಣಶಬ್ದ ಪ್ರತಿಪಾದ್ಯನೆಂದು ಹೇಗೆ ಹೇಳುತ್ತೀರಿ?

ಉತ್ತರ - ಯೌಗಿಕಾರ್ಥವನ್ನು ಸ್ವೀಕರಿಸಿ ಅಜಶಬ್ದವನ್ನು ವಿರಿಂಚನಲ್ಲೂ ಕೂಡ ಹೇಳಬಹುದು. ಅಕಾರವಾಚ್ಯನಾದ ವಿಷ್ಣುವಿನಿಂದ ಹುಟ್ಟಿದ್ದಾನೆಂಬ ಅರ್ಥವನ್ನು ವಿವಕ್ಷಿಸಿ, 'ಅತ್ ಜಾಯತೇ ಇತ್ಯಜಃ' ಎಂದು ನಿಷ್ಪತ್ತಿಮಾಡಿದಾಗ ಅಜಶಬ್ದವು ಚತುರ್ಮುಖನಲ್ಲಿಯೂ ಬರುತ್ತದೆ. ಅಷ್ಟೇ ಅಲ್ಲದೇ ಚತುರ್ಮುಖನಲ್ಲಿ ಯೌಗದ ಜೊತೆಗೆ ರೂಢಿಯೂ ಕೂಡ ಇದೆ. ವಿಷ್ಣುವಿನಲ್ಲಿ ಯೋಗಮಾತ್ರವಿರುತ್ತದೆ. ಕೇವಲ ಯೋಗಕ್ಕಿಂತಲೂ ಯೋಗರೂಢಿಯು ಪ್ರಬಲವಾದ್ದರಿಂದ, ಬ್ರಾಹ್ಮಣಶಬ್ದಪ್ರತಿಪಾದ್ಯನಾದವನು ವಿರಿಂಚನೇ ಆಗಿದ್ದಾನೆಂದು ಹೇಳಬೇಕು.

**टीकायां ब्राह्मणशब्देन सहपठितस्याजशब्दस्यानवकाशत्वोक्तिस्त्वजशब्दमात्रस्य सावकाशत्वमभ्युपेत्य ।**

ಟೀಕೆಯಲ್ಲಿ ಬ್ರಾಹ್ಮಣಶಬ್ದದ ಜೊತೆಗೆ ಸಹಪಠಿತವಾದ ಕಾರಣ, ಅಜಶಬ್ದವು ನಿರವಕಾಶವಾಗಿದೆಯೆಂದು ಹೇಳಿದ್ದಾರೆ. ಕೇವಲ ಅಜಶಬ್ದಕ್ಕೆ ಸಾವಕಾಶತ್ವವನ್ನೂ ಒಪ್ಪಿ, ಟೀಕೆಯ ಈ ಮಾತು ಹೊರಟಿದೆ.

ಪರಿಪೂರ್ಣಚಂದ್ರಿಕಾ

**एवं च "ब्राह्मणशब्दस्य पापालेपलिङ्गस्य च चतुर्मुखस्य परमात्माभेदं विनाऽवकाशराहित्यात्" इति न्यायविवरणे ब्राह्मणश्रुतितो भाष्ये चाजश्रुतितो विरिञ्चप्राप्तेरुक्तत्वेन तयोर्विरोध इति निरस्तम् ।**

ಹೀಗೆ ಹೇಳಿದ್ದರಿಂದ **'ಬ್ರಾಹ್ಮಣಶಬ್ದಸ್ಯ ಪಾಪಾಲೇಪಲಿಂಗಸ್ಯ ಚ ಚತುರ್ಮುಖಸ್ಯ ಪರಮಾತ್ಮಾಭೇದಂ ವಿನಾಽವಕಾಶರಾಹಿತ್ಯಾತ್' ಬ್ರಾಹ್ಮಣಶಬ್ದ ಹಾಗೂ ಪಾಪಾಲೇಪವೆಂಬ** ಲಿಂಗವು ಚತುರ್ಮುಖನಲ್ಲಿ ಪರಮಾತ್ಮನಿಂದ **ಅಭೇದವಿರುವ** ಕಾರಣ ಯುಕ್ತವಾಗುತ್ತದೆ. ಪರಮಾತ್ಮನಲ್ಲಿ ಅಭೇದವನ್ನು ಒಪ್ಪದಿದ್ದರೆ **ಬ್ರಾಹ್ಮಣಶಬ್ದವಾಗಲೀ, ಪಾಪಾರಾಹಿತ್ಯವೆಂಬ** ಲಿಂಗವಾಗಲೀ, ಚತುರ್ಮುಖನಲ್ಲಿ ಯುಕ್ತವಾಗುವುದಿಲ್ಲ. ಹೀಗೆ **ನ್ಯಾಯವಿವರಣದಲ್ಲಿ ಬ್ರಾಹ್ಮಣಶ್ರುತಿಯ** ಬಲದಿಂದ, ಚತುರ್ಮುಖನೇ ಪ್ರತಿಪಾದ್ಯನೆಂದು ಹೇಳಿದ್ದಾರೆ. ಆದರೆ **ಭಾಷ್ಯದಲ್ಲಿ ಅಜಶ್ರುತಿಯ** ಬಲದಿಂದ ಚತುರ್ಮುಖನು ಬ್ರಾಹ್ಮಣಶಬ್ದಪ್ರತಿಪಾದ್ಯನೆಂದು ಹೇಳಿದ್ದಾರೆ. ಆದ್ದರಿಂದ ನ್ಯಾಯವಿವರಣ ಹಾಗೂ ಭಾಷ್ಯಗಳಿಗೆ ಪರಸ್ಪರವಿರೋಧ ಬರುತ್ತದಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸಿದಂತಾಯಿತು.

**निरपेक्षयोः श्रुत्योर्विप्रत्वजातौ विष्णौ च सावकाशत्वमुपेत्यानवकाशत्वाय श्रुत्योः साहित्यस्य च विवक्षितत्वादिति टीकाभिप्रायः ।**

ಏಕೆಂದರೆ ಮತ್ತೊಂದರ ಅಪೇಕ್ಷೆಯಿಲ್ಲದ ಬ್ರಾಹ್ಮಣಶ್ರುತಿಯು ವಿಪ್ರತ್ವಜಾತಿಯಲ್ಲಿ ಸಾವಕಾಶವಾಗಿದೆ. ಮತ್ತು ಮತ್ತೊಂದರ ಅಪೇಕ್ಷೆಯಿಲ್ಲದ ಅಜಶ್ರುತಿಯು ವಿಷ್ಣುವಿನಲ್ಲಿ ಸಾವಕಾಶವಾಗಿದೆ ಎಂದು ಒಪ್ಪಿ, ನಿರವಕಾಶತ್ವಕ್ಕೋಸ್ಕರ ಅಜಶಬ್ದವು ವಿಷ್ಣುಪರವಲ್ಲ. ವಿರಿಂಚಪರವೇ ಆಗಿದೆ. ಏಕೆಂದರೆ ಜಾತಿವಾಚಕವಾದ ಬ್ರಾಹ್ಮಣಶಬ್ದದ ಸನ್ನಿಧಾನವಿರುವುದರಿಂದ. ಅದರಂತೆ ಬ್ರಾಹ್ಮಣ ಶಬ್ದವು ವಿಷ್ಣುಪರವೇ ಆಗಿದೆ. ಏಕೆಂದರೆ ಅಜಶಬ್ದದ ಸಹಪಾಠವಿರುವುದರಿಂದ. ಹೀಗೆ ಪರಸ್ಪರ ಸಾಹಿತ್ಯದ ಅಪೇಕ್ಷೆಯಿರುವುದರಿಂದ, ಭಾಷ್ಯದಲ್ಲಿ ಅಜಶಬ್ದವನ್ನು ನ್ಯಾಯವಿವರಣದಲ್ಲಿ ಬ್ರಾಹ್ಮಣಶಬ್ದವನ್ನು ಹೇಳಿರುತ್ತಾರೆಂದು ಟೀಕೆಯ ಅಭಿಪ್ರಾಯ.

**यद्वा "तस्मादहमजः स्मृतः" इति भारतवचनादजशब्दस्य विष्णौ रूढेरपि सत्त्वात् ब्राह्मणशब्दसाहित्योक्तिः ।**

ಅಥವಾ 'ತಸ್ಮಾದಹಮಜಃ ಸ್ಮೃತಃ' ಎಂಬುದಾಗಿ ಮಹಾಭಾರತದಲ್ಲಿ ತನ್ನನ್ನು ಅಜನೆಂದು ಸ್ವತಃ ಪರಮಾತ್ಮನೇ ಹೇಳಿಕೊಂಡಿದ್ದಾನೆ. ಆದ್ದರಿಂದ ಚತುರ್ಮುಖನಲ್ಲಿ ಅಜಶಬ್ದವು ಹೇಗೆ ರೂಢವಾಗಿದೆಯೋ, ಅದರಂತೆ ಮಹಾವಿಷ್ಣುವಿನಲ್ಲಿಯೂ ಕೂಡ ರೂಢವಾಗಿದೆ. ಹೀಗೆ ಇಬ್ಬರಲ್ಲಿಯೂ ಸಮಾನಬಲವನ್ನು ಹೊಂದಿದಾಗ ಬ್ರಾಹ್ಮಣಶಬ್ದದ ಸಾಹಿತ್ಯದಿಂದ ಅಜಶಬ್ದವು ಚತುರ್ಮುಖನಲ್ಲೇ ವಿಶೇಷವಾಗಿ ಸಮನ್ವಯಗೊಳ್ಳುತ್ತದೆಂದು ಸಮರ್ಥಿಸಲಾಗುತ್ತಿದೆ.

**महच्छब्दोऽप्यभिमान्यधिकरणन्यायेन महत्तत्वाभिमानिनि विरिञ्चे मुख्यः । न तूत्कृष्टत्वमात्रवाची । विशेषपरत्वसम्भवे सामान्यपरत्वायोगात् ।**

'ಸ ಏಷ ಮಹಾನಜಃ' ಎಂಬಲ್ಲಿ 'ಮಹಾನ್' ಎಂಬ ಶಬ್ದವು ಶ್ರುತವಾಗಿದೆ. ಈ ಶಬ್ದವು ಅಭಿಮಾನಿವ್ಯಪದೇಶಾಧಿಕರಣದ ನ್ಯಾಯದಿಂದ ಮಹತ್ತತ್ವವನ್ನು ಪ್ರತಿಪಾದನೆ ಮಾಡುತ್ತದೆ. ಮಹತ್ತತ್ವಕ್ಕೆ ಅಭಿಮಾನಿಯಾದ ಚತುರ್ಮುಖನಲ್ಲೇ ಈ ಶಬ್ದವು ಮುಖ್ಯವಾಗಿ ಬರುತ್ತದೆ. ಮಹತ್ ಶಬ್ದಕ್ಕೆ 'ಮಹತ್ತತ್ವ' ಎಂಬರ್ಥವನ್ನೇ ಹೇಳಬೇಕು. ಕೇವಲ ಶ್ರೇಷ್ಠನಾದವನು ಎಂಬರ್ಥವನ್ನು ವಿವಕ್ಷಿಸಬಾರದು. ಏಕೆಂದರೆ ಒಂದು ಶಬ್ದಕ್ಕೆ ವಿಶೇಷಪದಾರ್ಥ ಪ್ರತಿಪಾದ್ಯತ್ವವನ್ನು ಒಪ್ಪಲು ಬರುವಾಗ, ಸಾಮಾನ್ಯಪದಾರ್ಥ ಪ್ರತಿಪಾದ್ಯತ್ವವನ್ನು ಒಪ್ಪುವುದು ತಪ್ಪಾಗುತ್ತದೆ.

**आत्मशब्दोऽपि ''आत्माविरिञ्चः सुमना'' इति वचनात् ''बुद्धेरात्मामहान्पर'' इति प्रयोगाच्च विरिञ्चे रूढः ।**

ಶ್ರುತಿಯಲ್ಲಿರುವ ಆತ್ಮಶಬ್ದವೂ ಕೂಡ ಚತುರ್ಮುಖನನ್ನೇ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ 'ಆತ್ಮಾವಿರಿಂಚಃ ಸುಮನಾಃ' ಎಂಬಲ್ಲಿ ಮತ್ತು 'ಬುದ್ಧೇರಾತ್ಮಾಮಹಾನ್ಪರಃ' ಎಂಬಲ್ಲಿಯೂ ಚತುರ್ಮುಖನಲ್ಲಿಯೇ ಆತ್ಮಶಬ್ದವು ಪ್ರಯುಕ್ತವಾಗಿದೆ. ಹೀಗೆ ಆತ್ಮಶಬ್ದದ ರೂಢಿಯು ವಿರಿಂಚನಲ್ಲಿರುವುದರಿಂದ ಇದೂ ಸಹ ಬಾಧಕವಾಗುವುದಿಲ್ಲ.

**नच ''विष्णोर्ब्राह्मणजातिः सन् जज्ञे ब्रह्मा चतुर्मुख'' इति वचनाच्चतुर्मुखे ब्राह्मणत्ववर्णसम्भवेऽपि ''अगोत्रमवर्णम्'' इत्यादिश्रुतिभिर्विष्णौ तदसम्भवेऽपि ''सर्वस्य वशी सर्वस्येशानः सर्वस्याधिपतिः'' इत्यादिविष्णुलिङ्गैर्ब्राह्मणशब्दो ''ब्रह्मणा वेदेन गम्यते'' इति न्यायविवरणोक्तरीत्या विष्णौ यौगिक इति वाच्यम्।**

ಪ್ರಶ್ನೆ - 'ವಿಷ್ಣೋರ್ಬ್ರಾಹ್ಮಣಜಾತಿಃ ಸನ್ ಜಜ್ಞೇ ಬ್ರಹ್ಮಾ ಚತುರ್ಮುಖಃ' 'ಚತುರ್ಮುಖನು ಬ್ರಾಹ್ಮಣಜಾತಿಯವನಾಗಿ ವಿಷ್ಣುವಿನಿಂದ ಮೊದಲು ಹುಟ್ಟಿದನು' ಇತ್ಯಾದಿ ವಚನದಂತೆ ಬ್ರಾಹ್ಮಣತ್ವ ವರ್ಣವು ಚತುರ್ಮುಖನನ್ನೇ ಪ್ರತಿಪಾದನೆ ಮಾಡುತ್ತದೆ. ಹೊರತಾಗಿ 'ಅಗೋತ್ರಮವರ್ಣಮ್' ಇತ್ಯಾದಿ ಶ್ರುತಿಗಳಿಂದ ವಿಷ್ಣುವಿನಲ್ಲಿ ಬ್ರಾಹ್ಮಣತ್ವವರ್ಣವು ಯುಕ್ತವಾಗುವುದಿಲ್ಲ. ಆದರೂ ಸಹ 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ' ಇದೇ ಮೊದಲಾದ ವಿಷ್ಣುವಿನ ಅಸಾಧಾರಣಲಿಂಗಗಳು ಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ, ಬ್ರಾಹ್ಮಣಶಬ್ದವು ಯೌಗಿಕವಾಗಿ ವಿಷ್ಣುವಿನಲ್ಲಿ ಬರುತ್ತದೆಂದು ಕೂಡಿಸಬೇಕು. 'ಬ್ರಹ್ಮಣಾ ವೇದೇನ ಗಮ್ಯತೇ' ಎಂಬ ವ್ಯುತ್ಪತ್ತಿಯನ್ನು ಮಾಡಿ, ವೇದದಿಂದ ತಿಳಿಯುತ್ತಾನಾದ ಕಾರಣದಿಂದ ವಿಷ್ಣು ಬ್ರಾಹ್ಮಣನೆನಿಸುತ್ತಾನೆಂದು ಅನಿವಾರ್ಯವಾಗಿ ಯೌಗಿಕಾರ್ಥವನ್ನು ಸ್ವೀಕರಿಸಬೇಕಲ್ಲವೇ?

**विरिञ्चस्य विष्णवभेदेऽपि तल्लिङ्गोपपत्तेस्सावकाशश्रुतेर्निरवकाशलिङ्गानां चाबाधेनोपपत्तौ बाधायोगात् ।**

ಉತ್ತರ - ಹೀಗೆ ಪ್ರಶ್ನಿಸಬಾರದು. ಏಕೆಂದರೆ ವಿರಿಂಚನಿಗೆ ವಿಷ್ಣುವಿನಿಂದ ಅಭೇದವನ್ನು ಒಪ್ಪುವುದರಿಂದಲೇ ಈ ಸಮಸ್ಯೆಯು ಪರಿಹಾರವಾಗುತ್ತದೆ. ವಿಷ್ಣುವಿನ ಎಲ್ಲ ಲಿಂಗಗಳು ಚತುರ್ಮುಖನಲ್ಲಿ ಅಭೇದವಿರುವ ಕಾರಣ ಉಪಪನ್ನವಾಗುತ್ತದೆ. ಆದ್ದರಿಂದ ಸಾವಕಾಶವಾದ ಶ್ರುತಿಗಾಗಲೀ, ನಿರವಕಾಶವಾದ ಲಿಂಗಗಳಿಗಾಗಲೀ ಬಾಧವನ್ನು ಒಪ್ಪದೇ ಕೂಡಿಸಬಹುದಾದ್ದರಿಂದ ಎರಡರಲ್ಲಿ ಒಂದನ್ನು ಬಾಧಿಸುವುದು ತಪ್ಪಾಗುತ್ತದೆ.

**नच श्रुतिलिङ्गाबाधाय मुख्यत्वाय च ''अज आत्म'' इत्यादिकं विरिञ्चविषयम् । सर्वस्य वशि'' इत्यादिकं तु विष्णुविषयमिति वाच्यम् ।**

ಪ್ರಶ್ನೆ - ಅಜಶ್ರುತಿ, ಬ್ರಾಹ್ಮಣಶ್ರುತಿ ಮತ್ತು ಸರ್ವಾದಿಪತಿತ್ವ ಮೊದಲಾದ ಲಿಂಗಗಳು ಇವುಗಳಿಗೆ ಬಾಧವನ್ನು ಹೇಳಬಾರದು. ಮತ್ತು ಶ್ರುತಿಲಿಂಗಗಳೆರಡಕ್ಕೂ ಮುಖ್ಯಾರ್ಥವನ್ನೇ ಒಪ್ಪಬೇಕು. ಅದಕ್ಕೋಸ್ಕರ 'ಅಜ ಆತ್ಮಾ' ಇತ್ಯಾದಿ ಶ್ರುತಿಯೂ ವಿರಿಂಚವಿಷಯಕವಾಗಿದೆ. 'ಸರ್ವಸ್ಯ ವಶಿ' ಇತ್ಯಾದಿ ಶ್ರುತಿಯು ನಿರವಕಾಶವಾದ ವಿಷ್ಣುಲಿಂಗಗಳಿರುವ ಕಾರಣ, ವಿಷ್ಣುವಿಷಯಕವೇ ಆಗಿದೆ. ಹೀಗೆ ಒಪ್ಪುವುದರಿಂದಲೂ ವಿರೋಧವನ್ನು ಪರಿಹರಿಸಲು ಬರುವಾಗ, ಅಭೇದವನ್ನೇಕೆ ಒಪ್ಪಬೇಕು.

**गङ्गाघोषादाविवैकवाक्यत्वायामुख्यार्थत्वस्यैवोचितत्वात् ।**

ಉತ್ತರ - ಮುಖ್ಯಾರ್ಥದ ಸಂರಕ್ಷಣೆಗಾಗಿ ವಾಕ್ಯಭೇದವನ್ನು ಒಪ್ಪುವುದಕ್ಕಿಂತ, ಏಕವಾಕ್ಯತ್ವದ ಸಂರಕ್ಷಣೆಗಾಗಿ ಅಮುಖ್ಯಾರ್ಥವನ್ನು ಹೇಳುವುದೇ ಉಚಿತವಾಗಿದೆ. 'ಗಂಗಾಯಾಂಘೋಷಃ' ಎಂದು ಹೇಳಿದಾಗ ಏಕವಾಕ್ಯತ್ವಕ್ಕೋಸ್ಕರ ಲಕ್ಷಣಾ ಸ್ವೀಕರಿಸುವುದು ಕಂಡಿದೆ. ಹೊರತು, ಮುಖ್ಯಾರ್ಥವನ್ನು ಸ್ವೀಕರಿಸುವುದಕ್ಕಾಗಿ ಗಂಗೆಯಲ್ಲಿ ಮತ್ಸ್ಯ, ಘೋಷದಲ್ಲಿ ತೀರ ಎಂಬ ಭಿನ್ನವಾಕ್ಯತ್ವವನ್ನು ಒಪ್ಪಿ ಯಾರೂ ಸಹ ಮುಖ್ಯಾರ್ಥವನ್ನು ಕೂಡಿಸುವುದಿಲ್ಲ. ಅದರಂತೆ ಪ್ರಕೃತ ಶ್ರುತಿ ಹಾಗೂ ಲಿಂಗಗಳಿಗೆ ಏಕವಾಕ್ಯತ್ವವನ್ನು ಕೂಡಿಸುವುದಕ್ಕಾಗಿ ಅಭೇದವೆಂಬ ಅಮುಖ್ಯಾರ್ಥವನ್ನು ಸ್ವೀಕರಿಸುವುದೇ ಉಚಿತವಾಗಿದೆ.

**नच पूर्वत्र जीवादिवात्र विरिञ्चाद्भेदो व्यपदिष्टः । नच जीवैरभेद इव विरिञ्चनाभेदे बद्धमुक्तादिव्यवस्थानुपपत्तिरस्ति ।**

ಹಿಂದಿನ ಅಧಿಕರಣದಲ್ಲಿ 'ಆತ್ಮನಾ ಸಂಪರಿಷ್ವಕ್ತಃ' ಇತ್ಯಾದಿಯಾಗಿ ಜೀವನಿಂದ ಪರಮಾತ್ಮನಿಗೆ ಭೇದವನ್ನು ಹೇಳುವಂತಹ ಧರ್ಮಗಳು ಶ್ರುತಿಯಲ್ಲಿ ಹೇಳಲಾಗಿತ್ತು. ಅಂತಹ ಭೇದವ್ಯಪದೇಶವೇನೂ

ಇಲ್ಲಿ ಕಾಣಸುತ್ತಿಲ್ಲ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಭೇದವನ್ನು ಒಪ್ಪಿದಂತೆ ಇಲ್ಲಿ ಚತುರ್ಮುಖ ಹಾಗೂ ಪರಮಾತ್ಮನಿಗೆ ಭೇದವನ್ನು ಒಪ್ಪುವ ಅವಶ್ಯಕತೆಯಿರುವುದಿಲ್ಲ. ಮತ್ತು ಜೀವರಿಂದ ಬ್ರಹ್ಮರಿಗೆ ಅಭೇದವನ್ನು ಹೇಳಿದಾಗ, ಸಂಸಾರಬಂಧನ ಮೋಕ್ಷ ಇವುಗಳ ವ್ಯವಸ್ಥೆಯು ಅನುಪಪನ್ನವಾದಂತೆ, ವಿರಿಂಚನಿಗೆ ಬ್ರಹ್ಮನಿಂದ ಅಭೇದ ಹೇಳಿದಾಗ, ಯಾವುದೇ ಅವ್ಯವಸ್ಥೆಗಳು ಉಂಟಾಗುವುದಿಲ್ಲ.

**''स त्रेधा बभूवैषां गुणानामुपादानाय । विष्णुर्वाव सत्वस्य रजसो ब्रह्मा ईशानो नामतमस'' इत्यादिश्रुतिभिः ''स्थित्यादये हरिविरिञ्चहरेति संज्ञा'' इत्यादिस्मृतिभिश्चाभेदोक्तेश्च ।**

ಮತ್ತು 'ಸ ತ್ರೇಧಾ ಬಭೂವೈಷಾಂ ಗುಣಾನಾಮುಪಾದಾನಾಯ। ವಿಷ್ಣುರ್ವಾವ ಸತ್ವಸ್ಯ ರಜಸೋ ಬ್ರಹ್ಮಾ ಈಶಾನೋ ನಾಮತಮಸಃ' ಇತ್ಯಾದಿ ಶ್ರುತಿಗಳಲ್ಲಿ ಒಬ್ಬನೇ ವಿಷ್ಣು, ಬ್ರಹ್ಮ ಹಾಗೂ ರುದ್ರ ಎಂಬ ರೂಪಗಳನ್ನು ಧರಿಸಿದ್ದಾನೆಂದು ಅಭೇದವನ್ನು ಹೇಳಲಾಗಿದೆ. ಹಾಗೆಯೇ 'ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾ' ಇತ್ಯಾದಿ ಸ್ಮೃತಿಗಳಲ್ಲಿಯೂ ಸ್ಥಿತಿಯ ಆದಿಯಲ್ಲಿ ಹರಿ, ವಿರಿಂಚ, ಹರ ಎಂಬ ಮೂರು ರೂಪಗಳನ್ನು ಧರಿಸಿದ್ದಾನೆಂದು ಅಭೇದವನ್ನು ಹೇಳಲಾಗಿದೆ.

**नच सा ''शास्त्रदृष्ट्य'' इत्युक्तन्यायेनान्तर्याम्यभेदाभिप्राया । नापि ''तद्गुणसारत्वात्'' इति वक्ष्यमाणन्यायेन सादृश्याभिप्राया ।**

ಪ್ರಶ್ನೆ - 'ಶಾಸ್ತ್ರದೃಷ್ಟ್ಯಾತೂಪದೇಶಃ' ಇತ್ಯಾದಿ ನ್ಯಾಯದಂತೆ ಪರಮಾತ್ಮನು, ರುದ್ರ ಚತುರ್ಮುಖ ಇವರ ಅಂತರ್ಯಾಮಿಯಾಗಿದ್ದಾನೆ. ಆದ್ದರಿಂದ ಶ್ರುತಿಗಳಲ್ಲಿ ಅವನನ್ನು ಚತುರ್ಮುಖ, ರುದ್ರ ಮೊದಲಾದ ಶಬ್ದಗಳಿಂದ ವ್ಯವಹರಿಸಲಾಗಿದೆ ಎಂದು ಕೂಡಿಸಬಹುದು. ಅಥವಾ 'ತದ್ಗುಣಸಾರತ್ವಾತ್' ಎಂಬ ಮುಂದೆ ಹೇಳುವ ಸೂತ್ರನ್ಯಾಯದಂತೆ ಪರಮಾತ್ಮನ ಸಾದೃಶ್ಯ ಚತುರ್ಮುಖಾದಿಗಳಲ್ಲಿರುವುದ-ರಿಂದಲೂ ಅಭೇದವನ್ನು ಶ್ರುತಿ-ಸ್ಮೃತಿಗಳಲ್ಲಿ ಹೇಳಿದಂತೆ ಕಾಣಸುತ್ತದೆಂದೂ ಕೂಡ ಕೂಡಿಸಬಹುದಲ್ಲವೇ?

**तयोर्जीवमात्रसाधारण्येन विशिष्याभेदोक्त्ययोगात् ।**

ಉತ್ತರ - ಹಾಗಾದಲ್ಲಿ ಇಂತಹ ಅಂತರ್ಯಾಮಿತ್ವ ಮತ್ತು ಸಾದೃಶ್ಯಗಳು ಸಕಲ ಜೀವಸಾಧಾರಣವಾಗಿ, ಪರಮಾತ್ಮನಲ್ಲಿ ಹೇಳಲು ಬರುತ್ತದೆ. ಹೀಗಿರುವಾಗ ಚತುರ್ಮುಖ ಹಾಗೂ ರುದ್ರದೇವರಲ್ಲಿ ಮಾತ್ರ ಅಭೇದವನ್ನು ಹೇಳಲು ಕಾರಣವೇನು?

**अत एव टीकायां पूर्वाधिकरण पूर्वपक्षे ''तत्त्वमसि'' इत्यादिजीवेश्वराभेदवाक्यं नोक्तम् । अत्र तु ''स्थित्यादये'' इति विष्णुहिरण्यगर्भाभेदवाक्यमुक्तम् ।**

ಪರಿಪೂರ್ಣಚಂದ್ರಿಕಾ

ಹೀಗೆ ಅಂತರ್ಯಾಮಿತ್ವವಿವಕ್ಷೆಯಿಂದ ಅಥವಾ ಸಾದೃಶ್ಯದ ಅಭಿಪ್ರಾಯದಿಂದ ಅಭೇದವನ್ನು ವಿವಕ್ಷಿಸಬಾರದು ಎಂಬ ಕಾರಣದಿಂದಲೇ ಹಿಂದಿನ ಅಧಿಕರಣದ ಪೂರ್ವಪಕ್ಷದಲ್ಲಿ 'ತತ್ತ್ವಮಸಿ' ಮೊದಲಾದ ಯಾವುದೇ ಜೀವೇಶ್ವರಾಭೇದವಾಕ್ಯಗಳನ್ನು ಪ್ರಮಾಣವನ್ನಾಗಿ ನೀಡಿರುವುದಿಲ್ಲ. ಆದರೆ ಈ ಅಧಿಕರಣದ ಪೂರ್ವಪಕ್ಷದಲ್ಲಿ 'ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾಃ' ಮೊದಲಾದ ವಿಷ್ಣುವಿಗೂ ಹಾಗೂ ಹಿರಣ್ಯಗರ್ಭನಿಗೂ ಅಭೇದವನ್ನು ಹೇಳುವಂತಹ ವಾಕ್ಯವನ್ನು ಪ್ರಮಾಣವನ್ನಾಗಿ ನೀಡಿರುತ್ತಾರೆ.

**प्रकाशः –**

अत्र टीकायाम् भाष्यदिशा अजशब्दात् पूर्वपक्षप्राप्तिमुक्त्वा तस्य सावकाशत्वमाशंक्य ब्राह्मणशब्दसाहित्येनानवकाशत्वमुक्तम् । तत्राजश्रुतेस्स्वत एव चतुर्मुखप्रापकत्वोपपादनेन भाष्यस्वारस्ये सम्भवति भाष्येऽनुक्तस्यापि ब्राह्मणपदसाहित्येनानवकाशत्वस्योक्तिरभ्युपगमवादेनेति भावेन पूर्वपक्षटीकां व्यनक्ति ।। **अयं ब्राह्मण इति** ।।

ವಿವರಣೆ - ಟೀಕೆಯಲ್ಲಿ ಪೂರ್ವಪಕ್ಷವನ್ನು ಹೀಗೆ ಸಮರ್ಥಿಸಿದ್ದಾರೆ - ಭಾಷ್ಯದಲ್ಲಿ ಹೇಳಿದಂತೆ ಅಜಶಬ್ದದ ಬಲದಿಂದ ಪೂರ್ವಪಕ್ಷವನ್ನು ಸ್ಥಾಪನೆ ಮಾಡಿ, ಅಂತಹ ಅಜಶ್ರುತಿಯು ಸಾವಕಾಶವಾಗಿದೆಯೆಂದು ಆಶಂಕಿಸಿ, ಬ್ರಾಹ್ಮಣಶಬ್ದದ ಸಾಹಿತ್ಯದಿಂದ ಅಜಶ್ರುತಿಗೆ ನಿರವಕಾಶತ್ವವನ್ನು ಸಮರ್ಥನೆ ಮಾಡಿದ್ದಾರೆ. ಅಜಶ್ರುತಿಯು ಸ್ವಾಭಾವಿಕವಾಗಿಯೇ ಚತುರ್ಮುಖನನ್ನು ಪ್ರತಿಪಾದನೆ ಮಾಡುತ್ತದೆಂದು ಹೇಳಿ, ಭಾಷ್ಯಕ್ಕೆ ಸ್ವರಸವಾಗಿ ವ್ಯಾಖ್ಯಾನ ಮಾಡಲು ಬರುತ್ತದೆ. ಆದರೂ ಸಹ ಭಾಷ್ಯದಲ್ಲಿ ಹೇಳದ ಬ್ರಾಹ್ಮಣಶ್ರುತಿಯ ಸಾಹಿತ್ಯದಿಂದ ನಿರವಕಾಶತ್ವವನ್ನು ಟೀಕೆಯಲ್ಲಿ ಸಮರ್ಥಿಸಿದ್ದು, ಕೇವಲ ಅಭ್ಯುಗಮವಾದವೆಂದು ತಿಳಿಯಬೇಕು. ಈ ಅಭಿಪ್ರಾಯದಿಂದ ಪೂರ್ವಪಕ್ಷಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅಯಂ ಬ್ರಾಹ್ಮಣ' ಇತ್ಯಾದಿಯಾಗಿ.

**प्रकाशः** – अजशब्दमात्रस्य केवलाजशब्दस्येत्यर्थः । ननूक्तदिशाऽजशब्दस्यान्यानपेक्षेणैवानवकाशत्वसम्भवेऽभ्युपगमवादो व्यर्थ इत्यत आह – **एवञ्चेति** ।।

'ಅಜಶಬ್ದ ಮಾತ್ರಸ್ಯ' ಎಂದರೆ ಕೇವಲ ಅಜಶ್ರುತಿಗೆ ಎಂದರ್ಥ. ಈಗಾಗಲೇ ಹೇಳಿದಂತೆ ಅಜಶ್ರುತಿಯು ಮತ್ತೊಂದನ್ನು ಅಪೇಕ್ಷೆ ಪಡದೇ ನಿರವಕಾಶವಾಗುತ್ತದೆಂದು ಹೇಳಲು ಬರುವಾಗ, ಅಭ್ಯುಗಮವಾದವನ್ನು ಮಾಡಲು ಕಾರಣವೇನು? ಎಂಬ ಪ್ರಶ್ನೆಗೆ 'ಏವಂಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – तथाच टीकायां विरोधपरिहारार्थमेव तथोक्तम् । न तूक्तदिशाऽनवकाशत्वं नेतीति भावः । ''स न साधुना कर्मणा भूयान्नोवाऽसाधुना कनीयान्'' इत्युक्तपापालेपलिङ्गस्येत्यर्थः ।

ಇದರಿಂದ ಟೀಕೆಯಲ್ಲಿ ವಿರೋಧವನ್ನು ಪರಿಹರಿಸಿದಂತಾಯಿತು. ಹೊರತು, ಅಜಶ್ರುತಿಯು ಸ್ವತಃ ನಿರವಕಾಶವಾಗಿಲ್ಲ ಎಂಬ ಅಭಿಪ್ರಾಯದಿಂದಲ್ಲ. ಪಾಪಾದ್ಯಲೇಪಲಿಂಗವೆಂದರೆ 'ಸ ನ ಸಾಧುನಾ ಕರ್ಮಣಾ ಭೂಯಾನ್ನೋವಾಽಸಾಧುನಾ ಕನೀಯಾನ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪಾಪರಾಹಿತ್ಯವೆಂಬ ಲಿಂಗವೆಂದರ್ಥ.

**प्रकाशः** – नन्वजशब्दस्यैवानवकाशत्वसम्भवे तस्य चतुर्मुखपरत्वलाभायान्य-साहित्यापेक्षाभिप्रायेण न्यायविवरणे ब्रह्मशब्दोक्तिर्व्यर्थेत्यत आह – **यद्वेति** ।।

ಅಜಶ್ರುತಿಯೇ ಸ್ವತಃ ನಿರವಕಾಶವಾಗಿರುವಾಗ ಈ ಶ್ರುತಿಯು ಚತುರ್ಮುಖಪರವಾಗಿದೆಯೆಂಬುದನ್ನು ತಿಳಿಸಲು ಬ್ರಾಹ್ಮಣಶ್ರುತಿಯ ಸಾಹಿತ್ಯವನ್ನು ಅಪೇಕ್ಷಿಸುತ್ತದೆಂಬ ಅಭಿಪ್ರಾಯದಲ್ಲಿರುವ ನ್ಯಾಯವಿವರಣದಲ್ಲಿ ಬ್ರಹ್ಮಶಬ್ದವನ್ನು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಯದ್ವಾ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – महत्तत्वेत्यादिटीकां व्यनक्ति ।। **महदिति** ।। ''आत्मशब्देन सहश्रवणाद्विष्णुवाची किं नस्यात्'' इति टीकोक्तशङ्कां हृदि कृत्वा तदुक्तमेव समाधिमाह – **आत्मशब्दोऽपीति** ।। इति प्रयोगाच्च काठक इत्यर्थः ।

'ಮಹತ್ತತ್ವ' ಇತ್ಯಾದಿ ಟೀಕೆಯನ್ನು 'ಮಹತ್' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಆತ್ಮಶಬ್ದೇನ ಸಹಶ್ರವಣಾದ್ವಿಷ್ಣುವಾಚೀ ಕಿಂ ನಸ್ಯಾತ್' ಆತ್ಮಶಬ್ದದ ಜೊತೆಗೆ ಸಹಪಠಿತವಾದ ಕಾರಣ, 'ಮಹಾನ್' ಎಂಬ ಶ್ರುತಿಯು ವಿಷ್ಣುವನ್ನೇಕೆ ಪ್ರತಿಪಾದನೆ ಮಾಡಬಾರದು ಎಂಬ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಆತ್ಮಶಬ್ದೋಽಪಿ' ಇತ್ಯಾದಿ ವಾಕ್ಯದಿಂದ. ಕಾಠಕದಲ್ಲಿ ಚತುರ್ಮುಖನಲ್ಲೇ ಆತ್ಮಶಬ್ದದ ಪ್ರಯೋಗವಿದೆಯೆಂಬ ಸಮಾಧಾನವನ್ನು ಟೀಕೆಗೆ ಅನುಸಾರಿಯಾಗಿಯೇ ಹೇಳಿದ್ದಾರೆ.

**प्रकाशः** – न्यायविवरणोक्ताभेदप्रपञ्चनाय प्रवृत्तां तथाहीत्यादि टीकां विवरीतुं शङ्कामाह – **नचेति** ।। विष्णोरित्यादिना ब्राह्मणशब्दनिरवकाशत्वानुवादग्रन्थेन ''वर्णादि शून्यादीश्वराद्यावर्तमानस्य ब्राह्मणशब्दस्य'' इत्यादि टीका विवृता ।।

ನ್ಯಾಯವಿವರಣದಲ್ಲಿ ಹೇಳಿದ ವಿಷ್ಣುವಿನಿಂದ ಚತುರ್ಮುಖನಿಗೆ ಅಭೇದವಿದೆಯೆಂಬುದನ್ನು ಪ್ರತಿಪಾದನೆ ಮಾಡುವುದಕ್ಕಾಗಿ 'ತಥಾಹಿ' ಇತ್ಯಾದಿ ಟೀಕೆಯು ಹೊರಟಿದೆ. ಇದನ್ನು ವಿವರಿಸಲು 'ನಚ' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. 'ವಿಷ್ಣೋಃ' ಎಂಬಲ್ಲಿಂದ ಪ್ರಾರಂಭಿಸಿ 'ಬ್ರಾಹ್ಮಣತ್ವ ವರ್ಣಸಂಭವೇಪಿ' ಎಂಬಲ್ಲಿಯ ತನಕ ಇರುವ ಗ್ರಂಥವು ಬ್ರಾಹ್ಮಣಶ್ರುತಿಗೆ ನಿರವಕಾಶತ್ವವನ್ನು ಅನುವಾದ ಮಾಡುತ್ತಿದೆ.

ಇದರಿಂದ 'ವರ್ಣಾದಿ ಶೂನ್ಯಾದೀಶ್ವರಾದ್ವ್ಯಾವರ್ತ್ಯಮಾನಸ್ಯ ಬ್ರಾಹ್ಮಣಶಬ್ದಸ್ಯ' ಇತ್ಯಾದಿ ಟೀಕೆಯನ್ನು ವಿವರಿಸಿದಂತಾಯಿತು. ಅಂದರೆ ಜಾತಿಯಿರುವ ಬ್ರಾಹ್ಮಣಶಬ್ದವು ಚತುರ್ಮುಖದೇವರಲ್ಲಿ ಬರುತ್ತದೆ. ವಿಷ್ಣುವಿನಲ್ಲಿ ಜಾತಿಯಿಲ್ಲದ ಕಾರಣ ಬ್ರಾಹ್ಮಣಶಬ್ದವು ಬರುವುದಿಲ್ಲವೆಂದು ಯದ್ಯಪಿ ಹೇಳಬಹುದು. ಆದರೂ ಸಹ ವಿಷ್ಣುಲಿಂಗಗಳಿರುವುದರಿಂದ, ಬ್ರಾಹ್ಮಣಶಬ್ದವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡಬೇಕು ಎಂದಭಿಪ್ರಾಯ.

**प्रकाशः – इत्यादिविष्णुलिङ्गैरिति ।।** सौत्रत्वादेतदुक्तिः । ''पापालेपलिङ्गस्य'' इति न्यायविवरणोक्तिः ''नित्यमहिमत्वलिङ्गम्'' इति भाष्यटीकोक्तिश्चोपलक्षणमिति भावः । सूत्रे तस्य साक्षादनुक्तेः ।।

'ಇತ್ಯಾದಿ ವಿಷ್ಣುಲಿಂಗೈಃ' ಎಂದು ಸರ್ವಾಧಿಪತಿತ್ವ ಮೊದಲಾದ ಲಿಂಗವನ್ನು ಗ್ರಂಥಕಾರರು ಸೂತ್ರದಲ್ಲಿ ಹೇಳಿದ ಕಾರಣ ಉಲ್ಲೇಖ ಮಾಡಿದ್ದಾರೆ. 'ಪಾಪಾಲೇಪಲಿಂಗಸ್ಯ' ಎಂಬ ನ್ಯಾಯವಿವರಣದಲ್ಲಿ ಈ ಲಿಂಗಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು. 'ನಿತ್ಯಮಹಿಮತ್ವಲಿಂಗಮ್' ಎಂಬ ಭಾಷ್ಯ ಹಾಗೂ ಟೀಕೆಗಳಲ್ಲಿಯೂ ಸರ್ವಾಧಿಪತಿತ್ವ ಮೊದಲಾದ ಲಿಂಗಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಗ್ರಂಥಕಾರರು ಪಾಪಾಲೇಪಲಿಂಗವನ್ನಾಗಲೀ, ನಿತ್ಯಮಹಿಮತ್ವಲಿಂಗವನ್ನಾಗಲೀ ಸೂತ್ರದಲ್ಲಿ ಹೇಳಿಲ್ಲವೆಂದು ಉಲ್ಲೇಖಿಸಿಲ್ಲ.

**प्रकाशः – ब्रह्मणा वेदेनेति ।।** स्वरव्यत्यय आधिक्यार्थ इत्यर्थः ।। **न्यायविवरणेति।।** सिद्धान्त इत्यर्थः ।। **अबाधेनेति ।।** यौगिकार्थग्रहणे रूढार्थबाधादिति भावः ।

'ಬ್ರಹ್ಮಣಾ ಅಣ್ಯತೇ ಇತಿ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ 'ಬ್ರಹ್ಮಾಣಃ' ಎಂದಾಗಬೇಕು. ವಿಪರೀತವಾಗಿ 'ಬ್ರಾಹ್ಮಣಃ' ಎಂಬ ಪ್ರಯೋಗವು ಹೇಗಾಯಿತು? ಎಂದರೆ ಆಧಿಕ್ಯಾರ್ಥಕ್ಕಾಗಿ ವೇದದಲ್ಲಿ ಸ್ವರವ್ಯತ್ಯಾಸವನ್ನು ಮಾಡಲಾಗುತ್ತದೆ. ಇದರಿಂದ ವೇದದಿಂದ ಅಧಿಕವಾಗಿ ಪ್ರತಿಪಾದ್ಯನಾಗಿದ್ದಾನೆಂಬ ಅರ್ಥವನ್ನು ತಿಳಿಸಿದಂತಾಗುತ್ತದೆ. ನ್ಯಾಯವಿವರಣದ ಸಿದ್ಧಾಂತದಲ್ಲಿ ಈ ನಿಷ್ಪತ್ತಿಯನ್ನು ಮಾಡಿದ್ದಾರೆಂದು ತಿಳಿಯಬೇಕು. 'ಅಬಾಧೇನ' ಎಂದರೆ ಯೌಗಿಕಾರ್ಥವನ್ನು ಸ್ವೀಕರಿಸಲು ಬರುವಾಗ ಸ್ವರಸತಃ ಪ್ರಾಪ್ತವಾದ ರೂಢಾರ್ಥವನ್ನು ಬಿಟ್ಟು, ಯೌಗಿಕಾರ್ಥವನ್ನು ಸ್ವೀಕರಿಸುವುದು ತಪ್ಪಾಗುತ್ತದೆ ಎಂದಭಿಪ್ರಾಯ.

**प्रकाशः –** एवञ्च रूढ्या विरिञ्चे योगेन विष्णौ श्रुतेस्सावकाशत्वेऽपि रूढार्थाबाधेनैक्यपरत्वेनैव रूढ्या विष्णौ निरवकाशश्रुतेश्चतुर्मुखेऽनवकाशलिङ्गानां चोपपत्तौ न श्रुते रूढार्थबाधः कार्य इत्यर्थः । एतेन न्यायविवरणे टीकायां च श्रुतेरनवकाशत्वोक्तेस्सावकाशश्रुतेरित्युक्तिस्तद्विरुद्धेति निरस्तम् ।

ಆದ್ದರಿಂದ ಬ್ರಾಹ್ಮಣಶಬ್ದವು ವಿರಿಂಚನಲ್ಲಿ ಸಾವಕಾಶವಾಗಿದೆ. 'ಬ್ರಹ್ಮಣಾ ಅಣ್ಯತೇ' ಎಂಬ ಯೋಗದಿಂದ ವಿಷ್ಣುವಿನಲ್ಲೂ ಸಾವಕಾಶವಾಗಿದೆ. ಆದರೂ ಸಹ ರೂಢಾರ್ಥವನ್ನು ಬಾಧಿಸದೇ ಐಕ್ಯವನ್ನು ಒಪ್ಪುವುದರಿಂದಲೇ ರೂಢಿಯಿಂದ ವಿಷ್ಣುವಿನಲ್ಲಿ ನಿರವಕಾಶಶ್ರುತಿಯನ್ನು ಚತುರ್ಮುಖನಲ್ಲಿ ನಿರವಕಾಶವಾದ ವಿಷ್ಣುಲಿಂಗಗಳನ್ನು ಕೂಡಿಸಲು ಬರುವಾಗ ಶ್ರುತಿಯಿಂದ ರೂಢಾರ್ಥವನ್ನು ತ್ಯಾಗಮಾಡುವುದು ತಪ್ಪಾಗುತ್ತದೆ ಎಂದು

ತಿಳಿಯಬೇಕು. ಹೀಗೆ ಹೇಳಿದ್ದರಿಂದ ನ್ಯಾಯವಿವರಣದಲ್ಲಿ ಮತ್ತು ಟೀಕೆಯಲ್ಲಿ ಶ್ರುತಿಯನ್ನು ನಿರವಕಾಶವೆಂದು ಹೇಳಿದ್ದಾರೆ. ಆದರೆ ಗ್ರಂಥಕಾರರು ಸಾವಕಾಶವೆಂದು ಹೇಳಿದ್ದಾರೆ. ಹೀಗೇಕೆ ಎಂದರೆ ಯೋಗದಿಂದ ಸಾವಕಾಶವೆಂದು ವಿವಕ್ಷಿಸಿ, ಗ್ರಂಥಕಾರರು ಸಾವಕಾಶವೆಂದಿದ್ದಾರೆ.

**प्रकाशः** – नचैवमन्तर्नयादिषूदाहृतेन्द्रादिश्रुतीनां समुद्रशायित्वादिलिङ्गानां च श्रुते रूढार्थाबाधेनाभेद एवाश्रीयतामिति वाच्यम् । तत्रेवेहभेदव्यपदेशरूप-बाधकाभावादिति भावः ।

ಪ್ರಶ್ನೆ - ಹಾಗಾದರೆ ಅಂತರ್ನಯಾದ್ಯಧಿಕರಣಗಳಲ್ಲಿಯೂ ಉದಾಹರಿಸಲ್ಪಟ್ಟ ಇಂದ್ರಾದಿಶ್ರುತಿಗಳಿಗೆ ಮತ್ತು ಸಮುದ್ರಶಾಯಿತ್ವಾದಿಲಿಂಗಗಳಿಗೆ ರೂಢಾರ್ಥವನ್ನು ಬಿಡದೇ ಇಂದ್ರಾದಿಗಳಿಗೂ ನಾರಾಯಣನಿಗೂ ಅಭೇದವನ್ನೇ ಒಪ್ಪಬಹುದಲ್ಲವೇ?

ಉತ್ತರ - ಹೀಗೆ ಪ್ರಶ್ನಿಸಬಾರದು. ಅಲ್ಲಿ ಭೇದವ್ಯಪದೇಶವನ್ನು ಹೇಳಿದಂತೆ ಇಲ್ಲಿ ಭೇದವ್ಯಪದೇಶ-ಗಳಿರುವುದಿಲ್ಲ. ಆದ್ದರಿಂದ ಇಂದ್ರಾದಿಗಳಿಗೂ, ಪರಮಾತ್ಮನಿಗೂ ಅಲ್ಲಿ ಭೇದವನ್ನೇ ಒಪ್ಪಬೇಕು. ಆದರೆ ಪ್ರಕೃತ ವಿರಿಂಚನಿಗೂ ಪರಮಾತ್ಮನಿಗೂ ಭೇದವನ್ನು ಒಪ್ಪಬೇಕೆನ್ನಲು ಆಧಾರವಿರುವುದಿಲ್ಲ.

**प्रकाशः** – अत एव वक्ष्यति ''नच पूर्वत्र'' इत्यादि । ''नच भिन्नतयोभय-ग्रहणेनोपपत्तिः । एकनिष्ठत्वात्'' इति टीकां विवृण्वन्नभेदं विनाऽपि श्रुत्यादेरुपपत्तिमा-शङ्क्य निराह – **नचेति** ।।

ಆದ್ದರಿಂದಲೇ ಮುಂದೆ ಗ್ರಂಥಕಾರರು 'ನಚ ಪೂರ್ವತ್ರ' ಇತ್ಯಾದಿಯಾಗಿ ಹೇಳಿರುತ್ತಾರೆ. 'ನಚ ಭಿನ್ನತಯೋಭಯಗ್ರಹಣೇನೋಪಪತ್ತಿಃ । ಏಕನಿಷ್ಠತ್ವಾತ್' ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ, ಅಭೇದವನ್ನು ಒಪ್ಪದೇ ಶ್ರುತ್ಯಾದಿಗಳನ್ನು ಕೂಡಿಸಬಹುದೆಂದು ಆಶಂಕಿಸಿ, ನಿರಾಕರಣೆ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – **गङ्गेति** ।। यथा गङ्गायां घोष इत्युक्ते गङ्गायां मत्स्यस्तीरे घोष इति वाक्यभेदो न कल्प्यते किन्तु लक्षणयैकवाक्यत्वं तद्वदित्यर्थः ।

'ಗಂಗಾಯಾಂ ಘೋಷಃ' ಎಂದು ಪ್ರಯೋಗಿಸಿದಾಗ ಗಂಗೆಯಲ್ಲಿ ಮತ್ಸ್ಯವಿದೆ. ತೀರದಲ್ಲಿ ಘೋಷವಿದೆಯೆಂದು ವಾಕ್ಯಭೇದವನ್ನು ಕಲ್ಪನೆ ಮಾಡದೆ, ಗಂಗಾಪದಕ್ಕೆ ಲಕ್ಷಣಾವನ್ನು ಮಾಡಿ, ಏಕವಾಕ್ಯತ್ವವನ್ನೇ ಕೂಡಿಸುತ್ತಾರೋ, ಅದರಂತೆ ಪ್ರಕೃತ, ಏಕವಾಕ್ಯತ್ವವನ್ನು ಕೂಡಿಸುವುದಕ್ಕಾಗಿ ಅಭೇದವನ್ನೇ ಒಪ್ಪಬೇಕು ಎಂದಭಿಪ್ರಾಯ.

**प्रकाशः** – श्रुतिलिङ्गान्वयानुपपत्तिरूपाभेदसाधकार्थापत्तिर्न श्रुतिबाधितेत्याह – **नच पूर्वत्रेति** ।।

ಶ್ರುತಿ ಹಾಗೂ ಲಿಂಗ ಇವುಗಳ ಸಮಾನಾಧಿಕರಣ್ಯವು ಅನುಪಪನ್ನವಾಗುತ್ತದೆ ಎಂಬ ಅಭೇದಸಾಧಕವಾದ ಅರ್ಥಾಪತ್ತಿಯು ಶ್ರುತಿಗೆ ಬಾಧಕವಲ್ಲವೆಂದು ಹೇಳುತ್ತಿದ್ದಾರೆ 'ನಚ ಪೂರ್ವತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – एतेन पूर्वेणागतार्थत्वं चोक्तम् । तर्कपराहतिश्चार्थापत्तेर्नास्तीत्याह – **नच जीवैरिति** ।। एतेन पूर्ववैषम्येणापि पूर्वपक्ष उक्तो ध्येयः ।

ಹೀಗೆ ಹೇಳಿದ್ದರಿಂದ ಗತಾರ್ಥತ್ವವೂ ಕೂಡ ಬರುವುದಿಲ್ಲವೆಂದು ಹೇಳಿದಂತಾಯಿತು. ಅರ್ಥಾಪತ್ತಿಗೆ ತರ್ಕಪರಾಹತಿಯಿಲ್ಲವೆಂದು 'ನಚ ಜೀವೈಃ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇದರಿಂದ ಹಿಂಗಿನ ಅಧಿಕರಣಕ್ಕಿಂತಲೂ ವಿಷಮವಾದ ಪೂರ್ವಪಕ್ಷವನ್ನು ಹೇಳಿದಂತಾಯಿತು.

**प्रकाशः** – न केवलमर्थापत्त्यैवाभेदसिद्धिरागमादपीति भावेनार्थापत्तेर्मूलमप्याह – **स त्रेधेति** ।। तृतीयस्कन्धैकादशाध्यायतात्पर्योक्तेयं श्रुतिः ।

ಕೇವಲ ಅರ್ಥಾಪತ್ತಿಯಿಂದಷ್ಟೇ ಅಭೇದವು ಸಿದ್ಧವಾಗುತ್ತಿರುವುದಲ್ಲ. ಆಗಮಪ್ರಮಾಣದಿಂದಲೂ ಕೂಡ ಅಭೇದವು ಸಿದ್ಧವಾಗುತ್ತಿದೆಯೆಂದು ಅರ್ಥಾಪತ್ತಿಗೆ ಮೂಲವನ್ನು ಹೇಳುತ್ತಿದ್ದಾರೆ 'ಸ ತ್ರೇಧಾ' ಇತ್ಯಾದಿಯಾಗಿ. ತೃತೀಯಸ್ಕಂಧದ ಏಕಾದಶಾಧ್ಯಾಯದ ಭಾಗವತತಾತ್ಪರ್ಯದಲ್ಲಿ ಈ ಶ್ರುತಿಯನ್ನು ವಿವರಿಸಲಾಗಿದೆ.

**प्रकाशः** – एतेन "सत्त्वं रजस्तम इति प्रकृतेर्गुणास्तैर्युक्तः परः पुरुष एक इहास्यधत्ते । स्थित्यादये हरिविरिञ्चहरेति संज्ञा इत्यादेश्च" इति टीकोक्तादिपदार्थो विवृतः ।

ಹೀಗೆ ಹೇಳಿದ್ದರಿಂದ 'ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈರ್ಯುಕ್ತ ಪರಃ ಪುರುಷ ಏಕ ಇಹಾಸ್ಯಧತ್ತೇ । ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾ ಇತ್ಯಾದೇಶ್ಚ' ಎಂಬ ಟೀಕೆಯಲ್ಲಿ ಹೇಳಿದ ಆದಿಪದದ ಅರ್ಥವನ್ನು ವಿವರಿಸಿದಂತಾಯಿತು.

**प्रकाशः** – स्थित्यादये इति भागवते ।

'ಸ್ಥಿತ್ಯಾದಯೇ' ಎಂಬುದು ಭಾಗವತದ ಮಾತು.

**प्रकाशः** – नयान्तरेणास्यागतार्थत्वाय श्रुत्यादावभेदोक्तेरन्यथासिद्धिमाशङ्क्य निराह – **नच सेति** ।। विशिष्येत्युक्तसमाधिष्टीकाकृत्संमत इत्याह – **अत एवेति** ।। तत्त्वमसीत्यादेर्गतेर्वक्ष्यमाणत्वादेव विशिष्य अभेदोक्तेर्गत्यनुक्तेरेव चेत्यर्थः ।

ಬೇರೆ ಅಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿದೋಷವಿಲ್ಲವೆಂದು ತೋರಿಸಲು ಶ್ರುತಿಯಲ್ಲಿ ಹೇಳಲ್ಪಟ್ಟ ಅಭೇದೋಕ್ತಿಗೆ ಅನ್ಯಥಾಸಿದ್ಧಿಯನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ನಚ ಸಾ' ಇತ್ಯಾದಿ ವಾಕ್ಯದಿಂದ. ವಿಶಿಷ್ಯ ಎಂದು ಹೇಳಿದ್ದರಿಂದ ಇದು ಟೀಕಾಕಾರರಿಗೂ ಸಮ್ಮತವಾಗಿದೆಯೆಂದು 'ಅತ ಏವ'

ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಅತ ಏವ' ಎಂದರೆ 'ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಗೆ ಮುಂದೆ ಗತಿಯನ್ನು ತೋರಿಸುತ್ತಾರಾದ್ದರಿಂದ ವಿಶೇಷವಾಗಿ ಅಭೇದೋಕ್ತಿಗೆ ಗತಿಯನ್ನು ಹೇಳದ ಕಾರಣದಿಂದಲೂ ಎಂದರ್ಥ.

**गुरुराजीयम्** – ननु ब्रह्मणि ब्रह्मशब्दस्य यौगिकत्वाच्चतुर्मुखे च योगरूढत्वा द्योगमात्रापेक्षया योगरूढेः प्राबल्येनाजशब्दस्यैव विषणावनवकाशत्वाभिधाने टीकाविरोधः । तत्र केवलस्याजशब्दस्य विष्णौ सावकाशत्वेऽपि ब्राह्मणशब्देन सहपठितस्याजशब्दस्य विष्णावनवकाशत्वाभिधानादित्यत आह – **टीकायामिति** ।। अभ्युपेत्योक्तेः किं प्रयोजनमित्यतो भाष्यन्यायविवरणयोरविरोधोपपादनमित्याह – **एवञ्चेति** ।। टीकाया ब्राह्मणशब्देन सहपठितस्याजशब्दस्यानवकाशत्वोक्तेरभ्युपेत्य वादत्वे टीकाया गौणत्वं भवतीत्यतष्टीकास्वारस्याय पक्षान्तरमाह – **यद्वेति** ।। तथाचाजशब्दस्योभयत्रापि योगरूढत्वेन सावकाशत्वादनवकाशत्वार्थं ब्राह्मणशब्द-साहित्येनाजशब्दस्य विष्णावनवकाशतोक्तिर्युक्तेत्यर्थः । ननु स वा एष महानज आत्मेति वाक्ये महच्छब्दस्य सत्त्वात्तस्य चोत्कृष्टार्थत्वादुत्कर्षस्य च बाधाभावे सङ्कुचितत्वासम्भवात् असङ्कुचितोत्कर्षस्य च ब्रह्मण्येव सत्त्वेनाजशब्दस्य विरिञ्चपरत्वे तत्समानाधिकरणतया श्रुतस्य महच्छब्दस्य विरोधापत्त्या न विरिञ्चस्याजशब्दार्थत्वमित्याशङ्क्य स्यादेवं यदि महच्छब्दस्योत्कृष्टार्थत्वं स्यात्तदेव नास्तीत्याह – **महच्छब्दोऽपीति** ।। विरिञ्चस्यैवाजशब्दार्थत्वे आत्मश्रुतिविरोध इत्यत आह – **आत्मशब्दोऽपीति** ।। नन्वभेदाभावेऽपि श्रुतिलिङ्गाबाधः सम्भवतीत्यभेदः किमर्थमित्याशङ्कते – **नचेति** ।। पूर्वाधिकरणन्यायाविषयत्वमाह – **नच पूर्वत्रेति** ।। पूर्वत्र वाऽत्र वा बाधकाभावाच्च नाभेदस्त्याज्य इत्याह – **नचेति**।। **अत एवेति** ।। अभेदोक्तिमात्रस्यान्तर्यामिपरत्वस्य सादृश्याभिप्रायत्वसत्त्वेऽपि विशिष्याभेदोक्तेरन्तर्यामिपरत्वस्य वा सादृश्याभिप्रायत्वस्य वा सम्भव इति टीकाभिप्रेतत्वादेवेत्यर्थः ।



'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ವಾಕ್ಯದಿಂದ ಪ್ರತಿಪಾದ್ಯನಾದವನು ವಿರಿಂಚನೇ ಆಗಿದ್ದಾನೆಂದು ಪೂರ್ವಪಕ್ಷ. ಚತುರ್ಮುಖಬ್ರಹ್ಮನಲ್ಲಿ ಪ್ರಸಿದ್ಧವಾದ ಅಜಶಬ್ದವನ್ನು ಶ್ರುತಿಯು ಹೇಳುತ್ತಿದೆ. ಅಜಶಬ್ದವು ಯೌಗಿಕವಾಗಿ ಮತ್ತು ರೂಢವಾಗಿ ಚತುರ್ಮುಖನಲ್ಲೇ ಪ್ರಸಿದ್ಧವಾಗಿದೆ. ಇಂತಹ ಅಜಶಬ್ದದ ಜೊತೆಗೆ ಪಠಿತವಾದ ಕಾರಣ. ಬ್ರಾಹ್ಮಣಶಬ್ದವೂ ಕೂಡ ಚತುರ್ಮುಖನನ್ನೇ ಪ್ರತಿಪಾದನೆ ಮಾಡುತ್ತದೆ. ಮತ್ತು ಶ್ರುತಿಯಲ್ಲಿ 'ಮಹಾನ್' ಎಂಬ ಪದವಿದೆ. 'ಆತ್ಮಾ' ಎಂಬ ಪದವಿದೆ. 'ಮಹಾನ್' ಎಂಬ ಪದವು ಅಭಿಮಾನ್ಯಧಿಕರಣದ ನ್ಯಾಯದಂತೆ ಮಹತ್ತತ್ವಾಭಿಮಾನಿಯಾದ ಚತುರ್ಮುಖನನ್ನೇ ಮುಖ್ಯವನ್ನಾಗಿ ಪ್ರತಿಪಾದನೆ ಮಾಡುತ್ತದೆ. ಆತ್ಮಶಬ್ದವೂ ಕೂಡ 'ಆತ್ಮಾವಿರಿಂಚ ಸುಮನಾಃ' ಇತ್ಯಾದಿ ಕಾಠಕದ ಮಾತಿನಂತೆ ವಿರಿಂಚನನ್ನೇ ಪ್ರತಿಪಾದನೆ ಮಾಡುತ್ತದೆ.

ಹಾಗಾದರೆ ಅದೇ ಶ್ರುತಿಯಲ್ಲಿ 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿ' ಇತ್ಯಾದಿಯಾಗಿ ಸರ್ವಾಧಿಪತಿತ್ವವೇ ಮೊದಲಾದ ವಿಷ್ಣುವಿನ ಲಿಂಗಗಳು ಕೇಳಿಸುತ್ತಿವೆಯಲ್ಲವೇ? ಎಂದು ಪ್ರಶ್ನಿಸಬಾರದು. ವಿರಿಂಚನಿಗೆ ವಿಷ್ಣುವಿನಿಂದ ಅಭೇದವನ್ನು ಒಪ್ಪಿ, ಈ ಎಲ್ಲಾ ಲಿಂಗಗಳನ್ನು ವಿರಿಂಚನಲ್ಲಿ ಸಾವಕಾಶ ಮಾಡಬೇಕು. ಇದರಿಂದ ಶ್ರುತಿಗೆ ಹಾಗೂ ಲಿಂಗಗಳಿಗೆ ನ್ಯಾಯವನ್ನು ಒದಗಿಸಿದಂತಾಗುತ್ತದೆ. ಎರಡರಲ್ಲಿ ಒಂದಕ್ಕೆ ಬಾಧವನ್ನು ಹೇಳುವ ಪ್ರಸಂಗ ಬರುವುದಿಲ್ಲ. 'ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾ' ಇತ್ಯಾದಿ ಸ್ಮೃತಿಗಳು 'ವಿಷ್ಣೋರ್ನ್ವೀರ್ಯಾವ ಸತ್ತ್ವಸ್ಯ ರಜಸೋ ಬ್ರಹ್ಮೋ ಈಶಾನಃ' ಇತ್ಯಾದಿ ಶ್ರುತಿಗಳು ವಿರಿಂಚ, ಪರಮಾತ್ಮ, ರುದ್ರ ಈ ಮೂವರು ಒಬ್ಬನೇ ವಿಷ್ಣುವಾಗಿದ್ದಾನೆಂದು ಅಭೇದವನ್ನು ಹೇಳುತ್ತಿವೆ. ಆದ್ದರಿಂದ ಶ್ರುತಿಲಿಂಗಗಳೆಲ್ಲವೂ ಚತುರ್ಮುಖನಲ್ಲೇ ಬರುತ್ತದೆಂದು ಬ್ರಾಹ್ಮಣಶಬ್ದಪ್ರತಿಪಾದ್ಯನು ವಿರಿಂಚನೇ ಆಗುತ್ತಾನೆ ಹೊರತು, ವಿಷ್ಣುವಲ್ಲವೆಂಬ ಪೂರ್ವಪಕ್ಷವು ಸ್ಥಾಪಿತವಾಯಿತು.



● ● ● ● ●

## ವಿಷ್ಣುವಿನ ಧರ್ಮ ವಿರಿಂಚನಲ್ಲಿ ಸರ್ವಥಾ ಬರುವುದಿಲ್ಲ

### तात्पर्यचन्द्रिका

**।। सिद्धान्तस्तु ।। भाष्याद्युक्तश्रुत्यादिभिः सर्वाधिपतित्वादिकं तावन्न विष्णोरन्यत्र ।**

ಅನುವಾದ - ಸಿದ್ಧಾಂತ ಹೀಗಿದೆ - ಭಾಷ್ಯದಲ್ಲಿ ಉದಾಹರಿಸಿದ ಶ್ರುತ್ಯಾದಿಗಳಿಂದ ಸರ್ವಾಧಿಪತಿತ್ವವೇ ಮೊದಲಾದ ಧರ್ಮಗಳೆಲ್ಲವೂ ವಿಷ್ಣುವಿನಲ್ಲಿ ಮಾತ್ರ ಬರುತ್ತವೆ ಹೊರತು, ಬೇರೆಯವರಲ್ಲಿ ಬರುವುದಿಲ್ಲವೆಂದು ತಿಳಿಯುತ್ತದೆ.

**नाप्युभयाबाधाया भेदः ।**

**यतः –**

**विरुद्धेष्वप्यभेदश्चेद्यवव्रीह्यादिकेष्वपि ।**
**अभेदः स्यात्ततः क्वापि विकल्पाद्येव नो भवेत् ।। १ ।।**

ಅಜಶ್ರುತಿ ಹಾಗೂ ಸರ್ವಾಧಿಪತಿತ್ವ ಮೊದಲಾದ ವಿಷ್ಣುವಿನ ಲಿಂಗಗಳು ಇವೆರಡಕ್ಕೆ ಬಾಧ ಬರಬಾರದೆನ್ನಲು ವಿರಿಂಚನಿಗೂ, ಬ್ರಹ್ಮನಿಗೂ ಅಭೇದವನ್ನು ಹೇಳಬಾರದು. ಏಕೆಂದರೆ

ವಿರುದ್ಧೇಷ್ವಪ್ಯಭೇದಶ್ಚೇದ್ಯವವ್ರೀಹ್ಯಾದಿಕೇಷ್ವಪಿ ।
ಅಭೇದಃ ಸ್ಯಾಯತ್ತತಃ ಕ್ವಾಪಿ ವಿಕಲ್ಪಾದ್ಯೇವ ನೋ ಭವೇತ್ ॥೧॥

ವಿರುದ್ಧವಾದ ಎರಡು ಪದಾರ್ಥಗಳಿಗೆ ಅಭೇದವನ್ನು ಹೇಳುವುದಾದರೆ, ಯವ ಹಾಗೂ ವ್ರೀಹಿಗಳಿಗೂ ಅಭೇದವನ್ನು ಹೇಳಬೇಕಾದೀತು. ಆದ್ದರಿಂದ ಎಲ್ಲಿಯೂ ಕೂಡ ವಿಕಲ್ಪವೆಂಬುದೇ ಇಲ್ಲವೆಂದಾಗಬೇಕು.

**''व्रीहिभिर्यजेत यवैर्यजेत'' इत्यादावुभयाबाधाय व्रीहियवयोरभेदापत्त्या तयोर्विकल्पो न स्यात् । ''धेन्वा क्रीणाति वाससा क्रीणाति'' इत्यादौ धेन्वादीनां समुच्चयश्च न स्यात् ।**

'ವ್ರೀಹಿಭಿರ್ಯಜೇತ ಯವೈರ್ಯಜೇತ' ಇತ್ಯಾದಿ ವಾಕ್ಯಗಳು ಒಂದೇ ಯಾಗದಲ್ಲಿ ಪ್ರಸಕ್ತವಾಗಿವೆ. ಈ ಎರಡುವಿಧ ವಾಕ್ಯಗಳಿಗೆ ಬಾಧವನ್ನು ಹೇಳಬಾರದೆನ್ನಲು ವ್ರೀಹಿ ಹಾಗೂ ಯವಗಳಿಗೂ ಅಭೇದವನ್ನು ಒಪ್ಪಬೇಕಾದೀತು. ಆದ್ದರಿಂದ ಇವೆರಡರಲ್ಲಿ ಒಂದರಿಂದ ಹೋಮ ಮಾಡಬೇಕೆಂಬ ವಿಕಲ್ಪವೇ ಇಲ್ಲವೆಂದಾಗಬೇಕಾದೀತು. ಮತ್ತು 'ಧೇನ್ವಾ ಕ್ರೀಣಾತಿ ವಾಸಸಾ ಕ್ರೀಣಾತಿ' ಎಂಬಲ್ಲಿ ಸೋಮಲತೆಯನ್ನು, ಹಸುವನ್ನು ಮತ್ತು ಬಟ್ಟೆಯನ್ನು ಕೊಟ್ಟು, ಕೊಂಡುಕೊಳ್ಳಬೇಕು ಎಂದು ಸಮುಚ್ಚಿತವಾದ ಪಕ್ಷವು ಸಿದ್ಧವಾಗಿದೆ. ಇಲ್ಲಿಯೂ ಕೂಡ ಧೇನು ಹಾಗೂ ಬಟ್ಟೆಗೆ ಅಭೇದವನ್ನು ಒಪ್ಪಿ, ಸಮುಚ್ಚಯಪಕ್ಷವೂ ಕೂಡ ತಪ್ಪೆಂದಾಗಬೇಕಾದೀತು.

**ततश्च लोकवेदयोर्विकल्पादिवार्तैवोत्सीदेत् । व्रीह्यादिभेदः प्रत्यक्षश्चेद्विष्णोर्विरिञ्चाद्भेदोऽपि ''तत एते व्यजायन्त विश्वो हिरण्यगर्भ'' इत्यादिधर्मिग्राहक श्रुतिसिद्धः ।**

ವ್ರೀಹಿ ಯವಾದಿಗಳಿಗೆ ಅಭೇದವನ್ನು ಒಪ್ಪುವುದು ಇಷ್ಟಾಪತ್ತಿಯೆಂದರೆ ಲೌಕಿಕ ವ್ಯವಹಾರದಲ್ಲಿ ಹಾಗೂ ವೈದಿಕ ವ್ಯವಹಾರದಲ್ಲಿ ಎಲ್ಲಿಯೂ ಕೂಡ ವಿಕಲ್ಪವೆಂಬ ವಾರ್ತೆಯೇ ಸುಳ್ಳಾಗಬೇಕಾದೀತು. ಇನ್ನು ವ್ರೀಹಿ ಹಾಗೂ ಯವಗಳಿಗೆ ಇರುವ ಭೇದವು ಪ್ರತ್ಯಕ್ಷಸಿದ್ಧವಾಗಿದೆಯೆಂದು ಉತ್ತರಿಸುವುದಾದರೆ, ವಿಷ್ಣು ಹಾಗೂ ಚತುರ್ಮುಖರಿಗೂ ಭೇದವು ಶ್ರುತಿಸಿದ್ಧವಾಗಿದೆ. 'ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭಃ' ಇತ್ಯಾದಿ ಧರ್ಮಿಗ್ರಾಹಕವಾದ ಶ್ರುತಿಯೇ ಸ್ಪಷ್ಟವಾಗಿ ಭೇದವನ್ನು ಹೇಳುತ್ತಿದೆ.

**''स त्रेध'' इत्याद्यपि तद्गतरूपविशेषाभिप्रायम् । अन्यथा ''स आविवेश ब्रह्मा ब्रह्माणं चतुर्मुखमीश ईशानं पञ्चमुखम्'' इति वाक्यशेषेण ''ब्रह्मणि ब्रह्मरूपोऽसौ शिवरूपी शिवे स्थित'' इत्यादिस्मृत्याच विरोधात् ।**

ಪೂರ್ವಪಕ್ಷದಲ್ಲಿ ಉದಾಹರಿಸಿದ 'ಸ ತ್ರೇಧಾ' ಎಂಬವಾಕ್ಯವು ವಿರಿಂಚಾದಿಗಳಲ್ಲಿರುವ ರೂಪವಿಶೇಷವನ್ನಷ್ಟೇ ಹೇಳಲು ಹೊರಟಿದೆ. ಹೀಗೊಪ್ಪದಿದ್ದರೆ 'ಸ ಆವಿಶೇಷ ಬ್ರಹ್ಮಾ ಬ್ರಹ್ಮಾಣಾಂ ಚತುರ್ಮುಖಮೀಶ ಈಶಾನಂ ಪಂಚಮುಖಮ್' ಎಂಬ ವಾಕ್ಯಶೇಷದ ವಿರೋಧವು ಬರುತ್ತದೆ. ಒಬ್ಬನೇ ಪರಮಾತ್ಮನು ಬ್ರಹ್ಮರೂಪವನ್ನು ಸ್ವೀಕರಿಸಿ, ಚತುರ್ಮುಖನನ್ನು ಪ್ರವೇಶಿಸಿದನು. ಈಶ ಎಂಬ ರೂಪವನ್ನು ಸ್ವೀಕರಿಸಿ ರುದ್ರನನ್ನು ಪ್ರವೇಶಿಸಿದನು ಎಂದು ಸ್ಪಷ್ಟವಾಗಿ ಭೇದವನ್ನೇ ಹೇಳುತ್ತಿದೆ. ಮತ್ತು 'ಬ್ರಹ್ಮಣಿ ಬ್ರಹ್ಮರೂಪೋऽಸೌ ಶಿವರೂಪೀ ಶಿವೇ ಸ್ಥಿತಃ' ಚತುರ್ಮುಖನಲ್ಲಿ ಬ್ರಹ್ಮನೆಂಬ ರೂಪದಿಂದ ಶಿವನಲ್ಲಿ ಶಿವಯೆಂಬ ರೂಪದಿಂದ ಪರಮಾತ್ಮನು ಇದ್ದಾನೆಂದು ಹೇಳುವ ಸ್ಮೃತಿಗೂ ಕೂಡ ವಿರೋಧ ಬರುತ್ತದೆ.

**''स्थाणुर्होच्चक्राम स प्रजापतिमुवाच कोऽसि के स्मः कः स इति । स होवाच योऽस्मि ये स्थ यःस'' इति विशिष्य भेदोक्तेश्च ।**

ಮತ್ತು ಭಾಗವತದ ತೃತೀಯಸ್ಕಂಧದಲ್ಲಿ ಸ್ಪಷ್ಟವಾಗಿ ಸ್ವತಃ ಬ್ರಹ್ಮದೇವರೇ ಪರಮಾತ್ಮನಿಂದ ತಮಗೆ ಭೇದವಿದೆಯೆಂದು ಹೇಳಿದ್ದಾರೆ - 'ಸ್ಥಾಣುರ್ಹೋಚ್ಚಕ್ರಾಮ ಸ ಪ್ರಜಾಪತಿಮುವಾಚ ಕೋऽಸಿ ಕೇ ಸ್ಮಃ ಕಃ ಸ ಇತಿ । ಸ ಹೋವಾಚ ಯೋऽಸ್ಮಿ ಯೇ ಸ್ಥ ಯಃಸ' ಬ್ರಹ್ಮದೇವರನ್ನು ಕುರಿತು ರುದ್ರದೇವರು ಶೀಘ್ರವಾಗಿ ಸಮೀಪಿಸಿದರು. ಬ್ರಹ್ಮದೇವರನ್ನು ಕುರಿತು, ನಿಮಗಿಂತ ಭಿನ್ನನಾಗಿ ಉತ್ಕೃಷ್ಟನಾದವನು ಯಾರು? ಪರಮಾತ್ಮನು ನಮಗಿಂತ ಉತ್ಕೃಷ್ಟನು ಹೇಗಾಗಿದ್ದಾನೆ ? ನಮಗಿಂತ ಅಥವಾ ನನಗಿಂತ ಭಿನ್ನನಾಗಿ ಉತ್ಕೃಷ್ಟನಾದವನು ಯಾರು? ಎಂದು ಪ್ರಶ್ನಿಸಿದಾಗ. ಬ್ರಹ್ಮದೇವರು ನಿನಗೂ, ನನಗೂ ಪರಮಾತ್ಮನಿಗೂ ಸ್ಪಷ್ಟವಾದ ಭೇದವಿದೆ. ಈ ಭೇದವು ಅತ್ಯಂತ ಸತ್ಯಭೂತವಾಗಿದೆ. ನಿನಗಿಂತಲೂ ಮತ್ತು ನನಗಿಂತಲೂ ಪರಮಾತ್ಮನು ಉತ್ತಮನಾಗಿದ್ದಾನೆ ಎಂದು ಉತ್ತರಿಸಿದ್ದಾರೆ.

**प्रकाशः –**

अत्र टीकायां ''अयं ब्राह्मणो विष्णुरेव'' इत्यारभ्य ''अन्यथा पत्यादिशब्द-विरोधात्'' इत्यन्तेन निरवकाशलिङ्गेन सिद्धान्तः कृतः । तत्र लिङ्गनिरवकाशत्वं व्यनक्ति ।। **भाष्यादीति** ।।

ವಿವರಣೆ - ಸಿದ್ಧಾಂತ ಮಾಡುವ ಟೀಕೆಯಲ್ಲಿ 'ಅಯಂ ಬ್ರಾಹ್ಮಣೋ ವಿಷ್ಣುರೇವ' ಎಂಬಲ್ಲಿಂದ ಪ್ರಾರಂಭಮಾಡಿ, 'ಅನ್ಯಥಾ ಪತ್ಯಾದಿಶಬ್ದವಿರೋಧಾತ್' ಎಂಬಲ್ಲಿಯ ತನಕ, ನಿರವಕಾಶಲಿಂಗವನ್ನು ಆಧರಿಸಿ ಸಿದ್ಧಾಂತ ಸ್ಥಾಪನೆ ಮಾಡಿದ್ದಾರೆ. ಟೀಕೆಯಲ್ಲಿ ಉದಾಹರಿಸಿದ ಲಿಂಗಗಳಿಗೆ ನಿರವಕಾಶತ್ವವನ್ನು ಗ್ರಂಥಕಾರರು 'ಭಾಷ್ಯಾದಿ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः –** ''उतामृतत्वस्येशान'' इत्यादिभिरित्यर्थः । श्रुत्यर्थष्टीकायां व्यक्तः ब्राह्मणाजशब्दौ सावकाशाविति टीकायामेवोक्तम् । विवृतं च पूर्वपक्ष एवास्माभिरिति भावः ।

'ಉತಾಮೃತತ್ವಸ್ಯೇಶಾನ' ಇತ್ಯಾದಿ ಶ್ರುತಿಗಳಿಂದ ಸರ್ವಾಧಿಪತಿತ್ವಲಿಂಗವು ಹೇಳಲ್ಪಟ್ಟಿದೆ ಎಂದರ್ಥ. ಈ ಶ್ರುತಿಯ ಅರ್ಥವನ್ನು ಟೀಕೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಬ್ರಾಹ್ಮಣಶ್ರುತಿ ಹಾಗೂ ಅಜಶ್ರುತಿಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆಯೆಂದು ಟೀಕೆಯಲ್ಲಿಯೇ ಹೇಳಿದ್ದಾರೆ. ಮತ್ತು ಪೂರ್ವಪಕ್ಷದಲ್ಲಿ ನಾವೂ ಕೂಡ ವಿವರಿಸಿದ್ದೇವೆ.

**प्रकाशः –** ''न चाभेदात् पतित्वादिविरिञ्चेऽपि सम्भवति'' इत्यादिटीकां विवृण्वन् लिङ्गानामन्यथासिद्धिं प्रागुक्तामाशङ्क्य निराह – **नापीति** ।।

'ನ ಚಾಭೇದಾತ್ ಪತಿತ್ವಾದಿವಿರಿಂಚೇऽಪಿ ಸಂಭವತಿ' ಅಭೇದವಿರುವ ಕಾರಣ ಸರ್ವಾಧಿಪತಿತ್ವಾದಿ ಧರ್ಮವು ವಿರಿಂಚನಲ್ಲಿಯೂ ಕೂಡ ಬರುತ್ತವಲ್ಲವೇ? ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ, ವಿಷ್ಣುಲಿಂಗಗಳಿಗೆ ಅನ್ಯಥಾಸ್ಥಿತಿಯನ್ನು ಪೂರ್ವಪಕ್ಷದಲ್ಲಿ ಹೇಳಿದಂತೆ ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ 'ನಾಪಿ' ಇತ್ಯಾದಿ ವಾಕ್ಯದಿಂದ.

**प्रकाशः –** विमतौ नाभिन्नौ विरुद्धधर्माश्रयत्वात् व्रीहि यवादिवदित्यनुमान-विरोधः। विरिञ्चस्य कर्मलेपाभावायुक्तेर्नित्यमुक्तेन परमात्मना भेदस्यैवोपपन्नत्वादिति टीकोक्तिलब्धं मनसि निधाय तस्यानुमानस्याप्रयोजकत्वपरिहाराय विपक्षे बाधकतर्कमाह – **विरुद्धेष्विति** ।।

'ವಿಮತೌ ನಾಭಿನ್ನೌ ವಿರುದ್ಧಧರ್ಮಾಶ್ರಯತ್ವಾತ್ ವ್ರೀಹಿಯವಾದಿವತ್' ವ್ರೀಹಿ ಯವಾದಿಗಳಲ್ಲಿ ವಿರುದ್ಧಧರ್ಮಾಶ್ರಯವಿದೆ, ಭೇದವೇ ಇರುತ್ತದೆ. ಅದರಂತೆ ವಿರಿಂಚ ಹಾಗೂ ವಿಷ್ಣು ಇಬ್ಬರಿಗೆ ವಿರುದ್ಧ-

ಧರ್ಮಾಶ್ರಯತ್ವವಿರುವುದರಿಂದ ಅಭೇದವಿರಲು ಸಾಧ್ಯವಿಲ್ಲ ಎಂಬ ಅನುಮಾನ ವಿರೋಧ ಬರುತ್ತದೆ. ಮತ್ತು ವಿರಿಂಚನಿಗೆ ಕರ್ಮಲೇಪಾಭಾವ ಎಂಬ ಧರ್ಮವು ಬರುವುದಿಲ್ಲ. ನಿತ್ಯಮುಕ್ತನಾದ ಪರಮಾತ್ಮನಿಗೆ ಈ ಧರ್ಮವು ಸ್ವಾಭಾವಿಕವಾಗಿರುತ್ತದೆ. ಹೀಗೆ ವಿರುದ್ಧಧರ್ಮಾಶ್ರಯರಾದ ಇಬ್ಬರಿಗೂ ಭೇದವನ್ನು ಹೇಳುವುದೇ ಸಮಂಜಸವಾಗುತ್ತದೆ. ಈ ವಿಷಯವು ಟೀಕೆಯಿಂದಲೇ ತಿಳಿಯುತ್ತದೆಂದು ಮನಸ್ಸಿನಲ್ಲಿಟ್ಟು-ಕೊಂಡು ಅನುಮಾನಕ್ಕೆ ಅಪ್ರಯೋಜಕತ್ವಾಶಂಕೆಯನ್ನು ಪರಿಹರಿಸಲು ವಿಪಕ್ಷ ಬಾಧಕತರ್ಕವನ್ನು ಹೇಳುತ್ತಿದ್ದಾರೆ 'ವಿರುದ್ಧೇಷು' ಇತ್ಯಾದಿ ವಾಕ್ಯದಿಂಬ. ಅಂದರೆ ವಿರುದ್ಧಧರ್ಮಾಶ್ರಯವಿದ್ದರೂ ಕೂಡ ಅಭೇದವೇ ಇರಲಿ ಎಂದು ಅಪ್ರಯೋಜಕಾಶಂಕೆಯನ್ನು ಮಾಡಿದರೆ, ವ್ರೀಹಿ ಯವಾದಿಗಳಿಗೂ ಅಭೇದವನ್ನು ಒಪ್ಪಬೇಕಾದೀತು ಎಂಬ ವಿಪಕ್ಷಬಾಧಕ ತರ್ಕವನ್ನು ಹೇಳಿದ್ದಾರೆ.

**प्रकाशः** – व्रीह्यादाविष्टापत्तिमाशंक्याह – **ततः कापीति** ।। **श्लोकं व्याचष्टे** – **व्रीहिभिरिति** ।। अधिकरणशरीरं प्रागुक्तमन्तस्तद्धर्मेति सूत्रे । विकल्पादीत्यादिपदार्थमाह – **धेन्वेति** ।।

ವ್ರೀಹಿ, ಯವಗಳಿಗೂ ಅಭೇದವನ್ನೇ ಒಪ್ಪುತ್ತೇವೆ ಎಂಬ ಆಶಂಕೆಗೆ 'ತತಃ ಕ್ವಾಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಶ್ಲೋಕವನ್ನು 'ವ್ರೀಹಿಭಿಃ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ 'ವ್ರಿಹಿಯವಾಧಿ-ಕರಣವನ್ನು ಹಿಂದೆ ಅಂತಸ್ತದ್ಧರ್ಮೋಪದೇಶವೆಂಬ ಸೂತ್ರವ್ಯಾಖ್ಯಾನದಲ್ಲಿಯೇ ನಾವು ವಿವರಿಸಿದ್ದೇವೆ. ವಿಕಲ್ಪಾದಿ ಎಂಬಲ್ಲಿರುವ ಆದಿಪದದ ಅರ್ಥವನ್ನು 'ಧೇನ್ವಾ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**प्रकाशः** – द्वादशस्य चतुर्थेपादे ''क्रयणे तु विकल्पः स्यात्'' इति तृतीयेऽधिकरणे ''एकहायन्या क्रीणाति वाससा क्रीणाति'' इति श्रुतधेन्वादीनां व्रीह्यादिवद्विकल्पप्राप्तौ समुच्चय उक्तः । स नस्यादित्यर्थः ।

'ಕ್ರಯಣೇ ತು ವಿಕಲ್ಪಃ ಸ್ಯಾತ್' (೧೨-೪-೩)[1]

(१) **भाट्टसङ्ग्रहः** –

**अथ तृतीयं सोमक्रयसाधनानामजादीन समुचयाधिकरणम् (सूत्रे ५-७)**

**क्रयणेषु तु विकल्पस्स्यादेकाथत्वात् ।।५।।**

**(समुच्चयो वा प्रयोगे द्रव्यसमवायात् ।।६।। समुच्चयं च दर्शयति ।।७।।)**

पूर्वन्यायेन शङ्कनात्सङ्गतिः । सोमक्रयणार्थं द्रव्याणि श्रूयन्ते ''अजया क्रीणाति'' ''हिरण्मयेति क्रीणाति'' ''एकहायन्या क्रीणाति'' ''वाससा क्रीणाति'' इत्यादीनि । तत्रेकहायन्यादिगुणभेदेन तत्तद्गुणविशिष्टक्रयाणां भिन्नत्वाद्दशगुणविशिष्टतयोत्पन्ना दशापि क्रयाः किं सोमप्राप्तौ विकल्प्यन्ते, उत समुचीयन्त इति सन्देहे, सर्वक्रयाणां सोमप्राप्ति-रूपैकार्थ्यान्पूर्वत्र याज्यानुवाक्यायुगलवद्विकल्प इति **प्राप्तम्** । तदाह, क्रयणेषु त्वित्यादि ।

ಬ್ರಾಹ್ಮಣಾಧಿಕರಣ (೧-೩-೧೪)

ಈ ಅಧಿಕರಣದಲ್ಲಿ 'ಏಕಹಾಯನ್ಯಾ ಕ್ರೀಣಾತಿ ವಾಸಸಾ ಕ್ರೀಣಾತಿ' ಎಂಬ ವಿಷಯವಾಕ್ಯದಲ್ಲಿ ಶ್ರುತವಾದ ಧೇನು, ಬಟ್ಟೆ ಮೊದಲಾದವುಗಳಿಗೆ ವ್ರೀಹಿಯವಾದಿಗಳಂತೆ ವಿಕಲ್ಪವನ್ನು ಹೇಳಬೇಕೋ, ಅಥವಾ ಸಮುಚ್ಚಯವನ್ನು ಹೇಳಬೇಕೋ? ಎಂದು ಸಂಶಯ. ವಿಕಲ್ಪವನ್ನೇ ಹೇಳಬೇಕೆಂದು ಪೂರ್ವಪಕ್ಷ. ಸೋಮವನ್ನು ಅವನ ಬಳಿ ತೆಗೆದುಕೊಳ್ಳಲು ಪ್ರಸನ್ನೀಕರಿಸಿಕೊಳ್ಳಬೇಕು. ಅದಕ್ಕಾಗಿ ಹಸುವನ್ನೂ ಕೊಡಬೇಕು, ಬಟ್ಟೆಯನ್ನೂ ಕೊಡಬೇಕು. ತನಗೆ ಕೊಡಲು ಎಷ್ಟು ಸಾಮರ್ಥ್ಯವಿದೆಯೋ, ಅವೆಲ್ಲವನ್ನೂ ಕೊಟ್ಟು ಕೊಂಡುಕೊಳ್ಳಬೇಕೆಂದು ಸಮುಚ್ಚಯಪಕ್ಷವನ್ನು ಆಶ್ರಯಿಸಿ ಸಿದ್ಧಾಂತ ಮಾಡಲಾಗಿದೆ. ಪ್ರಕೃತ ವಿರುದ್ಧ ಧರ್ಮಾಧಿಕರಣಗಳಿಗೂ ಅಭೇದವಿರುವುದಾದಲ್ಲಿ ಈ ಸಮುಚ್ಚಯ ಪಕ್ಷವೂ ಕೂಡ ತಪ್ಪೆಂದಾಗಬೇಕಾದೀತು.

**प्रकाशः** – ''इत्यादिभेदश्रुतिबाहुल्याच्च'' इति टीकोक्तिं विवृण्वंस्तदुक्तेरुपयोगं व्यनक्ति ।। **व्रीह्यादिभेद इति ।। भेदोऽपीति** ।। श्रुतिसिद्ध इत्यन्वयः ।

'ಇತ್ಯಾದಿಭೇದಶ್ರುತಿಬಾಹುಲ್ಯಾಚ್ಚ' ಎಂಬ ಟೀಕಾಮಾತನ್ನು ವಿವರಿಸುವವರಾಗಿ, ಟೀಕಾ ಮಾತಿಗೆ ಸಾರ್ಥಕ್ಯವನ್ನು ತೋರಿಸುತ್ತಿದ್ದಾರೆ 'ವ್ರೀಹ್ಯಾದಿಭೇದ' ಇತ್ಯಾದಿ ವಾಕ್ಯದಿಂದ. 'ಭೇದೋಽಪಿ' ಎಂಬುದಕ್ಕೆ ಶ್ರುತಿಸಿದ್ಧವೆಂಬಲ್ಲಿ ಅನ್ವಯವನ್ನು ತಿಳಿಯಬೇಕು.

**प्रकाशः** – ''एको नारायण आसीन्न ब्रह्मा नच शङ्करः । समुनिर्भूत्वा समचिन्तयत् । तत एत'' इति कार्यकारणभावेन भेदबोधिन्या धर्मिग्राहकतया प्रबलया ''रूपोपन्यासाच्च'' इति सूत्रभाष्योक्तश्रुत्या सिद्ध इत्यर्थः ।

'ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನಚ ಶಂಕರಃ । ಸಮುನಿರ್ಭೂತ್ವಾ ಸಮಚಿಂತಯತ್ । ತತ ಏತೇ' ಎಂಬಲ್ಲಿ ಕಾರ್ಯಕಾರಣಭಾವದಿಂದ ಭೇದವು ತಿಳಿಯುತ್ತಿದೆ. ಮತ್ತು ಧರ್ಮಿಗ್ರಾಹಕವಾಗಿ ಪ್ರಬಲವಾದ 'ರೂಪೋಪನ್ಯಾಸಾಚ್ಚ' ಎಂಬ ಸೂತ್ರಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಿಂದಲೂ ಕೂಡ ವಿರಿಂಚನಿಗೂ, ವಿಷ್ಣುವಿಗೂ ಭೇದವೇ ತಿಳಿಯುತ್ತಿದೆ.

---

व्यक्तोऽर्थं । **सिद्धान्तस्तु,** ''व्रीहिभिर्यजेत'' इत्यादौ ''व्रीहिभिरेव यजेत'', ''यवैरेव यजेत'' इति द्रव्यनियम इव, नात्र ''वाससैव क्रीणाति'' इति ''एकहायन्यैव क्रीणाति'' इति द्रव्यनियमः । तथात्वे ''अश्वशफेत क्रीणाति'' इति वचनादश्वशफमात्रस्यैव क्रयसाधनत्वापत्तेः । न चेष्टापत्तिः । विक्रेतुरल्पेनाऽत्यसंभवात् । अतो वाससा क्रीणातीवेति वाक्यार्थ इति व्रीहियवादिवैषम्येण न तत्रेव विकल्पः । किन्तु समुच्चय। । किञ्च क्रयाणां विक्रेत्रानतिप्रयोजनकत्वादानतेश्च बहुभिस्सुकरत्वादानतिरूपकार्यसौकर्याय समुच्चयाश्रयणम् । वस्तुतस्तु तत्तद्गुणविशिष्टक्रयसाध्याऽऽनतीनां भेदेन कार्यैक्याभावात्समुच्चय इति ज्ञेयम् । तदाह **सूत्रे, समुच्चयो वा प्रयोगे द्रव्यसयवायादिति** ।

**इति तृतीयं सोमक्रपसाधनानामजादीनां समुच्चयाधिकरणम्**

ಪರಿಪೂರ್ಣಚಂದ್ರಿಕಾ

**प्रकाशः – प्रागुक्तश्रुत्यादिविरोधमाशंक्य स्मृतेस्तु तदन्तर्गतेश्वररूपापेक्षयोपपत्तेरिति टीकोक्तं समाधिं विपक्षे बाधोक्त्या व्यनक्ति ।। स त्रेधेति ।।**

ಹಿಂದೆ ಉದಾಹರಿಸಿದ ಶ್ರುತ್ಯಾದಿಗಳ ವಿರೋಧವನ್ನು ಆಶಂಕಿಸಿ, ಸ್ಮೃತಿಯಲ್ಲಿ ವಿರಿಂಚಾದಿಗಳ ಅಂತರ್ಯಾಮಿ ಭಗವದ್ರೂಪವನ್ನೇ ವರ್ಣಿಸಲಾಗಿದೆಯೆಂಬುದಾಗಿ ವ್ಯಾಖ್ಯಾನಿಸುತ್ತಾ ಟೀಕೆಯಲ್ಲಿ ಸಮಾಧಾನವನ್ನು ವಿಪಕ್ಷದಲ್ಲಿ ಬಾಧಕತರ್ಕವನ್ನಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸ ತ್ರೇಧಾ' ಇತ್ಯಾದಿಯಾಗಿ.

**प्रकाशः – तद्गतेति ।। ब्रह्मेशानगतेत्यर्थः ।। ब्रह्मणीति ।। प्रथमस्कन्धद्वितीयाध्यायतात्पर्यस्मृतिः । स्थाणुरिति तात्पर्योक्तश्रुतिः । स्थाणुः रुद्रः । प्रजापतिं ब्रह्माणम् ।**

'ತದ್ಗತ' ಎಂದರೆ ಚತುರ್ಮುಖ ಬ್ರಹ್ಮನಲ್ಲಿ ಮತ್ತು ರುದ್ರನಲ್ಲಿ ಎಂದರ್ಥ. 'ಬ್ರಹ್ಮಣಿ' ಎಂಬ ವಾಕ್ಯವು ಪ್ರಥಮ ಸ್ಕಂಧದ ಎರಡನೆಯ ಅಧ್ಯಾಯದ ಭಾಗವತತಾತ್ಪರ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯವಾಗಿದೆ. 'ಸ್ಥಾಣುಃ' ಇತ್ಯಾದಿ ವಾಕ್ಯವು ಭಾಗವತತಾತ್ಪರ್ಯದಲ್ಲಿ ಉದಾಹರಿಸಿದ ಶ್ರುತಿವಾಕ್ಯವಾಗಿದೆ. ಸ್ಥಾಣು ಶಬ್ದಕ್ಕೆ ರುದ್ರನೆಂದರ್ಥ. 'ಪ್ರಜಾಪತಿಂ' ಎಂದರೆ ಚತುರ್ಮುಖನನ್ನು 'ಉಚ್ಚಕ್ರಾಮಃ' ಎಂದರೆ ಶೀಘ್ರವಾಗಿ ಸಮೀಪಿಸಿದನು ಎಂದರ್ಥ. ಈ ಎಲ್ಲ ಶ್ರುತಿ-ಸ್ಮೃತಿಗಳಿಂದ ಚತುರ್ಮುಖನಿಗೂ, ವಿಷ್ಣುವಿಗೂ ಭೇದವಿದೆಯೆಂದು ಸ್ಪಷ್ಟವಾಗಿ ತಿಳಿಯುತ್ತಿದೆ.




ಚತುರ್ಮುಖನು ಬ್ರಾಹ್ಮಣಶಬ್ದವಾಚ್ಯನಾಗಲು ಸಾಧ್ಯವಿಲ್ಲ. ಹೊರತು, ಮಹಾವಿಷ್ಣುವೇ ಬ್ರಾಹ್ಮಣಶಬ್ದವಾಚ್ಯನಾಗುತ್ತಾನೆ. 'ಉತಾಮೃತತ್ವಸ್ಯೇಶಾನಃ' ಇತ್ಯಾದಿ ಶ್ರುತಿಗಳು ಸರ್ವಾಧಿಪತಿತ್ವ ಧರ್ಮವು ವಿಷ್ಣುವಿನಲ್ಲಿ ಮಾತ್ರವಿದೆಯೆಂದು ಘೋಷಣೆ ಮಾಡುತ್ತಿವೆ. ಅದೇ ಸರ್ವಾಧಿಪತಿತ್ವಧರ್ಮವನ್ನು ಬ್ರಾಹ್ಮಣನಲ್ಲಿ ಶ್ರುತಿಹೇಳಿದ್ದರಿಂದ, ಬ್ರಾಹ್ಮಣನೂ ಕೂಡ ಮಹಾವಿಷ್ಣುವೇ ಆಗುತ್ತಾನೆ. ಹಾಗಾದರೆ ಅಜಶ್ರುತಿಯಿಂದ ವಿರೋಧಪರಿಹರಿಸಲು ಮಹಾವಿಷ್ಣುವಿಗೂ ಚತುರ್ಮುಖನಿಗೂ ಅಭೇದವನ್ನು ಹೇಳಬಹುದಲ್ಲವೇ? ಎಂದು ಆಕ್ಷೇಪ ಮಾಡಬಾರದು. ಒಂದು ವೇಳೆ ಪರಸ್ಪರ ವಿರೋಧ ಬಂದಾಗ ಅದರ ಪರಿಹಾರಕ್ಕೆ ಅಭೇದವನ್ನು ಆಶ್ರಯಿಸುವುದಾದರೆ ವ್ರೀಹಿಯಿಂದ ಹೋಮಿಸಬೇಕೋ, ಯವದಿಂದ ಹೋಮಿಸಬೇಕೋ? ಎಂಬ ಗೊಂದಲವುಂಟಾದಾಗ ವಿರುದ್ಧಧರ್ಮಗಳಿಗೆ ಆಶ್ರಯವಾದ ವ್ರೀಹಿ ಹಾಗೂ ಯವಗಳಿಗೂ ಅಭೇದವನ್ನೇ ಒಪ್ಪಬೇಕಾಗುತ್ತದೆ. ಅದರಂತೆ ಸೋಮಕ್ರಯಣವನ್ನು ಧೇನುವನ್ನು ಕೊಟ್ಟು ಮಾಡಬೇಕೋ, ಅಥವಾ ಬಟ್ಟೆಯನ್ನು ಕೊಟ್ಟು ಮಾಡಬೇಕೋ? ಎಂಬ ಸಂಶಯವು ಉಂಟಾದಾಗ. ಧೇನು ಹಾಗೂ ಬಟ್ಟೆ ಎರಡಕ್ಕೂ ಅಭೇದವನ್ನು ಒಪ್ಪಬೇಕಾಗುತ್ತದೆ. ಹೀಗೆ ಒಪ್ಪುತ್ತಾ ಹೋದರೆ, ಲೋಕದಲ್ಲಿ ಹಾಗೂ ವೇದದಲ್ಲಿ ವಿಕಲ್ಪ ಎಂಬ ವಾರ್ತೆಯೇ ಸುಳ್ಳಾಗುತ್ತದೆ. ಆದ್ದರಿಂದ ಯಾವ ಎರಡು ಪದಾರ್ಥಗಳು ವಿರುದ್ಧಧರ್ಮಗಳಿಗೆ ಆಶ್ರಯವಾಗಿದೆಯೋ, ಅವುಗಳಿಗೆ ಅಭೇದವನ್ನು ಸರ್ವಥಾ ಒಪ್ಪಬಾರದು.

ಬ್ರಾಹ್ಮಣಾಧಿಕರಣ (೧-೩-೧೪)

ಮತ್ತು ಸ್ಪಷ್ಟವಾಗಿ ಯಾವ ಶ್ರುತಿಯಿಂದ ಚತುರ್ಮುಖನು ಸಿದ್ಧನಾಗಿದ್ದಾನೋ, ಅಂತಹ 'ತತ ಏತೇ ವ್ಯಜಾಯಂತ ವಿಶ್ವೋ ಹಿರಣಗರ್ಭ' ಎಂಬ ಶ್ರುತಿಯೇ ವಿಷ್ಣುವಿನಿಂದ ಚತುರ್ಮುಖನಿಗೆ ಭೇದವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಕೆಲವೊಮ್ಮೆ ವೇದದಲ್ಲಿ ಬ್ರಹ್ಮ, ರುದ್ರ ಇವರನ್ನು ವಿಷ್ಣುವೆಂಬ ವ್ಯವಹಾರ ಕಂಡರೆ, ಅಂತರ್ಯಾಮಿ ರೂಪದಿಂದ ಅವುಗಳನ್ನು ಕೂಡಿಸಬೇಕು. ಏಕೆಂದರೆ ಚತುರ್ಮುಖಬ್ರಹ್ಮದೇವರೇ ಸ್ಪಷ್ಟವಾಗಿ ರುದ್ರದೇವರ ಬಳಿ 'ಯೋಽಸ್ಮಿ ಯೇ ಸ್ಥ ಯಃಸ' ಎಂದು ತಮಗೂ, ಪರಮಾತ್ಮನಿಗೂ ಭೇದವಿದೆಯೆಂದು ಹೇಳಿಕೊಂಡಿದ್ದಾರೆ. ತಮಗಿಂತಲೂ ಪರಮಾತ್ಮನು ಅತ್ಯಂತ ಉತ್ಕೃಷ್ಟನಾಗಿದ್ದಾನೆಂದು ಸಾರಿದ್ದಾರೆ. ಹೀಗಿರುವಾಗ ಅಭೇದವನ್ನು ಒಪ್ಪಿ, ಸರ್ವಾಧಿಪತಿತ್ವ ಮೊದಲಾದ ವಿಷ್ಣುವಿನ ಲಿಂಗಗಳನ್ನು ಚತುರ್ಮುಖಬ್ರಹ್ಮದೇವರಲ್ಲಿ ಕೂಡಿಸಲು ಸಾಧ್ಯವಿಲ್ಲ. ವಿಷ್ಣುವಿನಲ್ಲಿರುವ ಸರ್ವಾಧಿಪತಿತ್ವ ಮೊದಲಾದ ಧರ್ಮಗಳು ಬೇರೆ ಎಲ್ಲಿಯೂ ಕೂಡ ಬರುವುದಿಲ್ಲವಾದ್ದರಿಂದ ನಿರವಕಾಶವಾಗಿವೆ. ಇಂತಹ ನಿರವಕಾಶಲಿಂಗಗಳಿಂದ ಮಹಾವಿಷ್ಣುವೇ ಬ್ರಾಹ್ಮಣಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

• • • • •

## ಭೇದಪ್ರತಿಪಾದಕವಾದ ಅನೇಕ ಸೂತ್ರಗಳಲ್ಲಿ ಪುನರುಕ್ತಿದೋಷವಿಲ್ಲ

### तात्पर्यचन्द्रिका

**अत्र च ''भेदव्यपदेशाच्च शारीरश्चोभयेऽपि हि भेदेन'' इत्यादौ जीवाद्विष्णोर्भेदं स्वीकृत्यानन्दमयादेस्तत्तल्लिङ्गैर्जीवत्वे शङ्किते तन्निरासः ।**

ಅನುವಾದ - ಈ ಅಧಿಕರಣದಲ್ಲಿಯೂ ಭೇದವನ್ನು ಸಮರ್ಥನೆ ಮಾಡಲಾಗಿದೆ. ಆದರೆ ಈಗಾಗಲೇ ಅನೇಕ ಅಧಿಕರಣಗಳಲ್ಲಿ ಪರಮಾತ್ಮನಿಗೆ ಭೇದವನ್ನು ಸಮರ್ಥನೆ ಮಾಡಿದ್ದಾಗಿದೆ. ಮುಂದೆಯೂ ಕೂಡ ಕೆಲವು ಅಧಿಕರಣಗಳಲ್ಲಿ ಸಮರ್ಥನೆ ಮಾಡುತ್ತಾರೆ. ಆ ಎಲ್ಲ ಅಧಿಕರಣಗಳಿಂದ ಇದಕ್ಕೆ ಪುನರುಕ್ತಿ ದೋಷ ಬರುತ್ತದಲ್ಲವೇ?

ಪುನರುಕ್ತಿ ಬರುವುದಿಲ್ಲ. ಏಕೆಂದರೆ ಭೇದಸಾಧಕವಾದ ಪ್ರತಿಯೊಂದು ಸೂತ್ರಗಳಲ್ಲಿಯೂ ಸಮರ್ಥಿಸುವ ಭೇದವು ಭಿನ್ನ-ಭಿನ್ನವಾಗಿಯೇ ಇದೆ. ಉದಾಹರಣೆ - ಆನಂದಮಯಾಧಿಕರಣದ 'ಭೇದವ್ಯಪದೇಶಾಚ್ಚ' ಎಂಬ ಸೂತ್ರದಲ್ಲಿ ಮತ್ತು ಅಂತರ್ಯಾಮ್ಯಧಿಕರಣದಲ್ಲಿ 'ಶಾರೀರಶ್ಚೋಭಯೋಽಪಿ ಹಿ ಭೇದೇನಮಧೀಯತೇ' ಎಂಬ ಸೂತ್ರದಲ್ಲಿ ಜೀವನಿಗಿಂತ ವಿಷ್ಣು ಭಿನ್ನನಾಗಿದ್ದಾನೆಂದು ಒಪ್ಪಲಾಗಿದೆ. ಆದರೆ ಆನಂದಮಯನಿಗೆ ಮತ್ತು ಅಂತರ್ಯಾಮಿಗೆ ಜೀವಾಭೇದವನ್ನು ಆಶಂಕಿಸಲಾಗಿದೆ. ಮತ್ತು ಆನಂದಮಯನಿಗೂ ಅಂತರ್ಯಾಮಿಗೂ ಅಭೇದವನ್ನು ನಿರಾಕರಣೆ ಮಾಡಿ, ಭೇದವನ್ನು ಸಮರ್ಥಿಸಲಾಗಿದೆ.

**''भेदव्यपदेशाच्चान्य'' इत्यत्र तु ''इन्द्रस्यात्म'' इत्यादावात्मेति प्रातिपदिकस्य स्वरूपार्थत्वात्तदनुसारेण प्रयाजशेषन्यायेनेन्द्रस्येत्यादिषष्ठी नेया । ततश्च विष्णो-रिन्द्राद्यभेद इत्यादिके शङ्कित आत्मप्रातिपदिकस्य शरीरप्रतिसम्बन्ध्यर्थत्वोपपत्तेर्न विभक्तिबाधकतेत्यादिना परिहृतम् ।**

ಸಮುದ್ರಶಾಯಿತ್ವವೆಂಬ ಲಿಂಗ ಹಾಗೂ ಇಂದ್ರ ಶ್ರುತಿ ಇವೆರಡಕ್ಕೂ ಬರುವಂತಹ ಪರಸ್ಪರ ವಿರೋಧವನ್ನು ಪರಿಹರಿಸಲು ಇಂದ್ರನಿಗೂ ವಿಷ್ಣುವಿಗೂ ಅಭೇದವನ್ನು ಆಶಂಕಿಸಲಾಗಿದೆ. 'ಇಂದ್ರಸ್ಯಾತ್ಮಾ' ಎಂಬಲ್ಲಿ ಆತ್ಮಶಬ್ದಕ್ಕೆ ಸ್ವರೂಪ ಎಂದರ್ಥ. ಷಷ್ಠೀವಿಭಕ್ತಿಯು ಭೇದವನ್ನು ಹೇಳುವುದಿಲ್ಲ. ಏಕೆಂದರೆ ಪ್ರಾತಿಪದಿಕಕ್ಕೆ ಅನುಸಾರಿಯಾಗಿ ವಿಭಕ್ತಿಗೆ ಔಪಚಾರಿಕಾರ್ಥವನ್ನು ಮಾಡಬೇಕಾಗುತ್ತದೆ. ಉದಾಹರಣೆ - 'ಪ್ರಯಾಜಶೇಷೇಣ ಹವಿಂಷ್ಯಭಿಘಾರಯತಿ' ಎಂಬಲ್ಲಿ ತೃತೀಯಾವಿಭಕ್ತಿಗೆ ತೃತೀಯಾರ್ಥವನ್ನು ಒಪ್ಪಲಾಗಿದೆ. ಆದ್ದರಿಂದ 'ಪ್ರಯಾಜಶೇಷಂ ಹವಿಷ್ಷುಕ್ಷಾರಯೇತ್' ಎಂದು ಅರ್ಥೈಸಬೇಕು. ಏಕೆಂದರೆ ಶೇಷ ಎಂಬ ಪದದಿಂದ ಉಪಯುಕ್ತವಾದ ಹವಿಸ್ಸಿಗೆ ಸಂಸ್ಕಾರ ಹೇಳಲಾಗಿದೆ ಹೊರತು, ಮುಂದೆ ಉಪಯೋಗಿಸುವ ಹವಿಸ್ಸಿಗೆ ಸಂಸ್ಕಾರವಲ್ಲ. ಇಲ್ಲಿ ಪ್ರಾತಿಪದಿಕಕ್ಕೆ ಅನುಸಾರಿಯಾಗಿ ವಿಭಕ್ತ್ಯರ್ಥವನ್ನು ಗೌಣ ಮಾಡಿದ್ದು ಕಂಡಿದೆ. ಅದರಂತೆ ಪ್ರಕೃತದಲ್ಲಿಯೂ 'ಇಂದ್ರಸ್ಯ' ಎಂಬಲ್ಲಿರುವ ಷಷ್ಠಿಗೆ ಭೇದವೆಂಬರ್ಥವನ್ನು ವಿವಕ್ಷಿಸಬಾರದು. ಆದ್ದರಿಂದ ವಿಷ್ಣುವಿಗೂ ಇಂದ್ರಾದಿಗಳಿಗೆ ಅಭೇದವೇ ಇರುತ್ತದೆ.

ಹೀಗೆ ಆಶಂಕಿಸಿದರೆ ಆತ್ಮಾ ಎಂಬ ಪ್ರಾತಿಪದಿಕವು ಶರೀರಕ್ಕೆ ಪ್ರತಿಸಂಬಂಧಿಯಾದದ್ದನ್ನೇ ಹೇಳುತ್ತದೆ ಹೊರತು, ವಿಭಕ್ತಿಗೆ ಬಾಧಕವಾದದ್ದನ್ನು ಹೇಳುವುದಿಲ್ಲ. ಆದ್ದರಿಂದ ಷಷ್ಠೀವಿಭಕ್ತಿಯಿಂದ ತಿಳಿಯುವ ಭೇದ ಸತ್ಯಭೂತವಾಗಿದೆಯೆಂದು ಉತ್ತರಿಸಿದ್ದಾರೆ.

**पूर्वाधिकरणे तु ईशकर्तृकपरिष्वङ्गकर्मणो जीवस्येशाद्भेदधियं स्वीकृत्य स भेदो विशिष्टस्यैव । नतु विशेष्यस्येति स्वप्नद्रष्टृत्वसमन्वयविरोधिनि जीवमात्रस्य विष्ण्वभेदे तद्वाक्यस्थजीवविष्णुलिङ्गानां बाधाय शङ्किते तन्निरासः ।**

ಹಿಂದಿನ ಸುಷುಪ್ತ್ಯಧಿಕರಣದಲ್ಲಿ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ವಿಷಯವಾಕ್ಯದಲ್ಲಿರುವ ಈಶಕರ್ತೃಕಪರಿಷ್ವಂಗಕ್ಕೆ ಕರ್ಮನಾದ ಜೀವನಿಗೆ ಈಶನಿಂದ ಭೇದಜ್ಞಾನವು ಹುಟ್ಟುತ್ತದೆ. ಇಂತಹ ಭೇದವು ವಿಶಿಷ್ಟನಿಗೆ ಇರಬಹುದೇ ಹೊರತು, ಶುದ್ಧಚೈತನ್ಯನಾದ ವಿಶೇಷನಿಗೆ ಇರುವುದಿಲ್ಲ. ಆದ್ದರಿಂದ ಸ್ವಪ್ನದ್ರಷ್ಟೃತ್ವದ ಸಮನ್ವಯಕ್ಕೆ ವಿರೋಧಿಯಾದ ಸಕಲಜೀವನಿಗೆ ವಿಷ್ಣುವಿನಿಂದ ಅಭೇದವು ಪ್ರಾಪ್ತವಾದರೆ, ಆ ವಿಷಯವಾಕ್ಯದಲ್ಲಿರುವ ಜೀವ ಹಾಗೂ ವಿಷ್ಣುಲಿಂಗಗಳಿಗೆ ಬಾಧವು ಬರಬಾರದೆಂದು

ಅಭೇದವನ್ನು ಒಪ್ಪಲಾಗಿದೆ. ಹೀಗೆ ಜೀವಸಾಮಾನ್ಯರಿಗೂ, ಪರಮಾತ್ಮನಿಗೂ ಬರುವಂತಹ ಅಭೇದವನ್ನು ನಿರಾಕರಣೆ ಮಾಡಿದ್ದಾರೆ.

**इह तु अभेदपक्षे सर्वाधिपतित्वादेर्विरिञ्चेऽपि सम्भवान्न भेदधीरिति ब्राह्मण-शब्दसमन्वयविरोधिनि विरिञ्चस्य विष्ण्वभेदे तद्वाक्यस्थविष्णुविरिञ्चलिङ्गाबाधाय शङ्किते तन्निरासः ।**

ಪ್ರಕೃತ ಈ ಅಧಿಕರಣದಲ್ಲಿ ವಿರಿಂಚ ಹಾಗೂ ವಿಷ್ಣು ಇಬ್ಬರಿಗೂ ಅಭೇದವನ್ನು ಒಪ್ಪಿದರೆ, ಸರ್ವಾಧಿ-ಪತಿತ್ವವೆಂಬ ಲಿಂಗವು ವಿರಿಂಚನಲ್ಲಿಯೂ ಕೂಡ ಬರುತ್ತದೆ. ಆದ್ದರಿಂದ ಭೇದಜ್ಞಾನವು ಬ್ರಾಹ್ಮಣಶಬ್ದದ ಸಮನ್ವಯಕ್ಕೆ ವಿರುದ್ಧವಾಗುವುದಿಲ್ಲ. ಆದ್ದರಿಂದ ವಿಷಯವಾಕ್ಯದಲ್ಲಿರುವ ವಿರಿಂಚಶ್ರುತಿ ಹಾಗೂ ವಿಷ್ಣುಲಿಂಗಗಳಿಗೆ ಬಾಧವು ಬರಬಾರದೆಂಬ ಉದ್ದೇಶದಿಂದ ಕೇವಲ ಚತುರ್ಮುಖ ಹಾಗೂ ವಿಷ್ಣುವಿಗೆ ಮಾತ್ರ ಅಭೇದವನ್ನು ಆಶಂಕಿಸಿದ್ದಾರೆ. ಮತ್ತು ಅದನ್ನು ನಿರಾಕರಿಸಿದ್ದಾರೆ.

**''भोक्त्रापत्तेः'' इत्यत्र तु जीवाभिन्नत्वात् ब्रह्मणो जगत्कर्तृत्वं युक्तिविरुद्धमिति शङ्किते तन्निरासः ।**

ಎರಡನೆಯ ಅಧ್ಯಾಯದಲ್ಲಿ ಇರುವಂತಹ 'ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್' ಎಂಬ ಭೋಕ್ತ್ರಧಿಕರಣದಲ್ಲಿ ಬ್ರಹ್ಮನಿಗೆ ಜೀವಾಭೇದವಿರುವ ಕಾರಣ ಜೀವನಲ್ಲಿ ಜಗತ್‌ಕರ್ತೃತ್ವವು ಹೇಗೆ ಬರುವುದಿಲ್ಲವೋ? ಅದರಂತೆ ಬ್ರಹ್ಮನಲ್ಲಿಯೂ ಕೂಡ ಜಗತ್‌ಕರ್ತೃತ್ವವೂ ಬರುವುದಿಲ್ಲ. ಹಾಗೇ ಜಗತ್‌ಕರ್ತೃತ್ವವು ಬ್ರಹ್ಮನಲ್ಲಿ ಹೇಳಿದರೆ ಯುಕ್ತಿವಿರೋಧ ಬರುತ್ತದೆಂದು ಆಶಂಕಿಸಿ, ಜಗತ್ ಕರ್ತೃತ್ವಕ್ಕೋಸ್ಕರ ಜೀವಬ್ರಹ್ಮರಿಗೆ ಭೇದವನ್ನು ಸಮರ್ಥನೆ ಮಾಡಿದ್ದಾರೆ.

**पृथगित्यत्र तु जीवेशभेदाभेदश्रुत्योर्विरोध इति शङ्किते तन्निरास इत्यपौनरुक्त्यमिति ध्येयम् ।**

ಪೃಥಗುಪದೇಶಾಧಿಕರಣದಲ್ಲಿ ಜೀವ ಹಾಗೂ ಪರಮಾತ್ಮನಿಗೆ ಭೇದವನ್ನು ಹೇಳುವ ಕೆಲವು ಶ್ರುತಿಗಳಿವೆ. ಅಭೇದವನ್ನು ಹೇಳುವ ಶ್ರುತಿಗಳು ಇನ್ನು ಕೆಲವಿವೆ. ಇವುಗಳಿಗೆ ಪರಸ್ಪರ ವಿರೋಧವೂ ಪ್ರಾಪ್ತವಾದರೆ, ಅದನ್ನು ನಿರಾಕರಣೆ ಮಾಡಲಾಗಿದೆ. ಆದ್ದರಿಂದ ಅನೇಕ ಸೂತ್ರಗಳಲ್ಲಿ ಭೇದವನ್ನು ಸಮರ್ಥನೆ ಮಾಡಿದ್ದರೂ ವಿಷಯವು ಭಿನ್ನಭಿನ್ನವಾದ್ದರಿಂದ, ಯಾವುದೇ ಭೇದಸೂತ್ರಗಳಿಗೆ ಪರಸ್ಪರ ಪುನರುಕ್ತಿ ದೋಷವು ಬರುವುದಿಲ್ಲ.

**तदुक्तमनुव्याख्याने –**

**न जीवभेदसूत्राणां शङ्क्याऽत्र पुनरुक्तता ।**
**वाक्यान्तरद्योतकत्वात् पृथगित्यत्र पूर्णता ।। इति ।**

ಈ ಎಲ್ಲ ವಿಷಯದ ಸಾರವನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

**ನ ಜೀವಭೇದಸೂತ್ರಾಣಾಂ ಶಂಕ್ಯಾಽತ್ರ ಪುನರುಕ್ತತಾ ।**
**ವಾಕ್ಯಾಂತರದ್ಯೋತಕತ್ವಾತ್ ಪೃಥಗಿತ್ಯತ್ರ ಪೂರ್ಣತಾ ॥**

ಜೀವಭೇದಸಾಧಕವಾದ ಅನೇಕ ಸೂತ್ರಗಳಲ್ಲಿ ಪುನರುಕ್ತಿದೋಷವನ್ನು ಪರಸ್ಪರ ಆಶಂಕಿಸಬಾರದು ಏಕೆಂದರೆ ಪ್ರತಿಯೊಂದು ಸೂತ್ರಗಳ ವಿಷಯವಾಕ್ಯವು ಭಿನ್ನ-ಭಿನ್ನವಾಗಿರುತ್ತದೆ. ಎಲ್ಲಾ ಬಗೆಯ ಭೇದಪ್ರತಿಪಾದನೆಯು 'ಪೃಥಗುಪದೇಶಾತ್' ಎಂಬ ಅಧಿಕರಣದಲ್ಲಿ ಪೂರ್ಣವಾಗುತ್ತದೆ ಎಂದು.

**प्रकाशः –**

ननु प्राग्बहुशोऽभेदस्य व्युदस्तत्वात्पुनरभेदाशङ्का तत्समाधिश्च न युक्त इत्यतो भेदसूत्राणां विषयभेदमाह – **अत्र चेति ।।**

ವಿವರಣೆ - ಈ ಅಧಿಕರಣದಲ್ಲಿಯೂ ವಿರಿಂಚನಿಗೆ ಪರಮಾತ್ಮನಿಂದ ಭೇದವನ್ನು ಸಮರ್ಥನೆ ಮಾಡುತ್ತಿದ್ದಾರೆ. ಆದರೆ ಈಗಾಗಲೇ ಅನೇಕ ಅಧಿಕರಣಗಳಲ್ಲಿ ಭೇದವನ್ನು ಸಮರ್ಥನೆ ಮಾಡಿದ್ದಾಗಿದೆ. ಮುಂದೆಯೂ ಕೂಡ ಅನೇಕ ಕಡೆ ಭೇದವನ್ನು ಸಮರ್ಥನೆ ಮಾಡುತ್ತಾರೆ. ಆದ್ದರಿಂದ ಅಭೇದವನ್ನು ನಿರಾಕರಣೆ ಮಾಡಿ, ಭೇದವನ್ನು ಸ್ಥಾಪನೆ ಮಾಡುವುದು ಪುನರುಕ್ತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ ಗ್ರಂಥಕಾರರು ಉತ್ತರಿಸುವವರಾಗಿ, ಭೇದಪ್ರತಿಪಾದಕವಾದ ಸೂತ್ರಗಳು ಅನೇಕವಿದ್ದರೂ ಪ್ರತಿಯೊಂದು ಅಧಿಕರಣಗಳ ಉದ್ದೇಶ ಬೇರೆಯೇ ಆಗಿದೆಯೆಂದು ಸಮರ್ಥಿಸುತ್ತಿದ್ದಾರೆ. ಅಂದರೆ ಒಂದೇ ವಿಷಯದಲ್ಲಿ ಭೇದವನ್ನು ಸಮರ್ಥನೆ ಮಾಡದೇ, ಬೇರೆ ಬೇರೆ ವಿಷಯವನ್ನು ಆಧರಿಸಿ, ಭೇದ ಸಮರ್ಥನೆ ಮಾಡುತ್ತಿರುವುದರಿಂದ ಪುನರುಕ್ತಿ ಬರುವುದಿಲ್ಲವೆಂದು 'ಅತ್ರ ಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – शास्त्र इत्यर्थः ।। **भेदं स्वीकृत्येति** ।। ''भेदव्यपदेशाच्च'' इत्यानन्दमयाधिकरणगुणसूत्रस्य ''ते ये शतं प्रजापतेरानन्दा'' इत्यादि भाष्ये जीवादानन्दमयस्य भेदव्यपदेशार्थकत्वेनोक्तत्वात्तदभिप्रायेणैतदुक्तम् । सुधायां जीवब्रह्मपरत्वेन व्याख्यानं तु वर्णकान्तरमभिप्रेत्य ।

'ಅತ್ರ ಚ' ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಎಂದರ್ಥ. ಹಿಂದೆ ಬಂದಿರುವ ಭೇದಸಾಧಕ ಸೂತ್ರಗಳು ಹೀಗಿವೆ - ಆನಂದಮಯಾಧಿಕರಣದ 'ಭೇದವ್ಯಪದೇಶಾಚ್ಚ' ಎಂಬ ಗುಣಸೂತ್ರದಲ್ಲಿ ಭೇದಸಮರ್ಥನೆ ಮಾಡಿದ್ದಾರೆ. 'ತೇ ಯೇ ಶತಂ ಪ್ರಯಾಜಪತೇರಾನಂದಾಃ' ಇತ್ಯಾದಿ ಭಾಷ್ಯದಲ್ಲಿ ಜೀವನ ದೆಸೆಯಿಂದ ಆನಂದಮಯನಿಗೆ ಭೇದವನ್ನು ಹೇಳಿರುತ್ತಾರೆ. ಪ್ರಕೃತ ಗ್ರಂಥಕಾರರು ಭಾಷ್ಯದ ಈ ಮಾತನ್ನು ವಿವಕ್ಷಿಸಿ, ಆನಂದಮಯನಿಗೆ ಜೀವನದೆಸೆಯಿಂದ ಭೇದವನ್ನು ಹೇಳಿದ್ದಾರೆಂದು ವ್ಯಾಖ್ಯಾನಿಸಿದ್ದಾರೆ ಹೊರತು, ಅನುವ್ಯಾಖ್ಯಾನ ಮತ್ತು ಸುಧೆಗಳನ್ನು ಅನುಸರಿಸಿ ಹೇಳಿದ್ದಲ್ಲ. ಏಕೆಂದರೆ ಅನುವ್ಯಾಖ್ಯಾನ ಮತ್ತು ನ್ಯಾಯಸುಧೆಗಳಲ್ಲಿ ಜೀವ ಹಾಗೂ ಬ್ರಹ್ಮರಿಗೆ ಅಭೇದವನ್ನು ಸಮರ್ಥನೆ ಮಾಡಿ, ಭೇದವನ್ನು ಸ್ಥಾಪನೆ ಮಾಡಿದ್ದಾರೆ. ಅದು ಮತ್ತೊಂದು ಸೂತ್ರಕ್ಕೆ ವ್ಯಾಖ್ಯಾನವಾದ್ದರಿಂದ ಅನುವ್ಯಾಖ್ಯಾನ ಹಾಗೂ ಭಾಷ್ಯಗಳಿಗೆ ಪರಸ್ಪರ ವಿರೋಧ ಬರುವುದಿಲ್ಲ. ಪ್ರಕೃತ ಗ್ರಂಥಕಾರರು ಭಾಷ್ಯದ ಅಭಿಪ್ರಾಯವನ್ನು ವಿವಕ್ಷಿಸಿ ಪುನರುಕ್ತಿದೋಷವಿಲ್ಲವೆಂದು ಸಮರ್ಥಿಸಿದ್ದಾರೆ.

**ಪ್ರಕಾಶಃ –** तस्मिन्पक्षे पौनरुक्त्याभावस्तु तत्र सर्वजीवसाधारण्येन तस्मिन्वाक्यविशेषेऽभेदे शङ्किते साधारणभेदव्यपदेशेन निरासः ।

ಒಂದು ವೇಳೆ ಅನುವ್ಯಾಖ್ಯಾನ ಪಕ್ಷವನ್ನು ಆಶ್ರಯಿಸಿದಲ್ಲಿಯೂ ಪುನರುಕ್ತಿ ಬರುವುದಿಲ್ಲವೆಂದು ತಿಳಿಯಬೇಕು. ಏಕೆಂದರೆ ಆನಂದಮಯಾಧಿಕರಣದ ಸೂತ್ರದಲ್ಲಿ ಸರ್ವಜೀವಸಾಧಾರಣವಾದ ಅಭೇದವನ್ನು ಆಶಂಕಿಸಿ ನಿರಾಕರಿಸಿದ್ದಾರೆ ಮತ್ತು ಆ ವಾಕ್ಯದಲ್ಲಿ ಮಾತ್ರ ಜೀವಬ್ರಹ್ಮ ಅಭೇದವು ಪ್ರಸಕ್ತವಾಗಿದೆಯೆಂದು ಆಶಂಕಿಸಿ ಸಾಧಾರಣವಾದ ಭೇದವನ್ನು ಹೇಳುವ ಮೂಲಕ ಸಮಾಧಾನವನ್ನು ನೀಡಿರುತ್ತಾರೆ.

**ಪ್ರಕಾಶಃ –** इह तु विशिष्याभेदे शङ्किते विशिष्य भेदोक्त्या निरास इति भावः । अत एवोक्तं विशिष्याभेदोक्त्ययोगात् विशिष्यभेदोक्तेश्चेति ।।

ಆದರೆ ಪ್ರಕೃತ ಈ ಅಧಿಕರಣದಲ್ಲಿ ಆನಂದಮಯಾಧಿಕರಣದ ಗುಣಸೂತ್ರದಲ್ಲಿ ಸಕಲಜೀವ ಸಾಧಾರಣವಾದ ಅಭೇದವನ್ನು ಆಶಂಕಿಸಿದ್ದಾರೆ. ಆದರೆ ಪ್ರಕೃತ ಈ ಅಧಿಕರಣದಲ್ಲಿ ಜೀವವಿಶೇಷನಾದ ಚತುರ್ಮುಖನಿಂದ ಬ್ರಹ್ಮನಿಗೆ ಅಭೇದವನ್ನು ಆಶಂಕಿಸಿ ಉತ್ತರಿಸಿದ್ದಾರೆ. ಮತ್ತು ಆ ಪ್ರಕರಣದಲ್ಲಿ ಪ್ರಸಕ್ತವಾದ ಅಭೇದವನ್ನಷ್ಟೇ ಆಶಂಕಿಸಿ ನಿರಾಕರಿಸಿದ್ದಾರೆ. ಆದರೆ ಪ್ರಕೃತ ವಿರಿಂಚನಿಗೂ, ಬ್ರಹ್ಮನಿಗೂ ಅಭೇದವನ್ನು ಆಶಂಕಿಸುತ್ತಿರುವ ಪ್ರಕರಣವೇ ಬೇರೆ ಆದರೂ ಪುನರುಕ್ತಿಗೆ ಅವಕಾಶವಿಲ್ಲ. ಆದ್ದರಿಂದ ಪೂರ್ವಪಕ್ಷ ಸಂದರ್ಭದಲ್ಲಿ 'ವಿಶಿಷ್ಯಭೇದೋಕ್ತ್ಯಯೋಗಾತ್' ಎಂದು, ಸಿದ್ಧಾಂತದಲ್ಲಿ 'ವಿಶಿಷ್ಯಭೇದೋಕ್ತೇಶ್ಚ' ಎಂದು ಹೇಳಿರುತ್ತಾರೆ.

**ಪ್ರಕಾಶಃ –** ''शारीरश्चोभयेऽपि'' इत्यन्तर्यामिनयगुणसूत्रे भाष्ये जीवानामन्तर्यामित्वे शङ्किते ''य आत्मनि तिष्ठन्'' इत्यादिनाऽऽत्मशब्दितजीवस्यान्तर्यामितो

भेदाध्ययनस्योक्त्या तदभिप्रायेणान्तर्यामिणो जीवत्वे शङ्किते तन्निरास इत्यादिपदेनोक्तम् ।

'ಆನಂದಮಯಾದೇಃ' ಎಂಬಲ್ಲಿರುವ ಆದಿಪದದಿಂದ ಇದನ್ನು ವಿವಕ್ಷಿಸಬೇಕು. 'ಶಾರೀರಶ್ಚೋಭಯೇऽಪಿ ಭೇದೇನೈನಮಧೀಯತೇ' ಎಂಬ ಅಂತರ್ಯಾಮ್ಯಧಿಕರಣ ಗುಣಸೂತ್ರದ ಭಾಷ್ಯದಲ್ಲಿ ಜೀವನೇ ಅಂತರ್ಯಾಮಿಯಾಗಿದ್ದಾರೆಂದು ಆಶಂಕಿಸಿ, 'ಯ ಆತ್ಮನಿ ತಿಷ್ಠನ್' ಎಂಬಲ್ಲಿ ಆತ್ಮಶಬ್ದದಿಂದ ಪ್ರತಿಪಾದ್ಯನಾದ ಜೀವನು ಅಂತರ್ಯಾಮಿಗಿಂತಲೂ ಭಿನ್ನನಾಗಿದ್ದಾನೆಂದು ಹೇಳಿದ್ದಾರೆ. ಆದ್ದರಿಂದ ಅಂತರ್ಯಾಮಿಯೇ ಜೀವನೆಂದು ಹೇಳಬಾರದೆಂದು ಸಮರ್ಥನೆ ಮಾಡಿದ್ದಾರೆ.

**प्रकाशः** – यदि तु "आत्मा विज्ञानमिति च सर्वजीवाभिमानवान् । ब्रह्मैवोक्त" इति बृहद्भाष्यदिशा चतुर्मुखस्यान्तर्यामितो भेदाध्ययनमित्यर्थः तदा चतुर्मुखस्यान्तर्यामित्वशङ्कातन्निरासयोरेव प्रतीत्या विष्ण्वभेदशङ्कातन्निरासयोरभावेनापौनरुक्त्यमिति भावः ।

ಒಂದು ವೇಳೆ ಬೃಹದಾರಣ್ಯಕ ಭಾಷ್ಯದ ವ್ಯಾಖ್ಯಾನವನ್ನು ಅನುಸರಿಸಿದರೆ, ಪುನರುಕ್ತಿಯಿಲ್ಲವೆಂದು ಹೀಗೆ ತಿಳಿಯಬೇಕು - 'ಆತ್ಮಾ ವಿಜ್ಞಾನಮಿತಿ ಚ ಸರ್ವಜೀವಾಭಿಮಾನವಾನ್ । ಬ್ರಹ್ಮೈವೋಕ್ತಃ' ಎಂಬುದಾಗಿ ಚತುರ್ಮುಖನಿಗೆ ಅಂತರ್ಯಾಮಿಯಿಂದ ಭೇದವು ತಿಳಿಯುತ್ತಿದೆ. ಆದ್ದರಿಂದ ಚತುರ್ಮುಖನಿಗೆ ಅಂತರ್ಯಾಮಿಯಿಂದ ಅಭೇದವನ್ನು ಆಶಂಕಿಸಿ, ಅದನ್ನು ನಿರಾಕರಣೆ ಮಾಡಬೇಕು. ಹೊರತು, ವಿಷ್ಣುವಿಗೂ, ಚತುರ್ಮುಖನಿಗೂ ಅಭೇದವನ್ನು ಆಶಂಕಿಸಿ ಉತ್ತರಿಸುವುದು 'ಶಾರೀರಶ್ಚೋಭಯೇऽಪಿ' ಎಂಬ ಸೂತ್ರದ ಅಭಿಪ್ರಾಯವಾಗುವುದಿಲ್ಲ. ಚತುರ್ಮುಖನಿಗೂ ವಿಷ್ಣುವಿಗೂ ಅಭೇದವನ್ನು ಅಧಿಕರಣದಲ್ಲಿ ನಿರಾಕರಿಸುವುದು ಪುನರುಕ್ತವಾಗುವುದಿಲ್ಲವೆಂದು ತಿಳಿಯಬೇಕು.

**प्रकाशः** – इत्यादावित्यादिपदेन "विशेषणभेदव्यपदेशाभ्यां च नेतरौ" इत्यत्र विरिञ्चस्य विष्णुतो भेदमुपेत्यैवादृश्यत्वादिगुणकाक्षरत्वे शङ्किते "तस्मादेतद्ब्रह्मनाम रूपमन्नं च जायत" इत्यक्षराद्भेदव्यपदेशोक्त्या तन्निरासः ।

ಗ್ರಂಥದಲ್ಲಿ 'ಇತ್ಯಾದೌ' ಎಂದು ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' ಎಂಬಲ್ಲಿ ವಿರಿಂಚನಿಗೆ ವಿಷ್ಣುವಿನಿಂದ ಭೇದವನ್ನು ಅಂಗೀಕರಿಸಿ ಅದೃಶ್ಯತ್ವಾದಿಗುಣವುಳ್ಳ ಅಕ್ಷರನೇ ವಿರಿಂಚನಾಗಿದ್ದಾನೆಂದು ಆಶಂಕಿಸಿದಾಗ 'ತಸ್ಮಾದೇತದ್‌ಬ್ರಹ್ಮನಾಮ ರೂಪಮನ್ನಂ ಚ ಜಾಯತೇ' ಎಂಬುದಾಗಿ ಅಕ್ಷರನಿಗಿನಿಂತ ವಿರಿಂಚನಿಗೆ ಭೇದವನ್ನು ಹೇಳಿ ಅಭೇದವನ್ನು ನಿರಾಕರಣೆ ಮಾಡಿದ್ದಾರೆಂಬುದನ್ನು ವಿವಕ್ಷಿಸಬೇಕು. ಅಂದರೆ ಇಲ್ಲಿಯೂ ಕೂಡ ವಿರಿಂಚನಿಗೆ ಬ್ರಹ್ಮನಿಂದ ಅಭೇದವನ್ನು ನಿರಾಕರಣೆ ಮಾಡಿಲ್ಲ. ಹೊರತಾಗಿ ಅಕ್ಷರನಿಂದ ವಿರಿಂಚನಿಗೆ ಇರುವಂತಹ ಭೇದವನ್ನು ನಿರಾಕರಣೆ ಮಾಡಿದ್ದಾರೆ.

ಬ್ರಾಹ್ಮಣಾಧಿಕರಣ (೧-೩-೧೪)

**प्रकाशः** – आत्मेत्यादावित्यादिपदेन ''भेदव्यपदेशात्'' इत्यत्र द्युभ्वादिनयगुणसूत्रे वाक्यविशेषे जीवब्रह्माभेदे शङ्किते तत्रैव प्रकरणे भेदोक्त्या तन्निरास इति गृह्यते ॥

'ಆತ್ಮೇತ್ಯಾದೌ' ಎಂಬಲ್ಲಿರುವ ಆದಿಪದದಿಂದ 'ಭೇದವ್ಯಪದೇಶಾತ್' ಎಂಬ ಅದೃಶ್ಯತ್ವಾಧಿಕರಣದ ಗುಣಸೂತ್ರದಲ್ಲಿ ಜೀವಬ್ರಹ್ಮ ಅಭೇದವನ್ನು ಆಶಂಕಿಸಿ, ಭೇದವನ್ನು ಸಮರ್ಥನೆ ಮಾಡಿದ್ದನ್ನು ವಿವಕ್ಷಿಸಬೇಕು. ಅಂದರೆ ಇಲ್ಲಿಯೂ ಕೂಡ ವಾಕ್ಯವಿಶೇಷದಲ್ಲಿ ಮಾತ್ರ ಜೀವಬ್ರಹ್ಮಾಭೇದವನ್ನು ಆಶಂಕಿಸಿ ಅದೇ ಪ್ರಕರಣದಲ್ಲಿರುವ ಭೇದಸಾಧಕಲಿಂಗಗಳಿಂದ ಅಭೇದವನ್ನು ನಿರಾಕರಣೆ ಮಾಡಿದ್ದಾರೆ ಹೊರತು, ಜೀವಬ್ರಹ್ಮಸಾಧಾರಣವಾದ ಅಭೇದವನ್ನು ಆಕ್ಷೇಪಿಸಿ ನಿರಾಕರಣೆ ಮಾಡಿಲ್ಲ.

**प्रकाशः – प्रयाजशेषेति ॥** उक्तमधिकरणशरीरं प्रागनुकृतिसूत्रे । ''प्रयाजशेषेण हवींष्यभिघारयति'' इत्यत्र शेषशब्दप्रातिपदिकस्वारस्येन तृतीयाया द्वितीयार्थकत्वकल्पनेन प्रयाजशेषं हविष्षूत्क्षारयेदित्यर्थ इत्युक्तन्यायेन षष्ठी ''राहोश्शिर'' इतिवदुपचारेण नेयेत्यर्थः ।

ಅನುಕೃತ್ಯಧಿಕರಣದಲ್ಲಿ ಈ ಪ್ರಯಾಜಶೇಷಾಧಿಕರಣವನ್ನು ವಿವರಿಸಿದ್ದಾಗಿದೆ. 'ಪ್ರಯಾಜಶೇಷೇಣ ಹವೀಂಷ್ಯಭಿಘಾರಯತಿ' ಎಂಬ ಪೂರ್ವಮೀಮಾಂಸೆಯಲ್ಲಿ 'ಪ್ರಯಾಜಶೇಷೇಣ' ಎಂಬಲ್ಲಿರುವ 'ಶೇಷ' ಎಂಬ ಪ್ರಾತಿಪದಿಕದ ಸ್ವಾರಸ್ಯಕ್ಕಾಗಿ ತೃತೀಯಾವಿಭಕ್ತಿಗೆ ದ್ವಿತೀಯಾವಿಭಕ್ತ್ಯರ್ಥವನ್ನು ಕಲ್ಪನೆ ಮಾಡಿದ್ದಾರೆ. ಅಂದರೆ 'ಪ್ರಯಾಜಶೇಷಂ ಹವಿಷ್ಷು ಕ್ಷಾರಯೇತ್' ಎಂಬುದಾಗಿ ಉಪಯೋಕ್ಷ್ಯಮಾಣವಾದ ದ್ರವ್ಯಕ್ಕೆ ಸಂಸ್ಕಾರವಾಗಿದೆಯೆಂದು ಒಪ್ಪಿದ್ದಾರೆ. 'ರಾಹೋಶ್ಶಿರಃ' ಎಂಬಲ್ಲಿ ರಾಹುವೇ ಶಿರಸ್ಸಾದ್ದರಿಂದ ಷಷ್ಠೀವಿಭಕ್ತಿಗೆ ಹೇಗೆ ಅರ್ಥವೇ ಇರುವುದಿಲ್ಲವೋ ಅದರಂತೆ ಇಲ್ಲಿಯೂ ಕೂಡ ಪ್ರಾತಿಪದಿಕಾರ್ಥವನ್ನೇ ಮುಖ್ಯವಾಗಿಟ್ಟುಕೊಂಡು, ವಿಭಕ್ತ್ಯರ್ಥವನ್ನು ಗೌಣವನ್ನಾಗಿ ವಿವಕ್ಷಿಸಬೇಕು. ಪ್ರಕೃತ 'ಇಂದ್ರಸ್ಯ ಆತ್ಮಾ' ಎಂಬಲ್ಲಿರುವ ಷಷ್ಠೀ ವಿಭಕ್ತಿಯೂ ಕೂಡ ಭೇದವೆಂಬರ್ಥವನ್ನು ಒಪ್ಪದೇ ಇಂದ್ರ ಎಂಬ ಪ್ರಾತಿಪದಿಕದ ಅರ್ಥವನ್ನೇ ಮುಖ್ಯವಾಗಿ ಪರಿಗಣಿಸಬೇಕು.

**प्रकाशः** – एतेनाभेदप्रापकभेदादपौनरुक्त्यमित्युक्तं भवति ॥ **भोक्त्रिति** ॥ द्वितीयाद्यपादे ॥ **पृथगिति** ॥ तत्रैव तृतीयपादे ॥ **तदुक्तमिति** ॥ आनन्दमयाधिकरणानुव्याख्यान इत्यर्थः ।

ಹೀಗೆ ಹೇಳಿದ್ದರಿಂದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಅಭೇದಪ್ರಾಪಕವಾದ ಯುಕ್ತಿಗಳು ಭಿನ್ನಭಿನ್ನವಾದ್ದರಿಂದ ಪುನರುಕ್ತಿ ದೋಷ ಬರುವುದಿಲ್ಲವೆಂದು ಸಮರ್ಥನೆ ಮಾಡಿದಂತಾಯಿತು. 'ಭೋಕ್ತ್ರಾಪತ್ತೇರವಿಭಾಗಃ' ಎಂಬ ಸೂತ್ರವು ಎರಡನೆಯ ಅಧ್ಯಾಯದ ಪ್ರಥಮ ಪಾದದಲ್ಲಿ ಪ್ರಸಕ್ತವಾಗುತ್ತದೆ.

ಪರಿಪೂರ್ಣಚಂದ್ರಿಕಾ

'ಪೃಥಗುಪದೇಶಾತ್' ಎಂಬ ಅಧಿಕರಣವು ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಪ್ರಸಕ್ತವಾಗುತ್ತದೆ. 'ತದುಕ್ತಮ್' ಎಂದರೆ ಆನಂದಮಾಯಧಿಕರಣದ ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ ಎಂದರ್ಥ.

**प्रकाशः** – अत्र शास्त्रे तत्र तत्र प्रकरणे ह्यैक्यविवक्षायां चोदितायां तत्तद्गतभेदवाक्यद्योतनेन सूत्रेषु भेदसमर्थनं क्रियते । अतस्तात्पर्यभेदान्न पुनरुक्तिश्शङ्क्या ।

ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಶ್ರುತಿವಾಕ್ಯಗಳ ಅರ್ಥವನ್ನು ವಿಚಾರ ಮಾಡುವಾಗ ಆಯಾ ಪ್ರಕರಣಗಳಲ್ಲಿ ಜೀವಬ್ರಹ್ಮರ ಅಭೇದವು ಆಪಾತತಃ ಕಾಣಿಸುತ್ತದೆ. ಆವಾಗ ಅದೇ ಪ್ರಕರಣದಲ್ಲಿರುವ ಭೇದಪ್ರತಿಪಾದಕ ಲಿಂಗಗಳಿಂದ ಭೇದವನ್ನು ಸಮರ್ಥನೆ ಮಾಡುತ್ತಾರೆ. ಹೀಗೆ ಭಿನ್ನ-ಭಿನ್ನ ಪ್ರಕರಣಗಳಲ್ಲಿ ಅಭೇದವನ್ನು ನಿರಾಕರಣೆ ಮಾಡುವ ತಾತ್ಪರ್ಯವಿರುವುದರಿಂದ ಪುನರುಕ್ತಿ ದೋಷಕ್ಕೆ ಆಸ್ಪದವಿಲ್ಲವೆಂದು ತಿಳಿಯಬೇಕು.

**प्रकाशः** – नन्वेवं सत्यभेदः क्वापि न निरस्तः स्यादित्यत उक्तं पृथगिति ।। पूर्णता प्रधानता । भेदसाधनस्य स्वातन्त्र्येण विचारितत्वादित्यर्थः ।

ಹಾಗಾದರೆ ಯಾವುದೇ ಒಂದು ಅಧಿಕರಣಗಳಲ್ಲಿಯೂ ಜೀವಬ್ರಹ್ಮರಿಗೆ ಭೇದವಿದೆಯೆಂದು ಮತ್ತು ಜೀವಬ್ರಹ್ಮರ ಅಭೇದವು ಅಸಾಧುವಾಗಿದೆಯೆಂದು ಸಾಮಾನ್ಯವಾಗಿ ಎಲ್ಲಿಯೂ ಕೂಡ ನಿರಾಕರಣೆ ಮಾಡಿಯೇ ಇಲ್ಲವೇ? ಎಂಬ ಪ್ರಶ್ನೆಗೆ 'ಪೃಥಗ್' ಎಂಬುದರಿಂದ ಉತ್ತರಿಸಿದ್ದಾರೆ. ಅಂದರೆ ಜೀವಬ್ರಹ್ಮರಿಗೆ ಅಭೇದವಿಲ್ಲವೆಂಬ ವಿಚಾರವನ್ನು ಪ್ರಧಾನವಾಗಿ ಪೃಥಗುಪದೇಶಾಧಿಕರಣದಲ್ಲಿ ಸಮರ್ಥನೆ ಮಾಡಿದ್ದಾರೆ. ಆ ಅಧಿಕರಣದಲ್ಲಿ ಜೀವಬ್ರಹ್ಮರ ಭೇದಸಮರ್ಥನೆಯೇ ಮುಖ್ಯವಾದ ವಿಚಾರವಾಗಿದೆಯೆಂದು ತಿಳಿಯಬೇಕು.

**गुरुराजीयम्** – व्रीह्यादिकेष्वित्यत्र विकल्पाद्येवेत्यत्र चादिपदसङ्ग्राह्यं दर्शयन् सङ्ग्रहश्लोकं व्याख्याति ।। **व्रीहिभिरित्यादिना** ।। दृष्टान्तदार्ष्टान्तिकयोर्वैषम्यं शङ्कते ।। **व्रीह्यादीति** ।। साम्येन परिहरति ।। **विष्णोरिति** ।। धर्मिग्राहकेत्युक्त्या विष्णोर्विरिञ्चाद्भेदग्राहकप्रमाणस्य धर्मिग्राहकत्वेनोपजीव्यत्वात्तदभेदग्राहकप्रमाणापेक्षया प्राबल्यमिति सूचयति । विशिष्य भेदोक्त्यभावं परिहरति ।। **स्थाणुरिति** ।। सर्वत्रापि भेदप्रतिपादने पौनरुक्त्यं स्यादित्यतः न जीवभेदसूत्राणामित्याद्यनुव्याख्यानोक्तं परिहारं व्यनक्ति ।। **अत्र चेत्यादिना** ।।




ಹಿಂದಿನ ಅಧಿಕರಣದಲ್ಲಿಯೂ ಜೀವಬ್ರಹ್ಮರಿಗೆ ಅಭೇದವನ್ನು ನಿರಾಕರಣೆ ಮಾಡಿ, ಭೇದವನ್ನು ಸಮರ್ಥಿಸಿದ್ದಾಗಿದೆ. ಪುನಃ ಈ ಅಧಿಕರಣದಲ್ಲಿಯೂ ವಿರಿಂಚನು ಬ್ರಹ್ಮನಿಂದ ಭಿನ್ನನಾಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ. ಹಾಗಾಗಿ ಹೇಳಿದ ಭೇದವನ್ನೇ ಪುನಃ ಪುನಃ ಸಮರ್ಥನೆ ಮಾಡಿದರೆ, ಪುನರುಕ್ತಿ ದೋಷ ಬರುತ್ತದಲ್ಲವೇ? ಎಂಬ ಆಶಂಕೆಗೆ ಗ್ರಂಥಕಾರರು ಕೂಲಂಕಷವಾಗಿ ವಿಮರ್ಶೆ ಮಾಡಿದ್ದಾರೆ.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಭೇದಪ್ರತಿಪಾದಕವಾದ ಸೂತ್ರಗಳು ಅನೇಕ ಬಾರಿ ಕೇಳಿಸುತ್ತಿವೆ. ಆದರೆ ಒಂದೇ ವಿಷಯದ ಭೇದವನ್ನು ಎಲ್ಲಾ ಅಧಿಕರಣಗಳಲ್ಲಿ ಸಮರ್ಥನೆ ಮಾಡುತ್ತಿಲ್ಲ. ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಭೇದವನ್ನು ಭೇದಪ್ರತಿಪಾದಕ ಸೂತ್ರಗಳು ನಿರಾಕರಣೆ ಮಾಡುತ್ತಿವೆ. ಉದಾ - ಆನಂದಮಯಾಧಿಕರಣದಲ್ಲಿ 'ಭೇದವ್ಯಪದೇಶಾಚ್ಚ' ಎಂಬ ಸೂತ್ರವು ಜೀವಬ್ರಹ್ಮರ ಭೇದವನ್ನು ಸಮರ್ಥನೆ ಮಾಡುತ್ತಿದೆಯೆಂದು ಮೇಲ್ನೋಟಕ್ಕೆ ಕಾಣಿಸುತ್ತದೆ. ಆದರೆ ವಿಚಾರ ಮಾಡಿದಾಗ, ಜೀವನಿಗೂ ವಿಷ್ಣುವಿಗೂ ಭೇದವನ್ನು ಒಪ್ಪಿ, ಆನಂದಮಯನ ಜೊತೆ ಅಭೇದವನ್ನು ಮಾತ್ರ ಪೂರ್ವಪಕ್ಷಿಯು ಆಕ್ಷೇಪ ಮಾಡಿದ್ದಾನೆ. ಅದನ್ನು ಸೂತ್ರವು ನಿರಾಕರಣೆ ಮಾಡಿದೆ. ಅದರಂತೆ 'ಶಾರೀರಾಶ್ಚೋಭಯೇಽಪಿಹಿಭೇದೇನೈನಮಧೀಯತೇ' ಎಂಬ ಅಂತರ್ಯಾಮಿಗುಣಸೂತ್ರದಲ್ಲಿ, ಅಂತರ್ಯಾಮಿಗೂ ಜೀವನಿಗೂ ಅಭೇದವನ್ನು ಆಕ್ಷೇಪಿಸಿ, ಭೇದವನ್ನು ಸ್ಥಾಪನೆ ಮಾಡಲಾಗಿದೆ ಹೊರತು, ಸಾಮಾನ್ಯವಾಗಿ ಜೀವಬ್ರಹ್ಮರ ಭೇದವನ್ನು ಸಮರ್ಥನೆ ಮಾಡಿಯೇ ಇಲ್ಲ.

ಮತ್ತು ದ್ಯುಭ್ವಾದ್ಯಧಿಕರಣದ 'ಭೇದವ್ಯಪದೇಶಾಚ್ಚನ್ಯಃ' ಎಂಬ ಸೂತ್ರದಲ್ಲಿ ಆ ಪ್ರಕರಣದಲ್ಲಿ ಮಾತ್ರ ಜೀವಬ್ರಹ್ಮರ ಅಭೇದವು ಪ್ರಸಕ್ತವಾಗಿದೆ. ಅದೇ ಪ್ರಕರಣದಲ್ಲಿರುವ ಭೇದಸಾಧಕಲಿಂಗಗಳಿಂದ ಅಭೇದವನ್ನು ನಿರಾಕರಣೆ ಮಾಡಿ, ಭೇದವನ್ನು ಸ್ಥಾಪನೆ ಮಾಡಿದ್ದಾರೆ ಹೊರತು, ಶ್ರುತಿಯಲ್ಲಿ ಎಲ್ಲಾ ವಾಕ್ಯಗಳಲ್ಲಿರುವ ಅಭೇದದ ನಿರಾಕರಣೆಯನ್ನಾಗಲೀ, ಭೇದದ ಸ್ಥಾಪನೆಯನ್ನಾಗಲೀ ಮಾಡಿರುವುದಿಲ್ಲ. ಹಿಂದಿನ ಅಧಿಕರಣದಲ್ಲಿ ಜೀವನಿಗೆ ಈಶನಿಂದ ಅಭೇದವನ್ನು ಸ್ವೀಕರಿಸಿ, ಭೇದವನ್ನು ಸ್ಥಾಪನೆ ಮಾಡಿದ್ದು, ಕೇವಲ ಆ ವಿಷಯವಾಕ್ಯಕ್ಕೆ ಸಂಬಂಧಪಟ್ಟಂತೆ ಮಾತ್ರ. ಈ ಅಧಿಕರಣದಲ್ಲಿ ವಿರಿಂಚನಿಗೆ ಬ್ರಹ್ಮನಿಂದ ಭೇದವನ್ನು ಸ್ಥಾಪನೆ ಮಾಡುತ್ತಿರುವುದೂ ಕೂಡ ವಾಕ್ಯವಿಶೇಷಕ್ಕೆ ಸಂಬಂಧಪಟ್ಟಂತೆ ಮಾತ್ರ. ಆದ್ದರಿಂದ ಭೇದಪ್ರತಿಪಾದಕವಾದ ಯಾವುದೇ ಸೂತ್ರಗಳನ್ನು ತೆಗೆದುಕೊಂಡರೂ ವಾಕ್ಯವಿಶೇಷದಲ್ಲಿ ಮಾತ್ರ ಭೇದಸ್ಥಾಪನೆಯನ್ನು ಮಾಡಿರುತ್ತಾರೆ ಹೊರತು ಎಲ್ಲಾ ಶ್ರುತಿವಾಕ್ಯಗಳಲ್ಲಿ ಭೇದವನ್ನು ಸ್ಥಾಪನೆ ಮಾಡಿರುವುದಿಲ್ಲ. 'ಪೃಥಗುಪದೇಶಾತ್' ಎಂಬ ಅಧಿಕರಣದಲ್ಲಿ ಮಾತ್ರ ಸಕಲ ಶ್ರುತಿವಾಕ್ಯಗಳಲ್ಲಿರುವ ಅಭೇದಪರವಾದ ವಾಕ್ಯಗಳನ್ನು ವಿಮರ್ಶೆ ಮಾಡಿ, ಭೇದವನ್ನು ಸ್ಥಾಪನೆ ಮಾಡಿದ್ದಾರೆ. ಆದ್ದರಿಂದ ವಾಕ್ಯವಿಶೇಷವನ್ನು ತೆಗೆದುಕೊಳ್ಳದೇ ಸಾಮಾನ್ಯವಾಗಿ ಜೀವಬ್ರಹ್ಮರ ಅಭೇದವನ್ನು ಆಕ್ಷೇಪಿಸಿ ಭೇದವನ್ನು ಸ್ಥಾಪನೆಮಾಡಿದ್ದು ಪೃಥಗುಪದೇಶಾಧಿಕರಣದಲ್ಲಿ ಮಾತ್ರ. ಭೇದಸ್ಥಾಪನೆಯ ಪೂರ್ಣತೆಯು ಪೃಥಗುಪದೇಶಾಧಿಕರಣದಲ್ಲಿ ಪರ್ಯವಸಾನವಾಗುತ್ತದೆ. ಆದ್ದರಿಂದ ಭೇದಸಾಧಕವಾದ ಸೂತ್ರಗಳಿಗೆ ಪುನರುಕ್ತಿ ದೋಷವನ್ನು ಹೇಳಲು ಸಾಧ್ಯವಿಲ್ಲ.





**तात्पर्यचन्द्रिका**

**नच सर्वाधिपतित्वादेर्विरिंचस्य विष्ण्वभेदेनाप्युपपत्तेर्न भेदकत्वमिति वाच्यम्। अन्योन्याश्रयात् ।**

ಅನುವಾದ - ಪ್ರಶ್ನೆ - ವಿರಿಂಚನಲ್ಲಿ ಸರ್ವಾಧಿಪತಿತ್ವಧರ್ಮವನ್ನು ವಿಷ್ಣುವಿನಿಂದ ಅಭೇದ ಹೇಳಿದಾಗ ಕೂಡಿಸಬಹುದು. ಆದ್ದರಿಂದ ಸರ್ವಾಧಿಪತಿತ್ವವೆಂಬ ಧರ್ಮವು ವಿರಿಂಚನು ಬ್ರಾಹ್ಮಣನಲ್ಲವೆನ್ನಲು ಭೇದಕಧರ್ಮವಾಗಲು ಸಾಧ್ಯವಿಲ್ಲವಲ್ಲವೇ?

ಉತ್ತರ - ಹೀಗೆ ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ವಿಷ್ಣು ಹಾಗೂ ವಿರಿಂಚರಿಗೆ ಅಭೇದವು ಸಿದ್ಧವಾದರೆ, ಸರ್ವಾಧಿಪತಿತ್ವ ಮೊದಲಾದ ಧರ್ಮಗಳ ವಿರೋಧ ಬಾರದ ಕಾರಣ. ಭೇದಕಧರ್ಮವಲ್ಲವೆಂದು ಸಿದ್ಧವಾಗುತ್ತದೆ. ಸರ್ವಾಧಿಪತಿತ್ವ ಮೊದಲಾದವುಗಳು ಭೇದಕಧರ್ಮ-ವಲ್ಲವೆಂದು ಸಿದ್ಧವಾದ ಮೇಲೆ, ವಿಷ್ಣು ಹಾಗೂ ವಿರಿಂಚರಿಗೆ ಅಭೇದವು ಸಿದ್ಧವಾಗುತ್ತದೆಂದು ಅನ್ಯೋನ್ಯಾಶ್ರಯ.

**''यं कामये तं तमुग्रं कृणोमि तं ब्रह्माणम्'' इत्यादिश्रुतिषु विरिञ्चस्य सर्वाधिपतित्वनित्यमहिमत्वादेर्निषेधाच्चेति ।**

'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಮ್' ಇತ್ಯಾದಿ ಶ್ರುತಿಗಳಲ್ಲಿ ಲಕ್ಷ್ಮೀದೇವಿಯು ವಿರಿಂಚನಿಗೂ ಅಧಿಪತಿಯಾಗಿದ್ದಾಳೆಂದು ತಿಳಿಯುತ್ತದೆ. ಆದ್ದರಿಂದ ವಿರಿಂಚನಿಗೆ ಸರ್ವಾಧಿಪತಿತ್ವವಾಗಲೀ, ನಿತ್ಯಮಹಿಮತ್ವಾದಿಧರ್ಮಗಳಾಗಲೀ ಇರುವುದಿಲ್ಲವೆಂದು ಈ ಶ್ರುತಿವಾಕ್ಯ-ದಿಂದಲೇ ಸ್ಪಷ್ಟವಾಗಿ ತಿಳಿಯುತ್ತಿದೆ.

**अत्र च वाजसनेये ''सर्वस्य वशि'' इति वशित्वस्यादित्वेऽपि भाष्योदाहृत-शाखान्तरे पतिशब्दस्यादित्वात् सूत्रे तदनुसारेण पत्यादीत्युक्तम् ।।**

ಸೂತ್ರದಲ್ಲಿ 'ವಶ್ಯಾದಿಶಬ್ದೇಭ್ಯಃ ಎಂದು ಹೇಳಬೇಕಿತ್ತು. ಏಕೆಂದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ 'ಸರ್ವಸ್ಯ ವಶೀ' ಎಂದೇ ಹೇಳಲಾಗಿದೆ. ಅದಕ್ಕನುಗುಣವಾಗಿ ವಶಿತ್ವವನ್ನೇ ಉಲ್ಲೇಖಿಸಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಭಾಷ್ಯದಲ್ಲಿ ಉದಾಹರಿಸಿದ ಮತ್ತೊಂದು ಶಾಖೆಯಲ್ಲಿ ಪತಿಶಬ್ದವೇ ಮೊದಲಿದೆ. ಅದಕ್ಕನುಸಾರಿಯಾಗಿ 'ಪತ್ಯಾದಿ' ಎಂದು ಹೇಳಿರುತ್ತಾರೆ.

**प्रकाशः –**

ननु यदुक्तं विरुद्धेष्वभेदश्चेदिति तन्न । विशेष्यस्यैकत्वेन धर्माणां विरोधस्यैवाभावादित्याशङ्क्याह – **नचेति** ।।

ವಿವರಣೆ - ವಿಷ್ಣು ಹಾಗೂ ವಿರಿಂಚರಿಬ್ಬರೂ ವಿರುದ್ಧ ಧರ್ಮಗಳಿಗೆ ಆಧಾರರಾದ್ದರಿಂದ, ಅಭೇದವು ಕೂಡುವುದಿಲ್ಲವೆಂದು ಏನು ಸಿದ್ಧಾಂತ ಮಾಡಲಾಯಿತೋ ಇದು ತಪ್ಪು. ಏಕೆಂದರೆ ಪೂರ್ವಪಕ್ಷದಲ್ಲಿ ಹೇಳಿದಂತೆ ವಿಶಿಷ್ಟರಿಗೆ ಭೇದವಿದ್ದರೂ ವಿಶೇಷ್ಯಾಂಶವೆನಿಸಿದ ಚೈತನ್ಯರಿಗೆ ಐಕ್ಯವಿರುವ ಪ್ರಯುಕ್ತ, ಸರ್ವಾಧಿಪತಿತ್ವ ಮೊದಲಾದ ಧರ್ಮಗಳ ವಿರೋಧಕ್ಕೆ ಅವಕಾಶವೇ ಇಲ್ಲವಲ್ಲವೇ? ಎಂಬ ಆಶಂಕೆಗೆ 'ನಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः – अन्योन्येति** ।। सिद्धेऽभेदे धर्माणामविरोधेनाभेदकत्वं सति च तस्मिन्नभेद इत्यन्योन्याश्रयादित्यर्थः । यं रुद्रं चतुर्मुखं वा कर्तुं कामये तं तं रुद्रं चतुर्मुखं वा करोमीति लक्ष्म्याऽभिधानादिति भावः ।

'ಯಂ' = ಯಾವ ರುದ್ರನು, 'ಚತರ್ಮುಖಂ ವಾ' = ಚತುರ್ಮುಖನನ್ನು, ಕರ್ತಮ್ = ಸೃಷ್ಟಿಮಾಡಲು, ಕಾಮಯೇ = ಬಯಸುತ್ತೇನೋ, ತಂ = ಅಂತಹ ರುದ್ರನನ್ನು, ಚತುರ್ಮುಖನನ್ನು, ಕರೋಮಿ = ಸೃಷ್ಟಿಮಾಡುತ್ತೇನೆ ಎಂಬುದು ಲಕ್ಷ್ಮೀದೇವಿಯ ಮಾತು.

**प्रकाशः** – सूत्रे वश्यादिशब्देभ्य इति वक्तव्ये पत्यादीत्ययुक्तमित्याशङ्क्य सौत्रनिर्देशं साधयति ।। **अत्रेति** ।।

ಸೂತ್ರದಲ್ಲಿ 'ವಶ್ಯಾದಿಶಬ್ದೇಭ್ಯಃ' ಎಂದು ಹೇಳುವ ಬದಲು 'ಪತ್ಯಾದಿಶಬ್ದೇಭ್ಯಃ' ಎಂದು ಹೇಳಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ.

**प्रकाशः** – सर्वस्याधिपतिस्सर्वस्येशान इति भाष्योदाहृतेत्यर्थः । तथाप्यधि-पत्यादिशब्देभ्य इति वक्तव्ये पत्यादीति निर्देशस्तूपसर्गस्य द्योतकत्वाभिप्रायः। चरणाभिधानादितिवदित्येके ।

'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ' ಎಂಬುದನ್ನು ವಿಷಯವಾಕ್ಯವನ್ನಾಗಿ ಭಾಷ್ಯದಲ್ಲಿ ಉದಾಹರಿಸಿದ್ದಾರೆ. ಈ ವಾಕ್ಯದಲ್ಲಿ ಅಧಿಪತಿ ಶಬ್ದವಿರುವುದರಿಂದ ಸೂತ್ರದಲ್ಲಿ 'ಪತ್ಯಾದಿಶಬ್ದೇಭ್ಯಃ' ಎಂದೇ ಹೇಳಿದ್ದಾರೆ. ಹಾಗಾದರೆ 'ಅಧಿಪತ್ಯಾದಿಶಬ್ದೇಭ್ಯ' ಎಂದೇ ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ ಕೆಲವರು ಹೀಗೆ ಉತ್ತರಿಸುತ್ತಾರೆ- ಉಪಸರ್ಗವು ವಾಚಕವಲ್ಲ. ಕೇವಲ ದ್ಯೋತಕವಾಗಿದೆಯೆಂದು ನಾವು ಒಪ್ಪಿರುವ ಕಾರಣ, ಅಧಿಪತಿಯೆಂಬ ಶಬ್ದದಲ್ಲಿರುವ ಅಧಿಯೆಂಬ ಉಪಸರ್ಗವು ಯಾವುದೇ ಅರ್ಥಕ್ಕೆ ವಾಚಕವಾಗಿಲ್ಲ; ಅದನ್ನು ತಿಳಿಸಲು ಸೂತ್ರಕಾರರು ಉಪಸರ್ಗವನ್ನು ಬಿಟ್ಟು ಶ್ರುತಿಯಲ್ಲಿರುವ ಪತಿಶಬ್ದವನ್ನಷ್ಟೇ ಉಲ್ಲೇಖಿಸಿದ್ದಾರೆ.

'ವಿಚರಣಾಭಿಧಾನಾತ್' ಎಂದು ಹೇಳುವ ಬದಲು, 'ವಿ' ಉಪಸರ್ಗವನ್ನು ಬಿಟ್ಟು, 'ಚರಣಾಭಿಧಾನಾತ್' ಎಂದು ಹೇಳಿದಂತೆ.

**प्रकाशः** – अन्येतु ''पतिं विश्वस्यात्मेश्वरम्'' इति समानार्थत्वेन नारायण एव विशेष्यभूत इति ज्ञापनाय पत्यादीत्युक्तमित्याहुः ।

ಇನ್ನು ಕೆಲವರ ಉತ್ತರ ಹೀಗಿದೆ - 'ಪತಿಂ ವಿಶ್ವಸ್ಯಾತ್ಮೇಶ್ವರಮ್' ಎಂಬ ಶ್ರುತಿಯಲ್ಲಿ ಕೇವಲ ಪತಿಶಬ್ದವಷ್ಟೇ ಇದೆ. ಈ ಶ್ರುತಿಯು ನಾರಾಯಣನನ್ನು ಪ್ರತಿಪಾದನೆ ಮಾಡುತ್ತಿದೆ. ಇದರ ಸಮಾನಾರ್ಥಕ್ಕಾಗಿ ಸೂತ್ರಕಾರರು 'ಪತ್ಯಾದಿಶಬ್ದೇಭ್ಯಃ' ಎಂದು ಹೇಳಿದ್ದಾರೆ. ಆದ್ದರಿಂದ ಸಕಲಕ್ಕೂ ಅಧಿಪತಿಯಾದವನು ನಾರಾಯಣನೇ ಆಗಿದ್ದಾನೆಂದು ಇದರಿಂದ ಸೂಚಿಸಿದಂತಾಗುತ್ತದೆ.

**प्रकाशः** – अपरेतु ''सर्वस्याधिपतिरेष भूतपतिः'' इति पतिशब्दस्याभ्यस्तत्वात्तात्पर्यद्योतनाय पत्यादीत्युक्तिरित्याहुः ।

ಮತ್ತೆ ಕೆಲವರ ಉತ್ತರ ಹೀಗಿದೆ - 'ಸರ್ವಸ್ಯಾಧಿಪತಿಃ ಏಷ ಭೂತಪತಿಃ' ಇತ್ಯಾದಿ ಶ್ರುತಿಗಳಲ್ಲಿ ಅನೇಕ ಬಾರಿ ಪತಿಶಬ್ದವನ್ನು ಪ್ರಯೋಗಿಸಲಾಗಿದೆ. ಇದರಿಂದ ಸರ್ವಾಧಿಪತ್ಯವು ಕೇವಲ ನಾರಾಯಣನ ಧರ್ಮವೇ ಹೊರತು, ಚತುರ್ಮುಖನ ಧರ್ಮವಲ್ಲವೆಂದು ತಿಳಿಯುತ್ತದೆ. ಈ ಸ್ಮೃತಿಯ ಸ್ಮರಣೆಗಾಗಿಯೂ 'ಪತ್ಯಾದಿಶಬ್ದೇಭ್ಯಃ' ಎಂದು ಹೇಳಿರುತ್ತಾರೆ.

**प्रकाशः** – केचित्तु तत्पुरुषबहुव्रीहिरूपसमासद्वयस्याप्याश्रयणेन पतिशब्दात्पूर्वशब्दानामुत्तरशब्दानां च सर्वेषामप्युपादानान्मध्यस्थस्याभ्यस्तस्य पतिशब्दस्योपादानेन पत्यादीतिनिर्देश इति वदन्ति ।

ಮತ್ತೆ ಕೆಲವರ ಉತ್ತರ ಹೀಗಿದೆ - ಪತ್ಯುಃ ಆದಿಃ = ಪತ್ಯಾದಿಃ ಎಂದು ತತ್ಪುರುಷಸಮಾಸವನ್ನು ಆಶ್ರಯಿಸಿದಾಗ ಪತಿಶಬ್ದದ ಹಿಂದಿರುವ ಎಲ್ಲಾ ಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂದು ತಿಳಿಯುತ್ತದೆ. 'ಪತಿಃ ಆದಿಃ ಯೆಷಾಂತೇ' ಎಂಬ ಬಹುವ್ರೀಹಿ ಶಬ್ದವನ್ನು ಆಶ್ರಯಿಸಿದಾಗ ಪತಿಶಬ್ದದ ಮುಂದಿರುವ ಎಲ್ಲಾ ಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಆದ್ದರಿಂದ, ಮಧ್ಯದಲ್ಲಿ ಅನೇಕ ಬಾರಿ ಪತಿಶಬ್ದವನ್ನು ಶ್ರುತಿಯು ಉಲ್ಲೇಖಿಸಿರುವುದರಿಂದ 'ಪತ್ಯಾದಿಶಬ್ದೇಭ್ಯಃ' ಎಂದೇ ಹೇಳಿರುತ್ತಾರೆ.

**प्रकाशः** – सर्ववशित्वादेरवान्तरेश्वरे विरिञ्चे कथञ्चित्संभवेऽपि पापालेपलिङ्गं कथमपि न विरिञ्चे सावकाशमिति तत्सहपाठादन्यदपि तथेति द्योतनाय ''सनसुधेन'' इत्याद्यलेपोक्तिपरवाक्यात्पूर्वत्रोत्तरत्र च श्रुतपतिशब्दोपादानेन पत्यादीत्युक्तम् ।

'ಸರ್ವವಶಿತ್ವ' ಎಂಬ ಧರ್ಮವನ್ನು ವಿರಿಂಚನಲ್ಲಿ ಕಥಂಚಿತ್ ಕೂಡಿಸಬಹುದು. ಏಕೆಂದರೆ ಅನೇಕ ಪದಾರ್ಥಗಳಿಗೆ ವಿರಿಂಚನೂ ಕೂಡ ಅವಾಂತರ ಈಶ್ವರನಾದ್ದರಿಂದ ಸಕಲ ಪದಾರ್ಥಗಳು ಅವನ

ವಶವಾಗಿರುತ್ತವೆ. ಆದರೆ ಪಾಪಾಲೇಪಲಿಂಗವನ್ನು ವಿರಿಂಚನಲ್ಲಿ ಯಾವುದೇ ರೀತಿಯಲ್ಲಿಯೂ ಕೂಡ ಉಪಪಾದನೆ ಮಾಡಲು ಸಾಧ್ಯವಿಲ್ಲ. ಈ ಪಾಪಾಲೇಪವೆಂಬ ಲಿಂಗದ ಜೊತೆಗೆ ಪಠಿತವಾದ ಕಾರಣ, ಉಳಿದ ಲಿಂಗಗಳೂ ಕೂಡ ಯಾವುದೇ ಕಾರಣದಿಂದಲೂ ವಿರಿಂಚನಲ್ಲಿ ಬರುವುದಿಲ್ಲವೆಂದು ಸೂತ್ರಕಾರರು ತಿಳಿಸಿದ್ದಾರೆ. 'ಸನಸುಧೇನ' ಎಂಬ ವಾಕ್ಯವು ಪಾಪಾಲೇಪವನ್ನು ಸಮರ್ಥನೆ ಮಾಡುತ್ತಿದೆ. ಇದರ ಹಿಂದಿನ ಮುಂದಿನ ವಾಕ್ಯಗಳಲ್ಲಿ ಶ್ರುತವಾದ ಪತಿಶಬ್ದವನ್ನು ಸೂತ್ರಕಾರರು ಉಲ್ಲೇಖ ಮಾಡಿದ್ದರಿಂದ, ಪಾಪಾಲೇಪಲಿಂಗವು ಹೇಗೆ ನಿರವಕಾಶವಾಗಿದೆಯೋ, ಅದರಂತೆ ಅಧಿಪತಿತ್ವಲಿಂಗವೂ ಕೂಡ ನಿರವಕಾಶವಾಗಿದೆಯೆಂದು ತಿಳಿಸಿದಂತಾಗುತ್ತದೆ.

**प्रकाशः** – उभयत्र श्रुतोक्त्यर्थमेव सर्वस्येति वा भूतस्येति वोपपदस्यानुपादानम्। अत एव च न्यायविवरणे ''पापालेपलिङ्गस्य चेत्'' इत्येवोक्तिरित्यपि सङ्गिरन्ते ।

ಎರಡು ಬಗೆಯ ಶ್ರುತಿಗಳಲ್ಲಿ ಇರುವ 'ಸರ್ವ' ಎಂಬ ಪದವನ್ನಾಗಲೀ, 'ಭೂತ' ಎಂಬ ಪದವನ್ನಾಗಲೀ ಸೂತ್ರಕಾರರು ನಿರವಕಾಶಲಿಂಗವೆಂದು ತಿಳಿಸುವುದಕ್ಕಾಗಿ ಉಲ್ಲೇಖ ಮಾಡಿಲ್ಲ. ಈ ಅಧಿಪತಿತ್ವವೆಂಬ ಲಿಂಗವು ನಿರವಕಾಶವಾಗಿದೆಯೆಂಬ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ 'ಪಾಪಾಲೇಪಲಿಂಗಸ್ಯ ಚೇತ್' ಎಂದಷ್ಟೇ ಹೇಳಿರುತ್ತಾರೆ. ಪಾಪಾಲೇಪಲಿಂಗವೂ ನಿರವಕಾಶವಾದ್ದರಿಂದ, ಇದೂ ಕೂಡ ನಿರವಕಾಶವಾಗಿದೆ. ಹೀಗೆ ಕೆಲವರ ಉತ್ತರ.

**प्रकाशः** – अत्र सूत्रे साक्षाद्भेदस्यानुक्तत्वादभेदेन पूर्वपक्षस्सूत्राननुगुण इत्येतदेतेन निरस्तम् । पतित्वादेर्भेदकधर्मस्योक्त्यैवाभेदनिरासस्याभिमतत्वात् ।

ಈ ಸೂತ್ರದಲ್ಲಿ ಭೇದವನ್ನು ನೇರವಾಗಿ ಹೇಳಿಲ್ಲ. ಆದ್ದರಿಂದ ಅಭೇದಪರವಾದ ಪೂರ್ವಪಕ್ಷವು ಸೂತ್ರಕ್ಕೆ ಅನನುಗುಣವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಸೂತ್ರದಲ್ಲಿ ಭೇದಕಧರ್ಮವೆನಿಸಿದ ಪತಿತ್ವವನ್ನು ಉಲ್ಲೇಖ ಮಾಡಿದ್ದಾರೆ. ಇದರಿಂದ ವಿರಿಂಚ ಹಾಗೂ ವಿಷ್ಣುವಿಗೆ ಅಭೇದವಿಲ್ಲವೆಂದು ನಿರಾಕರಣೆ ಮಾಡಿದಂತಾಗುತ್ತದೆ. ಹಾಗಾಗಿ ವಿರಿಂಚನು ವಿಷ್ಣುವಿನಿಂದ ಅಭಿನ್ನನಾಗಿದ್ದಾನೆಂಬ ಪೂರ್ವಪಕ್ಷವು ಸೂತ್ರಕ್ಕೆ ಅನನುಗುಣವಾಗುವುದಿಲ್ಲ.

**प्रकाशः** – भेद एव वक्तव्ये भेदकोक्तिस्तु विरुद्धयोरैक्यं न युक्तम् । अतिप्रसङ्गात्। विरुद्धत्वं चान्योन्याश्रयापत्त्यैव सिद्धम् ।

ಸೂತ್ರದಲ್ಲಿ ನೇರವಾಗಿ ವಿರಿಂಚನಿಗೆ ವಿಷ್ಣುವಿನಿಂದ ಭೇದವನ್ನೇ ಹೇಳಬಹುದಿತ್ತಲ್ಲವೇ? ಭೇದಕಧರ್ಮವನ್ನೇಕೆ ಹೇಳಿದ್ದಾರೆ ಎಂದರೆ ವಿರುದ್ಧವಾದ ಎರಡು ಪದಾರ್ಥಗಳಿಗೆ ಐಕ್ಯವು ಸರ್ವಥಾ ಯುಕ್ತವಾಗುವುದಿಲ್ಲ. ಹಾಗೇನಾದರೂ ಅವುಗಳಿಗೆ ಐಕ್ಯವನ್ನು ಹೇಳಿದರೆ ಅತಿಪ್ರಸಂಗದೋಷ ಬರುತ್ತದೆ. ವಿರುದ್ಧತ್ವವಾದರೂ ಅನ್ಯೋನ್ಯಾಶ್ರಯದೋಷವನ್ನು ಆಕ್ಷೇಪ ಮಾಡಿದ್ದರಿಂದಲೇ ಸಿದ್ಧವಾಗಿದೆ. ಉಭಯವಿಧ ಧರ್ಮಗಳ ಅನ್ಯಥಾನುಪಪತ್ತಿಯಿಂದ ಅಭೇದಪರವಾದ ಪೂರ್ವಪಕ್ಷವೂ ಕೂಡ ಸಿದ್ಧವಾಗುತ್ತದೆ. ಅದಕ್ಕಾಗಿ ಭೇದವನ್ನು ಸೂತ್ರದಲ್ಲಿ ಹೇಳದೇ ಭೇದಕಧರ್ಮವನ್ನೇ ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः** – अभेदपूर्वपक्षश्चोभयविधधर्मान्यथानुपपत्त्येत्यादिसूचनाय । अत एव प्राक्सूत्राभिमत एवातिप्रसङ्गो ''विरुद्धेष्वप्यभेदश्च'' इत्यादिना प्रपञ्चितः । पूर्वसूत्रेऽनुषङ्गसिद्धस्य ''भेदेन व्यपदेशात्'' इत्यस्येहाप्यनुवर्तनेन पत्यादिशब्देभ्यो भेदेन व्यपदेशादित्यन्वये तु साक्षादेव भेदोक्तिरिति बोध्यम् ।।

ಆದ್ದರಿಂದಲೇ ಹಿಂದೆ ಸೂತ್ರಕ್ಕೆ ಅಭಿಮತವಾದ ಅತಿಪ್ರಸಂಗವನ್ನೇ 'ವಿರುದ್ಧೇಷ್ವಪ್ಯಭೇದಶ್ಚ' ಇತ್ಯಾದಿ ಗ್ರಂಥದಿಂದ ವಿವರಣೆ ಮಾಡಿದ್ದಾರೆ. ಹಿಂದಿನ ಸೂತ್ರದಲ್ಲಿ ಅನುಷಂಗದಿಂದ ಸಿದ್ಧವಾದ 'ಭೇದೇನವ್ಯಪದೇಶಾತ್' ಎಂಬುದನ್ನು ಇಲ್ಲಿಯೂ ಕೂಡ ಅನುವೃತ್ತಿ ಮಾಡಿಕೊಳ್ಳಬೇಕು. 'ಪತ್ಯಾದಿಶಬ್ದೇಭ್ಯಃ ಭೇದೇನವ್ಯಪದೇಶಾತ್' ಎಂದಂತಾಗುತ್ತದೆ. ಈ ವ್ಯಾಖ್ಯಾನದಲ್ಲಿ ಭೇದವನ್ನು ಕಂಠತಃ ಹೇಳಿದಂತೆಯೇ ಆಗುತ್ತದೆ.




ಸೂತ್ರದಲ್ಲಿ 'ಅಧಿಪತಿತ್ವ' ಎಂಬ ವಿಷ್ಣುವಿನ ನಿರವಕಾಶಲಿಂಗವನ್ನು ಹೇಳಿದ್ದರಿಂದ ವಿರಿಂಚನನ್ನು ವಿಷ್ಣುವೆಂದು ಹೇಳಲು ಸಾಧ್ಯವಿಲ್ಲ. ಇಬ್ಬರಿಗೂ ಅಭೇದವನ್ನು ಒಪ್ಪಿ, ಹೊರಟ ಪೂರ್ವಪಕ್ಷವು ನಿರಾಕೃತವಾಗುತ್ತದೆ. 'ಸರ್ವಾಧಿಪತಿತ್ವ' ಎಂಬ ವಿಷ್ಣುವಿನ ಧರ್ಮವನ್ನು ವಿರಿಂಚನಲ್ಲಿ ಅಭೇದವನ್ನು ಹೇಳಿದಾಗ ಮಾತ್ರ ಕೂಡಿಸಬಹುದು. ಆದರೆ ವಿಷ್ಣುವಿನಿಂದ ವಿರಿಂಚನಿಗೆ ಅಭೇದ ಹೇಳಬೇಕೆಂದರೆ 'ಸರ್ವಾಧಿಪತಿತ್ವ' ಎಂಬುದು ಇಬ್ಬರಿಗೂ ಭೇದವನ್ನು ತಂದುಕೊಡುವುದಿಲ್ಲವೆಂಬುದು ಮೊದಲು ಸಿದ್ಧವಾಗಬೇಕು. ಹಾಗಾಗಿ ಅಭೇದ ಸಿದ್ಧವಾದರೆ ಮಾತ್ರ ಸರ್ವಾಧಿ-ಪತಿತ್ವಾದಿಗಳಿಗೆ ಅಭೇದ ತಂದುಕೊಡುವಿಕೆಯು ಸಿದ್ಧವಾಗುವುದಿಲ್ಲ. ಅಭೇದಕ ತಂದುಕೊಡುವಿಕೆಯು ಸಿದ್ಧವಾಗದಿದ್ದಾಗ ಮಾತ್ರ ಪರಸ್ಪರ ವಿರಿಂಚನಿಗೆ ಬ್ರಹ್ಮನಿಂದ ಅಭೇದವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವ ಕಾರಣ, ಅನಿವಾರ್ಯವಾಗಿ ಸರ್ವಾಧಿಪತಿತ್ವವನ್ನು ವಿಷ್ಣುವಿನಲ್ಲಿ ಮಾತ್ರ ಹೇಳಬೇಕು. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ಇತ್ಯಾದಿ ಶ್ರುತಿಗಳಂತೂ ಸ್ಪಷ್ಟವಾಗಿ ವಿರಿಂಚಾದಿಗಳಿಗೆ ಸರ್ವಾಧಿಪತಿತ್ವವಿಲ್ಲವೆಂದು ನಿಷೇಧ ಮಾಡುತ್ತಿವೆ.

ಸೂತ್ರದಲ್ಲಿ 'ಸರ್ವಸ್ಯ ವಶೀ' ಎಂಬ ಶ್ರುತಿಗೆ ಅನುಗುಣವಾಗಿ 'ವಶ್ಯಾದಿಶಬ್ದೇಭ್ಯಃ' ಎಂದು ಹೇಳಬೇಕಿತ್ತು. ಆದರೆ ಭಾಷ್ಯದಲ್ಲಿ ಉದಾಹರಿಸಿದ 'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ' ಎಂಬ ವಾಕ್ಯದಲ್ಲಿ ಪತಿಶಬ್ದವಿರುವುದರಿಂದ, ಅದಕ್ಕನುಗುಣವಾಗಿ ಸೂತ್ರಕಾರರು 'ಪತ್ಯಾದಿಶಬ್ದೇಭ್ಯಃ' ಎಂದೇ ಹೇಳಿದ್ದಾರೆ. 'ಅಧಿಪತ್ಯಾದಿಶಬ್ದೇಭ್ಯಃ' ಎಂದೂ ಕೂಡ ಹೇಳಬಹುದಿತ್ತು. ಆದರೆ ಉಪಸರ್ಗವು ಯಾವುದೇ ಅರ್ಥಗಳಿಗೆ ವಾಚಕವಲ್ಲ. ಕೇವಲ ದ್ಯೋತಕವಾಗಿರುವ ಕಾರಣ ಉಪಸರ್ಗವನ್ನು ಬಿಟ್ಟು ಕೇವಲ ಪತಿಶಬ್ದವನ್ನಷ್ಟೇ ಸೂತ್ರಕಾರರು ಉಲ್ಲೇಖ ಮಾಡಿದ್ದಾರೆ.

ಬ್ರಾಹ್ಮಣಾಧಿಕರಣ (೧-೩-೧೪)

## तात्पर्यचन्द्रिका

**अन्येतु ।। ''कतम आत्मा योऽयं विज्ञानमयः प्राणेषु'' इत्यादि ''स वा एष महानज आत्मा योऽयं विज्ञानमय'' इत्यन्तं बृहदारण्यकवाक्यं मानान्तरप्राप्त-संसार्यात्मस्वरूपानुवादमात्रम् । उपक्रमोपसंहारयोः संसारिरूपस्यैव प्रतीतेरिति प्राप्ते**[१]

---

(१) **शाङ्करभाष्यम् –**

**सुषुप्त्युत्क्रान्त्योर्भेदेन ।। ४२ ।।**

**स्याद् विज्ञानमयो जीवो ब्रह्म वा जीव इष्यते ।**
**आदिमध्यावसानेषु संसारप्रतिपादनात् ।।**
**विविच्य लोकसंसिद्धं जीवं प्राणाद्युपाधितः ।**
**ब्रह्मत्वमन्यतोऽप्राप्तं बोध्यते ब्रह्म नेतरत् ।।**

व्यपदेशादित्यनुवर्तते । बृहदारण्यके षष्ठे प्रपाठके 'कतम आत्मेति योऽयं विज्ञानमयः प्राणेषु हृद्यन्तर्ज्योतिः पुरुषः' इत्युपक्रम्य भूयानात्मविषयः प्रपञ्चः कृतः । तत्किं संसारि-स्वरूपमात्रान्वाख्यानपरं वाक्यमुतासंसारिस्वरूपप्रतिपादनपरमिति संशयः । किं तावत्प्राप्तम्? संसारिस्वरूपमात्रविषयमेवेति । कुतः? उपक्रमोपसंहाराभ्याम् । उपक्रमे 'योऽयं विज्ञानमयः प्राणेषु' इति शारीरलिङ्गात् । उपसंहारे च 'स वा एव महानज आत्मा योऽयं विज्ञानमयः प्राणेषु' इति तदपरित्यागात्, मध्येऽपि बुद्धान्ताद्यवस्थोपन्यासेन तस्यैव प्रपञ्चनादिति । एवं प्राप्ते ब्रूमः – परमेश्वरोपदेशपरमेवेदं वाक्यं न शारीरमात्रान्वाख्यानपरम् । कस्मात्? सुषुप्तावुत्क्रान्तो च शारीराद्भेदेन परमेश्वरस्य व्यपदेशात् । सुषुप्तौ तावद् 'अयं पुरुषः प्राज्ञेनात्मना सम्परिष्वक्तो न बाह्यं किञ्चन वेद नान्तरम्' इति शारीराद्भेदेन परमेश्वरं व्यपदिशति । तत्र पुरुषः शारीरः स्यात्तस्य वेदितृत्वात् । बाह्याभ्यन्तरवेदनाप्रसङ्गे सति तत्प्रतिषेधसम्भवात् । प्राज्ञः परमेश्वरः, सर्वज्ञत्वलक्षणया प्रज्ञया नित्यमवियोगात् । तथोत्क्रान्तावपि 'अयं शारीर आत्मा प्राज्ञेनात्मनान्वारूढ उत्सर्जन् याति' इति जीवाद्भेदेन परमेश्वरं व्यपदिशति । तत्रापि शारीरो जीवः स्याच्छरीरस्वामित्वात् । प्राज्ञस्तु स एव परमेश्वरः । तस्मात् सुषुप्त्युत्क्रान्त्योर्भेदेन व्यपदेशात्परमेश्वर एवात्र विवक्षित इति गम्यते । यदुक्तमाद्यन्तमध्येषु शारीरलिङ्गात्तत्परत्वमस्य वाक्यस्येति । अत्र ब्रूमः – उपक्रमे तावद् 'योऽयं विज्ञानमयः प्राणेषु संसारी लक्ष्यते स वा एष महानज आत्मा परमेश्वर एवास्माभिः प्रतिपादित

ಅನುವಾದ - ಶಾಂಕರಭಾಷ್ಯ ಹಿಂದಿನ ಸೂತ್ರವನ್ನು ಸೇರಿಸಿಕೊಂಡು ಅಧಿಕರಣವನ್ನು ಹೀಗೆ ರಚನೆ ಮಾಡಿದೆ. ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ 'ಕತಮ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಪ್ರಾರಂಭವಾಗಿ ಆತ್ಮನ ಬಗ್ಗೆ ಅನೇಕ ವಿಷಯಗಳು ಪ್ರಸಕ್ತವಾಗಿದೆ. ಈ ಆತ್ಮನು ಜೀವನೇ ಆಗಿದ್ದಾನೆ. ಏಕೆಂದರೆ ಪ್ರಾರಂಭದಲ್ಲಿ 'ಹೃದ್ಯಂತಃ' ಎಂದು ಹೃದಯದ ಸಂಬಂಧವನ್ನು ಹೇಳಲಾಗಿದೆ. ಉಪಸಂಹಾರದಲ್ಲಿಯೂ ಕೂಡ 'ಸ ವಾ ಏಷ ಮಹಾನಜಃ ಆತ್ಮಾ ಯೋಽಯಂ ವಿಜ್ಞಾನಮಯಃ' ಎಂದು ವಿಜ್ಞಾನಮಯನ ಉಲ್ಲೇಖವಿದೆ. ಈ ಸಂಪೂರ್ಣ ಪ್ರಕರಣವು ಬೇರೆ ಪ್ರಮಾಣದಿಂದ ಪ್ರಾಪ್ತವಾದ ಸಂಸಾರಿಯಾದ ಜೀವನನ್ನು ಅನುವಾದ ಮಾಡುವ ಮೂಲಕ ಪ್ರತಿಪಾದನೆ ಮಾಡುತ್ತಿದೆ. ಉಪಕ್ರಮ ಹಾಗೂ ಉಪಸಂಹಾರಗಳಿಗೆ ಜೀವನನ್ನು ಪ್ರತಿಪಾದನೆ ಮಾಡಿರುವುದೇ ಇದಕ್ಕೆ ಮುಖ್ಯಕಾರಣವೆಂದು ಪೂರ್ವಪಕ್ಷ.

**''स वा अयं पुरुषो जायमान'' इत्यादिना कल्पितसंसारिस्वरूपमनूद्य ''स वा एष महानज'' इत्यादिनाऽकल्पितासंसार्यैक्यं बोध्यत इति सिद्धान्तः । सुषुप्तीत्यादिसूत्रद्वयं चैकाधिकरणमित्याहुः ।।**

'ಸ ವಾ ಅಯಂ ಪುರುಷಃ ಜಾಯಮಾನಃ' ಇತ್ಯಾದಿಯಾಗಿ ಕಲ್ಪಿತನಾದ ಜೀವಾತ್ಮನ ಸ್ವರೂಪವನ್ನು ಅನುವಾದ ಮಾಡಿ 'ಸ ವಾ ಏಷ ಮಹಾನಜ ಆತ್ಮಾ' ಎಂದು ಅಕಲ್ಪಿತವಾದ ಜೀವಾಧೀನನಾದ

इत्यर्थः । यस्तु मध्ये बुद्धान्ताद्यवस्थोपन्यासात् संसारिस्वरूपविवक्षां मन्यते, स प्राचीमपि दिशं प्रस्थापितः प्रतीचीमपि दिशं प्रतिष्ठेत । यतो न बुद्धान्ताद्यवस्योपन्यासेनावस्थावत्त्वं संसारित्वं वा विवक्षति, किं तर्ह्यवस्थारहितत्वमसंसारित्वं च । कथमेतदवगम्यते? यद् 'अत ऊर्ध्वं विमोक्षायैव ब्रूहि' इति पदेपदे पृच्छति । यच्चद्नन्वागतस्तेन भवत्यसङ्गो ह्ययं पुरुषः' इति पदेपदे प्रतिवक्ति । 'अनन्वागतं पुण्येनानन्वागतं पापेन तीर्णो हि तदा सर्वान् शोकान् हृदयस्य भवति' इतिच । तस्मादसंसारिस्वरूपप्रतिपादनपरमेवैतद्वाक्यमित्यवगन्तव्यम् ।। ४२ ।।

**पत्यादिशब्देभ्यः ॥ ४३ ॥**

इतश्चासंसारिस्वरूपप्रतिपादनपरमेवैतद्वाक्यमित्यवगन्तव्यम् । यदस्मिन् वाक्ये पत्यादयः शब्दाः असंसारिस्वरूपप्रतिपादनपराः संसारिस्वभावप्रतिषेधनाश्च भवन्ति । 'सर्वस्य वशी सर्वस्येशानः सर्वस्याधिपतिः' इत्येवंजातीयका असंसारिस्वभावप्रतिपादनपराः । 'स न साधुना कर्मणा भूयान्नो एवासाधुना कनीयान्' इत्येवंजातीयकाः संसारिस्वभावप्रतिषेधनाः । तस्मादसंसारी परमेश्वर इहोक्त इत्यवगम्यते ।।

ಬ್ರಹ್ಮನನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಬ್ರಹ್ಮನ ಧರ್ಮವು ಶ್ರುತವಾದ್ದರಿಂದ ಬ್ರಹ್ಮನೇ ಈ ಪ್ರಕರಣದಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಹಿಂದಿನ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರವನ್ನು ಸೇರಿಸಿ, ಒಂದೇ ಅಧಿಕರಣವೆಂಬುದು ಇವರ ಅಭಿಪ್ರಾಯ.

**तत्र ब्रूमः ॥**

**यत्तत्वमैक्यं तन्नैव कीर्त्यते श्रुतिसूत्रयोः ।**
**तत्र यः कीर्त्यते भेदः तच्च तत्वं न ते मते ॥ १ ॥**

ಅದ್ವೈತಿಗಳ ಈ ಅಧಿಕರಣ ಶರೀರ ಸರಿಯಿಲ್ಲ. ಏಕೆಂದರೆ -

ಯತ್ತತ್ವಮೈಕ್ಯಂ ತನ್ನೈವ ಕೀರ್ತ್ಯತೇ ಶ್ರುತಿಸೂತ್ರಯೋಃ ।
ತತ್ರ ಯಃ ಕೀರ್ತ್ಯತೇ ಭೇದಃ ತಚ್ಚ ತತ್ವಂ ನ ತೇ ಮತೇ ॥೧॥

ಯಾವ ಐಕ್ಯವು ಅದ್ವೈತ ಮತದ ತತ್ವವಾಗಿದೆಯೋ, ಅದನ್ನು ಶ್ರುತಿಯಾಗಲೀ, ಸೂತ್ರವಾಗಲೀ, ಪ್ರತಿಪಾದನೆ ಮಾಡುತ್ತಿಲ್ಲ. ಶ್ರುತಿ ಹಾಗೂ ಸೂತ್ರಗಳಲ್ಲಿ ಪ್ರತಿಪಾದನೆ ಮಾಡುತ್ತಿರುವ ಜೀವೇಶಭೇದವು ಅದ್ವೈತಮತದ ತತ್ವವಲ್ಲ.

**सुषुप्त्यादिसूत्रेण, तद्विषयतया त्वयाप्युदाहृताभ्यां "प्राज्ञेनात्मना सम्परिष्वक्तः प्राज्ञेनात्मनान्वारूढ" इति श्रुतिभ्यां च जीवाद्भेद एवोक्तः ।**

'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರದ ವಿಷಯವನ್ನಾಗಿ ನೀವು ಉದಾಹರಿಸಿದ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾನ್ವಾರೂಢಃ' ಎಂಬೆರಡು ಶ್ರುತಿಗಳು ಬ್ರಹ್ಮನು ಜೀವನಿಗಿಂತ ಭಿನ್ನನಾಗಿದ್ದಾನೆಂದೇ ಪ್ರತಿಪಾದನೆ ಮಾಡುತ್ತಿವೆ.

**तथा पत्यादिसूत्रेण, तद्विषयत्वेन त्वयाप्युदाहृतया "एष लोकाधिपतिः" इत्यादिश्रुत्याच जीवाद्भेदकधर्मा उक्ताः । नतु त्वया तत्वतयाऽभिप्रेतमैक्यम् ।**

ಅದರಂತೆ 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರಕ್ಕೆ ವಿಷಯವಾಕ್ಯವನ್ನಾಗಿ ಅದ್ವೈತಿಗಳೇ ಉದಾಹರಿಸಿದ 'ಏಷ ಲೋಕಾಧಿಪತಿಃ' ಎಂಬ ಶ್ರುತಿಯೂ ಕೂಡ ಜೀವನಿಗಿಂತ ಬ್ರಹ್ಮನು ಭಿನ್ನನಾಗಿದ್ದಾನೆಂದು ತಿಳಿಸುವ ಭೇದಕಧರ್ಮವನ್ನೇ ಪ್ರತಿಪಾದನೆ ಮಾಡುತ್ತಿದೆ ಹೊರತು, ಅದ್ವೈತಿಗಳ ತತ್ವವೆನಿಸಿದ ಅದ್ವೈತಕ್ಕೆ ಅನುಕೂಲಕರವಾದ ವಿಷಯವನ್ನು ಪ್ರತಿಪಾದನೆ ಮಾಡಿಲ್ಲ.

**एतेन योऽयं विज्ञानमयो जीवः स एवैष महानात्मा परमात्मेत्यभेद उक्त इति निरस्तम् । सूत्रविरोधात् । प्राज्ञेनेत्यादिमानान्तराप्राप्तभेदोपदेशविरोधाच्च ।**

ಹೀಗೆ ಹೇಳಿದ್ದರಿಂದ 'ಯೋಽಯಂ ವಿಜ್ಞಾನಮಯಃ' ಎಂಬ ಶ್ರುತಿಯು ವಿಜ್ಞಾನಮಯನೆನಿಸಿದ ಜೀವನೇ ಪರಮಾತ್ಮನಾಗಿದ್ದಾನೆ ಎಂಬ ಅದ್ವೈತಿಗಳ ವ್ಯಾಖ್ಯಾನವನ್ನು ನಿರಾಕರಿಸಿದಂತಾಯಿತು. ಸೂತ್ರವು ಸ್ಪಷ್ಟವಾಗಿ ಪರಮಾತ್ಮನಿಗಿಂತ ಭೇದವನ್ನು ಪ್ರತಿಪಾದನೆ ಮಾಡುತ್ತಿರುವಾಗ ಅದಕ್ಕೆ ವಿರುದ್ಧವಾಗಿ ಅಭೇದವನ್ನು ಹೇಳಿದರೆ ಸೂತ್ರವಿರೋಧವು ಬರುತ್ತದೆ. ಮತ್ತು 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ಭೇದಪ್ರತಿಪಾದಕ ಶ್ರುತಿಯ ವಿರೋಧವೂ ಕೂಡ ಬರುತ್ತದೆ.

**नच "अत ऊर्ध्वं विमोक्षायैव ब्रूहि" इति पृष्टे उक्तो भेदो भेदकधर्माश्च-मिथ्येति युक्तम् । न वा मानान्तरेण स्वप्रकरणस्थेन प्राज्ञेनेत्यादिवाक्येन चाविरुद्ध महत्त्वादिविधिपरत्वसम्भवे तद्विरुद्धाभेद परत्वं युक्तम् । तस्मान्नेहैक्योक्तिः ।**

ಶ್ರುತಿಯಲ್ಲಿ ಭೇದವು ಪ್ರತಿಪಾದಿತವಾಗಿದೆಯೆಂದು ಹೇಳಬಾರದು. ಏಕೆಂದರೆ 'ಅತ ಊರ್ಧ್ವಂ ವಿಮೋಕ್ಷಾಯ್ವೆವ ಬ್ರೂಹಿ' ಮೋಕ್ಷದ ಮಾರ್ಗವನ್ನು ಉಪದೇಶ ಮಾಡು ಎಂದು ಪ್ರಶ್ನಿಸಿದಾಗ ಭೇದ ಹಾಗೂ ಭೇದಕಧರ್ಮಗಳನ್ನು ಶ್ರುತಿಯು ಹೇಳಿದೆ. ಆದ್ದರಿಂದ ಇವುಗಳನ್ನು ಮಿಥ್ಯಾಭೂತವೆಂದು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಬೇರೆ ಪ್ರಮಾಣಗಳಿಂದ ಹಾಗೂ ಸ್ವಪ್ರಕರಣದಲ್ಲೇ ಇರುವ 'ಪ್ರಾಜ್ಞೇನಾತ್ಮನಾ' ಇತ್ಯಾದಿ ವಾಕ್ಯಗಳಿಂದ ಅವಿರುದ್ಧವಾದ ಮಹತ್ವಾದಿವಿಧಿ-ಪರತ್ವವನ್ನೇ ಹೇಳಲು ಬರುತ್ತದೆ. ಹೀಗಿರುವಾಗ ಅದಕ್ಕೆ ವಿರುದ್ಧವಾಗಿ ಅಭೇದಪರತ್ವವನ್ನು ಒಪ್ಪುವುದು ಯುಕ್ತವಲ್ಲ. ಆದ್ದರಿಂದ 'ಅತ ಊರ್ಧ್ವಂ' ಇತ್ಯಾದಿ ವಾಕ್ಯದಿಂದಲೇ ಐಕ್ಯವನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ.

**यच्चेहोच्यते भेदादिकं तच्च न तत्वम् । पत्यादिसूत्रस्य पूर्वशेषत्वेच चशब्दापात इति ॥**

ಮತ್ತು ಶ್ರುತಿಸೂತ್ರಗಳಲ್ಲಿ ಯಾವ ಭೇದವು ಪ್ರತಿಪಾದಿತವಾಗಿದೆಯೋ, ಅದು ಅದ್ವೈತಮತದ ತತ್ವವಲ್ಲ. ಆದ್ದರಿಂದ ಶ್ರುತಿಸೂತ್ರಗಳ ವಿರೋಧವೂ ಬರುತ್ತದೆ. ಮತ್ತು 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರವು ಹಿಂದಿನ ಸೂತ್ರಕ್ಕೆ ಗುಣಸೂತ್ರವಾದಲ್ಲಿ 'ಚ' ಶಬ್ದವನ್ನು ಹೇಳಬೇಕಿತ್ತು. ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯಕ್ಕೆ ಮತ್ತೊಂದು ಕಾರಣವನ್ನು ಹೇಳಲು ಹೊರಟಾಗ ಸೂತ್ರದಲ್ಲಿ 'ಚ' ಶಬ್ದವನ್ನು ಉಲ್ಲೇಖ ಮಾಡಬೇಕು. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ.

**प्रकाशः —**

**बृहदारण्यकवाक्यमिति** ॥ प्रागेव लिखितमेतत् । किं संसार्यात्मस्वरूपानुवाद-परमुतासंसारिब्रह्मस्वरूपप्रतिपादनपरमिति संशयः ।

ವಿವರಣೆ - ಅದ್ವೈತಿಗಳ ಅಧಿಕರಣಶರೀರವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. ಬೃಹದಾರಣ್ಯಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದ ಮೂರನೆಯ ಬ್ರಾಹ್ಮಣದಲ್ಲಿ ಪ್ರಸಕ್ತವಾದ 'ಕತಮ ಆತ್ಮಾ ಇತಿ, ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಪ್ರಾರಂಭವಾಗಿ 'ಸ ವಾ ಏಷ ಮಹಾನಜಃ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು' ಎಂಬ ವಾಕ್ಯದಲ್ಲಿ ಉಪಸಂಹಾರವಾಗುತ್ತದೆ. ಈ ಸಂಪೂರ್ಣ ಪ್ರಕರಣವನ್ನು ಅಧಿಕರಣದ ವಿಷಯವೆನ್ನುತ್ತಾರೆ. ಈ ವಾಕ್ಯವನ್ನು ಹಿಂದೆ ಸಂಶಯ ಕೋಟಿಗಳನ್ನು ತೋರಿಸುವ ಸಂದರ್ಭದಲ್ಲಿ ನಾವು ಉಲ್ಲೇಖ ಮಾಡಿದ್ದೇವೆ.

ಈ ಬೃಹದಾರಣ್ಯಕದ ಪ್ರಕರಣವು ಸಂಸಾರಿಯಾದ ಜೀವಾತ್ಮನ ಸ್ವರೂಪವನ್ನು ಅನುವಾದ ಮಾಡುತ್ತಿದೆಯೋ, ಅಥವಾ ಸಂಸಾರಿಯಲ್ಲದ ಬ್ರಹ್ಮಸ್ವರೂಪವನ್ನಷ್ಟೇ ಪ್ರತಿಪಾದನೆ ಮಾಡುತ್ತಿದೆಯೋ ? ಎಂದು ಸಂದೇಹ.

**प्रकाशः –**

आदिमध्यावसानेषु संसारिप्रतिपादनात् ।
तत्परो ग्रन्थसन्दर्भः सर्वं तत्रैव योज्यते ।।

इति भामत्युक्तं पूर्वपक्षमनुवदति ।। **मानान्तरेति** ।।

ಆದಿಮಧ್ಯಾವಸಾನೇಷು ಸಂಸಾರಿಪ್ರತಿಪಾದಾನಾತ್ ।
ತತ್ಪರೋ ಗ್ರಂಥಸಂದರ್ಭಃ ಸರ್ವಂ ತತ್ರೈವ ಯೋಜ್ಯತೇ ।

ಶ್ರುತಿ ಪ್ರಕರಣದ ಪ್ರಾರಂಭದಲ್ಲಿ, ಮಧ್ಯದಲ್ಲಿ ಹಾಗೂ ಕೊನೆಯಲ್ಲಿ ಸಂಸಾರಿಯಾದ ಜೀವಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಸಂಪೂರ್ಣ ಪ್ರಕರಣವು ಸಂಸಾರಿಯಾದ ಜೀವಾತ್ಮನನ್ನೇ ಅನುವಾದ ಮಾಡುತ್ತದೆ. ಹೀಗೆ ಭಾಮತಿಯಲ್ಲಿ ಹೇಳಿದ ಪೂರ್ವಪಕ್ಷವನ್ನು ಗ್ರಂಥಕಾರರು ಅನುವಾದ ಮಾಡುತ್ತಿದ್ದಾರೆ 'ಮಾನಾಂತರ' ಇತ್ಯಾದಿ ವಾಕ್ಯದಿಂದ.

**प्रकाशः –** संसार्येव तावदात्माऽहंकारास्पदं प्राणादिपरीतस्सर्वजनसिद्ध इति प्रत्यक्षप्राप्तसंसार्यात्मप्रतिपादकमिदमनुवादमात्रमित्यर्थः । अनुवादफलं च कर्मापेक्षितकर्तुः स्तुतिरिति भावः ।।

'ಮಾನಾಂತರಪ್ರಾಪ್ತ' ಎಂಬುದರ ಅಭಿಪ್ರಾಯ ಹೀಗಿದೆ - ಸಂಸಾರಿಯಾದ ಆತ್ಮನು 'ಅಹಂ' ಎಂಬ ಪ್ರತೀತಿಗೆ ವಿಷಯನಾಗಿದ್ದಾನೆ. ಪ್ರಾಣಾದಿಚೇಷ್ಟೆಗಳಿಂದ ಸಕಲಜನರಿಂದ ಸಿದ್ಧನಾಗಿದ್ದಾನೆ. ಹೀಗೆ ಪ್ರತ್ಯಕ್ಷ ಪ್ರಮಾಣದಿಂದ ಯಾವ ಸಂಸಾರಿಜೀವನು ಸಿದ್ಧನಾಗಿದ್ದಾನೋ ಅವನನ್ನು ಶ್ರುತಿಯು ಅನುವಾದ ಮಾಡುತ್ತಿದೆ ಎಂದಭಿಪ್ರಾಯ. ಕರ್ಮವನ್ನು ಅಪೇಕ್ಷಿಸಿದ ಕರ್ತೃವನ್ನು ಸ್ತೋತ್ರ ಮಾಡುವುದೇ ಅನುವಾದದ ಫಲವೆಂದು ತಿಳಿಯಬೇಕು.

**प्रकाशः –** उपक्रमेति ।। आदावन्ते च जीववाचिविज्ञानमयशब्दप्रयोगादिति भावः । मध्ये च ''स वा एष एतस्मिन्संप्रसादे स्वप्ने बुद्धान्ते रत्वा चरित्व'' इति स्वप्नाद्यवस्थोपपत्तेरित्यपि ध्येयम् । महानज इत्यादिकं तु संसारिण्येव कथञ्चिद्यो यमिति भावः ।

ಉಪಕ್ರಮದಲ್ಲಿ 'ಯೋಽಯಂ ವಿಜ್ಞಾನಮಯಃ' ಎಂದು ಜೀವವಾಚಿಯಾದ ವಿಜ್ಞಾನಮಯ ಶಬ್ದದ ಪ್ರಯೋಗವಿದೆ. ಉಪಸಂಹಾರದಲ್ಲಿಯೂ ಕೂಡ 'ವಿಜ್ಞಾನಮಯಃ ಪ್ರಾಣೇಷು' ಎಂಬುದಾಗಿ ವಿಜ್ಞಾನಮಯ ಶಬ್ದವೇ ಇದೆ. ಮಧ್ಯದಲ್ಲಿಯೂ ಕೂಡ 'ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ಸ್ವಪ್ನೇ ಬುದ್ಧಾಂತೇ ರತ್ವಾ ಚರಿತ್ವಾ' ಎಂಬುದಾಗಿ ಜಾಗ್ರತ್ ಸ್ವಪ್ನಸುಷುಪ್ತಿಗಳ ಪ್ರಸ್ತಾಪವಿದೆ. ಇವೆಲ್ಲವೂ ಜೀವನ ಲಿಂಗಗಳೇ ಆಗಿರುತ್ತವೆ. ಆದ್ದರಿಂದ 'ಮಹಾನಜಃ' ಎಂಬುದನ್ನೂ ಕೂಡ ಸಂಸಾರಿಯಾದ ಜೀವಾತ್ಮನಲ್ಲಿಯೇ ಕಥಂಚಿತ್ ಯೋಜನೆ ಮಾಡಬೇಕೆಂದು ಅಭಿಪ್ರಾಯ.

**प्रकाशः –** तत्किं संसारिणोऽन्यः परमात्मैव नेति संसार्यनुवादपरमित्युच्यतेऽथ वाऽत्र संसारिव्यतिरेकेण परमात्मनो सङ्कीर्तनात्संसारिण एवादावन्ते च कीर्तनात्तत्परमिति ।

ಸಂಸಾರಿಜೀವನಿಗಿಂತ ಭಿನ್ನನಾದ ಪರಮಾತ್ಮನೇ ಇಲ್ಲವೆಂಬುದು ಅನುವಾದ ಮಾಡುವ ಶ್ರುತಿಯ ಅಭಿಪ್ರಾಯವೋ, ಅಥವಾ ಸಂಸಾರಿಜೀವನಿಗಿಂತ ಭಿನ್ನನಾಗಿ ಪರಮಾತ್ಮನಿಲ್ಲವೆಂಬುದು ಅನುವಾದ ಮಾಡುವ ಶ್ರುತಿಯ ಅಭಿಪ್ರಾಯವೋ?

**प्रकाशः –** नाद्यः । ''ईक्षतेर्नाशब्दम्'' गतिसामान्यात्'' इत्यादिभिस्तद्भिन्न-परमात्मप्रतिपादकागमस्योपपादितत्वात् ।

ಪರಮಾತ್ಮನೇ ಇಲ್ಲವೆಂಬ ಪ್ರಥಮ ಪಕ್ಷ ಅಯುಕ್ತ. ಏಕೆಂದರೆ 'ಈಕ್ಷತೇರ್ನಾಶಬ್ದಮ್ ಗತಿಸಾಮಾನ್ಯಾತ್' ಇತ್ಯಾದಿ ಸೂತ್ರಗಳಿಂದ ಸಂಸಾರಿಜೀವನಿಗಿಂತ ಭಿನ್ನನಾದ ಪರಮಾತ್ಮನ ವಿಷಯದಲ್ಲಿ ಅನೇಕ ಆಗಮಗಳನ್ನು ಉದಾಹರಿಸಲಾಗಿದೆ.

**प्रकाशः –** न द्वितीयः । ''प्राज्ञेनात्मना सम्परिष्वक्त'' इति सुषुप्तौ ''प्राज्ञेनात्मनाऽन्वारूढ उत्सर्जद्याति'' इत्युत्क्रान्तौ च भेदेन व्यपदेशात् ।

ಎರಡನೆಯ ಪಕ್ಷವೂ ಕೂಡ ಅಸಾಧುವಾಗಿದೆ. ಏಕೆಂದರೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂಬ ಸುಷುಪ್ತಿಪ್ರಕರಣದಲ್ಲಿ 'ಪ್ರಾಜ್ಞೇನಾತ್ಮನಾಽನ್ವಾರೂಢಃ ಉತ್ಸರ್ಜದ್ಯಾತಿ' ಎಂಬ ಉತ್ಕ್ರಾಂತಿ ಪ್ರಕರಣದಲ್ಲಿಯೂ ಸಂಸಾರಿಜೀವನಿಗಿಂತ ಭಿನ್ನನಾದ ಪರಮಾತ್ಮನಿದ್ದಾನೆಂದು ಉಲ್ಲೇಖಿಸಲಾಗಿದೆ.

ಬ್ರಾಹ್ಮಣಾಧಿಕರಣ (೧-೩-೧೪)

**प्रकाशः** – ननु भेदेन जीवपरव्यपदेशो वाक्यं भिद्येतेत्यत आह – **सवाऽयमिति**।। अनधिगतैक्यावबोधनपरत्वसम्भवेऽनुवादमात्रमयुक्तमिति भावः ।

ಬ್ರಹ್ಮನು ಜೀವರಿಗಿಂತ ಭಿನ್ನನಾಗಿದ್ದಾನೆಂದು ಹೇಳುವುದಾದರೆ ವಾಕ್ಯಭೇದದೋಷ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಸವಾಽಯಮ್' ಎಂಬುದರಿಂದ ಉತ್ತರಿಸಿದ್ದಾರೆ. ಅನಧಿಗತವಾದ ಐಕ್ಯವನ್ನು ಪ್ರತಿಪಾದನೆ ಮಾಡುವುದಾದಲ್ಲಿ ಅನುವಾದ ಮಾಡುವಿಕೆಯೇ ಯುಕ್ತವಾಗುವುದಿಲ್ಲ ಎಂದಭಿಪ್ರಾಯ.

**प्रकाशः** – पत्यादिशब्दैश्चेदं वाक्यजातमसंसार्यात्मप्रतिपादनपरमिति सिद्धान्त इत्यर्थः ।

ಸೂತ್ರದಲ್ಲಿ 'ಪತ್ಯಾದಿಶಬ್ದೇಭ್ಯಃ' ಎಂದು ಹೇಳಿದ್ದರಿಂದ ಬ್ರಹ್ಮನ ಅಧಿಪತಿತ್ವಧರ್ಮವನ್ನು ಹೇಳಿದಂತಾಯಿತು. ಇದರಿಂದ ಸಂಪೂರ್ಣವಾಕ್ಯಗಳೆಲ್ಲವೂ ಸಂಸಾರಿಯಲ್ಲದ ಬ್ರಹ್ಮಾತ್ಮನ ಪ್ರತಿಪಾದನೆಗಾಗಿ ಹೊರಟವೆ ಎಂಬುದೇ ಸಿದ್ಧಾಂತ.

**प्रकाशः** – श्रुतिसूत्रानानुगुण्येन सिद्धान्तं पराचष्टे ।। **यत्तत्वमिति** ।। ऐक्यकीर्तनाभावे निर्विषयं वाक्यमापद्येतेति शङ्कां व्युदस्यन् पूर्वार्धं व्यनक्ति ।। **सुषुप्त्यादीति** ।।

ಶ್ರುತಿ ಹಾಗೂ ಸೂತ್ರಗಳಿಗೆ ಅದ್ವೈತಿಗಳ ಸಿದ್ಧಾಂತವು ಅನನುಗುಣವಾಗಿದೆಯೆಂದು ನಿರಾಕರಣೆ ಮಾಡುತ್ತಿದ್ದಾರೆ 'ಯತ್ತತ್ವಮ್' ಇತ್ಯಾದಿ ಶ್ಲೋಕದಿಂದ. ಒಂದುವೇಳೆ ಐಕ್ಯವನ್ನು ಒಪ್ಪದಿದ್ದರೆ ವಾಕ್ಯವು ನಿರ್ವಿಷಯವಾಗಬೇಕಾಗುತ್ತದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸುತ್ತಾ ಶ್ಲೋಕದ ಪೂರ್ವಾರ್ಧವನ್ನು ಸ್ವತಃ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸುಷುಪ್ತ್ಯಾದಿ' ಇತ್ಯಾದಿ ವಾಕ್ಯದಿಂದ.

**प्रकाशः** – **भेद एवेति** ।। एतेन तृतीयपादार्थस्यासिद्धिरपि परास्ता । एतेनेत्युक्तमेव व्यनक्ति ।। **सूत्रेति मानान्तरेति** ।। प्राज्ञभेदस्य प्रत्यक्षाद्यगोचरत्वादिति भावः । उत्तरार्धं व्यनक्ति ।। **यच्चेति** ।।

ಪ್ರಾಜ್ಞೇನಾತ್ಮನಾ ಇತ್ಯಾದಿ ವಾಕ್ಯಗಳು ಜೀವಬ್ರಹ್ಮರ ಭೇದಪ್ರತಿಪಾದಕವಾಗಿದೆಯೆಂದು ಹೇಳಿದ್ದರಿಂದ, 'ತತ್ರ ಯೇ ಕೀರ್ತಿತೇ ಭೇದಃ' ಎಂಬ ಗ್ರಂಥಕಾರರ ಮಾತಿಗೆ ಅಸಿದ್ಧಿಯನ್ನು ಪರಿಹರಿಸಿದಂತಾಯಿತು. 'ಏತೇನ' ಎಂಬುದರಿಂದ ಹೇಳಿದ್ದನ್ನೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸೂತ್ರ' ಇತ್ಯಾದಿಯಾಗಿ. ಪ್ರಾಜ್ಞನಾಮಕ ಪರಮಾತ್ಮನಿಂದ ಜೀವನು ಭಿನ್ನನಾಗಿದ್ದಾನೆಂಬುದು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರನಾಗಿಲ್ಲವೆಂದು ಅಭಿಪ್ರಾಯ. ಶ್ಲೋಕದ ಉತ್ತರಾರ್ಧವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.




ಶಾಂಕರಭಾಷ್ಯದಲ್ಲಿ ಹಿಂದಿನ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಸೂತ್ರದ ಜೊತೆಗೆ 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರವನ್ನೂ ಸಹ ಸೇರಿಸಿ ಒಂದೇ ಅಧಿಕರಣವೆಂದು ವಿಂಗಡಣೆ ಮಾಡಲಾಗಿದೆ. ಈ ಅಧಿಕರಣಕ್ಕೆ ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿರುವ 'ಕತಮ ಆತ್ಮ ಇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' ಎಂದು ಆರಂಭವಾಗಿ 'ಸ ವಾ ಏಷ ಮಹಾನಜಃ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು' ಎಂಬಲ್ಲಿ ಉಪಸಂಹಾರವಾಗುವ ಪ್ರಕರಣವು ವಿಷಯವಾಗಿದೆ. ಪ್ರಾರಂಭದಲ್ಲಿ 'ವಿಜ್ಞಾಮಯಃ ಹೃದ್ಯಂತಃ' ಇತ್ಯಾದಿ ಶಬ್ದಗಳೆಲ್ಲಾ ಕೇಳಿಸುತ್ತಿರುವುದರಿಂದ, ಜೀವನನ್ನೇ ಇದು ಪ್ರತಿಪಾದನೆ ಮಾಡುತ್ತದೆಂದು ಸ್ಪಷ್ಟವಾಗುತ್ತದೆ. ಉಪಸಂಹಾರದಲ್ಲಿಯೂ ಕೂಡ ವಿಜ್ಞಾನಮಯಶಬ್ದವೂ ಇರುವುದರಿಂದ ಉಪಸಂಹಾರವಾಕ್ಯವೂ ಕೂಡ ಜೀವಪ್ರತಿಪಾದಕವೇ ಆಗುತ್ತದೆ. ಮಧ್ಯದಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿಗಳ ಉಲ್ಲೇಖವಿರುವುದರಿಂದ, ಇವೆಲ್ಲವೂ ಜೀವಾತ್ಮನ ಲಿಂಗಗಳೇ ಆಗುವುದರಿಂದ, ಜೀವನೇ ಈ ಪ್ರಕರಣದಿಂದ ಪ್ರತಿಪಾದ್ಯನಾಗುತ್ತಾನೆಂದು ಪೂರ್ವಪಕ್ಷ. ಸುಷುಪ್ತಿಕಾಲದಲ್ಲಿ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ' ಎಂಬುದಾಗಿ ಜೀವನಿಗೆ ಬಾಹ್ಯಪದಾರ್ಥಗಳ ಜ್ಞಾನವನ್ನು 'ಪ್ರಾಜ್ಞೇನಾ' ಎಂದು ಬ್ರಹ್ಮನಿಗೆ ಸರ್ವಜ್ಞತ್ವವನ್ನು ಹೇಳಿ, ಜೀವ ಹಾಗೂ ಬ್ರಹ್ಮರಿಗೆ ಭೇದವನ್ನು ತಿಳಿಸಲಾಗಿದೆ. ಉತ್ಕ್ರಾಂತಿಪ್ರಕರಣದಲ್ಲಿಯೂ ಕೂಡ 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಎಂಬುದಾಗಿ ಭೇದವನ್ನೇ ಹೇಳಲಾಗಿದೆ. ಇದರಿಂದ ಜೀವನಿಗಿಂತಲೂ ಬ್ರಹ್ಮನು ಭಿನ್ನನಾಗಿದ್ದಾನೆಂದು ಪ್ರಕರಣದ ಅಭಿಪ್ರಾಯವೆಂದು ಸ್ಪಷ್ಟವಾಗುತ್ತದೆ. ಉಪಕ್ರಮದಲ್ಲಿ ಜೀವಸ್ವರೂಪವನ್ನು ಹೇಳಿದ್ದರೂ ಜೀವನಲ್ಲಿರುವ ಧರ್ಮಗಳು ಮಿಥ್ಯಾಭೂತವೆಂದು ತಿಳಿಸಿ, ಜೀವನಿಗೆ ಬ್ರಹ್ಮೈಕ್ಯವನ್ನು ಪ್ರತಿಪಾದನೆ ಮಾಡುವುದೇ ಪ್ರಕರಣದ ಉದ್ದೇಶ. ಉಪಸಂಹಾರವಾಕ್ಯದಲ್ಲಿಯೂ ಸ್ಪಷ್ಟವಾಗಿ ಅಭೇದವೇ ಹೇಳಲ್ಪಟ್ಟಿದೆ. ವಿಜ್ಞಾನಮಯನಾದ ಜೀವನೇ 'ಮಹಾನ್ ಅಜಃ' ಎನಿಸಿದ ಬ್ರಹ್ಮಸ್ವರೂಪನಾಗಿದ್ದಾನೆಂಬುದು ಉಪಸಂಹಾರ ವಾಕ್ಯದ ಅಭಿಪ್ರಾಯ. ಇದರಿಂದ ಜೀವಾಭೇದವು ಸಿದ್ಧವಾಯಿತೆಂದು ಸಿದ್ಧಾಂತ.

ಪ್ರಕರಣದಲ್ಲಿರುವ 'ಸರ್ವಸ್ಯ ವಶೀಸರ್ವಸ್ಯೇಶಾನಃ' ಇತ್ಯಾದಿ ಶಬ್ದಗಳು ಜೀವನಲ್ಲೇ ಅಸಂಭಾವಿತವಾದ್ದರಿಂದಲೂ, ಈ ಪ್ರಕರಣವು ಅಸಂಸಾರಿಯಾದ ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ.

ಅದ್ವೈತಿಗಳ ಈ ಅಧಿಕರಣ ಶರೀರವಾಗಲೀ, ಸೂತ್ರಾರ್ಥಗಳಾಗಲೀ ಅಸಾಧುವಾಗಿವೆ. ಏಕೆಂದರೆ

'ಯತ್ತತ್ತ್ವಮೈಕ್ಯಂ ತನ್ನೈವ ಕೀರ್ತ್ಯತೇ ಶ್ರುತಿಸೂತ್ರಯೋಃ ।
ತತ್ರ ಯಃ ಕೀರ್ತ್ಯತೇ ಭೇದಃ ತಚ್ಚ ತತ್ತ್ವಂ ನ ತೇ ಮತೇ'

ಯಾವ ಐಕ್ಯವು ಅದ್ವೈತ ಮತದ ತತ್ತ್ವವಾಗಿದೆಯೋ, ಅದನ್ನು ಶ್ರುತಿಯಾಗಲೀ, ಸೂತ್ರವಾಗಲೀ, ಪ್ರತಿಪಾದನೆ ಮಾಡುತ್ತಿಲ್ಲ. ಶ್ರುತಿ ಹಾಗೂ ಸೂತ್ರಗಳಲ್ಲಿ ಪ್ರತಿಪಾದನೆ ಮಾಡುತ್ತಿರುವ ಜೀವೇಶಭೇದವು ಅದ್ವೈತಮತದ ತತ್ತ್ವವಲ್ಲ.

ಹೀಗೆ ಶ್ರುತಿ ಹಾಗೂ ಸೂತ್ರಗಳಲ್ಲಿ ಸ್ಪಷ್ಟವಾಗಿ ಭೇದವೇ ಪ್ರತಿಪಾದಿತವಾಗಿರುವಾಗ ಅದಕ್ಕೆ ವಿರುದ್ಧವಾಗಿ ಐಕ್ಯವನ್ನು ಪ್ರತಿಪಾದನೆ ಮಾಡುವುದು ತಪ್ಪಾಗುತ್ತದೆ. ಮತ್ತು 'ಪತ್ಯಾದಿ' ಸೂತ್ರದಲ್ಲಿಯೂ

ಕೂಡ ಜೀವಬ್ರಹ್ಮಭೇದಕದ ಧರ್ಮಗಳನ್ನೇ ಹೇಳಲಾಗಿದೆ. ಒಂದು ವೇಳೆ ಐಕ್ಯವನ್ನು ಪ್ರತಿಪಾದನೆ ಮಾಡುವುದಾದಲ್ಲಿ, ಶ್ರುತಿಸೂತ್ರಗಳ ವಿರೋಧ ಬರುತ್ತದೆ. ಮತ್ತು 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರವು ಹಿಂದಿನ ಸೂತ್ರಕ್ಕೆ ಶೇಷಭೂತವಾದಲ್ಲಿ, 'ಚ'ಶಬ್ದವನ್ನು ಸೂತ್ರದಲ್ಲಿ ಹೇಳಬೇಕಿತ್ತಲ್ಲವೇ? ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಅತ್ಯಂತ ಅಸಾಧುವಾಗಿದೆ.

• • • • •

## ರಾಮಾನುಜರ ಅಧಿಕರಣವಿಮರ್ಶೆ

### तात्पर्यचन्द्रिका

**केचित्तु ।। सुषुप्त्यादीतिसूत्रद्वयमस्मदुक्तवाक्यविषयमेव स्वीकृत्य मुक्तजीवाद्वि लक्षणब्रह्मसाधनपरं सत् ''आकाशोऽर्थान्तर'' इत्येतदधिकरणशेष इत्याहुः ।**[1]

(१)**रामानुजभाष्यम् –**

**सुषुप्त्युत्क्रान्त्योर्भेदेन ।। ४३ ।।**

व्यपदेशादिति वर्तते, सुषउप्त्युत्क्रान्त्योः प्रत्यगात्मनोऽर्थान्तरत्वेन परमात्मनो व्यपदेशात् प्रत्यगात्मनोऽर्थान्तरभूतः परमात्मास्त्येव । तथाहि वाजसनेयके 'कतम आत्मा योऽयं विज्ञानमयः प्राणेषु' इति प्रकृतस्य प्रत्यगात्मनः सुषुप्त्यवस्थायामकिञ्चिज्ज्ञस्य सर्वज्ञेन परमात्मनापरिष्वङ्ग आम्नायते । 'प्राज्ञेनात्मना सम्परिष्वक्तो न बाह्यं किञ्चन वेद नान्तरम्' इति । तथोत्क्रान्तावपि 'प्राज्ञेनाऽत्मनाऽन्वारूढ उत्सर्जन् याति' इति । नच स्वपत उत्क्रमतो वा किञ्चिज्ज्ञस्य तदानीमेव स्वेनैव सर्वज्ञेन सता परिष्वङ्गान्वारोहौ सम्भवतः, नच क्षेत्रज्ञान्तरेण, तस्यापि सर्वज्ञत्वासम्भवात् ।। ४३ ।।

इतश्च प्रत्यगात्मनोऽर्थान्तरभूतः परमात्मेत्याह –

**पत्यादिशब्देभ्यः ।। ४४ ।।**

अयं परिष्वञ्जकः परमात्मा उत्तरत्र पत्यादिशब्दैर्व्यपदिश्यते – 'सर्वस्याधिपतिः सर्वस्य वशी सर्वस्येशानः । स न साधुना कर्मणा भूयान्नो एवासाधुना कनीयान् । एष सर्वेश्वर एष भूताधिपतिरेष भूतपाल एष सेतुर्विधरण एषां लोकानामसम्भेदाय । तमेतं वेदानुवचनेन ब्राह्मणा विविदिषन्ति...एतमेव विदित्वा मुनिर्भवति । एतमेव प्रव्राजिनो लोकमिच्छन्तः प्रव्रजन्ति' 'स वा एष महानज आत्माऽन्नादो वसुदानः' 'अजरोऽमृतोऽभयो ब्रह्म' इति । एते च पतित्वजगद्विधरणत्वसर्वेश्वरत्वादयः प्रत्यगात्मनि मुक्तावस्थेऽपि न कथञ्चित् सम्भवन्ति । अतो मुक्तात्मनोऽर्थान्तरभूतो नामरूपयोर्निर्वहिताऽकाशः । ऐक्योपदेशस्तु सर्वस्य चिदचिदात्मकस्य ब्रह्मकार्यत्वेन तदात्मकत्वायत्त इति 'सर्वं खल्विदं ब्रह्म तज्जलान्' इत्यादिभिर्वाक्यैः प्रतिपाद्यत इति पूर्वमेव समर्थितम् । द्वैतप्रतिषेधश्च तत एवेत्यनवद्यम् ।।४४।।

ಅನುವಾದ - ರಾಮಾನುಜರ ಅಧಿಕರಣಶರೀರ ಹೀಗಿದೆ - ೧. 'ಆಕಾಶೋಽರ್ಥಾಂತರತ್ವಾದಿ-ವ್ಯಪದೇಶಾತ್' ೨. 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ೩. 'ಪತ್ಯಾದಿಶಬ್ದೇಭ್ಯಃ' ಇತ್ಯಾದಿ ಮೂರು ಸೂತ್ರಗಳು ಸೇರಿ, ಒಂದೇ ಅಧಿಕರಣ. ಈ ಮೂರು ಸೂತ್ರಗಳಲ್ಲಿಯೂ ಆಕಾಶಶಬ್ದದ ಸಮನ್ವಯವನ್ನು ಸಾಧಿಸಲಾಗಿದೆ. ನಾವು ಹೇಳಿದ ಛಾಂದೋಗ್ಯದ ಮಂತ್ರವೇ ಅಧಿಕರಣದ ವಿಷಯವಾಕ್ಯವಾಗಿದೆ. ನಾಮರೂಪವಿಲಕ್ಷಣನೆಂದು ಹೇಳಿರುವುದರಿಂದ, ಆಕಾಶಶಬ್ದದಿಂದ ಪ್ರತಿಪಾದ್ಯನಾದವನು ಬ್ರಹ್ಮನೇ ಆಗುತ್ತಾನೆ ಹೊರತು, ಮುಕ್ತಜೀವನು ಆಗುವುದಿಲ್ಲವೆಂದು ಸಿದ್ಧಾಂತ ಮಾಡಿದ್ದಾರೆ. ಮುಕ್ತಜೀವನು ಆಕಾಶಶಬ್ದವಾಚ್ಯನೆಂದು ಪೂರ್ವಪಕ್ಷ. ಬ್ರಹ್ಮನೆಂದು ಸಿದ್ಧಾಂತ.

**तन्न । "आकाशो वैनाम" इत्यत्राकाशो मुक्तजीव एव नतु ब्रह्मेति वदता पूर्वपक्षिणा तस्मिन्नेवाधिकरणे तद्वाक्यविचारं विहाय स्वोक्तिविरुद्धस्य मुक्तजीव-ब्रह्मैक्यस्य तत्त्वमस्यादिवाक्यान्तरमाश्रित्य शङ्कितुमनुचितत्वात् ।।**

ಇವರ ಈ ಪೂರ್ವಪಕ್ಷಸಿದ್ಧಾಂತಗಳು ಅಸಾಧುವಾಗಿವೆ. ಏಕೆಂದರೆ 'ಆಕಾಶೋ ವೈ ನಾಮ' ಎಂಬಲ್ಲಿ ಆಕಾಶಶಬ್ದದಿಂದ ಮುಕ್ತಜೀವನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಬ್ರಹ್ಮನಲ್ಲವೆಂದು ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ. ಇದರಿಂದ ಪೂರ್ವಪಕ್ಷಿಯು ಜೀವನಿಗೂ ಬ್ರಹ್ಮನಿಗೂ ಭೇದವನ್ನು ಒಪ್ಪಿ ಪ್ರಶ್ನೆ ಮಾಡುತ್ತಿದ್ದಾನೆ ಎಂದಂತಾಯಿತು. ಮೊದಲು ತಾನು ಒಪ್ಪಿರುವ ಭೇದಕ್ಕೆ ವಿರುದ್ಧವಾಗಿ ಅವರಿಬ್ಬರಿಗೆ ಐಕ್ಯವನ್ನು 'ತತ್ತ್ವಮಸ್ಯಾದಿ' ವಾಕ್ಯಗಳ ಆಧಾರದಿಂದ ಒಪ್ಪಿ, ಸುಷುಪ್ತಿಸೂತ್ರಕ್ಕೆ ಪೂರ್ವಪಕ್ಷವನ್ನು ಮಾಡುವುದು ಅತ್ಯಂತ ಅನುಚಿತವಾಗಿದೆ.

**टीकाक्षरार्थस्तु ।। स्वरव्यत्ययस्याधिकार्थत्वादिति ।। "आधिक्येऽधिकमित्येव हरिणासूत्रमीरितम्" इत्यृग्भाष्य उक्तत्वाद्ब्रह्मणा वेदेन गम्यत्वाधिक्यविवक्षया दीर्घ इत्यर्थः । इतरत् स्पष्टमिति ।। ब्राह्मणाधिकरणम् ।। १४ ।।**

**इति श्रीमद्ब्रह्मण्यतीर्थपूज्यपादानां शिष्येण**

**व्यासयतिना विरचितायां श्रीमद्भाष्यटीकाविवृतौ**

**तात्पर्यचन्द्रिकायां प्रथमाध्यायस्य तृतीयः पादः ।। १ ।। ३ ।।**

ಟೀಕೆಯ ಕಠಿಣಪದಾರ್ಥ - ಟೀಕೆಯಲ್ಲಿ 'ಸ್ವರವ್ಯತ್ಯಯಸ್ಯಾಧಿಕಾರ್ಥತ್ವಾತ್' ಎಂದಿದೆ. 'ಬ್ರಹ್ಮ ಅಣತೀತಿ' ಎಂಬ ನಿಷ್ಪತ್ತಿಯನ್ನು ಮಾಡಿದಾಗ 'ಬ್ರಹ್ಮಾಣಾಃ' ಎಂದೇ ಹೇಳಬೇಕು. 'ಬ್ರಾಹ್ಮಣಸ್ಯ' ಎಂಬುದಾಗಿ ಸ್ವರವ್ಯತ್ಯಾಸವು ಹೇಗಾಯಿತು? ಎಂಬ ಪ್ರಶ್ನೆಗೆ ಆಧಿಕ್ಯವನ್ನು ತಿಳಿಸುವುದಕ್ಕಾಗಿ, ಸ್ವರವ್ಯತ್ಯಾಸವಾಗಿದೆಯೆಂದು ಟೀಕೆಯಲ್ಲಿ ಹೇಳಿದ್ದಾರೆ. ಅಂದರೆ 'ಆಧಿಕ್ಯೇಽಧಿಕಮಿತ್ಯೇವ

ಹರಿಣಾಸೂತ್ರಮೀರಿತಮ್' ಎಂದು ಋಗ್ಭಾಷ್ಯದಲ್ಲಿ ಹೇಳಿದಂತೆ ಬ್ರಹ್ಮನು ವೇದದಿಂದ ಅಧಿಕವಾಗಿ ಪ್ರತಿಪಾದ್ಯನಾಗಿದ್ದಾನೆಂಬ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ 'ಬ್ರಾಹ್ಮಣಸ್ಯ' ಎಂದು ದೀರ್ಘವು ವ್ಯತ್ಯಾಸವಾಗಿದೆಯೆಂದು ತಿಳಿಯಬೇಕು. ಉಳಿದ ಟೀಕೆಯ ಕಠಿಣಪದಗಳ ಅರ್ಥವು ಸ್ಪಷ್ಟವಾಗಿ ಉಪನ್ಯಾಸಸಂದರ್ಭದಲ್ಲಿಯೇ ಹೇಳಿದ್ದೇವೆ.

ಶ್ರೀ ಮದ್ಬ್ರಹ್ಮಣ್ಯತೀರ್ಥ ಪೂಜ್ಯಪಾದರ ಶಿಷ್ಯಂದಿರಾದ ಶ್ರೀ ವ್ಯಾಸತೀರ್ಥರಿಂದ ರಚಿತವಾದ
ಭಾಷ್ಯಟೀಕಾವಿವೃತಿಯಾದ ತಾತ್ಪರ್ಯಚಂದ್ರಿಕೆಯಲ್ಲಿ
ಪ್ರಥಮಾಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.

**प्रकाशः –**

**केचित्त्विति ।। पूर्वसूत्रे आकाशः परमात्मा न मुक्तजीवः । नामरूपास्पृष्टत्वेन तन्निर्वोढृत्वेन च बन्धमुक्तोभयावस्थाज्जीवादर्थान्तरत्वस्य वैलक्षण्यस्य व्यपदेशादित्युक्तम् ।**

ವಿವರಣೆ - ಹಿಂದಿನ ಸೂತ್ರದಲ್ಲಿ ಆಕಾಶಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಮುಕ್ತಜೀವನಲ್ಲ. ಏಕೆಂದರೆ ನಾಮರೂಪಗಳನ್ನು ಹೊಂದದೇ ವಿಲಕ್ಷಣನಾಗಿ, ಅವುಗಳನ್ನು ನಿರ್ವಾಹ ಮಾಡುವುದರಿಂದ ಬಂಧ ಹಾಗೂ ಮೋಕ್ಷಗಳೆಂಬ ಎರಡು ಅವಸ್ಥೆಗಳುಳ್ಳ ಜೀವನಿಗಿಂತ ವೈಲಕ್ಷಣ್ಯವನ್ನು ಹೇಳಿರುವ ಕಾರಣ, ಪರಮಾತ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆಂದು ಹೇಳಲಾಯಿತು.

**प्रकाशः – तन्न युक्तम् । ''तत्त्वमसि'' इत्यादिनैक्यव्यपदेशेन ''नेहनानास्ति'' इति भेदनिषेधेन च प्रत्यगात्मनेऽर्थान्तरभूतस्य परमात्मनोऽभावादित्याशङ्क्य तत्किं जीवमात्रादर्थान्तरत्वे विप्रतिपत्तिरुत मुक्त्यवस्थाज्जीवात् ।**

ಇದು ತಪ್ಪು. ಏಕೆಂದರೆ 'ತತ್ತ್ವಮಸಿ' ಇತ್ಯಾದಿ ಶ್ರುತಿಯಲ್ಲಿ ಮುಕ್ತಜೀವನಿಗಿಂತಲೂ ಪರಮಾತ್ಮನು ಅಭಿನ್ನನಾಗಿದ್ದಾನೆಂದು ಹೇಳಿದ್ದರಿಂದ 'ನೇಹನಾನಾಸ್ತಿ' ಎಂಬ ಶ್ರುತಿಯು ಭೇದವನ್ನು ನಿಷೇಧ ಮಾಡುತ್ತಿರುವುದರಿಂದ, ಪ್ರತ್ಯಗಾತ್ಮನಿಗಿಂತ ಭಿನ್ನನಾದ ಮತ್ತೊಬ್ಬ ಪರಮಾತ್ಮನು ಇಲ್ಲದ ಕಾರಣ. ಪರಮಾತ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದ್ದು ತಪ್ಪಲ್ಲವೇ? ಎಂದು ಆಶಂಕಿಸಿ, ಕೇವಲ ಜೀವಸಾಮಾನ್ಯರಿಗಿಂತ ವೈಲಕ್ಷಣ್ಯವನ್ನು ಹೇಳಿರುವ ಕಾರಣ, ಹೀಗೆ ಆಶಂಕಿಸಲಾಗುತ್ತಿದೆಯೋ? ಅಥವಾ ಮುಕ್ತನಾದ ಜೀವನಿಗಿಂತ ವೈಲಕ್ಷಣ್ಯವನ್ನು ಹೇಳಿರುವ ಕಾರಣ ಹೀಗೆ ಆಶಂಕಿಸಲಾಗುತ್ತಿದೆಯೋ?

**प्रकाशः – नाद्यः । ''प्राज्ञेनात्मना सम्परिष्वक्तः प्राज्ञेनात्मनाऽन्वारूढ'' इति सुषुम्त्युत्क्रान्त्योर्भेदेन जीवादर्थान्तरस्य व्यपदेशादिति सुषुप्तिसूत्रेणोक्त्वात्**

ಮೊದಲನೆಯ ಪಕ್ಷ ಸರಿಯಲ್ಲ. ಏಕೆಂದರೆ 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾಽನ್ವಾರೂಢಃ' ಇತ್ಯಾದಿ ಶ್ರುತಿಯಲ್ಲಿ ಸುಷುಪ್ತಿ ಹಾಗೂ ಉತ್ಕ್ರಾಂತಿಗಳಿಂದ ಜೀವಬ್ರಹ್ಮರಿಗೆ ಭೇದವೇ ಸ್ಪಷ್ಟವಾಗಿ ತಿಳಿಯುತ್ತಿದೆ. ಆದ್ದರಿಂದ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎಂಬ ಎರಡನೆಯ ಸೂತ್ರವು ಜೀವಬ್ರಹ್ಮರಿಗೆ ಭೇದವನ್ನು ಸಾಧಿಸುತ್ತಿರುವುದರಿಂದ ಜೀವಸಾಮಾನ್ಯರಿಗೆ ಬ್ರಹ್ಮನಿಂದ ಅಭೇದವನ್ನು ಆಕ್ಷೇಪಿಸಬಾರದೆಂದು ಉತ್ತರಿಸುತ್ತಿದೆ.

**ಪ್ರಕಾಶಃ** – न द्वितीयः । ''सर्वस्याधिपतिस्सर्वस्य वशि'' इत्यादिपत्यादिशब्देभ्यश्च मुक्त्यवस्थादर्थान्तरस्य व्यपदेशात् । नहि सर्वाधिपतित्वादिकं मुक्त्यवस्थेपि सम्भवतीति द्वितीयसूत्रेणोक्तमित्यर्थः ।

ಎರಡನೆಯ ಪಕ್ಷವು ತಪ್ಪು. ಏಕೆಂದರೆ 'ಸರ್ವಸ್ಯಾಧಿಪತಿಃ ಸರ್ವಸ್ಯ ವಶೀ' ಇತ್ಯಾದಿಯಾಗಿ ಪತ್ಯಾದಿಶಬ್ದಗಳಿರುವುದರಿಂದ, ಮುಕ್ತ್ಯವಸ್ಥೆಯನ್ನು ಹೊಂದಿದ ಜೀವನಿಗಿಂತಲೂ ಪರಮಾತ್ಮನು ಭಿನ್ನನೆಂದು ಹೇಳಲಾಗಿದೆ. ಸರ್ವಾಧಿಪತಿತ್ವಾದಿಗಳು ಮುಕ್ತ್ಯವಸ್ಥೆಯಲ್ಲಿಯೂ ಕೂಡ ಜೀವನಿಗೆ ಬರುವುದಿಲ್ಲವೆಂದು 'ಪತ್ಯಾದಿಶಬ್ದೇಭ್ಯಃ' ಎಂಬ ಮುಂದಿನ ಸೂತ್ರವು ಉತ್ತರಿಸಿದೆ. ಹೀಗೆ ರಾಮಾನುಜರು ಆಕಾಶಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆನ್ನಲು 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಮತ್ತು 'ಪತ್ಯಾದಿಶಬ್ದೇಭ್ಯಃ' ಎಂಬೆರಡು ಸೂತ್ರಗಳನ್ನು ಶೇಷವನ್ನಾಗಿ ಸಮರ್ಥಿಸುತ್ತಾರೆ.

**ಪ್ರಕಾಶಃ** – पूर्वशेषत्वे तु सूत्रानुत्थानं स्यादिति दूषयति ।। तन्नेति ।।

ಇದು ತಪ್ಪು. ಒಂದು ವೇಳೆ ಸುಷುಪ್ತ್ಯಾದಿಸೂತ್ರಗಳೆರಡು ಆಕಾಶಾದಿ ಸೂತ್ರಕ್ಕೆ ಶೇಷವಾದಲ್ಲಿ, ಸೂತ್ರಗಳು ಹೊರಟದ್ದೇ ವ್ಯರ್ಥವಾಗುತ್ತದೆಂದು 'ತನ್ನ' ಇತ್ಯಾದಿ ಗ್ರಂಥದಿಂದ ದೂಷಣೆ ಮಾಡುತ್ತಿದ್ದಾರೆ.

**ಪ್ರಕಾಶಃ** – यदप्युक्तं श्रुतप्रकाशे प्रतिज्ञाभागाभावान्नाधिकरणान्तरम् । न चाध्याहारः । अनध्याहारेणैवोपपत्तेरिति तदेतेन निरस्तम् । सूत्रगमनिकारूपशङ्काया एवानुदयात् ।

ಇನ್ನು ಶ್ರುತಪ್ರಕಾಶದಲ್ಲಿ ಹೀಗೆ ಸಮಾಧಾನ ಹೇಳಿದ್ದಾರೆ - 'ಸುಷುಪ್ತ್ಯುತ್ಕ್ರಾಂತ್ಯೋಃ' ಇತ್ಯಾದಿ ಎರಡು ಸೂತ್ರಗಳಲ್ಲಿ ಪ್ರತಿಜ್ಞಾಂಶವೇ ಇರುವುದಿಲ್ಲ. ಆದ್ದರಿಂದ ಇವೆರಡು ಸೂತ್ರಗಳನ್ನು ಅಧಿಕರಣಾಂತರವೆಂದು ಹೇಳಬಾರದು. ಪ್ರತಿಜ್ಞೆಯ ಅಧ್ಯಾಹಾರ ಮಾಡಿಕೊಳ್ಳುವುದೂ ಕೂಡ ತಪ್ಪಾಗುತ್ತದೆ. ಏಕೆಂದರೆ ಅಧ್ಯಾಹಾರ ಮಾಡಿಕೊಳ್ಳದೇ ಸೂತ್ರವನ್ನು ವ್ಯಾಖ್ಯಾನಿಸಲು ಬರುವಾಗ, ಅಧ್ಯಾಹಾರ ಮಾಡುವುದು ತಪ್ಪು. ಶ್ರುತಪ್ರಕಾಶದ ಈ ಮಾತನ್ನೂ ಕೂಡ ಈಗ ನಿರಾಕರಿಸಿದಂತಾಯಿತು. ಏಕೆಂದರೆ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಇತ್ಯಾದಿ ಸೂತ್ರಗಳಲ್ಲಿ ಸ್ವತಃ ರಾಮಾನುಜರೇ ಯೋಗ್ಯವಾದ ಪದಗಳನ್ನು ಅಧ್ಯಾಹಾರ ಮಾಡಿಕೊಂಡಿದ್ದಾರೆ. ಆದ್ದರಿಂದ ಯಾವ ಸೂತ್ರದಲ್ಲಿ ಪ್ರತಿಜ್ಞಾಭಾಗವು ಸ್ಪಷ್ಟವಾಗಿ ತಿಳಿಯುತ್ತದೋ ಅಲ್ಲಿ ಪುನಃ ಆ ಅಂಶವನ್ನು ಹೇಳುವ ಅವಶ್ಯಕತೆಯಿರುವುದಿಲ್ಲ. ಯೋಗ್ಯವಾದ ಪದಗಳನ್ನು ಅಧ್ಯಾಹಾರ ಮಾಡಿಕೊಂಡು ಸೂತ್ರದ ಅರ್ಥವನ್ನು ತಿಳಿದುಕೊಳ್ಳುವುದು ತಪ್ಪಾಗುವುದಿಲ್ಲ. ಮತ್ತು ಒಂದುವೇಳೆ ಆಕಾಶಾದಿಸೂತ್ರಕ್ಕೆ ಇವೆರಡು ಸೂತ್ರಗಳು

ಶೇಷಭೂತವಾದಲ್ಲಿ, ಸೂತ್ರಗಳಲ್ಲಿ 'ಚ' ಶಬ್ದವನ್ನು ಸೂತ್ರಕಾರರು ಹೇಳಬೇಕಿತ್ತು. ಆದ್ದರಿಂದ ಇವೆರಡು ಸೂತ್ರಗಳು ಪ್ರತ್ಯೇಕ ಪ್ರತ್ಯೇಕವಾದ ಎರಡು ಅಧಿಕರಣಗಳೇ ಆಗಿವೆಯೆಂದೇ ಪರಿಗಣಿಸಬೇಕು.

**प्रकाशः –** अभिव्यक्तेरित्यादौ त्वन्मत इव योग्यस्याध्याहारे दोषाभावादिति । चशब्दाभावादिति दूषणमत्रापि ध्येयम् । एतेन रामानुजमतरीतिमनुसरतः कस्यचिच्छैवस्य मतं प्रत्युक्तमिति ध्येयम् । ''विदेहि रुद्रो रुद्रियं महित्वम्'' इत्यादिश्रुतिभिः ''रुद्रो ब्रह्माणमाश्रित'' इत्यादिस्मृतिभिस्तस्य पराधीनत्वोक्त्या सर्ववशित्वादेरसङ्कुचितस्यायोगाच्चेति ।

ಹೀಗೆ ರಾಮಾನುಜ ಮತವನ್ನು ನಿರಾಕರಣೆ ಮಾಡಿದ್ದರಿಂದ ರಾಮಾನುಜರನ್ನೇ ಅನುಸರಿಸುವ ಕೆಲವು ಶೈವರ ಮತವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. 'ವಿದೇಹಿ ರುದ್ರೋ ರುದ್ರಿಯಂ ಮಹಿತ್ವಮ್' ಇತ್ಯಾದಿ ಶ್ರುತಿಗಳಿಂದ 'ರುದ್ರೋ ಬ್ರಹ್ಮಾಣಮಾಶ್ರಿತಃ' ಇತ್ಯಾದಿ ಸ್ಮೃತಿಗಳಿಂದ ರುದ್ರನು ಪರಾಧೀನನಾಗಿದ್ದಾನೆಂದು ತಿಳಿಯುತ್ತಿದೆ. ಆದ್ದರಿಂದ ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಸರ್ವವಶಿತ್ವವೆಂಬ ಧರ್ಮವನ್ನು ಅಸಂಕುಚಿತವಾಗಿಯೂ ಕೂಡ ರುದ್ರನಲ್ಲಿ ಕೂಡಿಸಲು ಸಾಧ್ಯವಿಲ್ಲ.

**प्रकाशः –** ''ब्रह्मणा वेदेन गम्यत इति योगेनोपपत्तेः । स्वरव्यत्ययस्याधिक्यार्थत्वात्'' इति सिद्धान्तस्थवाक्यं हेतूक्तिपूर्वं व्यनक्ति ।। **स्वरेति** ।।

'ಬ್ರಾಹ್ಮಣಾ ವೇದೇನ ಗಮ್ಯತೇ ಬ್ರಹ್ಮಣಾ ಇತಿ ಯೋಗೇನೋಪಪತ್ತೇಃ । ಸ್ವರವ್ಯತ್ಯಯಸ್ಯಾ-ಧಿಕ್ಯಾರ್ಥತ್ವಾತ್' 'ಬ್ರಾಹ್ಮಣಸ್ಯ' ಎಂಬಲ್ಲಿ ಬ್ರಹ್ಮನು ವೇದದಿಂದ ಪ್ರತಿಪಾದ್ಯನಾಗುತ್ತಾನೆ ಎಂಬರ್ಥವನ್ನು ಯೌಗಿಕವ್ಯುತ್ಪತ್ತಿಯಿಂದ ಕೂಡಿಸಬೇಕು. 'ಬ್ರಹ್ಮಣಃ' ಎಂದಾಗದೇ 'ಬ್ರಾಹ್ಮಣಃ' ಎಂಬ ಸ್ವರವ್ಯತ್ಯಾಸವು ಆಧಿಕ್ಯಾರ್ಥದಿಂದ ಯುಕ್ತವಾಗುತ್ತದೆ ಎಂದು ಸಿದ್ಧಾಂತ ಟೀಕೆಯಲ್ಲಿ ಹೇಳಿದ್ದಾರೆ. ಇದನ್ನು ಪ್ರಕೃತ ಗ್ರಂಥಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ 'ಸ್ವರ' ಇತ್ಯಾದಿ ವಾಕ್ಯದಿಂದ.

**प्रकाशः –** अर्थाधिक्ये विवक्षिते शब्देऽधिकमिति सूत्रं महाव्याकरण ईरितमित्यर्थः।। **दीर्घ इति** ।। ब्रह्माण इति वक्तव्ये ब्राह्मणस्येत्युत्तरस्य दीर्घलोपेन पूर्वस्य दीर्घरूपः स्वर इत्यर्थः । तेन योगस्य ब्रह्मादिष्वयोग्यतामभिप्रैति । शिष्टं स्पष्टमुपन्यासमुखेनेति भावः । इतिशब्दः पादसमाप्तौ ।। ब्राह्मणाधिकरणम् ।।१४।।

इति श्रीसुधीन्द्रतीर्थगुरुपादशिष्यश्रीराघवेन्द्रयतिकृते
चन्द्रिकाप्रकाशे प्रथमाध्यायस्य तृतीयः पादः ।। १ ।। ३ ।।

ಪರಿಪೂರ್ಣಚಂದ್ರಿಕಾ

'ಅರ್ಥಾಧಿಕ್ಯೇ ವಿವಕ್ಷಿತೇ ಶಬ್ದೇऽಧಿಕಮ್' ಅರ್ಥದ ಆಧಿಕ್ಯವು ವಿವಕ್ಷಿತವಾದಾಗ ಶಬ್ದದಲ್ಲಿಯೂ ಕೂಡ ಆಧಿಕ್ಯವಿರುತ್ತದೆ ಎಂದು ಮಹಾವ್ಯಾಕರಣದ ಸೂತ್ರದಲ್ಲಿ ಹೇಳಿರುತ್ತಾರೆ. ಪ್ರಕೃತ ದೀರ್ಘವು ಅರ್ಥಾಧಿಕ್ಯವನ್ನು ಹೇಳುತ್ತಿದೆ ಎಂದರ್ಥ. ಆದ್ದರಿಂದ 'ಬ್ರಹ್ಮಣಃ' ಎಂದು ಹೇಳುವ ಬದಲು 'ಬ್ರಾಹ್ಮಣಃ' ಎಂದು ಮುಂದಿರುವ ದೀರ್ಘವನ್ನು ಲೋಪ ಮಾಡಿ, ಹಿಂದಿನ ಅಕ್ಷರದ ಮುಂದೆ ದೀರ್ಘಸ್ವರವನ್ನು ಪ್ರಯೋಗಿಸಿದ್ದು ತಪ್ಪಾಗುವುದಿಲ್ಲ ಎಂದರ್ಥ. ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ವೇದಪ್ರತಿಪಾದ್ಯತ್ವವು ಮುಖ್ಯವಾಗಿ ಮಹಾವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು ತಿಳಿಸಿದ್ದಾರೆ. ಆದ್ದರಿಂದ ಬ್ರಾಹ್ಮಣ ಶಬ್ದವು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತದೆ ಹೊರತು ಚತುರ್ಮುಖಾದಿಗಳನ್ನು ಪ್ರತಿಪಾದನೆ ಮಾಡುವುದಿಲ್ಲವೆಂದು ತಿಳಿಸಿದಂತಾಗುತ್ತದೆ. ಉಳಿದ ಟೀಕೆಯ ಕಠಿಣಪದಗಳ ಅರ್ಥವನ್ನು ಉಪನ್ಯಾಸಶೈಲಿಯಿಂದ ವ್ಯಾಖ್ಯಾನ ಮಾಡುವಾಗಲೇ ಹೇಳಿದ್ದಾರೆ. ಗ್ರಂಥದ ಕೊನೆಯಲ್ಲಿ ಇತಿಶಬ್ದವಿದೆ. ಮೂರನೆಯ ಪಾದದ ವ್ಯಾಖ್ಯಾನವು ಸಮಾಪ್ತವಾಯಿತು ಎಂದು ಇದರ ಅರ್ಥ.

ಇಲ್ಲಿಗೆ ಶ್ರೀಸುಧೀಂದ್ರತೀರ್ಥಗುರುಪಾದರ ಶಿಷ್ಯಂದಿರಾದ
ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ ಚಂದ್ರಿಕಾಪ್ರಕಾಶದಲ್ಲಿ
ಪ್ರಥಮಾಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – सर्वस्य वशी सर्वेशान इति सर्वाधिपतित्वादि विष्णुलिङ्गैर्ब्राह्मण

शब्दो ब्रह्मणा वेदेन गम्यत इति न्यायविवरणोक्तरीत्या यौगिक एवेत्यत्रोक्तं विष्ण्वभेदेनापि तल्लिङ्गोपपत्तेरित्यादिकं परिहर्तुं शङ्कते ।। **नचेति** ।। इतरत्स्पष्टम् ।। ब्राह्मणाधिकरणम् ।। १४ ।।

इति श्रीमद्विद्याधीशतीर्थपूज्यपादानां शिष्येण
केशवभट्टारकेण विरचितायां श्रीमत्तात्पर्यचन्द्रिकावाक्यार्थविवृतौ
भावदीपिकायां प्रथमाध्यायस्य तृतीयः पादः ।। १ ।। ३ ।।

* * * *




ರಾಮಾನುಜರು 'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' 'ಪತ್ಯಾದಿಶಬ್ದೇಭ್ಯಃ' ಎಂಬ ಮೂರು ಸೂತ್ರಗಳೂ ಸೇರಿ ಒಂದೇ ಅಧಿಕರಣವೆನ್ನುತ್ತಾರೆ. ಆಕಾಶಶಬ್ದದ ಸಮನ್ವಯವೇ ಮೂರೂ ಸೂತ್ರಗಳ ಉದ್ದೇಶ. ನಾವು ಯಾವ ಛಾಂದೋಗ್ಯದ ಮಂತ್ರವನ್ನು ವಿಷಯವಾಕ್ಯವೆನ್ನುತ್ತೇವೋ, ಅದನ್ನೇ ಅವರೂ ಕೂಡ ವಿಷಯವಾಕ್ಯವೆನ್ನುತ್ತಾರೆ. ಮುಕ್ತಜೀವನು ಪರಮಾತ್ಮನಿಗಿಂತ ಅಭಿನ್ನನಾದ್ದರಿಂದ ಆಕಾಶಶಬ್ದವಾಚ್ಯನೆಂದು ಪೂರ್ವಪಕ್ಷ. ನಾಮರೂಪವಿಲಕ್ಷಣವೆಂದು ಹೇಳಿರುವ ಕಾರಣ ಬ್ರಹ್ಮನೇ ಆಕಾಶಶಬ್ದ ಪ್ರತಿಪಾದ್ಯನಾಗುತ್ತಾನೆ ಹೊರತು, ಮುಕ್ತಜೀವನಲ್ಲವೆಂದು ಸಿದ್ಧಾಂತ. ಜೀವ ಹಾಗೂ ಬ್ರಹ್ಮರಿಗೆ ಭೇದವಿಲ್ಲದ ಕಾರಣ ನಾಮರೂಪನಿರ್ವಾಹಕನು ಮುಕ್ತಜೀವನೂ ಕೂಡ ಆಗಬಹುದಲ್ಲವೇ? ಎಂಬ ಆಶಂಕೆಗೆ ಉತ್ತರಿಸುವುದಕ್ಕಾಗಿ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಮತ್ತು 'ಪತ್ಯಾದಿಶಬ್ದೇಭ್ಯಃ' ಎಂಬೆರಡು ಸೂತ್ರಗಳು ಹೊರಟಿವೆ. ಇವೆರಡು ಸೂತ್ರಗಳಿಂದ ಜೀವ ಹಾಗೂ ಬ್ರಹ್ಮರಿಗೆ ಸುಷುಪ್ತಿ ಹಾಗೂ ಉತ್ಕ್ರಾಂತಿಗಳಿಂದ ಭೇದವು ಸಿದ್ಧವಾಗುತ್ತದೆ. ಅಧಿಪತಿತ್ವ ಹಾಗೂ ಧರ್ಮಗಳು ಮುಕ್ತಾವಸ್ಥೆಯಲ್ಲಿಯೂ ಕೂಡ ಜೀವನಿಗೆ ಬಾರದ ಕಾರಣ ಮುಕ್ತಜೀವರಿಗೂ ಪರಮಾತ್ಮನಿಗೂ ಭೇದವು ಸಿದ್ಧವಾಗುತ್ತದೆಂದು ವ್ಯಾಖ್ಯಾನ ಮಾಡುತ್ತಾರೆ.

ಇವರ ಈ ಸೂತ್ರವ್ಯಾಖ್ಯಾನವಾಗಲೀ, ಅಧಿಕರಣಶರೀರವಾಗಲೀ, ಅಯುಕ್ತವಾಗಿದೆ. ಏಕೆಂದರೆ ಮುಕ್ತಜೀವನು ಆಕಾಶಶಬ್ದದಿಂದ ವಾಚ್ಯನಾಗುತ್ತಾನೆ. ಬ್ರಹ್ಮನಲ್ಲವೆಂದು 'ಆಕಾಶೋಽರ್ಥಾಂತರತ್ವಾದಿ' ಎಂಬ ಸೂತ್ರದಿಂದ ಪೂರ್ವಪಕ್ಷ ಮಾಡಿ ಅದೇ ಸೂತ್ರದಿಂದಲೇ ಉತ್ತರಿಸಿದ್ದಾರೆ. ಅಂದರೆ ಪೂರ್ವಪಕ್ಷಿಯು ಜೀವಬ್ರಹ್ಮಭೇದವನ್ನು ಒಪ್ಪಿ ಪ್ರಶ್ನಿಸಿದ್ದಾನೆಂದು ಹೇಳಿದಂತಾಯಿತು. ಹೀಗೆ ಮೊದಲೇ ಒಪ್ಪಿರುವ ಭೇದಕ್ಕೆ ವಿರುದ್ಧವಾಗಿ ಪೂರ್ವಪಕ್ಷಿಯು ಅಭೇದವನ್ನು ಒಪ್ಪಿ, ಸುಷುಪ್ತಿಸೂತ್ರದಲ್ಲಿಯೂ ಆಕ್ಷೇಪ ಮಾಡುವುದು ಯುಕ್ತವಾಗುವುದಿಲ್ಲ. ಹಿಂದಿನ ಸೂತ್ರದಿಂದಲೇ ಭೇದವು ಸಿದ್ಧವಾದ ಮೇಲೆ ಪುನಃ ಪ್ರಶ್ನಿಸುವುದು ತಪ್ಪಾಗುತ್ತದೆ. ಮತ್ತು ಸುಷುಪ್ತ್ಯಾದಿ ಸೂತ್ರಗಳೆರಡೂ 'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' ಎಂಬಸೂತ್ರಕ್ಕೆ ಶೇಷವಾದಲ್ಲಿ 'ಚ' ಶಬ್ದದ ಪ್ರಯೋಗವಿರಬೇಕಿತ್ತೆಂಬ ದೋಷ ಇವರಿಗೂ ಕೂಡ ತಪ್ಪಿದ್ದಲ್ಲ. ಆದ್ದರಿಂದ ಅದ್ವೈತಿಗಳಂತೆ ರಾಮಾನುಜರೂ ಕೂಡ ಅಧಿಕರಣಶರೀರದ ರಚನೆಯಲ್ಲಿ ಎಡವಿದ್ದಾರೆ.

---

ಇಲ್ಲಿಗೆ ಪರಿಪೂರ್ಣಚಂದ್ರಿಕೆಯಲ್ಲಿ ೮ನೆಯ ಸಂಪುಟವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು.

# ಬ್ರಾಹ್ಮಣಾಧಿಕರಣ

(೧-೩-೧೪)

## ಭಾಗ -೩

### ಅಣುಭಾಷ್ಯ, ತತ್ವಮಂಜರೀ, ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ ಸರಳ ಕನ್ನಡ ಅನುವಾದ

* * *

### ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

श्री श्रीमदानन्दतीर्थभगवत्पादाचार्यविरचितम्

ब्रह्मसूत्राणुभाष्यम्

# अणुभाष्यम्

## ब्राह्मणाधिकरणम् (१।३।१४)

**पतित्वादिगुणैर्युक्तः**

ಅನುವಾದ – 'ಸರ್ವಾಧಿಪತಿತ್ವ' ಮೊದಲಾದ ಗುಣಗಳಿಂದ ಯುಕ್ತನಾದ ಮಹಾವಿಷ್ಣುವೇ ಬ್ರಾಹ್ಮಣ, ಅಜ, ಮಹತ್ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## ब्राह्मणाधिकरणम् (१।३।१४)

नन्वथापि सर्वकर्ता पूर्णानन्द इत्यादावन्यापेक्षसर्वकर्थृत्वादिगुणोकया यन्नित्यमहिमत्वं विष्णोरभिमतं तदयुक्तम् । तस्य काण्वश्रुतौ षष्ठे 'एष नित्यो महिमा ब्राह्मणस्य', 'स वा एष महानज आमा' इत्यजशब्दात् हिरण्यगर्भे रूढब्राह्मणपद-सहकृतात् चतुर्मुखस्य प्रतीतेः । नित्यमहिमत्वादिविष्णुलिङ्गस्य च तदभेदेन विरिञ्चेऽप्युपपत्तेरित्यतः प्राप्तं पत्यादिशब्देभ्य इति । तदर्थः - पतित्वादिगुणैर्युक्त इति।

'ಸರ್ವಕರ್ತಾ ಪೂರ್ಣಾನಂದಃ' ಇತ್ಯಾದಿ ಪದಗಳಿಂದ ಅನನ್ಯಾಪೇಕ್ಷಿತವಾದ ಸರ್ವಕರ್ತೃತ್ವಾದಿ ಗುಣಗಳನ್ನು ಹೇಳಿದ್ದರಿಂದ, ವಿಷ್ಣುವಿಗೆ ಹೇಳಲ್ಪಟ್ಟ ನಿತ್ಯಮಹಿಮತ್ವ ಗುಣವು ಅಯುಕ್ತವಾಯಿತು. ಏಕೆಂದರೆ, ಕಾಣ್ವಶ್ರುತಿಯ ಆರನೆಯ ಅಧ್ಯಾಯದಲ್ಲಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಇತ್ಯಾದಿಯಾಗಿ 'ಸ ವಾ ಏಷ ಮಹಾನಜಃ ಆತ್ಮಾ' ಇತ್ಯಾದಿಯಾಗಿ, ಬ್ರಾಹ್ಮಣಶಬ್ದ ಮತ್ತು ಅಜಶಬ್ದಗಳಿಂದ ಚತುರ್ಮುಖನ ನಿತ್ಯಮಹಿಮತ್ವವು ಪ್ರತಿಪಾದ್ಯವಾಗಿದೆ. ನಿತ್ಯಮಹಿಮತ್ವವು ವಿಷ್ಣುವಿನ ಧರ್ಮವಾಗಿದ್ದರೂ ವಿಷ್ಣುವಿನಿಂದ ಅಭಿನ್ನನಾದ ಚತುರ್ಮುಖನಲ್ಲಿಯೂ ಕೂಡ ಉಪಪನ್ನವಾಗುತ್ತದೆ. ಆದ್ದರಿಂದ, 'ನಿತ್ಯಮಹಿಮತ್ವ' ಎಂಬ ಲಿಂಗವು ವಿಷ್ಣುವಿನ ಅಸಾಧಾರಣ ಲಿಂಗವೆಂದು ಹೇಳಿದ್ದು ತಪ್ಪಾಗುತ್ತದಲ್ಲವೆ? ಎಂಬ ಆಶಂಕೆಗೆ 'ಪತ್ಯಾದಿಶಬ್ದೇಭ್ಯಃ' ಎಂದ ಸೂತ್ರದಿಂದ ಕೂಡಿದ ಬ್ರಾಹ್ಮಣಾಧಿಕರಣವು ಹೊರಟಿದೆ. ಇದರ ಅರ್ಥವನ್ನೇ ಅಣುಭಾಷ್ಯದಲ್ಲಿ 'ಪತಿತ್ವಾದಿಗುಣೈರ್ಯುಕ್ತಃ' ಎಂಬ ಪದದಿಂದ ಸಂಗ್ರಹಿಸಿದ್ದಾರೆ.

**पूर्ववदनुषङ्गः । 'सर्वस्य वशी सर्वस्येशानः सर्वस्याधिपतिरेष सर्वेश्वरः' इत्यादिनोक्तसर्वाधिपतित्वादिगुणैः युक्त एको जनार्दनः । तत्तस्मात् प्रसिद्ध्या नित्यमहिमत्वविष्णुलिङ्गेन चोभयवाचकत्वेन प्रतीतैः ब्रह्मणाजमहदात्मादिसर्वशब्दैरेको जनार्दन एव मुख्यतो ब्रह्मणा वेदेनाण्यते ज्ञायत इत्यादियोगवृत्त्या वाच्यो न विरिञ्चः। कुतः । पतित्वादिगुणयुक्तो विष्णुः सर्वैलिङ्गैर्युतो हि । सर्ववशित्वसर्वेशानत्वादिलिङ्गयुतत्वस्य 'ईशानः' इत्यादिभाष्योक्तश्रुतिभिः विष्णौ प्रसिद्धेरित्यर्थः ।**

ಇಲ್ಲಿಯೂ ಕೂಡ 'ಏಕೋ ಜನಾರ್ದನಃ' ಇತ್ಯಾದಿ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಏಷ ಸರ್ವೇಶ್ವರಃ' ಇತ್ಯಾದಿಯಾಗಿ ಶ್ರುತಿಯಲ್ಲಿ ಸರ್ವಾಧಿಪತಿತ್ವ ಮೊದಲಾದ ಗುಣಗಳನ್ನು ಹೇಳಲಾಗಿದೆ. ಈ ಎಲ್ಲ ಗುಣಗಳು ಜನಾರ್ದನನ ಅಸಾಧಾರಣ ಗುಣಗಳಾಗಿವೆ.

ಆದ್ದರಿಂದ, ನಿತ್ಯಮಹಿಮತ್ವ ಮೊದಲಾದ ಗುಣಗಳು ವಿಷ್ಣುವಿನ ಲಿಂಗದಿಂದ ಪ್ರಸಿದ್ಧವಾದ್ದರಿಂದ ಉಭಯತ್ರ ಪ್ರಸಿದ್ಧವೆಂದು ಆಪಾತತಃ ತೋರುವ ಬ್ರಾಹ್ಮಣ, ಅಜ, ಮಹತ್, ಆತ್ಮಾ ಮೊದಲಾದ ಶಬ್ದಗಳಿಂದೆಲ್ಲ ಮುಖ್ಯವಾಗಿ ಪ್ರತಿಪಾದ್ಯನಾದವನು ಜನಾರ್ದನನೇ ಆಗಿರುತ್ತಾನೆ. ಹೊರತು, ಚತುರ್ಮುಖ ಬ್ರಹ್ಮನಲ್ಲ. ಏಕೆಂದರೆ, ಬ್ರಾಹ್ಮಣ ಶಬ್ದಕ್ಕೆ ಬ್ರಹ್ಮಣಾ = ವೇದದಿಂದ, ಅಣ್ಯತೇ = ತಿಳಿಯಲ್ಪಡುತ್ತಾನೆ ಎಂಬ ಯೋಗವೃತ್ತಿಯನ್ನು ಆಶ್ರಯಿಸಿ ಪರಮಾತ್ಮನೊಬ್ಬನೇ ಸಕಲವೇದಪ್ರತಿಪಾದ್ಯನು ಎಂಬರ್ಥವು ತಿಳಿಯುತ್ತದೆ. ಹೊರತು, ಚತುರ್ಮುಖ ಬ್ರಹ್ಮನಲ್ಲ. ಏಕೆಂದರೆ, ಸರ್ವವಶಿತ್ವ, ಸರ್ವೇಶಾನತ್ವ ಮೊದಲಾದ ಧರ್ಮಗಳು ವಿಷ್ಣುವಿನ ಅಸಾಧಾರಣ ಲಿಂಗಗಳೆಂದು 'ಈಶಾನಃ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳಿಂದ ಸ್ಪಷ್ಟವಾಗುತ್ತದೆ.

अत्र जनेत्यजत्वोक्त्या अजशब्दस्य हरौ यौगिकत्वं, अर्दनेति संसारमोचकत्वोक्त्या ब्राह्मणपदस्य वेदगम्यत्वरूपयौगिकत्वं च सूचितम् । मोचकस्यैव वेदगम्यत्वात् 'तमेवं विद्वान्' इत्यादेः ।

ब्रह्माण इति दीर्घव्यत्ययस्याधिक्यार्थत्वात् । ब्राह्मणाजश्रुत्योः सावकाशत्वात् निर्बीजोऽभेदो नाशङ्क्य इति भावः । वशित्वादिगुणैर्युक्त इति वाच्ये पतित्वादीत्युक्तिः सूत्रानुसारात् । सूत्रञ्च भाष्योक्तश्रुत्यनुसारि ।

ಜನಾರ್ದನ ಶಬ್ದದಲ್ಲಿ 'ಜನ' ಎಂಬ ಪೂರ್ವಾರ್ಧದಿಂದ ಅಜತ್ವವು ಸೂಚಿತವಾಗಿದೆ. 'ಅಜ' ಶಬ್ದವು ಶ್ರೀಹರಿಯಲ್ಲಿ ಯೌಗಿಕವಾಗಿ ಯುಕ್ತವಾಗುತ್ತದೆಂಬುದು ಸಿದ್ಧವಾದ ವಿಚಾರ. ಇನ್ನು ಉತ್ತರಾರ್ಧದಲ್ಲಿರುವ 'ಅರ್ದನ' ಎಂಬುದರಿಂದ ಸಂಸಾರಮೋಚಕತ್ವವು ಸೂಚಿತವಾಗಿದೆ. ಮತ್ತು 'ಬ್ರಾಹ್ಮಣ' ಪದದ ಅರ್ಥವೆನಿಸಿದ ವೇದಗಮ್ಯತ್ವವೆಂಬ ಧರ್ಮವೂ ಕೂಡ ಸೂಚಿತವಾಗಿದೆ. ಏಕೆಂದರೆ ಯಾವ ವ್ಯಕ್ತಿಯು ಸಂಸಾರಮೋಚಕನಾಗಿದ್ದಾನೋ, ಅವನೇ ವೇದಪ್ರತಿಪಾದ್ಯನಾಗಿರುತ್ತಾನೆಂದು 'ತಮೇವಂ ವಿದ್ವಾನ್' ಎಂಬ ಶ್ರುತಿಯು ಸಾರುತ್ತಿದೆ.

'ಬ್ರಹ್ಮಣಾ ಅಣ್ಯತೇ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ 'ಬ್ರಹ್ಮಾಣಃ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಆದರೆ ಶ್ರುತಿಯಲ್ಲಿ ದೀರ್ಘಸ್ವರವನ್ನು ವ್ಯತ್ಯಾಸ ಮಾಡಿ, 'ಬ್ರಾಹ್ಮಣ' ಎನ್ನಲಾಗಿದೆ. ಈ ಸ್ವರವ್ಯತ್ಯಾಸದಲ್ಲಿಯೂ ಸ್ವಾರಸ್ಯವಿದೆ - ವೇದಗಳಿಂದ ಅಧಿಕವಾಗಿ ಪ್ರತಿಪಾದ್ಯನಾದವನು ಶ್ರೀಹರಿ ಮಾತ್ರ ಎಂಬುದು ದೀರ್ಘಸ್ವರದಲ್ಲಿ ಅಡಗಿರುವ ಸ್ವಾರಸ್ಯ. ಬ್ರಾಹ್ಮಣ ಹಾಗೂ ಅಜಶಬ್ದಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಆದ್ದರಿಂದ ಚತುರ್ಮುಖನೇ ಪ್ರತಿಪಾದ್ಯನೆಂಬ ಪೂರ್ವಪಕ್ಷವು ನಿರಾಕೃತವಾಗುತ್ತದೆ. ಇನ್ನು ಚತುರ್ಮುಖನಿಗೆ ವಿಷ್ಣುವಿಗೆ ಅಭೇದವನ್ನು ಒಪ್ಪಿ, ವಿಷ್ಣುವಿನ ಧರ್ಮವನ್ನು ಚತುರ್ಮುಖನಲ್ಲಿ ಉಪಪಾದನೆ ಮಾಡಬೇಕೆಂಬ ಆಕ್ಷೇಪವು ಹುರುಳಿಲ್ಲದ್ದು. ಶ್ರುತಿಯಲ್ಲಿ ವಶಿತ್ವ ಮೊದಲಾದ ಗುಣಗಳ ಉಲ್ಲೇಖವಿರುವುದರಿಂದ ಅದಕ್ಕನುಗುಣವಾಗಿ ಅಣುಭಾಷ್ಯದಲ್ಲಿಯೂ 'ವಶಿತ್ವಾದಿಗುಣೈರ್ಯುಕ್ತಃ' ಎಂದೇ ಹೇಳಬೇಕಿತ್ತು. ಆದರೆ ಸೂತ್ರಕ್ಕೆ ಅನುಸಾರಿಯಾಗಿ 'ಪತಿತ್ವಾದಿಗುಣೈರ್ಯುಕ್ತಃ' ಎಂದು ಹೇಳಿದ್ದಾರೆ. ಸೂತ್ರವಾದರೂ ಸಹ ಭಾಷ್ಯದಲ್ಲಿ ಉದಾಹರಿಸಿದ ಶ್ರುತ್ಯನುಸಾರಿಯಾಗಿರುತ್ತದೆ.

पादार्थमुपसंहरति । 'तदन्यत्र च वाचकैः । मुख्यतः सर्वशब्दैश्च वाच्य एको जनार्दनः' इति । तदिदं तन्त्रं आवृत्तिर्वा । पतित्वादिगुणैर्युक्त इत्यस्ति । अत्रादिपदेन प्रागुक्तसर्वाश्रयत्वपूर्णगुणत्वादयो जीवान्यत्वान्ताश्च गुणा गृह्यन्ते । यतः पतित्वादिगुणैर्युक्तः तत्तस्मात् तत्र तदन्यत्र च वाचकैः सर्वशब्दैश्च

नामलिङ्गोभयात्मकैः केवलमन्यत्रप्रसिद्धैरिति चार्थः । मुख्यतो मुख्यया वृत्या एको जनार्दनो वाच्यो नतु विष्णुरन्यश्चेत्यनेके इत्यर्थः ।। १४ ।।

इति श्रीमदानन्दतीर्थभगवत्पादाचार्यविरचितस्य ब्रह्मसूत्राणुभाष्य
टीकायां राघवेन्द्रयतिकृतायां तत्वमञ्जर्याख्यायां
प्रथमाध्यायस्य तृतीय पादः ।। ३ ।।

ಮೂರನೆಯ ಪಾದದ ಅರ್ಥವನ್ನು ಉಪಸಂಹಾರ ಮಾಡುತ್ತಿದ್ದಾರೆ -

... ತದನ್ಯತ್ರ ಚ ವಾಚಕ್ಯೈಃ।
ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ॥

'ಪತಿತ್ವಾದಿಗುಣ್ಯೈಃ' ಎಂಬುದನ್ನು ಇಲ್ಲಿಯೂ ಕೂಡ ಅನ್ವಯಿಸಿಕೊಳ್ಳಬೇಕು. ಆದಿಪದದಿಂದ ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ನಿರೂಪಿತವಾದ ಸರ್ವಾಶ್ರಯತ್ವ, ಪೂರ್ಣಗುಣತ್ವ, ಜೀವಾನ್ಯತ್ವ ಮೊದಲಾದ ಗುಣಗಳನ್ನು ಸಂಗ್ರಹಿಸಬೇಕು. ಯಾವಕಾರಣದಿಂದ ಸರ್ವಾಧಿಪತಿತ್ವವೇ ಮೊದಲಾದ ಗುಣಗಳಿಂದ ಯುಕ್ತನಾಗಿದ್ದಾನೋ, ಅದೇ ಕಾರಣದಿಂದ ವಿಷ್ಣುವಿನಲ್ಲಿ ಹಾಗೂ ಬೇರೆಯವರಲ್ಲಿ ಪ್ರಸಿದ್ಧವಾದ ಸಕಲಶಬ್ದಗಳಿಂದ ನಾಮಾತ್ಮಕ ಹಾಗೂ ಲಿಂಗಾತ್ಮಕವೆಂಬ ಉಭಯವಿಧಶಬ್ದಗಳಿಂದ ಮತ್ತು ಕೇವಲ ಅನ್ಯತ್ರಪ್ರಸಿದ್ಧವಾದ ಶಬ್ದಗಳಿಂದಲೂ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. 'ಚ' ಶಬ್ದದಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಸಂಗ್ರಹಿಸಬೇಕು. ಪರಮಮುಖ್ಯವೃತ್ತಿಯಿಂದ ಜನಾರ್ದನನೊಬ್ಬನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಬೇರೆಯವರಲ್ಲ. ಶ್ರೀಮದಾಚಾರ್ಯರ ಮಾತಿಗೆ ಇನ್ನೂ ಹಲವು ಬಗೆಯ ಅರ್ಥಗಳನ್ನು ಸ್ವತಃ ತಿಳಿದುಕೊಳ್ಳಬೇಕು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದಲ್ಲಿ
ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಪ್ರಥಮಾಧ್ಯಾಯದ ತೃತೀಯ ಪಾದವು ಸಮಾಪ್ತವಾಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## ब्राह्मणाधिकरणम् (१।३।१४)

।। ॐ पत्यादिशब्देभ्यः ॐ ।। १-३-४३ ।।

अत्र ब्राह्मणनाम समन्वीयते । ब्राह्मण इति योग्यतयाऽन्वेति । ''एष नित्यो महिमा ब्राह्मणस्य ''इत्युक्तो ब्राह्मणस्तत्तु ब्रह्मैव । न विरिश्चः । कुतः ? ''सर्वस्य वशी सर्वस्येशानः । सर्वाधिपतिः'' इत्यादिसर्वाधिपत्यादिवाचिशब्देभ्य इत्यर्थः । अत्र श्रुतौ वशित्वस्यादित्वेऽपि भाष्योक्तश्रुत्यन्तरानुरोधात् पत्यादीत्युक्तम् । प्रत्येकं हेतुत्वज्ञापनाय बहुवचनमित्याहुः ।। १४ ।।

ಈ ಅಧಿಕರಣದಲ್ಲಿ 'ಬ್ರಾಹ್ಮಣ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡುತ್ತಿದ್ದಾರೆ. 'ಬ್ರಾಹ್ಮಣ' ಎಂಬ ಪದವು ಯೋಗ್ಯವಾದ್ದರಿಂದ ಅನ್ವಯವನ್ನು ಪಡೆಯುತ್ತದೆ. 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬಲ್ಲಿ ಪ್ರತಿಪಾದ್ಯನಾದ ಬ್ರಾಹ್ಮಣನು ಬ್ರಹ್ಮನೇ ಆಗಿದ್ದಾನೆ, ಹೊರತು ಚತುರ್ಮುಖನಲ್ಲ. ಏಕೆಂದರೆ, 'ಸರ್ವಸ್ಯ ವಶೀ ಸರ್ವಸ್ಯೇಶಾನಃ, ಸರ್ವಾಧಿಪತಿಃ' ಇತ್ಯಾದಿಯಾಗಿ ಸರ್ವಾಧಿಪತ್ಯ ಮೊದಲಾದ ಧರ್ಮಗಳನ್ನು ಹೇಳುವಂತಹ ಶಬ್ದಗಳಿಂದ ಎಂದು ಸೂತ್ರಾರ್ಥ.

'ವಶಿತ್ವಾದಿಶಬ್ದೇಭ್ಯಃ' ಎಂದು ಸೂತ್ರವನ್ನು ಹೇಳಬೇಕಿತ್ತು. ಶ್ರುತಿಯಲ್ಲಿ ವಶಿತ್ವವನ್ನು ಮೊದಲು ಹೇಳಿದ್ದರೂ ಭಾಷ್ಯದಲ್ಲಿ ಉದಾಹರಿಸಿದ 'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ' ಎಂಬ ಮತ್ತೊಂದು

ಶ್ರುತಿಯನ್ನು ಉದಾಹರಿಸಿ 'ಪತ್ಯಾದಿ' ಎಂದು ಹೇಳಿದ್ದಾರೆ. ವಶಿತ್ವ ಮೊದಲಾದವುಗಳು ಪ್ರತ್ಯೇಕವಾದ ಹೇತುಗಳಾಗಿವೆ ಎಂದು ತಿಳಿಸುವುದಕ್ಕಾಗಿ 'ಶಬ್ದೇಭ್ಯಃ' ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ, ಎಂದು ಹೇಳುತ್ತಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಬ್ರಾಹ್ಮಣಾಧಿಕರಣವು ಸಮಾಪ್ತವಾಯಿತು.

## तृतीयपादसारसङ्ग्रह :

अत्राद्यनये अजस्याविर्भावाख्यजनिः, भूमनये सर्वगतस्यापि परिस्पन्दक्रिया, अक्षरनये महतोऽप्यणुत्वम्, ईक्षतिनये स्वरूपैरेव बहुभवनम्, दहरनये ईशांशस्यापि व्याप्तता, अनुकृतिनये सूर्यादिकृतेरीशायत्तत्वम्, शब्दादिति नये प्राणप्रेरकत्वं श्रुत्यादेः पूर्वपूर्वप्राबल्यं च, देवतानये देवर्ष्यादीनां कर्मब्रह्मविद्ययोरधिकारः, शुगिति नये वेदविद्यायामेव शूद्रस्यानधिकारः, कम्पनादिति नये रूढितः स्मार्तयोगस्य प्राबल्यम्, ज्योतिर्नये जीवेन सहेशस्य लोकान्तरसञ्चारस्य कर्मानधीनत्वम्, सुषुप्तिनये निर्लेपत्वम्, अन्त्यनये विरिञ्चैक्यनिरास इत्यादि सिद्धमिति विवेक्तव्यम् ।

इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य तृतीयः पादः

।। श्रीकृष्णार्पणमस्तु ।।

ಈ ಮೂರನೆಯ ಪಾದದ ಪ್ರಥಮಾಧಿಕರಣದಲ್ಲಿ ಜನನವಿಲ್ಲದ ಬ್ರಹ್ಮನಿಗೆ ಆವಿರ್ಭಾವರೂಪವಾದ ಜನನವನ್ನು ಹೇಳಿದ್ದಾರೆ.

೧. ಭೂಮಾಧಿಕರಣದಲ್ಲಿ ಸರ್ವಗತನಿಗೂ ಕೂಡ ಚಲನಕ್ರಿಯೆಯನ್ನು ಹೇಳಿರುತ್ತಾರೆ.

೨. ಅಕ್ಷರಾಧಿಕರಣದಲ್ಲಿ ವ್ಯಾಪ್ತನಾದ ಬ್ರಹ್ಮನಿಗೆ ಅಣುರೂಪವನ್ನು ಹೇಳಿದ್ದಾರೆ.

೩. ಈಕ್ಷತ್ಯಧಿಕರಣದಲ್ಲಿ ಬ್ರಹ್ಮನು ತನ್ನ ಸ್ವರೂಪದಿಂದಲೇ ಬಹುಭವನವನ್ನು ಪಡೆಯುತ್ತಾನೆಂದು ಹೇಳಿದ್ದಾರೆ.

೪. ದಹರಾಧಿಕರಣದಲ್ಲಿ ಈಶ್ವರನ ಅಂಶಗಳಿಗೂ ವ್ಯಾಪ್ತತ್ವವಿದೆ ಎಂದು ಸಮರ್ಥಿಸಿದ್ದಾರೆ.

೫. ಅನುಕೃತ್ಯಧಿಕರಣದಲ್ಲಿ ಸೂರ್ಯ ಮೊದಲಾದವರ ಚಲನ-ವಲನಗಳೆಲ್ಲವೂ ಪರಮಾತ್ಮನ ಅಧೀನವೆಂದು ಸಮರ್ಥಿಸಿದ್ದಾರೆ.

೬. 'ಶಬ್ದಾತ್' ಎಂಬ ಅಧಿಕರಣದಲ್ಲಿ ಪ್ರಾಣಪ್ರೇರಕತ್ವವು ಭಗವಂತನಲ್ಲಿ ಸಮರ್ಥಿಸಿದ್ದಾರೆ. ಮತ್ತು, ಶ್ರುತಿ-ಲಿಂಗ-ವಾಕ್ಯ-ಪ್ರಕರಣ-ಸ್ಥಾನ-ಸಮಾಖ್ಯಾ ಎಂಬ ಪ್ರಮಾಣಗಳಲ್ಲಿ ಮುಂದಿನ ಪ್ರಮಾಣಗಳಿಗಿಂತ ಹಿಂದಿನ ಪ್ರಮಾಣಗಳಿಗೆ ಪ್ರಾಬಲ್ಯವನ್ನು ನಿರೂಪಿಸಿದ್ದಾರೆ.

೭. ದೇವತಾಧಿಕರಣದಲ್ಲಿ ದೇವತೆಗಳು, ಋಷಿಗಳು ಮೊದಲಾದವರಿಗೆ ಕರ್ಮಾಧಿಕಾರವನ್ನು ಬ್ರಹ್ಮವಿದ್ಯಾಧಿಕಾರವನ್ನು ಸಮರ್ಥಿಸಿದ್ದಾರೆ.

೮. ಅಪಶೂದ್ರಾಧಿಕರಣದಲ್ಲಿ ಶೂದ್ರ-ಬ್ರಹ್ಮಬಂಧು-ಅವೈಷ್ಣವರಿಗೆ ಮತ್ತು ಸ್ತ್ರೀಯರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸಿದ್ದಾರೆ.

೯. ಕಂಪನಾಧಿಕರಣದಲ್ಲಿ ರೂಢಿಗಿಂತಲೂ ಸ್ಮೃತಿಯಲ್ಲಿ ಹೇಳಲ್ಪಟ್ಟ ಯೋಗಕ್ಕೆ ಪ್ರಾಬಲ್ಯವನ್ನು ಸಮರ್ಥಿಸಿದ್ದಾರೆ.

೧೦. ಜ್ಯೋತಿರಧಿಕರಣದಲ್ಲಿ ಜೀವನ ಜೊತೆಗೆ ಈಶ್ವರನು ಮತ್ತೊಂದು ಲೋಕದ ಸಂಚಾರವನ್ನು ಮಾಡುತ್ತಾನೆ. ಇದು ಕರ್ಮಾಧೀನವಾದದ್ದಲ್ಲವೆಂದು ಸಮರ್ಥಿಸಿದ್ದಾರೆ.

೧೧. ಸುಷುಪ್ತ್ಯಧಿಕರಣದಲ್ಲಿ ಭಗವಂತನಿಗೆ ನಿರ್ಲೇಪತ್ವವನ್ನು ನಿರೂಪಿಸಲಾಗಿದೆ.

೧೨. ಕೊನೆಯ ಬ್ರಾಹ್ಮಣಾಧಿಕರಣದಲ್ಲಿ ಭಗವಂತನಿಗೆ ಚತುರ್ಮುಖ ಬ್ರಹ್ಮನಿಂದ ಅಭೇದವನ್ನು ನಿರಾಕರಿಸಿ, ಭೇದವನ್ನು ಸಮರ್ಥನೆ ಮಾಡಿದ್ದಾರೆ.

ಹೀಗೆ ತೃತೀಯಪಾದದಲ್ಲಿರುವ ಎಲ್ಲ ಅಧಿಕರಣಗಳ ಸಾರಸಂಗ್ರಹವನ್ನು ತಿಳಿದುಕೊಳ್ಳಬೇಕು.

ರಾಘವೇಂದ್ರತೀರ್ಥಯತಿಗಳಿಂದ ರಚಿತವಾದ ತಂತ್ರದೀಪಿಕೆಯಲ್ಲಿ ಪ್ರಥಮಾಧ್ಯಾಯದ ತೃತೀಯಪಾದವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावलिः

## ब्राह्मणाधिकरणम् (१।३।१४)

।। ॐ पत्यादिशब्देभ्यः ॐ ।। १४ ।।

अत्र ''असङ्गो नहि सज्जते'' (बृ.६-४-२२) इत्युक्तस्यासङ्गस्य ईशान्यत्वे प्राक्तनोऽपि स एवेति शङ्कनात् आक्षेपिकी सङ्गतिः ।

'ಅಸಂಗೋ ನಹಿ ಸಜ್ಜತೇ' ಎಂಬ ಬೃಹದಾರಣ್ಯಕದ ವಾಕ್ಯವು ಅಸಂಗತ್ವಧರ್ಮವನ್ನು ಹೇಳುತ್ತಿದೆ. ಈ ಧರ್ಮವು ಒಂದುವೇಳೆ ಬೇರೆಯವರಲ್ಲಿ ಬರುವುದಾದರೆ, ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟ್ರುವೂ ಕೂಡ ಬೇರೆಯವನೇ ಆಗುತ್ತಾನೆ. ಹೀಗೆ ಆಕ್ಷೇಪ ಮಾಡುತ್ತಿರುವುದರಿಂದ, ಆಕ್ಷೇಪಿಕೀ ಸಂಗತಿಯಿರುತ್ತದೆಂದು ತಿಳಿಯಬೇಕು.

काण्वश्रुतौ षष्ठेऽध्याये ''एष नित्यो महिमा ब्राह्मणस्य'' इति (बृ.६-४-२२) श्रुतः ब्राह्मणः किं विरिञ्चः विं. वा ईश इति सन्देहः ।

ಕಾಣ್ವಶ್ರುತಿಯ ಆರನೆಯ ಅಧ್ಯಾಯದಲ್ಲಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ವಾಕ್ಯವು ಶ್ರುತವಾಗಿದೆ. ಇದು ಈ ಅಧಿಕರಣದ ವಿಷಯ. ಇಲ್ಲಿರುವ ಬ್ರಾಹ್ಮಣಶಬ್ದವು ಚತುರ್ಮುಖನನ್ನು ಪ್ರತಿಪಾದನೆ ಮಾಡುತ್ತದೋ? ಅಥವಾ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತದೋ? ಎಂಬುದೇ ಸಂದೇಹ.

विरिञ्च एवायं ब्राह्मणः इति पूर्वः पक्षः ।। ''स वा एष महानज आत्मा'' (बृ.६-४-२२) इत्यजशब्दात् तस्य च अकारवाच्येशजातत्वेन योगेन रूढ्या च विरिञ्चे सम्भवात् ईशो न जायत इति योगेन ''तस्मादहमजः स्मृत'' इति भारतोक्त्या रूढ्या च सम्भवेऽपि वर्णहीने विष्णावनवकाशेन विप्रत्वजातौ निरूढब्राह्मण-शब्दसाहित्येन अस्य विरिञ्चैकप्रापकत्वात् महच्छब्दस्यापि अभिमानिनयन्यायेन महत्तत्वाभिमानिनि विरिञ्च एव युक्तत्वात् आत्मश्रुतेरपि ''आत्मा विरिञ्चः सुमना''

इत्युक्तेः "बुद्धेरात्मा महान् परः" इति प्रयोगात् विरिञ्चे रूढत्वात् । सर्वस्य वशीत्यादिनोक्तब्रह्मलिङ्गानां तु उभयबाधेन विरिञ्चेशाभेदेन पूर्वपूर्वपक्षवदुपपत्तेः । "स्थित्यादये हरिविरिञ्चहरेति संज्ञाः" (भाग.१-२-२३) इत्यादेः अभेदेनैकवाक्यत्वोपपत्तौ वाक्यभेदेनोभयपरत्वकल्पनायोगाच्चेति ।।

ಚತುರ್ಮುಖನೇ ಬ್ರಾಹ್ಮಣಶಬ್ದ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ 'ಸ ವಾ ಏಷ ಮಹಾನಜ ಆತ್ಮಾ' ಎಂಬಲ್ಲಿ ಚತುರ್ಮುಖನಲ್ಲಿ ಪ್ರಸಿದ್ಧವಾದ ಅಜಶಬ್ದವು ಶ್ರುತವಾಗಿದೆ. ಈ ಅಜಶಬ್ದವು ಯೌಗಿಕವಾಗಿ ಮತ್ತು ರೂಢವಾಗಿ ವಿರಿಂಚನಲ್ಲೇ ಬರುತ್ತದೆ. ಅಕಾರಶಬ್ದದಿಂದ ಈಶ್ವರನು ವಾಚ್ಯನಾದ್ದರಿಂದ ಅವನಿಂದ ಹುಟ್ಟಿರುವ ಕಾರಣ, ಚತುರ್ಮುಖನು ಅಜನೆನಿಸುತ್ತಾನೆಂದು ಯೌಗಿಕವಾಗಿ ಅಜಶಬ್ದವು ಚತುರ್ಮುಖನನ್ನು ಪ್ರತಿಪಾದನೆ ಮಾಡುತ್ತದೆ. ರೂಢಿಯೂ ಸಹ ಅವನಲ್ಲೇ ಇರುತ್ತದೆ. ಹೀಗೆ 'ಈಶೇನ ಜಾಯತೇ' ಎಂಬ ಯೋಗವೃತ್ತಿಯಿಂದ 'ತಸ್ಮಾದಹಮಜಃ ಸ್ಮೃತಃ' ಎಂಬ ಮಹಾಭಾರತದ ರೂಢಪ್ರಯೋಗದಿಂದ ಚತುರ್ಮುಖನಲ್ಲೇ ಅಜಶಬ್ದವು ಯುಕ್ತವಾಗುತ್ತದೆ. ಆದರೆ ಬ್ರಾಹ್ಮಣಾದಿ ವರ್ಣದಿಂದ ಹೀನನಾದ ವಿಷ್ಣುವಿನಲ್ಲಿ ಇಂತಹ ಬ್ರಾಹ್ಮಣಶಬ್ದ ಪ್ರತಿಪಾದ್ಯತ್ವವನ್ನು ಹೇಳಲು ಸಾಧ್ಯವಿಲ್ಲ. ಬ್ರಾಹ್ಮಣಶಬ್ದವಾದರೂ ವಿಪ್ರತ್ವಜಾತಿಯುಳ್ಳವರಲ್ಲಿ ರೂಢವಾಗಿದೆ. ವಿರಿಂಚನು ಬ್ರಾಹ್ಮಣಜಾತಿಯವನಾದ್ದರಿಂದ ಅವನನ್ನೇ ಬ್ರಾಹ್ಮಣಶಬ್ದವು ಪ್ರತಿಪಾದನೆ ಮಾಡಬೇಕು. ಶ್ರುತಿಯಲ್ಲಿ 'ಮಹತ್' ಶಬ್ದವೂ ಕೂಡ ಅಭಿಮಾನ್ಯಧಿಕರಣದ ನ್ಯಾಯದಂತೆ ಮಹತ್ತತ್ತ್ವಾಭಿಮಾನಿಯಾದ ವಿರಿಂಚನಲ್ಲೇ ಯುಕ್ತವಾಗುತ್ತದೆ. ಆತ್ಮಶ್ರುತಿಯೂ ಸಹ 'ಆತ್ಮಾ ವಿರಿಂಚಃ ಸುಮನಾಃ' ಎಂಬಂತೆ 'ಬುದ್ಧೇರಾತ್ಮಾ ಮಹಾನ್ ಪರಃ' ಎಂಬ ಪ್ರಯೋಗದಂತೆಯೂ ವಿರಿಂಚನಲ್ಲೇ ರೂಢವಾಗಿದೆ. ಮತ್ತು 'ಸರ್ವಸ್ಯ ವಶೀ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಬ್ರಹ್ಮಲಿಂಗಗಳಾದರೂ ವಿರಿಂಚನಲ್ಲಿಯೂ ಕೂಡಿಸಬಹುದು. ಏಕೆಂದರೆ ವಿರಿಂಚನಿಗೂ, ಈಶ್ವರನಿಗೂ ಅಭೇದವಿರುವ ಪ್ರಯುಕ್ತ, ಹಿಂದಿನ ಅಧಿಕರಣದ ಪೂರ್ವಪಕ್ಷದಂತೆ ಬ್ರಹ್ಮಲಿಂಗಗಳು ವಿರಿಂಚನಲ್ಲೇ ಬರುತ್ತವೆ. 'ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾಃ' ಇತ್ಯಾದಿ ವಾಕ್ಯಗಳು ಸ್ಪಷ್ಟವಾಗಿ ಈಶ್ವರನಿಗೂ ವಿರಿಂಚನಿಗೂ ಅಭೇದವನ್ನು ಹೇಳುತ್ತಿವೆ, ಅಭೇದವನ್ನು ಒಪ್ಪುವುದರಿಂದ ಏಕವಾಕ್ಯತ್ವವನ್ನು ಕೂಡಿಸಿದಂತಾಗುತ್ತದೆ. ಹೀಗಿರುವಾಗ ವಾಕ್ಯಭೇದವನ್ನು ಒಪ್ಪಿ, ಭೇದವನ್ನು ಒಪ್ಪುವ ಮೂಲಕ, ಉಭಯಪರತ್ವವನ್ನು ಕಲ್ಪನೆ ಮಾಡುವುದು ಅಯುಕ್ತವಾಗುತ್ತದೆ.

सिद्धान्तस्तु ।। "सर्वस्य वशी सर्वस्येशानः सर्वस्याधिपतिः इत्यादिनोक्तसर्ववशित्वादिलिङ्गानां "उतामृतत्वस्येशानः" (पुरुष सू) "सप्तार्धगर्भा" इत्यादिश्रुतिभ्यो वैष्णवत्वात् । ब्राह्मणवत्वात् । ब्राह्मणशब्दस्य ब्रह्मणा वेदेन अण्यते गम्यते इति योगेन सावकाशत्वात् अजश्रुतेः तथैव सावकाशत्वात् उभयबाधेन

अभेदाङ्गीकारस्य अतिप्रसञ्जकतया ''तत एते व्यजायन्त विश्वो हिरण्यगर्भः'' इत्यदिवचनबाधिततया च अयोगात् । स्मृतेश्च तत्तदन्तर्गतेश्वररूपापेक्षया उपपत्तेः अयं ब्राह्मणो विष्णुरेवेति ।।

ಸಿದ್ಧಾಂತ ಹೀಗಿದೆ - 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಸರ್ವವಶಿತ್ವ ಮೊದಲಾದ ಲಿಂಗಗಳು ಮತ್ತು 'ಉತಾಮೃತತ್ವಸ್ಯೇಶಾನಃ' ಎಂಬ ಪುರುಷಸೂಕ್ತದಂತೆ 'ಸಪ್ತಾರ್ಧಗರ್ಭಾ' ಎಂಬ ಋಗ್ವೇದದಂತೆ ವಿಷ್ಣುವಿನ ಅಸಾಧಾರಣಧರ್ಮವೆಂದು ಪ್ರಸಿದ್ಧವಾಗಿವೆ. ಬ್ರಾಹ್ಮಣ ಶಬ್ದವೂ ಸಹ 'ಬ್ರಹ್ಮಣಾಗಮ್ಯತೇ' ವೇದದಿಂದ ಪ್ರತಿಪಾದ್ಯನಾಗಿದ್ದಾನೆ ಎಂಬ ಯೌಗಿಕಾರ್ಥವನ್ನು ಸ್ವೀಕರಿಸಿದಾಗ, ವಿಷ್ಣುವಿನಲ್ಲೇ ಸಾವಕಾಶವಾಗುತ್ತದೆ. ಅಜಶ್ರುತಿಯೂ ಕೂಡ ಹುಟ್ಟು ಮೊದಲಾದವುಗಳಿಲ್ಲದ ಕಾರಣ, ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆ. ಹೀಗಿರುವಾಗ ಎರಡನ್ನು ಬಾಧಿಸಿ, ಅಭೇದವನ್ನು ಅಂಗೀಕರಿಸುವುದು ಸರಿಯಲ್ಲ. 'ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭಃ' ಇತ್ಯಾದಿ ವಚನಗಳಿಂದ ಬಾಧಿತವಾದ್ದರಿಂದ, ಹಿರಣ್ಯಗರ್ಭನಿಗೂ, ವಿಷ್ಣುವಿಗೂ ಅಭೇದವನ್ನು ಸರ್ವಥಾ ಹೇಳಲಾಗದು. 'ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾಃ' ಮೊದಲಾದ ಸ್ಮೃತಿಗಳಾದರೂ ವಿರಿಂಚನ ಅಂತರ್ಯಾಮಿಯ ಅಭಿಪ್ರಾಯದಿಂದ ಹೊರಟವೆ. ಆದ್ದರಿಂದ ಬ್ರಾಹ್ಮಣಶಬ್ದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ.

फलं तु जिज्ञासदिसूत्रेषु विष्णोः विवक्षितं नित्यमहिमत्वमयुक्तं इत्याक्षेपः तत्समाधिश्चेति ।। १४ ।।

।। इति श्रीराघवेन्द्रयतिकृतायां न्यायमुक्तावल्यां आद्येऽध्याये तृतीयः पादः ।।

ಜಿಜ್ಞಾಸಾಧಿಕರಣದಿಂದ ಪ್ರಾರಂಭಿಸಿ ಹಿಂದಿನ ಅಧಿಕರಣದ ತನಕ ಹೇಳಲ್ಪಟ್ಟ ವಿಷ್ಣುವಿನ ನಿತ್ಯಮಹಿಮತ್ವವೆಂಬ ಧರ್ಮವು ಅಯುಕ್ತವಾಗಿದೆಯೆಂಬುದು ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಬ್ರಾಹ್ಮಣಾಧಿಕರಣವು ಸಮಾಪ್ತವಾಯಿತು.

।। ಶ್ರೀಮಧ್ವೇಶಾರ್ಪಣಮಸ್ತು ।।

# सूत्रार्थरत्नावळिः

## ब्राह्मणाधिकरणम् (१।३।१४)

अत्र ब्राह्मणनाम ब्रह्मणि समन्वीयते ।

**ॐ।। पत्यादिशब्देभ्यः ।।ॐ - १-३-४३**

नन्वयं ब्राह्मणो विरिञ्चो भवेत् । अस्मिन् बहुशोऽजशब्दश्रवणात् । न चाजत्वयोगेनाजःशब्दो विष्णौ सावकाश इति वाच्यम् । ब्राह्मणशब्दसहपठितस्याजशब्दस्य विष्णावनवकाशात् । न चात्मजशब्देन सहपाठादजशब्दो विष्णौ सावकाश इति वाच्यम् । आत्मशब्दस्य 'आत्मा विरिञ्चः' इत्यादिना विरिञ्चेऽपि प्रवृत्तेः । न चासङ्गत्वलिङ्गानवकाशान्न विरिञ्चो ब्राह्मण इति वाच्यम् । विष्णुविरिञ्चयोरभेदेनासङ्गत्वलिङ्गस्य तस्मिन् सम्भवात् । तथा च 'ब्राह्मणो विरिञ्चः' इति प्रागुक्तनित्यमहिमत्वं विष्णोरनुपपन्नमिति प्राप्ते, सूत्रमाह –

ॐ।। पत्यादिशब्देभ्य इति । अस्यार्थः – 'एष नित्यो महिमा ब्राह्मणस्य' इति (बृ.६-४-२३) श्रुत्युक्तब्राह्मणो विष्णुरेव । न विरिञ्चः । कुतः? पत्यादिशब्देभ्यः । 'सर्वस्याधिपतिः' (बृ.६-४-२२) इत्यादिसर्वाधिपत्यवाचिश्रुतिभ्य इत्यर्थः ।

एवञ्च निर्दिष्टश्रुतिषु पत्यादिशब्दसद्भावात् । नच विष्णोर्ब्राह्मणत्वेऽजशब्दविरोधः । अजशब्दस्य न जायत इति योगेनोपपत्तेः । ब्राह्मणशब्दस्य 'ब्राह्मणा वेदेन भण्यते' इति योगेनोपपत्त्याऽजशब्दापहाराभावात् । न चाभेदात् पतित्वादेर्विरिञ्चेऽपि सम्भवः । तदभेदे मानाभावात् । ब्राह्मणाजशब्दयोरुक्तरीत्याऽन्यथोपपत्तेः । 'तत एते व्यजायन्ते' इति भेदश्रुतिबाहुल्येन तयोरभेदेमानाभावात् । ततश्च विष्णुरेवायं ब्राह्मणो नित्यमहिमादिरिति सिद्धम् ।।*।।

।। इति सूत्रार्थरत्नावळ्यां प्रथमाध्यायस्य तृतीयः पादः ।।



## ತೃತೀಯ ಪಾದದ ಸಮಾಪ್ತಿ-ಭಗವಂತನ ನಿತ್ಯಮಹಿಮತ್ವದ ಸಾಧನೆ

ವೇದಾಧ್ಯಯನ-ಅರ್ಥಗ್ರಹಣ ಎರಡೂ ಕಠಿಣ. ನಿಶಿತಮತಿಗಳಿಗಷ್ಟೇ ಸುಖಪ್ರದ ಆಪೋಶನ.
ಮನುಷ್ಯರನ್ನು ಮೀರಿದ ಮಹಾಮತಿಗಳಲ್ಲವೇ ದೇವತಾಗಣ.
ಅವರಿಗೇ ಯೋಗ್ಯವಾದದ್ದು ಆದ್ಯ ಸ್ಥಾನದಲ್ಲಿ ವೇದಪಠಣ.
ಜ್ಞಾನಕ್ಕೆ ಎಲ್ಲರಿಗೂ ಅರ್ಹತೆಯಿದೆ.... ಭಗವಂತನಿಂದ ಮಾರ್ಗವೂ ನಿರ್ದಿಷ್ಟವಾಗಿದೆ.
ನಿಷಿದ್ಧ ಮಾರ್ಗ ಹಿಡಿದವರಿಗೆ ಭಗವಂತನಿಂದಲೇ ಶಿಕ್ಷೆಯೂ ನಿಗದಿಯಾಗಿದೆ.
ವಾಮನಾಧಿಕರಣದ ಕೊನೆಯ ಸೂತ್ರ ಎತ್ತಿದ ಪ್ರಶ್ನೆ, ಮುಂದುವರೆದ ಜಿಜ್ಞಾಸೆ.
ಅದಕ್ಕೆ ದೇವತಾಧಿಕರಣ, ಅಪಶೂದ್ರಾಧಿಕರಣದಲ್ಲಿ ದೊರೆತ ಉತ್ತರ ಇದೇ ಆಗಿದೆ.
ಸಮನ್ವಯಾಧಿಕರಣದಲ್ಲಿ ಸೇರಿಸಿರುವುದು ಸಮಂಜಸವಾದುದೂ ಆಗಿದೆ.

ಕೆಲವರಿಂದ ಕೆಲವರಿಗೆ ಕಂಪನವುಂಟಾಗುವುದು.
ಇಡೀ ಜಗತ್ತಿಗೆ ಕಂಪನವುಂಟುಮಾಡುವವರಾರು ?
ಇಂದ್ರಾಯುಧಕ್ಕೆ ವಜ್ರವೆಂಬ ಹೆಸರೇನೋ ಇದೆ. ಸರ್ವಕಂಪಕ ಶಕ್ತಿ ಇಲ್ಲ...
ದೋಷವರ್ಜನಾತ್ ವಜ್ರನೆನಿಸಿದವನು ಅವನೇ ವಜ್ರ ವಿಷ್ಣು ವಜ್ರ.

ಮಿಣುಕು ಹುಳದಷ್ಟಾದರೂ ಪರವಾಗಿಲ್ಲ. ಬೆಳಕಿದೆಯಲ್ಲಾ... ಹೃದಯದಲ್ಲಿರುವುದು ಜೀವಜ್ಯೋತಿ ... ಪ್ರಯೋಜನವಿಲ್ಲ..
ಹೃದಯದಲ್ಲಿ ಕುಳಿತಿದ್ದರೆ ಸಾಲದು, ಮರಣದ ನಂತರ
ಮಿಣುಕು ಬೆಳಕಿನ ಜೀವ ಜ್ಯೋತಿಯನ್ನು ಹೊತ್ತು ಲೋಕ ಲೋಕಗಳಿಗೆ ಸಂಚರಿಸಬೇಕು ...
ಅವನು ಬೆಳಕುಗಳ ಬೆಳಕಾದ ಮಹಾವಿಷ್ಣುವೇ .... ಹೃದಯಸ್ಥಜ್ಯೋತಿ

''ಆಕಾಶ'' ಶಬ್ದ ಭೂತಾಕಾಶವನ್ನೂ, ಅವ್ಯಾಕೃತ ಆಕಾಶವನ್ನೂ ಸ್ಪಷ್ಟವಾಗಿ ಬೋಧಿಸುತ್ತಿದೆ.
ಆದ್ದರಿಂದಲೇ ಇವು ಆಕಾಶ ಶಬ್ದ ವಾಚ್ಯಗಳಲ್ಲ.
ಬೋಧಿಸಲಾಗದೆ ಶಬ್ದಗಳು ಹಿಂದಕ್ಕೋಡಬೇಕು :
''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ''
''ಆಕಾಶೋ ವೈ ನಾಮರೂಪಯೋಃ ನಿರ್ವಹಿತಾ''
ಶಬ್ದಗಳಿಗೆ ಸಿಲುಕದವ, ಪ್ರಾಕೃತರೂಪವಿಲ್ಲದವ ... ಅವ ಮಹಾವಿಷ್ಣುವೆಂಬುವವ
ಸ್ವಪ್ನವೂ ಸತ್ಯ , ಅದರಲ್ಲಿ ಕಂಡ ಪದಾರ್ಥಗಳೂ ಸತ್ಯ , ಕಂಡವನು ಜೀವನೆಂಬುವುದೂ ಸತ್ಯ .
ಸ್ವಪ್ನವೆಂದರೆ ಆಕಸ್ಮಿಕದರ್ಶನವಲ್ಲ, ಜ್ಞಾನಪೂರ್ವಕ ಸೃಷ್ಟಿ, ಮಹಿಮಾತಿಶಯ.
ಸ್ವಪ್ನಗಳನ್ನು ಸೃಷ್ಟಿಸಿ, ಸಂಯೋಜಿಸಿ, ತೋರಿಸಿದವನು ಭಗವಂತನಾದ
ಮಹಾವಿಷ್ಣುವೆಂಬುವುದೇ ಸುಷುಪ್ತ್ಯಧಿಕರಣದ ಸಾರ.

ಬ್ರಾಹ್ಮಣವೆಂಬ ಶಬ್ದ ಸಾಧಾರಣವಾದುದಲ್ಲ. ಜಾತಿಬೋಧಕವಾದ ಪದವೆಂಬ ಅರ್ಥ
ಸಮನ್ವಯಾಧಿಕರಣದಲ್ಲಿ ಕೂಡುವುದೂ ಇಲ್ಲ.
ವೇದಗಳ ಮತ್ತೊಂದು ಹೆಸರು : ಬ್ರಹ್ಮ. ವೇದಗಳಿಂದ ಪ್ರತಿಪಾದ್ಯನಾದವನೇ ಬ್ರಾಹ್ಮಣ.
ಸಮಸ್ತ ವೇದ ಪ್ರತಿಪಾದ್ಯತ್ವ ಚತುರ್ಮುಖಬ್ರಹ್ಮನಿಗೂ ಇಲ್ಲ.
ಚತುರ್ಮುಖಬ್ರಹ್ಮನ ಜನಕ ಮಹಾವಿಷ್ಣುವೇ ನಿಜವಾದ ಬ್ರಾಹ್ಮಣ.

ಇಲ್ಲಿಗೆ ಘೋಷಿತ ಯೋಜನೆ ಮುಗಿಯಿತು. ಸಹಕರಿಸಿದ ಎಲ್ಲ ಅಧ್ಯಾತ್ಮಬಂಧುಗಳಿಗೂ ಧನ್ಯವಾದಗಳು.

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು